ಶ್ರೀ.



ಶ್ರೀಮನ್ಮಹಿಶೂರ ಪುರವರಾಧೀಶ ಶ್ರೀಕೃಷ್ಣರಾಜ
ಒಡೆಯರವರಿಂದ ಕರ್ಣಾಟಕಭಾಷೆಯಲ್ಲಿ ರಚಿಸಲ್ಪಟ್ಟ

# ಸೌಗಂಧಿಕಾಪರಿಣಯ

ವೆಂಬ ನವೀನಕಥೆಯು

ಆರ್ಯಮತಗ್ರಂಥ ಪ್ರವರ್ಧನೀಸಭಾ ಮ್ಯಾನೇಜರ್
ಗುಂಡ್ಲುಪಂಡಿತರು ಲಕ್ಷ್ಮಣಾಚಾರ್ಯರಿಂದಾ
ಪ್ರಕಟಿಸಲ್ಪಟ್ಟಿತು.

**1909**

Printed by

A. R. Venkatesa Setty, at

*Sreemuth Kanyaka Parameswari Press.*

MYSORE.



Price Rs. 4½ ] [ ಕ್ರಯ ೪॥ ರೂಪಾಯಿ.

# ನಮ್ಮಲ್ಲಿ ಪ್ರಿಂಟಾಗಿ ಬಿಕರೀಗೆ ಸಿದ್ಧವಾಗಿರುವ ಪುಸ್ತಕಗಳು.

---

| | | | ರೂ—ಅ—ಪೈ |
|---|---|---|---|
| ಸೌಗಂಧಿಕಾಪರಿಣಯಂ. | ... | ... | ೪—೮—೦ |
| ಕಾಶೀಖಂಡ. | ... | ... | ೨—೦—೦ |
| ಸಹಸ್ರಾಯುಚರಿತ್ರ. | ... | ... | ೨—೦—೦ |

ಒಟ್ಟಾಗಿ ೧೦ ಪ್ರತಿಗಳನ್ನು ತರಿಸಿಕೊಳ್ಳುವವರಿಗೆ ೧ ಪ್ರತಿ ಕಮಿಷನ್ ಕೊಡುವೆವು.

ಅಪೇಕ್ಷಿಸುವವರು ಈಕೆಳಗಿನವಿಳಾಸಕ್ಕೆ ಬರೆದುತರಿಸಿಕೊಳ್ಳಬಹುದು.

 ಗುಂಡ್ಲುಪಂಡಿತರು ಲಕ್ಷ್ಮಣಾಚಾರ್ಯಃ.

ಮ್ಯಾನೇಜರ್,

ಅದ್ವೈತಗ್ರಂಥಪ್ರವರ್ಧಿನೀಸಭಾ ಮೈಸೂರು. ಕೋಟೆ,

ಡೋರ್ ನಂ॥ ೫೧೩.

# ವಿಜ್ಞಾಪನಾ.

ಶ್ರೀಮದ್ರಾಜಾಧಿರಾಜ ಮಹಾರಾಜ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ರವರಿಂದ ಲೋಕೋಪಕಾರಾರ್ಥವಾಗಿಯೂ, ರಸಿಕ ಜನಾನಂದಕರವಾಗಿಯೂ ರಚಿಸಿದ « ಸೌಗಂಧಿಕಾಪರಿಣಯ » ವೆಂಬ ನವೀನ ಕಥೆಯನ್ನು ಪ್ರಿಂಟುಮಾಡಿಸಿ ಪ್ರಚುರಮಾಡಲು ಶ್ರೀಮನ್ಮಹಾರಾಜ್ಞೀಯವರಾದ ರೀಜಂಟರು ವಾಣೀವಿಲಾಸ ಮಹಾಸನ್ನಿಧಾನದಿಂದ ಯಂ. ಶ್ರೀನಿವಾಸಮೂರ್ತಿರಾಯರಿಗೆ ಅಪ್ಪಣೆ ಆದದನ್ನು ಸದರಿಯವರಿಂದ ಲಿಖಿತಮೂಲಕ ಹಕ್ಕನ್ನು ಪಡೆದು ಪ್ರಿಂಟುಮಾಡಿಸಿರುತ್ತೇನೆ.

ಆಸ್ತಿಕ ಮಹಾಶಯರು ಈ ಪುಸ್ತಕದಲ್ಲಿ ಪ್ರಿಂಟಿನಿಂದ ಇರತಕ್ಕ ನ್ಯೂನಾತಿರಿಕ್ತಗಳನ್ನು ನೋಡದೆ ವಿಷಯಾನುವಾದದಿಂದ ಮನಸ್ಸಂತೋಷ ಪಡಬೇಕೆಂದು ಪ್ರಾರ್ಥಿಸುವ,

☞ ಗುಂಡ್ಲುಪಂಡಿತರು ಲಕ್ಷ್ಮಣಾಚಾರ್ಯಃ,

ಮ್ಯಾನೇಜರ್

ಆರ್ಯಮತಗ್ರಂಥ ಪ್ರವರ್ಧನೀಸಭಾ, ಮೈಸೂರು ಕೋಟೆ,

ಡೋರ್ ನಂ|| ೫೧೩.

---

## ವಿಷಯಸೂಚಿಕೆ.

೩೩. ಕಳಿಂಗ ನಗರಕ್ಕೆ ಸುಚರಿತ್ರ ಮಹಾರಾಜನಾಗಮನ, ಸುಗಂಧ ರಾಜೇಂದ್ರನಿಗೆ ಸೌಗಂಧಿಕಾದೇವಿ ಕುಸುಮಲತಾದೇವಿಯರ ವಿವಾಹ, ರತ್ನಪುರಪ್ರವೇಶ, ಸುಗಂಧರಾಜೇಂದ್ರನಿಗೆ ಮೂರ್ಧಾಭಿಷೇಕ ಮಹೋತ್ಸವಮುಮಂ ವರ್ಣಿಸಿರುವುದು

೩೪ ಸುಗಂಧರಾಜೇಂದ್ರಂಗೆ ಮಕರಂದ ಪುಷ್ಪದಂತರೆಂಬ ಕುಮಾರರೋದಯ ಜಾತಕರ್ಮಾದಿ ವಿವಾಹಪರ್ಯಂತವರ್ಣಿಸಿರುವುದು.

೩೫ ರಾಜಧರ್ಮ. ಸುಗಂಧರಾಜೇಂದ್ರನು ಅಶ್ವಮೇಧ ಯಾಗವಂಮಾಡಿದ್ದು, ಬಳಿಕ ಸುಚರಿತ್ರಮಹಾರಾಜನು ವಾನಪ್ರಸ್ಥಾಶ್ರಮಕ್ಕೋಸ್ಕರವಾಮದೇವಮುನೀಂದ್ರನಂ ಕುರಿತು ತೆರಳಿದ್ದು.

೩೬. ಲೀಲಾಶುಕ ಮುಖವಚನದಿಂದ ಸುಗಂಧರಾಜೇಂದ್ರಂಗೆ ಸ್ವಸ್ವರೂಪ ಜ್ಞಾನಬಂದದ್ದು. ಜಯಂತ ಸುರಾಚಾರ್ಯಾಗಮನ, ಮಕರಂದನಿಗೆ ಪಟ್ಟಾಭಿಷೇಕ, ಪುಷ್ಪದಂತನಿಗೆ ಯುವರಾಜ್ಯಾಭಿಷೇಕ, ಮಕರಂದನಿಗೆ ದೇವಿಯರ ವರಲಬ್ಧವಾದ ಚಂದ್ರಹಾಸವಂ ಕೊಟ್ಟು ಸತೀಸಮೇತನಾಗಿ ಮಿತ್ರನೊಡಗೂಡಿ ವಸಂತವನ ಪ್ರವೇಶ ಮಾಡಿ ವಾಮದೇವ ಋಷಿದರ್ಶನಾನಂತರ ದೇವಿಸಾಕ್ಷಾತ್ಕಾರ, ಸಮುದ್ರಮಥನಾರ್ಥವಾಗಿ ಕ್ಷೀರಸಾಗರ ಸಾಮೀಪ್ಯವಂಪೊಂದಿ ಸಮುದ್ರಮಥನಾನಂತರ ನಿಜವಸ್ತುಲಾಭವನ್ನೈದಿ ದೈತ್ಯಪರಾಜಯಮಂಮಾಡಿ ಅಮರಾವತೀಪುರ ಪ್ರವೇಶವಂಗೈದು ದೇವತಾಸಮೂಹದಿಂದ ಪಟ್ಟಾಭಿಷಿಕ್ತನಾಗಿ ಇಂದ್ರಪದವಿಯೊಳ್ ಕುಳಿತು ತ್ರೈಲೋಕ್ಯಸಾಮ್ರಾಜ್ಯವನ್ನನುಭವಿಸುತ್ತಲಿದ್ದನೆಂಬ ವೃತ್ತಾಂತವಂ ವರ್ಣಿಸಿಯಿರುವದು.

ಸುಗಂಧರಾಜನಕಥಾ ಸಂಪೂರ್ಣವು.



ಶ್ರೀ.

# ಸೌಗಂಧಿಕಾಪರಿಣಯ.

ಶುಕ್ಲಾಂಬರಧರಂವಿಷ್ಣುಂಶಶಿವರ್ಣಂಚತುರ್ಭುಜಂ ॥ ಪ್ರಸನ್ನವದನಂಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥೧॥ ಯಾಕುಂದೇಂದುತುಷಾರಹಾರಧವಳಾ ಯಾಶುಭ್ರವಸ್ತ್ರಾವೃತಾ । ಯಾವೀಣಾವರದಂಡಮಂಡಿತಕರಾ ಯಾಶ್ವೇತಪದ್ಮಾಸನಾ ॥ ಯಾಬ್ರಹ್ಮಾಚ್ಯುತಶಂಕರಪ್ರಭೃತಿಭಿರ್ದೇವೈಸ್ಸದಾಪೂಜಿತಾ । ಸಾಮಾಂಪಾತು ಸರಸ್ವತೀಭಗವತೀನಿಶ್ಶೇಷಜಾಡ್ಯಾಪಹಾ ॥೨॥ ಜಯತ್ವಂದೇವಿಚಾಮುಂಡೇ ಜಯಭೂತಾಪಹಾರಿಣಿ ॥ ಜಯಸರ್ವಗತೇದೇವಿ ಭದ್ರಕಾಳಿನಮೋಸ್ತುತೇ ॥೩॥

ಕಲಿಯುಗದಾದಿಯೊಳ್ ಜನಿಸಿ ನಂದನಮಂದಿರದಲ್ಲಿ ಗರ್ವದಿಂ ।
ಬಲಿದ ನಿಶುಂಭಶುಂಭರನು ಭಂಜಿಸಿ ಯಾದವವಂಶಲಕ್ಷ್ಮಿಯಂ ॥
ಬೆಳೆಯಿಸುವಂದದಿಂದೆ ಮಹಿಶೂರ ಮಹಾಬಲಶೈಲಶೃಂಗದೊಳ್ ।
ನೆಲಸಿದ ಲೋಕಮಾತೆ ಪರದೇವತೆ ಪಾಲಿಸುಗೆಮ್ಮಭೀಷ್ಟಮಂ ॥೧॥

ಶ್ರೀಮದ್ಜ್ಞಾನಬಲೈಶ್ವರ್ಯವೀರ್ಯತೇಜಸ್ಸೌಶೀಲ್ಯವಾತ್ಸಲ್ಯಮಾರ್ದವಾರ್ಜವ ಸೌಹಾರ್ದ ಸೌಲಭ್ಯ ಸೌಕುಮಾರ್ಯ ಕಾರುಣ್ಯ ತಾರುಣ್ಯ ಮಾಧುರ್ಯಗಾಂಭೀರ್ಯಚಾತುರ್ಯೌದಾರ್ಯಸ್ಥೈರ್ಯ ಧೈರ್ಯಶೌರ್ಯಪರಾಕ್ರಮಾದ್ಯನಂತಾಪರಿಚ್ಛೇದ್ಯನಿತ್ಯನಿರವದ್ಯ ನಿರತಿಶಯ ನಿರವಧಿಕ ಕಲ್ಯಾಣಗುಣಗಣಪರಿಪೂರ್ಣೆಯಾದ, ಸಕಲಬ್ರಹ್ಮಾಂಡಸೃಷ್ಟಿಸ್ಥಿತಿಸಂಹಾರಕಾರಣಕರ್ತ್ರಿಯಾದ, ದೇವಕಂಟಕರಾಗಿ ತಪೋಬ

[illegible] ಬ್ರಹ್ಮೇಂದ್ರಾದಿಗಳ ಪರಾಜಯಮಂಮಾಡಿದ ಶುಂಭ ನಿಶುಂಭ ಚಂಡ ಮುಂಡ ರಕ್ತಬೀಜಾದಿ ರಾಕ್ಷಸಶ್ರೇಷ್ಠರಿಂದ ಪರಿವೃತನಾದ ಮಹಿಷಾಸುರನಂ ಕೋಪದಿಂ ಮೆಟ್ಟಿ ತ್ರಿಶೂಲದಿಂ ಖಂಡಿಸಿ ಆತನ ಪರಿವಾರವಂ ಸಕಲಾಯುಧಂಗಳಿಂದ ನಿಶ್ಶೇಷವಂಮಾಡಿ, ಬ್ರಹ್ಮವಿಷ್ಣುರುದ್ರೇಂದ್ರಾದಿಗಳ [illegible] ಪ್ರಾರ್ಥನೆಯಂತೆ ಮಾಡಿ, ಅವರಿಗಭಯವಂ ಕೊಟ್ಟು ಭೂಲೋ[illegible] ಶ್ರೀಮನ್ಮಹೀಶೂರಪುರಾಧೀಶರಾದ ರಾಜಒಡೆಯರ [illegible] ಸಂತತಿಗೆ ಕುಲದೇವತೆಯಾಗಿ, ಶ್ರೀಮನ್ಮಹೀಶೂರ[illegible]ವ ಮಹಾಬಲಾಚಲವಂ ನೆಲೆಗೊಂಡು ಸಕಲಕಾಮಿತಾರ್ಥಂಗಳಂ ಕೊಟ್ಟು, ಕರ್ಣಾಟಕರಾಜರಾದ ಯದುವಂಶಭೂಪಾಲರಿಗೆ [illegible] ಕೊಡುತ್ತ, ಜಗದ್ರಕ್ಷಣವಂ ಮಾಡುವ [illegible] ಸ್ವರೂಪಿಣಿಯಾದ, ಬ್ರಹ್ಮವಿಷ್ಣುರುದ್ರೇ[illegible] ಲೀಲೆಯಿಂದಾನಂದದಿಂ ಪರಿವ[illegible], [illegible] ದುರ್ವಾಸನರು ಮೊದಲುಗೊಂಡು [illegible] ಸಹಸ್ರನಾಮ ತ್ರಿಶತಿ ಸಪ್ತಶತ್ಯಾದ್ಯುಪಾಖ್ಯಾ[illegible], [illegible], ಅನೇಕ ರುಂಡಮಾ[illegible], ಅನೇಕ ದಿವ್ಯಾಯುಧಾಭರಣಂಗಳಂ ಧರಿಸಿ ಕುಂಕುಮಾಗರುಕಸ್ತೂರ್ಯಾದಿ [illegible]ಗಳದ್ರವ್ಯಂಗಳಿಂದಲಂಕೃತಳಾಗಿ ಸರ್ವಮಂ [illegible]ವನೆಯಾದ, ಎಮ್ಮ ಕುಲದೇವತೆಯಾದ ಶ್ರೀಚಾಮುಂಡೇಶ್ವರೀಯೆಂಬ [illegible] ಮಹಾದೇವಿಯ ಚರಣಕಮಲಂಗಳಂ ಭಕ್ತಿಯಿಂದ ಹೃದಯದೊಳಿಟ್ಟು ಸಾಷ್ಟಾಂಗವೆರಗಿ ಈ ನವೀನಕೃತಿಯು [illegible]ವಾಗಿ [illegible]ವಾಗಿರುವಂತೆ ಪ್ರಾರ್ಥನೆಯಂಮಾಡಿ, [illegible] ಕಪಿಲಾಕೌಂಡಿನೀಮಣಿಕರ್ಣಿಕಾತ್ರಿವೇಣೀಸಂಗಮದೊ[illegible] ರೂಪುಗೊಂಡು ಪರಶುರಾಮಾದಿಗಳಿಂದ ಪೂಜಿತನಾಗಿ, [illegible]ನವಂಮಾಡಿ ಭಕ್ತರಿಗೆ ಸಕಲಾಭೀಷ್ಟವಂ [illegible] ಭವರೋಗವೈದ್ಯನಾದ ನಮ್ಮ ಕುಲಕ್ರಮಾಗತೇಷ್ಟದೇ[illegible]ಕುಂಡೇಶ್ವರನೆಂಬಭಿಧಾನದಿಂ ಮೆರೆಯುವ ಪಾ[illegible]ಜೆಗೊಂಡು ಯನ್ನಿಷ್ಟಾರ್ಥ

ಕೊಡುತ್ತ

ಪರಮೇಶ್ವರನಾದ ಶ್ರೀ[illegible]

[illegible]ನೇಶ್ವರನು ನನ್ನ ಕರ್ಮದೊಳ್ಳಿಂದು [illegible]

ವಂ ಕೊಟ್ಟು ಸಲಹಬೇಕೆಂದು ನಮಸ್ಕಾರಪೂರ್ವಕವಾಗಿ ಬಿನ್ನೈಸಿ, ಸಕಲದೇವತೆಗಳನಭಿವಂದಿಸಿ, ಪೂಜ್ಯರಾದ ಬ್ರಹ್ಮನಿಷ್ಠರಾದ ಬ್ರಾಹ್ಮಣರನ್ನು ನಮಿಸಿ, ವಾಲ್ಮೀಕಿ ವ್ಯಾಸ ಕಾಳಿದಾಸ ದಂಡಿ ಭವಭೂತಿ ಮಾಘ ಮಯೂರ ಭಾರವಿ ಭೋಜರಾಜ ಮೊದಲಾದ ಸುಕವಿಗಳಂ ಸ್ಮರಿಸಿ, ರಸಾಲಂಕಾರಶೂನ್ಯವಾಗಿ ಶಬ್ದಾಭಾಸಗಳಿಂದ ಮನಬಂದಂತೆ ಕಾವ್ಯಂಗಳಂ ರಚಿಸಿ ಗರ್ವದಿಂ ತಿರುಗುವ ಕುಕವಿಗಳಂ ನಿರಾಕರಿಸಿ, ಕುಲದೇವತೆಯಾದ ಶ್ರೀಚಾಮುಂಡೇಶ್ವರಿಯು ಪರಮಾನುಗ್ರಹದಿಂ ಹಿರಿಯರ ಆಶೀರ್ವಾದದಿಂದೆನಗೆ ತಿಳಿದಷ್ಟು ಹೇಳುವ ಸೌಗಂಧಿಕಾಪರಿಣಯವೆಂಬೀನವೀನಕೃತಿಯಂ ನಿರ್ಮತ್ಸರರಾದ ವಿದ್ವಾಂಸರುಗಳು ನೋಡಿ, ರಸಗಳಲ್ಲಿ ಅಲಂಕಾರಗಳಲ್ಲಿ ರೀತಿಪಾಕಂಗಳಲ್ಲಿ ಸಂವಿಧಾನನಿಬಂಧನದಲ್ಲಿ ಯಾವುದೊಂದು ಕಡಮೆಯಾದರೂ ಕ್ಷಮಿಸಿ ಬಿಡಂಬಡುವುದು.

ಈ ಕೃತಿಯಂ ಓದುವ ಕೇಳುವ ಸಕಲ ಜನಂಗಳೂ ಅಸೂಯೆಯಂ ಮಾಡದೆ ಮನ್ನಿಸಲೆಂದು ಅತಿ ವಿನಯೋಕ್ತಿಗಳಿಂದ ಪ್ರಾರ್ಥಿಸುವೆನು:—

ಸ್ವಸ್ತಿಶ್ರೀವಿಜಯಾಭ್ಯುದಯ ಶಾಲಿವಾಹನಶಕ ವರ್ಷಂಗಳು ೧೭೮೭ನೆ ಸಂದವರ್ತಮಾನವಾದ ವಿಕ್ರಮಸಂವತ್ಸರದ ಆಶ್ವಯುಜ ಶುದ್ಧ ೧೦ ಗುರುವಾರದಲ್ಲು ಆತ್ರೇಯಸಗೋತ್ರದ ಆಶ್ವಲಾಯನಸೂತ್ರದ ಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹೀಶೂರಪುರವರಾಧೀಶ ರಾಜಾಧಿರಾಜಮಹಾರಾಜ ಚಾಮರಾಜಒಡೆಯರವರ ಧರ್ಮಪತ್ನಿ ಕೆಂಪನಂಜಮ್ಮಾಂಬಾಗರ್ಭಸುಧಾಂಬುಧಿರಾಕಾಸುಧಾಕರರಾಯಮಾನರಾದ ಶ್ರೀಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಶ್ರೀಮತ್ಸಮಸ್ತ ಭೂಮಂಡಲಮಂಡನಾಯಮಾನ ನಿಖಿಲದೇಶಾವತಂಸ ಕರ್ಣಾಟಕಜನಪದಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನಮಧ್ಯ ದೇದೀಪ್ಯಮಾನಾವಿಕಲಕಲಾನಿಧಿಕುಲಕ್ರಮಾಗತ ರಾಜಕ್ಷಿತಿಪಾಲಪ್ರಮುಖ ನಿಖಿಲ ರಾಜಾಧಿರಾಜಮಹಾರಾಜ ಚಕ್ರವರ್ತಿಮಂಡಲಾನುಭೂತ ದಿವ್ಯರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪಾಪ್ರತಿಮವೀರನರಪತಿಬಿರುದೆಂತೆಂಬರಗಂಡ ಚಂಡಪ್ರಚಂಡೋದ್ದಂ

ಜ ರಿಪ್ರತಿವಿಧಮಹಾಶಾರದಾಂತ ಲೋಕೈಕವೀರ ಯದುಕುಲಪಯಃಪಾರಾವಾರಕಲಾನಿಧಿ ಶಂಖಚಕ್ರಾಂಕುಶಕುಠಾರಮಕರಮತ್ಸ್ಯಶರಭಸಾಳ್ವಗಂಡಭೇರುಂಡ ಧರಣೀವರಾಹಹನುಮದ್ಗರುಡಕಂಠೀರವಾದ್ಯನೇಕಬಿರುದಾಂಕಿತ ಶ್ರೀಮನ್ಮಹೀಶೂರಪುರವರಾಧೀಶ ಶ್ರೀಕೃಷ್ಣರಾಜಒಡೆಯರವರ ಲೋಕರಂಜನಾರ್ಥವಾಗಿ ಚತುರ್ವಿಧಪುರುಷಾರ್ಥಪ್ರದವಾದ ಇತಿಹಾಸಪುರಾಣಸಾರಭೂತವಾದ ಆದಿಶಕ್ತಿಯು ಪಾದವಿನ್ಯಾಸಕ್ಕೆ ಯೋಗ್ಯಂಗಳಾದ ಪಂಚಪ್ರಕಾರಾತ್ಮಕವಾದ ಮಂಚದ ಷಟ್ತ್ರಿಂಶತ್ತತ್ವಸೋಪಾನಗಳಂತೆ ಷಟ್ತ್ರಿಂಶತ್ಸಂಖ್ಯಾಯುಕ್ತಂಗಳಾದ ಆಶ್ವಾಸಗಳಿಂದೊಪ್ಪಿದ ಸೌಗಂಧಿಕಾಪರಿಣಯವೆಂಬ ಈ ನವೀನಕೃತಿಯನ್ನು ಕರ್ಣಾಟಭಾಷಾವಚನರಚನಾರೂಪವಾಗಿ ವಿಸ್ತರಿಸುವ ಕ್ರಮವದೆಂತೆನೆ:—

ಚತುರ್ದಶಭುವನಂಗಳೊಳುತ್ತಮವಾದ ಚಕ್ರವಾಳಪರ್ವತದಿಂದ ಪರಿವೇಷ್ಟಿತವಾದ ಪಂಚಾಶತ್ಕೋಟಿಯೋಜನ ವಿಸ್ತೀರ್ಣವಾದ ಭೂಲೋಕದಲ್ಲಿ ಲವಣ ಇಕ್ಷು ಸುರಾ ಸರ್ಪಿ ದಧಿ ಕ್ಷೀರ ಜಲಾರ್ಣವಗಳೆಂಬ ಸಪ್ತಸಮುದ್ರಂಗಳಿಂದಾವೃತಂಗಳಾದ ಜಂಬೂ ಪ್ಲಕ್ಷ ಶಾಲ್ಮಲಿ ಕುಶ ಕ್ರೌಂಚ ಶಾಕ ಪುಷ್ಕರಗಳೆಂಬ ಸಪ್ತದ್ವೀಪಗಳಿಂದ ಸುತ್ತುವರದಿರುವ ಸರ್ವದೇವತೆಗಳಿಗೆ ಆಲಯವಾದ, ಮೇರುಪರ್ವತದ ದಕ್ಷಿಣಭಾಗದೊಳ್ ಇಂದ್ರದ್ವೀಪ, ಕಶೇರು, ತಾಮ್ರ, ಗಭಸ್ತಿ, ನಾಗ, ಸೌಮ್ಯ ಗಂಧರ್ವ, ಚಾರಣ, ಭಾರತಗಳೆಂಬ ನವಖಂಡಗಳ ಅಂತರ್ವರ್ತಿಯಾದ ಭರತಖಂಡದೊಳ್ ಅಂಗ ವಂಗ ಕಳಿಂಗ ಕಾಶ್ಮೀರ ಕಾಂಭೋಜ ಕಾಮರೂಪ ಸೌವೀರ ಸೌರಾಷ್ಟ್ರ ಬಂಗಾಳ ಪಾಂಚಾಲ ನೇಪಾಳ ಮಲಯಾಳ ಕೇರಳ ಚೋಳ ಸಿಹ್ಮಲ ಕೋಸಲ ಕುಂತಲ ಜ್ವಾಲಾ ಸಾಲ್ವ ಮಗಧ ಮಾಗಧ ಮಾಳವ ಮತ್ಸ್ಯ ವತ್ಸ ಮದ್ರ ಮೈಂದ ಸಿಂಧು ಸೈಂಧವ ಆಂಧ್ರ ಗಾಂಧಾರ ಲಾಟ ವರಾಟ ದ್ರಮಿಡ ದ್ರವಿಡ ಪಾಂಡ್ಯ ಪುಳಿಂದ ಪಾರಸೀಕ ಬಾಹ್ಲೀಕ ಬರ್ಬರ ವಿದರ್ಭ ಕೇಕಯ ಕುರುಕಿರಾತ ದಶಾರ್ಣ ಹೂಣ ಟೆಂಕಣ ಕೊಂಕಣ ಯವನ ಶೂರಸೇನ ಘೂರ್ಜರ ವಿದೇಹ ಚೇದಿ ಭೋಜ ಅಮಿತ್ಯಾದಿದೇಶಗಳೊಳಧಿಕವಾದ ಕರ್ಣಾಟಕದೇಶವೆಂಬ ಕಮಲಕ್ಕೆ ಕರ್ಣಿಕಾಯಮಾನವಾದ ರತ್ನಪುರವೆಂಬ ಹೆಸರುಳ್ಳ ಮಹಾನಗರವಿರುವುದು.

ಆ ಪುರವು ಚಂದ್ರಮಂಡಲವಂ ತುಡುಕುವ ಸುವರ್ಣಪ್ರಾಕಾರಂಗಳೊಳ್ ತುಂಬಿರುವ ಅತಿವಿಶಾಲಗಳಾದ ರಾಜವೀಧಿಗಳಲ್ಲಿಲ್ಲಿನೋಡಿದರೂ ಮಣಿಮಯಂಗಳಾದ ಹತ್ತೆಂಟುನೆಲೆಗಳುಳ್ಳ ಉಪ್ಪರಿಗೆಗಳಿಂದಲೂ ಚಿನ್ನದ ಮೊಳೆಗಳುಬಡಿದ ವಜ್ರದಶಿಲೆಗಳಿಂದ ಬಿಗಿದ ನೆಲಕಟ್ಟುಗಳೊಳ್ ನಿಲಿಸಿದ ಪಚ್ಚೆಯ ಸಾಲುಗಳಮೇಲಿರುವ ಪದ್ಮರಾಗದ ತೊಲೆಗಳಿಂದೊಪ್ಪುವ ಇಂದ್ರನೀಲಮಣಿಸಲಾಕೆಗಳಿಂದ ನಿರ್ಮಿತವಾಗಿ ಮುತ್ತಿನ ಬಲೆಗಳಮುಸುಕಂ ಪೊತ್ತಿರ್ಪ ಚಿತ್ತರದಗವಾಕ್ಷಗಳಿಂದುಪಶೋಭಿತವಾದ ಚಂದ್ರಕಾಂತಶಿಲಾಮಯಂಗಳಾದ ಚಂದ್ರಶಾಲಾಸಹಸ್ರಗಳಿಂದಲೂ ಮೇರುಶಿಖರಗಳಂತೆಸೆವ ರತ್ನಕಲಶಸಹಸ್ರಗಳಿಂದ ಸಹಸ್ರಕಿರಣನಂ ಸೋಂಕಿಸುವ ಗೋಪುರದ ರಂಪರೆಗಳಿಂದಲೂ, ವೈಡೂರ್ಯಸಹಸ್ರಸ್ತಂಭಂಗಳಿಂದ ವಿರಾಜಿತಂಗಳಾದ ಕಲ್ಯಾಣದೀಕ್ಷಾವಾಹನಭೋಗಮಂಟಪಾದಿಗಳಿಂದೊಡಗೂಡಿ ಸತ್ಯಲೋಕದಂತಿರುವ ದೇವಾಲಯಗಳಿಂದಲೂ, ಮತ್ತಮಲ್ಲಿ ಅಮೃತದಂತಿರುವ ನಿರ್ಮಲೋದಕದ ತರಂಗಂಗಳೊಳ್ ತೂಗಾಡುವ ಹಂಸಗಳ ಪಕ್ಷವಿಕ್ಷೇಪದಿಂದುದಿರುವ ತುಂತುರಹನಿಗಳಂ ನೆನೆದು ಝುಂಮನೇಳುತ್ತಿರುವ ಪುರಿದುಂಬಿಗಳ ಝೇಂಕಾರದಿಂ ಮನೋಹರವಾಗಿ ಸ್ಫಟಿಕಶಿಲೆಗಳಿಂ ಕಟ್ಟಿರುವ ಮೆಟ್ಟುಕೆಗಳನ್ನೊಳಕೊಂಡ ತಿಳಿಗೊಳಂಗಳ ಸುತ್ತಿಮುತ್ತಿರುವ ಮೊಲ್ಲೆ ಮಲ್ಲಿಗೆ ಮೊದಲಾದ ಬಳ್ಳಿಗಳಿಂ ಬೆರೆದ ಸುರಗಿ ಸುರಹೊನ್ನೆ ಸಂಪಗೆ ಪಗಡೆ ಪನ್ನೀರು ಪಾರಿಜಾತಮೊದಲಾದ ತರುಗಳಲ್ಲಿ ಮಂದಮಾರುತದಿಂದಲರಿದ ಪೂಗಳ ಪರಿಮಳಕ್ಕೆ ಪರವಶರಾದ ಜಾರಜಾರಿಣಿಯರ ರತಿಚಮತ್ಕಾರ ಸಲ್ಲಾಪಗಳಂ ಪರಿಹಾಸಂಗೈವಂತೆ ಸರಿಯಾಗಿ ನುಡಿವ ಶುಕ ಪಿಕ ಮಯೂರಾದಿಗಳಿಗಾಹಾರಯೋಗ್ಯವಾದ ರಸಭರಿತ ಪಕ್ವಫಲಗಳ ಭಾರದಿಂ ಬಗ್ಗಿರುವ ಸರಸ ಪನಸ ಮಾಕಂದ ವೃಂದ ಕದಳೀ ಖರ್ಜೂರಾದಿತರುಗಳೊಪ್ಪುವ ಶೃಂಗಾರವನಗಳಿಂದಲೂ ರಾಜ್ಯಲಕ್ಷ್ಮಿಯ ಮುಖಕಮಲದ ರತ್ನತಿಲಕದಂತೆ, ಸಕಲವಾದ ಸೌಧಗಳೆಂಬ ಕುಲಾಚಲಂಗಳ ಮಧ್ಯದೊಳ್ಮೆರೆವ ಮೇರುವಂತೆ, ಪುರಲಕ್ಷ್ಮಿಯ ಹೃದಯದಲ್ಲಿ ಧರಿಸಿದ ರತ್ನದ ಪದಕದಂತೆ, ಪ್ರಕಾಶಮಾನವಾಗಿಯೂ, ಒಂದೊಂದುಹಿರಿದಾದ ರತ್ನಶಿಲೆಗಳಲ್ಲಿ ತರತರವಾಗಿ ಕೊರೆದು ಬಿಡಿಸಿರುವ

ಸ್ತಂಭಸಮೇತಮಾಯುನ ತೋರಣದ್ವಾರ ಕವಾಟಗಳುಳ್ಳ ಮಜ್ಜನ ಭೋಜನ ಶಯನಾದಿಗಳಿಗುಚಿತವಾದ ಸೂರಾರುಹಜಾರಗಳಿಂ, ಕುಂಕುಮಕಸ್ತೂರಿಗಳಿಂ ತೊಡೆದು ಪನ್ನೀರಿನಿಂ ಸಾರಿಸಿ ಪಚ್ಚಕರ್ಪೂರದ ರಂಗವಲ್ಲಿಯನಿಕ್ಕಿ ಮೊಲ್ಲೆಮಲ್ಲಿಗೆ ಮರುಗ ಇರುವಂತಿಗೆ ಜಾಜಿಗಳ ಮೇಲ್ಕಟ್ಟುಗಳಿಂದೊಪ್ಪುವ ಗಂಧದಮರಗಳಿಂ ನಿರ್ಮಿಸಿದ ಕ್ರೀಡಾಗೃಹಗಳಿಂ ಪರಿಶೋಭಿತಮಾಗಿ ಕುಬೇರಭವನದಂತೆ ಸಕಲೈಶ್ವರ್ಯಗಳಿಂದೊಪ್ಪುವ ರಾಜಭವನದಿಂದಲೂ, ಧಾನ್ಯರಾಶಿಗಳಂತೆ ಸುರಿದಿರುವ ಮುತ್ತು ಪಚ್ಚೆ ವಜ್ರ ವೈಡೂರ್ಯ ಮಾಣಿಕ್ಯ ಗೋಮೇಧಿಕ ಪುಷ್ಯರಾಗ ನೀಲ ಪವಳಂಗಳು ಮೊದಲಾಗಿ ಸಕಲವಸ್ತುಗಳಿಂ ತುಂಬಿ ತುಳುಕುವ ಸುವರ್ಣರಜತಗಳಿಂ ನಿರ್ಮಿತವಾದ ಅಂಗಡಿ ಬೀದಿಗಳಿಂದಲೂ, ವೇದಶಾಸ್ತ್ರಪಠನಸಮರ್ಥನೆಗಳಲ್ಲಿ ಬೃಹಸ್ಪತಿಗೆ ಸರಿಯಾದ ಬ್ರಾಹ್ಮಣರುಗಳಿಂದಲೂ, ಬಿಲ್ಲು ಬತ್ತಳಿಕೆ ಕತ್ತಿ ಕಠಾರಿ ಪರಿಘ ಪಟ್ಟಿಸ ಶೂಲ ಮುದ್ಗರ ಮುಸುಂಡಿ ತೋಮರ ಭಿಂಡಿವಾಲ ಗದೆ ಈಟಿ ಕುಂತಮುಂತಾದ ಸಲಾಯುಧಂಗಳಲ್ಲಿ ಕರ್ಣಾರ್ಜುನರಿಗೆ ಸರಿಯೆಂದೆನಿಸಿದ ಕ್ಷತ್ರಿಯ ಕುಮಾರರಿಂದಲೂ, ಕುಬೇರನನ್ನಾದರೂ ಕ್ರಯಕ್ಕೆಕೊಳ್ಳುವ ಧನವರ್ತಕಜನಗಳಿಂದಲೂ, ಊಷರಭೂಮಿಯಂ ಮೆಟ್ಟಿದರೂ ಕಾಶ್ಮೀರಖಂಡದಂತೆ ಸಕಲಸಸ್ಯಗಳಂ ಬೆಳೆಯಿಸುವ ಶೂದ್ರಜನಗಳಿಂದಲೂ, ನಿಜವರ್ಣಾನುಕೂಲವಾದ ಧರ್ಮದೊಳ್ನಿರತರಾದ ಗೋರಕ್ಷಕಾದ್ಯಷ್ಟಾದಶವರ್ಣಜನಗಳಿಂದಲೂ ನಿಬಿಡಿತಮಾಗಿ ದುಷ್ಪ್ರವೇಶವಾದ ಮದ್ದಿನ ಮನೆಗಳಿಂದಲೂ, ನಾನಾದೇಶದರಸುಗಳಿಂದ ಬಂದ ಶುಭಲಕ್ಷಣಗಳಾದ ಗಜಾಶ್ವಪಙ್ಕ್ತಿಗಳಿಂ ಪರಿಪೂರ್ಣಮಾದ ಶಾಲಾಶತಂಗಳಿಂದಲೂ, ಮುಷ್ಟಿಯುದ್ಧವಿಶಾರದರಾದ ಜರಾಸಂಧ ಕೀಚಕಾದಿಗಳಿಂ ಜರಿವ ಮಲ್ಲರಿಂದೊಪ್ಪುವ ಗರುಡಿಯ ಸಾಲುಗಳಿಂದಲೂ, ಮೊಲ್ಲೆಮಲ್ಲಿಗೆ ಮರುಗ ಜಾಜಿ ಚಂಪಕ ಸುಗಂಧ ಪಾಟಲೀ ಪಾರಿಜಾತ ಪುನ್ನಾಗ ದವನ ಮೊದಲಾದ ಪುಷ್ಪಗಳಿಂದ ತಮ್ಮವಯವಸೌಂದರ್ಯವಂ ವಿಟರಿಗೆ ತೋರಿಸುವಂತೆ ಮಾರುವ ಮಾಲಾಕಾರರ ಬಾಲೆಯರಿಂ ಮನೋಹರವಾದ ಪುಷ್ಪವಾಟಿಕೆಗಳಿಂದಲೂ, ಚಂದ್ರಬಿಂಬಕ್ಕೆ ಪ್ರತಿಬಿಂಬವಾದ ಮುಖಗಳಿಂ ತಾವರೆಯ ದಳಂಗಳ ಬೆಡಗಂ ಬೆಳಗಿಸುವ

ನಯನಂಗಳಂ ಶಿಲಿಸುವ ಮಾತೆಸೆವ ನಾಸಾಪುಟಗಳಂ ದರ್ಪಣದ ದರ್ಪ
ವನ್ನೇರ್ಗಾಡಿಪ ಕಲಕಲಿಸುವ ಕಪೋಲಗಳಂ ಬಿಂಬಫಲವಾಡಂಬರವಂ ವಿ
ಡಂಬಿಸುವ ತುಟಿಗಳಂ ದಾಡಿಮಬೀಜಗಳಂತೆ ವರ್ಣನೀಯವಾದ ದಂತ
ಪಙ್ತಿಯಿಂ ಫುಲ್ಲಶರನ ಬಿಲ್ಲ ತಲ್ಲಣಿಸುವ ಭ್ರೂವಲ್ಲಿಗಳಂ ಎಳೆದುಂಬಿಗಳ
ಬಳಗದೊಳಂ ಜಗಳವಂ ಬಯಸುವ ಸುಳಿಗುರುಳುಗಳಂ ಬಿಲ್ವಫಲಗಳಂ
ತೆ ಚೆಲ್ವಾಗಿ ಕಾಲುಕುವ ಕುಚಂಗಳಂ ಬಳುಕುವ ಸೆಳೆನಡುವಿನಿಂ ಬೆರ
ಲುಂಗಳೆಂಬಚಿಗುರುಗಳಂತಾಳ್ದ ಬಾಹುಲತೆಗಳಂ ಪುಳಿನಮಂಪೋಲ್ವ ಜ
ಘನಮಂಡಲಗಳಂ ಎಳೆಬಾಳೆಯ ಕಂಬಗಳದಂಭವಂ ಗುಂಭನಂಗೈವ ನು
ಣ್ದೊಡೆಗಳಿಂದಮುಂ ರಂಭಾದಿಗಳಂ ತಿರಸ್ಕರಿಸಿ ಗರ್ವದಿಂ ಮೆರೆಯುತ್ತ
ಹಾವಭಾವವಿಲಾಸಗಳಂ ಕೂಡಿ ವಿಚಿತ್ರವಾದ ಕಡೆಗಣ್ಣಿನ ನೋಟವೆಂಬ
ಬಲೆಗಳಿಂ ವಿಟರ ಮನಮಂ ಧನಮಂ ಏಕಕಾಲದೊಳ್ ಗ್ರಹಿಸಿ ಕಪಟಸಲ್ಲಾ
ಪಗಳಿಂದ ಕೆಲರಂ ರಂಜಿಸಿ ಕೆಲವರಂ ಚತುರಂಗದಾಟದೊಳ್ ಗಂಗುಗೊ
ಳಿಸಿ ಅನ್ಯರಂ ವೀಣಾಗಾನದಿಂ ನಿರ್ವಿಣ್ಣರಂ ಮಾಡಿ ಪರರಂ ಪಕ್ವಫಲಾ
ಹಾರಗಳಿಂ ತೃಪ್ತಿಗೊಳಿಸಿ ಕೆಲವರಂ ಕ್ರೀಡೆಯಿಂದೊಡಂಬಡಿಸಿ ಪ್ರೇಮ
ಮೆಂಬುದೆಲ್ಲಿಯೂ ಇಲ್ಲದಂತೆ ಮನ್ಮಥನ ಮಾಯೆಯೇ ಬಹುರೂಪುಗೊಂ
ಡಂತೆ ಇರುವ ವಾರಕಾಂತೆಯರ ಸಂತಸದಿಂ ಸೌಂದರ್ಯವಾಗಿರುವ ವೇಶ್ಯಾ
ವಾಟಗಳಿಂದಲೂ ನಿತ್ಯಮಂಗಳವಾಗಿ ಅಳಕಾಪುರಿಯ ಅಲಂಕಾರವನ್ನೆ ತ್ರಿ
ಡಿ ಮಧುರಾಪಟ್ಟಣಕ್ಕಿಂತಲೂ ಮಧುರವಾಗಿ ಜನಕನಗರಿಯ ಸಂಪತ್ತಿಗೆ
ಜನಕವಾಗಿ ಭೋಗಪತಿಯಂತೆ ಭೋಗಿಗಳಿಗಾವಾಸವಾಗಿ ಸಕಲಸೌಭಾ
ಗ್ಯಗಳಿಂ ಪ್ರಕಾಶಿಸುತ್ತಿರುವುದು.

ಇಂತಿರುವ ಮಹಾನಗರವನ್ನಾಳುವ ಒಬ್ಬಾನೊಬ್ಬ ಸುಚರಿತ್ರ
ನೆಂಬ ಮಹಾರಾಜನಿರುವನು. ಆ ರಾಯ ಸುವರ್ಣದ ಕಾಂತಿಯಿಂ
ದೊಪ್ಪಿದ ಷಣ್ಣವತ್ಯಂಗುಳಪರಿಮಾಣದಿಂ ಮನೋಹರವಾಗಿರುವ ಶ
ರೀರದಲ್ಲಿ ಪರಮಸೌಂದರ್ಯವುಳ್ಳ ಅವಯವಂಗಳಿಂದ ನೋಡುವರಿಗೆ ನೇ
ತ್ರಾನಂದಕರನಾಗಿ, ಪೂರ್ಣಚಂದ್ರನಂತೆ ಸಕಲಕಲೆಗಳಿಂದ ಪೂರ್ಣನಾಗಿ,
ಚಕ್ರವರ್ತಿ ಲಕ್ಷಣಲಕ್ಷಿತನಾಗಿ, ಕಾಂತಾಜನಂಗಳಿಗೆ ಕಾಮನಂತೆ ಮನೋ
ಹರವಾಗಿರುವನು. ಮತ್ತಂ ಸಂಧಿವಿಗ್ರಹಯಾನಾಸನದ್ವೈಧೀಭಾವ

ಸಮಾಶ್ರಯಾಗಳೆಂಬ ಆರುಗುಣಂಗಳಿಂದಲೂ ಪ್ರಭುಶಕ್ತಿ ಮಂತ್ರಶಕ್ತಿ
ಉತ್ಸಾಹಶಕ್ತಿಗಳೆಂಬ ಮೂರುಶಕ್ತಿಗಳಿಂದಲೂ ಯುಕ್ತನಾಗಿ, ಕಲ್ಪವೃ
ಕ್ಷ ಕಾಮಧೇನು ಚಿಂತಾಮಣಿಗಳಿಗೂ ಕೇಳಿದ ವಸ್ತುಗಳಂಕೊಡುವ ಔ
ದಾರ್ಯಂಗಳುಂಟು, ಪರರು ಮಾಡಿದ ಕಿಂಚಿತ್ತಾದ ಉಪಕಾರವನೆಂದಿ
ಗೂ ಮರೆಯುವೆ ಅವರಿಗೆ ಎಂಥ ಪ್ರತ್ಯುಪಕಾರದಿಂದ ಸಂತೋಷಮಂ
ಮಾಡಿಸುವೆನೆಂದು ಯೋಚನೆಯಂ ಮಾಡುತ್ತಿರುವನು. ಶಾಸ್ತ್ರಜ್ಞ
ರಾದ ಬ್ರಹ್ಮನಿಷ್ಠರಾದ ಹಿತರಾದ ಜ್ಞಾನವಯೋವೃದ್ಧರಾದಬ್ರಾಹ್ಮ
ಣೋತ್ತಮರಿಂದ ಸಕಲಶಾಸ್ತ್ರಮರ್ಯಾದೆಗಳನ್ನು ಭಕ್ತಿಯಿಂಧಾರಣಾ
ಶಕ್ತಿಯಿಂ ತಿಳಿದು, ಅದೇಪರಿಯಾಗಿ ಗುರುಗಳಲ್ಲಿಯೂ ತತ್ಸಮಾನರಾದ
ಜ್ಞಾನಿಗಳಲ್ಲಿಯೂ ತಮ್ಮ ಹಿರಿಯರಲ್ಲಿಯೂ ಏಕಪ್ರಕಾರವಾಗಿ ದೇವ
ತಾಭಾವನೆಯಿಂದ ಶುಶ್ರೂಷೆಯಂಮಾಡುತಲಿರುವನು. ಮತ್ತಂ ಪರಿಶುದ್ಧಂ
ಗಳಾದ ಮಾತಾಪಿತೃವಂಶಗಳಲ್ಲಿ ಉದಯಿಸಿದವನಾದಕಾರಣ ಪರಮಸ
ತ್ವಸಂಪನ್ನನಾಗಿ, ಶಬ್ದಾರ್ಥಂಗಳಲ್ಲಿ ಲೇಶವಾದರೂ ದೋಷವಿಲ್ಲದಂತೆ
ಮಧುರವಾಗಿ ಭಾವಗರ್ಭಿತಂಗಳಾದ ಮಾತುಗಳಿಂದ ನಿಜಕಾಂತೆಯರೊ
ಡನೆ ಶೃಂಗಾರರಸವು ಆವಿರ್ಭವಿಸುವಂತೆಯುಂ, ಸೇನಾಪತಿಗಳಿಗೆ ವೀ
ರರಸವು ಜನಿಸುವಂತೆಯುಂ, ನಿಜಕುಲದೇವತಾಸನ್ನಿಧಿಯಲ್ಲಿ ಕರುಣಾ
ರಸವು ತೋರ್ಪಂತೆಯುಂ, ವಿಚಿತ್ರನಗರ ಗೋಪುರ ತಟಾಕನಿರ್ಮಾಣ
ನಿರೂಪಣದಿಂದ ಜನರಿಗೆ ಆಶ್ಚರ್ಯರಸವು ಪುಟ್ಟುವಂತೆಯುಂ, ವಿಶೇ
ಷೋತ್ಸವಂಗಳಲ್ಲಿ ತನಗೆ ಸಮಾನದೇಶಾಧಿಪತಿಗಳಾದ ಭೂಪ್ರಕಸ್ವ್ಯಲಕ
ರೊಡನೆ ಉಚಿತವಾಗಿ ಹಾಸ್ಯರಸವು ತೋರ್ಪಂತೆಯುಂ, ಪರರಾಯರ
ನಿಯೋಗಿಗಳಿಗೆ ಭಯಾನಕರಸವು ನೆಡುವಂತೆಯುಂ, ಲೋಕವಿರುದ್ಧಗ
ಳಾದ ದುರಾಚಾರಂಗಳಲ್ಲಿ ಜನಂಗಳಿಗೆ ಭೀಭತ್ಸರಸವು ಉಕ್ಕುವಂತೆ
ಯುಂ, ನಿತ್ಯಕರ್ಮಾನುಷ್ಠಾನ ಸಮಯದೊಳ್ಪುರಾಣಕಥಾಸಲ್ಲಾಪಗ
ಳಿಂದ ವಿದ್ವಜ್ಜನಂಗಳೊಡನೆ ಶಾಂತಿರಸವು ಅಂಕುರಿಸುವಂತೆಯುಂ, ಕಾ
ಲದೇಶಂಗಳಿಗೆ ಉಚಿತವಾಗಿ ನವರಸಾವಿರ್ಭಾವದಿಂ ವ್ಯವಹಾರವಂಮಾ
ಡುವ ಕುಲಕ್ರಮಾಗತರಾದ ಹಿತರಾದ ನೀತಿಶಾಸ್ತ್ರಪಾರಂಗತರಾದ ಮ
ಹಾಮಂತ್ರಿಗಳೊಡನೆ ಬಹುಫಲಲಾಭಕಾರಣಂಗಳಾದ ಕಾರ್ಯಂಗಳನ್ನು

ಆಲೋಚಿಸುತ್ತ ಆ ಕಾರ್ಯಂಗಳಂ ಕಾಲವಿಳಂಬನಂಮಾಡದೆ ಉದ್ಯೋಗಿಸುವನು. ತನುವ್ಯಸನ ಮನವ್ಯಸನ ಪಾನವ್ಯಸನ ಪರಸ್ತ್ರೀವ್ಯಸನ ಮೃಗಯಾವ್ಯಸನ ದ್ಯೂತವ್ಯಸನ ಕಾಮವ್ಯಸನಂಗಳೆಂಬ ಸಪ್ತವ್ಯಸನಂಗಳಲ್ಲಿ ಅಸಕ್ತರಾದವರ ಸಹಾಚಾರಮಂ ಸಹಿಸದೆ, ಧರ್ಮೈಕನಿಷ್ಠನಾಗಿ ಸಕಲ ವಿದ್ಯಾಕುಶಲನಾದಕಾರಣ ಪರರ ಅಭಿಪ್ರಾಯಮಂ ನೋಡಿದಮಾತ್ರದಿಂದಲೇ ತಿಳಿಯುತ್ತ, ರಹಸ್ಯವಾದ ಸ್ವಕೀಯಮಂತ್ರಾಂಗಂಗಳಂ ಆಚ್ಛಾದಿಸುತ್ತ, ನ್ಯಾಯಾನ್ಯಾಯವಿಚಾರದೊಳ್ ಚತುರ್ಮುಖನಂತೆ ದಂಡನೀತಿಯಲ್ಲಿ ಧರ್ಮೈಕದೃಷ್ಟಿಯಾಗಿ, ದೀನ ಅನಾಥ ಬಾಲ ಕುಬ್ಜ ಬಧಿರ ಅಂಧರಲ್ಲಿ ಕರುಣೆಯನ್ನಿಟ್ಟು ರಕ್ಷಿಸುತ್ತ, ಚೋರರಂ ದುರಾಚಾರರಂ ನೀತಿಯಿಂದ ಶಿಕ್ಷಿಸುತ್ತ, ಗೋಬ್ರಾಹ್ಮಣರು ಮೊದಲಾಗಿ ಪ್ರಜಾರಕ್ಷಣದ ಮತಿಯತಾತ್ಪರ್ಯದಿಂದ ಪ್ರಜಾಹಿತವೇ ತನಗೆ ಹಿತವೆಂದು ಪ್ರಜಾವ್ಯಸನವೇ ತನ್ನ ವ್ಯಸನವೆಂಬ ಪುಷ್ಪಂಗಳಲ್ಲಿ ಮಕರಂದವಂ ತೆಗೆಯುವ ಮಧುಕರನಂತೆ ಪ್ರಜೆಗಳಿಂದ ಧನಧಾನ್ಯಂಗಳಂ ಪರಿಗ್ರಹಿಸಿ, ಕೋಶಾಗಾರಗಳಂ ತುಂಬುತ ಸ್ವಾಮಿಯಾಗಿ, ತನ್ನ ಸ್ವತ್ತೆನಿಸಿದ ಅಮಾತ್ಯ ಸುಹೃತ್ತುಗಳು ಬೊಕ್ಕಸ ದೇಶ ದುರ್ಗಂಗಳು ಚತುರಂಗಬಲವೆಂಬ ರಾಜ್ಯಾಂಗಗಳಂ ದಿನದಿನದಲ್ಲಿ ಅಭಿವೃದ್ಧಿಯನ್ನೈದಿಸುತ್ತ, ಸಾಮ ದಾನ ಭೇದ ದಂಡಗಳೆಂಬ ಚತುರುಪಾಯಂಗಳಂ ಉಚಿತವಾದ ದೇಶಕಾಲಗಳನರಿತು ಶತ್ರುರಾಜರಲ್ಲಿ ಪ್ರಯೋಗಿಸುತ್ತ, ಧರ್ಮಸಚಿವನಾದ ಪುರೋಹಿತನಿಂ, ಕರ್ಮಸಚಿವನಾದ ಮಹಾಮಾತ್ಯನಿಂ, ನರ್ಮಸಚಿವನಾದ ಮಿತ್ರನಿಂದಲೂ, ತ್ರಿಲೋಚನನಂತೆ ಮೆರೆಯುತ, ನಿಜಾಜ್ಞಾನಿರ್ವಾಹವಂ ಮಾಡುವ ಕರಣಿಕರ ತಾರತಮ್ಯವರಿತು ರತ್ನಭೂಷಣಾಂಬರಂಗಳಿಂದ ಸನ್ಮಾನವಂ ಮಾಡುತ್ತ, ಸತ್ಯವ್ರತನಾಗಿ ಜಿತೇಂದ್ರಿಯನಾದಕಾರಣ ಪರದಾರಪರಾಙ್ಮುಖನಾಗಿ, ಪೇಳುವ ಮಾತುಗಳಂ ಶಿಲಾಕ್ಷರದಂತೆ ನಡೆಯಿಸುತ್ತ, ರಾಷ್ಟ್ರ ವ್ಯವಹಾರವನ್ನೂ ಸಕಲ ದೇಶಭಾಷೆಗಳನ್ನೂ ಜಾತಿಧರ್ಮಗಳನ್ನೂ ತಿಳಿದು ನಕಲ ವೇಷಧಾರಣೆಯಲ್ಲಿ ಕುಶಲರಾದ ರಾಜಹಿತರಾದ ಗೂಢಚಾರರಿಂದ ಇತರರ ದೇಶಂಗಳ ಸಮಾಚಾರವಂ ತರಿಸುತ್ತ, ಹಿತಾಹಿತಂಗಳಂ ಭಾವಿಸಿ ಹಿತಕ್ಕೆ ಸಂತೋಷವಂ ಅಹಿತಕ್ಕೆ ಶೀಘ್ರದಲ್ಲಿ ಪ್ರತೀಕಾರಮಂತ್ರವಂ ಮಾ

ತ್ರಿಗಳೊಡನೆ ಪರ್ಯಾಲೋಚಿಸುತ್ತ, ನಾನಾದೇಶದ ಅರಸುಗಳಿಂದ ಒಪ್ಪಿಸಲ್ಪಟ್ಟ ಕಪ್ಪಗಳಂ ತೆಗೆದುಕೊಳ್ಳುತ್ತ, ವಸಂತಾದಿಕಾಲಗಳಲ್ಲಿ ಜ್ಯೋತಿಷ್ಟೋಮ ರಾಜಸೂಯ ಅಶ್ವಮೇಧ ಮೊದಲಾದ ಯಜ್ಞಂಗಳಲ್ಲಿ ದೀಕ್ಷಿತನಾಗಿ, ಜನರ ಮನೋರಥವಿದ್ದಂತೆ ಧನಕನಕವಸ್ತುವಾಹನಂಗಳಂ ಕಾವೆಲ್ಲುಂಘದಂತೆ ವರ್ಷಿಸುತ್ತ, ಲೋಕರಕ್ಷಣದಲ್ಲಿ ಬದ್ಧಕಂಕಣನಾಗಿರುತ್ತಿರುವ ಆದಿನಾರಾಯಣನಂತೆ ವಿರಾಜಿಸುತ್ತ, ತನ್ನ ಅರ್ಧಾಂಗ ಲಕ್ಷ್ಮಿಯಾಗಿ ನಯನಕಮಲಂಗಳಲ್ಲಿ ಮಹಾಲಕ್ಷ್ಮಿಯಂ ವದನಕಮಲದಲ್ಲಿ ಮಹಾಸರಸ್ವತಿಯುಂ ಹೃದಯಕಮಲದಲ್ಲಿ ಮಹಾಕಾಳಿಯುಂ ಧರಿಸಿ, ಮನೋವಾಕ್ಕಾಯಂಗಳಂ ಪರದೇವತೆಗೆ ವಿಹಾರಸ್ಥಾನವಂ ಮಾಡುತ್ತ, ಮಹಾವಂಶದೊಳ್ ಜನಿಸಿದವಳಾದುದರಿಂ ಸಹಜವಾದ ಲಜ್ಜೆಯಂ ವಿವೇಕವಂ ವಿತಭೂಷಣವಂ ಶುಭಶೀಲವಂ ವಿನಯುವಂ ಧರ್ಮಬುದ್ಧಿಯುಮಂ ಏಕರೂಪವಾಗಿ ವಹಿಸಿ, ಸರ್ವಾಂಗಸೌಂದರ್ಯದಿಂದ ದಮಯಂತಿಯೋ ಎಂಬಂತೆ ರೂಪದಿಂ ಗುಣಂಗಳಿಂ ವಿಲಾಸದಿಂ ವ್ಯಾಪಾರಂಗಳಿಂದಲುಂ ಪತಿಗೆ ಸೇವಾಪರಳೆನಿಸಿ, ಪರಪುರುಷರನ್ನು ಪುತ್ರರಂತೆ ಭಾವಿಸುತ, ಇಷ್ಟದೇವತೆಯಲ್ಲಿ ದೃಢಭಕ್ತಿಯಂ ಪತಿಯಲ್ಲಿ ಪರತತ್ವಭಾವನೆಯಂ ಹಿರಿಯರಲ್ಲಿ ಮಾಧುರ್ಯಭಾವನಂ ಸೇವಕಸಮೂಹಂಗಳಲ್ಲಿ ಅಭಿಮಾನವಂ ಪ್ರಜೆಗಳಲ್ಲಿ ದಯೆಯಂ ಧರ್ಮದಲ್ಲಿ ಆಸಕ್ತಿಯಂಕೊಂಡು, ಪತಿಯೊಡನೆ ಸರಸಸಲ್ಲಾಪ ಸಮಯಂಗಳಲ್ಲಿ ರಾಜಕಾರ್ಯಂಗಳನ್ನು ಮೆಲ್ಲನೆ ಮನೋಹರವಾಗಿ ಬಿನ್ನವಿಸುತ, ತನ್ನ ಮನಸ್ಸಿನಲ್ಲಿ ಪತಿಗೆ ಕೀರ್ತಿಯ ಅಭಿವೃದ್ಧಿಯನ್ನೇ ಬಯಸುತ, ಪತಿಗುಣಚರಿತ್ರವೇ ಮಂತ್ರಜಪವಾಗಿ ಪತಿಯ ಮನೋವೃತ್ತಿಯಂ ತಿಳಿಯುವುದೇ ವಿದ್ಯಾವಿವೇಕವಾಗಿ ಪತಿಶುಶ್ರೂಷೆಯೇ ಸಕಲ ದೇವತಾಪೂಜೆಯಾಗಿ, ಪಾತಿವ್ರತ್ಯವೇ ಸಕಲವ್ರತಂಗಳಾಗಿ ತಿಳಿದು ನಡೆಯುತ, ಚಂದ್ರಮತಿ ಸುಲಕ್ಷಣೆ ದೇವಯಾನೆ ಶಕುಂತಳೆ ಮೊದಲಾದ ಮಹಾರಾಜಪತ್ನಿಯರ ಪಙ್ಕ್ತಿಯೊಳ್ ಗಣನೀಯಳಾಗಿ ಗುಣವತಿಯೆಂಬ ಹೆಸರುಳ್ಳ ಪಟ್ಟದ ರಾಣಿಯಿಂದೊಡಗೂಡಿ, ಸಕಲ ವ್ರತ ದಾನ ಧರ್ಮಂಗಳಂ ವಿರಚಿಸುತ್ತ, ತಮ್ಮ ಕುಲಕ್ರಮಾಗತನಾಗಿ ಗುರುಭಾರ್ಗವ ಚಾಣಿಕ್ಯಾದಿಗಳಿಂದ ರಾಜಹಿತಾರ್ಥವಾಗಿ ಪ್ರಣೀತವಾದ ರಾಜನೀತಿಗಳಂ ಬೋಧಿಸುವ

ಶಾಸ್ತ್ರದ ರಹಸ್ಯಂಗಳಂ ಗುರುಮುಖದಿಂದ ತಿಳಿದು, ಸ್ವಭಾವದಿಂ ಬು ದ್ಧಿರುವ ವಿನಯ ವಿವೇಕ ಮೊದಲಾದ ಗುಣಂಗಳಿಂದ ಯುಕ್ತನಾಗಿ, ರಾಜಾ ಜ್ಞೆಯಂ ವೇದಶಾಸನದಂತೆ ನಾನಾದೇಶಂಗಳಲ್ಲಿ ನಡೆಯಿಸುತ, ರಾಜಹಿ ತಕಾರ್ಯನಿರತನಾಗಿ, ತನ್ನ ರಾಯನಿಗೆ ವಿಜಯಮಂ ಪರರಾಯರಿಗೆ ಪರಾಜ ಯಮಂ ಮಾಡುವ ಮಂತ್ರಮಂ ರಾಯನ ಚಿತ್ತಮಂ ತಿಳಿದು ಬಿನ್ನೈಸುತ, ಉಪಾಯಚತುಷ್ಟಯವೇ ಮೂರ್ತಿಗೊಂಡಂತೆ ಮೈಯೆಲ್ಲಾ ಮತಿ ಯಾಗಿ ಸದ್ಧರ್ಮದಿಂದರ್ಥಾರ್ಜನೆವನ್ನು ಅರ್ಥದಿಂ ಧರ್ಮಮಂಗ್ರಹಿಸುವಂತೆ ರಾ ಜಾಜ್ಞೆಯಂ ಪಡೆದು ರಾಷ್ಟ್ರ ದುರ್ಗಬಲಾದಿಗಳಂ ವಿಚಾರಿಸುತಸದಾ ಚಾರಸಂಪನ್ನತೆಯಿಂದ ನಿರ್ಮಲಚಿತ್ತನಾದಕಾರಣ ಸ್ವಕಾರ್ಯಮಂ ಚಿಂತಿಸದೆ ನಿದ್ರಾಲಸ್ಯಪ್ರಮಾದಂಗಳಿಂದ ರಹಿತನಾಗಿ ರಾಜಹಿತವೇ ಸ್ವಕಾ ರ್ಯವೆಂದಿರುತ್ತಿರುವ ಸುಬುದ್ಧಿಯೆಂಬ ಹೆಸರುಳ್ಳ ಮಹಾಪ್ರಧಾನಿಯುಂ ಬೃ ಹಸ್ಪತಿಯಿಂದ ವಿದಿತವಿಚಾರನಾದ ಮಹೇಂದ್ರನಂತೆ ಕಾರ್ಯಂಗಳೊ ಳ್ ಕೈಗೊಳ್ಳುತ್ತಲುಂ, ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದಂಗಳಂ ಸಾಂಗವಾಗಿ ತಿಳಿದು ನ್ಯಾಯ ಮೀಮಾಂಸ ಪುರಾಣ ಧರ್ಮ ಶಾಸ್ತ್ರಪಾರಂಗತರಾಗಿ, ಮಹೀಪಾಲನಿಗೆ ಶಾಂತಿಕ ಪೌಷ್ಟಿಕ ಮೊದ ಲಾದ ಶುಭಕರ್ಮಂಗಳಂ ಕಾಲಕಾಲವರಿತು ವಿಜ್ಞಾಪನೆಯಂಗೈಯುತ ರಾಜವಂಶಪರಂಪರಾಭಿವೃದ್ಧಿಯಂ ಪ್ರಾರ್ಥಿಸುತ ಧರ್ಮಮತಿಯೆನಿಸಿದ ವೇದವಿಶ್ರುತನೆಂಬ ಪುರೋಹಿತನಿಂದ ಸೂಕ್ಷ್ಮಧರ್ಮಂಗಳಂ ತಿಳಿಯುತ ಲುಂ, ನಾನಾದ್ವೀಪಾಂತರಂಗಳಲ್ಲಿರುವ ಅಪೂರ್ವ ಜೀವರತ್ನಂಗಳಂ ದಿ ವ್ಯಾಂಬರಂಗಳಂ, ಅತಿಕೋಮಲಾಂಗಿಯರಾಗಿ ಮೊಗದ ಸೊಗಸಿನಿಂ ಪ ಲ್ಲವರಸೆಯಿಂ ಕರ್ಣಾಂತಲೋಚನಂಗಳಿಂ ಕಚಕುಚಭಾರಗಳಿಂದಲುಂ ಕ ಳಾಶಾಸ್ತ್ರಲಕ್ಷಣಮಂ ಕಟಾಕ್ಷವಿಲಾಸದಿಂ ತೋರಿಸುವ ಗೌಳ ಮಲ ಯಾಳ ಘೂರ್ಜರಿ ಮೊದಲಾದ ದೇವಸ್ತ್ರೀರತ್ನಂಗಳನ್ನ ಪರಿಮಿತದ್ರ ವ್ಯಂಗಳಂ ಕೊಟ್ಟು ಚತುಸ್ಸಮುದ್ರಮಾರ್ಗದಲ್ಲಿ ನಡೆಯುವ ನಾವೆಗಳಿಂ ದ ತರಿಸಿ, ನರಪಾಲಕಂಗೆ ಸಮರ್ಪಿಸುತ ರಾಜಹಿತಪದಾರ್ಥಂಗಳಂ ತರಿ ಸುವಲ್ಲಿ ತನ್ನ ಸರ್ವಸ್ವವನ್ನಾದರೂ ಕೊಡುವೆನೆಂಬ ಅಭಿಲಾಷೆಯುಳ್ಳ ರ ತ್ನನಿಧಿಯೆಂಬ ಹೆಸರಿಂ ಪ್ರಸಿದ್ಧನಾದ ಮಹಾವರ್ತಕನಿಂದ ಸಂತೋಷ

ಯೆಂಬ ನವೀನಕೃತಿಯೊಳ್ ನಗರ ನಿರೂಪಣವರ್ಣನವೆಂಬ ಪ್ರಥಮಾಶ್ವಾಸಸಂಪೂರ್ಣಂ.

## ದ್ವಿತೀಯಾಶ್ವಾಸಂ

॥ಶ್ರೀಚಾಮುಂಡಿಕಾಂಬಾಯೈನಮಃ॥ ಇಂತು ಸುಖದಿಂದಿರುತ್ತಲಿರುವ ಸುಚರಿತ್ರಮಹಾರಾಜನು ಒಂದುದಿನ ಪ್ರಭಾತಸಮಯದೊಳ್ ವಂದಿಬೃಂದ ಜಯಜಯಾರಾವಂಗಳಿಂದ ನಿದ್ರೆಯಂ ತಿಳಿದು, ರಾಜಹಂಸಯುಗ್ಮ ಮಕರ ಮತ್ಸ್ಯ ಶಂಖ ಚಕ್ರಾದಿ ಶುಭಲಕ್ಷಣವಾದ ರೇಖೆಗಳಿಂದೊಪ್ಪುವ ಕರಪದ್ಮಂಗಳಂ ನೋಡಿ, ನಿಜಕುಲದೇವತೆಯಂ ಬರೆಸಿರುವ ವಿಚಿತ್ರ ಚಿತ್ರಪಟಮಂ ನಿರೀಕ್ಷಿಸಿ ನಮಸ್ಕರಿಸಿ, ಶಯ್ಯಾಗೃಹದ್ವಾರದಲ್ಲಿ ನಿಂತಿರುವ ಬ್ರಾಹ್ಮಣಯುಗ್ಮದ ದರ್ಶನಂಗೈದು, ವಿಮಲದರ್ಪಣದಲ್ಲಿ ನಿಜಮುಖಪಂಕಜಮಂ ನೋಡಿ, ಫಲಪುಷ್ಪಮೊದಲಾದ ಶುಭವಸ್ತುಗಳ ನವಲೋಕಿಸಿ ಸುಂದರಿಯರಾದ ಮಂದಯಾನೆಯರು ತಂದಿರುವ ಮಣಿಕಲಶಗಳಲ್ಲಿ ತುಂಬಿದ ಪನ್ನೀರಿಂದ ಮುಖಮಜ್ಜನಂಗೈದು, ಗೂಢಚಾರರಿಂದ ಸಕಲಾಧಿಕಾರರಹಸ್ಯವೃತ್ತಾಂತಮಂ ಕೇಳುತ್ತ, ಮಹಾಮಾತ್ಯನೊಡನೆ ಮೆಲ್ಲಮೆಲ್ಲನೆ ಮಾತನಾಡುತ, ಚಂದ್ರಕಾಂತಶಿಲಾನಿರ್ಮಿತವಾದ ಮಜ್ಜನಗೃಹಮಂ ಪೊಕ್ಕು ಪರಿಮಿತಜನದಿಂದ ಪರಿವೃತನಾಗಿ, ಕಸ್ತೂರಿ ಕರ್ಪೂರಾದಿಗಳಿಂದ ಪರಿಮಳಿಸುವ ನಿರ್ಮಲೋದಕಮಂ ಸುವರ್ಣಕಲಶದಲ್ಲಿ ತುಂಬಿ, ಕೆಲಬಲದೊಳ್ ಚಾಮರಂಗಳಂ ಬೀಸುವಂತೆ ಎರೆಯುವ ಪಲ್ಲವಪಾಣಿಯರ ಮಣಿಕಂಕಣಝಣತ್ಕಾರಮಂ ಕರ್ಣಾನಂದಕರವಾಗಿ ಕೇಳ್ದು, ಮಜ್ಜನಮಂ ಮಾಡಿ, ಧೌತವಾದ ದುಕೂಲಮಂ ಧರಿಸಿ, ಚಂದ್ರಮಂಡಲದೊಳ್ ಕಳಂಕವೆಸೆವಂತೆ ಮುಖಮಂಡಲದಲ್ಲಿ ಕಸ್ತೂರೀತಿಲಕವನ್ನಿಟ್ಟು, ನಿತ್ಯಕರ್ಮಮಂ ಸಾಂಗವಾಗಿ ರಚಿಸಿ, ರಾಗಯುಕ್ತವಾದ ಮಧುರವಾದ ಪುರಾಣಮಂ ಕೇಳುತ, ಕುಲದೇವತೆಯಂ ಷೋಡಶೋಪಚಾರಪೂರ್ವಕವಾಗಿ ಪೂಜಿಸಿ, ಅನಂತರದಲ್ಲಿ ಮಿತ್ರಜನಂಗಳೊಡನೆ ಭೋಜನಶಾಲೆಯನೆಯ್ದಿ, ಭಕ್ಷ್ಯ ಭೋಜ್ಯ ಚೋಷ್ಯ ಲೇಹ್ಯ ಪಾನೀಯಂಗಳೆಂಬ ಪಂಚವಿಧಂಗಳಾದ ಮ

ಧುರಾಹಾರಂಗೊಂಡು, ಘುಮಘುಮಿಸುತ ಗಂಧದಿಂ ಗಮಗಮಿಸುವ ಪ್ರಸ್ನವಮಾಲಿಗಳಿಂ ಥಳಥಳಿಸುವ ರತ್ನಭೂಷಣಂಗಳಿಂ ಮಿರಮಿರನೆ ಮಿಂಚುವ ಪೀತಾಂಬರಗಳಿಂದಲಂಕೃತನಾಗಿ, ರನ್ನದ ಹಾವುಗೆಯಂ ಮೆಟ್ಟಿ, ಮಾಣಿಕ್ಯಮಯವಾದ ಆಸ್ಥಾನಮಂಟಪಮಂ ಪ್ರವೇಶಿಸಿ ಭದ್ರಪೀಠದೊಳ್ ಕುಳ್ಳಿರ್ದು, ಬಂದುಕಡೆಯೊಳ್ ವಿಚಿತ್ರ ವಸ್ತ್ರಭೂಷಣಂಗಳಂ ಧರಿಸಿ, ಚಿತ್ರಕರದಿಂ ಬರೆದ ಬೊಂಬೆಗಳಂತೆ ಸಾಲುಸಾಲಾಗಿ ಕೈಕಟ್ಟಿ ಕುಳಿತಿರುವ ಸಾಮಂತಭೂಪಾಲಮಂಡಲದಿಂ ಸಾಂದ್ರವಾದ ಸಕಲದೇಶಗಳ ಲೆಕ್ಕವನೊಕ್ಕಣಿಸುವ ಕರಣಿಕರಿಂ, ಚಿನ್ನದ ರನ್ನದ ಬೆತ್ತಗಳಂ ಪಿಡಿದು ದೇಶಾಧಿಕಾರಿಗಳಿವರು ಇವರು ಸೇನಾಪತಿಗಳು ಇವರು ಕಪ್ಪವನೊಪ್ಪಿಸುವ ಮಂಡಲೇಶ್ವರರು ಇವರು ಚಿತ್ರವಸ್ತುಗಳಂ ತಂದಿರುವ ಘನವರ್ತಕರು ಪರಾಂಬರಿಸಿ ಸ್ವಾಮಿ ಪರಾಕೆಂದು ಬಿನ್ನೈಸುವ ಅವಸರದ ಗುರುಕಾರರ ಕೋಲಾಹಲದಿಂ, ಪುರೋಭಾಗದೊಳ್ ವೀಣಾವೇಣು ಮೃದಂಗವಾದ್ಯಂಗಳಂ ಮೇಳವಿಸಿ, ನರ್ತನಮಂ ಮಾಡುತ ಜೌವನದ ಜಗ್ಗುನಿಗ್ಗುಗಳಂ ತೋರ್ಪ ವೇಶಿಯರ ಸಂಗೀತರವದಿಂ ಕುಲಕ್ರಮಾಗತವಾದ ಬಿರುದಪದ್ಯಗಳನ್ನುಗ್ಗಡಿಸಿ ಜಯಜಯ ಮಹಾರಾಜ ಪರರಾಯರಗಂಡ ವಿಜಯಿಾಭವ ಎಂದು ಭಟರುಗಳೊಟ್ಟುಗೂಡಿ ಕೈಯೆತ್ತಿ ಕೈವಾರವಂ ಮಾಡುವ ಮಹಾಧ್ವನಿಗಳಿಂದಲುಂ, ಮತ್ತೊಂದು ಪ್ರದೇಶದೊಳ್ ಮಿರ್ರೆಂದು ಮೊರೆಯುವ ಪಣವ ನಿಸ್ಸಾಳ ಡಿಂಡಿಮ ಕಾಹಳೀ ಭೇರೀಭಾಂಕಾರಾದಿಗಳಿಂ ಮುಖರಿತವಾಗಿ, ಸುಧರ್ಮಸಭೆಯಂತೆ ಇರುವ ಮಹಾಸ್ಥಾನದೊಳ್ ಮಹೀಮಹೇಂದ್ರನೆನಿಸುತ್ತ ಒಡ್ಡೋಲಗಂ ಗೊಳ್ಳುತ್ತಿರುವ ಸಮಯದಲ್ಲಿ ಉದ್ಯಾನವನದಿಂದ ವನಪಾಲಕರು ನಾನಾವಿಧಂಗಳಾದ ವಿಚಿತ್ರಫಲಪುಷ್ಪಂಗಳಂ ತೆಗೆದುಕೊಂಡು ಬಂದು ಅರಮನೆಯ ಬಾಗಿಲಲ್ಲಿ ನಿಂದು ದೌವಾರಿಕರಂ ಕುರಿತು "ಎಲೈ ರಾಜದೂತರುಗಳಿರಾ ! ಕೇಳಿ, ನಾವು ಅರಸಿಗೆ ಕ್ರೀಡಾಯೋಗ್ಯವಾದ ವಸಂತಕವನವೆಂಬ ಉದ್ಯಾನವಂ ಪಾಲಿಸುವ ವನಪಾಲಕರು, ಈಗ ರಾಯನಿಗೆ ಬಿನ್ನಹವಂ ಮಾಡತಕ್ಕ ಕಾರ್ಯವಿದೆಯಾಗಿ ಶೀಘ್ರದಲ್ಲಿ ಮಹಾರಾಜನಿಗೆ ನಮ್ಮ ವೃತ್ತಾಂತವಂ ಬಿನ್ನವಿಸಬೇಕು" ಎಂದು ಪೇಳಿದ ವನಪಾಲಕರ ಮಾತಂ ಕೇಳಿ, ರಾಜಭಟರು ಓಲಗಶಾಲೆಯ ಮುಂಭಾಗ

ದೊಳ್ನಿಂತಿರುವ ತಮ್ಮ ಗುರುಕಾರನಿಗೆ ಮರೆಯಾಗಿ ತಿಳುಹಿಸಲಾ ಗುರುಕಾರನು ಭೂಪಾಲನಿಗಭಿಮುಖವಾಗಿ ಬಂದು ನಿಂತು ಕೈಮುಗಿದು, "ಸ್ವಾಮಿ! ವಸಂತೋದ್ಯಾನವಂ ಪಾಲಿಸುವ ವನಪಾಲಕರು ಪಾದದರ್ಶನಾರ್ಥವಾಗಿ ಬಂದು ಕಾದಿರುವರು" ಎಂದು ವಿಜ್ಞಾಪನಂಗೆಯ್ಯಲಾ ಮಹೀಪಾಲನು— ಅಷ್ಟಾವಧಾನದಿಂದಿರುವನಾದಕಾರಣ ಈ ಗುರುಕಾರನ ಮುಖವಂ ನೋಡಿ ಹುಬ್ಬಿನಿಂ ಸನ್ನೆಯಂ ಮಾಡಲಾ ಗುರುಕಾರನು "ಬುದ್ಧೀ" ಎಂದು ತ್ವರೆಯಿಂದ ರಾಜಮಂದಿರದ್ವಾರದಲ್ಲಿರುವ ವನಪಾಲಕರಂ ರಾಯನಭಿಮುಖಕ್ಕೆ ತಂದು ನಿಲ್ಲಿಸಿ ಪರಾಕೆಂದು ನುಡಿಯಲಾ ಮಾತಂಕೇಳದ ಮಾತ್ರದಿಂದ ಮಹಾರಾಜನು ವನಪಾಲಕರಂ ಕರುಣಾಕಟಾಕ್ಷದಿಂದೀಕ್ಷಿಸಿ, ವನಪಾಲಕರು ಕಪ್ಪವಾಗಿ ತಂದ ಫಲಪುಷ್ಪಂಗಳನವಲೋಕಿಸಿ, ಷಡೃತುಗಳಲ್ಲಿ ಆಗತಕ್ಕ ಫಲಗಳು ಪುಷ್ಪಂಗಳು ಏಕಕಾಲದಲ್ಲಾಗಿರುವುವು. ಇದೇನು ವಿಚಿತ್ರವೆಂದು ವನಪಾಲಕರಂ ಕಡೆಗಂಣುಗಳಿಂದ ನೋಡುತ್ತ ಎಲೈ ವನಪಾಲಕರುಗಳಿರಾ! "ಇದೇನುನಿಮಿತ್ತದಿಂದೀ ಸಕಲಜಾತಿಯ ಫಲಪುಷ್ಪಂಗಳೂ ಬಂದೇಕಾಲದಲ್ಲಿ ನಮ್ಮ ಮನಸ್ಸಂತೋಷವಂ ಮಾಡುತಲಿವೆ" ಎಂದು ರಾಯನು ಕೇಳಲು. ಈ ಅಚ್ಚರಿಯನ್ನೇ ಬಿನ್ನೈಸಬೇಕೆಂದು ಬಂದೆವು. ವಿಚಿತ್ರ ಕುಸುಮಫಲಂಗಳಂ ವೆರಾಂಬರಿಸಬೇಕೆಂದು ವನಪಾಲಕರು ಬಿನ್ನೈಸಿದರು. ಆ ರಾಯನು ಮನದೊಳಾಲೋಚಿಸುತ್ತಿರ್ದನದೆಂತೆನೆ— ಮಾಕೆಂದ ಕುರವಕ ಅಶೋಕ ಚಂಪಕ ಪಾಟಲಾದಿ ವೃಕ್ಷಂಗಳಿಗೆ ಅಕಾಲದಲ್ಲಿಯೂ ವಿಕಸನವಾಗುವಂತೆ ಶಾಸ್ತ್ರವಂ ತಿಳಿದು ದೋಹಳಂಗಳನೇನಾದರೂ ರಚಿಸಿರುವರೆಂಬೆನೆ? ನನ್ನ ಆಜ್ಞೆಯಿಲ್ಲದೆ ದೇಶಂಗಳಲ್ಲಿ ತೃಣವೂ ಚಲಿಸದೆ ಇರುವಾಗ ಇಂತಿರಲಾರದು. ಇದೆಲ್ಲಾ ವಿಲಾಸವತಿಯರಾದ ಸ್ತ್ರೀಯರುಗಳು ಪುಷ್ಪಾಚಯಕ್ಕೋಸುಗ ಏನಾದರೂ ವಸಂತವನಕ್ಕೆ ಪೋಗಿರಲಾ ಪಲ್ಲವಾಧರಿಯರ ವಚನಂಗಳಿಂದ ಆಲಿಂಗನದಿಂದ ಪಾದತಾಡನದಿಂದ ಮುಖಮಾರುತದಿಂದ ಪುಷ್ಪಿಸುವ ಫಲಿಸುವ ತರುಗಳಾಗಿರಬಹುದು. ಆದರೂ ಗುಣವತಿಯು ಮೊದಲಾದ ಸ್ತ್ರೀಯರುಗಳಿಗೆ ಸಕಲ ಕಲಾವಿಲಾಸವು ನನ್ನ ಹರ್ಷಾರ್ಥವಾದಕಾರಣ ನಾನರಿಯದಂತೆ ನನ್ನ ಆಜ್ಞೆಯಿಲ್ಲದೆ ಇರುವೆಗಳ

ವರು ಇದಂ ಚೆನ್ನಾಗಿ ಪರಿಭಾವನೆಯಂ ಮಾಡಿದಲ್ಲಿ ನಿಮಗೆ ಮಹಾಸಂ
ತೋಷಕಾರಣವಾಗುವುದು" ಎಂದು ಪೇಳುವ ರಾಜಹಿತಾರ್ಥಿಯಾದ ಸು
ಬುದ್ಧಿಯ ಮಾತಂ ಕೇಳಿ ಎಲೈ ಸುಬುದ್ಧಿಯೆ, ನಿನ್ನ ಬುದ್ಧಿಯಂ ನೋ
ಡಿ ನಾನು ಸಂತುಷ್ಟನಾದೆನು. ಇದೇ ಅರ್ಥವನ್ನು ನಾನು ನಿಶ್ಚೈಸಿ
ಸಿದೇನೆ. ಈಗ ರತ್ನಪುರವು ಅಲಂಕೃತವಾಗಲಿ, ರಥ ಗಜ ತುರಗ ಪದಾ
ತಿಗಳು ಸನ್ನದ್ಧರಾಗಲಿ, ರಾಜಮಾರ್ಗಗಳು ರತ್ನಭೂಷಣವಾಹನಂಗ
ಳಿಂದ ಅಲಂಕೃತಂಗಳಾಗಲಿ, ವೇದಸಂಪನ್ನರಾದ ವಿಪ್ರೋತ್ತಮರು ಜಲ
ಪೂರ್ಣಸುವರ್ಣಕುಂಭಂಗಳಿಂದ ಶೃಂಗರಿಸಿ ಆನೆಗಳಿಂದ ಕೂಡಿ ತೆರಳಲಿ,
ಇದಲ್ಲದೆ ನರ್ತನಪಾರಿಹಾಸಕರು ಮೊದಲಾದ ಸಕಲಪರಿವಾರಂಗಳು ದಿ
ವ್ಯದುಕೂಲಾಭರಣಂಗಳಂ ಧರಿಸಿ, ತಮ್ಮತಮ್ಮ ವಿದ್ಯಾಪ್ರಕಾಶಂಗೆಯ್ಯ
ಲಿ, ಉತ್ತಮಾಶ್ವಂಗಳಂ ಕಟ್ಟಿ ರತ್ನಕಲಶದಿಂದಲಂಕೃತವಾದ ರಥವು ರಾ
ಜಮಂದಿರದ ಮುಂದೆ ಬಂದು ನಿಂದಿರಲಿ, ನಾವು ಶುಭಸಮಯದಲ್ಲಿ ಆ ಮ
ಹಾಪುರುಷನ ದರ್ಶನಾರ್ಥವಾಗಿ ವಸಂತವನವಂ ಕುರಿತು ಹೊರಡುತ್ತಲಿ
ದೇವೆಂದು ರಾಯನು ಅಪ್ಪಣೆಯಂ ಕೊಟ್ಟು ಒಡ್ಡೋಲಗದಿಂದೆದ್ದು ನಿ
ಜಾಂತಃಪುರವಂ ಕುರಿತು ತೆರಳಲಾಗಿ, ಈಗ ರಾಯನು ಅಂತಃಪುರವಂ
ಕುರಿತು ಬರುವನೆಂದು ತಿಳಿದು ಪಟ್ಟದರಾಣಿಯಾದ ಗುಣವತಿಯು ಸ
ರ್ವಾಲಂಕಾರಭೂಷಿತೆಯಾಗಿ ರತ್ನಕಲಶದಲ್ಲಿ ಪನ್ನೀರಂ ತುಂಬಿಕೊಂಡು
ಮುತ್ತಿನಾರತಿಯಂ ಪಿಡಿದು ಅಂತಃಪುರದ ಒಳಬಾಗಿಲಿನಲ್ಲಿ ಅನೇಕ ಸ
ಖೀಜನರುಗಳಿಂದ ಕೂಡಿ ಅಪ್ಸರಸ್ತ್ರೀಯರುಗಳಿಂದ ಕೂಡಿರುವ ಲಕ್ಷ್ಮಿ
ಯೋ ಎಂಬಂತೆ ನಿಂತಿರಲಾಗಿ, ಕಾಂತಾಮನೋಹರನಾದ ಸುಚರಿತ್ರರಾ
ಯನು ತನ್ನ ನೇತ್ರಚಕೋರಂಗಳಿಂದ ತನ್ನ ರಾಣಿಯ ಮುಖಕಾಂತಿಯ
ಪಾನಂಗೆಯ್ಯುವಂತೆ ಹರ್ಷಭಾವದಿಂ ನೋಡುತ್ತ ಅಂತಃಪುರವಂ ಪ್ರವೇ
ಶಿಸಲು, ರತ್ನಪುರಾಧೀಶನಿಗೆ ಮುತ್ತಿನಾರತಿಯನ್ನೆತ್ತಿ ಪನ್ನೀರಿನಿಂದ ಪಾ
ದಪದ್ಮಂಗಳಂ ತೊಳೆದು ಶೇಷತೀರ್ಥವಂ ತಾನು ಸ್ವೀಕರಿಸಿ ನಮಸ್ಕಾರ
ವಂ ಮಾಡಿ ರಾಯಂಗೆ ಹಸ್ತಲಾಘವಂ ಕೊಟ್ಟು ಶಯ್ಯಾಗೃಹದ ರತ್ನಪ
ರ್ಯಂಕದ ಹಂಸತೂಲಿಕಾತಲ್ಪದಲ್ಲಿ ಕುಳ್ಳಿರಿಸಿ, ತಾನು ಕರಸರೋಜಂ
ಗಳಂ ಮುಗಿದುಕೊಂಡು ಮಹಾರಾಜರ ಕೆಲದೊಳ್ ತಲೆವಾಗಿ ನಿಂತಿರುವ

ರಾಣಿಯು ಕರವಂ ನಿಜಕರದಿಂ ಪಿಡಿದು ತನ್ನಂಕದಲ್ಲಿ ಕುಳ್ಳಿರಿಸಿಕೊಂಡು ರಾಣಿಯು ಗಲ್ಲವಂ ಪಿಡಿದು ಮುತ್ತಿಟ್ಟು ತಕ್ಕೈಸಿ ಕರ್ಪೂರತಾಂಬೂಲವಂ ಚರ್ವಿಸುತ್ತ ಆನಂದಭರಿತನಾಗಿರುವ ರಾಯನ ಮುಖಮಂಡಲವಂ ನೋಡಿ ಈಗ ಭೂಕಾಂತನಂತರಂಗವು ಬಹು ಹರ್ಷಯುಕ್ತವಾಗಿದೆ. ಈ ಪರಮಹರ್ಷಕ್ಕೆ ಕಾರಣವನ್ನು ತಿಳಿಯಬೇಕೆಂದು ಭೂಪಾಲನಂ ಕುರಿತು ಅತಿಮಧುರವಾಗಿ ಭಾವಗರ್ಭಿತವಾದ ನುಡಿಯಿಂದ ಎಲೈ ಧರಾಧೀಶನೆ ನಿನ್ನ ಮುಖ ವಿಕಾಸವಧಿಕವಾಗಿದೆ ಇದರ ಕಾರಣವಂ ನನಗೆ ವಿಸ್ತರಿಸಿ ನಿರೂಪಿಸಬೇಕೆಂದು ಕೇಳಲಾವಮಾತಂ ಕೇಳಿ ರಾಯನತ್ಯಂತಸಂತೋಷದಿಂ ಗುಣವತಿಯ ಮೊಗವಂ ನೋಡಿ, "ಎಲೌ ಶೋಭನಾಂಗಿಯೇ! ಸಂತಾನಾರ್ಥವಾದ ಚಿಂತೆಯಂ ಮಾಡುವ ನನ್ನ ಹೃದಯಕ್ಕೆ ಸಂತೋಷವಾಗುವರೀತಿಯಲ್ಲಿ ಒಂದು ನೂತನವಾಕ್ಯವಂ ಕೇಳಿದೆನಾದಕಾರಣ ಸಕಲ ವ್ಯಸನಪರಿಹಾರವಾಗಿ ನಮ್ಮಿರ್ವರ ಇಷ್ಟಾರ್ಥವು ಶೀಘ್ರದಲ್ಲಿ ಫಲಿಸುವುದಾಗಿದೆ. ಅದೇನೆಂಬೆಯಾ— "ನಮ್ಮ ವಸಂತವನಕ್ಕೆ ಒಬ್ಬ ಮಹಾಪುರುಷನು ಬಂದಿರುವನು. ಆತನನ್ನು ಅನೇಕ ವಿಧವಾಗಿ ಪೂಜಿಸಿ ಆತನ ಕಟಾಕ್ಷಕ್ಕೆ ಪಾತ್ರರಾದರೆ ನಮಗೆ ಸತ್ಪುತ್ರಪ್ರಾಪ್ತಿಯಾಗುವುದರಲ್ಲಿ ಸಂದೇಹವಿಲ್ಲ. ಆತನ ಪ್ರಭಾವದಿಂದ ಷಡೃತುಗಳಲ್ಲಿ ಆಗುವ ಫಲಪುಷ್ಪಂಗಳೂ ಏಕಕಾಲದಲ್ಲಿಯೆ ಆಗಿವೆ." ಎಂದು ನುಡಿದು ವನಪಾಲಕರು ತಂದೊಪ್ಪಿಸಿದ ವಿಚಿತ್ರಫಲಕುಸುಮಗಳಂ ಸಖೀಜನಂಗಳಿಂದ ತರಿಸಿಕೊಂಡಲಾ ಫಲಕುಸುಮಗಳಂ ನೋಡಿ ಅಚ್ಚರಿಗೊಂಡು, ರಾಯನಾಜ್ಞಾಪಿಸಿದ ವಚನದಲ್ಲಿ ಸಂದೇಹವುಂಟೇ ಎಂದು ಸಂತೋಷಭರಿತೆಯಾಗಿ ಅಂಕುರಿಸುವ ಲಜ್ಜಾವಿಶೇಷದಿಂದುಕ್ಕುವ ಮುಖವಿಲಾಸದಿಂ ತನ್ನ ಕಾಮಿತಾರ್ಥವು ಕೈಗೂಡಿತೆಂದು ಮೈಯುಬ್ಬಿ ಹರ್ಷವಿಶೇಷದಿಂದಿರುವ ರಾಣಿಯರೊಡನೆ ರಾಜಾಧಿರಾಜನಿಂತೆಂದನು.— "ಎಲೆ ರಾಣಿಯೇ! ಆ ಮಹಾಪುರುಷನಂ ನಮ್ಮ ಮಂದಿರಕ್ಕೆ ಕರೆತರಬೇಕೆಂದು ಪ್ರಯಾಣವಂ ತೆರಳಿರುವೆನು. ನೀನು ಮಿಂದು ಮಡಿಯನ್ನುಟ್ಟು ರತ್ನಾಭರಣಂಗಳಂ ಧರಿಸಿಕೊಂಡು ಷಡ್ರಸೋಪೇತವಾಗಿ ಪಾಕವಂ ಪಾಚಕಜನರಿಂದ ಮಡಿಯಾಗಿ ಮಾಡಿಸಿಕೊಂಡು ಭೋಜನಶಾಲೆಯಲ್ಲಿ ರತ್ನದೀಪಸ್ತಂಭಂಗಳಲ್ಲಿ ನಾನಾದೀಪಂಗ

ಳನಿಟ್ಟು ಸುವರ್ಣಪೀಠವಂ ಮಡಗಿ ರತ್ನಕಲಶದಲ್ಲಿ ನಿರ್ಮಲೋದಕವಂ ತುಂಬಿಕೊಂಡು ಶುಚಿಯಾಗಿ ಅಂತಃಪುರದ ಬಾಗಿಲಲ್ಲಿ ಸನ್ನದ್ಧೆಯಾಗಿರು" ಎಂದು ಅಪ್ಪಣೆಯಂ ಕೊಟ್ಟು ತಾನು ಸರ್ವಾಲಂಕಾರಭೂಷಿತನಾಗಿ ಶುಭಮುಹೂರ್ತದಲ್ಲಿ ಇಷ್ಟದೇವತೆಯಂ ಧ್ಯಾನಿಸಿ ರಥಾರೂಢನಾಗಿ ಸಕಲ ಪರಿವಾರದೊಡನೆ ವಸಂತವನವಂ ಕುರಿತು ತೆರಳಿ, ಮಾರ್ಗದೊಳ್ ಶುಭಸೂಚಕಂಗಳಾದ ಶಕುನಗಳಂ ನೋಡುತ್ತ ಬಂದು, ಉಪವನದ ಬಾಗಿಲಲ್ಲಿ ಉದಯಪರ್ವತದಿಂದಿಳಿದುಬರುವ ಸೂರ್ಯನೋ ಎಂಬಂತೆ ರಥದಿಂದಿಳಿದು ಸಕಲ ಪರಿವಾರವಂ ಅಲ್ಲಲ್ಲಿ ನಿಲ್ಲಿಸಿ ಮಂತ್ರಿಪುರೋಹಿತರೊಡಗೂಡಿ ಪಾದಚಾರದಿಂದಲಾವನದಲ್ಲಿರುವ ಚಂದ್ರಸರೋವರದ ಸಮೀಪವನ್ನೈದಿ ವನದಲ್ಲಿ ಭಸ್ಮೋದ್ಧೂಳಿತಸರ್ವಾಂಗನಾಗಿ ಪದ್ಮಾಸನಾಸೀನನಾಗಿ ನಿಶ್ಚಲನಾಗಿ ನಾಸಾಗ್ರದೃಷ್ಟಿಯಂ ವಹಿಸಿ ಚಿನ್ಮುದ್ರೆಯಂ ತಾಳಿ ಅಪರದೂರ್ವಾಸನಂತಿರುವ ಮಹರ್ಷಿಯ ದರ್ಶನಂಗೈದು, ಭಕ್ತಿವಿಸ್ಮಯಪರವಶನಾಗಿ ಈ ದಿವಸವೇ ಶುಭದಿವಸವು ಈ ದೇಶವೇ ಕಾಶಿ ಮೊದಲಾದ ಕ್ಷೇತ್ರವು ಈ ಮಹರ್ಷಿಯೆ ಪರಶಿವನೆಂದು ಸಾಷ್ಟಾಂಗವಾಗಿ ಪ್ರಣಾಮಂಗೈದು ನಾನಾಸ್ತುತಿಗಳಿಂದ ಸ್ತುತಿಸಲಾಗ ಮಹರ್ಷಿಯು ಭೂತಭವಿಷ್ಯದ್ವರ್ತಮಾನಕಾರ್ಯಂಗಳಂ ತಿಳಿದವನಾದಕಾರಣ ಕಣ್ದೆರೆದು ಕರುಣಾದೃಷ್ಟಿಯಿಂದ ಸುಚರಿತ್ರಮಹಾರಾಯನಂ ಕಟಾಕ್ಷಿಸಿ ವೇದೋಕ್ತಮಂತ್ರವಿಶೇಷದಿಂದ ಆಶೀರ್ವದಿಸಿ, ಕುಳ್ಳಿರಬಹುದೆಂದು ಆಜ್ಞಾಪಿಸಲು, ಕೃತಾರ್ಥನಾದೆನೆಂದು ಕೆಲದೊಳ್ ಮಂತ್ರಿಪುರೋಹಿತರಿಂದ ಸಹಿತನಾಗಿ ಕುಳ್ಳಿರ್ದು ಕರಗಳಂ ಮುಗಿದು ವಿಜ್ಞಾಪನಂಗೆಯ್ಯುತ್ತಿದ್ದನದೆಂತೆನೆ— ಎಲೈ ಮಹಾನುಭಾವನೆ ! ನಿಮ್ಮ ಭಾವಮು ನೋಡಿದಲ್ಲಿ ವಸಿಷ್ಠವಾಸುದೇವ ಗೌತಮ ವಿಶ್ವಾಮಿತ್ರ ಭರದ್ವಾಜರು ಮೊದಲಾದ ಋಷಿಗಳಲ್ಲಿ ತಾವು ಯಾರೋ ಎಂದು ಪರ್ಯಾಲೋಚನೆಯಂಗೈವ ನನ್ನ ಮನದ ಸಂದೇಹವನ್ನು ಪರಿಹರಿಸಿ ನನ್ನಂ ಕೃತಾರ್ಥನಂ ಮಾಡಬೇಕೆಂದು ವಿಜ್ಞಾಪನಂಗೆಯ್ಯಲು, ಆಗಲಾ ಋಷೀಶ್ವರನು, ಅರ್ಧನಿಮೀಲಿತನೇತ್ರನಾಗಿ ನಿಜಗುರುಪಾದಾರವಿಂದವಂ ನೆನೆದು ರಾಯನಂ ಕುರಿತು, ಎಲೈ ಮಹೀಪತಿಯೆ ! ನೀನು ಕೇಳುವ ಪ್ರಶ್ನೆಗುತ್ತರವಂ ಪೇಳ್ವೆನು ಕೇಳೈ:— ಕು

ಲಪರ್ವತಂಗಳಲ್ಲಿ ಪರಮಪುಣ್ಯವಾದ ಹಿಮವಂತನೆಂಬ ಪರ್ವತವಿರುತ್ತಿ ಹುದು. ಆ ಪರ್ವತದಲ್ಲಿ ಸರ್ವಮಂಗಳೆಯಾದ ಪಾರ್ವತೀದೇವಿಯು ಪಾದ ಪಲ್ಲವಸಂಚಾರದಿಂದ ಪರಮಪಾವನಂಗಳಾಗಿಯೂ ಸಕಲ ಪಾಪಂಗಳಂ ಸ್ಮರಣಮಾತ್ರದಿಂದಲೆ ಪರಿಹಾರಂಗೈವ ಗಂಗಾನದಿಯ ತರಂಗಂಗಳ ಸಂಗ ದಿಂ ಶೀತಳಂಗಳಾಗಿಯೂ ಸೃಷ್ಟಿಸ್ಥಿತಿಲಯಂಗಳಿಗೆ ನಿಯಾಮಕರಾದ ತ್ರಿಮೂರ್ತಿಗಳಿಗೂ ತಪ್ರೋಯೋಗ್ಯಂಗಳಾದ ಪ್ರದೇಶಂಗಳಿರುತ್ತಿರುಹು ವು. ಅಂತಿರ್ದ ಮಹಾಕ್ಷೇತ್ರದಲ್ಲಿ ಗುರೂಪದಿಷ್ಟಮಾರ್ಗದಿಂ ತಪವಂ ಕೈಕೊಂಡಿರುವೆನು. ನನ್ನಂ ವಾಮದೇವನೆಂದು ಋಷಿಗಳಾಡುವರು. ಈ ಗ ನಾನು ಗುರುವರ್ಯನಾಜ್ಞೆಯಿಂದ ದಕ್ಷಿಣದೇಶದಲ್ಲಿರುವ ಮಹಾಕ್ಷೇ ತ್ರಗಳ ದರ್ಶನಂಗೈವೆನೆಂದುದ್ಯೋಗಿಸಿ, ನೈಮಿಶಾರಣ್ಯ ಕಾಶಿ ಅವಂತಿ ಗಯಾ ಪ್ರಯಾಗ ಕುರುಕ್ಷೇತ್ರವೆ ಆದಿಯಾದ ಕ್ಷೇತ್ರಂಗಳ ದರ್ಶನಂಗೆ ಯ್ಯುತ್ತ ಅಳಕನಂದ ಸರಯು ಯಮುನೆ ಫಲ್ಗುನಿ ಶೋಣ ನರ್ಮದೆ ಮೊದಲ್ಗೊಂಡ ನದೀನದಂಗಳಲ್ಲಿ ಸ್ನಾನವಂ ಮಾಡುತ್ತೆ ಬರುತಬರುತ, ಪುರೋಭಾಗದಲ್ಲಿ ಚತುರ್ಮುಖನಿಗೆ ನಿವಾಸಸ್ಥಾನವಾದ ಅದ್ಯಂತಂಗಳಂ ದ ಆದಿನಾರಾಯಣನಿಗೆ ಶಯನಯೋಗ್ಯವಾದ ಅಂತರೀಪಂಗಳಿಂದೊಪ್ಪಿ ಪುರಹರನ ವಿಹಾರಯೋಗ್ಯವಾದ ಪಾರ್ಶ್ವಭಾಗಗಳಿಂದೊಡಗೂಡಿ, ಪರ ಮಪಾವನೆಯೆನಿಸಿದ ಕಾವೇರಿಯು ಕೆಲಬಲದಲ್ಲಿ ಬೆಳೆದು ದೇವಗಂಗೆಯು ಸ ಮೀಪವನ್ನೈದಿ ಕಾವೇರೀಸೌಭಾಗ್ಯವಂ ತಿಳಿಯುವಂತೆಸೆವ ನಾರಿಕೇಳ ಕ್ರಮುಕತರುಗಳಿಂ ಪರಮೇಶ್ವರಿಯು ಅಸ್ತ್ರಶಾಲೆಗಳೆಂಬಂತೆ ಎಡೆಗೊ ಡದೆ ಬೆಳೆದ ಪುಂಡ್ರೇಕ್ಷುವನಂಗಳಿಂ, ಸತ್ಪುರುಷರಂತೆ ಫಲಾತಿಶಯದಿಂ ಬ ಗ್ಗಿದ ಬಾಳೆಗಳಿಂದ ತೊಗುವ ಶಾಲಿವನಂಗಳಿಂ, ಕುಸುಮಿತಫಲಿತಂಗಳಾದ ಉದ್ಯಾನಸಹಸ್ರಂಗಳಿಂ, ರಮಣೀಯವಾಗಿಯೂ ಶ್ರೀಗಂಧದ ವನಂಗಳ ಲ್ಲಿ ಸಂಚರಿಪ ಮದ್ದಾನೆಗಳ ಗಂಭೀರಧ್ವನಿಗಳಿಂದ ಸರ್ವಾಲಂಕಾರದಲ್ಲಿ ಯೂ ಜಯಲಕ್ಷ್ಮಿಗೆ ವಿಲಾಸಸ್ಥಾನವಾಗಿ ತೋರುತ್ತಲುಂ, ಇದಲ್ಲದೆ ಚಂಡ ಮುಂಡ ಮಹಿಷಾದಿರಾಕ್ಷಸರಂ ಬಂಡನದೊಳ್ ಖಂಡನಂಗೈದು ಲೋಕರಕ್ಷಾರ್ಥವಾಗಿ ನೆಲೆಗೊಂಡಿರುವ ಚಾಮುಂಡೇಶ್ವರಿಯ ಪಾದವಿ ನ್ಯಾಸಗಳಿಂ ಸಕಲಸಂಪತ್ಸಮೃದ್ಧವಾಗಿ ಕಟಾಕ್ಷವೀಕ್ಷಣದಿಂದ ಸಂರಕ್ಷಿ

ತವಾಗಿರುವ ಈ ಸಹ್ಯಪರ್ವತವು ಹಿಮವಂತನಂತೆ ನನಗೆ ಸಂತೋಷ ವಂಮಾಡಲು ಈ ಪರ್ವತರಾಜನಂ ನಮಸ್ಕರಿಸಿ ದೇವಿಯದರ್ಶನಂಗೈವೆ ನೆಂದು ಬಂದೆನು. ಈ ಲೋಕವನೆಲ್ಲವಂ ಸಂಚರಿಸುತ್ತ ಶರೀರರಕ್ಷಣ ದಲ್ಲಿಯೂ ಆಸಕ್ತಿಯಿಲ್ಲದಿರುವ ನಮ್ಮಂಥ ಋಷಿಗಳ ಕುಶಲಪ್ರಶ್ನೆಯಿಂ ದೇನುಕಾರ್ಯ? ನೀವು ರಾಜವಂಶಸಂಭವರು. ಪರಾಕ್ರಮಶಾಲಿಗಳಾ ಗಿಭೂಮಿಯಂ ಸಂರಕ್ಷಿಸುತಲಿದ್ದರೆ ನಾವು ನಿರ್ಭಯದಿಂದ ತಪಸ್ಸಂ ಮಾ ಡಬಲ್ಲೆವು. ಆದ್ದರಿಂದ ನಿಮ್ಮ ಯೋಗಕ್ಷೇಮವಿಚಾರವು ಋಷಿಗಳಿಗೆ ಪ ರಮಾವಶ್ಯಕವು" ಎಂದು ನುಡಿದು ಮುಹೂರ್ತಮಾತ್ರಧ್ಯಾನವಂ ಮಾಡು ತ್ತಲಿರ್ದು ತನ್ನ ಮನದಲ್ಲಿ, "ಈ ರಾಯನು ಮಹಾಪುಣ್ಯಶಾಲಿಯು. ಈ ತನ ಸದ್ವರ್ತನೆಯಿಂದಲೂ, ಈಶಾನುಗ್ರಹಬಲದಿಂದಲೂ ರಾಯನಿಗೆ ಸು ಪುತ್ರನಾಗುವನು. ಆ ಪುತ್ರನು ಧೈರ್ಯಪರಾಕ್ರಮಂಗಳು ಮೊದಲಾ ದ ಗುಣಂಗಳಿಂದ ಯುಕ್ತನಾಗಿ, ಸಕಲ ಸಾಹಸವಂಮಾಡುವ ಪರಿಯಂ ತಿಳಿದು ಶಕ್ತನಾಗಿ ಸಕಲಭೂಮಂಡಲಾಧಿಪತ್ಯವಂ ಮಾಡುತ್ತಾನೆ. ಈ ಕುಮಾರನಿಂದ ಅನೇಕ ದೇವತಾಕಾರ್ಯಗಳು ಆಗುವುವು," ಎಂದು ತನ್ನ ದೃಷ್ಟಿಯಿಂದ ಭವಿಷ್ಯತ್ಕಾರ್ಯವನ್ನು ನಿಶ್ಚೈಸಿ ರಾಯನಂ ನೋಡಿ ಒಂದಾನೊಂದು ಮಾತನಾಡುತಲಿದ್ದನು, – ಎಲೈ ರಾಜೋತ್ತಮನೆ! ನಿ ನ್ನ ಅರಮನೆಯಲ್ಲಿ ದಾರಪುತ್ರಾದಿಗಳಿಗೆ ಕ್ಷೇಮವೆ? ನಿನ್ನ ಪಟ್ಟಣದ ಲ್ಲಿ ದೇಶದಲ್ಲಿ ಪ್ರಜಾಪರಿವಾರಂಗಳಿಗೆ ಸುಖವೆ? ನೀನು ಧರ್ಮದಿಂದ ರಾ ಜ್ಯಪರಿಪಾಲನಂಗೆಯ್ಯುತಲಿದ್ದೀಯಾ? ಕಾಲಕಾಲದಲ್ಲಿ ಸುವೃಷ್ಟಿಯಾ ಗುವುದೇ? ಮಂತ್ರಿ ಮೊದಲಾದಪರಿವಾರವು ನಿನಗೆ ಹಿತವಾಗಿರುವುದೇ?" ಎಂದು ರಾಯನ ಕುಶಲವಂ ಕೇಳಲು, "ಎಲೈ ತಪೋನಿಧಿಯೆ! ನನ್ನಲ್ಲಿ ಮಹಾನುಭಾವನಾದ ನಿನ್ನ ಪರಮಾನುಗ್ರಹವು ಈಪರಿಯಾಗಿರುವಲ್ಲಿ ಆ ವುದೊಂದು ಕಡಮೆಯಾಗಿದ್ದರೂ ನಿನ್ನ ದರ್ಶನಾನಂತರ ಸಂಪೂರ್ಣವಾ ಗುತಲಿದೆ" ಎಂದು ನುಡಿದೆದ್ದು ಕರಗಳಂ ಮುಗಿದು ಭಕ್ತಿವಿನಯಂಗಳಿಂದ "ಎಲೈ ಸ್ವಾಮಿಯೇ! ನೀವು ನನ್ನ ಗೃಹವಂ ಪಾವನವಂ ಮಾಡಲೋ ಸುಗ ಬಿಜಯಂಗೈದು ನನ್ನ ಪತ್ನಿಗೆ ಆಶೀರ್ವಚನವಂ ಕೊಟ್ಟು ರತ್ನ ಪುರನಿವಾಸಿಗಳಾದ ಜನಗಳಿಗೆ ದರ್ಶನವಂ ಅನುಗ್ರಹಿಸಿ ಮನಬಂದಂತೆ

ತೀರ್ಥಯಾತ್ರೆಗೋಸುಗ ತೆರಳಬಹುದು" ಎಂದು ವಿಜ್ಞಾಪನೆಗೆಯ್ಯ ಲಾವಮಾತಂ ಕೇಳಿ ಆ ತಪಸ್ವಿಯು "ಎಲೈ ರಾಯನೆ! ನಾವು ವಾನಪ್ರಸ್ಥರು ಕಂದಮೂಲಫಲಾಹಾರಂಗಳಂ ಮಾಡಿಕೊಂಡು ಅರಣ್ಯವಾಸಿಗಳಾಗಿರುವುದು ನಮಗೆ ಧರ್ಮವು. ಇಂತಿರುವಲ್ಲಿ ಪಟ್ಟಣಪ್ರವೇಶವಂ ಮಾಡುವುದುಚಿತವಹುದೇ?" ಎಂದು ಆ ತಪೋರಾಶಿಯು ಪೇಳಲಾಗಿ, ಆ ಮಾತಂ ಕೇಳಿ ರಾಯನಿಂತೆಂದನು— "ಎಲೈ ವಿಜ್ಞಾಪನಸಂಪನ್ನರೆ! ನೀವು ಅಪ್ಪಣೆಯಂ ಕೊಟ್ಟುದು ಉಚಿತವೇ ಸರಿ, ಆದಾಗ್ಯೂ ನೀವು ವನಾಂತರಂಗಳಲ್ಲಿ ಪರ್ಣಶಾಲೆಗಳಂ ರಚಿಸಿಕೊಂಡಿರುವ ಸ್ಥಳಂಗಳಿಗೆ ರಾಜರುಗಳು ಬಂದಲ್ಲಿ ಅವರಂ ನೀವು ಸನ್ಮಾನಿಸಿ ಉಪಚಾರವಂ ಮಾಡುವುದುಂಟಾದ್ದರಿಂದ ನಿಮ್ಮಂಥ ಋಷಿಗಳು ಪಟ್ಟಣಂಗಳ ಸಮೀಪಂಗಳಂಕುರಿತು ಬಂದಲ್ಲಿ ಪಟ್ಟಣವನ್ನಾಳುವ ರಾಯರು ಇದಿರುಗೊಂಡು ಅರ್ಘ್ಯಪಾದ್ಯಾಚಮನಗಳಿಂದ ಪೂಜಿಸಿ ಯುಗಧರ್ಮರೀತಿಯಿಂದ ಸ್ವಗೃಹಗಳಲ್ಲಿ ಭಿಕ್ಷವಂ ಮಾಡಿಸಿ ಆ ಮಹಾತ್ಮರುಗಳಿಂದ ಅಮೋಘಾಶೀರ್ವಚನಂಗಳಂ ಕೈಕೊಳ್ಳುವುದು ರಾಜರುಗಳಿಗೆ ಸ್ವಧರ್ಮ ಬೇಡಿದ ವರಂಗಳಂ ಕೊಟ್ಟು ಆ ರಾಜರಂ ಸಂತೋಷಪಡಿಸಿ ಅವರ ಕಾಮಕ್ರೋಧ ಲೋಭಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗಂಗಳಂ ಪರಿಹರಿಸಿ ರಾಜಧರ್ಮನೀತಿಮಾರ್ಗಂಗಳಂ ಉಪದೇಶವಂ ಮಾಡುವುದು ಋಷಿಗಳಿಗೆ ಧರ್ಮವಾಗಿರುವುದು. ಜನಕಮಹಾರಾಯ ಮೊದಲಾದ ರಾಯರ ಮಂದಿರಗಳಿಗೆ ಗೌತಮಾದಿಪರಮರ್ಷಿಗಳು ದಯಮಾಡಿಸಿ ಸಕಲೋಪಚಾರಂಗಳಂ ಪಡೆದು ಆ ಜನಕಾದಿರಾಯರುಗಳಿಗೆ ಸಕಲ ಧರ್ಮೋಪದೇಶವಂ ಮಾಡಿದರಾದಕಾರಣ, ಸೇವಕನನ್ನು ಮೇಲೆ ದಯವಿಟ್ಟು ನನ್ನ ಮಂದಿರಕ್ಕೆ ಚಿತ್ತೈಸಿ ಕೃತಾರ್ಥನನ್ನ ಮಾಡಬೇಕೆಂದು ಸಾಷ್ಟಾಂಗವಾಗಿ ನಮಸ್ಕರಿಸಿದ ರಾಯನ ಪರಮಭಕ್ತಿಯನ್ನೋಡಿ ಆ ಮಹಾಪುರುಷನು ಅತ್ಯಂತ ಸಂತೋಷಭರಿತನಾಗಿ ಎಲೈ ರಾಯನೆ ನಿನ್ನ ಮನಶ್ಶುದ್ಧಿಗೆ ನಾವು ಮೆಚ್ಚಿದೆವು ಅದೇಮೇರೆಗೆ ನಿನ್ನ ಗೃಹಕ್ಕೆ ಬರುವೆವೆಂದು ಅಪ್ಪಣೆಯನ್ನೀಯಲು, ಆ ಮಹಾರಾಯನು ಆನಂದಭರಿತನಾಗಿ ಸಕಲ ಪರಿಜನದೊಡನೆ ಈ ಮಹಾಪುರುಷನಂ ಬಿಜಯಂಗೈಸಿಕೊಂಡು ತನ್ನ ಮಂದಿರವಂ ಕುರಿ

ತು ಎದ್ದಿದ್ದನು. ಆ ರಾಯನು ಬಳಿಕ ಆ ಮಹರ್ಷಿಗೆ ಆಸನಾರ್ಥವಾಗಿ ದಿವ್ಯಮಣಿಮಯವಾದ ಪೀಠವಂ ಸಮರ್ಪಿಸಿ, ತನ್ನ ನಿಜಸತೀಸಮೇತ ನಾಗಿ ಷೋಡಶೋಪಚಾರಪೂಜೆಯಂಗೆಯ್ದು, ಭೋಜನಶಾಲೆಗೆ ಆ ಮಹಾಪುರುಷನಂ ತನ್ನ ಕರವನ್ನಿತ್ತು ಬಿಜಯಂಗೆಯ್ಸಿ, ಸುವರ್ಣಪಾತ್ರಂಗಳಲ್ಲಿ ರಾಜಯೋಗ್ಯಪದಾರ್ಥಂಗಳಂ ಬಡಿಸಿ ಆತನಿಗೆ ಆಪೋಶನವಂ ಕೊಟ್ಟು ಭುಂಜಿಸಬೇಕೆಂದು ಬಿನ್ನವಿಸಲಾವೇಳೆಯಲ್ಲಿ, ಎಲೈ ಅರಸೆ! ನಿನ್ನ ಪುತ್ರರಂ ಕರೆತರಿಸೆಂದು ಪೇಳಲಾಗಿ, ಆ ಮಾತಂ ಕೇಳದ ರಾಯನು ಚಿಂತಾಕ್ರಾಂತನಾಗಿ ಕಂಬನಿದುಂಬಿ ಆ ಜಲಂಗಳಿಂದಾತನ ಪಾದಂಗಳಂ ತೊಳೆಯುವನೋಪಾದಿಯಲ್ಲಿ ಪಾದಂಗಳಮೇಲೆ ಬಿದ್ದು ದೈನ್ಯಸ್ವರದಿಂದ ಲಜ್ಜಿತನಾಗಿ ಹೊರಳುತ್ತಿರುವ ರಾಯನಂ ರಾಯನ ಪತ್ನಿಯಂ ಆ ಮಹಾಪುರುಷನು ನೋಡಿ, ಎಲೈ ರಾಜೋತ್ತಮನೆ! ನೀನು ಉದ್ಯಾನವನಕ್ಕೆ ನಮ್ಮ ದರ್ಶನಾರ್ಥವಾಗಿ ಬಂದ ಸಮಯದಲ್ಲಿ ನಿನ್ನ ಪುತ್ರನ ಕ್ಷೇಮವಂ ಕೇಳದುದೇಇದಕ್ಕೆ ಈಗ ನಿನಗೆ ಫಲಿಸುವಂತೆ ಉಪಾಯವಂ ಪೇಳುವೆನು. ನೀನು ಈ ವ್ಯಸನವಂ ಬಿಟ್ಟು ಧೈರ್ಯವಂಕೊಂಡು ಸಂತೋಷದಿಂದಿರೆಂದು ಅಭಯವನಿತ್ತು ಸಂತೋಷಪಡಿಸಿ, ತಾವು ಭಿಕ್ಷೆಯಂ ತೆಗೆದುಕೊಂಡು ಆಬಳಿಕ ಕೆಲವುಕಾಲ ಆ ರಾಯನ ಗೃಹದಲ್ಲಿಯೇ ಇದ್ದು ಬಂದಾನೊಂದು ಶುಭದಿವಸದಲ್ಲಿ ಅಮೃತಸಿದ್ಧಿಯೋಗಸಹಿತವಾದ ಸಂತಾನಾಭಿವೃದ್ಧಿಪ್ರದವಾದ ಲಗ್ನವಂಪರಿಶೋಧಿಸಿ, ಆದಿನ ರಾಯನಂ ಕರೆದು, ಎಲೈ ರಾಯನೆ! ಅಮೃತಸಿದ್ಧಿಯೋಗಸಹಿತವಾದ ಗಳಿಗೆಯಲ್ಲಿ ಶುದ್ಧಾಂತಃಕರಣನಾಗಿ ಸ್ನಾನವಂ ಮಾಡಿ ಶುಚಿರ್ಭೂತನಾಗಿ ಶೀಘ್ರದಲ್ಲಿ ತನ್ನ ಸಮೀಪಕ್ಕೆ ಬರುವುದೆಂದು ಅಪ್ಪಣೆಯಂ ಕೊಡಲಾಮಾತಂ ಕೇಳದ ರಾಯನು ಪರಮಸಂತೋಷಯುಕ್ತನಾಗಿ ಮಹಾಪ್ರಸಾದವೆಂದು ತನ್ನ ಮಂದಿರವನ್ನೈದಿ ಸ್ನಾನಾದಿಗಳಂ ರಚಿಸಿ ಶುಚಿರ್ಭೂತನಾಗಿ ಬಂದು ನಿಲ್ಲಲಾ ಕಾಲದಲ್ಲಿ ವಾಮದೇವನು ರಾಯನಂ ಕುರಿತು– "ಎಲೈ ಪ್ರಜಾರಕ್ಷಕನೆ! ನಿನ್ನ ಇಷ್ಟಾರ್ಥವು ಶೀಘ್ರದಲ್ಲಿ ಫಲಿಸುವುದು. ಅದೇನೆಂಬೆಯೊ? ಈಗ ಆದಿಶಕ್ತಿಯಾದ ರಾಜರಾಜೇಶ್ವರಿಯಂ ಪ್ರತಿಪಾದಿಸುವುದೆಂದು ಮಹಾಮಂತ್ರವಂ ಪೇಳುವೆನು. ಆ ಮಂತ್ರವಂ ನೀನು ದೃಢಭಕ್ತಿಯಿಂದ

ರಹಸ್ಯಸ್ಥಳದಲ್ಲಿ ಕುಳಿತು ತದೇಕನಿಷ್ಠನಾಗಿ ಜಪಿಸಿದೊಡೆ ಆ ರಾಜರಾ ಜೇಶ್ವರಿಯ ಅನುಗ್ರಹವುಂಟಾಗಿ ಆ ದೇವಿ ನಿನಗೆ ಪ್ರತ್ಯಕ್ಷೆಯಾಗಿ ಸಂ ತಾನವಂ ಕೊಡುವುದರಲ್ಲಿ ಸಂದೇಹವಿಲ್ಲ. ಸಂತಾನವಾದನಂತರ ಆ ಪು ತ್ರನ ವಿಲಾಸವಂ ನೋಡುತ ಸುಖದಿಂ ರಾಜ್ಯಪರಿಪಾಲನೆಯಂ ಕೈ ಕೊಂಡು ಆನಂದಭರಿತನಾಗಿರುವೆ.'' ಎಂದು ಪೇಳಲಾಗಿ ಆ ಮಹಾಪು ರುಷನ ದೆಸೆಯಿಂದ ಮಂತ್ರೋಪದೇಶವಂ ಪಡೆದು, ಆಬಳಿಕ ರಾಯನು ಆ ತಪಸ್ವಿಯಂ ನೋಡಿ ಎಲೈ ಸರ್ವಜ್ಞನೆ! ನಿನ್ನಿಂದ ನಾನು ಇಹದಲ್ಲಿ ಪುತ್ರಾದಿಗಳಿಂದ ಸಂತೋಷಪಡುವೆನು; ಪರದಲ್ಲಿಯೂ ನಿನ್ನ ಅನುಗ್ರಹ ದಿಂದಲೇ ಕೃತಾರ್ಥನಾಗುವ ಉಪಾಯವಂ ಪೇಳಬೇಕೆನಲು, ಈ ನುಡಿ ಗೆ ಸಂತೋಷಪಟ್ಟು— ಎಲೈ ರಾಯನೆ! ನೀನು ಕೆಲವು ಕಾಲ ಪುತ್ರನ ಬಾಲಲೀಲೆಗಳಂ ನೋಡಿ, ಆ ಪುತ್ರನು ಪ್ರಬುದ್ಧನಾದಬಳಿಕ ಅವನಿಗೆ ಪಟ್ಟಾಭಿಷೇಕವಂ ಮಾಡಿ ನೀನು ನನಗೆ ವಾಸಯೋಗ್ಯವಾದ ಹಿಮವ ತ್ಪರ್ವತದಲ್ಲಿರುವ ಆಶ್ರಮಕ್ಕೆ ಬಂದೆಯಾದರೆ ಅಲ್ಲಿ ನಿನಗೆ ವಾನಪ್ರಸ್ಥಾ ಶ್ರಮದೀಕ್ಷೆಯಂ ಕೊಡುವೆನೆಂದು ಹೇಳಿ, ತಾನು ತನ್ನಾಶ್ರಮವಂ ಕುರಿ ತು ತೆರಳಿದನು. ಎಂಬಲ್ಲಿಗೆ......ಶ್ರೀಕೃಷ್ಣರಾಜಒಡೆಯರಿಂ ರಸಿಕಜ ನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನವೀನ ಕೃತಿಯೊಳ್ ವಾಮದೇವಾಗಮನ ಮಹಾಮಂತ್ರಪ್ರತಿಪಾದಕವಾದ ದ್ವಿ ತೀಯಾಶ್ವಾಸಂ.



## ತೃತೀಯಾಶ್ವಾಸಂ

ಅನಂತರದಲ್ಲಿ ರಾಯನು ಆ ಮಹಾಪುರುಷನ ಅಪ್ಪಣೆಯಂ ಕೊಟ್ಟುಮೇರೆಗೆ ಶುಭನಕ್ಷತ್ರ ಶುಭದಿನ ಶುಭವಾರದಲ್ಲಿ ತನ್ನ ಧರ್ಮಪತ್ನಿಯಾದ ಗುಣವತಿಯೊಡನೆ ಸ್ನಾನಾದಿಗಳಿಂ ಪರಿಶುದ್ಧನಾಗಿ, ಗಾರ್ಹಪತ್ಯ ಆಹವನೀಯ ದಕ್ಷಿಣಾಗ್ನಿಗಳಂ ಪೂಜಿಸಿ ಯಥಾಶಾಸ್ತ್ರವಾಗಿ ಔಪಾಸನವಂ ಮಾಡಿ, ಬಳಿಕ ಮೌನದೀಕ್ಷೆಯಂ ಕೈಕೊಂಡು ಜಗಜ್ಜನನಿಯಾದ ಪರಮೇಶ್ವರಿಯಂ ಕುರಿತು ನ್ಯಾಸಕ್ರಮದಿಂ ಪಂಚೋಪಚಾರ ಪೂಜೆಯಂ ಮಾಡಿ ದೇವಿಯಂ ಧ್ಯಾನಿಸುತ್ತ ಮಂತ್ರಪುನಶ್ಚರಣೆಯಂ ಮಾಡಲಾ ಮಹಾಪುರುಷನ ಉಪದೇಶಪ್ರಭಾವದಿಂದ ಈತನ ದೃಢಭಕ್ತಿಯಂ ನೋಡಿ ಶ್ರೀ ಜಗದೀಶ್ವರಿಯು ಸಿಂಗವನ್ನೇರಿ ಮಗಳಾಂಗಿಯಾಗಿ ಸರ್ವಾಭರಣಭೂಷಿತಳಾಗಿ ದಿವ್ಯಾಂಬರವನ್ನುಟ್ಟು ದ್ವಾತ್ರಿಂಶದಾಯುಧಂಗಳಂ ಧರಿಸಿ ರುಂಡಮಾಲಾಧಾರಿಣಿಯಾಗಿ ಸೃಷ್ಟಿಸ್ಥಿತಿ ಲಯಂಗಳಿಗೆ ಕಾರಣೆಯಾಗಿ ಸಕಲಪುರಾಣಂಗಳಿಂದ ಸ್ತುತಿಸುವುದಕ್ಕೆ ಯೋಗ್ಯಳಾಗಿ ರಕ್ತಬೀಜಚಂಡ ಮುಂಡ ಶುಂಭ ನಿಶುಂಭ ಮಹಿಷ ಮೊದಲಾದ ದುಷ್ಟದಾನವರ ದುರಹಂಕಾರವಂ ಮುರಿದು ಅವರಿಗೆ ಮೋಕ್ಷವನ್ನಿತ್ತು ಸಂರಕ್ಷಿಸಿದ ಲೋಕಮಾತೆಯಾದ ರಾಜರಾಜೇಶ್ವರಿಯ ರೂಪವಂ ತಾಳ್ದ ಆದಿಶಕ್ತಿಯಾದ ಮಹಾದೇವಿಯು ಈ ಸುಚರಿತ್ರರಾಯನ ಉಗ್ರತಪಸ್ಸಿಂ ಮೆಚ್ಚಿ ಈತನ ಪುರೋಭಾಗದಲ್ಲಿ ಪ್ರತ್ಯಕ್ಷವಾಗಿ ತನ್ನ ನಿಜರೂಪವಂತೋರಲಾ ರಾಯನು ಸ್ವಪ್ನಮಂ ಕಂಡು ಎಚ್ಚರಗೊಂಡವನಂತೆ ಕಣ್ದೆರೆದು ಜಗದೀಶ್ವರಿಯಂ ಕಂಡು ಸಂಭ್ರಮದಿಂದೆದ್ದು ಸತೀಸಮೇತನಾಗಿ ಪ್ರದಕ್ಷಿಣಂಗೈದು ಸಾಷ್ಟಾಂಗವಾಗಿ ಪ್ರಣಾಮಮಂ ಮಾಡಿ ಆನಂದಬಾಷ್ಪದಿಂ ಕೂಡಿದ ಗದ್ಗದಸ್ವರದಿಂದ ದೇವಿಯಂಕುರಿತು ಅನೇಕವಿಧಪುರಾಣೋಕ್ತಿಗಳಿಂದ ಸ್ತೋತ್ರವಂಗೈಯುವ ಭಕ್ತಿಪರವಶನಾಗಿ ಏಕಾಗ್ರಚಿತ್ತನಾಗಿರುವ ರಾಯನಂ ದೇವಿಯು ಕರುಣಾರ್ದ್ರದೃಷ್ಟಿಯಿಂ ನೋಡಿ, "ಎಲೈ ಕುಮಾರನೆ! ನೀನು ಸ್ತುತಿಸಿದ ಸ್ತೋತ್ರಂಗಳಿಂದ ನಾನು ಸಂತುಷ್ಟೆಯಾದೆನು. ಈ ಪರಿಶುದ್ಧಗಳಾದ ಸ್ತೋತ್ರಂಗಳನ್ನು ಸಕಲ ಯುಗಂಗಳಲ್ಲಿ ಯಾವ ಜನಂಗಳು ಭಕ್ತಿಯಿಂದ ಪಠಿಸುವರೊ ಅವರಿಗೆ ದಾರಪುತ್ರಾ

ದಿಸಕಲಭೋಗಂಗಳಂ ಕೊಟ್ಟು ಅನಂತರ ಪರಮಜ್ಞಾನವಂ ಅನುಗ್ರಹಿಸಿ ನನ್ನ ಸಾನ್ನಿಧ್ಯವಂ ದಯೆಮಾಡುವೆನು. ಇದಂತಿರಲಿ; ಈಗ ನಿನ್ನ ಇಷ್ಟಾರ್ಥವಂ ಬೇಡಿಕೊ” ಎಂದು ಅಪ್ಪಣೆಯಂ ಕೊಡಲಾ ಸುಚರಿತ್ರರಾಯನು ಮತ್ತೊ ವಂದನೆಯಂ ಮಾಡಿ, “ಎಲೌ ಲೋಕಮಾತೆಯಾದ ಚಾಮುಂಡಿಕಾದೇವಿಯೆ! ಎನ್ನ ಹೃದಯದಲ್ಲಿರುವ ಪರಿಯಂ ನೀನರಿಯೆಯಾ? ಈ ಸಕಲ ಜನಂಗಳ ಹೃದಯಕಮಲಂಗಳಲ್ಲಿ ಜ್ಯೋತಿರೂಪವಾಗಿ ನೆಲೆಗೊಂಡು ಸರ್ವವಂ ತಿಳಿದು ನಟಿಸುವ ಕಪಟನಾಟಕಸೂತ್ರಧಾರಿಣಿಯಾದ ಕಾಮೇಶ್ವರನ ಪಟ್ಟದರಸಿಯಾದ ನಿನ್ನಂ ಕುರಿತು ಅಲ್ಪಬುದ್ಧಿಯಾದ ನಾನು ಅಭೀಷ್ಟವಂ ಬಿನ್ನೈಸುವುದಕ್ಕೆ ಯೋಗ್ಯನೆ? ಆದರೂ ನನ್ನ ಬಿನ್ನಹವಂ ಲಾಲಿಸು, ಅದೇನೆಂದರೆ,— ನಿನ್ನ ದಿವ್ಯರೂಪವಂ ನಾನು ಯಾವಾಗ ಭಾವನೆಯಂ ಗೈವೆನೋ ಆಗ ನನಗೆ ದರ್ಶನವಂ ಕೊಡುವಂತೆ ಕರುಣಿಸುವುದು. ಇದೇ ಎನ್ನ ಇಷ್ಟಾರ್ಥವು ಎಂದು ರಾಜನು ಬಿನ್ನಹವಂ ಮಾಡಲು, ಆ ದೇವಿಯು ಆನಂದಭರಿತಳಾಗಿ “ಎಲೈ ರಾಜನೆ! ನಿನ್ನ ಮನೋರಥಂಗಳಂ ಬಲ್ಲೆನು. ಅದೇವೋರೆ ನಿನ್ನ ಪುತ್ರಪೌತ್ರಾದಿವಂಶಪರಂಪರೆಗೆ ಕುಲದೇವತೆಯಾಗಿ ಸಂರಕ್ಷಿಸುವೆನು. ಈಗ ನಿನ್ನ ಹೃದಯದೊಳ್ ಪೌತ್ರನಂ ಕಾಣುವ ಅಪೇಕ್ಷೆಯಿರುವುದರಿಂದ ನನ್ನ ಹಸ್ತದಲ್ಲಿರುವ ಅಮೃತರಸಭರಿತವಾದ ಇಮ್ಮಾವಿನ ಹಣ್ಣಂ ಕೊಡುವೆನು. ಈ ದಿವ್ಯಫಲಾಸ್ವಾದನೆಯಿಂದ ಬಲಸಾಹಸಂಗಳಂ ಕೂಡಿ ದೇವಾಂಶನಾದ ಪುತ್ರನುದಯಿಸುವನು” ಎಂದು ಪರಮಾನುಗ್ರಹದಿಂದಾಗಸಾಫಲವಂ ಕೊಟ್ಟು “ಎಲೈ ರಾಜನೆ ನಿನ್ನ ಮಂದಿರದಲ್ಲಿ ಒಂದಂಶದಿಂದ ಸರ್ವದಾವಾಸವಂಗೈಯುತ್ತಲಿರುವೆನು, ನೀನು ಯಾವ ಕಾಲದಲ್ಲಿ ಸ್ಮರಿಸುವೆಯೋ ಆ ಕ್ಷಣದಲ್ಲಿಯೆ ಪ್ರತ್ಯಕ್ಷಳಾಗಿ ನಿನ್ನ ಮನೋರಥವಂ ಪೂರೈಸುವೆನು” ಎಂದು ರಾಯನಿಗಭಯವನಿತ್ತು ಮಿಂಚುಮರೆಯಾದಂತೆ ಅಂತರ್ಧಾನವಂಗೈದಳು. ಸುಚರಿತ್ರಮಹಾರಾಯನು ಅತ್ಯಂತ ಸಂತೋಷಭರಿತನಾಗಿ ದೇವಿಯು ಪ್ರಸನ್ನಳಾದ ಸಮಯವೇ ಶುಭಕಾಲವೆಂದು ನಿಶ್ಚೈಸಿ ತನ್ನ ಪತ್ನಿಗೆ ಕೊಡಲೋಸುಗಂ ಆ ಫಲವಂ ಬ್ರಾಹ್ಮಣರುಗಳ ಆಶೀರ್ವಾದಪುರಸ್ಸರವಾಗಿ ಹಸ್ತಂಗಳಿಂದ ಮುಟ್ಟಿಸಿ

ತನ್ನ ಪಟ್ಟದರಸಿಯಾದ ಗುಣವತಿಯೊಡನೆ ಫಲಾಸ್ವಾದನೆಯಂ ಮಾಡಿ, ಸತಿಪತಿಗಳಿರ್ವರೂ ಇಚ್ಛಾವಿಹಾರಗಳಿಂದ ರಾತ್ರಿಯಲ್ಲಿ ಸುಖದಿಂದಿದ್ದರು. ಆ ಸಮಯದಲ್ಲಿ ಚಂದ್ರನು ಈ ವೈಭವವಂ ನೋಡಿ ಈಗ ಚಂದ್ರಶೇಖರನಿಗೆ ಅರ್ಧಾಂಗಿಯಾದ ರಾಜರಾಜೇಶ್ವರಿಯ ಪ್ರಸಾದದಿಂದ ನನ್ನ ವಂಶದಲ್ಲಿ ದೇವಾಂಶಪುರುಷನೊಬ್ಬನುದಯಿಸುವನು. ಅನೇಕ ಕಾಲಂಗಳಿಂದ ಆದಿದಂಪತಿಗಳ ಸೇವೆಯಂ ಮಾಡಿದುದು ಸಫಲವಾದುದು ಎಂದು ಸಂತೋಷವೃತ್ತಾಂತವಂ ಬಹುಕಾಲದಿಂ ಮಿತ್ರನಾದ ದಿನಕರಂಗೆ ಪೇಳಿ ಸುಗುಣಸಂಪನ್ನೆಯಾದ ಗುಣವತಿಯು ಗರ್ಭಧಾರಣಾನಂತರದಲ್ಲಿ ಆಗುವ ಮಹೋತ್ಸವಂಗಳಂ ನೋಡುವುದಕ್ಕೆ ಮಿತ್ರನಂ ಕಳುಹಿಸುವೆನೆಂದು ತೆರಳುವನೆಂಬಂತೆ ಚಂದ್ರನು ಪಶ್ಚಿಮಾದ್ರಿಯ ಶೃಂಗವನ್ನಲಂಕರಿಸಿದನು ಎಂಬಲ್ಲಿಗೆ.........ಶ್ರೀಕೃಷ್ಣರಾಜಮಹಾರಾಜ ಒಡೆಯರವರಿಂ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯಮೆಂಬ ನವೀನ ಕೃತಿಯೊಳ್ ದೇವೀಸಾಕ್ಷಾತ್ಕಾರ ಫಲಪ್ರದಾನಪ್ರತಿಪಾದಕವಾದ ತೃತೀಯಾಶ್ವಾಸಂ.

## ಚತುರ್ಥಾಶ್ವಾಸಂ

ಅನಂತರದಲ್ಲಿ ಸೂರ್ಯನು "ಸುಚರಿತ್ರಮಹಾರಾಯನಿಗೆ ಕುಮಾರನಾಗುವನು. ಆ ಕುಮಾರನು ಮಹಾಪ್ರಭಾವಶಾಲಿಯಾಗಿ ತನ್ನ ಪ್ರತಾಪವೆಂಬ ಸೂರ್ಯನಿಂದ ನನ್ನಂ ತಿರಸ್ಕರಿಸುವನು" ಎಂದು ಭೀತನಾಗಿ "ಈಗ ಜನಿಸುವ ಕುಮಾರನು ಗುಣವತಿಯ ಗರ್ಭದಲ್ಲಿರುವಾಗಲೇ ಆತನ ಕ್ಷೇಮವಂ ಅಪೇಕ್ಷಿಸುತ ಪ್ರತಿದಿನ ಮಹೋತ್ಸವಂಗಳಿಗೆ ಅನುಕೂಲನಾಗಿದ್ದರೆ ಆತನು ಜನಿಸಿದ ನಂತರ ತನ್ನಲ್ಲಿ ಕಟಾಕ್ಷವಂ ಮಾಡುವನಾದ್ದರಿಂದ ಶೀಘ್ರದಲ್ಲಿ ರತ್ನಪುರದ ಸಮೀಪವನ್ನೈದುವೆನು" ಎಂದು ಬರುವನಂತೆ ಉದಯಗಿರಿಯ ಅಗ್ರಭಾಗವಂ ಸೇರಲಾ ಸುಚರಿತ್ರಮಹಾರಾಯನು ಪ್ರಾತಃಕಾಲದಲ್ಲೆದ್ದು ಜಗದೀಶ್ವರನಂ ಧ್ಯಾನಿಸಿ, ರಾಜಕೀಯಮರ್ಯಾದೆಯಿಂದ ಗೋವು ಮೊದಲಾದ ಶುಭವಸ್ತುಗಳ ದರ್ಶನವಂ ಕೊಂಡು, ಯಥಾಕ್ರಮವಾಗಿ ಮಜ್ಜನಭೋಜನಾದಿಗಳಂ ನೆರವೇರಿಸಿ ಬಳಿಕ, ಸುಬುದ್ಧಿ ಮೊದಲಾದ ಅಷ್ಟಪ್ರಧಾನರೊಡನೆ ಬಹುಕಾಲದೊಳ್

ಪ್ರಜೆಗಳಿಗೆ ಹಿತವಾದ ವಿಚಾರದಿಂ, ಒಂದು ಕಾಲದಲ್ಲಿ ಆನೆ ಕುದುರೆಗಳಂ ವಿಚಿತ್ರವಾಗಿ ತಿರುಗಿಸುವ ಪ್ರೌಢತರ ಸಹಣಿಗಾರರ ಸಾಹಸವಿಲೋಕನದಿಂ, ಮತ್ತೊಮ್ಮೆ ದ್ವೀಪಾಂತರಂಗಳಿಂದ ವರ್ತಕರು ತಂದ ಜೀವರತ್ನಗಳ ಪರೀಕ್ಷೆಗಳಿಂ, ಒಂದು ಸಮಯದೊಳ್ ನವರಸಭರಿತವಾದ ಕಾವ್ಯನಾಟಕಾದಿನಿರ್ಮಾಣಂಗಳಿಂ, ಮತ್ತೊಂದುಸಮಯದೊಳ್ ಮಾಣಿಕ್ಯಮಯವಾದ ವೀಣೆಯಂ ತನ್ನ ಪಾಣಿಯಿಂದ ತಾನ ಗಾನ ಮೂರ್ಛನಾಕ್ರಮಗಳೊಡನೆ ನುಡಿಯಿಸುವುದರಿಂ, ಒಂದು ವೇಳೆಯೊಳ್ ಚಲಿಸುವ ಗುರಿಯಂ ಶಬ್ದದಿಂ ತಿಳಿಯುವ ಗುರಿಯಂ ಭೇದಿಸುವ ಬಾಣವಿದ್ಯೆಯ ನಿರೀಕ್ಷಣದಿಂ, ಮತ್ತೊಂದು ವೇಳೆಯಲ್ಲಿ ದೇಶದೇಶದಿಂ ಬಂದ ವಿದ್ವಾಂಸರುಗಳ ಶಬ್ದನ್ಯಾಯ ಮೀಮಾಂಸಾದಿ ಶಾಸ್ತ್ರಪ್ರಸಂಗಶ್ರವಣದಿಂ, ಒಮ್ಮೆ ಚಾಣಕ್ಯ ಕಾಮಂದಕಾದಿ ನೀತಿಶಾಸ್ತ್ರನಿರೀಕ್ಷಣದಿಂ, ಮತ್ತೊಮ್ಮೆ ನಾನಾದೇಶದರಸುಗಳ ಭಾವಚಿತ್ರಗಳಂನೋಡಿ ಅವರವರ ಬಲಪರಾಕ್ರಮಂಗಳನೂಹಿಸುವುದರಿಂ, ಒಂದು ಮುಹೂರ್ತದೊಳ್ ಚಲಿಸುವ ಪುರ್ಬುಗಳಿಂ ನಗೆದೋರುವ ಸುಲಿಪಲ್ಲುಗಳಿಂ ಜಾರುವ ಸೆರಗಿಂ ಕಂಡು ಕಾಣಲೀಸದ ಪೆರ್ಮೊಲೆಗಳಿಂ ತೋರುವ ವಿರಹತಾಪದಿಂ ತುರುಬಿನಿಂದುದಿರುವ ಕುಸುಮಂಗಳಿಂ ಚೆದರಿದ ಕುರುಳ್ಗಳಿಂ ಬೆಮರಿದ ನೊಸಲಿನಿಂ ಬೆದರಿದಂತಿರ್ಪ ಓರೆನೋಟದಿಂ ನೋಳ್ಪರ ಮನಂಗಳಂ ಕರಗಿಸುತೆ ಕಾಮನಕಠಾರಿಗಳೆಂತಿರುವ ವೇಶ್ಯಾಜಾತೀಯರಾದ ಮಿಠಾರಿಯರ ರಸಾಭಿನಯವಂ ನೋಡುತ್ತಂ, ನಿಜಾಂತಃಪುರವನ್ನೈದಿ ಚಂದ್ರಶಾಲೆಯಲ್ಲಿ ಚಂದ್ರಕಳೆಯೆಂಬ ಕಾಂತೆಯೊಡಗೂಡಿ ಚಂದ್ರಿಕಾವಿಹಾರವಂ ಮಾಡುತ್ತ, ಅಂತಃಪುರದ ಉಪವನದಲ್ಲಿ ಕನಕಲತೆಯೆಂಬ ಕಾಂತೆಯೊಡಗೂಡಿ ಪುಷ್ಪಾಪಚಯ ಮೊದಲಾದ ವನವಿಹಾರಂಗೈಯುತ್ತ, ಕಮಲಕುಮುದಂಗಳಿಂ ಮನೋಹರವಾಗಿ ಸ್ಫಟಿಕಶಿಲಾನಿರ್ಮಿತವಾದ ಸರೋವರದಲ್ಲಿ ಕಮಲಿನಿಯೆಂಬ ಕಾಂತೆಯೊಡಗೂಡಿ ಜಲಕ್ರೀಡೆಯನ್ನಾಡುತ್ತ, ಮಣಿಮಯವಾದ ಶಯ್ಯಾಗೃಹದಲ್ಲಿ ಮಣಿಮಂಜರಿಯೆಂಬ ಕಾಂತೆಯೊಡಗೂಡಿ ಉಪರತಿ ಸಮರತಿಗಳಿಂ ಮನದ ಮಹೋತ್ಸವವಂ ಬೆಳೆಯಿಸುತ್ತಂ, ಇಂತಿರ್ಪ ವಿಲಾಸದಿಂ ತನ್ನ ಪಟ್ಟದರಾಣಿಯಾದ ಗುಣವತಿಗೆ ಛಾಯಾನುವರ್ತಿಯರಾದ ತನ್ನ ಪ್ರಾಣ

ಕಾಂತೆಯರೊಡಗೂಡಿ ಸುಖದಿಂದಿರುತ್ತಿದ್ದನು. ಒಂದಾನೊಂದು ದಿನ ಈ ಮಹಾರಾಯನ ಪಟ್ಟದರಸಿಯಾದ ಗುಣವತಿಯು ಬಳಿಯಲ್ಲಿರುವ ಸಖೀಜನಂಗಳೊಳ್ ಮುಖ್ಯಳಾದ ರಾಯನಿಗೆ ಪ್ರೇಮಾಸ್ಪದಳಾದ ಇಂಗಿತಜ್ಞಳಾದ ಮಂಜುವಾಣಿಯೆಂಬ ಪ್ರಾಣಸಖಿಯು ತನ್ನ ಒಡತಿಯಾದ ಗುಣವತಿಯಂ ನೋಡಿ ಬಿಳಿದಾವರೆಯಂತೆ ಬಿಳ್ಪೇರುವ ಮೊಗಮುಂ ನುಣ್ಪೇರುವ ಕಪೋಲಗಳಂ ಮೆಲ್ಲಮೆಲ್ಲನೆ ಅಲ್ಲಲ್ಲಿ ತಡೆಯುವ ನಡೆಯಂ ಸೋಲುವ ಮೈಬಳ್ಳಿಯಂ ಬರಿಯ ಬಳಲಿಕಗಳಂ ಉದರದೊಳ್ ಉಪೇಕ್ಷೆಯಂ ಆಟದೊಳ್ ಬೇಸರಮುಂ ಕೊಂಡಿರುವುದು ಕಂಡು ಏಸಿದು ಚಿತ್ರವಾಗಿರುವುದು? ಬಸಿರಿನ ಎಳಬಯಕೆಗಳೋ? ಎಂದು ತ್ವರೆಯಿಂದಂತಃಪುರದಲ್ಲಿ ಸಖಿಗಳ ಹಜಾರದಲ್ಲಿರುವ ಬಹುಕಾಲವಂ ಕಂಡ ಪರಲೆಯಾದ ಮಂದಾಕಿನಿಯಂ ಕೇಳಿ ತಿಳಿಯುವೆ ಎಂದು ತ್ವರೆಯಿಂದ ಮಂದಾಕಿನಿಯ ಸಮೀಪವನೈದಿ, ಎಲೈ ತಾಯೆ ಮಂದಾಕಿನಿಗೆ! ನಾನು ಮಂಜುವಾಣಿಯು, ನಿನ್ನಡಿಗೆರಗುವೆನೆಂದು ನುಡಿವ ಮಂಜುವಾಣಿಯ ನುಡಿಯಂ ಲಾಲಿಸಿ, ಮಂದಾಕಿನಿಯು ತನ್ನ ಕೈಯಿಂದ ಮಂಜುವಾಣಿಯ ಮೈದಡವಿ, ಕೆಲದೊಳ್ ಕುಳ್ಳಿರಿಸಿ, ಮಹಾರಾಯನ ಪಟ್ಟದರಸಿಯಾದ ಗುಣವತಿಯ ಕುಶಲವಂ ಕೇಳುತ್ತಿರಲು, ಮಂಜುವಾಣಿಯು ಮಂದಾಕಿನಿಯಂ ಕುರಿತು ಒಂದಾನೊಂದು ಮಾತನಾಡುತ್ತಿದ್ದಳು— ಎಲೆ ವೃದ್ಧಳಾದ ಮಂದಾಕಿನಿಯೆ! ನೀನು ಈ ರಾಜಮಂದಿರದಲ್ಲಿ ಬಹುದಿನದಿಂದಿರುವವಳಾಗಿ ಈ ರಾಜಸ್ತ್ರೀಯರುಗಳ ಆಯಾಸವಂ ವಿಲಾಸವಂ ತಿಳಿವವಳಾದಕಾರಣ ನನಗೆ ತಿಳಿಯದಿರುವ ನಡತೆಯಂ ಕಂಡೆನು. ಅದಂ ನಿನ್ನೊಡನೆ ಪೇಳಿ ತಿಳಿಯುವೆನೆಂದು ಬಂದೆನು; ಅದೇನೆಂದರೆ:— ಮಹಾರಾಯನ ಪಟ್ಟದರಸಿಯಾದ ಗುಣವತಿಯು ಕೆಲವು ಕಾಲದಿಂದ ನೂತನಗುಣಂಗಳಂ ಧರಿಸಿರುವಳು. ಸಖಿಯರೊಡನಾದರೂ ಸವಿಯಾಗಿ ನುಡಿವಲ್ಲಿ ಸಾವಕಾಶವಂ ಮಾಡುವಳು. ಅರಗಿಣಿಗಳಿಗೆ ನುಡಿಯಂ ಕಲಿಸುತ್ತ ಅಲಸಿಗೆಯಂ ಕೊಂಬಳು. ಪಾಣಿಯಿಂದ ವೀಣೆಯಂ ನುಡಿಸುತ್ತ ಈ ಭಾರವಂ ಪೊರಲಾರೆನೆನ್ನುವಳು. ಕ್ರೀಡಾಹಂಸಗಳಿಗೆ ನಡೆಯಂ ಕಲಿಸುತ್ತ ನಾಲ್ಕಾರು ಅಡಿಗಳನ್ನಿಟ್ಟು ನಿಟ್ಟುಸುರಂ ಬಿಡುವಳು. ಇದೇನು ಬಳಲಿಕೆ ಯೆಂದು ಕೆಳದಿಯ

ತು ಕೇಳಲಾಮಾತಂ ಕೇಳಿ ಕೇಳದಂತೆ ಮುಳಿಸಿನ ನೋಟದಿಂ ಮೊಗಮಂ ತಿರುಗಿಸುವಳು. ಈ ವಿಚಿತ್ರಮಂ ನೋಡಿ ನಿನ್ನೊಡನೆ ಪೇಳಿಸೀಪೇಳದ ಮಾತಂ ರಾಯಂಗೆ ಬಿನ್ನೈಸವೇಕೆಂದು ಬಂದೆನೆನ್ನುವ ಮಂಜುವಾಣಿಯ ಮಾತಂ ಮನದೊಳ್ ತಂದು ಮಂದಾಕಿನಿಯು ಬಡವಂಗೆ ಭಾಗ್ಯಬಂದಂತೆ ಸಂಭ್ರಮದಿಂದೆದ್ದು ಮಂಜುವಾಣಿಯು ಕರವಂ ಪಿಡಿದು ಗುಣವತಿಯ ಮಂದಿರವಂ ಪೊಕ್ಕು ಹಾಲಿನ ನೊರೆಯಂತೆ ಹಸನಾದ ಹಾಸಿಗೆಯೊಳ್ ಕುಳಿತಿರುವ ಮಂಜುವಾಣಿಯಂ ಕಂಡು ಕೈಮುಗಿಯಲಾ ರಾಣಿಯು ಮಧುರನುಡಿಯಿಂದ ಮಂದಾಕಿನಿಯೆ! ಚಂದವೆ? ಎಂದು ನಸುನಗುತೆ ಕುಶಲವಂ ಕೇಳಲು, ಆ ಮಂದಾಕಿನಿಯು ರಾಣಿಯಂ ಕುರಿತು ಎಲೈ ಸುಂದರಾಂಗಿಯೆ ಇಂದಿನದಿನದಿಂ ಲೋಕಕ್ಕೆಲ್ಲ ಚಂದವೆಂದು ನುಡಿದು ರಾಣಿಯ ನಸುಬಿಳ್ಪೇರಿದ ಮೊಗಮಂ ತಿಳಿಯಾದ ನೋಟಮಂ ಬೆಳರ್ತು ಕಳಕಳಿಸುವ ಕಪೋಲಂಗಳಂ ಬಲಿದಿರುವ ಬಳಲಿಕೆ ಮೊದಲಾದುದಂ ಕಂಡು ಎಳೆಬಯಕೆಯ ಭಾವಮಂ ತಿಳಿದು ಮಂಜುವಾಣಿಯೆ! ಶರ್ವಾಣಿಯು ಕುಮಾರನಂ ಪಡೆದಂತೆ ರಾಣಿಯು ಕುಮಾರನಂ ಪಡೆಯುವ ಸೂಚನೆಗಳು ತೋರುತಲಿವೆ. ನಾನು ಕೆಲವು ಗರ್ಭಚಿಹ್ನಗಳಂ ಹಿರಿಯರ ಮುಖದಿಂದ ಕೇಳಬಲ್ಲೆನು. ಕೆಲವಂ ಕಂಡೂಬಲ್ಲೆನೆಂದು ನುಡಿಯಲಾಮಾತಿಗೆ ಮಂಜುವಾಣಿಯು ಮಂದಾಕಿನಿಯಂ ಗರ್ಭಚಿಹ್ನೆಗಳ ಪರಿಯಂ ಅರಸಿ ಕೇಳುವಳಾಗಿ ತೋರುತ್ತಲಿವೆ ವಿಸ್ತಾರವಾಗಿ ಪೇಳೆಂದು ನಿರೂಪಿಸಲಾಕೆ ಮಂದಾಕಿನಿಯು ಕೆಲಬಲದೊಳ್ ನೋಡುತ್ತ ಮೆಲ್ಲಮೆಲ್ಲನೆ ಶಾಸ್ತ್ರಮಂ ನೆನೆನೆನೆದು ರಾಣಿಯು ಕೇಳುವಂತೆ ಗರ್ಭೋತ್ಪತ್ತಿ ಲಕ್ಷಣವಂ ಪೇಳುವೆನೆಂದು, ಎಲೈ ಮಂಜುವಾಣಿಯೆ ಕೇಳು— ಋತುಸ್ನಾತೆಯಾದ ತರುಣಿಗೆ ಹದಿನಾರುದಿನಂಗಳೊಳಗಾಗಿ ಪತಿಯೊಡನೆ ರತಿಯುಂಗೈವ ಸುಖಸಮಯದಲ್ಲಿ ಪೂರ್ವಪುಣ್ಯವಿಶೇಷದಿಂದ ತರುಣಿಯ ಗರ್ಭಾಶಯದಲ್ಲಿ ಶೋಣಿತವು ಪುರುಷನ ಶುಕ್ಲದಿಂ ಕೂಡಿ ತಡೆಯುವುದು. ಶುಕ್ಲಶೋಣಿತಂಗಳೇ ಸಂತಾನಕ್ಕೆ ಕಾರಣಂಗಳು. ಶುಕ್ಲಾಧಿಕ್ಯದಿಂದ ಪುರುಷನುದಯಿಸುವನು. ಶೋಣಿತಾಧಿಕ್ಯವಾದೊಡೆ ಕನ್ಯೆಜನಿಸುವಳು. ಎರಡೂಸಮವಾಗಲು ನಪುಂಸಕನು ಹುಟ್ಟುವನು. ಬೆಸದಿನಂಗಳಲ್ಲಿನಿಂತ ಗರ್ಭದಿಂಸ್ತ್ರೀ

ಪ್ರಜೆಯಹುದು. ಸಮದಿನಂಗಳಲ್ಲಿ ನಿಂತ ಗರ್ಭದಿಂ ಪುಂಪ್ರಜೆಯಹುದು. ಹದಿನಾರನೆಯ ದಿವಸದಲ್ಲಿ ನಿಂತ ಗರ್ಭದಿಂ ಪುಟ್ಟಿದವನು ಚಕ್ರವರ್ತಿಯಾಗುವನು. ಇಂತು ಕಾಲಭೇದದಿಂದ ಪ್ರಜಾಭೇದವಾಗುವುದಂತಿರಲಿ. ನಾರಿಯು ಋತುಸ್ನಾನ ಮಾಡಿಪೋದನ ಯಾರಂ ನೋಡುವಳೊ ಅವರಂ ಪೋಲ್ವ ಆಕಾರವಂ ತಾಳುವ ಶಿಶುಗಳುದಯಿಪರೆಂಬ ಶಾಸ್ತ್ರವಿರುವುದರಿಂ ಸ್ನಾನವಂ ಮಾಡಿದ ಬಳಿಕ ಪತಿಯ ಮೊಗವನ್ನೇ ನೋಡಬೇಕು. ಇದಲ್ಲದೆ ಮಾಸಕ್ರಮದಿಂದ ಗರ್ಭವು ಬೆಳೆಯುವ ಪರಿಯಂ ಪೇಳ್ವೆನು ಕೇಳು—ಶುಕ್ಲ ಶೋಣಿತಂಗಳು ಯುಕ್ತಂಗಳಾಗಿ ಪ್ರಥಮಮಾಸಲ್ಲಿ ಗರ್ಭಾಶಯದೊಳ್ ಬುದ್ಬುದವಾಗಿ ಕಲಲಭಾವವನ್ನೈದಿ ಘನೀಭೂತವಾಗುವುದು. ಎರಡನೇ ತಿಂಗಳಲ್ಲಿ ಪಿಂಡರೂಪವಾಗುವುದು. ಮೂರನೆ ತಿಂಗಳಲ್ಲಿ ಕರಪಾದಂಗಳು ಶಿರವು ಮೊದಲಾದವಯವಂಗಳೇರ್ಪಡುವುವು. ನಾಲ್ಕನೇ ತಿಂಗಳಲ್ಲಿ ಜೀವಪ್ರವೇಶದಿಂ ಗರ್ಭವು ಚಲಿಸುವುದು. ಐದನೇ ತಿಂಗಳಲ್ಲಿ ಪ್ರಾಣ ಅಪಾನ ವ್ಯಾನ ಉದಾನ ಸಮಾನಗಳೆಂಬ ಐದು ಪ್ರಾಣಂಗಳು ಯುಕ್ತವಾಗಿ ಮನೋಬುದ್ಧಿ ಚಿತ್ತಾಹಂಕಾರಗಳಂ ತಳೆದು ಮಾಂಸ ಶೋಣಿತಂಗಳಿಂದ ಬೆಳೆಯುವುದು. ಆರನೇ ತಿಂಗಳಲ್ಲಿ ಅಸ್ಥಿ ನಖ ಕೇಶಗಳುಂಟಾಗುವುವು. ಏಳನೇ ತಿಂಗಳಲ್ಲಿ ಬಲವರ್ಣಂಗಳಿಂದ ಪೂರ್ಣಾಂಗವಾಗುವುದು. ಎಂಟನೇ ತಿಂಗಳಲ್ಲಿ ಶ್ರೋತ್ರೇಂದ್ರಿಯದ ಅಭಿವ್ಯಕ್ತಿಯು ತ್ವಕ್ಕು ತೇಜಸ್ಸುಗಳೂ ಕೂಡುವುವು. ಒಂಭತ್ತನೇ ತಿಂಗಳಲ್ಲಿ ಸಂಸಾರದುಃಖದಿಂ ಪೀಡಿತವಾಗಿ ಚಿಂತೆಯಿಂದಿರುತಿರುವುದು. ಅನಂತರದಲ್ಲಿ ಹತ್ತನೇ ತಿಂಗಳೊಳಗಾಗಿ ಉದಯವನ್ನೈದುವುದು. ಇಂತಲ್ಲದೆ ಈ ಗರ್ಭದ ವಿಚಾರವು ಬಹುವಿಸ್ತಾರವಾಗಿರುವುದು. ಇಂತು ಗರ್ಭವಂ ಧರಿಸಿದ ತರುಣಿಯರು ಆಮ್ಲ ತಿಕ್ತ ಕಟು ಕಷಾಯಾದಿ ರಸಂಗಳು ವಿಶೇಷವಾಗಿ ಸೇವಿಸದೆ ಮಧುರಾಹಾರಂಗಳನ್ನೇ ಸೇವಿಸುತಲಿರಬೇಕು. ಅದರಿಂ ಶಿಶುಗಳು ರೋಗರಹಿತರಾಗಿರುವರೆಂದು ಪೇಳುತ್ತ, ರಾಣಿಯ ಗಲ್ಲವಂ ಪಿಡಿದೆತ್ತಿ ಮೊಗವಂ ನೋಡಿ ಮೈದಡವಿ, ಸುಪುತ್ರವತಿಯಾಗೆಂದು ಹರಸಿ, ನಿಂದು ಕೈಮುಗಿದು ಮಂಜುವಾಣಿಯು ಕರವಂ ಪಿಡಿದು, ಎಲೈ ಮಂಜುವಾಣಿಯೆ ಈಗ ರಾಣಿಗೆ ಗ

ಗರ್ಭಧಾರಣೆಯಾಗಿ ಮೂರು ಮಾಸಂಗಳಾಗುತ್ತಲಿವೆ, ಈ ಪರಮಸಂತೋಷವೃತ್ತಾಂತಮಂ ಮಹಾರಾಯಂಗೆ ಬಿನ್ನೈಸಿ ದಿನದಿನಗಳಲ್ಲಾಗುವ ಮಹೋತ್ಸವಂಗಳಂ ಮಾಡಿಸುತ್ತ ಮೂರನೇ ತಿಂಗಳಲ್ಲಿ ಮೊಗ್ಗೆಗಳಂ ಮುಡಿಸಿ, ಐದನೇ ತಿಂಗಳಲ್ಲಿ ರನ್ನದ ಬಳೆಯಂ ತೊಡಿಸಿ, ಏಳನೇ ತಿಂಗಳಲ್ಲಿ ಬಯಕೆ ಭೋಜನವಂಮಾಡಿಸಿ ಎಂಟನೇ ತಿಂಗಳಲ್ಲಿ ರಾಯನೊಡಗೂಡಿ ಪುಂಸವನ ಸೀಮಂತಮಹೋತ್ಸವಂಗಳಂ ಬೆಳೆಯಿಸುವುದೆಂದು ಪೇಳೆ, ಮಂಜುವಾಣಿಯು ಕಿವಿಯೊಳ್ ರಹಸ್ಯವಾಗಿ ಪೇಳಿದಳು— ಎಲೆ ಮಂಜುವಾಣಿಯೆ ರಾಣಿಯು ಗರ್ಭದೊಳ್ ನವಮಾಸಗಳು ಪೂರ್ಣವಾದ ತರುವಾಯ ವಂಶವರ್ಧನಿಯೆಂಬ ಹಿರಿಯ ಸೂಲಗಿತ್ತಿಯನ್ನೇ ಕರೆತರಿಸಿ ರಾಣಿಯು ಸಮೀಪದಲ್ಲಿ ಕಾದಿರುವಂತೆ ಕಟ್ಟುಮಾಡಿಸು, ಎಂದು ನುಡಿದು ಸಂತೋಷಭರಿತಳಾಗಿ ರಾಣಿಯು ದಯಪಾಲಿಸಿದುಡುಗೊರೆಯಂ ಕೊಂಡು ನಿಜನಿವಾಸವಂ ಕುರಿತು ತೆರಳಲು, ಆಬಳಿಕ ಮಂಜುವಾಣಿಯು ಗುಣವತಿಯ ಅಂತಃಪುರದ ಉದ್ಯಾನವನದಲ್ಲಿ ಫಲಿಸಿದ ಫಲಂಗಳಂ ಚಿನ್ನದ ತಟ್ಟೆಗಳಲ್ಲಿ ತುಂಬಿಸಿಕೊಂಡು ನಿಜಾಲಂಕಾರದಿಂದಲಂಕೃತಳಾಗಿ ಮಿಂಚಿನಂತೆ ಹೊಳೆಯುತ್ತ ಬೆಳ್ದಿಂಗಳಂತಿರುವ ಮುಸುಕಂ ಪೊದ್ದು ಕಾಲಸರದ ಗೆಜ್ಜೆಗಳ ಘಲ್ಲೆನುವ ಧ್ವನಿಯಿಂದ ತಾನು ಬರುವುದಂ ಮೊದಲೇರಾಯಂಗೆ ತಿಳಿಸುವಂತೆ ಬೇಗಬಂದು, ಮಣಿಮಂಜರಿಯ ಮನೆಯಲ್ಲಿರುವ ಮಹೀಪಾಲನ ಮುಂದೆ ನಿಂತು ನಸುನಗುತ್ತ ಕುಣಿಯುವ ಮುತ್ತಿನ ಸರಂಗಳು ಕಿಕ್ಕಿರಿದ ಕುಚಂಗಳುಂ ಝಣಿರೆನ್ನುವ ಕರಕಂಕಣಂಗಳುಂ ಸೋಲುವ ನಡುವಿನಿಂ ಸೊಕ್ಕುದೋರುವ ನೋಟದಿಂ ಕೂಡಿ, ರಾಯಂಗೆ ನಮಸ್ಕಾರಂಗೈದು ಫಲಂಗಳಂ ಮುಂದಿಟ್ಟು ನಿಂದಿರಲಾ ಮಂಜುವಾಣಿಯಂ ನೋಡಿ ರಾಯನಿಂತೆಂದನು:— ಎಲೆ ಅತಿಕುಶಲೆಯಾದ ಮಂಜುವಾಣಿಯೆ ಎನ್ನ ಪಟ್ಟದರಸಿಯಾದ ಗುಣವತಿಯು ಕ್ಷೇಮದಿಂ ಸಂತೋಷದಿಂದಿರುವಳೆ ? ಎಂದು ಪೇಳಿದ ರಾಯನ ನುಡಿಯಂ ಕೇಳಿ ಮಂಜುವಾಣಿಯು ರಾಯನಂ ಕುರಿತು ಬಿನ್ನೈಸಿದಳು.— ಎಲೈರಾಜಾಧಿರಾಜನೆ ನಿನ್ನ ರಾಣಿಯಾದ ಗುಣವತಿಯು ಚಂದ್ರನಂ ಗರ್ಭದೊಳ್ ಧರಿಸಿ ಬೆಳ್ಪೇರುವ ಪೂರ್ವದಿಕ್ಕಿನಂತೆ ಗರ್ಭದಲ್ಲಿ ಕುಮಾರನಂ ಧರಿಸಿ, ಎಳೆಬಯಕೆ

ಗೊಂಡು ಇರುವಳೋ ಎಂದು ಮಂದಾಕಿನಿಯಂ ಕರೆತಂದು ತೋರಲಾ ಮಂದಾಕಿನಿಯು ರಾಣಿಯು ಗರ್ಭಚಿಹ್ನೆಗಳನ್ನೂಹಿಸಿ ಈಗ ರಾಣಿಗೆ ಗರ್ಭ ಧಾರಣೆಯಾಗಿ ಮೂರುತಿಂಗಳಾಗಿರುವುದು. ಇದಂ ರಾಯಂಗೆ ಬಿನ್ನಯಿ ಸೆಂದು ಪೇಳಲಾಗಿ ಈ ಸಂತೋಷ ವೃತ್ತಾಂತವಂ ಸ್ವಾಮಿಗೆ ಬಿನ್ನಯಿಸು ವೆನೆಂದು ಬಂದೆನು ಇನ್ನು ದಿನದಿನದ ಉತ್ಸವಂಗಳಂ ಬೆಳಯಿಸಬೇ ಕೆಂದು ನಗೆಯು ಬೆಳಕೋ ಇದೆಂಬಂತೆ ಪಲ್ಪರಸೆ ನಸುದೋರೆ ಸರಿಯಾಗಿ ನುಡಿದ ನುಡಿಯಂ ಕರ್ಣಾಮೃತವಾಗಿ ಕೇಳಿ, ಮೈಯೆಲ್ಲ ಪುಳಕಂಕಂಡು ರಾಯನು ತನ್ನ ಕೊರಳೊಳಿರ್ದ ನವರತ್ನಹಾರವಂ ಮಂಜುವಾಣಿಯು ಕಂ ಠದೊಳ್ ಕಟ್ಟುವ ನೆವದಿಂದ ಮಂಜುವಾಣಿಯು ಕುಚಕಲಶಂಗಳಲ್ಲಿ ಕಲೆ ಯಂ ತಿಳಿದು ಕರಗಳಂ ಸೋಂಕಿಸಲಾಗ ಮಂಜುವಾಣಿಯು ಮನಗರಗಿ ಕಿರುಬೆಮರಂ ತಾಳ್ದು ಮೊಗದಿಂ ತಲೆವಾಗಿ ಲಜ್ಜೆಯೊಳ್ಮುಳುಗಿ ಮಣಿಮಂ ಜರಿಯು ಪೂಮಂಚದ ತೆರೆಯಮರೆಯೊಳ್ನಿಲ್ಲಲು, ಅದಂ ಕಂಡು ಮಣಿಮಂ ಜರಿಯು ಮಹೀಪತಿಯು ಮೊಗಮಂ ನೋಡಿ, ಎಲೈ ರಸಿಕಶಿರೋಮಣಿ ಯಾದ ರಾಯನೆ ಈಗ ಮಂಜುವಾಣಿಯು ಬಂದು ಬಿನ್ನವಿಸಿದ ಕಾರ್ಯ ವೇನು? ನೀನು ಮಾಡುವ ಸರಸಕರಲಾಘವವೇನು? ನಿನಗೆ ಭೋಗಾರ್ಥ ವಾಗಿ ಚತುರ್ಮುಖನು ಬಂದು ಸ್ತ್ರೀಲೋಕವನ್ನೇ ನಿರ್ಮಿಸಿದ್ದರೆ ಸಂತೋಷವಾಗಿರ್ಪುದು. ಎಂದು ಉಚಿತವಾಗಿ ಮೃದುವಾದ ನುಡಿಯಿಂದ ಪರಿಹಾಸವಂ ಮಾಡಿ ಮಂಚದಿಂದಿಳಿದು ಮಂಜುವಾಣಿಯಂ ಕರೆದು ಕೈವಿ ಡಿದು ತನ್ನ ಭೋಜನಮಂದಿರಕ್ಕೆ ಕಳುಹಿ, ನಿಜಸಖೀಜನಂಗಳಂ ನೋಡಿ ಸನ್ನೆಯಂಗೈಯಲು, ಆ ಸಖೀಜನರು ರಾಣಿಯು ಇಂಗಿತವನರಿತು ಮಂಜು ವಾಣಿಯಂ ಮರ್ಯಾದೆಯೊಡನೆ ಮಧುರಾಹಾರಂಗಳಿಂದುಪಚರಿಸಿ ಕರ್ಪೂರ ವೀಳೆಯವನಿತ್ತು ಮಣಿಮಂಜರಿಯು ಬಳಿಗೆ ಕರತರಲಾಗ ಮಣಿಮಂಜ ರಿಯು ಎಲೌ ಮಂಜುವಾಣಿಯೆ ನಮಗೆ ಪೂಜ್ಯಳಾದ ಗುಣವತಿಯು ಗರ್ಭ ಧಾರಣ ವೃತ್ತಾಂತವಂ ನಿನ್ನ ಮುಖದಿಂದ ಕೇಳಿದ್ದರಿಂದ ಆನಂದಭರಿತಳಾ ದೆನೆಂದು ನುಡಿದು, ತನ್ನ ಕೊರಳೊಳಿರ್ದ ರತ್ನದ ಪದಕವಂ ಕಂಠದೊಳ್ ಕಟ್ಟಿ, ದುಕೂಲಾದಿಗಳನುಡುಗರೆಯಾಗಿ ಕೊಟ್ಟು ಕೈಪಿಡಿದು ರಾಯನ ಸಮೀಪಕ್ಕೆ ಕರತಂದು, ಎಲೌ ಮಂಜುವಾಣಿಯೆ, ಗುಣವತಿಯು ರಾಯಂಗೆ

ರಹಸ್ಯವಾಗಿ ಬಿನ್ನವಿಸೆಂದು ಏನನಾದರೂ ಪೇಳಿದ್ದರೆ ಅದಂ ಏಕಾಂತವಾಗಿ ಬಿನ್ನವಿಸೆಂದು ನುಡಿದು ರಾಯನ ಮೊಗಮಂ ನೋಡಿ ನಸುನಗುತ ಬಂದಾ ನೊಂದು ಕಾರ್ಯದ ನೆವದಿಂದ ಹೊರಗಣ ಚಿತ್ರಶಾಲೆಯ ಸಮೀಪವನ್ನೈದಿ ತನ್ನ ಸವತಿಯರಾದ ಚಂದ್ರಕಲೆಯುಂ ಕನಕಲತೆಯುಂ ಕಮಲಿನಿಯುಂ ಕರೆ ಯಿಸಿ ಪಟ್ಟದರಸಿಯಾದ ಗುಣವತಿಯ ಗರ್ಭಧಾರಣ ವೃತ್ತಾಂತವಂ ಪೇಳಿ, ಈ ನಾಲ್ವರು ಆನಂದಭರಿತರಾಗಿರುವ ವೇಳೆಯಲ್ಲಿ ಮಣಿಮಂಜರಿಯು, ಚಂದ್ರಕಲೆ ಮೊದಲಾದ ತಂಗಿಯರು ಮೂವರೊಡನೆ ಬಂದಾನೊಂದುಮಾತ ನಾಡುತಲಿದ್ದಳು. ಎಲೌ ಸತ್ಕುಲಪ್ರಸೂತೆಯರಾದ ತಂಗಿಗಳಿರಾ ! ನೀವು ಸಕಲ ಮಂಗಳದ್ರವ್ಯಂಗಳಂ ಸಂಗ್ರಹಿಸಿಕೊಂಡು ಮಂಜುವಾಣಿಯೊಡನೆ ನಮಗೆ ಹಿರಿಯಳಾದ ಪಟ್ಟಮಹಿಷಿಯಾದ ಗುಣವತಿಯ ಮಂದಿರವಂ ಪೊಕ್ಕು ಮೊಗ್ಗೆಗಳಂ ಮುಡಿಸುವ ಮಹೋತ್ಸವಕ್ಕೋಸುಗ ರಾಣಿಗೆ ಮಂಗಳಸ್ನಾನವಂ ಮಾಡಿಸಿ, ರತ್ನಾಭರಣಂಗಳಿಂದಲಂಕರಿಸಿ ಬಸಗೆಯ ಸಾಮಗ್ರಿಗಳು ಸನ್ನಾಹಿಸಿಕೊಂಡಿರುವದು. ಅಷ್ಟರಲ್ಲಿಯೇ ಈ ಮಹೋ ತ್ಸವವಂ ನೋಡಲೋಸುಗ ಗುಣವತಿಯ ಮಂದಿರಕ್ಕೆ ಮಹಾರಾಯನು ಬಿಜಯಂಗೈಸಿಕೊಂಡು ಬರುವೆನೆಂದು ಪೇಳುತ್ತ ಎಲ್ಲರೂ ಬಂದು ರಾಯನ ಪದಪಲ್ಲವಂಗಳಿಗೆರಗಿ, ಅಪ್ಪಣೆಯಂಗೊಂಡು ಮಂಜುವಾಣಿಯೊಡಗೂಡಿ ವೀಣಾವೇಣು ಮೃದಂಗ ಮೊದಲಾದ ಶುಭವಾದ್ಯಂಗಳಿಂ ಸಮೇತರಾಗಿ, ಮಂಗಳದ್ರವ್ಯಂಗಳಂ ಸಖೀಸಹಸ್ರಂಗಳಿಂ ತೆಗಯಿಸಿಕೊಂಡು ಗುಣವ ತಿಯ ಮಂದಿರವಂ ಸೇರಿ, ರಾಣಿಯು ತಾನು ಮಲಗುವ ಮನೆಯ ಬಾಗಿ ಲಲ್ಲೇ ರನ್ನದ ಚೌಕಿಯೊಳ್ ಕುಳಿತು, ದಮಯಂತೀದೌಹೃದವೆಂಬ ಕಾವ್ಯ ವನೋದುತಲಿರುವಾಗ ಚಂದ್ರಕಲೆ ಮೊದಲಾದ ರಾಜಕಾಂತೆಯರು ಸಂಭ್ರ ಮದಿಂದ ಸಮೀಪಕ್ಕೆ ಬಂದು ರಾಣಿಯ ಮೊಗವಂ ನೋಡಿ ನಸುನಗುತ ರಾಣಿಯಡಿದಾವರೆಗಳಿಗೆರಗಲು, ರಾಣಿಯು, ತಂಗಿಯರು ಮೂವರಂ ಕರಂ ಗಳಂ ಪಿಡಿದೆತ್ತಿ ಕೆಲಬಲದೊಳ್ ಕುಳ್ಳಿರಿಸಿ ಕುಶಲವಂ ಕೇಳಿ ಮಣಿಮಂಜ ರಿಯು ಸುಖದಿಂದಿರುವಳೇ ಎಂದು ಕೇಳಿ, ರಾಯನ ಗುಣಂಗಳಂ ಬಣ್ಣಿಸು ತಲಿರುವಲ್ಲಿ ಮಂಜುವಾಣಿಯು ಚಂದ್ರಕಲೆಯುಂ ಕುರಿತು ಅರಸಿಯೆ ರಾಣಿಗೆ ಬಸಗೆಯಂ ಬೆಳಯಿಸುವ ಸಮಯುವಾಯಿತೆಂದು ಪೇಳಲಾ ಚಂದ್ರಕಳೆ

ಮೊದಲಾದವರು ರಾಣಿಯಂ ರತ್ನಪೀಠದೊಳ್ಕುಳ್ಳಿರಿಸಿ, ಅಷ್ಟಮಂಗಳ ದ್ರವ್ಯಂಗಳಂ ಮುಂದಿಟ್ಟು, ವೃದ್ಧೆಯರಾದ ಬ್ರಾಹ್ಮಣ ಸುವಾಸಿನಿಯರಿಂದ ಮುತ್ತಿನಾರತಿಯಂ ಬೆಳಗಿಸಿ, ನವರತ್ನದ ಸೇಸೆಯನಿಕ್ಕಿ ಶೋಭನಮಂಗಳಂಗಳಂ ಪಾಡುತ್ತ, ಮಲ್ಲಿಗೆತ್ತೈಲವಂ ಮರಕತದ ಪಾತ್ರೆಯೊಳ್ ತಂದಿಟ್ಟು ಚಂದ್ರಕಳೆಯು ರಾಣಿಗೆ ತೈಲವನೊತ್ತಿದಳು. ಕಮಲಿನಿಯು ತುರುಬಿನಲ್ಲಿರುವ ಮುತ್ತಿನ ಕುಚ್ಚುಗಳಂ ತೆಗೆದು ಕುರುಳುಗಳಂ ಬಿಡಿಸಿದಳು. ಕನಕಲತೆಯು ರಾಣಿಯ ತನುಲತೆಗೆ ಕುಂಕುಮಕೇಸರದಿಂ ಬೆರೆದ ಅರಿಸಿನವಂ ಸಂಪಗೆಯ ತೈಲದಿಂ ಕಲಸಿ ಪೂಸಿದಳು. ಮಂಜುವಾಣಿಯು ಮಣಿಮಯವಾದ ಸಂಬಳಿಗೆಯಂ ಕರದಲ್ಲಿ ಪಿಡಿದು ರಾಣಿಗೆ ಕಪ್ಪುರವೀಳೆಯನೊಪ್ಪಿಸಿದಳು. ಮತ್ತೆ ಕೆಲ ಸಖೀಜನಂಗಳು ಮಜ್ಜನಗೃಹದಲ್ಲಿ ಚಿನ್ನದ ಕೊಪ್ಪರಿಗೆಗಳೊಳ್ ಜಲವಂ ತುಂಬಿ, ಕೆಲವರು ಕಸ್ತೂರಿ ಕರ್ಪೂರಂಗಳಿಂದಲುಂ, ಕೆಲವರು ಮರುಗ ದವನ ಪಚ್ಚೆತೆನೆಗಳಿಂದಲುಂ, ಕೆಲವರು ಲಾಮಂಚ ಮುಡಿವಾಳ ಮೊದಲಾದ ಪರಿಮಳ ದ್ರವ್ಯಂಗಳಿಂದಲುಂ, ವಾಸನೆಯಂ ಕಟ್ಟಿ ಚಂದ್ರಕಾಂತಶಿಲೆಗಳಿಂ ನಿರ್ಮಿತವಾದ ಕುಚಾಯಿಗಳಲ್ಲಿ ನಿರ್ಮಲೋದಕವನಿಟ್ಟು, ನಾನಾಬಗೆಯಾದ ಹೂವಿನ ಬೀಸಣಿಗೆಗಳಂ ಸಜ್ಜುಮಾಡಿದರು. ಕೆಲವರು ಅಗರು ಕಚೋರ ಶ್ರೀಗಂಧ ಸಾಮ್ರಾಣಿಗಳು ಮೊದಲಾದ ಧೂಪದ್ರವ್ಯಂಗಳಂ ಸಂಗ್ರಹಿಸಿದರು. ಕೆಲವರು ವಿಮಲಾಂಗಿಯರು ತಿಳಿಬಿಳಿದಾದ ಚೀನಾಂಬರಂಗಳಂ ಸೆರಿಗೆಗಳಂ ಪಿಡಿದರು. ಕೆಲರು ಮಂದಯಾನೆಯರೊಂದೊಂದು ರತ್ನಜಾತಿಯಿಂ ಮಾಡಿದ ನಾಗವಾರದ ಒಡವೆಗಳಂ ಬೇರ್ಪಡಿಸಿದರು. ಕೆಲರು ಮಧುರಾಧರೆಯರು ಭೋಜನಶಾಲೆಯಲ್ಲಿ ಷಡ್ರಸೋಪೇತಂಗಳಾದ ಪರಿಪರಿ ಸವಿಯಾದ ಭಕ್ಷ್ಯಂಗಳಂ, ಮಧುರಾನ್ನಂಗಳಂ, ವ್ಯಂಜನಂಗಳಂ ಮಾಡಿ ಚಿನ್ನದ ತಟ್ಟೆಗಳಲ್ಲಿ ರನ್ನದಬಟ್ಟಲುಗಳಂ ನೂರಾರನಿರಿಸಿ, ಪದಾರ್ಥಂಗಳ ಬಡಿಸುವ ಸನ್ನಾಹದೊಳಿರುತಿರ್ದರು. ಕೆಲರು ಪಲ್ಲವಪಾಣಿಯರು ಬಾಗಿಲೊಳಗಿರುವ ಗುರಿಕಾರರಂ ಕರೆದು ಸುಬುದ್ಧಿ ಮೊದಲಾದ ಮಂತ್ರಿಕಾಂತೆಯರಂ ಕರೆಯಿಸಿ, ಎಂದು ರಾಣಿಯು ಅಪ್ಪಣೆಯಂ ಕೊಟ್ಟಿರುವಳೆನುತ ಗಂಭೀರಧ್ವನಿಯಿಂ ನುಡಿದರು.

ಇಂತು ತಮ್ಮ ತಮ್ಮ ಕಾರ್ಯಂಗಳೊಳಿರುವ ಸಖೀ ಸಹಸ್ರಂಗಳ

ಕೋಲಾಹಲಗಳಿಂದ ಚಂದ್ರೋದಯದಲ್ಲಿ ಘೋರೆನ್ನುವ ತರಂಗಂಗಳಿಂದ ರಾರಾಜಿಸುವ ಸುಧಾಸಮುದ್ರದಂತೆ ಅಂತಃಪುರವು ಲಕ್ಷ್ಮಿಗೆ ತೌರುಮನೆ ಯಾಗಿರುತ್ತಿರಲು, ಆ ಸಮಯದಲ್ಲಿ ರಾಣಿಯಂ ಚಂದ್ರಕಳೆ ಮೊದಲಾದ ರಾಜಕಾಂತೆಯರು ಹಸ್ತಲಾಘವದಿಂ ಮಜ್ಜನಶಾಲೆಯನೈದಿಸಿ, ಪನ್ನೀರು ಗಳಂ ದೆರೆಯುವ ರಾಜಸ್ತ್ರೀಯರುಗಳ ಕರಕಂಕಣ ಶಬ್ದಜಾಲದಿಂ ಕೇಳು ವರ ಕಿವಿಗಳಿಗಿಂಪಾಗಿ ಮಜ್ಜನವಂ ಮಾಡಿಸಿ, ಅತಿ ಮೃದುವಾದ ತಿಳಿಬಿಳು ಪಾದ ವಸ್ತ್ರಂಗಳಿಂದ ಮೈಬೆಮರ್ಗಳಂ ತೊಡೆದು, ಹಾಲುಮಡ್ಡಿ, ಸಾಮ್ರಾ ಣಿ ಮೊದಲಾದ ಪರಿಮಳ ದ್ರವ್ಯಂಗಳಿಂದ ವಾಸನೆಯಂಕೊಳಿಸಿ ಮುತ್ತಿನಾ ರತಿಯನೆತ್ತಿ ಚಿತ್ರಶಾಲೆಗೆ ಬಂದು ಅಲ್ಲಿ ನವರತ್ನಮಯವಾದ ಮಂಚದಲ್ಲಿ ಕುಳ್ಳಿರಿಸಿ, ಚೀನಾಂಬರಾದಿ ವಸ್ತ್ರಗಳನುಡಿಸಿ, ಮುತ್ತಿನ ರವಿಕೆಯಂ ತೊಡಿಸಿ, ಆಯಾಯ ವಾರದ ಆಭರಣಂಗಳಂ ತಂದು ರಾಣಿಯ ಇಚ್ಛಾ ನುಸಾರವಾಗಿ ಅಳವಡಿಸಿ, ಮಲ್ಲಿಗೆ, ಮೊಲ್ಲೆ, ಸಂಪಗೆ, ಸುರಹೊನ್ನೆ, ಪಾರಿಜಾತ, ಸುಗಂಧರಾಜ, ದವನ, ಮರುಗ ಮೊದಲಾದ ಪುಷ್ಪಮಾಲೆಗಳಂ ಮುಡಿಯಲ್ಲಿ ಮುಡಿಸಿ, ರತ್ನದ ತಿಲಕವಂ ಪಣೆಯೊಳಿಟ್ಟು, ಅಂಜನ ಮೊದ ಲಾದ ಸೌಭಾಗ್ಯ ದ್ರವ್ಯಂಗಳಿಂದಲಂಕರಿಸಿ, ಹಸೆಯಜಗುಲಿಯಲ್ಲಿ ಮುತ್ತಿನ ಹಸೆಯನಿಕ್ಕಿ, ರತ್ನದ ಪೀಠದೊಳ್ ನಾರೀಶಿರೋಮಣಿಯಾದ ರಾಣಿಯಂ ಕುಳ್ಳಿರಿಸಿ, ನಾರಿಯರು ಶುಭಪ್ರದವಾದ ಶೋಭಾನೆ, ಧವಳಾರ ಮಂಗಳಂ ಗಳಂ ಪಾಡುತ್ತ, ಸಂಭ್ರಮದಿಂದಿರುವ ಸಮಯದೊಳ್ ಸತೀಶಿರೋಮಣಿ ಯಾದ ಗುಣವತಿಯು ಆದಿಲಕ್ಷ್ಮಿಯಂತೆ ಒಪ್ಪುತ್ತಿದ್ದಳು.

ಆ ಸಮಯದೊಳ್ ಮಣಿಮಂಜರಿಯು ಹಸ್ತಲಾಘವದಿಂ ಜಗ್ಗುತ, ನಸುನಗುತ, ಓರೆನೋಟದಿಂ ನೋಡುತ, ಮೆಲ್ಲಮೆಲ್ಲನೆ ರಾಯನು ಚಿತ್ರ ಶಾಲೆಯನ್ನೈದಲು, ಆ ಗುಣವತಿ ಮೊದಲಾದ ರಾಜಕಾಂತೆಯರು ಬೆದರಿದ ಮರಿ ಹುಲ್ಲೆಯಂತೆ ಎದ್ದು ರಾಯನ ಪಾದಸರೋಜಂಗಳಿಗೆರಗಲು, ರಾಯ ನಾನಂದಭರಿತನಾಗಿ ತನ್ನ ಪಟ್ಟದರಸಿಯಾದ ಗುಣವತಿಯ ಕರಗಳಂ ಪಿಡಿ ದೆತ್ತಿ, ಮಣಿಮಂಜರಿಯಂ ಕುರಿತು ಬಂದು ಮಾತನಾಡಿದನು. ಎಲೌ ಪ್ರಾಣ ವಲ್ಲಭೆಯಾದ ಮಣಿಮಂಜರಿಯೆ ಕೇಳು, ರಾಣಿಯಂ ಹಸೆಯೊಳ್ಕುಳ್ಳಿರಿಸಿ ಉತ್ಸವ ದರ್ಶನಾರ್ಥವಾಗಿ ಬಂದಿರುವ ರಾಜಮಂಡಲಿಯ ಅರಸಿಯರಿಗೊ,

ಸುಬುದ್ಧಿ ಮೊದಲಾದ ಮಂತ್ರಿಯರ ಕಾಂತೆಯರಿಗೂ, ಉಚಿತವಾದ ಉಡುಗೆರೆಗಳಂ ಕೊಟ್ಟು ಕಳುಹಿ, ಈ ಶಕುಂತಶಾಲೆಯಲ್ಲಿ, ಶುಕಪಿಕ ಮಯೂರಾದಿಗಳ ನವಲೋಕಿಸುತ ನಾನು ಜಾಲಂದರದೊಳ್ ರಾಣಿಯು ಬಸಗೆಯಂ ನೋಡುತಲಿರುವೆನೆಂದು ನುಡಿದು, ಮಣಿಮಂಜರಿ ಮೊದಲಾದ ವರಂ ರಾಣಿಯೊಡನೆ ಕಳುಹಿಸಿ, ತಾನು ಶಕುಂತಶಾಲೆಯನ್ನೈದಿ, ಎತ್ತರವಾದ ಚಿತ್ತರದ ಚೌಕಿಯೊಳ್ಕುಳ್ಳಿರ್ದು ನೋಡುತ್ತಿರಲು, ಮಣಿಮಂಜರಿ ಮೊದ ಲಾದ ರಾಜಕಾಂತೆಯರು ರಾಣಿಯಂ ಬಳಸಿ ಕೆಲಬಲದೊಳ್ ಕೈಲಾಗವಂ ಕೊಟ್ಟು, ಮೆಲ್ಲನೆ ಹಸೆಯ ಜಗುಲಿಯ ಸಮೀಪಕ್ಕೆ ಕರೆತಂದು, ಸಕಲ ವೀಣಾವೇಣು ಮೃದಂಗ ಕಾಹಳೀ ಢಕ್ಕಾದಿ ವಾದ್ಯಂಗಳು ಮೊಳಗೆ ಸುಮು ಹೂರ್ತದೊಳ್ ಸುವರ್ಣ ಕಮಲ ಕರ್ಣಿಕಾ ಮಧ್ಯದಲ್ಲಿ ಲಕ್ಷ್ಮಿಯಂತೆ ರಾಣಿಯಂ ಕುಳ್ಳಿರಿಸಿ, ಹಿರಿಯ ಮುತ್ತೈದೆಯರಿಂದ ಚಿನ್ನದಿಂ ರನ್ನದಿಂ ರಚಿಸಿದ ಐದು ಪೂಮೊಗ್ಗೆಗಳಂ ಮೊಲ್ಲೆ, ಮಲ್ಲಿಗೆ, ಸುರಗಿ, ಸುರಹೊನ್ನೆ, ಸಂಪಗೆಯೆಂಬ ಐದುಬಗೆ ಮೊಗ್ಗೆಗಳಂ ಮುಡಿಸಿ, ನವರತ್ನದ ಸೇಸೆಯ ನಿಕ್ಕಿ ಮಹಾರಾಜನರಸಿಯಾದ ಗುಣವತಿಗೆ, ನೀನು ಚಿರಂಜೀವಿಯಾದ ಪರಾ ಕ್ರಮಶಾಲಿಯಾದ, ರೂಪವಂತನಾದ ಸುಪುತ್ರನಂ ಪಡೆದು ಸುಖದಿಂದಿರೆಂದು ಹರಶಿ ಮಾಡುತ, ಸುವರ್ಣದಿಂ ಮಾಡಿದ ಪಂಚಫಲಂಗಳಂ ಕೂಡಿ, ನಾಳಿ ಕೇರ, ಕದಳೀ, ದಾಡಿಮ, ಮಾಕಂದ, ಖರ್ಜೂರಗಳೆಂಬ ಐದು ಫಲಂಗಳಂ ಸುವಾಸಿನಿಯರ ಕೈಮುಟ್ಟಿಸಿ, ರಾಣಿಯ ಮಡಿಲುತುಂಬಿ, ರಕ್ಷಾರ್ಥವಾಗಿ ಚಿತ್ರದಾರತಿಯಂ ಬೆಳಗಿ, ಬಂಧುವರ್ಗ ಮೊದಲಾದ ಸುವಾಸಿನಿಯರಂ, ಅರಿ ಶಿನ, ಕುಂಕುಮ, ಗಂಧಪುಷ್ಪಂಗಳಿಂದಲಂಕರಿಸಿ, ಅವರವರಿಗುಚಿತವಾದ, ಭೂಷಣಾಂಬರ ತಾಂಬೂಲಂಗಳಿಂದುಪಚರಿಸಿ, ಬಸಗೆಯಂ ಬೆಳಸಿ, ರಾಣಿ ಯಂ ಮಣಿಮಂಜರಿ ಚಂದ್ರಕಳೆ ಈರ್ವರೂ ಕೈಪಿಡಿದು ಕೈಲಾಗವಂ ಕೊಟ್ಟು ಅಂತಃಪುರದಲ್ಲಿರುವ ದೇವಿದೇವಿಯಾದ ತ್ರಿಪುರಸುಂದರಿಯ ಮಣಿ ಮಂದಿರಕ್ಕೆ ಕರತಂದು ಪ್ರಣಾಮಮಂಗೈಸಿ, ಮಹಾರಾಯನಿರುವ ಶಕುಂತ ಶಾಲೆಗೆ ಕರತಂದು, ರಾಯನಭಿಮುಖಕ್ಕೆ ಬರುವಲ್ಲಿ ರಾಣಿಯಾದ ಗುಣವ ತಿಯು ಪತಿಯ ಮೊಗವಂ ನೋಡಿ ನಾಚಿಗೆಗೊಳುತ್ತ, ಮಣಿಮಂಜರಿಯ ಮರೆಯಲ್ಲಿ ನಿಲ್ಲುತ, ಮೆಲ್ಲಮೆಲ್ಲನೆ ಬಂದು ರಾಯನ ಪಾದಕಮಲಂಗಳಲ್ಲಿ

ತನ್ನ ಮುಖಕಮಲಂ ಸೋಂಕುವಂತೆ ಎರಗಲು, ರಾಯನು ಚಿತ್ತರದ ಚೌಕಿಯಿಂದೆದ್ದು ಗುಣವತಿಯಂ ಕರಗಳಿಂದೆತ್ತಿ, ರಾಣಿಯ ಕರಕಮಲವಂ ತನ್ನ ಹಸ್ತದಿಂ ಪಿಡಿದು ನಿಜಕಾಂತೆಯರೊಡನೆ ಭೋಜನಶಾಲೆಯಂ ಕುರಿತು ತೆರಳಿದನು. ಅಲ್ಲಿರುವ ಸೇವಾಜನಂಗಳು ಸುವರ್ಣಕಲಶಗಳಿಂದ ನಿರ್ಮಲೋದಕವಂ ತಂದು ರಾಜದಂಪತಿಗಳ ಪಾದಗಳಂ ತೊಳೆದು, ಮೃದುವಾದ ವಸ್ತ್ರಂಗಳಿಂ ತೊಡೆಯಲಾಸಮಯದೊಳ್ ಮಣಿಪೀಠಂಗಳಲ್ಲಿ ಕ್ರಮವಾಗಿ ಕುಳ್ಳಿರ್ದು ರಾಯನುಂ, ರಾಣಿಯರುಂ ನಾನಾಬಗೆಯಾದ ಭಕ್ಷ್ಯಭೋಜ್ಯಂಗಳಂ ಸವಿಯುತ, ನಡನಡುವೆ ಕಾಂತೆಯರೊಡನೆ ಸರಸವಾದ ನುಡಿಗಳಂ ಪೇಳುತ್ತ ಭೋಜನವಂಗೈದು, ರಾಣಿಯ ಕ್ರೀಡಾಶಾಲೆಯಂ ಕುರಿತು ಕಾಂತೆಯರೊಡಗೂಡಿ ಬಂದು ಪರಮಸಂತೋಷದಿಂದಿರುವಾಗ ಮಣಿಮಂಜರಿಯು, ಚಂದ್ರಕಲೆ, ಕಮಲಿನಿ, ಕನಕಲತೆಯರು ರಾಯನಿಂಗಿತವಂ ತಿಳಿದು ಸ್ವಾಮಿಾ! ಈ ಶುಭದಿನದಲ್ಲಿ ಗುಣವತಿಯ ಮಂದಿರದೊಳ್ ಪವಳಿಸುವದುಚಿತವೆಂದು ಪೇಳಿ, ಆದಿದಂಪತಿಗಳಂತಿರುವ ರಾಣೀರಾಯರ ಪಾದಂಗಳಿಗೆರಗಿ ನಿಜಾಂತಃಪುರಂಗಳಂ ಪ್ರವೇಶಿಸಲು, ರಾಯನು ರಾಣಿಯೊಡನೆ ಸರಸಸಲ್ಲಾಪಂಗಳಿಂದಲು, ಪರಿಹಾಸಂಗಳಿಂದಲು, ಶೃಂಗಾರವಿಹಾರಂಗಳಿಂದಲಾರಾತ್ರಿಯೊಳ್ ಸುಖದಿಂದಿರುತ್ತಿರ್ದನು.

ಬಳಿಕ ಸೂರ್ಯೋದಯ ಸಮಯದಲ್ಲಿ ಮಂಜುವಾಣಿಯ ವೀಣಾಗಾನವಂ ಕೇಳಿ ರಾಯನೆಚ್ಚರಂಗೊಂಡು ನಿದ್ರಾಮಂದಿರದಿಂದೆದ್ದು ಗುಣವತಿಯು ಮಜ್ಜನಗೃಹದಲ್ಲಿ ಮಜ್ಜನಂಗೈದು, ಔಪಾಸನ ಭೋಜನಾದಿಗಳಂ ನೆರವೇರಿಸಿ, ವಸ್ತ್ರಾಭರಣಂಗಳಂ ಧರಿಸಿ, ಆಸ್ಥಾನಮಂಟಪಕ್ಕೆ ಬಿಜಯಂಗೈವ ಪರಿಯಂ ತಿಳಿದ ಗುಣವತಿಯು, ತಾನು ರಾತ್ರಿಯೊಳ್ ಕಂಡ ಕನಸಂ ಸಕಲಶಾಸ್ತ್ರತತ್ವಜ್ಞನಾದ ರಾಯನೊಡನೆ ಪೇಳಲಿಚ್ಛೈಸಿ, ಎಲೈ ಮಹಾರಾಯನೆ ನಿನ್ನ ಸಾನ್ನಿಧ್ಯದ ಮಹಿಮೆಯಿಂದ ನಾನು ಒಂದು ಕನಸಂ ಕಂಡೆನು. ಸ್ವಾಮಿಯು ದಿವ್ಯಚಿತ್ತದೊಳ್ತಂದು ಶಾಸ್ತ್ರಸಂಮತವಾಗಿ ಫಲವಂ ಅಪ್ಪಣೆಯಂ ಕೊಡಬೇಕೆಂದು ಪೇಳಲಾವಮಾತಂ ಕೇಳಿ ಸುಚರಿತ್ರಮಹಾರಾಯನು ಕನಸಂ ಕೇಳುವ ಆಸಕ್ತಿಯಿಂದ, ಎಲೌ ರಾಣಿಯೆ, ಕನಸಂ ಪೇಳೆಂದು ತಾನು ಪರ್ಯಂಕದೊಳ್ ಕುಳಿತು ರಾಣಿಯಂ ತನ್ನಂಕದೊಳ್

ಕುಳ್ಳಿರಿಸಿ ಕನಸಿನ ಪರಿಯಂ ಕೇಳಲು, ಆ ರಾಣಿಯು ಎಲೈ ರಾಯನೇ, ಬೆಳಗಾಗುವ ಸಮಯದಲ್ಲಿ ಬಿಳಿದಾದ ಚತುರ್ದಂತವಾದ ಮದಗಜವಂ, ಕುಣಿಯುವ ರತ್ನಹಾರಂಗಳಿಂದಲಂಕೃತವಾದ ಶುಭ್ರವಾದ ಕುದುರೆಯಂ, ಪೂರ್ಣನಾದ ಚಂದ್ರನಂ, ಫಲಿತವಾದ ವೃಕ್ಷವಂ, ಬೆಳಗುವ ಸೂರ್ಯ ಮಂಡಲವಂ, ಉನ್ನತವಾದ ಚಿನ್ನದ ಬೆಟ್ಟವಂ, ಉಕ್ಕುವ ಪಾಲ್ಗಡಲಂ, ಕೈಯೊಳ್ ಗಿಳಿಯಂ ಪಿಡಿದು ನಿಂತಿರುವೊರ್ವತರುಣಿಯಂ, ಕಂಡೆನೆಂದು ಪೇಳಿದ ಕನಸಂ ಕೇಳಿ ನಿಮಿಷಮಾತ್ರವಾಲೋಚನೆಯಂಗೈದು ರಾಯನು, ಎಲೌ ಕಾಂತೆಯೆ, ನಿನ್ನ ಭಾಗ್ಯಕ್ಕೆ ಎಣೆಯುಂಟೇ, ಎಂದು ಮೆಲ್ಲನೆ ಗಲ್ಲವಂ ಪಿಡಿದು ಮುದ್ದಿಟ್ಟು ನೀಪೇಳಿದ ಕನಸಿಗೆ ಫಲವಂ ಪೇಳುವೆನು, ಆಸಕ್ತಿಯಿಂ ಕೇಳು. ಗುಣವತಿಯೆ, ಚತುರ್ದಂತವಾದ ಮದಗಜದಿಂದ ಭೂಮಿಯನೆಲ್ಲವಂ ಭುಜಬಲದಿಂದ ಪಾಲಿಸುವನಾಗಿ, ಅಲಂಕೃತವಾದ ಕುದುರೆಯಿಂದ ಸಕಲದೇಶಂಗಳಂ ಜಯಿಸುವನಾಗಿ, ಪೂರ್ಣಚಂದ್ರನಿಂದ ಕೀರ್ತಿಯುಳ್ಳವನಾಗಿ, ಸೌಂದರ್ಯದಿಂದೊಪ್ಪಿ ಲೋಕಾನಂದವಂ ಮಾಡುವನಾಗಿ, ಫಲಿಸಿದ ವೃಕ್ಷದಿಂ ಕಲ್ಪವೃಕ್ಷದಂತೆ ಕೇಳಿದ ಅಭೀಷ್ಟಂಗಳಂ ಕೊಡುವ ದಾನಗುಣ ಉಳ್ಳವನಾಗಿ, ಸೂರ್ಯನಿಂ ಬಹುಪರಾಕ್ರಮವಂತನಾಗಿ ಹೊಂಬೆಟ್ಟದಿಂ, ಶಾಶ್ವತೈಶ್ವರ್ಯ ಧೈರ್ಯಯುಕ್ತನಾಗಿ, ಪಾಲ್ಗಡಲಿಂ, ಮಹಾಮಹಿಮನಾಗಿ, ಲೀಲಾಶುಕವಂ ಪಿಡಿದ ತರುಣಿಯಿಂ ರಾಜರಾಜೇಶ್ವರಿಯ ಪಾದಭಕ್ತನಾಗಿ ನಿನಗೆ ಕುಮಾರನುದಯಿಸುವನೆಂದು ಕನಸಿನ ಫಲಂಗಳಂ ಪೇಳಿ, ಮಿತಿಮಿರಿದಾನಂದದಿಂ ದೇವಿದೇವಿಯ ಸನ್ನಿಧಿಯೊಳೀದಿನ ವಿಶೇಷೋತ್ಸವಂಗಳಂ ಮಾಡಿಸುವದೆಂದು ಮಂಜುವಾಣಿಯಂ ನಿಯಮಿಸಿ, ರಾಣಿಯಂ ತಕ್ಕೈಸಿ, ಗುಣವತಿಯ ಮಂದಿರದಿಂ ತೆರಳಿ ಬರುತ, ಚಂದ್ರೋದಯಮಂ ಬಯಸುವ ಚಕೋರಂಗಳಂತಿರುವ ಸುಬುದ್ಧಿ ಮೊದಲಾದ ಮಹಾಧಿಕಾರಿಗಳಿಂದ ನಿಬಿಡಿತವಾದ ಆಸ್ಥಾನಮಂಟಪಕ್ಕೆ ಚಿತ್ತೈಸಿ, ರಾಜ್ಯವಿಚಾರವಂ ಮಾಡುತ್ತಿರುವನು. ದಿನಕ್ರಮದೊಳ್ ಶುಕ್ಲಪಕ್ಷದ ಚಂದ್ರನಂತೆ ಗುಣವತಿಯ ಗರ್ಭವು ಬೆಳೆಯುತ್ತ ಬರುವಲ್ಲಿ, ಮಹಾರಾಯನು ಮಂತ್ರಿಯಾದ ಸುಬುದ್ಧಿಯೊಡನೆ ಆಲೋಚಿಸಿ, ಪಾಂಡ್ಯದೇಶವನಾಳುವ ತಂಮ ಮಾವನಾದ ಮಲಯಧ್ವಜನೆಂಬ ಪೆಸರುಳ್ಳ ಗುಣವತಿಯ ತಂದೆಗೆ ಚಾರಮುಖದಿಂ

ರಾಣಿಯು ಗರ್ಭಧಾರಣ ವೃತ್ತಾಂತವಂ ಪತ್ರಿಕಾಮುಖದಿಂದ ತಿಳಿಯಿಸಲಾ ಮಲಯಧ್ವಜರಾಯನು ಪರಮಸಂತೋಷಭರಿತನಾಗಿ, ತನ್ನ ಪಟ್ಟದರಸಿ ಯಾದ ಮಾಲ್ಯವತಿಗೆ ಈ ವೃತ್ತಾಂತವಂ ತಿಳಿಯಪಡಿಸಲು, ಮಾಲ್ಯವತಿಯು ಸಂಭ್ರಮದಿಂದ ಮಗಳಂ ನೋಡಬೇಕೆಂದು ಪತಿಯೊಡನೆ ಪೇಳಲು, ಆಗ ಮಲಯಧ್ವಜನು ತನ್ನ ಪುತ್ರನಾದ ಮಂದಾರಧ್ವಜನಂ ಚತುರಂಗಸೇನೆಯಿಂ ದೊಡಗೂಡಿ ಸುಚರಿತ್ರಮಹಾರಾಯನಿಗೆ, ತನ್ನ ಪುತ್ರಿಯಾದ ಗುಣವತಿಗೆ, ಮಿಕ್ಕ ರಾಜಕಾಂತೆಯರಿಗೆ ಸಹಾ ನವರತ್ನಾಭರಣಂಗಳಂ, ಚೀನಚೀನಾಂ ಬರಾದಿ ವಸ್ತ್ರಂಗಳಂ, ಅಪೂರ್ವಂಗಳಾದ, ವಿಚಿತ್ರಂಗಳಾದ, ನಾನಾವಿಧ ವಸ್ತುಗಳಂ, ವಿಸ್ತಾರವಾಗಿ ಸನ್ನಹಿಸಿಗೊಟ್ಟು, ಮಾಲ್ಯವತಿಯಂ ಮಂದಾ ರಧ್ವಜನಂ ಸಹಾ ರತ್ನಪುರಕ್ಕೆ ಕಳುಹಿಸಲು, ತಾಯಿಯಾದ ಮಾಲ್ಯವತಿ ಯನೊಡಗೊಂಡು ರತ್ನಪುರವಂ ಕುರಿತು ತೆರಳಿ ಬರುವ ಮಂದಾರಧ್ವಜನು ನಗರಸಮೀಪಕ್ಕೆ ಬಂದ ವೃತ್ತಾಂತವಂ ಚಾರಮುಖದಿಂ ಕೇಳಿ ಸುಚರಿತ್ರ ಮಹಾರಾಯನು ಸಂತೋಷಸನ್ಮೈದಿ, ಮಂತ್ರಿಯಾದ ಸುಬುದ್ಧಿ ಮೊದಲಾದ ಸಾಮಾಜಿಕರಂ ಕುರಿತು ಚತುರಂಗಸೇನೆಯಿಂದೊಡಗೂಡಿ ಮಂದಾರಧ್ವ ಜನನಿದಿರುಗೊಂಡು ಕರಕೊಂಡು ಬರುವದೆಂದಾಜ್ಞಾಪಿಸಿದನು. ಸುಬುದ್ಧಿ ಮೊದಲಾದ ಸಾಮಾಜಿಕರು ಮಹಾರಾಜನ ಆಜ್ಞಾನುಸಾರವಾಗಿ ಚತುರಂ ಗಸೇನೆಯಿಂ ಸಹಿತರಾಗಿ ಹೊರಟು ರಾಜಮರ್ಯಾದೆಯಿಂದ ಮಂದಾರಧ್ವ ಜನಂ ಕಾಣಿಸಿಕೊಳ್ಳಲಾ ರಾಜಕುಮಾರನು, ಸುಬುದ್ಧಿಯಂ ಕೈವಿಡಿದು ಸುಚರಿತ್ರಮಹಾರಾಯನ ಕುಶಲವಂ ಕೇಳುತ್ತ ಸಂತೋಷದಿಂ ಬಂದು, ರತ್ನಪುರದ ಬಹಿರ್ಭಾಗದೊಳ್ ತನ್ನ ಸೇನಾನಿವೇಶವಂಗೈದು, ತನ್ನ ಮಾ ತೃವಾದ ಮಾಲ್ಯವತಿಯಂ ಕರದೊಯ್ದು ಅಂತಃಪುರವಂ ಪ್ರವೇಶಿಸಿ, ಗುಣ ವತಿಯಂ ಕಂಡು ಆನಂದಭರಿತರಾಗಿ ಇರುತ್ತಿರುವಲ್ಲಿ ನಾಲ್ಕನೆಯ ಮಾಸವು ಪೂರ್ಣವಾಗಿ ಐದನೆಯ ತಿಂಗಳು ಬರುತ್ತಿರಲು, ಮಲಯಧ್ವಜನ ರಾಣಿ ಯಾದ ಮಾಲ್ಯವತಿಯು ತನ್ನ ಮಗಳಿಗೆ ಬಳೆಯಂ ತೊಡಿಸುವ ಮಹೋ ತ್ಸವವಂ ಮಾಡಿಸುವೆನು. ಈ ಪ್ರಸ್ತುತವಂ ತನ್ನ ಅಳಿಯನಾದ ಸುಚರಿ ತ್ರಮಹಾರಾಯಂಗೆ ತಿಳಿಯಪಡಿಸಬೇಕೆಂದು ಚತುರೆಯಾದ ಮಂಜುವಾ ಣಿಯಂ ಕರೆದು ಎಲೌ ಬಾಲೆಯೆ, ಈಗ ಗುಣವತಿಗೆ ಐದನೆಯ ತಿಂಗಳಲ್ಲಿ

ಗೂಡಿ ದುಗುಡದಿಂ ಮಾಹಿಷ್ಮತಿಯಪ್ರೋಕ್ತ್ಯ ರಾಯನಿಗೆ ಮೊಗದೋರ ಲಾಗದತ್ಯಂತ ಕ್ಲೇಶದಿಂ ತರಹರಿಸಲಾರದೆ ಮಂತ್ರಿಯಮನೆಗೆಬಂದು, ಮಾಡುವ ಒಸಗೆಯಂ ತೌರುಮನೆಯುವರು ಮಾಡುವದುಚಿತವೆಂದು ನೀನು ರಾಯನ ಸಮಯವರಿತು ಬಿನ್ನವಿಸಿ ಶುಭಲಗ್ನವಂ ಕಾಲಜ್ಞ ರಿಂದ ತಿಳಿದು ಭೂಪಾಲನಪ್ಪಣೆಯುಂ ಕೊಂಡುಬರಬೇಕೆಂದು ಕುರುಳಂ ತಿದ್ದಿ ಕಳುಹಿಸಲು, ಮಂಜುವಾಣಿಯು ಮಾಲ್ಯವತಿಯ ಮಾತಿನಲ್ಲಿ ಗೌರವವಂ ಗ್ರಹಿಸಿ; ಬೇಗನೆ ಸರಸ್ವತೀವಿಲಾಸದ ಹಜಾರದೊಳ್ ಚಿನ್ನದ ಮಂಚದೊಳ್ ಕುಳಿತು ರಸಿಕರಾದ ಕಲಾನಿಧಿ, ವಿದ್ಯಾನಾಥ, ಭಾರತೀಮಣಿಹಾರ, ಶಾರದಾಶರೀರರೆಂಬ ವಿದ್ವಾಂಸರಿಂದೊಡಗೂಡಿ ನವ ರಸಮಂಜರಿ ಯೆಂಬ ಅಪೂರ್ವ ಪ್ರಕರಣವಂ ನೋಡುತ್ತಿರುವ ರಾಯ ನ ಸಮಯವನ್ನರಿತು ಸರಸ್ವತೀವಿಲಾಸವನ್ನೈದುತ್ತಿರುವ ಮಂಜುವಾ ಣಿಯಂ ಕಂಡು, ಕಲಾನಿಧಿ ಮೊದಲಾದ ವಿದ್ವಾಂಸರು ಮೆಲ್ಲನೆ ಎದ್ದು ದೂರದಲ್ಲಿ ನಿಂದಿರಲು, ಮಂಜುವಾಣಿಯು ಮೇಘಮಂಡಲದಿಂ ಬರುವ ಮಿಂಚಿನಂತೆ ಬಂದು ರಾಯನ ಪಾದಪದ್ಮಂಗಳಂ, ತನ್ನ ಮುಂಗುರುಳು ಗಳೆಂಬ ದುಂಬಿಗಳಂ ಕೂಡಿಸಿ ಫಲ್ಗಿನುತೆದ್ದು ನಿಂತಿರಲು, ರಾಯನು ಅ ವಳ ಜಡೆಯಂ ಪಿಡಿದು ಮತ್ತೇನುಕಾರ್ಯವೆಂದು ಕೇಳಲಾ ಮಂಜು ವಾಣಿಯು ಕೈಮುಗಿದುಕೊಂಡು ಎಲೈ ನೃಪತಿತಿಲಕನೆ, ಮಲಯಧ್ವಜನ ರಸಿಯಾದ ಮಾಲ್ಯವತೀದೇವಿಯು ಸ್ವಾಮಿಯೊಡನೆ ಬಿನ್ನೈಸಬೇಕೆಂ ದೊಂದುಮಾತಂ ಪೇಳಿರುವಳು. ಅದೆಂತೆನೆ ಐದನೆಯ ತಿಂಗಳೊಳ್ ಗುಣವತೀದೇವಿಗೆ ಬಳೆಯಂತೊಡಿಸುವ ಮಹೋತ್ಸವವಂ ತೌರುಮನೆ ಯವರು ಮಾಡಬೇಕೆಂದು ಹಿರಿಯರು ಪೇಳುವರು. ಅದರಿಂ ರಾಯಂಗೆ ಬಿನ್ನವಿಸಿ ಶುಭಲಗ್ನವಂ ತಿಳಿದು ಅಪ್ಪಣೆಯಂ ಕೊಂಡುಬಾರೆಂದು ನ ನ್ನಂ ಕಳುಹಿಸಿದಳು. ಎಂದ ಮಂಜುವಾಣಿಯ ನುಡಿಗೆ ಮನದೊಳ್ ಸಂತೋಷವಂಗೊಂಡು ಮರೆಯೊಳಿರುವ ವಿದ್ವಾಂಸರಂ ಕರೆದು ಶಾಸ್ತ್ರ ವಂ ನೋಡಿಸಿ ನಾಳೆ ಶುಭದಿನವಾಗಿರುವದು. ಈ ಮಹೋತ್ಸವವಂ ಬೆಳಸಿಸಲಿ; ಎಂದು ನುಡಿದು ರಹಸ್ಯವಾಗಿ ಕೆಲವುಮಾತಂಪೇಳಿ ಕಳು

ಹಿಸಲಾಗ ಮಂಜುವಾಣಿಯು ರಾಣಿಯಂತಃಪುರದಲ್ಲಿರುವ ಮಾಲ್ಯವತಿ ಯೊಡನೆ ಭೂಪಾಲನಂತರಂಗವೃತ್ತಿಯಂ ತಿಳುಹಿಸಿ ನಾಳೆ ಶುಭದಿವಸ ವೆಂದು ಪೇಳಲಾ ಮಾಲ್ಯವತಿಯು ಸಂತೋಷದಿಂ ತಡೆಯದೆ ಎದ್ದು, ಮಗನಾದ ಮಂದಾರಧ್ವಜನಂ ಕರೆಸಿ ಎಲೈ ಸುಕುಮಾರನೆ, ನಿನ್ನ ಸ ಹೋದರಿಯಾದ ಗುಣವತಿಗೆ ಒಸಗೆಯಂ ಬೆಳೆಯಿಸಬಹುದೆಂದು ನಿನ್ನ ಭಾವನ ಅಭಿಪ್ರಾಯುವಂ ತಿಳಿದೆನು. ಆದಕಾರಣ ನಮ್ಮದೇಶದಿಂ ತಂದಿ ರುವ ವಿಚಿತ್ರವಸ್ತುಗಳೆಲ್ಲವಂ ಬೇಗ ತರಿಸೆಂದು ಪೇಳಲಾ ಮಂದಾರಧ್ವ ಜನು ಕರವಂ ಮುಗಿದು ನಿಜನಿವಾಸಕ್ಕೆ ಬಂದು ತನ್ನ ಮಂತ್ರಿಯೊಡನೆ ಮಾಲ್ಯವತಿ ನಿರೂಪಿಸಿದರ್ಥವಂ ಪೇಳಿ, ನೀನು ಶುಭವಾದ್ಯಂಗಳಿಂದ ನಗರದಲ್ಲಿ ಸರ್ವರನ್ನೂ ಉತ್ಸವಕ್ಕೆ ಕರೆದುಬರುವದೆಂದು ಕಟ್ಟುಮಾ ಡಲಾ ಮಂತ್ರಿಯು ತಮ್ಮ ಕಟಕದಿಂ ಹತ್ತುಸಾವಿರ ಗಜಗಳಿಂ ದ, ಕೋಟಗಳಿಂದ ಒಂಟೆಗಳಿಂದ, ಹೊರೆಯಾಳುಗಳಿಂದ, ಅಪರಿಮಿತಧ ನವಂ,ರತ್ನಾಭರಣಂಗಳಂ, ವಿಚಿತ್ರದುಕೂಲಂಗಳಂ, ದ್ವೀಪಾಂತರಂ ಗಳಿಂದತರಿಸಿದ ಕೌತುಕಪದಾರ್ಥಂಗಳಂ, ಪರಿಮಳದ್ರವ್ಯಂಗಳಂ, ಫಲಂಗಳುಮೊದಲಾದ ಶುಭವಸ್ತುಗಳಂ, ವಿಸ್ತಾರವಾಗಿ ತರಿಸಿ. ಮಂತ್ರಿಪುರೋಹಿತರು ಶುಭವಾದ್ಯಂಗಳಿಂದ, ರಾಜಬಂಧುವರ್ಗಗ ಳಂ ಕರೆದು ಮಂದಾರಧ್ವಜಂಗೆ ಬಿನ್ನೈಸಲು, ಬಳಿಕ ಅಂತಃಪುರ ದೊಳ್ ಮಾಲ್ಯವತಿಯುಸುಚರಿತ್ರ ಮಹಾರಾಯನ ಕಾಂತೆಯರೆಲ್ಲ ರಂ ಕರೆತಂದು ಗುಣವತಿಗೆಮಂಗಳಸ್ನಾನವಂನಡಿಸಿ, ನೂತನಂಗಳಾ ದ ಆಭರಣಗಳಂ ಅಭಿಲಾಷೆಯಿದ್ದಂತೆ ಅಲಂಕರಿಸಿ ಪಚ್ಚೆಯ ಮ ಣಿಗಳಂ ಬಿಗಿದ ಗಿಳಿಯಸಾಲಿನ ಸರಿಗೆಯಿಂದಲಂಕೃತಮಾದ ಉಲಾ ರದಲ್ಲಿ ಕುಳ್ಳಿರಿಸಿ, ಬಳೆಯುಮಲಾರವಂ ಪೂಜಿಸಿ, ವೃದ್ಧೆಯರಾದ ಸುವಾಸಿನಿಯರಿಗೆ ಬಳೆಗಳಂತೊಡಿಸಿ, ರಾಣಿಯಾದ ಗುಣವತಿಗೆ ಶುಭಲ ಗ್ನದೊಳ್ ನವಗ್ರಹಮಂಡಲಂಗಳತಿಂರುವ ನವರತ್ನ ಬಳೆಗಳಂತೊಡಿ ಸಿ, ಬೇಕಾದವಸ್ತ್ರಾಭರಣಗಳಿಂದ ಜನರಂತಣಿಯಿಸಿ, ವೈಯ್ಯಿಯನೋ ಯದೆ ಮೆಲ್ಲಗೆ ಹುವ್ವಿನಂತಿರುವ ಮಗನಂಪಡೆ ಎಂದು ಮುಡಿಯೊಳ್

ಮಂಗಳಾಕ್ಷತೆಯನಿಕ್ಕಿ ಮಾನಿನಿಯರು ಮಂಗಳಧವಳಾರವ ಪೂರ್ವಕ ಮಾಣಿಕದಾರತಿಯಂಬೆಳಗಿ, ಮಹೋತ್ಸವವಂಬೆಳೆಯಿಸಿ ಮಾಲ್ಯವತಿ ಮಣಿಮಂಜರಿಮೊದಲಾದ ರಾಣಿಯರಿಗೆಲ್ಲರಿಗು ಗುಣವತಿಗಿಂತಧಿಕವಾಗಿ, ತಮ್ಮದೇಶದಿಂ ತಂದ ರತ್ನಭೂಷಣಾಂಬರಗಳಿಂದುಪಚರಿಸಿ, ಮಹಾರಾಜ ಯೋಗ್ಯಂಗಳಾದ ಮಣಿಭೂಷಣಾಂಬರಗಳಂತೆಗೆದುಕೊಂಡು ಮಂದಾರ ಧ್ವಜನು ನರೇಂದ್ರನ ಸಮ್ಮುಖಕ್ಕೆಪೋಗಿ ಸಮರ್ಪಿಸಿ ಸಾಷ್ಟಾಂಗ ಪ್ರ ಣಾಮವಂಗೈಯಲು, ನರೇಂದ್ರನು ಆಗ ತೂಗುಮಂಚದಿಂದಿಳಿದು ಮಂ ದಾರಧ್ವಜನ ಕರವಂಪಿಡಿದು ರಾಣಿಯಮಂದಿರಕ್ಕೆಬಂದು ಮಾಲ್ಯವತಿಗೆ ನ ಮಸ್ಕಾರವಂಮಾಡಿ ಬರುವ ನರಪತಿಗೆ ರಾಣಿಮೊದಲಾದ ರಾಜಕಾಂತೆಯ ರೆಲ್ಲರು ವಂದಿಸಲು; ಭೂಪಾಲನು ಪರಮಹರ್ಷದಿಂ ತನ್ನ ರಾಣಿಯರೊ ಡನೆ ಭೋಜನಶಾಲೆಯಲ್ಲಿ ಸಕಲ ಮಧುರಾಹಾರಗಳಿಂದ ಮಂದಾರಧ್ವಜ ನಂ ಮಂದಹಾಸದಿಂ ಹಾಸ್ಯವಮಾಡುತ್ತ ಭೋಜನಂಗೈದು, ಬಳಿಕ ಮಂದಾರಧ್ವಜನಂ ನಿನ್ನ ಕಟಕವಂಕುರಿತು ತೆರಳೆಂದು ಅಪ್ಪಣೆಯನ್ನಿ ತ್ತು, ಚಂದ್ರಕಳೆಯ ಕೈಪಿಡಿದು ಚಂದ್ರಶಾಲೆಯಂ ಸೈದಿ, ಆ ರಾತ್ರಿಯೊ ಳಲ್ಲಿ ಸುಖದಿಂದಿರುತಿರ್ದನು. ಆ ಬಳಿಕ ಅಂತಃಪುರದಲ್ಲಿ ದಿನಕ್ರಮದಿಂ ದೇಳನೆಯ ತಿಂಗಳು ಆಗುತ್ತಿರುವಲ್ಲಿ ಒಂದು ಶುಭದಿನದೊಳ್ ಗುಣ ವತಿಗೆ ಮಂಗಳಸ್ನಾನವಂಮಾಡಿಸಿ, ರಂಗಮಂಟಪದಲ್ಲಿ ರಾಣಿಯರೆಲ್ಲರು ಕೂಡಿ ಆರತಿ ಅಕ್ಷತೆಯಂಮಾಡಿ, ಅಂತಃಪುರದ ಉಪವನಕ್ಕೆ ಎಲ್ಲರೂ ಗುಣವತಿಯೊಡನೆ ಬಂದು, ದ್ರಾಕ್ಷೆಚಪ್ಪರದ ಕೆಳಗಣ ಚಂದ್ರಕಾಂತಶಿಲೆಯ ಜಗುಲಿಯಮೇಲೆ ಸಾಲುಸಾಲಾಗಿ ಕುಳಿತು, ಸುತ್ತಲಿರುವ ಪಾರಿಜಾತಾದಿ ತರುಗಳಲ್ಲಿ ಅರಳುವ ಪುಷ್ಪಗಳವಾಸನೆಯನಾಘ್ರಾಣಿಸುತ ಅಲ್ಲಲ್ಲಿ ಪ ವಳದ ದೋಣಿಗಳಲ್ಲಿ ಹರಿಯುವ ಪನ್ನೀರುಗಳಿಂದ ಕೈಗಳಂತೊಳೆದು, ಚಂದ್ರರೇಖೆಯ ಸುತ್ತುವರಿದ ತಾರೆಗಳಂತೆ ಗುಣವತಿಯಂಬಳಸಿದ ಬಳ ಗವೆಲ್ಲರಿಗು ರತ್ನದ ತಟ್ಟೆ ಬಟ್ಟಲುಗಳಂ ನೂರಾರು ಬೇರೆಬೇರೆ ಅಣಿಮಾ ಡಿದ ವಜ್ರದತಟ್ಟೆಯೊಳ್ ದಧ್ಯನ್ನವಂ, ವೈಡೂರ್ಯದ ಪಾತ್ರೆಗಳೊಳ ಗೆ ಮುದ್ಗಾನ್ನವಂ, ಗೋಮೇಧಿಕದ ಬಟ್ಟಲುಗಳಲ್ಲಿ ಗೋಘೃತಾನ್ನವಂ

ಪುಷ್ಯರಾಗದ ಪಾತ್ರೆಗಳಲ್ಲಿ ಶರ್ಕರಾನ್ನವಂ, ಪದ್ಮರಾಗದ ಬಟ್ಟಲುಗಳಲ್ಲಿ ಕೇಸರಾನ್ನವಂ, ಪಚ್ಚೆಯಪಾತ್ರೆಗಳೊಳ್ ಚಿತ್ರವಾದ ನಾನಾಶಾಕಂಗಳಂ ಬಡಿಸಿ, ನೀಲಮಣಿಮಯ ಕಲಶಂಗಳಲ್ಲಿ ತಿಳಿನೀರಂ ತುಂಬಿರಿಸಿರುವದಂಕಂಡು, ಇವು ಬಡಿಸಿರುವವು, ಇವು ಬಡಿಸಿರುವವಲ್ಲ, ಎಂದು ಕುರುಹುಕಾಣದೆ ಭ್ರಮಿಸುವ ಬಾಲೆಯರಂ, ಲೀಲೆಯಿಂದ ಪರಿಹಾಸವಂ ಮಾಡುತ್ತ, ಎಲ್ಲರಂ ಉಲ್ಲಾಸದಿಂದ ನಾನಾಬಗೆಯಾದ ಭಕ್ಷಭೋಜ್ಯಲೇಹ್ಯ, ಚೋಷ್ಯ, ಪಾನೀಯಂಗಳೆಂಬ ಪಂಚವಿಧಂಗಳಾದ ಪಕ್ವಪದಾರ್ಥಂಗಳಂ, ಸಂಬಾರಂಗಳಿಂದ ಕೂಡಿ ಉಪ್ಪುಪ್ಪೂರಿ ಇದಿರಾಗಿ ಜೋಲುವ ಹುಳಿಮಾವು, ನಿಂಬೆ, ಹೇರಳೆ, ನೆಲ್ಲಿ,ಹುಣಸೆ,ಅಮಟೆ, ಅರೆಮಾದಳ ಅಳಲೆ, ಅಗಸೆ, ಹಾಗಲ, ತೊಂಡೆ, ಸೊಂಡೆ, ಕಸ್ತೂರಿಬಿಲ್ವ, ಕರೆಮೆಣಸು ಕಾಯಿಮೆಣಸು, ಯಾಲಕ್ಕಿ, ಮೆಕ್ಕೆ, ಗಣಕೆ ಮೊದಲಾದ ಘಮಘಮಿಸುತ್ತ, ಚಿತ್ರವರ್ಣದಿಂದೊಪ್ಪುವ ಉಪ್ಪಿನಕಾಯಿಗಳಂ, ಕೈಗಳಿಂಗಿಡಗಳಿಂದ ಬಿಡಿಸಿ ಚಪ್ಪರಿಸಿ ಸವಿಯುತ್ತ ಆಯಾಯ ಗಿಡಂಗಳಲ್ಲಿಯೇ ಪರಿಕರವಂತುಂಬಿ ಪಾಕವಂಮಾಡಿದ ಬದನೆ, ಪಡವಲ, ಮಣಿಹಾಗಲ, ಸವಿಗುಂಬಳ, ನೆಲದವರೆ, ಸೌತೆ, ಗೋವರ್ಧನ, ಬೆಂಡೆ ಮೊದಲಾದ ವ್ಯಂಜನಂಗಳಂ ಮೆಲ್ಲಮೆಲ್ಲನೆ ಬಡಿಸಿದ್ದ ಅರದಂತೆಮೆಲ್ಲುತ ಅಮೃತದಂತಿರುವ ಸೀಮಾವು, ನೇರಳೆ, ಬಾಳೆ, ಕಿರುಕಿತ್ತಳೆ, ಬೇಲ, ಹಲಸು, ದಾಳಿಂಬ, ಸೇಬು, ಶೀಬೆ, ಅಂಜೂರ, ಪನ್ನೇರಳೆ, ಕಕ್ಕರಿಕೆ, ಪಿಣಿಕೆ, ಚಕ್ಕೊತ್ತ, ದ್ರಾಕ್ಷೆ, ಖರ್ಜೂರ ಮುಂತಾದ ಮಧುರಫಲಂಗಳಂ ಸಾವಕಾಶದಿಂಮೆಲ್ಲುತ ಎಳನೀರು ತಿಳಿನೀರು ಇಕ್ಷುರಸ ದ್ರಾಕ್ಷಾರಸ ಗೋಕ್ಷೀರ ಮಕರಂದ ಶರ್ಕರಾದಿಪಾನಕಂಗಳಂ ಇಂತಲ್ಲದೆ ಮಧುರ ಫಲಂಗಳಿಂದತೆಗೆದು ರಸಂಗಳಂ ಪಾನಮಂಗೈಯ್ಯುತ ಅಲ್ಲಲ್ಲಿ ಕನಕಮಯಂಗಳಾದ ಕಾರಂಜಿಗಳಲ್ಲಿ ಕೈಗಳಂತೊಳೆದು ಮಲ್ಲಿಗೆ ಮಂಟಪಂಗಳಿಗೆ ಬಂದು ಹುವ್ವುಗಳಂ ಚೆಲ್ಲಿದುಂತಿರುವ ಬಿಸಲುಕೊಡದ ನೆರಳಲ್ಲಿಕುಳಿತು ಎಳದಾದ ಕಡಲೆ ಅವರೆಗಣೆ ಹೆಸರು ಕುಸುಮೆ ಮೊದಲಾದ ಹುರುಕಲಂ ರುಚಿನೋಡುತ ನಾನಾಜಾತಿ ತರುಗಳಂಕಂಡು ಅಚ್ಚರಿಗೊಳುತ ಮೆಲ್ಲನೆತಿರುಗುತ ಕಪ್ಪುರವೀಳ್ಯೆಯವಂಸವಿಯು

ತ ಅರಳುತ್ತಿರುವ ಪೂವುಗಳಂ ತುರುಬುಗಳಲ್ಲಿ ಸಿಕ್ಕಿಸುತ ಕುಣಿಯು
ವ ನವಿಲುಗಳಂ ಕೂಗುವ ಕೋಗಿಲೆಗಳಂ ಹಾರಾಡುವ ಪಾರಾವತಂಗಳಂ
ನಡೆಯುವ ಗಿಣಿಗಳಂ ನೆಗೆದಾಡುವ ಮರಿಹುಲ್ಲೆಗಳಂ ಕಂಡು ಅಚ್ಚರಿಗೊ
ಳುತ ಬರುವಾಗ ಎಳೆಪವಳದ ಬಳ್ಳಿಗಳಿಂದ ಕಟ್ಟಿದ ಉಯ್ಯಾಲೆಗಳೊ
ಳ್ ಜೊತೆಜೊತೆಯಾಗಿ ಕುಳಿತು ತೂಗಾಡುತ ಕಿರುರವಗಳಿಂದ ರಾಗಾ
ಲಾಪವಂಗೈಯುತ ಸಂಜೆಯಾಗಿಬರುವದಂಕಂಡು ಮಂದಿರಂಗಳಿಗೆ ಪೋ
ಗುವಾ ಎಂದು ಮಣಿಮಂಜರಿ ಚಂದ್ರಕಳೆ ಮೊದಲಾದ ರಾಜಕಾಂತೆಯರು
ರಾಣಿಯಾದ ಗುಣವತಿಯಂ ಕರೆದುಕೊಂಡು ನಿಜಾಂತಃಪುರವಂ ಸೇರಿ
ಸುಖದಿಂದಿರುವ ದಿನಕ್ರಮದೊಳ್ ಎಂಟನೆಯ ತಿಂಗಳು ಪ್ರಾಪ್ತ
ವಾಗುತ್ತಿದ್ದುದು. ಒಂದಾನೊಂದುದಿನ ಮಾಲ್ಯವತಿಯು ಶೀಘ್ರದಲ್ಲಿ
ಸೀಮಂತವಾಗಬೇಕು, ಕಾಲಾವತಿ ಕ್ರಮದಿಂದ ಕರ್ಮಲೋಪವು ಬರು
ವದೆಂದು ಮಂಜುವಾಣಿಯಂ ಮಹೀಪಾಲನಬಳಿಗೆ ಪೋಗಿ ಬಿನ್ನವಿಸೆಂದು
ಪೇಳಲಾ ಮಂಜುವಾಣಿಯು ರಾಯನಾಸ್ಥಾನಮಂಟಪವಂ ಕುರಿತು ಬಂ
ದು ರಾಯನೇ ನಿನ್ನರ್ಧಾಂಗಲಕ್ಷ್ಮಿಯಾದ ರಾಣಿಗೆ ಎಂಟುತಿಂಗಳು
ತುಂಬುತಲಿದೆ. ತ್ವರೆಯಿಂದ ಸೀಮಂತವಂ ಬೆಳಯಿಸಿ ನೇತ್ರಾನಂದವಂ
ಮಾಡಬೇಕೆಂದು ಬಿನ್ನವಿಸಲು, ಆ ಮಾತಂ ಕೇಳಿ ಮುಗುಳುನಗೆಯಿಂದ
ಜ್ಯೋತಿಶ್ಯಾಸ್ತ್ರವಂ ಕೂಲಂಕಷವಾಗಿ ತಿಳಿದ ಗಣಿತಜ್ಞರಂ ಕರೆಯಿ
ಸಿ, ಸೀಮಂತಕ್ಕೆ ಶುಭದಿನವಂ ನಿಶ್ಚೈಸಿ, ಆದಿನದಲ್ಲಿ ಸತಿಯೊಡನೆ ರಾಜ
ಪದ್ಧತಿಗಳಿರುವಂತೆ ಯಜ್ಞೀಯ ಶಾಸ್ತ್ರ ಮೊದಲಾಗಿ ಮಜ್ಜನಂಗೈದು
ವಿಚಿತ್ರದುಕೂಲಂಗಳಂ ಧರಿಸಿ, ಕಿರೀಟ ಮೊದಲಾದ ಆಭರಣಗಳಂ ತೊ
ಟ್ಟು, ಅರಸಿಯೊಡನೆ ಅಷ್ಟಮಂಗಳದ್ರವ್ಯ ಪುರಸ್ಸರವಾಗಿ ಹರಸಿ
ಪಾಡುವ ಮುತ್ತೈದೆಯರುಗಳಿಂದಲುಂ, ಚಾಮರಂಗಳುಬೀಸುವ, ಕೈವಾ
ರವುಂ ಪೇಳುವ ಸಖೀಜನಗಳಿಂದೊಡಗೂಡಿ ಅನೇಕಪರಿಯಾದ ವಾದ್ಯ
ಘೋಷದಿಂ ಅತ್ಯಂತ ರಮಣೀಯಮಾದ ರಂಗಮಂಟಪದ ಹಜಾರಕ್ಕೆ
ಬಂದು ರಾಣಿಯ ಕರವಂ ಪಿಡಿದು ದೇದೀಪ್ಯಮಾನವಾದ ರತ್ನ ಪೀಠದೊ
ಳ್ಕುಳಿತು, ವೇದಮಂತ್ರಗಳಂ ಪುರೋಹಿತ ಪುರಸ್ಸರವಾಗಿ ಪುಂಸು

ವನ ಸೀಮಂತಂಗಳಂ ಯಥಾಶಾಸ್ತ್ರವಾಗಿ ಮಾಡಿ ವೈಣಿಕಶ್ರೇಷ್ಠರ ವೀಣೆಗಳಿಂದ ವೀಣಾಗಾನವಂ ಕೇಳುತ್ತ ವಸ್ತ್ರಭೂಷಣಾದಿಗಳಿಂದವರಂ ಸತ್ಕರಿಸಿ, ಬ್ರಾಹ್ಮಣರು ಮೊದಲಾದ ಅರ್ಥಿಜನಂಗಳಿಗೆ ಅವರವರಭಿಪ್ರಾಯಾನುಸಾರವಾಗಿ ಧನಕನಕಾದಿ ವಸ್ತುಗಳಂ ಕೊಟ್ಟು ಆಶೀರ್ವಚನವಂ ಗೈಸಿಕೊಂಡು ಅಂತಃಪುರವನ್ನೈದಿ ಬಂಧುಜನಂಗಳೊಡಗೂಡಿ ಶೋಭನಂಗೈದು, ಹಾಗೆಯೇ ಶಯನಾಗಾರವಂ ಪ್ರವೇಶಿಸಿ, ಗುಣವತಿಯೊಡನೆ ವಿಲಾಸದಿಂದ ಎಲೌ ಗುಣವತಿಯೇ ನೀನು ಶರೀರದಲ್ಲಿ ಸತ್ವಗುಣವಂ, ನಡಿಗೆಯಲ್ಲಿ ರಾಜಸವಂ, ಸ್ತನಾಗ್ರಗಳಲ್ಲಿ ತಮೋಗುಣವಂ, ಧರಿಸಿರುವವರಿಂದ ನಿನಗೆ ಗುಣವತಿಯೆಂಬೋ ಹೆಸರು ಸಾರ್ಥಕವಾಗಿರುವದು ಜಗತ್ತಿನ ಬಡತನಹೋದಂತೆ ನಡುವಿನ ಬಡತನಹೋಗಿ ಎಲ್ಲರಿಗೂ ಆನಂದಾತಿಶಯವಾಹಂತೆ ಮಧ್ಯಭಾಗವು ವೃದ್ಧಿಯನ್ನೈದಿತು. ಶತ್ರುಗಳ ಧೈರ್ಯವು ನಮ್ಮಿರ್ವರಿಗೆ ಪುತ್ರರಿಲ್ಲವೆಂಬ ವ್ಯಸನವು ಭೂಮಿಗೆ ಬಹುಪತಿಗಳಿಂದಾದ ಚಿಂತೆಯು ಏಕಕಾಲದಲ್ಲಿ ಪೋದುದೆಂಬಂತೆ ತ್ರಿವಳಿಗಳು ಮಾಯವಾದವು. ಎಂಬ ವಚನಗಳಿಂದ ಗುಣವತಿಯಂ ಸಂಸಂತೋಷಗೊಳಿಸಿ, ಕನಕಲತೆಯ ಕೈಯ್ಯಂಪಿಡಿದು ಉಪವನವಂ ಪ್ರವೇಶಿಸಿ, ನಾನಾವಿಧ ಶೃಂಗಾರವಿಹಾರಂಗಳಂ ಮಾಡುತ ವಿನೋದದಿಂದಿರುತಿದ್ದನು. ಬಳಿಕ ಹತ್ತನೆಯ ತಿಂಗಳಲ್ಲಿ ಒಂದಾನೊಂದುದಿನ ರಾತ್ರಿ ಎರಡನೆಯ ಝಾಮ ಪ್ರಾರಂಭವಾಗುತಿರಲು, ರಾಣಿಗೆ ಗರ್ಭವೇದನೆ ಕಾಣಲು, ರಾಯನಾವರ್ತಮಾನವಂ ಕೇಳಿ ಪ್ರಧಾನಿಯಾದ ಸುಬುದ್ಧಿಯಂ ಕರೆಯಿಸಿ, ಈಗ ಅಂತಃಪುರದಲ್ಲಿ ಪ್ರಸವಸಮಯವಾದುದರಿಂದ ಅಲ್ಲಿಗೆ ಬೇಕಾದ ವಸ್ತುಗಳಂ ಕಳುಹಿಸಿ, ಹೊರಗೆ ಮಹೋತ್ಸವಕ್ಕೆ ಬೇಕಾದ ವಸ್ತುಗಳಂ ಸನ್ನಹಿಸಿ ಇರುವದೆಂದಾಜ್ಞಾಪಿಸಲು, ಆ ಸುಬುದ್ಧಿಯು ಮಹಾಪ್ರಸಾದವೆಂದು ಬಂದು ಕಾವಲುಕಟ್ಟುಗಳ ಜನಗಳು ಮಂತ್ರಗಾರರು ವೈದ್ಯರು, ಹೆರಿಗೆಕತ್ತಿ, ಮಂತ್ರಿಸಿದ ಮಹಾತ್ಮೆಲಂಗಳು, ತಾಯಿತಿಗಳು, ಸಿದ್ಧಿಕಾಲದೊಳ್ ಮಾಡಿದ ಮುಡಿಬಳೆ, ವಿಭೂತಿ, ಮಣಿಗಳು, ಬೆತ್ತ, ನಾಲುಗರಿ, ಅಂಕೋಲೆಕಡ್ಡಿ, ಬೇವಿನಸೊರಡು,

ಗರಿಕೆ, ಮೊಂಡಗಳ್ಳಿ, ಜೇವಿನಸೊಪ್ಪು, ಮೂಲಿಕೆಗಳು, ಆರಣ್ಯವಾಸ
ಕರಾದ ಬ್ರಾಹ್ಮಣರುಗಳು ಮೊದಲಾದ ಸಕಲವಂ, ಸೂಲಗಿತ್ತಿಯಾದ
ವಂಶವರ್ಧಿನೀಎಂಬವಳ ಸ್ವಾಧೀನವಲ್ಲಿರುವಂತೆ ಕಳುಹಿಸಿ, ಇಂತಲ್ಲದೆ,
ಹೊರಗೆ ಬೀಜಧಾನ್ಯಂಗಳಂ, ಅಲಂಕೃತವಾದ ಗೋಸಮೂಹವು,
ಫಲಪುಷ್ಪಂಗಳಂ, ಧನಕನಕ ಮಣಿಭೂಷಣಾಂಬರಗಳಂ ಸಜ್ಜುಮಾಡಿ
ಭಂಡಿಗಳಲ್ಲಿ ಸಕ್ಕರೆಯಂ ತುಂಬಿಕೊಂಡು ಕೋಟೆ ಕೊತ್ತಲಗಳ ಮೇಲೆ
ಫಿರಂಗಿ ಮೊದಲಾದ ಯಂತ್ರವಿಶೇಷಂಗಳಂ ಸಿದ್ಧಪಡಿಸಿ, ಸುಬುದ್ಧಿಯು
ಗಣಿತಜ್ಞರೊಡಗೊಂಡು ಅಂತಃಪುರದ ಪುರೋಭಾಗದಲ್ಲಿ ಕುಳಿತಿರ್ಪ
ರಾಯಂಗೆ ಸಕಲವಂ ಸನ್ನಾಹಿಸಿ ಇದೇನೆಂದು ವಿಜ್ಞಾಪನಂಗೈಯ್ಯುತ್ತ
ಲಿರುವ ಸಮಯದೊಳ್ ಅಂತಃಪುರದಲ್ಲಿ ಜಲೋದಯ ಶೀರ್ಷೋದ
ಯಂಗಳಾಗಿ ಪಾರ್ಥಿವಸಂವತ್ಸರದ ಆಶ್ವಯುಜ ಶುದ್ಧ ದಶಮೀ ಮಂಗ
ಳವಾರ ರಾತ್ರಿ ಹದಿನೆಂಟನೇ ಘಳಿಗೆಯಲ್ಲಿ, ಶ್ರವಣನಕ್ಷತ್ರದಿಂ ಕೂ
ಡಿದ ಸಿಂಹಲಗ್ನದೊಳ್ ಕೋಟಿಸೂರ್ಯ ಪ್ರಕಾಶಮಾನವಾದ ಪುತ್ರ
ರತ್ನವು ಜನಿಸಲು, ಆಕಾಲದಲ್ಲಿ ಭೂಮಿಯು ಫಲಿತವಾಗಿ ಪುಷ್ಪಿತಂಗ
ಳಾದ ವನಂಗಳಿಂದ, ಸಸ್ಯಂಗಳಿಂದ ಒಪ್ಪಿದುದು. ಗಗನಮಂಡಲವು
ಪ್ರಸನ್ನಮಾದುದು. ದಿಕ್ಕುಗಳು ಪ್ರಕಾಶಿಸಿದವು. ಮಂದಮಾರುತವು
ಮೆಲ್ಲನೆ ಬೀಸಿತು. ದಿಕ್ಪಾಲಕರು ಸಂತುಷ್ಟರಾದರು. ಋಷಿಗಳು ಆ
ಶೀರ್ವಾದವಂ ಗೈದರು. ದೇವದುಂದುಭಿಗಳು ಮೊಳಗಿದವು. ಗಂಧರ್ವ
ರು ಗಾನವಂಗೈದರು. ಅಪ್ಸರಸ್ತ್ರೀಯರುಗಳು ನಾಟ್ಯವನಾಡಿದರು ಕಿಂ
ಪುರುಷ ಮೊದಲಾದವರು ಪುಷ್ಪವೃಷ್ಟಿಯಂಕರೆಯುವ ಸಮಯ
ದೊಳ್ ಆಕಾಶದಲ್ಲಿ ಅಶರೀರವಾಣಿಯು ಈ ಕುಮಾರನಿಗೆ ಸುಗಂಧ
ರಾಜನೆಂದು ಹೆಸರಿಡುವದೆಂದು ಮೂರುಬಾರಿ ನುಡಿಯಲು, ಆ ಮಾತಂ
ಕೇಳಿ ಎಲ್ಲರೂ ಆಶ್ಚರ್ಯಪಡುತ್ತಿರಲಾಗ ಈ ಕುಮಾರನ ಉದಯದಿಂದ
ಅಪೂರ್ವಮಾದ ಸುಗಂಧವು ಒಂದುಯೋಜನ ವ್ಯಾಪಿಸಿತು. ಅದಂ
ಕಂಡು ಸರ್ವರು ಸುಗಂಧರಾಜನೆಂಬ ನಾಮವು ಸಾರ್ಥಕಮಾದುದೆಂದು
ಕೊಂಡಾಡುತ್ತಿದ್ದರು ಈ ಶುಭವಾರ್ತೆಯಂ ಪೇಳಿ ಒಸಗೆಯಂ ತಂದವ

ರ್ಗೆ ಬೇಕಾದ ಭೂಷಣಾದಿಗಳನಿತ್ತು ಜಾತಕನಬಲಾಬಲವಂ ನೋಡುತ ವೇದವಿಶ್ರುತ ಮೊದಲಾದವರಂ ನೋಡಿ, ಜಾತಕನಯೋಗವಂ ನೋಡಿ ಎಂದು ಅಪ್ಪಣೆಯಾ ಕೊಡಲಾಗ ವೇದವಿಶ್ರುತನು ಜಾತಕಪತ್ರವಂ ಕೈಯಲ್ಲಿಪಿಡಿದು ಗ್ರಹಗಳ ನಿರ್ಣಯವಂಪೇಳಲುಪಕ್ರಮಿಸಿ, ಎಲೈ ರಾಯನೆ ಚೆನ್ನಾಗಿಲಾಲಿಸು, ನಿನ್ನಪುಣ್ಯಕ್ಕೆ ಎಣೆಯಿಲ್ಲ, ನಿನ್ನಪುತ್ರನ ರಾಶಿಚಕ್ರದಲ್ಲಿ ಸಿಂಹಲಗ್ನವಾಗಿದೆ. ಲಗ್ನಕ್ಕೆ ತೃತೀಯವಾದ ಪರಾಕ್ರಮಸ್ಥಾನದಲ್ಲಿ ಸೂರ್ಯನಿರುವನು. ಆರನೆಯ ಮನೆಯಲ್ಲಿ ಉಚ್ಚನಾದ ಅಂಗಾರಕನೊಡನೆ ಚಂದ್ರನಿರುವನು. ಎರಡನೆಯ ಕಡೆಯಲ್ಲಿ ತಾರಾಪುತ್ರನಿರುವನು. ಲಗ್ನಕೇಂದ್ರದೊಳ್ ದೇವಮಂತ್ರಿಯಿರುವನು. ಚತುರ್ಥಕೇಂದ್ರವಾದ ವಾಹನಸ್ಥಾನದಲ್ಲಿ ಶುಕ್ರನಿರುವನು. ಲಾಭಸ್ಥಾನದಲ್ಲಿ ರವಿಪುತ್ರನಿರುವನು. ಶತ್ರುಸ್ಥಾನವಾದಷಷ್ಠದಲ್ಲಿ ರಾಹು ಇರುವನು. ದ್ವಾದಶದಲ್ಲಿ ಕೇತು ಇರುವನು. ಈ ಪರಿಯಾದ ಗ್ರಹಸ್ಥಿತಿಯಿಂದ ಕೂಡಿದ ಸುಮುಹೂರ್ತದಲ್ಲಿ ದೇವಿಯ ಪ್ರಸಾದದಿಂಪುಟ್ಟಿದ ಆಯುಷ್ಮಂತನಾದ ನಿನ್ನ ಕುಮಾರನಂತೆ ಭೂಮಂಡಲದಲ್ಲಿ ಯಾರೂಪುಟ್ಟಲಿಲ್ಲ. ನಿನ್ನ ದೃಢವ್ರತದಿಂದ ಮೆಚ್ಚಿ, ಆದಿಶಕ್ತಿಯು ಇಂಥಾಕುಮಾರನಂ ದಯಪಾಲಿಸಿ ನಿನ್ನವಂಶವಂ ಉದ್ಧರಿಸಿರುವಳು. ನೀನು ಶೀಘ್ರದಿಂ ಮಜ್ಜನಂಗೈದು ಜಾತಕರ್ಮವಂಮಾಡಿ ಪುತ್ರದರ್ಶನವಂಗೊಂಡು ಧಾನ್ಯದಾನ ಮೊದಲಾದ ದಾನಂಗಳಂ ಮಾಡಲೋಸುಗ ಉದ್ಯೋಗಿಸೆಂದು ಪೇಳಲು, ಆಗ ರಾಯನು ಮಂತ್ರಿಯಾದ ಸುಬುದ್ಧಿಯಂಕರೆದು ಕೊತ್ತಲಂಗಳಲ್ಲಿ ಫಿರಂಗಿಮೊದಲಾದ ಯಂತ್ರಶಬ್ದಂಗಳಾಗಲಿ. ಬೀದಿಗಳಲ್ಲಿ ಸಕ್ಕರೆಯಂ ಬೀರಲಿ. ಪರಿಪರಿವಾದ್ಯಂಗಳಾಗಲಿ. ಎಂದು ಅಪ್ಪಣೆಯಂಕೊಟ್ಟು ಮಜ್ಜನಂಗೈದು ಪುರೋಹಿತನೊಡಗೂಡಿ ಶಾಸ್ತ್ರೋಕ್ತಮಾಗ ಜಾತಕರ್ಮಾದಿಗಳಂ ಅನೇಕದಾನಧರ್ಮಂಗಳಂ ಅಲಂಕರಿಸಿದ ಗೋವುಗಳಂ ಶಿಶುಗಳಿಗೆ ಉಪಯುಕ್ತವಾಗಿ ವೇದಶಾಸ್ತ್ರಸಂಪನ್ನರಾದ ದ್ವಿಜೋತ್ತಮರಿಗೆ ದಾನವಂಕೊಟ್ಟು ಅತ್ಯಂತಸಂತೋಷದಿಂ ಬಂದ ಬಾಂಧವರ್ಗಂಗಳಿಂದೊಡಗೂಡಿ ಪುತ್ರದರ್ಶನವಕೊಂಡು ಶಿಶುವಿಗೆ ಮಧುಪ್ರಾಶನವಂ

ಮಾಡಿಸಿ ಷಡ್ರಸೋಪೇತವಾದ ಶಾಲ್ಯನ್ನವಂ ಭೋಜನಂಗೈದು ಸುಖಸತ್ಕಥಾವಿನೋದದಿಂದಿರುತಿರ್ದು ಆ ಶಿಶುವಿಗೆ ಹತ್ತುದಿವಸವು ತುಂಬಿ ಪುಣ್ಯಾಹ ದಿವಸದಲ್ಲಿ ದಂಪತಿಗಳು ಮಜ್ಜನವಂ ಗೈದು ಶಾಸ್ತ್ರೋಕ್ತವಾಗಿ ಸ್ವಸ್ತಿ ಪುಣ್ಯಾಹವಂಗೈದು ಆ ರಾತ್ರಿಯಲ್ಲಿ ಆನಂದದಿಂದಿರುತಿರ್ದು ಸೂರ್ಯೋದಯವಾಗಲು, ರಾಯನು ಅನೇಕ ವಿದ್ವಜ್ಜನರಿಂ ಪರಿವೃತನಾಗಿ ಪತ್ನಿಯ ಕರವಂ ಪಿಡಿದು ಮಂಗಳ ಕರವಾದ ಮಂಟಪದಲ್ಲಿರುವ ಹಸೆಯ ಜಗುಲಿಯಂ ಕುರಿತುಬಂದು, ಸೂಕ್ಷ್ಮದಲ್ಲಿ ಪರರ ಇಂಗಿತವಂ ತಿಳಿಯುವ ಮಂತ್ರಿಪ್ರಧಾನಿ ಮೊದ ಲಾದ ಸಾಮಾಜಿಕರಿಂ ಶೋಭಿಸುವ, ಭೇರೀಕಾಹಳೀನಿಸ್ಸಾಣವೀಣಾ ವೇಣು ಮೃದಂಗ ಮೊದಲಾದ ಮಂಗಳಕರವಾದ ಅನೇಕ ವಾದ್ಯ ಧ್ವನಿಗಳಿಂ ಕೂಡಿ ನೂತನಯೌವನ ಮದಗರ್ವದಿಂದೊಪ್ಪು ತನೃತ್ಯ ವಂ ಮಾಡುತಲಿರುವಾಗ, ಬಿಲ್ವಫಲಂಗಳಂತಿರ್ಪ ಚಲಿಸುವ ಪಯೋ ಧರಂಗಳಿಂ, ಜಾರಿದ ಕುರುಳುಗಳಿಂ, ಮೋಹವೆಂಬ ಸರೋವರದಲ್ಲಿ ಥಳುಳುಗುತ್ತಿರುವ ವಿಟರಮನಸ್ಸುಗಳೆನುವ ಮತ್ಸ್ಯಂಗಳು ಕಟಾಕ್ಷ ವೆಂಬ ಬಲೆಗಳಿಂ ಬೀಸಿ ಸಭಾರಂಜನೆಯಂ ಗೈಯುವ ಚಪಲಾಕ್ಷಿಯ ರಾದ ವಾರನಾರಿಯರಿಂದಲು, ಶೋಭಿತವಾದ ಸಭಾಮಂಟಪ ಮಧ್ಯ ದಲ್ಲಿ ದೇದೀಪ್ಯಮಾನವಾದ ನವರತ್ನಖಚಿತವಾದ ಹಸೆಯೊಳ್ ಪತ್ನಿ ಯೊಡನೆ ಪದ್ಮಾಸನದಲ್ಲಿ ಕುಳಿತು ತನ್ನ ಪಟ್ಟದರಸಿಯಾದ ಗುಣವತಿಯ ಅಂಕದೊಳ್ ಕುಮಾರನಂ ಕುಳ್ಳಿರಿಸಿ, ಪುಣ್ಯಾಹ, ನಾಂದೀ ಮಾತೃ ಕಾಪೂಜೆ ಮೊದಲಾದುದಂ ಮಾಡಿ, ದಿವ್ಯಶುಭಮುಹೂರ್ತದಲ್ಲಿ ರತ್ನದ ತಟ್ಟೆಯೊಳ್ ಮುತ್ತಿನಕ್ಷತೆಯಂ ಹಾಸಿ, ವಜ್ರದ ಕಡ್ಡಿಯಿಂದ ಮಾಸ ನಾಮ, ನಕ್ಷತ್ರನಾಮ, ನಿಜನಾಮ ಮೊದಲಾಗಿ ಬರೆದು ವಿಧ್ಯುಕ್ತವಾಗಿ ಪೂಜಿಸಿ, ಶ್ರೀ ಸುಗಂಧರಾಜನೆಂದು ನಾಮಕರಣವಂ ಮಾಡಿ, ಅನೇಕ ದಾನಧರ್ಮಂಗಳಂ ರಚಿಸಿ, ಬಂಧುಜನಂಗಳಿಗೂ, ಆಶ್ರಿತಜನಂಗಳಿಗೂ, ಅನೇಕ ವಸ್ತ್ರಾಭರಣಂಗಳನಿತ್ತು, ಫಲದಾನ ಮೊದಲಾದುದೆಲ್ಲವಂ ಆ ಗ್ರಮಾಡಿಸಿ, ಮಂಗಳಧವಳಾರವಂ ಪಾಡುವ ಬ್ರಾಹ್ಮಣ ಸುವಾಸಿನೀಯ

ರಿಂದ ಆಶೀರ್ವಚನಂಗಳಂ ಕೈಕೊಂಡು ಸಭೆಯಿಂದ ತೆರಳಿ, ಶಿಶುವಿಗೆ ಆ
ರತಿ ಕಾವಲುಕಟ್ಟು ಮೊದಲಾದ ರಕ್ಷೆಗಳಂ ಮಾಡಿಸಿ, ಇಷ್ಟಬಂಧುಜ
ನಂಗಳೊಡಗೂಡಿ ಷಡ್ರಸೋಪೇತವಾದ ಶಾಲ್ಯನ್ನ ಭೋಜನಂಗೈದು
ಅತ್ಯಂತ ಸಂತೋಷದಿಂದಿರುತ್ತಿದ್ದನು. ಆ ರಾತ್ರಿಯೊಳ್ ಕುಮಾ
ರಂಗೆ ತೊಟ್ಟಲನಿಕ್ಕುವ ಉತ್ಸವವಂ ಬೆಳೆಯಿಸಬೇಕೆಂದು ಮಾಲ್ಯವತಿ
ಮೊದಲಾದ ಬಂಧುವೃದ್ಧ ಮುತ್ತೈದೆಯರೆಲ್ಲರು ಕೂಡಿ ಕನ್ನಡಿಯ
ಮಾಳಿಗೆಯಲ್ಲಿ ನವರತ್ನಖಚಿತವಾದ ಸರಪಣಿಯಂ ಕಟ್ಟಿದ ಪದ್ಮರಾಗ
ಮಣಿಗಳಂ ಕಡೆದು ಮಾಡಿದ ತೊಟ್ಟಿಲಂ ಕಟ್ಟಿ ಗಂಧಮಾಲ್ಯ ಧೂಪದೀ
ಪಫಲಂಗಳಿಂ ಪೂಜಿಸಿ ಆ ತೊಟ್ಟಿಲಲ್ಲಿ ಒಂದು ಗುಂಡನಿಟ್ಟು ತೂಗಿಪಾಡಿ
ಅನಂತರ ಮುತ್ತೈದೆಯರ ಆಶೀರ್ವಚನ ಪುರಸ್ಸರವಾಗಿ ಮಾಲ್ಯವ
ತಿಯು ತನ್ನ ಕರಕಮಲಂಗಳಿಂದ ಮುತ್ತಿನ ಮಣಿಯಂತಿರುವ ಬಾಲಕ
ನಂ ಎತ್ತಿಕೊಂಡು ಚಿರಂಜೀವಿಯಾಗಿ ವಜ್ರಶರೀರನಾಗಿ ವಂಶಾಭಿವೃದ್ಧಿ
ಕರನಾಗಿ ಯಶೋವಂತನಾಗಿರೆಂದು ಹರಸಿ ಶುಭಮುಹೂರ್ತದಲ್ಲಿ ಮಂ
ಗಳಾಷ್ಟಕದಾಶೀರ್ವಾದ ಧ್ವನಿಗಳಿಂದ ವೀಣಾವೇಣು ಮೃದಂಗ ಭೇರೀ
ನಿನಾದಂಗಳಿಂದಲೂ ಕೂಡಿ, "ಜೋ ರಾಜಕುಲಚಂದ್ರ ಗುಣನಿಸ್ತಂ
ದ್ರ ಜೋ ಭೂಮಿದೇವೇಂದ್ರ ಜೋ ದಯಾಸಾಂದ್ರ" ಎಂದು ರಾಗಗ
ಳಿಂದ ಪಾಡುವ ಸುವಾಸಿನಿಯರು ಸಕಲಜನಮನೋಹರ್ಷಕರವಾಗಿ
ತೊಟ್ಟಿಲಲ್ಲಿ ಮಲಗಿಸಿ ತೂಗಿ ಪಂಚರತ್ನದಾರತಿಯನೆತ್ತಿ ನವರತ್ನದ
ಸೇಸೆಯನಿಕ್ಕಿ ರಾಣಿಯಾದ ಗುಣವತಿಯಂ ಕುಮಾರನೊಡಗೂಡಿ ಮುತ್ತಿ
ನ ಹಸೆಯಲ್ಲಿ ಕುಳ್ಳಿರಿಸಿ ರಾಣಿಯ ಜನನಿಯಾದ ಮಾಲ್ಯವತಿಯು ಸು
ಗಂಧರಾಜಕುಮಾರನ ಕಿವಿಯಂ ಚುಚ್ಚಿ ನವರತ್ನದಾರತಿಯಂ ಬೆಳಗಿ
ನಗರದೇಶಂಗಳೊಳಿರುವ ಬಾಲಸಮೂಹಂಗಳಿಗೆ ಬಾಲದೊಡಿಗೆಗಳನಿತ್ತು
ಸಕಲ ಜನಂಗಳಂ ಉಚಿತವಸ್ತುಗಳಿಂದುಪಚರಿಸಿ ಮಹೋತ್ಸವವಂ ಬೆ
ಳೆಯಿಸಿ, ಒಂದೊಂದುದಿನ ಒಂದೊಂದುಪರಿಯಾದ ಬಾಲಲೀಲೆಯಂ
ನೋಡುತ ಸಂತೋಷದಿಂದಿರುತಿರ್ದರು. ಗದ್ಯ॥ ಇದು ಕುಂಡಲಿಶಯ
ಖಂಡಪರಶು ಪುಂಡರೀಕ ಭವಾಖಂಡಲಪ್ರಮುಖನಿಖಿಲಸುರವರಪರಿಭವ

ಪರಿಣತಪ್ರಚಂಡ ಬಲಚಂಡಮುಂಡ ಖಂಡನನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲ ಭೂಷಾಸಾಮ್ರಾಜ್ಯ ಸರ್ವಂಕಷಚತುರ್ವಿಧಸರಸ ಕವಿತಾನಿಸ್ಸಹಾಯ ನಿರ್ಮಾಣಧೌರೇಯಘುಟಿಕಾಶತಗ್ರಂಥ ದಿನದಿನಪ್ರಬಂಧನಿಬಂಧನ ಧುರಂಧರತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನ ಸೂತ್ರಚರಿತ್ರ ಚಾಮರಾಜ ಮಹಾರಾಜ ಪುತ್ರನರಪತಿ ಬಿರುದಮಹೀಶೂರ ಪುರವರಾಧೀಶ ಶ್ರೀ ಕೃಷ್ಣರಾಜವಡೆಯರವರಿಂ ರಸಿಕಜನಾನಂದಕರಮಾಗಿ ವಿರಚಿತಮಾದ ಸೌಗಂಧಿಕಾಪರಿಣಯಮೆಂಬ ನವೀನಕೃತಿಯೋಳ್ ಗುಣವತಿಯ ಗರ್ಭಧಾರಣ ಸುಗಂಧರಾಜ ಕುಮಾರಜನನವರ್ಣನಮೆಂಬ ನಾಲ್ಕನೆಯ ಆಶ್ವಾಸಂ ಮಂಗಳಮಹಾ.

ಶ್ರೀ ಚಾಮುಂಡಿಕಾಂಬಾಯೈನಮಃ ॥ ಶ್ರೀರಸ್ತು॥ ಅನಂತರದಲ್ಲಿ ರಾಜದಂಪತಿಗಳು ಶಿಶುವಿನಿಂದೊಡಗೂಡಿರುತ್ತಿರಲು, ಆ ಕುಮಾರನು ತಾಯಿಯ ಮೊಗಮಂ ನೋಡಿ ಮುಗುಳುನಗೆಯಿಂ ನಗುತ ಶತ್ರುರಾಯರುಗಳ ಶಿರಸ್ಸುಗಳಂ ಮೆಟ್ಟುವಪರಿಯಂ ತೋರುವಂತೆ ಮೃದುವಾದ ಪಾದಂಗಳಿಂದ ತೊಟ್ಟಲನ್ನೊದೆಯುತ, ಚತುಸ್ಸಮುದ್ರಮಧ್ಯದಲ್ಲಿರುವ ಸಾಮ್ರಾಜ್ಯವು ಎನಗೆ ಕರಗತಮಾಯಿತೆಂದು ತೋರ್ಪಂತೆ ಚಿಗುರಿನಂತಿರುವ ಕೈಯ್ಯಂ ಪಿಡಿಯುತ ಒಂದು ಕರದಿಂದ ಕಾಲಬೆರಳಂ ಬಾಯೊಳಿಟ್ಟು ಎಳೆದುಂಬಿಯಂತೆ ಕೂಗುತ, ಮಾನಸಸರೋವರದಲ್ಲಿ ಬೆಳೆಯುವ ರಾಜಹಂಸದ ಮರಿಯಂತಿರ್ಪ ರಾಜಕುಮಾರಂಗೆ ಆರನೇತಿಂಗಳು ಪ್ರಾಪ್ತವಾಗುತ್ತಿರಲು ಶಾಸ್ತ್ರವಿಹಿತವಾದ ಅನ್ನಪ್ರಾಶನವಂ ಮಾಡಲೋಸುಗ ದಧಿ, ಮಧು, ಘೃತ ಶರ್ಕರಗಳಿಂದ ಸಹಿತವಾಗಿರುವ ಶಾಲ್ಯನ್ನವಂ, ಕುಂದಣದ ತಟ್ಟೆಯಲ್ಲಿರಿಸಿ ಹಿತಳಾಗಿ ಬಂಧುವರ್ಗದೋಳ್ ಶ್ರೇಷ್ಠಳಾಗಿ ಕುಮಾರರ ಪೋಷಣೆಯಲ್ಲಿ ಕುಶಲೆಯಾದ ರಾಯನತಂಗಿಯಾದ ಸುಭದ್ರೆಯಿಂದ ತರಿಶಿ ಮಂತ್ರಪುರಸ್ಸರವಾಗಿ ತ್ರಿರಾವರ್ತಿಮಾಗಿ ಹಿರಣ್ಯಾದಿಗಳಂ ನಿರಾಜೆಯ ತೆರೆಯ ಮರೆಯೋಳ್ ಪ್ರಾಶನವಂ

ಮಾಡಿಸಿ ಶಿಶುಸಹಿತರಾದ ರಾಜದಂಪತಿಗಳು ಬ್ರಾಹ್ಮಣಾಶೀರ್ವಾದವಂ ಸ್ವೀಕರಿಸಿ, ಬಂಧುಜನಗಳೊಡನೆ ಮೃಷ್ಟಾನ್ನಭೋಜನವಂಗೈದು ಬಳಿಕ ಸರ್ವರೊಡನೆ ಸಂತೋಷದಿಂದಿರಲು. ಏಳನೇ ತಿಂಗಳಲ್ಲಿ ಈ ಬಾಲಕನು ಸಕಲವಾದ ಬಾಲದೊಡಿಗೆಯಿಂದ ಒಪ್ಪುವನಾಗಿ ಬಾಳೇಸುಳಿಯಂತೆ ಥಳಥಳಿಸುವ ಅವಯವಗಳಿಂದ ನೋಡುವವರಿಗೆ ನೇತ್ರಾನಂದಕರನಾಗಿ. ದೇಶವಿಜಯಾರ್ಥವಾಗಿ ತೆರಳುವ ಭಾವವಂ ತಿಳಿಯಿಸುವಂತೆ ಮುದ್ದುಮುದ್ದಾಗಿ ಅಂಬೆಗಾಲಂ ಹಾಕುತ್ತ, ಹೊಸ್ತಿಲಂ ದಾಟಿದ್ದಂ ಕಂಡು ಗುಣವತಿಯು ಸುವಾಸಿನಿಯರೆಲ್ಲರಂ ಕರೆದು, ನಲೆಗಡಲೆ, ಚಿಗುಳಿ, ತಂಬಿಟ್ಟು, ಉಂಡಲಿಗೆ, ನಾನಾಫಲಂಗಳು, ಶರ್ಕರೆ, ಹುರಿಗಡಲೆ, ಕೊಬರಿ ಮೊದಲಾದ ಪದಾರ್ಥಗಳಂ ವಿಸ್ತಾರವಾಗಿರಿಸಿ, ಹೊಸ್ತಿಲಂ ದೀಪಧೂಪಂಗಳಿಂ ಪೂಜಿಸಿ ಬಾಲಕರೆಲ್ಲರಿಗೂ ಕೊಟ್ಟು, ಆರತಿಯಂ ಬೆಳಗಿಸಿ ಸಂತೋಷದಿಂದಿರುವ ದಿನಂಗಳಲ್ಲಿ ಈ ಕುಮಾರನು ಅಂಬೆಗಾಲನಿಕ್ಕುತ ಚಿತ್ರಶಾಲೆಯಲ್ಲಿ ಆಡುತ ಮಣಿಮಯವಾದ ನೆಲದಲ್ಲಿ ತನ್ನ ರೂಪವಂ ಕಂಡು ಕೈಯಿಂದ ಹಿಡಿಯುತ ಮಣಿರಾಶಿಗಳಂ ಚಲ್ಲಾಡುತ ಹಂಸದಂತೆ ನಡೆಯುತ ಗಿಣಿಯಂತೆ ನುಡಿಯುತ, ಪಚ್ಚೆಕಪ್ಪುರದ ರಂಗವಲ್ಲಿಗಳಂ ಸೂರಾಡುತ, ಕುಪ್ಪು ಹೆಜ್ಜೆಗಳನ್ನಿಡುತ; ಎತ್ತಿಕೊಂಡವರ ಮುತ್ತಿನಹಾರಗಳಂ ಕೀಳುತ, ಈರೀತಿಯಾಗಿ ಪರಿಪರಿಯಾದ ಬಾಲಲೀಲೆಗಳನಾಡುತ, ವೃದ್ಧಿಯನ್ನೈದುವ ಕುಮಾರಂಗೆ ನಾಳೆ ಶುಭವಾದ ಶುಕ್ರವಾರದಲ್ಲಿ ವರ್ಷವರ್ಧಂತಿ ಆಗಬೇಕೆಂದು ದೈವಜ್ಞರು ರಾಯಂಗೆ ವಿಜ್ಞಾಪನಂಗೈಯಲು, ಅದೇಪರಿಯಾಗಿ ಸಕಲಪದಾರ್ಥಗಳಂ ತರಿಸಿ, ಆದಿಶಕ್ತಿಯಾದ ತ್ರಿಪುರಸುಂದರಿಯ ದೇವಾಲಯದಿಂದ ಎಣ್ಣೆಅರಶಿನವಂ ಮಂತ್ರಿಸಿ ತರಿಸಿ ಕುಮಾರಂಗೆ ಮಂಗಳಸ್ನಾನವಂ ಮಾಡಿಸಿ, ಅಂಬರಮಣಿಯಂತಿರುವದರಿಂ ನೂತನಾಂಬರವಂ ಹೊದ್ದಿಸಿ, ಸುಗಂಧರಾಜನೆಂದು ಹೆಸರಿರುವದರಿಂ, ಸುಗಂಧವಂ ಪೂಸಿ, ಪುಷ್ಪಬಾಣನಂತಿರುವದರಿಂ ಪುಷ್ಪಮಾಲೆಯಿಂದಲಂಕರಿಸಿ ಪರರಾಯರ ದರ್ಪವಂ ಅಣಗಿಸುವನಾದ್ದರಿಂ ದರ್ಪಣವಂ ತೋರಿಸಿ ರತ್ನಪುರಾಧೀಶನಾದ್ದರಿಂ ರತ್ನಪೀ

ರದಲ್ಲಿ ಕುಳ್ಳಿರಿಸಿ, ಆಯುರ್ವೃದ್ಧಿಕರವಾಗಿ ಚಿರಂಜೀವಿ ಪೂಜೆಯಂ ಮಾಡಿಸಿ, ಪ್ರತಿಮಾದಾನ ಮೊದಲಾದ ಸಕಲ ಮರ್ಯಾದೆಯಿಂದ ಮಹೀಸುರರಂ ಪೂಜಿಸಿ, ಮುತ್ತಿನ ಪಲ್ಲಕ್ಕಿಯೊಳ್ ಕುಮಾರನಂ ಕುಳ್ಳಿರಿಸಿ, ಸಕಲವಾದ ಚಿಹ್ನೆ ಬಿರುದು ಶುಭವಾದ್ಯಗಳೊಡನೆ ಪ್ರದಕ್ಷಿಣವಾಗಿ ಕುಲದೇವತೆಯ ಸನ್ನಿಧಿಯಂ ಪೊಕ್ಕು ಬಹುವಿಧೋಪಹಾರಂಗಳಿಂ ಕಾಣಿಕೆ ಮೊದಲಾಗಿ ಕುಮಾರನ ಹಸ್ತಕಮಲಂಗಳಿಂದ ಸಮರ್ಪಣೆಯಂ ಗೈಸಿ, ತೀರ್ಥಪ್ರಸಾದಗಳಂ ಸ್ವೀಕರಿಸಿ ಸಾಷ್ಟಾಂಗಪ್ರಣಾಮವಂ ಮಾಡಿಸಿ ದೇವಿಯರ ಪುತ್ರನಾದ ಕುಮಾರನಂ ಅರಮನೆಗೆ ಕರೆತಂದು ಬಳಿಕ ಸೂರ್ಯದರ್ಶನ ಧೇನುದರ್ಶನವಂ ಮಾಡಿಸಿ, ಸಂಭ್ರಮದಿಂದ ಸಕಲ ಬಂಧುಜನಸಹಿತನಾಗಿ ಮೃಷ್ಟಾನ್ನ ಭೋಜನವಂ ಮಾಡಿ ರಾತ್ರಿ ಹಸೆಯೊಳ್ಕುಳ್ಳಿರಿಸಿ, ಆರತಿಯಂ ಬೆಳಗಿಸಿ, ಚಂದ್ರದರ್ಶನವಂ ಮಾಡಿಸಿ ಸಂತೋಷದಿಂದಿರುತಿರಲು, ರಾಜದಂಪತಿಗಳೀರ್ವರು ಪುತ್ರನ ಚಮತ್ಕಾರನುಡಿಯಂ, ಆಟದ ಕುಶಲತೆಯಂ ನೋಡುತ ಮೂರನೇವರ್ಷದೊಳ್ ಅವಶ್ಯಕಾರ್ಯವಾದ ಚೌಲಪ್ರಸ್ತವಂ ಮಾಡಲು ನಿಶ್ಚೈಸಿ, ದೇಶದೇಶದೊಳಿರುವ ಬಂಧುನೃಪಾಲರಂ ಕರಸಿ ಪುರವೆಲ್ಲವಂ ಚಪ್ಪರವೇಲುಕಟ್ಟು ಮುಂತಾಗಿ ಪವಳದ ಕುಚ್ಚುಗಳಿಂದಲಂಕರಿಸಿ, ಸಕಲಸಂಭಾರಗಳು ಸನ್ನದ್ಧಗಳಾಗಿರಲೆಂದು ಮಂತ್ರಿಗೆ ಕಟ್ಟುಮಾಡಿ, ಪುತ್ರನು ಎತ್ತಿಕೊಂಡು ಹಿತವೃದ್ಧರಾದ ಶಾಸ್ತ್ರಜ್ಞರಿಂದಲು, ಸುವಾಸಿನಿಯರಿಂದಲು ಅಂತರಂಗ ಸೇವಕರಿಂದಲು ಸಹಿತರಾಗಿ ಮುತ್ತಿನ ಹಜಾರದೊಳ್ ಎಣ್ಣೆಶಾಸ್ತ್ರ ಮೊದಲಾಗಿ ಮಂಗಳಸ್ನಾನವಂ ಮಾಡಿ ಶ್ಲಾಘ್ಯಂಗಳಾದ ವಸ್ತ್ರಭೂಷಣಾದಿಗಳಿಂದಲಂಕೃತರಾಗಿ, ಕುಮಾರಂಗೆ ಸರ್ವಾಭರಣಗಳಿಂದಲಂಕರಿಸಿ ನಡೆಮುಡಿ ಮೊದಲಾದ ರಾಜವಿಭವದಿಂ ಬಂದು ಹಸೆಯಮೇಲೆ ಕುಳ್ಳಿರ್ದು ಪುಣ್ಯಾಹ ನಾಂದೀಸಭಾನುಜ್ಞೆ ಮೊದಲಾಗಿ ಶಾಸ್ತ್ರೀಯವಾಗಿ ಶುಭಪ್ರದಂಗಳಾದ ಮಂತ್ರಂಗಳಿಂದ ಚೌಲಪ್ರಸ್ತವಂ ಬೆಳೆಯಿಸಿ ಬಂಧುಗಳು ಮೊದಲಾದ ಸಮಸ್ತಜನಂಗಳಿಂ ಯಥಾಯೋಗ್ಯವಾಗಿ ವಸ್ತ್ರಾಭರಣ, ಧನಕನಕ ವಸ್ತು

ಪಾನ ಭೋಜನಾದಿಗಳಿಂದ ಸಂತೋಷಗೊಳಿಸಿ, ಪುತ್ರಸಹಿತರಾಗಿ ಮೃಷ್ಟಾನ್ನಭೋಜನಂ ಗೈದು ಸುಖಸಾಮ್ರಾಜ್ಯದಿಂದಿರುವಾಗ ಕುಮಾರನು ಮುಂದೆ ದಿಗ್ವಿಜಯದೊಳ್ ಮಾಳ್ಪ ಕಾರ್ಯಂಗಳಂ ಬಾಲ್ಯದಲ್ಲಿಯೇ ಸೂಚಿಸುವಂತೆ ಅರಿಗಳ ಶಿರಸ್ಸುಗಳಂ ಈ ಪರಿಯಲ್ಲಿ ಈಡಾಡುವೆನೆಂದು ತೋರ್ಪಂತೆ ಮುತ್ತುಗಳೆಂಬಿಗಿದ ಚೆಂಡುಗಳಾಟದಿಂ ಶತ್ರುಗಳಸಮೂಹಂಗಳನ್ನೀಪರಿಯಲ್ಲಿ ಭ್ರಮೆಗೊಳಿಸುವೆನೆಂಬಂತೆ, ಕುರವಿಂದ ರತ್ನಗಳಂ ಕಡೆದು ಮಾಡಿದ ಬುಗುರಿಗಳ ವಿಹಾರಂಗಳಿಂ, ಮಹಿತರಾಯರನ್ನೀ ಪರಿಯಿಂದ ಬಾಣಂಗಳಿಗೆ ಗುರಿಯಂ ಮಾಡುವೆನೆಂಬ ಪರಿಯಿಂದ ವಜ್ರಮಣಿಗಳಂ ಕೊರೆದು ಮಾಡಿದ ಗೋಲಿ ಗಜ್ಜುಗಗಳಾಟದಿಂ, ಕೋಟಿ ಮನ್ಮಥರೂಪದಿಂದೊಪ್ಪುವ ತಂದೆತಾಯಿಗಳಿಗೆ ಆನಂದವಂ ನೋಡುವವರಿಗೆ ಅಚ್ಚರಿಯಂ ಬಾಲಕರಿಗೆ ಉತ್ಸಾಹವಂಗೈಯುತ ಬಾಲಚಂದ್ರನಂತೆ ಅಭಿವೃದ್ಧಿಯನ್ನೈದಿ ಬರುವದಂ ನೋಡಿ ಐದನೇವರ್ಷದೊಳ್ ಅಕ್ಷರಾಭ್ಯಾಸವಂ ಮಾಡಿಸುವುದುಚಿತವೆಂದು ರಾಯನು ರಾಣಿಯೊಡನೆ ಆಲೋಚಿಸಿ ಜ್ಯೋತಿಷಜ್ಞರಿಂದ ಶುಭಮುಹೂರ್ತವಂ ನಿಶ್ಚೈಸಿ, ಆ ಶುಭದಿವಸದಲ್ಲಿ ದಂಪತಿಗಳೀರ್ವರೂ ಕುಮಾರನಿಂದೊಡಗೂಡಿ ಮಂಗಳಸ್ನಾನವಂಗೈದು ದಿವ್ಯಾಂಬರ ರತ್ನಭೂಷಣಂಗಳಿಂದ ಭೂಷಿತರಾಗಿ, ಅಪರಿಮಿತಾಭರಣಗಳಿಂದಲು, ವಿಚಿತ್ರ ವಸ್ತ್ರಂಗಳಿಂದಲು ಕುಮಾರನಂ ಅಲಂಕರಿಸಿ, ಕಸ್ತೂರಿ ತಿಲಕವಂ ಫಣೆಯೊಳಿಟ್ಟು ಭಾರಿಭಾರಿಗೂ ಬಾಲಕನ ಮೊಗನು ನೋಡುತ ಆನಂದಭರಿತರಾಗಿ ರತ್ನಮಯವಾದ ಹಸೆಯಮಣೆಯಲ್ಲಿ ಕುಳ್ಳಿರ್ದು ತಮ್ಮಂಕದೊಳ್ ಕುಮಾರನಂ ಕುಳ್ಳಿರಿಸಿ ಪದ್ಮರಾಗದ ತಟ್ಟೆಯೊಳ್ ಮುತ್ತಿನಕ್ಷತೆಯಂ ಹಾಸಿ, ವಜ್ರದ ಕಡ್ಡಿಯಿಂದ ಕಳಿಂಗದೇಶದಿಂ ಬಂದಿರುವ ವಿದ್ಯಾಸಾಗರನೆಂಬ ಸಕಲಕಲಾಕೋವಿದನಾದ ಉಪಾಧ್ಯಾಯನಿಂದ ಶ್ರೀ ಚಾಮುಂಡಿಕಾಯೈನಮಃ ಎಂದು ಬರಸಿ ಬಾಲಕನ ಹಸ್ತದಿಂ ಪೂಜೆಯಂಗೈಸಿ, ಬರೆದಿರುವ ಅಕ್ಷರಂಗಳಂ ಬರಸಿ, ದಿವ್ಯ ಶ್ರೀ ಚಂದನದಿಂದ ಕುಮಾರನ ಪಣೆಯೊಳ್ ಬೊಟ್ಟಿಟ್ಟು ಮುತ್ತಿನಕ್ಷತೆಯಲ್ಲಿ ಬರೆದಿರುವ ಅಕ್ಷರಗಳಂ ಪಣೆಗೊತ್ತಿಸಿ, ರತ್ನಹಾರ

ತಿಯುಂ ಬೆಳಗಿಸ್ಸಿ ಶುಭಮಂಗಳಂಗಳಂ ಪಾಡಿಸಿ, ಪರಿಪರಿಯಾದ ವಾದ್ಯಗಳು ಮೊಳಗುತಿರಲು ಬ್ರಾಹ್ಮಣಾಶೀರ್ವಚನಗಳಂ ಕೈಗೊಳಿಸಿ ವಿದ್ಯಾಸಾಗರನೆಂಬ ಉಪಾಧ್ಯಾಯನಿಗೆ ಭೂಷಣಾಂಬರಾದಿಗಳಿಂ ಸಂತೋಷಪಡಿಸಿ ಎಲೈ ವಿದ್ಯಾಸಾಗರನೆ, ಈ ಕುಮಾರನಿಗೆ ಸಮರ್ಪಕವಾಗಿ ಚತುಷ್ಷಷ್ಟಿವಿದ್ಯೆಗಳಂ ಕಲಿಸು ನಿನಗೆ ಸಪ್ತಾಂಗವಂ ಕೊಡಿಸುವೆನೆಂದು ಅಪ್ಪಣೆಯಂ ಕೊಡಲಾ ವಿದ್ಯಾಸಾಗರನು ಸಂತುಷ್ಟನಾಗಿ ಸ್ವಾಮಿಯವರು ಅಪ್ಪಣೆಯಂ ದಯಪಾಲಿಸಿದ ಪರಿಯಾಗಿ ಸುಗಂಧರಾಜಕುಮಾರಂಗೆ ಷೋಡಶವರ್ಷಂಗಳು ತುಂಬುವದರೊಳಗಾಗಿ ಸಮರ್ಪಕವಾಗಿ ಸಕಲ ವಿದ್ಯೆಗಳಂ ಕಲಿಸಿ, ಉಪನಯನವಾದನಂತರ ವೇದವೇದಾಂಗ ಧನುರ್ವೇದಗಳಂ ಸಾಂಗವಾಗಿ ಕಲಿಸಿ, ಸ್ವಾಮಿಯವರ ಪಾದಪದ್ಮಂಗಳ ಸಮೀಪಕ್ಕೆ ಕರೆದೊಯ್ದು ಪರೀಕ್ಷೆಗಳಂ ಮಾಡಿಸಿ ಸ್ವಾಮಿಯವರ ಕಟಾಕ್ಷಕ್ಕೆ ಪಾತ್ರನಾಗುವೆನೆಂದು ನುಡಿದು ಕುಮಾರಂಗೆ ವಿದ್ಯಾಭ್ಯಾಸವಂ ಮಾಡಿಸುವದಕ್ಕೆ ರಹಸ್ಯವಾದ ಸ್ಥಾನವಂ ಅಪ್ಪಣೆಯಂ ಕೊಡಬೇಕು. ಇಂತುಮಲ್ಲದೆ ಏಕಸ್ತಪೋದ್ವಿರಧ್ಯಾಯೀ ಎಂಬ ರೀತಿಯಾಗಿ ಕುಮಾರನೊಡನೆ ವಿದ್ಯಾಭ್ಯಾಸವಂ ಮಾಡುವದಕ್ಕೆ ಬುದ್ಧಿವಂತನಾಗಿ ಕುಮಾರಂಗೆ ಅನವರತಹಿತವಂ ಬಯಸುವವನ ವಂಶದಲ್ಲಿ ಪುಟ್ಟಿದವನಾಗಿ ರೂಪವಂತನಾದ ಒಬ್ಬ ಬಾಲಕನಂ ಜೊತೆಮಾಡಿ ಇದಲ್ಲದೆ ಅಶ್ವಗಜಾರೋಹಣ ಮಲ್ಲವಿದ್ಯೆ ಮೊದಲಾದ ವಿದ್ಯೆಗಳೆಲ್ಲವು ಎನಗೆ ಬರುವವರಿಂ ಆ ವಿದ್ಯೆಗಳಂ ನಾನೇ ಕಲಿಸುತಲಿಧೇನೆ ಇದೆಲ್ಲವಂ ಅಪ್ಪಣೆಯಂ ಕೊಡುವದೆಂದು ವಿಜ್ಞಾಪನಂಗೈಯಲು, ರಾಯನು ಆ ಮಾತಂ ಕೇಳಿ ಸರಸ್ವತೀವಿಲಾಸವೆಂಬ ಹಜಾರದೊಳ್ ನಮ್ಮ ಮಂತ್ರಿಯಾದ ಸುಬುದ್ಧಿಯ ಕುಮಾರನಾದ ಸುಮತಿಯೆಂಬ ಬಾಲಕನಂ ಜೊತೆಮಾಡುವದು, ಆನೆಕುದುರೆಗಳಾರೋಹಣಂಗಳಂ, ಮಲ್ಲವಿದ್ಯೆಯಂ, ನೀನೇ ಕಲಿಸುವುದೆಂದು ವಿದ್ಯಾಸಾಗರನಿಗೆ ಅಪ್ಪಣೆಯಂ ಕೊಟ್ಟು, ನೀತಿಮಂತನೆಂಬ ಕುಲಕ್ರಮಾಗತನಾದ ಗುರಿಕಾರನಂ ನಿಯಮಿಸಿ, ಪ್ರತಿದಿನದಲ್ಲಿಯು ನಡೆದ ವಿದ್ಯಾಭ್ಯಾಸಧಾರಣಾಕೌಶಲಂಗಳಂ, ಕುಮಾರನ ಕುಶಲತೆಯಂ ಪ್ರತಿದಿನದಲ್ಲಿಯೂ

ಎನ್ನೊಡನೆ ಬಿನ್ನವಿಸುವದು, ಒಂದುವೇಳೆ ಸಮಯ ದೊರಕದಿದ್ದರೆ ಮಂತ್ರಿಯಾದ ಸುಬುದ್ಧಿಗೆ ತಿಳಿಸಿ ಆತ ಪೇಳಿದಂತೆ ನಡಿಯುತ, ಕುಮಾರಂಗೆ ಬೇಸರ ಬರದಂತೆ ಕ್ರೀಡಾಯೋಗ್ಯಂಗಳಾದ ವಸ್ತುಗಳಿಂದ ಸಂತೋಷಪಡಿಸುತ ಲಲಿತವಾಗಿ ವಿದ್ಯಾಭ್ಯಾಸಮಾಡುವಂತೆ ನೀನು ಜಾಗ್ರತೆಯಿಂದ ನೋಡಿಕೊಳುತಲಿರುವದೆಂದು ಆಜ್ಞಾಪಿಸಲು, ನೀತಿವಂತನೆಂಬ ಗುರಿಕಾರನು ಮಹಾಪ್ರಸಾದವೆಂದು ಸಾಷ್ಟಾಂಗ ಪ್ರಣಾಮಂ ಗೈದು ವಿದ್ಯಾಸಾಗರನೊಡಗೂಡಿ ರಾಜಕುಮಾರಂಗೆ ಮಂತ್ರಿಪುತ್ರನಾದ ಸುಮತಿಯಂ ಜೊತೆಮಾಡಿ, ಸರಸ್ವತೀವಿಲಾಸದೊಳ್ ದಿನಕ್ರಮದಿಂ ಲಿಪಿ ಮೊದಲಾದ ವಿದ್ಯಾಭ್ಯಾಸಮಂ ಮಾಡಿಸುತ್ತಿರುವಲ್ಲಿ, ವಿದ್ಯಾಸಾಗರನು ಕುಮಾರನ ಬುದ್ಧಿಚಾತುರ್ಯಗ್ರಹಣಧಾರಣಪಟುತ್ವಂಗಳಂ ನೋಡಿ ಬಹು ಸಂತೋಷಪಡುತ ರಾಜಕುಮಾರನು ಕಲಿತುದಕ್ಕಿಂತ ಅಧಿಕವಾಗಿ ಪೇಳುತ ಬರುತ್ತಿರಲು, ಪೇಳಿದುದಕ್ಕಿಂತ ಅಧಿಕವಾಗಿ ಬಾಲಕ್ರೀಡೆಗಳನ್ನಾಡದೆ ವಿದ್ಯೆಗಳಂ ಗ್ರಹಿಸುತ ಬರುತ್ತಿರಲು ಈ ವೃತ್ತಾಂತವಂ ಪ್ರತಿದಿನವು ರಾಯನು ನೀತಿವಂತನೆಂಬ ಗುರಿಕಾರನ ಮುಖವಚನದಿಂದ ಕೇಳುತ ಸಮಯವಿಶೇಷಗಳಲ್ಲಿ ತಾನು ನೋಡುತ ಪರಮಸಂತೋಷದಿಂದಿರುತ ಸುಬುದ್ಧಿಮೊದಲಾದ ಅಷ್ಟಮಂತ್ರಿಗಳಿಂದಲು ವೀರಸೇನ ಮೊದಲಾದ ಸೇನಾಪತಿಗಳಿಂದಲು, ಸಾಮಂತಮಹೀಪಾಲ ಮಂಡಲದಿಂದಲು ಪರಿಶೋಭಿತವಾದ ಆಸ್ಥಾನಮಂಟಪದೊಳ್ ರತ್ನಸಿಂಹಾಸನದಲ್ಲಿ ಕುಳಿತು ರಾಜ್ಯವಿಚಾರವಂ ಗೈಯುತಲಿರುವ ಸಮಯದೊಳ್ ದೇಶದಲ್ಲಿರುವ ಪ್ರಜೆಗಳು ಕ್ರೂರಂಗಳಾದ ವನಮೃಗಂಗಳಿಂದ ಕಟ್ಟಿರುವ ಪೈರುಗಳಂ ಪೆಗಲೊಳ್ ಪೊತ್ತು ರಾಜಮಂದಿರದ ಪುರೋಭಾಗದೊಳ್ ನಿಂತು ರಾಯಂಗೆ ಬಿನ್ನವಿಸಿ,ಎಂದು ಪೇಳಿದ ಪ್ರಜಾಸಮೂಹಮಂ ಕಂಡು ಸಮುಖದ ಗುರಿಕಾರನು ಒಡ್ಡೋಲಗಂಗೊಂಡಿರುವ ರಾಯನ ಸಮುಖದೊಳ್ ಕೈಮುಗಿದುನಿಂತು ಸ್ವಾಮಿಾ ರಾಜಕಂಠೀರವನೆ ದೇಶದ ಪ್ರಜೆಗಳು ಪೈರುಗಳ ಪೊರೆಯಂ ಕಟ್ಟಿಕೊಂಡು ಬಂದು ಬಿನ್ನವಿಸತಕ್ಕ ಬಿನ್ನಪವುಂಟೆಂದು ಕಾದುಇಧಾರೆ.

ವರಾಂಬರಿಸಬೇಕೆಂದು ಬಿನ್ನವಿಸಲು, ಆ ಗುರಿಕಾರನ ಮಾತಂ ಕೇಳಿ ರಾಯನಚ್ಚರಿಗೊಂಡು ಸುಬುದ್ಧಿಯ ಮೊಗವಂ ನೋಡಲು, ಆ ಸುಬುದ್ಧಿಯು ರಾಯನಿದಿರಾಗಿ ಬಂದು ನಿಂದು ಕೈಮುಗಿದು, ಎಲೈ ಪ್ರಜಾಸಂರಕ್ಷಕನಾದ ರಾಜೇಂದ್ರನೆ, ಈ ಗುರಿಕಾರ ಬಿನ್ನೈಸಿದ ವೃತ್ತಾಂತವಂ ಕೇಳಲು ಎನ್ನಬುದ್ಧಿಗೆ ತೋರಿದ ಅರ್ಥವಂ ಬಿನ್ನೈಸುತಲಿಧೇನೆ, ಎಲೈ ಸ್ವಾಮಿಯೆ ಪೈರು ಕೆಡುವದಕ್ಕೆ ಅತಿವೃಷ್ಟಿ ಅನಾವೃಷ್ಟಿ ಶತ್ರುಬಾಧೆ ಈ ಮೂರುವಿಧವು ಲೋಕದಲ್ಲಿ ಉಂಟು. ನೀನು ಧರ್ಮದಿಂದ ರಾಜ್ಯವನ್ನಾಳುತ ವರ್ಣಾಶ್ರಮಧರ್ಮಂಗಳಂ ನಡೆಯಿಸುತ್ತಿರುವಲ್ಲಿ, ಅತಿವೃಷ್ಟಿ ಅನಾವೃಷ್ಟಿ ಮೊದಲಾದ ದೋಷಂಗಳು ಎಂದಿಗೂ ಆಗಲಾರವು. ನಿನ್ನ ಭುಜಬಲಪರಾಕ್ರಮಗಳಿಂದ ಶತ್ರುಗಳು ತಿರಸ್ಕೃತರಾಗಿ ಪಾದಾಕ್ರಾಂತರಾಗಿರುವಲ್ಲಿ ಶತ್ರುಭಾಧೆಯನ್ನು ಕನಸಿನಲ್ಲಾದರೂ ಊಹಿಸಕೂಡದು. ಈಗ ಪ್ರಜೆಗಳು ಪೈರುಗಳಂ ತೆಗೆದುಕೊಂಡು ಬಂದಿರುವ ಪರಿಯಂ ನೋಡಿದರೆ ಬಹುದಿವಸದಿಂದ ಸ್ವಾಮಿಯವರು ಮೃಗಯಾವಿಹಾರಾರ್ಥವಾಗಿ ಸ್ವಾರಿಯಂ ಬಳೆಯಿಸಲಿಲ್ಲವಾದಕಾರಣ ದುಷ್ಟಮೃಗಂಗಳು ಹೆಚ್ಚಿ ಪೈರುಗಳಂ ನಷ್ಟವಂ ಮಾಡಿರುವದಾಗಿ ಎನಗೆ ತೋರಿದ್ದರಿಂದ ತಿಳಿದಅರ್ಥವಂ ಪಾದದಲ್ಲಿ ಬಿನ್ನವಿಸಿರುವೆನು. ಈಗ ಪ್ರಜೆಗಳಂ ಕರೆಯಿಸಿ ವಿಚಾರಣೆಯಂ ಮಾಡಲಾಗಿ ದಿವ್ಯಚಿತ್ತಕ್ಕೆ ವೇದ್ಯವಾಗುವುದೆಂದು ನುಡಿದ ಅಮಾತ್ಯವಚನವಂ ರಾಯನು ಲಾಲಿಸಿ, ಎಲೈ ಮಂತ್ರಿಯೇ ನೀನು ಬಿನ್ನವಿಸಿದ ಅರ್ಥವೇ ನಮ್ಮ ಚಿತ್ತಕ್ಕೆ ಸಮರ್ಪಕವಾಗಿ ತೋರುವದರಿಂದ ಇದೆ ಯಥಾರ್ಥವಾಗಿರುವದೆಂದು ನಿರೂಪಿಸಿ ಗುರಿಕಾರನ ಮುಖವಂ ನೋಡಲು. ರಾಯನಿಂಗಿತವಂ ತಿಳಿದ ಗುರಿಕಾರನು ಆ ಕ್ಷಣದಲ್ಲಿಯೆ ಪೈರುಗಳಿಂದ ಸಹಿತರಾದ ಪ್ರಜೆಗಳೊಳ್ ಮುಖ್ಯರಾದವರಂ ಪೈರುಗಳಿಂದ ಸಹಿತವಾಗಿ ಕರೆತರಲು, ಅವರು ಮಹಾರಾಜನನ್ನೋಡಿ ತಮ್ಮ ತಲೆಮೇಲಿರುವ ಪೈರುಗಳ ಹೊರೆಗಳಂ ಮುಂದಿಟ್ಟು, ದಂಡಪ್ರಣಾಮವಂ ಗೈದು; ಎಲೈ ಚಕ್ರೇಶ್ವರನೆ ನಾವು ಬೆಳೆದ ಭತ್ತ,ರಾಗಿ,ಜೋಳ ಮೊದಲಾದ ಪೈರುಗಳಂ, ಅಡಕೆ, ತೆಂಗು, ಬಾಳೆ,

ಕಬ್ಬು ಮೊದಲಾದ ತೋಟಗಳಂ, ಮದ್ದಾನೆಗಳು ಹಿಂಡುಹಿಂಡಾಗಿನುಗ್ಗಿ ಒಕ್ಕಲಿಕ್ಕುತಲಿವೆ. ಇಂತಲ್ಲದೆ ಉಳುವ ಎತ್ತುಕೊಟ್ಟಗೆಗಳಲ್ಲಿ ಕಟ್ಟಿರುವ ಕರೆಯುವ ಹಸು ಎಮ್ಮೆಗಳಂ, ರಾಂಡಿಗಳಲ್ಲಿರುವ ಆಡು ಕುರಿ ಹಿಂಡುಗಳಂ, ಕರಬ ತೋಳಂಗಳು ತಿಂದು ತೇಗುತಲಿರುವುವು. ಮತ್ತೂ ಪೈರುಮಾರುಗಳ ತುಂಬಿಕೊಂಡು ಬರುವಮಾರ್ಗಂಗಳಲ್ಲಿ ಹೆಬ್ಬುಲಿಗಳು ಸಾಲುಸಾಲಾಗಿ ಅಡ್ಡಕಟ್ಟಿ ಜನಂಗಳನೆತ್ತಿಕೊಂಡು ಪೋಗುತಲಿವೆ. ಮತ್ತುಂ ಕರಡಿಗಳು ಹೊಲಗಳ ಅಟ್ಟಣೆಗಳಲ್ಲಿರುವ ಜೇನುತುಪ್ಪವಂ ಕುಡಿದು ರಾತ್ರಿ ಕಾವಲಿಗೆ ಬರುವ ಹೆಣ್ಣುಮಕ್ಕಳಂ ನಾನಾವಿಧದಿಂದ ಕಾಡುತಲಿವೆ. ಇದಲ್ಲದೆ ಗಿರಿಗಳಲ್ಲಿ ಸೌದೆಗಳಂ ತರುವದಕ್ಕೆ ಹೋದವರಂ ಗುಹಾಂತರಗಳಲ್ಲಿರುವ ಸಿಂಹಗಳು ಕಾಣದಂತೆ ಕೊಂದು ಕೆಡಹುವವು. ಮರಗಳ ಮರೆಯಲ್ಲಿ ತಿರುಗಾಡುವ ಕಾಡುಕೋಣಗಳ ಕಾಡುಹಂದಿಗಳ ಕೋಟಲೆಗಳಂ ಒಬ್ಬರಿಂದ ಪೇಳಲಾರೆವು. ಈ ಉಪದ್ರವಂಗಳಂ ಪರಿಹರಿಸಿ ನಮ್ಮ ಪೈರುಪಚ್ಚೆಗಳಂ ಕೈಸೇರುವಂತೆ ಮಾಡಿ ಸಂರಕ್ಷಿಸಬೇಕೆಂದು ಮೊರೆಯಿಟ್ಟು ಕೆಟ್ಟುಹೋದ ಪೈರುಗಳಂ ತೋರಿದ ಪ್ರಜೆಗಳ ಮಾತಂ ಲಾಲಿಸಿ ರಾಯನಿಂತೆಂದನು ನಾಳೆಯೇ ಮೃಗಯಾವಿಹಾರಾರ್ಥವಾಗಿ ಬಂದು ಸಕಲ ದುಷ್ಟಮೃಗಂಗಳಂ ಸಂಹರಿಸಿ ನಿಮ್ಮ ಕಷ್ಟಗಳು ಬಿಡಿಸುತಲಿರ್ಧೇನೆ ಎಂದು ಅಪ್ಪಣೆಯನಿತ್ತು, ನಷ್ಟವಾದ ಪೈರುಗಳನಿಮಿತ್ತವಾಗಿ ಉಚಿತವಾದ ದ್ರವ್ಯವನಿತ್ತು ಉಡುಗೆರೆಗಳಂ ಕೊಟ್ಟು ಕಳುಹಿ, ಸುಬುದ್ಧಿಮೊಗವಂ ನಸುನಗುತ ನೋಡಿ ಎಲೈ ಮಂತ್ರಿಶ್ರೇಷ್ಠನೇ ಪರರ ಇಂಗಿತವಂ ಊಹಿಸಿ ತಿಳಿಯುವಸಾದಕಾರಣ ನಿನಗೆ ಸುಬುದ್ಧಿ ಎಂಬ ಪೆಸರು ಸಾರ್ಥಕವಾಗಿರುವದೆಂದು ಶ್ಲಾಘನೆಯಂ ಮಾಡಿ ತನ್ನ ಕಂಠದಲ್ಲಿದ್ದ ಮುತ್ತಿನಹಾರವಂ ಮಂತ್ರಿಯ ಕೊರಳೊಳ್ ಕಟ್ಟಿ, ಎಲೈ ಸುಬುದ್ಧಿಯೇ, ಮೃಗಯಾವಿಹಾರಾರ್ಥವಾಗಿ ಸವಾರಿಯಂ ಪೋಗಿಬರುತ್ತಲಿರ್ಧೇನೆ. ನೀನು ಧರ್ಮದಿಂದ ರಾಜ್ಯವಿಚಾರಣೆಯಂ ಮಾಡುತ ನಡೆದ ವೃತ್ತಾಂತವಂ ನಮ್ಮ ಪಟ್ಟದರಸಿಯಾದ ಗುಣವತಿಗೆ ಬಿನ್ನೈಸುತ, ಅರಸಿ ಅಪ್ಪಣೆಯಂಕೊಟ್ಟಂತೆ

ನಡೆಯುತ, ಆಯುಷ್ಮಂತನಾದ ಸುಗಂಧರಾಜಕುಮಾರನ ಯೋಗಕ್ಷೇಮವಂ ಅಡಿಗಡಿಗೆ ವಿಚಾರಿಸುತ, ನಡೆದ ವಿಚಾರವಂ ಪತ್ರಿಕಾಮುಖದಿಂ ನನಗೆ ತಿಳಿಯಿಸು. ಜಾಗ್ರತೆಯಿಂದಿರುವುದು. ಬಹುಕಾಲದಿಂದಾಪ್ತಮಿತ್ರಿಯಾದ ನಿನಗೆ ವಿಶೇಷವಾಗಿ ಅಪ್ಪಣೆಯಂ ಕೊಡತಕ್ಕದ್ದೇನಿದೆ. ಎಂದು ಆಜ್ಞಾಪಿಸಿದ್ದಂ ಕೇಳಿ ಸುಬುದ್ಧಿಯು ಮಹಾಪ್ರಸಾದವೆಂದು ರಾಯನಾಜ್ಞೆಯಂ ಶಿರಸಾವಹಿಸಿ ದಂಡಪ್ರಣಾಮವಂ ಗೈದು ಕೈಕಟ್ಟಿ ಪಾರ್ಶ್ವದೊಳ್ನಿಂತಿರಲು, ರಾಯನು ಕೆಲದೊಳ್ನಿಂತಿರುವ ಸೇನಾಪತಿಯುನ್ನೋಡಿ ಎಲೈ ಮುಖ್ಯಸೇನಾಪತಿಯಾದ ವೀರಸೇನನೇ ನಾಳೆಯದಿವಸ ಬೇಟೆಗೆ ಪ್ರಯಾಣವಂ ಮಾಡುತಲಿರ್ಪೆನ, ಅದಕ್ಕೆ ಬೇಕಾದ ಸಾಧನಂಗಳಂ ಸಜ್ಜುಗೊಳಿಸಿ ಚತುರಂಗಬಲಸಮೇತನಾಗಿ ರಾಜದ್ವಾರದಬಳಿಯಲ್ಲಿ ಅಲಂಕೃತವಾದ ರಥವಂ ಸಜ್ಜುಗೊಳಿಸಿ ನೀನೂಕೂಡಾ ಸನ್ನದ್ಧನಾಗಿ ಕಾದಿರೆಂದು, ಸೇನಾಪತಿಯನ್ನು ನಿಯಮಿಸಿ ಒಡ್ಡೋಲಗದಲ್ಲಿ ಅವಶ್ಯಕಗಳಾದ ಕಾರ್ಯಂಗಳಂ ನೆರವೇರಿಸಿ ಅಲ್ಲಿಂದೆದ್ದು ಅಂತಃಪುರಕ್ಕೆ ಹೋಗಬೇಕೆಂದು ನಿಶ್ಚಯಿಸಿ, ಅಂತಃಪುರಾಭಿಮುಖವಾಗಿ ಬರುತ್ತಿರಲು, ಆಗ ರಾಣಿ ಗುಣವತಿಯು ಮಂಜುವಾಣಿಯ ವಚನದಿಂದ ರಾಯನು ಬರುವುದಂ ತಿಳಿದು, ಅವಳ ಹಸ್ತಾಲಂಬದಿಂ ರಾಯನ ಇದಿರಾಗಿ ಬಂದು ಸಾಷ್ಟಾಂಗ ಪ್ರಣಾಮವಂ ಗೈದು, ಪನ್ನೀರುಗಳಿಂದ ಪಾದಂಗಳಂ ತೊಳೆದು ಹಸ್ತಾಲಂಬವಂ ಕೊಟ್ಟು ಭೋಜನಶಾಲೆಗೈತಂದು, ಇರ್ವರೂ ಮೃಷ್ಟಾನ್ನಭೋಜನಂ ಗೈಯ್ಯಲು, ರಾಯನು ರಾಣಿಯ ಹಸ್ತಾಲಂಬದಿಂ ಶಯ್ಯಾಗೃಹವಂ ಪೊಕ್ಕು ಮಣಿಮಂಚದೊಳ್ ರಾಣಿಯೊಪ್ಪಿಸುವ ಕರ್ಪೂರದ ವೀಳ್ಯದ ಮಡುಪುಗಳಂ ಒಪ್ಪಿಸಿಕೊಳ್ಳುತ ಪಟ್ಟದರಸಿಯಂ ಕುರಿತು ಎಲೈ ಪ್ರಿಯಳೇ ರಾಜ್ಯದೊಳ್ ಹೆಚ್ಚಿದ ದುಷ್ಟಮೃಗಂಗಳ ಬಾಧೆಗಳಂ ಸಹಿಸಲಾರದೆ ಮೊರೆಯಿಡುವ ಪ್ರಜೆಗಳ ಸುರಕ್ಷಣೆಗೋಸುಗ ನಾಳೆ ಉದಯದೊಳ್ ಬೇಟೆಗೆ ಪೋಗಿಬರುವೆನೆಂದು ಪೇಳಲಾಮಾತಂ ಕೇಳಿ, ಸತೀಶಿರೋಮಣಿಯಾದ ಗುಣವತಿಯು ರಾಯನಡಿದಾವರೆಗಳಿಗೆರಗಿ, ಎಲೈ ಪ್ರಾಣಪ್ರಿಯನೆ ಬೇಟೆಯನಾಡುವಪರಿಯಂ ನೋಡಬೇಕೆಂದು

ಇಚ್ಛೈಸುವ ಎನಗೆ ನಿನ್ನೊಡನೆ ಬರುವಂತಪ್ಪಣೆಯಂ ಕೊಡಬೇಕೆಂಬ ರಾಣಿಯವಾಕ್ಯವಂ ಕೇಳಿ, ರಾಯನು ಎಲೈ ಮೋಹನಾಂಗಿಯಾದ ಎನ್ನರಸಿಯೇ ಕ್ರೂರಂಗಳಾದ ಮೃಗಂಗಳಿಂ ಕೂಡಿರುವ ಘೋರಾರಣ್ಯವಂ ಸುಕುಮಾರಾಂಗಿಯರಾದ ಸ್ತ್ರೀಯರುಗಳ ಪ್ರವೇಶಿಸುವದುಚಿತವಲ್ಲ ಇದಲ್ಲದೆ ಮಂತ್ರಿಯಾದ ಸುಬುದ್ಧಿಯು ರಾಜ್ಯವಿಚಾರವಂ ಅರಿಕೆಮಾಡಿದ್ದಕ್ಕೆ ವಿಹಿತವಾಗಿ ಬದಲುಅಪ್ಪಣೆಯಂ ಕೊಡುತ, ರಾಜ್ಯವಂ ಸಂರಕ್ಷಿಸುತ, ಮಣಿಮಂಜರಿ, ಚಂದ್ರಕಲೆ ಮುಂತಾದ ಕಾಂತೆಯರಂ ಎಂದಿನಂತೆ ಸನ್ಮಾನದಿಂ ಕಾಣುತ, ಪುತ್ರನಾದ ಸುಗಂಧರಾಜಕುಮಾರನಂ ಸಲಹುತ, ಸ್ಥಿರವಾಗಿ ರಾಜ್ಯಲಕ್ಷ್ಮಿಯಂತೆ ರಾಜಮಂದಿರದಲ್ಲಿರುತ, ಇಲ್ಲಿ ನಡೆದ ವೃತ್ತಾಂತವಂ ಸ್ವಹಸ್ತಾಕ್ಷರದ ಪತ್ರಿಕಾಮುಖದಿಂದ ಎನಗೆ ತಿಳುಹಿಸಿ ಮನಸ್ಸಂತೋಷವಂಗೈಯುತಲಿರುವುದು. ಇದಲ್ಲದೆ ಎನ್ನೊಡನೆ ನೀನು ಬಂದೆಯಾದರೆ ಈ ರಾಜ್ಯಭಾರವು ಯಾರಭರವಸದಿಂದ ಬಿಟ್ಟುಹೋಗುವೆನೆಂದು ಹೇಳಿ ರಾಣಿಯಂ ಸಂತವಿಸಲು, ರಾಣಿ ಗುಣವತಿಯು ರಾಯನಮಾತಂ ಮಹಾಪ್ರಸಾದವೆಂದು ಒಡಂಬಟ್ಟು, ಎಲೈ ಪ್ರಾಣಕಾಂತನೆ ನಿನ್ನಪ್ಪಣೆಮೇರೆಗೆ ನಡೆಯುವುದು ನನಗೆ ಪರಮಧರ್ಮವೇಸರಿ. ನಿನ್ನ ಮುದ್ರಾಂಕಿತಂಗಳಾದ ಪತ್ರಿಕೆಗಳಂ ಅನವರತದಲ್ಲಿಯು ಕಳುಹಿಸುತ ನನ್ನ ಮನಸ್ಸಂತೋಷವಂ ಮಾಡಬೇಕೆಂದು ಮಧುರವಾಗಿ ನುಡಿದ ರಾಣಿಯ ಮೃದುವಾಣಿಯಂ ಕೇಳಿ, ರಾಯನು ಪರಮಸಂತೋಷಭರಿತನಾಗಿ ರಾಣಿಯಂ ತಕ್ಕೈಸಿ ಶೃಂಗಾರವಿಹಾರಂಗಳಿಂದಾರಾತ್ರಿಯೊಳ್ ಸುಖದಿಂದಿರುತ್ತಿರಲು, ಆಗ ಸೇನಾಪತಿಯಾದ ವೀರಸೇನನು ಮಹೀಪಾಲಕನಾಜ್ಞಾನುಸಾರವಾಗಿ ವನದೊಳಗೆ ಮಾಳ್ಪ ದುಷ್ಟಮೃಗಂಗಳ ಬೇಟೆಗನುಕೂಲವಾದ ಹೆಬ್ಬಲೆ, ಕಿರುಬಲೆ, ಬಿರಸು, ಬಾಣ, ಬೋನು, ಸಿಡಿ, ಭಂಡಿ, ನೆಲಗೂಡು, ಮದ್ದು, ಗುಂಡು, ನೂಲೇಣಿ, ಮಣಿಹಗ್ಗ, ಹೊರಜಿ, ಸರಪಣಿ, ಸಂಕೋಲೆ, ಮಚ್ಚು, ಕೊಡಲಿ, ಕವಗೋಲು ಮೊದಲಾದವಂ, ಮೃಗಂಗಳಂ ಮುಟ್ಟಿಸಿಹಿಡಿಯುವ ಬೇಟೆನಾಯಿಗಳಂ ಉರುಳುಗಳಂ ಕೂಡಿದ ಕೊಂಬುಗಳಿಂದೊಪ್ಪುವ ಸಾಕಿದ ಸಾರಂಗಗಳಂ

ಮೃಗವರ್ಗಂಗಳಗೆ ಮೃತ್ಯುರೂಪಂಗಳಾಗಿ, ಚಿತ್ರವರ್ಣಂಗಳಾದ ಮೈಬಣ್ಣಗಳಿಂದೆಸೆವ ಶಿವಾಗಿಗಳ ಸಮೂಹಂಗಳಂ, ಗಗನಮಂತುಡುಕಿ ಗಿಡಗಳಂಪ್ರೊಕ್ಕು ಪಕ್ಷಿಗಳ ಗೂಡುಗುಂಪುಗಳ ಗೂರಾಡುವ ಗಿಡಗ, ಲಗುಡ, ಬಿಜ್ಜ್ರಗಳಂ ಜನಗಳೊಡನೆ ಜೊತೆಮಾಡಿ ಇಂತಲ್ಲದೆ ಕೆಲವರು ಕಾವಿಚಲ್ಲಣಂಗಳಂತೊಟ್ಟು ದಟ್ಟಿಗಳಂಧರಿಸಿ ಒರೆರುಮಾಲುಗಳಕಟ್ಟಿ ಎಕ್ಕೀಕೊನೆ ಲಕ್ಕೀತೆಪೆ ಕಕ್ಕೇಕುಡಿಗಳಂ ಸಿಕ್ಕಿ ಮಗ್ಗುಗಳಂಮುಡಿದು ಪಣೆಗಳಲ್ಲಿ ಪಿರಿದಾಗಿ ನಾಮಗಳನಿಟ್ಟು, ಕಣ್ಬಳಸಿವಿಭೂತಿಗಳಂಪ್ರೂಸಿ, ಕೈಗಳೊಳ್ಕತ್ತಿ ಕಠಾರಿ ಬಾಕು ಭರ್ಜಿ ಭಲ್ಲೆ ಬಿಲ್ಲು ಬಾಣ ಕವಣೆ ಮುಂತಾದ ಆಯುಧಂಗಳಂಪ್ರೊತ್ತು, ಕುಣಿವಕೆಂಮೀಸೆಗಳ ಹುರಿಮಾಡಿ ಕೆಂಗಣ್ಣುಗಳ ತಿರುಗಿಸುತ ಹುಬ್ಬುಗಳ ಹಾರಿಸುತ ಭಂಗಿಗಳಮದದಿಂದ ಭಯವಿಲ್ಲದೆನಿಂತು ತಬ್ಬಿಬ್ಬುಮಾತುಗಳಂನುಡಿಯುತ್ತ ಬೊಬ್ಬಿರಿದು ನೋಡುತಲಿರುವ ಬೇಡರಬೇಟೆಗಾರರಂ ಕೆಲವರು ಚಿನ್ನ ಬೆಳ್ಳಿಗಳಭಂತಿಗಳಂ ಬಲಗೈಗಳಂಪಿಡಿದು ಮತ್ತೊಂದು ಹಸ್ತಗಳಂ ಕಬ್ಬಿಣದಸರಪಣಿಗಳಂಕಟ್ಟಿರುವ ಪರಿಪರಿಯಾದ ಬೇಟೆನಾಯಿಗಳಂ ಪಿಡಿದು ಸಾಲುಸಾಲಾಗಿನಿಂತು ನಲಿಯುತಲಿರುವ ಓಲೆಕಾರರ ತಂಡಂಗಳಂ, ಚಕ್ಕಳದ ಕುಲ್ಲಾವಿಗಳನಿಟ್ಟು ಚಡ್ಡಿಗಳತೊಟ್ಟು ನಡುವಿನೊಳ್ಕೊಡಗತ್ತಿಗಳಕಟ್ಟಿ ಕೋವಿಗಳಪಿಡಿದು ಓಡುವ ಮೃಗಗಳಂ ಗುರಿನೋಡಿ ಹೊಡೆಯುವ ಈಡುಗಾರರಂ ಸನ್ನಹಿಸಿ, ಇಂತಲ್ಲದೆ ಸೊಪ್ಪುಗಳ ಉಡುಗೆಯನ್ನುಟ್ಟು ಕರಿಯಕಂಬಳಿಗಳಂಪ್ರೊದ್ದು ಮೃಗಂಗಳ ಸೆರೆಯಂ ಗೊತ್ತುಮಾಡುವ ಕಾಡುಕುರುಬರಂ ಮುಂದೆಕಳುಹಿಸಿ, ಸಲಗಮೊದಲಾದ ಗಜಂಗಳು ಜಿಗುಳಬೀಳುವಂತೆ ಹೊಲಗಳಲ್ಲಿ ಮಾರ್ಗಂಗಳಲ್ಲಿ ಕಪ್ಪುಗಳು ತೋಡುವುದೆಂದು ಕಟ್ಟುಮಾಡಿ ಕಪ್ಪುಗಾರರಂಕಳುಹಿ, ಅಡವಿಯೊಳ್ಕೂಡಿರುವ ಕಡವೆ ಕರಡಿ ಮುಂತಾದ ಮೃಗಂಗಳಂಪೋಗದಂತೆ ತಡೆದು ಸುತ್ತುಮುತ್ತಲು ಒತ್ತಾಗಿಕಾಯುವುದೆಂದು ಮುತ್ತಿಗೆಯವರಂಗೊತ್ತಾಗಿಕಳುಹಿ, ರಥಗಜತುರಗಮೊದಲಾದ ಸೈನ್ಯ ಬರುವದಾರಿಯಲ್ಲಿ ಹಳ್ಳತಿಟ್ಟುಗಳಂ ಸರಿಮಾಡಿ, ರಾಯನು ಇಳಿದಬಳಿಯಲ್ಲಿ ಬೇಕಾದ

ಹಾಲ್ಮೊಸರು ಬೆಣೆ ಎಲೆ ಕಾಯಿಸಹಿತವಾಗಿ ಬೇಕಾದ ವಸ್ತುವು ಸ್ತೈದೆಗಳಂ ಕಾಲಾಳುಗಳಿಂದ ಸನ್ನಹಿಸಿಕೊಂಡು, ಯಾವಾಗ ಏನು ಬೇಕಾದರೂಕೊಡುವಂತೆ ಆಯಾಯುಜನಂಗಳಂಸಿದ್ಧವಿಟ್ಟು ಕಾದುಕೊಂ ರುವಂತೆ ಅಲ್ಲಲ್ಲಿರುವ ಅಧಿಕಾರಿಗಳಿಗೆ ಅವೂತ್ಯನುತ್ತರಂಗಳಂ ಬರೆಯಿ ಸಿ ಕಳುಹಿಸಿ, ವನಂಗಳೊಳ ಬಿಡಾರಂಗಳಂವಾಡುವುದಕ್ಕೆ ದೃಢವಾ ದ ಗುಡಾರಂಗಳು ವೊದಲಾದ ಸಂಭಾರಂಗಳುಕಳುಹಿ, ಸಂಗಡಬರುವ ಸೈನ್ಯವಂ ಸಜ್ಜುಗೊಳಿಸಿ, ತಾನು ಸ್ನಾನಭೋಜನಾದಿಗಳಂಗೈದು, ವೃಗಯಾವಿಹಾರಕ್ಕೆ ಯೋಗ್ಯಗಳಾದ ಆಯುಧಾಭರಣಂಗಳಂಧರಿಸಿ; ಆಸ್ಥಾನವಂಕುರಿತು ಬರುತ ರಾಜಭವನದ ವುುಂಭಾಗವೊಳ್ನಿಂತಿರುವ ನವರತ್ನಮಯವಾದ ಮೇಘಂಗಳಂಕೂಡಿರುವಮೇರುವಿನಂತಿರುವ ರಾಜ ರಥದ ಸವಿಾಪದೊಳ್ ಪರಿವಾರವೆಲ್ಲವಂನಿಲ್ಲಿಸಿ, ಭಯ ಭಕ್ತಿಯುಕ್ತಿ ಗಾಂಭೀರ್ಯವರ್ಯಾದೆಗಳಿಂದ ಅರಮನೆಯುಂಪ್ರೊಕ್ಕು, ವುಹಾರಾಜನು ಸುಖನಿದ್ರೆಯಂಗೈಯುವ ಚಿನ್ನದ ಚಿಕ್ಕಹಜಾರದೊಳ್ನಿಂತು, ಬಾಗಿಲ ವಿಚಾರವಂಗೈಯುವ ಸ್ತ್ರೀಜನಂಗಳ ವುುಖದಿಂ ತಾನು ಬಂದಿರುವ ಅ ವಶ್ಯಕಾರ್ಯವಂ ರಾಯಂಗೆ ವಿಜ್ಞಾಪನೆಯಂಗೈಯಲು, ರಾಯನದಂಕೇ ಳಿ ಉದಯಪರ್ವತದಿಂದ ಉದಯಿಸುವ ಸೂರ್ಯನಂತೆ ರತ್ನಪರ್ಯಂಕದಿಂ ದೆದ್ದು ದರ್ಪಣ ವೊದಲಾದ ಶುಭವಸ್ತುಗಳದರ್ಶನಂಗೈದು, ಸ್ನಾನಾ ಹ್ನಿಕಗಳನ್ನೆರವೇರಿಸಿ, ಮಧುರವಾದ ಷಡ್ರಸಾನ್ನವಂ ಸತಿಸುತಸಹಿತ ವಾಗಿ ಸವಿದು, ರಾಣಿಯೊಪ್ಪಿಸುವ ಕಪ್ಪುರವೀಳ್ಯವಂಕೈಕೊಳುತ, ಎಲ್ಲೈ ಅರಸಿಯೆ ವನವಿಹಾರಂಗಳಂವಾಡಿ ತಿರುಗಿ ಬರುವ ಪರ್ಯಂತವು ರಾಜಯೋಗ್ಯಂಗಳಾದ ಸಕಲವಿಧಭಕ್ಷ್ಯಭೋಜ್ಯಂಗಳಂ, ಹಿತರಾದ ಪಾಚಕಜನರೊಡಗೂಡಿಸಿ,ಪ್ರತಿದಿನವು ಕಳುಹಿಸುತ ಬರುವುದೆಂದು ರಾ ಣಿಗೆ ಅಪ್ಪಣೆಯನ್ನಿತ್ತು, ವುಣಿವುಂಜರಿ ಚಂದ್ರಕಳೆವೊದಲಾದ ಕಾಂ ತೆಯರಂಕರೆದು ಕೈಪಿಡಿದು ನೀವೆಲ್ಲರು ಪಟ್ಟದರಸಿಯ ಛಾಯಾನುಸಾರ ವಾಗಿರುತ ಬಾಲಕನಾದ ಸುಗಂಧರಾಜಕುಮಾರನಂ ಸಕಲವಿಧದಿಂದ ಸಾ ಕುತ್ತಲಿರುವುದೆಂದು ಅವ್ಮೃತ ಸದೃಶವಾದ ತನ್ನ ವಚನರಚನೆಯಿಂದ

ಸಂತೋಷಗೊಳಿಸಿ ರಾಣಿಯಾದ ಗುಣವತಿಗೆ ಕ್ಷೇಮಾಲಿಂಗನದಿಂ ಸೌಖ್ಯಗೊಳಿಸಿ, ಸುಗಂಧರಾಜಕುಮಾರನಂ ಅಂಕದೊಳ್ಕುಳ್ಳಿರಿಸಿ ಮುದ್ದಿಟ್ಟು ಶಿರಸ್ಸನಾಘ್ರಾಣಿಸಿ, ಅಂತಃಪುರದಿಂದ ಹೊರಟು ಉಚಿತವಾದ ಸೇನಾಜನರಿಂದ ಪರಿವೃತನಾಗಿ ಶಕುಂತಶಾಲೆಗೆ ಬಂದು ನವನಿಧಿಗಳಂ ಬೆಲೆಯಾಗಿ ತಾಳುವನವರತ್ನಮಯ ಕಿರೀಟವಂ ಧರಿಸಿ, ರೂಪವಂತಾಳಿ ಬಂದಿರುವ ಭುಜಪ್ರತಾಪವೋ ಎಂಬಂತೆ ಪೊಳೆಯುವ ಪದ್ಮರಾಗಮಣಿಗಳಿಂ ನಿರ್ಮಿತವಾದ ಭುಜಕೀರ್ತಿಗಳಂ ಕಟ್ಟಿ ಗಗನವಂ ವ್ಯಾಪಿಸಿ ನಿಬಿಡವಾಗಿ ಬೆಳೆದಿರುವ ವೃಕ್ಷಂಗಳ ಸಮೂಹಂಗಳಿಂ ಕತ್ತಲೆಗೊಂಡಿರುವ ವನವಂ ಪ್ರೋಕ್ಷ್ಯ, ಅಂಧಕಾರವಂ ಪರಿಹರಿಸಲೋಸುಗ ಬರುತಲಿರುವ ದಿನಕರನಂತೆ ಶೋಭಿಸುವ ರತ್ನಮಯಕವಚವಂ ತೊಟ್ಟು, ಮಿಂಚಿನಂತೆ ಪೊಳೆವ ನಡುಕಟ್ಟಿನಿಂ ಕೂಡಿ ಬಿಗಿವಬಿಗಿಯಾದ ಮುತ್ತಿನಚಲ್ಲಣದಿಂದಳವಟ್ಟು, ಪಾದದೊಳ್ ರತ್ನಪೆಂಡ್ಯವಂ ತಾಳ್ದು, ಬೆನ್ನಿನೊಳ್ನೀಲದ ಖೇಡ್ಯವಂ, ಪಚ್ಚೆಯ ಬತ್ತಳಿಕೆಯುಂ, ಪೆಗಲೊಳ್ವಜ್ರಧನುಸ್ಸಂ ಕರದೊಳ್ ಥಳಥಳಿಸಿ ಬಳುಕಿಹೊಳೆಯುವ ಚಂದ್ರಹಾಸವಂ ಧರಿಸಿ, ನಡುಕಟ್ಟಿನೊಳ್ಕಠಾರಿಯುಂ ಸಿಕ್ಕಿ, ಪಣೆಯೊಳ್ ಕಸ್ತೂರಿತಿಲಕವನಿಟ್ಟು ಉಕ್ಕುವ ಉತ್ಸಾಹದಿಂ, ವೀರವೈಯಾರದಿಂ, ಅನವರತ ಸನ್ನಿಧಿಯೊಳಿರುತ ಇಂಗಿತವಂ ತಿಳಿದು ಕಾರ್ಯದೊಳ್ಕುಶಲರಾದ ಸೇನಾಜನರಿಂದೊಡಗೂಡಿಬರುತ, ಕೈಕಟ್ಟಿ ಸನ್ನದ್ಧನಾಗಿ ನಿಂತಿರುವ ಸೇನಾಪತಿಯುಂ ನೋಡಿ, ನಸುನಗುತ ವನಕಯ್ಯಂ ಪಿಡಿದು ಸಕಲಸನ್ನಾಹವನ್ನೋಡುತ ಇಕ್ಕೆಲದೊಳ್ ಎಚ್ಚರಿಕೆ, ಪರಾಕು ಜತ್ತನಪಾದಾವಧಾನವೆಂದು ಅವಸರದವರು ನುಡಿಯುತ್ತಿರಲು, ವಂದಿಮಾಗಧರ, ಕೈವಾರದ ಮಧುರಾಲಾಪಗಳನ್ನಾಲಿಸುತ, ದುಂದುಭಿಕಾಹಳೀ ಢಕ್ಕಾದಿ ವಾದ್ಯವಿಶೇಷಂಗಳ ಝೇಂಕಾರಶಬ್ದಗಳ ಸಂಭ್ರಮದಿಂದ ಥರಥರವಾಗಿ ಕರಗಳಂ ಶಿರದೊಳಿಟ್ಟು ಧೀಯೆಂದು ಮಡಿಸುವ ಭಟರ ಪ್ರಣಾಮಂಗಳಂ ನಿರೀಕ್ಷಿಸುತ, ನರ್ಮಸಚಿವನಾದ ಚಿತ್ರವರ್ಮನಿಂದೊಡಗೂಡಿ ಮುಂದೆ ನಿಂತಿರುವ ಮಣಿರಥವನ್ನೇರಿ, ಪೂರ್ಣಚಂದ್ರೋದಯದೊಳ್ ಮೇರೆಯುಂ ಮೀರಿಬರುವ

ಸಮುದ್ರನಂತಿರುವ, ಸುತ್ತಲು ಒತ್ತಿಬರುವ ಸೇನೆಯಿಂದೊಡಗೂಡಿ ಸೇನಾಪತಿಯು ವಿವರಿಸುವ ಪರಿಪರಿಯಾದ ಭಟರನ್ನೀಡುತ ರಾಜಬೀದಿಯೊಳ್ ತೆರಳಬರುತ್ತಿರಲು, ಶಕುನಾರ್ಥವಾಗಿ ಪುರಜನರು ಪಿಡಿದಿರುವ ಮಂಗಳದ್ರವ್ಯಗಳಂ, ಪುರದಲಂಕಾರಗಳಂ ನಿರೀಕ್ಷಿಸುತ, ಸಕಲಸೇನಾಜನದ ಕೋಲಾಹಲವಂ ಕೇಳುತ, ಮಾರ್ಗದೊಳಲ್ಲಲ್ಲಿ ಪಾನಕವೊದಲಾದ ಪದಾರ್ಥಂಗಳಿಂದ ಸಮೃದ್ಧಂಗಳಾಗಿ ತೆಳರುಗಳ ಚಪ್ಪರಂಗಳಂ ತಂಪಾಗಿರುವ ಅರವಟ್ಟಿಗೆಗಳಂ, ಊರುಗಳ ಸಮೀಪದೊಳ್ ಥರಥರಮಾಗಿ ಚಿಗುರುವೆಲೆಗರುಗಳಿಂದ ಕಟ್ಟಿರುವ ತೋರಣ ಬಾಳೇಕಂಬಗಳಂ, ಅಲ್ಲಲ್ಲಿರುವ ಪುರಗ್ರಾಮಾಧಿಪತಿಗಳು, ಅಗ್ರಹಾರಿಕರು, ವರ್ತಕರು, ಪ್ರಜಗಳು ಮುಂತಾದ ದೇಶವಜನರ ಧನಕನಕ ವಸ್ತುವೀಳ್ಯ ಪುಷ್ಪಫಲ ಮೊದಲಾದ ಕಪ್ಪಕ್ಕೈಗಾಣಿಕೆಗಳಂ ಕಟಾಕ್ಷಿಸುತ, ಗಜತುರಗರಥಮೊದಲಾದ ಚತುರಂಗಸೇನಾಸಮ್ಮರ್ದದಿಂದೆದ್ದಿರುವ ಧೂಳಿಗಳು ದಿಕ್ಕುದಿಕ್ಕುಗಳಂ ತುಂಬಿ ತೂರ್ಯಾದಿ ಸಮುದ್ರಂಗಳಂ ನೆಲವಂಮಾಡಿ, ಗಗನಮಂ ಅಡರ್ದು, ಸೂರ್ಯಪ್ರಭೆಯಂ ಮಂದವಂ ಮಾಡಿ ಸೇನಾಪುರೋಭಾಗದೊಳ್ ತಾನೇ ನಡದುಬರುವ ಚಿತ್ರಧ್ವಜಗಳಂದಂತೆ ತೋರಿ ಸೇನಾಜನಂಗಳಂಗೋಪಾಂಗಗಳಲ್ಲಿ ಒಂದೊಂದು ಬಗೆಯಾಗಿ ತೋರುತ್ತಿರಲು ವೇಗದಿಂ ಬಂದು ಬಿಡಾರವಾದ ಗುಡಾರವನ್ನೈದಿ, ವನವಿಹಾರಕ್ಕೆ ಯೋಗ್ಯವಲ್ಲದ ಜನಗಳಂವಸ್ತುಗಳಂ, ಅಲ್ಲಿಯೇ ನಿಲ್ಲಿಸಿ ಉಪಯುಕ್ತವಾದ ಜನ, ಮೃಗ, ಪಕ್ಷಿ, ವಸ್ತುಗಳಿಂದ ಪರಿವೃತನಾದ ಸೇನಾಪತಿಯಿಂದೊಡಗೂಡಿಬರುತ್ತ ಎಲೈ ವೀರಸೇನನೇ ನಾವು ಮೃಗಯಾವಿಹಾರಾರ್ಥವಾಗಿ ವನವಂ ಪ್ರವೇಶಿಸುವದರಿಂದ ನಾನಾವಿಧಂಗಳಾದ ವಾದ್ಯಶಬ್ದಗಳಂ ಕೇಳಿ ಮೃಗಂಗಳು ಚದುರಿಪೋದಾವು. ಅದರಿಂದ ಗಜಗಳಿಗೆ ಕಟ್ಟಿರ್ಪ ಘಣಾತ್ಕಾರಂಗೈವ ಘಂಟೆಗಳಂ ತೆಗೆದು ಕುದುರೆಗಳು ಕೂಗದಂತೆ ಎದೆಕಟ್ಟುಗಳಂ ಬಿಗಿಯಾಗಿ ಬಿಗಿದು, ಸೈನಿಕರು ಪರಸ್ಪರವಾಗಿ ಕೂಗದೆ, ಸನ್ನೆಗಳಿಂದಲೇ ಮಾರ್ಗಂಗಳಂ ತಿಳಿದು, ಭೇರಿಮೊದಲಾದ ವಾದ್ಯಗಳಂ ಧ್ವನಿಮಾಡದೆ ಬರುವುದೆಂದು ಆಜ್ಞಾಪಿಸಲು, ಅದೇಮೇರೆಗೆ ನಿಶ್ಶಬ್ದ

ವಾಗಿ ಬರುವ ಭಟರಿಂದೊಡಗೂಡಿ, ಮಾವು, ಮಾದಳ, ಪಗಡೆ, ಪಾರಿಜಾತ, ನೆಲ್ಲಿ, ಕಿರುನೆಲ್ಲಿ, ಹೊನ್ನೆ, ಸುರಹೊನ್ನೆ ಬನ್ನಿ, ಬಗನಿ, ಗೋಣಿ, ಸಾಮ್ರಾಣಿ, ಲಕ್ಕಿ, ಬಿಕ್ಕೆ, ಕಕ್ಕೆ, ಶೀಬು, ಶೀಬಿ, ಬಾಗಿ, ಬಸುರಿ, ನಿಂಬೆ, ದಾಳಿಂಬ. ಬೇಲ, ಜಾಲ, ಅತ್ತಿ, ಮತ್ತಿ, ಹುಣಸೆ, ಅಗಸೆ, ಅರಸಿ, ಅಳಲೆ, ಹೆರಳೆ, ಬಿರಡೆ, ಬೇವು, ಹಾಲೆ, ತಾಳೆ, ವಾಲೆ, ಬಾಳೆ, ಹೆದ್ದೇರಣಿ, ತ್ಯಾರಣಿ, ಗೊರವಿ, ಗೊರಟೆ, ಯತ್ತೆಗ, ಮುತ್ತೆಗ, ತಗಚೆ, ಯಗಚೆ, ಚಂದನ, ಚಕ್ಕೋತ, ಚಳ್ಳೆ, ಚುಜ್ಜಲು, ಗೇರು, ದೇವದಾರು ಖರ್ಜೂರ, ತಾರೆ, ಹೊಂಗೆ, ತೆಂಗು, ಲವಂಗ, ಸಂಪಿಗೆ ಮೊದಲಾದ ಗಗನವಂ ತಡುಕುವ ವೃಕ್ಷಂಗಳೋಳ್ ಹಬ್ಬಿ ವಿಟರುಗಳಂ ಕೂಡುವವಿಲಾಸಿನಿಯರಿಗುಪದೇಶವಂ ಕೊಡುವಂತೆ ತೋರುತಲಿರುವ ಮಲ್ಲೆ, ಮಲ್ಲಿಗೆ, ಜಾಜಿ, ನೊದಲಾದ ಲತೆಗಳಲ್ಲಿ ಅರಳಿರುವ ಪುಷ್ಪಂಗಳಿಂದ, ರಾಯನ ಛಯದಿಂ ವನವಂಸೇರಿದ ಅತಿವೃಷ್ಟಿಯಂತೆ, ಸುರಿವ ಮಕರಂದಧಾರೆಗಳಿಂದ ನನೆಯುತಲಿರುವ ಭೂಮಿಗಳೋಳ್ ಬೆಳದಿರುವ ಅರಿಸಿನ, ಶುಂಠಿ, ಪಿಲಕ್ಕಿ ಮೊದಲಾದ ಕಿರುಗಿಡಗಳಂ ಶೋಭಿತವಾಗಿ, ಕಡವೆ, ಕಾಡುಕೋಣ, ಪುಲಿ, ಕರಡಿ, ಸಿಂಹ, ಶಾರ್ದೂಲ, ಖಡ್ಗ, ಚಮರಿ, ಕಸ್ತೂರೀಮೃಗ ಮೊದಲಾದ ಮೃಗಂಗಳಿಂದಲೂ ವ್ಯಾಪ್ತವಾದ ವನವಂ ಪ್ರವೇಶಿಸುತ ಹಸುರಾದ ಎಳೆಗರಿಕೆಗಳಂ ತಿಂದು ಮೆಲುಕುಮಾಡುತ ಪೋಗಿರುವ ಹುಲ್ಲೆಗಳ ಬಾಯಿಗಳಂ ಸುರಿದಿರುವ ನೊರೆಗಳಿಂದಲೂ, ಮತ್ತೊಂದೆಡೆಯೊಳ್ ಕಾಡುಕೋಣಗಳೆರಡು ಜಗಳವಾಡಿ ಸೋತೋಡುವ ರಭಸದಿಂ ಮಾರ್ಗದೋಳ್ ಸಿಕ್ಕಿದ ವೃಕ್ಷವಂ ತಿವಿದು ಕೆಡಹಿ ಮುಂದೋಡುವ ಕೋಣಗಳ ಹೆಜ್ಜೆಗಳಿಂದಲೂ, ಹುಲಿಗಳು ಹಿಡಿದು ಕೆಡಹಿ ಕೊಂಡೊಯ್ದ ಕಡವೆಗಳ ಕುತದಿಂ ಸಾಲಾಗಿ ಸುರಿದಿರುವ ರಕ್ತಂಗಳಿಂದಲೂ, ಹಿಡಿದಬಳಿಯಲ್ಲಿ ಮುರಿದುಬಿದ್ದಿರುವ ಕೊಂಬುಗಳಿಂದಲು, ವರಾಹಂಗಳು, ನೆಲವಂ ಮುಸುಡಿಗಳಿಂದ ತಿವಿದಗೆದು ಅಲ್ಲಿರುವ ಗೆಡ್ಡೆಗೆಣಸುಗಳಂ ತಿನ್ನುತಲಿದ್ದು ಬೆದರಿಪೋಗುತ ಅಲ್ಲಲ್ಲಿ ಕೆಡವಿರುವ ಭದ್ರಮುಸ್ತೆಮೊದಲಾದ ಗೆಣಸುಗಳ ತುಂಡುಗಳಿಂದಲೂ, ಮತ್ತೆ ಆಯಾಯ ಘುರುತುಗಳಿಂದ

ಇವು ಹುಲ್ಲೆಗಳಮಾರ್ಗಂಗಳ್, ಇವು ಕಾಡುಕೋಣಗಳ ಮಾರ್ಗಂಗಳ್, ಇವು ಹುಲಿಗಳಿರುವ ಸ್ಥಳಗಳ ಮಾರ್ಗಂಗಳ್, ಇವು ಕಾಡುಹಂದಿಗಳಿರುವಬಳಿಗೆ ಮಾರ್ಗಂಗಳು ಎಂದು ಬಿನ್ನೈಸುತಲಿರುವ ಭಟರ ಮಾತುಗಳಂ ಕೇಳುತ ಒಂದೆಡೆಯೊಳ್ ಮದ್ದಾನೆಗಳ ಮದೋದಕದ ಕಾಲುವೆಗಳಲ್ಲಿ ಆಗಪುಟ್ಟಿದ ಜೊಂಕೆಮರಿಗಳು ತೇಲಿಬರುವದಂ, ಮತ್ತೊಂದುಕಡೆಯೊಳ್ ಮದ್ದಾನೆಗಳುಮಾಡಿರುವ ದುರ್ನಡತೆಗಳಂ, ರಾಯಂಗೆ ಪೇಳಲೋಸುಗ ಸಾಷ್ಟಾಂಗವೆರಗಿರುವಂತೆ ತೋರುವ, ಆನೆಗಳು ಮುರಿದ ಕಹ, ಬಾಗೆ, ಬಸುರಿ, ಮೊದಲಾದ ಮರಂಗಳಂ ಮತ್ತೊಂದೆಡೆಯೊಳ್ ಶಾರ್ದೂಲಂಗಳೊಡನೆ ಕಾದಿ ಪೋಯುವಡೆದು ನಡೆಯಲಾರದೆ ಪರ್ವತಂಗಳಂತೆ ನಿಂತಿರುವ ಕಾಡುಕೋಣಗಳಂ, ಸ್ವಾರಿಬರುವ ರಾಯನಂ ನೋಡಲೋಸುಗ ಸಿಂಹಗಳು ಸೀಳಬಿಸುಟಿರುವ ಮದ್ದಾನೆಗಳ ಕುಂಭಸ್ಥಳಗಳಿಂದಮುತ್ತುಗಳಂತೆಂದು ಗುಲಗಂಜಿಗಳೊಡಗೂಡಿಸಿ ಅಲಂಕಾರುಗಳಂಗೈದು, ನಾರುಸೀರೆಗಳನುಟ್ಟು, ಪರ್ವತಂಗಳನೇರುತ್ತ ಹುಲ್ಲೆಗಳಂತೆಬೆದರಿನೋಡುತಲಿರುವ ಶಬರಯುವತಿಯರಂನೋಡಿ ಅಚ್ಚರಿಗೊಳುತ ಶಾರ್ದೂಲಂಗಳಿಗೆ ಶತ್ರುಗಳಾಗಿ, ಚಮರೀಮೃಗಂಗಳಿಗೆ ಮೃತ್ಯುಗಳಾಗಿ ಕಸ್ತೂರೀಮೃಗಂಗಳಿಗೆ ಕಂಟಕರಾಗಿ, ಗಜಂಗಳಿಗೆ ಘಾತುಕರಾಗಿ ಕರಡಿಗಳಿಗಕಾಲಯಮರಾಗಿ, ಸಾರಂಗಗಳಿಗೆ ಸಂಕಟವಂಮಾಡುವವರಾಗಿ ಹುಲ್ಲೆಗಳಿಗೆ ಕಾಳರಾತ್ರಿಗಳಂತೆ ಭಯಂಕರರಾದ ಬೇಟೆಗಾರರಂ ನೋಡಿ, ಹುಲಿಗಳಿಗೆ ಬಲೆಗಳಂ ಬೀಸಿ, ಚಮರೀಮೃಗಂಗಳಂ ಚಮತ್ಕಾರದಿಂ ಪಿಡಿದು, ಕರಡಿಗಳಂ ಹೊಡೆಯುತ, ಕಾಡ್ಗೋಣಗಳಂ ಕಡಿಯುತ, ಖಡ್ಗಮೃಗಂಗಳಂ ಪಿಡಿಯುತ, ಕಿರುಬಗಳನ್ನರಿಯುತ ವರಾಹಂಗಳಂ ವೇಧಿಸುತ, ತೋಳಗಳಂ ಸೀಳುತ, ಕಸ್ತೂರೀಮೃಗಂಗಳಂ ವಿಸ್ತಾರವಾಗಿ ಪಿಡಿದು ಬೋನುಗಳಲ್ಲಿ ಕೂಡುತ, ಸಿವಂಗಿಗಳಿಗೆ ಸನ್ನೆಯಂಗೈದು, ನಾಯಿಗಳನ್ನುಗ್ಗಿಸುತ, ಗಿಡುಗಗಳಂ ಬಿಡುತ, ಮೃಗಪಕ್ಷಿಗಳ ಬೇಟೆಯಾಡುವುದೆಂದು ಆಯಾಯ ಜನಗಳಿಗಾಜ್ಞಾಪಿಸಿ, ತಾನು ತೀಕ್ಷ್ಣವಾದ ಖಡ್ಗವಂ ಕಠಿಣವಾದ ಖೇಡ್ಯವಂ ಗೊಂಡು ಪಾದಚಾರಿಯಾಗಿ ಸಂಚರಿಸುತ,

ಇದಿರಾಗಿ ಬರುವ ವ್ಯಾಘ್ರಗಳಂ ಖಂಡಿಸಿ ಉನ್ನತವಾದ ಪ್ರದೇಶದೊಳ್ನಿಂತು ನೋಡುತ್ತಿರಲು ಬೇಟೆಗಾರರು ತಂಡತಂಡವಾಗಿ ಒಂದುಕಡೆಯೊಳ್ ಸಿಂವಗಿಗಳಂ ಬಿಟ್ಟು ಸಾರಂಗಗಳಂ ಪಿಡಿಯಿಸುತ, ಮತ್ತೊಂದೆಡೆಯೊಳ್ ನಾಯಿಗಳಿಂದ, ಮೊಲ, ತೋಳ, ನರಿ ಮುಂತಾದ ಕ್ಷುದ್ರಮೃಗಂಗಳಂ ಮರ್ದಿಸುತ, ಮತ್ತೊಂದೆಡೆಯೊಳ್ ಘುಡಿಘುಡಿಸಿಬರುವ ಕಾಡುಹಂದಿಗಳನ್ನಿರಿದು ಕೆಡಹುತ, ಕೆಲಬರು ವಾಸನೆಯಂ ತಿಳಿದು ಸೊಪ್ಪುಗಳಂ ಮೈಗಳಿಗೆ ಸುತ್ತಿ ಅಲ್ಲಲ್ಲಿ ಅಡಗಿ ಮರದಂತೆ ನಿಂತಿರುವ ಜೀಡರಮರೆಗೆ ಬಂದು ನಿಲ್ಲುವ ಕಸ್ತೂರೀಮೃಗಂಗಳಂ ಕೈಗಳಿಂದ ಪಿಡಿದು ಬೋನುಗಳೊಳ್ಕೂಡುತ, ಕೆಲವರು ಸೀಗೆ ಮೊದಲಾದ ಮುಳ್ಳುಗಿಡಗಳಲ್ಲಿ ಓಡಿಬರುವಾಗ ಬಾಲಗಳು ಮುಳ್ಳುಗಳಿಂದ ತಡೆಯಲು ಬಿಡಿಸಲಾರದೆ ನಿಂತಿರುವ ಚಮರೀಮೃಗಂಗಳಂ ಪಿಡಿದು ಬರುತಲಿರುವದಂ ಕಂಡು, ಮತ್ತು ಬೇಲಿಗಳನ್ನುಗ್ಗಿ ಮಲಗಿರುವ ಹೆಬ್ಬುಲಿಗಳನ್ನೆಬ್ಬಿಸಿ, ಕೊಬ್ಬಿನಿಂದವರೊಡನೆ ಕಾದಿ ಸಿಕ್ಕುತಲಿರುವ ಕೆಲವರಂ ನೋಡಿ ತಾನತಿ ಜಾಗ್ರತೆಯಿಂದಬಂದು ಹುಲಿಯಂ ಹೊಡೆದು ಅವರುಗಳಂ ಬಿಡಿಸಿ, ನೀನು ಭೂಭಾಗವಂ ವಹಿಸಿ ನಮ್ಮಶ್ರಮವಂ ಪರಿಹರಿಸಿದೆ. ಈ ವನಂಗಳಲ್ಲಿರುವ ಸಿಂಹಗಳಂ ಸಂಹರಿಸಿ ನಮ್ಮ ವಂಶದೊಳ್ಪುಟ್ಟಿರುವ ಮದ್ದಾನೆಗಳಂ ಸಲಹೆಂದು ಗಾಯಂಗೆ ಬಿನ್ನೈಸಲೋಸುಗ ಕಪ್ಪುಗಳೆಂಬ ಮಾರ್ಗಗಳಿಂದ, ಪಾತಾಳವೆಂಬರುವ ದಿಗ್ಗಜಗಳಂತಿರುವ ಕಪ್ಪುಗಳೊಳ್ ಬಿದ್ದು ಸೊಂಡಲುಗಳನ್ನೆತ್ತಿಕೊಂಡಿರುವ ಮದ್ದಾನೆಗಳಂ ನೋಡಿ, ಆ ಆನೆಗಳಿಗೆ ಕಬ್ಬು ಮೊದಲಾದುದಂ ಕೊಡಿಸಿ, ಸಿಂಹಗಳನ್ನರಸುತ ಪರ್ವತಗಳ ಸಮೀಪವನ್ನೈದಿ, ಸಿಂಹನಾದವಂ ಮಾಡಲಾರಾಯನ ಸಿಂಹನಾದವಂ ಕೇಳಿ ಗುಹಾಂತರಗಳಲ್ಲಡಗಿದ್ದು, ಅತಿಕೋಪದಿಂದೆದ್ದು ಬೊಬ್ಬಿರಿದು ಬಾಲಗಳನೆತ್ತಿ ಕೂಗುತ, ಕಾಲುಗಳಿಂದ ಭೂಮಿಯಂ ಬಗೆಯುತ, ರೋಮಗಳನೊದರುತ, ಇದಿರಾಗಿಬರುವ ಸಿಂಹಗಳಂ ನೋಡಿ. ಶರೀರಲಾಘವದಿಂದಲೂ, ಕೈಗಳ ಚಮತ್ಕಾರಗಳಿಂದಲೂ, ಅವುಗಳೊಡನೆ ಯುದ್ಧವಂ ಮಾಡುತ, ಬಹುದೂರದೊಳ್ ನಿಂತುನೋಡುತಲಿರು

ವ ಸೇನಾಜನರಿಗೆ ಅಚ್ಚರಿಯಂ ತೋರುತ್ತ, ಅಂಧಕಾರವಂ ಪರಿಹರಿಸಿ ಬರುವ ಸೂರ್ಯನಂತೆ ಸಿಂಹಗಳಂ ಸಂಹರಿಸಿ ಬರುವ ರಾಯನಂನೋಡಿ ಸೇನಾಜನರು ಸಂತೋಷಭರಿತರಾಗಿ ಬರುತ್ತಿರಲು, ರಾಯನು ತನ್ನಪ್ಪಣೆಯಿಂದ ಆ ಸಿಂಹಗಳಂ ತೆಗೆಯಿಸಿಕೊಂಡುಬರುವ ಸೇನಾಪತಿನರ್ಮಸಚಿವನಿಂದೊಡಗೂಡಿ, ಸಾಯಂಕಾಲದೊಳ್ ಬಿಡಾರವನ್ನೈದಿ, ಉದಯದೊಳ್ ಬೇಟೆಯಾಡುತ ಈಪರಿಯಾಗಿ ಬಹುದಿವಸ ಮೃಗಯಾವಿಹಾರದಿಂ ಕಾಲವಂ ಕಳೆಯುತ, ಸಕಲದುಷ್ಟಮೃಗಂಗಳಂ ಪಿಡಿಯುತ, ಅರಣ್ಯದೊಳ್ ಮೃಗಂಗಳಿಲ್ಲದಂತೆ ಮಾಡಿ, ಒಂದಾನೊಂದುದಿನ ಸೇನಾಪತಿನರ್ಮಸಚಿವಸಮೇತನಾಗಿ ಗುಡಾರದೊಳ್ ವಿನೋದದಿಂದಿರುತ್ತಿರುವಾಗ, ನರ್ಮಸಚಿವನಾದ ಚಿತ್ರವರ್ಮನು ರಾಯನಂ ಕುರಿತು ಎಲೈ ರಾಯನೇ ನೀನು ಬೇಟೆಯನ್ನಾಡುತ, ಶಶವೆಂಬುದು ಚಂದ್ರನಲ್ಲಿಯು ಸಾರಂಗವೆಂಬುದು ಶಿವನ ಹಸ್ತದೊಳ್. ಸಿಂಹವೆಂಬುದು ರಾಶಿಗಳೊಳ್. ಶಾರ್ದೂಲಂಗಳು ವೃತ್ತಂಗಳೊಳ್. ವರಾಹವೆಂಬುದು ವಿಷ್ಣುವಿನ ದಶಾವತಾರದೊಳ್. ಮಹಿಷವೆಂಬುದು ಯಮನ ವಾಹನಸ್ಥಾನದೊಳ್. ಕರಡಿಯೆಂಬುದು ರಾಮಾಯಣದೊಳ್. ಶಲ್ಯವೆಂಬುದು ಭಾರತದೊಳ್. ಮದಗಜಗಳೆಂಬುದು ದಿಕ್ಕುಗಳ ತುದಿಗಳೊಳ್. ಖಡ್ಗವೆಂಬುದು ನಿನ್ನ ಹಸ್ತದೊಳ್. ಇಂತುದಲ್ಲದೆ ವನಂಗಳೊಳಿಲ್ಲವೆಂದು ನುಡಿದ ಸರಸನುಡಿಗಳಂ ಕೇಳಿ, ಸಂತೋಷಪಡುತ ನರ್ಮಸಚಿವಂಗೆ ಬೇಕಾದ ಬಹುಮಾನವಂ ಮಾಡಿ, ವೀರಸೇನಂಗೆ ಉಚಿತವಾದ ಉಡುಗೆರೆಯನಿತ್ತು, ಮಿಕ್ಕಾದ ಸೈನಿಕರಿಗೆ ಯಥಾಯೋಗ್ಯವಾಗಿ ಧನಕನಕವಸ್ತುವಾಹನ ಮೊದಲಾದುದರಿಂ ಸಂತೋಷಗೊಳಿಸಿ, ಕೊಳ, ತಟಾಕಗಳಲ್ಲಿ ಜಲಕ್ರೀಡೆಯನ್ನಾಡುತ, ರಾಣಿಯು ಕಳುಹಿಸಿರುವ ಪದಾರ್ಥಂಗಳಂ ಪ್ರತಿದಿನವು ಭೋಜನಂಗೈದು, ಸುಖದಿಂದಿರುತ್ತಿರಲು ಇತ್ತ ರತ್ನಪುರದೊಳ್ ರಾಯನು ಬರುವುದಂ ನಿರೀಕ್ಷಿಸುತ್ತಿರುವ ಪಟ್ಟದರಸಿಯಾದ ಗುಣವತಿಯು ಮಂಜುವಾಣಿಯಂ ಕರೆದು ಎಲೈ ಮಂಜುವಾಣಿಯೆ ರಾಯಂಗೆ ನಮ್ಮೆಲ್ಲರಲ್ಲಿರುವ ಪ್ರೇಮವಂ ತಪ್ಪಿಸುವಳಾಗಿ ರೂಪವತಿ

ಯಾದ ಅತಿ ಕುಶಲೆಯಾದ, ಓರ್ವ್ವಕಾಂತೆಯು ದೊರಕಿರುವಂತೆ ಎನಗೆ ತೋರುತಲಿಧೆ. ಅದರಿಂದಲೆ ರಾಯನು ನಮ್ಮೆಲ್ಲರಂ ಮರೆತಿರುವನು. ಈಗ ನೀನು ಸಮಸ್ತಪದಾರ್ಥಂಗಳಂ ಶೀಘ್ರವಾಗಿ ಜನಗಳಿಂದ ತೆಗೆಯಿಸಿಕೊಂಡುಪೋಗಿ, ಅಲ್ಲಿ ರಾಯನಿರುವರೀತಿಯನ್ನೋಡಿ ಚಿತ್ತವಂತಿಳಿದು ಪುರವಂ ಕುರಿತು ಶೀಘ್ರದಿಂ ಬರುವಂತೆ ಯತ್ನವು ಮಾಡಿ ರಾಯನಸಂಗಡಲೇ ಬರುವುದು. ನೀನು ನಮಗೂ ಸಖಿಯಾಗಿ ರಾಯಂಗೆ ಪ್ರೇಮಪಾತ್ರಳಾಗಿರುವೆಯಾದ್ದರಿಂದ ಈ ಕಾರ್ಯ್ಯವಂ ನಿನಗೆ ನಿಯಮಿಸಿಧೇನೆಂದು ನುಡಿದು ನವರತ್ನಾಭರಣಂಗಳಂ ಕೊಟ್ಟು ಕಳುಹಿಸಲು ಮಂಜುವಾಣಿಯು ಮಹಾಪ್ರಸಾದವೆಂದು ಚರಣಗಳಿಗೆರಗಿ ಅಪ್ಪಣೆಯಂಗೊಂಡು, ರಾಣಿಯಹಸ್ತದಿಂ ಮಾಡಿರುವ ಪದಾರ್ಥಂಗಳಂ ಜನರಿಂದತೆಗೆಯಿಸಿಕೊಂಡುಅಂದಳವನ್ನೇರಿರಾಯನಿದ್ದೆಡೆಗೆಬರುತ್ತಿರಲು, ರಾಯನುಮಂಜುವಾಣಿ ಬಂದುದಂಕೇಳಿ ಪರಮಸಂತೋಷಮಂಗೊಂಡು ಮಂಜುವಾಣಿಯಿರುವಗುಡಾರವಂಪುಗಲು, ನಿಜಪದಂಗಳಿಗೆರಗಿದ ಮಂಜುವಾಣಿಯಕರವಂ ಪಿಡಿದೆತ್ತಿ ಆಲಿಂಗನಂಗೊಂಡುಭಾರಿಭಾರಿಗುಗಲ್ಲಮಂಪಿಡಿದು ಚುಂಬಿಸುತ, ಸುಗಂಧರಾಜ ಕುಮಾರನ ಯೋಗಕ್ಷೇಮವಂ, ರಾಣಿ ಗುಣವತಿಯ ಕುಶಲವಂ, ಮಣಿಮಂಜರಿ, ಚಂದ್ರಕಲೆ ಮೊದಲಾದಕಾಂತೆಯರಕ್ಷೇಮವಂ ಕೇಳುತಲಿರುವ ರಾಯನೊಡನೆ ಅನವರತಕುಶಲವಂ ಪೇಳುತ, ವನವಿಹಾರದಿಂಹೃದಯವು ಕಠಿಣವಾಗಿ ಕಾಂತೆಯರ ಮರೆದಿರ್ಪತಮಗೆಪಾದಸೇವಕಳಮೇಲೆ ಕಟಾಕ್ಷಬಂದುದು ಆಶ್ಚರ್ಯತೋರುತಲಿಧೆ, ವನಲಕ್ಷ್ಮಿಯಸೊಬಗನ್ನೋಡಿಮಮತೆ ಯಿಂದ ಇಲ್ಲಿಯೇ ವಿಹರಿಸುತರತ್ನಪುರಿಗೆ ಬರುವುದಕ್ಕೆ ಮನಬಾರದೇ ಇರುವದರಿಂ, ಪಟ್ಟದರಸಿಮೊದಲಾದ ಕಾಂತೆಯರು ನಿಮ್ಮಾಗಮನವನ್ನೇ ನಿರೀಕ್ಷಿಸುತಲಿರುವರು, ರಾಣಿಕಳುಹಿದಪದಾರ್ಥಗಳು ಚಿತ್ತಕ್ಕೆ ಸಮರ್ಪಕವಾಗಿರುವುವೋ ? ಅಥವಾವನಪದಾರ್ಥಗಳೇ ರುಚಿಸಿರುವುವೋ ? ಇವರಲ್ಲಿ ಒಂದೂ ನಿಶ್ಚಯತೋರದೆ, ಎಲ್ಲಪದಾರ್ಥಂಗಳಂ ಸನ್ನಹಿಸಿ, ಪಟ್ಟದರಸಿಯು ತಾನೇಮಾಡಿಕೊಟ್ಟುಯನ್ನಂ ಕಳುಹಿದಳೆಂದು, ವ್ಯಾಜಾಂತರಗಳಾಗಿ ಪೇಳುವ ಮಂ

ಜುವಾಣಿಯು ಚಮತ್ಕಾರನುಡಿಯಂ ಕೇಳಿ, ಪರಮಸಂತೋಷದಿಂ ಈ ರಾತ್ರಿಯೊಳಲ್ಲಿರ್ದು ಉದಯದೊಳ್ ಪಟ್ಟಣವಂ ಕುರಿತು ಬರುವೆನೆಂದೊಂದು ಮಾತ್ರಿನಿಂದಲೆ ಸಮಸ್ತ ಪ್ರಶ್ನೆಗಳಿಗುತ್ತರವನ್ನಿತ್ತು, ರಾಣಿಯು ಕಳುಹಿದ ಪದಾರ್ಥಂಗಳಂ ಭುಂಜಿಸಿ, ಮುತ್ತುಗಳುಬಿಗಿದ ಒಳಗುಡಾರದೊಳಿರುವರತ್ನ ಪರ್ಯಂಕದಲ್ಲಿ ಮಂಜುವಾಣಿಯಂ ಶೃಂಗಾರವಿಹಾರಗಳಿಂದಸಂತೋಷಪಡಿಸುತ, ಸಕಲಾಂತಃಪುರವೃತ್ತಾಂತವಂಕೇಳುತ ರಾತ್ರಿಯೊಳ್ ಸುಖನಿದ್ರೆಯಂಗೈದು, ಸೂರ್ಯೋದಯುವಾಗಲು ಸೇನಾಪತಿಯಂಕರೆದು, ಎಲೈವೀರಸೇನನೆ, ರತ್ನಪುರವಂ ಕುರಿತು ಈದಿನವೇಪ್ರಯಾಣವಂಗೈವೆನು, ಸಕಲಸೈನ್ಯವು ಬೇಟೆಯಲ್ಲಿ ತಂದಿರುವ ಸಮಸ್ತವಸ್ತುಗಳಂ ಸನ್ನಹಿಸಿಕೊಂಡಿರುವುದೆಂದಾಜ್ಞಾಪಿಸಲು, ಸೇನಾಪತಿಯು ಅದೇವೇರಿಗೆ ಸಕಲವ ಸನ್ನಹಿಸಿ ಸಿದ್ಧನಾಗಿ ಕಾದಿರುತ್ತಿರಲು ರಾಯನು ಸ್ನಾನಭೋಜನಂಗಳಂ ಮಾಡಿ ನರ್ಮಸಚಿವನೊಡನೆ ರಥವನೇರಿ ತೆರಳಬರುತಲ್ಲಲ್ಲಿಳಿದು, ರಾತ್ರಿಯೋಳ್ಮಂಜುವಾಣಿಯೊಡನೆ ಸುಖದಿಂದಿರುತ ಪಟ್ಟಣವಂ ಕುರಿತು ಬರುತ್ತಿರಲು, ಪಟ್ಟದರಸಿಯಾದ ಗುಣವತಿಯು ರಾಯನುಬರುವುದಂಕೇಳಿ, ಮಂತ್ರಿ ಸುಬುದ್ಧಿಯಂ ಕರೆಯಿಸಿ ಎಲೈ ಮಂತ್ರಿಯೆ ರಾಯನು ಮೃಗಯಾವಿಹಾರವಂ ಮಾಡಿಕೊಂಡು ಪುರವಂ ಕುರಿತು ಬರುವುದರಿಂದ ಪಟ್ಟಣವೆಲ್ಲವು ಅಲಂಕೃತವಾಗಲಿ. ನೀನು ಸಕಲ ಸೇನಾಸಮೇತನಾಗಿ ಸಾಮಾಜಿಕರು ವರ್ತಕರು ಮೊದಲಾದ ಸಮಸ್ತ ಜನಂಗಳಿಂದ ಕೈಗಾಣಿಕೆಗಳಂ ತೆಗೆಯಿಸಿಕೊಂಡು ಪೋಗಿ ಇದಿರ್ಗೊಂಡು ಸಂಗಡಲೆ ಬರುವುದೆಂದು ಅಪ್ಪಣೆಯಂ ಕೊಟ್ಟಂತೆ ಪಟ್ಟಣವನ್ನಲಂಕರಿಸಿ ತಾನು ಸಕಲ ಸೇನಾಸಮೇತನಾಗಿ ಸಾಮಾಜಿಕರು ವರ್ತಕರು ಮೊದಲಾದ ಜನಂಗಳೊಡಗೊಂಡು ಕೈಗಾಣಿಕೆಗಳಂ ತೆಗೆಯಿಸಿಕೊಂಡು ಇದಿರ್ಗೊಂಡುಬಂದು ಕಂಡು ಸಾಷ್ಟಾಂಗವೆರಗಿದ ಮಂತ್ರಿಯಂ ರಾಯನು ಕೈಪಿಡಿದು ರಥದೋಳ್ಕುಳ್ಳಿರಿಸಿ, ಸಕಲವೃತ್ತಾಂತವಂ ಕೇಳುತ ಪರಮಸಂತೋಷದಿಂ ಪುರಪ್ರವೇಶವಂ ಮಾಡಿ, ರಾಜಬೀದಿಯೊಳ್ ಬರುತ ಕೆಲಬಲದೋಳ್ ಸುವಾ

ಸಿನಿಯರು ನಿಂತು ಪಿಡಿದಿರುವ ಆರತಿಗಳ ತಟ್ಟೆಗಳಂ ನವರತ್ನಗಳುತೆಂ ಬುತ್ತ, ಪರಿಪರಿ ವಾದ್ಯಂಗಳು ಮೊಳಗುತ್ತಿರಲು ರಾಜಮಂದಿರದ ಆಸ್ಥಾನದೊಳ್ನಿಂತು ಸೇನಾಪತಿ ಮೊದಲಾದ ಜನಗಳಿಗೆ ಅಪ್ಪಣೆಯನಿತ್ತು, ಅಂತಃಪುರವನ್ನೈದುವ ರಾಯಂಗೆ ಪಟ್ಟದರಸಿಯಾದ ಗುಣವತಿಯು ರಾಜಕಾಂತೆಯರಾದ ಮಣಿಮಂಜರಿ ಚಂದ್ರಕಳೆ ಕನಕಲತೆ ಕಮಲಿನಿ ಈ ನಾಲ್ವರು ತಂಗಿಯರಿಂದೊಡಗೂಡಿ, ವಜ್ರಕಲಶಂಗಳೊಳ್ ತುಂಬಿ ತಂದಿರುವ ಪನ್ನೀರುಗಳಿಂದ ಪಾದಂಗಳಂ ತೊಳೆದು, ನವರತ್ನಮಯಂಗಳಾದ ಆರತಿಗಳಂ ಬೆಳಗಿ ಸಾಷ್ಟಾಂಗವೆರಗಿ ನಿಂತಿರಲು ರಾಯನು ಸಂತೋಷದಿಂದ ಕ್ರಮವಾಗಿ ಕುಶಲವಂ ಕೇಳಿ, ಪಟ್ಟದರಸಿಯಾದ ಗುಣವತಿಯ ಹಸ್ತಲಾಘವದಿಂ ಮುತ್ತಿನ ಹಜಾರವನ್ನೈದಿ ರತ್ನಪರ್ಯಂಕದೊಳ್ಕುಳಿತು ಕುಮಾರನಾದ ಸುಗಂಧರಾಜನಂ ತಬ್ಬಿ ಮುದ್ದಾಡಿ ಶಿರವನಾಘ್ರಾಣಿಸಿ ಅಂಕದೊಳ್ಕುಳ್ಳಿರಿಸಿ ತಾನು ವನವಿಹಾರವಂಮಾಡಿ ತಂದಿರುವ ಅಪೂರ್ವಂಗಳಾದ ಹೆಬ್ಬುಲಿಯುಗುರುಗಳಂ, ಸಿಂಹ, ಚಮರೀಮೃಗಂಗಳ ಮೃದುಚರ್ಮಗಳಂ, ಕಟಾರಿಯ ಕೋಸಗಳಂ, ಜರಿವ ಕಾಡುಹಂದಿಗಳ ಕೋರೆಗಳಂ, ಮದ್ದಾನೆಗಳ ಕುಂಭಸ್ಥಳದ ಆಣೆಮುತ್ತುಗಳಂ, ಕಾಡುಕೋಣಗಳ ಕೊಂಬುಗಳಂ, ಗವಯಗಳಶೃಂಗಗಳಂ, ಕೌಸ್ತುಭದಂತೆ ಕಾಂತಿಗಳೆಸೆವ ನಾಗಫಣಾರತ್ನಗಳಂ, ಎಲ್ಲಿಯೂ ಇಲ್ಲದ ಜಾತಿಯಂಗಳಾದ ಫಲವಿಶೇಷಗಳಂ, ಚಮತ್ಕಾರಕರಂಗಳಾದ ಮೂಲಿಕೆಮುಡಿಗಳಂ, ಕಸ್ತೂರಿಗಳಿಂದ ನಿಬಿಡವಾಗಿ ಘಮಘಮಿಸುವ ಮೃಗನಾಭಿಗಳಂ, ವನಮಧ್ಯದಲ್ಲಿ ವಿಹರಿಸುವ ಕಾಡುಮನುಷ್ಯರ ಸ್ತ್ರೀಪುರುಷರಂ, ಸಮುದ್ರದೊಳ್ ಬಲೆಗಳಂ ಬೀಸಿ ಪಿಡಿತಂದಿರುವ ಜಲಮನುಷ್ಯರಂ, ಸಿಂಹಶಿಶುಗಳಂ, ಆನೆಯಮರಿಗಳಂ, ಗಿಣಿ ನವಿಲು ಕೋಗಿಲೆಗಳ ಮರಿಗಳಂ, ರಥಂಗಳಿಗೆ ಕಟ್ಟುವುದಕ್ಕೆ ಯೋಗ್ಯಂಗಳಾದ ಸಮನಾಗಿರುವ ಮಲೆಯ ಹೋರಿ ಕಡವೆಗಳಂ ಸಹಾ ತರಿಸಿ, ತನ್ನ ಬಾಲಕನ ವಿಹಾರಾರ್ಥವಾಗಿ ಪಟ್ಟದರಸಿಯ ಸಮಕ್ಷಮದೊಳ್ ಕುಮಾರಂಗೆ ಕೊಟ್ಟು ಕುಮಾರನ ವಿಹಾರಂಗಳನ್ನೋಡಿ ನಲಿಯುತ್ತ, ಆತನ ಬೆಳವಳಿಗೆಯಿಂ ಕೂಡಿದ ವ

ರ್ಚಸ್ಸಿನಿಂದೊಡಗೂಡಿದ ಮೇಧಾವಿಶೇಷವಂ ಚಮತ್ಕಾರಕೌಶಲತೆಯುಂ ತನ್ನ ಮನದೊಳ್ ಚನ್ನಾಗಿ ಪರಿಭಾವಿಸಿ, ಆಯುಷ್ಮಂತನಾದ ನಿಜ ಕುಮಾರಂಗೆ ಸಕಲ ವಿಷಯಗಳಲ್ಲಿಯೂ ಸ್ವಸ್ತಿಯಾಗ ಬೇಕೆಂದು ವಾತ್ಸಲ್ಯದಿಂದ ಹರಸುತ್ತ, ಈತನು ಕ್ಷತ್ರಿಯ ಕುಮಾರನಾದರೂ ಶ್ಲಾಘ್ಯಂಗಳಾದ, ಆಚಾರಗುಣನಡತೆ ವಿವೇಕ ವಿಶೇಷಂಗಳಂ ನೋಡಿ ಏಳನೇವರುಷದಲ್ಲಿಯೆ ಸಕಲಶಾಸ್ತ್ರ ಸತ್ಕರ್ಮಾನುಷ್ಠಾನಂಗಳಿಗೆ ಮುಖ್ಯಸಾಧನವಾದ ಉಪನಯನಪ್ರಸ್ತವಂ ಮಾಡುವುದು ಅವಶ್ಯಕಾರ್ಯವೆಂದು, ತನ್ನ ಧರ್ಮಪತ್ನಿಯಾದ ಗುಣವತಿಸಹಿತನಾಗಿ ನಿಶ್ಚೈಸಿದಬಳಿಕ ಕುಲಕ್ರಮಾಗತರಾಗಿ ಆರ್ಷಪೌರುಷವಾಗಿ ಬಂದಿರುವ ಸ್ಕಂಧತ್ರಯವಂ ಕೋಲಂಕಷಮಾಗಿ ತಿಳಿದಿರುವ ಜ್ಯೋತಿಷ್ಕರಂ, ಪುರೋಹಿತನಾದ ವೇದವಿಶ್ರುತನಂ ಕರೆಯಿಸಿ, ಅಶೀತಿದೋಷಂಗಳಿಂದ ರಹಿತವಾಗಿ, ಬಹುಬಲಯುತವಾಗಿರುವ ಒಂದು ಶುಭಲಗ್ನವಂ ನಿಶ್ಚೈಸಿ ಸುಬುದ್ಧಿಮೊದಲಾದ ಮಂತ್ರಿವರ್ಗಗಳಂ ಕರೆಯಿಸಿ ಶುಭಸ್ಯಶೀಘ್ರಂ ಎಂಬ ಮರ್ಯಾದೆಯಿಂದ ಪುತ್ರನಾದ ಸುಗಂಧರಾಜಕುಮಾರನ ಉಪನಯನಮಹೋತ್ಸವದ ಕಾರ್ಯವಂ ನಿರೂಪಿಸಿ, ಅದಕ್ಕೆ ಉಪಯುಕ್ತಂಗಳಾದ ಸಕಲಸಾಮಗ್ರಿಗಳಂ ಸನ್ನಹಿಸುವುದೆಂದು ಕಟ್ಟುಮಾಡಿಸಿ, ತನ್ನ ನಿತ್ಯಕರ್ಮಾನುಷ್ಠಾನಾರ್ಥವಾಗಿ ಎದ್ದು ಬರುತ್ತಿರಲು ತತ್ಕ್ಷಣದಲ್ಲಿಯೆ ಸುಬುದ್ಧಿಮೊದಲಾದ ಸಾಮಾಜಿಕರು ಸಂಭ್ರಮದಿಂದ ಪುರವರದೊಳ್ ರಾಜವೀದಿ ದೇವಾಲಯ ಮೊದಲಾದ ಸಮಸ್ತಪ್ರದೇಶಂಗಳಲ್ಲಿಯೂ ಪುಷ್ಪನಿರಾಜಿಗಳಿಂದ ಚಪ್ಪರ ಮೇಲುಕಟ್ಟುಗಳಂ ಕಟ್ಟಿಸಿ, ನವರತ್ನಗಳ ಕುಚ್ಚುಗಳಿಂದಲು ನಾನಾಬಗೆಯಾದ ಲತೆಗಳಿಂದಲು ಅಲಂಕಾರವಂ ಮಾಡಿಸಿ, ದೇಶಾಂತರಂಗಳಿಂದ ಬರುವ ಬಂಧುರಾಯರುಗಳ ಸಮೂಹವಂ ತರತರವಾಗಿ ಕರೆತರಿಸಿ ಅವರವರ ಮರ್ಯಾದಾನುಸಾರದಿಂ ಬಿಡದಿಬಿಡಾರಂಗಳಂ ಬಿಡಿಸಿ ಅಂತುಮಲ್ಲದೆ ಬ್ರಾಹ್ಮಣರು ಮುಂತಾದ ಸಮಸ್ತಜನಂಗಳಂ ಕರೆತರಿಸಿ, ಶಾಸ್ತ್ರೋಪಯುಕ್ತವಾದ ಸಕಲಸಂಭಾರವಂ ಸಜ್ಜುಗೊಳಿಸಿ, ಮಹಾರಾಯನ ಸಮೀಪಕ್ಕೆ ಬಂದು ಆಜ್ಞಾನುಸಾರವಾಗಿ ಸಕಲಸಾಮಗ್ರಿಗಳು

ಸನ್ನದ್ಧವಾಗಿರುವುದು ಶುಭವಾದ ಮುಹೂರ್ತದೊಳ್ ದೇವತಾಪ್ರ
ಸ್ತವಂಬೆಳೆಯಿಸಿ ಮುತ್ತಿನಹಸೆಗೆ ಕುಮಾರಸಹಿತರಾಗಿರಾಜದಂಪತಿಗ
ಳೀರ್ವರೂ ದಯೆಮಾಡಿಸಿ ಶುಭಲಗ್ನವಂ ಆಗುಮಾಡಿಸಿ, ನಮುಗಳಿಗೆ ನಿ
ತ್ಯಾನಂದವಂಮಾಡಿಸಬೇಕೆಂದು ಬಿನ್ನೈಸಲಾಮಾತಂಕೇಳಿ ರಾಯನು
ಅತ್ಯಂತ ಸಂತೋಷದಿಂ ಭೇರೀಮೃದಂಗ ಢಕ್ಕಾ ಕಾಹಳೇ ಝರ್ಝ
ರ ವೀಣಾ ವೇಣು ತಾಳ ಶ್ರುತಿ ಮೌರಿ ತುತ್ತೂರಿ ನಗಾರಿ ಪವಾ
ಸೂರ್ಯ ಚಂದ್ರವಾದ್ಯ ಮೊದಲಾದವುಗಳ ಧ್ವನಿಗಳಿಂದ ನಭಸ್ಥಳವು
ಘೋಂಕರಿಸುತ್ತಿರಲು, ಕುಮಾರಸಹಿತನಾಗಿ ಎಣ್ಣೆಗೂರಸನಂ ಕೊ
ಡಿ, ಮಂಗಳಸ್ನಾನವಂಮಾಡಿ, ದಿವ್ಯಾಂಬರಗಳನ್ನುಟ್ಟು ಸರ್ವಾಲಂಕಾರ
ಭೂಷಿತನಾಗಿ, ಕುಮಾರಂಗೆ ನವರತ್ನಾಭರಣಂಗಳಂ ತೊಡಿಸಿ, ಬ್ರಹ್ಮ
ಕಂಕಣವಂ ಕಟ್ಟಿ, ಮಹಾರಾಜಾಧಿರಾಜವೈಭವದಿಂದ ಪುತ್ರನಂ ಕೈಪಿಡಿ
ದು, ಶುಭಸೂಚಕಂಗಳಾದ ಶಕುನ ಮನೋಜಯಗಳಂ ನೊಡಗೂಡಿ,
ಛತ್ರ ಚಾಮರ ವ್ಯಜನ ಸೂರ್ಯಪಾನ ಉಮಾಗರಿ ಕಾಳಂಜಿ ವೀಳ್ಯ
ದರ್ಪಣ ಪನ್ನೀರು ಪಾನೀಯಂಗಳಂ ತುಂಬಿದ ಕಂಚಾಯಿಗಳಂ ಪಿಡಿದಿರು
ವ ಸೇವಕಜನಂಗಳಿಂ ಮಂತ್ರಿಯ ಹಸ್ತಲಾಗದಿಂ ಬ್ರಾಹ್ಮಣರು ಸುವಾ
ಸಿನಿಯರು ಬಂಧುಜನರ ಸಮೇತನಾಗಿ ನಿರಾಜಿಯು ನಡೆಮುಡಿಯುಮೇಲೆ
ಸಮಸ್ತ ಮಂಗಳದ್ರವ್ಯಂಗಳಂ ಮುಂದುಮಾಡಿಕೊಂಡು ರಾಜಗುಣವತಿ
ಯೊಡನೆ ಮೆಲ್ಲಮೆಲ್ಲನೆ ಅಡಿಗಳನಿಡುತ ಕುಮಾರನಂ ಮುಂದಿಟ್ಟು ಪರಮ
ಸಂತೋಷದಿಂ ಬರುತ ಸೌಂದರ್ಯವಿಲಾಸವೆಂಬ ಮಣಿಮಯವಾದ ಉ
ಬ್ಬುಚಪ್ಪರದ ತೊಟ್ಟಿಯೊಳ್ ಇಂದ್ರಸಭೆಯುಂ ತಿರಸ್ಕರಿಸುವ ಮುತ್ತಿ
ನ ಹಸೆಯೊಳ್ ಪ್ರದಕ್ಷಿಣವಾಗಿಬಂದು ನಿಂದು ಸಭಾಪೂಜೆ ನಾಂದೀ
ಗೃಹಯಜ್ಞಂಗಳಂ ಯಥಾಕ್ರಮವಾಗಿ ಮಾಡಿ, ಮಂಗಳಾಷ್ಟಕವಂ
ಕೂಡಿ, ಉಪನಯನ ಮುಹೂರ್ತವಂ ಪೇಳಿ, ಫಲವಂಕೊಡುವ ಶುಭಸ
ಮಯದೊಳ್ ಸುಗಂಧರಾಜಕುಮಾರಂಗೆ ಯಜ್ಞೋಪವೀತಧಾರಣ
ಪುರಸ್ಸರವಾಗಿ ಗಾಯತ್ರೀಮಂತ್ರೋಪದೇಶವಂ ದ್ವಿಜವರಗುರುಪು
ರೋಹಿತ ಸಮೇತನಾಗಿ ಮಾಡಿ, ಸರ್ವರಿಗೂ ನವರತ್ನಹಾರ ಸಿಂಹಕಟ

ಕೆ ಕುಂಡಲ ದುಕೂಲ ವಸ್ತ್ರ ಪೀತಾಂಬರ ಮೊದಲಾದುದಂ ಫಲವೀಳ್ಯ ಸಹಿತವಾಗಿ ಕ್ರಮದಿಂ ಕೊಡಿಸಿ, ಆರತಿ ಆಶೀರ್ವಾದವಂ ಮಾಡಿಸಿ, ಸಂಭ್ರಮದಿಂ ಉಪನಯನ ಮಹೋತ್ಸವವಂ ಬೆಳೆಯಿಸಿ ಸಾಗರಾಂಗತವಾದ ಭೂಮಿಯಲ್ಲಿರುವ ಸಮಸ್ತ ಜನಗಳಿಗೂ ವಿಸ್ತಾರವಾಗಿ ಸಮಾರಾಧನೆಯುಮಾಡಿಸಿ, ತಾನು ಸಮಸ್ತ ಬಂಧು ಪುತ್ರಮಿತ್ರಾದಿಗಳಿಂದ ಸಹಿತನಾಗಿ ಪರಿಪರಿಯಾದ ಭಕ್ಷ್ಯಭೋಜ್ಯಂಗಳ ನಾರೋಗಣೆಯಂ ಗೈದು ಸುಖದಿಂದಿರುತ್ತ, ಒಂದಾನೊಂದು ಶುಭದಿವಸದೊಳ್ ವಿದ್ಯಾಸಾಗರನೆಂಬ ಉಪಾಧ್ಯಾಯನಂ ಕರೆತರಿಸಿ ಪುತ್ರನಾದ ಸುಗಂಧರಾಯಂಗೆ ಧನುರ್ವೇದ ಮೊದಲಾದ ವೇದಂಗಳಂ, ವ್ಯಾಕರಣ ಮೊದಲಾದ ವೇದಾಂಗಗಳಂ ವಿಧಾನ ಪೂರ್ವಕವಾಗಿ ಅಧ್ಯಯನವಂ ಗೈಯಿಸಿ ಜಿತವಾಗಿ ಪೇಳಿಸಿ ನಾವು ಕರೆದು ಕೇಳಿದಾಗ ಸಕಲ ವಿದ್ಯಾಪರೀಕ್ಷೆಯಂ ಕೊಡಿಸಿ ನೀನು ಸಪ್ತಾಂಗವಂ ಪಡೆಯುವುದೆಂದು ಗುರಿಕಾರನ ಮುಂದೆ ಕಟ್ಟುಮಾಡಿ ಕಳುಹಿ ಆನಂದದಿಂದಿರುತ್ತ, ಮನ್ಮಥನ ಸಮಾನನಾದ ಕುಮಾರನ ವ್ರೊಲಪಿನಿಂದಲೂ, ಸುವರ್ಣಲತೆಗಳಂತಿರುವ ಕಾಂತೆಯರ ಭೋಗಂಗಳಿಂದಲೂ, ನವರಸ ಭರಿತವಾದ ರಾಗರಚನೆಯಿಂದಲೂ, ಕಿವಿಗಿಂಪಾಗಿ ಪಾಪಂಗಳಂ ಪರಿಹರಿಸಿ ಇಷ್ಟಾರ್ಥವಂ ಕೊಡುವ, ಇತಿಹಾಸ ಪುರಾಣಮೊದಲಾದ ಸತ್ಕಥಾಶ್ರವಣದಿಂದಲೂ, ರಾತ್ರಿ ಹಗಲುಗಳಂ ನಿಮಿಷದಂತೆಮಾಡುವ ರಸಿಕಜನರ ಚಾಟು ಚಮತ್ಕಾರ ವಚನರಚನಾ ವಿನೋದ ಸರಸಸಲ್ಲಾಪಂಗಳಿಂದಲೂ, ಚತುಷ್ಷಷ್ಟಿತಂತ್ರಗಳಲ್ಲಿಯೂ ಸ್ವತಂತ್ರರಾದ ದೇಶ ವಿದೇಶೀಯ ವಿದ್ವಜ್ಜನಂಗಳ ಪ್ರಸಂಗಸಂಗತಿಗಳಿಂದಲೂ, ದೇಶಕೋಶಂಗಳೊಳ್ ನಡೆವ ರಾಜಕಾರ್ಯಂಗಳ ವಿಚಾರಂಗಳಿಂದಲೂ ಸದಾಸಂತುಷ್ಟನಾಗಿ ಸುಖಸಾಮ್ರಾಜ್ಯದೊಳಿರಲು. ಒಂದಾನೊಂದುದಿನ ಚತುಷ್ಷಷ್ಟಿಕಲಾ ವಿಶೇಷಂಗಳಂ ತಿಳಿದ ದೇಶದೇಶಾಂತರಂಗಳಿಂ ಬಂದಿರುವ ವಿದ್ವಾಂಸರುಗಳಿಂದ ಮಂಡಿತವಾಗಿ ಸಭಾಸಪ್ತಾಂಗದಿಂಕೂಡಿ ಬೃಹಸ್ಪತಿಮಂದಿರಾದ ದೇವಪ್ರಾಜ್ಞರಿಂ ನಿಬಿಡಿತವಾದ ಜಂಭಪ್ರಸಭೆಯಂ ತಿರಸ್ಕರಿಸುವ ಆಸ್ಥಾನದೊಳ್ ಸಕಲ ಸಾಮಾಜಿಕರಿಂದ ಸಹಿತನಾಗಿ, ವಿದ್ಯಾಧ

ರರಿಂದ ಪರಿವೃತನಾದ ಕುಬೇರನಂತೆ ಪ್ರಕಾಶಿಸುತ್ತಲಿರುವ ರಾಯನಸಮೀಪವಂ ಕುರಿತು ವಿದ್ಯಾಸಾಗರನು ಬಂದು, ಎಲೈ ಮಹಾರಾಜನೇ ನಿನ್ನ ಅಪ್ಪಣೆಯುಮೇರೆಗೆ ಸುಗಂಧರಾಜಕುಮಾರಂಗೆ ಸಕಲವೇದವೇದಾಂಗಂಗಳು ಮೊದಲಾದ ಚತುಷ್ಷಷ್ಟಿವಿದ್ಯೆಗಳಂ ಸಮರ್ಪಕವಾಗಿ ಸಾಂಗವಾಗಿಕಲಿಸಿಇದ್ದೇನೆ, ಈ ವಿದ್ವಾಂಸರುಗಳಿಂದ ಸಹಿತನಾಗಿ ಕುಮಾರನ ವಿದ್ಯಾಪರೀಕ್ಷೆಯುಂ ತೆಗೆದುಕೊಳ್ಳುವುದಕ್ಕೆ ಈ ದಿವಸವೇ ಶುಭದಿವಸವಾಗಿರುವುದೆಂದು ವಿಜ್ಞಾಪನೆಯುಂಗೈದನಂತರ ರಾಯನು ವಿದ್ಯಾಸಾಗರನಂ ಸಮೀಪದೊಳ್ಕುಳ್ಳಿರಿಸಿ ಪದಿನೈದುವರುಷಂಗಳುತುಂಬಿ ಸಕಲಕಲಾಸಂಪನ್ನನಾಗಿ ಷೋಡಶಕಲಾಸಂಪನ್ನನಾದ ಶರತ್ಕಾಲದ ಪೂರ್ಣಚಂದ್ರನಂತೆವಿರಾಜಿಸುವ ತನುಜನಂ ಕರೆಯಿಸಲು ಆ ಸಕಲಕಲಾ ಕುಶಲನಾದ ಕುಮಾರನು ನೀತಿಮಂತ್ರನೆಂಬ ಗುರಿಕಾರನೊಡಗೂಡಿ ಬಂದು ರಾಯನಾಸ್ಥಾನವಂ ಪೊಕ್ಕು ಭಯಭಕ್ತಿ ವಿನಯಗಳಿಂದ ತಲೆವಾಗಿ ಕೈಗಟ್ಟಿತನುಬಾಗಿ ಬರುವದಂ ಸಭಾಜನಂಗಳೆಲ್ಲರು ಕಂಡು ರಭಗ್ಗನೆ ಎದ್ದು ಮರ್ಯಾದೆಯಿಂದ ನಿಂತಿರುವ ಸಮಯದೋಳ್ ಆ ರಾಜಕುಮಾರನು ರಾಯಂಗೆ ಸಾಷ್ಟಾಂಗಪ್ರಣಾಮವಂ ಗೈದು ಆಶೀರ್ವಾದವಂ ಕೈಕೊಂಡು ರಾಯನಾಜ್ಞಾನುಸಾರವಾಗಿ ಕೆಲದೊಳ್ಕುಳ್ಳಿರಲು, ವಿದ್ಯಾಸಾಗರನು ಎದ್ದು ಎಲೈ ರಾಜೇಂದ್ರನೆ ಈ ಸಭೆಯುಲ್ಲಿರುವ ಚತುಷ್ಷಷ್ಟಿವಿದ್ಯಾಕುಶಲರಾದ ವಿದ್ವಾಂಸರುಗಳು ಪ್ರತ್ಯೇಕವಾಗಿ ಒಬ್ಬೊಬ್ಬರೊಂದೊಂದು ವಿದ್ಯೆಯಂ ಪರೀಕ್ಷೆಯಂಮಾಡುವಂತೆ ಅಪ್ಪಣೆಯಂ ದಯಮಾಡಬೇಕೆಂದು ಬಿನ್ನವಿಸಲು, ರಾಯನು ಆ ಮಾತಂಕೇಳಿವಿದ್ವಾಂಸರಸಮೂಹವಂನೋಡಿ, ಎಲೈ ವಿಬುಧ ಶಿರೋಮಣಿಗಳಿರಾ, ನಿಮ್ಮಲ್ಲಿಯಾರ್ಯಾರಿಗೆ ಯಾವಯಾವ ವಿದ್ಯೆಗಳಲ್ಲಿ ಕೂಲಂಕಷವಾಗಿ ಅಭ್ಯಾಸವಿರುವುದೋ ಆಯಾಯ ವಿದ್ವಾಂಸರು ಆಯಾಯ ವಿದ್ಯೆಗಳಲ್ಲಿ ಈ ಸುಗಂಧರಾಜಕುಮಾರನಂ ಪರೀಕ್ಷಿಸುವುದೆಂದು ನಿರೂಪಿಸಲು, ಆ ವಿದ್ವಾಂಸರು ರಾಯನ ಅಪ್ಪಣೆಮೇರಿಗೆ ಪರೀಕ್ಷಿಸುತಿರ್ದರು. ಅದೆಂತೆಂದರೆ ಸಕಲವೇದ ವೇದಾಂಗ ಇತಿಹಾಸ ಆಗಮ ನೀತಿಶಾಸ್ತ್ರ ಕಾವ್ಯ ಅಲಂಕಾರ ನಾಟಕ ಗಾನ ಕವಿ

ತ್ರ್ಯ, ಕಾಮಶಾಸ್ತ್ರ ದ್ಯೂತನೈಪುಣ್ಯ ದೇಶಭಾಷಾಜ್ಞಾನ ಲಿಪಿಕರ್ಮ ವಾಚಕಸಮಸ್ತಾವಧಾನಂಗಳು ಸ್ವರಶಾಸ್ತ್ರ ಶಕುನಸಾಮುದ್ರಿಕ ರತ್ನ ಪರೀಕ್ಷಾಸ್ವರ್ಣಪರೀಕ್ಷಾ, ಅಶ್ವಲಕ್ಷಣ ಗಜಶಾಸ್ತ್ರ ಮಲ್ಲವಿದ್ಯಾ ಪಾಕಕರ್ಮ ದಶದೋಹಳಗಂಧವಾದಧಾತುವಾದಖನಿವಾದ ರಸವಾದ ಅಗ್ನಿಸ್ತಂಭ, ಜಲಸ್ತಂಭ ಖಡ್ಗಸ್ತಂಭ ವಾಯುಸ್ತಂಭ ವಶ್ಯಆಕರ್ಷಣ ಮೋಹನ ವಿದ್ವೇಷಣ ಉಚ್ಚಾಟನ ಮಾರಣ ಕಾಲವಂಚನ, ವಾಣಿಜ್ಯ ಪಾಶುಪಾಲ್ಯ ಕೃಷಿ ಬಸವಕರ್ಮ ಲಾವಯುದ್ಧ ಕೌಶಲ್ಯ ಮೃಗಯಾ ರತಿಕೌಶಲ್ಯ ದ್ಯೂತಕರಣೀಅದೃಶ್ಯಕರಣೀಚಿತ್ರ, ಲೋಹಪಾಷಾಣ ಮೃದ್ದಾರುವೇಣು ಚರ್ಮಾಂಬರ ಕ್ರಿಯಾದಿ ಚೋರಕರ್ಮ ಮಂತ್ರಸಿದ್ಧಿ ಔಷಧಸಿದ್ಧಿ ಸ್ವರವಂಚನ ದೃಷ್ಟಿವಂಚನ ಅಂಜನ ಜಲಪ್ಲವನ ವಾಕ್ಸಿದ್ಧಿ, ಘುಟಿಕಾ ಸಿದ್ಧಿ ಪಾದುಕಾಸಿದ್ಧಿ ಇಂದ್ರಜಾಲ ಮಹೇಂದ್ರಜಾಲ, ಇಂತೆಂಬ ಚತುಷ್ಷಷ್ಟಿವಿದ್ಯೆಗಳಲ್ಲಿ ಒಂದೊಂದಾಗಿ ಮುಖ್ಯಾಶಯವನ್ನೇ ಪಿಡಿದು ಕೇಳಲು, ಆ ಬುದ್ಧಿಶಾಲಿಯಾದ ಸುಗಂಧರಾಜನು ಆಯಾಯವಿದ್ಯೆಗಳ ಸೂಕ್ಷ್ಮಮರ್ಮಗಳಂ ತಿಳಿದು ವಿವರಿಸಲು, ಆ ವಿದ್ವಾಂಸರುಗಳು ಕುಮಾರನ ವಿದ್ಯಾಶಕ್ತಿಯನೋಡಿ ಅತ್ಯಾಶ್ಚರ್ಯವಂ ಪಟ್ಟು, ಮತ್ತಂ ದುರ್ಘಟವಾದ ಇಂದ್ರಜಾಲವಂತಿಳಿದ ಪುರುಷನು ಅನೇಕಂಗಳಾದ ಘೋರಸರ್ಪಂಗಳನ್ನು ವಿವಿಧಸಿಂಹಂಗಳನ್ನು ಮಾಯೆಯಿಂದ ಕಲ್ಪಿಸಲು ರಾಜಕುಮಾರನು ತನ್ನ ಪ್ರತಿಮಾಯಾಶಕ್ತಿಯಿಂದ ಗರುಡಶರಭಂಗಳಂಕಲ್ಪಿಸಿ ಆ ಕ್ಷಣದೊಳ್ ಆ ಸರ್ಪ ಸಿಂಹಂಗಳಂ ಪರಿಹರಿಸಲು, ಮತ್ತೋರ್ವವಶ್ಯವಂ ತಿಳಿದ ಪುರುಷನು ಉಗ್ರವಾದ ವ್ಯಾಘ್ರವಂ ವಶ್ಯವಾಗಿ ಹಿಡಿಯಲು, ಸುಗಂಧರಾಯನು ಆ ವ್ಯಾಘ್ರದಿಂದ ಅವನನ್ನೇ ಹಿಡಿಯಿಸಿ ಕಡಿಯಿಸಲು, ಅಂಜನಗಾರನು ಅಂಜನದಿಂದ ಒಬ್ಬರಿಗೂ ತಾನು ಕಾಣದಂತೆ ಎಲ್ಲ ವಸ್ತುಗಳನ್ನು ಗ್ರಹಿಸಲು, ಈ ರಾಜಕುಮಾರನು ಪ್ರತ್ಯಂಜನದಿಂದ ಆತನಂ ಪಿಡಿದು ನಿಲ್ಲಿಸಿದುದಂ ಕಂಡು, ಜಟಾಧಾರಿಯಾದ ಪರಮಹಂಸನು ಲೋಹಗಳಂ ಸುವರ್ಣಾದಿಗಳಾಗಿಮಾಡಿ ತೋರಿಸಲು, ಮಹಾ ರಾಜಕುಮಾರನು ಪ್ರತಿವಾದದಿಂದ ಅವೆಲ್ಲವಂ ತಿರುಗಿ ಲೋಹಂಗ

ಳಾಗಿಮಾಡಲು, ಅಲ್ಲಿರುವ ವಿದ್ಯಾಶಾಲಿಗಳೆಲ್ಲರೂ ಜಿತರಾಗಿ ಸ್ತೋತ್ರವಂಗೈಯಲು, ಆಗ ಆ ಸುಚರಿತ್ರಮಹಾರಾಯನು ತನ್ನ ಕುಮಾರನಾದ ಸುಗಂಧರಾಜನಂ ಆಲಿಂಗನವಂಮಾಡಿ ವಾತ್ಸಲ್ಯದಿಂದ ಹರಸಿ ಸಕಲ ಸಭಾಜನರಂ ಮನ್ನಿಸಿ ಕಳುಹಿ, ಉಪಾಧ್ಯಾಯನಂ ಕುರಿತು ಎಲೈ ಉಪಾಧ್ಯಾಯನೆ ನಿನಿಗೆ ವಿದ್ಯಾಸಾಗರನೆಂಬ ಹೆಸರು ಸಾರ್ಥಕವಾಗಿರುವುದೆಂದು ಹೇಳಿ, ಸರ್ವಾಂಗವಂ ಕೊಟ್ಟು ಮನ್ನಿಸಿ ಕಳುಹಿ, ಕುಮಾರಸಹಿತನಾಗಿ ಅಂತಃಪುರವಂ ಪ್ರೊಕ್ಕು ಪಟ್ಟದ ರಾಣಿಸಹಿತರಾದ ನಿಜಕಾಂತೆಯರೊಡನೆ ಕುಮಾರನ ವಿದ್ಯಾಸಾಮರ್ಥ್ಯವಂ ಹೇಳಿ, ವಿದ್ಯಾಸಂಪೂರ್ತಿಯಾದ ಬಳಿಕ ಮಾಡತಕ್ಕ ವ್ರತಸಮಾವರ್ತನೆಯಂ ಸೂತ್ರಾನುಸಾರವಾಗಿ ಪುರೋಹಿತಮೊದಲಾದ ವಿದ್ವಜ್ಜನರಿಂದೊಡಗೂಡಿ ಬಳೆಯಿಸಿ,ಉತ್ತಮವಾದ ಮತ್ತೊಂದುದಿನದೋಳ್ ರಾಯನುತನ್ನಪುತ್ರಂಗೆ ವಿವಾಹಾರ್ಥವಾಗಿ ಆಲೋಚಿಸಿ ಮಂತ್ರಿಯಂ ಕರೆಯಿಸಿ ಎಲೈ ಸುಬುದ್ಧಿಯೆ ನಮ್ಮ ಕುಮಾರನಾದ ಸುಗಂಧರಾಜಂಗೆ ಅನುಗುಣವಾದ ಕನ್ಯಾರತ್ನವಂ ಕುಲೀನರಾದ ಅರಸುಗಳಲ್ಲಿ ವಿಚಾರಿಸುವನಾಗು ಶೀಘ್ರದಿಂ ವಿವಾಹವಂಮಾಡ ನಾವು ಸತಿಪತಿಗಳೀರ್ವರು ನೇತ್ರಾನಂದವಂ ಅನುಭವಿಸಬೇಕೆಂದು ಇಚ್ಛೈಸಿರುವೆವೆಂದು ಹೇಳಲು, ಮಂತ್ರಿಯು ಮಹಾಪ್ರಸಾದವೆಂದು ಬಿನ್ನೈಸಿ ನಿಲ್ಲಲು, ಆ ಮಾತಂ ಕೇಳಿ ಸುಗಂಧರಾಜಕುಮಾರನು ಎದ್ದು ತಂದೆಯ ಅಡಿಹಾವರೆಗಳಿಗೆರಗಿ ಎಲೈ ಸ್ವಾಮಿಯೆ, ನಾನು ಸಾಧಾರಣಜನರಂತೆ ಈಗಲೇವಿವಾಹವಂ ಮಾಡಿಕೊಳ್ಳಲಿಚ್ಛೈಸುವವನಲ್ಲ ನನ್ನ ಭುಜಬಲದಿಂದ ಸಕಲದೇಶಂಗಳಂ ಕಟ್ಟ ಭೂಪಾಲರಂ ಜಯಿಸಿ ಕಪ್ಪಗಳಂ ಗ್ರಹಿಸಿದನಂತರದಲ್ಲಿ ಅಪ್ಪಣೆಯಾದಂತೆ ನಡೆದುಕೊಳ್ಳುತ್ತೇನೆ. ದಿಗ್ವಿಜಯಾರ್ಥವಾಗಿ ಈಗ ಅಪ್ಪಣೆಯಂ ದಯಪಾಲಿಸಬೇಕೆಂದು, ಪ್ರಣಾಮವಂಗೈದಕುಮಾರನಂನೋಡಿ ಮನದೋಳ್ ಎಂದಿಗೂ ನನ್ನ ವಚನವಂ ವೇದವಾಕ್ಯವಾಗಿ ತಿಳಿದು ನಡೆಯುವ ವಿವೇಕಶಾಲಿಯಾದ ಕುಮಾರಂಗೆ ಈ ಪರಿಯೋಚನೆತೋರಿದುದು ಆಶ್ಚರ್ಯವಾಗಿದೆ, ಇದಂ ತಿಳಿಯಬೇಕೆಂದು ಯೋಚಿಸುತ್ತಲಿರುವರಾಯನಂ ಕುರಿತು ಮಂತ್ರಿಯಾ

ದ ಸುಬುದ್ಧಿಯು ಎಲೈ ಮಹಾರಾಜನೇ ನಿನ್ನ ಕುಮಾರನು ದೇವಿಯ ವರಪುತ್ರನಲ್ಲವೆ, ಮತ್ತಂ ಆದಿಶಕ್ತಿಯಾದ ದೇವಿಯು ಪೂರ್ವದಲ್ಲಿ ಅನುಗ್ರಹಿಸಿರುವ ಪರಿಯಂ ನೆನೆದು ಆ ದೇವಿಯಂ ಪೂಜಾಧ್ಯಾನಗಳಿಂದ ಪ್ರತ್ಯಕ್ಷಗೊಳಿಸಿ ವಿಜ್ಞಾಪನೆಯಂ ಗೈದು, ಆ ಜಗಜ್ಜನನಿಯು ಕರುಣಿಸಿದ ಉಪನಿಷದ್ರೂಪಂಗಳಾದ ವಚನಂಗಳಂ ಶಿರಸಾವಹಿಸಿ ಆ ರೀತಿಯಲ್ಲಿ ಸಂತೋಷದಿಂ ಕಾರ್ಯವಂ ನಡೆಯಿಸುವದು ಉಚಿತವೆಂದು ವಿಜ್ಞಾಪಿಸಿದ ಅಮಾತ್ಯನ ವಚನವಂ ಕೇಳಿ ವಿಹಿತವೆಂದರಿತು ಕುಮಾರನಂ ಕರೆದು ನಾಳೆ ಶುಭಮುಹೂರ್ತದಲ್ಲಿ ದಿಗ್ವಿಜಯಾರ್ಥವಾಗಿ ಅಪ್ಪಣೆಯಂ ಕೊಡುವೆನೆಂದು ಆಜ್ಞಾಪಿಸಿ ರತ್ನ ಖಚಿತವಾದ ಯುವರಾಜಭವನವಂ ಕುರಿತು ಕಳುಹಿ, ಮಂತ್ರಿಯಾದ ಸುಬುದ್ಧಿಯ ಪ್ರಕೃತೋಪಯುಕ್ತವಾದ ವಚನ ಸಾಮರ್ಥ್ಯವಂ ಶ್ಲಾಘಿಸುತ ಆತನಿಗೆ ಸಪ್ತಾಂಗವಂ ಕೊಟ್ಟು ಕಳುಹಿ, ಅಂತಃಪುರವಂ ಪ್ರವೇಶಿಸಿ ಈ ವೃತ್ತಾಂತವಂ ಗುಣವತಿಯೊಡನೆ ನಿರೂಪಿಸುತ ಸುಖದಿಂದಿರುತಿರ್ದನೆಂಬಲ್ಲಿಗೆಗದ್ಯ ॥ ಕುಂಡಲಿಶಯನಖಂಡಪರಶು ಪುಂಡರೀಕಭವಾಖಂಡಲಪ್ರಮುಖನಿಖಿಲಸುರವರ ಪರಿಭವಪರಿಣತಪ್ರಚಂಡಬಲ ಚಂಡಮುಂಡ ಖಂಡನನಿಪುಣಕೋದಂಡಕಾಂಡಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾಸಾಮ್ರಾಜ್ಯಸರ್ವಂಕಷ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾ ಶತಗ್ರಂಥ ದಿನದಿನ ಪ್ರಬಂಧನಿಬಂಧನಧುರಂಧರತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನಸೂತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರನರಪತಿ ಬಿರುದ ಮಹೀಶೂರ ಪುರವರಾಧೀಶ ಶ್ರೀ ಕೃಷ್ಣರಾಜಒಡೆಯರವರಿಂದ ರಸಿಕ ಜನಾನಂದಕರವಾದ ವಿರಚಿತವಾಗಿ ಸೌಗಂಧಿಕಾಪರಿಣಯವೆಂಬ ನವೀನಕೃತಿಯೊಳ್ ಸುಗಂಧರಾಜಕುಮಾರಂಗೆ ಅನ್ನಪ್ರಾಶನಮೊದಲಾಗಿ ವಿದ್ಯಾಪರೀಕ್ಷಾ ಕಥನಮುಂತಾದುದಂ ಬಣ್ಣಿಸಿರುವಐದನೇ ಆಶ್ವಾಸ ನಿರೂಪಣಂ ಮಂಗಳಮಸ್ತು.

# ಶು ಭ ಮ ಸ್ತು.

## ಅ ರ ಸೇ ೧ ಆ ಶ್ವಾ ಸ ಪ್ರಾ ರಂ ಭ.

---

ಸುಚರಿತ್ರಮಹಾರಾಯಂಗೆ ದೇವಿಯು ಪ್ರಸನ್ನಳಾಗಿಸುಗಂಧರಾಜಕುಮಾರನ ಪೂರ್ವವೃತ್ತಾಂತವಂ ನಿರೂಪಿಸಿದ್ದು.

—ಶ್ರೀ ಚಾಮುಂಡಿಕಾಂಬಾಯೈನಮಃ.—

ಅನಂತರದಲ್ಲಿ ಸುಚರಿತ್ರಮಹಾರಾಯನು ಶುಚಿರ್ಭೂತನಾಗಿ ತನ್ನ ಇಷ್ಟದೇವತೆಯಾದ ಆದಿಶಕ್ತಿಯಾದ ಪರದೇವತೆಯಂ ಧ್ಯಾನಿಸಲಾಗಿ ಶ್ರೀ ಆದಿಶಕ್ತಿಯು ಸಕಲಜನರುಗಳ ಹೃದಯದಲ್ಲಿರುವಳಾದಕಾರಣತನ್ನ ನಿಜಭಕ್ತನಾದ ಈರಾಯನ ದೃಢಭಕ್ತಿಗೆ ಮೆಚ್ಚಿ ಮೊದಲು ತಾನುವರವಂ ಕೊಟ್ಟಿರುವ ಮೇರೆಗೆ ಪ್ರತ್ಯಕ್ಷವಾಗಿಬಂದು ನಿಲ್ಲಲು, ಆಗ ರಾಯನು ಸಾಷ್ಟಾಂಗ ಪ್ರಣಾಮವಂ ಗೈದು ವೇದಮಂತ್ರಯುಕ್ತವಾದ ಸ್ತುತಿಗಳಿಂದ ದೇವಿಯಂ ಸ್ತುತಿಸಲು, ಇಷ್ಟದೇವತೆಯಾದ ಆದಿಶಕ್ತಿಯು ಭಕ್ತಶಿರೋಮಣಿಯಾದ ರಾಯನ ಸ್ತುತಿಗೆ ಅತಿ ಆನಂದಭರಿತಳಾಗಿ, ಎಲೈ ಕುಮಾರನೇ ನನ್ನಂ ನೀನು ನೆನದ ಕಾರಣವೇನು? ಎಂದು ಆಜ್ಞಾಪಿಸಲು, ರಾಯನು ಆ ವಾಕ್ಯವಂಕೇಳಿ ಎಲೈ ಲೋಕಮಾತೆಯಾದ ಜಗದೀಶ್ವರಿಯೆ ಸಕಲಚರಾಚರ ವಸ್ತುಗಳಲ್ಲಿ ಅಂತರ್ಯಾಮಿ ಸ್ವರೂಪಿಣಿಯಾದ ನೀನು ನನ್ನ ಹೃದಯದಲ್ಲಿರುವಪರಿಯಂ ಅರಿಯದಂತ ಅಪ್ಪಣೆಯಂ ಕೊಡುತಲಿದ್ದೀಯೆ? ಆದಾಗ್ಯೂ ಅಲ್ಪಬುದ್ಧಿಯುಳ್ಳ ನಾನು ನನ್ನ ಹೃದಯದಲ್ಲಿರುವ ಅರ್ಥವಂ ಬಿನ್ನೈಸುತಲಿಧೇನೆ. ನಿನ್ನ ವರಪ್ರಸಾದೋದ್ಭವನಾದ ಸುಗಂಧರಾಜಕುಮಾರಂಗೆ ವಿವಾಹ ಮಾಡಲೋಸುಗ ನಾನು ಉದ್ಯುಕ್ತನಾಗಲು, ಆ ಕುಮಾರನು ದೇಶಗಳನ್ನು ನೋಡಿಆಯಾಯ ದೇಶಗಳ ರೀತಿಗಳನ್ನು ವೇಷ ಭಾಷೆಗಳನ್ನು ಇನ್ನು ಅನಂತವಾದ ಕೌತುಕಗಳನ್ನು ನೋಡಬೇಕು, ಇದಲ್ಲದೆ ಮಲತಿರುವ ರಾಯರುಗಳಸಂಗಡ ಯುದ್ಧಗಳಂ ಮಾಡಿ ಜಯಶೀಲನಾಗಬೇಕೆಂದು ಹಠವಂ

ಮಾಡುತಲಿಧಾನೆ ಆಪುದರಿಂದ ಬಹುಕಾಲದಿಂ ಮಕ್ಕಳಿಲ್ಲದ ನನಗೆ ನಿನ್ನ ವರದಿಂಪ್ರಟ್ಟಿದ ಒಬ್ಬ ಮಗನಂ ಬಿಟ್ಟು ದಂಪತಿಗಳಾದ ನಾವೀರ್ವರೂ ಇರಲಾರೆವು, ಇದಲ್ಲದೆ ಆತನು ಬಾಲಕನು ಅನೇಕ ಸತ್ವಸಾಹಸಗಳುಳ್ಳ ರಾಯರುಗಳು ಇರುವರು. ಅವರುಗಳಂ ಜಯಿಸುವುದಕ್ಕೆ ಈ ಬಾಲಕನಿಗೆ ಶಕ್ತಿಸಾಲದೆಂದು ನಿಶ್ಚೈಸಿ ಭಯಪಡುತಲಿಧೇನೆ, ಈ ಭಯವಂ ಪರಿಹರಿಸಿ ಕುಮಾರನಂ ಸಂರಕ್ಷಿಸುವುದು ನಿನ್ನಾಧೀನವೆಂದು ಶ್ರೀ ಮಹಾದೇವಿಗೆ ಅತಿಭಕ್ತಿಯಿಂದ ಗದ್ಗದ ಸ್ವರದಿಂದ ಬಿನ್ನೈಸಲು, ಆ ಜಗದ್ವಂದ್ಯಳಾದ ಶ್ರೀ ಚಾಮುಂಡಿಕಾದೇವಿಯು ಮುಗುಳುನಗೆಯಿಂದ ರಾಯನಂ ಕುರಿತು ಒಂದಾನೊಂದು ಮೃದುವಾದ ನುಡಿಯಿಂದ ಆಜ್ಞಾಪಿಸಿದಳು, ಎಲೈ ರಾಜಶಿರೋಮಣಿಯೆ ನೀನು ಏನುಕಾರಣ ಚಿಂತಿಸುತಲಿಧ್ಧೀಯೆ! ಆ ಕುಮಾರನು ಬಹುಪುಣ್ಯಶಾಲಿಯು ಆಯುಷ್ಮಂತನು ಮಹಾಪ್ರಭಾವ ಉಳ್ಳವನು ದೇವತೆಗಳಿಂದಲು ಅಶಕ್ಯಂಗಳಾದ ಬಹುಕಾರ್ಯಂಗಳು ಆತನಿಂದ ಆಗಬೇಕಾಗಿಧೆ. ಈಗ ಆತನು ಈ ಹಠವಂಹಿಡಿದಿರುವುದು ಆತನ ಸ್ವಬುದ್ಧಿಯಲ್ಲ, ಆತನಿಗೆ ಪ್ರೇರಣೆಯಂ ಮಾಡಿರುವಳು ನಾನೇ ಆದ್ದರಿಂದ ಆತನು ನಿನ್ನೊಡನೆ ಛಲವಂತೊಟ್ಟು ಈಗಲೇ ಅಪ್ಪಣೆಯಂ ಕೊಡಬೇಕೆಂದು ಕೇಳುತಲಿದ್ಧಾನೆ, ಆತನಿಗೆ ಸಕಲ ದಿಗ್ವಿಜಯಂಗಳಂ ಕೊಡುವುದಕ್ಕೆ ಬದ್ಧಕಂಕಣಳಾಗಿ ನಾನಿರುವಲ್ಲಿ ನಿನ್ನ ಚಿಂತೆಗೆ ಪ್ರಯೋಜನವು ಕಾಣಲಿಲ್ಲ, ನೀನು ಅಮೃತಸಿದ್ಧಿಯೋಗಸಹಿತವಾದ ಸುಮುಹೂರ್ತದಲ್ಲಿ ಶುಚಿಭೂರ್ತನಾಗಿ ನೊದಲು ನಿನ್ನ ವನಕ್ಕೆ ಬಂದಿದ್ದ ತಪಸ್ವಿಯಿಂದುಪದೇಶಮಾಡಲ್ಪಟ್ಟ ನವಾಕ್ಷರೀ ಮಹಾಮಂತ್ರವಂ ಕುಮಾರಂಗೆ ಉಪದೇಶವಂ ಮಾಡು, ಆತನು ಅಕ್ಷರಲಕ್ಷಪುರಶ್ಚರಣೆಯಂಮಾಡಲು, ಆಗ ನಾನು ಆತನಿಗೆ ಪ್ರತ್ಯಕ್ಷಳಾಗಿ ಸಕಲ ಮಂತ್ರಾಸ್ತ್ರಂಗಳ ಪ್ರಯೋಗೋಪ ಸಂಹಾರ ರೀತಿಗಳಂ ಉಪದೇಶಿಸುನೆನು. ಆತನು ಸಕಲ ಭೂಮಂಡಲವಂ ಜಯಿಸಿ ಅನೇಕ ಸ್ತ್ರೀಯರೊಡಗೂಡಿ ಸಕಲೈಶ್ವರ್ಯದಿಂದ ಚತುರಂಗಸಮೇತನಾಗಿ ಬರುತಲಿಧಾನೆಂದು ಆಜ್ಞಾಪಿಸಲು, ಆ ಮಾತಂಕೇಳಿ ರಾಯನು ಶ್ರೀಮಹಾದೇವಿಯಂ ಕುರಿತು ಪ್ರನತಿ

ಪ್ರಶ್ನೆಯಂ ಗೈದನು. ಎಲೈ ಜಗನ್ಮಾತೆಯೆ, ನಿನ್ನ ಮಾಯೆಯನ್ನರಿತವರಾರು. ಈ ಕುಮಾರನು ದೇವತೆಗಳಿಗೂ ಅಶಕ್ಯಂಗಳಾದ ಕಾರ್ಯಗಳಂ ಮಾಡುವನೆಂದು ಆಜ್ಞಾಪಿಸಿರುವೆ. ಈ ಕುಮಾರನು ಇಷ್ಟು ಪ್ರಭಾವಶಾಲಿಯಾಗುವದಕ್ಕೆ ನಿಮಿತ್ತವೇನು? ಅದಂ ವಿಸ್ತಾರವಾಗಿ ವಿವರಿಸಬೇಕೆಂದು ವಿಜ್ಞಾಪಿಸಲು, ಆ ಮಾತಂ ಕೇಳಿ ಜಗದೀಶ್ವರಿಯು ಸಂತೋಷದಿಂ ನಿರೂಪಿಸುವ ಪರಿಯೆಂತೆಂದರೆ, ಎಲೈ ರಾಜೋತ್ತಮನೆ, ನಿನ್ನ ಕುಮಾರನ ಪ್ರಭಾವಾತಿಶಯವಂ ಸಾವಧಾನವಾಗಿ ಕೇಳುವನಾಗು. ಪೂರ್ವದಲ್ಲಿ ದೇವಲೋಕದಲ್ಲಿ ಅಮರಾವತೀ ಪಟ್ಟಣದೊಳ್ ದೇವೇಂದ್ರನು ಶಚೀದೇವಿಯಿಂದೊಡಗೂಡಿ ಸುಖದಿಂದಿರುತ್ತಿರಲು, ಒಂದಾನೊಂದು ದಿನದೊಳ್ ವನವಿಹಾರವಂ ಮಾಡಲಿಚ್ಛೈಸಿ ದ್ವಾದಶಾದಿತ್ಯರಿಂ ಏಕಾದಶ ರುದ್ರರಿಂ ಅಷ್ಟವಸುಗಳಿಂ ಸಪ್ತ ಮರುತ್ತುಗಳಿಂ ಕೂಡಿ ಮೂವತ್ತುಮೂರುಕೋಟಿ ದೇವಸೇನಾ ಸಮೇತನಾಗಿ, ದಿವ್ಯವಾಹನಾರೂಢರಾದ ಸ್ವಸಮಾನ ವೈಭವವುಳ್ಳ ದಿಕ್ಪಾಲಕರಿಂ ಯುಕ್ತನಾಗಿ, ಐರಾವತವೆಂಬ ಚತುರ್ದಂತಗಳುಳ್ಳ ಆನೆಯನೇರಿ, ದುಂದುಭಿ, ವೀಣಾ, ವೇಣು, ಮೃದಂಗ, ಪಣವ, ಭೇರೀ, ಝಾಂಕಾರಗಳಿಂದ ಬ್ರಹ್ಮಾಂಡ ಕಟಾಹವಂ ತುಂಬಿಸುತ, ಪುಷ್ಪಾಪಚಯಾರ್ಥವಾಗಿ ನಂದನವನವಂ ಕುರಿತು ಹೊರಟು, ದೇವವಾರಾಂಗನಾಶ್ರೇಷ್ಠರಾದ ರಂಭಾ, ಊರ್ವಶೀ, ತಿಲೋತ್ತಮಾ, ಘೃತಾಚೀ, ಮೇನಕಾ ಮೊದಲಾದ ವೇಶ್ಯಾಜನರುಗಳ ರಸಾಭಿನಯದಿಂದೊಡಗೂಡಿದ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದಗಳೆಂಬ ಸಪ್ತಸ್ವರಂಗಳ ಅಪೂರ್ವವಾದ ಆರೋಹಣಾವರೋಹಣ ಕ್ರಮದಿಂದ ಜನಿಸುವ ಮೂರ್ಛನಾತಾನ ಜಾತಿಗಳುಳ್ಳ ಸಂಗೀತರವದಿಂ ಮಿಳಿತವಾದ ನಾಟ್ಯವನ್ನವಲೋಕಿಸುತ, ವಿಶ್ವಾವಸುಮೊದಲಾದ ಗಂಧರ್ವರ ಗಾನವಂ, ಕಿವಿಗಿಂಪಾಗಿ ಕೇಳುತ, ನಂದನವನಕ್ಕೆ ಪೋಗಿ ಪುಷ್ಪಾಪಚಯವಂ ಮಾಡಿ, ಅಪರಿಮಿತಸಂತೋಷದಿಂದ ಶಚಿಯೊಡನೆ ಸಹಿತನಾಗಿ ಐರಾವತವನೇರಿ, ಅಮರಾವತಿಯಂ ಕುರಿತು ಬರುವ ಮಾರ್ಗದೊಳ್ ಶಚೀದೇವಿಯಂ

ಕುರಿತು ಇಂದ್ರನಿಂತೆಂದನು, ಎಲೈ ಪ್ರಿಯಳೆ, ದೇವಲೋಕದ ವೈಭವವು ಅನುಭವಿಸಲ್ಪಟ್ಟಿರುವದು, ಭೂಲೋಕಭೋಗವು ಪುತ್ರಪೌತ್ರಸಂಪತ್ಸೌಖ್ಯವು ಎಂತಿರ್ಪುದೋ ಅದನ್ನೋಡಬೇಕೆಂದು ಎನ್ನ ಮನವು ಆಸಕ್ತವಾಗಿದೆ ಎಂದು ನುಡಿದ ದೇವೇಂದ್ರನ ನುಡಿಯಂ ಕೇಳಿ ಶಚೀದೇವಿಯು, ಎಲೈ ಪ್ರಿಯನೇ ಒಂದೊಂದುಲೋಕದ ಭೋಗಂಗಳು ಒಂದೊಂದು ಪರಿಯಾಗಿರುವುವು. ಎಲ್ಲಾ ಲೋಕಗಳಿಗಿಂತಲು ಭೂಲೋಕವು ಕರ್ಮಭೂಮಿಯಾಗಿ, ಸಮಸ್ತ ಕರ್ಮಾಚರಣೆಗೆ ಯೋಗ್ಯವಾಗಿ, ಮತ್ತು ಪುತ್ರಸಂಪತ್ತಿನಿಂ ಅತಿಶಯವಾದ ಸುಖವನ್ನುಂಟುಮಾಡುವುದು. ಆದ್ದರಿಂದ ನಿಮ್ಮ ಮನವಿದ್ದಂತೆ ಎನ್ನಮನವೂ ಬಯಸುವದೆಂದು ನುಡಿಯಲು, ಆ ನುಡಿಯಂ ಕೇಳಿ ಆನಂದಭರಿತನಾದ ಇಂದ್ರನು ಬರುವ ಸಮಯದೊಳ್, ದೂರ್ವಾಸನೆಂಬ ಮಹಾಮುನಿಯು ಮಾರ್ಗಗೊಂಡು ಬರುತಿರುವ ಮಹೇಂದ್ರನಂ ಕಂಡು, ಸಂತೋಷದಿಂ ಪರಶಿವನಿಗೆ ಸಮರ್ಪಿಸಿ ಆತನಿಗೆ ಪ್ರಸಾದಲಬ್ಧವಾಗಿ ಬಂದ, ಹಸ್ತದಲ್ಲಿರುವ ಒಂದು ಸುವರ್ಣಕಮಲ ಮಾಲೆಯಂ ಆಶೀರ್ವಾದಪೂರ್ವಕವಾಗಿ ಇಂದ್ರನಿಗೆ ಕೊಡಲು, ಆಗಲಾ ಇಂದ್ರನು ತಾನು ದೇವರಾಜನೆಂಬ ಗರ್ವದಿಂ, ಮಹಾಮುನಿಗೆ ಅಭಿವಂದಿಸದೆ, ಅದಂ ಶಿರಸ್ಸಿನೊಳ್ ಧರಿಸದೆ ಮಧಾಂಧನಾಗಿ, ಆ ಮಾಲೆಯಂ ತನ್ನ ಮದಗಜದ ಶಿರಸ್ಸಿನಮೇಲೆ ಇರಿಸಲು, ಆ ಮದಗಜವು ಸ್ವಭಾವಮದದಿಂ, ಆ ಕಮಲಮಾಲೆಯಂ ತನ್ನ ಸೊಂಡಲಿಸಿಂದ ತಗೆದು ದಂತಗಳಮೇಲೆ ಬಡಿದು ಪಾದಗಳಿಂದ ಹೊಸಗಲು, ಅದಂ ಕಂಡು ಅತಿ ಕೋಪಿಷ್ಠನಾದ ದೂರ್ವಾಸಮುನಿಯು ಶಚೀಸಮೇತನಾದ ದೇವೇಂದ್ರನಿಗೆ ಶಾಪವಂ ಕೊಟ್ಟಪರಿ ಯೆಂತೆಂದರೆ, ಎಲೈ ಶಚೀಪತಿಯಾದ ಶಕ್ರನೆ, ಕೇಳು, ನೀನು ಪತ್ನಿಯೊಡಗೂಡಿ ಮದಾಂಧನಾಗಿ ನನ್ನಂ ದೂರ್ವಾಸನೆಂದರಿಯದೆ, ಈ ಪೂಮಾಲೆಯಂ ಈಶ್ವರವರಲಬ್ಧವಾದದ್ದೆಂದು ತಿಳಿಯದೆ, ಭಕ್ತಿಪುರಸ್ಸರವಾಗಿ ಶಿರಸ್ಸಿನೊಳ್ ಧರಿಸದ, ನೀನು ಉಪೇಕ್ಷೆಯಿಂ ಆನೆಯ ಶಿರಸ್ಸಿನೊಳಿಟ್ಟು ನಿರಾಕರಿಸಿದ ಕಾರಣದಿಂ ಮಂದಬುದ್ಧಿಯಾದ ನೀನೇರಿದ ಆನೆಯು ತನ್ನ

ಸ್ವಭಾವಗುಣವಂ ತೋರಿದುದಾದ್ದರಿಂದ, ಇದು ನಿನಗೆ ಶ್ರೇಯಸ್ಸಿಗೆ ಕಾರಣವಲ್ಲ. ನೀವು ಸತಿಪತಿಗಳೀರ್ವರೂ ಆಲೋಚಿಸಿದಂತೆ ಭೂಲೋಕದಲ್ಲಿ ಪುಟ್ಟುವರಾಗಿ ನಿಮ್ಮ ಐಶ್ವರ್ಯವೆಲ್ಲವು ರಾಕ್ಷಸರಿಂದ ಅಪಹರಿಸಲ್ಪಡಲಿ, ನಿನ್ನ ಐರಾವತ ಮೊದಲಾದ ಇಷ್ಟವಸ್ತುಗಳು ಭೂಲೋಕದಲ್ಲಿ ದುರ್ಗಮಂಗಳಾದ ದ್ವೀಪಾಂತರಗಳಲ್ಲಿ ವಾಸವಂ ಮಾಡಲೆಂದು ಶಾಪವಂ ಕೊಟ್ಟ ದೂರ್ವಾಸಮುನಿಯಂ ಕಂಡು ಪಾಕಶಾಸನನು ಪಶ್ಚಾತ್ತಾಪಯುಕ್ತನಾಗಿ, ಭಯದಿಂದ ಧುಮುಕಿ ಅತಿ ಭೀತಿಯಿಂದ ಕಂಪಿಸುತ ಕಣ್ಣೀರುಗಳಿಂದ ಆ ಮುನಿಯ ಪಾದಗಳಂ ತೊಳೆಯುವನಂತೆ ತನ್ನ ಮುಖಪಂಕಜವಂ ಆ ಮುನಿಯ ಪಾದಗಳಿಗರ್ಪಿಸುವಂತೆ, ನಿಟ್ಟುಸುರುಗಳೆಂಬ ಧೂಪವಂ ಆತನ ಪಾದಗಳಿಗೆ ಧೂಪಿಸುವನಂತೆ, ಕಿರೀಟದಲ್ಲಿ ಬಿಗಿದ ಮಾಣಿಕ್ಯಗಳ ಕಾಂತಿಗಳೆಂಬ ನೀರಾಜನವಂ ಗೈಯುವವನಂತೆ, ಆಮುನಿಯ ಪಾದಕಮಲದಮೇಲೆ ತನ್ನ ಮಸ್ತಕವನಿಟ್ಟು ಹಂಬಲಿಸುತಲಿರುವವಂ ಕಂಡು, ದೂರ್ವಾಸ ಋಷಿಯು ಎಲೈ ಶಚೀಪತಿಯೆ ಈ ಬುದ್ಧಿಯು ಮೊದಲೇನುಕಾರಣ ನಿಮಗಳಿಗೆ ತೋರಲಿಲ್ಲ, ನಾವು ಕೊಟ್ಟ ಶಾಪವು ತಪ್ಪಲರಿಯದೆಂದು ಹೇಳಲು, ದೇವರಾಜನು ಎಲೈ ಮುನಿವರ್ಯನೆ, ನಮ್ಮಗಳಿಂದ ಅಪರಾಧವುಂಟಾಯಿತು ಅದಂ ಕ್ಷಮಿಸಿ ಕೃಪೆಯಿಂದ ಅನುಗ್ರಹವಂ ಮಾಡಬೇಕೆಂದು, ಅತಿವಿನಯ ಪುರಸ್ಸರವಾಗಿ ಗದ್ಗದಸ್ವರದಿಂ ಸ್ತೋತ್ರವಂ ಗೈಯಲು, ಆಗ ದಯಾರ್ದ್ರ ಹೃದಯನಾದ ದೂರ್ವಾಸಮುನಿಯು ಎಲೈ ಸಹಸ್ರಾಕ್ಷನೇ ಕೇಳು, ನೀನುಮಾಡಿದ ಸ್ತೋತ್ರವನ್ನು ಮೆಚ್ಚಿದೆನು, ಈಗ ಶಾಪವಿಮೋಚನಕ್ಕೆ ಕಾಲವಂ ಹೇಳ್ವೆನು ಕೇಳು, ನೀವು ದಂಪತಿಗಳೀರ್ವರು ಮನಸ್ಸಿನಲ್ಲಿ ಆಲೋಚಿಸಿದರ್ಥಕ್ಕೆ ಈ ಶಾಪವೆ ಅನುಕೂಲವಾಗುವದು. ನೀನು ಭೂಲೋಕದಲ್ಲಿ ಕರ್ನಾಟ ದೇಶದೊಳ್ ರತ್ನಪುರಿಯೆಂಬ ಪಟ್ಟಣವುಂಟು, ಆ ಪಟ್ಟಣವನ್ನಾಳುವ ಸುಚರಿತ್ರನೆಂಬ ರಾಯನು ಮಹಾ ಧರ್ಮಿಷ್ಠನು. ಆತನ ಪಟ್ಟದರಸಿಯಾದ ಗುಣವತಿಯ ಗರ್ಭದಲ್ಲಿ ಜನಿಸಿ ಸುಗಂಧರಾಜನೆಂಬ ಹೆಸರು ಪಡೆದು ಭೂಮೀಂದ್ರನಾಗಿ ಬೆಳೆಯುತಲಿರುವೆ, ನಿನ್ನ ಮಡ

ದಿಯಾದ ಶಚೀದೇವಿಯು ಭೂಲೋಕದಲ್ಲಿ ಕಳಿಂಗದೇಶಾಧಿಪತಿಯಾದ ಕಳಿಂಗರಾಜನ ಧರ್ಮಪತ್ನಿಯಾದ ಸುಲೋಚನಾದೇವಿಯ ಉದರದಲ್ಲಿ ಸೌಗಂಧಿಕಾದೇವಿಯೆಂಬ ಹೆಸರಿನಿಂದ ಪುಟ್ಟುವಳು. ಕೆಲವುದಿನದ ಮೇಲೆ ಸೌಗಂಧಿಕಾಪರಿಣಯಾರ್ಥವಾಗಿ ಆ ಕಳಿಂಗದೇಶಕ್ಕೆ ಬರುತ್ತಲಿದ್ದೀಯೆ, ಆ ಸ್ವಯಂವರಕಾಲದಲ್ಲಿ, ಆ ಸ್ತ್ರೀಯು ನಿನಗೆ ಇಷ್ಟವಾಗಿರುವ ಸಾಮಗ್ರಿಗಳಲ್ಲಿ ಒಂದೊಂದು ಪಣವಾಗಿ ಎಂಟು ಪಣವಂ ಅಪೇಕ್ಷಿಸುವಳು, ಆಗ ನೀನು ಅವಳ ಮನೋರಥ ಪೂರಣವಂ ಮಾಡಲೋಸುಗ ನಿನ್ನ ವಸ್ತುಗಳಂ ಅನೇಕ ಸಾಹಸಗಳಿಂದ ಪಡೆದು ಪಣವಂ ಗೆದ್ದು, ಅನಂತರ ಆ ಸ್ತ್ರೀಯು ವಿವಾಹವಂ ಮಾಡಿಕೊಂಡ ಬಳಿಕ ನಿಮ್ಮಿರ್ವರ ದೆಸೆಯಿಂದ ಮಕರಂದನೆಂಬ ಕುಮಾರನು ಪುಟ್ಟುವನು, ಆ ಪುತ್ರಸೌಖ್ಯವಂ ಅನುಭವಿಸಿ ಭೂಲೋಕ ಭೋಗಗಳನ್ನೆಲ್ಲವಂ ಕೂಡು ಆನಂದಪಟ್ಟು, ಕೆಲವುಕಾಲಾನಂತರದಲ್ಲಿ ಕುಮಾರಂಗೆ ಪಟ್ಟಾಭಿಷೇಕವಂ ಮಾಡಿದಬಳಿಕ ನಿಮಗಳ ಶಾಪಪರಿಹಾರವಾಗಿ ದಿವ್ಯಶರೀರವುಂಟಾಗಿ ಪತ್ನೀ ಸಮೇತನಾಗಿ ವಾಹನಾದಿ ಸಮಸ್ತ ವಸ್ತುಸಮೇತನಾಗಿ ಅಮರಾಧಿಪತ್ಯಕ್ಕೆ ಬರುತ್ತಲಿದ್ದೀಯೆ! ಎಂದು ಪೇಳಲು, ಆ ಮಾತಿಗೆ ಇಂದ್ರನು ಎಲೈ ಮಹಾನುಭಾವನೆ ನಾನು ಮನುಷ್ಯಜನ್ಮವಂ ತಾಳಿ ಆ ರಾಯನ ಉದರದಲ್ಲಿ ಒಂದು ಅಂಶವಂ ಪುಟ್ಟುವೆನೊ? ಸರ್ವಾಂಶಗಳಿಂದ ಪುಟ್ಟುವೆನೊ? ಮನುಷ್ಯಜನ್ಮವಂ ತಾಳಿದಬಳಿಕ ದ್ವೀಪಾಂತರಗಳಲ್ಲಿರುವ ನನ್ನ ವಸ್ತುಗಳ ಸಾಧಿಸುವ ಕ್ರಮವಂ ತಿರುಗಿ ನಮ್ಮಿರ್ವರಿಗು ದೇವತಾಮಯಶರೀರ ಉಂಟಾಗುವ ಪರಿಯಂ ವಿಸ್ತಾರವಾಗಿ ಕೃಪೆಯಿಂದ ಅನುಗ್ರಹಿಸಬೇಕೆಂದು ದಂಡಪ್ರಣಾಮಂಗೈದು ಪ್ರಾರ್ಥಿಸಲು, ಆ ದೂರ್ವಾಸ ಮಹಾಮುನಿಯು, ಕೇಳೈ ದೇವೋತ್ತಮನೆ ನನ್ನ ಶಾಪದ ವಶದಿಂದ ನಿಮ್ಮಿರ್ವರ ದಿವ್ಯಶರೀರವು ಅದೃಶ್ಯವಾಗಿ ಮುಂದೆ ನನ್ನಂಶರೂಪನಾದ ಓರ್ವ ಋಷಿಯು ಕೆಲವುಕಾಲದಮೇಲೆ ಆ ಸುಚರಿತ್ರರಾಯನ ಉದ್ಯಾನವನಕ್ಕೆ ಬಂದು ಆ ರಾಯಂಗೆ ದೇವೀಮಂತ್ರವಂ ಉಪದೇಶಿಸುವನು ಆ ಮಂತ್ರ ಪುರಶ್ಚರಣಾ ಪ್ರಭಾವದಿಂದ ದೇವಿ

ಯು ಪ್ರಸನ್ನಳಾಗಿ ವರಪ್ರದಾನಮಂ ಮಾಡುವಳು, ಆ ವರಪ್ರಭಾವದಿಂ
ದ ನೀನು ಸರ್ಪಾಂಶದಿಂದ ಆ ರಾಯಂಗೆ ಪುತ್ರನಾಗಿ ಕೆಲವು ಕಾಲದಮೇ
ಲೆ ಆ ರಾಯನ ದೆಶೆಯಿಂದ ನಿನಗೆ ದೇವೀಮಂತ್ರೋಪದೇಶವಾಗಿ, ನೀನು
ಆಮಂತ್ರಪುರಶ್ಚರಣಮಾಡಿದ್ದರಿಂದ ದೇವಿಯು ಪ್ರತ್ಯಕ್ಷಳಾಗಿ, ನಿನಗೆ
ಸಕಲೇಷ್ಟಾರ್ಥಂಗಳನಿತ್ತು, ಸರ್ವಶಕ್ತಿಯನ್ನುಂಟುಮಾಡಿ, ನಿನ್ನಿಂದಲೆ
ಸರ್ವಕಾರ್ಯನಿರ್ವಾಹವಂ ಗೈಸಿ, ಆದೇವಿಯ ಪ್ರಸಾದದಿಂದಲೆ ನಿಮ್ಮಿ
ರ್ವರಿಗು ದಿವ್ಯದೇಹವುಂಟಾಗಿ, ನಿಮ್ಮ ಪದವಿಯಂ ಪಡೆಯುವರಾಗುವಿರಿ
ಎಂದು ಪೇಳಿ ತನ್ನಾಶ್ರಮಮಂ ಕುರಿತು ತೆರಳಲು, ಬಳಿಕ ದೇವೇಂದ್ರ
ನು ದುಃಖಾಕ್ರಾಂತನಾಗಿ ಅಮರಾವತಿಯೊಳಿರುತ್ತಿರಲು. ಮಹಾತಪಸ್ವಿ
ಗಳಾದ ಪುಲಸ್ತ್ಯ, ಪುಲಹ, ಕ್ರತುಮೊದಲಾದವರಿಂದ ಉದ್ಭವಿಸಿದ
ಅತ್ಯಂತ ಬಲಿಷ್ಠರಾದ ಬಹುಪರಾಕ್ರಮಶಾಲಿಗಳಾದ ಬಲಿ, ಬಾಣ,
ಶಂಬರ, ವಜ್ರನಾಭ, ನಮುಚಿ ಮೊದಲಾದ ದಾನವೇಂದ್ರರು ಅಮರಾವ
ತಿಯೆಂಬ ಪಟ್ಟಣದೋಳ್ ಗೂಢರಾಗಿ ಕಾದಿರುವ ತಮ್ಮಕಡೇದಾನವ
ದೂತರ ಮುಖದಿಂದ ಸ್ವರ್ಗಾಧಿಪತಿಯಾದ ದೇವೇಂದ್ರನಿಗೆ ದೂರ್ವಾಸ
ಮಹಾಮುನಿಯಿಂದ ಬಂದ ತಮಗನುಕೂಲವಾದಶಾಪಸಮಾಚಾರವಂತಿಳಿ
ದು, ಇದೇಸಮಯವೆಂದು ಎಲ್ಲರು ಒಂದಾಗಿ, ಕುಲಗುರುಗಳಾದಶುಕ್ರಾ
ಚಾರ್ಯರ ಗೃಹವಂಪೊಕ್ಕು ಸಾಷ್ಟಾಂಗಪ್ರಣಾಮಮಂಗೈದುಭಕ್ತಿಯಿಂ
ನಿಂತಿರಲು, ಶುಕ್ರಾಚಾರ್ಯರು ಆ ದೈತ್ಯಸಮೂಹವಂನೋಡಿ ನಗುತ
ಬಂದಕಾರ್ಯವಂ ಪೇಳೀ ಎನಲು, ಸರ್ವಜ್ಞನಾದ ನಿನಗೆವಿಜ್ಞಾಪನೆಯಂ
ಗೈಯುವದೇನು ನಿನ್ನಾಜ್ಞೆಯಾದಂತೆ ನಾವು ನಡೆಯುವೆವೆಂದುನುಡಿಯ
ಲು, ನಿಮಿಷ ಸುಮ್ಮನೆ ಇದ್ದು ತನ್ನ ಮನದೋಳ್ ಮುಂದಾಗುವ ಕಾ
ರ್ಯವಂತಿಳಿದು, ನೀವು ಸಕಲ ಸನ್ನಾಹದಿಂ ಕಾಣದಂತೆ ಪೋಗಿ ಅಮ
ರಾವತಿಯಂ ಆಕ್ರಮಿಸುವುದೆಂದು ಅಪ್ಪಣೆಯಂ ಕೊಡಲು, ಅಲ್ಲಲ್ಲಿರುವ
ತಮ್ಮ ಸೇನೆಗಳನ್ನು ವ್ಯಾಜಾಂತರದಿಂದ ಕರೆಯಿಸಿ ಒಂದು ಕಡೆಯೊ
ಳ್ ಒಟ್ಟುಗೂಡಿರುವ ಸಮಯದೋಳ್ ಬಹುಕಾಲದಿಂದ ಸಂಧಿಗೊಂದಿ
ಯೊಳ್ ಕಾಲವಂ ಕಳೆಯುತ ಸಮಯ ನಿರೀಕ್ಷಣವಂ ಮಾಡುತಲಿರುವ

ನಮಗೆ ದೂರ್ವಾಸಮಹರ್ಷಿಯು ವರವನ್ನನುಗ್ರಹದಿಂದ ಒಳ್ಳೆಯಸವು
ಯದೊರಕಿತೆಂದು ಸಂತೋಷಪಡುತ, ಅನೇಕ ಸಹಸ್ರ ವರ್ಷ ತಪಸ್ಸು
ಗಳಂಮಾಡಿ ಸಂಪಾದಿಸಿರುವ ಶಸ್ತ್ರಾಸ್ತ್ರಂಗಳು ಸಾರ್ಥಕಗಳಾದವು
ಎನ್ನುವರು ಕೆಲವರು, ಬಾಲ್ಯ ಮೊದಲುಗೊಂಡು ಮಾಡಿರುವ ಯುದ್ಧಸಾ
ಧನಂಗಳಂ ತೋರುವದಕ್ಕೆ ಯೋಗ ಉಂಟಾಯಿತೆನ್ನುವರು ಕೆಲವರು.
ಬಹುದಿವಸದಿಂದ ನಮ್ಮಂಮಲಿನವಂಮಾಡಿ ಮಾನವಂ ಕಳೆದು ದೈತ್ಯರೆ
ನ್ನುವವಂ ಸ್ವಪ್ನದಲ್ಲಿಯೂ ಕಾಣದೆ ಇರುವ ದೇವತೆಗಳಂ ಕೈಶರೆಗಳಂ
ಪಿಡಿದು ಬಗೆಬಗೆಯಾಗಿ ಭಂಗವಂ ಮಾಡಿಸಿದಲ್ಲದೆ ನಮ್ಮಳಲು ತೀರದೆ
ನ್ನುವರು ಕೆಲವರು, ಹಿರಿಯರು ಸಂಪಾದಿಸಿದ ಕೀರ್ತಿಯು ಜಯಲಕ್ಷ್ಮಿ
ಯು ಈವರಿಗೆ ದೇವತೆಗಳಲ್ಲಿದ್ದು ಮಹಾಪುರುಷನಾದ ದೂರ್ವಾಸ
ಮುನಿಯ ಶಾಪದಿಂದ ಪಾಪಿಷ್ಠರಾದ ದೇವತೆಗಳಲ್ಲಿ ನಿಲ್ಲುವದಕ್ಕೆ ಅವ
ಕಾಶವಿಲ್ಲದೆ ನಮ್ಮನ್ನೇ ಹೊಂದುವುದು, ಇನ್ನೇನು ಯೋಚನೆ ಕೆಲಸ
ವಿಲ್ಲ ಈಗಲೇ ಹೋಗಬೇಕೆನ್ನುವರು ಕೆಲವರು, ಜಯಲಕ್ಷ್ಮಿಯು ಒಂದೆ
ಡೆಯಲ್ಲಿ ನಿಲ್ಲುವಳಲ್ಲಾ, ಕೆಲವು ದಿವಸ ಅವರಲ್ಲಿದ್ದು ಈಗ ನಮಗೆ ವಶ
ವಾಗುವಳು, ಇದಕ್ಕೆ ದೂರ್ವಾಸನೇನು ಅವನ ಶಾಪವೇನು ನಮ್ಮಪುಣ್ಯ
ಶಕ್ತಿಯಲ್ಲದೆ ಮತ್ತೊಂದು ಕಾರಣವಿಲ್ಲವೆನ್ನುವರು ಕೆಲವರು, ಮತ್ತೆ
ಕೆಲವರು ಎಲೈ ಶಿಶುಗಳಿರಾ ಕೇಳಿ ಪೂರ್ವದೋಳ್ ನಾವು ದೇವತೆಗಳ
ಆಯುಧಂಗಳ ಹದಗಳಂ ಬಲ್ಲೆವು. ಅವರೊಡನೆ ಹಣಸುವದು ಸಾಧಾ
ರಣವಲ್ಲ, ಥೋರಣೆಯಂ ಮಾಡಬೇಡಿ ಎನ್ನುವರು ಕೆಲವರು, ಅಹುದಹು
ದು ದೈವವೇ ಮುನಿದಕಾಲಕ್ಕೆ ಅವರವರ ಆಯುಧ ಮೊದಲಾದ ಸಾಧನಂ
ಗಳೇ ಅವರಿಗೆ ವ್ಯತ್ಯಗಳಾಗುವವು. ಅದೆಂತನೆ, ಇಂದ್ರಮೊದಲಾದ
ಸುರರಿಗೂ ದೂರ್ವಾಸ ಮೊದಲಾದ ಋಷಿಗಳಿಗೂ ಎಂದಿಗಾದರೂ ಇಂ
ಥಾ ವಿರೋಧ ಬಂದಿದ್ದುದವಂ ನೀವು ಕಂಡು ಕೇಳಿರುವಿರಾ! ಈಗಲಾ
ದೂರ್ವಾಸ ಋಷಿಯೇಬಂದು ಇಂದ್ರಂಗೆ ಶಾಪವಂ ಕೊಡಲಿಲ್ಲವೇ ಎನ್ನುವ
ರು ಕಲವರು, ಈಗ ವಿವಾದವು ಮಾಡುವ ಸಮಯವಲ್ಲ, ಮೊದಲು ದೇವ
ತೆಗಳಂ ಜಯಿಸಿ ಅಮರಾವತಿಯನ್ನಾಕ್ರಮಿಸಿ ಪುರಂದರನ ಸೆರೆಯಂ

ಪಿಡಿದು ಕಾರ್ಯಮುಖದಿಂದ ತೋರಿಸಬೇಕಲ್ಲದೆ ಮನಬಂದಂತೆ ನುಡಿದರೆ ಫಲವೇನು ತ್ವರೆಯಿಂದ ತೆರಳಿರೆನ್ನುವರು ಕೆಲವರು, ಕೆಲವರು ಚಿಂತಿಸಿದ ಕಾರ್ಯ ಕೈಗೂಡಿಬರುವದೊ ಬಾರದೋ ಎಂದು ಜೋಯಿಸರ ಶಕುನ ಸಾಲಾವಳಿಗಳಂ ಭಾರಿಭಾರಿಗೂ ಕೇಳುವರು, ಕೆಲಂಬರು ನಾವು ಯೋಚಿಸಿದ ಕೆಲಸವು ಕೂಡಿಬಂದರೆ ಮನೆದೇವರಿಗೆ ಮಹೋತ್ಸವವಂ ಮಾಡಿಸುವೆವೆಂದು ಬೇಡಿಕೊಂಬರು, ಇಂತೆಲ್ಲರೂ ಒಂದಾಗಿ ಆಲೋಚನೆಯಂ ಗೈದು ಸಕಲ ಸನ್ನಾಹದಿಂ ಸೇನೆಯಂ ಬೇರೆಬೇರೆ ನಿಂಗಡಿಸಿ, ಕುರಿತುಹೋಗುವಕಾರ್ಯವನ್ನು ಆಪ್ತರಾದವರಿಗೆ ತಿಳಿಸುತ್ತ, ಧ್ವಜಗಳ ನೆತ್ತಿಹಿಡಿಯುವಂತೆಯುಂ, ಗಜಂಗಳಿಗೆ ಘಂಟೆಯಂ ಕಟ್ಟುವಂತೆಯುಂ, ಕುದುರೆಗಳಿಗೆ ಎದೆಕಟ್ಟುಗಳಂ ಬಿಗಿಯಾಗಿ ಬಿಗಿಯುವಂತೆಯುಂ, ಭಟರು ಭೋರೆಂದು ಕೂಗದಂತೆಯುಂ ಕಟ್ಟುಮಾಡಿ ಒಟ್ಟುಗೂಡಿ ದೊಡ್ಡವರಿಗಡ್ಡಬಿದ್ದು ಅನುಜ್ಞೆಯಂ ಗೊಂಡು, ಮುಖ್ಯಸೇನಾಪತಿಯು ಬೆರಳು ಸನ್ನೆ ಸಂಜ್ಞೆಯಿಂದ ಮಾರ್ಗಂಗಳಂ ತಿಳಿದು ಉಲ್ಲಾಸಗತಿಯಿಂದ ಪ್ರೊರಟು, ಬೆಟ್ಟಗಳಂ ಬೆಟ್ಟುಗಳಿಂದ ಮೀಟುತ, ಹರಿಯುವ ಹೊಳೆಗಳಂ ಹೀರಿ ತೋರಿ, ಮಿತಿಮೀರಿದುಸುರಿನಿಂದ ವಾಯುವಂ ಹಾರಿಸುವರೋ! ಕೋಪದಿಂದಗ್ನಿಯಂ ದಹಿಸುವರೊ! ಸೂರ್ಯಚಂದ್ರರೆಂಬ ದೀಪಂಗಳಂ ಉಫೆಂದು ಊದುವರೊ! ಯಮನು ಸಂಹರಿಸುವರೋ! ವರುಣನಂ ಬಿಗಿವರೊ! ಕುಬೇರನಂ ಹಿಡಿಯುವರೊ ಎಂಬಂತೆ ಬರುತ ಅಮರಾವತಿಯ ಮುಂಭಾಗದೊಳ್ನಿಂದು, ಏಕಕಾಲದೋಳ್ ಭೇರಿ, ಪಟಹ, ಝರ್ಝರ, ಕಾಹಳೀ ಮೊದಲಾದ ವಾದ್ಯವಿಶೇಷಧ್ವನಿಗಳಂ, ಜನಂಗಳ ಘೋಷಂಗಳಂ ಕುದುರೆಗಳ ಕೂಗಾಟದಿಂ ರಥಂಗಳ ರಭಸಂಗಳಂ ದಾನವರ ಸಿಂಹನಾದಂಗಳಂ ಯುಗಮುಗಿಯುವ ಸಮಯದೊಳ್ ಕಾಲಮೇಘಂಗಳು ಘುಡಿಘುಡಿಸಿ ಗರ್ಜಿಸುವವೋ ಎಂಬಂತೆಯೂ, ಬ್ರಹ್ಮಾಂಡಕಟಾಹವು ಒಡೆದು ಹೋದುದೋ ಎಂಬಂತೆಯೂ ಧ್ವನಿಗೈಯಲು, ಈ ಧ್ವನಿಯಂ ಕೇಳಿ ಅಮರಾವತಿಯು ಅಲ್ಲಾಡಿ ಅಲ್ಲಿರುವ ದೇವಸಮೂಹವು ಕುಳಿತವರು ಕುಳಿತಂತೆ, ನಿಂತವರು ನಿಂತತ್ತೆ, ಸಿಡಿಲುಬಡಿದವರಂತೆ

ಅರುಹುಂತಪ್ಪಿ ವೈನುತೆತ್ತು, ಕಲ್ಲುಗಳ ಕಂಭಗಳಂತೆ, ಒಂದು ಘಳಿಗೆ ಸುಮ್ಮನೆ ನಿಂತಿರ್ದು, ತಮ್ಮೊಳ್ ತಾವೆ ಎಚ್ಚರಂಗೊಂಡು, ಇಂದೇನು ಅದ್ಭುತವೆಂದು ಒಂದೂ ತಿಳಿಯದೆ ಚಿಂತಿಸುತ ಚಾರರಂ ಕಳುಹಲು, ಅವರು ಕೋಟೆಗಳನೇರಿ ದಾನವರು ದಂಡೆತ್ತಿಬಂದು ಸುತ್ತಲೂ ಮುತ್ತಿರುವದಂ ಕಂಡು ಭಯಗೊಂಡು ಕಾಲುನಡುಗಿ ಕಂಪವೆತ್ತಿ ಹಿಂತಿರುಗಿ ಓಡಿ ಓಡಿ ಅಡಿಗಡಿಗೆ ಎಡವುತ ಬರುವವರಂ ಕಂಡು ಇದೇನೆಂದು ಕೇಳಲು. ಭಯದಿಂ ದಾ ಎನ್ನುವರು ಕೆಲಂಬರು ದಾನ ಎನ್ನುವರು ಕೆಲಂಬರು ನವಾ ಎನ್ನುವರು ಕೆಲಂಬರು, ಅನ್ಯರು ಅವರ ಘಾಬರಿಯನೋಡಿ ದೂರ್ವಾಸನ ಶಾಪಫಲಿಸಿತೆನ್ನುತ ತಮ್ಮತಮ್ಮ ಮಂದಿರಂಗಳಂ ಪೊಗುತಲಿರುವರು, ಆ ಚಾರರು ಇಂದ್ರಂಗೆ ಈ ಸಮಾಚಾರವಂ ಹೇಳುವಾ ಎಂದು ಬಾಗಿಲೋಳ್ಕಾದಿರಲು, ವೈಜಯಂತವೆಂಬ ಉಪ್ಪರಿಗೆಯೊಳ್ ಶಚಿಯೊಡನೆ ಸುಖಶಯನವಂ ಗೈದಿರುವ ಪುರಂದರನು ಇದೇನು ತೋಂದರೆಬಂತೆಂದು ಹಾರಿಬಿದ್ದು ಎಚ್ಚರಂಗೊಂಡು ಕುಳಿತು ನಿಮಿಷಮಾತ್ರವಾಲೋಚಿಸಿ, ತಿಳಿಪಲ್ಲಿ ನಿಲ್ಲದೆ ಹೊರಟುಬರುತ್ತಿರಲು. ಶಚಿಯು ಸೆರಗುಪಿಡಿದು ಸಮರದೊಳ್ ಸಾಹಸವಂ ಮಾಡುವುದಕ್ಕೆ ಸಮಯವಲ್ಲವೆಂದೆನುತ ಬೇಡವೆಂದು ಬೇಡಿಕೊಂಡರೂ ಕಂಡದಂತೆ ಕಣ್ಣುಗಳಂಮಾಡಿ ಬಿರಬಿರನೆನೋಡುತ, ಮಾತುಗಳಂ ಕೇಳದೆ ಕೋಪವಂ ತಾಳಿ ತೆರಳಿ ಬರುತ, ಬಾಗಿಲೋಳ್ಕಾದಿರುವ ಚಾರರು ಪೇಳುವ ಸಮಾಚಾರವಂ ಚನ್ನಾಗಿ ಕೇಳದೆ, ಒಟ್ಟುಗೂಡುವರನ್ನೋಡಿ ಶಿಟ್ಟುಮಾಡಿ, ಅಷ್ಟರೋಳ್ ಅರ್ಧದಾರಿಗೆ ತಂದ ತನ್ನಾಯುಧಾಭರಣಂಗಳಂ ಧರಿಸಿ ಮತ್ತೆ ಕೆಲವುದೂರ ಪೋಗುತ ಮಾತಲಿಯು ತರುವ ರಥವನ್ನೇರಿ ಪೋಗುತಿರುವ ವರ್ತಮಾನವಂ ದಿಕ್ಪಾಲಕರು ಮೊದಲಾದ ದೇವತೆಗಳೆಲ್ಲರೂ ಕೇಳಿ, ಇಂದ್ರನೊಬ್ಬನೆ ದಾನವರೊಡನೆ ಕಾಳಗವಂ ಮಾಡುವನೆಂದು ಪೋದನಂತೆ ನಾವು ಇದ್ದು ಫಲವೇನೆಂದು ನುಡಿಯುತ, ರೋಷದಿಂ ತಮ್ಮತಮ್ಮ ಸೇನೆಯಂಗೊಂಡು ಗುಂಪುಕೂಡಿ, ಅಸ್ತ್ರಂಗಳೆಲ್ಲವೂ ದೇವತಾತ್ಮಕವಾದುದರಿಂದ ನಾವು ಬಿಟ್ಟ ಅಸ್ತ್ರಂಗಳು ದಾನವರ ದೇಹಂಗಳಂ ಭೇದಿಸುವವಲ್ಲದೆ

ನಮ್ಮಂ ಬಾಧಿಸಲಾರವು. ಇದಲ್ಲದೆ ನಾವು ಅಮೃತ ಪಾನವಂ ಮಾಡಿ ರುವರಾದ್ದರಿಂದ ಪ್ರಾಣಭಯವಿಲ್ಲ. ಮತ್ತೂ ಯಮನೇನು ನಮ್ಮವನ ಲ್ಲವೇ? ಅಥವಾ ಪೆಟ್ಟುಯುವಡೆದರೆ ವಾಸಿಮಾಡುವದಕ್ಕೆ ಅಶ್ವಿನೀ ದೇವತೆಗ ಳಲ್ಲಿಯೇ ಇರುವರು. ಒಂದು ವೇಳೆ ಬಾಯಾರಿ ಬಸವಳಿದು ಬಲ ತಪ್ಪಿ ದರೆ ಬಹು ಶೀತಳವಾದ ಉದಕವಂ ಕೊಟ್ಟು ಸಂಕಟವಂ ಪರಿಹರಿಸ ಲೋಸುಗ ವರುಣನೇ ನಿಂತಿರುವನು ಅಥವಾ ಮೂರ್ಛೆಯಂ ಹೊಂ ದಿದರೆ ಪರಿಮಳಯುಕ್ತವಾಗಿ ಹಿತವಾದ ಶೀತದಿಂ ಕೂಡಿ ಮೆಲ್ಲನೆ ಬೀ ಸುತ ಪ್ರಜ್ಞೆಯಂ ಪುಟ್ಟಿಸುವದಕ್ಕೆ ವಾಯುವು ಕಾದಿರುವನು. ಇಂತ ಲ್ಲದೆ ಕಾಳಗದೊಳ್ ಕೈದುಗಳಂ ಪಿಡಿದು ಕೈ ಚಮತ್ಕಾರಗಳಂ ತೋ ರಿಸಿದರೆ, ಬೇಕಾದ ಬಹುಮತಿಯಂ ಮಾಡಲೋಸುಗ ಕುಬೇರನು ಕಾ ದಿರುವನು. ಈ ರೀತಿಯಾಗಿ ಅನೇಕ ಪ್ರಕಾರಂಗಳಾದ, ಯುದ್ಧಶ್ರಮ ಶಾಂತಿಕರಂಗಳಾದ, ಆಪ್ಯಾಯನಸಂಪಾದಕಂಗಳಾದ, ಉಪಚಾರಂಗಳಂ ಮಾಡುವರು ಇರಲು, ನಾವುಗಳು ಬೆದರಲೇಕೆ, ನಿರ್ಭಯನಾಗಿ ಇರಬ ಹುದು. ದೈತ್ಯ, ದಾನವ, ರಾಕ್ಷಸರ, ಜೀವಗಳಂ ಯಮನಿಗೆ ದಾನವ ಮಾಡುವಾ ಎನುತ ತಡೆಮಾಡದೆ ಸಕಲ ಸನ್ನಾಹದಿಂ ಬಂದು ಪುರಗೋ ಪುರದ್ವಾರದೊಳ್ ಅತ್ಯಂತ ಕೋಪದಿಂ ಪೋಗುತಲಿರುವ ಪುರಂದ ರನ ಪುರೋಭಾಗದೊಳ್, ಸಾಲುಸಾಲಾಗಿ ನಿಂತು, ಬಾರಿಬಾರಿಗು ಕೇಳಲು ಅಶಕ್ಯಂಗಳಾದ ಸಾವಿರಾರು ಶಪಥಂಗಳಂ ಮಾಡುತಲಿರುವ ದಿ ಕ್ಪಾಲಕರುಮೊದಲಾದ ದೇವತೆಗಳ ಸಮೂಹಮಂನೋಡಿ ದೇವೇಂದ್ರನು ಅವರಂಮೀರಿ ಪೋಗಲಾಗದೆ, ಒಂದು ಪಾರ್ಶ್ವದೊಳ್ ಅಶ್ವಿನೀ ದೇವ ತೆಗಳಂ, ಮತ್ತೊಂದು ಪಾರ್ಶ್ವದೊಳ್ ಅಗ್ನಿ ವಾಯುಗಳಂ, ಮುಂ ಭಾಗದೊಳ್ ದಂಡಧರನಂ, ಪಶ್ಚಿಮದೊಳ್ ಪಾಶಹಸ್ತನಂ, ಉತ್ತ ರದೊಳ್ ಕುಬೇರನಂ ಬರುವುದೆಂದು ಕಟ್ಟುಮಾಡಿ ದಾನವ ಸೇನೆ ಯಂ ಕುರಿತು ಪೋಗುತ್ತಿರಲು, ಇತ್ತಲಾ ಅಮರಾವತಿ ಪುರದ ಬೀದಿ ಗಳಲ್ಲಿ ಜನರು ಒಂದು ಕಡೆಯೊಳ್ ಗುಂಪುಗುಂಪಾಗಿ ನಿಂತು, ಕೆಲಂ ಬರು ದೈತ್ಯರು ಸುತ್ತಮುತ್ತಲೂ ಒತ್ತಿಬಂದು ಮುತ್ತಿಗೆಯಂ ಗೈದ

ರಂತೆ. ಮತ್ತೇನು ಸಮಾಚಾರವೆಂದು ಕೇಳುವರು ಕೆಲಂಬರು, ಪುರದೊಳ್ ಪೊಕ್ಕು ಮುಂಬಾಗಡೆಯೊಳಿರುವ ಅಂಗಡೀ ಬೀದಿಗಳಂ ಸೂರೆಗೊಂಬರಂತೆ ಎಂಥಾವರೋ ಎನ್ನುವರು ಕೆಲಂಬರು ಮೋಸದಿಂ ಬಂದು ಪುರುಷರನ್ನೋಡಿ ರೋಷವಂ ತಾಳಿ ಪಾಸಿಯಂ ಮಾಡುತ್ತ ಬರುವರಂತೆ. ಇನ್ನು ಮೇಲೆ ನಾವಿಲ್ಲಿರಬಾರದೆನ್ನುವರು ಕೆಲಂಬರು. ನಮ್ಮ ದೇವೇಂದ್ರನ ಮುಂದೆ ದಾನವರೆಂಬರೇನು, ಅವರ ಬಲವೆಷ್ಟು, ಸಿಟ್ಟು ಮಾಡಿದರೆ ಸುಟ್ಟು ಹೋಗುವರಲ್ಲದೆ ಅಮರಾವತಿಯನ್ನು ಅವಲೋಕಿಸುವದಕ್ಕೆ ಅವರು ಯೋಗ್ಯರೆ. ನೀವು ಬಾಯಿಗೆ ಬಂದಂತೆ ಬಾಲಭಾಷೆಗಳಂ ಆಡಬೇಡಿ ಎಂಬುವರು ಕೆಲಂಬರು. ನೀವು ಕಂಡು ಕೇಳದವರೇ ಅಲ್ಲ ಆ ದಾನವರು ದೂರ್ವಾಸಮುನಿಯ ಶಾಪವಂ ತಿಳಿದು ತಮಗೆ ಜಯವಾಗುವದೆಂದು ಬಂದಿರುವರಲ್ಲದೆ ಸುಮ್ಮನೆ ಬಂದಂತೆ ಕಾಣಿಸುವದಿಲ್ಲವೆಂಬುವರು ಕೆಲಂಬರು. ಅಷ್ಟರೊಳ್ ಒಬ್ಬನು ಓಡಿಬರುತ್ತ ಸಿಂತಿರುವರು ಕೇಳು ದೇವೇಂದ್ರನಂ ಕ್ಯಸೆರೆಯಂ ಹಿಡಿದರೆಂದು ನುಡಿಯಲು, ಎಲ್ಲರೂ ನಮಗೇನುಗತಿ, ಎಲ್ಲಿಗೆ ಪೋಗುವ ಎಂದು ಯೋಚಿಸುವ ಸಮಯದೊಳ್, ಮತ್ತೆ ಕೆಲವರು ಇನ್ನೂ ಯುದ್ಧವಾಗುತಲಿರಬಹುದು ಜಯಾಪಜಯಂಗಳಂ ಒಬ್ಬರೂ ಕಂಡವರಿಲ್ಲ. ಪುಣ್ಯವಿದ್ದಂತೆ ಆಗುವದೆಂದು ಹೇಳಿ ಹೋಗುತಲಿರುವರು ಕೆಲಂಬರು. ಮತ್ತೆ ಕಲವರು ಅಂಥಾ ಇಂದ್ರನಿಗೆ ಇಂಥಾ ದೆಸೆ ಬರಬಹುದಂತೆ, ನಾವೆಷ್ಟು ನಮ್ಮ ಕೀರ್ತಿಯೆಷ್ಟು? ಕಡೆಗೆ ನಾವೇನಾದರೇನು? ಬಹು ಜನಂಗಳಂ ಪಾಲಿಸುವ ಪಾಕಶಾಸನನು ಪಾರ್ವತೀಪತಿಯ ಕೃಪಾಕಟಾಕ್ಷದಿಂದ ಸುಖದಿಂ ಸುರಕ್ಷಿತನಾಗಿರಬೇಕಾದ್ದಲ್ಲದೆ ನಿಃಶಕ್ತ್ಯದವರಿದ್ದೇನು ಫಲ ವೆನ್ನುವರು ಕೆಲವರು. ಮತ್ತೊಂದು ಕಡೆಯೊಳ್, ಆ ಬೀದಿಯಲ್ಲಿ ದಾನವರು ನುಗ್ಗಿ ಏನೇನೋ ಅನಾಹುತವಂ ಮಾಡುವರಂತೆ ನಾವೆಲ್ಲರೂ ಇರುವ ಒಡವೆಗಳಂಕೊಂಡು ಕಾಮನ ಕಠಾರಿಯಂತಿರುವ ಕಾಂತೆಯರ ಗುರುತು ಪರರಿಗೆ ತೋರದಾತ ಪುರುಷವೇಷಗಳಂ ಹಾಕಿ ವಲಸೆಯಂ ಪೋಗುವಾವೆಂದು ಸನ್ನಹಿಸುವರು ಕಲವರು. ಕೇವರು ಕರ್ಮದೇವತೆಗಳು ಘಾಬರಿಯಾ

ಗಿ ಒಡವೆ ವಸ್ತುಗಳಂ ಇಡುವುದಕ್ಕೆ ಹಗೆಯುಗಳಂ ತೆಗೆಯುವಾ ಎಂದರೆ ಭೂಮಿಯಂ ಕಾಣೆವು, ಭಾವಿಗಳೂ ಇಲ್ಲ. ಈ ಕಾಮಿನಿಯರು ಪೋಗುವವರಂ ಕಳುಹಿ ಬರುವವರಂ ಕರೆದು ಚೇರಿ ಇರುವರು ಇವರಂ ನಂಬಬಾರದು. ಇಲ್ಲಿಗೂ ಬಾಧೆ ಬರಬಹುದೇ ಎಂದು, ಭಾರಿಭಾರಿಗೂ ಬೇಸರಂಗೊಳ್ಳುತಲಿರುವರು. ಕಾಮುಕರಾದ ಕೆಲವು ಕರ್ಮದೇವತೆಗಳು ಕಾಮಿನಿಯರಂ ಕಂಡು ಕಳವಳಂಗೊಂಡು, ಪುಂಡರಾದ ದಾನವರು ಬರುವವರಿಗೆ ಇವರೊಡನೆ ಸಂಭೋಗಾದಿಗಳು ಎಷ್ಟಾಯಿತೊ ಅಷ್ಟೇ ಇರಲಿ ಈ ತರ್ಜ ಆಮೇಲೆ ಅವರು ನಮ್ಮಂ ಇಲ್ಲಿಗೆ ಸೇರಲೀಸರು ಎನುತ್ತ ದಾನವರ ಭಯದಿಂದ ಬೆಪ್ಪಾಗಿ ನಿಂತಿರುವ ಕಾಂತೆಯರಂ ಬಲವಂತದಿಂದ ಕಾಮವಿಹಾರಂಗಳಿಗೆ ಕೈ ಹಿಡಿದು ಕರೆಯುತಲಿರುವರು. ಕೆಲವರು ತಾಪಸರು ದಾನವರೇನು ಮಾಡುವರೋ ನೋಡುವ, ಅಥವಾ ಕಾಡಿದರೆ ಶಾಪಗಳ ಕೊಡುವ. ಅದನ್ನು ಮೀರಿ ಬಂದರೆ ಓಡುವ ಎನ್ನುವರು. ಕೆಲವರು ಶಚೀದೇವಿ ಮೊದಲಾದ ಸ್ತ್ರೀಯರುಗಳು, ಜಯಂತ ಮೊದಲಾದ ಜನಗಳು ಭಯವಿಲ್ಲದೆ ಇಲ್ಲಿಯೇ ಇರುವಲ್ಲಿ ನಮಗೆ ಬಂದಿರುವ ಭಯವೇನು ಅವರಿಗಾದಂತೆ ನಮಗೂ ಆಗುವದು, ನಾವೆಂದಿಗೂ ಈ ಪಟ್ಟಣವಂ ಬಿಟ್ಟು ಪೋದವರಲ್ಲ ಏನಾದರೂ ಆಗಲಿ ಇಲ್ಲಿಯೇ ಇರುವೆವೆನ್ನುವರು. ಈ ಪರಿಯಾಗಿ, ಪುರಜನರು ನಿಜವಂ ತಿಳಿಯದೆ ನಾನಾಪರಿಯಾಗಿ ಬರೀ ಘಾಬರಿ ಪಡುತಲಿರುವರು. ಅತ್ತಲಾ ದೇವಸಮೂಹವು ಶತ್ರುಗಳ ಸೇನೆಯಂ ಪೊಕ್ಕು ಇಕ್ಕೆಲದೊಳ್ ಸಿಕ್ಕಿದವರ ನೊಕ್ಕಲಿಕ್ಕುತ್ತ, ಪದಾತಿಗಳಂ ಪಾಡುಪಡಿಸಿ. ಗಜಂಗಳಂ ಘಾಯವಡಿಸಿ, ಕುದುರೆಗಳ ಕೊರಳುಗಳಂ ಕುಯಿದು, ರಥಗಳಂ ರೇಣುಗಳಂತೆಮಾಡಿ, ಮಹಾ ರಥಿಕರ ಮನೋರಥವಂ ಮಾಯಿಸಿ, ಶೂರರಂ ತಾರುಮಾರಾಗಿ ತರಿದು, ಮೇರೆ ತಪ್ಪಿ ಯುಟ್ಟಿಬರುವ ಸಮುದ್ರವೋ ಎಂಬಂತೆ ಮೀರಿ ಬರುತಲಿರುವ ದೇವಸೇನೆಯನ್ನೋಡಿ, ದಾನವ ಪತಿಗಳೆಲ್ಲರೂ ಭೇದಿಸಲಶಕ್ಯಂಗಳಾದ ಕವಚಗಳಂ ತೊಟ್ಟು, ಅಕ್ಷಯಗಳಾದ ಬತ್ತಳಿಕೆಗಳಂ ಬೆನ್ನುಗಳೊಳ್ ಬಿಗಿದು, ಬಹು ಕಠಿಣಂಗಳಾದ ಬಿಲ್ಲುಗಳಂ ಹಿಡಿದು ಎಲ್ಲರೂ ಒಂದಾಗಿ

ಈಗಲೇ ಇವರನ್ನೆಲ್ಲಾ ಕೊಂದು ತಿಂದು ತೇಗುವ ಎಂದು ಬಂದುವುಂ ದೆನಿಪುದು ಎಂದೆಂದಿಗೂ ತೆಗೆಯದ ಮಹಾಸ್ತ್ರಂಗಳಂ ಪ್ರಯೋಗಿಸುತ್ತ, ಆನೆಗಳಂ ಹೇನುಗಳಂತೆ ಹೊಸಗುತ. ಕುದುರೆಗಳಂ ಗುಂಗುರುಗಳಂತೆ ಸವಟುತ್ತ, ರಥಂಗಳಂ ತೆರಲಿಲ್ಲವೆಂದೆನಿಸುತ್ತ, ಕಾಲಾಳುಗಳಂ ಕಡಿಯುತ, ಝಳಪಿಸುವ ಕತ್ತಿಗಳ ಥಳಥಳನೆ ಹೊಳೆವ ಕಾಂತಿಗಳೇ ಮಿಂಚುಗಳಾಗಿ, ಒಂದೊಂದು ಬಗೆಯಾದ ರತ್ನದಿಂ ಬಿಗಿದಿರುವ ಬಿಲ್ಲುಗಳೇ ಇಂದ್ರಧನುವಾಗಿ, ಸಿಂಹನಾದಗಳೇ ಗುಡುಗುಗಳಾಗಿ, ಬಾಣಂಗಳಂ ಬ ಮಳೆಯನ್ನು ಕರೆಯುತ, ರಕ್ತ ಪ್ರವಾಹಂಗಳಂ ಹೆಚ್ಚಿಸುತ್ತ, ಬರುವ ಕಲ್ಪಾಂತ ಮೇಘಂಗಳಂತಿರುವ, ತಮ್ಮ ಸೇನಾಮಧ್ಯದೊಳ್ ಸಿಕ್ಕಿ ಶಕ್ತಿಪ್ರೋಗಿ, ಉರಿಯಡಗಿ, ನೆಚಿತಪ್ಪಿ, ಶೀತಗೊಂಡು ಗಡಗಡನೆ ನಡುಗುವ, ಪಿಡಿದವರನ್ನೋಡಿ ಬಾಯಿ ಬಿಡುವ, ಓಡಲಾರದೆ ಎಡವುತ ನಡೆಯುವ ಯಜ್ಞೇಶ್ವರನಂ ಕಂಡು, ದಾನವರ ದರ್ಪವಂ ಅಡಗಿಸುವೆನೆಂದು ಕಾಲದಂಡವಂ ಪಿಡಿದು ಮೆರೆಯುವ, ಉರವಣಿಸಿ ಬರುವ ಯಮನ ಕೈಯೊಳಿರುವ ಆ ಕಾಲದಂಡದಿಂದಲೇ ಅವನಂ ಸದೆಬಡಿಯುತ, ಪರಿಪರಿಯಾಗಿ ಶರಸಂಧಾನವಂ ಮಾಡಿ ಇದಿರಾಗಿ ಬರುವ ದಾನವರನ್ನೋಡಿ, ಮುಂದಗತಿಯಂ ಬಿಟ್ಟು, ಪ್ರಳಯಕಾಲದ ಮಹಾ ವೇಗವಂತಾಳಿ, ಮೇಲಿರುವ ಲೋಕಗಳೆಲ್ಲವಂ ತುಂಬುವಂತ ಧೂಳುಗಳಂ ಚೆಲ್ಲಿ, ಕಾಳಿಗಕ್ಕೆ ಕಣ್ಣುಗಳು ಕಾಣದಂತೆ ಮಾಡಿ, ಬಿಡುವ ಬಾಣ ಮೊದಲಾದ ಆಯುಧಂಗಳಂ ಹಿಂತಿರಿಗಿಸುವ ಸುತ್ತುವ ಸುಳಿಗಳೊಳ್ ಸಿಕ್ಕಿದ ರಥಗಜ ತುರಗ ಮೊದಲಾಗಿ ಕೆಲವು ದಾನವರಂ ಗಗನದೊಳ್ ತಲೆಕೆಳಗಾಗಿ ತಿರುಗಿಸಿ, ಸಮುದ್ರಂಗಳೊಳ್ ಕೆಲವರಂ, ದ್ವೀಪಾಂತರಂಗಳೊಳ್ ಕೆಲವರಂ, ಪರ್ವತಾಗ್ರಂಗಳಲ್ಲಿ ಕೆಲವರಂ ಕೆಡಹಿ, ನಿಂತವರನ್ನಲ್ಲಿಯೆ ಸುತ್ತಿ, ನಡೆಯುವವರಂತಡೆದು ಕೆಡಹಿ, ಬಿದ್ದವರ ಸದ್ದುನಿಲ್ಲಿಸಿ, ಅಸುರರ ಉಸುರನ್ನಡಗಿಸಿ, ದೈತ್ಯರಂ ಮೃತ್ಯುವಿಗೆ ಭೃತ್ಯರಂಮಾಡಿ, ದಾನವರ ಮಾನವಂ ಕಳೆದು ದೀನರಂಮಾಡಿ, ರಾಕ್ಷಸರಿಗೆ ತಕ್ಷಣವೆ ಶಿಕ್ಷೆಯಂ ಗೈದು, ದನುಜರಂ ದುಡಿಸುತ ಬರುತಲಿರುವ ಮಾರುತನು ಮಾಡುವ ಅನಾಹುತ

ವಂ ಕಂಡು, ಬೆಪ್ಪುಗೊಂಡು ಬೆರಗಾಗಿ ನೋಡುತ ನಿಮಿಷಮಾತ್ರ ಸುಮ್ಮನೆ ನಿಂತು, ಅರೆಪೊಯ್ಯುವಡೆದ ಸರ್ಪಂಗಳಂತೆ, ಈದ ಹುಲಿಗಳಂತೆ, ಮೊರೆಯುತ, ಹೆಚ್ಚಿಬರುವ ಕಾಡುಕಿಚ್ಚಿನಂತೆ ಹುಚ್ಚುಹುಚ್ಚಾಗಿ ರೋಷವಂತಾಳಿ, ಎಚ್ಚರತಪ್ಪಿ, ಮೈಯೆಲ್ಲಾ ಕೆಂಡದಂತಾಗಿ, ಕೋಪವನೇ ಬಹುರೂಪುಗೊಂಡು ಬರುವುದೋ ಎಂಬಂತೆ ತೋರುತ, ಔಡುಗಳಂ ಕಡಿಯುತ, ಮಾರುತನು ಎತ್ತಲೂ ಪೋಗದಂತೆ ಸುತ್ತುವರಿದು ಸರ್ಪಾಸ್ತ್ರವೇ ಮೊದಲಾದ ದಿವ್ಯಾಸ್ತ್ರಂಗಳಂ ಪ್ರಯೋಗಿಸಿ, ನಾಯುವಂ ಅವುಗಳಿಗೆ ಆಹಾರಂಗೈಸಿ, ಘೌಳಿಯೆಂಬುದು ಎಲ್ಲಿಯೂ ಇಲ್ಲದಂತೆಮಾಡಿ ವರುಣನಂ ಓಡಿಸಿ ನಿರ್ಋತಿಯಂ ಸಜಾತೀಯನಾದ್ದರಿಂ ಜೀವಸಿಂ ಬಿಟ್ಟು, ಕುಬೇರನ ಖಡ್ಗವಂ ಕಿತ್ತು, ನಿಧಿಗಳಂ ಸೂರೆಗೊಳುತ ಪ್ರಳಯಕಾಲದ ದಾವಾಗ್ನಿಗಳಂತೆ ಸುಡುತ ಬರುತಿರಲು, ಆಗ ದೇವತೆಗಳೆಲ್ಲರೂ ದನುಜರಮುಂದೆ ಕಾಳಗಕ್ಕೆ ನಿಲ್ಲಲಾರದೆ ಇಂದ್ರನಂ ಬಿಟ್ಟು ಬೆದರಿ ದಿಕ್ಕುದಿಕ್ಕುಗಳಿಗೆ ಪೋಗುತ್ತಿರಲು, ಪುರಂದರನು ಇದೆಲ್ಲವಂ ನೋಡಿ ಮೂಗಿನೋಳ್ ಬೆರಳಿಟ್ಟು ತಲೆದೂಗಿ ಕಾಲವೇ ವಿಪರೀತವಾಯಿತೆನುತ ಅಚ್ಚರಿಗೊಂಡು ಆಗಲೀ ನೋಡುವ ಎಂದು ಆಯುಧಂಗಳಂ ಪಿಡಿದು ಇದಿರಾಗಿ ಬರುವ ದಾನವರೊಡನೆ ಯುದ್ಧವಂ ಮಾಡುತ ನಮುಚಿಯಂ ನಾಚಿಸಿ, ಬಲಿಯಂ ಬಗ್ಗಿಸಿ, ಬಾಣನಂ ಬಾಣಗಳಿಂದ ಮುಚ್ಚಿ, ಶಂಬರನ ಆಡಂಬರವಂ ಮುರಿದು, ಜಂಭನ ದಂಭವಂ ಬಿಡಿಸಿ, ಮಾಲಿಯಂ ಮೂರ್ಛೆಗೊಳಿಸಿ ಸಿಂಹಮುಖನಂ ಸಂಹರಿಸಿ, ಮಯನಂ ಮಾಯಿಸಿ, ವಿರೋಚನನಂ ವಿಮುಖನಂಗೈದು, ಸಾಗರದೊಳುರಿವ ಬಡಬಾನಲನಂತೆ ಕಾಳಗದೋಳ್ ದಾನವರಂ ಹುರಿಯುತಿರಲು, ಆಗ ದಾನವರೆಲ್ಲರೂ ಇಂದ್ರನ ಪರಾಕ್ರಮಕ್ಕೆ ಮೆಚ್ಚಿ, ಅಹುದಹುದು, ಅಚ್ಯುತನಿಗೆ ಅಣ್ಣನಾಗಬಹುದೆಂದು ಅಚ್ಚರಿಗೊಳುತ ದಾನವರೆಲ್ಲರೂ ಒಂದಾಗಿಬಂದು ಇಂದ್ರನಂ ಕುರಿತು ಮೊದಲಿನಂತೆ ಅಲ್ಲಾ, ಈಗ ನಿನ್ನ ಕಂದನಂ ನೋಡಿ, ಕಾಂತೆಯಂ ಕಂಡು, ಕಾಳಗಕ್ಕೆ ಬಾ ಎಂದು ಭಾರಿಭಾರಿಗೂ ಕೂಗುತ, ರಥಗಳಿಂ ಧುಮುಕಿ ತುಡುಕಿಬಂದು, ಹೆದೆಯಂ ಹರಿದು ಧನುವಂ ಮುರಿದು ಪ

ರಾಜಿತನಂಮಾಡಲು, ಆಗ ಇಂದ್ರನು ದೂರ್ವಾಸನ ಶಾಪವಂ ನೆನೆದು ಇದು ಕಾಲಮಹತ್ವಲ್ಲದೆ ಇವರ ಸಾಮರ್ಥ್ಯವಲ್ಲವೆಂದರಿತು ಇನ್ನು ಇಲ್ಲಿರಬಾರದೆಂದು ರಣಭೂಮಿಯಂ ಬಿಟ್ಟು ಯೋಗಮಾಯೆಯಿಂದ ಯಾರೂ ಕಾಣದಂತೆ ಅಮರಾವತಿಗೆ ಪೋಗಿ, ತನ್ನ ಅರಮನೆಯೊಳ್ ಬಂದೊತ್ತಿಳಿಯದೆ ಶಚಿಯೊಡಗೂಡಿ ಚಿಂತಿಸುತ್ತಿರ್ದು, ಅಷ್ಟರೊಳ್ ಮುಂದಾಗುವ ವಿಚಾರವಂ ತಿಳಿದು ಶಚೀದೇವಿಯೊಡನೆ ಸೂಕ್ಷ್ಮವಾಗಿ ಸೂಚಿಸಿ, ಅಮರಾವತಿಯ ಐಶ್ವರ್ಯವಂ ಬಿಟ್ಟು ಪೋಗಲಾರದೆ, ಅಲ್ಲಲ್ಲಿನಿಂತು ಚಿಂತಿಸುತ, ಅಮರರ ಐಶ್ವರ್ಯವು ಅಸುರರಪಾಲಾಯಿತೇ, ಯಾಗಫಲವು ಎಲ್ಲಿಯೋ ಅಡಗಿತು, ತಪಸ್ಸಿನ ಶಕ್ತಿಯು ತಾನೆಲ್ಲಿ ನಿಂತಿತೋ, ಪೂರ್ವದ ಪುಣ್ಯವು ಯಾವ ಅರಣ್ಯವಂ ಪೊಕ್ಕಿತೋ, ಧರ್ಮವು ಯಾವದಾರಿಯ ಹೊಂದಿತೋ, ದಾನದ ಮಹಿಮೆ ಯೆಲ್ಲಿ ಮಾಯವಾದುದೋ, ಪೂಜಾಫಲವು ಎಲ್ಲಿಹೋಯಿತೋ, ಬೃಹಸ್ಪತಿಯ ಯೋಚನೆಯು ಎಲ್ಲಿ ಯಾಚಿಸುವದಕ್ಕೆ ಪೋದುದೋ, ಅಸ್ತ್ರಗಳ ಸಾಮರ್ಥ್ಯವು ಎಲ್ಲಿ ಲಯವಾಯಿತೋ! ದೇವತೆಗಳ ಜಯಲಕ್ಷ್ಮಿಯುಎಲ್ಲಿ ಜೀರ್ಣವಾದಳೋ, ಒಬ್ಬ ರುಷಿಯ ಮಾತಿನಿಂದ ಇಂತಾಗಬಹುದೇ ಎಂದು ತನ್ನೊಳ್ತಾನೇ ಅಳಲಿಬಳಲಿ ತೊಳಲುತ್ತ ಕಳವಳಿಸಿ ಮುಖಕಂದಿ ಕಾಂತಿಗುಂದಿ ಕಳೆತಪ್ಪಿ ಉತ್ಸಾಹವಡಗಿ ಸತ್ವ ಕಡಮೆಯಾಗಿ ನಡೆಯಲಾರದೆ ಕೆಲವು ದೂರ ಪೋಗಿ, ತಿರಿಗಿ ಹಿಂತಿರಿಗಿ ಪೋಗಲಾರದೆ, ಮರಳಬರುತ ಕಂಗೆಟ್ಟು ಕಣ್ಣುಗಳಿಂದ ಕಾಲುವೆಯಂತೆ ಜಲವಂ ಸುರಿಯಿಸುತ, ಪೋದಲ್ಲದೆ ತೀರದೆಂದು ತಿಳಿದು ತೆರಳಿ ಬರುತ ತಂದೆತಾಯಿಗಳಿಗೆ ವಂದನೆಯಂ, ಶಚೀದೇವಿಗೆ ಸಂಜ್ಞೆಯಂಸಹಾ ಮಾಡಿ, ಪುತ್ರನಾದ ಜಯಂತನಂ ಕುರಿತು ನೀನು ರೂಪವಂ ಮರೆಮಾಚಿ ನಳಕೂಬರನಂ ಕೂಡಿ ಅಳಕಾಪುರದೊಳ್ ಕಾಲವಂಕಳೆ ಎಂದು ನಿಯಮಿಸಿ, ಮಾತಲಿಯಂ ಮಾತನಾಡಿಸಿ ಬೆಂಬಿಡಿದುಬರುವ ದೇವತೆಗಳಂ, ಅಲ್ಲಿಯೇ ನಿಲ್ಲಿರೆನುತ ಮಾತುಮಾತಿಗೆ ಕೋಪಗೊಳುತ, ಹುಬ್ಬುಗಳಂ ಗಂಟುಹಾಕುತ, ಮನದೊಳ್ ಶ್ರೀಮನ್ನಾರಾಯಣನಂ ನೆನೆಸುದೆ, ಪರಾತ್ಪರಮೂರ್ತಿಯಾದ ಪರಮೇಶ್ವರ

ನಂ ಧ್ಯಾನಿಸದೆ, ಕಮಲಸಂಭವನಂ ಕಾಣಿಸಿಕೊಳ್ಳಪೆ, ಕೆಡುವಕಾಲಕ್ಕೆ ದೇವರೂಇಲ್ಲ, ನಂಟರೂಇಲ್ಲ, ಎಂದು ನುಡಿಯುತ ಬರುತ ತನ್ನ ವಾಹನವಾದ ಐರಾವತವನೋಡಿ ಬಿಸುಸುಯ್ದು ನೀನು ಪ್ಲಕ್ಷದ್ವೀಪವನ್ನಾಶ್ರಯಿಸೆಂದು ನುಡಿದು, ಉಚ್ಚೈಶ್ರವಸ್ಸಂ ನೋಡಿ ಮನಮರುಗಿ ಮೈದಡವಿ ಜಂಬೂದ್ವೀಪವಂ ಪಡೆಎಂದು ನುಡಿದು, ಪಾರಿಜಾತವಂ ಕಂಡು ಪ್ರದಕ್ಷಿಣೆಯಂ ಮಾಡಿ ಹಂಬಲಿಸುತ ಶಾಕದ್ವೀಪವನೈದೆಂದು ಆಜ್ಞಾಪಿಸಿ, ಕಾಮಧೇನುವಂ ಕಂಡು ಕಂಬನಿದುಂಬಿ ನೀನು ಕುಶದ್ವೀಪಕ್ಕೆ ಇಳಿ ಎಂದು ಕಟ್ಟುಮಾಡಿ, ರಂಭಾದಿಗಳಂ ನೋಡಿ ಮನಕರಗಿ ಎಂತಾದರೂ ರೂಪವಂ ಮರೆಮಾಚಿ ಕ್ರೌಂಚದ್ವೀಪವಂ ಹೊಂದುವದೆಂದು ನುಡಿದು, ಮನೋನುಸಾರವಾಗಿ ನಡೆಯುವ ವ್ಯೋಮಯಾನವಂ ಕಂಡು ಕಟಕಟಾ ಎಂದು ವ್ಯಸನಪಡುತ ನೀನು ಪುಷ್ಕರದ್ವೀಪದೋಳ್ ವಾಸಗೊಂಡಿರುವದೆಂದು ಕಟ್ಟುಮಾಡಿ, ಚಿಂತಾಮಣಿಯಂ ನೋಡಿ ಹಾ ಎಂದು ಚಿಂತೆಗೈಯುತ್ತಿರುವ ಸಮಯದೋಳ್ ಮುಂದುಗಡೆಯಲ್ಲಿ ಬರುತ್ತಿರುವ ಬೃಹಸ್ಪತಿಯಂಕಂಡು ಎಲೈ ಆಚಾರ್ಯ ನನಿನ್ನಸಾನ್ನಿಧ್ಯವು ತಪ್ಪಿಹೋಗುವ ನನಿಗೆ ಚಿಂತಾಮಣಿಯು ಗೊಡವೆಯೇನು, ಈ ವಸ್ತುವು ನಿನ್ನಲ್ಲಿರಲೆಂದು ಪೇಳಿ ಕೈಯೊಳ್ ಕೊಟ್ಟು, ಆ ಮಹರ್ಷಿಯ ಶಾಪದ ದೆಸೆಯಿಂದ ವಜ್ರವಂ ಎತ್ತುವದಕ್ಕೆ ಬಲಸಾಲದೆ ಅದಂ ಭೂಲೋಕದೊಳ್ ಬಿಸುಟ್ಟು, ನಾರದನಿಂದ ಬಂದ ಲೀಲಾಶುಕವಂ ರಾಕ್ಷಸರಭಯದಿಂ ಮರೆತು ಬೆರಗಾಗಿ ಬೆಂಬಿಡಿದು ಓಡಿಬರುವ ಶಚೀದೇವಿಯೊಡಗೂಡಿ, ದೇವೇಂದ್ರನು ಅತ್ಯಂತ ದುಃಖಾತುರನಾಗಿ ನನ್ನ ನಿಜಸ್ಥಾನವಾದ ಶ್ರೀನಗರಕ್ಕೆ ಬಂದು ನನ್ನಂಕುರಿತು ಮೊರೆಯಿಡುವ ದೇವೇಂದ್ರಂಗೆ ನಾನು ಪ್ರತ್ಯಕ್ಷಳಾಗಿ ಎಲೈ ಇಂದ್ರನೆ ನಿನಗೆ ದೂರ್ವಾಸಮಹಾಮುನಿಯು ಕೊಟ್ಟ ಶಾಪವು ತಪ್ಪದು. ಅದೇಪರಿಯಾಗಿ ಅನುಗ್ರಹವು ಫಲಿಸಿತು. ಚಿಂತೆಗೊಳಬೇಡ, ನಾನು ನಿನಗೆ ಭೂಲೋಕದೋಳ್ಪ್ರತ್ಯಕ್ಷಳಾಗಿ ಸಕಲಸಾಧನಂಗಳಂ ಉಂಟುಮಾಡಿಕೊಟ್ಟು ನಿನ್ನ ಮನೋರಥವಂ ಪೂರೈಸುವೆನು ಮತ್ತು ನಿನಗೆ ಪುತ್ರಲಾಭಾನಂತರದಲ್ಲಿ ತಿರಿಗಿಪ್ರತ್ಯಕ್ಷಳಾಗಿ, ನಿಮ್ಮಾ

ರ್ವರ ಮನುಷ್ಯಶರೀರವೇ ಎಸಿನಂತೆ ದಿವ್ಯತೇಜೋಮಯ ಶರೀರವಾ ಗುವಂತೆ ಅನುಗ್ರಹಿಸಿ ನಿಮ್ಮ ನಿಜಸ್ಥಾನಕ್ಕೆ ಅಪ್ಪಣೆಯಂ ಕೊಡುವೆನೆಂ ದು ಅಭಯವಸಿತ್ತು, ನೀನು ನಮ್ಮ ಶ್ರೀನಗರದಲ್ಲಿರುವ ಕಲ್ಪವೃಕ್ಷವ ನವಾಟಿಯೊಳ್ ಮಾಕಂದವೃಕ್ಷದಲ್ಲಿ ಪುಟ್ಟಿರುವ ಫಲಂಗಳ ಮಧ್ಯ ದೊಳೊಂದು ಮಾವಿನಫಲದ ರೂಪವಂ ತಾಳಿರುವುದೆಂದು ಕಟ್ಟುಮಾಡಿ ಆಬಳಿಕ ಶಚೀದೇವಿಯಂಕುರಿತು ಎಲೈ ಇಂದ್ರಾಣಿಯೇ ನೀನು ನಮ್ಮ ಜಲಕ್ರೀಡೆಗೆ ಯೋಗ್ಯವಾದ ಈ ಅಮೃತಸರೋವರದಲ್ಲಿ ಸೌಗಂಧಿಕಾ ಪುಷ್ಪರೂಪವಂತಾಳಿ ಇರುವುದೆಂದು ಆಜ್ಞಾಪಿಸಿದೆನು. ಅದೇಪರಿ ಯಾಗಿ ಆ ಈರ್ವರೂ ಇರುತ್ತಿರಲು, ನಾನು ಇಂದ್ರಾಂಶದಿಂಕೊಡಿದ ಫ ಲವನ್ನೇ ನಿನಗೆ ಪುತ್ರಾರ್ಥವಾಗಿ ಕೊಟ್ಟಕಾರಣ ದೇವೇಂದ್ರನೇ ನಿನ್ನ ಉದರದಲ್ಲಿ ಸುಗಂಧರಾಜೇಂದ್ರನೆಂಬ ಹೆಸರಿನಿಂದ ಜನಿಸಿರುವನು. ಆ ಸೌಗಂಧಿಕಾ ಪುಷ್ಪದವೆಸೆಯಿಂದ ಶಚೀದೇವಿಯು ಕಳಿಂಗದೇಶಾಧಿಪ ತಿಗೆ ಪುತ್ರಿಯಾಗಿ ಸೌಗಂಧಿಕಾಎಂಬ ಹೆಸರಿನಿಂದ ಜನಿಸಿರುವಳು. ಇ ವರೀರ್ವರಿಗೂ ವಿವಾಹವಾಗುತಲಿಧೆ, ಈ ಸುಗಂಧರಾಜನ ದೆಸೆಯಿಂದ ಅನೇಕ ದುಷ್ಟನಿಗ್ರಹಶಿಷ್ಟಪರಿಪಾಲನ ರೂಪಂಗಳಾದ ಕಾರ್ಯಂಗ ಳಾಗುವವು. ಇದಲ್ಲದೆ ರಹಸ್ಯಂಗಳಾದ ದೇವತಾಕಾರ್ಯಂಗಳಂ ನೆರವೇ ರಿಸುವದಕ್ಕೆ ಉದ್ಭವವಂಗೈಸಿರುವೆನು. ಅದ್ಕಾರಣ ನೀನು ಏಕಚಿತ್ತ ದಿಂದ ಋಷಿಯಿಂದ ನಿನಗೆ ಉಪದಿಷ್ಟವಾದ ಮಂತ್ರವಂ ನಿನ್ನ ಕುಮಾ ರಂಗೆ ಶುಭಮುಹೂರ್ತದಲ್ಲಿ ಉಪದೇಶವಂಮಾಡು. ಆ ಮಂತ್ರಪ್ರಭಾ ವದಿಂದ ನಾನು ಅವನಿಗೆ ಪ್ರತ್ಯಕ್ಷಳಾಗಿ ಸಕಲಸಾಧನಂಗಳಂ ಉಂಟು ಮಾಡುತಲಿಧೇನೆ. ಬಳಿಕ ಅವನೊಡನೆ ನಿನ್ನ ಮಂತ್ರಿಕುಮಾರನಾದ ಸುಮತಿಯಂ ಜೊತೆಗೊಳಿಸಿ ದಿಗ್ವಿಜಯಾರ್ಥವಾಗಿ ಅಪ್ಪಣೆಯನ್ನಿತ್ತು ಕಳುಹುವನಾಗು ಎಂದು ಅಪ್ಪಣೆಯಂ ಕೊಟ್ಟು ಅಂತರ್ಧಾನವನ್ನೈದಲು, ಅನಂತರ ರಾಯನು ಅತಿ ವಿಸ್ಮಿತನಾಗಿ ದೇವಿಯ ವಾಕ್ಯವಂ ನೆನೆದು ತನ್ನ ಅಂತಃಪುರಕ್ಕೆ ಬಂದು ಈ ಸಕಲ ವೃತ್ತಾಂತವಂ ತನ್ನ ಪಟ್ಟ ದರಸಿಯಾದ ಗುಣವತಿಯೊಡನೆ ಪೇಳಿ, ನಾವೀರ್ವರು ಧನ್ಯರು ನಮ್ಮ

ಪುಣ್ಯಕ್ಕೆ ಎಣೆಯುಂಟೆ ಎಂದು ಸಂತೋಷಭರಿತರಾಗಿ ಸತಿಪತಿಗಳೀ ರ್ವರೂ ಆ ರಾತ್ರಿಯೊಳ್ ಸುಖದಿಂದಿರುತ್ತಿರ್ದರೆಂಬಲ್ಲಿಗೆ,

ಗದ್ಯ॥ ಕುಂಡಲಿಶಯಖಂಡಪರಶುಪುಂಡರೀಕ ಭವಾಖಂಡಲ ಪ್ರಮುಖನಿಖಿಲ ಸುರವರಪರಿಭವಪರಿಣತಪ್ರಚಂಡ ಬಾಣಚಂಡಮುಂಡಖಂಡನನಿಪುಣಕೋದಂಡ ಕಾಂಡಮಂಡಲಾಗ್ರಧರ ಭುಜಾದಂಡಪರಿಮಂಡಿತ ಚಾಮುಂಡಿಕಾಕಟಾಕ್ಷವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯಸತ್ಯಪ್ರತಾಪ ಸಕಲಭಾಷಾಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸ ಕವಿತಾನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತಗ್ರಂಥ ದಿನದಿನ ಪ್ರಬಂಧನಿಬಂಧನಧುರಂಧರತ್ರಿಭುವನ ಪವಿತ್ರಾತ್ರೇಯಸ ಗೋತ್ರಾಶ್ವಲಾಯನಸೂತ್ರ ಸುಚರಿತ್ರಚಾಮರಾಜ ಮಹಾರಾಜ ಪುತ್ರ ನರಪತಿ ಬಿರುದ ಮಹೀಶೂರ ಪುರವರಾಧೀಶ ಶ್ರೀ ಕೃಷ್ಣರಾಜ ವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನವೀನಕೃತಿಯೊಳ್ ಸುಚರಿತ್ರ ಮಹಾರಾಯಂಗೆ ಶ್ರೀದೇವಿಯು ಪ್ರಸನ್ನಳಾಗಿ ಸುಗಂಧರಾಜನ ಪ್ರೋದ್ಭೂತಿಪ್ರಾಸಕಥನವಂ ನಿರೂಪಿಸಿ ಅಂತರ್ಧಾನವನೈದಿದ್ದಂ ಬಣ್ಣಿಸಿರುವ ಆರನೆ ಆಶ್ವಾಸ ನಿರೂಪಣಕ್ಕೆ ಮಂಗಳಮಸ್ತು.



ಶ್ರೀ.

# ಏಳನೇ ಆಶ್ವಾಸ ಪ್ರಾರಂಭ.

---

ಶ್ರೀ ಚಾಮುಂಡಿಕಾಂಬಾಯೈ ನಮಃ.

॥ ಶ್ರೀರಸ್ತು ॥

---

ಅನಂತರದಲ್ಲಿ ಸುಚರಿತ್ರಮಹಾರಾಯನು, ಮಂತ್ರಿಯಾದ ಸುಬುದ್ಧಿಯಂ ಕರೆತರಿಸಿ ಶ್ರೀದೇವಿಯು ಅಪ್ಪಣೆಯಂ ಕೊಟ್ಟ ಪುತ್ರನ ಪ್ರಸವವೃತ್ತಾಂತವಂ ಪೇಳಲು, ಆಗ ಸುಬುದ್ಧಿಯು ಆನಂದಭರಿತನಾಗಿ ದೇವತಾಜ್ಞಾನುಸಾರವಾಗಿ ಶುಭದಿವಸದಲ್ಲಿ ಮಹಾ ಮಂತ್ರೋಪದೇಶವಂ, ಸುಗಂಧರಾಜ ಕುಮಾರಂಗೆ ಮಾಡಬಹುದೆಂದು ಬಿನ್ನವಿಸಲು, ರಾಯನು ಆ ಮಾತನಂಗೀಕರಿಸಿ, ಒಂದು ಶುಭದಿನವಂ ನೋಡಲೋಸುಗ ಕುಲಪುರೋಹಿತನಾದ ವೇದವಿಶ್ರುತನಂ ಕರೆಯಿಸಲು, ಆಕ್ಷಣದಲ್ಲಿಯೇ ಆ ವೇದವಿಶ್ರುತನು ಬಂದು, ರಾಯಂಗೆ ವೇದೋಕ್ತಾಶೀರ್ವಚನವಂ ಮಾಡಿ ತನ್ನ ಪೀಠದಲ್ಲಿ ಕುಳ್ಳಿರಲು, ರಾಯನು ಅವನಂ ಕುರಿತು ಶ್ರೀ ಆದಿಶಕ್ತಿಯ ಅನುಜ್ಞೆಯಾದುದಂ ವಿಸ್ತಾರವಾಗಿ ಪೇಳಿ ಶೀಘ್ರದಿಂ ದೇವತಾಪ್ರಸಾದ ಉಂಟಾಗುವ ಶುಭಲಗ್ನವಂ ಪೇಳಬೇಕೆನಲು, ವೇದವಿಶ್ರುತನು ಆ ಮಾತಂ ಕೇಳಿ ಆನಂದಭರಿತನಾಗಿ ಸ್ಥಿರವಾದ ಶುಭಲಗ್ನವಂ ಪೇಳಲು, ಆಗಲಾರಾಯನು ದೂತರ ಮುಖವಂ ಅವಲೋಕಿಸಿ ಎಲೈ ದೂತರುಗಳಿರಾ ನೀವು ನನ್ನ ಅಪ್ಪಣೆಯಿಂದ ಆಯುಷ್ಮಂತನಾದ ಸುಗಂಧರಾಜ ಕುಮಾರನ ಭವನವಂ ಶೀಘ್ರದಿಂ ಪ್ರೊಕ್ಕು ಅವನಂ ಅತಿವೇಗದಿಂದ ಕರೆದುಕೊಂಡು ಬನ್ನಿರೆಂದು ಅಪ್ಪಣೆಯಂ ಕೊಡಲು, ಆ ಚಾರರು ಮಹಾಪ್ರಸಾದವೆಂದು ನುಡಿದು ರಾಯನ ಚರಣಗಳಿಗೆರಗಿ ಸುಗಂಧರಾಜನ ಚಿಕ್ಕ ಅರಮನೆಯಂ ಕುರಿತು ಬಂದು ಅಲ್ಲಿರುವ ದ್ವಾರಪಾಲಕರಂ ಕುರಿತು ಎಲೈ ದ್ವಾರಪಾಲಕರುಗಳಿರಾ, ನಾವು ಮಹಾಪ್ರಭುವಿನ ಅಪ್ಪಣೆಯಿಂದ

ಬಂದುಇರ್ದೇವೆ, ರಾಜಕುಮಾರಂಗೆ ಬಿನ್ನೈಸಿರೆಂದು ಪೇಳಲಾ ದ್ವಾರಪಾ
ಲಕರು ಬಂದು ಸುಗಂಧರಾಜಕುಮಾರಂಗೆ ನಮಸ್ಕರಿಸಿ ಎಲೈ ಸ್ವಾಮಿ
ಯೆ ಮಹಾಪ್ರಭುವಿನ ಅಪ್ಪಣೆಯಿಂದ ರಾಜದೂತರು ನಿನ್ನ ಸನ್ನಿಧಿಯ
ಲ್ಲಿ ಬಿನ್ನವಿಸತಕ್ಕ ಬಿನ್ನಹವುಂಟೆಂದು ಬಾಗಿಲಲ್ಲಿ ಇರುವರೆಂದು ಬಿನ್ನ
ವಿಸಲು, ಆಮಾತಂಕೇಳಿ ಸುಗಂಧಕುಮಾರನು ಎಲೈ ದ್ವಾರಪಾಲಕರು
ಗಳಿರಾ, ನೀವು ಶೀಘ್ರದಿಂ ಆ ದೂತರಂ ಕರೆತರುವದೆಂದು ಆಜ್ಞಾಪಿ
ಸಲು, ಆ ದ್ವಾರಪಾಲಕರು ಆ ದೂತರಂ ವೇಗದಿಂ ಕರೆತರಲು, ಆ ದೂತ
ರು ಕುಮಾರಂಗೆ ಪ್ರಣಾಮಮಂ ಮಾಡಿ, ಎಲೈ ರಾಜಕುಲತಿಲಕನೆ. ಮ
ಹಾರಾಯನು ನಿಮ್ಮಂ ನೋಡಬೇಕೆಂದು ಅಪೇಕ್ಷಿಸಿ ನಮ್ಮಂ ಕಳುಹಿ
ಸಿರುವನಾದ್ದರಿಂ ಮಹಾರಾಜನ ಸಾನ್ನಿಧ್ಯಮಂ ಕುರಿತು ದಯಮಾಡಿಸ
ಬೇಕೆಂದು ಬಿನ್ನೈಸಲು, ಆ ಮಾತಂ ಕೇಳಿ ಸುಗಂಧರಾಜ ಕುಮಾರನು
ಮಣಿಮಯವಾದ ತೂಗುಮಂಚದಿಂದಿಳಿದು ಮಿತ್ರನಾದ ಸುಮತಿಯಿಂದೊ
ಡಗೂಡಿ ತನ್ನ ಅರಮನೆಯ ಬಾಗಿಲಮುಂದುಗಡೆಯೊಳ್ ಅಲಂಕೃತ
ಮಾಗಿ ಸಜ್ಜುಮಾಡಿದ ಮಣಿಮಯ ರಥವನ್ನೇರಿ ರಾಜಾಂತಃಪುರದ
ಬಾಗಿಲೊಳ್ ರಥದಿಂದಿಳಿದು ಸುಮತಿಯೊಡಗೂಡಿ ರಾಯನ ಸಮ್ಮು
ಖಕ್ಕೆ ಬಂದು ಸಾಷ್ಟಾಂಗ ಪ್ರಣಾಮಮಂಮಾಡಿ ಕೈ ಕಟ್ಟಿಕೊಂಡು ನಿಂ
ತಿರಲು, ರಾಯನು ಆ ಕುಮಾರನಂ ಅಂಕದೊಳ್ ಕುಳ್ಳಿರಿಸಿ ಶಿರವನಾ
ಘ್ರಾಣಿಸಿ, ಆ ಕುಮಾರನಂ ಕುರಿತು ಒಂದಾನೊಂದು ಮಾತನಾಡುತಲಿ
ರ್ದನು. ಎಲೈ ಪುತ್ರನೇ ನೀನು ಸಕಲರಾಜ್ಯಗಳ ಮರ್ಯಾದೆಗಳಂ,
ರೀತಿಗಳಂ, ಭಾಷೆಗಳಂ. ಅಲ್ಲಲ್ಲಿಯ ಕೌತುಕಗಳಂ, ಸಾಮಂತರಾಯ
ರುಗಳ ನಡತೆಗಳಂ ತಿಳಿದು ಮಿತ್ರರಾಜಮಂಡಲಿಗಳೊಡನೆ ಯುದ್ಧಮಂಮಾ
ಡಿ, ಅವರುಗಳಂ ಗೆಲ್ಲಹೋಸುಗ ಅಪ್ಪಣೆಯಂ ಕೊಡಬೇಕೆಂದು ಬಿನ್ನೈ
ಸಿದ ನುಡಿಯಂ, ನನ್ನ ಬುದ್ಧಿಯಿಂದಾಲೋಚಿಸಿ ನೋಡಿದರೆ, ನೀನು ಬಾ
ಲಕನು ಅಸ್ತ್ರಗಳ ಪ್ರಯೋಗೋಪಸಂಹಾರರೀತಿಗಳು ಉಪದಿಷ್ಟಂ
ಗಳಾಗಲಿಲ್ಲ, ಭೂಮಿಯಲ್ಲಿ ರಾಜ್ಯಗಳನ್ನಾಳುವ ವೀರೋತ್ತಮರಾದ
ಅನೇಕರಾಯರುಗಳು ಇರುವರು, ಅವರುಗಳಂ ಕೆಲವರಂ ಸಾಮದಿಂ, ಕೆ

ಲವರಂ ದಾನದಿಂ, ಕೆಲವರಂ ಭೇದದಿಂ, ಮತ್ತಂ ಮಲೆತವರಂ ದಂಡದಿಂ ಸ್ವಾಧೀನಗೊಳಿಸುವ, ಕೌಶಲ್ಯದಪರಿಯು ನಿನಗೆ ಅನುಭವಸಾಲದು, ಇಂತಲ್ಲದೆ ನಮ್ಮ ಸತಿಪತಿಗಳೀರ್ವರಿಗೆ ಬಹು ಕಾಲಾನಂತರದೊಳ್ ದೇವೀ ಪ್ರಸಾದ ವುಂಟಾಗಿ ನೀನೊಬ್ಬ ಪುತ್ರನು ಜನಿಸಿದೆ, ನಿನ್ನಂಬಿಟ್ಟು ನಾವು ಎಂತು ಕಾಲವಂ ಕಳೆಯಬೇಕು. ಕುಲಕ್ರಮಾಗತವಾದ ಈ ರಾಜ್ಯಕ್ಕೆ ನಿನ್ನಂ ಯುವರಾಜನಂಮಾಡಿ, ಬೊಕ್ಕಸ, ಭಂಡಾರ, ಚತುರಂಗಬಲಸಮೇತರಾದ ವೀರಸೇನ ಮೊದಲಾದ ಸೇನಾಪತಿಗಳಂ, ಸುಬುದ್ಧಿಮೊದಲಾದ ಅಷ್ಟಪ್ರಧಾನಿಗಳಂ, ನಿನ್ನ ಸ್ವಾಧೀನಮೊಳರಿಸಿ, ನೀನು ನೀತಿಶಾಸ್ತ್ರಮರ್ಯಾದೆಯಿಂ ಮಾಡುವ ಯುವರಾಜ್ಯದಪರಿಯಂ ಕಣ್ಣುಗಳಿಂದ ನೋಡುತ, ಕಿವಿಗಳಿಂದ ಕೇಳುತ, ಆನಂದಭರಿತರಾಗಿರಬೇಕೆಂಬ ನಮ್ಮಗಳಿಗೆ ವ್ಯಥೆಯನ್ನುಂಟುಮಾಡಿ ದಿಗ್ವಿಜಯಾರ್ಥವಾಗಿ ತೆರಳುವೆನೆಂಬುದು ಉಚಿತವಲ್ಲವಾದಕಾರಣ, ನೀನು ನಮ್ಮೀರ್ವರಮಾತಂ ಕೇಳಿ ಸ್ವರಾಜ್ಯದಲ್ಲಿ ಚಿಕ್ಕರಾಯಪಟ್ಟದೊಳ್ ಅಭಿಷಿಕ್ತನಾಗಿ ರಾಜ್ಯತಂತ್ರವಂ ವಿಚಾರಿಸುತ ಉಪಾಯಚತುಷ್ಟಯ ಮಾರ್ಗಗಳಂ ಗ್ರಹಿಸಿ ಸಾಮಂತರಾಯರುಗಳ ನಡತೆಗಳಂ ತಿಳಿದು, ಅನ್ಯದೇಶಾಧಿಪತಿಗಳ ಬಲಂಗಳಂ, ಯುಕ್ತಿಸಾಹಸಂಗಳಂ ಗೂಢಚಾರರಿಂದ ವಿಚಾರಿಸಿ, ಅದರ ಪ್ರತೀಕಾರವಂ ಮಂತ್ರಿಗಳೊಡನೆ ಯೋಚಿಸುತ ಸ್ವರಾಜ್ಯರಂಜಕನಾಗಿದ್ದು, ಕೆಲವು ಕಾಲದಮೇಲೆ ಸ್ವಸೇನಾಸಮೇತನಾಗಿ ಸಕಲ ರಾಜಮಂಡಲಿಗಳಂ ಜಯಿಸಿ, ಅನೇಕ ಸಂಭ್ರಮದೊಡನೆ ನಿನ್ನ ರಾಜ್ಯವಂ ಕುರಿತು ಬರುವುದುಚಿತವೆಂದು ಪೇಳಲು, ಸುಗಂಧರಾಜಕುಮಾರನು ರಾಯನವಾಕ್ಯವಂಕೇಳಿ, ಅಂಕದಿಂದೆದ್ದು ತಂದೆಯ ಅಡಿದಾವರೆಗಳಿಗೆರಗಿ ಎಲೈ ಸ್ವಾಮಿಯೆ, ಈಗ ನೀನು ನಿರೂಪಿಸಿದ್ದು ನನಗೆ ಆಶ್ಚರ್ಯಕರವಾಗಿ ತೋರುತಲಿಧೆ. ಸಿಂಹದಮರಿಗೆ ಮದ್ದಾನೆಯ ಭಯ ತೋರಿದಂತೆ ಅತಿ ಪರಾಕ್ರಮಶಾಲಿಯಾದ ದೇವಿಯಪ್ರಸಾದವಂ ಪಡೆದಿರುವ ನಿನ್ನ ಉದರದಲ್ಲಿ ಜನಿಸಿದ ನನಗೆ ಪರರಾಯರೆಂಬ ಪಶುಗಳ ಬಾಧೆಯು ಸ್ವಪ್ನದಲ್ಲೂ ಸಂಭವಿಸಲಾರದು, ಬಾಲನೆಂಬ ಪ್ರೇಮಾತಿ

ಶಯದಿಂದ ಅಪ್ಪಣೆಯಂಕೊಟ್ಟಂತೆ ನನ್ನಬುದ್ಧಿಗೆ ತೋರುತಲಿಧೆ, ನೀವು ನಿರೂಪಿಸಿದಪರಿಯಾಗಿ ಯುವರಾಜಪದವಲ್ಲಿ ನಿಂತಬಳಿಕ ದೇಶಭಾಷಾ ರೀತಿಗಳು ಯಾವಪರಿಯಿಂದ ನನಗೆ ಅನುಭವಕ್ಕೆ ಬರಬೇಕು. ಅದು ಕಾರಣ ಬಹುಪ್ರಕಾರಂಗಳಾದ ವಿಕಲ್ಪಂಗಳಂ ಚಿತ್ತದಲ್ಲಿ ಊಹಿಸದೆ ಸಂತೋಷಚಿತ್ತದಿಂ ನನಗೆ ಸಕಲ ರಾಯರುಗಳ ವಿಜಯಾರ್ಥವಾಗಿ ಆ ಶೀರ್ವಾದವಂಮಾಡಿ ಶೀಘ್ರದಿಂ ಅಪ್ಪಣೆಯಂಕೊಡಬೇಕೆನಲು, ರಾಯ ನು ಕುಮಾರನ ದೃಢನಿಶ್ಚಯಮಂ ತಿಳಿದು ಎಲೈ ಕುಮಾರನೇ ನೀನು ಬಿ ನ್ನವಿಸಿದಂತೆಯೇ ಆಗಲೀ, ಸಕಲರಾಯರಂ ಗೆದ್ದು ಸುಖದಿಂದ ಬರುವವ ನಾಗು, ಅದಕ್ಕೆ ತಕ್ಕ ಉಪಾಯಮಂ ಪೇಳುವೆನು ಕೇಳೆಂದು ನುಡಿದು, ಎಲೈ ಪುತ್ರನೇ ನೀನು ಪುಟ್ಟುವದಕ್ಕೆ ಕಾರಣಕರ್ತೃಯಾದ ಆದಿಶ ಕ್ತಿಯ ಮಂತ್ರೋಪದೇಶವಂ ನಿನಗೆಮಾಡುವೆನು. ಅದಂ ಶುಚಿರ್ಭೂ ತನಾಗಿ ಅಂಗೀಕರಿಸಿ ಏಕಚಿತ್ತನಾಗಿ ಅಕ್ಷರಲಕ್ಷಪುರಶ್ಚರಣೆಯಂಗೈ ಯ್ಯಲು, ಜಗನ್ಮಾತೆಯಾದ ಪರಮೇಶ್ವರಿಯು, ನಿನ್ನಭಕ್ತಿಯಂ ಮೆಚ್ಚಿ ಪ್ರಸಾದದಿಂ ಪ್ರತ್ಯಕ್ಷಳಾಗುವಳು, ಆಕಾಲದಲ್ಲಿ ನೀನು ಬೇಕಾದವರಗಳಂ ಅಸ್ತ್ರವಿದ್ಯೆಗಳಂಪಡೆದು, ಜಗದೀಶ್ವರಿಯ ಆಜ್ಞಾನುಸಾರವಾಗಿ ನಡೆ ಯುವುದೆಂದು ಪೇಳಿ, ಕುಮಾರಂಗೆ ಶುಭಮುಹೂರ್ತದೋಳ್ ಮಜ್ಜ ನಂಗೈಸಿ ದಿವ್ಯಾಂಬರವನುಡಿಸಿ, ಸುವರ್ಣಪೀಠದೋಳ್ ಕುಳ್ಳಿರಿಸಿ, ನಿಜಪುರೋಹಿತನಿಂದ ಸ್ವಸ್ತಿವಾಚನವಂಗೈಸಿ, ತಾನು ಶುಚಿರ್ಭೂತ ನಾಗಿ ತನ್ನ ಬಲಭಾಗದಾಕೆಯೋಳ್ ಬಾಲಕನಾದ ಸುಗಂಧರಾಜಕುಮಾ ರನಂ ಕುಳ್ಳಿರಿಸಿ, ಗುರುವಾದ ವಾಮದೇವಮಹರ್ಷಿಯಪಾವನವಾದ ಪಾ ದಂಗಳಂ ಸ್ಮರಿಸಿ, ಸಂಕಲ್ಪಪೂರ್ವಕವಾಗಿ ನ್ಯಾಸಕ್ರಮದಿಂದ ನವಾಕ್ಷ ರೀ ಮಹಾಮಂತ್ರೋಪದೇಶವಂ ಮಾಡಿ, ಪುರಶ್ಚರಣಾಕ್ರಮ, ಜಪ ಹೋಮ ತರ್ಪಣಾದಿಗಳ ವಿಧಾನಂಗಳಂ ಸಾಂಗವಾಗಿ ಪೇಳಿ, ಈ ಮ ಹಾಮಂತ್ರವು ಗೋಪ್ಯವಾಗಿರತಕ್ಕದ್ದೆಂದು ಪೇಳಲು, ಸುಗಂಧರಾಜ ಕುಮಾರನು ಆ ವಾಕ್ಯವಂ ಕೇಳಿ, ರಾಯನಡಿದಾವರೆಗಳಿಗೆ ಷೋಡಶೋ ಪಚಾರ ಪೂಜೆಯಂ ಮಾಡಿ ನವರತ್ನಗಳಂ ಸಮರ್ಪಿಸಿ, ಗೋತ್ರಾಭಿ

ಪಾವನೆಯುಂ ಮಾಡಿ ಪಾದತೀರ್ಥವಂ ಸ್ವೀಕರಿಸಿ, ನಾನು ಕೃತಾರ್ಥನಾದೆ
ನೆಂದು ಬಿನ್ನವಿಸಲು. ರಾಯನು ಆಯುಷ್ಮಂತನಾಗಿ ಯಶೋವಂತ
ನಾಗೆಂದು ಹರಸಿ, ಅಪ್ಪಣೆಯಂಕೊಟ್ಟು ಕಳುಹಿಸಲು. ಆ ಸುಗಂಧರಾ
ಜಕುಮಾರನು ತನ್ನ ಜನನಿಯಾದ ಗುಣವತೀದೇವಿಯ ಪಾದಪದ್ಮಗಳಿ
ಗಭಿವಂದಿಸಿ, ರಾಯನ ಸನ್ನಿಧಿಯಲ್ಲಿ ನಡೆದವೃತ್ತಾಂತವಂ ಕ್ರಮವಾಗಿಬಿ
ನ್ನೈಸಲು ಗುಣವತೀದೇವಿಯು ಎಲೈ ಕುಮಾರನೆ ರಾಯನು ಆಜ್ಞಾಪಿ
ಸಿದಅರ್ಥವಂ ಅತಿಕ್ರಮಿಸದೆ ನಡೆಯುವದು ವಿಹಿತವೆಂದು ಪೇಳಿ, ಅನೇ
ಕಪ್ರಕಾರವಾದ ಆಶೀರ್ವಾದವಂ ಮಾಡಿ ಅಪ್ಪಣೆಯಂಕೊಟ್ಟು ಕಳುಹಿ
ಸಲು. ಆ ಸುಗಂಧರಾಜಕುಮಾರನು ತನ್ನ ಚಿಕ್ಕ ಅರಮನೆಗೆ ಬಂದು ಒಂ
ದಾನೊಂದು ದಿನ ಶುಭಮುಹೂರ್ತದಲ್ಲಿ ರಾಯನ ಉಪವನವಂ ಕುರಿತು
ಪೋಗಿ, ಅತ್ಯಂತ ನಿರ್ಮಲಂಗಳಾದ, ಮನೋಹರಂಗಳಾದ, ಕನ್ನಡಿಗ
ಳಂತಿರುವ ಸ್ಫಟಿಕಶಿಲೆಗಳಿಂದ ನಿರ್ಮಿತವಾದ ಸರೋವರದಲ್ಲಿ, ಗಂಗಾದಿ
ಸಕಲ ಪುಣ್ಯತೀರ್ಥಂಗಳಂ ನೆನೆದು ಸ್ನಾನವಂ ಗೈದು, ಶುಭ್ರವಾದ
ಮಡಿಯನುಟ್ಟು ಆಹ್ನಿಕಗಳನ್ನೆರವೇರಿಸಿ, ವನಮಧ್ಯದಲ್ಲಿರುವ ತ್ರಿ
ಪುರಸುಂದರಿಯ ದೇವಸ್ಥಾನವಂ ಪೊಕ್ಕು ಭಕ್ತಿಪೂರ್ವಕವಾಗಿ ಷೋ
ಡಶೋಪಚಾರ ಪೂಜೆಯಂ ಗೈದು, ತನ್ನ ಮಿತ್ರನಾದ ಸುಮತಿಯಂ
ಕುರಿತು ಎಲೈ ಮಿತ್ರನೆ, ವನದಲ್ಲಿ ಜನಗಳು ಒಬ್ಬರೂ ಬಾರದಂತೆ ಕ
ಟ್ಟುಮಾಡಿ ಸ್ವಲ್ಪ ದೂರದೊಳ್ ಜಾಗರೂಕನಾಗಿರುವದೆಂದು ನಿರೂ
ಪಿಸಿ, ತಿರಿಗಿ ಸ್ನಾನವಂ ಮಾಡಿ ಶುದ್ಧಾಚಮನವಂ ಗೈದು, ದೇವಸ್ಥಾ
ನದ ಮುಂದುಗಡೆಯಲ್ಲಿರುವ ಕದಂಬವೃಕ್ಷಚ್ಛಾಯೆಯನ್ನಾಶ್ರಯಿಸಿ ಕು
ಶಾಸನಾಸೀನನಾಗಿ ತನ್ನ ಗುರುವಾದ ರಾಯನ ಅಡಿದಾವರೆಗಳಂ ಮನ
ದೊಳ್ ನೆನೆದು ದೇವಿಯಂ ಪೂಜಿಸಿ, ಭೂಶುದ್ಧಿ, ಭೂತಶುದ್ಧಿಪೂರ್ವ
ಕವಾಗಿ, ರೇಚಕ, ಪೂರಕ, ಕುಂಭಕವಿಧಾನದಿಂ ಪ್ರಾಣಾಯಾಮವಂ
ಮಾಡಿ, ತನ್ನ ಮನೋಭೀಷ್ಟಸಿದ್ಧ್ಯರ್ಥವಾಗಿ ಸಂಕಲ್ಪವಂ ಗೈದು ಬದ್ಧಾ
ಸನ ಸಿದ್ಧಾಸನ, ವೀರಾಸನ, ಪದ್ಮಾಸನ, ಸ್ವಸ್ತಿಕಾಸನ, ವ್ಯಾಸಾಸನ,
ಸುಖಾಸನ, ಸರ್ವತೋಭದ್ರಾಸನ, ಗೋಮುಖಾಸನ, ಗರುಡಾಸನ,

ಮಯೂರಾಸನ, ಮತ್ಸ್ಯಾಸನ, ಕೂರ್ಮಾಸನ, ಮಂಡೂಕಾಸನ, ಕುಕ್ಕುಟಾಸನ ಸರ್ಪಾಸನ ಶೂಲಾಸನ, ಕಪಾಲಾಸನ, ಕ್ರೌಂಚಾಸನ, ಅರ್ಧಾಸನ, ಏಕಪಾದಾಸನ, ಕಾಷ್ಟಾಸನ, ಮೊದಲಾದ ಚತುರ್ಶೀತಿ ಆಸನಂಗಳೊಳ್ ಮುಖ್ಯವಾದ, ಪ್ರಸಿದ್ಧಿಪ್ರದವಾದ, ಬದ್ಧಪದ್ಮಾಸನದಿಂಯುಕ್ತನಾಗಿ, ಮಾತೃಕಾನ್ಯಾಸ, ಮಂತ್ರನ್ಯಾಸಂಗಳಂ ಮಾಡಿ, ಶಾಂಭವೀ, ಖೇಚರೀ, ಷಣ್ಮುಖೀಮೊದಲಾದ ಷಣ್ಮುದ್ರೆಗಳಲ್ಲಿ ಪ್ರಶಸ್ತವಾದ ಶಾಂಭವೀಮುದ್ರೆಯಂಧರಿಸಿ, ಅಂತರ್ಲಕ್ಷ್ಯದಲ್ಲಿ ದೃಷ್ಟಿಯನ್ನಿಟ್ಟು ಯಮ ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಅಷ್ಟಾಂಗಯೋಗಯುಕ್ತನಾಗಿ, ಚಂಚಲಚಿತ್ತನಾಗದೆ, ಮಂತ್ರರಹಸ್ಯರೀತಿಯಿಂದ ಮೂರ್ತಿಧ್ಯಾನವಂ ಗೈದು ಜಗನ್ಮಾತೆಯಾದ ಜಗದೀಶ್ವರಿಯ ಪಾದಕಮಲದೊಳ್ ಏಕಕವಾಗಿ ತನ್ನ ಚಿತ್ತಮಂ ನೆಲೆಗೊಳಿಸಿ ಅನಶನವ್ರತನಾಗಿ ಮಹಾಮಂತ್ರಮಂ ಜಪಿಸುತಿರಲು. ಅಷ್ಟರಲಕ್ಷ ಸಂಖ್ಯಾಕ್ರಮವು ಬೆಳೆಯುವ ಕಾಲದೊಳ್ ಶ್ರೀಮನ್ಮಹಾಜಗದೀಶ್ವರಿಯು, ಈತನ ದೃಢತಪಸ್ಸಂ ಮೆಚ್ಚಿ ಪ್ರಸನ್ನಳಾಗುವದಕ್ಕೆ ನಮಸ್ಕರಿಸಲು, ಆಸಮಯದಲ್ಲಿ ಅಪ್ರಾಕೃತದಿವ್ಯಗಂಧ ಯುಕ್ತವಾದ ವಾಯುವು ಬೀಸುತ್ತಿರಲು ಜಗತ್ತಿನ ಸುಗಂಧವೆಲ್ಲವು, ಆ ದಿವ್ಯ ಗಂಧದಲ್ಲಿ ಲೀನವಾದ್ದರಿಂ ಪ್ರಪಂಚವೆಲ್ಲ ಸ್ತಬ್ಧನಾಗುತ್ತಿರಲು, ಆ ಕಾಲದಲ್ಲಿ ಉದಯಿಸಿದಪ್ರಭಾಮಂಡಲದೊಳ್ ಸೂರ್ಯಾದಿ ಸಕಲಪ್ರಭಾಸಮುದಾಯವು ಮಿಂಚುಹುಳುವಿನಂತಾಗಲು ದೇವದುಂದುಭಿ ವಾದ್ಯರವಗಳಿಂದ ಭೂಮ್ಯಂತರಿಕ್ಷಗಳು ತುಂಬಿರುತ್ತಿರಲು, ಅಮಕಾರಣ ಸುಗಂಧರಾಜಕುಮಾರನು ಮೂರ್ತಿಧ್ಯಾನವಂ ಬಿಟ್ಟು ಬಹಿರ್ಮುಖನಾಗಿ ಅತ್ಯಾಶ್ಚರ್ಯದಿಂ ದಿಕ್ಕುದಿಕ್ಕುಗಳಂ ನೋಡುತ್ತಿರಲು ಆಗ ಶ್ರೀ ಚಾಮುಂಡೇಶ್ವರಿಯು ಸಂಧ್ಯಾರಾಗವಂ ಲಜ್ಜೆಗೊಳಿಸುವ ಕೌಸುಂಭವಸ್ತ್ರವನ್ನುಟ್ಟು ಮುತ್ತುಗಳಂ ಬಿಗಿದಿರುವ ಕಂಚುಕವಂತೊಟ್ಟು ನವಾಕ್ಷರಂಗಳೇ ನವರತ್ನರೂಪವಂತಾಳಿ ನಿಬಿಡೀಕೃತಂಗಳಾಗಲು ಅಪ್ರಾಕೃತವಾದ ಕೋಟಿಸೂರ್ಯರಂ ತಿರಸ್ಕರಿಸುವ ಚಂದ್ರರೇಖೆಯಿಂದೊಡಗೂಡಿದ ದಿವ್ಯ

ಕಿರೀಟಮಂ ಧರಿಸಿ ಲೋಕತ್ರಯದೊಳಾಗುವ ಧರ್ಮಾಧರ್ಮಂಗಳಂ ಬಿನ್ನವಿಸುವದಕ್ಕೆ ಬಂದಿರುವ ಸೂರ್ಯಚಂದ್ರರಂತೆ ಮೆರೆಯುವ ರತ್ನತಾಟಂಕೆಯುಗ್ಮಮಂ ಕರ್ಣಂಗಳೊಳ್ ಧರಿಸಿ, ಚಂದ್ರಮಂಡಲಮಧ್ಯದೊಳ್ ವಿರಾಜಿಸುವ ಮಂಗಳನಂತೆ ಥಳಥಳಿಪ ಪದ್ಮರಾಗತಿಲಕಮಂ ಪಣೆಯೊಳ್ ಅಲಂಕರಿಸಿ ರಾತ್ರಿಯೊಳ್ ಕಳೆಯಂಪೊತ್ತ ಶುಕ್ರನಂತಿರುವ ಮುತ್ತಿನ ಮೂಗುತಿಯಂ ನಾಸಿಕಾಗ್ರದೊಳ್ ಧರಿಸಿ ನಕ್ಷತ್ರಮಂಡಲದಂತೆ ಶೋಭಿಸುವ ಮುತ್ತಿನ ಹಾರಂಗಳಂ ಕೂಡಿರುವ ಥರಥರಮಾದ ರತ್ನಪದಕಂಗಳಂ ಕಂಠದೊಳ್ ಅಳವಡಿಸಿ ಬಾಹುಗಳಿಗೆ ಮುತ್ತುಗಳಂ ಸುತ್ತಲೂ ಬಿಗಿದಿರುವ ವಜ್ರಮಯಂಗಳಾದ ಬಾಹುಪುರಿಗಳಂ, ರತ್ನದವಂಕಿ, ನಾಗಮುರಿಗಳಂ ಧರಿಸಿ, ಕಾಮೇಶ್ವರನಿಂದ ಕಟ್ಟಲ್ಪಟ್ಟ ದಿವ್ಯ ಮಾಂಗಲ್ಯಾಭರಣದಿಂ ಶೋಭಿತಳಾಗಿ, ದುಷ್ಟ ದಾನವರಂ ನಿಗ್ರಹಿಸಿ ಶಿಷ್ಟರಂ ಪರಿಪಾಲಿಸುವೆನೆಂದು ಕಟ್ಟಿರುವ ವೀರಕಂಕಣದಂತೆ ಮೆರೆಯುವ ಹಸ್ತಕಡಗಗಳಿಂದ ಒಪ್ಪುವ ಪದ್ಮರಾಗ ಕಂಕಣಗಳಂ ಹಸ್ತಗಳೊಳ್ ಧರಿಸಿ ಅನೇಕರೂಪಮಂ ತಾಳಿದ ಆರ್ದ್ರಾನಕ್ಷತ್ರದಂತಿರುವ ಪವಳಗಳ ಕೈಕಟ್ಟುಗಳಂ ಹಸ್ತಗಳ ಮುಂಭಾಗದೊಳ್ ಕಟ್ಟಿ ಕಾಲಮೇಘ ಮಧ್ಯದೊಳ್ ಪೊಳೆವ ಮಿಂಚಿನಂತೆಸೆವ ವಜ್ರದ ಗೆಜ್ಜೆ ಘಂಟೆಗಳಿಂದ ಅಲಂಕೃತವಾದ ರತ್ನದ ವಡ್ಡಾಣಮಂ ನಡುವಿನೊಳ್ ಅಲಂಕರಿಸಿ ನವರತ್ನಖಚಿತಂಗಳಾದ ಮುತ್ತಿನ ಶಿಖರಂಗಳಿಂದಲು ಪಚ್ಚೆಯ ಲೋಲಕಂಗಳಿಂದಲು ಒಪ್ಪಿರುವ ಕಾಲುಸರ, ಗೆಜ್ಜೆ ಪಾಡಗ, ಗಗ್ಗರಂಗಳಂ ಪಾದಂಗಳೊಳ್ ಧರಿಸಿ ಝಣಝಣತ್ಕರಿಸುವ ವಜ್ರಗಳಂ ಸುತ್ತುವರಿದ ಸುವರ್ಣದಉಂಗುರಗಳಂ ಪಾದಾಂಗುಳಿಗಳಿಗೆಳವಡಿಸಿ ನೀಲಮೇಘದಂತೆ ಶ್ಯಾಮವರ್ಣಳಾಗಿ ಅನೇಕ ರುಂಡಮಾಲಾಧಾರಿಣಿಯಾಗಿ ಸೂರ್ಯಸೋಮಾಗ್ನಿಗಳಿಗೆ ತೌರುಮನೆಯಾದ ನೇತ್ರತ್ರಯವುಳ್ಳವಳಾಗಿ, ತ್ರಿಶೂಲ, ಖಡ್ಗ, ಮುಸಲ, ಮುದ್ಗರ, ಮುಸುಂಡೀ, ಭಿಂಡಿವಾಳ, ಪಾಶಾಂಕುಶ ಶಂಖ, ಚಕ್ರ, ಗದಾ, ತೋಮರ, ಪರಿಘ, ಪ್ರಾಸ, ಪಟ್ಟಸ, ಪರಶು, ಕುಂತ, ಬಾಣ, ಚಾಪ, ಖೇಟ, ಶಕ್ತಿ

ವಜ್ರ, ಛುರಿಕಾ, ಘಂಟಾ, ದರ್ಪಣ, ರುದ್ರವೀಣಾ ಡಮರುಗ, ಧ್ವಜ ಮೊದಲಾದ ಅನೇಕಾಯುಧಂಗಳಂಧರಿಸಿ, ಅಯುತಭುಜೆಯಾಗಿ, ಸರ್ವ ಮಂಗಳೆಯಾಗಿ ಕುಂಕುಮಾಗರು ಕಸ್ತೂರಿಗಳಿಂದ ಅನುಲಿಪ್ತೆಯಾಗಿ, ಮೊಲ್ಲೆ, ಮಲ್ಲಿಗೆ, ಜಾಜಿ ಸುರಗಿ. ಸುರಹೊನ್ನೆ, ಸಂಪಿಗೆ, ಪುನ್ನಾಗ, ಪಾರಿಜಾತ, ಸುಗಂಧರಾಜ ಮೊದಲಾದ ಪುಷ್ಪಂಗಳಂ ಮುಡಿಯೊಳ್ ಮುಡಿದು ಸರ್ವಾವಯವ ಸುಂದರಿಯಾಗಿ, ಮತ್ತಂ, ಚಂದ್ರಕಿರಂಗಳೇ ಕೇಸರಂಗಳಾಗಿ, ಕಾರ್ಮುಗಿಲಿನ ಮಿಂಚುಗಳೇ ನಖಜಾಲಂಗಳಾಗಿ, ನಕ್ಷತ್ರಪಂಕ್ತಿಗಳೇ ಆಭರಣಂಗಳಾಗಿ ಇರುವಂತೆ ತೋರುವಳಾಗಿ, ಏಕಕಾಲದಲ್ಲಿ ಉದಯಿಸಿದ ಗುರು ಶುಕ್ರರೀರ್ವರ ಚಂದವಂ ತೋರುವ ನೇತ್ರಯುಗ್ಮದ ಕಾಂತಿಯಿಂ ಸಂಧ್ಯಾರಾಗಂಗಳಂ ನಗೆಗೊಳಿಸುವಳಾಗಿ, ಜಿಹ್ವಾಗ್ರದಿಂ ಅನೇಕ ಬ್ರಹ್ಮಾಂಡಗಳಂ ಉದರದಲ್ಲಿರಿಸುವಳಾಗಿ, ವಿರಾಟ್ ಸ್ವರೂಪಿಣಿಯಾಗಿ, ಪರಶಕ್ತಿಯುಂ ವಹಿಸಿರುವಪರಿಂದ ಲೋ ಎಂಬಹಾಗೆ ಬಡವಾಗಿ ಬೊಗ್ಗಿರುವ ನಡುವಿನಿಂದೊಪ್ಪುವಳಾಗಿ, ಅತ್ಯಂತ ಶುಭ್ರಗುಣಾಕರವಾದ ಕೈಲಾಸ ಪರ್ವತವೇ ವಾಹನರೂಪವಂ ತಾಳಬಂದುದೋ ಎಂಬಂತಿರುವ ಸಿಂಹವನ್ನೇರಿ, ಕರುಣಾರಸವೇ ಮೂರ್ತಿಮತ್ತಾಗಿ ಆವಿರ್ಭವಿಸಿದಂತೆ ಇರುತಲಿರುವ ಪರಬ್ರಹ್ಮಸ್ವರೂಪಿಣಿಯಾದ ಆ ಜಗನ್ಮಾತೆಯು ದಕ್ಷಿಣಭಾಗದೊಳ್ ಲಕ್ಷ್ಮೀಸಮೇತನಾಗಿ ಗರುಡಾರೂಢನಾದ ಮಹಾ ವಿಷ್ಣುವು, ವಾಮಭಾಗದೊಳ್ ಪಾರ್ವತೀ ಸಮೇತನಾಗಿ ವೃಷಭಾರೂಢನಾದ ಪರಮೇಶ್ವರನು, ಮುಂಭಾಗದೊಳ್ ಸರಸ್ವತೀ ಸಮೇತನಾಗಿ ಹಂಸಾರೂಢನಾದ ಚತುರ್ಮುಖನು ಬರುತಿರಲು, ಮತ್ತು ಬ್ರಾಹ್ಮೀ, ಮಾಹೇಶ್ವರೀ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿಕಾ ಎಂಬ ಸಪ್ತಮಾತೃಕೆಗಳು, ತಮ್ಮ ತಮ್ಮ ಪರಿವಾರ ಸಮೇತರಾಗಿ ವಾಹನಾರೂಢರಾದ ಶೈಲಪುತ್ರೀ, ಬ್ರಹ್ಮಚಾರಿಣೀ, ಸ್ಕಂದಮಾತಾ, ಕೂಶ್ಮಾಂಡ, ಕಾತ್ಯಾಯನಿ, ರಾತ್ರಿದುರ್ಗಾ, ಗೌರೀದುರ್ಗಾ, ಸಿದ್ಧಿದಾಯಿನೀ, ದುರ್ಗಾ, ಎಂಬ ನವದುರ್ಗಿಯರುಗಳು, ಗಾಯತ್ರಿ, ಸಾವಿತ್ರಿ, ಸರಸ್ವತಿ, ಗಂಗಾ, ಯಮುನಾ, ನರ್ಮದಾ,

ಸಿಂಧು, ಕಾವೇರೀ, ಸರಸ್ವತೀ, ಗೋದಾವರೀ, ಮೊದಲಾದ ಸರಿದ್ದೇವತೆಗಳೂಕೊಡಾ, ಛತ್ರ, ಚಾಮರ, ಸೂರ್ಯಪಾನ, ವ್ಯಜನ, ಧ್ವಜ, ಪತಾಕೆ,ಯೇಟ್ಪಾವಡೆ, ಕಳಶ,ಕನ್ನಡಿ, ವೀಳ್ಯದಸಂಚಿ, ಸಂಬಳಿಗೆ,ಪನ್ನೀರು ಕುಚಾಯಿಗಳು, ಮುಖವಸ್ತ್ರಗಳು, ಕಾಳಂಜಿ ಮೊದಲಾದರಾಜೋಪಚಾರದ್ರವ್ಯಂಗಳಂ ಪಿಡಿದು ಸುತ್ತುವರಿದು ಬರುತ್ತಿರಲು, ವೀರಭದ್ರ ಶಂಭು, ಗಿರೀಶ, ಭೈರವ, ಪಿನಾಕಿ, ಸ್ಥಾಣು, ಭರ್ಗ, ಸದಾಶಿವ, ಕಾಮದಹನ, ಶಿವ,ಹರರೆಂಬ ಏಕಾದಶ ರುದ್ರರುಗಳು ಸ್ತುತಿಪದ್ಯಂಗಳಿಂದ ಪೊಗಳುತ್ತ ಬರುತಿರಲು, ಧಾತಾ, ಅರ್ಯಮಾ, ಮಿತ್ರ, ಅರುಣ, ಇಂದ್ರ, ವಿವಸ್ವಾನ್, ತ್ವಷ್ಟ್ರ, ವಿಷ್ಣು, ಅಂಶುಮಾನ್, ಭಗ,ಪೂಷಾ, ಪರ್ಜನ್ಯರೆಂಬ ದ್ವಾದಶಾದಿತ್ಯರು ಕೈವಾರಿಸಿ ಸ್ತುತಿಗಳಂಪೊಗಳುತ್ತಿರಲು, ಧ್ರುವ, ಅಧ್ವರ, ಸೋಮ, ಆಪ, ಅನಿಲ, ಅನಲ, ಪ್ರತ್ಯೂಷ,ಪ್ರಭಾಸಯೆಂಬಅಷ್ಟವಸುಗಳು ಅವಹ, ವಿವಹ, ಉದ್ವಹ, ಸಂವಹ, ನಿವಹ ಅನುವಹ, ವ್ಯಾವಹರೆಂಬ ಸಪ್ತ ಮರುತ್ತುಗಳು, ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಸ, ವೈವಸ್ವತ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ರುದ್ರಸಾವರ್ಣಿ, ಇಂದ್ರಸಾವರ್ಣಿ, ಸೂರ್ಯಸಾವರ್ಣಿ, ವೇದಸಾವರ್ಣಿ, ಧರ್ಮಸಾವರ್ಣಿಗಳೆಂಬ ಚತುರ್ದಶ ಮನುಗಳು ಮೊದಲಾದವರು ಕೂಡ ಶ್ರೀ ದೇವಿಯ ಪ್ರಭಾವವಂ ಪೊಗಳುತ, ಪುಷ್ಪಾಂಜಲಿಗಳನೆರಚುತ ಬರುತ್ತಿರಲು, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ಈಶಾನರೆಂಬದಿಕ್ಪಾಲಕರು ಸೂರ್ಯ, ಚಂದ್ರ,ಅಂಗಾರಕ, ಬುಧ, ಗುರು, ಶುಕ್ರ, ಶನಿ ರಾಹು, ಕೇತುಗಳೆಂಬ ನವಗ್ರಹಗಳೂ ಕೂಡಾ ಧೂಪಶಲಾಕೆಗಳಂ ಪಿಡಿದು ಉಭಯಪಾರ್ಶ್ವಗಳೊಳ್ ಧೂಪಿಸುತ ಬರುತ್ತಿರಲು, ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ವಸಿಷ್ಠ, ವಾಮದೇವ, ಜಾಬಾಲಿ, ಭೃಗು ಮರೀಚಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಜಮದಗ್ನಿ, ಅಗಸ್ತ್ಯ ದೂರ್ವಾಸ, ವ್ಯಾಸ, ಪರಾಶರ ಮೊದಲಾದ ಮುನಿಮಂಡಲವು ಹಿಂಭಾಗಗದೊಳ್ ಸ್ವಸ್ತಿವಾಚನವಂ ಪೇಳುತ ಬರುತ್ತಿರಲು, ಸನಕ, ಸನಂ

ದನ, ಸನತ್ಕುಮಾರ, ಸನತ್ಸುಜಾತರೆಂಬ ಬ್ರಹ್ಮಮಾನಸ ಪುತ್ರರು ಸಕಲೇಷ್ಟಪ್ರದನಾದ ದೇವಿಯ ಪಾದಯುಗ್ಮವಂ ಧ್ಯಾಸಿಸುತ ಪುರೋಭಾಗದೋಳ್ ಬರುತ್ತಿರಲು, ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಂಗಳು ರೂಪುಗೊಂಡು ವೇದಪಾಠವಂ ಗೈಯುತ ಬರುತಿರಲು, ವಿನಾಯಕ, ಷಣ್ಮುಖ, ವೀರಭದ್ರ ಮೊದಲಾದವರು ನಂದಿ, ಭೃಂಗಿ ಮೊದಲಾದ ಪ್ರಮಥಗಣಂಗಳೊಡನೆ ಸಾಲಾಗಿ ಬರುತಿರಲು, ಅಸಿತಾಂಗ, ರುರು, ಚಂಡ; ಕ್ರೋಧ, ಉನ್ಮತ್ತ, ಭೀಷಣ, ಕಪಾಲ, ಸಂಹಾರರೆಂಬ ಅಷ್ಟಭೈರವರು ನವರತ್ನದ ಹಿಡಿಗಳಿಂದ ಲಂಕೃತಂಗಳಾದ ಮಿಂಚುಗಳಂತೆ ಪೊಳೆಯುತಲಿರುವ ಬೆತ್ತದ ಛಡಿಗಳಂ ಪಾಣಿಗಳೊಳ ಪಿಡಿದು ಮಾರ್ಗವಂ ಬಿಡಿಸುತ ಬರುತ್ತಿರಲು, ಮತ್ತೆ ದಿವ್ಯಯೋಗಿನೀ, ಮಹಾಯೋಗಿನೀ, ಸಿದ್ಧಯೋಗಿನೀ, ಮಾಹೇಶ್ವರೀ, ಶಾಕಿನೀ, ಡಾಕಿನೀ, ಕಾಳರಾತ್ರಿ, ನಿಶಾಚರೀ, ಕಂಕಾಳೀ, ರೌದ್ರೀ, ವೇತಾಳೀ, ಹುಂಕಾರೀ, ಭುವನೇಶ್ವರೀ, ಊರ್ಧ್ವಕೇಶೀ. ವಿರೂಪಾಕ್ಷೀ, ಶುಷ್ಕಾಂಗೀ, ನರಭೋಜನೀ, ಫಟ್ಕಾರಿಣೀ, ವೀರಭದ್ರೀ, ಧೂಮ್ರಾಕ್ಷೀ, ಕಲಹಪ್ರಿಯಾ, ರಕ್ತಾಕ್ಷೀ, ರಾಕ್ಷಸೀ, ಘೋರಾ, ವಿಶ್ವರೂಪಾ, ಭಯಂಕರೀ, ಕಾಮಾಕ್ಷೀ, ಭೀಷಣಾ, ಉಗ್ರಾ, ತ್ರಿಪುರಾಂತಕಾ ವೀರಕೌಮಾರಿಕಾ, ಮುಂಡಧಾರಿಣೀ, ಭೈರವೀ, ಹಸ್ತಿನೀ, ಕ್ರೋಧಾ ದುರ್ಮುಖೀ, ಖಟ್ವಾಂಗಿನೀ, ದೀರ್ಘಲಂಬೋಷ್ಠೀ, ಮಾಲತೀ, ತಂತ್ರಯೋಗಿನೀ, ಅಸಿನೀ, ಅಸ್ತ್ರಿಣೀ, ಚಾಪಿನೀ, ಶುಭ್ರಕ್ರಿಯಾ ದೂತೀ, ಕರಾಳಿನೀ, ಶಂಖಿನೀ, ಪದ್ಮಿನೀ, ಕ್ಷೀರಾ, ಅಸಂಘಾ, ಪ್ರಹರಿಣೀ, ಕಾರ್ಮುಕೀ, ಲೋಲುಕಾ, ಕಾಕದೃಷ್ಟಿ, ಅಧೋಮುಖೀ, ಧೂರ್ಜಟೀ, ಮಾಲಿನೀ, ಕಪಾಲಿನೀ, ವಿಷಭಂಜನೀ, ಪಿಶಾಚನೀ, ಚಕ್ರಿಣೀ, ಬಾಣಿನೀ, ಗ್ರಹಕಂಕಾಳೀ, ಕಂಟಕೀ, ತಾಟಕೀಯರೆಂಬ ಚತುಷ್ಷಷ್ಟಿ ಯೋಗಿನಿಯರುಗಳು ತಮ್ಮ ತಮ್ಮ ಪರಿವಾರಂಗಳೊಡನೆ ಅನೇಕ ಬಿರುದಾವಳಿಗಳಂ ಪಿಡಿದು, ಸಾಲುವರಿದು ಉಭಯಪಾರ್ಶ್ವಗಳೋಳ್ ನಡೆಯುತ ಬರುತ್ತಿರಲು, ತುಂಬುರು, ನಾರದ ಮೊದಲಾದ

ದೇವಋಷಿಗಳು, ದೇವಗಾಯಕರಾದ ಹಾಹಾ, ಹೂಹೂ, ಚಿತ್ರಸೇನ, ವಿಶ್ವಾವಸು ಮೊದಲಾದ ಗಂಧರ್ವರೊಡನೆ ಕಿವಿಗಳಿಗಿಂಪಾಗಿ ಗಾನವಂಗೈಯುತ್ತಿರಲು ಯಕ್ಷ, ಸಿದ್ಧ, ವಿದ್ಯಾಧರ ಗರುಡ ಕಿನ್ನರ, ಕಿಂಪುರುಷ ನಾಗ ಮೊದಲಾದವರುಗಳು ಪುಷ್ಪಫಲತಾಂಬೂಲ ಮೊದಲಾದ ಕೈಗಾಣಿಕೆಗಳಂ ಪಿಡಿದುಬರುತ್ತಿರಲು ರಂಭಾ ಊರ್ವಶೀ, ಮೇನಕಾ, ಘೃತಾಚೀ ತಿಲೋತ್ತಮಾ, ಹರಿಣೀ ಮೊದಲಾದ ಅಪ್ಸರಸ್ತ್ರೀಯರ ಸಮುದಾಯಂಗಳು ಸಾಲುವರಿದು ಪುರೋಭಾಗದಲ್ಲಿ ಸಂಗೀತದೊಡನೆ ಮನೋಹರವಾಗಿ ನರ್ತನವಂಗೈಯುತ ಬರುತ್ತಿರಲು ಮಿಕ್ಕ ದೇವತಾಸ್ತ್ರೀರುಗಳು ಮುತ್ತಿನ ಸೇಸೆಗಳೊಡನೆ ಕಲ್ಪವೃಕ್ಷಂಗಳ ಪುಷ್ಪವೃಷ್ಟಿಯಂ ಕರೆಯುತ್ತಿರಲು, ಇಂತುಮಲ್ಲದೆ ದೇವಸಮೂಹವೆಲ್ಲವೂ ವೀಣಾವೇಣು ಮೃದಂಗ ಕಾಹಳೆ ಭೇರಿ ಡಿಂಡಿಮ ನಿಸ್ಸಾಣ ಢಕ್ಕಾ, ಪಣವಾ ಜರ್ಝರ ಝಲ್ಲರೀ ಮೊದಲಾದ ನಾನಾಪರಿಯಾದ ವಾದ್ಯಂಗಳಂ ಬ್ರಹ್ಮಾಂಡ ಕಟಾಹ ಭೇದಿಸುವಂತೆ ಧ್ವನಿಗೊಳಿಸುತ ಬರುತಿರಲು ಮತ್ತೂ ಜಯಲಕ್ಷ್ಮೀ, ಧೈರ್ಯಲಕ್ಷ್ಮೀ, ಧಾನ್ಯಲಕ್ಷ್ಮೀ, ವಿದ್ಯಾಲಕ್ಷ್ಮೀ, ಶೌರ್ಯಲಕ್ಷ್ಮೀ, ಕೀರ್ತಿಲಕ್ಷ್ಮೀ, ರಾಜ್ಯಲಕ್ಷ್ಮೀ, ಸಿದ್ಧಿಲಕ್ಷ್ಮಿಯರೆಂಬ ಅಷ್ಟಮಹಾಲಕ್ಷ್ಮಿಯರು ಅರಸಿನ ಕುಂಕುಮ ಗಂಧಮೊದಲಾದ ಅಷ್ಟಮಂಗಳ ದ್ರವ್ಯಂಗಳಂಪಿಡಿದು ಭಕ್ತ ಜನಂಗಳಿಗೆ ಶುಭಸೂಚನೆಯಂ ಮಾಡುವರಂತೆ ಸಾವಧಾನದಿಂ ಪುರೋಭಾಗದೊಳ್ ಬರುತ್ತಿರಲು ಈ ಪರಿಯಾಗಿ ಅಸಂಖ್ಯಾತಂಗಳಾದ ಅನೇಕ ದೇವಸಮೂಹಂಗಳಿಂ ಸೇವ್ಯಮಾನಳಾಗಿ ಸೌಮ್ಯಸ್ವರೂಪದಿಂ ಪರಮಭಕ್ತನಾದ ಸುಗಂಧರಾಜಕುಮಾರನ ಪುರೋಭಾಗದೊಳ್ ಪ್ರತ್ಯಕ್ಷಮಾಗಿ ಬಂದುನಿಲ್ಲಲು, ಆ ಸಮಯದೊಳ್ ಸುಗಂಧರಾಜಕುಮಾರನು ಇಂತಿರುವ ಚಿದಾನಂದಸ್ವರೂಪಿಣಿಯಾದ ಸರ್ವಮಂಗಳೆಯಾದ ಜಗಜ್ಜನನಿಯಂಕಂಡು ಭಯಭಕ್ತಿವಿನಯಪೂರ್ವಕವಾಗಿ ಸಾಷ್ಟಾಂಗಪ್ರಣಾಮಮಂ ಗೈದು ಬದ್ಧಾಂಜಲಿಪುಟನಾಗಿನಿಂತು ಗದ್ಗದಸ್ವರದಿಂದ ಶ್ರುತಿರೂಪಂಗಳಾದ ಸ್ತೋತ್ರಂಗಳಂಗೈದು, ಮಾನಸಪೂಜೆಯಂಗೈದು ಕೈಮುಗಿದು ನಿಂತಿರಲು ಕರು

ಣಾಶಾಲಿನಿಯಾದ ಶ್ರೀ ಚಾಮುಂಡೇಶ್ವರಿಯು ಸುಗಂಧರಾಜನಂ ಕಂಡು ಎಲೈ ಕುಮಾರನೇ ನೀನುಮಾಡಿದ ತಪಸ್ಸಿನಿಂದಲೂ ಸ್ತುತಿಗಳಿಂದಲೂ ಮಾನಸಪೂಜೆಯಿಂದಲೂ ನಾನು ಪ್ರಸನ್ನಳಾದೆನು. ನಿನಗೆ ಬೇಕಾದ ವರಗಳಂ ಶೀಘ್ರದಿಂ ಅನುಗ್ರಹಿಸುವೆನೆಂದು ಆಜ್ಞಾಪಿಸಲು ಸುಗಂಧ ರಾಜನು ಆ ನುಡಿಯಂಕೇಳಿ ಆನಂದಭರಿತನಾಗಿ ಎಲೈ ಜಗನ್ಮಾತೆಯೇ, ನಿನ್ನ ಕಟಾಕ್ಷದಿಂ ಪ್ರತ್ಯಕ್ಷವಾದ ನಿನ್ನ ಸೌಮ್ಯ ಸ್ವರೂಪವನ್ನೋ ಡಿ ಧನ್ಯನಾದೆನು ಮತ್ತೂ ನಿನ್ನ ವಿರಾಡ್ರೂಪ ಲೀಲಾರೂಪಗಳ ದರ್ಶ ನಂಗೈಯಬೇಕೆಂದು ಅಪೇಕ್ಷಿಸುವದಲ್ಲದೆ ಮತ್ತೊಂದು ಅಭಿಲಾಷೆಯಿಲ್ಲ ವೆಂದು ಬಿನ್ನೈಸಲು ಲೋಕಮಾತೆಯು ಸುಗಂಧರಾಜನಮಾತಂ ಕೇಳಿ, ದಿವ್ಯದೃಷ್ಟಿಯಂ ಕೊಟ್ಟು ತನ್ನ ಎರಡುರೂಪಗಳಂ ತೋರಲು ಕುಮಾ ರನುದಿವ್ಯದೃಷ್ಟಿಯಿಂದ ಆ ರೂಪಗಳಂ ಕಂಡಪರಿಯೆಂತೆಂದರೆ ಪಾತಾಳ ವೇಪಾದಂಗಳಾಗಿ ತಳಾತಳಲೋಕಂಗಳೇ ಹರಡುಗಳಾಗಿ ರಸಾತಲ ಮ ಹಾತಲಂಗಳೇ ಜಂಘೆ ಗಳಾಗಿಸುತಳವೇ ಮೊಣಕಾಲುಗಳಾಗಿತಳ ವಿತಳ ಲೋಕಂಗಳೇ ತೊಡೆಗಳಾಗಿ ಭೂಲೋಕವೇ ನಿತಂಬಂಗಳಾಗಿ ಭುವ ರ್ಲೋಕವೇ ಕಟಿಪ್ರದೇಶವಾಗಿ ಸುವರ್ಲೋಕವೇ ಉದರವಾಗಿ ಮ ಹೋಲೋಕವೇ ವಕ್ಷಸ್ಥಲವಾಗಿ ಜನೋಲೋಕವೇ ಭುಜಗಳಾಗಿ ತ ಪೋಲೋಕವೇ ಕಂಠವಾಗಿ ಸತ್ಯಲೋಕವೇ ಶಿರಸ್ಸಾಗಿ ದಿಕ್ಕುಗಳೇ ಕರ್ಣಗಳಾಗಿ ವಾಯುವೇ ತ್ವಕ್ಕಾಗಿ ಸೂರ್ಯಚಂದ್ರರೇ ನೇತ್ರಂಗಳಾಗಿ ವರುಣನೇ ಜಿಹ್ವೆಯಾಗಿ ಅಶ್ವಿನೀ ದೇವತೆಗಳೇ ನಾಸಿಕಗಳಾಗಿ ಅಗ್ನಿಯೆ ಮುಖವಾಗಿ ಹರಿಹರಬ್ರಹ್ಮ ನೊದಲಾಗಿ ದೇವ ದಾನವ ಮನುಷ್ಯ ತಿರ್ಯಕ್ ಸ್ಥಾವರಗಳೆಂಬ ಚರಾಚರ ಪ್ರಪಂಚಾತ್ಮಕವಾದ ಬ್ರಹ್ಮಾಂಡ ತಂಡಂಗಳಂ ಆಮೂಲಾಗ್ರವು ಫಲನಿಬಿಡವಾದ ಉದುಂಬರ ವೃಕ್ಷದಂತೆ ಅವಯವ ರೋಮಕೂಪಂಗಳಲ್ಲಿ ಇಂಬಿಟ್ಟಿರುವ ಸಕಲ ಜಗತ್ಸೃಷ್ಟಿ ಸ್ಥಿತಿ ಸಂಹಾರಕಾರಿಣಿಯಾದ ಪರಬ್ರಹ್ಮಸ್ವರೂಪಿಣಿಯಾದ ಜಗಜ್ಜನ ನಿಯಾದ ನಿರ್ವ್ಯಾಜ ಕರುಣಾಶಾಲಿನಿಯಾದ ಶ್ರೀ ಚಾಮುಂಡೇಶ್ವರಿಯು ಅತ್ಯದ್ಭುತವಾದ ವಿರಾಡ್ರೂಪದರ್ಶನವಂ ಗೈದು ಬಳಿಕ ಭಕ್ತಾನುಗ್ರ

ಯುಧಂಗಳಂ ಧರಿಸಿ ಪುಷ್ಪಮಾಲಾಲಂಕೃತನಾಗಿ ರತ್ನಾಭರಣಂಗಳಿಂ ಶೋಭಿತನಾಗಿ ಶುಕ್ಲ ಶ್ರೀ ಶುಚಿ ಶ್ರೀಗಳೆಂಬ ಈರ್ವರು ಪತ್ನಿಯರುಗಳಿಂದೊಡಗೂಡಿ ತ್ರಿಕೋಣ ಪಂಚಕೋಣ ಅಷ್ಟದಳ ಷೋಡಶದಳ ದಶದಳ ಯುಗ್ಮಚತುರಶ್ರವೆಂಬ ಚಕ್ರಾಸನದೊಳ್ ಕುಳಿತು ಜ್ಯೇಷ್ಠ ಶುಕ್ಲಪ್ರತಿಪದಾದಿಯಾಗಿ ಆಷಾಢಬಹುಳ ಅಮಾವಾಸ್ಯಪರ್ಯಂತವು ಅರವತ್ತು ತಿಥಿ ದೇವತೆಗಳಿಂದಲೂ ಮತ್ತು ತನ್ನ ಪರಿವಾರಗಳಿಂದಲು ಕೂಡಿ ಜಗದೀಶ್ವರಿಯ ಪಾದಸರೋಜಧ್ಯಾನವಂ ಗೈಯುತ್ತ ಕಾದಿರುವನು. [೩]

ನಾಲ್ಕನೇ ಪ್ರಾಕಾರವು ಸೀಸದಿಂ ನಿರ್ಮಿತವಾಗಿ ಚತುರಶ್ರವಾಗಿರುವದು ಈ ಪ್ರಾಕಾರಕ್ಕು ಮುಂದಣ ಪ್ರಾಕಾರಕ್ಕು ಮಧ್ಯದೊಳ್ ಹರಿಚಂದನವನವಿರುವದು ಆ ವನದೊಳ್ ವರ್ಷಋತುವು ಹೊಂಬಣ್ಣದಂತೆ ನೇತ್ರಗಳುಳ್ಳವನಾಗಿ ಮೇಘವಾಹನನಾಗಿ ಅಟ್ಟಹಾಸಯುಕ್ತನಾಗಿ ಹಸ್ತದೊಳ್ ರತ್ನಧನುವಂ ಧರಿಸಿ ಸರ್ವಾಭರಣ ಭೂಷಿತನಾಗಿ ಪುಷ್ಪಾಲಂಕೃತನಾಗಿ ತ್ರಿಕೋಣ ಪಂಚಕೋಣ ಅಷ್ಟದಳ ಷೋಡಶದಳ ದಶದಳ ಯುಗ್ಮಚತುರಶ್ರವಾದ ಚಕ್ರಾಸನದೊಳ್ ನಭಶ್ರೀ ನಭಸ್ಯ ಶ್ರೀ ಸರಸಾ ಸಸ್ಯಮಾಲಿನೀ ಅಂಬಾ ಅಮಲಾ ನಿರಕ್ತಿ ಭೂಯಂತೀ ಮೇಘಯಂತೀ ವರ್ಷಯಂತೀ ಚುಣಿಕಾ ವಾರಿದಾರಾ ಎಂಬ ಹನ್ನೆರಡುಜನ ಪತ್ನಿಯರುಗಳಿಂದ ಯುಕ್ತನಾಗಿ ಶ್ರಾವಣಶುಕ್ಲ ಪ್ರತಿಪದಾದಿ ಭಾದ್ರಪದ ಬಹುಳ ಅಮಾವಾಸ್ಯಾ ಪರಿಯಂತವು ಅರುವತ್ತು ತಿಥಿದೇವತೆಗಳೊಡಗೂಡಿ ಮತ್ತು ನಿಜಪರಿವಾರಸಹಿತನಾಗಿ ಪರಮೇಶ್ವರಿಯ ಪಾದಪದ್ಮವಂ ಧ್ಯಾನಿಸುತ ಕಾದಿರುವನು. [೪]

ಐದನೇ ಪ್ರಾಕಾರವು ಹಿತ್ತಾಳೆಯಿಂದ ನಿರ್ಮಿತವಾಗಿ ಚತುರಶ್ರವಾಗಿರುವದು. ಈ ಪ್ರಾಕಾರಕ್ಕೆ ಇದರ ಮುಂದಣ ಪ್ರಾಕಾರಕ್ಕೂ ಮಧ್ಯಭಾಗದೊಳ್ ಮಂದಾರವೃಕ್ಷಗಳ ತೋಪು ಇರುವದು. ಅಲ್ಲಿ ಶರದೃತುವು ಪುಷ್ಪಾಯುಧನಾಗಿ ಸರ್ವಾಭರಣ ಭೂಷಿತನಾಗಿ ಪುಷ್ಪಮಾಲೆಯಂ ಧರಿಸಿ ತ್ರಿಕೋಣ ಪಂಚಕೋಣ ಅಷ್ಟದಳ ಷೋಡಶದಳ

ದಶದಳ ಯುಗ್ಮಚತುರಶ್ರವಾಗಿ ಇರುವ ಚಕ್ರಾಸನದೊಳ್ ಇಷ
ಶ್ರೀ ಊರ್ಜ ಶ್ರೀರೆಂಬ ಈರ್ವರು ಪತ್ನೀಯರಿಂ ಸಮೇತನಾಗಿ ಆಶ್ವ
ಯುಜ ಶುಕ್ಲ ಪ್ರತಿಪದಾದಿ ಕಾರ್ತೀಕಬಹುಳಅಮಾವಾಸ್ಯಾ ಪರ್ಯಂ
ತರವು ಅರವತ್ತು ತಿಥಿದೇವತೆಗಳೊಡಗೂಡಿ ಮತ್ತು ನಿಜಪರಿವಾರ
ಸಹಿತನಾಗಿ ಜಗದೀಶ್ವರಿಯ ಪಾದಕಮಲವಂ ಧ್ಯಾನಿಸುತ ಕಾದಿರುವನು.

ಆರನೇ ಪ್ರಾಕಾರವು ಪಂಚಲೋಹದಿಂನಿರ್ಮಿತವಾಗಿ ಚತುರಶ್ರ
ವಾಗಿರುವದು ಈ ಪ್ರಾಕಾರಕ್ಕೂ ಮುಂದಣ ಪ್ರಾಕಾರಕ್ಕು ಮಧ್ಯದೊ
ಳ್ ಪಾರಿಜಾತ ವೃಕ್ಷಗಳ ಸಾಲುವನಂಗಳಿರುವವು. ಅಲ್ಲಿ ಹೇಮಂತ
ಋತುವು ದುಕೂಲವಂಧರಿಸಿ ಕೃಷ್ಣಾಗರುಗಂಧದಿಂ ಲಿಪ್ತನಾಗಿ ಪ್ರೊ
ಮಾಲೆಯಂಧರಿಸಿ, ದಿವ್ಯಾಭರಣ ಭೂಷಿತನಾಗಿ ಪುಷ್ಪಾಯುಧವಂಧರಿಸಿ
ತ್ರಿಕೋಣ ಪಂಚಕೋಣ ಅಷ್ಟದಳ ಷೋಡಶದಳ ದಶದಳ ಯುಗ್ಮ
ಚತುರಶ್ರವಾದ ಚಕ್ರಾಸನದೊಳ್ ಸಹ ಶ್ರೀ ಸಹಸ್ಯ ಶ್ರೀರೆಂಬ
ಈರ್ವರು ಪತ್ನೀಯರೊಡನೆ ಮಾರ್ಗಶೀರ್ಷ ಶುಕ್ಲ ಪ್ರತಿಪದಾದಿ ಪೌ
ಷಬಹುಳ ಅಮಾವಾಸ್ಯಾ ಪರಿಯಂತವು ಅರವತ್ತು ತಿಥಿದೇವತೆಗಳೊ
ಡಗೂಡಿ ಸಪರಿವಾರನಾಗಿ ತ್ರೈಲೋಕ್ಯಮಾತೆಯ ಪಾದಸರೋರುಹಂ
ಗಳಂ ಧ್ಯಾನಿಸುತ ಕಾದಿರುವನು. [೬]

ಏಳನೇ ಪ್ರಾಕಾರವು ರಜತದಿಂ ನಿರ್ಮಿತವಾಗಿ ಚತುರಶ್ರವಾಗಿ
ರುವದು. ಈ ಪ್ರಾಕಾರಕ್ಕೂ ಮುಂದಣಪ್ರಾಕಾರಕ್ಕು ಮಧ್ಯದೊಳ್
ಕದಂಬವೃಕ್ಷಗಳ ತೋಪುಇರುವದು ಅಲ್ಲಿ ಶಿಶಿರಋತುವು ಪುಷ್ಪವ
ಸ್ತ್ರಧಾರಿಯಾಗಿ ಶ್ರೀಗಂಧದಿಂ ಲಿಪ್ತನಾಗಿ ಪ್ರೊಮಾಲೆಯಂ ಧರಿಸಿ ಪು
ಷ್ಪಾಯುಧನಾಗಿ ಪುಷ್ಪಾಭರಣಂಗಳಿಂದೊಪ್ಪಿ ತ್ರಿಕೋಣ ಪಂಚಕೋ
ಣ ಅಷ್ಟದಳ ಷೋಡಶದಳ ದಶದಳ ಯುಗ್ಮಚತುರಶ್ರವಾದ ಚಕ್ರಾ
ಸನದೊಳ್ ತಪ ಶ್ರೀ ತಪಸ್ಯ ಶ್ರೀರೆಂಬ ಈರ್ವರು ಪತ್ನೀಯರಿಂದೊ
ಡಗೂಡಿ ಪುಷ್ಪಚ್ಛತ್ರವಂ ಧರಿಸಿ ಮಾಘಶುಕ್ಲಪ್ರತಿಪದಾದಿ ಫಾಲ್ಗುಣ
ಬಹುಳ ಅಮಾವಾಸ್ಯ ಪರ್ಯಂತವು ಅರವತ್ತು ತಿಥಿದೇವತೆಗಳೊಡ
ಗೂಡಿ ನಿಜಪರಿವಾರಸಮೇತನಾಗಿ ಜಗದಂಬಾಪಾದಪದ್ಮವು ಧ್ಯಾನಿಸು

ತ ಕಾದು ಇರುವವನು. ಮತ್ತೂ ಅಲ್ಲಿ ಮಾತೃಶ್ರೀಯೆಂಬ ಲಘು ಶ್ಯಾ ಮಳಾ ಗೃಹಂಗಳು ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಇರುವವು. [೭]

ಎಂಟನೇ ಪ್ರಾಕಾರವು ಸುವರ್ಣದಿಂನಿರ್ಮಿತವಾಗಿ ಚತುರಶ್ರವಾ ಗಿರುವದು ಈ ಪ್ರಾಕಾರಕ್ಕು ಮುಂದಣ ಪ್ರಾಕಾರಕ್ಕು ಮಧ್ಯದೋಳ್ ಕಲ್ಪವೃಕ್ಷಂಗಳ ತೋಪು ಇರುವದು. ಅಲ್ಲಿ ಸಿದ್ಧಗಣ ಕೋಟಿಗಳು ಸೃಷ್ಟಿಕರ್ತ್ರಿಯ ಪಾದ ಪಂಕೇರುಹವಂಧ್ಯಾನಿಸುತಕಾದಿರುವರು. [೮]

ಒಂಭತ್ತನೇ ಪ್ರಾಕಾರವು ಪುಷ್ಯರಾಗರತ್ನಗಳಿಂ ನಿರ್ಮಿತವಾ ಗಿ ಚತುರಶ್ರವಾಗಿರುವದು, ಈ ಪ್ರಾಕಾರಕ್ಕು ಮುಂದಣಪ್ರಾಕಾರ ಕ್ಕು ಮಧ್ಯದೋಳ್ ಕಲ್ಪವೃಕ್ಷಗಳ ತೋಪು ಇರುವದು. ಅಲ್ಲಿಚಾರ ಣಗಣಕೋಟಿಗಳು ಜಗದೀಶ್ವರಿಯ ಪಾದಾಂಭೋರುಹ ಪ್ರಭಾವವಂ ಅನೇಕಪರಿಯಾಗಿ ಹೊಗಳುತ್ತ ಕಾದಿರುವರು. [೯]

ಹತ್ತನೇಪ್ರಾಕಾರವು ಪದ್ಮರಾಗರತ್ನಗಳಿಂ ನಿರ್ಮಿತವಾಗಿ ಚತು ರಶ್ರವಾಗಿರುವದು ಈಪ್ರಾಕಾರಕ್ಕು ಮುಂದಣಪ್ರಾಕಾರಕ್ಕು ಮಧ್ಯದೊ ಳ್ ಕಲ್ಪವೃಕ್ಷಗಳ ಪಂಕ್ತಿಗಳಿರುವವು. ಅಲ್ಲಿ ಕಾಲಭೈರವಮೊದಲಾ ದ ಅಷ್ಟಭೈರವರುಗಳು ಸಿದ್ಧಯೋಗಿನಿ ಮೊದಲಾದ ಚತುಷ್ಷಷ್ಟಿ ಕೋಟಿಯೋಗಿನಿಗಣಂಗಳು ಚಿತ್ರರಥ ವಿಶ್ವಾವಸುಮೊದಲಾದಗಂಧರ್ವ ಗಣಕೋಟಿಗಳು ಕೂಡೆ ತಮ್ಮ ತಮ್ಮ ಆಯುಧಂಗಳಂಧರಿಸಿ ನಿಜಪರಿ ವಾರಸಮೇತರಾಗಿ ಅಪ್ಸರಸ್ತ್ರೀಯರುಗಳ ಗಾನಾನುಸಾರವಾಗಿ ನರ್ತ ನವಂಮಾಡುತ ಶ್ರೀದೇವಿಯ ಆಜ್ಞಾನುಸಾರವಾಗಿ ಕಾದಿರುವರು. [೧೦]

ಹನ್ನೊಂದನೇ ಪ್ರಾಕಾರವು ಗೋಮೇಧಿಕ ರತ್ನಗಳಿಂ ನಿರ್ಮಿತ ವಾಗಿ ಚತುರಶ್ರವಾಗಿರುವದು. ಈ ಪ್ರಾಕಾರಕ್ಕು ಮುಂದಣ ಪ್ರಾಕಾ ರಕ್ಕು ಮಧ್ಯದೋಳ್ ವಜ್ರಾ ಎಂಬ ನದಿ ಇರುವದು ಆನದಿಯ ಉಭ ಯತೀರಗಳಲ್ಲಿಯು ಕಲ್ಪವೃಕ್ಷಗಳ ತೋಪು ಇರುವದು ಅಲ್ಲಿ ಕಿನ್ನರ ಕಿಂಪುರುಷ ವಿದ್ಯಾಧರ ಗರುಡಗಣಕೋಟಿಗಳು ಜಗನ್ಮಾತೆಯ ಪಾದ ಪದ್ಮಂಗಳಂ ಧ್ಯಾನಿಸುತ ಕಾದಿರುವರು, [೧೧]

ಹನ್ನೆರಡನೇ ಪ್ರಾಕಾರವು ವಜ್ರಮಣಿಗಳಿಂ ನಿರ್ಮಿತವಾಗಿ ಚ

ತುರಶ್ರವಾಗಿ ಇರುವದು. ಈ ಪ್ರಾಕಾರಕ್ಕೂ ಮುಂದಣ ಪ್ರಾಕಾರಕ್ಕೂ ಮಧ್ಯಭಾಗದೋಳ್ ಕಲ್ಪವೃಕ್ಷಗಳ ಉಪವನಂಗಳಿರುವವು ಅಲ್ಲಿ ಶೇಷ, ಕಾರ್ಕೋಟಕ, ಮಹಾಪದ್ಮ, ವಾಸುಕಿ, ಶಂಖಪಾಲ, ತಕ್ಷಕ, ಪದ್ಮ, ಗುಳಿಕ, ಶಂಖ, ಕುಂಡ, ಮಹಾದಂತಮೊದಲಾದ ನಾಗಾಧಿಪತಿಗಳು ತಮ್ಮತಮ್ಮ ಸ್ತ್ರೀಪುತ್ರಾದಿ ಪರಿವಾರಸಮೇತರಾಗಿ ಮತ್ತೂ ಬಲಿಚಕ್ರವರ್ತಿಮೊದಲಾದ ಧರ್ಮನಿರತರಾದ ದೈತ್ಯಗಣಕೋಟಿಗಳು ಕೂಡಾ ಪರಮೇಶ್ವರಿಯ ಚರಣಾರವಿಂದವಂ ಸರ್ವದಾ ಧ್ಯಾನಿಸುತ್ತಕಾದಿರುವರು. [೧೨]

ಹದಿಮೂರನೇ ಪ್ರಾಕಾರವು ವೈಡೂರ್ಯ ರತ್ನಗಳಿಂ ನಿರ್ಮಿತವಾಗಿ ಚತುರಶ್ರವಾಗಿರುವದು ಈ ಪ್ರಾಕಾರಕ್ಕೂ ಮುಂದಣಪ್ರಾಕಾರಕ್ಕೂ ಮಧ್ಯದೋಳ್ ಕಲ್ಪವೃಕ್ಷಸಮೂಹವು ಇರುವದು. ಭೂಲೋಕದೊಳ್ ಲಲಿತೋಪಾಸನೆಯಂಮಾಡಿ ಸಿದ್ಧಿಪಡೆದ ಮನುಷ್ಯರು ಸಾಲೋಕ್ಯಮುಕ್ತಿಸ್ಥಾನವಾದ ಅಲ್ಲಿ ಪುತ್ರ ಕಳತ್ರಾದಿ ಸಹಿತರಾಗಿ ಪರದೇವತೆಯ ಪಾದನಳಿನವಂ ಧ್ಯಾನಿಸುತ ಕಾದಿರುವರು. [೧೩]

ಹದಿನಾಲ್ಕನೇ ಪ್ರಾಕಾರವು ಇಂದ್ರನೀಲಮಣಿಗಳಿಂ ನಿರ್ಮಿತವಾಗಿ ಚತುರಶ್ರವಾಗಿರುವದು ಈ ಪ್ರಾಕಾರಕ್ಕೂ ಮುಂದಣಪ್ರಾಕಾರಕ್ಕೂ ಮಧ್ಯದೋಳ್ ತಾಮ್ರಪರ್ಣಿ, ಮಹಾಪರ್ಣಿ, ಸದಾಮುಕ್ತಾಯೆಂಬ ನದಿಗಳು ಇರುವವು ಈ ನದಿಗಳ ಉಭಯಪಾರ್ಶ್ವಗಳಲ್ಲಿಯೂ ಕಲ್ಪವೃಕ್ಷಂಗಳಿರುವವು ಇನ್ನೂ ಅನೇಕ ನದಿಗಳು ಪ್ರವಹಿಸುವವು ಅಲ್ಲಿ ದೇವಲೋಕಸ್ಥ ದೇವತೆಗಳು, ದಿಕ್ಪಾಲಕರು, ಶತರುದ್ರರೂ ಕೂಡಾ ತಮ್ಮ ತಮ್ಮ ದಿಕ್ಕುಗಳಲ್ಲಿ ತಮ್ಮ ತಮ್ಮ ಪಟ್ಟಣಂಗಳಲ್ಲಿ ಪರಿವಾರಸಮೇತರಾಗಿ ಪರಶಕ್ತಿಯ ಪಾದಪಲ್ಲವವಂ ಧ್ಯಾನಿಸುತಕಾದಿರುವರು. [೧೪]

ಹದಿನೈದನೇ ಪ್ರಾಕಾರವು ಮುತ್ತುಗಳಿಂ ನಿರ್ಮಿತವಾಗಿ ಚತುರಶ್ರವಾಗಿರುವದು ಈ ಪ್ರಾಕಾರಕ್ಕೂ ಮುಂದಣಪ್ರಾಕಾರಕ್ಕೂ ಮಧ್ಯದೊಳ್ ಸುವರ್ಣತಾಳೀವನಗಳಿರುವವು ಅಲ್ಲಿ ದಂಡಿನೀ ದೇವತಾಗೃಹಗಳು ನಾಲ್ಕುದಿಕ್ಕಿನಲ್ಲೂ ನಾಲ್ಕು ಇರುವವು ಮತ್ತೂ ಅಲ್ಲಿ ಚಿಂತಾಮಣಿರೂ

ಪನಾದ ಶ್ರೀ ಚಕ್ರದ ಆವರಣದ ಅಂತಸ್ತುಗಳಲ್ಲಿ ಎಷ್ಟು ದೇವತೆಗಳ ಮನೆಗಳಿರುವವೋ ಅಷ್ಟು ಇರುವವು ಮತ್ತು ದಂಡಿನೀಗೃಹದ ನಾಲ್ಕು ದಿಕ್ಕುಗಳಲ್ಲಿಯೂ ಉಮ್ಮತ್ತ ಭೈರವೀ, ಸ್ವಪ್ನೇಶೀ, ತಿರಸ್ಕರಿಣೀ, ಕಿರೀಟಿನೀ ಎಂಬ ದೇವತೆಗಳ ಗೃಹಗಳಿರುವವು ಇವರು ಪರದೇವತೆಗೆ ಪ್ರೀತಿಪಾತ್ರರಾಗಿ ಆ ಪರಶಕ್ತಿಯ ಪಾದಕಮಲವಂ ಧ್ಯಾನಿಸುತ ಅಲ್ಲಿಯೇ ವಾಸಸ್ಥಾನವಂ ಮಾಡಿಕೊಂಡು ಕಾದಿರುವರು. [೧೫]

ಹದಿನಾರನೇ ಪ್ರಾಕಾರವು ವಜ್ರಗಳಿಂ ನಿರ್ಮಿತವಾಗಿ ಚತುರಶ್ರವಾಗಿರುವದು. ಈ ಪ್ರಾಕಾರಕ್ಕೆ ಮುಂದಣ ಪ್ರಾಕಾರಕ್ಕೆ ಮಧ್ಯೆ ಕಲ್ಪವೃಕ್ಷವಾಟಿಯು ಇರುವದು ಅಲ್ಲಿ ಚತುರ್ಮುಖಬ್ರಹ್ಮನು ಮರೀಚ್ಯಾದಿ ಸಪ್ತಋಷಿಗಳಿಂದೊಡಗೂಡಿ ಚತುರ್ದಶ ವಿದ್ಯಾಭಿಮಾನಿದೇವತೆಗಳಿಂದ ಯುಕ್ತನಾಗಿ ಮತ್ತು ಉಪವಿದ್ಯಾಭಿಮಾನಿದೇವತಾಸಹಸ್ರದಿಂದಲೂ ಚತುಷ್ಷಷ್ಟಿಕಲೆಗಳಿಂದಲೂ ಪರಿವೃತನಾಗಿ ನಿಜಪರಿವಾರಸಮೇತನಾಗಿ ಪರಂಜ್ಯೋತಿಸ್ವರೂಪಿಣಿಯ ಪಾದಾಂಭೋರುಹವಂ ಧ್ಯಾನಿಸುತ ಕಾದಿರುವನು. [೧೬]

ಹದಿನೇಳನೇ ಪ್ರಾಕಾರವು ಪವಳಗಳಿಂ ನಿರ್ಮಿತವಾಗಿ ಚತುರಶ್ರವಾಗಿರುವದು ಈ ಪ್ರಾಕಾರಕ್ಕೆ ಮುಂದಣಪ್ರಾಕಾರಕ್ಕೆ ಮಧ್ಯದೊಳ್ ಸುವರ್ಣ ತುಲಸೀವನಗಳಿರುವವು. ಅಲ್ಲಿ ಲಕ್ಷ್ಮೀಸಮೇತನಾದ ಮಹಾವಿಷ್ಣುವು ಶಂಖ ಚಕ್ರಪಾಣಿಯಾಗಿ ನಿಜಪರಿವಾರಸಮೇತನಾಗಿ ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧರೆಂಬ ಚತುರ್ವ್ಯೂಹಮೂರ್ತಿಯಾಗಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಕೃಷ್ಣ, ಬುದ್ಧ, ಕಲ್ಕಿಯೆಂಬ ದಶಾವತಾರರೂಪಗಳಿಂದಲೂ ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷೀಕೇಶ, ಪದ್ಮನಾಭ, ದಾಮೋದರ ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನಾರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ, ಶ್ರೀ ಕೃಷ್ಣರೆಂಬಚತುರ್ವಿಂಶತಿ ಮೂರ್ತಿರೂ

ಪಂಗಳಿಂದಲೂ ಯುಕ್ತನಾಗಿ ಆದಿಶಕ್ತಿಯ ಪಾದಪಂಕಜವಂ ಧ್ಯಾನಿಸು ತ ಕಾದಿರುವನು. [೧೭]

ಪದಿನೆಂಟನೇ ಪ್ರಾಕಾರವು ಮಾಣಿಕ್ಯಮಯವಾಗಿ ಚತುರಶ್ರವಾಗಿ ರುವದು ಈ ಪ್ರಾಕಾರಕ್ಕೂ ಮುಂದಣಪ್ರಾಕಾರಕ್ಕೂ ಮಧ್ಯದೊಳ್ ಸುವರ್ಣಬಿಲ್ವವನಂಗಳಿರುವವು ಅದರ ಮಧ್ಯದಲ್ಲಿ ಸಹಸ್ರರತ್ನಸ್ತಂಭಂಗಳಿಂದ ನಿರ್ಮಿತವಾದ ಮಾಣಿಕ್ಯಮಂಟಪವಿರುವವು ಅಲ್ಲಿ ಮಹೇಶ್ವರನು ಉಮಾ ಸಮೇತನಾಗಿ ಚಂದ್ರರೇಖೆಯಂ ಧರಿಸಿ ವ್ಯಾಘ್ರಚರ್ಮವಂ ಪೊದ್ದು ಗಂಗಾಧರನಾಗಿ ಭಸ್ಮೋದ್ಧೂಳಿತ ವಿಗ್ರಹನಾಗಿ ನಾಗಾಭರಣಭೂಷಿತನಾಗಿ ರುದ್ರಾಕ್ಷಮಾಲೆಗಳಂಧರಿಸಿ ರುಂಡಮಾಲಾಧಾರಿಯಾಗಿ ತ್ರಿಶೂಲ,ಮೃಗಪಾಣಿಯಾಗಿ,ಮತ್ತುಸದ್ಯೋಜಾತವಾಮದೇವಅಘೋರ, ತತ್ಪುರುಷ, ಈಶಾನರೆಂಬ ಪಂಚಮೂರ್ತಿಗಳು ಭವ,ಶರ್ವ ಈಶಾನ, ಪಶುಪತಿ, ಉಗ್ರ, ರುದ್ರ,ಭೀಮ, ಮಹಾದೇವರೆಂಬಅಷ್ಟಮೂರ್ತಿಗಳು ಆನಂದತಾಂಡವ, ಉಮಾತಾಂಡವ, ಗೌರೀತಾಂಡವ, ಕಾಳಿಕಾತಾಂಡವ, ತ್ರಿಪುರತಾಂಡವ, ಸಂಹಾರತಾಂಡವ, ಸಂಧ್ಯಾತಾಂಡವರೆಂಬಸಪ್ತತಾಂಡವರುಗಳು ಚಂದ್ರಶೇಖರ, ಉಮಾಮಹೇಶ್ವರ, ವೃಷಭಾರೂಢ ನಟ, ಕಲ್ಯಾಣ, ಭಿಕ್ಷಾಟನ, ಕಾಮದಹನ, ಕಾಲಹರ, ತ್ರಿಪುರಾರಿ, ಜಲಂಧರ ಬ್ರಹ್ಮಶಿರಶ್ಛೇದ, ವೀರಭದ್ರ, ಹರಿಹರ,ಅರ್ಧನಾರಿ, ಕಿರಾತ, ಕಂಕಾಳ ಚಂಡೇಶ, ವಿಷಹರ, ಚಕ್ರದಾನ,ವಿಘ್ನೇಶ್ವರಪ್ರಸನ್ನ, ಸೋಮಾಸ್ಕಂದ, ಏಕಪಾದ, ಸುಖಾಸೀನ, ದಕ್ಷಿಣಾಮೂರ್ತಿ, ಲಿಂಗೋದ್ಭವ, ಶರಭ, ಗಜಾಸುರಸಂಹಾರ, ಅಘೋರರುಗಳೆಂಬ ಇಪ್ಪತ್ತೆಂಟು ಮೂರ್ತಿಗಳು ಬಾಲಗಣಪತಿ, ತರುಣಗಣಪತಿ, ಭಕ್ತಗಣಪತಿ, ವೀರಗಣಪತಿ, ಶಕ್ತಿಗಣಪತಿ, ದ್ವಿಜಗಣಪತಿ, ಸಿದ್ಧಗಣಪತಿ, ಉಚ್ಛಿಷ್ಟಗಣಪತಿ, ವಿಘ್ನಗಣಪತಿ, ವಿಜಯಗಣಪತಿ, ನೃತ್ತಗಣಪತಿ, ಊರ್ಧ್ವಗಣಪತಿ, ಏಕಾಕ್ಷರಗಣಪತಿ, ವರಗಣಪತಿ, ತ್ರ್ಯಕ್ಷಗಣಪತಿ, ಕ್ಷಿಪ್ರಪ್ರಸಾದಗಣಪತಿ, ಹರಿದ್ರಾಗಣಪತಿ, ಏಕದಂತಗಣಪತಿ, ಸೃಷ್ಟಿಗಣಪತಿ, ಉದ್ದಂಡಗಣಪತಿ, ಋಣವಿಮೋಚನಗಣಪತಿ, ಡುಂಡಿಗಣಪತಿ, ದ್ವಿಮುಖಗಣಪತಿ,

ತ್ರಿಮುಖಗಣಪತಿ, ಸಿಂಹಗಣಪತಿ, ಯೋಗಗಣಪತಿ, ದುರ್ಗಾಗಣಪತಿ, ಸಂಕಟಹರಗಣಪತಿ, ಕ್ಷಿಪ್ರಗಣಪತಿ, ಹೇರಂಬಗಣಪತಿ, ಲಕ್ಷ್ಮೀಗಣಪತಿ, ಮಹಾಗಣಪತಿಗಳೆಂಬ ದ್ವಾತ್ರಿಂಶದ್ಗಣಪತಿಗಳು ಜ್ಞಾನಶಕ್ತಿಸುಬ್ರಹ್ಮಣ್ಯ. ಸ್ಕಂದಸುಬ್ರಹ್ಮಣ್ಯ, ಅಗ್ನಿಜಾತಸುಬ್ರಹ್ಮಣ್ಯ, ಸೌರಭೇಯಸುಬ್ರಹ್ಮಣ್ಯ, ಗಾಂಗೇಯಸುಬ್ರಹ್ಮಣ್ಯ, ಶರವಣೋದ್ಭವಸುಬ್ರಹ್ಮಣ್ಯ, ಕಾರ್ತಿಕೇಯಸುಬ್ರಹ್ಮಣ್ಯ ಕುಮಾರಸುಬ್ರಹ್ಮಣ್ಯ, ಷಣ್ಮುಖಸುಬ್ರಹ್ಮಣ್ಯ, ತಾರಕಾರಿಸುಬ್ರಹ್ಮಣ್ಯ ಸೇನಾನೀಸುಬ್ರಹ್ಮಣ್ಯ, ಗುಹಸುಬ್ರಹ್ಮಣ್ಯ, ಬ್ರಹ್ಮಚಾರಿಸುಬ್ರಹ್ಮಣ್ಯ, ದೇಶಿಕಸುಬ್ರಹ್ಮಣ್ಯ ಕ್ರೌಂಚಭೇದನಸುಬ್ರಹ್ಮಣ್ಯ, ಶಿಖಿವಾಹನಸುಬ್ರಹ್ಮಣ್ಯ, ವೇಲಾಯುಧಸುಬ್ರಹ್ಮಣ್ಯರೆಂಬ ಸಪ್ತದಶಸುಬ್ರಹ್ಮಣ್ಯರುಗಳು ವೀರಭದ್ರ, ಕಾಲಭೈರವ, ನಂದಿ, ಭೃಂಗಿ, ಮಹಾಕಾಳ, ಶತರುದ್ರರು ಮುಂತಾದ ಪ್ರಮಥಾಧಿಪರಿಂದೊಡಗೂಡಿ ಮತ್ತಮಿಕ್ಕನಿಜಪರಿವಾರಸಮೇತನಾಗಿ ನಿರಂತರದಲ್ಲೂ ಚಿದಾನಂದಸ್ವರೂಪಿಣಿಯ ಪಾದಾರವಿಂದವಂಧ್ಯಾನಿಸುತ ತದಾಜ್ಞಾನುಸಾರವಾಗಿ ಕಾದಿರುವರು, ಮತ್ತೂ ಈಪ್ರಾಕಾರದಲ್ಲಿಯೆ ಮುನ್ವತ್ತಾರು ತತ್ವಾಭಿಮಾನಿದೇವತೆಗಳ ಮನೆಗಳು ಇರುವವು

ಹತ್ತೊಂಭತ್ತನೇ ಪ್ರಾಕಾರವು ನಾನಾರತ್ನಗಳಿಂದನಿರ್ಮಿತವಾಗಿ ಚತುರಶ್ರವಾಗಿರುವದು ಈ ಪ್ರಾಕಾರಕ್ಕೂ ಮುಂದಣಪ್ರಾಕಾರಕ್ಕೂ ಮಧ್ಯದೋಳ್ ಕಲ್ಪವೃಕ್ಷವನವಾಟಿಯಿರುವದು ಈ ವಾಟಿಯಮಧ್ಯದೋಳ್ ಅಮೃತವಾಪೀಯೆಂಬಸರೋವರವಿರುವದು ಅದರಲ್ಲಿರುವಸಹಸ್ರನಾವೆಗಳೊಳ್ ಪರಿವಾರಕೋಟಿಗಳಿಂದೊಡಗೂಡಿದ ನಾವೆಗಳಿಗಧೀಶ್ವರಿಯಾದ ತಾರಾಯೆಂಬ ದೇವತೆಯು ಶ್ಯಾಮಳವರ್ಣಳಾಗಿ ನವಯೌವನಶಾಲಿಯಾಗಿ ಸೌಂದರ್ಯಯುತಳಾಗಿನಾನಾಭರಣಂಗಳೆಂಧರಿಸಿವೀಣಾವೇಣು ಮೃದಂಗಾದಿ ವಾದ್ಯಧ್ವನಿಗೈಯುತ ಹುಟ್ಟುಗಳಂ ಅಂಡೆಗಳಂಪಿಡಿದು ಜಲಕ್ರೀಡೆಯನ್ನಾಡುತ ಜಗಧೀಶ್ವರಿಯ ಪಾದಪದ್ಮವಂ ಧ್ಯಾನಿಸುತ ಕಾದಿರುವಳು. [೧೯]

ಇಪ್ಪತ್ತನೇ ಪ್ರಾಕಾರವು ಪುನೋಮಯವಾಗಿ ಚತುರಶ್ರವಾಗಿ

ರುವದು ಈ ಪ್ರಾಕಾರಕ್ಕೂ ಮುಂದಣಪ್ರಾಕಾರಕ್ಕೂ ಮಧ್ಯದೊಳ್ ಅ ಮೃತಮಯವಾದ ಕಲ್ಪವೃಕ್ಷವನವಾಟಿ ಇರುವವು. ಇವರ ಮಧ್ಯದಲ್ಲಿ ನವರತ್ನಖಚಿತ ಸೋಪಾನಗಳುಳ್ಳ ಆನಂದವಾಪಿಕಾಯೆಂಬ ಸರೋವರ ವು ಸುವರ್ಣಚ್ಛಾಯೆ ಉಳ್ಳದ್ದಾಗಿ ವಿಸ್ತಾರವಾಗಿ ಆಳವಾಗಿರುವದು ಅಲ್ಲಿ ಅನೇಕಶಕ್ತಿಕೋಟಿ ಸೇನಾಸಮೇತಳಾಗಿ ರೂಪಯೌವನಶಾಲಿಯಾಗಿ ಕೆಂಪಾದ ಕಪೋಲಗಳುಳ್ಳವಳಾಗಿ ಮದೋನ್ಮತ್ತೆಯಾಗಿ ಪಾರಿಜಾತಪು ಷ್ಪವಂಮುಡಿದು ಕೆಂಪುವರ್ಣಳಾಗಿ ಮೂರುಲೋಕಕ್ಕೂ ಮದವುಕೊ ಡುವಳಾಗಿ ಮತ್ತು ಸುಧಾಮಾಲಿನೀ ಅಮೃತೇಶ್ವರಿಯೆಂಬ ಪ್ರತಿನಾಮ ಗಳಿಂದ ಅಂಕಿತಳಾಗಿರುವ ವಾರುಣೀಯೆಂಬ ದೇವಿಯು ನಾವೆಗಳೊಳ್ ಕುಳಿತು ಮಧ್ಯಪಾತ್ರ ಪಕ್ವಮಾಂಸ ರತ್ನಪಾತ್ರೆಗಳಂ ಹಿಡಿದು ಜಗಧೀ ಶ್ವರಿಯ ಪಾದಪಲ್ಲವವಂ ಧ್ಯಾನಿಸುತ್ತಕಾದಿರುವಳು. [೨೦]

ಇಪ್ಪತ್ತು ಒಂದನೇಪ್ರಾಕಾರವು ಬುದ್ಧಿಮಯವಾಗಿ ಚತುರಶ್ರವಾ ಗಿರುವದು ಈಪ್ರಾಕಾರಕ್ಕೂ ಮುಂದಣ ಪ್ರಾಕಾರಕ್ಕೂ ಮಧ್ಯದೊಳ್ ಕ ಲ್ಪವೃಕ್ಷಗಳ ವನವಾಟಿಗಳಿರುವವು ಇದರಮಧ್ಯದೊಳ್ ನವರತ್ನಸೋ ಪಾನಂಗಳಂಕೂಡಿ ಅತಿವಿಸ್ತಾರವಾಗಿ ಆಳವುಳ್ಳದ್ದಾಗಿ ವಿಮರ್ಶವಾಪಿ ಎಂಬ ಸರೋವರವಿರುವದು ಅದರೊಳ್ ಸರ್ವಾವಯವಸುಂದರಿಯಾಗಿ ಅನೇಕ ಆಭರಣಗಳಂ ಧರಿಸಿ ತಮಾಲಶ್ಯಾಮಲ ವರ್ಣವುಳ್ಳವಳಾಗಿ ಕಪ್ಪಾದ ಕಂಚುಕವಂ ಕಟ್ಟಿ ನೌಕಾಧೀಶ್ವರಿಯಾದ ಕುರುಕುಳ್ಳಾ ಎಂ ಬ ದೇವಿಯು ಅನೇಕ ಸ್ತ್ರೀಪರಿವಾರದಿಂ ಪರಿವೃತಳಾಗಿ ರತ್ನನಿರ್ಮಿ ತವಾದ ಹುಟ್ಟುಗಳಂ ಹಿಡಿದು ನಾವೆಗಳನ್ನೇರಿ ವಿಹಾರವಂ ಗೈಯುತ್ತ ಜಗಧೀಶ್ವರಿಯ ಪಾದಪಂಕಜವು ಮನದೊಳ್ ಧ್ಯಾನಿಸುತ ಕಾ ದಿರುವಳು. [೨೧]

ಇಪ್ಪತ್ತೆರಡನೇ ಪ್ರಾಕಾರವು ಅಹಂಕಾರಮಯವಾಗಿ ಚತುರಶ್ರ ವಾಗಿರುವದು ಈ ಪ್ರಾಕಾರಕ್ಕೂ ಮುಂದಣಪ್ರಾಕಾರಕ್ಕೂ ಮಧ್ಯದೋ ಳ್ ಕುರುವಿಂದರತ್ನಮಯವಾದ ಭೂಮಿಯು ಎಳೆಬಿಸಲಿನಿಂ ಕೂಡಿರು ವದು. ಅಲ್ಲಿ ಮಾರ್ತಾಂಡಭೈರವನು ಹನ್ನೆರಡುರೂಪದಿಂ ಮಹಾಪ್ರಕಾ

ಶಾ ಚಕ್ಷುಷ್ಮತೀ ಛಾಯಾ ಎಂಬ ಮೂವರು ಶಕ್ತಿಯರಿಂದಲೂ ಅನೇಕ ಸ್ತ್ರೀಯರುಗಳಿಂದಲೂ ನಿಜಪರಿವಾರದಿಂದಲೂ ಪರಿವೃತನಾಗಿ ದಿವ್ಯವಸ್ತ್ರಾಭರಣಗಳಿಂದಲಂಕೃತನಾಗಿ ಖಡ್ಗಖೇಟಗಳಂ ಪಿಡಿದು ಜಗದೀಶ್ವರಿಯ ಮಂತ್ರವಂ ಜಪಿಸುತ್ತ ಧ್ಯಾನಾಸಕ್ತನಾಗಿ ಕಾದಿರುವನು.[೨೨]

ಇಪ್ಪತ್ತುಮೂರನೆಯ ಪ್ರಾಕಾರವು ಸೂರ್ಯಬಿಂಬಮಯವಾಗಿ ಚತುರಶ್ರವಾಗಿರುವದು ಈ ಪ್ರಾಕಾರಕ್ಕು ಮುಂದಣಪ್ರಾಕಾರಕ್ಕು ಮಧ್ಯದೋಳ್ ಚಂದ್ರಕಾಂತಮಯ ಭೂಮಿ ಇರುವದು ಅಲ್ಲಿ ಅಮೃತಕಳಾಪೂರಿತನಾದ ಸೋಮನಾಥನು ಇಪ್ಪತ್ತೇಳು ನಕ್ಷತ್ರಗಳೆಂಬ ಪತ್ನೀಯರೊಡಗೂಡಿ ಅನೇಕಾಭರಣಗಳಂ ಧರಿಸಿ ಜಗದೀಶ್ವರಿಯ ಪಾದಾಂಬುಜವಂ ಧ್ಯಾನಿಸುತಕಾದಿರುವನು [೨೩]

ಇಪ್ಪತ್ತನಾಲ್ಕನೇ ಪ್ರಾಕಾರವು ಚಂದ್ರಬಿಂಬಮಯವಾಗಿ ಚತುರಶ್ರವಾಗಿರುವದು ಈ ಪ್ರಾಕಾರಕ್ಕು ಮುಂದಣಪ್ರಾಕಾರಕ್ಕು ಮಧ್ಯದೋಳ್ ಶೃಂಗಾರಪರಿಘವೆಂಬ ಅಗಳು ಅಪರಿಮಿತವಿಸ್ತಾರವಾಗಿರುವದು ಅಲ್ಲಿ ಮನ್ಮಥನು ರತಿಸಮೇತನಾಗಿ ಇಕ್ಷುಚಾಪವಂ ಪುಷ್ಪಬಾಣಂಗಳಂ ಧರಿಸಿ ಅನೇಕರತ್ನಾಭರಣಭೂಷಿತನಾಗಿ ದಿವ್ಯದುಕೂಲವನ್ನುಟ್ಟು ಕಸ್ತೂರಿಗಂಧಲೇಪನಂಗೈದು ಶೃಂಗಾರದೇವತಾಪರಿವಾರಸಮೇತನಾಗಿ ಪಾರಿಜಾತಪುಷ್ಪವಂಧರಿಸಿ ರತ್ನಮಯವಾದ ವಿಸ್ತಾರವಾದ ಹಡಗುಗಳನ್ನೇರಿ ಜಗಧೀಶ್ವರಿಯ ಪಾದಪಂಕಜವಂಧ್ಯಾನಿಸುತ್ತಾ ಕಾದಿರುವನು.[೨೪]

ಇಪ್ಪತ್ತೈದನೇ ಪ್ರಾಕಾರವು ಶೃಂಗಾರಮಯವಾಗಿ ಚತುರಶ್ರವಾಗಿರುವದು ಇದಕ್ಕೂ ಮುಂದಣ ಚಿಂತಾಮಣಿಗೃಹಕ್ಕು ಮಧ್ಯದೋಳ್ ರತ್ನಮಯವಾದ ಭೂಮಿ ಇರುವದು. ಅದರಸುತ್ತಲೂ ಮಹಾಪದ್ಮಾಟವೀಯೆಂಬ ಪದ್ಮವನವು ಚಿಂತಾಮಣಿ ಎಂಬ ಗೃಹಕ್ಕೆ ಆರುಯೋಜನ ಬಿಟ್ಟು ಸುತ್ತುವರಿದಿರುವದು ಈ ಪದ್ಮಾಟವಿಯಲ್ಲಿ ಚಿಂತಾಮಣಿ ಎಂಬ ಗೃಹಕ್ಕೆ ಪೂರ್ವಭಾಗದಲ್ಲಿ ಅರ್ಘ್ಯಪಾತ್ರರೂಪವಂ ಧರಿಸಿಕೊಂಡು ಅಗ್ನಿಯು ಇರುವನು ಈ ಪಾತ್ರಧಾರಾರೂಪರಾಗಿರುವ ಧೂಮ್ರಾರ್ಚಿಃ ಊಷ್ಮಾಜ್ವಾಲಿನಿ ಜ್ವಲನೀ ವಿಷ್ಫುಲಿಂಗಿನೀ ಸುಶ್ರೀಃ ಸುರೂಪಾ ಕಪಿ

ಲಾ ಹವ್ಯವಹಾ ಕವ್ಯವಹಾ ಎಂಬ ಅಗ್ನಿಯ ದಶಕಲೆಗಳು ಅರ್ಧಯೋಜನವಿಸ್ತಾರವಾದ ಆ ಪಾತ್ರೆಗೆ ಆಧಾರವಾಗಿರುತವು. ಅಲ್ಲಿಯೇ ಮತ್ತೊಂದು ಯೋಜನವಿಸ್ತಾರವಾದ ಪಾತ್ರೆಯರೂಪನಾಗಿ ಸೂರ್ಯನು ಇರುವನು. ಆ ಪಾತ್ರೆಗೆ ಆಧಾರವಾಗಿ ತಪಿನೀ, ತಾಪಿನೀ, ಧೂಮ್ರಾ, ಮರೀಚಿ, ಜ್ವಾಲಿನೀ, ರುಚಿಃ ಸುಷುಮ್ನಾ ಭೋಗದಾ ವಿಶ್ವಾ ಬೋಧಿನೀ ಧಾರಿಣೀ ಕ್ಷಮಾ ಎಂಬ ಈ ಸೂರ್ಯನ ದ್ವಾದಶಕಲೆಗಳು ಇರುವುವು. ಸೂರ್ಯರೂಪನಾದ ಈ ಪಾತ್ರೆಯಲ್ಲಿ ಸರ್ವೌಷಧಿರಸರೂಪವಾದ ಚಂದ್ರಕಲಾಮಯವಾದ ಅಮೃತವಿರುವುದು. ಆ ಅಮೃತದಿಂತುಂಬಿದ ಆ ಪಾತ್ರೆಯಲ್ಲಿ ಅಮೃತಾ ಮಾನದಾ ಪೂಷಾ ಪುಷ್ಟಿಃ ತುಷ್ಟಿಃ ರತಿಃ ಧೃತಿಃ ಶಶಿನೀ ಚಂದ್ರಿಕಾ ಕಾಂತಿಃ ಜ್ಯೋತ್ಸ್ನಾ ಶ್ರೀಃ ಪ್ರೀತಿಃ ಅಂಗನಾ ಪೂರ್ಣಾ ಪೂರ್ಣಾಮೃತಾ ಎಂಬ ಹದಿನಾರು ಚಂದ್ರಕಲೆಗಳು ಯೌವನಶಾಲಿನೀಯರಾಗಿ ಸಣ್ಣ ನಾವೆಯನ್ನೇರಿ ಆಡುತ್ತಲಿಹರು. ಮತ್ತು ಸೃಷ್ಟಿಃ ಬುದ್ಧಿಃ ಸ್ಮೃತಿಃ ಮೇಧಾ ಕಾಂತಿಃ ಲಕ್ಷ್ಮೀಃ ಧೃತಿಃ ದ್ಯುತಿಃ ಸ್ಥಿತಿಃ ಸಿದ್ಧಿಃಎಂಬ ಬ್ರಹ್ಮನ ಹತ್ತು ಕಲೆಗಳು, ಇನ್ನು ಜರಾ ಪಾಲಿನೀ ಶಾಂತಿಃ ಐಶ್ವರೀ ರತಿಃ ಕಾಮಿಕಾ ವರದಾ ಹ್ಲಾದಿನೀ ಪ್ರೀತಿಃ ದೀರ್ಘಾಎಂಬ ವಿಷ್ಣುವಿನ ಹತ್ತು ಕಲೆಗಳು; ಮತ್ತು ತೀಕ್ಷ್ಣಾ ರೌದ್ರೀ ಭಯಾ ನಿದ್ರಾ ತಂದ್ರೀ ಕ್ಷುತ್ ಕ್ರೋಧಿನೀ ಕ್ರಿಯಾ ಉತ್ಕಾರೀ ಮೃತ್ಯುಃಎಂಬ ರುದ್ರನ ಹತ್ತು ಕಲೆಗಳುಕೂಡಾ ಇರುವುದು. ಇನ್ನು ಪೀತಾ ಶ್ವೇತಾ ಅರುಣಾ ಅಸಿತಾ ಎಂಬ ಈಶ್ವರನ ನಾಲ್ಕುಕಲೆಗಳೂ, ಮತ್ತು ನಿವೃತ್ತಿಃ ಪ್ರತಿಷ್ಠಾ ವಿದ್ಯಾ ಶಾಂತಿಃ ಶುದ್ಧಿಃ ದೀಪಿಕಾ ರೇಚಕಾ ಮೋಚಿಕಾ ಪರಾ ಸೂಕ್ಷ್ಮಾ ಸೂಕ್ಷ್ಮಾಮೃತಾ ಜ್ಞಾನಾಮೃತಾ ವ್ಯಾಧಿನೀ ವ್ಯಾಪಿನೀ ವ್ಯೋಮರೂಪಾ ಕಲಾ ಎಂಬ ಸದಾಶಿವನ ಹದಿನಾರು ಕಲೆಗಳೂ, ಮತ್ತು ಪಂಚಬ್ರಹ್ಮನ ಕಲೆಗಳೂಕೂಡ ಸಣ್ಣ ನಾವೆಗಳನ್ನೇರಿ ಪೂರ್ವೋಕ್ತಸೂರ್ಯಮಯವಾದ ಅರ್ಘ್ಯಪಾತ್ರದಲ್ಲಿರುವ ಅಮೃತದಲ್ಲಿ ವಿಹರಿಸುತ ಪರದೇವತಾಸ್ವರೂಪಿಣಿಯ ಪಾದಪಂಕಜವಧ್ಯಾನಿಸುತಲಿರುವರು. ಈ ಪದ್ಯವಾಟಿಯಲ್ಲಿ ಚಿಂತಾಮಣಿಗೃಹಕ್ಕೆ ದಕ್ಷಿಣ ಪಶ್ಚಿಮ ಉತ್ತರದಿಕ್ಕುಗಳಲ್ಲಿ ಪೂರ್ವದಿಕ್ಕಿನಲ್ಲಿರುವ ಪರಿಯಾಗಿ ಒಂದೊಂದುಪಾತ್ರೆಗಳಿರುವವು. ಆ ಪಾತ್ರೆಗಳಲ್ಲಿ

ಮೊದಲಿನಂತೆ ಕಲಾದೇವತೆಗಳು ನಾವೆಗಳನ್ನೇರಿ ವಿಹರಿಸಿಕೊಂಡಿರುವ ರು. ಚಿಂತಾಮಣಿಗೃಹದ ಆಗ್ನೇಯದಿಗ್ಭಾಗದಲ್ಲಿ ಅಗ್ನಿಕುಂಡವು ಒಂದು ಯೋಜನವಿಸ್ತಾರವುಳ್ಳದ್ದಾಗಿರುವದು. ಆ ಕುಂಡದಲ್ಲಿ ಯಜ್ಞೇಶ್ವರನು ರಕ್ತವರ್ಣನಾಗಿ ಅಮೃತಧಾರಾಶತದಿಂದ ಅರ್ಚಿತನಾಗಿರುವನು.

ಈ ಚಿಂತಾಮಣಿಗೃಹಕ್ಕೆ ನೈಋತ್ಯಭಾಗದಲ್ಲಿ ಒಂಭತ್ತು ನೆಲೆಯುಳ್ಳದ್ದಾಗಿ ದಶಯೋಜನಉನ್ನತವಾಗಿ ನಾಲ್ಕುಯೋಜನವಿಸ್ತಾರವಾಗಿ ಸರ್ವರತ್ನೋಪಶೋಭಿತವಾಗಿ ವಜ್ರಘಂಟಾಮಾಲಿಕೆಗಳಿಂದ ಅಲಂಕೃತವಾಗಿ ಸುವರ್ಣಧ್ವಜಪತಾಕಾಸಹಸ್ರಗಳಿಂದಲೂ, ಅನೇಕರತ್ನಕಲಶಂಗಳಿಂದಲೂ, ಮುತ್ತಿನ ಛತ್ರಂಗಳಿಂದಲೂ ವಿಚಿತ್ರಚಾಮರಂಗಳಿಂದಲೂ ಅಲಂಕೃತವಾಗಿ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ವೇದಂಗಳೇ ಭುಡಿಗಳಾಗಿ ಧರ್ಮಾರ್ಥಕಾಮಮೋಕ್ಷಂಗಳೇ ನಾಲ್ಕು ಅಶ್ವಂಗಳಾಗಿ ಚಿಂತಾಮಣಿಗೃಹಸ್ಥದೇವತೆಗಳೇ ದೇವತೆಗಳಾಗಿ ಚಕ್ರರಾಜವೆಂಬ ಹೆಸರಿನಿಂದ ಮೆರೆಯುವ ಒಂದು ರಥವು ಜಗದೀಶ್ವರಿಯ ಆರೋಹಣಕ್ಕೆ ಯೋಗ್ಯವಾಗಿರುವದು. ಇದರ ಸಮೀಪದಲ್ಲಿ ರತ್ನಕಲಶಂಗಳಿಂದ ಅಲಂಕೃತವಾಗಿ, ಸುವರ್ಣಮಯವಾಗಿರುವ ಒಂದು ಉಪರಥವಿರುವದು. ಆ ಚಿಂತಾಮಣಿಗೃಹಕ್ಕೆ ವಾಯುವ್ಯಭಾಗದಲ್ಲಿ ಮಂತ್ರಿಣೀ ಎಂಬ ಹೆಸರುಳ್ಳ ಲಘುಶ್ಯಾಮಳಾದೇವಿಗೆ ಆರೋಹಣಯೋಗ್ಯವಾದ ಗೇಯಚಕ್ರವೆಂಬ ರಥವಿರುವುದು.

ಆ ಚಿಂತಾಮಣಿಗೃಹಕ್ಕೆ ಈಶಾನ್ಯಭಾಗದೊಳ್ ದಂಡಿನೀ ಎಂಬ ಹೆಸರುಳ್ಳ ವಾರಾಹೀದೇವಿಗೆ ಆರೋಹಣಯೋಗ್ಯವಾದ ಕಿರಿಚಕ್ರವೆಂಬ ರಥವಿರುವದು. ಅದುಮಲ್ಲದೆ ಚಿದಗ್ನಿಕುಂಡಕ್ಕೆ ಪಶ್ಚಿಮಭಾಗದಲ್ಲಿ ಗಾಯತ್ರೀಮನೆಯು ಅದಕ್ಕೆ ಪಶ್ಚಿಮದಲ್ಲಿ ಅಭಯಂಕರನ ಮನೆಯು ಅದಕ್ಕೆ ಪಶ್ಚಿಮವಾಗಿ ಸಾವಿತ್ರೀಮನೆಯು ಅದಕ್ಕೆ ಪಶ್ಚಿಮದಲ್ಲಿ ಸರಸ್ವತೀಗೃಹವು ಅದಕ್ಕೆ ಪಶ್ಚಿಮದಲ್ಲಿ ತುರ್ಯಗಾಯತ್ರೀಗೃಹವು ಚಕ್ಷುಷ್ಮತೀಗೃಹವು ಅದಕ್ಕೆ ಪಶ್ಚಿಮದಲ್ಲಿ ಗಂಧರ್ವರಾಜನಾದ ಚಿತ್ರರಥನ ಗೃಹವು ಅದಕ್ಕೆ ಪಶ್ಚಿಮದಲ್ಲಿ ಷಣ್ಣಾಮ್ನಾಯಾಧಿದೇವತಾಗೃಹಗಳು ಅದಕ್ಕೆ ಪಶ್ಚಿಮದಲ್ಲಿ ತಾರಾಂಬಿಕಾಗೃಹವು ಅದಕ್ಕೆ ಪಶ್ಚಿಮದಲ್ಲಿ ನಾಮತ್ರಯಮಾಖ್ಯನಾದ ಮಹಾವಿಷ್ಣುಗೃಹ ಮೊದಲಾದ ಗೃಹಗಳು ಆಗ್ನೇಯದಿಕ್ಕಿನಿಂದ ನಿಋ

ಋತಿ ದಿಕ್ಕಿನವರಿವಿಗೂ ಸಾಲಾಗಿ ಇರುವವು. ಮತ್ತೂ ಚಿಂತಾಮಣಿಗೃಹ ಕ್ಕೆ ಪಶ್ಚಿಮವಾಗಿ ನಿಋತಿ ದಿಕ್ಕಿನಲ್ಲಿರುವ ಮಹಾವಿಷ್ಣುವಿನ ಗೃಹಕ್ಕೆ ಉತ್ತರವಾಗಿ ಮಹಾಗಣಪತಿಗೃಹವು ಅದಕ್ಕೆ ಉತ್ತರವಾಗಿ ಪಂಚಾಕ್ಷರೀಪತಿಯಾದ ಶಿವನ ಮನೆಯು ಅದಕ್ಕೆ ಉತ್ತರವಾಗಿ ಮೃತ್ಯುಂಜಯನ ಮನೆಯು ಅದಕ್ಕೆ ಉತ್ತರವಾಗಿ ಧಾರಣಾಸರಸ್ವತೀಮನೆಯು ಅದರ ಉತ್ತರಭಾಗದೊಳ್ ಅಕಾರಾದಿಕ್ಷಕಾರಾಂತವರ್ಣಾಭಿಮಾನಿದೇವತಾಗೃಹಗಳಿರುವವು. ಅದಕ್ಕೆ ಉತ್ತರವಾಗಿ ಸುಪದೇಶೀಗೃಹವು ಇರುವದು. ಅದಕ್ಕೆ ಉತ್ತರಭಾಗದೊಳ್ ಕಾಲಸಂಕರ್ಷಣೀಮನೆಯು ಅದಕ್ಕೆ ಉತ್ತರವಾಗಿ ಶಂಭುನಾಥನ ಗೃಹವು ಅದಕ್ಕೆ ಉತ್ತರವಾಗಿ ಲಘುಶ್ಯಾಮಲಾಗೃಹವು ಅದಕ್ಕೆ ಉತ್ತರವಾಗಿ ವಾಗ್ವಾದಿನೀಗೃಹವು ಅದಕ್ಕೆ ಉತ್ತರವಾಗಿ ಶ್ರೀನಕುಲಾಂಬಾಗೃಹವು ಅದಕ್ಕೆ ಉತ್ತರವಾಗಿ ಶ್ಯಾಮಾಂಬಾಗೃಹವು ಇವೇ ಮೊದಲಾದ ಗೃಹಂಗಳು ನಿಋತಿಭಾಗದಿಂದ ವಾಯುವ್ಯಭಾಗದವರಿಗೆ ಸಾಲಾಗಿರುವವು. ಇನ್ನೂ ಚಿಂತಾಮಣಿಗೃಹಕ್ಕೆ ಉತ್ತರವಾಗಿ ವಾಯುವ್ಯಭಾಗದೊಳಿರುವ ಶ್ಯಾಮಾಂಬಾಗೃಹಕ್ಕೆ ಪೂರ್ವಭಾಗವಾಗಿ ಉನ್ಮತ್ತಭೈರವೀಗೃಹವು ಅದಕ್ಕೆ ಪೂರ್ವವಾಗಿ ಸ್ವಪ್ನವಾರಾಹೀಗೃಹವು ಅದಕ್ಕೆ ಪೂರ್ವವಾಗಿ ತಿರಸ್ಕರಿಣೀಮನೆಯು ಅದಕ್ಕೆ ಪೂರ್ವವಾಗಿ ಪರಾ ಎಂಬ ದೇವತಾಗೃಹವು ಅದಕ್ಕೆ ಪೂರ್ವವಾಗಿ ಪಂಚವಿಂಶವರಾ ಎಂಬ ದೇವತಾಗೃಹವು ಅದಕ್ಕೆ ಪೂರ್ವವಾಗಿ ಶ್ರೀಮೂರ್ತಿದೇವಿಯ ಮಂದಿರವು ಅದಕ್ಕೆ ಪೂರ್ವವಾಗಿ ಶ್ರೀ ಪಾದುಕಾದೇವೀಸದನವು ಅದಕ್ಕೆ ಪೂರ್ವವಾಗಿ ಷಡಾಮ್ನಾಯದೇವತಾಗೃಹಗಳು ಇವೇ ಮೊದಲಾದ ಗೃಹಗಳು ವಾಯುವ್ಯದಿಗ್ಭಾಗದಿಂದ ಈಶಾನ್ಯದಿಗ್ಭಾಗದವರಿವಿಗೂ ಸಾಲಾಗಿ ಇರುವವು.

ಮತ್ತೂ ಚಿಂತಾಮಣಿಗೃಹಕ್ಕೆ ಪೂರ್ವಭಾಗದೊಳ್ ಮಂತ್ರಿನಾಥನ ಮನೆಯು ಬ್ರಹ್ಮವಿಷ್ಣುಮಹೇಶ್ವರರ ಮನೆಗಳು ಈಶಾನ್ಯದಿಗ್ಭಾಗದಿಂದ ಆಗ್ನೇಯದಿಗ್ಭಾಗದವರಿಗೂ ಸಾಲಾಗಿರುವವು.

ಈರೀತಿ ಮನೆಗಳಿಂದ ಅಲಂಕೃತವಾದ ಪದ್ಮಾಟವಿಯಿಂದ ಯುಕ್ತ ಮಾದನಾಲ್ಕುಯೋಜನಉನ್ನತವಾದ ಒಂದುಯೋಜನದಷ್ಟುವುಳ್ಳಮಧ್ಯದೊಳ್ ಏಳುಯೋಜನವಿಸ್ತಾರವುಳ್ಳ ನಾಲ್ಕು ದಿಕ್ಕುಗಳಲ್ಲಿಯೂ ಗೋಪುರದ್ವಾ

ರಕವಾಟಗಳಿಂ ಯುಕ್ತವಾದ ಪೂರ್ವೋಕ್ತರೀತಿಯಾಗಿ ಲೋಹ ನವರ ತ್ನಾದಿಗಳಿಂದ ನಿರ್ಮಿತಂಗಳಾದ ಇಪ್ಪತ್ತೈದುಪ್ರಾಕಾರಗಳಿಂದ ಸುತ್ತುವ ರಿಯಲ್ಪಟ್ಟು ಮಧ್ಯದಲ್ಲಿ ನವಾವರಣಂಗಳಿಂದೊಡಗೂಡಿ ಕೋಟಿಸೂರ್ಯ ಪ್ರಕಾಶಮಾನವಾದ ಆದಿಶಕ್ತಿಗೆ ಆವಾಸಸ್ಥಾನವಾದ ಆ ಚಿಂತಾಮಣಿಗೃ ಹದ ಮೇಲಭಾಗದೊಳ್ ಇಚ್ಛಾಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿಗಳೆಂಬ ಮೂರು ಗೋಪುರಗಳಿರುವವು. ಆ ಗೋಪುರಗಳು ನವರತ್ನಮಯಕಲ ಶಕೋಠಂಬಗಳಿಂದಲೂ ಸುವರ್ಣಮಯ ಘಂಟಾಸಮೂಹಂಗಳಿಂದಲೂ ಅ ಲಂಕೃತಂಗಳಾಗಿ, ಜೀವರತ್ನಂಗಳಿಂದ ವಿಚಿತ್ರವಾಗಿ ನಿರ್ಮಿಸಲ್ಪಟ್ಟ ಅ ನೇಕ ಸಹಸ್ರಸಂಖ್ಯಾಕಂಗಳಾದ ಬೊಂಬೆಗಳಿಂದಲೂ ಬಹುಪ್ರಕಾರಂಗ ಳಾದ ಸುವರ್ಣಲೋವೆಗಳಿಂದಲೂ ಪ್ರಕಾಶಮಾನಂಗಳಾಗಿರುವವು.

ಈ ಚಿಂತಾಮಣಿಗೃಹಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಪಚ್ಚೆಗಳಿಂ ನಿರ್ಮಿತಂಗಳಾದ ನಿಲುಗಳಿಂದಲು ಕೆಂಪುಮಣಿಗಳಿಂ ನಿರ್ಮಿಸಲ್ಪಟ್ಟ ನವ ರಂಗದ ಕೊರಡುಗಳಿಂದಲು ಇಂದ್ರನೀಲಮಣಿಗಳಿಂ ಕಡದುಮಾಡಿರುವ ಗು ಬ್ಬಿಗಳಿಂದಲು ಒಪ್ಪುತ್ತಿರುವ ವಜ್ರದಕವಾಟಗಳಿಗೆ ಮುತ್ತಿನ ಕುಚ್ಚುಗ ಳಿಂದ ಹೆಣೆಯಲ್ಪಟ್ಟ ಸರಪಣಿಗಳಿಂದಲೂ ಪುಷ್ಯರಾಗದ ಬೀಗಗಳಿಂದ ಲೂ ಕೂಡಿರುವ ನಾಲ್ಕು ಬಾಗಿಲುಗಳ ಮುಂಭಾಗದೊಳ್ ಋಗ್ಯಜುಸ್ಸಾ ಮಾಥರ್ವಣಂಗಳೆಂಬ ನಾಲ್ಕು ವೇದಂಗಳು ನದೀರೂಪವಂ ತಾಳಿ ಜಗದೀ ಶ್ವರಿಯಮಜ್ಜನವಿಹಾರಕ್ಕೆ ಯೋಗ್ಯಂಗಳಾಗಿ ಕೋಟಿಸೂರ್ಯಪ್ರಕಾಶ ಮಾನಂಗಳಾಗಿ ಅಮೃತಮಯಂಗಳಾಗಿ ಪ್ರವಹಿಸುತಲಿರುವವು.

ಮತ್ತೂ ಈ ಚಿಂತಾಮಣಿಗೃಹವು ಚಕ್ರಾವರಣಗಳೆಂಬ ಒಂಭ ತ್ತು ಅಂತಸ್ತುಗಳಿಂ ಕೂಡಿ ಶೋಭಿಸುತಲಿರುವದು.

ಇದರಲ್ಲಿ ಭೂಪುರಾತ್ಮಕವಾದ ಚತುರಶ್ರವಾದ ಧರಣೀಸದನತ್ರಯ ಮಾದ ತ್ರೈಲೋಕ್ಯಮೋಹನಚಕ್ರವೆಂಬ ಹೆಸರುಳ್ಳ ಪ್ರಥಮಾವರಣರೂ ಪವಾದ ಮೊದಲ ಅಂತಸ್ತಿನ ಮೊದಲುಫಲಕದೊಳ್ ಅಣಿಮಾ ಮಹಿ ಮಾ ಗರಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ಈಶತ್ವ ವಶಿತ್ವ ಭುಕ್ತಿ ಸಿದ್ಧಿ ಸರ್ವಕಾಮಸಿದ್ಧಿ ರಸಸಿದ್ಧಿ ಮೋಕ್ಷಸಿದ್ಧಿ ಬಲಸಿದ್ಧಿ ಖಡ್ಗಸಿದ್ಧಿ ಪಾದುಕಾಸಿದ್ಧಿ ಅಂಜನಸಿದ್ಧಿ ವಾಕ್ಸಿದ್ಧಿ ಲೋಹಸಿದ್ಧಿ ಕಾಯಸಿದ್ಧಿ ಮಂ

ತ್ರಸಿದ್ಧಿಗಳೆಂಬ ಸಿದ್ಧಿದೇವತೆಗಳು ತಮ್ಮತಮ್ಮ ಪರಿವಾರಸಮೇತರಾಗಿ ಜಗದೀಶ್ವರಿಯ ಸೇವೆಯೊಳ್ ಕಾದಿರುವರು. ಎರಡನೇ ಫಲಕದೊಳ್ ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀ ವಾರಾಹೀ ಇಂದ್ರಾಣೀ ಚಾಮುಂಡಿಕಾ ಮಹಾಲಕ್ಷ್ಮಿಯರೆಂಬ ಮಾತೃಕಾದೇವತೆಗಳು ತಮ್ಮ ತಮ್ಮ ಪರಿವಾರದಿಂ ಸಮೇತರಾಗಿ ಜಗದೀಶ್ವರಿಯ ಸೇವೆಯೊಳ್ ಕಾದಿರುವರು. ಮೂರನೇ ಫಲಕದೊಳ್ ಸರ್ವಸಂಕ್ಷೋಭಿಣೀ ಸರ್ವವಿದ್ರಾವಿಣೀ ಸರ್ವಾಕರ್ಷಿಣೀ ಸರ್ವವಶಂಕರೀ ಸರ್ವೋನ್ಮಾದಿನೀ ಸರ್ವಮಹಾಂಕುಶೀ ಸರ್ವಖೇಚರೀ ಸರ್ವಬೀಜಾ ಸರ್ವಯೋನಿ ಸರ್ವತ್ರಿಖಂಡಾ ಎಂಬ ದಶಮುದ್ರಾದೇವತೆಗಳು ತಮ್ಮ ತಮ್ಮ ಪರಿವಾರಸಮೇತರಾಗಿ ಜಗದೀಶ್ವರಿಯ ಸೇವೆಯೊಳ್ಕಾದಿರುವರು. ಈ ಭೂಪುರಾತ್ಮಕವಾದ ತ್ರೈಲೋಕ್ಯಮೋಹನಚಕ್ರದ ಮೂರು ಫಲಕಗಳಲ್ಲಿರುವ ದೇವತೆಗಳಿಗೆ ಪ್ರಕಟಯೋಗಿನೀಯರೆಂಬ ನಾಮಗಳು. ತ್ರಿಪುರೆ ಎಂಬ ಪ್ರಧಾನದೇವತೆಯು ಸರ್ವಸಂಕ್ಷೋಭಿಣೀ ಎಂಬ ಮುದ್ರೆಯಿಂದೊಡಗೂಡಿ ವಿಹರಿಸುತ್ತಿರುವಳು. ಈ ಫಲಕತ್ರಯಾತ್ಮಕವಾದ ಪ್ರಥಮಾವರಣ ತ್ರೈಲೋಕ್ಯಮೋಹನ ಚಕ್ರಕ್ಕೆ ಇದರ ಉಪರಿಭಾಗದೊಳ್ ದ್ವಿತೀಯಾವರಣವಾದ ಸರ್ವಾಶಾಪರಿಪೂರಕವೆಂಬ ಚಕ್ರಕ್ಕೆ ಮಧ್ಯೆ ಇರುವ ವೃತ್ತತ್ರಯವೆಂಬ ಮೂರು ರೇಖೆಗಳು ಸೋಪಾನದಂತಿರುವುವು. ರೇಖಾಕ್ರಮದಲ್ಲಿ ಸೇರಿಥೆ. ನವಪರ್ವದ ಚಕ್ರಾವರಣಲ್ಲಿ ಸೇರಲಿಲ್ಲ. ಅಲ್ಲಿ ದೇವತೆಗಳೂ ಇಲ್ಲ. ಚಕ್ರಸ್ಥಾಪನಾಕ್ರಮದಲ್ಲಿಯೂ ನ್ಯಾಸಕ್ರಮದಲ್ಲಿಯೂ ಈ ವೃತ್ತತ್ರಯವು ಸೇರಿಥೆ. ಪೂರ್ವೋಕ್ತದ್ವಿತೀಯಾವರಣವಾದ ಷೋಡಶದಳಾತ್ಮಕವಾದ ಸರ್ವಾಶಾಪರಿಪೂರಕವೆಂಬ ಹೆಸರುಳ್ಳ ಎರಡನೇ ಅಂತಸ್ತಿನೊಳ್ ಕಾಮಾಕರ್ಷಿಣೀ ಬುಧ್ಯಾಕರ್ಷಿಣೀ ಅಹಂಕಾರಾಕರ್ಷಿಣೀ ಸರ್ವಾಕರ್ಷಿಣೀ ಸ್ಪರ್ಶಾಕರ್ಷಿಣೀ ರೂಪಾಕರ್ಷಿಣೀ ರಸಾಕರ್ಷಿಣೀ ಗಂಧಾಕರ್ಷಿಣೀ ಚಿತ್ತಾಕರ್ಷಿಣೀ ಧೈರ್ಯಾಕರ್ಷಿಣೀ ಸ್ಮೃತ್ಯಾಕರ್ಷಿಣೀ ನಾಮಾಕರ್ಷಿಣೀ ಬೀಜಾಕರ್ಷಿಣೀ ಆತ್ಮಾಕರ್ಷಿಣೀ ಅಮೃತಾಕರ್ಷಿಣೀ ಶರೀರಾಕರ್ಷಿಣೀ ಎಂಬ ಈಹದಿದಾರು ಮಂದಿಯು ಗುಪ್ತಯೋಗಿನಿಯರೆಂಬ ಹೆಸರುಳ್ಳ ದೇವತೆಗಳು ಅಕಾರಾದಿ ಷೋಡಶಸ್ವರರೂಪಂಗಳಾದ ಷೋಡಶದಳಗಳಲ್ಲಿ

ಸರ್ವಾಲಂಕಾರಯುಕ್ತಗಾಗಿ ಸಾಯುಧರಾಗಿ ತಮ್ಮ ತಮ್ಮ ಪರಿವಾರದೊಡ ಗೂಡಿ ಶ್ರೀ ಜಗದೀಶ್ವರಿಯು ಸೇವೆಯೊಳ್ ಕಾದಿರುವರು. ಈ ಎರಡನೇ ಆವರಣಕ್ಕೆ ಅಭಿಮಾನದೇವತೆಯಾದ ತ್ರಿಪುರೇಶಿ ಎಂಬ ದೇವತೆಯು ಸರ್ವ ವಿದ್ರಾವಿಣೀ ಎಂಬ ಮುಂದ್ರೆಯಿಂದೊಡಗೂಡಿ ವಿಹರಿಸುತ್ತಿರುವಳು.

ಇವರ ಮೇಲುಭಾಗದೊಳ್ ಅಷ್ಟದಳಾತ್ಮಕವಾದ ಸರ್ವಸಂಕ್ಷೋಭಣಚಕ್ರವೆಂಬ ಹೆಸರುಳ್ಳ ತೃತೀಯಾವರಣರೂಪವಾದ ಮೂರನೇ ಅಂತಸ್ತಿನೊಳ್ ಅನಂಗಕುಸುಮಾ ಅನಂಗಮೇಖಲಾ ಅನಂಗಮದನಾ ಅನಂಗ ಮದನಾತುರಾ ಅನಂಗರೇಖಾ ಅನಂಗವೇಗಾ ಅನಂಗಾಂಕುಶಾ ಅನಂಗಮಾ ಲಿನೀ ಎಂಬ ಎಂಟುಮಂದಿ ಗುಪ್ತಯೋಗಿನೀಯರೆಂಬ ದೇವತೆಗಳು ಸಾ ಲಂಕಾರರಾಗಿ ಸಾಯುಧರಾಗಿ ಸಪರಿವಾರರಾಗಿ ಶ್ರೀಜಗದೀಶ್ವರಿಯ ಸೇವೆ ಯೊಳ್ ಕಾದಿರುವರು. ಈ ಆವರಣಕ್ಕೆ ಅಭಿಮಾನಿದೇವತೆಯಾದ ತ್ರಿಪು ರಸುಂದರಿಯು ಸರ್ವಾಕರ್ಷಿಣೀ ಎಂಬ ಮುದ್ರೆಯಿಂದೊಡಗೂಡಿ ವಿ ಹರಿಸುತ್ತಿರುವಳು.

ಇದರ ಮೇಲುಭಾಗದೊಳ್ ಚತುರ್ದಶಕೋಣಯುಕ್ತವಾದ ಸರ್ವ ಸೌಖ್ಯದಾಯಕಚಕ್ರವೆಂಬ ಹೆಸರುಳ್ಳ ಚತುರ್ಥಾವರಣರೂಪವಾದ ನಾ ಲ್ಕನೇ ಅಂತಸ್ತಿನೊಳ್ ಸರ್ವಸಂಕ್ಷೋಭಿಣೀ ಸರ್ವವಿದ್ರಾವಿಣೀ ಸರ್ವಾಕ ರ್ಷಿಣೀ, ಸರ್ವಾಹ್ಲಾದಿನೀ, ಸರ್ವಸಂಮೋಹಿನೀ, ಸರ್ವಸ್ತಂಭಿನೀ, ಸರ್ವ ಜೃಂಭಿಣೀ, ಸರ್ವವಶಂಕರೀ, ಸರ್ವರಂಜನೀ ಸರ್ವೋನ್ಮಾದಿನೀ ಸರ್ವಾರ್ಥ ಸಾಧಿಕಾ ಸರ್ವಸಂಪತ್ಪ್ರಪೂರಿಣೀ ಸರ ಮಂತ್ರಮಯಿೂ ಸರ್ವದ್ವಂದ್ವಕ್ಷ ಯಕರೀಎಂಬಹದಿನಾಲ್ಕು ಮಂದಿ ಸಂಪ್ರದಾಯಯೊ ಗಿನೀಯರೆಂಬ ದೇವತೆ ಗಳು ಸಾಯುಧರಾಗಿ ಸರ್ವಾಲಂಕಾರಯುಕ್ತರಾಗಿ ಸಪರಿವಾರರಾಗಿ ಜಗ ದೀಶ್ವರಿಯ ಸೇವೆಯೊಳ್ ಕಾದಿರುವರು. ಈ ಆವರಣಾಭಿಮಾನಿದೇವತೆ ಯಾದ ತ್ರಿಪುರವಾಸಿನಿಯು ಸರ್ವವಶಂಕರೀ ಯೆಂಬ ಮುದ್ರೆಯಿಂದೊಡ ಗೂಡಿ ವಿಹರಿಸುತ್ತಿರುವಳು.

ಇದರ ಮೇಲುಭಾಗದೊಳ್ ಬಹಿರ್ದಶಾರವೆಂಬ ಸರ್ವಾರ್ಥಸಾಧಕ ಚಕ್ರವೆಂದು ಹೆಸರುಳ್ಳ ಪಂಚಮಾವರಣರೂಪವಾದ ಐದನೇ ಅಂತಸ್ತಿ ನೊಳ್ ಸರ್ವಸಿದ್ಧಿಪ್ರದಾ, ಸರ್ವಸಂಪತ್ಪ್ರದಾ, ಸರ್ವಪ್ರಿಯಂಕರೀ, ಸ

ರ್ವಮಂಗಳಕಾರಿಣೀ, ಸರ್ವಕಾಮಪ್ರದಾ, ಸರ್ವದುಃಖವಿನಾಶಿನೀ, ಸರ್ವ ಮೃತ್ಯುಪ್ರಶಮನೀ, ಸರ್ವವಿಘ್ನನಿವಾರಿಣೀ ಸರ್ವಾಂಗಸುಂದರೀ ಸರ್ವ ಸೌಭಾಗ್ಯದಾಯಿನೀ ಎಂಬ ಈ ಹತ್ತುಮಂದಿ ಕುಲೋತ್ತೀರ್ಣಯೋಗಿನೀದೇವತೆಗಳು ಸಾಯುಧರಾಗಿ ಸಾಲಂಕಾರರಾಗಿ ಸಪರಿವಾರರಾಗಿ ಶ್ರೀಜಗದೀಶ್ವರಿಯ ಸೇವೆಯೊಳ್ ಕಾದಿರುವರು. ಈ ಆವರಣಾಭಿಮಾನಿದೇವತೆಯಾದ ತ್ರಿಪುರ ಶ್ರೀ ಎಂಬ ಚಕ್ರೇಶ್ವರಿಯು ಸರ್ವೋನ್ಮಾದಿನೀ ಎಂಬ ಮುದ್ರೆಯಿಂದೊಡಗೂಡಿ ವಿಹರಿಸುತ್ತಿರುವಳು.

ಇದರ ಮೇಲುಭಾಗದೊಳ್ ಅಂತರ್ದಶಾರವೆಂಬ ಸರ್ವರಕ್ಷಾಕರಚಕ್ರವೆಂಬ ಹೆಸರುಳ್ಳ ಷಷ್ಠಾವರಣರೂಪವಾದ ಆರನೇ ಅಂತಸ್ತಿನೊಳ್ ಸರಜ್ಞಾ ಸರ್ವಶಕ್ತಿ ಸರ್ವೈಶ್ವರ್ಯಪ್ರದಾಯಿನೀ ಸರ್ವಜ್ಞಾನಮಯೀ ಸರ್ವವ್ಯಾಧಿವಿನಾಶಿನೀ ಸರ್ವಾಧಾರಸ್ವರೂಪಾ ಸರ್ವಪಾಪಹರಾ ಸರ್ವಾನಂದಮಯೀ ಸರ್ವರಕ್ಷಾಸ್ವರೂಪಿಣೀ ಸರ್ವೇಪ್ಸಿತಪ್ರದಾ ಎಂಬ ಈ ಹತ್ತುಮಂದಿ ನಿಗರ್ಭಯೋಗಿನೀರೆಂಬ ದೇವತೆಗಳು ಸಾಯುಧರಾಗಿ ಸಾಲಂಕಾರರಾಗಿ ಸಪರಿವಾರರಾಗಿ ಶ್ರೀಜಗನ್ಮಾತೆಯ ಸೇವೆಯೊಳ್ ಕಾದಿರುವರು. ಈ ಆವರಣಾಭಿಮಾನಿದೇವತೆಯಾದ ತ್ರಿಪುರಮಾಲಿನೀ ಎಂಬ ಚಕ್ರೇಶ್ವರಿಯು ಸರ್ವಮಹಾಂಕುಶಾ ಎಂಬ ಮುದ್ರೆಯಿಂದೊಡಗೂಡಿ ಸಂಚರಿಸುತ್ತಿರುವಳು.

ಇದರ ಮೇಲುಭಾಗದೊಳ್ ಅಷ್ಟಕೋಣಯುಕ್ತವಾದ ಸರ್ವರೋಗಹರಚಕ್ರವೆಂಬ ಹೆಸರುಳ್ಳ ಸಪ್ತಮಾವರಣರೂಪವಾದ ಏಳನೆಯ ಅಂತಸ್ತಿನೊಳ್ ಅವರ್ಗಸಹಿತವಾದ ವಶಿನಿಯು ಕವರ್ಗಸಹಿತವಾದ ಕಾಮೇಶಿಯು ಚವರ್ಗಸಹಿತವಾದ ಮೋದಿನಿಯು ಟವರ್ಗಸಹಿತವಾದ ವಿಮಲೆಯು ತವರ್ಗಸಹಿತವಾದ ಅರುಣೆಯು ಪವರ್ಗಸಹಿತವಾದ ಜಯಿನಿಯು ಯವರ್ಗಸಹಿತವಾದ ಸರ್ವೇಶಿಯು ಶವರ್ಗಸಹಿತವಾದ ಕೌಲಿನಿಯು ಈ ಎಂಟುಮಂದಿ ರಹಸ್ಯಯೋಗಿನೀಯರೆಂಬ ದೇವತೆಗಳು ಸಾಲಂಕಾರರಾಗಿ ಸಾಯುಧರಾಗಿ ಸಪರಿವಾರರಾಗಿ ಜಗದೀಶ್ವರಿಯ ಪಾದಸೇವೆಯೊಳ್ ಕಾದಿರುವರು. ಈ ಆವರಣದೇವತೆಯಾದ ತ್ರಿಪುರಸಿದ್ಧೀ ಎಂಬ ಚಕ್ರೇಶ್ವರಿಯು ಸರ್ವಖೇಚರೀ ಎಂಬ ಮುದ್ರೆಯಿಂದೊಡಗೂಡಿ ಜಾಗರೂಕಳಾಗಿ ಕಾದಿರುವಳು.

ಈ ಆವರಣಕ್ಕೆ ಮೇಲಣ ಸರ್ವಸಿದ್ಧಿಪ್ರದಾಯಕವೆಂಬ ಎಂಟನೇ ಆವರಣಕ್ಕೊ ಮಧ್ಯದೊಳ್ ಇಪ್ಪತ್ತುವೊಳ ಅಂತರಾಳದಲ್ಲಿ ನಾನಾರತ್ನ ಮಯಂಗಳಾದ ಜಗಲಿಗಳು ಇರುವವು. ಅವರಲ್ಲಿ ಬಾಣಿನೀ ಚಾಪಿನೀ ಪಾಶಿನೀ ಅಂಕುಶಿನೀ ಎಂಬ ಅಸ್ತ್ರದೇವತೆಗಳು ಅಸ್ತ್ರಶಾಲೆಯಲ್ಲಿ ಜಗದೀಶ್ವರಿಯು ಧರಿಸುವ ಬಾಣಗಳುಐದು ಇಕ್ಷುಚಾಪವೊಂದು ಪಾಶ ವೊಂದು ಅಂಕುಶವೊಂದು ಈಪರಿಯಾಗಿ ಕಾಮೇಶ್ವರನು ಧರಿಸಲು ಯೋಗ್ಯಂಗಳಾದ ಬಾಣ ಚಾಪ ಪಾಶ ಅಂಕುಶ ಸಹಿತಂಗಳಾಗಿ ಭಂಡಾಸುರನ ಯುದ್ಧದಲ್ಲಿ ದೈತ್ಯದಾನವರ ರಕ್ತಪಾನಂಗಳಿಂ ತೃಪ್ತಿಯಂಹೊಂದಿ ಇರುವವು. ಇದುಮಲ್ಲದೆ ಅಸಂಖ್ಯಾಕಂಗಳಾದ ವಜ್ರ ಶಕ್ತಿ ಶತಘ್ನೀ ಭೃಶುಂಡೀ ಮುಸಲ ಪಟ್ಟಸ ಮುದ್ಗರ ಭಿಂಡಿವಾಲ ಮೊದಲಾದ ಶತಸಹಸ್ರಾಯುಧಂಗಳು ಮೇಲೆಹೇಳಿರುವ ಮುಖ್ಯಾಯುಧಂಗಳನ್ನೇ ಸೇವಿಸುತಲಿರುವವು.

ಇದರ ಮೇಲುಭಾಗದೊಳ್ ಕೋಣತ್ರಯಯುಕ್ತವಾಗಿ ಸರ್ವಸಿದ್ಧಿಪ್ರದಾಯಕಚಕ್ರವೆಂಬ ಹೆಸರುಳ್ಳ ಅಷ್ಟಮಾವರಣರೂಪವಾದ ಎಂಟನೇ ಅಂತಿಸ್ತಿನೊಳ್ ತ್ರಿಖಂಡದೇವತೆಗಳಾದ ಕಾಮೇಶೀ ವಜ್ರೇಶೀ ಭಗಮಾಲಿನೀಎಂಬ ಈ ಮೂರುಮಂದಿ ಅತಿರಹಸ್ಯಯೋಗಿನಿಯರು ಸಾಯುಧ ಸಾಲಂಕಾರ ಸಪರಿವಾರರಾಗಿ ಶ್ರೀಜಗದೀಶ್ವರಿಯ ಪಾದಕಮಲವಂ ಧ್ಯಾನಿಸುತ ಕಾದಿರುವರು. ಈ ಆವರಣಾಭಿಮಾನಿಯಾದ ತ್ರಿಪುರಾಂಬಾ ಎಂಬ ಚಕ್ರೇಶ್ವರಿಯು ಸರ್ವಬೀಜಾ ಎಂಬ ಮುದ್ರೆಯಿಂದೊಡಗೂಡಿ ಜಾಗರೂಕಳಾಗಿರುವಳು.

ಈ ಆವರಣಕ್ಕೆ ಸರ್ವಾನಂದಮಯವೆಂಬ ಒಂಭತ್ತನೆಯ ಆವರಣಕ್ಕೂ ಮಧ್ಯದೊಳ್ ನಾಥಾಂತವಿರುವದು. ಅದರಲ್ಲಿ ಯೋಗಶಾಸ್ತ್ರಪ್ರವರ್ತಕರಾದ ಮಂತ್ರಗುರುಗಳು ಯುಗನಾಥರಾದ ಮಿತ್ರೇಶ ಒಡ್ಡೀಶ ಷಷ್ಠೀಶ ಚರ್ಯಾನಾಥರು ಶ್ರೀದೇವಿಯ ಪಾದುಕಾರೂಪವಾಗಿ ಮತ್ತು ದಿವ್ಯೌಘ ಮಾನವೌಘ ಸಿದ್ಧೌಘ ಲೋಪಾಮುದ್ರಾ ಅಗಸ್ತ್ಯ ಕಾಲತಾಪನ ಧರ್ಮಾಚಾರ್ಯ ಮುಕ್ತಕೇಶೀಶ್ವರ ದೀಪಕಲಾನಾಥ ವಿಷ್ಣುದೇವ ಪ್ರಭಾಕರದೇವ ತೇಜೋದೇವ ಮನೋಜದೇವ ಕಲ್ಯಾಣದೇವ ರತ್ನದೇವ ವಾಸುದೇವ ಶ್ರೀರಾಮಾನಂದರೆಂಬ ಮಂತ್ರವಿದ್ಯಾಪ್ರವರ್ತಕರು ಸಪ್ತ

ಕೋಟಿಮಹಾಮಂತ್ರಾತ್ಮಕಷಡಾಮ್ನಾಯ ಮೊದಲಾದ ದೇವತೆಗಳು ಜಗಜ್ಜನನಿಯ ಪಾದಕಮಲದಲ್ಲಿ ಚಿತ್ತವನ್ನಿಟ್ಟು ಭಜಿಸುತಲಿರುವರು. ಇದರ ಮೇಲುಗಡೆಯಲ್ಲಿ ನಿತ್ಯಾಂತರದೊಳ್ ನಿತ್ಯಕನ್ನೆಯರೆಂಬ ಕಾಮೇಶೀ ಭಗಮಾಲಾ ನಿತ್ಯಕ್ಲಿನ್ನಾ ಭೇರುಂಡಾ ವಹ್ನಿವಾಸಿನೀ ಮಹಾವಜ್ರೇಶ್ವರೀ ಶಿವದೂತೀ ತ್ವರಿತಾ ಕುಲಸುಂದರೀ ನಿತ್ಯಾ ನೀಲಪತಾಕಾ ವಿಜಯಾ ಸರ್ವಮಂಗಳಾ ಜ್ವಾಲಾಮಾಲಿನೀ ಚಿತ್ರಾ ಎಂಬ ಹದಿನೈದುಮಂದಿ ದೇವತೆಗಳು ಪರಿವಾರಾಲಂಕಾರಾಯುಧಸಹಿತರಾಗಿರುವರು. ಮಹಾತ್ರಿಪುರಸುಂದರೀ ಎಂಬ ಚಕ್ರೇಶ್ವರಿಯು ಸರ್ವಯೋನಿಮುದ್ರೆಯಿಂದೊಡಗೂಡಿ ವಿಹರಿಸುತ್ತಲಿರುವಳು. ಇವರ ಮೇಲುಭಾಗದೊಳ್ ಬಿಂದುಸ್ಥಾನದಲ್ಲಿ ಪಂಚಬ್ರಹ್ಮಾತ್ಮಕವಾದ ಮಂಚವನ್ನು ಶ್ರೀದೇವಿಯ ಅಂಗರಕ್ಷಣತತ್ಪರರಾದ ಅತ್ಯಂತ ಅಂತರಂಗರಾದ ಸರ್ವಲಕ್ಷಣಸಂಪನ್ನರಾದ ಹೃದಯದೇವೀ ಶಿರೋದೇವೀ ಶಿಖಾದೇವೀ ಕವಚದೇವೀ ನೇತ್ರದೇವೀ ಅಸ್ತ್ರದೇವೀರೆಂಬ ಷಡಂಗದೇವತೆಗಳು ಹಸ್ತಗಳೊಳ್ ಖಡ್ಗಂಗಳಂ ಧರಿಸಿ ಜಾಗರೂಕರಾಗಿ ಕಾದಿರುವರು. ಸರ್ವಾನಂದಮಯಚಕ್ರವೆಂಬ ಹೆಸರುಳ್ಳ ನವಮಾವರಣವಾದ ತ್ರಿಖಂಡಮುದ್ರೆಯಿಂದೊಡಗೂಡಿದ ಮಂಡಲಾಕೃತಿಯಾದ ಬಿಂದುಮಯಪೀಠವಿರುವದು. ಈ ಪೀಠವು ಶ್ರೀಪೀಠವೆಂದು ಮಹಾಪೀಠವೆಂದು ವಿದ್ಯಾಪೀಠವೆಂದು ಪಂಚಾಶತ್ಪೀಠವೆಂದು ಆನಂದಪೀಠವೆಂದು ಸರ್ವಾನಂದಮಯಚಕ್ರವೆಂದು ಶ್ರೀಲಲಿತಾದೇವಿಯ ಪಾದವಿನ್ಯಾಸಕ್ಕೆ ಯೋಗ್ಯವಾಗಿರುವದು. ಈ ಮಂಡಲದ ಮಧ್ಯದೊಳ್ ಪಂಚಬ್ರಹ್ಮಾತ್ಮಕವಾದ ತೂಗುಮಂಚವಿರುವದು. ಅದೆಂತಿರುವದೆಂದರೆ. ಜ್ಞಾನಸ್ವರೂಪಂಗಳಾದ ತೇಜೋರೂಪಂಗಳಾದ ದಿವ್ಯಸುಗಂಧಸೌಕುಮಾರ್ಯಯುಕ್ತಂಗಳಾದ ವಿಚಿತ್ರಶಕ್ತಿರೂಪಂಗಳಾದ ನಾನಾಜೀವರತ್ನಂಗಳಿಂದಲಂಕೃತಗಳಾದ ಆನಂದಕರಂಗಳಾದ ನಾಲ್ಕುಪಾದಂಗಳಿರುವವು. ಆ ಪಾದಗಳೊಳ್ ಆಗ್ನೇಯದಿಕ್ಕಿನಪಾದದಲ್ಲಿ ಚತುರ್ಮುಖಬ್ರಹ್ಮನು ಕೆಂಪುವರ್ಣದಿಂಯುಕ್ತನಾಗಿ ಸರ್ವಾಲಂಕಾರಯುಕ್ತನಾಗಿ ನಿಜಾಯುಧಂಗಳಂಧರಿಸಿ ಜಗದೀಶ್ವರಿಯ ಸೇವೆಯೊಳ್ ಪರಮತಾತ್ಪರ್ಯದಿಂದಿರುವನು. ನೈಋತ್ಯದಿಕ್ಕಿನ ಪಾದದೊಳ್ ಮಹಾವಿಷ್ಣುವು ಸರ್ವಾಲಂಕಾರಗಳಿಂದ ಅಲಂಕೃ

ತನಾಗಿ ನಿಜಾಯುಧಧರನಾಗಿ ಶ್ರೀಜಗದೀಶ್ವರಿಯ ಸೇವೆಯಲ್ಲಿ ಪರಮತಾತ್ಪರ್ಯದಿಂದಿರುವನು. ವಾಯುವ್ಯದಿಕ್ಕಿನ ಪಾದದೊಳ್ ರುದ್ರನು ಶುದ್ಧಸ್ಫಟಿಕವರ್ಣನಾಗಿ ಸರ್ವಾಲಂಕಾರಗಳಿಂದಲಂಕೃತನಾಗಿ ನಿಜಾಯುಧಧರನಾಗಿ ಶ್ರೀಜಗದೀಶ್ವರಿಯ ಸೇವೆಯಲ್ಲಿ ಪರಮತಾತ್ಪರ್ಯದಿಂದಿರುವನು. ಈಶಾನ್ಯದಿಕ್ಕಿನ ಪಾದದೊಳ್ ಈಶ್ವರನು ಪೀತವರ್ಣನಾಗಿ ಸರ್ವಾಲಂಕಾರಗಳಿಂದಲಂಕೃತನಾಗಿ ನಿಜಾಯುಧಧರನಾಗಿ ಶ್ರೀಜಗದೀಶ್ವರಿಯ ಸೇವೆಯಲ್ಲಿ ಪರಮತಾತ್ಪರ್ಯದಿಂದಿರುವನು. ಇಂತಿರ್ಪ ನಾಲ್ಕು ಪಾದಗಳ ಮೇಲುಭಾಗದೊಳ್ ಸದಾಶಿವನು ದಾಡಿಮಕುಸುಮಸಂಕಾಶನಾಗಿ ಕಿರೀಟ ಕುಂಡಲ ಅಂಗದ ಕಟಕ ಹಾರ ನೂಪುರ ಮೊದಲಾದ ಸಕಲ ರತ್ನಾಭರಣಗಳಿಂದಲಂಕೃತನಾಗಿ ಶ್ರೀಜಗದೀಶ್ವರಿಯ ಪಾದಸೇವೆಯಲ್ಲಿ ಪರಮತಾತ್ಪರ್ಯಯುಕ್ತನಾಗಿ ಪರ್ಯಂಕಫಲಕರೂಪವಂ ತಾಳಿರುವನು. ಇಂತಿರ್ಪ ಪಂಚಬ್ರಹ್ಮಾತ್ಮಕವಾದ ಮಂಚಕ್ಕೆ ಮನೋಬುದ್ಧಿಚಿತ್ತಾಹಂಕಾರಗಳೆಂಬ ನಾಲ್ಕು ಕೊಂಡಿಗಳಿರುವವು. ಆ ಕೊಂಡಿಗಳಿಂ ನಿಬದ್ಧಂಗಳಾದ ಧರ್ಮಾರ್ಥಕಾಮಮೋಕ್ಷಂಗಳೆಂಬ ನಾಲ್ಕು ಪುರುಷಾರ್ಥಂಗಳೇ ನಾಲ್ಕು ಸರಪಣಿಗಳಾಗಿ ಚಿಂತಾಮಣಿಗೃಹದ ಮೇಲುಭಾಗದಲ್ಲಿರುವ ಜ್ಞಾನಶಕ್ತಿ ಎಂಬ ಮಧ್ಯಗೋಪುರದ ಅಂತರಾಳದಲ್ಲಿರುವ ಸಹಸ್ರದಳಯುಕ್ತವಾದ ಕಮಲದ ವಿತತಿಯನಾಶ್ರಯಿಸಿ ಇರುವವು. ಬ್ರಹ್ಮ ವಿಷ್ಣು ರುದ್ರ ಈಶ್ವರರೆಂಬ ಈ ಮಂಚದ ನಾಲ್ಕು ಪಾದಂಗಳನ್ನಾಶ್ರಯಿಸಿದ ಸಾಲೋಕ್ಯ ಸಾರೂಪ್ಯ ಸಾಮೀಪ್ಯ ಸಾಯುಜ್ಯರೂಪಂಗಳಾದ ನಾಲ್ಕು ವಿಧ ಮುಕ್ತಿಗಳೆಂಬ ನಾಲ್ಕು ಕಂಭಗಳು ತ್ರಿವರ್ಣಾತ್ಮಕವಾದ ಪ್ರಣವಸ್ವರೂಪವಾದ ವಿತಾನವಂ ಧರಿಸಿರುವವು. ಇಂತಿರ್ಪ ವಿತಾನವನ್ನಾಶ್ರಯಿಸಿ ಸುತ್ತುವರಿದು ಪರ್ಯಂಕಪಾದಪರ್ಯಂತವು ವರ್ಣಿಸಲಶಕ್ಯವಾದ ಮಾಯೆಯೇ ತೆರೆಯಾಗಿರುವದು. ಪ್ರಣವಸ್ವರೂಪವಾದ ಈ ವಿತಾನವನ್ನಾಶ್ರಯಿಸಿದ ಷೋಡಶಾಕ್ಷರೀಮಹಾಮಂತ್ರದ ಅಕ್ಷರಗಳೇ ವಿಚಿತ್ರಗಂಧಗಳಾದ ಹದಿನಾರು ಪುಷ್ಪಗುಚ್ಛಗಳಾಗಿ ಚಲಿಸುತ್ತಲಿರುವವು. ಇಂತಿರ್ಪ ಮಂಚದ ಸದಾಶಿವಾತ್ಮಕವಾದ ಫಲಕದ ಉಪರಿಭಾಗದೊಳ್ ಶುದ್ಧಸತ್ವಾತ್ಮಕವಾದ ಹಂಸತೂಲಿಕಾತಲ್ಪದಲ್ಲಿ ಆನಂದಾನುಭವಮಯವಾದ ಅಡ್ಡವರಗು

ಇರುವದು. ಇಂತಿರ್ಪ ಮಹಾಪರ್ಯಂಕಕ್ಕೆ ಆರೋಹಣಯೋಗ್ಯಂಗಳಾದ ಪೃಥಿವೀ ಅಪ್ಪು ತೇಜಸ್ಸು ವಾಯು ಆಕಾಶಗಳೆಂಬ ಪಂಚಭೂತಗಳು ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಪಂಚತನ್ಮಾತ್ರಗಳು ತ್ವಕ್ಕು ಚಕ್ಷುಸ್ಸು ಶ್ರೋತ್ರ ಜಿಹ್ವಾ ಘ್ರಾಣಗಳೆಂಬ ಪಂಚಜ್ಞಾನೇಂದ್ರಿಯಗಳು ವಾಕ್ಕು ಪಾಣಿ ಪಾದ ಪಾಯು ಉಪಸ್ಥಗಳೆಂಬ ಪಂಚಕರ್ಮೇಂದ್ರಿಯಗಳು ಅಹಂಕಾರ ಬುದ್ಧಿ ಚಿತ್ತ ಮನಸ್ಸು ಪ್ರಕೃತಿ ಪುರುಷ ನಿಯತಿ ಕಾಲ ರಾಗ ಕಲಾ ಮಾಯಾ ವಿದ್ಯಾ ಶುದ್ಧವಿದ್ಯಾ ಈಶ್ವರ ಸದಾಶಿವ ಶಕ್ತಿ ಈ ಮುವ್ವತ್ತಾರುಮುಂದಿ ತತ್ವಾಧಿಷ್ಠಾನಿದೇವತೆಗಳೇ ದಿವ್ಯಸೋಪಾನಂಗಳಾಗಿ ಶ್ರೀಜಗದೀಶ್ವರಿಯ ಪಾದವಿನ್ಯಾಸಕ್ಕೆ ಯೋಗ್ಯವಾದ ಸೇವೆಯಲ್ಲಿ ನಿರತಮತಾತ್ಪರ್ಯದಿಂದಿರುವರು. ಇಂತು ಜಗನ್ಮೋಹನಾಕಾರವಾದ ಪರ್ಯಂಕದಲ್ಲಿರುವ ಹಂಸತೂಲಿಕಾತಲ್ಪದ ಮಧ್ಯಭಾಗದೊಳ್ ಕಾಮೇಶ್ವರನಿಂದ ಸುಪ್ರಾರ್ಥಿತಗಳಾದ ಸಕಲ ಬ್ರಹ್ಮಾಂಡಗಳಿಗು ಆದಿಕಾರಣೆಯಾದ ಪರಶಕ್ತಿಯಾದ ಪರಂಜ್ಯೋತಿಸ್ವರೂಪಿಣಿಯಾದ ಲಲಿತಾ ತ್ರಿಪುರಸುಂದರೀ ಮಹಾಮಾಯಾ ಯೋಗನಿದ್ರಾ ಸರ್ವಮಂಗಳಾ ರಾಜರಾಜೇಶ್ವರೀ ಇವು ಮೊದಲಾದ ಅನೇಕ ನಾಮಂಗಳಿಂದ ಸ್ತುತಿಸಲ್ಪಡುವಳಾದ ಶ್ರೀಜಗದೀಶ್ವರಿಯಾದ ಮೂಲಪ್ರಕೃತಿಯಾದ ಲೀಲಾವಿಗ್ರಹರೂಪವಂತಾಳಿರುವ ಶ್ರೀಆದಿಶಕ್ತಿಯು ಸಕಲಭುವನಸಂರಕ್ಷಣದೀಕ್ಷೆಯಂ ವಹಿಸಿ ಚತುರ್ವಿಧ ಪುರುಷಾರ್ಥಂಗಳಂ ಕೊಡುವ ನಾಲ್ಕು ಕರಗಳೊಳ್ ಒಂದು ಕರದಲ್ಲಿ ಸಕಲದೈತ್ಯಸಂಹಾರಕರವಾದ ಜಗನ್ಮೋಹನಕರವಾದ ಪಾಶವಂ ಮತ್ತೊಂದುಕರದಲ್ಲಿ ಸಕಲಭಕ್ತಜನಂಗಳ ದಾರಿದ್ರ್ಯಮಂ ಪಾಪವಂ ಪರಿಹರಿಸುವ ಮಹಾಂಕುಶವಂ ಮತ್ತೊಂದು ಹಸ್ತದೊಳ್ ಅನೇಕಕೋಟಿ ಮನ್ಮಥರಿಗೆ ಉತ್ಪತ್ತಿಕಾರಣವಾದ ಪುಂಡ್ರೇಕ್ಷುಕೋದಂಡವಂ ಮತ್ತೊಂದುಕರದೊಳ್ ಶೃಂಗಾರರಸಕ್ಕೆ ಜೀವನರೂಪಂಗಳಾದ ಅರವಿಂದ ಅಶೋಕ ಮಾಕಂದ ನವಮಲ್ಲಿಕಾ ನೀಲೋತ್ಪಲಗಳೆಂಬ ಐದು ಪುಷ್ಪಬಾಣಂಗಳಂ ಧರಿಸಿ ಇದಲ್ಲದೆ ಓಷಧಿಪತಿಯಾದ ಅಮೃತಸ್ವರೂಪನಾದ ಸಕಲ ಜಗದಾನಂದಕರವಾದ ಚಂದ್ರರೇಖೆಯಿಂದಲಂಕರಿಸಲ್ಪಟ್ಟ ಚಿದ್ರೂಪವಾದ ಸ್ವಯಂಪ್ರಕಾಶವಾದ ಕಿರೀಟವಂ ಧರಿಸಿ ಅಷ್ಟಮೀಚಂದ್ರಪರಿಮಾಣದಿಂ

ದ ಒಪ್ಪುತ್ತಿರುವ ಕೋಟಿಚಂದ್ರಪ್ರಕಾಶವಾದ ಫಾಲದೇಶದೊಳ್ ಗಾಯತ್ರೀ ಸಾವಿತ್ರೀ ಸರಸ್ವತೀರೂಪಸಂಧ್ಯಾತ್ಮಕವಾದ ಕೆಂಪಾದ ಘುಮಘುಮಿಸುತಲಿರುವ ದಿವ್ಯಕುಂಕುಮವಂ ಅಲಂಕರಿಸಿ ಮುಖಚಂದ್ರಮಂಡಲಸಮೀಪಕ್ಕೆ ಬಂದು ನಮ್ಮಂ ಸಂರಕ್ಷಿಸಬೇಕೆಂದು ಕಾದಿರುವ ಅಂಧಕಾರದ ಮರಿಗಳೋ ಎಂಬಂತಿರುವ ಸುಳಿಗುರುಳುಗಳಲ್ಲಿ ಅಪ್ರಾಕೃತರತ್ನಮಯಂಗಳಾದ ಹೆರೆ ಚಂದ್ರಸೂರ್ಯಬಟ್ಟು ಮುಂಗುರುಳುಪಟ್ಟಗಳಿಂದ ಅಲಂಕೃತಳಾಗಿ ಚಲನಮಾತ್ರದಿಂದ ಬ್ರಹ್ಮಾಂಡತಂಡಗಳ ಕಲ್ಪನೆಯಂ ಮಾಡುವ ಭ್ರೂವಲ್ಲಿಗಳ ಮಧ್ಯದೊಳ್ ಕಸ್ತೂರಿಯ ಬೊಟ್ಟನಿಟ್ಟು ವದನಸೌಂದರ್ಯದ ಪ್ರವಾಹದೊಳ್ ಪೊಳೆಯುವ ಮೀನಗಳಂತಿರುವ ಸಕಲೈಶ್ವರ್ಯಪ್ರದಂಗಳಾದ ವೀಕ್ಷಣಗಳುಳ್ಳ ನೇತ್ರಂಗಳಿಂದ ಶೋಭಿತಳಾಗಿ ನೂತನಚಂಪಕಕುಸುಮದಂತಿರುವ ನಾಸಾಪುಟದಲ್ಲಿ ದಿವ್ಯಜ್ಞಾನಮಯವಾದ ಮುತ್ತಿನ ಮೂಗುತಿಯಿಂದ ವಿರಾಜಿತಳಾಗಿ ಕದಂಬಕುಸುಮಗುಚ್ಛಗಳಂ ಕರ್ಣಪೂರಂಗಳಾಗಿ ಧರಿಸಿ ಸೂರ್ಯಚಂದ್ರಮಂಡಲಂಗಳು ಏಕದೇಶದೊಳ್ ಸಮಾನಕಾಂತಿಯಿಂದಿರುವಂತೆ ವಿರಾಜಿಸುವ ತಾಟಂಕಗಳಿಂದ ಲೋಕಪ್ರಕಾಶಕಳಾಗಿ ಪದ್ಮರಾಗಮಣಿಮಯಕನ್ನಡಿಗಳಂತೆ ಥಳಥಳಿಸುವ ದಿವ್ಯಹರಿದ್ರಾನುಲೇಪನದಿಂ ರಮಣೀಯಂಗಳಾದ ಕಪೋಲಂಗಳಿಂದಲು, ಶುದ್ಧವಿದ್ಯೆಯ ಅಂಕುರಂಗಳಂತಿರುವ ದಂತಗಳ ಕಾಂತಿ ಎಂಬ ಮಂದಹಾಸದಿಂದೊಪ್ಪಿ ಸಕಲ ವೇದ ಪುರಾಣ ಇತಿಹಾಸಾದಿಗಳಂ ಮೊದಲು ದೇವಋಷಿಗಳಿಗೆ ಉಪದೇಶವಂಗೈದು ವಾಗ್ದೇವತೆಗೆ ವಾಸಸ್ಥಾನವಾದ ದಿವ್ಯವದನಕಮಲದಿಂದವಪ್ಪುವ ಬಾಲಾ ಭುವನೇಶ್ವರೀಯರೆಂಬ ದೇವತೆಗಳು ಒಪ್ಪಿಸುವ ಕೇವಲ ಸುಖರೂಪವಾದ ತಾಂಬೂಲವಾಸನೆಯಿಂ ಸಕಲ ದಿಕ್ಕುಗಳಂ ಪರಿಮಳಯುಕ್ತಂಗಳಾಗಿ ಮಾಡುವ ಲೋಕದಲ್ಲಿ ಸಮಾನ ವಸ್ತು ಇರುವದೆಂದು ಹೇಳುವದಕ್ಕೆ ಶಕ್ಯವಲ್ಲದ ಗಲ್ಲದಿಂದ ಉಪಶೋಭಿತಳಾಗಿ ಕಾಮೇಶ್ವರನಿಂದ ಕಟ್ಟಲ್ಪಟ್ಟ ಮಾಂಗಲ್ಯಸೂತ್ರವುಳ್ಳ ಕಂಠದಿಂ ವಿರಾಜಿತಳಾಗಿಯು, ಇಂತು ಮಲ್ಲದೆ ಅನರ್ಘಂಗಳಾದ ಅತಿಪ್ರಕಾಶಂಗಳಾದ ವಿಜ್ಞಾನಮಯಂಗಳಾದ ವಿವಿಧದಿವ್ಯರತ್ನಮಯಂಗಳಾದ ಅಂಗದ ಮುಕ್ತಾಹಾರ ಕಂಕಣ ಅಂಗುಳೀಯಕ ಕಾಂಚೀದಾಮ ನೂಪುರ ಮೊದಲಾದ

ಅಪರಿಮಿತಂಗಳಾದ, ಆಭರಣವಿಶೇಷಂಗಳಿಂದ ಅಲಂಕೃತೆಯಾಗಿ, ಜಪಾಕು ಸುಮವರ್ಣಗಳಾದ ಪರಮತೇಜೋರೂಪಂಗಳಾದ ನಿಸ್ಸಮಾನಸೌಂದರ್ಯದಿಂದ ಯುಕ್ತಗಳಾದ ಸಕಲಾವಯವಗಳಿಂದೊಪ್ಪಿ, ದಿವ್ಯಕಸ್ತೂರಿ ಕುಂಕುಮಾಗರುಗಂಧಮಂ ಧರಿಸಿ, ಯೋಗವಿದ್ಯಾಸ್ವರೂಪಂಗಳಾದ ಕೌಸುಂಭವಸ್ತ್ರ ಕಂಚುಕ ಉತ್ತರೀಯಂಗಳಂ ಪ್ರಪದ್ಧ, ಚಂಪಕ ಅಶೋಕ ಪುನ್ನಾಗ ಸುಗಂಧರಾಜ ಪಾರಿಜಾತಪುಷ್ಪಮಾಲಿಕೆಗಳಂ ಧರಿಸಿ, ಸರ್ವಮಂಗಳಾದೇವಿ ಎಂಬ ನಾಮವಂ ಸಾರ್ಥಕಮಂ ಮಾಡುತ ಸಕಲ ಭುವನ ಸಾಮ್ರಾಜ್ಯವನ್ನಾಳುತ ಪರಮಾನಂದದಿಂ ಪರ್ಯಂಕತಲ್ಪದೊಳ್ ಕುಳಿತು ಜಗತ್ಪೂಜ್ಯವಾದೊಂದು ಪಾದವಂ ಮಡಿಸಿ ತಲ್ಪದೊಳಿರಿಸಿ ಯೋಗಿಧ್ಯೇಯವಾದ ಮತ್ತೊಂದು ಚರಣವಂ ಪಾದಪೀಠವಾದ ಸತ್ವಾಭಿಮಾನಿ ದೇವತೆಯ ಶಿರೋಭಾಗದೊಳ್ ವಿಲಾಸದಿಂದಿರಿಸಿ, ಹರಿ ಹರ ಬ್ರಹ್ಮಾದಿಗಳಿಗು ನೆಲೆಯಂತಿಳಿದು ಧ್ಯಾನವಂ ಮಾಡುವದಕ್ಕೆ ಅಶಕ್ಯಳಾಗಿ ಸಕಲ ವೇದವಾಕ್ಯಂಗಳಿಗೂ ಸ್ತೋತ್ರಂಗಳಂ ಗೈಯುವದಕ್ಕೆ ಅಗೋಚರಳಾಗಿ ಅನಂತಕಲ್ಯಾಣಗುಣಗಣಂಗಳಿಂದ ಪರಿಪೂರ್ಣಳಾಗಿ ಕಟಾಕ್ಷವೀಕ್ಷಣ ಮಾತ್ರದಿಂದಲೆ ಭಕ್ತಜನಗಳಿಗೆ ಬ್ರಹ್ಮಾದಿಪದವಿಗಳಂ ಕೊಡುತ, ಸತ್ಯಜ್ಞಾನಾನಂದಸ್ವರೂಪಿಣಿಯಾಗಿ ಅವಾಙ್ಮನಸಗೋಚರಳಾದಾಗ್ಯೂ ಲೋಕಾನುಗ್ರಹಾರ್ಥವಾಗಿ ಶ್ರೀನಗರದ ಮಹಾಚಕ್ರದೊಳ್ ಲೀಲಾವಿಗ್ರಹವಂತಾಳಿರಲು.

ಇಂತು ಜಗದೀಶ್ವರಿಯಾದ ಶ್ರೀಚಾಮುಂಡೇಶ್ವರಿಯು ಈ ಲೀಲಾವಿಗ್ರಹದ ದರ್ಶನವಂಗೈದು ಪುಳಕಾಂಕಿತಶರೀರನಾಗಿ ಆನಂದಬಾಷ್ಪಗಳಂ ದೊಡಗೂಡಿ ಗದ್ಗದಸ್ವರದಿಂದ ಪರಮಭಕ್ತಿಯಿಂ ಸ್ತೋತ್ರವಂಗೈಯಲುದ್ಯೋಗಿಸಿ ನವಾವರಣಮಹಾಚಕ್ರಪೀಠದಲ್ಲಿರುವ ಶ್ರೀದೇವೀಪರಿವಾರಂಗಳ ದಿವ್ಯಸ್ವರೂಪಂಗಳಂ ವಿಶದವಾಗಿ ನೋಡಿ ಪರವಶನಾಗಿರಲು. ಶ್ರೀಮಹಾದೇವಿಯು ಸುಗಂಧರಾಜಕುಮಾರನ ಭಯಭಕ್ತಿಮಿಶ್ರವಾದ ಮನೋಭಾವವಂ ತಿಳಿದು ಈ ಕುಮಾರನು ಭೀತನಾಗಿರುವನೆಂದು ಪರಮ ಕರುಣೆಯಿಂದ ಇವನಿಗೆ ಮೊದಲು ತನ್ನಿಂದ ಕೊಡಲ್ಪಟ್ಟ ದಿವ್ಯದೃಷ್ಟಿಯಂ ಮರೆಮಾಡಿ ಪೂರ್ವದಂತೆ ಮನೋಹರವಾದ ಸೌಮ್ಯವಾದ ರೂಪ

ದ ದರ್ಶನವಂ ಕೊಡುತಲಿರುವ ಸಮಯದೊಳ್ ಸುಗಂಧರಾಜಕುಮಾರನು ಮೆಲ್ಲನೆ ಸ್ವಪ್ನದಿಂದ ಎಚ್ಚರಿತು ಇರುವನೋಪಾದಿಯಲ್ಲಿ ತನ್ನ ಮನದೊಳ್ ಶ್ರೀದೇವಿಯು ವಿರಾಡ್ರೂಪವಂ ಶ್ರೀಚಕ್ರದೊಳಿರುವ ಲೀಲಾವಿಗ್ರಹರೂಪವಂಕೊಡಾ ನೆನೆಯುತ ಭಕ್ತಿಯುಕ್ತನಾಗಿ ಮರಳಿಮರಳಿ ದಂಡಪ್ರಣಾಮವಂಗೈಯುತ ಅನೇಕಂಗಳಾದ ಸ್ತುತಿಗಳಿಂದ ಸ್ತೋತ್ರವಂ ಮಾಡುತಿರ್ದನದೆಂತೆನೆ.

ಎಲೌ ಸಚ್ಚಿದಾನಂದಸ್ವರೂಪಿಣಿಯಾದ ಮಹಾಶಕ್ತಿಯೇ ನಿನ್ನ ಸ್ತುತಿಯಂಮಾಡುವದಕ್ಕೆ ಬಂದ ಅನೇಕ ವೇದ ವೇದಾಂತಗಳು ನಿನ್ನ ಮಹಿಮೆಯ ಕೊನೆಯಂಕಾಣದೆ ಹಿಂತಿರುಗಿ ಬರುತಿರಲು ಮಂದಮತಿಯಾದ ಮನುಷ್ಯಲೋಕದೊಳ್ ಪುಟ್ಟಿದ ನಾನು ನಿನ್ನ ಅಪಾರವಾದ ಮಹಿಮೆಯಂ ಏನೆಂದು ಸ್ತೋತ್ರವಂ ಮಾಡುವೆನು. ಈ ಪ್ರಪಂಚಸೃಷ್ಟಿಯ ಪೂರ್ವಕಾಲದಲ್ಲಿ ನೀನೇ ಸಕಲ ತತ್ವಗಳಾಗಿ ನೀನಲ್ಲದೆ ಮತ್ತೊಬ್ಬರಿಲ್ಲದೆ ಅನಂತಾನಂತಕಾಲಗಳಲ್ಲಿಯೂ ಏಕರೂಪಳಾಗಿ ಅಖಂಡಾನಂದಮಯಳಾಗಿ ಇರುತಲಿರ್ದು ಒಂದಾನೊಂದುಕಾಲದೊಳ್ ಜೀವಕೋಟಿಪುಣ್ಯರಾಶಿಯು ಫಲಿಸಿದಂತೆ ನೀನು ಜಗನ್ನಿರ್ಮಾಣಲೀಲಾನುಕೂಲವಾದ ಸಂಕಲ್ಪವಂತಾಳಿ ಸಕಲೋತ್ಪತ್ತಿಕಾರಣಗಳಾದ ಸಮಸ್ತ ತತ್ವಗಳನ್ನುಂಟುಮಾಡಿ ನಾಮರೂಪವಿಭಾಗವಂರಚಿಸಿ ಸಕಲ ಬ್ರಹ್ಮಾಂಡಗಳಿಗೆ ಆಧಾರವಾದ ಜಲಾವರಣವಂ ಕಲ್ಪಿಸಿ ಅದರಲ್ಲಿ ಹಿರಣ್ಮಯಂಗಳಾದ ಅನಂತಕೋಟಿಬ್ರಹ್ಮಾಂಡಬುದ್ಬುದಗಳಂ ಸೃಜಿಸಿ ಒಂದೊಂದು ಬ್ರಹ್ಮಾಂಡದಲ್ಲಿ ಹದಿನಾಲ್ಕುಲೋಕಂಗಳಂ ನಿರ್ಮಿಸಿ ಸೃಷ್ಟಿ ಸ್ಥಿತಿ ಲಯಕರ್ತೃಗಳಾದ ಬ್ರಹ್ಮವಿಷ್ಣು ರುದ್ರರನ್ನುಂಟುಮಾಡಿ ಬಳಿಕ ಮಾನಸೋದ್ಭವ ಜರಾಯುಜ ಅಂಡಜ ಸ್ವೇದಜ ಉದ್ಭಿಜ್ಜರೂಪಂಗಳಾದ ನವಪ್ರಜೇಶ ದೇವ ಅಸುರ ಕಿನ್ನರ ಕಿಂಪುರುಷ ಯಕ್ಷ ಗರುಡ ಗಂಧರ್ವ ಉರಗ ಮನುಷ್ಯ ಪಶು ಪಕ್ಷಿ ಕ್ರಿಮಿ ಕೀಟ ತರು ಗುಲ್ಮಾದಿಗಳ ಸೃಷ್ಟಿಯಂ ಮಾಡುವಂತೆ ಬ್ರಹ್ಮನಿಗೆ ಕಟ್ಟುಮಾಡಿ, ಸೃಷ್ಟಮಾಡುವ ವಸ್ತುಗಳ ರಕ್ಷಣೆಯಂ ಮಾಡುವಂತೆ ವಿಷ್ಣುವಂ ನಿಯಮಿಸಿ ಕರ್ಮಭೋಗಾನಂತರದಲ್ಲಿ ಸಕಲ ಜಂತುಗಳಂ ಪೂರ್ವದಂತೆ ಲಯವಂ ಮಾಡುವಂತೆ ರುದ್ರನಿಗೆ ಆಜ್ಞೆಯಂ ಕೊಟ್ಟು,

ಸಕಲ ಪದಾರ್ಥಂಗಳಲ್ಲಿ ಚೈತನ್ಯರೂಪದಿಂದ ಪ್ರವೇಶವಂಮಾಡಿ ನಿರ್ಲೇಪೆ ಳಾಗಿ ಆಯಾಯ ಪ್ರಾಣಿಗಳಿಗೆ ಉಚಿತಂಗಳಂದ ಕರ್ಮಂಗಳಲ್ಲಿ ಬುದ್ಧಿಯಂ ಪ್ರೇರಿಸಿ ಮನುಷ್ಯರೊಳ್ ವರ್ಣಾಶ್ರಮಧರ್ಮಂಗಳನ್ನುಂಟುಮಾಡಿ ಅವ ರವರುಮಾಡುವ ಯಜ್ಞ ದಾನ ತಪೋಧ್ಯಾನಂಗಳನ್ನು ಸರ್ವಸಾಕ್ಷಿಣಿಯಾಗಿ ನೋಡುತ ಅದಕ್ಕೆ ಅನುಗುಣಂಗಳಾದ ಸ್ವರ್ಗಾಪವರ್ಗಂಗಳಂ ಕೊಡುತ ಜಗದ್ರಕ್ಷಣಲೀಲೆಯಂ ಕೈಗೊಂಡು ವಿರಾಡ್ರೂಪದಿಂದಿರುವ ಪರಬ್ರಹ್ಮ ಸ್ವರೂಪಿಣಿಯೇ ನಿನ್ನಡಿಧಾವರೆಗಳಿಗೆ ಭೂರಿಭೂರಿಗು ಸಾಷ್ಟಾಂಗವಾಗಿ ನಮಸ್ಕಾರವಂ ಗೈಯುವೆನು. ಮತ್ತೂ ಲೋಕಂಗಳಲ್ಲಿ ತಮೋಗುಣ ಪೂರ್ಣರಾದ ಧರ್ಮಕಂಟಕರಾದ ಜಗಚ್ಛತ್ರುಗಳಂ ಬಾಧಿಸುವ ಸಾಮರ್ಥ್ಯವಂ ತಪೋಬಲದಿಂದ ಸಂಪಾದಿಸಿ ಮದೋನ್ಮತ್ತರಾದ ಗರ್ವಾಂಧರಾದ ಭಂಡಾ ಸುರ ಮಹಿಷ ಶುಂಭ ನಿಶುಂಭ ಚಂಡ ಮುಂಡ ರಕ್ತಬೀಜ ಧೂಮ್ರಾಕ್ಷ ಮ ಧು ಕೈಟಭ ಮೊದಲಾದ ದೈತ್ಯವರ್ಗಸಂಹಾರವಂ ಮಾಡಲೋಸುಗೆ ಲಲಿ ತಾ ಶ್ಯಾಮಳಾ ಭದ್ರಕಾಳೀ ದುರ್ಗಾ ತ್ರಿಪುರಸುಂದರೀ ಮಾತಂಗೀ ಮ ಹಾಮಾಯಾ ಕಾಳರಾತ್ರಿ ರಾಜರಾಜೇಶ್ವರೀ ಚಂಡೀ ಚಾಮುಂಡೀ ಎಂಬ ಮೂರ್ತಿಭೇದಗಳಂ ಧರಿಸಿ ಸಹಸ್ರಭುಜೆಯಾಗಿ ಸರ್ವಾಯುಧಂಗಳಂ ಧರಿ ಸಿ ಆ ರಾಕ್ಷಸರಂ ಸಪರಿವಾರರಾಗಿ ಸಂಹರಿಸಿ ಲೋಕಾಧಿಪತಿಗಳಿಂದ ಪೂ ಜಿತಳಾದ ಧರ್ಮಸಂಸ್ಥಾಪನಂಗೈದ ಮಹಾಪ್ರಭಾವಯುಳ್ಳ ಜಗದೀಶ್ವರಿ ಯಾದ ಚಾಮುಂಡಿಯೇ ನಿನ್ನ ಚರಣಾರವಿಂದಗಳಿಗೆ ಮರಳಿ ಮರಳಿ ನಮ ಸ್ಕರಿಸುವೆನು. ಮತ್ತೂ ಚತುರ್ಮುಖನಲ್ಲಿ ಶ್ರುತಿರೂಪದಿಂ ವಿಷ್ಣುವಿನ ಲ್ಲಿ ಕರುಣಾರೂಪದಿಂ ರುದ್ರನಲ್ಲಿ ಕ್ರೋಧರೂಪದಿಂ ಸೂರ್ಯನಲ್ಲಿ ಪ್ರಭಾ ರೂಪದಿಂ ಚಂದ್ರನಲ್ಲಿ ಕಾಂತಿರೂಪದಿಂ ಅಗ್ನಿಯಲ್ಲಿ ಜ್ವಾಲಾರೂಪದಿಂ ದೇ ವರ್ಷಿಗಳಲ್ಲಿ ಪ್ರಜ್ಞಾರೂಪದಿಂ ಯೋಗಿಗಳಲ್ಲಿ ಧಾರಣಾರೂಪದಿಂ ಉಪಾ ಸಕರಲ್ಲಿ ಭಕ್ತಿರೂಪದಿಂ ಪ್ರಭುಗಳಲ್ಲಿ ಆಜ್ಞಾರೂಪದಿಂ ಮುನಿಗಳಲ್ಲಿ ಕ್ಷ ಮಾರೂಪದಿಂ ಪುರುಷರಲ್ಲಿ ಧೃತಿರೂಪದಿಂ ಸ್ತ್ರೀರುಗಳಲ್ಲಿ ಲಜ್ಜಾರೂಪ ದಿಂ ಸರ್ವಜೀವರಾಸಿಗಳಲ್ಲಿ ಚೈತನ್ಯರೂಪದಿಂ ಪೃಥಿವ್ಯಾದಿಗಳಲ್ಲಿ ಗುಣ ರೂಪದಿಂ ಇಂದ್ರಿಯಂಗಳಲ್ಲಿ ತೃಪ್ತಿರೂಪದಿಂ ಯಜ್ಞಂಗಳಲ್ಲಿ ಸ್ವಾಹಾರೂ ಪದಿಂ ವೇದಂಗಳಲ್ಲಿ ಪ್ರಣವರೂಪದಿಂ ಮಹಾಮಂತ್ರಗಳಲ್ಲಿ ಪ್ರಭಾವರೂ

ಪದಿಂ ಸಕಲ ಭುವನಂಗಳಲ್ಲಿ ಐಶ್ವರ್ಯರೂಪದಿಂ ನೆಲೆಗೊಂಡು ಸಕಲ ಭುವ
ನವಂ ನಿನ್ನಲ್ಲಿ ಧರಿಸಿ ನೀನು ಸಕಲ ಭುವನಂಗಳಲ್ಲಿರುತ ಸರ್ವಶರೀರಿಣಿ ಸ
ರ್ವಪರಿಪೂರ್ಣೆ ಎನೆಸಿದ ನಿನ್ನಂ ಕೆಲವರು ಪರಾಶಕ್ತಿಯೆಂದು ಧ್ಯಾನಿಸುವರು.
ಕೆಲವರು ಪರಮೇಶ್ವರನೆಂದು ಪೂಜಿಸುವರು. ಕೆಲವರು ಮಹಾವಿಷ್ಣು
ವೆಂದು ಆರಾಧನೆಯಂಗೈಯ್ಯುವರು. ಈ ಪರಿಯಾಗಿ ಸರ್ವೋಪಾಸಕ
ಜನಂಗಳಿಗೂ ಸರ್ವದೇವತಾರೂಪಳಾಗಿ ಸರ್ವಾಭೀಷ್ಟಂಗಳಂ ಕೊಡುವ
ಸರ್ವೇಶ್ವರಿಯೇ ನಿನ್ನ ಪಾದಪಂಕಜಗಳಿಗೆ ಅಸಂಖ್ಯಾನಂತವಾಗಿ ನಮಸ್ಕ
ರಿಸುವೆನೆಂದು ಭಕ್ತಿಯ ಮಿತಿಮೀರಿ ಆನಂದದೊಳ್ ಮುಳುಗಿ ಆಶ್ಚರ್ಯಪರ
ವಶನಾಗಿ ಮರಳಿ ಮರಳಿ ಪ್ರಣಾಮವಂ ಗೈಯುತಲಿರುವ ಸುಗಂಧರಾಜಕು
ಮಾರನ ಚಿತ್ತಶುದ್ಧಿಯಂ ಭಕ್ತಿಪಾರವಶ್ಯವಂ ನೋಡಿ ಅವನ ಸ್ತುತಿಗಳಿಂದ
ನಾನು ಸಂತುಷ್ಟಳಾದೆನು. ನಿನ್ನ ಮನೋಭಾವವಂ ಅರಿತೆನು ನೀನು
ಅಪೇಕ್ಷಿಸಿದ ಕಾರ್ಯಗಳು ಕೈಗೂಡುವುದಕ್ಕೆ ಮುಖ್ಯಸಾಧನವಾದ ನಿಜಾ
ಯುಧವಂ ಕೊಡುವೆನೆಂದು ಪೇಳಿ ದೀಪದಿಂದ ಮತ್ತೊಂದು ದೀಪವಂ ಉಂ
ಟುಮಾಡುವಂತೆ ತನ್ನ ಕರಕಮಲದಲ್ಲಿರುವ ಖಡ್ಗದಿಂ ಚಂದ್ರಾಯುಧವೆಂಬ
ಖಡ್ಗವಿಶೇಷವಂ ತೆಗೆದು ಎಲೈ ಕುಮಾರನೇ ಈ ಆಯುಧವು ಪೂರ್ವದಲ್ಲಿ
ಬಲಗರ್ವಿತರಾದ ಚಂಡ ಮುಂಡ ಶುಂಭ ನಿಶುಂಭ ಮಹಿಷ ರಕ್ತಬೀಜಾದಿ
ದಾನವರಂ ಲೀಲಾಮಾತ್ರದಿಂ ಸಂಹರಿಸಿ ಲೋಕಪ್ರಸಿದ್ಧವಾಗಿರುವದು.
ಇದಂ ನಿನಗೆ ಕೊಡುವೆನೆಂದು ಹರಸಿಕೊಟ್ಟು ತನ್ನ ಕರಕಮಲಗಳಿಂದ ಆ
ಕುಮಾರನನ್ನೆತ್ತಿ ತನ್ನ ದಿವ್ಯವಾದ ಅಂಕದೊಳ್ ಕುಳ್ಳಿರಿಸಿ ಶಿರಸ್ಸನ್ನಾ
ಘ್ರಾಣಿಸಿ ಅಮೃತಹಸ್ತದಿಂದ ಸುಗಂಧರಾಜನಂ ಮೈದಡವಿದಮಾತ್ರದಿಂದ
ಲೇ ಹತ್ತುಸಾವಿರ ಮದಗಜಗಳ ಬಲವು ಧೈರ್ಯ ಪರಾಕ್ರಮ ಶಕ್ತಿ ಸಾ
ಹಸಂಗಳು ಉಂಟಾಗಿ ವಜ್ರಶರೀರನಾಗಿ ನೂತನವಾದ ತೇಜೋವಿಶೇಷದಿಂ
ದ ಒಪ್ಪುತ್ತಿರಲು. ಆಗ ಸಕಲ ಅಸ್ತ್ರಗಳ ಪ್ರಯೋಗ ಉಪಸಂಹಾರ
ಮಂತ್ರಂಗಳ ಉಪದೇಶವಂಮಾಡಿ ಈ ಮಂತ್ರಂಗಳಿಂದ ಪ್ರತಿಪಾದ್ಯಂಗಳಾ
ದ ಅಸ್ತ್ರದೇವತೆಗಳು ನಿನ್ನ ಸ್ವಾಧೀನವಾಗಿ ಇರಲೀ ಎಂದು ಅಪ್ಪಣೆ
ಯಂ ಕೊಟ್ಟ ಕ್ಷಣದಲ್ಲಿಯೆ ಪಾಶುಪತಾಸ್ತ್ರ ನಾರಾಯಣಾಸ್ತ್ರ ಬ್ರ
ಹ್ಮಾಸ್ತ್ರ ಐಂದ್ರಾಸ್ತ್ರ ಆಗ್ನೇಯಾಸ್ತ್ರ ವಾರುಣಾಸ್ತ್ರ ಯಾಮ್ಯಾ

ಸ್ತ್ರ, ವಾಯವ್ಯಾಸ್ತ್ರ, ಕೌಬೇರಾಸ್ತ್ರ, ರೌದ್ರಾಸ್ತ್ರ, ಗಂಧರ್ವಾ ಸ್ತ್ರ, ಸಮ್ಮೋಹನಾಸ್ತ್ರ, ಪರ್ವತಾಸ್ತ್ರ, ವಜ್ರಾಸ್ತ್ರ, ಗಾರುಡಾಸ್ತ್ರ, ಸರ್ಪಾಸ್ತ್ರ, ತಿಮಿರಾಸ್ತ್ರ, ಸೌರಾಸ್ತ್ರ, ಮೇಘಾಸ್ತ್ರ, ಐಷಿಕಾಸ್ತ್ರ, ಅಂತರ್ಧಾನಾಸ್ತ್ರ, ರಕ್ಷೋಘ್ನಾಸ್ತ್ರ, ಜೃಂಭಕಾಸ್ತ್ರ, ದಂಡಚಕ್ರ, ಕಾಲಚಕ್ರ ವಿಷ್ಣುಚಕ್ರ ಮೊದಲಾದ ಅಧಿದೇವತೆಗಳು ನಿಜರೂಪಗಳಿಂದ ಸಾಲುಸಾಲಾಗಿ ಎದುರಾಗಿ ಬಂದು ನಿಂತು ಸುಗಂಧರಾಜನಂ ಕುರಿತು ಎಲೈ ಸುಗಂಧರಾಜನೇ! ಶ್ರೀದೇವಿಯ ಆಜ್ಞಾಬಲದಿಂದ ನಾವೆಲ್ಲರೂ ನಿನಗೆ ಸ್ವಾಧೀನರಾಗಿ ಇರುವೆವು, ಈಗ ನಮಗೆ ಯೇನು ಆಜ್ಞಾಪಿಸುತ್ತೀಯೋ ಎಂದು ಕೇಳುವ ಅಸ್ತ್ರಾಧಿದೇವತೆಗಳಂ ಕುರಿತು ಸುಗಂಧರಾಜನು ನಾನು ನೆನದಾಗ ಬರುವವೆಂದು ಹೇಳಿ ಕಳುಹಿಸಲು, ಮತ್ತೂ ಶ್ರೀ ಆದಿಶಕ್ತಿಯು ಛಾಯಾಗಣಕ್ಕೆ ಅಧಿಪತಿಯಾದ ಛಾಯಾಗ್ರಸ್ತನಂ ಕರೆದು ಎಲೈ ಯಕ್ಷನೇ ನೀನು ಸುಗಂಧರಾಜನ ಆಜ್ಞಾನುಸಾರವಾಗಿ ಈತನು ನಿಯಮಿಸಿದ ಕಾರ್ಯವು ಮಾಡುತ್ತಾಯಿರು ಎಂದು ನುಡಿದು ಸುಗಂಧರಾಜನ ಸ್ವಾಧೀನವಂ ಮಾಡಿ, ಅಷ್ಟಮಹಾಸಿದ್ಧಿಗಳಂ ವಶವಮಾಡಿ, ಮತ್ತೂ ಎಲೈ ಕುಮಾರನೇ ನಿನ್ನ ಮಿತ್ರನಾದ ಸುಮತಿಗೆ ಅಸ್ತ್ರಂಗಳ ಪ್ರಯೋಗೋಪಸಂಹಾರಮಂತ್ರಂಗಳಂ ನಾನು ಹೇಳಿದ ಕ್ರಮದಿಂದ ಉಪದೇಶವ ಮಾಡಿ ಈರ್ವರೂ ಮಿತ್ರಭಾವದಿಂದ ಇರುತ್ತ ಎಲ್ಲಾ ದಿಗ್ವಿಜಯವಂ ಮಾಡಿ ಪರಮಸ್ವಾಮ್ರಾಜ್ಯವಂ ಅನುಭವಿಸು ಎಂದು ಅಪ್ಪಣೆಯಂ ಕೊಟ್ಟು, ಮತ್ತೂ ಎಲೈ ಪುತ್ರನೇ ಪರಮ ರಹಸ್ಯವಾದ ಒಂದು ಮಾತಂ ಹೇಳುವೆನು ಸಾವಧಾನದಿಂ ಕೇಳುವನಾಗು ಭೂಲೋಕದಲ್ಲಿ ಕೆಲವು ಮಹಾತ್ಮರು ಮನೋವಾಕ್ಕಾಯಗಳಿಂದ ನನ್ನನ್ನೇ ಪೂಜಿಸುತ್ತಾ ಅಲ್ಲಲ್ಲಿ ಇರುವರು ಅವರ ವಿಷಯದಲ್ಲಿ ನೀನು ಅಪರಾಧವಂ ಮಾಡಿದೆಯಾದರೆ ಈಗ ನನ್ನ ಅನುಗ್ರಹದಿಂದ ಲಬ್ಧಂಗಳಾದ ಈ ಸಕಲ ಸಾಧನಂಗಳು ನಿನಗೆ ಬಂದಾನೊಂದು ಕಾರ್ಯಸಮಯಂಗಳಲ್ಲಿ ಮಾಲಿನ್ಯವ ನೈದುವವು. ನನ್ನ ಉಪಾಸಕರು ಬಹು ಮಹಾತ್ಮ್ಯಶಾಲಿಗಳು, ಬ್ರಹ್ಮಾದಿಗಳಂ ತೃಣೀಕರಿಸಿರುವರು ಆದ್ದರಿಂದ ಈ ಸಾಧನಂಗಳಿಗೆ ಮಾಲಿನ್ಯ ಬಂದದ್ದೇ ಆದರೆ ಆ ಮಹಾಪು

ರುಷರ ಪ್ರಭಾವದಿಂದಲೇ ನಿನಗೆ ಕ್ಷೇಮವಾಗುವದೆಂದು ಅಪ್ಪಣೆಯಂ ಕೊಟ್ಟು ಆಶೀರ್ವಾದವ ಮಾಡಲು, ಸುಗಂಧರಾಜನು ಶ್ರೀ ಜಗದೀಶ್ವರಿಯ ಸಂಪೂರ್ಣಕರುಣಾಕಟಾಕ್ಷದಿಂ ಪೂರ್ಣಮನೋರಥನಾಗಿ, ಅತ್ಯಂತ ಆನಂದದಿಂದ ಎದ್ದು ಪ್ರದಕ್ಷಿಣ ನಮಸ್ಕಾರವಂ ಮಾಡಿ ಬದ್ಧಾಂಜಲಿಪುಟನಾಗಿ ನಿಂತಿರುತ್ತ ಸಮಯದೊಳ್, ಶ್ರೀಪರಾಶಕ್ತಿಯು ಸಕಲದೇವತಾಸಮೂಹದಿಂದೊಡಗೂಡಿ ಅಂತರ್ಧಾನವಂ ಪೊಂದಲು.

ಬಳಿಕ ಸುಗಂಧರಾಜನು ತನ್ನ ಪೂರ್ವಪ್ರಭಾವಕ್ಕೆ ತಾನೇ ಆಶ್ಚರ್ಯಪಡುತ್ತ ಸುಮತಿಯೊಡನೆ ಶ್ರೀ ಜಗದೀಶ್ವರಿಯ ಪ್ರಸಾದದ ಪ್ರಭಾವಮಂ ಕೊಂಡಾಡಿ ವರ್ಣಿಸುತ್ತಾ ಶ್ರೀದೇವಿಯ ಆಜ್ಞಾನುಸಾರವಾಗಿ ತನ್ನ ಸ್ವಾಧೀನದಲ್ಲಿರುವ ಭಾವನಾಗುಪ್ತನೆಂಬ ಯಕ್ಷನಂ ಕರೆದು ಎಲೈ ಯಕ್ಷನೇ ನಾನು ಯಾವಕಾಲದಲ್ಲಿ ಸ್ಮರಿಸುವೆನೋ ಆಕಾಲದಲ್ಲಿ ಸಿದ್ಧವಾಗಿರುವನೆಂದು ಅಪ್ಪಣೆಯಂಕೊಟ್ಟು ಕಳುಹಿಸಿ, ಬಳಿಕ ಶ್ರೀ ಚಾಮುಂಡೇಶ್ವರಿಯು ನಿರೂಪಿಸಿದ್ದರಿಂದಾಗಿ ಇದೇ ಸುಮುಹೂರ್ತವೆಂದು ಸಕಲಶಾಸ್ತ್ರಮಂತ್ರಗಳಂ ಸುಮತಿಗೆ ಉಪದೇಶವಂ ಮಾಡಿ, ಅವನಂ ಕುರಿತು ಎಲೈ ಮಿತ್ರನೇ ಉಪಾಸಕರಲ್ಲಿ ಪರಮವಾತ್ಸಲ್ಯವುಳ್ಳ ಶ್ರೀದೇವಿಯು ಆಜ್ಞಾಪಿಸಿದ ಒಂದು ರಹಸ್ಯವೃತ್ತಾಂತವಂ ನಿರೂಪಿಸುವೆನು ಕೇಳು. ತನ್ನ ಪಾದಾರವಿಂದವಂ ಉಪಾಸನೆಯಂ ಮಾಡುವ ಮಹಾಪುರುಷರುಗಳಲ್ಲಿ ಅಪರಾಧ ಲೇಶವನ್ನಾದರೂ ಆಚರಿಸಿದೆಯಾದರೆ ಈ ಸರ್ವಸಾಧನಂಗಳು ನಾಶಿಸ್ಯವನ್ನೈದುವವು, ಆ ಸಮಯದೊಳ್ ಆ ಮಹಾತ್ಮರ ಪ್ರಸಾದಬಲದಿಂದಲೇ ಶ್ರೇಯೋಭಿವೃದ್ಧಿಯಾಗುವದಲ್ಲದೆ ಮತ್ತೊಂದು ಸಾಧನವಿರಲಾರದು ಎಂದು ಆಜ್ಞಾಪಿಸಿರುವಳು. ಆದ್ದರಿಂ ಜಾಗರೂಕನಾಗಿರು ಎಂದು ಪೇಳಿ ಅವನೊಡಗೂಡಿ ತನ್ನ ಅರಮನೆಗೆ ಬಂದು ಸುಖದಿಂದಿರ್ದು, ಮಾರನೇದಿನ ಮಜ್ಜನಭೋಜನಾದಿಗಳಂ ಮಾಡಿ ಮಹಾರಾಜಾಂತಃಪುರಕ್ಕೆ ಬಂದು ಅಲ್ಲಿ ಗುಣವತಿಯ ಶಯ್ಯಾಗೃಹದೊಳ್ ನವರತ್ನಪರ್ಯಂಕದಲ್ಲಿ ಕುಳಿತಿರುವ ಸುಚರಿತ್ರ ಮಹಾರಾಯನ ಪಾದಪದ್ಮಗಳಿಗೆ ಪ್ರಣಾಮವಂಗೈದು ಹಾಗೇ ಗುಣವತೀದೇವಿಯ ಪಾದಂಗಳಿಗೆ ಅಭಿವಂದಿಸಿ ಕೈಕಟ್ಟಿ ನಿಂತಿರುವ ಕು

ದೀಕ್ಷೆರಿಯಾದ ಶ್ರೀ ಚಾಮುಂಡಿಕಾದೇವಿಯು ಪ್ರಸನ್ನಳಾಗಿ ಪಾಶುಪತಾಸ್ತ್ರಮೊದಲಾದ ಅಸ್ತ್ರಗಳ ಪ್ರಯೋಗ ಉಪಸಂಹಾರ ಮಂತ್ರಂಗಳನುಪದೇಶವಂ ಮಾಡಿ, ಆಯುಧಶ್ರೇಷ್ಠವಾದ ಚಂದ್ರಹಾಸವಂ ದಯೆಪಾಲಿಸಿ, ಛಾಯಾಗುಪ್ತನೆಂಬ ಯಕ್ಷನಂ ಸ್ವಾಧೀನಗೊಳಿಸಿದ್ದು ಮೊದಲಾದ ವೃತ್ತಾಂತವಂ ವಿಸ್ತಾರವಾಗಿಪೇಳಲು, ಆ ಸುಬುದ್ಧಿಯು, ಎಲೈ ರಾಯನೆ ನೀನು ಅಪ್ಪಣೆಯಂಕೊಟ್ಟ ವೃತ್ತಾಂತವೆಲ್ಲಮಂ ನನ್ನ ಮಗನಾದ ಸುಮತಿಯು ಪೇಳಿದನು. ದೇವಾಂಶಪುರುಷನಾದ ಸುಗಂಧರಾಜನ ಸೇವಾಬಲದಿಂದ ನನ್ನ ಮಗನು ಸಕಲಶಾಸ್ತ್ರವಿದ್ಯೆಗಳಂ ಪಡೆದನು, ನನ್ನ ವಂಶಪರಂಪರೆಯೋ ಧನ್ಯವಾದುದು, ಈ ಸಕಲವೂ ನಿಮ್ಮ ತಪಃ ಪ್ರಭಾವವೆಂದು ಬಿನ್ನಯಿಸಲು. ಮತ್ತಂರಾಯನು ಸುಬುದ್ಧಿಯಂ ಕುರಿತು ಎಲೈ ಮಂತ್ರಿಯೇ ನಾಳೆ ಅಭಿಜಿನ್ಮುಹೂರ್ತದಲ್ಲಿ ಸುಗಂಧರಾಜಕುಮಾರಂಗ ವೀರಕಂಕಣವಂಕಟ್ಟಿ ಯೌವರಾಜ್ಯಾಭಿಷೇಕವಂಮಾಡಿ, ಮತ್ತು ನಿನ್ನ ಪುತ್ರನಾದ ಸುಮತಿಗ ಆತನ ಸಮೀಪದೊಳ್ ಮಂತ್ರಿತ್ವವಂ ನಿಯಮಿಸಿ, ಸಕಲದೇಶವಿಜಯಾರ್ಥವಾಗಿ ಅಪ್ಪಣೆಯಂಕೊಟ್ಟು ಕಳುಹಿಸಬೇಕಾದುದರಿಂದ, ಕುಮಾರನಿಗೆ ಯುವರಾಜಪಟ್ಟಾಭಿಷೇಕಕ್ಕೆ ಯೋಗ್ಯವಾದ ಸಕಲ ಮಂಗಳಸಾಮಗ್ರಿಗಳಂ ಸನ್ನಹಿಸಿ ದೇಶವಿಜಯಾರ್ಥವಾಗಿ ಕುಮಾರನ ಸಂಗಡತೆರಳಲೋಸುಗ ಚತುರಂಗಸೇನಾಸಮೇತನಾಗಿ ಸೇನಾಪತಿಯಾದ ವೀರಸೇನನಂ ಸನ್ನದ್ಧನಾಗಿ ಇರುವಂತೆ ನೇಮಿಸೂ ಎಂದು ನಿರೂಪಿಸಿ ಅವನಂಕಳುಹಿ ತಾನು ರಾಣಿಯೊಡನೆ ಶ್ರೀದೇವಿಯ ಪ್ರಭಾವವಂ ವರ್ಣಿಸುತ್ತಲಿ ರಾತ್ರಿಯೊಳ್ ಸುಖದಿಂದಿರುತ್ತಿರ್ದನು.

ಇಂತು ಸಕಲ ಅಶ್ವಮೇಧಾದಿಫಲಪ್ರದವಾದ ಆಯುಷ್ಕರವಾದ ಕೀರ್ತಿಪ್ರದವಾದ ಪರಮಪವಿತ್ರವಾದ ಸಕಲ ಪುರಾಣ ಇತಿಹಾಸ್ಯವಾದ ಮಂತ್ರವಿದ್ಯಾಸಾರಭೂತವಾದ ಶ್ರೀದೇವೀ ಪ್ರಭಾವವಂ ನಿರೂಪಿಸಿರುವ ಈ ಅಧ್ಯಾಯವಂ ಭಕ್ತಿಯಿಂದ ಯಾರು ಪಠಿಸುವರೋ ಅವರು ಚತುರ್ವಿಧಪುರುಷಾರ್ಥಗಳಂ ಪಡೆಯುವರು, ಭಕ್ತಿಯಿಂದ ಯಾರು ಬಂದು ಪೂಜೆಯಂಮಾಡುವರೋ ಅವರ ಮಂದಿರದೊಳ್ ಶ್ರೀ ಮಹಾಲಕ್ಷ್ಮಿ ಸ್ಥಿ

ವರು ಸರ್ವಪಾಪಾಗಮಂ ಪರಿಹರಿಸುವರು, ಪುತ್ರಾರ್ಥಿಗಳಾದವರು ಶುಚಿ ಭೂರ್ಣತರಾಗಿ ಪರಮಭಕ್ತಿಯಿಂದ ಪರಮೇಶ್ವರಿಯ ಪಾದಪದ್ಮಂಗಳೊಳ್ ಚಿತ್ತವೃತ್ತಿಯಂ ಬಲಿಸಲು ಸತ್ಪುತ್ರಸಂಪದದ ಸಂತೋಷದಿಂದಿರುವರು, ರಾಜ್ಯಕಾಮರಾದವ ರಾಜರುಗಳು ನಿಷ್ಕಂಟಕವಾದ ರಾಜ್ಯಂಪಡೆದಿರುವರು. ಧನಾರ್ಥಿಗಳು ಧನಸಂಪತ್ತಿಯುಳ್ಳವರು, ಮತ್ತೂ ಯಾರ್ಯಾರು ಯಾವ ಯಾವ ಕಾರ್ಯಂಗಳಂ ಅಪೇಕ್ಷಿಸಿ ಪಾರಾಯಣವ ಮಾಡುವರೋ ಅವರವರು ಆ ಯಾವ ಮನೋರಥಗಳಂ ಪಡೆದು ಸಕಲ ಐಶ್ವರ್ಯಯುಕ್ತರಾಗಿ ಸುಖದಿಂದ ಇರುವರೆಂಬಲ್ಲಿಗೆ ಗದ್ಯ॥ ಕುಂಡಲಿಶಯನ ಖಂಡಪರಶುಪುಂಡರೀಕಭವಾಖಂಡಲಪ್ರಮುಖನಿಖಿಲಸುರವರಪರಿಭವಪರಿಣತಪ್ರಚಂಡಬಲ ಚಂಡಮುಂಡವಿಖಂಡನ ನಿಪುಣಕೋದಂಡಕಾಂಡ ಮಂಡಲಾಗ್ರಧರಭುಜ । ದಂಡಪರಿಮಂಡಿತ ಚಾಮುಂಡಿಕಾಕಟಾಕ್ಷವೀಕ್ಷಣ ಪ್ರವರ್ಧಮಾನಭೂಮಂಡಲಾಧಿಪತ್ಯಸತ್ಯಪ್ರತಾಪ ಸಕಲಭಾಷಾಸಾಮ್ರಾಜ್ಯಸರ್ವಂಕಷ ಚತುರ್ವಿಧ ಸರಸಕವಿತಾನಿಸ್ಸಹಾಯನಿರ್ಮಾಣಧೌರೇಯಘಟಿಕಾಶತಗ್ರಂಥ ದಿನದಿನಪ್ರಬಂಧ ನಿಬಂಧನಧುರಂಧರತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನಸೂತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ ನರಪತಿಬಿರುದಮಹೀಸೂರ ಪುರವರಾಧೀಶ ಶ್ರೀಕೃಷ್ಣರಾಜಒಡೆಯರವರಿಂದರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನವೀನಕೃತಿಯೊಳ್ ಸುಗಂಧರಾಜಕುಮಾರನಿಗೆ ಮಂತ್ರೋಪದೇಶದಿಂದ ಶ್ರೀದೇವಿಯ ಸಾಕ್ಷಾತ್ಕಾರಪುರಸ್ಸರವಾದ ಶ್ರೀನಗರವರ್ಣನ ಸಕಲಾಸ್ತ್ರಪ್ರಾಪ್ತಿಯಂ ಪ್ರತಿಪಾದಿಸುವುದು ಮೊದಲಾದ್ದಂಬಂಧಿಸಿರುವ ಏಳನೇ ಆಶ್ವಾಸನಿರೂಪಣಕ್ಕಂ ಮಂಗಳಮಹಾ ॥

ಶುಭಮಸ್ತು.

ಶ್ರೀಚಾಮುಂಡಿಕಾಂಬಾಯೈನಮಃ

---

## ಯೆಂಟನೆ ಆಶ್ವಾಸಪ್ರಾರಂಭ

ಅನಂತರದಲ್ಲಿ ಸುಗಂಧರಾಜಕುಮಾರನ ಯೌವರಾಜ್ಯಾಭಿಷೇಕವು ನೋಡಬೇಕೆಂಬ ಕುತೂಹಲದಿಂದ ಬರುವನೋಯೆಂಬಂತೆ ಸೂರ್ಯನು ಉದಯಿಸಲು, ಸುಚರಿತ್ರನೆಂಬುವನು ನಿರೂಪಿಸಿದ ಪರಿಯಾಗಿ ಮಂತ್ರಿಯಾದ ಸುಬುದ್ಧಿಯು ಸುಗಂಧರಾಜಕುಮಾರನ ಯೌವರಾಜ್ಯಾಭಿಷೇಕಕ್ಕೆ ಉಪಯುಕ್ತಂಗಳಾದ ಸಮಸ್ತವಸ್ತುಸಮೂಹಂಗಳಂ ಸನ್ನಾಹಿಸಿಕೊಂಡು ಅಂತಃಪುರದಬಾಗಿಲೊಳ್ ಬಂದುನಿಂತು ಮಹಾರಾಜನ ಸಮ್ಮುಖದಿಂದ ರಾಯಂಗೆ ತಾನು ಬಂದಿರುವ ಕಾರ್ಯವ ಬಿನ್ನೈಸಲು, ರಾಯನು ಮಣಿಮಯದಿಂದ ಎದ್ದು ಶುಭಚಿಹ್ನೆಗಳಂ ನೋಡುತ ಬರುತ್ತಿರಲಾಗ ಸುಬುದ್ಧಿಯು ಸಾಷ್ಟಾಂಗಪ್ರಣಾಮವ ಗೈದು ಬಿನ್ನೈಸಿದಪರಿಯೆಂತೆಂದರೆ, ಎಲೈ ಮಹಾರಾಜನೇ ನಿನ್ನ ಅಪ್ಪಣೆಯಂತೆ ಸುಗಂಧರಾಜಕುಮಾರಂಗೆ ಚಿಕ್ಕರಾಯಪಟ್ಟವಂಕಟ್ಟುವದಕ್ಕೆ ಸಕಲವಸ್ತುಸಮಸ್ತಂಗಳಂ ಸನ್ನಾಹಿಸಿ ಪುರೋಹಿತ ಮೊದಲಾದ ಸಕಲ ವಿದ್ವಜ್ಜನಗಳಂ ಸಾಮಾಜಿಕರಂಸಹ ಕಾದಿರುವಂತೆ ನಿಯಮಿಸಿರುವೆನೆಂದು ಬಿನ್ನೈಸಲಾಮಾತಂ ಕೇಳಿ ರಾಯನು ಸ್ನಾನಾಹ್ನಿಕಗಳನ್ನು ನೆರವೇರಿಸಿ ಅತಿಸಂಭ್ರಮದಿಂದ ಸುಗಂಧರಾಜಕುಮಾರಂಗೆ ಮಂಗಳಸ್ನಾನವಂಗೈಸಿ ಅಪರಿಮಿತಂಗಳಾದ ಅಮೂಲ್ಯವಸ್ತ್ರಾಭರಣಗಳಿಂದ ಅಲಂಕರಿಸಿ ಫಣೆಯೊಳ್ ಕಸ್ತೂರಿತಿಲಕವನ್ನಿಟ್ಟು ಮುತ್ತಿನ ಹಸೆಯೊಳ್ ಕುಳ್ಳಿರಿಸಿ ಆರತಿಯಂ ಬೆಳಗಿಸಿ ನವರತ್ನದಹಾಸೆಯನ್ನಿಡಿಸಿ ಸಮಸ್ತಮಂತ್ರಿಗಳಿಂದಲೂ ಸೇನಾಪತಿಗಳಿಂದಲೂ ಸಕಲ ಸಾಮಂತರಾಜಮಂಡಲಿಗಳಿಂದಲೂ ಸಾಮಾಜಿಕರಿಂದಲೂ ಮತ್ತೂ ಸಮಸ್ತವಿದ್ಯಾವಿಶಾರದರಾದ ವಿದ್ವಜ್ಜನಗಳಿಂದಲೂ ಕೇಳುವರ ಕಿವಿಗಿಂಪಾಗಿ ಕೊರಳು ಬೆರಳುಗಳುಬ್ಬುವಾಗಿ ಕಾಲುಗಳಂತಿಳಿದು ಶ್ರುತಿಗಳಂ ಬಿಡದೆ ಘನನಯಶ್ರೀಯ ರಾಗಂಗಳ ವರ್ಜ್ಯಾವರ್ಜ್ಯಂಗಳಂ ಅರಿತು ರಂಜನೆಯಾಗಿ ವೀಣಾ

ಮಾದನೆಯಂಗೈಯುವ ವೈಣಿಕ ಶಿರೋಮಣಿಗಳಿಂದಲೂ, ಮತ್ತಂ ಪಾರೆನೋಟದ ವೈಯಾರಿಗಳಿಂದ ವಿಟರಂ ಒಲಿಸಿ ವಸ್ತ್ರ ಮೊದಲಾದ ಬಿಡವೆಗಳಂಗೊಂಡು ಮತ್ತೂ ಕಂಡೂ ಕಾಣದಂತಿರುವ ಕುಚಗಳಿಂದ ತಂಮ ಹೃದಯಕಾಠಿನ್ಯವಂ ಮುಂಗುರುಳುಗಳಿಂದ ಕೌಟಿಲ್ಯವಂ ನೇತ್ರಂಗಳಿಂದ ಚಾಂಚಲ್ಯವಂಕೂಡಾ ಅಭಿನಯಮಂಗೈಯುತಲಿರುವ ವಾರನಾರಿಯರಿಂದಲೂ. ರಮಣೀಯಗಳಾದ ಬಿರುದುಗದ್ಯಪದ್ಯಗಳಂಪೇಳ್ ಕೈವಾರಿಸುವವಂದಿಮಾಗಧರಿಂದಲೂವಡಗೂಡಿ ಕುಮಾರನಕೈಪಿಡಿದು ಕರತಂದು ಅನೇಕ ವಾದ್ಯಧ್ವನಿಗಳಿಂದ ಪರಿಶೋಭಿತಮಾದ ನವರತ್ನಮಯಮಾದ ಆಸ್ಥಾನಮಂಟಪದೊಳ್ ದೇದೀಪ್ಯಮಾನವಾದ ಮಾಣಿಕ್ಯಮಯಮಾದ ಸಿಂಹಾಸನವನ್ನೇರಿ ಬಲಭಾಗದೊಳ್ ಸಿದ್ಧವಿಟ್ಟಿರುವ ಮಣಿಮಯಪೀಠದಲ್ಲಿ ಸುಗಂಧರಾಜಕುಮಾರನಂ ಕುಳ್ಳಿರಿಸಿ ಶಿರಸ್ಸಿನಲ್ಲಿ ನವರತ್ನಮಯವಾದ ಕಿರೀಟವನ್ನಿಟ್ಟು ಯೌವರಾಜ್ಯಾಭಿಷೇಕವಂ ಗೈದು ಚಿಕ್ಕರಾಜ ಪಟ್ಟಕ್ಕೆ ಯೋಗ್ಯವಾದ ಮುದ್ರೆ ಉಂಗರವಂ ಕೊಟ್ಟು ಸಮಸ್ತ ಶತ್ರುರಾಜರಂ ಜಯಿಸಿ ದಿಗ್ವಿಜಯಮಂ ಪಡೆಯೆಂದು ಹರಸಿ ಹಸ್ತದೊಳ್ ವೀರಕಂಕಣವಂಕಟ್ಟಿ ಸುಬುದ್ಧಿಯ ಮಗನಾದ ಸುಮತಿಗೆ ಯೌವರಾಜ್ಯದ ಮಂತ್ರಿತನವಂ ನಿಯಮಿಸಿ ಸೇನಾಪತಿಯಾದ ವೀರಸೇನನಂ ಕರದು ಎಲೈ ವೀರಸೇನನೇ ಈ ಶುಭದಿನದೊಳ್ ಸುಗಂಧರಾಜ ಕುಮಾರನು ದಿಗ್ವಿಜಯಾರ್ಥವಾಗಿ ತೆರಳುವದರಿಂದ ಈತನ ಛಾಯಾನುಗಮ್ಯವಾಗಿ ನಡದುಕೊಂಡು ಸಂಗಡಲೇ ಇರುವದೆಂದು ಆಜ್ಞಾಪಿಸಿ ಕುಮಾರನೊಡಗೂಡಿ ಗಜಾರೋಹಣವಂಗೈದು ಸೇನಾಸಮೇತನಾಗಿ ಸುಬುದ್ಧಿ, ವೀರಸೇನರಿರ್ವರೂ ಹಿಂಭಾಗದೊಳ್ಕುಳಿತು ಚಾಮರವಂ ಬೀಸುತ್ತಿರಲು ಮಹಾರಾಜ ವೈಭವದಿಂಬರುತ ಪಟ್ಟದರಸಿ ಮೊದಲಾದ ರಾಣಿಯರ ಸಮೂಹವು ಸಕಲ ವೈಭವದಿಂದ ಪಟ್ಟಣದ ಪುರೋಭಾಗದಲ್ಲಿರುವ ಕಟಕವಂ ಕುರಿತು ಬರಲಿಯೆಂದು ನಿರೂಪಿಸಿ ಪುರದ ರಾಜಬೀದಿಗಳಲ್ಲಿ ಪ್ರದಕ್ಷಿಣಾಕಾರವಾಗಿ ಬಂದು ಕಟಕವಂಪ್ರವೇಶಿಸಿ ಉಪಪರ್ವತಗಳಿಂದ ಪರಿವೃತವಾದ ಹಿಮವತ್ಪರ್ವತದಂತೆ ಶುಭ್ರವಾದ ಉನ್ನತವಾದ ಸೈನಿಕರಗುಡಾರದ ಮಧ್ಯದೊಳ್ ಪೊಳೆವಬಿ

ಡಾರವಂನೈದಿ ಪತ್ನಿಪುತ್ರಾದಿ ಆಪ್ತಬಂಧುಜನಸಮೇತನಾಗಿ ಮಧುಪಾನ ಮೃಷ್ಟಾನ್ನಭೋಜನಂಗೈದು ಮುತ್ತಿನ ಬಲೆಗಳಿಂದ ಮಾಣಿಕ್ಯಸುವರ್ಣ ರತ್ನಸ್ತಂಭದಿಂ ವಿರಾಜಿತವಾದ ಪೀತಾಂಬರಮಯವಾದ ಗುಡಾರದಮುಂಭಾಗದ ಚಪ್ಪರದೊಳ್ ಸುಗಂಧರಾಜಕುಮಾರ ಸುಬುದ್ಧಿ ವೀರಸೇನರಿಂದೊಡಗೂಡಿ ಸಂತೋಷದಿಂ ಕುಳಿತು ಮಂತ್ರಿಯಾದ ಸುಬುದ್ಧಿಯಂ ಕುರಿತು ಎಲೈ ಮಂತ್ರಿಶ್ರೇಷ್ಠನೇ ಸುಗಂಧರಾಜಕುಮಾರಂಗೆ ರಾಜಶಿಖಾಮಣಿಗಳು ಕೇಳಲು ಯೋಗ್ಯವಾದ ರಾಜನೀತಿಯಂ ವಿವರಿಸುವುದೆಂದು ನಿರೂಪಿಸಲು, ಮಂತ್ರಿಯಾದ ಸುಬುದ್ಧಿಯು ರಾಯನ ಅಪ್ಪಣೆಯಂ ಶಿರಸಾವಹಿಸಿ ಕೈಮುಗಿದು ಸುಗಂಧರಾಜಕುಮಾರನ ಸಮೀಪದೊಳ್ ಕುಳಿತು ಎಲೈ ಮಹಾರಾಜಕುಲಶಿರೋಮಣಿಯೆ ಶತ್ರುರಾಯರ ನಿಗ್ರಹಿಸಲಿಚ್ಛಿಸುವ ಮಹಾರಾಯನು ತನ್ನ ಮಂತ್ರಾಲೋಚನೆಯಂ ಮಾಳ್ಪವನಾಗಿ ಕುಲಕ್ರಮಾಗತರಾದ ಸಾಮ ದಾನ ಭೇದ ದಂಡಗಳೆಂಬ ಉಪಾಯಚತುಷ್ಟಯದಲ್ಲಿ ಕುಶಲರಾದ ಮಂತ್ರಿಗಳಿಂದಲು, ಪರಾಕ್ರಮಶಾಲಿಗಳಾದ ಸ್ವಾಮಿಯು ಚಿತ್ತವಿದ್ದಂತೆ ನಡೆಯುವರ ದ ಜಯಾಪಜಯ ಲಕ್ಷಣಂಗಳಂತಿಳಿದು ವ್ಯೂಹರಚನೆಯಲ್ಲಿ ಕುಶಲರಾದ ಸೇನಾಪತಿಗಳಿಂದಲು, ಸ್ವಾಮಿಕಾರ್ಯಾರ್ಥವಾಗಿ ವೇಷಾಂತರಗಳಿಂದ ತಮ್ಮ ರೂಪುಗಳಂ ಬದಲಿಸಿ ಶತ್ರುಗಳೊಳ್ ಪ್ರವೇಶವಂಗೈದು ಅವರಿಗೆ ಸ್ವಾಧೀನರಾಗದೆ ತಾವು ಉದ್ಯೋಗಿಸಿರುವ ಕಾರ್ಯವಂ ಸಾಧಿಸುವ ಮಿತ್ರರಾದ ಚಾರರಿಂದಲು, ಸ್ವಾಮಿಕಾರ್ಯಾರ್ಥವಾಗಿ ಪುತ್ರ ಮಿತ್ರ ಕಳತ್ರ ದೇಹಮೊದಲಾದ ಸಕಲವಂ ತೃಣವಾಗಿ ಎಣಿಸುವ ವೀರರಿಂದಲು, ಬಹುಕಾಲದಿಂ ಸ್ವಾಮಿಯ ಧನದಿಂದಲೇ ಜೀವಿಸುತ ಐಕಮತ್ಯದಿಂದಿರುವ ಬಂಧುವರ್ಗಂಗಳಿಂದೊಡಗೂಡಿದ ಯುದ್ಧವಿಶಾರದರಾದ ಬಲಶಾಲಿಗಳಾದ ರಣಭೂಮಿಯಂಪೊಕ್ಕು ಹಿಮ್ಮೆಟ್ಟದೆ ಇರುವ ಪದಾತಿಮೊದಲಾದಸೈನ್ಯದಿಂ ಪರಿವೃತನಾಗಿ ಕಟಕವಂರಚಿಸಿ ಮಂಡಲಶೋಧನೆಯಂಗೈದು ದೇಶದೇಶಗಳಲ್ಲಿರುವ ಶತ್ರುರಾಯರ ರಹಸ್ಯವೃತ್ತಾಂತಂಗಳಂ ಮತ್ತು ಅವರನ ಸಾಧನಸಂಪತ್ತುಗಳಂ ಪ್ರಜಾರಂಜನಾದಿಗುಣಗಳಂ ಪ್ರತಿಕ್ಷಣವಲ್ಲಿಯು ವಿಚಿತ್ರಾಕಾರಂಗಳಂ ಪಡೆದಿರುವ

ಗೂಢಚಾರರಿಂದ ತಿಳಿಯುತ ಶತ್ರುಗಳಲ್ಲಿರುವ ಸಮರ್ಥರಾದಮಂತ್ರಿ ಸೇನಾಪತಿಗಳಂ ಸಾಮ ದಾನ ಭೇದಗಳಿಂದಸ್ವಪಕ್ಷರಾಗಿರುವಂತೆಯು ನೋಡುವವರಿಗೆ ಶತ್ರುಗಳಂತೆಯು ನಟಿಸುವಪರಿಯಾಗಿ ಸ್ವಾಧೀನಗೊಳಿಸಿ, ತನ್ನ ಸೈನ್ಯವು ಘಾತವಂಪೊಂದದಂತೆ ಕೃತ್ರಿಮಯುದ್ಧದಿಂದ ಕೆಲವುಶತ್ರುಗಳನ್ನಾಕ್ರಮಿಸಿ ದಂಡೋಪಾಯದಿಂ ಸಾಧ್ಯರಾಗದಿರುವ ಪ್ರಬಲರಾಯರುಗಳಂ ಭೇದದಿಂನಿಗ್ರಹಿಸಿ, ದಂಡಭೇದಗಳಿಗೆ ಅಶಕ್ಯರಾದವರಂ ಸಾಮೋಪಾಯದಿಂ ಸ್ವಾಧೀನಪಡಿಸುತ ಈ ಮೂರು ಉಪಾಯಗಳಿಂದಲೂ ಸಾಧ್ಯರಾಗದಿರುವ ಪ್ರಬಲಶತ್ರುರಾಯರುಗಳಂ ಪ್ರಮಾದಕರಂಗಳಾದ ವಸ್ತುಗಳಂ ದಾನದಿಂ ಕಾಲಾಂತರದಲ್ಲಿ ತಮಗೆತಾವೇ ಘಾತವಂಪೊಂದುವಂತೆಮಾಡಿ ತನ್ನ ಸ್ವೀಕರಂಭಾರಿಭಾರಿಗೂ ಧನವಸ್ತ್ರವಾಹನಂಗಳಿಂದಲೂ ಉಪಚಾರೋಕ್ತಿಗಳಿಂದಲೂ ಪ್ರೋತ್ಸಾಹಿಸುತ ದೇಶಂಗಳಂಸ್ವಾಧೀನಗೊಳಿಸಿಕೊಂಡು ಪರರಾಯರು ಮಾಡುವ ಕೃತ್ರಿಮಸಂವಿಧಾನಂಗಳಿಗೆ ಸ್ವಾಧೀನವಾಗದೆ ಧೈರ್ಯವನ್ನಾಶ್ರಯಿಸಿ ಅವಕ್ಕೆತಕ್ಕ ಪ್ರತೀಕಾರಂಗಳಂ ಪರಿ ಪರಿ ಉಪಾಯದಿಂದಲೂ ಊಹಿಸುತ ನಿಜನಾಮರೂಪಗಳಂ ವೇಷಭಾಷಾಭೇದಗಳಂ ವೇಷಭಾಷೆಗಳಿಂದ ಮರೆಮಾಡಿ ಅನುಚಿತಗಳಾದ ಸೇವೆಗಳಿಗಾದರೂ ಪಡಂಬಟ್ಟು ಶ್ರಮವಂಸಹಿಸುತ ಅತ್ಯಂತಪ್ರಿಯವಂ ತೋರ್ಪಡಿಸುತ ಚಿರಕಾಲದಲ್ಲಿ ತಾನು ಮಾಡುವ ಕಪಟಸಂಧಾನವಂ ಪರರು ಅರಿಯದಂತೆ ಅವರೊಳ್ ಸ್ವಾಮಿಭೃತ್ಯರಿಗಾದರೂ ತಂದೆಮಕ್ಕಳಿಗಾದರೂ ಮಂತ್ರವಂಪ್ರಯೋಗಿಸಿ ವಿರೋಧವನ್ನುಂಟುಮಾಡುತ ಆಸಮಯದಲ್ಲಿ ಸೇನಾದಿಸಾಧನಾಂತರ ಸಹಾಯದಿಂ ಸುಖದಿಂದ ಅವರಂಸ್ವಾಧೀನರಂ ಮಾಡಿಕೊಂಡು ನಿಜಕಾರ್ಯವಂ ನಿರ್ವಹಿಸಬೇಕು. ಮತ್ತೂ ದೇಶಕಾಲಂಗಳಂ ತಿಳಿದು ಜಯಿಸಲಿಚ್ಛೈಸಿ ಸಂಧಿ ವಿಗ್ರಹ ಯಾನ ಆಸನ ದ್ವೈಧೀಭಾವ ಸಮಾಶ್ರಯಂಗಳನ್ನಾಶ್ರಯಿಸಿ ಆತ್ಮಸೇನಾಮಂಡಲದಲ್ಲಿ ಕಂಟಕರಂ ಶೋಧಿಸುತ ಪರರಾಜ ಸೇನಾಮಂಡಲಗಳಲ್ಲಿ ಕಂಟಕರಂ ನಾನಾಮುಖದಿಂಕಲ್ಪಿಸುತ ಸ್ವಾಧೀನಂಗಳಾದ ರಾಜ್ಯಂಗಳಲ್ಲಿರುವ ಪ್ರಜೆಗಳಿಗೆ ಅಭಯವಂಕೊಟ್ಟು ಧನಧಾನ್ಯಂಗಳಿಂದಲೂ ಉಪಚಾರೋಕ್ತಿಗಳಿಂದಲೂ ಅವರಿಗೆ ಸಂ

ತೋಷವನ್ನುಂಟುಮಾಡಿ ಪ್ರಜೆಗಳಹಿತಂಗಳಲ್ಲಿಯೇ ನಿರಂತರ ಅತ್ಯಂತ ಆಸಕ್ತನಾಗಿ ಕ್ರಮದಿಂದ ಚಕ್ರವರ್ತಿ ಪದವಂ ಪೊಂದಿ ಚಿರಂಜೀವಿಯಾಗಿ ಇರುವನೆಂದು ಶುಕ್ರ ಬೃಹಸ್ಪತಿ ಭಾರುಚಿ ವಿಶಾಲಾಕ್ಷ ಪರಾಶರ ಯಾಜ್ಞವಲ್ಕ್ಯ ಚಾಣಕ್ಯ ಕಾಮಂದಕ ಮೊದಲಾದವರು ಪೇಳಿರುವ ನೀತಿಶಾಸ್ತ್ರವು ಹತ್ತಾರುಲಕ್ಷ ಗ್ರಂಥರೂಪಂಗಳಾಗಿ ಇರುವವು, ಇವೆಲ್ಲವಂ ಬಹುಪ್ರಜ್ಞಾಶಾಲಿಗಳಾದ ರಾಜಕುಲಶಿರೋಮಣಿಗಳಾದ ತಾವು ಚತುಷ್ಷಷ್ಟಿವಿದ್ಯಾಪಾರಂಗತನಾದ ನೀತಿಶಾಸ್ತ್ರದೊಳ್ ಅತ್ಯಂತನಿಪುಣನಾದ ಬ್ರಾಹ್ಮಣೋತ್ತಮನಾದ ವಿದ್ಯಾಸಾಗರನೆಂಬ ಗುರುವಿನಮುಖದಿಂದ ಸಮರ್ಪಕವಾಗಿ ತಿಳಿದಿರುವಾಗ ನಾನು ವಿಶೇಷವಾಗಿ ವಿಜ್ಞಾಪಿಸುವದೇನು, ಮತ್ತು ಚಕ್ರವರ್ತಿಗಳ ಮಹಾವಂಶದಲ್ಲಿ ಜಗದೀಶ್ವರಿಯಾದ ಶ್ರೀ ಚಾಮುಂಡಾದೇವಿಯ ಪರಮಾನುಗ್ರಹದಿಂದ ಸಕಲ ಶಾಸ್ತ್ರಂಗಳಂ ಕರತಲಾಮಲಕದಂತೆ ತಿಳಿದಿರುವ ನಿಮಗೆ ಯಾವಕಾರ್ಯವು ಮಾಡಲಶಕ್ಯವಾಗಲಾರದು ಎಂದು ಬಿನ್ನವಿಸಲು, ಯುವರಾಜನಾದ ಸುಗಂಧರಾಜಕುಮಾರನು ಮಂತ್ರಿಯಾದ ಸುಬುದ್ಧಿಯ ಬುದ್ಧಿರೀತಿಗಳನ್ನೋಡಿ ಅತ್ಯಂತ ಸಂತೋಷಪಟ್ಟು ಸಕಲನೀತಿಗಳ ಉಪದೇಶವಂ ಮಾಡುವ ನೀವು ಹಿಂಬಲವಾಗಿ ಇರುವಲ್ಲಿ ನನಗೆ ಅಶಕ್ಯಕಾರ್ಯ ಯಾವದಿರುವದೆಂದು ನುಡಿದು ಮಂತ್ರಿಯಾದ ಸುಬುದ್ಧಿಯಂ ಬಹುಮಾನದಿಂದ ಆದರಿಸುವಸಮಯದೊಳ್ ಸಭಾಮಂಟಪದಲ್ಲಿರುವ ಮಿಕ್ಕಾದ ಮಂತ್ರಿಗಳು ಸೇನಾಪತಿಗಳು ಮೊದಲಾದ ಸಕಲ ಜನಂಗಳು ಅತ್ಯಂತ ಸಂತೋಷದಿಂ ತಮ್ಮ ತಮ್ಮ ಮನಂಗಳಲ್ಲಿ ಈ ಸುಗಂಧರಾಜಕುಮಾರನು ಸಾರ್ವಭೌಮನಾಗುವದರಲ್ಲಿ ಎಷ್ಟುಮಾತ್ರವೂ ಸಂದೇಹವಿಲ್ಲವೆಂದು ಆಲೋಚಿಸುತ್ತಿರುವ ಸಮಯದೊಳ್, ಮತ್ತಂ ಸುಚರಿತ್ರ ಮಹಾರಾಯನು ಮಗನಾದ ಸುಗಂಧರಾಜಕುಮಾರನ ಮುಖವನ್ನೋಡಿ ಎಲೈ ಆಯುಷ್ಮಂತನಾದ ಕುಮಾರನೇ ಈ ವೀರಸೇನಾದಿಗಳು ಕುಲಕ್ರಮದಿಂದ ನಮ್ಮ ಸೇವೆಯಲ್ಲಿ ಇರುವರು, ಮತ್ತೂ ರಾಜಹಿತರು ಸಕಲ ಸೇನಾಶಾಸ್ತ್ರಪಾರಂಗತರು, ಅತ್ಯಂತ ಶೂರರು, ಇವರಂ ಸನ್ಮಾನದಿಂದೊಡಗೂಡಿ ಉಚಿತಕಾರ್ಯಂಗಳಲ್ಲಿ ನಿಯಮಿಸಿ ಯಾವದರಲ್ಲಿಯೂ ಕಡಮೆ ಇಲ್ಲದಂತೆ

ನಡೆಯಿಸುವದು ಮುಖ್ಯಕಾರ್ಯವೆಂದು ನಿರೂಪಿಸಿ ಆ ಸಭಾಸ್ಥಾನದಿಂದ ಎದ್ದು ವೀರಸೇನನಂ ಕರೆದು ಕೈಹಿಡಿದು ಗುಣವತಿ ಮೊದಲಾದವರಿರುವ ಅಂತಃಪುರದ ಗುಡಾರವಂ ಕುರಿತು ಮೆಲ್ಲ ಮೆಲ್ಲನೆ ಅಡಿಯಿಡುತ ಎಲೈ ವೀರಸೇನನೆ ಚಿರಂಜೀವಿಯಾದ ಸುಗಂಧರಾಜಕುಮಾರನು ರಾಜತಂತ್ರಗಳೆಲ್ಲವಂ ಬಲ್ಲವನಾದವರೂ ವಯಸ್ಸಿನೊಳ್ ಬಾಲನು ಮತ್ತೂ ಒಂದಾನೊಂದು ಕಾರ್ಯಸಮಯದೊಳ್ ನಿನ್ನಂಕುರಿತು ಕೋಪದಿಂ ಒಂದು ಮಾತನಾಡಿದರೂ ಆತನಂ ಸನ್ನಂತೆ ತಿಳಿದು ಸಹಿಸುವದಲ್ಲದೆ ಅವಶ್ಯ ಕಾರ್ಯಂಗಳಲ್ಲಿ ಆತನು ಕೋಪದಿಂದಿರುವಸಮಯದಲ್ಲಿಯೂ ಹಿಂದೆಗೆಯದೆ ಯೋಗ್ಯಂಗಳಾದ ವಚನಂಗಳಂ ಪೇಳಿ ಕೋಪವಿಲ್ಲದಂತೆ ಮಾಡಿ ಕಾರ್ಯಂಗಳಂ ನಿರ್ವಹಿಸುವುದೇ ಮುಖ್ಯಾಭಿಪ್ರಾಯವಾಗಿ ತಿಳಿದು ನಡೆಯುವದು, ಮಿಗಿಲಾದ ಸೇನಾಸಂರಕ್ಷಣೆ ಮೊದಲಾದ ಕಾರ್ಯಂಗಳಲ್ಲಿ ಜಾಗರೂಕನಾಗಿರುವದೆಂದು ನಿನಗೆ ಪ್ರತ್ಯೇಕವಾಗಿ ಹೇಳತಕ್ಕ ಅಂಶವಿಲ್ಲವೆಂದು ಆಜ್ಞಾಪಿಸಿ ಪ್ರೇಮದಿಂ ತನ್ನ ದಕ್ಷಿಣಹಸ್ತದಲ್ಲಿರುವ ರತ್ನದ ಕಡಗವಂ ಬಿರುದಾಗಿ ಕೊಟ್ಟು ಕಳುಹಿಸಿ ನಿಜಾಂತಃಪುರದ ಗುಡಾರವಂ ಪ್ರವೇಶಿಸಿ ತನ್ನ ಕಾಂತೆಯರೊಡನೆ ಇಷ್ಟಾಲಾಪಂಗಳನ್ನಾಡುತ ಇರುವ ಸಮಯದೊಳ್, ಸುಗಂಧರಾಜನು ಗುಣವತಿ ಮೊದಲಾದ ಮಾತೃಜನಂಗಳಿಗೆ ನಮಸ್ಕಾರವಂ ಮಾಡುವದಕ್ಕೋಸುಗ ಮಾತೃಜನಂಗಳಿರುವ ಗುಡಾರವಂಪೊಕ್ಕು ತಾರಕಾಸುರನ ಸಂಹಾರಾರ್ಥವಾಗಿ ತೆರಳುವ ಸಮಯದಲ್ಲಿ ಗೌರೀಶಂಕರರ ಚರಣಗಳಿಗೆ ನಮಸ್ಕರಿಸಬೇಕೆಂದು ಬರುವ ಕುಮಾರನಂತೆ ಬಂದು ತಂದೆಗಳ ಪಾದಾರವಿಂದಗಳಿಗೆ ಅಭಿವಂದಿಸಿ ನಿಂತಿರಲು, ಗುಣವತಿಯು ಗುಣವಂತನಾದ ಕುಮಾರನಂ ಕುರಿತು ಎಲೈ ಮಗುವೇ ನೀನು ಬುದ್ಧಿಶಾಲಿಯಾಗಿ ಕಾಲದೇಶಂಗಳನ್ನರಿತು ಸಕಲವಾದ ಊಳಿಗಗಳಲ್ಲಿ ಪರಮಾಪ್ತರಂ ನಿಯಮಿಸು, ದೇಶಾಂತರಗಳಲ್ಲಿರುವ ಅಪೂರ್ವಪದಾರ್ಥಂಗಳಂ ಜನಗಳಂ ಕೂಡ ಪರೀಕ್ಷೆಯಂ ಮಾಡಿದಲ್ಲದೆ ಸಮೀಪವಂ ಸೇರಿಸಲಾಗದು, ಕಾಲಕಾಲದಲ್ಲಿ ಮಜ್ಜನ ಭೋಜನಾದಿಗಳಂ ನಿಯಮದಿಂದ ಮಾಡುತಲಿರುವದು, ಮತ್ತೂ ದೇಶಂಗಳಲ್ಲಿ ರಾಯರುಗಳು ಬಹು ಸೇನಾ

ಸಮೇತರಾಗಿ ಕಪಟಕೃತ್ಯಂಗಳಲ್ಲಿ ಸಮರ್ಥರಾದ ಜನಗಳಿಂದಕೂಡಿ ಇರುವರು ಅವರುಗಳಂ ಜಯಿಸುವ ಕಾಲದೊಳ್ ನೀನು ಜಾಗರೂಕನಾಗಿ ಹಿಂದೆ ಮುಂದೆ ಸಂಗತಿಗಳಂ ಊಹಿಸಿ ಕಾರ್ಯಂಗಳಂ ಕೈಕೊಳ್ಳುವದು. ಮತ್ತು ರಾಜರುಗಳಿಗೆ ರಾಜ್ಯವು ಅಂತರವೆಂದು ಬಾಹ್ಯವೆಂದು ಎರಡುಪ್ರಕಾರವಾಗಿರುವದು ಅಮಾತ್ಯ ಮೊದಲಾದ ಆರು ಅಂಗಗಳು ಬಾಹ್ಯರಾಜ್ಯವಲ್ಲಿ ಸೇರಿರುವವು ನಿಜಶರೀರವೇ ಅಂತರರಾಜ್ಯವೆನಿಸಿಕೊಂಬುವದು, ಅಂತಿರುವ ಶರೀರವಂ ಸರ್ವವಿಷಯಗಳಲ್ಲಿಯೂ ಸಂರಕ್ಷಿಸುತ್ತಲಿರುವವನಿಗೆ ಬಾಹ್ಯರಾಜ್ಯವು ಬುದ್ಧಿಬಲದಿಂದಲೇ ಸ್ವಾಧೀನವಾಗುವದ್ದರಿಂದ ಆತ್ಮಶರೀರರಕ್ಷಣದಲ್ಲಿ ಜಾಗರೂಕನಾಗಿರಬೇಕೆಂದು ಹೇಳಿ ಶಿರವನ್ನಾಘ್ರಾಣಿಸಿ ಕರಕಮಲದಿಂದ ಮೈದಡವಿ ವಜ್ರಶರೀರನಾಗಿ ದೀರ್ಘಾಯುಷ್ಮಂತನಾಗಿ ಮಾಂಧಾತರಾಯನಂತೆ ಶ್ರೀದೇವಿಯಕಟಾಕ್ಷದಿಂದ ಸಮಸ್ತ ಭೂಮಂಡಲವಂ ಜಯಿಸಿ ಶೀಘ್ರಕಾಲದಲ್ಲಿ ಕ್ಷೇಮದಿಂಬರುವದೆಂದು ವೃತ್ರಾಸುರನವಧಾರ್ಥವಾಗಿ ತೆರಳುವ ದೇವೇಂದ್ರಂಗೆ ಅದಿತಿದೇವಿಯು ಆಶೀರ್ವಾದವಂ ಮಾಡಿದಂತೆ ಆಶೀರ್ವಾದವಂಮಾಡಿದ ಬಳಿಕ ಮಣಿಮಂಜರಿ ಮೊದಲಾದ ಸಕಲ ಸಪತ್ನೀಮಾತೃಜನಂಗಳ ಪಾದಪದ್ಮಗಳಿಗೆ ಅಭಿವಂದಿಸಿ ಅವರು ಹೇಳುವ ಹಿತೋಪದೇಶವಂ ಅಂಗೀಕರಿಸಿ ಅವರುಗಳು ಮಾಡಿದ ಆಶೀರ್ವಾದಂಗಳಂತಾಳ್ದು ಹಾಗೆ ಪವಿತ್ರಚರಿತ್ರನಾದ ಸುಚರಿತ್ರರಾಯನ ಚರಣಂಗಳಿಗೆ ಗೋತ್ರಾಭಿವಾದನೆಯಂ ಮಾಡಲು ರಾಯನು ಪುತ್ರನಂಕುರಿತು ಎಲೈ ಕುಮಾರನೇ ನಮ್ಮ ವಂಶದಲ್ಲಿ ಪುಟ್ಟಿದರಾಯರುಗಳು ಪೂರ್ವದಲ್ಲಿ ಗರ್ವದಿಂ ಮೆರೆಯುತಲಿರುವ ಸರ್ವಶತ್ರುರಾಜರುಗಳಂ ಜಯಿಸಿ ಧರಣಿಯಂ ಪಾಲಿಸುತ ಕೀರ್ತಿಪ್ರತಾಪಂಗಳಂ ಬೆಳೆಯಿಸುವ ಕಾರ್ಯಂಗಳಲ್ಲೇ ಪ್ರವರ್ತಿಸುತ ಚಕ್ರವರ್ತಿಪದವಿಯಂ ಪಡದರೆಂಬ ವಾರ್ತೆಯಂ ಬಹು ಗ್ರಂಥಗಳಲ್ಲಿ ಕೇಳಿಯಿದ್ದೀಯೆ, ಮತ್ತೂ ನಿನ್ನಂ ಯೌವರಾಜ್ಯವಿಚಾರದಲ್ಲಿ ಇರುವಂತೆ ನಿಯಮಿಸಿ ನಾನು ಜೈತ್ರಯಾತ್ರೆಗ ತೆರಳುವದು ಉಚಿತವಾದರೂ ನಿನಿಗೆ ನಾನಾ ದೇಶಗಳ ಸ್ವಭಾವಂಗಳು ತಿಳಿಯಬೇಕು ಇಂತಲ್ಲದೆ ನೀನು ಮಾಡುವ ಕಾರ್ಯಂಗಳಂ ನೋಡಬೇಕೆಂಬ ಅಭಿಲಾಷೆಯಿಂದ ಕ

ಳುಹಿಸುವೆನು ಶ್ರೀ ಪರಮೇಶ್ವರಿಯ ಕರುಣಾಕಟಾಕ್ಷದಿಂದ ಪರಾಯ ರಂಗೆದ್ದು ಸಂತೋಷದಿಂ ಬಾಯುಂದು ಹರಸಿ ಪ್ರೇಮಾಲಿಂಗನವಂ ಮಾಡಿ ಮನ್ನಿಸಿ ದಿಗ್ವಿಜಯಾರ್ಥವಾಗಿ ದಿಲೀಪಮಹಾರಾಯನು ತನ್ನ ಮಗನಾದ ರಘುಮಹಾರಾಯನಂ ನಿಯಮಿಸಿದಂತೆ ಅಪ್ಪಣೆಯಂ ಕೊಟ್ಟು ಕುಮಾರನಂ ಕಟಕಕ್ಕೆ ಕಳುಹಿ, ತಾನು ಗುಣವತಿ ಮೊದಲಾದ ರಾಣಿಯರೊಡಗೂಡಿ ಬಂದೇರಥಮೋಳ್ ಕುಳಿತು ಸುಗಂಧರಾಜಕುಮಾರನ ಪ್ರಭಾವಮಂವರ್ಣಿಸುತ ರಥದ ಕನ್ನಡಿಯ ಗವಾಕ್ಷಂಗಳಲ್ಲಿ ಕುಮಾರನ ಸೇನಾಕಟಕವಂ ತಿರಿಗಿ ತಿರಿಗಿ ನೋಡುತ ರಾಣಿಗೆ ಧೈರ್ಯವುಂಟಾಗುವಂತೆ ಶೌರ್ಯಪುರಸ್ಸರವಾಗಿ ಮಾತುಗಳಂಪೇಳುತ ಗಜಾಶ್ವರಥಗಳನೇರಿ ಬರುವ ಸೇನೆಯಿಂದೊಡಗೂಡಿ ನಗರವಂ ಪ್ರವೇಶಿಸಿ ಸುಖದಿಂದ ಇರುತ್ತಿರಲು.

ಇತ್ತಲಾ ಸುಗಂಧರಾಜೇಂದ್ರನು ಕಟಕದಲ್ಲಿರುವ ಸಭಾಮಂಟಪಕ್ಕೆ ಬಂದು ಅಲ್ಲಿ ಸನ್ನದ್ಧನಾಗಿ ಕಾದಿರುವ ಸುಮತಿಯಂ ಕುರಿತು ಎಲೈ ಮಂತ್ರಿಯೆ ಚತುರಂಗಸೇನೆಯು ದಿಗ್ವಿಜಯಾರ್ಥವಾಗಿ ತೆರಳುವದಕ್ಕೆ ಅರಣ್ಯ ಪರ್ವತ ನದೀ ವೃಕ್ಷಗಳಿಂದದುರ್ಗಮವಾದ ಮಾರ್ಗಂಗಳಂ ಶೋಧಿಸಲೋಸುಗ ಶಿಲ್ಪಿಕಾರ ಮೊದಲಾದವರಂ ಕರೆಕಳುಹಿಸೆಂದು ನೇಮಿಸಲಾಸುಮತಿಯು ರಾಯನು ನಿರೂಪಿಸಿದಪರಿಯಾಗಿ ಪ್ರಜ್ಞಾಸೂತ್ರನೆಂಬ ಶಿಲ್ಪಿಕಾರನಂ ಕರಸಿ ಎಲೈ ಶಿಲ್ಪಿಯೆ ನೀನು ನಿನ್ನ ಭೃತ್ಯವರ್ಗಂಗಳೊಡಗೂಡಿಪೋಗಿ ಸೇನಾಮಾರ್ಗದ ಶೋಧನೆಯಂ ಮಾಡುವಂತೆ ರಾಯನು ನಿರೂಪಿಸಿ ಇರುವನೆಂದು ಕಟ್ಟುಮಾಡಿ, ಬಳಿಕ ಸುಗಂಧರಾಯನ ಸಮೀಪಕ್ಕೆ ಬಂದು ಕೈಗಳಂಮುಗಿದು ಎಲೈ ಮಹಾರಾಯನೆ ನಿನ್ನ ಆಜ್ಞಾನುಸಾರವಾಗಿ ಸೇನಾಮಾರ್ಗವಂ ಶೋಧಿಸಲೋಸುಗ ಪ್ರಜ್ಞಾಸೂತ್ರನೆಂಬ ಶಿಲ್ಪಿಗೆ ಕಟ್ಟುಮಾಡಿರುವೆನು, ಮತ್ತೂ ಸನ್ನದ್ಧವಾದ ಚತುರಂಗಸೇನೆಯಿಂದೊಡಗೂಡಿದ ಸೇನಾಪತಿಯಾದ ವೀರಸೇನನು ಗುಡಾರದ ಮುಂಭಾಗದೋಳ್ ಪರೀಕ್ಷಾರಂಗ ಭೂಮಿಯಲ್ಲಿ ಕಾದಿರುವನು, ಸ್ವಾಮಿಯವರು ಉನ್ನತವಾದ ಗಜಾರೋಹಣವಂ ಮಾಡಿ ಚಿತ್ತೈಸಿ ಪರಾಂಬರಿಸಬೇಕೆಂದು ಬಿಂನೈಸಲು, ಸುಗಂಧರಾಯನು ಆಮಾತಂಕೇಳಿ ಮನ್ನಿಸಿ ರತ್ನಗಳುಕೆತ್ತಿ

ವ ಚಿನ್ನದ ಸಣ್ಣ ಘಂಟೆಸಾಲುಗಳಿಂದ ಬಿಗಿದಿರುವ ನಿರಾಜೆಯ ಮೇಲು ಹೊದ್ದಿಕೆಯಂ ಪೊದ್ದಿಸಿ ಸಿಂಧೂರದಿಂದ ಗಂಡಸ್ಥಳಂಗಳಲ್ಲಿ ಸೊಂಡಿಲದಲ್ಲಿ ವಿಚಿತ್ರಂಗಳಾದ ಚಿತ್ರಂಗಳಂ ಬರದು ಚಂದ್ರಗಂಧಲದಂತೆ ಚಕಚಕಿಸುವ ವಜ್ರವೈಡೂರ್ಯದಿಂ ಮುಖಪಟ್ಟವಲಂಕರಿಸಿ ಮಣಿಮಯಂಗಳಾದ ಕಳಸಂಗಳಂ ಕೊಂಬುಗಳಲ್ಲಿ ತೊಡಿಸಿ ಬಿಳಿದು ಚಾಮರಿ ಜತೆಸರಪಣಿ ಮಣಿಹಾರ ಘಂಟೆಸರ ಗಿಣಿತಾಳಿ ಸಿಂಗಾರವಾಗಿರು ಚಾರಿ ತೂಗುವ ಮುತ್ತಿನ ಕುಚ್ಚುಗಳು ಅವುಗಳಿಗೆ ಕಾಲುಸರ ಗಗ್ಗರ ಪೆಂಡೆಯಾದ ಭೂಷಣಂಗಳನ್ನಳವಡಿಸಿ ಭಾವಭೇದಂಗಳಂ ತೋರುತ್ತಿರುವ ಮಾವುತರು ಮೆಲ್ಲನೆ ಹಿಡಿದು ನಿಲ್ಲಿಸಿರುವ ವಜ್ರದಂತವೆಂಬ ಮದ್ದ ಮತ್ತಾದ ಮದ್ದಾನೆಯನ್ನೇರಿ ಪ್ರಕಾಶಿಸುತ ಚತುರ ಗಜಗಳಿಂ ನಿಂತಿರುವ ಪರಿಕ್ಕರಂಗ ಮಧ್ಯಕ್ಕೆ ಬಂದು ಚಿನ್ನದ ಸರಪಣಿಗಳಿಂದ ಕಟ್ಟಿದ ಮೆಟ್ಟಿಗೆಗಳುಳ್ಳ ಏಣಿಯಿಂದ ಆನೆಯನ್ನೇರಿದು ಸುಮತಿಯು ಕರಲಾಘವದಿಂ ಏಳು ಅಂತಸ್ತಿನ ನಾಲ್ಕು ಮುಖದ ಚತುರಂತದ ಹಜಾರವನ್ನೇರಿ ನಾಲ್ಕು ದಿಕ್ಕಿನೊಳ್ ನಾಲ್ಕು ಸಮುದ್ರಂಗಳ್ ಬಂದು ನಿಂತಿರುವಂತೆ ತೋರುವ ಚತುರಂಗ ಬಲವನ್ನೋಡುತ ಹಜಾರದ ಮೇಲು ಅಂತಸ್ತಿನಲ್ಲಿರುವ ರತ್ನದ ಪೀಠದಲ್ಲಿ ಕುಳಿತು ಉದಯಪರ್ವತದ ಉಪರಿಭಾಗದೊಳಿರುವ ಸೂರ್ಯನಂತೆ ಪ್ರಕಾಶಿಸುತ್ತಿರಲು, ಆ ಸಮಯದಲ್ಲಿ ಸೇನೆಯೊಳ್ ಪಟಹ ನಿಸ್ಸಾಣ ಮುರಜ ಡಮರು ಡಿಂಡಿಮ ಕಾಹಳೀ ಭೇರೀ ಝಾಂಝರಂಗಳ ದಲೂ ಶತಘ್ನಿ ಮೊದಲಾದ ಯಂತ್ರವಿಶೇಷಂಗಳ ಮಹಾಶಬ್ದಂಗಳಿಂದಲೂ ಅಪರಿಮಿತಂಗಳಾದ ಮಣಿಘಂಟೆಗಳ ಘಣಾತ್ಕಾರಂಗಳಿಂದೊಡಗೂಡಿದ ಮತ್ತಗಜಬೃಂದಂಗಳ ಘೀಟ್ಕಾರಂಗಳಿಂದಲೂ, ಕ್ಷೀರಸಮುದ್ರದಲ್ಲಿ ಸಾಲುಸಾಲಾಗಿ ಮೆರೆಯುವ ತೆರೆಗಳಂತಿರುವ ಕುದುರೆಗಳ ಹೇಷಾರವಂಗಳಿಂದಲೂ, ವೀರಪಾಣೋನ್ಮತ್ತರಾದ ಭಟವರ್ಗಂಗಳ ಸಿಂಹನಾದಂಗಳಿಂದಲೂ ವಂದಿ ಮಾಗಧರ ಜಯಬಿರುದ ಪದ್ಯಂಗಳಿಂದಲೂ ಬ್ರಹ್ಮಾಂಡಕಟಾಹವೆಲ್ಲವು ಶಬ್ದಮಯವಾಗಿರುತ್ತಿರಲು, ಆ ಸಮಯದೊಳ್ ವೀರಸೇನ ಮೊದಲಾದ ಸೇನಾಪತಿಗಳೆಲ್ಲ ತಮ್ಮ ತಮ್ಮ ಕೈಯೊಳಿರುವ ಚಂದ್ರಹಾಸಂಗಳಂ ಒರೆಗಳಿಂದ ತೆಗೆದು

ಸಾಲುಸಾಲಾಗಿ ತಲೆವಾಗಿ ದಂಡಪ್ರಣಾಮವಂ ಗೈಯುತ್ತಲಿರಲು, ಮತ್ತಾ ಆ ಸಮಯದೊಳ್ ಮುಖ್ಯಸೇನಾಪತಿಯಾದ ವೀರಸೇನನು ಭೂಮಿಯ ನೊಂಕೆ ನೊಂಕವಂತೆ ಕುಣಿಯುತಲಿರುವ ಕುದುರೆಯನ್ನೇರಿ ಸುಗಂಧ ರಾಜೇಂದ್ರನೆದುರಾಗಿ ಬಂದು ನಿಂದು ಎಲೈ ರಾಜಾಧಿರಾಜನೇ ಕಟಾಕ್ಷಿಸ ಬೇಕು ಉಕ್ಕಿನ ಜರೀಸರಪಣಿಯ ಕವಚವಂ ತೊಟ್ಟಿರುವ ಉದ್ದಾಮ ಮದ್ದಾನೆಯನ್ನೇರಿ ಕೋಪವೇರೂಪುಗೊಂಡಂತೆ ಮೆರೆಯುತ ಶತ್ರುಭೂ ಪಾಲರಂ ಗೋಪಾಲರಂತೆ ಮಾಡುವಾಗ ಜಯೋದ್ಧರ ಮುಂಭಾಗದೊಳ್ ನಿಂತಿರುವ ಗಜಸೇನಾಪತಿಯಾದ ಶತ್ರುಂಜಯನೆಂಬ ಮಹಾಶೂರನು ಸ್ವಾ ಮಿಯವರ ಚರಣಕಮಲಂಗಳಿಗೆ ಪ್ರಣಾಮವಂ ಮಾಡುವನು ಪರಾಂಬರಿಸ ಬೇಕು, ಈ ದಿಕ್ಕಿನಲ್ಲಿ ಸುವರ್ಣಪತಾಕೆಗಳಿಂದ ಸೂರ್ಯನ ರಥವಂತಿರಸ್ಕ ರಿಸುತಲಿರುವ ಪರ್ವತಗಳೇ ಸಾಲುಗೊಂಡು ಚಲಿಸುವಂತಿರುವ ರಥಗಳ ನೇರಿ ಸ್ವಾಮಿಯ ಮನೋರಥವಂ ಪ್ರಾರ್ಥಿಸುವ ಮಹಾರಥಿಕರ ಮುಂಭಾಗ ದೊಳ್ ಸಕಲ ರಥಿಕಸೇನಾಪತಿಯಾದ ಶರಭವರ್ಮನು ಸ್ವಾಮಿಯವರ ಚರಣಗಳಿಗೆರಗಿ ನಿಂತಿರುವನು ನಿರೀಕ್ಷಿಸಬೇಕು, ಈ ಕಡೆಯೊಳ್ ಯು ದ್ಧಸನ್ನದ್ಧಂಗಳಾದ ಆರಟ್ಟದೇಶದಲ್ಲಿ ಪುಟ್ಟಿದ ಘೋಳಿಯಂ ತಲೆಮುಟ್ಟಿ ನಡೆ ಯುವ ಒಂದೊಂದು ಬಣವೊಳ್ ಲಕ್ಷಾಂತರ ಸಂಖ್ಯೆಯುಳ್ಳ ಜಾತ್ಯಾ ಶ್ವಂಗಳನ್ನೇರಿ ಮಲತರಾಯರ ಕಲಿತನವಂಕಬಳಿಸುವ ಶೌರ್ಯದಿಂ ಮೆರೆ ಯುವ ರಾವುತರ ಮರೋಭಾಗದೊಳ್ನಿಂತಿರುವ ಅಶ್ವಸೇನಾಪತಿಯಾದ ರೌದ್ರಾಶ್ವನು ನಿಮ್ಮ ಪಾದಪದ್ಮಂಗಳಿಗೆ ಪ್ರಣಾಮವಂಗೈಯುವನು ಪರಾಂ ಬರಿಸಬೇಕು, ಈ ಭಾಗದೊಳ್ ಮೂವತ್ತೆರಡು ಆಯುಧಂಗಳ ಸಾಧನೆ ಗಳೊಳ್ ಸಾಹಸವಂತರಾಗಿ ಒಬ್ಬೊಬ್ಬನೆ ಬೆಬ್ಬುಲಿಯಂತೆ ಬೊಬ್ಬಿರಿದು ಶತ್ರುಗಳಂ ತಬ್ಬಿಬ್ಬು ಮಾಡಿ ಕೊಬ್ಬು ಮುರಿಯುವ ಕೋಪದಿಂ ಭಯಂ ಕರವಾದರೂಪದಿಂದೊಪ್ಪಿರುವ ಕಾಲಾಳುಗಳ ಸಾಲುಗಳ ಮುಂದುಗಡೆ ಯೊಳ್ನಿಂತ ಪದಾತಿ ಸೇನಾಪತಿಯಾದ ಭದ್ರಶೂರನು ಖಡ್ಗಹಸ್ತನಾಗಿ ಕೈಗಳಂ ಮುಗಿವನು ಕಟಾಕ್ಷಿಸಬೇಕು, ಇವರು ಬೇರ್ಬೇರೆ ಸೇನಾಪತಿಗ ಳೆಂದು ಬಿನ್ನವಿಸಲು. ಸುಗಂಧರಾಜೇಂದ್ರನು ಆ ವೀರಸೇನನಂ ಹಜಾರದ

ಮೇಲಕ್ಕೆ ಬರುವಂತೆ ನಿಯಮಿಸಿ ಅವನಂ ಕುರಿತು ಬಂದೊಂದು ಜಾತಿಯು ಬಲವು ಪ್ರತ್ಯೇಕ ಪ್ರತ್ಯೇಕವಾಗಿ ಬರಲೀ ಎಂದು ಕಟ್ಟುಮಾಡಲು ವೀರಸೇನನು ರಾಜಾಜ್ಞಾನುಸಾರವಾಗಿ ಒಂದೊಂದು ಬಾರಿಗೆ ಹತ್ತು ಹತ್ತು ಸಾವಿರ ಆನೆಗಳಂ ಸಾಲುಸಾಲಾಗಿ ನಿಲ್ಲಿಸುತ್ತಿರಲಾಗ ಗಜಸೇನೆಯ ಗಣತಿಯಂ ಪೇಳುವ ಭಟರುಗಳು ರಾಜೇಂದ್ರನಂ ಕುರಿತು ಎಲೈ ಸಿಂಹಪರಾಕ್ರಮನೇ ಇವು ಸಿಂಹಳದ್ವೀಪದಲ್ಲಿ ಜನಿಸಿ ಸಕಲಾಂಗಗಳಲ್ಲಿಯೂ ಪುಷ್ಟಿಯಂತಾಳ್ದು ಯುದ್ಧರಂಗದೊಳ್ ಕೋಪವಂಧರಿಸಿ ಸರ್ವದಾ ಮದಧಾರೆಗಳಂ ವರ್ಷಿಸುತ ವರಿಗಳಿಂದ ಜಲಗಳಂ ವರ್ಷಿಸುವ ಗಿರಿಗಳಂತಿರುವ ಕರಿಗಳು ಇವು ಮಲಯ ಸಹ್ಯ ಪರ್ವತಂಗಳೊಳ್ ಜನಿಸಿ ವಜ್ರದವನಿಕೆಗಳಂತಿರುವ ದಂತಗಳಿಂದ ದಿಗ್ದಂತಿಗಳ ಮುಖಕಾಂತಿಯಂ ಕಂದಿಸುವ ಶತ್ರುಗಳಸೇನೆಯಂ ಚಿಂತಾಕುಲವಂಮಾಡಿ ಸಂತಾಪವಂ ಪಡಿಸುವದಂತಾವಳಗಳು ಇವು ಅಷ್ಟದಿಗ್ಗಜಂಗಳ ವಂಶದಲ್ಲಿ ಪುಟ್ಟ ವೈರಿಗಳ ತಲೆಮೆಟ್ಟಿದಾಗ ಕಟ್ಟಿರುವ ಬಿರುದುಗಳಂತೊಟ್ಟು ಜೆಟ್ಟಿಗಳಿಗೆವಡಹುಟ್ಟನಂತಿರುವ ಪಟ್ಟದಾನೆಗಳೂ ಯೆಂದು ಬಿನ್ನೈಸುತ್ತಿರಲು, ಮತ್ತೊಂದು ಕಡೆಯೊಳ್ ಕುದುರೆರಾವುತರುಗಳು ಎಲೈ ರಾಜೇಂದ್ರನೆ ಇವು ಸಿಂಧುದೇಶದಲ್ಲಿ ಪುಟ್ಟ ಸಿಂಧುಗಳನಾದರೂ ದಾಂಟುವಸೈಂಧವಂಗಳು, ಇವು ಆರಟ್ಟದೇಶದೊಳ್ ಪುಟ್ಟ ಪಟ್ಟವಂಕಟ್ಟುವದಕ್ಕೆ ಯೋಗ್ಯಂಗಳಾಗಿ ಗಟ್ಟಿಮುಟ್ಟಾದ ಕುದುರಿಳು ಇವು ಕುಬೇರನೇರುವ ಕುದರೆಗಳ ಕುಲದಲ್ಲಿ ಜನಿಸಿ ಕುರುಚಾದ ಕಿವಿಗಳಿಂ ಕುಲುಕುವ ಚೌರಿಗಳಂತಿರುವ ಬಾಲಂಗಳಿಂ ನಿಡುಪಾದಹಿಂಭಾಗದಿಂ ಅಗಲಗಳಾದ ಯತ್ತರಗಳಾದ ಕೊರಳುಗಳಿಂ ಶುಭಂಗಳಾದಸುಳಿಗಳಿಂ ಭೂಮಿಯೊಳ್ ನಿಂತುನಿಲ್ಲದ ಕಾಲುಗಳಿಂ ಕುರವಿಂದಮಣಿಗಳ ಬಣ್ಣದಿಂ ವಪ್ಪುತ್ತ ರಾವುತರಚಿತ್ತವಂ ತಿಳಿಯುತ್ತ ಚಿತ್ರವಲ್ಲಿ ಬರೆಯಕೂಡದ ಬಿತ್ತರವುಳ್ಳ ಉತ್ತಮಾಶ್ವಂಗಳು ಹತ್ತಾರುಲಕ್ಷಣಂಗಳು, ಇವುಮರಾಟದೇಶದ ಘೋಟಕಂಗಳು, ಇವುಕಳಿಂಗ ದೇಶದ ತುರಂಗಗಳು, ಇವು ಕಾಂಭೋಜದೇಶದ ತೇಜಿಗಳು, ಇವುಕುರುದೇಶದೊಳ್ ಪುಟ್ಟಿದ ಕುದುರೆಗಳೂಯೆಂದು ಅಶ್ವಗಳರೀತಿಯಂ ಬಿನ್ನವಿಸುತ್ತಿರಲು, ಮತ್ತೊಂದು

ಕಡೆಯೊಳ್ ರಥಗಳರೀತಿಗಳಂ ಪೇಳುವ ಸಾರಥಿಗಳು ಸುಗಂಧರಾಜನಂ
ಕುರಿತು ಎಲೈ ರಾಜೇಂದ್ರನೆ ಇವುಚಿನ್ನದ ಕಂಭಗಳತುದಿಗಳಲ್ಲಿ ಅಲ್ಲಾ
ಡುವ ನಿರಾಜಿಯ ಪತಾಕೆಗಳ ಕಾಂತಿಯಿಂದೊಪ್ಪಿ ಥಳಥಳಿಸುವ ಮಿಂಚು
ಗಳನೊಳಕೊಂಡ ಕಾಲಮೇಘದಂತೆಸದು ಉಕ್ಕುವ ರೌದ್ರರಸಮಂ
ತೋರಿಸುವ ಉಕ್ಕಿನ ರಥಂಗಳು, ಇವು ಪರಸೇನೆಗಳೊಳ್ ಕಪಟದಿಂ
ಮಾಡುವ ಕಾರ್ಯಂಗಳಂ ಕಾಣಬೇಕೆಂದು ಕಟ್ಟಿರುವ ಕನ್ನಡಿಗಳಂತೆ
ಕಾಂತಿಗಳಿಂದೊಪ್ಪಿದ ಕಂಚಿನ ರಥಂಗಳು, ಇವು ಮಣಿಮಯಮಾದ ಮೇ
ರುವೇ ಬಹುರೂಪುಗೊಂಡಂತಿರುವ ಗಜರಥಂಗಳು, ಇವು ಕಟ್ಟಿದ ಸಾವಿ
ರಾರು ಕುದುರೆಗಳಿಂ ಭೂಮಿಯನ್ನೊದರಿಸುತ ರಿಪುಗಳು ಬೆದರುವಂತೆ
ಮಾಡುತ ನಡೆದುಬಂದು ನಿಂದಿರುವ ಮಂದರಗಿರಿಯಂದದಿ ಇರುವ ಸುವ
ರ್ಣಸ್ಯಂದನಂಗಳು, ಇವು ಪಂಚಲೋಹಂಗಳಂ ಕೂಡಿ ಯರಕವಂಮಾ
ಡಿರುವ ಗಾಡಿಗಳು, ಇವು ಸೇನಾಲಕ್ಷ್ಮಿಯ ಮಣಿಕುಂಡಲಂಗಳಂತೆಸೆವ ನಾ
ನಾಮಂಡಲೇಶ್ವರರು ಒಪ್ಪಿಸಿದ ಭಂಡಿಗಳ ತಂಡತಂಡಗಳೆಂದು ಬೇರೆ ಬೇರೆ
ಬಿನ್ನವಿಸುತ್ತಿರಲೂ. ಮತ್ತೊಂದುಕಡೆಯೊಳ್ ಪದಾತಿಗಳ ಪಂಗ್ತಿವಿಡಿದು
ಪೊಗಳುತ್ತಿರುವ ಭಟರುಗಳು ರಾಯನಂ ಕುರಿತು ಎಲೈ ಚಕ್ರೇಶ್ವರನೆ
ಇವರು ರಿಪುಗಳ ಕೋಟಿಗಳಂ ನೋಟದಿಂದಲೇ ಮೀಟುವಮೊನೆಗಾರ
ತನದಲ್ಲಿರುವ ಕರ್ನಾಟದೇಶದ ವೀರಭಟರುಗಳು, ಇವರು ಮಲತಿರುವ
ಪಾಳೆಗಾರರ ಪಟ್ಟಣಂಗಳಂ ಪಾಳುಮಾಡುವ ಕೇಳಿಯಂಕಲಿತಚೋಳದೇಶ
ದಾಳುಗಳು, ಇವರು ಶತ್ರುಗಳ ಮತ್ತಗಜಂಗಳನ್ನಾದರೂ ತುತ್ತು ಮಾ
ಡಾಗಿ ಕತ್ತರಿಗಳಿಂದ ಕತ್ತರಿಸಿ ನೋಡುವರ ಚಿತ್ತಗಳ ತತ್ತರಗೊಳ್ಳು
ವಂತೆ ಮಾಡುವ ಮದೋನ್ಮತ್ತರಾದ ಉತ್ತರದೇಶದ ಪತ್ತಿವರ್ಗಂಗಳು,
ಇವರು ಪಾಂಡ್ಯದೇಶದ ಪದಾತಿಗಳು, ಇವರು ಕೇರಳ ದೇಶದ ಕಿಂಕರರು
ಇವರು ಆಂಧ್ರದೇಶದ ವೀರಭಟರು, ಇವರು ಕಳಿಂಗದೇಶದ ಕಾಲ್ಬಲಗಳೆಂ
ದು ಬಿನ್ನವಿಸುತ್ತಲಿರುವ ಗಂಭೀರವಾದ ಮಾತುಗಳಂಕೇಳಿ ಮತ್ತೂ ಆನೆ
ಗಳ ಔನ್ನತ್ಯಮಂ ಕುದುರೆಗಳ ಕುಣಿದಾಟಮಂ ಭಟರುಗಳ ಬಾಹುಬಲ
ಮಂ ಆಯುಧಂಗಳ ಕಾಂತಿಗಳಂ ಗೊತ್ತುಗಾರರ ಗುಣಂಗಳಂ ಕೂಡಾ

ನೋಡಿ ತನ್ನ ಮನದೊಳ್ ಸಂತೋಷಗೊಂಡು ಸೇನಾಮಂಡಲಪತಿ ಯಾದ ವೀರಸೇನನಂ ಕರದು ಸೈನಿಕರ ವಿದ್ಯೆಯುಂ ವ್ಯೂಹಕೌಶಲ್ಯಮಂ ನೋಡಬೇಕೆಂದು ನಿರೂಪಿಸಲು. ವೀರಸೇನನು ಎಲೈ ರಾಜಾಧಿರಾಜನಾದ ಸುಗಂಧರಾಜನೆ ನೀನು ನಿರೂಪಿಸಿದ ಪರಿಯಾಗಿ ಸೈನಿಕರ ವ್ಯೂಹರಚನೆ ಯಂ ಪರಾಂಬರಿಸಬೇಕೆಂದು ಬಿನ್ನವಿಸಿ ಚತುರಂಗವ ಹಜಾರದಿಂದೆಮು ಅತಿವೇಗದಿಂ ಬಂದು ಚತುರಂಗ ಬಲದ ಗೊತ್ತುಗಾರರಂ ಕರದು ವ್ಯೂ ಹರೀತಿಯುಂ ರಚಿಸುವಂತೆ ರಾಜಾಜ್ಞೆಯಾಗಿರುವದೆಂದು ಕಟ್ಟುಮಾಡಲು, ಆಕ್ಷಣದಲ್ಲಿಯೆ ಚತುರಂಗ ಪತಿಗಳು ತಮ್ಮ ತಮ್ಮ ಸೇನೆಗಳಂ ಕುರಿತು ವ್ಯೂಹವಂ ರಚಿಸುವ ಸಂಕೇತಧ್ವನಿಗಳಂ ಮಾಡಲು, ಆಧ್ವನಿಗಳಂ ಕೇಳ್ ದ ಸೇನಾಜನರುಗಳು ಭೂಮಂಡಲವು ಕೊಡಹಿದಂತೆ ಚಲಿಸುವ ಗಜ ಗಳಂ ಚದುರುವ ಕುದುರೆಗಳಂ ಕದಲುವ ರಥಗಳಂ ಪೊಡ್ಬ್ಯಾಡುವ ಕಾಲ ಲಂಗಳಂ ಗುಂಪುಗುಂಪಾಗಿ ಗುಡಿಗಟ್ಟಿ ನಿಂಗಡಿಸುತ, ಒಂದೆಡೆಯೊಳ್ಮಂ ಡಲಾಕಾರವಾಗಿ ಒಂದೆಡೆಯೊಳ್ ಶಕಟಾಕೃತಿಯಾಗಿ ಮತ್ತೊಂದು ಕಡೆ ಯೊಳ್ ಅರ್ಧಚಂದ್ರಾಕಾರವಾಗಿ ಮತ್ತೊಂದು ಭಾಗದೊಳ್ ಜೊತೆ ಗೂಡಿದ ನಾಗಗಳಂತೆ ಕೂಡುತ್ತಾ ಮರಳಿ ಬೇರಬೇರಾಗಿ ಸಾಲ್ದೀರಿ ಒಂ ದೊಂದು ನಿಮಿಷದೊಳ್ ಒಂದೊಂದು ಬಗೆಯಾಗುತ್ತಾ ವೀರಲಕ್ಷ್ಮಿಯು ಸಖೀ ಸಹಸ್ರಗಳಿಂದೊಡಗೂಡಿ ಕೋಲಾಟಗಳಂ ಆಡುವಳೋ ಎಂಬಂತೆ ಕವಲಿ ಬರುವ ಕೋಟೆಗಳಂತೆ ಕಾಣಿಸುತ ಮತ್ತೂ ಚಂದ್ರನಂತಿರುವ ಚ ತುರಂಗವ ಹಜಾರವಂ ಸುತ್ತುವರಿದು ಆ ಹಜಾರವನ್ನೇ ಕಮಲಕರ್ಣಿಕಾ ಸ್ಥಾನವಂ ಮಾಡಿ ಅದರ ಸುತ್ತಲೂ ಕುದರೆಗಳಂ ಕೇಸರಂಗಳಾಗಿಯು ಅ ದಂ ಬಳಸಿದ ಮದಧಾರೆಗಳೆಂಬ ಮಕರಂದವಮಂ ವರ್ಷಿಸುವ ಹತ್ತಾರು ದೇ ಶಂಗಳ ಮತ್ತಗಜಂಗಳೇ ಬಳದಳಗಳಾಗಿಯು, ಅದರ ಸುತ್ತಲೂ ಎ ಣಿಸಕೂಡದ ಮಣಿ ಘಂಟೆಗಳಿಂದಲೂ ಅಂಬರವಂ ಚುಂಬಿಸುವ ಪತಾಕೆ ಗಳಿಂದಲೂ ಒಪ್ಪುವ ರಥಂಗಳೇ ಹೊರದಳಗಳಾಗಿಯು, ಇಂತಿರುವ ಪದ್ಮ ದೆಸಳುಗಳ ಅಂತರದೊಳ್ ಕುಂತ ಪರಶುಗಳಂ ಧರಿಸಿ ಪರಾಗಸಂತತಿಗ ಳಂತೆ ನಿಂತಿರಲು. ಮತ್ತೂ ಲಕ್ಷ್ಮೀನಿವಾಸಯೋಗ್ಯಮಾದ ಅರಳಿದಕೆಂದಾ

ವರೆಯಂತೆ ವಿರಚಿಸಿ ಇರುವ ವ್ಯೂಹಸಮುದ್ಭವ ಪ್ರಕಾರದೊಳ್ ಇರುವ ಸುಗಂಧರಾಜೇಂದ್ರನು ಆದಿನಾರಾಯಣನ ನಾಭೀ ಪದ್ಮದೊಳ್ ಕುಳಿತಿರುವ ಜಗತ್ಕರ್ತನಾದ ಚತುರ್ಮುಖನಂತೆ ತೋರುತ್ತಲಿರುವ ಸಮಯದೊಳ್ ಸೈನಿಕರು ಪದ್ಮವ್ಯೂಹ ಅರ್ಧಚಂದ್ರವ್ಯೂಹ ನಾಗವ್ಯೂಹ ಮೊದಲಾದ ಅನೇಕ ವ್ಯೂಹಂಗಳಂ ಪರಿಪರಿಯಾಗ ನೋಡುವವರಿಗೆ ಆಶ್ಚರ್ಯಕರವಾಗಿ ವಿರಚಿಸುತ್ತಲಿರಲು. ಆ ಸಮಯದೊಳ್ ಆಯಾಯ ವ್ಯೂಹಂಗಳಿಗೆ ಅನುಕೂಲವಾಗಿ ಗಂಭೀರವಾಗಿ ಮೊಳಗುವ ಭೇರೀ ಪಟಹ ನಿಸ್ಸಾಳ ಮೊದಲಾದ ವಾದ್ಯಗಳ ಧಣಧಣಧ್ವನಿಗಳಿಂದೊಡಗೂಡಿದ ಫಿರಂಗಿ ತುಪಾಕಿ ಮೊದಲಾದ ಅನೇಕ ವಿಧಂಗಳಾದ ಯಂತ್ರಗಳ ಮಹಾಧ್ವನಿಗಳು ತಡೆಯದೆ ಬಡಿಯುವ ಸಾವಿರಾರು ಸಿಡಿಲಧ್ವನಿಗಳಂ ತಿರಸ್ಕರಿಸಿ ಭೂಮಿಯನ್ನದಿಗಿಸಿ ಕುಲಪರ್ವತಂಗಳನ್ನಲ್ಲಾಡಿಸಿ ಗುಹಾಂತರಗಳೊಳ್ ಪ್ರತಿಧ್ವನಿಗಳನ್ನುಂಟುಮಾಡಿ ಐರಾವತ ಮೊದಲಾದ ಅಷ್ಟದಿಗ್ಗಜಂಗಳ ಕಿವಿಗಳಂ ಕಿವುಡುಮಾಡಿ ಘೋರೆಂದು ಮೊರೆಯುತ್ತಿರಲು, ಆ ಮಹಾಧ್ವನಿಯಂ ಕೇಳಿ ರತ್ನಪುರದಲ್ಲಿರುವ ಜನರುಗಳು ಕಟಕದೊಳ್ ಚತುರಂಗಬಲದ ಸಾಧನೆಯು ಪರಿಕ್ಷೆಯಾಗುವದೆಂದು ತಿಳಿದು ಉನ್ನತಂಗಳಾದ ತಮ್ಮ ತಮ್ಮ ಮಂದಿರಂಗಳ ಚಂದ್ರಶಾಲೆಗಳ ಮೇಲೆ ಇರುವ ಬಿಸಲುಮುಚ್ಚುಗಳನ್ನೇರಿ ಎತ್ತರವಾದ ಚಿತ್ತರದ ಏಲುಪಾಣೆಗಳಲ್ಲಿ ಚಿತ್ತರದಿಂ ಪತ್ತುತ್ತರದೊಳ್ ಕುಳಿತು ದೂರದೃಷ್ಟಿಯ ಕನ್ನಡಿಗಳಿಂದೊಡಗೂಡಿದ ರನ್ನದ ಕೊಳವಿಗಳಂ ಹಿಡಿದು ಕ್ಕಿರಿನೋಟದಿಂ ನೋಡುತ್ತ ಅದೋ ಆನೆಗಳ ತಂಡಗಳಂ ಕಂಡೆವೆನ್ನುವರು. ಕೆಲವರು ರಥಗಳಂ ನೋಡಿದೆವು ಎನ್ನುವರು ಕೆಲವರು ಕುದುರೆಗಳಂ ಎದುರಾಗಿ ಕಂಡೆವೆನ್ನುವರು, ಕೆಲವರು ನಮಗೆ ಕಾಲ್ಬಲಂಗಳು ಕಾಣಲಾಯಿತೆನ್ನುವರು ಕೆಲವರು ಇಂತಿರಲು ಮತ್ತೆ ಕೆಲವರು ಚಿತ್ತರಿಯರಾದ ವಾರನಾರಿಯರನ್ನೂರಾರುಮಂದಿ ಮಂದಹಾಸೆಯರಿಂದೊಡಗೂಡಿ ದೂರನೋಟದ ಕನ್ನಡಿಗಳಿಂದೊಪ್ಪುವ ಕುಂದಣದ ಕೊಳವಿಗಳಂ ಕರಗಳಿಂದ ಹಿಡಿದು ಹತ್ತಾರುಸಾವಿರ ಫಿರಂಗಿಗಳ ರವದಿಂದೊಪ್ಪುವ ಚತುರಂಗಬಲದ ವ್ಯೂಹರಚನೆಯಂನೋಡುವದಕ್ಕೆ ರಾಜೇಂದ್ರನಾದ ಸುಗಂಧರಾಜಕುಮಾರನು

ಹಜಾರಕ್ಕೆ ಬಂದಿರುವನು ಆ ಸುಂದರಾಂಗನಂ ನೋಡಿ ಆನಂದವಂ ಹೊಂದುವಾ ಎಂದು ಮಂದಗಮನವಂ ಬಿಟ್ಟು ಪ್ರೋಡ್ಯೋಡಿ ಬಂದು ಹಿಂದುಮುಂದಾದ ವಡವೆವಸ್ತುಗಳಂ ನೋಡದೆ ಉನ್ನತಂಗಳಾದ ತಮ್ಮ ತಮ್ಮ ಮಂದಿರಂಗಳ ಬಿಸಲ್ಮಚ್ಚುಗಳನ್ನೇರಿ ಮೆಲ್ಲಮೆಲ್ಲನೆ ಕಿರಿನೋಟದಿಂ ನೋಡುತ್ತ ಸೇನೆಯಂ ನೋಡಿದರೆ ನಮ್ಮ ದೃಷ್ಟಿಗಳಿಗೆ ಫಲನೇನೆಂದು ಬ್ಯಾಸರಂಗೊಳುತ ನೋಟವಂ ಬಿಡುವದಕ್ಕೆ ಮನಸ್ಸು ನಿಲ್ಲದೆ ತಡದು ತಡದು ನೋಡುತ ಕ್ರಮದಿಂ ಸುಗಂಧರಾಜಕುಮಾರನಿರುವ ಚತುರಂಗದ ಹಜಾರವನ್ನೋಡಿ ರೆಪ್ಪೆಹಾಕಿದರೆ ತಪ್ಪಿಹೋಗುವದೆಂದು ದೃಷ್ಟಿಯನ್ನಲ್ಲಿಯೇ ನಿಲ್ಲಿಸಿ ಮೆಲ್ಲನೆ ನೋಡುತ್ತಿರಲು. ಆ ಸಮಯದೊಳ್ ಮಹಾರಾಜಾಂತಃಪುರದಲ್ಲಿರುವ ರಾಣಿಗುಣವತೀ ಮಣಿಮಂಜರೀ ಚಂದ್ರಕಲಾ ಕನಕಲತಾ ಕಮಲಿನೀ ಮೊದಲಾದ ರಾಜಕಾಂತೆಯರು ಮಂಜುವಾಣಿ ಮೊದಲಾದ ತಮ್ಮ ತಮ್ಮ ಸಖಿಯರಿಂದೊಡಗೂಡಿ ಮಂದಹಾಸದಿಂ ದೂರದೃಷ್ಟಿಯು ಕನ್ನಡಿಗಳಂ ದಳವಟ್ಟಿ ಕುಂದಣದ ಕೊಳವಿಗಳಂ ವಿಲಾಸದಿಂ ಹಿಡಿದು ತಮ್ಮ ತಮ್ಮ ಉಪ್ಪರಿಗೆಗಳ ಉಪರಿ ಭಾಗವಂ ಸೈದಿ ಚತುರಂಗ ಹಜಾರದ ತುದಿ ಅಂತಸ್ತಿನೊಳ್ ಸಾಮಾಜಿಕರೊಡಗೂಡಿ ಕುಳಿತು ನಾಲ್ಕುಕಡೆಯೊಳಿರುವ ನಾಲ್ಕುಪರಿಯಾದ ಬಲವಂ ನಾಲ್ಕುಮುಖದವನಂತೆ ನೋಡುತ್ತಿರುವ ಶಿರದೊಳ್ ಕಿರೀಟವಂ ಕಿವಿಗಳೊಳ್ ವಜ್ರಕುಂಡಲಗಳಂ ಕೊರಳೊಳ್ ತಾರೆಗಳಂತಿರುವ ಹಾರಂಗಳಂ ಸಕಲ ಶತ್ರುಸಂಹಾರಕಾಲಸರ್ಪಂಗಳಂತಿರುವ ಭುಜಗಳೊಳ್ ಪದ್ಮರಾಗಮಣಿಖಚಿತಂಗಳಾದ ಅಂಗದಂಗಳಂ ಕರಕಮಲದೊಳ್ ವೀರಕಂಕಣವಂ ಅಂಗುಳಿಯೊಳ್ ಯುವರಾಜಮುದ್ರೆಯಂ ಮತ್ತೂ ಮನೋಹರವಾದ ವಜ್ರದ ಉಂಗುರವಂ ಧರಿಸಿ ಕಳಂಕವಿಲ್ಲದ ಚಂದ್ರನಂತೆ ಕಳಕಳಿಸುವ ಕರ್ನಾಟಮಂಡಲೇಶ್ವರನಾದ ಸತ್ಯಸಂಧನಾದ ಸುಗಂಧರಾಜಕುಮಾರನಂ ಮಾರುದೂರದಲ್ಲಿರುವಂತೆ ಕಂಡು ಶ್ರೀದೇವಿಯ ಕಟಾಕ್ಷದಿಂ ಆಯುಷ್ಮಂತನಾಗಿರೆಂದು ಹರಸುತ ಸಂತೋಷದಿಂದಿರುತ್ತಿರಲು.

ಮತ್ತೊಂದುಕಡೆಯೊಳ್ ಕೆಲವರು ಸುದತಿಯರು ಸುಗಂಧರಾಜಕು

ಮಾರನ ಸೌಂದರ್ಯವನ್ನೋಡಿ ಸೊರಗಿ ಪುಳಕಂಗೊಂಡು ಮೈಬೆವರಿ ಕೈಲಿದ್ದ ಕನ್ನಡಿಯು ಜಾರಿ ಬೀಳುವದಂ ಕಾಣದೆ ಕಪೋಲಂಗಳೊಳ್ ಕೈಗಳನ್ನಿಟ್ಟು ಕಾಮನಿಗೆ ಕಾಯವಂ ಕೊಟ್ಟು ಸುಗಂಧರಾಜನೊಳ್ ಮನವನ್ನಿಟ್ಟು ನಿಟ್ಟುಸುರಂಬಿಟ್ಟು ಮುಟ್ಟು ವಿಹಾವ ವಿರಹಭ್ಭಾರದಿಂ ಕಂಗೆಟ್ಟಿರಲು, ಒಂದೆಡೆಯೊಳ್ ಕೆಲವರು ಸೀಮಂತಿನಿಯರು ಆ ರಾಜಕುಮಾರನನ್ನೋಡಿ ಇವನು ಚಂದ್ರನೋ ಅರವಿಂದಶರನೋ ಪುರಂದರನೋ ಎಂದು ಸಂದೇಹಗೊಂಡು ಇಂತಿರುವನಂತಃಪುರದ ಕಾಂತೆಯಾಗುವಳೆಂತಿರುವಳೋ ಅವಳ ಪುಣ್ಯವೆಂತಹುದೋ ಎಂದು ಚಿಂತೆಯಂ ಮಾಡುತ್ತಿರಲು, ಮತ್ತೊಂದೆಡೆಯೊಳ್ ಕೆಲವರು ಎಳೆ ಸೂಳೆಯರು ಗಾನಾಭಿನಯಗಳಿಂದ ಈ ರಾಜಕುಮಾರನಂತರಂಗವಂ ರಂಗುಗೊಳಿಸಿ ಅನಂಗಯುದ್ಧರಂಗದೊಳ್ ತನುವಂ ಚಿರಸಿ ಸರಸವನ್ನಾಡಿ ಮುದ್ದಾಡಿ ಪರಿ ಪರಿ ರತಿಗಳಂ ಬೆಳೆಯಿಸದ ಬಾಲೆಯರ ಬಾಳು ಬಾಳಲ್ಲವೆನುತ ಬಾಯಿ ಬಿಟ್ಟು ಪೇಳುತ್ತಿರಲು, ಮತ್ತೊಂದೆಡೆಯೊಳ್ ವಯಸ್ಸುಮೀರಿದ ನಾರಿಯರುಗುಣವತಿಯ ಪುಣ್ಯವೆನ್ನುವರು, ಮತ್ತೆ ಕೆಲವು ಜನಗಳು ಸುತ್ತು ಕೋಟೆ ಕೊತ್ತಲಗಳನ್ನೇರಿ ಕಾರ್ಮುಗಿಲಂತೆ ತೋರುವವೇ ಗಜಂಗಳು, ನಾವೆಗಳಂತೆ ಪತಾಕೆಗಳಿಂದ ಒಪ್ಪುತಲಿರ್ಪುದೇ ರಥಂಗಳು, ತರಂಗಗಳಂತೆ ಬರುವವೆ ತುರಂಗಗಳು, ನೊರೆಗಳಂತೆ ಅಂಚಿನೊಳ್ ಸಾಲುಸಾಲಾಗಿ ನಿಂತು ಕಾಣುವವೇ ಕಾಲ್ಬಲಂಗಳು ಎಂದು ಅಚ್ಚರಿಗೊಂಡು ಮೆಚ್ಚಿ ಸೇನಾಸಮುದ್ರವನ್ನೋಡಿ ಒಟ್ಟು ಒಟ್ಟಾಗಿ ವಿವರವಂ ತಿಳಿಯದೆ ನೋಡುತ ತಮ್ಮತಮ್ಮೊಳಗೆ ತಾವು ತಾವೆ ಮಾತನಾಡುತಲಿರಲು. ಮತ್ತೆ ಕೆಲವರು ನೋಟಗಾರರು ಸುಗಂಧರಾಜಕುಮಾರನಿರುವ ಚತುರಂಗದ ಹಜಾರವಂ ಅದರ ಬಳಿಯಲ್ಲಿ ಕುಶಲರಾದ ಸೇನಾಪತಿಗಳಿಂದ ರಚಿಸಲ್ಪಟ್ಟ ಪದ್ಮಾದಿ ವ್ಯೂಹಭೇದಂಗಳಂ ನೋಡಿ ಬರುವಾ ಎಂದು ರಥಗಳನ್ನೇರಿ ಓಡುವಂತೆ ಕುದುರೆಗಳಂ ಕೋರಡೆಯ ಮೊನೆಯಿಂದ ಸೋಂಕಿಸುತ ವೇಗದಿಂ ಬಂದು ಪುರದೊಳ್ ಗುಂಪುಗುಂಪಾಗಿ ನಿಂತು ನೋಡುತ ಇದು ಪದ್ಮವ್ಯೂಹವು, ಇದು ಗರುಡವ್ಯೂಹವು, ಇದು ಅರ್ಧಚಂದ್ರವ್ಯೂಹವು, ಇದು ಚಕ್ರ

ಪ್ರಯಾಣವು ಎಂದು ಒರ್ವೊರ್ವರಿಗೆ ಒರ್ವೊರ್ವರು ಹೇಳುತ ಭೇರೀನಿಸ್ಸಾಣ ಪಟಹಾದಿ ಪರಿ ಪರಿ ವಾದ್ಯಧ್ವನಿಗಳಿಂದಲೂ ಫಿರಂಗಿ ಮೊದಲಾದ ಯಂತ್ರದ ಧ್ವನಿಗಳಿಂದಲೂ ಕಿವಿಗಳು ಕಿವುಡಾಗಲು ನೋಟದಿ ಸೈನ್ಯಗಳಿಂ ಮಹಾಘನಾದಮುತ್ತ ಅಚ್ಚರಿಗೊಂಡು ಸುಗಂಧರಾಜನ ಗುಣಮಂ ಕೊಂಡಾಡುತ್ತಲಿರಲು. ಆ ಸಮಯದೊಳ್ ಸುಗಂಧರಾಜನು ಚತುರಂಗಬಲದ ಸಾಧನೆಯಂ ಸಾಂಗವಾಗಿ ನೋಡಿ ಸಂತೋಷಗೊಂಡು ಪತ್ತಿ ಸೇನಾಮುಖ ಗುಲ್ಮಗಣ ವಾಹಿನೀ ಪೃತನಾ ಚಮೂ ಅನೀಕಿನೀ ದಶಾನೀಕಿನೀ ಅಕ್ಷೋಹಿಣೀ ಎಂಬ ಹತ್ತು ಬಗೆಯಾದ ಸೇನೆಗಳ ಗೊತ್ತುಗಾರರಿಗೂ ಮತ್ತಿರುವ ಸೈನಿಕರಿಗೆಲ್ಲರಿಗೂ ಪರಿ ಪರಿಯಾದ ಮಣಿಭೂಷಣಂಗಳಂ ಚಿತ್ರದುಕೂಲಂಗಳಂ ಕೋಟ್ಯಂತ್ರರ ಸಂಖ್ಯೆಯುಳ್ಳ ಧನಮಂ ಕಾಲಮೇಘದಂತೆ ವರ್ಷಿಸಿ ಆಬಳಿಕ ವೀರಸೇನ ಶತ್ರುಂಜಯ ಶರಭವರ್ಮ ರೌದ್ರಾಕ್ಷ ಭದ್ರಶೂರರುಗಳಂ ಮಧುರವಾದ ಮಾತುಗಳಿಂದ ಆದರಿಸಿ ಕಳುಹಿಸಲು, ಆಸಮಯದೊಳ್ ಚತುರಂಗಬಲದ ಓಡ್ಯಾಟದಿಂದಿದ್ದ ಭೂಪರಾಗವೆ ಸಂಧ್ಯಾರಾಗದಂತೆ ನಭೋಮಂಡಲದೊಳ್ ಸಂಜೆಗೆಂಪಾಗಿ ತೋರಲಾಗ ನಾನಾವಿಧ ಭೇರಿಭಾಂಕಾರಗಳು ಗಜಗಳ ಬೃಂಹಿತಂಗಳು ರಥಗಳ ರವಂಗಳು ಹಯಗಳ ಹೇಷಿತಂಗಳು ವೀರಭಟರುಗಳ ಸಿಂಹನಾದಂಗಳು ಕೂಡಾ ಮೊಳಗೆ ಸುಗಂಧರಾಜೇಂದ್ರನು ಸುಮತಿಯು ಹಸ್ತಲಾಗದಿಂ ಚತುರಂಗದ ಹಜಾರದಿಂದಿಳಿದು ವಜ್ರದಂತವೆಂಬ ಆನೆಯ ನೇರಿ ವಾಸವನಂತೆ ತೋರಿ ವೈಯಾರವಂ ಮೀರಿ ಗುಡಾರವಂ ಸೇರಿ ಸುಮತಿ ವೀರಸೇನರಂ ಬೇಗ ಬರುವದೆಂದು ಕಟ್ಟು ಮಾಡಿ ಪನ್ನೀರಿನಿಂ ಪಾದಂಗಳಂ ತೊಳದು ಪೀತಾಂಬರವನ್ನುಟ್ಟು ಸಂಧ್ಯೋಪಾಸನೆಯಂಗೈದು ರಾಜಮಂಡಲಿಯಿಂದೊಡಗೂಡಿ ಭೋಜನವಂಗೈದು ಕುಂದಣದಂತೆ ವಿರಾಜಿಸುವ ಸಿರಾಜಿಯುವಳ ಗುಡಾರಕ್ಕೆ ಬಂದು ಅಲ್ಲಿ ಕಾದಿರುವ ಸುಮತಿ ವೀರಸೇನರಂ ಕುರಿತು ತಮ್ಮ ರಾಜ್ಯಕ್ಕೆ ಸುತ್ತಲಿರುವ ದೇಶದ ಅರಸುಗಳಲ್ಲಿ ಮಿತ್ರರಂ ಮಿತ್ರಮಿತ್ರರಂ ಮಿತ್ರಶತ್ರುಗಳಂ ಶತ್ರುಗಳಂ ಶತ್ರುಶತ್ರುಗಳಂ ಶತ್ರುಮಿತ್ರರೆಂಬ ಆರುಮಂದಿಯಂ ವಿಚಾರಿಸಿ ಬಳಿಕ ಹಿಂಭಾಗದೊಳಿರುವ ದಾಯರಂ ಕೆಲಬಲ

ದೊಳಿರುವ ಅರಸುಗಳೆಂ ಮುಂಭಾಗದೊಳಿರುವ ಭೂಪಾಲರುಂ ಯಾರ್‍ಯಾ
ರೆಂದು ದೂರಾಲೋಚನೆಯಿಂದ ವಿಚಾರವಂಗೈದು ಅವರೊಳ್ ಕೆಲವರು
ಮಧ್ಯಮರು ಕೆಲವರು ಉದಾಸೀನರೆಂದು ಅವರವರ ಗುಣದೋಷಂಗಳಂ
ತಿಳಿದು ಹನ್ನೆರಡು ಬಗೆಯಾದ ರಾಜಮಂಡಲದ ಪರಿಶೋಧನೆಯಂಗೈದು
ಪರರಾಜ್ಯಂಗಳೊಳ್ ಸಪ್ತಾಂಗಗಳ ಬಲಾಬಲಂಗಳ, ವಿಚಾರಿಸಲೋಸು
ಗ ಚಾರರಂ ಕಳುಹಬೇಕೆಂದು ಕಾಲಚಕ್ರನ ಮಗನಾದ ಚಾರವರ್ಣನಂ
ಕರೆಸಿ ಸುಮತಿಯು ಮೊಗವನ್ನೋಡಲು, ಗುರುಭಾರ್ಗವರ ಸವಾಸನಾದ
ಸುಮತಿಯು ಬೇಹುಗಾರರ ಗೊತ್ತುಗಾರನನ್ನು ನೋಡಿ ಎಲೈ ಚಾರವ
ರ್ಣನೆ ಸುಗಂಧರಾಜಭೂಪಾಲನು ಸೇನಾ ಸಮೇತನಾಗಿ ನಾನಾ ದೇಶಂಗ
ಳಂ ಜೈಸಲೋಸುಗ ತೆರಳಿರುವನು, ಆದ್ದರಿಂ ನೀನು ಪರಿಪರಿಯಾದ ವೇ
ಷಭಾಷೆಗಳಲ್ಲಿ ಚತುರರಾದ ಚಾರರಂ ದೇಶ ದೇಶಕ್ಕೆ ಕಳುಹಿ ಅಲ್ಲಿರುವ
ಪರರಾಯರ ಬಲಾಬಲಂಗಳಂ ಸಪ್ತಾಂಗಸಮೃದ್ಧಿಯುಂ ತಿಳಿದು ಭಾರಿಭಾರಿ
ಗೂ ಸಮಾಚಾರವಂ ತರಿಸುವದಲ್ಲದೆ ದೇಶಾಂತ್ರರಂಗಳಿಂದ ಬಂದ ಬೇಹು
ಗಾರರು ನಮ್ಮ ಸೇನೆಯೊಳ್ ಸೇರಿ ಆಪ್ತರಂತೆ ತೋರಿ ಯಾಚಕರೆಂದು
ಪರಿಚಾರಕರೆಂದು ಕಾಲಜ್ಞಾನಿಗಳೆಂದು ಗಣಿತಜ್ಞರೆಂದು ವಿರಕ್ತರೆಂದು ವೇ
ಷಧಾರಿಗಳೆಂದು ಕಣಿಯಂ ಪೇಳುವರೆಂದು ಗಾರುಡಿಗರೆಂದು ಮಹೇಂದ್ರಜಾ
ಲದವರೆಂದು ಮಹಾತ್ಮರೆಂದು ಯೋಗೀಶ್ವರರೆಂದು ಪರಿಪರಿಯಾದ ವೇಷ
ಭಾಷೆಗಳ್ಗಳಂ ಧರಿಸಿ ಯಕ್ಷಿಣೀ ಅದೃಶ್ಯಕರಣೀ ಅಂಜನ ಕಟ್ಟು ಕಾವು ಕರ
ಲಾಘವ ಮೂಲಿಕೆ ಬವನಿಕೆ ಮಂಕುಬೂದಿ ಮದ್ದುಗುಳಿಗೆ ಭಂಗಿ ಸಸ್ಯ
ಪಶ್ಯ ಮಂತ್ರ ಯಂತ್ರಗಳಂ ಪ್ರಯೋಗಿಸುತ್ತಲಿರುವರು. ಅವರಂ ಮತ್ತೂ
ಪಗಡೆ ಚತುರಂಗದಾಟಗಳಂ ಅಭಿನಯವಂ ನಾಟ್ಯವಂ ಕೂಡಾ ತಿಳಿದ ರೂ
ಪವತಿಯರಾದ ವಿಷಕನ್ಯೆಯರಂ, ಮತ್ತೂ ಬಗೆಬಗೆಯಾದ ಲಂಚ ಮೊದ
ಲಾದವುಗಳಿಂದ ವಂಚನೆಯಂ ಮಾಡುತ್ತ ಪರರಿಗೆ ತಿಳಿಯದಂತೆ ಸರ್ವರಲ್ಲಿ
ಯೂ ಸೇರಿ ಒರ್ವೋರ್ವರಿಗೆ ಕಲಹವಂ ವೈರವಂ ಭಯವಂ ನಿಂದೆಯಂ ಅ
ಪವಾದವಂ ಪುಟ್ಟಿಸುತ್ತ ಪರಿಪರಿಯಾಗಿ ಸಾಲ ಜೂಜು ಮೊದಲಾದ ತಂಟೆ
ಗಳನ್ನುಂಟುಮಾಡಿ ಎಲ್ಲಿಯೂ ಅಂಟಿ ಅಂಟದಂತೆ ತಿರುಗುತ್ತ ಘಾಳಿಗಂಟು

ಮಾತುಗಳಿಂದ ಸಂಟರಂತೆ ತೋರುವ ತುಂಟರಂ ಕೂಡ ಬೆನ್ನಟ್ಟಿ ಹಿಡಿತೆ ರುವ ಭಂಟರಂ ಬೇಹುವಾಗಿ ಇಟ್ಟು ಮೈಯಲ್ಲಾ ಕಣ್ಣಾಗಿ ಸೇನೆಯೊಳ್ ಕಂಟಕಶೋಧನೆಯಂಗೈಯುವದೆಂದು ಪೇಳಿ ವಸ್ತ್ರಭೂಷಣಂಗ ಳಂ ಕೊಟ್ಟು ಕಳುಹಲು. ಅಬಳಿಕ ಸುಗಂಧರಾಜನು ಸೇನಾಪತಿಯಂನೋಡಿ ಎಲೈ ವೀರಸೇನನೇ ನಮ್ಮ ಸೇನೆಯೊಳಿರುವ ಜನಂಗಳಿಗೆ ಪರಸೇನಾ ಜ ನರೊಡನೆ ಸಂಟುತ್ತನವಂ ಕೊಟ್ಟು ಕೊಳ್ಳುಣವಂ ಸಹವಾಸವಂ ಪರಿಚ ಯವಂ ಸ್ನೇಹವಂ ಮಾತುಗಳು ಆಲೋಚನೆಯುಂ ಕೂಡಾ ಪರೋಕ್ಷವಾ ಗಿ ವಿಚಾರಿಸಿ ಆಪ್ತರಂ ಅನಾಪ್ತರಂ ವಿವರವಾಗಿ ತಿಳಿದು ಸೇನಾಮಂಡಲ ದ ಶೋಧನೆಯಂಗೈಯುವದರಲ್ಲಿ ನಿಪುಣನಾದ ಕುಲಕ್ರಮಾಗತನಾದ ನೀತಿ ಶಾಸ್ತ್ರ ಪಾರಂಗತನಾದ ನಿನಗ ನಾನು ನೂತನವಾಗಿ ನಿರೂಪಿಸುವುದೇನಿ ಥೆ ಎಂದು ನುಡಿದು ನಾಳ ಬೆಳಗ್ಗೆ ಶುಭಸಮಯದೊಳ್ ಜಯಾರ್ಥವಾಗಿ ಪ್ರಯಾಣವ ಮಾಡಬೇಕಾದ್ದರಿಂ ಕೇರಳ ತುಳವ ಕೊಂಕಣ ಮಾರ್ಗ ದಿಂ ತೆರಳುವದೆಂದು ಸೇನಾಜನಂಗಳಿಗೆ ಶಾಸನವಂಪೇಳಿ ನೀವು ಸಿದ್ಧವಾಗಿ ರುವದೆಂದು ಆಜ್ಞೆಯನಿತ್ತು ಸುಮತಿ ವೀರಸೇನರಂ ಕಳುಹಿ ಪರಮೋ ತ್ಸಾಹದಿಂ ಪರ್ಯಂಕದೊಳ್ ಪವಡಿಸಿ ಸುಖನಿದ್ರೆಯಂಗೈಯುತ್ತಿರಲೂ. ಆಗ ಸುಮತಿ ವೀರಸೇನರೀರ್ವರು ಧಾನ್ಯಗುಪ್ತನೆಂಬ ಉಗ್ರಾಣದ ಅಧಿ ಕಾರಿಯಂ ಕರೆಯಿಸಿ ನಾಳೆ ನಾಲ್ಕುಗಳಿಗೆ ವಳಗಾಗಿ ಹತ್ತುರುಲಕ್ಷ ಸೇನೆ ಯಿಂದೊಡಗೂಡಿ ಸುಗಂಧರಾಜೇಂದ್ರನು ದಿಗ್ವಿಜಯಾರ್ಥವಾಗಿ ಪ್ರಯಾ ಣವಂ ಮಾಡುವನು ಮಾರ್ಗಂಗಳೊಳ್ ಬಿಡದಿಗಳಲ್ಲಿ ವಸ್ತುಮುಸ್ತೆ ದುಗಳು ವಿಸ್ತಾರವಾಗಿ ಇರುವದೇ ಎಂದು ಕೇಳಲು, ಆ ಧಾನ್ಯಗುಪ್ತನು ಆ ಮಾತಂಕೇಳಿ ಕರಗಳಂ ಮುಗಿದು ಎಲೈ ಮಹಾ ಮಂತ್ರಿಯೆ ನಿನ್ನ ಅ ನುಗ್ರಹದಿಂದ ಸಾಮಗ್ರಿಯಂ ಸಮಗ್ರವಾಗಿ ಸನ್ನಹಿಶಿ ಸಕಲ ಧಾನ್ಯಂಗ ಳು ಪರಿಪರಿಯಾದ ರಸವರ್ಗಂಗಳು ಸಂಬಾರದ ಸರಕುಗಳು ವಾಸನಾ ದ್ರವ್ಯಂಗಳು ಫಲಂಗಳು ಪುಷ್ಪಜಾತಿಗಳು ದ್ವೀಪಾಂತರದ ಪದಾರ್ಥಂಗ ಳು ಮೊದಲಾದ ಸಮಸ್ತ ವಸ್ತುಗಳಂ ಹಿಂಗಡವಾಗಿ ಮುಂಗಡೆಯೊಳ್ ತುಂಬಿ ತುಳುಕುವ ಸಾವಿರಾರು ಅಂಗಡಿಗಳ ಸಾಲುಗಳಂ ದಾರಿ ದಾರಿಗಳ ಕೆಲಬಲದೊಳ್ ನಿಲ್ಲಿಸಿರುವೆನು, ಇದಲ್ಲದೆ ಸೇನೆಗಳು ಇಳಿಯುವ ಸ್ಥಳ

ಗಳಲ್ಲಿ ಹನ್ನೆರಡು ಗಾವುದ ನೆಲವನ್ನು ಚನ್ನಾಗಿ ಸವರಿಶಿ ಉನ್ನತಂಗಳಾದ ಕಂಭಗಳ ಮೇಲೆ ಚಿನ್ನದ ಪತಾಕೆಗಳಂ ಸಾಲು ಸಾಲಾಗಿ ಕಟ್ಟಿರುವ ಒಂದೊಂದು ಪಗಡೆಚಾರಿ ಬೀದಿಗಳಿಗೆ ನಾಲ್ಕು ಚತುರಂಗದ ಪ್ಯಾಟಿಗಳಂ ರಚಿಶಿ ಅದರೊಳ್ ಎಡೆಬಿಡದಿರುವ ಅಂಗಡಿಗಳ ಮುಂಗಡೆಯೊಳ್ ಮುತ್ತು ಪಚ್ಚೆ ಗಳ ಕೆತ್ತನೆಯಿಂ ಬಿತ್ತರವಾದ ಬಡವೆಗಳ ಮೊತ್ತಗಳಂ, ಮತ್ತೊಂದೆಡೆಯೊಳ್ ಚಿತ್ರ ವಿಚಿತ್ರಂಗಳಾದ ಚೀನಾಂಬರಂಗಳ ಅಂಗಡಿಗಳ ತಂಡ ತಂಡಂಗಳಂ, ಮತ್ತೊಂದು ದಿಕ್ಕಿನೊಳ್ ನೂರಾರು ಬಗೆಯಾದ ಚಿನ್ನ ಬೆಳ್ಳಿ ನಾಣ್ಯಗಳಂ ಧಾನ್ಯಗಳಂತೆ ರಾಶಿಗಳಂ ಮಾಡಿ ಮಾನ ಬಳ್ಳಕೊಳಗ ಖಂಡುಗವೆಂದು ಅಳೆಯುತಲಿರುವ ಭರತಖಂಡದೊಳಿರುವ ಯವನ ನೇಪಾಳಾದಿ ಮಂಡಲಗಳಿಗೆ ಕೋಟ್ಯಂತರ ಧನಗಳ ಹುಂಡವಾಣಿಯಂ ಮೊಂಡಾಗಿ ನಡೆಯಿಸುವ ಅಖಂಡೈಶ್ವರ್ಯದಿಂದೊಪ್ಪುವ ಗುಜರಾತಿಯರು ಕಾಯಿತರು ಗೋಸಾವಿಯರು ಲಾಡಿಯರು ಮತ್ತೊಂದು ಬೀದಿಯೊಳ್ ಕಸ್ತೂರಿ ಕರ್ಪೂರ ದ್ರಾಕ್ಷಾ ಎಲಾ ಲವಂಗ ಮೊದಲಾದ ವಸ್ತುಗಳಂ ವಿಸ್ತಾರವಾಗಿ ಮಡಗಿ ಮಾರುವ ಮಾರುವಾಡಿಯವರು ಮಾಪಿಳ್ಳೆಯವರು ಕೊಂಕಣಿಯವರು ಮತ್ತೊಂದೆಡೆಯೊಳ್ ಪರಿಪರಿ ಪೈರುಗಳಂ ತಂದು ತುಂಬಿ ಬ್ಯಾರವಂ ಮಾಡುವ ಚೇರಿಯರು ಬಣಜಿಗರು ನಗರ್ತರು ಕೋಮಟಿಗರು ಕಂಚುಗಾರರು ಗಾಣಿಗರು ಕವಾಡಿಗರು ಪುವ್ವಾಡಿಗರು ಬಚ್ಚಣಿಕೆಲಸದವರು ಚಿಪ್ಪಿಗರು ಲಬ್ಬೆಯರು ರಂಗಾರೆಯವರು ಪಿಂಜಾರರು ಪಂಸಾರೆಯವರು ಸೊಣೆಯಂಹಿಡಿಯುವವರು ಪ್ಯಾದರು ಕುರುಬರು ಮುಚ್ಚಿಗರು ಮೊದಲಾದ ನಾನಾಜಾತಿಯವರಿಗೆ ಬೇರ್ಬೇರೆ ಬೀದಿಗಳಂ ಹಂಚಿಕಡ್ಡಿ ಮೊದಲುಗೊಂಡು ಹಣ ಪರ್ಯಂತವಾಗಿ ಅಂಗಡಿಗಳೊಳ್ ತುಂಬಿಶಿರುವೆನು, ಈಪರಿಯಾಗಿ ಮುಂದ ಮುಂದಣ ಬಿಡದಿ ಬಿಡದಿಗಳಲ್ಲಿಯೂ ಸಾಮಗ್ರಿಯಂ ಸನ್ನಹಿಸುವದಕ್ಕೋಸುಗ ಹತ್ತಾರುಲಕ್ಷ ಎತ್ತುಗಳ ಮೇಲೆ ಹೇರುಗಳಂ ಎತ್ತಿ ಪೈರುಗಳಂತಂದು ಸುರಿಯುವಂತೆ ಸುಕಾಲಿಯರು ಕೊರಚರು ನಾಯಿಮಾರರು ಮೊದಲಾದ ಬಿಡಿವರ್ತಕರಂ ನಿಮಿಸಿರುವೆನು, ಇದನೆಲ್ಲವಂ ರಕ್ಷಿಸಲೋಸುಗ ಒಂದು ಅಕ್ಷೋಹಿಣೀಪತಿಗೆ

ಅಪ್ಪಣೆಯಂ ಕೊಡಿಸಬೇಕೆಂದು ಬಿನ್ನವಿಸಲು, ಆ ಮಾತಂ ಕೇಳಿ ಸೇನಾಪತಿಯು ಅಕ್ಷೋಹಿಣೀಪತಿಗಳೊಳ್ ವಿಚಕ್ಷಣನಾದ ಸುಲಕ್ಷಣನಂ ಕರದು ಎಲೈ ಸುಲಕ್ಷಣನೇ ನೀನು ಅರಮನೆಯ ಉಗ್ರಾಣದೊಡನೆ ಉಗ್ರರಾದ ಸೈನಿಕರೊಡಗೂಡಿ ದೇಶದೇಶಂಗಳಿಂದ ಬರುವ ಪೈರುಗಳಿಗೆ ಹಾನಿಬಾರದಂತೆ ರಕ್ಷಿಸುತ ಮತ್ತೂ ಮೇಲೆಬೀಳುವ ತುಂಟಪಾಳೆಯಗಾರರಂ ನಿಗ್ರಹಿಸುತ ಜಾಗ್ರತೆಯಿಂ ದಿರೆಂದು ಆಜ್ಞಾಪಿಸಿ, ಮತ್ತೋರ್ವನಂ ಕರದು ಎಲೈ ನೀನು ಧನಕನಕಗಳಿಂದಲೂ ವಸ್ತ್ರಭೂಷಣಾದಿಗಳಿಂದಲೂ ನಿಬಿಡಿತವಾದ ಬೊಕ್ಕಸವಂತೆಗಸಿಕೊಂಡು ಬರುವ ಧನಗುಪ್ತನೊಡನೆ ಶೌರ್ಯದಿಂ ಸೊಕ್ಕುವ ಮಹಾರಥಿಕರೊಡಗೂಡಿ ಸೇನಾಮಧ್ಯದೊಳ್ ಬರುವದೆಂದು ಪೇಳಿ, ಮತ್ತೂ ಚತುರಂಗಪತಿಗಳನ್ನೆಲ್ಲರಂ ಒಂದು ಬಗೆಯಾದ ವಾಹನಂಗಳನೇರಿ ಮಹಾರಾಜನ ಸಮೀಪದೊಳ್ ಎಚ್ಚರದಿಂ ಬರುವದೆಂದು ನುಡಿದು, ಕೊಟ್ಟಗೆಗಳಂತಿರುವ ಮದ್ದಿನ ಪೆಟ್ಟಿಗೆಗಳಿಂದೊಪ್ಪಿದ ಆನೆಗಳಂ ಕಟ್ಟಿರುವ ಹತ್ತಾರು ಸಾವಿರ ಬಂಡಿಗಳೊಡನೆ ಕೆಂಡದ ಹೆಸರೆತ್ತದಂತೆ ಬರುವದೆಂದು ಕೆಲವರಂ ಕಟ್ಟುಮಾಡಿ ಒಟ್ಟುಗೂಡಿದ ಸೇನೆಯೆಲ್ಲವು ತೆರಳುವದು ತಿಳಿಯುವಂತೆ ಮೂರನೆ ಝಾವದೊಳ್ ಭೇರಿಯಂ ಮೊಳಗಿಸುವುದೆಂದು ಕೆಲವರಿಗೆ ಕಟ್ಟುಮಾಡುತ್ತಿರಲೂ, ಆ ಸಮಯದೊಳ್ ಪ್ರಜ್ಞಾಸೂತ್ರನೆಂಬ ಶಿಲ್ಪಕಾರನು ರಾಜಾಜ್ಞೆಯಾಗಿರುವಂತೆ ಭೂಮಿಯಲ್ಲಿರುವ ನಿಮ್ನೋನ್ನತಂಗಳಾದ ನಾನಾಪ್ರದೇಶಂಗಳನ್ನರಿತು ಸೂತ್ರಕರ್ಮಕುಶಲರಾದ ಶಿಲ್ಪಕಾರರಿಂಕೂಡಿ ಪರ್ವತಂಗಳನ್ನಾದರೂ ತೆಗದು ಮಡಗುವ ಆಯುಧಂಗಳಂ ಧರಿಸಿದ ಒಡ್ಡರು ಯಂತ್ರಕಾರರು ಕಲ್ಲುಕುಟಕರು ಕಬ್ಬಿಣಕೆಲಸದವರು ಬಡಗಿಯರು ಕಾಮಾಟಿಯರು ಗಾರೆಕೆಲಸದವರು ಮರಗಳಂ ಕಡಿಯುವವರು ಭಾವಿಯಂತೆಗೆಯುವವರು ವ್ಯಾಧರು ಇವರಮೇಲುವಿಚಾರಣೆಯಂ ಮಾಡುವ ಗೊತ್ತುಗಾರರಿಂದೊಡಗೂಡಿ ಮಾರ್ಗಂಗಳಂ ನಿಂತು ನೋಡಿ ಫಿರಂಗಿ ಮೊದಲಾದ ಯಂತ್ರಗಳು ಸೀಸದ ಗುಂಡುಗಳು ಕರೀಮದ್ದು ಮದ್ದಾನೆಗಳು ಕಬ್ಬಿಣದ ಸರಪಣಿಗಳು ಕೊಡಲಿ ಗುದ್ದಲಿ ಹಾರೆ ಬಾಚಿ ಕುಡುಗೋಲು ಉಳಿ ಕೊಡತಿ ಚಮ್ಮಟಿಗೆ ಗರಗಸ ಕಬ್ಬಿಣದ

ಹಲಿಗೆ ಮುಚ್ಚುಗಳು ಮೊದಲಾದ ಸಾಧನಂಗಳಂ ತೆಗದುಕೊಂಡು ಸೂತ್ರಂಗಳಂ ಪಿಡಿದು ಮಾರ್ಗಂಗಳಂ ಅಳೆದು ನಡುವೆ ಇರುವ ಬಳ್ಳಿಗಳಂ ಕಳದು ಕಳ್ಳಿಗಳಂಕತ್ತರಿಸಿ ಮುಳ್ಳುಗಳಂಮುರಿದು ಕಲ್ಲುಗಳಂಅಲ್ಲಲ್ಲಿ ಹೂಳಿಸಿ ಪಿರಿದಾದ ಮರಂಗಳಂ ಕತ್ತರಿಸಿ ಇಕ್ಕೆಲದೊಳ್ ಮಾರುಮಾರಿಗೆ ಒಂದೊಂದುಗಿಡವಂ ಸಮನಾಗಿ ಸಾಲುಸಾಲಾಗಿ ನಿಲ್ಲಿಸಿ ಗಿಡಗಳು ಇಲ್ಲದೆ ಯಿರುವ ಎಡೆಯೊಳ್ ನೂತನವಾಗಿ ಪುಷ್ಪಿತಂಗಳಾಗಿಯು ಫಲಿತಂಗಳಾಗಿಯು ಯಿರುವ ಮರಗಳಂ ಹೂಳಿಸಿ ಅಡ್ಡವಾದ ಭಂಡೆಗಳಂ ಗಂಡಶೈಲಂಗಳಂ ಫಿರಂಗಿ ಸುರಂಗ ಮೊದಲಾದ ಸಾಧನಂಗಳಿಂದ ಸುಟ್ಟು ಕೆಡಹಿ ಪುಡಿಮಾಡಿ ಭುಡಿಗಳಿಂದತೆಗೆಯಿಸಿ ಬೆಟ್ಟಗಳಂಕಡಿದು ಮಾರ್ಗಂಗಳಂ ಮಾಡಿ ಹಳ್ಳಗಳಂ ಮುಚ್ಚಿಸಿ ಕೆಲವು ಅಸಹ್ಯಂಗಳಾದ ಸ್ಥಳಂಗಳಂ ಆಯುಧಂಗಳಿಂದ ರಮಣೀಯಂಗಳಂ ಮಾಡಿಸಿ ದೂರದೂರದಲ್ಲಿರುವ ಪರ್ವತಂಗಳ ಸಮೀಪದೊಳಿರುವ ನದಿಗಳಂ ಮಾರ್ಗಂಗಳಿಗೆ ತಿದ್ದಿ ದಂಡು ನಿಲ್ಲುವ ಎಲ್ಲೆಗಳಲ್ಲಿ ಸಮುದ್ರಗಳಂತಿರುವ ತಟಾಕಂಗಳಂ ನಿರ್ಮಿಸಿ ಮತ್ತೂ ಮಾರ್ಗಂಗಳಲ್ಲಿ ಹರಿಯುತಲಿರುವ ಕಾಲ್ವೆಗಳಿಂದ ಮಟ್ಟದಿಂ ಕಾರಂಜಿಗಳಂ ತಂದು ಕೆಲವು ಭಾಗಂಗಳೊಳ್ ದೇವಖಾತಗಳಂತೆ ಭಾವಿಗಳಂ ತೆಗದು ಮತ್ತಮಲ್ಲಲ್ಲಿ ಮಲ್ಲಿಗೆ ಜಾಜಿ ಮೊದಲಾದ ಬಳ್ಳಿಗಳಿಂದ ಮನೆಗಳಂ ಮಾಡಿ ಲಾಮಂಚ ಮುಡಿವಾಳದ ಚಾಪೆ ತಡಿಕೆಗಳಂ ರಚಿಸಿ ಮುಂಗಡೆಯೊಳ್ ಚಂದ್ರಕಾಂತಶಿಲೆಗಳಿಂದ ಜಗತಿಗಳಂ ಕಟ್ಟಿ ಅವರ ಸುತ್ತಲೂ ಅರಳಿದ ಪುಷ್ಪಂಗಳಿಂದಲೂ ಹೊಂಬಣ್ಣದಿಂದಿರುವ ಹಣ್ಣುಗಳಿಂದಲೂ ಒಪ್ಪಿರುವ ಬಗೆಬಗೆಯಾದ ಗುಜ್ಜುಮರಗಳಂ ಸಜ್ಜುಮಾಡಿ ಸೇನಾನಿವೇಶನಸ್ಥಳಂಗಳಲ್ಲಿ ಬಣ್ಣಬಣ್ಣದ ಪತಾಕೆಗಳಿಂದ ಗಗನವಂ ಸೋಂಕುವಂತೆ ನಿರಾಜಿ ನೊದಲಾದ ವಿಚಿತ್ರ ವಸ್ತ್ರಗಳಿಂದ ಅಲಂಕರಿಸಿ ಚಿನ್ನ ಬೆಳ್ಳಿ ಸರಪಣಿಗಳಿಂದ ಬಿಗಿದುಕಟ್ಟಿದ ಸಾವಿರಾರು ತೋರಣಸ್ತಂಭಗಳನ್ನಿಲ್ಲಿಸಿ ಕಣುವೆಗಳಂ ಕರತಲದಂತೆ ಮಾಡಿಸಿ ಕೆಲವು ಮಹಾನದಿಗಳ ಮೇಲೆ ಕಬ್ಬಿಣದ ಸೇತುವೆಗಳಂ ಕಲ್ಲು ಸೇತುವೆಗಳಂ ಕಟ್ಟಿ ಚಿತ್ರ ವಿಚಿತ್ರಮಾದ ಗಾರೆಯಂ ಮಾಡಿ ಮತ್ತೂ

ಮಾರ್ಗಂಗಳಲ್ಲಿ ಚಂದನೋದಕ ಪನ್ನೀರು ಗಂಧ ತೈಲಂಗಳಂ ಒಂಟೆಗಳ ಮೇಲೆ ತರಿಸಿ ಜಾಲಂದರದ ಬಿಂದಿಗೆಗಳೊಳ್ ತುಂಬಿ ಚೆಲ್ಲಿ ಧೂಳಿಯನ್ನಡಗಿಸಿ ಅಗರು ಸಾಂಬ್ರಾಣಿ ಧೂಪದಿಂ ವಾಸನೆಯುಂ ಕಟ್ಟಿ ಅಲ್ಲಲ್ಲಿ ಉನ್ನತಂಗಳಾದ ಪರ್ವತಂಗಳ ಮೇಲುಭಾಗಂಗಳೊಳ್ ಒಂದೊಂದು ಧ್ವಜಸ್ತಂಭಗಳಂ ಗುರುತು ತೋರುವಂತೆ ನಾಟಿ, ಕೋಟೆ ಕಾವಾಟ ಮೊದಲಾದ ಪರಿವಾರದೊಡನೆ ಕಟಕಕ್ಕೆ ಬಂದು ಮಹೀಪಾಲಂಗೆ ಬಿನ್ನವಿಸಬೇಕೆಂದು ಕಾದಿರಲು. ಈ ವೃತ್ತಾಂತವಂ ಚಾರರು ಸುಮತಿ ವೀರಸೇನರಿಗೆ ವಿಜ್ಞಾಪಿಸಲು, ಆ ಈರ್ವರೂ ಅವರಂ ಕರತರುವಂತೆ ಪೇಳಿದ ಪರಿಯಾಗಿ ಆ ಚಾರರು ಅತಿವೇಗದಿಂ ಪ್ರಜ್ಞಾಸೂತ್ರನಂ ಕರದ್ಕೊಯ್ದು ಪೋಗಿ ಎದುರಾಗಿ ನಿಲ್ಲಿಸಿ ಪ್ರಣಾಮವಂ ಗೈಯಲ್ಕೆ, ಆಗ ಸುಮತಿಯು ಶಿಲ್ಪಕಾರನನ್ನೋಡಿ ದಾರಿಯು ಅಲಂಕಾರವಾದುದೇ ಎಂದು ಕೇಳಲಾ ಶಿಲ್ಪಕಾರನು ಮಹಾರಾಜನ ಆಜ್ಞೆಯಿಂದ ಆಗುವದಲ್ಲದೆ ನನ್ನಿಂದೇನಾಗುವದೆಂದು ಬಿನ್ನವಿಸಿ ಮರಳಿ ಕೈಮುಗಿದು ಅಪ್ಪಣೆಯಾದರೆ ಕೊಪ್ಪಲು ಉಪ್ಪರಿಗೆಯಾಗುವದೆಂದು ಬಿನ್ನವಿಸಲೂ, ಆ ಮಾತಂ ಕೇಳಿ ಸುಮತಿ ವೀರಸೇನರು ಅವಂಗೆ ಅಪರಂಜಿ ಗಟ್ಟಿ ಬಳೆ ಮುಂತಾದ ಆಭರಣಂಗಳಂ ಅಪರಂಜಿ ಅಂಚಿನಿಂ ಮಿಂಚುವ ದುಪ್ಪಟ್ಟೆ ಮೊದಲಾದ ವಸ್ತ್ರಂಗಳಂ ಕೊಟ್ಟು ಮತ್ತಮವನ ಪರಿವಾರ್ರದವರಿಗೂ ಉಚಿತವಾಗಿ ಧನವಸ್ತ್ರಂಗಳನ್ನಿತ್ತು ಮನ್ನಿಸಿ ಕಳುಹಿ ತಮ್ಮತಮ್ಮ ಪಟಮಂದಿರವಂ ನೈದಿ ಸಂತೋಷದಿಂ ಸುಖನಿದ್ರೆಯೆಂಗೈಯುತ್ತಿರಲೂ. ಬಳಿಕ ಮೂರನೇ ಝಾಮದೋಳ್ ವೀರಲಕ್ಷ್ಮಿಯ ನಾಟ್ಯಾರಂಭವಂ ಸೂಚಿಸುವ ಮೃದಂಗದಂತೆ ಸೇನಾಲಕ್ಷ್ಮಿಗೆ ಎಚ್ಚರವಂಗೊಡಲೋಸುಗ ಬಿರುದುಗಳ ಪೊಗಳುವ ಕೈವಾರವೋ ಎಂಬಂತೆ ವಾದ್ಯಶಾಲೆಯ ಮುಂಭಾಗದೋಳ್ ಗಂಭೀರವಾಗಿ ಧೋರೆಂದು ಭೇರಿಯು ಮೊಳಗೆ ಗುಡಾರಂಗಳ ಒಳಗೆ ಹೊರಗೆ ಮಲಗಿರುವ ಜನಂಗಳೆಲ್ಲರೂ ಬೆನ್ನು ತಟ್ಟಿದಂತೆ ಬೆಚ್ಚಿ ಎಚ್ಚತ್ತು ಬೇಗದಿಂದೆದ್ದು ಕೆಲವರು ಹಸಿಬಿಸಿಯಾದ ಅಡಿಗೆಯಂ ಮಾಡುವರು, ಕೆಲವರು ಆನೆಗಳಿಗೆ ಆಹಾರವಂ ಕೊಡುವರು, ಕೆಲವರು ಕು

ದುರೆಗಳಿಗೆ ಮೈಯ್ಯುಜ್ಜುತ ಫಳಫಳಾ ಎಂದು ತಟ್ಟುವರು, ಕೆಲವರು ರಥಂಗಳೊಳ್ ಧ್ವಜಪಟಂಗಳನ್ನೇರಿಸುವರು ಕೆಲವರು ರಾಜಮುದ್ರೆಯಿಂದೊಪ್ಪಿತ ಮುಸ್ತೈದುಗಳಿಂದಶಿಸ್ತಾಗಿ ಆಯುಧಂಗಳಂ ಸವರಿಸುವರು, ಮತ್ತೆ ಕೆಲವರು ಸುತ್ತಮುತ್ತಲಿರುವ ತೆರೆಗಳಂ ತೆಗದು ಗುಡಾರಂಗಳಂ ಬಿಚ್ಚಿ ಕಡಾಯಿ ಮೊದಲಾದ ಕಂಚು ಮುಟ್ಟುಗಳಂ ಕಲರಂಗಳಿಗೆ ತುಂಬುವ ಕಾಲದೊಳ್ ಖಣಿಖಣಿರೆನ್ನುವ ಶಬ್ದವಂ ಕೇಳಿ ಪಲಾಯನಂಗೈವ ಬಂಟೆಗಳಂ ಬೆನ್ನಟ್ಟಿ ಹಿಡಿತಂದು ಬಡಿಯುವರು, ಕೆಲವರು ಬಂದೊಂದು ಹಿಂಣಾನೆಯುಂ ಕಂಡು ಕಟ್ಟಿರುವ ಕಬ್ಬಿಣದ ಸರಪಣಿ ಸಂಕೋಲೆಗಳಂ ಕಸದಂತೆ ಬಿಸುಟು ಹೊರಟು ಪೇಟೆಯೊಳ್ ಪೈರುಗಳಂತುರುವಮೊರಾಗಿ ತುಳಿಯುತ ಓಟವಂಗೈವ ಸಲಗವಂ ಜೆಂಬಿಡಿದು ಬಾಲವಂ ಪಿಡಿದು ಮೇಲೇರಿ ಅಂಕುಶಗಳಿಂದ ತಿವಿದು ಬಿಂಕವಂ ಮುರಿದು ಘೀಂಕರಿಸುವಂತೆ ಹಿಂತಿರಿಗಿಸುವರು, ಕೆಲವರು ಹೊತ್ತಾಯಿತೆಂದು ಸುತ್ತುಮುತ್ತಿರುವರಂ ಕರದು ತಲೆಯೆತ್ತಿ ನೋಡಿ ಮೂಡಲು ಕೆಂಪಾಗಿ ಬರುವದು ತಂಪಾಗಿ ಹೋಗುವಾ ಎನ್ನುವರು ಕೆಲವರು, ಅಡುಗುಲಜ್ಜೆಯರು ಬಿಶಿಬಿಶಿಯಾಗಿ ಪಾಕವಂ ಮಾಡಿ ಪರಿಪರಿಯಾದ ಭಕ್ಷ್ಯಂಗಳಂ ತರತರವಾದ ಶಾಲ್ಯನ್ನಂಗಳಂ ಬಗೆಬಗೆಯಾದ ಮೇಲೋಗರಗಳಂ ಕಂಚು ಬೆಳ್ಳಿ ಪರಿವಾಣಂಗಳೊಳ್ ತುಂಬಿ ಇದು ದಿಂಡಿಯರತಿಂಡಿ ಇದು ಮೊನೆಗಾರರ ಅನ್ನ ಇದು ಸುಮಾನಗಾರರಊಟ ಎಂದು ಪ್ಯಾಟೆಪ್ಯಾಟೆಯೊಳ್ ಕೂಗಿ ಮಾರುವಾರಿಗೆ ನಿಂತು ಮಾರುತ ಲಜ್ಜೆ ಎಂಬ ಹೆಸರಿಲ್ಲದೆ ಇರುವರು ಮತ್ತೆ ಕೆಲವರು ಬುತ್ತಿಗಳಂ ಕಟ್ಟಿ ಹೊತ್ತು ನಡದು ಹೊಳೆಯ ಹತ್ತರದೊಳ್ನಿಂತು ಮಿತ್ರರೊಡಗೂಡಿ ಸವಿನೋಡಿ ಸೊಗಸುಮಾಡುವಾ ಎನ್ನುವರು ಕೆಲವರು ಕರೆವ ಹಟ್ಟಿಗಳೊಳ್ ಕಟ್ಟಿರುವ ಕಪಿಲಾ ಕಾವೇರಿಗಳೆಂಬ ಹೆಸರುಗಳುಳ್ಳ ಹಸುಗಳಿಗೆ ಹಸಿಯಾದ ಹಿಂಡಿಯುಂ ಬಿಶಿಯಾದ ದಧ್ಯನ್ನವಂ ಕೊಟ್ಟು ಕರುಗಳಂ ಬಿಟ್ಟುಮುಂಭಾಗದೊಳ್ ಹಂಬಾರವಂ ಗೈವ ಆ ಹಸುಗಳಂ ಕರದು ಅಣಸು ಗೊಣಸುಗಳಿಂದ ಅಲಂಕರಿಸುವರು, ಮತ್ತೆ ಕೆಲವರು ಎಲೈ ಕನ್ಯೆಯೇ ನೀನು ಈ ಗುಣ್ಣಾನೆಯನ್ನೇರಿದರೆ ಚನ್ನಾಗಿರುವೆ ಎಂದು

ಪೇಳಿ ಕೈಗಳಿಂದೆತ್ತಿ ಕುಳ್ಳಿರಿಸುವಾಗ ಜಾರುವ ಶರಗಂ ಕದಲುವ ಒಡವೆಗಳಂ ಕಾಣಿಸುವ ಕುಚಂಗಳಂ ಘರ್ಮಾಳಿಯಿಂದ ಹಾರುವ ಶೀರೆಯಂ ನೋಡಿ ನಗುತಲಿರುವ ತನ್ನ ವಿಟನೊಡನೆ ಎಲೈ ನಿನ್ನ ಬಿನ್ನಾಣವಿಂತಿರಲಿ ನನ್ನಾಣೆ ಬ್ಯಾಡವೆಂದಿಳಿದು ಶರಗು ಸವರಿಸುತ ಮುನಿಸು ನೋಟದಿಂ ನೋಡುತ ನಡದು ಪೋಗುವ ನಾರಿಯ ಕರವಂ ಪಿಡಿದು ಸಂತೈಸುವರು ಇಂತು ಸೇನಾಸಮುದ್ರದೋಳ್ ಬಗೆಬಗೆಯಾದ ಮಾತುಗಳಿಂ ಕಲಕಲ ಶಬ್ದಗಳು ಮಂದರಗಿರಿಯಿಂದ ಮಥಿಸುವ ಸಮಯದೋಳ್ ಸಮುದ್ರಘೋಷದಂತೆ ದಿಕ್ಕುಗಳಂ ವ್ಯಾಪಿಸುತ್ತಿರಲು, ಮತ್ತೂ ಭಟವರ್ಗಂಗಳು ಚಂದ್ರಗಾವಿಯ ದಟ್ಟಿಯಂ ಕಟ್ಟಿ ಕೈಗಳನ್ನೆತ್ತಿ ಮಾರ್ತಾಂಡಮಂಡಲ ಪ್ರಭೆಯು ಪೂರ್ವದಿಕ್ಕೆಂಬ ತರುಣಿಯ ಗಂಡ ಭಾಗದ ಮಣಿ ಕುಂಡಲದ ಕಾಂತಿಯಂತೆ ಕಾಣಿಸುವದೆಂದು ಪೇಳುತ್ತಿರಲು, ಆ ಕಾಲದಲ್ಲಿ ಸುಗಂಧರಾಜೇಂದ್ರನು ಜಯ ಭೂಮಂಡಲಾ ಖಂಡಲ ಜಯಮಲತರಾಯರ ಗಂಡ ಜಯ ಚಂಡ ಪ್ರತಾಪ ಎಚ್ಚರ ಪರಾಕೆಂದು ಕೈವಾರವಂ ಮಾಡುವ ವಂದಿಗಳ ಶಬ್ದಗಳಂ ಕೇಳಿ ನಿದ್ರೆಯಿಂದೆದ್ದು ವೀಣೆಯಂ ಕೇಳುತ ವಿಪ್ರಯುಗ್ಮವಂ ಪರಿಪರಿ ಶುಭವಸ್ತುಗಳನ್ನೋಡಿ ಪರಿಚಾರಕರು ತಂದು ಒಪ್ಪಿಶಿದ ಪರಿಮಳೋದಕದಿಂ ಮಜ್ಜನಂಗೈಯ್ಯುತ ಮಂತ್ರಿ ಸೇನಾಪತಿಗಳೀರ್ವರಂ ಕರೆಯಿಸೆಂದು ಸಮೀಪದಲ್ಲಿರುವರೊಡನೆ ಪೇಳುತ್ತಿರುವಷ್ಟರೋಳ್ ಮಂತ್ರಿ ಸೇನಾಪತಿಗಳೀರ್ವರೂ ಕಾದಿರುವೆವೆಂದು ಕೈಗಳಂ ಮುಗಿದು ನಿಂತು ರಾಜಾಧಿರಾಜೇಂದ್ರನೇ ಸೇನಾಜನಂಗಳು ನಾನಾವಿಧಂಗಳಾದ ವಸ್ತ್ರಭೂಷಣಂಗಳಂ ಧರಿಸಿ ಆಯುಧಂಗಳಂ ಪಿಡಿದು ಸನ್ನದ್ಧರಾಗಿರುವರು ಆನೆಗಳು ಅಲಂಕಾರಗಳಂಗೊಂಡಿರುವವು, ರಥಂಗಳು ಧ್ವಜಂಗಳಿಂದ ರಮಣೀಯಂಗಳಾಗಿ ರಂಗಮಧ್ಯದೋಳ್ ಸನ್ನದ್ಧಂಗಳಾಗಿರುವವು, ರಾವುತರು ಅಶ್ವಂಗಳನ್ನೇರಿ ಕತ್ತಿಗಳಂ ಪಿಡಿದು ಕಾದಿರುವರು, ಕೆಲವರು ದ್ವಿರದಂಗಳನ್ನೇರಿ ಪರಿಪರಿಯಾದ ಶಬ್ದಂಗಳಿಂದ ಚೋದ್ಯಂಗಳಾದ ವಾದ್ಯಂಗಳಂ ಮೊಳಗಿಸುವರು, ಮಿಕ್ಕ ಜನಂಗಳು ಮಹಾ ನದಿಯ ಪ್ರವಾಹದಂತೆ ಪಯಣವಂ ಮಾಡುತ್ತಿರುವರು ಎಂದು ಬಿನ್ನವಿಶಿ ಸಮೀಪವಂ ನೈದಿ ಭಯದಿಂ ಕೆ

ಲವು ಮಾತುಗಳಂ ವಿಜ್ಞಾಪಿಸುತಲಿರಲಾಗ ಸುಗಂಧರಾಜೇಂದ್ರನು ಆಹ್ನಿ
ಕಗಳನ್ನೆರವೇರಿಶಿ ರತ್ನಪೀಠದಿಂದೆದ್ದು ಚಿತ್ರವಾದ ಹುವ್ವು ಬಳ್ಳಿಗಳ
ಮಣಿಗಳಂ ಸಲಿಗೆಯಿಂ ಬೆರಶಿ ನೇಗೆಯಿಂಗೈದ ವಸ್ತ್ರಂಗಳನ್ನೆರಿ
ಒಂದೊಂದು ಬಗೆಯ ರತ್ನದ ಒಡವೆಗಳಂ ಬೇರ್ಬೇರೆ ಕುಂದಣದ ತಟ್ಟೆ
ಗಳೊಳಿಟ್ಟು ಕಾದು ನಿಂತಿರುವ ನೂರಾರು ಜನ ಶೃಂಗಾರರಂ ವಾ
ನೋಟದಿಂ ನೋಡಲು, ಅವರೊಳ್ ಓರ್ವನು ವಜ್ರಗಳ ಮಿಂಚು
ಯಿಂದ ಪಟ್ಟೆಮಾದಪಟ್ಟೆಯಂ ಕಟ್ಟಿದನು. ಓರ್ವನು ಪಾಲ್ಗಡಲಿನ
ವಂತೆ ರಂಗಾದ ಮುತ್ತಿನ ಲವಂಗದ ಹೂವಿನ ನಿಲುವಂಗಿಯಂ
ನು, ಓರ್ವನು ಚಿಕ್ಕರಾಯಪಟ್ಟದಕಿರೀಟವನ್ನಿಟ್ಟನು, ಮತ್ತೋರ್ವನು
ಗ್ರಹ ಮಂಡಲದಂತೆ ಇರುವ ನವರತ್ನದ ಕುಂಡಲಗಳಿಂದ ಅಲಂಕರಿ
ನು, ಮತ್ತೋರ್ವನು ಪರರಾಯರ ಗಂಡನೆಂಬುವದು ನಿಜವೆಂಬಂತೆ ಪ
ಗಳಗಂಡಪೆಂಡ್ಯವಂ ಪಾದಪದ್ಮದೊಳ್ ಅಳವಡಿಸಿದನು, ಮತ್ತೋರ್
ಮಣಿಹಾರಂಗಳಿಂದ ಅಲಂಕರಿಶಿದನು, ಈ ಪರಿಯಾಗಿ ಪ್ರೋರೋರ್ವರ
ಪ್ಪಿಶಿದ ಸರ್ವಾಭರಣಂಗಳಂ ಧರಿಸಿಕೊಂಡಿರುವ ಸುಗಂಧರಾಜೇಂದ್ರನು
ರ್ಣಚಂದ್ರನಂತೆ ವಿರಾಜಿಸುತ ಅರಳಿದ ಕೆಂದಾವರೆಯ ಮಧ್ಯದೊಳ್
ರಿದುಂಬಿಯಂತೆ ಹಣೆಯೊಳ್ ಕಸ್ತೂರಿ ತಿಲಕವನ್ನಿಟ್ಟು ಎದುರಾಗಿ
ದು ನಿಲಿಸಿದ ಕನ್ನಡಿಯಂ ಚನ್ನಾಗಿ ನೋಡಿ ಕಪ್ಪುರ ವೀಳ್ಯವಂ ಒಪ್ಪಿ
ಕೊಳ್ಳುತ ಮುಂದುಗಡೆಯೊಳ್ ತಂದಿಟ್ಟ ಹವಳದ ಹಾವಿಗೆಯಂ ಮೆ
ನೆಟ್ಟದಿ ನವಮನ್ಮಥನಂತೆ ಗುಡಾರದ ಮುಂದುಗಡೆಗೆ ನಡದು ಬಂದ ಮ
ಡಲಾಧಿಪನಾದ ತನ್ನಂ ಕಂಡು ಘೀಂಕರಿಸುತ ದಿಗ್ಗಜಗಳು ತನಗೆ ಸರಿಯಿ
ವೆಂದು ಅಡ್ಡವಾಗಿ ತಲೆದೂಗುತ ಮಣಿ ಘಂಟೆಗಳ ಘಣಾತ್ಕಾರದಿ
ಕಿವಿಗಳಿಗಾನಂದವಂ ಪುಟ್ಟಿಸುತ ಎದುರಾಗಿ ಕಟ್ಟಿರುವ ಪಟ್ಟದಾನೆ
ಪಾದವಂ ಮುಟ್ಟಿ, ಅಲ್ಲಿಂದ ಬಂದು ಚದುರುವ ಹಾರಗಳಂ ಅದುರುವ
ಕುಚ್ಚುಗಳಂ ಒದರಿದ ಚೌರಿಗಳಂ ಕೆದರಿದ ಬಾಲದಿಂದೊಪ್ಪಿ ನೆಲವಂ
ಟ್ಟಿ ಮುಟ್ಟದಂತೆ ಮೆಟ್ಟಿಬರುವ ಪಟ್ಟದ ಕುದುರೆಯಂ ನೋಡಿ ಕರಕಮ
ದಿಂ ಕೊರಳಂ ಸವರಿ ಘಟ್ಟನೆ ತಟ್ಟುತ ಬಂದು ನಿಮಿಷವದರ ಘಾತ್ಕಾ

ರಪಂ ಕೇಳಿ ಹಾ ಎಂದು ಉತ್ಸಾಹಗೊಂಡು ಅಲ್ಲಿಂದ ಮೆಲ್ಲನೆ ಬಂದು ಅಲಂಕರಿಸಿ ನಿಲ್ಲಿಸಿರುವ ವಾಹನಂಗಳಂ ನೋಡುತ ಅವರೊಳ್ ಮೇಲೆ ಎತ್ತರವಾಗಿ ಎತ್ತಿರುವ ಬಂಭತ್ತು ಕೆತ್ತನೆಯು ಕಲಸಂಗಳು ಚಿತ್ರದ ಕಂಭಗಳು ಮತ್ತೊಳಗೆ ಕತ್ತಿ ಬತ್ತಳಿಕೆ ಮೊದಲಾದ ಉತ್ತಮಾಯುಧಂಗಳು ಮುತ್ತಿನ ಬಲೆಗಳಿಂದೊಪ್ಪುವ ಮೇಲುಕಟ್ಟುಗಳು ಸಲಿಗೆ ತೆರೆಗಳು ನಿರಾಜಿಯು ಉಲಾರ ದಿಂಬುಗಳು ಮೊದಲಾದ ವಸ್ತುಗಳ ಕಾಂತಿಯಿಂದೊಪ್ಪಿರುವ ಇದು ಉದಯಿಸುವ ಸೂರ್ಯನ ರಥವೋ ಎಂಬಂತೆ ಮದಗಜಗಳಂ ಕಟ್ಟಿರುವ ಮಹಾ ರಥವನೋಡಲು, ಆಗ ಭದ್ರಬಲನು ಓಡ್ಯೋಡಿ ಪೋಗಿ ಭೃತ್ಯವರ್ಗಂಗಳಂ ದಾರಿಯಂ ಬಿಡೀ ಎಂದು ಕೂಗುತ ರಥದ ಮುಂದುಗಡೆಯೊಳಿರುವ ಸಾರಥಿಯಂ ಕೈ ಸಂನೆಯಿಂದ ಕರೆದ ಮಾತ್ರದಿಂದಲೆ ಕಿರುಘಂಟೆ ಸಾಲುಗಳ ಖಣಿಖಣೀರೆನ್ನುವ ಶಬ್ದಂಗಳಂ ಪತಾಕೆಗಳ ಪಟಾತ್ಕಾರದಿಂವೇಗದಿಂ ಘುರ್ರನೆ ತಿರಗುವ ಚಕ್ರಗಳನ್ನೊರದು ಹೆಚ್ಚಾಗಿ ಮೊರೆವ ಅಚ್ಚುಗಳ ಘುರ್ಘುರಧ್ವನಿಗಳಂ ನೆಲಕಟ್ಟುಗಳ ಚಪ್ಪಡಿಗಳೊಳ್ ಘುಡಿಘುಡಿಶಿ ಬರುವ ಗಾಲಿಗಳ ಅಂಚಿನೊಳ್ ಸಂಚನೆಯುಂ ಗೈದ ಕಬ್ಬಿಣದ ಪಟ್ಟಿಗಳ ನಿರ್ಘೋಷದಿಂ ಭೂಮಿಯು ಘುಡಿಘುಡಿಸುವಂತೆ ನಡದು ಬರುವ ಗಂಧಮಾದನ ಪರ್ವತಕ್ಕೆ ಸಮಾನವಾದ ರಥವಂ ವಿಲಾಸದಿಂ ಸುಮತಿಯು ಹಸ್ತವಂ ಪಿಡಿದು ಹವಳದ ಏಣಿಯಿಂದೇರಿ ರತ್ನಪೀಠದೊಳ್ ಕುಳಿತಿರುವ ಸಮಯದೊಳ್ ಘಟ್ಟಿಯಾಗಿ ಪೊಗಳುವ ಭಟವರ್ಗಂಗಳ ಕೈವಾರದಿಂ ಮೊಳಗುವ ವಾದ್ಯಘೋಷದಿಂ ವರೆಗಳಂ ತೆಗೆವ ಕತ್ತಿ ಕಠಾರಿಗಳ ಪಿಡಿಗಳೊಳ್ ಸುತ್ತಿರುವ ಸರಪಣಿಗಳ ಘುಲಘುಲಸ್ವನಂಗಳಂ ಪರಾಕೆಂದು ಕೂಗುವವಂದಿಮಾಗಧರ ಕೋಲಾಹಲದಿಂ ರಥಚಕ್ರಂಗಳ ಕ್ರೇಂಕಾರಗಳಂ ಗಜಗಳ ಘೀಂಕಾರಗಳಂ ಕುದುರೆಗಳ ಕೂಗಾಟಗಳಿಂ ಕಾಲ್ಬಲಂಗಳ ಕಲಕಲಧ್ವನಿಗಳ್ಂ ನಿಬಿಡವಾದ ಸೇನಾಸಮೂಹವು ಚಂದ್ರೋದಯದೊಳ್ಹುಬ್ಬಿ ಥಂಥರವಾದ ತೆರೆಗಳಿಂದ ತುಂಬಿ ತುಳುಕಿ ಭೋರೆಂದು ಮೊರೆವ ಸಮುದ್ರದಂತೆ ವಿರಾಜಿಸುತ್ತಿರಲು, ಅದರ ಸುತ್ತು ವರಿದು ಬಂದು ಬಾಣದ ತುರಂಗಗಳ

ಸ್ನೇರಿದ ಬಿಚ್ಚುಗತ್ತಿಯ ರಾವುತರ ಲಕ್ಷದಿಂದೊಡಗೂಡಿದ ರೌದ್ರಾಕ್ಷನು ರೌದ್ರರಸವು ಅಂಕುರಿಸಿಬರುವಂತೆ ನಡೆಯುತ್ತಿರಲು ಆ ಸೇನೆಯಂ ಬಳಸಿ ಆನೆಗಳನ್ನೇರಿ ಸಾಧನಂಗಳಂ ಪಿಡಿದ ಯೋಧರಿಂ ಕೂಡಿದ ಶತ್ರುಂಜಯನು ತೆರಳುತ್ತಿರಲು, ಅವರ ಹಿಂಭಾಗದೊಳ್ ಚಿತ್ರಂಗಳಾದ ಪತಾಕೆಗಳಿಂದ ಚಿತ್ರಕೂಟಪರ್ವತದ ಶಿಖರಂಗಳಂತೆ ಕಾಣುತಲಿರುವ ರಥಬೃಂದಂಗಳೊಡನೆ ಸೇನಾಧರ್ಮನಾಮ ಸಮರ್ಥಕನಾಗಿ ತಿಳಿದ ಶರಭವರ್ಮನು ನಡೆಯುತ್ತಿರಲು ಮಾರ್ಗದ ಎರಡುಕಡೆಯೊಳ್ ಭಲ್ಲೆಗಳಪಿಡಿದ ಭಟರುಗಳಂ ಬಿಡದಿಯವರಿಗೂ ಎಡೆಬಿಡದಂತೆ ನಿಲ್ಲಿಸಿ ಛತ್ರಚಾಮರ ಮೊದಲಾದಬಿರದುಗಳಂ ವಾದ್ಯಂಗಳಂ ವಹಿಸಿ ನಡೆವ ಜನಂಗಳೊಡನೆ ಭವ್ಯಶೂರನು ನಡೆಯುತ್ತಿರಲು ನಕ್ಷತ್ರವೀಧಿಯೊಳ್ನಡೆಯುತಲಿರುವ ಶರತ್ಕಾಲಪೂರ್ಣಚಂದ್ರನಂತೆ ದಿಕ್ಪಾಲಕರೊಡಗೂಡಿ ಪುಷ್ಪಕವನ್ನೇರಿ ಹೊರಟು ಬರುವ ಪುರಂದರನೋಯೆಂಬಂತೆ ಸುಗಂಧರಾಜೇಂದ್ರನು ವಿಜಯಮುಹೂರ್ತದೊಳ್ಪ್ರಯಾಣವಂಮಾಡಲು ಆಸಮಯದೊಳ್ ತುರಂಗಬಲದ ಓಡ್ಯಾಟದಿಂದೆದ್ದ ಕೆಂಧೂಳಿಯು ಘಾಳಿಯೊಡನೆ ಕೇಳಿಯಂಮಾಡುತ್ತ ನಿಮಿಷದೊಳ್ ಹೆಚ್ಚಿ ಸೂರ್ಯನಂ ಮುಚ್ಚಿ ಬೆಳಗು ಮೊಟ್ಟಮೊದಲೊಳ್ದಿಕ್ಕಾಂತೆಯರ ನೆಟ್ಟಗಿರುವ ಸೀಮಂತದೊಳ್ ದಿಟ್ಟವಾಗಿಟ್ಟ ಸಿಂದೂರದಂತೆ ತೋರಿ ಬಳಿಕ ಫಾಲಫಲಕಂಗಳೊಳ್ ಇಟ್ಟ ಕುಂಕುಮ ತಿಲಕಂಗಳಂತಾಗಿ ಮತ್ತೆ ಕಪೋಲಂಗಳೊಳ್ಚಿತ್ರದಿಂ ಬರೆದ ಮಕರಿಕಾಪತ್ರದಂತೆ ವಿಚಿತ್ರವಾಗಿ ಬಳಿಕ ವದನಕಮಲಂಗಳೊಳ್ತುಂಬಿ ಹಸನಾದ ತಾಂಬೂಲರಸ ತೆಸದು ಮತ್ತೂ ಕುಲುಕುವ ಕುಚಂಗಳೊಳ್ ಹಚ್ಚುವ ಅಗರುಗಂಧಕ್ಕೆ ಮೇಲಾಗಿ ಅನಂತರ ಅಂಗಾಲುಗಳಿಗೆ ರಂಗಾಗಬೇಕೆಂದು ಅನುಲೇಪಸಂನ್ಯೈದ ಅಲತಿಕೆಯಂತೆ ಲಲಿತವಾಗಿ ಬಲಿತು ಅಲ್ಲಿಂದ ಕುರವಿಂದಮಣಿಭೂಷಣಂಗಳ ಗುಂಪುಗುಂಪುಗಳ ಬೆಳಕಿನ ಜೋಂಪಿನಂತೆ ಬಳಿಕ ಸೊಬಗುಮಿರಿದ ಚಂದ್ರಗಾವಿ ಶೀರೆಗಳಂತೆತೋರಿ ದಿಗಂಗನೆಯರಿಗೆ ಅಲಂಕಾರವನ್ನುಂಟುಮಾಡಿ ಸುಗಂಧರಾಜನ ಪರಾಕ್ರಮವೆಂಬ ಸೂರ್ಯನುದಯಮಂ ಸೂಚಿಸುವ ಅರುಣೋದಯದ ಕಾಂತಿಯಂ ಮೀರಿ ತೋರುತ್ತಿರಲಾಗ ಕೆಲವರು

ಕ್ಷುಮುರೆಗಳ ಕ್ವಣಿತಮುಂ ನಡಿಗೆಗಳಂ ಹಾರಾಟಮಂ ತೋರಿಸುತ ಅಡ್ಡಲಾಗಿ ಬರುವ ಆನೆಗಳಮೇಲೆ ಹಾರಿಸುತ ಮಹಾರಾಜನ ಚಿತ್ತಮಂ ಸಂತೋಷಪಡಿಸುತ ತೆರಳುತ್ತಿರಲು, ಮಾರ್ಗಾಯಾಸದಿಂದಣೆದು ನಡೆಯುವ ಮದ್ದಾನೆಗಳ ಮದಧಾರೆಗಳ ವರ್ಷದಿಂ ಸೊಂಡಿಲಂಗಳನ್ನೆತ್ತಿ ಘೂತ್ಕಾರಮಂಗೈದು ಎರಚುವ ನೀರಿನ ತುಂತುರುಮನಿಗಳಿಂ ಕಡಿವಾಣಂಗಳಂ ಕಡಿವಕುದುರೆಗಳ ಕಟವಾಯಿಗಳಿಂ ಬೀಳುವನೊರೆಗಳಿಂ ಕಾಣಿವಕಾಲುಗಳಿಂ ಸೀಳಿನ ಬೆಮರಿನಿಂ ಚಲ್ಲುವ ಪರಿಮಳೋದಕಂಗಳ ಚಳೆಯಂಗಳಿಂ ಧೂಳಿಗಳಡಗಿ ನಭೋಮಂಡಲವು ನಿರ್ಮಲವಾಗಿ ಭೂಮಿಯು ತಂಪುವೋರೆ ವಾಸನೆಯುಮೀರೆ ಈಪರಿ ವೈಯ್ಯಾರದಿಂ ಬರುವ ಸುಗಂಧರಾಜನಂ ನೋಡಬೇಕೆಂದು ನಾಡುನಾಡಿನ ಜನಂಗಳೋಡ್ಯೋಡಿ ಬಂದು ಇವು ಮರಗಳು, ಇವು ದಿಣ್ಣೆಗಳು, ಇವು ಪರ್ವತಂಗಳು ಎಂದು ನಿಂತುನೋಡುವದಕ್ಕೆ ತಡವಿಲ್ಲದೆ ಎತ್ತರಮಾಗಿರುವದೇ ಉತ್ತಮಸ್ಥಳವೆಂದು ಮೊತ್ತಮೊತ್ತಮಾಗಿನಿಂತು ಚಂದ್ರನಂನೋಡಿ ಸಂತೋಷಿಸುವ ಚಕೋರಗಳಂತೆ ಸುಗಂಧರಾಜನಂ ನೋಡಿ ಕೆಲವರು ಕೈಮುಗಿಯುವರು, ಕೆಲವರು ಅಡ್ಡಮಾಗಿ ಪ್ರಣಾಮಮಂಗೈಯ್ಯುವರು, ಕೆಲವರು ಆಶೀರ್ವಾದಮಂ ಮಾಡುವರು, ಕೆಲವರು ಜಯಜಯ ಚಿರಂಜೀವಯೆನ್ನುವರು, ಕೆಲವರು ದೃಷ್ಟಿಯಂತೆಗೆಯುವಂತೆ ಕೈಗಳಂಮುಷ್ಟಿಗಳಂಗೈದು ತಲೆಗಳಂಮುಟ್ಟಿ ನೆಟಿಗೆಯುಂಮುರಿದು ಹರಸುವರು, ಕೆಲವರು ವಡಯನೇ ನಮ್ಮ ಬಡತನವನ್ನಡಗಿಸೆಂದು ಅಡಗಡಿಗೆ ನಡುಗುತ್ತ ಎಡೆಬಿಡದೆ ಓಡ್ಯೋಡಿಬರುವರನುಡಿಗಳಂ ಭೂಮಂಡಲೇಶ್ವರನು ಕೇಳಿ ಸುಮತಿಯ ಮೊಗಮನ್ನೋಡಿ ತಡೆ ಇಲ್ಲದೆ ಅವನು ತುಂಬಿ ತರುವಧನಂಗಳಂ ಜನಂಗಳಿಗೆ ಎತ್ತಿಚಲ್ಲುತ ಅದಂಯತ್ತಿಕೊಂಡು ಕೊಂಡಾಡುವರ ನುಡಿಗಳಂದಡೆಯೋಳ್ಕೇಳಿ ಮೊಂಡಾದ ಸಂತೋಷದಿಂದಂಡಿಸಿಂದೊಡಗೂಡಿ ನಡೆತರುವ ಮಾರ್ಗದೋಳ್ಭೋರೆಂದು ಹರಿಯುವ ಹೊಳೆಗಳಂ ತೆನೆಗಳಭಾರದಿಂಬಗ್ಗಿ ಘಾಳಿಯಿಂತೂಗುವ ಬೆಳೆಗಳಂ ಅರಳಿದ ತಾವರೆಗಳಿಂದೊಪ್ಪುವ ಕೆರೆಗಳಂ, ಪುಷ್ಪಿಶಿರುವ ಮರಗಳಿಂಪೊರಡುವ ಮಧುಕರಗಳಂ, ನೋಡುತ್ತ ಪಟ್ಟಣಗಳಂ ಪರಾಂಬರಿಸುತ ಹಳ್ಳಿಗಳಂ ಮೆಲ್ಲನೆ ನೋಡುತ ಗ್ರಾಮಗಳ

ನಾಮಂಗಳಂ ತಿಳಿಯುತ ಅಗ್ರಹಾರಂಗಳಂ ಅನುಗ್ರಹಿಸುತ ತೆರಳುತ್ತಿರಲು, ಕೆಲವರು ಮದ್ದಾನೆಗಳು ಬರುವವು ಮಾರ್ಗಂಗಳಂ ಬಿಡಿರೆನ್ನುವರು, ಮತ್ತೆ ಕೆಲವರು ಭಾರಗಳ ಪೊತ್ತ ಬಂಡಿಗಳು ಬರುವವು ಅಡ್ಡಲಾಗಿ ಬರಬ್ಯಾಡಿರೆಂದು ಕೂಗುವರು ಮತ್ತೆ ಕೆಲವರು ವಂಟೆಗಳು ತುಂಟತನವಂ ಮಾಡುವವು ದಾರಿಯಾಗಿ ಪೋಗಿರೆನ್ನುವರು ಮತ್ತೆ ಕೆಲವರು ಯಾರೆಂದು ತಿಳಿದಿರುವಿರಿ ನೋಡಿ ಮಾತುಗಳಾಡಿರೆನ್ನುವರು ಮತ್ತೆ ಕೆಲವರು ವಾಹನಂಗಳ ಮುಂಭಾಗದೊಳ್ ವಾಮಲೋಚನೆಯರಂ ಕುಳ್ಳಿರಿಸಿ ಬಿಗಿದಪ್ಪಿ ಭಯತಪ್ಪಿ ಮನಬಂದಂತೆ ಮಾತನಾಡುತ ಬರುವರು ಮತ್ತೆ ಕೆಲವರು ಈದಾರಿ ಎಷ್ಟು ದೂರವೋಯೆಂದು ದಾರಿನೋಟದಿಂ ಕೋರೆಮಾತಿನಿಂ ಜಾರರಂ ಕೇಳುವ ಮರ್ಯಾದೆಯಿಂದ ಮಾತಿಗೆ ಯುತ್ತರಂಕೊಡುವ ನಾರಿನಾರಿಯರಂ ಕುರಿತು ಅದೋ ಕಾಣಿಸುವವು ಕನಕಕಲಶಂಗಳು ಇನ್ನೇನು ಸಮೀಪವಾಯಿತೆನ್ನುವರು, ಈ ಪರಿಯಾಗಿ ಸೈನ್ಯವು ಬರುತ್ತಿರಲು ರಾಜೇಂದ್ರನು ಮುಂದರಾಗಿರುವ ಭೇರುಂಡಧ್ವಜದ ರತ್ನಕಲಶವಂ ಕಂಡು ದಂಡುನಿಲ್ಲುವೆಡೆದಂಡೆಯಾಯಿತೆಂದು ನುಡಿಯುವಷ್ಟರೊಳ್ ಚತುರಂಗವ್ಯಾಟೆಗಳು ಪಗಡೆಚಾರಿಯ ಸಾಲುಬೀದಿಗಳ್, ಬೆಳ್ಳಿಯ ಬೆಟ್ಟಗಳಂತಿರುವ ಗುಡಾರಗಳೊಳ್ ಕಟ್ಟಿರುವ ಕನಕಕಲಶಪತಾಕೆಗಳು ಕಾಣುವಷ್ಟರಲ್ಲಿಯೇ ಅದರ ಸಮೀಪವನ್ನೈದಿ ಫಲಪುಷ್ಪಂಗಳಂ, ಚಿನ್ನದಹೂವುಗಳಂ, ನವರತ್ನಂಗಳಂ ಧನಂಗಳಂ, ತಟ್ಟೆಗಳೊಳ್ ತುಂಬಿ ಅಂಗಡಿಬೀದಿಯೊಳ್ ಸಾಲಾಗಿ ನಿಂತಿರುವ ಆನಾಡಿನ ಅಗ್ರಹಾರಿಕರು, ಅಧಿಕಾರಿಗಳು, ಕರಣೀಕರು, ಘನವರ್ತಕರು, ಮೊದಲಾಗಿ ಯುಮರಾಗಿಬಂದು ನಿಂದಿರುವ ಜನಂಗಳು ಕೊನೆನೋಟದಿಂನೋಡುತ ಸೇನಾಪತಿಗಳು ಆಯುಧಂಗಳಂ ಝುಳಪಿಸಿ ಕೈಮುಗಿವುದಂ ಕಾಣುತ ಮೇರುಪರ್ವತದ ಗುಹಾಂತರದಿಂದಿಳಿದು ಬರುವ ಮಹಾಸಿಂಹದಂತೆ ರಥಮಧ್ಯದಿಂದಿಳಿಯುತ ಹತ್ತಿರದೊಳ್ ತಂದಿರುವ ಮುತ್ತಿನಪಲ್ಲಕ್ಕಿಯನ್ನೇರಿ ಭೇರಿ, ಪಟಹ, ನಿಸ್ಸಾಳ, ಮೊದಲಾದ ವಾದ್ಯಂಗಳು ಮೊಳಗುತ್ತಿರಲು ತೆರಳಿಬರುವ ಮಲ್ಲಿಗೆಯರಾಶಿಯಂತೆ ಅರಳಿದ ಬಿಳಿದಾವರೆಯಂತೆ ಕಳೆಗಳಂ ತುಂಬಿರುವ ಚಂದ್ರಬಿಂಬದಂತೆ ಬಿರುದಿನಬಳಿಯೊಳ್ ಬೆಳಗುವ ಕೊಡೆಯನೆರಳನೊಳ್ ಬಂ

ದು ಮೇರುಪರ್ವತದಂತೆ ವಿರಾಜಮಾನವಾದ ತನ್ನ ಶಿಬಿರಮಂಪೊಕ್ಕು ಉಚಿತವಾದ ಮಜ್ಜನಭೋಜನಾದಿಗಳಂ ಮಾಡುತಲಿರ್ದನು, ಆಗ ಸೇನಾಪತಿಯುಂ ನಾಲ್ಕುಮಂದಿಬಲಪತಿಗಳಂಕರದು ಎಚ್ಚರಿಕೆ ಹೇಳಿ. ಈಶಿಬಿರದಸುತ್ತಲೂ ಹತ್ತಾರುಸಾವಿರ ಕಾಲಬಲಂಗಳಂ ಭಲ್ಲೆಗಳಂಪಿಡಿದು ನಿಲ್ಲಲಿ, ಅದರಸುತ್ತಲು ಶತ್ರುಗಳು ಬೆಚ್ಚಿ ಬೀಳುವಂತ ಬಿಚ್ಚುಕತ್ತಿಗಳಂಪಿಡಿದು ಕುದುರೆಗಳನ್ನೇರಿಮುದಿಶಿರುವ ವಂದುಲಕ್ಷ ರಾವುತರು ಸಾಲಾಗಿನಿಂದಿರಲಿ ಅಶ್ವಸೇನೆಯ ಸುತ್ತಲು ಖಂಡಗಳಮೇಲೆ ಮದ್ದುಗುಂಡುಗಳಂತುಂಬಿರುವ ಹತ್ತುಸಾವಿರ ಫಿರಂಗಿಗಳು ಒಂದೊಂದುಮಾರುದೂರದಲ್ಲಿ ಒಂದೊಂದು ನಿಂತಿರಲಿ ಆ ಫಿರಂಗಿಗಳಂಬಳಸಿ ಚತುರಶ್ರವಾಗಿ ಅಗಲವಾಗಿ ಬಹುಜಲದಿಂಪೂರ್ಣವಾಗಿ [illegible]ರುವದಷ್ಟೆ ಅದರಸುತ್ತಲು ಒಂದುಸಾಲು ಆನೆಗಳಸೇನೆಯುಂನಿಲ್ಲಲಿ ಅದರಾಚೆಗೆ ಸುತ್ತಲು ರಾಜಬಂಧುಗಳು ಮಂತ್ರಿಗಳು ಸೇನಾಪತಿಗಳು ಪಂಡಿತರು ಲೇಖಕರು ಮೊದಲಾದ ರಾಜಪರಿವಾರದ ಗುಡಾರಂಗಳಿರುವವು ಅದರಸುತ್ತಲು ವಂದುಲಕ್ಷ ರಥಗಳಂ ಅಲ್ಲಲ್ಲಿನಿಲ್ಲಿಸಿ ಅದಂಬಳಸಿ ವರ್ತಕರು ಮೊದಲಾದವರ ಬಿಡದಿಗಳು ಅಂಗಡಿಸಾಲುಗಳು ಸೈನಿಕರಬಿಡಾರಂಗಳಿರುವವು ಅದರಸುತ್ತಲು ಮಿಕ್ಕಾದ ನಾಲ್ಕುಪರಿಬಲಂಗಳೆಲ್ಲವಂ ಆವರಣವಾಗಿನಿಲ್ಲಿಸಿ ನೀವು ನಾಲ್ಕುಮಂದಿಯು ನಾಲ್ಕುದ್ವಾರಗಳೊಳ್ ಒಬ್ಬರೊಬ್ಬರು ಇರುತ ರಾಜಾಜ್ಞೆ ಯನ್ನನಡಸುವದರಲ್ಲಿ ಜಾಗರೂಕರಾಗಿ ಕಾದಿರುವದೆಂದು ಕಟ್ಟುಮಾಡಿ ತನ್ನ ಗುಡಾರವಂಕುರಿತು ತೆರಳಿದನು, ಅನಂತರ ದಂಡಿನಲ್ಲಿ ಅವರವರು ತಮ್ಮ ತಮ್ಮ ವಾಹನಂಗಳಿಂದ ಇಳಿದು ದೇಹಾಯಾಸದಿಂದ ಧರಿಸಿರುವ ಆಯುಧಂಗಳಂ ಒಡವೆಗಳಂ ಗಿಡಗಳಲ್ಲಿ ಮಡಗಿ ಆಮರಗಳನೆರಳಿನೊಳ್ ಬೆಳದಿರುವ ಯಳೆಗರಿಕೆಗಳಲ್ಲಿ ಮಲಗಿರುವವರು ಕೆಲವರುಅಲ್ಲಲ್ಲಿ ನಿಂತುಬರುವಹೆಂಣುಗಳಕಂಣುಗಳಂಮೆಲ್ಲನೆನೋಡುತ ಮೊದಲೇ ಬೆದರಿದ ಕಂಣುಗಳಿಂದೊಡಗೂಡಿಪ್ರೋಡುವ ಮರಿಹುಲ್ಲೆಗಳಂಕಂಡು ಘಲ್ಲೆಂದು ಗಗ್ಗರಿ ಕೋಪೆಗಳಂ ಅಲ್ಲಾಡಿಸಲು ಚಲ್ಲಾಡಿಪೋಗುವ ಹುಲ್ಲೆಗಳಂ ಯಲ್ಲೆಲ್ಲಿಪೋದರುಬಿಡದೆ ಸುತ್ತುವರಿದು ಘೇಯೆಂದುಕೂಗುವ ಯಡೆಕೇಂಟರಹುಡುಗರಂ ಹುಲ್ಲೆಗಳಂ ಹಿಡಿಯಬೇಡಿರೆಂದು ಬೇಡಿ

ಕೊಂಬರು ಕೆಲವರು ಭೋಜನಾದಿಗಳಂಗೈದು ವಿಚಿತ್ರಂಗಳಾದ ಆಭರಣಂಗಳಂ ಧರಿಸಿ ದಿವ್ಯದುಕೂಲಂಗಳಿಂದ ಅಲಂಕೃತರಾಗಿ ಮಿತ್ರರಿಂದೊಡಗೂಡಿ ಸಮಾರಾಧನಂಮಾಡಿ ನಾನಾವಿಧಗಾನಂಗಳಿಂದ ಕಾಲಗಳಂ ಕಳೆಯುತಿರಲು ಇಂತು ದಿವಸಂಗಳಲ್ಲಿ ಒಂದೊಂದು ಬಿಡದಿಯಿಂ ತೆರಳುತ ಬಂದು ಮರುದಿನ ಸಹ್ಯಪರ್ವತಂಬಳಿಯ ಸೇನಾಸಮೇತನಾಗಿ ಪಾಳಯಮಂ ಮಾಡಿ ಆರಾತ್ರಿಯೊಳ್ ಅಲ್ಲಿಯೇ ಸುಖದಿಂದಿರಲು ಆಸಮಯದೊಳ್ ಸುತ್ತಲಿರುವ ಪರರಾಯರುಗಳೆಲ್ಲರೂ ಈವೃತ್ತಾಂತಮಂ ಕೇಳಿ ತಮ್ಮತಮ್ಮ ಚಾರರಂ ಕಳುಹಿ ಕರ್ನಾಟಕದೇಶದಿಂ ಬಂದಿರುವ ಸೇನೆಯ ಬಲಾಬಲಮಂ ಅರಸಿನ ಉತ್ಸಾಹವಂ ಮಂತ್ರಿಗಳ ಬುದ್ಧಿಯುಂ ಸೇನಾಪತಿಗಳ ಸಾಹಸವಂ ಕೋಶದ ಪರಿಪೂರ್ತಿಯುಂ ಸಾಮಗ್ರಿಗಳ ಸನ್ನಾಹವಂ ಜನಗಳ ಐಕ್ಯಮತ್ಯವಂ ರಾಜಸೇವಕರ ಗುಣಗಳಂ ತಿಳಿಯುತ್ತ ಸುಗಂಧರಾಜೇಂದ್ರನು ವೀರಕಂಕಣವಂ ಕಟ್ಟಿರುವದಂ ಕೇಳಿ ಕೊಂಕಣದೇಶಾಧಿಪತಿಯು ಅಹಂಕಾರವಂಬಿಟ್ಟನು ತುಳವನು ಕಳವಳಿಸಿದನು ಕೇರಳನು ಹೇರಳವಾಗಿ ಭಯವಂತಾಳಿದನು ಚೋಳನು ಧಾಳಿಯುಂನೈದಿವನು ದ್ರವಿಡನು ಗಡಗಡನೆ ನಡುಗಿದನು, ತ್ರೈಗರ್ತನು ಈವಾರ್ತೆಯುಂ ಕೇಳಿ ಆರ್ತನಾದನು, ಮತ್ಸ್ಯನು ಜಲದಿಂ ತೆಗೆದ ಮತ್ಸ್ಯದಂತೆ ಉತ್ಸಾಹವಂಬಿಟ್ಟನು, ಮದ್ರನು ಚಿಂತಾಸಮುದ್ರದೊಳ್ ಮುಳುಗಿದನು ಕುಂತಿಭೂಪನು ಅಂತರಂಗದೊಳ್ ಸಂತಾಪಗೊಂಡನು ವತ್ಸದೇಶದವನು ಉತ್ಸವಂಗಳಂಬಿಟ್ಟು ಮತ್ಸರಂಗಳಂ ತೊಟ್ಟನು ಲಾಟದೇಶದ ಅರಸು ಆಟಪಾಟಗಳಂಬಿಟ್ಟು ಪ್ರೋಟದೊಳ್ ದೃಷ್ಟಿಯನ್ನಿಟ್ಟನು ಸೌರಾಷ್ಟ್ರದ ಅರಸು ತನ್ನ ರಾಷ್ಟ್ರವನ್ನೊಪ್ಪಿಸುವೆನೆಂದು ನಿಶ್ಚಯಗೊಂಡನು ಈಪರಿಯಾಗಿ ರಾಯರುಗಳೆಲ್ಲರು ತಲ್ಲಣಂಗೊಂಡಿರುವಸಮಯದೊಳ್ ಮಹಾರಾಷ್ಟ್ರದೇಶವನ್ನಾಳುವ ವಿಜಯಾಶ್ವನು ಚಾರರಮುಖದಿಂದ ಈ ಸಮಾಚಾರವಂ ತಿಳಿದು ತನ್ನ ಮುಖ್ಯಮಂತ್ರಿಸೇನಾಪತಿಗಳಂ ಕರಿಸಿ ಏಕಾಂತದಲ್ಲಿ ಕುಳಿತು ಎಲೈ ಮಂತ್ರಿಸೇನಾಪತಿಗಳಿರಾ ನಮ್ಮ ಸೈನ್ಯದಲ್ಲಿ ಯಾವಕಾಲದಲ್ಲೂ ಪರಾಜಯವಂ ಕಾಣಲಿಲ್ಲ ನಮ್ಮ ಸಂಸ್ಥಾನದಿಂ ಮತ್ತೊಬ್ಬ ರಾಯಂಗೆ ಕಾಣಿಕೆಯಂಕೊಡುವದು ಕನಸಿನ

ಲ್ಲಿಯೂ ಕ್ಷೋಣಿಯಿಲ್ಲಾ ಯೆಂಬುದಂ ನೀವು ಕುಲಕ್ರಮಾಗತರಾದುದರಿಂದ ತಿಳಿವೇಇರುವಿರಿ ಮತ್ತೂ ನನ್ನ ಪರಾಕ್ರಮವಂ ಭಾರಿಭಾರಿಗು ನೋಡುತ್ತಲೇ ಇರುವಿರಿ ಇಂತಿರುವಲ್ಲಿ ಸುತ್ತಲಿರುವ ದೇಶದ ಅರಸುಗಳು ನಿಜಪ್ರತಾಪವಂಬಿಟ್ಟು ತಾಪವಂತಾಳಿರುವರಂತೆ ನಿಮಿತ್ತವೇನು ನೀವು ಅವರವರಿಗೆಲ್ಲರಿಗೂ ಭಯವಿಲ್ಲದಂತ ಪತ್ರಿಕೆಗಳಂಬರದು ಕಳುಹುವುದಲ್ಲದೆ ಯವನ ಶಕದೇಶಂಗಳನ್ನಾಳುವ ತುರುಕಜಾತಿಯ ಅರಸುಗಳಿಗೆ ಈ ಸಮಾಚಾರವು ತಿಳಿಯುವಂತೆಯು ಆ ಅರಸುಗಳು ತಮ್ಮ ತಮ್ಮ ಬಲಗಳಂದೊಡಗೂಡಿ ವೇಗದಿಂದ ನಮ್ಮ ರಾಷ್ಟ್ರಕ್ಕೆ ಬಂದು ತಲಪುವಂತೆಯು ಪತ್ರಗಳಂಬರದು ರಾವುತರಿಗೆ ಉತ್ತಮಾಶ್ವಗಳಂಕೊಟ್ಟು ವೇಗದಿಂಪೋಗಿಬರುವದೆಂದು ಹೇಳಿಕಳುಹಿಸೆಂದು ಮಂತ್ರಿಗೆ ಆಜ್ಞಾಪಿಸಿ ಅನಂತರ ಸೇನಾಧಿಪಸಂಕರದು ನೀನು ನಮ್ಮ ಚತುರಂಗಬಲವಂ ಪ್ರತ್ಯೇಕವಾಗಿನೋಡಿಸೈನಿಕರಪರೀಕ್ಷೆಯಂಗೈದು ಯಾವಪಾಳಿಗೆಯಲ್ಲಿ ತರಳಬೇಕೆಂದರೆ ಅಕ್ಷಣದಲ್ಲಿಯೇ ಸಿದ್ಧರಾಗಿರುವದೆಂದುಕಟ್ಟುಮಾಡಿ ನಾಗಬಾಣ ಚಂದ್ರಬಾಣ ಸೂರ್ಯಬಾಣ ಮೊದಲಾದ ನೂರಾರುಬಾಣಂಗಳಂ ಉಕ್ಕು ಕಂಚು ಪಂಚಲೋಹದ ಫಿರಂಗಿಗಳಂ ಅನೇಕವಿಧಗಳಾದ ಯಂತ್ರಂಗಳಂ ನೂತನಂಗಳಾದ ಲಕ್ಷಾಂತರಸಾಧನಂಗಳಂ ಸಜ್ಜುಗೊಳಿಸಿಕೊಂಡಿರುವದಲ್ಲದೆ ಇಲ್ಲಿ ದೇಶಂಗಳೊಳಿರುವ ಪುರಂದರದುರ್ಗಮೊದಲಾದದುರ್ಗಂಗಳ ಕೋಟೆಗಳಲ್ಲಿಯು ಬಲವಾಗಿರುವ ನಗರಂಗಳಲ್ಲಿಯೂ ಕೊತ್ತಲಂಗಳಲ್ಲಿ ಸುತ್ತಮುತ್ತಲೂ ಹತ್ತಿರದೊಳ್ ಫಿರಂಗಿಗಳಂನೆತ್ತಿ ಬಗೆಬಗೆಯಾದ ಧಾನ್ಯಂಗಳಂ ಬೇಕಾದಷ್ಟುತುಂಬಿ ದುರ್ಗಾಧಿಪತಿಗಳಿಗೆ ಭಟವರ್ಗಂಗಳಿಗೆ ಎಚ್ಚರವಾಗಿರ್ದುಸಮಯದಲ್ಲಿಸರ್ವಸಾಹಸವಂಮಾಡುವಂತೆಕಟ್ಟುಮಾಡುವದು, ಇದಲ್ಲದೆ ಮಾರ್ಗಂಗಳಲ್ಲಿಯೂ ಕಣಿವೆಗಳಲ್ಲಿಯೂ ಜನಾಂಗಗಳನಿಟ್ಟು ಪರರಾಷ್ಟ್ರದಿಂಬರುವ ಪಕ್ಷಿಗಳನ್ನಾದರೂ ಬಿಡದೆ ತಡೆಯುವಂತೆ ಹೇಳುವದೆಂದು ಕಟ್ಟುಮಾಡಿ, ಈ ಮುದ್ರೆಯಂವಹಿಸಿದ ಜನರನ್ನೇ ನಮ್ಮ ಸೇನೆಯೊಳ್ ಪ್ರವೇಶವಂಮಾಡಿಸುವದು ಇದಿಲ್ಲದೇ ಇರುವಂಥಾವರುಗಳಂ ಕೈಕಾಲುಗಳಂಕಟ್ಟಿ ತನ್ನ ಸಮಿಪಕ್ಕೆ ತರುವದು ಇದಲ್ಲದೆ

ನೀನು ಸನ್ನದ್ಧನಾಗಿರುವವೆಂದು ಅಪ್ಪಣೆಯನ್ನಿತ್ತು ಕದನಕುತೂಹಲದಿಂದಿರುತ ಸಕಲಸನ್ನಾಹಂಗಳಂ ಸಜ್ಜುಮಾಡಿಸುತ್ತಿರಲೂ ಮಂತ್ರಿಯು ತನಗೆ ರಾಜಾಜ್ಞೆಯಾದಂತೆ ಯವನ ಪಾರಶೀಕಮೊದಲಾದ ದೇಶಾಧಿಪತಿಗಳಿಗೆಲ್ಲರಿಗೂ ಬಹುಮಾನದಿಂದ ಪತ್ರಿಕೆಗಳಂ ಬರೆಯಿಸಿ ಕಳುಹಿಸಲೂ ಕಾಶ್ಮೀರ ಕಾಂಭೋಜ ಕಾಮರೂಪ ನೇಪಾಳ ಮಗದ ಮಾಳವ ಮೊದಲಾದ ದೇಶಾಧಿಪತಿಗಳೆಲ್ಲರೂ ತಮಿಗೆ ಮಂಡಲಾಧಿಪತಿಯಾದ ವಿಜಯಾಶ್ವನ ಪತ್ರಂಗಳಂ ನೋಡಿ ಕ್ಷತ್ರಿಯರು ಯುದ್ಧಕ್ಕೆ ಪಾತ್ರರೆಂದು ತಿಳಿದು ಕಳಕಳಿಸಿ ಇಷ್ಟು ದಿವಸ ನಾವುಮಾಡಿದಶಸ್ತ್ರವಿದ್ಯಾಭ್ಯಾಸವು ಕಲಿತಅಸ್ತ್ರಂಗಳು ನಮ್ಮಬಲವು ನಮ್ಮ ಭುಜಂಗಳು ನಮ್ಮಗಳ ಸಾಹಸವುಇವೆಲ್ಲವೂ ಸಾರ್ಥಕಂಗಳಾಗುವವೆಂದು ಪರಸ್ಪರ ಪರ್ಯಾಲೋಚನೆಯಂ ಮಾಡುತ ತಮ್ಮ ತಮ್ಮ ಸೈನ್ಯಗಳಿಂದೊಡಗೂಡಿ ಯುದ್ಧಾರ್ಥಮಾಗಿ ಸನ್ನದ್ಧರಾಗಿ ಬರುವೆವೆಂದು ಮೊದಲು ಪತ್ರಂಗಳಂ ಬರದು ಚತುರರಾದ ಚಾರರಂ ಕಳುಹಿ ಮತ್ತೂ ತಮ್ಮ ತಮ್ಮ ಪಟ್ಟಣಂಗಳೋಳ್ ಯಥೋಚಿತವಾದ ಬಲವಂ ಪರಮಾಪ್ತರಾದಮಂತ್ರಿಗಳಂ ಇಟ್ಟು ಮಿಕ್ಕಸೈನ್ಯಗಳೊಡಗೂಡಿ ಪರಮೋತ್ಸಾಹಂ ಮಹಾರಾಷ್ಟ್ರದೇಶದ ಪ್ರಾಂತ್ಯಕ್ಕೆ ಬರುತ್ತಿರಲೂ ವಿಜಯಾಶ್ವನು ಈ ವೃತ್ತಾಂತವಂ ಪತ್ರಿಕೆಗಳಿಂದ ತಿಳಿದು ಯಥಾಯೋಗ್ಯಂಗಳಾದ ಮರ್ಯಾದೆಗಳಿಂದ ಅವರಂ ಕರತಂದು ಬಿಡದಿಗಳೋಳ್ ಇಳಿಸಿ ಮನ್ನಿಸಿ ಧನಕನಕವಸ್ತ್ರವಾಹನಾದಿಗಳಿಂದ ಸಕಲರಂ ಸಂತೋಷಗೊಳಿಸಿ ಬಳಿಕ ತನ್ನ ಸೇನಾಪತಿಯಾದ ಪ್ರಚಂಡವರ್ಮನಂ ಕರದು ಸಕಲಸೈನ್ಯವು ಸನ್ನದ್ಧವಾಗಿಕಾದಿರಲೆಂದು ಆಜ್ಞಾಪಿಸಲು ಸೇನಾಪತಿಯು ಸಿದ್ಧವಾಗಿ ಕಾದಿರುವವೆಂದು ವಿಜ್ಞಾಪನೆಯಂಗೈದು ಸೈನ್ಯವಂ ಕುರಿತು ಪೋಗಲು ವಿಜಯಾಶ್ವನು ಅಷ್ಟರಲ್ಲಿ ಚಾರರಮುಖದಿಂದ ಸುಗಂಧರಾಜೇಂದ್ರನು ತನ್ನದೇಶವಂ ಕುರಿತ ಬರುವ ವೃತ್ತಾಂತವಂ ಕೇಳಿ ಆಪ್ತರಾದಬಂಧುಗಳೊಡಗೂಡಿ ಎಡೆಮಾಡಿರುವಷಡ್ರಸಾನ್ನಭೋಜನವಂಗೈದು ಕಿರೀಟ ಹಾರಕುಂಡಲ ಕಟಕ ಬಾಹುಪುರಿಮೊದಲಾದ ಆಭರಣಗಳಿಂದ ಅಲಂಕೃತನಾಗಿ ಸಮಸ್ತಾಯುಧಂಗಳಿಂದ ನಿಬಿಡವಾದ ಕನಕಮಯವಾದ ರಥವೋಳ್ ಕುಳಿತು ಸಕಲಸಾಮಂತರಾಜಮಂಡಲದಿಂ ಪರಿವೃತನಾಗಿ ಧ

ತ್ರ ಚಾಮರಾದಿ ಮಹಾ ರಾಜವೈಭವದಿಂದ ಪ್ರೊರಮಟ್ಟು ಪ್ರಳಯಕಾಲದೊಳ್ ಉಬ್ಬಿ ಬರುವ ಸಮುದ್ರಮೋಯೆಂಬಂತೆ ತೋರುವ ಕರಿತುರಗರಥಪದಾತಿಗಳೆಂಬ ಚತುರಂಗಬಲದಿಂ ಪರಿವೃತನಾಗಿ ಬರುತಲಿರುವ ಸೇನಾಪತಿಯನ್ನವಲೋಕಿಸುತ್ತ ಸಂತೋಷದಿಂದಿರುತ್ತ ಕೆಲವುದೂರದೊಳ್ ಕಟಕವಂಗೈದು ಸುಖದಿಂದಿರುತ್ತಿರ್ದನು.

ಅತ್ತಲಾಚಾರವರ್ಣನು ಈ ವೃತ್ತಾಂತವೆಲ್ಲವಂ ಬೇಹುಗಾರರಿಂದ ತರಿಸಿ ಸುಗಂಧರಾಜೇಂದ್ರನ ಸಮೀಪವನೈದಿ ಎಲೈ ಸ್ವಾಮಿಯೆ ಮಹಾರಾಷ್ಟ್ರದೇಶದಿಂದ ಚಾರರು ಬಂದಿರುವರು ಅಲ್ಲಿನ ಸಮಾಚಾರವಂ ಬಿನ್ನವಿಸುವೆನು ವಿಜಯಸೇನನೆಂಬ ಅರಸು ಸ್ವಾಮಿಯವರ ಸೇನೆಗಳು ದೇಶಂಗಳಂ ಮುಟ್ಟಿಬರುವುದಂ ಕಂಡು ಕೇಳಿ ತನ್ನ ಚತುರಂಗಬಲವಂ ಸನ್ನಹಿಸಿಇರುವನು ಮತ್ತು ಪಾರಸೀಕ ಕಾಂಭೋಜ ಕಾಶ್ಮೀರಾದಿದೇಶದ ಅರಸುಗಳಂ ಸ್ನೇಹಿತರು ಬರುವಂತೆ ಪತ್ರಗಳ ಬರದಿರುವನು ಇವಲ್ಲದೆ ದುರ್ಗಂಗಳೊಳ್ ಆಯುಧಧಾನ್ಯಂಗಳಂ ತುಂಬಿಸಿರುವನು ಹೊಸದಾಗಿ ಲಕ್ಷಾಂತರಸೇನೆಯನ್ನಿಡುವನು ಇರುವ ಬಲಂಗಳಿಗೆ ಸಂಬಳಗಳಂ ಉಂಬಳಗಳಂ ಹ್ಯಾರಳವಾಗಿ ಕೊಡುವನು ಪ್ರತಿದಿವಸಗಳಲ್ಲಿಯು ಸೇನೆಗಳ ಸಾಧನೆಗಳಂ ನೋಡುವನು ಬಗೆಬಗೆಗಳಾದ ಯಂತ್ರಗಳಂ ಮಾಡಿಸುವನು ಅವನದೇಶದೊಳ್ ಅಲ್ಲಿನ ನಗರ ಪುರ ಗ್ರಾಮ ಕೊಪ್ಪಲು ಹಳ್ಳಿ ಮೊದಲುಗೊಂಡು ಅಡವಿಗಳ್ಳಿ ದುರ್ಗಂಗಳಲ್ಲಿ ಕಣಿವೆಗಳಲ್ಲಿ ದಿಕ್ಕು ದಿಕ್ಕುಗಳಿಗೂ ಉಕ್ಕಡಗಳಂ ಹಾಕಿ ಪರರಾಷ್ಟ್ರದಿಂ ಬಂದ ಜನಗಳಂ ಬೆಕ್ಕುಗಳಂತೆ ಹಿಡಿದು ಎಕ್ಕದೆಲೆಗಳಂ ಕಕ್ಕೆಕುಡಿಗಳಂ ತಿನ್ನಿಸುವರು ಸನ್ಯಾಸಿಗಳೆಂದು ಯೋಗಿಗಳೆಂದು ಪರದೇಶಿಗಳೆಂದು ಹೋದವರೂ ಬಿಡರು ರಾಜಸು[illegible]ಯುದ್ಧನಿಶ್ಚಿತ[illegible]ಲ್ಲಿ ಕಾದಲು [illegible] ಧಂಗಳಂ [illegible] ಮಾಡುತಲಿರು ವನು ಸ[illegible] ತನ್ನ [illegible] ತಶಬ್ದಂಗಳಂ ಮನಬಂದಂತೆ [illegible]ವಾಗಿ ನಿರೂಪಿಸುವನೆಂದು [illegible] ಸುಗಂಧರಾಜೇಂದ್ರನು ಅವನಂಮನ್ನಿಸಿ ಸಮೀಪದಲ್ಲಿರುವ ಸುಮತಿಯು [illegible]ಮಂತ್ರಿಯು ಎದ್ದುಕೈಗಳಂಮುಗಿದುಎಲೈ ಭೂಮೀಂದ್ರನೇ

ಮದ್ದಾನೆಗಳ ಗಂಡಸ್ಥಳಗಳಿಂದ ಮುತ್ತುಗಳಂ ಕಿತ್ತು ಕವಚದೊಳ್ ಎರ
ಚಿ ವಿಹಾರವಂಗೈಯುವ ಸಿಂಹದೊಡನೆ ಹೆಣ್ಣಾನೆಗಳು ಕೋಪವಂಮಾ
ಡುವವೇ ಮರಿಮುಕುಂಡುಗಳು ಪೋರಾಟವನ್ನಾಳ್ವುವವೇ ಕರಡಿಗಳು ಕ
ದನವಂ ಮಾಡಲು ಬರುವವೇ ಕಾಡು ಕೋಣಗಳು ಕಾಳಗಗಳಂ ಕಾದು
ವವೇ ಕಾಣಿಸಿಕೊಂಬುವವೇ ಹುಲ್ಲೆಗಳು ಚಲ್ಲಾಟವಂ ಮಾಡುವವೇ
ಹಂದಿಗಳು ದ್ವಂದ್ವಯುದ್ಧವಂ ಮಾಡುವುವೆ ಇಂತು ಸೈನ್ಯದೊಡನೆ ಮಹಾರಾ
ಷ್ಟ್ರದೇಶದ ಅರಸು ವಿರೋಧಿಸಿ ಮಹಿಯೊಳಿರುವನೇ ಕಾಂಭೋಜನು
ಕಲಹವಂಮಾಡಿ ಕಡೆಹಾಯುವನೇ ಪಾರಸೀಕನು ಪಾರವಂಕಾಣುವನೇ ಯ
ವನನು ಭುವನದೊಳಿರುವನೇ ಎಂದು ಬಿನ್ನವಿಸಲು, ಸುಗಂಧರಾಜನು ಮ
ನದೊಳ್ ಸಂತೋಷವಂ ಮೊಗದೊಳ್ ವಿಕಾಸವಂ ಮಾತಿನೊಳ್
ಮಾಧುರ್ಯವಂಗೊಂಡು ಎಲೈ ಸುಮತಿಯೇ, ಕೇಳು ರಾಜ್ಯಂಗಳೊಳ್ ಅ
ರಸುಗಳಲ್ಲಿ ಕೆಲವರು ಅತಿ ತುಂಟರು ಕೆಲವರು ಬುದ್ಧಿಶಾಲಿಗಳು ಕೆಲವ
ರು ಧರ್ಮಪರರು ಕೆಲವರು ದೇವತಾನುಗ್ರಹಕ್ಕೆ ಪಾತ್ರರು ಕೆಲವರು ಮ
ಹಾಧನಿಕರು ಕೆಲವರು ಮಾಯಾವಿಗಳು ಇಂತಿರುವರನ್ನೆಲ್ಲರಂ ಬಂದೊಂದು
ಬಗೆಗಳಾದ ಉಪಾಯುಗಳಿಂದಲೇ ಸಾಧಿಸಬೇಕಾದ್ದರಿಂ ಬಂದೊಂದುಕಡೆ
ಯೊಳ್ ಬಂದೊಂದು ಉಪಾಯುವಂ ಪ್ರಯೋಗಿಸುವದೆಂಬುವ ನೀತಿಯಂ
ನೀನರಿಯದಿರುವದೊಂದುಂಟೇ ಎಂದು ಪೇಳಿ ವೀರಸೇನನೊಡನೆ ಈ ಅ
ರ್ಥವನ್ನಾಲೋಚಿಸುವದೆಂದು ಆಜ್ಞೆಯಂ ಕೊಟ್ಟು ಕಳುಹಲಾ ಸುಮತಿಯು
ವೀರಸೇನನಂ ಕರಸಿ ಸುಗಂಧರಾಯನು ಅಪ್ಪಣೆಯಂ ಕೊಟ್ಟ ಪರಿಯಾಗಿ
ಪೇಳಲು ವೀರಸೇನನು ಹಸಿಕೊಂಡಿರುವರಿಗೆ ಹಾಲನ್ನವಸ್ಸಳವಟ್ಟಂತೆ ನ
ಮ್ಮ ಸೇನೆಯೊಳ್ ಆನೆಗಳು ಆಗ್ರಹದಿಂದಿರುವವು ರಥಂಗಳು ಸಿದ್ಧಂಗಳಾ
ಗಿರುವವು ಕುದುರೆಗಳು ಕೊಬ್ಬಿ ಕಾಲುಗಳಂ ಕೆರೆಯುತಲಿರುವವು ಕಾಲಾ
ಳುಗಳು ಕಾಳಗವಂ ಕೆಣಕುತಲಿರುವರು ಇಂತಿರುವಲ್ಲಿ ನಮ್ಮೊಡನೆ ರಣ
ವಂ ಮಾಡುವಂಗೆ ಮರಣವೇಸರಿ ಎಂದು ನಿಶ್ಚಯವಾಗಿ ಪೇಳಿ ಆಕ್ಷಣ
ದೊಳ್ ಅಕ್ಷೋಹಿಣೀಪತಿಗಳೆಲ್ಲರಂ ಕರಸಿ ನಾಳೆ ದಿನದಿಂದ ಮಹಾರಾಷ್ಟ್ರ
ದೇಶದೊಳ ಬಿಡದಿಗಳಂ ಮಾಡುತ್ತ ತೆರಳುವೆವು ನೀವು ನಿಮ್ಮ ಪಾಪ

ನಿಗಳೊಡಗೂಡಿ ಯುದ್ಧಕ್ಕೆ ಸಿದ್ಧವಾಗಿರುವದೆಂದು ಪೇಳಿ ಕಳುಹಿ ಈರ್ವರೂ ಸಾರ್ವಭೌಮನ ಸಮೀಪವನ್ನೈದಿ ಎಲ್ಲೈ ಉರ್ವೀಶನೇ, ಸರ್ವಾಣಿಯ ಕಟಾಕ್ಷದಿಂ ಸರ್ವರಂ ನಿರ್ವಹಿಸುವೆವೆಂದು ಬಿನ್ನೈಸಿದರು, ಆಗ ಸೇನಾಜನಂಗಳು ಗರ್ವವನ್ನೇ ಮುಖ್ಯಗುಣವಾಗಿ ಧರಿಸಿ ಪರ್ವತಂಗಳನ್ನಾದರೂ ಪಿಡಿದು ಅಲ್ಲಾಡಿಸುವೆವೆಂದು ಉತ್ಸಾಹದಿಂದಿರುತ ಮಾರನೇದಿನ ಪ್ರಯಾಣದೊಳ್ ಇಮ್ಮಡಿಯಾದ ಅಟ್ಟಹಾಸದಿಂ ಪೊರಮಟ್ಟು ಬರುತ್ತಿರುವ ಕರ್ನಾಟಕದೇಶದ ಸೇನೆಯುಂ ಅಡ್ಡಗಟ್ಟಬೇಕೆಂದು ಆ ದೇಶದ ಯಲ್ಲೆಕಟ್ಟಿನೊಳ್ ಕಾವಲಿದ್ದ ಘಟ್ಟಮುಟ್ಟಾದ ದಿಟ್ಟಜನಗಳು ಮತ್ತು ಬೆಟ್ಟದಮೇಲಿರುವ ಜನರುಗಳು ಕೂಡಾ ನೋಡಿ ಕೆಲವರು ಕೋಪಗೊಂಡು ಅರಿಗಳ ತಂಡತಂಡಗಳ ಶಿರಗಳಂತುಂಡುತುಂಡಾಗಿಚಂಡಾಡುವೆವೆಂದು ದಿಂಡೆತನಗಳಿಂದ ಯುದ್ಧಂಗಳಂ ಕೊಂಡು ಕಂಡಮುದ್ದ ಕಾಣುವೆವೆನುತ ನೆಟ್ಟಗಿರುವ ಮಾರ್ಗಂಗಳಂ ಕಟ್ಟಿ ಬೆಟ್ಟಗಳ ಕಣಿವೆಗಳೊಳ್ ಮುಗಿಲು ಮುಟ್ಟುವ ಮರಗಳನ್ನೇರಿ ಬಾಣಂಗಳಂಬಿಟ್ಟು ಸೈನಿಕರಂ ಥಟ್ಟುಥಟ್ಟಾಗಿ ಕೆಡೆಹುವರು ಕೆಲವರು ದುರ್ಗಂಗಳ ಮಾರ್ಗಂಗಳಲ್ಲಿ ರಿಪುವರ್ಗಂಗಳು ದಾಂಟದಂತೆ ತೋಡಿರುವ ಪಾತಾಳವೋ ಎಂಬಂತೆ ತೋರುವ ಅಗಳುಗಳ ಹಲಿಗೆಗಳಂ ಸರಪಣಿಗಳಿಂದ ಎತ್ತಿಕಟ್ಟಿ ಸುತ್ತುಮುತ್ತಿಗೆಯುಂ ಹಾಕದಂತೆ ಫಿರಂಗಿ ಮೊದಲಾದ ಯಂತ್ರಂಗಳಂ ದುರ್ಗಂಗಳ ಮೇಲುಭಾಗದೊಳ್ ಸಾಲುಸಾಲಾಗಿ ನಿಲ್ಲಿಸಿ ಮದ್ದುಗುಂಡುಗಳಂ ತುಂಬಿ ಹಾರಿಸುವರು, ಕೆಲವರು ಏರಿಬರುವ ದಾರಿಯೊಳ್ ನೂರಾರು ಕಲ್ಲುದಿಂಡುಗಳಂನಿರಿಸಿ ಪರಸೈನಿಕರು ಬರುವದಂ ಕಂಡು ಉರುಳಿಸಿಬಿಡುವರು, ಕೆಲವರು ಪರಬಲವಂ ಕಂಡು ಪರಾಕ್ರಮದಿಂ ಪೊಕ್ಕು ದೀಪದೊಳ್ ಬಿದ್ದ ಪತಂಗದಂತೆ ಹಿಂತಿರಿಗಿಬಾರದೆ ಇರುವರು ಇಂತು ನಾನಾವಿಧವಾಗಿ ಮಹಾರಾಷ್ಟ್ರದೇಶಾಧಿಪತಿಯಾದ ವಿಜಯರಾಜನ ಕಡೆ ದುರ್ಗಂಗಳಂ ಕಾಯ್ದಿರುವ ಜನರುಗಳು ಯಲ್ಲೆಕಟ್ಟನೊಳ್ ಇರುವ ಜನಂಗಳು ಕೂಡಾ ಮಾಡುವ ಸಾಹಸಂಗಳಂ ನೋಡಿ ಕರ್ಣಾಟಕಸೇನಾಪತಿಯಾದ ವೀರಸೇನನು ತನ್ನ ಕಡೇ ಸೇನಾಪತಿಗಳಂ ನೋಡಲವರು ತಮ್ಮ ತಮ್ಮ ಸೈನಿಕರೊಡಗೂಡಿ ಕ್ಷಣವೊಳ್ ಕತ್ತಿಗಳಂ ಕಿತ್ತು ಅರಿಗಳ

ಶಿರಗಳಂತರಿದು ಮರಗಳಂ ಮುರಿದು ಕಲ್ಲುಗಳಂ ತಳ್ಳಿ ಅಗಳುಗಳಂ ದಾಂಟಿ ಕೋಟೆಗಳಂ ಮೀಟಿ ಘರ್ಜಿಸುವ ಗಗ್ಗರದ ಕೋಟೆಗಳನ್ನಲ್ಲಾಡಿಸುತ ಎಲ್ಲೆಲ್ಲಿ ಸಿಕ್ಕಿದವರಂ ಅಲ್ಲಲ್ಲಿಯೆ ತಿವಿಯುತ ಮಾರ್ಗದ ಸುತ್ತಲು ಮುತ್ತಿ ಖಡ್ಗವಂ ತಗದು ನಡುವಿನೊಳ್ಕಡಗಿ ಉಡುಗಳಂ ಬಿಡುತ ಹಗ್ಗವಂ ಹಿಡಿದು ಲಗ್ಗೆಯನ್ನೇರಿ ಘೋ ಯೆನುತ ಜೊಬ್ಬರಿಸಿ ತೆನೆಗಳಂ ನೆಗದು ಕಾಯುವರಂ ಕಡಿದು ಯಂತ್ರಂಗಳಂ ಅತ್ತತ್ರಗಳಂ ಮಾಡಿ ಮಡಿದವರನ್ನೋಡಿ ಎದುರಾದವರಂ ತರಿದು ಓಡುವರಂ ಜರಿದು ಮತ್ತವರಂ ಕರದು ಅವರೊಳ್ ಬೆರದು ಕೋಟೆಗಳಂದಿರಿಯುತ ಬರುತ್ತಿರುವದಂ ಹತಶೇಷರಾದ ವಿಜಯಾಶ್ವನ ದೂತರು ನೋಡಿ ಅಲ್ಲಿ ನಿಲ್ಲಲಾರದೆ ಪಲಾಯನವಂಗೈದರು.

ಬಳಿಕ ಕರ್ನಾಟಕಸೈನಿಕರು ಅಲ್ಲಿರುವ ಧನಕನಕವಸ್ತುಗಳಂ ಮನಬಂದಂತೆ ಸೂರೆಗೊಂಡು ಅವರೊಳ್ ರಾಜಯೋಗ್ಯಂಗಳಾದ ವಸ್ತುಗಳಂ ತಮ್ಮ ತಮ್ಮ ಸೇನಾಪತಿಗಳ ಮುಖದಿಂದ ಸುಗಂಧರಾಜೇಂದ್ರನಿಗೆ ಸಮರ್ಪಿಸಲು ಸುಗಂಧರಾಜೇಂದ್ರನು ಸಂತೋಷವಂ ಪಡದು ಅವರವರಿಗೆ ಉಡುಗೆರೆಗಳಂ ಕೊಡಿಸುತ್ತಿರಲು ಇಂತಲ್ಲಿಯ ವೃತ್ತಾಂತವಂವಿಜಯಾಶ್ವನು ಚಾರಮುಖದಿಂ ತಿಳಿದು ಆಕ್ಷಣದಲ್ಲಿಯೇ ತನಗೆ ಸಹಾಯಕರಾದ ದೇಶಾಧಿಪತಿಗಳಿಂದಲೂ ಅವರುಗಳ ಸೇನೆಗಳಿಂದಲೂ ತನ್ನ ಚತುರಂಗಬಲದಿಂದಲೂ ಪರಿವೃತನಾಗಿ ಪ್ರಯಾಣವಂಮಾಡಿ ಬರುತ ಸುಗಂಧರಾಜೇಂದ್ರನ ಸೇನಾನಿವೇಶನದ ಮುಂಭಾಗದೊಳ್ ಪಾಳೆಯವಂ ಮಾಡಿ ನಿಂತು ದೂತರಂ ಕರದು ಎಲೈ ದೂತರುಗಳಿರಾ, ನೀವುನಮ್ಮ ಶತ್ರುವಾದ ಸುಗಂಧರಾಜೇಂದ್ರನಸೇನೆಯುಂನೈದಿ ನಾಳೆ ಉದಯದೊಳ್ ಯುದ್ಧಾರ್ಥವಾಗಿ ಸಿದ್ಧವಾಗಿರುವವೆಂದು ಪೇಳಿ ಬನ್ನಿರೆಂದು ಕಳುಹಲು ಅವರು ಸುಗಂಧರಾಜೇಂದ್ರನ ಬಳಿಗೆ ಬರುತ ಅವನ ಸೇನಾಸನ್ನಾಹವನ್ನೋಡಿ ಭಯದಿಂದ ನಿಂತು ತಾವು ಬಂದಿರುವ ವೃತ್ತಾಂತವಂ ಚಾರರ ಮುಖದಿಂದ ತಿಳುಹಿಸಲು ಸುಗಂಧರಾಜೇಂದ್ರನು ಆ ದೂತರಂ ಕರಸಿ ಅವರ ಬಿನ್ನಪವಂ ಕೇಳಿ ಅವರಿಗೆ ವಸ್ತ್ರಾಭರಣಂಗಳಂ ಕೊಟ್ಟು ನಗುತ ನಾವು ಸಿದ್ಧವಾಗಿರುವೆವೆಂದು ನಿಮ್ಮ ಅರಸಿಗೆ ಪೇಳಿರೆಂದು ಪೇಳಿ ಕಳುಹಲವರು ಅತ್ಯಾಶ್ಚರ್ಯದಿಂ ಬಂದು ವಿಜಯಾ

ಷ್ಟನಿಗೆ ಅಲ್ಲಿನ ವೃತ್ತಾಂತವಂ ಸುಗಂಧರಾಜನ ಸೇನಾಸನ್ನಾಹವಂ ಪೇಳಲು, ಅವನು ಅದಂ ಕೇಳಿ ಆರಾತಿಯುಂ ಕಳವಳವಂ ಕಳೆಯಲು ಬೇಗಾಗೆ ಉಭಯಸೈನಿಕರು ಭೋಜನಾಲಂಕಾರಗಳಂ ಗೈದು ಸಕಲಾಯುಧಂಗಳಂ ಧರಿಸಿ ಯುದ್ಧಸನ್ನದ್ಧರಾಗಿ ವಾಹನಾರೋಹಣವಂಗೈದು ಬರುತ್ತ ಸಮುದ್ರವಂ ಸಮುದ್ರವು ಎದುರ್ಗೊಂಡಂತೆ ಪರಸ್ಪರ ವ್ಯೂಹರಚನೆಯಂಗೈದು ಕ್ಷಣಮಾತ್ರ ಸುಮ್ಮನಿರ್ದು ಬಳಿಕ ಏಕಕಾಲದೊಳ್ ತಮ್ಮ ತಮ್ಮ ರಾಜಾಜ್ಞೆಯಿಂದ ನಾನಾಪಥವಾದ ವಾದ್ಯಂಗಳಂ ಮೊಳಗಿಸುತ್ತ ಪತ್ತಿಗಳು ಪದಾತಿಗಳೊಡನೆ ರಥಿಕರು ರಥಿಕರೊಡನೆ ರಾವುತರು ರಾವುತರೊಡನೆ ಮದ್ದಾನೆಗಳನ್ನೇರಿದವರು ಮದ್ದಾನೆಗಳನ್ನೇರಿದವರೊಡನೆ ಸೇನಾಧಿಪತಿಗಳು ಸೇನಾಧಿಪತಿಗಳೊಡನೆ ಪರಸ್ಪರ ಸೋಲದೆ ಹೆಜ್ಜೆಗಳ ಹಿಮ್ಮೆಟ್ಟದೆ ಮುಂದಿಟ್ಟು ಸಿಂಹನಾದವಂಗೈಯುತ್ತ ಯುದ್ಧವಂ ಮಾಡುತ್ತಿರಲು, ಆಗ ತಲೆಗಳು ಉರುಳಿ ಕರುಳುಗಳು ಚೆಲ್ಲಿ ರಕ್ತ ಸುರಿದು ಮಡುವುಗಟ್ಟಿ ಹರಿಯುವ ನೆತ್ತರವ ಹುಚ್ಚು ಹೊಳೆಯೊಳ್ ಕೊಚ್ಚಿ ಬರುವ ಕಡಿದ ಕುದುರೆಗಳ ಕಾಲುಗಳಂ ಶೀಳಿದ ಆಳುಗಳ ತೋಳುಗಳಂ ಚೂರುಚೂರಾದ ರಥಚಕ್ರಗಳಂ ತುಂಡುತುಂಡಾಗಿ ಖಂಡಿಸಿರುವ ಮದಗಜಂಗಳ ಸೊಂಡಿಲುಗಳಂ ಸಾಲುಸಾಲಾಗಿ ಮೇಲೆ ತೇಲುವ ಹೆಣಗಳಂ ಭಯಂಕರವಾದ ರಣಾಂಕಣದೊಳ್ ಸುಗಂಧರಾಜೇಂದ್ರನ ಸೈನಿಕರು ವಿಜಯಾಶ್ವನ ಸೈನ್ಯವನೆಲ್ಲವಂ ಅಲ್ಲಿ ಬಂದಿಲ್ಲದಂತೆ ಸಂಹರಿಸಿ ಕಂಕ ಕಾಕ ಗೃಧ್ರ ಮೊದಲಾದ ಪಕ್ಷಿಗಳಿಗೂ ನಾಯಿ ನರಿ ತೋಳ ಮುಂತಾದ ದುಷ್ಟಮೃಗಂಗಳಿಗೂ ಡಾಕಿನೀ ಶಾಕಿನೀ ಮೊದಲಾದ ಭೂತಗಳಿಗೂ ಪ್ರಾತನದ ಊಟವನ್ನುಂಟುಮಾಡಿ ಸುಮಾನದಿಂ ಸಿಂಹನಾದವಂಗೈದುದಂ ವಿಜಯಾಶ್ವನು ಕೇಳಿ ಚಂಡಕೋಪದಿಂ ತನ್ನ ಸೇನಾಪತಿಯಾದ ಪ್ರಚಂಡವರ್ಮನನ್ನೋಡಲು ಆಗಲಾಸೇನಾಪತಿಯು ಸಮಸ್ತ ಸನ್ನಾಹದಿಂ ಗಜವನ್ನೇರಿ ಸುಗಂಧರಾಜನ ಸೈನ್ಯದಮೇಲೆ ಕಾಣಿಸಿಕೊಂಡು ಶರ ಶೂಲ ಪರಿಘ ಪಟ್ಟಸ ಮೊದಲಾದ ಆಯುಧಂಗಳ ಸಾಧನಗಳಿಂದ ಸೈನಿಕರಂ ಬಾಧಿಸುತ್ತ ಬರಲು ಆಗ ಅತಿಶೂರನಾದ ವೀರಸೇನನು ಮಹಾರಾಷ್ಟ್ರಪತಿಯ ಸೇನಾಧಿಪನ ಕಾರ್ಯವಂ ಕಂಡು ಅವನಂ ನಾನಾವಿಧ ಬಾಣಂಗಳಿಂದ

ನೋಯಿಸಿ ಪರಿಘಾಯುಧವಂ ಪಿಡಿದು ಘುರ್ರನೆ ತಿರಿಗಿಸಿ ಅವನೇರಿರುವ ಮಾಹಾಗಜದ ಶಿರವಂ ಗುರಿಮಾಡಿ ಪ್ರಹರಿಸಲು ಪರಿಘಪ್ರಹಾರದಿಂ ಆ ಮದಗಜವು ಕುಲಾಲಚಕ್ರದಂತೆ ತಿರಿಗಿ ಭೂಮಿಯೊಳ್ ಬೀಳಲು ಆಗ ಆ ಸೇನಾಪತಿಯು ಆ ಮದಗಜದಿಂದ ಬಿದ್ದು ಏಳಲಾರದೆ ಇರುವದಂ ಮಹಾರಾಷ್ಟ್ರಾಧಿಪತಿಯಾದ ವಿಜಯಾಶ್ವನು ಕಂಡು ಹಾ! ಮಹಾಪ್ರಮಾದ ಬಂತೆಂದು ತಿಳಿದು ಸಕಲಾಯುಧಂಗಳಂ ಧರಿಸಿ ರಥವನೇರಿ ಸೇನಾಮಧ್ಯಕ್ಕೆ ಬಂದು ಮಧ್ಯಾಹ್ನ ಸೂರ್ಯನಂತೆ ತಪಿಸುತ ಬಟರಂ ಬಡಿಯುತ್ತ ರಥಂಗಳಂ ದೋಣಿಗಳಂತೆ ಮಾಡುತ ಆನೆಗಳ ಅಹಂಕಾರವನ್ನಡಗಿಸುತ ಕುದುರೆಗಳ ಕೂಗಾಟವಂ ಕುಗ್ಗಿಸುತ ಏರಿ ಬರುವ ಸಮುದ್ರದಂತೆ ಬರುತ್ತಿರಲು ವೀರಸೇನನು ನಿಮಿಷ ಧೈರ್ಯಬಲಂಗಳೊಡಗೂಡಿ ನಡೆಯುವ ಪರ್ವತದಂತಿರುವ ರಥವನ್ನೇರಿ ವಿಜಯಾಶ್ವನಂ ಕರೆಸಿಕೊಂಡು ಅವನ ಅಶ್ವಗಳಂ ಸಾರಥಿಯಂ ಬಾಣಗಳಿಂದ ನೋಯಿಸಿ ಅವನಮೇಲೆ ಹತ್ತು ಬಾಣಂಗಳಂ ಪ್ರಯೋಗಿಸಲಾಗ ವಿಜಯಾಶ್ವನು ದಂಡಪ್ರಹಾರದಿಂ ಕುಪಿತವಾದ ಸರ್ಪದಂತೆ ಮೊಗದೊಳ್ ಕ್ರೋಧರಸವಂ ಮನದೊಳ್ ಧೈರ್ಯವಂ ಭುಜದೊಳ್ ಬಲವಂ ತಾಳಿ ಬಂದು ಪಟ್ಟಸವಂತೆಗೆದು ವೀರಸೇನನಂ ಪ್ರಹರಿಸಲು ಅದರಿಂ ಅವನು ಮೂರ್ಛೆತಪ್ಪಿ ಬೀಳಲು, ಅದಂ ಕೇಳಿ ಸತ್ಯಸಂಧನಾದ ಸುಗಂಧರಾಜೇಂದ್ರನು ನಸುನಗುತ ಚಿತ್ರಕೂಟದಂತಿರುವ ಚಿತ್ರರಥವನ್ನೇರಿ ಯುದ್ಧರಂಗವಂ ಪೊಕ್ಕು ಬಿದ್ದಿರುವ ವೀರಸೇನನನ್ನೋಡಿ ಆಕ್ಷಣದಲ್ಲಿಯೇ ಕಾಲರುದ್ರನಂತೆ ಕೋಪವಂತಾಳಿ ವೀರಸೇನನಂ ಗುಡಾರಕ್ಕೆ ಎತ್ತಿ ಕಳುಹಿ ಬರುವಷ್ಟರೊಳ್ ಮೇಲೆಬಿದ್ದು ಬರುವ ವಿಜಯಾಶ್ವನಂ ಕಂಡು ಎಲೈ ವಿಜಯಾಶ್ವನೇ, ನೀನು ಮಹಾ ರಥಿಕನಂತೆ ತೋರುತಲಿದ್ದೀಯೆ ಕಾಲ್ಬಲಂಗಳಂ ಕಾಡುವದು ಕುದುರೆಗಳಮುಂದೆ ಕುಣಿದಾಡುವದು ಆನೆಗಳಮುಂದೆ ಹಾರ್ಯಾಡುವುದು ರಥಗಳಂ ತಿರಿಗಿಸುವದೇ ಶೌರ್ಯವೇನು ಮಹಾ ರಥಿಕರೊಡನೆ ಸಕಲಾಯುಧಂಗಳಿಂದ ಯುದ್ಧವಂ ಮಾಡಿದರೆ ಶೂರನೆನ್ನುವರು, ನಿನ್ನಲ್ಲಿ ಹೆಚ್ಚಿರುವ ಶೌರ್ಯವಂ ನೋಡುವೆನು ಹೀಗೆ ತಿರಿಗಿಬಾ ಎಂದು ಹೇಳಲು ವಿಜಯಾಶ್ವನು ಕರ್ಣಕಠೋರಂಗಳಾದ ಆ ಮಾತುಗಳಂ ಕೇಳಿ ಸ

ಹಿಸಲಾರದೆ ರಥದ ಧ್ವನಿಯಿಂದ ಭೂಮಿಯಂ ಘುಡಿಘುಡಿಸುತ ಬಂದು ಎಲೈ ಅರಸೇ ನಾನಾದೇಶದ ಅರಸುಗಳೊಡನೆ ಯುದ್ಧಂಗಳಂಮಾಡಿ ಜಯಶೀಲನಾಗಿರುವೆನು ನಾನು ನೀನು ಮಾತುಗಳಲ್ಲಿಯೇ ಬುದ್ಧಿಶಾಲಿಯಾಗಿ ಕಾಣುವೆ ಕಾರ್ಯದಲ್ಲಿ ಕಾಣೆನೆಂದು ಹೇಳುತಲೇ ಬಾಣಂಗಳಂ ಬಂದೊಂದುಭಾರಿಗೆ ಬಂದೊಂದುಗುಂಪಾಗಿ ಗರುಡನಂತೆ ಸರ್ಪದಂತೆ ಮಯೂರದಂತೆ ಆನೆ ಕುದುರೆಗಳಂತೆ ಪ್ರಯೋಗಿಸಲು ಆ ಶರಂಗಳು ಸುಗಂಧರಾಜಂಗೆ ಪುಷ್ಪಂಗಳಂತಾಗಲು ವಿಜಯಾಶ್ವನು ಇದೇನು ಅಚ್ಚರಿಯು ನಾನು ಪ್ರಯೋಗಿಸಿದ ಬಾಣಗಳಿಗೆ ಲೋಕದಲ್ಲಿಯಾರು ಎದುರಾಗಿ ನಿಲ್ಲಲಾರರಿಲ್ಲ, ಈ ರಾಜಕುಮಾರನು ಏನುಕಾರಣದಿಂ ಬಂದ್ದೇಪ್ರಕಾರ ಧೈರ್ಯದಿಂದಿರುವಂನೆದು ತಿಳಿದು ಬಳಿಕ ಆರುಬಾಣಂಗಳಿಂದ ಅಶ್ವಂಗಳಂ ಏಳುಬಾಣಗಳಿಂದ ಸಾರಥಿಯಂ ನೋಯಿಸಿ ಸುಗಂಧರಾಜನು ಬಾಣವಂ ಲಕ್ಷ್ಯವಂಮಾಡಲಾರನು, ಕುಂತವಂ ಪ್ರಯೋಗಿಸಬೇಕೆಂದು ಗುರಿನೋಡಿ ವೇಗದಿಂ ಕುಂತವಂ ಪ್ರಯೋಗಿಸಲು ಆಕಾಲದೊಳ್ ಕಂದಿ ಇರುವ ತನ್ನ ಸಾರಥಿಯ ಮುಖವನ್ನೋಡಿ ಸುಗಂಧರಾಜನು ಏಕಕಾಲದೊಳ್ ಕೋಪವಂ ಕರುಣವಂ ಕೈಕೊಂಡು ಕೇಳುವರ ಕಿವಿಗಳು ಕಿವಡಾಗುವಂತೆ ಧನುಷ್ಟಂಕಾರವಂ ಮಾಡುತ ಬಂದು ಅರ್ಧಚಂದ್ರಬಾಣಸಂಧಾನವಂಗೈದು ಪ್ರಯೋಗಿಸಲು ಆ ಬಾಣವು ಹೊಳೆಯುವ ಮಿಂಚಿನಂತೆ ಥಳಥಳಿಸುತ ಬಂದು ವಿಜಯಾಶ್ವನ ಭ್ರೂಮಧ್ಯದೊಳ್ ನಾಟಲು ಆ ಪೆಟ್ಟಂತಾಳಲಾರದೆ, ರಥದಿಂದ ಹಾರಿಬಿದ್ದು ಮೂರ್ಛೆಗೊಂಡ ವಿಜಯಾಶ್ವನಂ ಸುಗಂಧರಾಜನು ಕರುಣಾಕಟಾಕ್ಷದಿಂ ನೋಡಿ ರಥದಿಂದಿಳಿದು ಅವನಬಳಿಗೆ ಪೋಗಿ ಶೀತೋಪಚಾರವಂಮಾಡಿಸಲು, ಆ ವಿಜಯಾಶ್ವನು ಮೆಲ್ಲನೆ ಚೈತನ್ಯವಂತಾಳಿ ಮೂರ್ಛೆಯಂತಿಳಿದೆದ್ದು ಸಮೀಪದಲ್ಲಿ ನಿಂತಿರುವ ಸುಗಂಧರಾಜೇಂದ್ರನನ್ನೋಡಿ ಎಲೈ ರಾಜೇಂದ್ರನೆ, ನನ್ನ ಶರೀರವು ಪ್ರಾಣಂಗಳು ನಿನ್ನ ಅಧೀನಂಗಳಾಗಿರುವಲ್ಲಿ ದೇಶಾರ್ಥವಾಗಿ ನಾನು ಚಿಂತಿಯಂ ಮಾಡುವುದೇನು ನನ್ನಸರ್ವಸ್ವವು ನಿನ್ನದೇಆಗಿರುವದೆಂದು ಪೇಳಿ ಸೇನಾರಂಗದೊಳ್ ಸಾಷ್ಟಾಂಗ ಪ್ರಣಾಮವಂಗೈದ ವಿಜಯಾಶ್ವನಂ ಸುಗಂಧರಜೇಂದ್ರನು ನೋಡಿ ಎಲೈ ಮಹಾರಾಷ್ಟ್ರಾಧಿಪತಿಯೇ ನಾವೀರ್ವರು ಕ್ಷತ್ರಿ

ಯುರಾಗಿರುವಾಗ ನನಗೆ ಬಂದ ಕೀರ್ತಿಯು ನಿನ್ನದಲ್ಲವೆ ಎಂದು ವ್ಯಿದು ಮಧುರವಾದ ಮಾತುಗಳಂ ಪೇಳುತ ಸೇನೆಗಳೊಳ್ ಯುದ್ಧವು ಬ್ಯಾಡ ವೆಂದು ಸಾರುವಂತೆ ಚಾರರನ್ನಿಯಮಿಸಿ ತನ್ನ ಕಟಕಕ್ಕೆ ತೆರಳುತ ಸುಗಂಧ ರಾಜನಂ ಕುರಿತು ವಿಜಯಾಶ್ವನು ಎಲೈ ಸಾರ್ವಭೌಮನೇ ನೀನು ನಿನ್ನ ಪರಿ ವಾರಸಮೇತನಾಗಿ ನನ್ನ ನಗರಕ್ಕೆ ಬಂದು ಒಂದು ದಿನ ಒಡ್ಡೋಲಗಂಗೊಂ ಡು ಮಹಿಮೆಮಾಡಬೇಕೆಂದು ಬೇಡಿಕೊಳ್ಳಲು, ಸುಗಂಧರಾಜನು ಅವನಂ ತನ್ನ ರಥದೊಳ್ ಕುಳ್ಳಿರಿಸಿ ಉಭಯಸೇನಾಸಮೇತನಾಗಿ ಅಲಂಕರಿಸಿರುವ ಚ ತುರಂಗನಗರವಂನ್ಯೆದಿದನು.

ಬಳಿಕ ವಿಜಯಾಶ್ವನು ಸುಗಂಧರಾಜೇಂದ್ರನಂ ತನ್ನ ಸಿಂಹಾಸನದೊ ಳ್ ಕುಳ್ಳಿರಿಸಿ ಬಹುಕೋಟಿ ದ್ರವ್ಯಂಗಳಂ ವಿಚಿತ್ರವಸ್ತ್ರಂಗಳಂ ಬಗೆಬ ಗೆಯಾದ ಆಭರಣಂಗಳಂ ಒಪ್ಪಿಸಲು ಸುಗಂಧರಾಜೇಂದ್ರನು ಆ ವಸ್ತುಗಳಂ ಕೈಕೊಂಡು ಆ ನಗರದೊಳ್ ಆರುದಿನ ಅತ್ಯಂತ ಸಂತೋಷದಿಂದಿದ್ದು ಅನಂತರ ಸಕಲಸೇನಾಸಮೇತನಾಗಿ ಹೊರಟು ನರ್ಮದಾತೀರದೊಳ್ ಕ ಟಕವಂ ಮಾಡಿಕೊಂಡಿರುತ ನಾನಾದೇಶಂಗಳಿಂದ ಬಂದ ರಾಜರುಗಳು ಒ ಪ್ಪಿಸುವ ಕಪ್ಪಗಳಂ ಸ್ವೀಕರಿಸುತ ಮತ್ತೂ ಚಾರರಿಂದ ಸಕಲದೇಶ ಸಮಾ ಚಾರಂಗಳಂ ತರಿಸಿಕೊಳ್ಳುತ ಸುಖದಿಂದಿರುತಿರ್ದನೆಂಬಲ್ಲಿಗೆ॥ ಗದ್ಯ॥ ಕುಂಡಲಿಶಯಖಂಡಪರುಶಪುಂಡರೀಕಭವಾ ಖಂಡಲಪ್ರಮುಖನಿಖಿಲಸುರವರ ಪರಿಭವ ಪರಿಣತ ಪ್ರಚಂಡ ಬಲಚಂಡ ಮುಂಡ ಖಂಡನ ನಿಪುಣ ಕೋದಂಡ ಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂ ಡಿಕಾ ಕಟಾಕ್ಷವೀಕ್ಷಣಪ್ರವರ್ಧಮಾನಭೂಮಂಡಲಾಧಿಪತ್ಯಸತ್ಯಪ್ರತಾಪ ಸಕಲಭಾಷಾಸಾಮ್ರಾಜ್ಯ ಸರ್ವಂಕಷ ಚತುರ್ವಿಧಸರಸಕವಿತಾನಿಸ್ಸಹಾಯ ನಿರ್ಮಾಣ ಧೌರೇಯಘಟಿಕಾಶತಗ್ರಂಥದಿನಜಿನಪ್ರಬಂಧನಿಬಂಧನ ಧುರಂಧ ರ ತ್ರಿಭುವನಪವಿತ್ರಾತ್ರೇಯಸಗೋತ್ರಾಶ್ವಲಾಯನಸೂತ್ರಸುಚರಿತ್ರ ಚಾಮ ಮಹಾರಾಜಮಹಾರಾಜಪುತ್ರನರಪತಿಬಿರುದ ಮಹಿಶೂರಪುರವರಾಧೀಶ ಶ್ರೀ ಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನವೀನಕೃತಿಯೊಳ್ ಸುಗಂಧರಾಜೇಂದ್ರನ

ಯೌವರಾಜ್ಯಾಭಿಷೇಕ ದೇಶದಿಗ್ವಿಜಯ ಮೊದಲಾದ್ದಂ ಬಣ್ಣಿಸಿರುವ ಎಂಟನೇ ಆಶ್ವಾಸನಿರೂಪಣಕ್ಕೆ ಮಂಗಳಮಹಾ.

## ಎಂಟನೇ ಆಶ್ವಾಸವು ಸಂಪೂರ್ಣವು.

---

ಶುಭಮಸ್ತು.

ಶ್ರೀ ಚಾಮುಂಡಿಕಾಂಬಾಯೈನಮಃ

---

## ಒಂಭತ್ತನೇ ಆಶ್ವಾಸಪ್ರಾರಂಭ.

ಅನಂತರವಲ್ಲಿ ಸುಗಂಧರಾಜೇಂದ್ರನಿಗೆ ವಿದ್ಯಾಗುರುವಾದ ವಿದ್ಯಾಸಾಗರನು ನಿಜನಗರದಿಂದ ತೆರಳಿ ಬರುತ ಚತುಷ್ಷಷ್ಟಿಕಲೆಗಳನ್ನು ತನ್ನಲ್ಲಿಯೇ ಸಮರ್ಥಕವಾಗಿ ಓದಿ ಸಭಾಮಧ್ಯದಲ್ಲಿ ಸಕಲ ಕಲೆಗಳಲ್ಲಿಯೂ ಪರೀಕ್ಷೆಯಂ ಕೊಟ್ಟಿರುವ ತನ್ನ ಪ್ರಿಯಶಿಷ್ಯನಾದ ಸುಗಂಧರಾಜೇಂದ್ರನಂ ನೋಡಬೇಕೆಂಬ ಅಭಿಲಾಷೆಯಿಂದ ವಿಂಧ್ಯಪರ್ವತದ ಸಮೀಪದಲ್ಲಿರುವ ನರ್ಮದಾನದೀತೀರದೊಳ್ ರಾಜೇಂದ್ರನು ವಾಸಮಂಗೈದಿರುವ ಕಟಕದಸಮೀಪಕ್ಕೆ ಬರಲು ಸೇನಾಶೋಧಕರಾದ ಚಾರರು ವಿದ್ಯಾಸಾಗರನ ಸಮೀಪಕ್ಕೆ ಬಂದು ಅವನಂ ಕುರಿತು ನೀವು ಯಾವದೇಶದವರು ಇಲ್ಲಿಗೆ ಏನುಕಾರಣ ಬಂದಿರುವಿರಿ ನೀವು ಯಾರೆಂದು ಕೇಳಲಾ ವಿದ್ಯಾಸಾಗರನು ಎಲೈ ಚಾರರುಗಳಿರಾ ನಾನು ಕಳಿಂಗದೇಶದಿಂ ಬಂದಿರುವ ವಿದ್ಯಾಸಾಗರನೆಂಬ ವಿದ್ವಾಂಸನು ಮಹಾಧಾರ್ಮಿಕನಾದ ಸುಗಂಧರಾಜೇಂದ್ರನಂ ಕಂಡು ಅವನಿಗೆ ಆಶೀರ್ವಾದವಂ ಮಾಡಬೇಕೆಂದು ಬಂದಿರುವೆವು ಇದೇ ನಮಗೆ ಕಾರ್ಯವೆಂದು ಪೇಳಲು ಆ ಮಾತುಗಳಂ ಕೇಳಿದ ಆ ಚಾರರು ಆಕ್ಷಣದಲ್ಲಿಯೇ ವೇಗದಿಂ ಕಟಕಕ್ಕೆ ಪೋಗಿ ತಮ್ಮ ಗೊತ್ತುಗಾರನಿಗೆ ಈ ವೃತ್ತಾಂತವೆಲ್ಲಮಂ ಪೇಳಲು ಚಾರದರ್ಪಣನು ಅದಂ ಕೇಳಿ ತನ್ನ ಒಡೆಯನಾದ ಸುಗಂಧರಾಜೇಂದ್ರನ ವಿದ್ಯಾಗುರುವಾದ ವಿದ್ಯಾಸಾಗರನಾಗಿರಬೇಕೆಂದು ಮನದೊಳ್ ಊಹಿಸಿ ವೇಗದಿಂದಿವ್ಯಮಂದಿರದೊಳ್ ವಿಲಾಸದಿಂ ಇರುವ ಭೂಪಾಲನ ಸಮುಖವ

ನ್ನರಿತು ಸಮೀಪವನ್ನೈದಿ, ಮಹಾರಾಜನೇ ಕಳಿಂಗದೇಶದಿಂದ ಸ್ವಾಮಿಯು ವರ ವಿದ್ಯಾಗುರುವಾದ ವಿದ್ಯಾಸಾಗರನೆಂಬವಿದ್ವಾಂಸನು ಸ್ವಾಮಿಯುಪದರ್ಶನಾರ್ಥವಾಗಿ ಬಂದು ನರ್ಮದಾತೀರದೊಳ್ ಇಳಿದಿರುವರಂತೆ ಎಂದು ವಿಜ್ಞಾಪಿಸಲು, ಆಕ್ಷಣದಲ್ಲಿಯೆ ಸುಗಂಧರಾಜೇಂದ್ರನು ತ್ವರೆಯಿಂದ ಮರಳಿ ಕೇಳುತ ಸುಮತಿಯಂ ಕರದು ಎಲೈ ಮಂತ್ರಿಯೆ ನಮಿಗೆ ಆಚಾರ್ಯನಾದ ವಿದ್ಯಾಸಾಗರನು ಆಶೀರ್ವಾದವಂ ಮಾಡಲೋಸುಗ ಬಂದಿರುವಂತೆ ಕಾಣುತ್ತೆ ನೀನು ವೇಗದಿಂ ಪೋಗಿ ಮರ್ಯಾದೆಯಿಂದೊಡಗೂಡಿ ಅವರಂ ಕರತರುವದೆಂದು ನಿರೂಪಿಸಲಾಗ ಸುಮತಿಯು ರಾಜಾಜ್ಞೆಯಿಂದಲೂ, ಆಚಾರ್ಯನೋಳ್ ಪರಮ ಭಕ್ತಿಯಿಂದಲೂ ಇಮ್ಮಡಿಯಾದ ಸಂತೋಷವುಳ್ಳವನಾಗಿ ಕೆಲವು ಸೇನೆಯಿಂದೊಡಗೂಡಿ ಬಂದು ನರ್ಮದಾನದೀತೀರದೊಳಿರುವ ವಿದ್ಯಾಸಾಗರನಂ ಕಂಡು ತನ್ನ ಇಷ್ಟದೇವತೆಯಂತೆ ತಿಳಿದು ಭಕ್ತಿಯಿಂ ಸಾಷ್ಟಾಂಗವಾಗಿ ನಮಸ್ಕರಿಸಿ ಕುಶಲವಂಕೇಳಿ ಅವನಂ ಪಲ್ಲಕ್ಕಿಯೊಳ್ ಕುಳ್ಳಿರಿಸಿ ಸಕಲವಾದ್ಯಘೋಷದಿಂದೊಡಗೂಡಿ ಕಟಕವಂ ಕುರಿತು ಪೊರಮಟ್ಟು ಮಹಾರಾಜಮಂದಿರದ ಪುರೋಭಾಗಕ್ಕೆ ಕರತರಲು, ಆ ಸಮಯದೊಳ್ ಸುಗಂಧರಾಜೇಂದ್ರನು ಎದಿಗೊಂಡು ಆಂದೋಳಿಕದಿಂದಿಳಿದು ಬಂದ ಗುರುವರ್ಯನಿಗೆ ಅರ್ಘ್ಯಪಾದ್ಯವೊದಲಾಗಿ ಪೂಜೆಯಂಮಾಡಿ ಸಾಷ್ಟಾಂಗದಿಂ ನಮಸ್ಕರಿಸಿ ಪರಮಭಕ್ತಿಯಿಂದ ಯುಕ್ತಂಗಳಾದ ಮಾತುಗಳನ್ನಾಡುತ ಚಿತ್ತರದ ಕೈಸಾಲೆಗೆ ಕರತಂದು ಕನಕಪೀಠದೊಳ್ ಕುಳ್ಳಿರಿಸಿ ತನ್ನ ತಾಯಿತಂದೆಗಳಾದ ಗುಣವತಿ ಸುಚರಿತ್ರರಾಯರನ್ನೋಡಿದಂತೆ ತಿಳಿದು ಭಯಭಕ್ತಿವಿಶ್ವಾಸಗಳಿಂದ ಕುಳಿತು ಕುಶಲವಂಕೇಳಿದ ಬಳಿಕ ವಿದ್ಯಾಸಾಗರನು ಅವನಂ ಕುರಿತು ಎಲೈ ರಾಜಕುಮಾರನೆ ಕೇಳು ನಿನಿಗೆ ವೇದ ಮೊದಲಾದ ವಿದ್ಯಾಭ್ಯಾಸವಂ ಸಾಂಗವಾಗಿ ಮಾಡಿಸಿದ ಬಳಿಕ ರತ್ನಪುರದಿಂದ ಕಳಿಂಗದೇಶವನ್ನೈದಿ ಆ ದೇಶಾಧಿಪತಿಯಾದ ವಿಜಯವರ್ಮರಾಯನಂ ಕಂಡು ಅವನಿಂ ಪ್ರಾರ್ಥಿತನಾಗಿ ಅವನ ಮಗಳಿಗೆ ಕಾವ್ಯಾಭ್ಯಾಸವಂ ಮಾಡಿಸುತಲಿರುವಾಗ ನಿನಿಗೆ ಯೌವರಾಜ್ಯಾಭಿಷೇಕವಾದುದೆ, ಮತ್ತೂ ನೀನು ದಿಗ್ವಿಜಯಾರ್ಥವಾಗಿ ತೆರಳಿದ್ದಂ

ದಂಸಹಾ ಕೇಳಿ ಸಂತೋಷವಂ ಹೊಂದಿ ನಿನಿಗೆ ಶ್ರೇಯೋಭಿವೃದ್ಧಿಯಾಗ ಲೀ ಎಂದು ಹರಸುತಲಿರುವಷ್ಟರಲ್ಲಿಯೇ ದೇಶಂಗಳೊಳಿರುವ ಅರಸುಗಳೊಳ್ ಕೆಲವರು ಭಯವಂತರಾಳಿದರು, ಕೆಲವರು ನಿನ್ನ ದಯೆಯಂ ಸಂಪಾದಿಸಿದರು, ಕೆಲವರು ತಮ್ಮ ದೇಶಕೋಶಂಗಳಂ ಕೊಟ್ಟರು, ಕೆಲವರು ನಿನ್ನಂ ತಮ್ಮ ಸಿಂಹಾಸನಗಳಲ್ಲಿ ಕುಳ್ಳಿರಿಸಿ ಕೈಗಳಂ ಮುಗಿದು ನಿಂತರು, ಕೆಲವರು ಭೀತಿಯಿಂ ಪಲಾಯನವಂಗೈದರು, ಕೆಲವರು ನಿಜರಾಜ್ಯಂಗಳಂ ಪೂರ್ವದಂತೆ ಪಡೆದರೆಂದು ನಾನಾ ಮುಖದಿಂ ನಿನ್ನ ಕೀರ್ತಿಪ್ರತಾಪಂಗಳಂ ಕೇಳಿ ನಿನ್ನಂನೋಡಿ ಆಶೀರ್ವಾದವಂಮಾಡಿ ನಿನ್ನ ಸಾಮ್ರಾಜ್ಯವಂ ಕಂಡು ನೇತ್ರಾನಂದವಂ ಪಡೆಯಬೇಕೆಂದು ಬಂದೆನೆಂದು ನುಡಿಯಲು. ಸುಗಂಧರಾಜೇಂದ್ರನು ಗುರುವಾದ ವಿದ್ಯಾಸಾಗರನ ವಾಕ್ಯಂಗಳೊಳ್ ಕಳಿಂಗರಾಜಕುಮಾರಿಗೆ ವಿದ್ಯೆಯಂ ಪೇಳುತಿರ್ದನೆಂಬ ಒಂದು ಮಾತನ್ನೇಮನದೊಳಿಟ್ಟು ಲಜ್ಜೆಯಂಬಿಟ್ಟು ವಿದ್ಯಾಸಾಗರನೊಡನೆ ಎಲೈ ಗುರುವರ್ಯನೇ ; ಕಳಿಂಗರಾಜಪುತ್ರಿಗೆ ನೀವು ಕಾವ್ಯವಂ ಪೇಳುವದೆಂದರೇನು ನಿಮ್ಮಲ್ಲಿ ವಿದ್ಯಾಭ್ಯಾಸವಂ ಮಾಡಬೇಕಾದರೆ ಸರಸ್ವತಿ ಮೊದಲಾದವರು ಯೋಗ್ಯರಲ್ಲದೆ ಸಾಧಾರಣರು ಯೋಗ್ಯರಾಗುವರೇ; ಕಳಿಂಗಪತಿಯ ಪುಣ್ಯವು ಅರಣ್ಯವೆಂದು ತಿಳಿಯುತಲಿರ್ದೇನೆಂದು ನುಡಿಯಲು. ಆ ನುಡಿಯಂ ಕೇಳಿ ವಿದ್ಯಾಸಾಗರನು ಇದೇ ವ್ಯಾಜದಿಂದ ಕಳಿಂಗರಾಜನ ವೃತ್ತಾಂತವಂ ಅವನ ಮಗಳಾದ ಸೌಗಂಧಿಕಾದೇವಿಯ ಸ್ವರೂಪವಂ ಕೂಡಾ ನಿರೂಪಿಸಬೇಕೆಂದು ಆಲೋಚಿಸಿ ಎಲೈ ರಾಜಕುಮಾರನೆ ಕೇಳು! ಪೂರ್ವ ಸಮುದ್ರದ ತೀರದಲ್ಲಿ ವಿಂಧ್ಯಗಿರಿಗೆ ದಕ್ಷಿಣದಿಕ್ಕಿನೊಳ್ಕೆಲವು ದೂರದಲ್ಲಿ ಅಂಗ ವಂಗ ದೇಶಗಳಿಗಿಂತಲೂ ಪರಮ ಮಂಗಳವಾದ ಕಳಿಂಗವೆಂಬ ಒಂದು ದೇಶವಿರುವದು, ಅಲ್ಲಿ ಗೈರಿಕಾದಿಧಾತುಗಳಿಂದಲು, ನಾನಾವಿಧಂಗಳಾದ ರತ್ನಂಗಳ ಗಣಿಗಳಿಂದಲೂ, ಅನೇಕವಿಧಂಗಳಾದ ಮೂಲಿಕೆಗಳಿಂದಲೂ, ಸಿದ್ಧವಿದ್ಯಾಧರಾದಿದೇವತಾವಿಹಾರಸ್ಥಳಂಗಳಿಂದಲೂ ವಿರಾಜಿಸುತ್ತಿರುವ ಉಪವಿಂಧ್ಯ ಮೊದಲಾದ ಪರ್ವತಂಗಳಿರುವವು, ಆ ಉಪವಿಂಧ್ಯಪರ್ವತದ ಸಮೀಪದೊಳ್ ಸಪ್ತಮಾತೃಕಾದೇವಿಯರೇ ನದೀರೂಪವಂತಾಳಿ ಇರುವರೋ ಎಂಬಂತೆ ಅರಳಿದ ಕನ್ನೈದಿ

ಲೆಗಳೇ ಕಂಣುಗಳಾಗಿ, ಮಿಂಚಿನಂತೆ ಪೊಳೆಯುವ ಮೀನುಗಳೇ ನೋಟಗಳಾಗಿ, ಬಿಳದಾವರೆಗಳೇ ಮೊಗಂಗಳಾಗಿ, ಇಕ್ಕೆಲದ ಅಂಚಿನೊಳ್ಕಟ್ಟಿರುವ ಪದ್ಮಕಾಂತಿಯೇ ಅರಿಸಿನವಾಗಿ, ಪಾಚಿಯೇ ಕೇಶಪಾಶವಾಗಿ, ಶಂಖವೇ ಕೊರಳಾಗಿ, ಮುತ್ತಿನಚಿಪ್ಪುಗಳೇ ಕಪೋಲಂಗಳಾಗಿ, ಚಕ್ರವಾಕಂಗಳೇ ಕುಚಂಗಳಾಗಿ, ತಾಳೆಮರಂಗಳೇ ಬಾಹುಲತೆಗಳಾಗಿ, ಆಳವಾದಸುಳಿಗಳೇ ನಾಭಿಗಳಾಗಿ, ಮಳಲೊಟ್ಟುಗಳೇ ಬಳದೊಡೆಗಳಾಗಿ, ತುಂತುರುಗಳೇ ಚದುರುವ ಹಾರಂಗಳಾಗಿ ಈಪರಿಯಾಗಿ ನಾರಿಯುರ ಅಲಂಕಾರದಿಂದೊಪ್ಪಿ ಏಳು ಹೊಳೆಗಳಾಗಿ ಗಂಭೀರವಾಗಿ ಹರಿಯುವ ಗೋದಾವರೀ ಎಂಬ ಪೂರ್ವಗಂಗೆ ಇರುತ್ತಿರುವದು. ಈ ನದೀತೀರದೊಳ್ ನವಿಲು ಗಿಣಿ ಕೋಗಿಲೆಗಳ ಗಂಭೀರಧ್ವನಿಗಳೆಂಬ ಗುಡುಗಿನಿಂ, ಹೊಂಬಂಣಗಳಿಂದ ಸುತ್ತಿರುವ ಬಳ್ಳಿಗಳೆಂಬ ಮಿಂಚುಗಳಿಂ, ನಾನಾವರ್ಣಂಗಳಾದ ಚಿಗರು ಮೊಗರುಗಳೆಂಬ ಇಂದ್ರನ ಬಿಲ್ಲುಗಳಿಂ, ನಿಬಿಡವಾಗಿ ಉದುರುತಿರುವ ಹೂವುಗಳೆಂಬ ಆನೆ ಕಲ್ಲುಗಳಿಂ, ಧಾರೆಯಾಗಿ ಸುರಿಯುವ ಜೇನಿನ ಸೋನೆಗಳೆಂಬ ಮಹಾವರ್ಷದಿಂದೊಪ್ಪಿ ವಸಂತಕಾಲವಂ ವರ್ಷಾಕಾಲದಂತೆ ಮಾಡುತಲಿರುವ ಕಾರ್ಮುಗಿಲಿನಂತೆ ರೂಪುಗೊಂಡಿರುವ ಅತ್ಯುನ್ನತವಾಗಿ ಬೆಳದಿರುವ ಬಗೆಬಗೆಗಳಾದ ತರುಗಳ ವನಂಗಳಿರುವವು, ಅವಗಳೊಳಭಾಗದೋಳ್ ತಕ್ಕೋಲ, ತಮಾಲ, ಲವಂಗ, ಮಾತುಲುಂಗ ಮೊದಲಾದ ಮರಗಳ ಪರಿಮಳಮಾದ ಪುಷ್ಪಂಗಳ ಸರಸಮಕರಂದ ಪಾನವಂಗೈದು ಸಂಗೀತವಂ ಪಾಡುತ ಮನೋಹರವಾಗಿ ತೆರಳಿ ತೆರಳಿ ಬರುವ ವಿವ್ಯಾಸನೆಯಿಂದೊಪ್ಪಿರುವ ತಾವರೆಗಳೆಂಬ ಮಂಚಗಳೊಳ್‍ಸಂಚಾರವಂ ಮಾಡುತ, ಮರಳಿ ಮರಳಿ ತಿರುಗುವ ಮಧುಪಂಗಳಿಂ, ಸಂತತಸಂಗತಂಗಳಾಗಿ ತೂಗುತಿರುವ ತಾವರೆಯ ಸರೋವರದ ಬಳಿಯೊಳಿರುವ ಬಳ್ಳಿಗಳ ತುದಿಗಳೊಳ್ ಉಯ್ಯಾಲೆಗಳಂ ನಾಡುತ್ತಿರುವ ಹೆಂಣುಹಂಸೆಗಳ ಅಂಚಿನೊಳದ್ದು ಮಿಂಚಿದ ಮಮತೆಯಿಂದ ಕೊಂಚಕೊಂಚವಾಗಿ ಸಂಚಾದ ಕೊರಳನಿಂ ಕಂಚಿನಂತೆ ಕ್ರೇಂಕಾರವಂಗೈವ ಪಂಚಬಾಣನ ಬಿರುದಾದ ಧವಳ ಶಂಖಗಳಂತೆ ಮಿಂಚುವ ರಾಜಹಂಸೆಗಳ ಜೊತೆಜೊತೆಗಳಿಂದ ಯುತವಾಗಿ ಬೆರಳುಗ

ಳಂತೆ ವಿರಳವಾದ ತೆರೆಗಳಿಂದುರುಳಿಕೋ ಎಂದು ಕೂಗುವ ನೀರುಕೋಳಿಗಳಿಂ, ಥಳಥಳನೆ ಹೊಳೆಯುತ ಪೊರಳುವ ಬೆಳ್ಮೀನುಗಳಿಂ, ಸುಳಿಯುವರಂ ಘಾಳಿಯಿಂ ಸುಳಿಗೊಳ್ಳುವ ತಿಳಿನೀರಿನಿಂದೊಪ್ಪಿ ಕಳಿಂಗದೇಶದ ಕಾಂತೆಯರಿಗೆಲ್ಲರಿಗು ಜಲಕೇಳಿ ಯೋಗ್ಯಸ್ಥಳಂಗಳಾದ ಕೊಳಂಗಳಿರುವವು. ಅದಕ್ಕೆ ಕೆಲವು ದೂರದೊಳ್ ಎಡೆಬಿಡದೆ ಅಡವಿಗಳೊಳ್ ಅಬ್ಬರವಾಗಿ ಬೆಳದ ಕಬ್ಬಿನ ತೋಟಗಳಿಂ. ಮತ್ತೂ ಹಬ್ಬಿರುವ ಮಲ್ಲಿಗೆ ಜಾಜಿ ಮೊದಲಾದ ಬಳ್ಳಿಗಳಿಂದ ಎಬ್ಬಿಸಿದ ಉಬ್ಬು ಚಪ್ಪರಗಳಿಗೆ ತಾಳೆಯ ಹೂವಿನ ತಡಿಕೆಗಳಂ ಕಟ್ಟಿ, ತಾವರೆಯ ಮೊಗ್ಗುಗಳಿಂ ತೋರಣವಾಗಿ ಅಲಂಕರಿಸಿ, ಮನ್ಮಥನ ಬಾಣಂಗಳಿಂ ಇರಿಸಿರುವ ಪೆಟ್ಟಿಗೆಗಳಂತೆಸೆವ ಮತ್ತೂ ವನರಾಜ್ಯದೊಳ್ ವಸಂತರಾಜಂಗೆ ಪಟ್ಟವಂಕಟ್ಟಲು ಉಚಿತಂಗಳಾದ ಕೊಟ್ಟಿಗೆಗಳಂತಿರುವ ಅರವಟ್ಟಿಗೆಗಳಿಂ, ಕುಚಭಾರದಿಂ ಬಳುಕುವ ಭಾಮಿಯರಂತೆಸೆವ ಪಕ್ವಫಲಭಾರದಿಂ ಬೊಗ್ಗಿರುವ ಬಾಳೆಗಿಡಗಳಿಂ, ಹಾಲುತುಂಬಿದ ತೆನೆಗಳಿಂ ಮೊಸೆದೋರುವ ಕೊನೆಗಳಿಂ ಬೆಳೆದು ತೂಗ್ಯಾಡುವ ಪೈರುಗಳಿಂ ಒಪ್ಪಿರುವ ಸಾವಿರಾರು ಊರುಗಳು ಇರುತ್ತಿಹವು.

ಆ ಗ್ರಾಮಗಳ ಮಧ್ಯದೊಳ್ ನಕ್ಷತ್ರವೀಧಿಯೊಳ್ ಚಂದ್ರಮಂಡಲದಂತೆಯು, ಕಳಿಂಗರಾಜ್ಯಲಕ್ಷ್ಮಿಯ ಬೈತಲೆಯೊಳಿರುವ ಚಂದ್ರದಬಟ್ಟನಂತೆಯು, ವಿಜಯನಗರವೆಂಬ ಪುರವು ಆಳವಾದ ಏಳುಅಗಳುಗಳಂ ಕೂಡಿ, ಬೆಳ್ಳಿಯ ನಿಲುವುಗಳಿಂ, ಕಂಚಿನ ಕವಾಟಂಗಳಿಂ, ಪ್ರಕಾಶವಾನಂಗಳಾದ ಪಂಚಲೋಹಪ್ರಾಕಾರಂಗಳಿಂ, ಸುವರ್ಣಗೋಪುರಂಗಳಿಂ, ಚಿತ್ರಂಗಳಾದ ಚಂದ್ರಶಾಲೆಗಳಿಂ, ಎತ್ತರವಾದ ರಾಜಮಂದಿರದಿಂ, ಬೀದಿಯುಸುತ್ತಲಿರುವ ಎತ್ತರಂಗಳಾದ ಉಪ್ಪರಿಗೆಗಳ ಬಿತ್ತರವಾದ ಗವಾಕ್ಷಂಗಳಿಂ, ಸುಲಕ್ಷಣಂಗಳಾದ ಸಾಲುಮನೆಗಳಿಂ ವಿರಾಜಿತಂಗಳಾದ ರಾಜಬೀದಿಗಳಿಂ, ಮನೆಗಳೊಳ್ ಮಾಡಿರುವ ತೋಟಗಳಿಂ, ಅಮೃತಶಿಲೆಗಳಿಂ ರಚಿಸಿರುವ ಕ್ರೀಡಾಪರ್ವತಂಗಳಿಂ, ಗಜಾಶ್ವರಥಶಾಲೆಗಳಿಂ, ಆಯುಧಾಗಾರಂಗಳಿಂ, ಮದ್ದಿನಮನೆಗಳಿಂ ಸಹಿತವಾಗಿ ವಿರಾಜಿಸುತ್ತಿರುವದು. ಅಂತಿರ್ಪನಗರದೊಳ್ ಸಾಮಾದಿನಾಲ್ಕುಉಪಾಯಂಗಳಂ, ಸಂಧಿ ಮೊದಲಾದ ಆರುಗುಣಂಗಳಂ,

ಪ್ರಭುಶಕ್ತಿ ಮೊದಲಾದ ಮೂರುಶಕ್ತಿಗಳಂ ತಿಳಿದು, ಪರಾಕ್ರಮ ಕಾಂತಿ ವಿದ್ಯಾಕೌಶಲ್ಯ ದಾತೃತ್ವ ಮೊದಲಾದ ಗುಣಂಗಳಿಂ ಯುಕ್ತನಾಗಿ, ಕುಲಕ್ರಮಾಗತವಾದ ಸಿಂಹಾಸನವನ್ನೇರಿ ಅಮಾತ್ಯಾದಿರಾಜ್ಯಾಂಗಗಳಂ ರಕ್ಷಿಸುತ ಧರ್ಮವೃಷ್ಟಿಯಿಂದ ಯಜ್ಞಾದಿಸತ್ಕರ್ಮಂಗಳೊಳ್ ನಿರಂತರನಿರತನಾದ ವಿಜಯವರ್ಮನೆಂಬ ಅರಸು ತನ್ನ ಅರ್ಧಾಂಗಿಯಾದ ಸಕಲಗುಣಗಳಿಂದೊಪ್ಪಿದ ಸುಲೋಚನಾ ಎಂಬ ಹೆಸರುಳ್ಳ ರಾಣಿಯಿಂದೊಡಗೂಡ ಬುದ್ಧಿಶಾಲಿಗಳಾದ ಮಂತ್ರಿಗಳಂ, ಪುರೋಹಿತರಿಂ, ಸಾಮಾಜಿಕರು ಭೃತ್ಯರು ಪರ್ತಕರು ಮೊದಲಾದ ಪ್ರಜೆಗಳಂ ಧರ್ಮದಿಂ ಪರಿಪಾಲಿಸುತ್ತಿರುವನು.

ಅವನದೇಶದೊಳ್ ಅನಾಚಾರಿಗಳು, ಕ್ರೂರರು, ವೇದಂಗಳಂ ದೂಷಿಸುವವರು, ರಾಜನಿಂದೆಯಂಮಾಡುವವರು,ದೇವಬ್ರಾಹ್ಮಣವಿರೋಧಿಗಳು ಕುರೂಪಿಗಳು, ರೋಗಿಗಳು, ಮೂರ್ಖರುಯೆಂಬವರ ಹೆಸರಿಲ್ಲದೆ, ಮತ್ತು ಅಲ್ಲಿರುವಜನರೆಲ್ಲರೂ ಸಕಲೈಶ್ವರ್ಯಗಳಿಂದೊಪ್ಪಿಪುತ್ರವಂತರಾಗಿರುವರು. ಅಂಗನೆಯರೆಲ್ಲರೂ ಸುವಾಸಿನಿಯರಾಗಿರುವರು ಮತ್ತು ಸಕಲರೂ ಧರ್ಮವನ್ನೇ ಬಯಸುತ ತಮ್ಮ ತಮ್ಮ ಕುಲಾಚಾರದೊಳ್ ನಿರತರಾಗಿ ರಾಯನ ಹಿತಚಿಂತೆಯನ್ನೇ ನಿರಂತರ ಮಾಡುತಲಿರುವರು ಇಂತಿರಲು ಆರಾಯನು ತನಗೆ ಸಂತಾನವಿಲ್ಲವೆಂದು ಚಿಂತಾಸಮುದ್ರದೊಳ್ಮುಳುಗಿ ಮಂತ್ರಿ ಪುರೋಹಿತರಂ ಕುರಿತು ಎಲೈ ಮಂತ್ರಪುರೋಹಿತರುಗಳಿರಾ ನಾನು ಸಕಲ ದಾನಂಗಳಂ ಯಜ್ಞಾದಿಸತ್ಕರ್ಮಂಗಳಂಮಾಡಿ, ಮತ್ತು ದಶದಿಕ್ಕುಗಳಲ್ಲಿಯೂ ವ್ಯಾಪಿಸಿರುವ ಕೀರ್ತಿಯಂಪಡದಿರುವೆನು. ಇಂತಿರುವನನಿಗೆ ಮಕ್ಕಳಿಲ್ಲವೆನ್ನುವ ಚಿಂತೆ ಒಂದೇಹೊರತು ಮಿಕ್ಕಾದ್ದೆಲ್ಲವೂ ಸಮೃದ್ಧಿಗಳಾಗಿದ್ದರೂ, ಮಹಿಯೊಳ್ಮಕ್ಕಳಿಲ್ಲದ, ಮನೆಯು, ಲಕ್ಷ್ಮಿಯಿಲ್ಲದ ಕಮಲದಂತೆಯೂ, ಆನೆಯಿಲ್ಲದಅಡವಿಯಂತೆಯೂ, ಚಂದ್ರನಿಲ್ಲದ ರಾತ್ರಿಯಂತೆಯೂ ಫಲವಿಲ್ಲದ ವೃಕ್ಷದಂತೆಯೂ, ಬೆಳೆಯಿಲ್ಲದ ಭೂಮಿಯಂತೆಯೂ, ಮಣಿಗಳಗಣಿಗಳಿಲ್ಲದ ಗಿರಿಯಂತೆಯೂ, ಗುಣವಿಲ್ಲದತರುಣಿಯಂತೆಯೂ, ವಿದ್ಯೆಯಿಲ್ಲದಗುರುವಿನಂತೆಯೂ, ಮಹಿಮೆಯಿಲ್ಲದಮಂತ್ರದಂತೆಯೂ ಫಲವಿಲ್ಲದೆಯಿರುವವೆಂದು ಪೇಳಿ ಚಿಂತೆಯಂಗೈಯ್ಯುತ್ತಿರಲು. ಆಕಾಲದೊಳ್ಳು

ಟಪುರೋಹಿತನಾದ ಅಗ್ನಿಶರ್ಮನು ಚಿಂತೆಯಂಗೈವ ಕಳಿಂಗಪತಿಯಂ ಕುರಿತು ಎಲೈ ಅರಸೇ, ನೀನು ಇದಕ್ಕೆ ಇಷ್ಟು ಚಿಂತೆಯಂ ಮಾಡುವುದೇ ನಾನು ನಿನ್ನ ವಂಶಾಭಿವೃದ್ಧಿಯನ್ನಪೇಕ್ಷಿಸುತಲಿರ್ದು ಆರುವರ್ಷಂಗಳ ಕೆಳಗೆ ನಿನ್ನ ಆಜ್ಞೆಯಂ ಗೊಂಡು ಆರ್ಯಾವರ್ತಭೂಮಿಯೊಳ್ ಯಾತ್ರೆಯಂ ಮಾಡುವದಕ್ಕೆ ಪೋಗಿ ಗಂಗಾದಿನದಿಗಳೊಳ್ ಸ್ನಾನವಂಗೈದು ಪರಿಶುದ್ಧನಾಗಿ ಬಂದು ತಿಂಗಳು ಅಲ್ಲಿರ್ದು ಆ ಕ್ಷೇತ್ರದೊಳ್ ನೀನು ನಡೆಯಿಸುವ ದೇವತಾಪೂಜೆಯಂ ಬ್ರಾಹ್ಮಣಪೂಜೆಯಂ ನೋಡಿ ಈ ಧರ್ಮವು ಶಾಶ್ವತವಾಗಿ ನಡೆಯಬೇಕೆಂದು ಗೌರಿಯಂ ಕುರಿತು ಬೇಡಿಕೊಂಡು ಕೈಗಳಂ ಮುಗಿದು ನಮ್ಮ ರಾಜಂಗೆ ಸಂತಾನವಾದರೆ ನನ್ನ ಸಂತಾಪ ತೀರುವುದೆಂದು ಚಿಂತೆಯಂಗೊಂಡು ಗೌರೀದೇವಾಲಯದೊಳ್ ಚಂದ್ರಕಾಂತಶಿಲೆಗಳಿಂ ನಿರ್ಮಿತವಾದ ಏಕಾಂತಮಂಟಪದೊಳ್ ಮಲಗಿದ್ದ ನನ್ನ ಕನಸಿನೊಳ್ ಗೌರಿಯು ಕರುಣೆಯಿಂ ನನ್ನಂ ಕುರಿತು ಕಳಿಂಗಪತಿಯು ಕಾಲಕಾಲದೊಳ್ ಮಾಡಿಸುವ ಪೂಜೆಯಂ ಅಂಗೀಕರಿಸಿರುವೆನು, ಆ ರಾಯನು ಸಂತಾನವಿಲ್ಲವೆಂದು ಚಿಂತೆಗೈದಾಗ ಇದಂ ಉಪದೇಶವಂ ಮಾಡು, ಅವನು ಉಪಶ್ರುತಿಯೆಂಬ ಹೆಸರಿನಿಂ ನನ್ನಂ ಆರುತಿಂಗಳು ಭಕ್ತಿಯಿಂದ ಆರಾಧಿಸಿದರೆ ಸಂತಾನವಾಗುವದೆಂದು ಪೇಳಿ ಒಂದು ಸ್ತೋತ್ರವಂ ನನಿಗೆ ಉಪದೇಶವಂ ಮಾಡಿ ಮರೆಯಾದುದಂ ನಾನು ಕಂಡು ತ್ವರೆಯಿಂದೆದ್ದು ದಿಕ್ಕುಗಳನ್ನೋಡಿ ಇದೇನಚ್ಚರಿಯು ಸ್ವಪ್ನವೊ ಮನೋಭ್ರಾಂತಿಯೋ ಅಥವಾ ದೇವಿಯ ಸಾಕ್ಷಾತ್ಕಾರವೋ ಎಂದು ಚಿಂತಿಸುತ್ತಿರುವಾಗ ದೇವಿಯ ಗರ್ಭಗೃಹದೊಳ್ ಅಹುದಹುದು, ಇದೇ ಸಾಕ್ಷಾತ್ಕಾರವೆಂದು ಉಪಶ್ರುತಿಯಾಗಲು, ಅದಂ ಕೇಳಿ ಉಪಶ್ರುತೀದೇವಿಯು ನಿಜರೂಪವಂ ವಾರ್ತಾರೂಪದಿಂ ನನಿಗೆ ಪ್ರಸನ್ನಳಾದಳೆಂದು ತಿಳಿದು ಸಂತೋಷದಿಂ ಆ ಮಹಾದೇವಿಯು ಪೇಳಿದ ಸ್ತೋತ್ರವಂ ಮರೆಯದಂತೆ ಭಾರಿಭಾರಿಗು ನೆನೆಯುತ ಶ್ರೀದೇವಿಯ ದಿವ್ಯವಿಮಾನಕ್ಕೆ ಮೂರು ಪ್ರದಕ್ಷಿಣೆಗಳಂ ಮಾಡಿ ಸಾಷ್ಟಾಂಗವಾಗಿ ನಮಸ್ಕರಿಸಿ ಮಹಾತಾಯೆ ಕಳಿಂಗರಾಜಕುಲವನ್ನುದ್ಧರಿಸಬೇಕೆಂದು ಪ್ರಾರ್ಥನೆಯಂ ಮಾಡಿ ಸಕಲ ತೀರ್ಥಂಗಳ ಸ್ನಾನದರ್ಶನಂಗಳಿಗೆ ಫಲ ಉಂಟಾಯಿತೆಂದು ತಿಳಿದು

ಅಲ್ಲಿಂದ ತೆರಳಿ ಮತ್ತೂ ಕಳಿಂಗನಗರಕ್ಕೆ ಬಂದೆನು, ಅಂದಿನಿಂದ ನಿನಗೆ ಆ ಮಹಾದೇವಿಯ ವಾಕ್ಯೋಪದೇಶವಂ ಯಾವಾಗ ಮಾಡುವೆನೋ ಎಂದು ಯೋಚನೆಯಂ ಮಾಡುತಲಿದ್ದೆನು, ಈಗ ನನ್ನ ಪುಣ್ಯರಾಶಿಗಳು ಸಫಲಂಗಳಾದವು, ಮತ್ತೂ ಈಗ ನಾನು ಪುರೋಹಿತನಾದೆನು ಎಂದು ನುಡಿಯುಲು, ಅಮೃತದಂತಿರುವ ಆ ಮಾತಂಕೇಳಿ ವಿಜಯವರ್ಮನು ಆಕ್ಷಣದಲ್ಲಿಯೆ ಮೈಯಲ್ಲ ಪುಳಕಂಗೊಂಡು ಭಕ್ತಿಯಿಂ ಮನದೊಳಾದೇವಿಯ ಧ್ಯಾನವಂಗೈದು ಅಗ್ನಿಶರ್ಮನ ಪಾದಂಗಳಿಗೆ ಪ್ರಣಾಮವಂಮಾಡಿ ಎಲೈ ಮಹಾಪುರುಷನೇ ಉಪಶ್ರುತೀದ್ದೇವಿಯ ಪೂರ್ಣಾನುಗ್ರಹವು ನನ್ನಲ್ಲಿಬರುವಂತೆ ಕರುಣಿಸಬೇಕೆಂದು ಬೇಡಿಕೊಳ್ಳಲು, ಅಗ್ನಿಶರ್ಮನು ಶುಭವಾದ ಕಾಲದೇಶಂಗಳಂ ನೋಡಿ ಉಪಶ್ರುತಿದೇವಿಯು ತನಗೆ ಪ್ರತ್ಯಕ್ಷಳಾಗಿ ಪೇಳಿದ ಮಹಾಸ್ತೋತ್ರವಂ ರಾಯಂಗೆ ಉಪದೇಶವಂಮಾಡಿ ಪೂಜಾವಿಧಾನವಂ ತಿಳುಹಿ ನಿಯಮದಿಂದಿರುವ ಪರಿಯಂ ವಿಸ್ತಾರವಾಗಿಪೇಳಲು.

ಅನಂತರ ವಿಜಯವರ್ಮರಾಯನು ವ್ರತದೀಕ್ಷೆಯಂ ವಹಿಸಿ ಆಹಾರದೊಳ್ ಬಂದುತಿಂಗಳಲ್ಲಿ ಬಂದೊಂದು ದಿವಸದಲ್ಲಿ ಕ್ರಮವಾಗಿ ಬಂದೊಂದು ಕಬಳವಂ ಕುಗ್ಗಿಸಿ, ಎರಡನೆ ತಿಂಗಳೊಳ್ ಕ್ಷೀರಪಾನವಂ, ಮೂರನೇತಿಂಗಳೊಳ್ಜಲಪಾನವಂ, ನಾಲ್ಕನೇತಿಂಗಳೊಳ್ ಪರ್ಣಾಹಾರವಂ ಐದನೇತಿಂಗಳೊಳ್ ವಾಯು ಆಹಾರವಂ ಮಾಡಿಕೊಂಡುಜಗದೊಳ್ ಯಾರಿಂದಲೂ ಬಂಣಿಸಲಶಕ್ಯಂಗಳಾದ ಪಾತಿವ್ರತ್ಯಾದಿ ಸಕಲ ಮಹಾಗುಣಂಗಳುಳ್ಳ ಮತ್ತೂ ತನ್ನ ಅಭಿಪ್ರಾಯಾನುಸಾರವಾಗಿ ನಡೆಯುತಲಿರುವ ಧರ್ಮಪತ್ನಿಯಾದ ಸುಲೋಚನಾದೇವೀ ಸಹಿತನಾಗಿ ಪುರೋಹಿತನಾದ ಅಗ್ನಿಶರ್ಮನ ಆಜ್ಞಾನುಸಾರವಾಗಿ ಶ್ರೀ ಉಪಶ್ರುತೀದೇವಿಯ ಪಾದಪದ್ಮಂಗಳೊಳ್ ಮನವನ್ನಿಟ್ಟು ತಪಸ್ಸಂ ಮಾಡುತಲಿರ್ದು ವ್ರತಾಂತದಲ್ಲಿ ಪೂರ್ಣಾಹುತಿಯಂಗೈದು, ಬ್ರಾಹ್ಮಣಭೋಜನವಂ ಮಾಡಿಸಿ, ಆಚಾರ್ಯನಂ ಪೂಜಿಸಿ, ಈ ಮಹಾವ್ರತವಂನೆರವೇರಿಸಿ, ಬಳಿಕ ವಿಶ್ರಾಂತಿ ಸುಖವನ್ನನುಭವಿಸಲೋಸುಗ ಅಂತಃಪುರದೊಳ್ ರಾಣಿ ಸುಲೋಚನೆಯೊಡನೆ ಸರಸಸಲ್ಲಾಪವಂ ಮಾಡುತ ರಾಣಿ ಒಪ್ಪಿಸುವ ತಾಂಬೂಲವಂ ಸ್ವೀಕರಿಸುತಲಿ

ದರು ಆ ದಿನ ಸಾಯಂಕಾಲದೊಳ್ ಸಂಧ್ಯಾವಂದನಾದಿಗಳಂ ನೆರವೇರಿಸಿ ಇಷ್ಟಬಂಧುಗಳೊಡಗೂಡಿ ಮೃಷ್ಟಾನ್ನಭೋಜನಂಗೈದು ಇಷ್ಟದೇವತೆಯಾದ ಉಪಶ್ರುತೀದೇವಿಯಂ ಧ್ಯಾನಿಸುತ ಪತ್ನಿಯಾದ ಸುಲೋಚನಾದೇವಿಯೊಡಗೂಡಿ ಸುಖನಿದ್ರೆಯಂಗೈಯ್ಯುತ್ತಿರಲು ಆ ರಾತ್ರಿ ಕನಸಿನೊಳ್ ಸುರಹೊನ್ನೆಯ ಹೂವಿನ ಸರಂಗಳಿಂದ ಅಲಂಕರಿಸಿದ ತುರುಬಿನಿಂ, ಇಟ್ಟಿರುವ ಮಣಿಭೂಷಣಂಗಳಿಂ, ಉಟ್ಟಿರುವ ಚಂದ್ರಗಾವಿಯ ಸೀರೆಯಿಂ ತೀಡುತಿರುವ ಅಗರುಗಂಧದಿಂಪಿಡಿದಿರುವ ಗಿಣಿಯಿಂದೊಪ್ಪಿರುವ ಶ್ರೀ ಉಪಶ್ರುತಿದೇವಿಯು ಎದುರಾಗಿ ಬಂದು ನಿಲ್ಲಲು. ಕಳಿಂಗರಾಯನು ದೇವಿಯ ಕಟಾಕ್ಷಕ್ಕೆ ಪಾತ್ರನಾದ್ದರಿಂದ ಆ ದೇವಿಯ ಪಾದಪದ್ಮಂಗಳಲ್ಲಿಯೆ ಮನಸ್ಸನ್ನಿಟ್ಟು ಭಕ್ತಿಯಿಂದ ಸ್ತೋತ್ರವಂಮಾಡಲಾದೇವಿಯು ಮಕರಂದ ಭರಿತವಾದ ಒಂದು ಸೌಗಂಧಿಕಾಪುಷ್ಪವಂ ಕೃಪಾಕಟಾಕ್ಷದಿಂ ತಲೆವಸಿಯೊಳಿಟ್ಟು ಇದೇ ನಿನ್ನ ಇಷ್ಟಫಲಪ್ರದವಾಗುವದೆಂದು ಪೇಳಿ ಅತರ್ಧಾನವಂ ಹೊಂದಲು. ಆಕ್ಷಣದಲ್ಲಿಯೆ ವಿಜಯವರ್ಮನು ಎಚ್ಚರವಾಗಿ ಅಚ್ಚರಿಗೊಂಡು ಕತ್ತಲೆಯೊಳ್ ಕಣ್ಣುಬಿಟ್ಟಂತೆ ನಿಮಿಷಮಾತ್ರ ಸುಮ್ಮನಿದ್ದು ಬಳಿಕ ಉಪಶ್ರುತಿದೇವಿಯೇ ಪ್ರಸನ್ನಳಾಗಿ ಕರಸಿನೊಳ್ ಅನುಗ್ರಹಿಸಿ ಇರುವಳೆಂದು ನಿಶ್ಚಯವಾಗಿ ತಿಳಿದು ಬೆಳಗಿನ ಝಾವದೊಳ್ ಕಂಡ ಕನಸು ಬೇಗದಿಂ ಫಲಿಸುವದೆಂದು ತಿಳಿದು ಸಂತೋಷದಿಂ ತನ್ನ ಕಾಂತೆಯೊಡನೆ ಪೇಳಬೇಕೆಂಬ ಕುತೂಹಲದಿಂದ ನಿದ್ರೆಯಂ ಮಾಡುವ ಸುಲೋಚನಾದೇವಿಯಂ ಎಬ್ಬಿಸುವ ಸಮಯದೊಳ್ ತಲೆದಶಿಯಲ್ಲಿ ಮಡಗಿರುವ ಪರಿಮಳಯುಕ್ತವಾದ ಸೌಗಂಧಿಕಾಪುಷ್ಪವನ್ನೋಡಿ ಕನಸಿನಲ್ಲಿ ಕಂಡ ಪುಷ್ಪವು ತಲೆದಸಿಯಲ್ಲಿರುವದೆಂದು ಆಚ್ಚರಿಗೊಂಡು ದೇವತೆಗಳ ಮಹಿಮೆಯಂ ಯಾರು ಕಂಡವರೆಂದು ತನ್ನೊಳ್ತಾನೆ ಮಾತನಾಡಿಕೊಂಡು ಪತ್ನಿಯಂ ಎಚ್ಚರಂಗೊಳಿಸಿ ಕನಸಿನಪರಿಯಂ ಅದರಫಲದ ರೀತಿಯಂ ಪೇಳಲಾ ಸುಲೋಚನೆಯು ತಾವರೆಗಳಂತಿರುವ ತನ್ನ ಕೈಗಳಂ ತೊಳೆದು ಆ ಪುಷ್ಪವಂತೆಗದು ಕಣ್ಣಿಗೊತ್ತಿ ಆನಂದಪಡುತ್ತಿರುವಷ್ಟರಲಿಯೆ ಸೂರ್ಯೋದಯವಾಗಲು. ಬಳಿಕ ವಿಜಯವರ್ಮರಾಯನು

ಷ್ಠರಾಗಿ ಪ್ರಸಿದ್ಧರಾದ ಪುರೋಹಿತ ಅಗ್ನಿಶರ್ಮ ಮೊದಲಾದವರಂ ಕರಸಿ ರಾತ್ರಿಯೊಳ್ಕಂಡ ಆಶ್ಚರ್ಯಕರವಾದ ಕನಸಂ ಪೇಳಿ ತಲೆದೆಸೆಯೊಳಿರ್ದ ಸೌಗಂಧಿಕಾಪುಷ್ಪವಂ ನೋಡಿರೆಂದು ಕೊಡಲು, ಅಗ್ನಿಶರ್ಮ ಮೊದಲಾದವರು ಈ ಪುಷ್ಪವಂ ಮುಟ್ಟುವದಕ್ಕೆ ನಮಗೆ ಯೋಗ್ಯತೆಸಾಲದು ; ನೀನು ಮಹಾತಪವ ಮಾಡಿ ದೇವಿಯ ವರಪ್ರಸಾದರೂಪವಾದ ಈ ಪುಷ್ಪವಂ ಪಡದು ಇರುವೆ ಇದಂ ಶ್ರೀದೇವಿಗೆ ಸಮರ್ಪಣೆಯಂ ಮಾಡಿ ಮತ್ತೂ ಆ ಪುಷ್ಪವಂ ಭರಣಿಯೊಳಿಟ್ಟು ಪೂಜಿಸುವನಾಗೆಂದು ಪೇಳಿ ತಮ್ಮೊಳಗೆ ತಾವು ಸ್ವಪ್ನವೆಂದರೇನು, ಪುಷ್ಪವು ಪ್ರತ್ಯಕ್ಷವಾಗಿರುವುದೇನು, ದೇವತೆಗಳವಿಲಾಸವಂ ಯಾರು ಬಲ್ಲವರೆಂದು ಆಶ್ಚರ್ಯಪಡುತ ವಿಜಯವರ್ಮಸುಲೋಚನೆಯರ ಪುಣ್ಯವಂ ಎಣಿಸಕೂಡದು, ಈ ಪುಷ್ಪಸೇವೆಯಿಂದ ದೇವಾಂಶವಾದ ಸಂತಾನವಾಗುವದೇ ಹೊರತು ಸಾಧಾರಣವಲ್ಲವೆಂದು ನುಡಿಯುತ ಕಳಿಂಗಪತಿಯಂ ಸ್ತೋತ್ರವಂ ಮಾಡಲು, ಆ ಬಳಿಕ ಜಗತೀಪತಿಯಾದ ವಿಜಯವರ್ಮರಾಯನು ನೂತನವಾದ ಕಾಂತಿಯಂ ಧರಿಸಿ, ಆ ಶುಭದಿವಸದಲ್ಲಿ ಶ್ರೀದೇವಿಯಂ ಪೂಜಿಸಿ, ಆರ್ಯರಂ ಆರಾಧಿಸಿ, ಆ ಸೌಗಂಧಿಕಾಪುಷ್ಪವಂ ನವರತ್ನಖಚಿತವಾದ ಭರಣಿಯೊಳಿಟ್ಟು ನಿತ್ಯವಲ್ಲೂ ಪೂಜಿಸುತ ಪತ್ನಿಯಾದ ಸುಲೋಚನಾದೇವಿಯೊಡನೆ ಮನೋಹರವಾದ ಮಧುರಾಹಾರವಂ ಭುಂಜಿಸಿ ಪಟ್ಟೆಮಂಚದೊಳ್ ಪವಡಿಸಿ ಪರಮಸಂತೋಷದಿಂ ಪಂಚಬಾಣನ ವಿಹಾರವಂ ಪಡದು ಸುಖದಿಂದಿರ್ದನು.

ಬಳಿಕ, ಆ ಸೌಗಂಧಿಕಾಪುಷ್ಪದ ಸೇವೆಯಿಂದ ಸುಲೋಚನಾದೇವಿಯು ಗರ್ಭವಂ ಧರಿಸಿ ನೂತನವಾದ ಕಾಂತಿಯಿಂದೊಪ್ಪಿ ದಿನಕ್ರಮದೊಳ್ ಆಗುವ ಉತ್ಸವಾದಿಗಳಿಗೆ ಮತ್ತೂ ಮತ್ತೂ ಉತ್ಸಾಹವಂ ಹೆಚ್ಚಿಸುತ ಗರ್ಭದೊಳ್ ಮುಕ್ತಾಮಣಿಯಂ ಧರಿಸಿದ ಶುಕ್ತಿಯಂತೆ ಥಳಥಳಿಸುತ ನವಮಾಸಂಗಳು ಪೂರ್ಣಂಗಳಾದ ಬಳಿಕ ಒಂದು ಶುಭದಿನದೊಳ್ ಗೌರೀದೇವಿಯ ಕಿರೀಟದೊಳಿರುವ ಚಂದ್ರರೇಖೆಯಂತೆ ಎಸೆವ ಕನ್ಯಾರತ್ನವಂ ಪಡೆಯಲು, ಆಗ ಕಳಿಂಗಪತಿಯು ಕನಕವಸ್ತ್ರಧಾನ್ಯದಾನಂಗಳಂ ಮಾಡಿ, ಕಾತ್ಯಾಯನಿಯಂ ಪೂಜಿಸಿ ಭರಣಿಯಂ ತೆಗದು ನೋಡಿ ಸೌಗಂಧಿಕಾಪುಷ್ಪವಂ ಕಾಣ

ದೆ ಈ ವೃತ್ತಾಂತವಂ ಅಗ್ನಿಶರ್ಮಂಗೆ ತಿಳುಹಿಸಲವನು ಇದೇನೋ ದೇವಮಾಯೆ ಎಂದು ಮತ್ತಾ ಆ ಪುಷ್ಪದಿಂದ ಯಾವದೋ ದೇವತೆಯು ಅವತರಿಸಿರುವದಾಗಿ ತೋರುತ್ತಲಿದೆ ಆದುದರಿಂ ಪುಟ್ಟಿದ ಪುತ್ರಿಗೆ ಸೌಗಂಧಿಕಾ ಎಂಬ ಹೆಸರನ್ನಿಡುವದೆಂದು ಹೇಳಲು, ವಿಜಯವರ್ಮನು ಆ ಮಾತಂಕೇಳಿ ಸಂತೋಷಭರಿತನಾಗಿ ಮಗಳಿಗೆ ಸೌಗಂಧಿಕಾ ಎಂದು ಹೆಸರನ್ನಿಟ್ಟು ಪಾರ್ವತಿಯಂ ಮಗಳಾಗಿಪಡೆದ ಗಿರಿರಾಜನಂತೆ, ಚಂದ್ರೋದಯವನ್ನೋಡಿ ಉಬ್ಬುವ ಸಮುದ್ರದಂತೆ ಪ್ರತಿದಿನವು ಮಗಳಂ ನೋಡಿಸಂತೋಷದಿಂದಿರುತ್ತ ರಾಜ್ಯಭಾರವಂಗೈಯುತ್ತಿರಲು ಅತ್ತಲಾ ಅಂತಃಪುರದೊಳ್ ಸೌಗಂಧಿಕಾದೇವಿಯು ಉಪವನದೊಳ್ ಬೆಳೆಯುವ ಮಲ್ಲಿಗೇ ಬಳ್ಳಿಯಂತೆಯು ಮತ್ತೂ ಶುಕ್ಲಪಕ್ಷಪಾಡ್ಯದ ಚಂದ್ರಕಲೆಯಂತೆಯೂ ದಿನಕ್ರಮದಿಂ ಬೆಳೆಯುತ್ತಿರಲು, ಕಳಿಂಗರಾಯನು ಇಂತಿರುವ ಮಗಳನ್ನೋಡಿ ವಿದ್ಯಾಭ್ಯಾಸವಂಮಾಡಿಸಬೇಕೆಂದು ಆಲೋಚಿಸಿ ನನ್ನಂ ಕರಸಿ ತನ್ನಸಂತೋಷವಂ ತಿಳಿಸಿ ಆ ಕನ್ಯೆಯಂ ಕರಸಿ ನನ್ನ ಪಾದಂಗಳಿಗೆ ಪ್ರಣಾಮವಂಗೈಸಿ ವಿದ್ಯವಾ ಪೇಳಬೇಕೆಂದು ಪೇಳಲು, ನಾನು ಮಿತ್ರನಾದ ಚಕ್ರವರ್ತಿ ಕುಲೋತ್ಪನ್ನನಾದ ಧರ್ಮಪರನಾದ ಆ ರಾಯನ ಮಾತಂ ಮೀರಲಾರದೆ ಆ ಕನ್ಯೆಯ ಆಶ್ಚರ್ಯಕರವಾದ ತೇಜೋವಿಶೇಷವಂ ಸೂಕ್ಷ್ಮಬುದ್ಧಿಯುಂ ಕೂಡಾ ನೋಡಿ ವಿದ್ಯಾಭ್ಯಾಸವಂ ಮಾಡಿಸಲುಪಕ್ರಮಿಸಿ ನವರಸಭರಿತಂಗಳಾದ ಅಲಂಕಾರಂಗಳಂ, ಧ್ವನಿಯಂ, ಚಿತ್ರಂಗಳಂ, ಕವಿತ್ವವಂ, ಮತ್ತೆ ಸಂಗೀತ ಮೊದಲಾದ ವಿದ್ಯಾವಿಶೇಷಂಗಳಂ ಕೂಡಾ ನಿನ್ನಂತೆ ಬೇಗದಿಂ ಗ್ರಹಿಸುಸುತ್ತಿರುವದಂ ಕಂಡು ಶಾಸ್ತ್ರವಂ ಸಮರ್ಪಕವಾಗಿ ಸಾಂಗವಾಗಿ ಪೇಳಿದೆನು, ಈಗ ಬಾಲ್ಯವಂ ಬಿಡುವಕಾಲವಾದ್ದರಿಂದ ಆಕನ್ಯೆಯಂ ಕುರಿತು ಅಂತಃಪುರದೊಳ್ ವಾಸವಂಗೈಯ್ಯುವಂತೆ ಪೇಳಿ ನಿನ್ನ ಸಾಮ್ರಾಜ್ಯವನ್ನೋಡಿ ಕಳಿಂಗಪತಿಯು ತಾತ್ಪರ್ಯವಂ ತಿಳಿಸಬೇಕೆಂದು ಬಂದೆನೆಂದು ನುಡಿದ ವಿದ್ಯಾಸಾಗರನ ವಾಕ್ಯವಂ ಸುಗಂಧರಾಜೇಂದ್ರನು ಕೇಳಿ ಕಳಿಂಗರಾಜನ ತಾತ್ಪರ್ಯವೇನು ಮಗಳಂ ನನಗೆ ಕೊಡಬೇಕೆನ್ನುವದೇ ಇರುವದೆಂದು ಆಲೋಚಿಸಿ ಮನದೊಳ್ ಸಂತೋಷಪಟ್ಟು, ಬಳಿಕ ಮತ್ತೇನು ಕಳಿಂ

ಗರಾಯನ ಮನೋಭಾವವಂ ಅಪ್ಪಣೆಯಂ ಕೊಡಿಸಬೇಕೆಂದು ವಿದ್ಯಾಸಾಗರನಂ ಕುರಿತು ಪೇಳಲು, ಆಗ ವಿದ್ಯಾಸಾಗರನು ತಾನು ಬಂದ ಕಾರ್ಯವು ಕೈಗೂಡಿತೆಂದು ಸಂತೋಷಪಟ್ಟು ಸುಗಂಧರಾಯನಂ ಕುರಿತು ಎಲೈ ಕುಮಾರನೆ, ಕೇಳು ಕಳಿಂಗದೇಶದೊಳ್ ಕಠೂರವಾದ ಒಂದು ಉತ್ಪಾತವು ಸಂಭವಿಸಿತು, ಅದೇನೆಂದರೆ' ಒಂದಾನೊಂದು ದಿನ ಕಳಿಂಗಪತಿಯಾದ ವಿಜಯವರ್ಮರಾಯನು ಕಾಲೋಚಿತಂಗಳಾದ ಕಾರ್ಯಂಗಳಂಗೈದು ಕಾಂತೆಯೊಡಗೂಡಿ ಅಂತಃಪುರದೊಳಿರುವಲ್ಲಿ ಪುರಜನರೆಲ್ಲರು ಸುಖನಿದ್ರೆಯಂಗೈಯುತ್ತಿರಲು, ಕೋವೆಕೊತ್ತಲಂಗಳು ಮೊದಲಾದಸ್ಥಳಂಗಳಲ್ಲಿ ಕೆಲವರು ಕಾವಲಿದ್ದ ಭಟರು ಎಚ್ಚರವಾಗಿರಲು, ಪ್ರಳಯಕಾಲದ ಒಡಬಾಗ್ನಿಯ ಜ್ವಾಲೆಗಳು ಬಂದಾದಂತೆ ಲೋಕಂಗಳೆಲ್ಲ ಕೆಂಪಾಗಿ ಬಳಿಕ ದಿಗಂತರಾಳದೊಳ್ ಎತ್ತಲ್ಲಿಯು ಚಿನ್ನದಮಾವಂತಿಗೆ ಹೂವಿನ ಮಳೆಗರೆದಂತೆ ಅದ್ದೊಂದುಬಗೆಯಾದ ಕಾಂತಿಯು ನಿಂತು ಕಾಣಿಸಿ; ಮತ್ತೊಂದುನಿಮಿಷದೊಳ್ ದೇವತೆಗಳೇ ಕೋಟದೀಪಿಗೆಗಳಂಪಿಡಿದಿರುವರೋ ಎಂಬಂತೆ ನಗನಮಂಡಲವೆಲ್ಲ ಧಗಧಗಿಸಿ ತೋರಿ, ಮತ್ತೊಂದುನಿಮಿಷದೊಳ್ ಬಳ್ಳಿಗಳಂತಿರುವ ಮಿಂಚುಗಳು ಆಕಾಶದಿಂ ಭೂಮಿಪರ್ಯಂತವು ಏಕವಾಗಿನಿಂತಂತೆ ನಿರವಕಾಶವಾದ ಮಹಾಪ್ರಕಾಶವು ದಿಕ್ಕುದಿಕ್ಕುಗಳಂ ತುಂಬಲು. ಬಳಿಕ ಆಕ್ಷಣದಲ್ಲಿಯೇ ಎಣಿಸಕೂಡದ ಸೂರ್ಯರು, ಗಣನೆಯಿಲ್ಲದ ಚಂದ್ರರು ಬಂದೇಕಾಲದೊಳ್ ಉದಯಿಸಿದರೋ ಎಂಬಂತ ತೋರಿ ನೆಲವಂ ಅಂತರಿಕ್ಷವಂ ಕೂಡಾ ತುಂಬಿದ ವಿಲಕ್ಷಣವಾದ ಬೆಳಕು ಉದಯಿಸಿ ನಿಂತು ಬಳಿಕ ಲೋಕಂಗಳ ಅಂಧಕಾರವನ್ನೂಕಿ ತೋಪುಗಳೂಳಿರುವ ಅಂಧಕಾರವಂ ರೂಪು ಇಲ್ಲದಂತೆ ಮಾಡಿ, ಮತ್ತೂ ನೆಲಮಾಳಿಗೆಗಳೊಳ್ ಎಳೆಬಿಸಲುಗಳಂ ಉಂಟುಮಾಡಿ, ಪುತ್ತುಗಳೊಳ್ ಮೊತ್ತವಾಗಿ ಕವಿದಿರುವ ಕತ್ತಲೆಗಳಂ ಕತ್ತರಿಸಿ, ದೇವಾಲಯಂಗಳೊಳ್ಕೋಟಿದೀಪಂಗಳ ಕಾಂತಿಯನ್ನುಂಟುಮಾಡಿ, ಬಜಿಗಳ ಬಳಮನೆಗಳೊಳ್ ಬೆಳದಿಂಗಳನ್ನಿಳುಹಿ, ಯಾವಕಾಲದಲ್ಲಿಯು ಕಾಂತಿಯೆಂಬುದಂ ಕಾಣದ ಕಾರಿರುಳುಗಳಂ ಕಂಡಕಂಡೆಡೆಯೊಳ್ ಕರಲಾಗವಂ ಕೊಟ್ಟು ನಿಲ್ಲಿಸಿ, ಇದು ಸುವರ್ಣವು, ಇವು ಮಣಿಗಳು

ಇದು ಅಗ್ನಿಯು, ಇದು ಭೂಮಿಯು, ಇದು ಗಗನವೆಂದು ವಿಂಗಡಿಸಿ ಕಾಣಲೀಸದ ಭೂಲೋಕವಂಕುರಿತು ಮಹಾಲೋಕವೇ ಇಳಿದು ಬಂದಂತ ನವಗ್ರಹ ನಕ್ಷತ್ರಮಂಡಲಂಗಳು ಭೋಗಾರ್ಥವಾಗಿ ಭೂಮಿಯಂನೈದಿದವೆಂಬಂತೆಯು ಇಂತು ಭಾರವಾದ ಭೂಮಿಯು ಎಂತಿರುವದೋ ನೋಡುವಾ ಎಂದು ಅನಂತನು ಅನಂತಜೀವಮಣಿಗಳಿಂದೊಪ್ಪಿದ ಹೆಡೆಗಳಂ ಎತ್ತಿರುವನೋ ಎಂಬಂತೆ ಸರ್ವಪ್ರಪಂಚವು ಬ್ರಹ್ಮಮಯವಾಗಿ ತೇಜೋರೂಪಮಾದುದೋ ಎಂಬಂತೆ ಎಲ್ಲೆಲ್ಲಿಯೂ ತುಂಬಿ ತುಳುಕುತ್ತಿರಲು, ಅದರೊಳ್ ದೇಶದ ಜನಂಗಳು ಎಚ್ಚರಂಗೊಂಡುನೋಡಿ ಕಣ್ಣುಗಳಂ ಮುಚ್ಚಲು, ಕೆಲವರು ಬೆಚ್ಚಿಬೀಳಲು, ಕೆಲವರು ಮತ್ತೂ ಎಚ್ಚರವಂತಾಳರಲು, ಕೆಲವರು ಹೆಚ್ಚಾದ ಭಯದಿಂದ ಹುಚ್ಚು ಹಿಡಿದವರಂತೆ ನಿಲ್ಲಲು, ಈಪರಿಯಿಂದ ಜನಂಗಳೆಲ್ಲರು ಭ್ರಾಂತಿಯಿಂದ ತಲ್ಲಣಿಸುತಲಿರುವ ಸಮಯದೊಳ್ ಬ್ರಹ್ಮಾಂಡಕಟಾಹವೆಲ್ಲವು ಖಂಡಖಂಡಂಗಳಾಗಿ ಒಡೆದವೋ ಎಂಬಂತೆ ಕಲ್ಪಾಂತಕಾಲಮೇಘಂಗಳು ಎಡೆಬಿಡದೆ ಸಿಡಲುಗಳಂ ಬಿಡುತ ಗುಡುಗಿದಂತೆ ಸಪ್ತಕುಲಾಚಲಂಗಳು ಸಮಕಾಲದೊಳ್ ತಾಟ್ಯಾಡುವಂತ ಲೋಕವೆಲ್ಲ ಭೋರೆಂದು ಕೂಗಿದಂತಾಗಿ ನದಿಗಳು ನಿಶ್ಶೇಷವಾಗಿ ಶೋಷಿಸೆ ನಕ್ಷತ್ರಂಗಳು ಉದುರಿ ಬೀಳುವಂತೆ ಒಂದು ಮಹಾಧ್ವನಿಯಾಗಲು. ಆ ಕಾಲದೊಳ್ ಕಳಿಂಗರಾಜ್ಯವು ನಿಮಿಷಮಾತ್ರ ಸುಳಿಘಾಳಿಯೊಳ್ ಸಿಕ್ಕಿದ ಎಳೆಬಾಳೆಯಂತೆ ಗಡಗಡನೆ ನಡುಗಲು, ಆಗ ಜನಂಗಳೆಲ್ಲರು ಕುಲಾಲಚಕ್ರಗಳಂತೆ ಗರ್ರನೆ ತಿರುಗಿ ಮಲಗಿದವರು ಮಲಗಿದಂತೆ, ನಿಂತವರು ನಿಂತಂತೆ ಇರುತ ಮತ್ತೂ ಸಮ್ಮೋಹನಾಸ್ತ್ರಕ್ಕೆ ಸಿಕ್ಕಿದಂತೆ, ನಿಲ್ಲಿಸಿದಬೊಂಬೆಗಳಂತೆ ಚಿತ್ರದೊಳ್ ಬರದಂತೆ, ಪರಬ್ರಹ್ಮವಂಧ್ಯಾನಿಸುವಂತೆ ಚಲನವಿಲ್ಲದೆ ಇಂದ್ರಿಯವ್ಯಾಪಾರಗಳು ಇಲ್ಲದವರಾಗ ಸ್ತಂಭೀಭೂತರಾಗಿರುವಾಗ ವಜ್ರಾಯುಧವು ಉಪವಿಂಧ್ಯಗಿರಿಯಮೇಲೆಬೀಳುತ್ತಿರಲು. ಆಕಾಲದೊಳ್ ಕೋಟೆಗಳು,ಮರಗಳು, ಚಂದ್ರಶಾಲೆಗಳುಮುರಿದುಬೀಳುತ್ತಿರಲು. ತೋರಣಸ್ತಂಭಂಗಳು ತುಂಡುತುಂಡಾಗಲು ಗೋಪುರಂಗಳು ವಾರೆಯಾಗಲು ಹಜಾರಂಗಳು ಬೀಳಲು, ಇಂತಿಪರ್ಗಮಹೋತ್ಪಾತದೊಳ್ ಪಟ್ಟಣದಲ್ಲಿರುವ ಜನ

ರು. ಬಂದು ಭಯಾನಕವಾತ್ರಿ ಸ್ವಪ್ನಾತ್ಯನ್ಯವಾಗಿರ್ದು ಬೆಳಗಾಗುವ ಸಮಯದೊಳ್ ಬೆಚ್ಚಿಬಿದ್ದವರಾಗಿ ಎದ್ದು ಮತ್ತೊಬ್ಬರಂ ಎಬ್ಬಿಸುತ ತಬ್ಬಿಬ್ಬು ಮಾತಂಗಳನ್ನಾಡುತ ಇದೇನಬ್ಬರವೆಂದು ಚಿಂತಿಸುತ್ತಿರಲು. ಪ್ರಜಾರಕ್ಷಣವಿಚಕ್ಷಣನಾದ ವಿಜಯವರ್ಮನು ಇದೇನು ವಿಪರೀತವೆಂದು ವ್ಯಸನವಂತಾಳ್ದ ಚರ್ಮಾಂಬರನಂ ಧ್ಯಾನಿಸಿ ಅಗ್ನಿಶರ್ಮನಂ ಕರಸಿ ಎಲೈ ಪುರೋಹಿತನೇ; ಈ ಮಹೋತ್ಪಾತದ ಮರ್ಮವೇನು ಇದು ಯುಗಪ್ರಳಯವೋ, ಬ್ರಹ್ಮಕಲ್ಪದಕೊನೆಯೋ, ದೇವಾಸುರರಿಗೆ ಯುದ್ಧವಾಗುವದೋ ಎಂದು ಕೇಳಲು. ಅಗ್ನಿಶರ್ಮನು ಇದೇನೆಂದು ಚಿಂತಿಸಿ ಎಲೈ ರಾಯನೆ ಇದಂ ಪರೀಕ್ಷಿಸದೆ ಹೇಳಲಾಗದೆಂದು ನುಡಿದು ರಾಯ ಮಂತ್ರಿಗಳೊಡಗೂಡಿ ಮತ್ತೆ ಕೆಲವರು ವಿದ್ವಾಂಸರನ್ನು ಕರದುಕೊಂಡು ನಗರವೆಲ್ಲವಂ ನೋಡುತ ಕೋಟೆಕೊತ್ತಲಂಗಳ ಮೇಲೆ ಬರುತಲಿರುವಾಗ ಅಲ್ಲಲ್ಲಿ ಸಂಚರಿಸುತಲಿರ್ದ ಚಾರರು ಬಂದು ರಾಯನೊಡನೆ ಎಲೈ ಮಹಾರಾಯನೆ ನಾವು ಅಲ್ಲಲ್ಲಿ ಸಂಚಾರವಂ ಮಾಡುತ್ತ ಇಲ್ಲಿಗೆ ಬಂದು ಹರಿದಾರಿದೂರದಲ್ಲಿರುವ ಗೋದಾವರೀನದೀಸಮೀಪವನ್ನೈದಿರಲು, ನಿನ್ನೆಯ ರಾತ್ರಿ ಭೂಮ್ಯಂತರಿಕ್ಷಗಳಲ್ಲಿ ಸಹಸ್ರ ಸೂರ್ಯೋದಯವಾದಂತೆಯು ನವಮೇಘಗಳು ಏಕಕಾಲದಲ್ಲಿ ಗುಡಿಗಿದಂತೆಯು ತೋರಿ ಮಹೋತ್ಪಾತವು ನಡೆದದ್ದಲ್ಲದೆ ಈಗಲೂ ಆಶ್ಚರ್ಯಕರವಾಗಿ ಭಯಂಕರವಾಗಿ ಎರಡು ಹೋಳಾಗಿ ಸೀಳಿದ ಉಪವಿಂಧ್ಯಗಿರಿಯ ದೇಶದಿಂದ ವಿಷಸರ್ಪಗಳಂತೆ ಸುಡುತಲಿರುವ ಕಾಲಾಗ್ನಿಜ್ವಾಲೆಗಳು ಸಾವಿರಾರು ಮಾರುದೂರ ವ್ಯಾಪಿಸಿ ಸಮೀಪಕ್ಕೆ ಯಾರಂ ಸೇರಲೀಸವು ಪರಾಂಬರಿಸಬೇಕೆಂದು ಬಿನ್ನವಿಸಲು.

ಆ ಬಳಿಕ ವಿಜಯವರ್ಮರಾಯನು ಮನದೊಳ್ ಭೀತಿಯಂಗೊಂಡು ಆಪ್ತಮಂತ್ರಿ ಪುರೋಹಿತರಿಂದೊಡಗೂಡಿ ಉಪವಿಂಧ್ಯಗಿರಿಯ ಸಮೀಪವಂಕುರಿತು ಪೋಗಿ ಕೆಲವು ದೂರದೊಳ್ ನಿಂತು ಅದರ ಬಳಿಯಲ್ಲಿ ಸುಟ್ಟು ಭಸ್ಮರಾಶಿಗಳಾದ ಬಿದಿರು ಮೆಳೆಗಳಂ, ತಲೆಕೆಳಗಾಗಿ ಬಿದ್ದಿರುವ ಮರಂಗಳಂ, ಶೈಲಶಿಖರಂಗಳಂ, ಉರುಳಿರುವ ಗಂಡಶೈಲಂಗಳಂ, ಸಿಡಿದಿರುವ ಶಿಲೆಗಳಂ ಇಬ್ಭಾಗವಾಗಿರುವ ಮಹಾಗಿರಿಯಂ ಮತ್ತೂ ಸುತ್ತಲು ಸತ್ತು

ಬಿದ್ದಿರುವ ಸಿಂಹ ವ್ಯಾಘ್ರ ಸಾಳ್ವ ಮೊದಲಾದ ಮೃಗಪಕ್ಷಿಗಳಿಂ, ಪಾತಾಳ ಲೋಕವನ್ನೈದಲೋಸುಗ ಬ್ರಹ್ಮನಿಂ ಮಾಡಲ್ಪಟ್ಟ ಸುರಂಗವೋ ಎಂಬಂತಿರುವ ಶಿಖರುವ ಆ ಮಹಾಗಿರಿಯ ಮಧ್ಯಬಿಲವಂ ಮತ್ತೂ ಸಮುದ್ರದ ರುಚಿಯನ್ನೀಡಿ ಸಾಕಾಗಿ ಭೂಮಿಯಂ ಸವಿಯಬೇಕೆಂದು ಒಂದಿರುವ ಬಡಬಾಗ್ನಿಯ ಜ್ವಾಲೆಗಳೋ ಎಂಬಂತಿರುವ ಆ ಪರ್ವತಕುಹರದಿಂ ಹೊರಟು ಬರುತಲಿರುವ ಜ್ವಾಲೆಗಳಂ ಸಹಾ ನೋಡಿ ಭಯದಿಂ ಗಡಗಡನೆ ನಡುಗುತ್ತಿರಲು. ಪುರೋಹಿತನಾದ ಅಗ್ನಿಶರ್ಮನು ಎಲೈ ರಾಯನೇ ಈ ಉತ್ಪಾತ ಶಾಂತಿಕರನಾದ ದೇವತಾಪೂಜೆಗಳಂ ಬ್ರಾಹ್ಮಣಸಂತರ್ಪಣೆಗಳಂ ಕೂಡಾ ಮಾಡಿಸಬೇಕೆಂದುಹೇಳಲು

ಆ ಬಳಿಕ ವಿಜಯವರ್ಮರಾಯನು ಅದೇಪರಿಯಾಗಿ ಉತ್ಪಾತಶಾಂತಿಯಂ ನಡಸಿ, ಮತ್ತೂ ಎಂಟುದಿನಗಳಾದ ಬಳಿಕ ಬುದ್ಧಿಶಾಲಿಗಳಾದ ಮಂತ್ರಿಪುರೋಹಿತರಿಂದೊಡಗೂಡಿ ಒಡದಿರುವ ಗಿರಿಯ ಹಿಂಭಾಗವನ್ನೈದಿ ಅದರ ತುದಿಯನ್ನೇರಿ ಅದರ ಮಧ್ಯಪ್ರದೇಶದೊಳ್ ಮಲಗಿರುವ ವಿಂಧ್ಯಗಿರಿಯ ಶಿಖರದಂತೆ ಮಹತ್ತರವಾಗಿ ಭೂಮಿಯೊಳ್ ಕೆಲವು ಭಾಗ ಯಿಳಿದು ಮೇಲೆ ಕೆಲವು ಭಾಗ ಕಾಣುತ ನೂರುಗಂಟುಗಳಿಂ ಸಾವಿರ ಅಲಗುಗಳಿಂದ ಒಪ್ಪಿ ಆಯುಧಲಕ್ಷಣವಂತಾಳಿರುವ ಒಂದು ವಸ್ತುವನ್ನೀಡಿ ಇದು ಸುವರ್ಣದಿಂಮಾಡಿರುವದೋ ಮಣಿಗಳಿಂದ ರಚಿಸಲ್ಪಟ್ಟಿರುವದೋ ಎಂದು ಭ್ರಮೆಗೊಂಡು ಇರಲು. ಆಕಾಲದೊಳ್ ಅಗ್ನಿಶರ್ಮ ಮೊದಲಾದವರು ಪರ್ಯಾಲೋಚನೆಯಂಗೈದು ವಿಷ್ಣುವಿನ ಗದಾಯುಧವೋ, ಕಾಲರುದ್ರನ ತ್ರಿಶೂಲವೋ, ಯಮನ ಕಾಲದಂಡವೋ, ಮಹೇಂದ್ರನ ವಜ್ರವೋ ಯಾವದೋ ಒಂದು ಇರಬಹುದೆಂದು ಹೇಳಿ, ಮತ್ತೂ ಇದು ದೇವಕಾರ್ಯಾರ್ಥವಾಗಿ ಈ ಪರ್ವತದೊಳ್ ಬಿದ್ದಿರುವದು, ಮೊದಲು ಕಂಡ ಕಾಂತಿಯು ಕೇಳಿದ ಧ್ವನಿಯು ಇದರದೇ ಅಹುದು; ಆದರೂ ಭೂಸ್ಪರ್ಶದಿಂದ ಪ್ರಕಾಶವು ತಾಪವು ತಗ್ಗಿರುವದೆಂದು ನಿರ್ಣೈಸಿ, ಎಲೈ ರಾಯನೆ ಇದರಿಂದ ನಿನಿಗೇನು ಭಯವಿಲ್ಲವೆಂದು ನಿಶ್ಚಯವಾಗಿ ಹೇಳಿ ರಾಯನಂ ಮುಂದುಮಾಡಿಕೊಂಡು ನಿಜನಗರವಂಕುರಿತು ತೆರಳಿ ಬರುತ್ತಿರಲು.

ಆ ಬಳಿಕ ಕೆಲವರು ಇವನು ಅರಸಿಗೆ ಆಗಮೊ ಯನ್ನುವರು, ಕೆಲವರು ದೇಶಂಗಳಿಗೆ ಅನಿಷ್ಟವೆನ್ನುವರು, ಕೆಲವರು ಜನಂಗಳಿಗೆ ಬಾಧೆಯೆನ್ನುವರು. ಕೆಲವರು ಇವರಿಂದ ಏನಾಗುವದೋ ತಿಳಿಯಕೂಡದೆನ್ನುವರು, ಇಂತು ಅವರವರು ಪರಸ್ಪರ ಮನಸ್ಸುಬಂದಂತೆ ಮಾತನಾಡುತ್ತಿರಲು. ನಾನು ನಿನ್ನ ಪರಾಕ್ರಮವಂ ಜಯಪ್ರಯಾಣವಂ ನಾನಾದೇಶದ ಅರಸುಗಳು ಬೆದರಿ ಇರುವದಂ, ಕೆಲವರು ಪರಾಜಿತರಾದುದಂ ಸಹಾ ಕೇಳಿ, ಮೊದಲು ನಡೆದ ಮಹೋತ್ಪಾತದ ಕಾರ್ಯವು ಇದೇ ಆಗಿರುವದೆಂದು ಭಯಗೊಂಡಿರುವ ಕಳಿಂಗರಾಯನಂ ಕುರಿತು ನಿನ್ನ ಗುಣಗಳೆಲ್ಲವಂ ಪೇಳಿ ಎಲೈ ವಿಜಯವರ್ಮನೆ; ಭಯಪಡಬ್ಯಾಡವೆಂದು ನಂಬಿಗೆಯನ್ನಿತ್ತು ಬಂದೆನು. ಇದೇ ಕಳಿಂಗದೇಶದವೃತ್ತಾಂತವು. ಮತ್ತೂ ಕಳಿಂಗದೇಶಾಧಿಪತಿಯಾದ ವಿಜಯವರ್ಮರಾಯನು ತನ್ನ ಪುತ್ರಿಯಂ ನಿನಗೆ ಕೊಟ್ಟು ನಿನ್ನ ಕರುಣಾಪಾತ್ರನಾಗುವೆನೆಂಬ ಭಾವದಿಂದಿರುವನು, ಇದೇ ಕಳಿಂಗರಾಯನ ಅಭಿಪ್ರಾಯವು, ಇದಂ ನೀನುಮನಸ್ಸಿಗೆತರಬೇಕೆಂದು ನುಡಿಯುವ ವಿದ್ಯಾಸಾಗರನಮಾತಂಕೇಳಿ ಸಂತೋಷವಂಹೊಂದಿದ ಸುಗಂಧರಾಜೇಂದ್ರನು ಎಲೈ ಆಚಾರ್ಯನೆ! ನಿನ್ನ ಅಪ್ಪಣೆಯಾದಂತೆ ನಡೆಯುವದಕ್ಕೆ ಚಿಂತೆಯೇನೆಂದು ನುಡಿದು ದರ್ಶನಂತಾಳಿ ಕಾಲೋಚಿತಂಗಳಾದ ಕಾರ್ಯದಲ್ಲಿರ್ದು ಕೆಲವು ದಿನಂಗಳು ಕಳೆದ ಬಳಿಕ ನಿಜಪುರವಂ ಕುರಿತು ಪೋಗಿ ಬರುವೆನೆಂದು ನುಡಿದ ಗುರುವರ್ಯನಿಗೆ ಬಂದು ದೇಶದ ಅರಸು ಕಪ್ಪವನ್ನಾಗಿ ಒಪ್ಪಿಸಿದ ಪದಾರ್ಥವೆಲ್ಲವಂ ಸಮರ್ಪಿಸಿ ಮರ್ಯಾದೆಯಿಂದ ಕಳಿಂಗಪುರಿಗೆ ಕಳುಹಿದನು.

ಬಳಿಕ ವಿದ್ಯಾಸಾಗರನು ವಿವಿಧವಾದ ಐಶ್ವರ್ಯದಿಂದೊಪ್ಪಿ ವಿಂಧ್ಯಶೈಲಮಾರ್ಗದಿಂದ ಕಳಿಂಗನಗರವಂ ಪ್ರವೇಶಿಸಿ ತನ್ನ ಪತ್ನಿ ಮೊದಲಾದವರಿಗೆ ಸಂತೋಷವಾಗುವಂತೆ ವಸ್ತ್ರದ ಬಡವೆಗಳಂ ಕೊಟ್ಟು ಬಳಿಕ ಕಳಿಂಗರಾಯನಂ ಕಂಡು ಸುಗಂಧರಾಜೇಂದ್ರನ ಪರಾಕ್ರಮವಂ ತಾನು ಮಾಡಿದ ಸಂಧಾನವಂ ಕೂಡಾ ಪೇಳಿ ಅವನ ಮನದಲ್ಲಿದ್ದ ಚಿಂತೆಯಂಬಿಡಿಸಿ ಬೇಕಾದ ಅರ್ಥವಂ ಪಡದು ಸಮರ್ಥನೆನಿಸಿಕೊಂಡು ಸುಖದಿಂದಿರ್ದನು.

ಇಂತು ದೂರ್ವಾಸನ ಶಾಪದಿಂದ ಪುರಂದರನು ಅವನ ಸುಂದರಿಯು ವಜ್ರಾಯುಧವು ಭೂಲೋಕವಂಕುರಿತು ಬಂದಂತೆ ಇಂದ್ರನಮಿಕ್ಕಾದವನು

ಗಳು ಬಂದೊಂದುಬಗೆಯಾಗಿಬಂದು ಭೂಲೋಕವಂ ಸೇರಲು. ಅತ್ತಲಾನಂದನವನದೊಳ್ ಶಚೀದೇವಿಯಿಂದ, ಪಾಲಿತವಾದ ಲೀಲಾಶುಕವು ಕಟಕಟಾ; ಕಷ್ಟದಪಾಲಾದೆನೆಂದು ಪ್ರಲಾಪಿಸುತಪಾಳಾಗಿರುವ ನಂದನವನದೊಳ್ ಸಾಲಾಗಿಬಿದ್ದಿರುವ ಮೇಲಾದಮರಂಗಳಂಕಂಡು ಇವುಗಳ ಸಾಲಾವಳಿ ಇಷ್ಟಾಯಿತೆಂದು ನಾಲ್ಕುದಿಕ್ಕುಗಳನೋಡಿ ಮೇಲೋಡಿ ಬರುವ ರಾಕ್ಷಸರ ಧ್ವನಿಯಂಕೇಳಿ ಪಕ್ಷಿಗಳಧ್ವನಿಯಾಗದಂತೆ ಎದ್ದುಬರುವಾಗ ವಿಹಾರವಂ ಬಿಟ್ಟಿರುವಮಯೂರಂಗಳಂ, ಆಹಾರವಂಮುಟ್ಟದಿರುವಶುಕಂಗಳಂ, ಕಣ್ಣುಗಳೊಳ್ ಕಂಬನಿಗಳಂತುಂಬಿ ಸಂಚಾರವಂಬಿಟ್ಟಿರುವ ಹೆಣ್ಣುಹಂಸೆಗಳಂ, ಭಯದೊಳ್ಮುಳುಗಿ ಕುತ್ತಿಗೆಹಿಡಿದಂತೆ ತುಂಬಿತುಳುಕುವ ದುಃಖದಿಂಕೂಗಲಾರದೆ ಇರುವ ಕೋಗಿಲೆಗಳಂ, ಪಕ್ಕದೊಳಿರುವ ಹೆಣ್ಣುಹಕ್ಕಿಗಳಂಕೂಡ ನೋಡದೆ ರೆಕ್ಕೆಗಳಮರೆಯೊಳ್ ತಲೆಗಳಂಮುದುರಿ ದುಃಖಭಾರವಂಕಾಣುವ ಪಾರಾವತಂಗಳಂ, ಕೆಸರಾದಸರೋವರಂಗಳಂ, ಮತ್ತು ಘೋರೆಂದು ಕೂಗುತ ಭಲ್ಲೆಗಳಂಪಿಡಿದು ಅಲ್ಲಾಡಿಸುತ ಬರುವರಾಕ್ಷಸಭಟರ ಚಲ್ಲಾಟವನೋಡಿ ಶಚೀದೇವಿಯು ಎಲ್ಲಿಪೋದಳೋ, ಎಂದು ಅಲ್ಲಲ್ಲಿ ಅಗಲವಾದ ನೋಟದಿ ನೋಡುತ ಮತ್ತೂ ಎಳೆಹುಲ್ಲುಗಳಂ ಮೆಲ್ಲುವದಕ್ಕೆ ಮನಸ್ಸುಯಿಲ್ಲದೆ ನಿಂತಲ್ಲಿನಿಲ್ಲದೆ ತಲ್ಲಣಂಗೊಂಡ ಹುಲ್ಲೆಗಳಂಕಂಡು ಮಕರಂದವಂಮುಟ್ಟದೆ ಮಂದಮತಿಗಳಾದ ಮದ್ದಿನಗುಳಿಗೆಗಳಂತೆ ಬಿದ್ದಿರುವ ತುಂಬಿಗಳಂ, ಬಾಡಿರುವ ಕುಸುಮಂಗಳಂ, ಮಣಿಗಿರುವ ಚಿಗರುಗಳಂ, ಕಂದಿರುವ ಕಾಯಿಗಳಂಕಂಡು ಕಲ್ಪವೃಕ್ಷವು ಇಲ್ಲದೆ ಇರುವದರಿಂದ ಈ ವೃಕ್ಷಗಳು ಈಪರಿಯಾದವು. ಮತ್ತೂ ಪಕ್ಷಿಗಳವಾಡಂಪೇಳುವದೇನೆಂದು, ಆಲೋಚನೆಯಂಗೈಯುತ ಅಲ್ಲಿಂದಹೊರಟು ತಾನು ಭೂತಭವಿಷ್ಯದ್ವರ್ತಮಾನಂಗಳಂತಿಳಿದು ಇರುವದಾದರೂ ದೈವಮಾಯೆಯಿಂದ ಒಂದೂತೋರದೆ ಮಂಕಾಗಿ ತನ್ನಮನದೊಳ್‌ತಾನೇ ದುಃಖಿಸುತಿರ್ದು ಈಗ ಶಚೀದೇವಿಯು ದೇವಲೋಕವಂಬಿಟ್ಟು ಯಾವಲೋಕದೊಳು ಪುಟ್ಟಿಇರುವಳೋಇಲ್ಲವೋಏಎಂದು, ಭಾವಿಸಿನೋಡಲು ಏನೂ ತೋರದೆ ಇರಲು, ಇದು ಅಮರಾವತಿಯು ಅಹುದೋ ಅಲ್ಲವೋ ನಾನು

ಲೀಲಾಶುಕನೊ; ಇನ್ನಾವನೋ ಎಂದು ತನ್ನಂತಾನರಿಯದೆ, ಸುರೆಯಂ ಕುಡಿದ ನರನಂತೆ ಚಿಂತೆಯಂಗೈದು, ಒಂದು ಘಳಿಗೆ ನಿಂತಲ್ಲಿಯೇ ನಿಂತು, ಮರಳಿ ಇದೇನು ಭ್ರಾಂತಿ ಎನುತ, ಈ ಸಮಯದೊಳ್ ನಾನು ಚಿಂತಿಸಿದರೆ ಮೋಸಬರುವದೆಂದು ತಿಳಿದು ನಾರದನ ಸಮೀಪವನೈದಿ ಅವನಿಗೆ ಮೊಗವಂ ಎಂತು ತೋರಿಸಲಿ, ಆ ನಾರದನು ನೀನು ಯಾಕೆಬಂದೆ ಎಂದು ನುಡಿದರೆ ಏನು ಪೇಳಲಿ, ಇನ್ನು ಇಲ್ಲಿ ಇರಬಾರದೆಂದು ತೆರಳಿ ಬರುವ ಸಮಯದೊಳ್ ಕೆಲವರು ಎದುರಾಗಿರುವ ಅಸ್ತ್ರಂಗಳಂ ಮರತು, ಆಯುಧಂಗಳಂ ಬಿಸುಟು, ಜಾರಿ ಬೀಳುವ ವಸ್ತ್ರಂಗಳಂ ಕಾಣದೆ ಹಿಂತಿರುಗಿ ನೋಡಿ ಅದೋ ಅಸುರರು ಬಂದ್ರು ಉಸುರು ಇದ್ದರೆ ಉಪ್ಪುಮಾರಿಕೊಂಡು ಬದುಕುವಾ ಎಂದು ಪ್ರಾಣಂಗಳಂ ಕೈಗಳಂ ಪಿಡಿದು ಕಾಳಗವೆಂಬುದಂ ಕನಸಿನಲ್ಲಿಯೂ ಕಾಣದಿರುವ ಕಾಡು ಕುರುಬರಂತೆ, ಮತ್ತು ಕೊಬ್ಬಿರುವ ಹೆಬ್ಬುಲಿಯಂ ಕಂಡ ಕಪಿಗಳ ಗುಂಪುಗಳಂತೆ ಬೆದರಿ ಪೋಡ್ಪೋಡಿ ಬೀಳುತ್ತಿರಲು, ಕೆಲವರು ಮೂರ್ಛಿತರಾಗುತ್ತಿರಲು, ಕೆಲವರು ಪೆಟ್ಟಿಗಳಂತಿ:ದು ಪಲಾಯನವಂಗೈಯ್ಯುತ್ತಿರಲು, ಈಪರಿಯಾಗಿರುವ ದೇವತೆಗಳಂ ಕಂಡು ಸುರರೆಂದರೇನು, ಬೆದರಿ ಓಡುವದೆಂದರೇನು, ಕಾಲವಿಪರೀತವಾಯಿತೆನುತ ಪುತ್ರರಿಂದೇನು, ಮಿತ್ರರಿಂದೇನು, ಬಲವಿದ್ದರೇನು, ಧನವಿದ್ದರೇನು, ಅರಸು ಇಲ್ಲದ ಊರು ಆಪತ್ತಿಗೆ ತೌರು, ಅರಸಿನಿಂದಲೆ ಲೋಕದೊಳ್‌ಸತ್ಯವು, ಧೈರ್ಯವು. ಪರಾಕ್ರಮವು, ಐಶ್ವರ್ಯವು ಉಂಟಾಗುವದು, ಈಗ ಇಂದ್ರನು ಇಲ್ಲದೆ ಇರುವದ್ದರಿಂದ ದೇವತೆಗಳೆಲ್ಲರು ಮುಂದಭಾಗ್ಯರಾದರೆಂದು ಸಂಕಟ ಪಡುತ ಮುಂದುಗಡೆಯೊಳ್ ನೋಡುವಾಗ ಓಡುವರಮೇಲೆ ಪಾಶಂಗಳಂ ಬೀಸಿರಿ. ನಿಂತಿರುವರಂ ಕುಂತದಿಂ ಇರಿಯಿರಿ. ನಡೆಯುವರಂಹಿಡಿಯಿರಿ. ತಡೆಯುವರಂ ಕಡಿಯಿರಿ ಎಂದು ಕೂಗುತ ಆಯುಧಂಗಳಂ ಪಿಡಿದು ಅಟ್ಟಹಾಸವಂ ಮಾಡಿ ಭುಜಂಗಳಂ ತಟ್ಟುತ ಶತವಿಕಾರವಾದ ಆಕಾರದಿಂ ಭಯಂಕರವಾದ ಅಲಂಕಾರದಿಂದೊಪ್ಪಿ ಬರುತಲಿರುವ ರಾಕ್ಷಸರೊಳ್ ಕೆಲವರು ಪಾಕಶಾಸನನಂ ಪಾಕಶಾಲೆಯೊಳ್ ಕೂಡಾ ಹುಡುಕಿದೆವು, ಅವನು ಭೂಲೋಕವಂ ಸೇರಿರುವನೋ, ಪಾತಾಳವಂ ನೈದಿದನೋ ತಿಳಿಯದೆಂದು ನುಡಿಯುತ್ತಿ

ರಲು, ಕೆಲವರು ಅವನಿಂದ ನಮಿಗೇನು ಬೇಕಾದವರು ನೋಡಿರೆನ್ನುತ್ತಿರಲು, ಕೆಲವರು ಬಹು ಶುಚಿಯಾದ ಶಚೀದೇವಿಯು ರಕ್ಕಸರಿಗೆ ಶಿಕ್ಕುವಳಲ್ಲವೆನ್ನುತ್ತಿರಲು, ಕೆಲವರು ಅವಳು ಮಾಸಲಾಗಿರಲಿ, ರಂಭೆಯ ಕುಚಕುಂಭಂಗಳಂ ಪಿಡಿದು ಸಂಭೋಗವಂ ಮಾಡುವಾ ಎನ್ನುತ್ತಿರಲು, ಕೆಲಬರು ಮೇನಕೆಯು ನಮ್ಮ ಮಾನಕ್ಕೆಸರಿಯಲ್ಲವೆಂದು ನುಡಿಯುತ್ತಿರಲು, ಕೆಲವರು ಊರ್ವಶಿಯು ಯಾರವಶವಾದಳೋ ನೋಡಿರಿ ಎನ್ನುತ್ತಿರಲು, ಕೆಲವರು ತಿಲೋತ್ತಮೆಯು ಉತ್ತಮನಿಗ ದಕ್ಕುವಳೆನ್ನುತ ಇದಂತಿರಲಿ ಅರಸಿಗೆ ಐರಾವತವು, ಇವನಿಗೆ ಕಾಮಧೇನುವು, ಅವನಿಗೆ ಕಲ್ಪವೃಕ್ಷವು, ನನಿಗೆ ವ್ಯೋಮಯಾನವು, ಚಿಂತಾಮಣಿಯು, ನಮ್ಮ ಚಿರಂಜೀವಿಗೆ ಈಪರಿ ಇಂದ್ರನ ಭಾಗ್ಯವಂ ಪಾಲುಮಾಡಿಕೊಳ್ಳುವಾ ಎಂದು ನುಡಿಯುತ ಅಮರಾವತಿಯ ಮಣಿಮಯಂಗಳಾದ ಪ್ರಾಕಾರಂಗಳಂ ಪೊಕ್ಕು ಗೋಪುರಂಗಳನ್ನೇರಿ ಇದು ನಂದನವನದ ಮಾರ್ಗ, ಅದೋ ದೇವಗಂಗೇ, ಇದು ಇಂದ್ರನಸಭೆ, ಇದು ಶಚೀದೇವಿಯ ಅಂತಃಪುರ, ಅದು ಜಯಂತನಚಂದ್ರಶಾಲೆ, ಅದು ರಂಭಾದಿಗಳ ಬೀದಿಗಳು, ಅಲ್ಲಿ ಕಾಣುವದು ಬೃಹಸ್ಪತಿಯ ಮನೆ ಎಂದು ಪೇಳುತ, ದೇವತೆಗಳು ಏನು ಬುದ್ಧಿಹೀನರೋ, ಈ ಕೋಟೆಯೊಳಿರ್ದು ಕಾಳಗವಂ ಮಾಡಬಾರದೆ, ಇಲ್ಲದಿರ್ದರೆ ನಮ್ಮಲ್ಲಿ ಊಳಿಗದೊಳ್ ನಿಲ್ಲಬಾರದೇ ಎಂದು ನುಡಿಯುತ ದೇವಸ್ತ್ರೀಯರುಗಳು ಅಳುವದಂ ಕರ್ಣಾನಂದವಾಗಿ ಕೇಳುತ, ವೇಷಂಗಳಂ ಧರಿಸಿ ಓಡಿಪೋಗುವ ಋಷಿಗಳಂ ಗಡ್ಡವಂಪಿಡಿದು ಎಳತಂದು ನಿಮ್ಮ ಆಶೀರ್ವಾದದಿಂದಲೇ ನಮಿಗೆ ಶ್ರೇಯಸ್ಸು ಉಂಟಾಗುವದು, ನಿಮ್ಮಂ ನವಿದರೆ ಸಕಲೈಶ್ವರ್ಯವು ಬರುವುದೆಂದು ನುಡಿದು ಕಿವಿಗಳಂಪಿಡಿದು ಮೊಗದೊಳಿರ್ದ ಪುಂಡ್ರಗಳಂ ನೆಕ್ಕುತ, ಕರ್ಮದೇವತೆಗಳಂ ಕಂಡು ಎಲೈ! ಧರ್ಮಾತ್ಮರುಗಳಿರಾ ನೀವು ಯಜ್ಞಂಗಳಂ ಮಾಡಿ ಸ್ವರ್ಗವಂ ಪಡೆದಿರುವಿರಿ, ನಿಮ್ಮನ್ನೇ ಯಜ್ಞವಂ ಮಾಡುವೆವೆಂದು ಕಾಲುಕೈಗಳಂ ಕಟ್ಟಿ ಸ್ವಾಹಾ ಎಂದು ಬೆಂಕಿಯೊಳ್ ಕೆಡವಿ ಪೂರ್ಣಾಹುತಿ ಆಯಿತೆಂದು ಹಾಸ್ಯವಂ ಮಾಡಿ ಕೈಗಳಂ ಕಟ್ಟುತ, ಇದಲ್ಲದೆ ಸುರಸುಂದರಿಯರ ಮಂದಿರಂಗಳಂ ಪೊಕ್ಕು ನಿಮ್ಮ ಅರಸಾದ ಪುರಂದರನು ಮಂದರಪರ್ವತದಲ್ಲಿ ಬಿದ್ದಿರುವನೋ, ಎಲ್ಲಿ ಅಬಂದ

ರೆಯಾವನೋ ಅವನ ಆನೆ ಇನ್ನೇನು, ದೇವತೆಗಳೆಲ್ಲರೂ ವನಗಳ ಪೊಂದೆಯುಂತೆ ಸಂದಿಗೊಂದಿಯೊೞ್ ಬಿದ್ದು ಸಮಾಚಾರವಿಲ್ಲದೆ ಪೋದರು, ಈಗ ನಮ್ಮೊಂದಿಗೆ ಸಂದೇಹವಿಲ್ಲದೆ ವಿಹಾರಕ್ಕೆ ಬಂದರೆ ಆನಂದಪಡಿಸುವೆವು, ತೊಂದರೆಯಂ ಮಾಡಿದರೆ ತಿಂದು ಬಿಡುವೆವು ಎಂದು ನಾಮುಭಯದಿಂ ಬಡಂಬಡಿಸುವ ರಾಕ್ಷಸರ ನುಡಿಗಳಂ ಕೇಳಿ ಬೆದರಿದ ತರುಣಿಯರು ಕೆಲವರು ಮೂರ್ಛೆಗೊಂಡಿರಲು. ಕೆಲವರು ಮುಗ್ಧೆಯರು ಇನ್ನು ಬದುಕಬಾರದೆನುತ ದುಃಖದಿಂದಿರಲು. ಕೆಲವರು ಬಾಲೆಯರು ನಮ್ಮ ಹಣೆಯೊೞ್ ಏನು ಬರದಿರುವದೋ ಕಾಣೆವು ಈಗ ದಾನವರಪಾಲಾದೆವೆಂದು ನುಡಿಯುತ್ತಿರಲು. ಇಂತು ಸಂತಾಪಗೊಂಡ ದೇವಕಾಂತೆಯರು ಚಿಂತೆಯೊೞ್ ಮುಳುಗಿ ಕತ್ತಲೆಯಾದ ರಾತ್ರಿಯೊೞ್ ಗೂಬೆಗಳ ಗುಂಪಿನೊಳಗೆ ಶಿಕ್ಕಿದ ಚಕ್ರವಾಕದ ಹೆಂಣು ಹಕ್ಕಿಗಳಂತೆ, ಮುದಿಬೆಕ್ಕುಗಳ ಬಾಯೊಳಗೆ ಸಿಕ್ಕಿದ ಮರಿಗಿಣಿಗಳಂತೆ, ಕಿರುಬಗಳ ತಂಡಗಳಂ ದಂಡೆಯೊೞ್ ಕಂಡು ಭಯಗೊಂಡು ಬೆಪ್ಪಾಗಿ ಬಿಟ್ಟ ಕಂಣುಗಳಂ ಬಿಟ್ಟಂತೆ ಬೆದರಿ ನಿಂತ ಹೆಂಣು ಹುಲ್ಲೆಗಳಂತೆ ಇರ್ದು ತಮ್ಮ ತಮ್ಮ ಪತಿಗಳಂ ನೆನದು ನಮಗೆ ಇನ್ನೇನು ಗತಿಯೆಂದು ಮಾನಕ್ಕೆ ಹಾನಿಬಂದರೆ ಪ್ರಾಣಗಳಂ ಬಿಡುವೆವೆಂದು ಮನದೊೞ್ ನಿಶ್ಚಯಮಂಗೈದಿರುವಷ್ಟರೊೞ್ ಪ್ರೌಢೆಯರಾದ ಕೆಲವರು ಸ್ತ್ರೀಯರು ಬೆದರದೆ ರಾಕ್ಷಸರ ಎದುರುಬಿದ್ದು ಎಲೈ ನೀಚರಾದ ರಾಕ್ಷಸರುಗಳಿರಾ ಪತಿವ್ರತೆಯರಾದ ನಮ್ಮಂ ಈಪರಿಯಾಗಿ ಬಗೆಬಗೆಯಾದ ದುರ್ಭಾಷೆಗಳಿಂ ಬೊಗಳುವದಕ್ಕೆ ನಿಮಗೆ ಎಂತು ಬಾಯಿ ಬಂತು, ನಿಮಗೆವಡಹುಟ್ಟಿದ ಹೆಂಣುಮಕ್ಕಳು ಇಲ್ಲವೇ, ಮತ್ತೂ ನಿಮ್ಮ ಕಾಂತೆಯರಂ ಅನ್ಯಪುರುಷರು ಏಕಾಂತಕ್ಕೆ ಕರದರೆ ನೀವು ಸುಮ್ಮನಿರುವಿರಾ ಎಂದು ನುಡಿದು ಅಗ್ನಿ ಹೋಮಕ್ಕೆ ಯೋಗ್ಯವಾದ ಪಾಯಸವು ನಾಯಿಗಳಿಗೆ ಆಹಾರವಾಯಿತೇ, ಹೋಯಿತೆ ನಮ್ಮ ಘನತಿತನವು ಹರಹರಾ ಎಂದು ಪ್ರಲಾಪಿಸುತ ನಮಗೆ ಈ ಗಂಡವು ಬರಬಹುದೇ, ಗಂಡಸರು ಹೆಂಡರಂ ಬಿಟ್ಟು ಹೋಗುವುದುಂಟೆ, ಬ್ರಹ್ಮನು ಅವರಮನಸ್ಸುಗಳಂ ಗುಂಡುಕಲ್ಲುಗಳಿಂದ ಮಾಡಿರುವನು, ಸಿಂಹಗಳಿರುವ ಗುಹೆಗಳು ನರಿಗಳಿಗೆ ಆಲಯವಾಯಿತೇ ಎನುತಲಿರುವಾಗ ಕೆಲವರು ಎಡೆತೊಂಟರಾದ ರಾ

ಷ್ಟನ ಭಂಟರು ದೇವಸ್ತ್ರೀಯರ ಜಡೆಗಳಂ ಪಿಡಿದು ಎಳೆಯುತ ನಡುಗು ವ ತೊಡೆಗಳಂ, ಹನಿಯುವ ಕಂಣ್ಣೀರುಗಳಂ, ತಡೆದುಬರುತಲಿರುವಗದ್ಗದ ಸ್ವರಗಳಿಂ ದುಃಖಿಸುತಲಿರುವ ಕೆಲವು ಭಾಮೆಯರಂ ಕುರಿತು ನಿಮ್ಮ ಧರ್ಮ ಶಾಸ್ತ್ರಮಾರ್ಗವಂತಿರಲಿ, ಇದರಿಂ ಬಂದ ಕರ್ಮವು ನಮಗಿರಲಿ ಎಂದು ಮ ನಬಂದಂತೆ ಮಾತನಾಡುತ ಶೀರೆಗಳ ನೆರಿಗೆಗಳಂ ಪಿಡಿದೆಳೆಯುತ, ಅವರ ಪ ತಿಗಳಂ ಪರಿಪರಿಯಾಗಿ ಜರಿದು, ಮಾರನ ವಿಕಾರಂಗಳಿಂ ತಾಳ್ದ ಮಾನವಂ ಕಳೆಯುತಲಿರುವ ಸಮಯದೊಳ್ ಕೆಲವರು ರಾಕ್ಷಸರೊಳ್ ವಿಚಕ್ಷಣ ರಾದವರು ಬಂದು ಎಲೈ ಮಾನಿನಿಯರಾ ಕೇಳಿ ನೀವು ದೇವಕಾಂತೆಯರು ನಾವು ಪೂರ್ವದೇವತೆಗಳು ನಿಮಗೂ ನಮಗೂ ಸಂಬಂಧವಾಗಬಹುದು, ಈ ಸ್ವರ್ಗಕ್ಕೆ ನಾವು ಮೊದಲು ಬ ದವರು, ನಿಮ್ಮ ಪತಿಗಳು ಹೊಸಬರೆಂದು ಅನ್ಯಾಯದೊಳ್ ಬಂದು ನ್ಯಾಯದಂತೆ ಮೃದುವಾಗಿ ನುಡಿಯುತಿರಲಾ ಮಾತಂ ಕೇಳಿ ಅಳುವ ಅಬಲೆಯರ ಪ್ರಲಾಪಗಳಂ ಕೇಳಿ ಇಂದ್ರನ ಐಶ್ವ ರ್ಯವು ಈರೀತಿಯಾದುದೇ ಎಂದು ಪೇಳಿ ರಾಮರಾಮಾ ಎಂದು ಕಿವಿಗಳಂ ಮುಚ್ಚಿ ಇದಂ ಕೇಳಿದರೆ ಕಲ್ಲುಗಳಾದರೂಕರಗುವವು, ಬಹುಪಾಪಿಯಾದ ನಾನು ಇನ್ನೂ ಬದುಕಿರುವೆನು ಎಂದು ತನ್ನಂ ತಾನೇ ನಿಂದಿಸುತ ಅಲ್ಲಿಂದ ವೇಗದಿಂ ಬರುತ ಮುಂದುಗಡೆಯೊಳ್ ಕುರವಿಂದಮಣಿಗಳಂ ಕಟ್ಟಿರುವ ಪಟ್ಟದರಸಿಯಾದ ಶಚೀದೇವಿಯು ಪವಡಿಸುವ ಮಂದಿರವಂನೋಡಿ ಬಾಡಿದ ಕೊಕ್ಕುಗಳಂ ನಾಲಿಗೆ ಯಿಂದ ಸವರುತ ಮನದೊಳ್ ಇದು ಶಚೀದೇವಿ ಯು ಚತುರಂಗವಂ ಆಡುವಮಂಟಪವು, ಇದುಪಗಡೆಯಾಡುವ ಹಜಾರವು, ಇದು ವೀಣೆಯುಂ ಪಿಡಿದು ಗಾನಪಂಗೈವಸ್ಥಳವು, ಇದು ಮಣಿಕುಂಡಲ ಮೊ ದಲಾದ ಆಭರಣಂಗಳಂ ಮಡಗಿರ್ದ ಭಂಡಾರವು, ಇದು ಅಲಂಕಾರವಂಮಾ ಡಿಕೊಳ್ಳುವ ಮನೆಯು, ಇದು ಸರಸಕವಿತಾವಿಚಾರವಂ ಮಾಡುವ ಹಜಾರ ವು ಎಂದು ಬ್ಯಾರೆ ಬ್ಯಾರೆ ನೋಡುತ ಮಧುರವಾದ ಅನ್ನವಂ ತುಂಬಿರುವ ಚಿನ್ನದ ಬಟ್ಟಲುಗಳಂ, ಕೆಂಪುಗಳ ಗುಂಪಿನಂತೆಸುಲಿದು ಮಡಗಿರುವದಾಳಿಂ ಬದ ಬೀಜಗಳಂ, ಸಿಪ್ಪೆಗಳಂತೆಗದು ಪಚ್ಚಕರ್ಪೂರವಂ ಸಕ್ಕರೆ ತುಪ್ಪದೊ ಳ್ ಇರಿಸಿರುವ ಕಳಿತ ರಸಬಾಳೆ ಹಂಣುಗಳಂ ತೊಳೆಗಳಂ, ತೆಗದು ತಿಳಿ

ನೀರಿನಿಂ ತೊಳೆದು ತಳಿಗೆಯೊಳಿಟ್ಟಿರುವ ಪಕ್ವಂಗಳಹ ಹಣ್ಣುಗಳಂ
ಸಹಾ ಕಂಡು ಇಂತಿವನ್ನು ಫಲಂಗಳಂ ಏಗೆ ತಿನ್ನೋರು ಮುಡಗುವರು, ಎನ್ನಂ
ಇನ್ನಾರು ಕಾಪಾಡುವರೆಂದು ಕಣ್ಣುಗಳೊಳ್ ನೀರುತುಂಬಿ ಗೋಳಿಪ್ಪಿ
ಡಿದಂತಾಗಿ ದುಃಖದಿಂ ಕಳವಳಿಸುತ್ತ ನನ್ನಂ ಈರೀತಿಯಂ ಮಾಡಿ ತಾನೆಲ್ಲಿ
ಹೋದಳೋ, ಯಾರಲ್ಲಿ ಸೇರಿದಳೋ ಇಂತಲ್ಲದೆ ದೈವವು ನಮ್ಮ ಶಚೀ
ದೇವಿಯ ಕಣ್ಣುಗಳ ಕಾಂತಿಯಂ ಕಮಲಂಗಳೊಳ್ ಇಟ್ಟು, ಕುಚಂಗಳ
ಕಾಠಿಣ್ಯವಂ ಗಜಕುಂಭಗಳೊಳ್ ಮಡಗಿ, ಕುರುಳುಗಳ ಅಂದವಂ ತುಂಬಿ
ಗಳೊಳ್ ಇರಿಸಿ ಮೊಗದ ಸೊಬಗಂ ಚಂದ್ರನಿಗೆ ಕೊಟ್ಟು, ನಡುವಿನ ಬಡ
ತನವಂ ಆಕಾಶದೊಳ್ ಅಳವಡಿಸಿ, ಮಾತುಗಳ ಮಾಧುರ್ಯವಂ ಮಕರಂ
ದದೊಳ್ ಮಡಗಿ ಈ ಪರಿಯಾಗಿ ಸೌಂದರ್ಯವನೆಲ್ಲವ ಹಂಚಿ ಅವಳ
ಶರೀರವು ತಾನೇನುಂಗಿದಂತಾಯಿತು, ಈ ಶಚೀದೇವಿಯು ಈರೀತಿಯಾದ
ಕಾರಣ ಹೀಗೆ ನಾನು ಅಪವಿಪಾಲಾದೆನು, ಇನ್ನೇನು ಮಾಡುವೆನು, ಎಲ್ಲಿ
ಹೋಗಲೀಯೆಂದು ಬಹಳವಾಗಿ ಚಿಂತೆಯಂ ಮಾಡಿ ಮತ್ತೊಂದು ಪೂರ್ವ
ವೃತ್ತಾಂತವಂ ನೆನೆದು ದುಃಖದಿಂ ಅಲ್ಲಿಂದ ಹೊರಟು ಆದಿಭಾಗದೊಳ್
ಯಜ್ಞೇಶ್ವರನು ನಾರದನೊಡನೆ ಯಾಕೆ ವಿವಾದವಂ ಮಾಡಿದನೋ, ಆಗ
ನಾರದನು ಪಕ್ಷಿಗಳಿಂದಲಾದರೂ ಪರತತ್ವವಂ ಪೇಳಿಸುವೆನೆಂದು ಪ್ರತಿಜ್ಞೆ
ಯಂ ಯಾಕೆ ಮಾಡಿದನೋ; ಮಾಡಿದರೇನಾಯಿತು ಬ್ರಹ್ಮನು ಮನೋಹ
ರವಾದ ಆಕಾರದಿಂದ ಶುಕವಾಗಿ ಆಕಾಶದಲ್ಲಿರುವಂತೆ ನನ್ನಂ ಯಾಕೆ ಪುಟ್ಟಿ
ಶಿದನೋ; ಪುಟ್ಟಿಸಿದರೇನಾಯಿತು ಭೂಲೋಕವಂ ಪೊಕ್ಕು ವಜ್ರರಾಯಂಗೆ
ಧರ್ಮೋಪದೇಶಂಗಳಂ ಮಾಡಿ ದೇವದಾಸನ ಬಳಿಯಲ್ಲಿ ಇರುವದು ಬಿಟ್ಟು
ಮರಳಿ ನಾರದನ ಸಮೀಪಕ್ಕೆ ನಾನ್ಯಾಕೆ ಬಂದೆನೋ: ಬಂದರೇನಾಯಿತು ಈ
ನಾರದನು ಇಂದ್ರನ ಸುಂದರಿಯಾದ ಶಚೀದೇವಿಯ ಬಳಿಯಲ್ಲಿರುವದೆಂದು
ನನಿಗ್ಯಾಕೆ ನಿಯಮಿಸಿದನೋ ನಿಯಮಿಸಿದರೇನಾಯಿತು ಅವಳೊಡನೆ ನು..
ಗಳಿಂದಲೂ ನಡತೆಗಳಿಂದಲೂ ಎಡೆಬಿಡದೆ ಪತಿವಿಚಾರದ ಮಮತೆಯಂ
ಮಾತ್ರಕ್ಕೆ ಬೆಳಸಿದನೋ; ಬೆಳಸಿದರೇನಾಯಿತು. ಸುಖದಿಂದಿರುವಾಗ ದು
ರ್ವಾಸ ಋಷಿಯು ಬಂದು ತನಗೆ ಪರಶಿವಪ್ರಸಾದಲಬ್ಧವಾದ ಸುವರ್ಣಕ

ಮಲಮಾಲೆಯಂ ಇಂದ್ರಂಗೆ ಯಾಕೆ ಕೊಟ್ಟನೋ, ಕೊಟ್ಟರೇನಾಯಿತು ಇಂದ್ರನು ಇದು ಮಹಾ ಪ್ರಸಾದವೆಂದು ತಿಳಿಯದೆ ಉಪೇಕ್ಷೆಯಂ ಯಾಕೆ ಮಾಡಿದನೋ, ಉಪೇಕ್ಷೆಮಾಡಿದರೇನಾಯಿತು ದೂರ್ವಾಸ ಋಷಿಯು ಈ ಅಪರಾಧವಂ ಕ್ಷಮಿಸದೆ ಕೋಪದಿಂ ಇಂದ್ರಂಗೆ ಶಾಪವಂ ಯಾಕೆ ಕೊಟ್ಟನೋ; ಕೊಟ್ಟರೇನಾಯಿತು ಇಂದ್ರಂಗೆ ಬಂದ ಶಾಪವು ಶಚೀದೇವಿಗೆ ಬರುವದಕ್ಕೆ ಶಾಸ್ತ್ರವೆಲ್ಲಿರುವದು; ಇದ್ದರೂ ಇರಲಿ ಸುಖದಿಂದ ಕೊಬ್ಬಿ ಮಲಗಿರುವ ನನ್ನಂ ಎಬ್ಬಿಸದೆ ತಬ್ಬಲಿಯಂತೆ ಮಾಡಿ ಮಮತೆಯಂ ಮರತು ಶಚೀದೇವಿಯು ತಾನೊಬ್ಬಳೆ ಮರೆಮಾಚಿ ಮಾಯವೆಂತಾದಳೋ; ಆದರೇನಾಯಿತು ಲೋಕದೊಳ್ ನಡೆಯುವದನೆಲ್ಲವಂ ತಿಳಿದಿರುವ ನನಿಗೆ ಏನೂ ತಿಳಿಯದಂತೆಯಾಕಾಯಿತೋ, ನಾನೇನು ಪಾಪವಂಮಾಡಿದೆನೋ, ಯಾರ ಕಾರ್ಯವಂ ಕೆಡಿಸಿದೆನೋ, ಯಾವ ಮಹಾತ್ಮರಿಗೆ ಅಪರಾಧವಂಗೈದೆನೋ ನನ್ನ ದೆಶೆಇಂದಲೇ ಶಚೀದೇವಿಯ ಭಾಗ್ಯವೆಲ್ಲಾ ನಾಶವಾಯಿತೋ ಎಂದು ತವಕಿಸುತ ಇಲ್ಲಿರುವತನಕ ಈ ಶೋಕವು ತಪ್ಪದು ಎಲ್ಲಾದರೂ ಪೋಗುವಾ ಎಂದು ಬರುತ ನಾರದನಲ್ಲದೆ ಇನ್ಯಾರೂಇದನ್ನು ಪೇಳುವರು, ಆಮುನಿಯು ಇದ್ದ ಬಳಿಗೆ ಪೋಗುವಾ ಎಂದು ತೆರಳಿ ಘಾಳಿಯಂತೆ ವೇಗವಂ ತಾಳಿ ಬರುತ ಯಕ್ಷರು ಇರುವ ಮನೆಗಳೊಳ್ ರಾಕ್ಷಸರಂ, ಕಿನ್ನರರಿರುವ ಮಂದಿರಗಳೊಳ್ ಸೇರಿರುವ ದಾನವರಂ, ಗಂಧರ್ವರು ಇರುವಮನೆಗಳೊಳ್ ದೈತ್ಯರಂ, ಅಮೃತಕಲಶವಿದ್ದ ಸ್ಥಳದೊಳ್ ಮದ್ಯ ಘಟವಂ, ಮಾಂಸ ಪಿಂಡಗಳಂ ಕೂಡಾ ನೋಡಿ ಅಧರ್ಮವೇ ಧರ್ಮವಾಯಿತು, ಅಮೃತವೇ ವಿಷದಂತೆ ತೋರುವುದು, ಸ್ವರ್ಗವೇ ನರಕವಾದುವು, ನರಕವೇ ಸ್ವರ್ಗವಾದುದು, ಕಾಲಮಹಿಮೆ ಎಂತುಟೋ ಋಷಿಗಳೊಳ್ ಏನು ಮಹಿಮೆ ಇರುವದೋ ಎಂದು ಆಶ್ಚರ್ಯವಂ ವ್ಯಸನವಂ ಕೂಡಾ ಪಡುತ, ಮತ್ತೂ ಭೂತ ಪಿಶಾಚ ಗಣಗಳು ಉಗುಳಿದ ತಂಬುಲಗಳಿಂದ ತುಂಬಿ ಕಾಲಿಡುವದಕ್ಕೆ ನೆಲವಿಲ್ಲದಂತೆ ಕೆಟ್ಟಿರುವತೀರಂಗಳುಳ್ಳ ದೇವಗಂಗೆಯಂನೋಡಿ, ನಿನಿಗೂ ಈ ಭಂಗ ಬರಬಹುದೇ ಎಂದು ಹಂಬಲಿಸುತ್ತ ಅಲ್ಲಿಂದ ಹೊರಟು ಕೋಟಿಗಾವುದ ದೂರವಾದ ಸ್ವರ್ಗಲೋಕವಂದಾಟಿ ಅಲ್ಲಲ್ಲಿರುವ

ಶೋಕಂಗಳಂ ನೋಡುತ್ತ. ನಾರದರಆಶ್ರಮವಂ ಕುರಿತು ಬಂದು ಸನತ್ಕು ಮಾರನೊಡನೆಬ್ರಹ್ಮವಿಚಾರವಂ ಮಾಡುತ್ತಿರುವನಾರದನಂ ಕಂಡು ಶೋಕವಂಬಿಟ್ಟು ಧೈರ್ಯವಂತಾಳಿ ಕೈಗಳಂಮುಗಿಯಲು. ನಾರದನು ಆದುಃಕ್ಕು ಇದು ಬರುವದಕ್ಕೆ ನಿಮಿತ್ತವೇನೆಂದು ಯೋಚಿಸುತ್ತ ದೂರ್ವಾಸನು ಇಂದ್ರ ಪುರವಂಪೊಕ್ಕು ಏನೋ ಅನರ್ಥವಂ ಮಾಡಿರುವನೆಂದು ತಿಳಿಯಲಷ್ಟರೊಳ್ ಆ ಶುಕವು ಶ್ರಮದಿಂ ಬಂದು ಮಾತನಾಡುವದಕ್ಕೆ ಬಾಯಿಬಾರದೆ ನಾರದನ ಚರಣಂಗಳಿಗೆರಗಿ ಸುಮ್ಮನಿರಲು. ಆವಾಗ ನಾರದನು ಆ ಶುಕವಂ ಎತ್ತಿ ಮುದ್ದಾಡಿ ಕಂಣೀರುಗಳಂ ಒರಸಿ ಮತ್ತೇನು ಸುದ್ದಿಯೆಂದು ದರ್ಭೆಯಗದ್ದಿಗೆಯಮೇಲೆ ಕುಳ್ಳಿರಿಸಿ ಕೇಳಲಾಶುಕವು ನಿಮಿಷಮಾತ್ರ ಸುಮ್ಮನಿದ್ದು ಬಳಿಕ ಸ್ವರ್ಗದೊಳ್ ನಡೆದ ವೃತ್ತಾಂತವೆಲ್ಲವಂನುಡಿದು ಎಲೈ ಸ್ವಾಮಿಯೇ ಸ್ವರ್ಗದಲಕ್ಷ್ಮಿಯಂ ದೈವವೇ ಕದ್ದುಕೊಂಡು ಪೋದಂತಾಯಿತು, ಆ ದೂರ್ವಾಸಋಷಿಯನುಡಿಯೊಳ್ ಏನುಮಹಿಮೆಯಿರ್ದುದೋ ನಾನು ಮೊದಲಿದ್ದರೀತಿಗೆಈಗ ಈಪಾಡಾಯಿತೆಂದುನುಡಿಯುತ್ತ ಶೋಕವಂಗೈಯುತ್ತಿರಲು. ನಾರದನು ಎಲೈ ಶುಕವೆ! ಧೀರನಾಗಿರುವ ನೀನು ಭಯಪಡಬೇಡವೆಂದು ಮೈದಡವಿ ಪೇಳುವೆನು ಕೇಳು, ಈಗ ಭೂಲೋಕದೊಳ್ ಕೆಲವು ದಾನವರುಪುಟ್ಟಿ ಮಾನವರಂ ಬಾಧಿಸುವರು, ಪತಿವ್ರತಾಸ್ತ್ರೀಯರುಗಳ ಮಾನವಂ ಕಳೆಯುವರು, ಯಜ್ಞಂಗಳಂ ಭಗ್ನಂಗಳಂಮಾಡುವರು, ಪಿತೃಗಳಿಗೆ, ದೇವತೆಗಳಿಗೆ ಕೂಡಾ ಆಗುವ ಹವ್ಯಕವ್ಯಂಗಳಂನಿಲ್ಲಿಸಿ ಬ್ರಹ್ಮಋಷಿಗಳಂ ಬಾಧಿಸುತ್ತ ಮದದಿಂ ಹೆಚ್ಚಿರುವರು, ಅವರಂ ಸಂಹರಿಸಬೇಕೆಂದು ಆಲೋಚಿಸಿಯಿದ್ದ ಇಂದ್ರಂಗೆ ಸರ್ವಜ್ಞನಾದ ದೂರ್ವಾಸಮುನಿಯು ಸರ್ವಾಣಿಯ ಆಜ್ಞೆಯಿಂದಲೇ ಈ ಕಾರ್ಯವಂ ನಿರ್ವಹಿಸಬೇಕೆಂದು ಬಂದು ಒಂದು ನಿಮಿತ್ತವಾಗಿ ಶಾಪವಂ ಕೊಟ್ಟಿರುವದು ಲೋಕೋಪಕಾರವೆಂದು ನುಡಿದು, ಈಗ ದೇವೇಂದ್ರನು ಭೂಮಿಯೊಳ್ ಮೆರೆವ ಕರ್ನಾಟಕ ದೇಶವನ್ನಾಳುವ ಸುಚರಿತ್ರರಾಯಂಗೆ ಮಗನಾಗಿ ಪುಟ್ಟಿರುವನು, ಅವನ ಪಟ್ಟದರಸಿಯಾದ ಶಚೀದೇವಿಯು ಕಳಿಂಗದೇಶದ ರಾಜನಾದ ವಿಜಯವರ್ಮನಿಗೆಮಗಳಾಗಿಜನಿಸಿ ಇರುವಳು. ವಜ್ರಾಯುಧವು, ಐರಾವತ, ಉಚ್ಚೈಶ್ರವಸ್ಸು,

ಚಿಂತಾಮಣಿ,ಕಲ್ಪವೃಕ್ಷಗಳು, ಕಾಮಧೇನುವು,ಅಪ್ಸರಸ್ತ್ರೀಯರುಗಳು, ಪ್ರೋ ಮಯಾಸವು ಇದೆಲ್ಲವು ಭೂಮಿಯೊಳ್ ಅಲ್ಲಲ್ಲಿ ನೇರಿರುವವು, ಆದ್ದರಿಂದ ನೀನು ಭೂಮಿಯಂ ಕುರಿತು ಪೋಗಿ ಕಳಿಂಗರಾಜಪುತ್ರಿಯಾದ ಸೌಗಂಧಿ ಕಾದೇವಿಯ ಸಮಿಪವಂನೈದಿ ನಿನ್ನೊಳ್ ಅವಳಿಗೆ ಮಮತೆಪುಟ್ಟುವಂತೆ ಸತತವುನ್ನುಂಟುಮಾಡಿ ಸ್ವಯಂವರವಂಗೈಸಿ, ಅದರೊಳ್ ಐರಾವತಾದಿ ವಸ್ತುಗಳಂ ಒಂದೊಂದುಭಾರಿಗೆ ಒಂದೊಂದು ಪಣವಾಗಿ ಪೇಳಿಸಿ ಸ್ವಯಂವರಾರ್ಥವಾಗಿ ಬಂದಿರುವ ರಾಜಮಂಡಲಿಯೊಳ್ ಸಮರ್ಥನಾದ ಸುಚರಿತ್ರ ಮಹಾರಾಯನ ಪುತ್ರನಾದ ಸುಗಂಧರಾಜೇಂದ್ರನಿಂದ ಬಂದ ಬಳಿಕ ಆ ಕುಮಾರಂಗೆ ಸೌಗಂಧಿಕಾದೇವಿಯುಂಪರಿಣಯುವಾಗುವಂತೆ ಮಾಡುವನಾಗು, ಇಲ್ಲದಿದ್ದರೆ ರಾಕ್ಷಸರಿಗೆ ಶಿಕ್ಷೆಯಾಗಲಾರದು ನೀನು ಪೂರ್ವದೊಳ್ ನನ್ನ ಆಜ್ಞೆಯಿಂದ ಭೂಲೋಕಕ್ಕೆ ಪೋಗಿ ವಿಕ್ರಮರಾಯಂಗೆ ಪೇಳಿದತತ್ವಮಾರ್ಗದ ಕಥಗಳೆಲ್ಲವುಕೂಗಲೂ "ಶುಕಸಪ್ತತಿ' ಕಥೆಗಳೆಂದು ಪ್ರಸಿದ್ಧಂಗಳಾಗಿ ಇರುವವು, ಆದ್ದರಿಂ ಮತ್ತೂ ಈಗ ನೀನು ಭೂಲೋಕವಂ ಕುರಿತು ಪೋಗಿ ಸಕಲ ದೇವಋಷಿಗಳಿಗೂ ಹಿತವಾದ ಕಾರ್ಯವಂ ನಿರ್ವಹಿಸಿದರೆ ಹದಿನಾಲ್ಕು ಲೋಕಂಗಳಲ್ಲಿಯೂ ನಿನ್ನ ಕೀರ್ತಿ ನಿಲ್ಲುವದೆಂದು ಪೇಳಿ, ಬಳಿಕ ಶಾಪಗ್ರಸ್ತನಾದ ಇಂದ್ರನ ಪುರದೊಳ್ವಾಸವಂ ಮಾಡಿದ ದೋಷದಿಂ ನಿನ್ನ ಬುದ್ಧಿಯು ಮಲಿನವಾಗಿದೆ. ಈಗ ನಿನಗೆ ಪೂರ್ವದಂತೆಜ್ಞಾನವುಂಟಾಗುವ ರೀತಿಯುಂಗೈವೆನೆಂದು ನುಡಿದು ಬುದ್ಧಿಯೋಗೋಪದೇಶವಂ ಗೈದು ನೀನು ವೇಗದಿಂ ಪೋಗಿ ಇಂದ್ರ ಶಚೀದೇವಿಯರೀರ್ವರಿಗೂ ದೇವರಹಸ್ಯವೃತ್ತಾಂತವಂ ಪೇಳಿ ದೇವಕಾರ್ಯವನ್ನೆರವೇರಿಸು ಎಂದು ನಿಯಮಿಸಲು. ಆ ಲೀಲಾಶುಕವು ಯೋಗಿಶ್ರೇಷ್ಠನಾದ ನಾರದನ ಚರಣಗಳಿಗೆರಗಿ ಅವನ ಗುಣಂಗಳಂ ಭಾರಿಭಾರಿಗೂ ಪೊಗಳುತ ಅಲ್ಲಿಂದ ಪೊರಟು ಭಯಂಕರರಾದ ರಾಕ್ಷಸರ ಬಾಧೆಯಂ ತಡೆಯಲಾರದೆ ಭೂಲೋಕದೊಳ್ ಅವತರಿಸಿರುವ ಇಂದ್ರಂಗೆ ಬುದ್ಧಿಯಂ ಪೇಳಲೋಸುಗ ಬರುತ್ತಿರುವ ಬೃಹಸ್ಪತಿಯೋ ಎಂಬಂತೆ, ಸ್ವರ್ಗಲಕ್ಷ್ಮಿಯ ಕಿವಿಯೊಳಿರ್ದು ಸಡಲಿ ಬೀಳುವ ಪಂಚರತ್ನದ ವಾಲೆಯೋ ಎಂಬುತೆ, ಭೂಮಿಯಲ್ಲಿರುವ ರಾಕ್ಷಸರಿಗೆ ಅವ

ಲಕ್ಷಣಮಂ ತೋರ್ಪಡಿಸುತ ನಕ್ಷತ್ರಮಂಡಲದಿಂ ಬೀಳುವ ಧೂಮಕೇತುವೋಯೆಂಬಂತೆ ದಾನವರುದೇವಗಂಗೆಯಂಪೊಕ್ಕು ಕಲಕಿಗೊರ್ದ್ಯಾಡಿಉಗುರುಗಳಿಂದ ಚಿವುಟಿಬಿಸುಟಕಮಲವೋ ಎಂಬಂತೆ ಮುರಿದುಬೀಳುವ ಅಮರಾವತೀಪಟ್ಟಣದ ಗೋಪುರದ ರತ್ನಕಲಶವೋ ಎಂಬಂತೆ ತೋರಿ ನಿಮಿಷದೊಳ್ಹಾರಿ ಭೂಮಿಯಂಸೇರಿ ಕಳಿಂಗರಾಯನ ಅಂತಃಪುರದಲ್ಲಿರುವ ಕ್ರೀಡಾವನದೊಳ್ ಇಳಿದು ಅಲ್ಲಿರುವ ಸರೋವರಂಗಳ ಜಲಂಗಳಸವಿನೋಡುತ್ತ, ವನಂಗಳೊಳ್ ಕಳಿತಿರುವಫಲಂಗಳಂರುಚಿನೋಡುತ್ತ, ವಿಜಯವರ್ಮನ ಮಗಳಾದ ಸೌಗಂಧಿಕಾದೇವಿಯು ಲೀಲಾರ್ಥವಾಗಿ ಉಪವನಕ್ಕೆ ಯಾವಾಗಬರುವಳೋ ಎಂದು ಸಮಯಮಂಸಾಧಿಸುತ ಸುತ್ತಮುತ್ತಲಿರುವ ಮಾವಿನಮರಗಳ ಗುಬುರಿನೊಳ್ ಗುಂಪುಗೂಡಿರುವ ನಾಡುಗಿಣಿಗಳೊಡಗೂಡಿ ಸುಖದಿಂದಿರ್ದಪೆಂಟಲ್ಲಿಗೆ * * * *

ಗದ್ಯ|| ಕುಂಡಲಿಶಯನ ಖಂಡಪರಶುಪುಂಡರೀಕಭವಾಖಂಡಲಪ್ರಮುಖನಿಖಿಲಸುರವರಪರಿಭವಪರಿಣತಪ್ರಚಂಡಬಲ ಚಂಡಮುಂಡಖಂಡನ ನಿಪುಣಕೋದಂಡ ಕಾಂಡಮಂಡಲಾಗ್ರಧರ ಭುಜಾಮಂಡ ಪರಿಮಂಡಿತ ಚಾಮುಂಡಿಕಾಕಟಾಕ್ಷವೀಕ್ಷಣ ಪ್ರವರ್ಧಮಾನಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾಸಾಮ್ರಾಜ್ಯಸರ್ವಂಕಷ ಚತುರ್ವಿಧಸರಸಕವಿತಾನಿಸ್ಸಹಾಯನಿಬಂಧನಧುರಂಧರತ್ರಿಭುವನಪವಿತ್ರಾತ್ರೇಯಸಗೋತ್ರಾಶ್ವಲಾಯನಸೂತ್ರ ಸುಚರಿತ್ರ ಚಾಮರಾಜಮಹಾರಾಜಪುತ್ರ ನರಪತಿಬಿರುದಮಹೀಶೂರಪುರವರಾಧೀಶ ಶ್ರೀ ಕೃಷ್ಣರಾಜವಡೆಯರವರಿಂದರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನವೀನಕೃತಿಯೊಳ್ ಸೌಗಂಧಿಕಾವತಾರವರ್ಣನ ವಜ್ರಾಯುಧಪತನ ಲೀಲಾಶುಕಾಗಮನ ಮೊದಲಾದ್ದಂ ಬಣ್ಣಿಸಿರುವ ಒಂಭತ್ತನೇ ಆಶ್ವಾಸನಿರೂಪಣಕ್ಕೆ ಮಂಗಳಮಹಾ. ಶ್ರೀ



ಶುಭಮಸ್ತು

ಶ್ರೀ ಚಾಮುಂಡಿಕಾಂಬಾಯೈನಮಃ

~~~~~~~~~~~~~~~~~~

## ಹತ್ತನೇ ಆಶ್ವಾಸಪ್ರಾರಂಭ.

ಅನಂತರದಲ್ಲಿ ಆ ಸೌಗಂಧಿಕಾದೇವಿಯು ಅಂತಃಪುರದಲ್ಲಿಯೆ ಶಾಸ್ತ್ರಂಗಳೆಲ್ಲವಂ ಸಾಂಗವಾಗಿ ಓದಿ, ಅಷ್ಟಮೀಚಂದ್ರರೇಖೆಯಂತೆ ಉಪವನಮಧ್ಯದೊಳಿರುವ ಎಳೆಮಲ್ಲಿಗೆಯ ಬಳ್ಳಿಯಂತೆ ಬೆಳೆಯುತ್ತ, ಸೌಕುಮಾರ್ಯಲಾವಣ್ಯಗಳಿಂದೊಪ್ಪಿ, ಸೊನೆಯೇರಿದ ಯೌವನವಂತಾಳಿ, ಬೆಳಗಿಬೆಳಗದಂತಿರುವ ನೋಟದಿಂ, ನಗಿಗೂಡಿ ಗೂಡದಂತಿರುವ ಮಾತುಗಳಿಂ, ಬೆಳದು ಬೆಳೆಯದಂತಿರುವ ಕುಚಂಗಳಿಂದೊಪ್ಪಿ ಕೇಳಿಯಂಮಾಡುವ ಶುಕಪಿಕಮೊದಲಾದ ಪಕ್ಷಿಗಳಂನೋಡಿ ನಾಚಿಗೆಗೊಂಡು ನಗುತ ಮೊಗವಂತಿರಿಗಿಸುತ ಕಾವ್ಯನಾಟಕಂಗಳಂ ಪ್ರೋದುತಲಿರುವ ಕಾಲದೊಳ್ ಸಂಭೋಗಶೃಂಗಾರದ ಗದ್ಯಪದ್ಯಂಗಳು ಬಂದ ಸೂಕ್ಷ್ಮನೆಯಾಗಿ ಮೆಲ್ಲಮೆಲ್ಲನೆ ಮನದಲ್ಲಿಯೇನೋಡಿ ತಾತ್ಪರ್ಯವಂ ಗ್ರಹಿಸುತ, ಸ್ತ್ರೀಪುರುಷರಂಕೂಡಿಸಿ ಬರದಿರುವ ಚಿತ್ರಂಗಳಂ ತಾನೊಬ್ಬಳೇ ಪೋಗಿನೋಡಿ ಅದರಂತೆತಾನು ಬರೆಯುತ, ಒಂದೊಂದುಸಮಯದೊಳ್ ಸುತ್ತುಮರಿದಿರುವಕೆಳದಿಯರು ತವ್ಮೊಳುತಾವು, ನಮ್ಮ ಸೌಗಂಧಿಕಾದೇವಿಗೆ ಬರುವ ವರನು ಸುಂದರನಾಗಬೇಕೆಂದು ನುಡಿಯುವ ನುಡಿಯಂಕೇಳಿ ನಿಮ್ಮಧರ್ಮವು ಸುಮ್ಮನಿರಮ್ಮ ಎಂದು ಒಂದುಪುಬ್ಬಿನೊಳ್‌ಮುನಿಸಂ, ಮತ್ತೊಂದುಪುಬ್ಬಿನೊಳ್‌ನಗೆಯಂ ತೋರ್ಪಡಿಸುವ ಸುಳ್ಳುಕೋಪವಂ ಮಾಡುತ್ತಲಿರಲು. ಇಂತುಬೆಳಬೆಳದು ಬಾಲ್ಯವೆಲ್ಲವು ಕಳೆದುಬರುವಸಮಯದೊಳ್ ಚಿತ್ರಲೇಖೆಯು ಸೌಗಂಧಿಕಾದೇವಿಗೆ ಬ್ಯಾಗಮೈಬರಬೇಕೆಂದು ಖರ್ಜೂರಾದಿರಸಾಯನವಂ ಮಾಡಿಸಿ ಕೊಡುತ ಕುರುಳುಗಳುನುಣ್ಪೇರಿ ನೀಳವಾಗಿಸುಳಿಯಾಗಿರಬೇಕೆಂದು ಒಂದೊಂದುದಿನವಂದೊಂದುಬಗೆಯಾದ ತೈಲವನ್ನೊತ್ತಿ ಮಜ್ಜನವಂ ಮಾಡಿಸುತ, ಯಾವಾಗನೆರೆಯುವಳೋ ಎಂದು ಬೆಳಗಾದರೆ ಒಂದುನಿಮಿಷವು ಉಪವಾಸವಿರಲೀಸದೆ ಮಧುರವಾದ ರಸದ್ರವ್ಯಗಳಿಂದಲೆ ಊಟವಂ
~~~~~~~~~~~~~~~~~~

ಮಾಡಿಸುತ, ಬಂದೊಂದುಋತುವಕ್ಕೆ ಬಂದೊಂದುದ್ದೇಶದಶಿಸ್ತುಮಾಡಿನೋಡಿ ದೃಷ್ಟಿತಾಕಿದರೆ ಕಷ್ಟವೆಂದು ಗಲ್ಲದೊಳ್ ಕಪ್ಪನಿಂಬೊಟ್ಟು ಇಟ್ಟು ಬಂಧಿಯಾಗಿ ಎಲ್ಲಿಗೂ ಹೋಗಲೀಸದೆ ಇಂತು ಎಡೆಬಿಡದೆ ಕಾದುಕೊಂಡಿರುವಾಗ ಯಾರಿಗೂತಿಳಿಯದಂತೆ ಯೌವನವೆಂಬ ವಸಂತಋತುವು ಸೌಗಂಧಿಕಾದೇವಿಯು ತನುಲತೆಯಂ ಸೋಂಕಲು, ಆಗ ಅವಳ ಮೃದುವಾದ ಹಸ್ತಪಾದಂಗಳು ಚಿಗುರುವೊಗರುಗಳಂತೆಕೆಂಪೇರಿದವು ಮಂದಹಾಸವುಅರಳಿದ ಮಲ್ಲಿಗೆಯಹೂವಿನಂತೆ ಹಸನಾಗಿಬಂದುದು. ತೊಂಡೆಹಣ್ಣಿನಂತಿರುವ ಕೆಂದುಟಿಯೊಳ್ ಮಕರಂದವು ಯೇರೇರಿ ಬಂದುದು ನೋಟಂಗಳು ತುಂಬಿಗಳವಿಲಾಸವಂಗೊಂಡವು. ಕಂಠಸ್ವರವು ದಿನದಿನಕ್ಕೆ ಮಧುರವಾಗಿ ಕೋಗಿಲೆಯಧ್ವನಿಯೊಡನೆ ಸರಿಯಾದುದು. ಈಪರಿಯಿಂದ ದಿನಕ್ರಮದೊಳ್ ಶುಕ್ಲಪಕ್ಷದ ಚಂದ್ರರೇಖೆಯಂ ಕಳೆಗಳು ಪರಿಬರುವಂತೆ ಯೌವನಲೀಲೆಗಳು ಹೆಚ್ಚಿ ಬರುತ್ತಿರಲು! ಬಂದಾನೊಂದುದಿನದೊಳು ಸಪ್ತಮಸ್ಥಾನದಲ್ಲಿರುವ ಶುಭಗ್ರಹಂಗಳ ದೃಷ್ಟಿಯಿಂದೊಪ್ಪಿದ ಶುಭಲಗ್ನದೊಳು ಸವಿಯಾಗಿ ಊಟವಂಮಾಡಿ, ಸರಿಗೆಯಿಂಚೆರದಿರುವ ಗೀಣಿಸಾಲುಶರಗಿನ ಬಿಳೀಶೀರೆಯನ್ನುಟ್ಟು ಸಂತೋಷದಿಂದಿರುವ ಸೌಗಂಧಿಕಾದೇವಿಯು ಸುಗಂಧರಾಜಚಂದ್ರನ ಭಾಗ್ಯಲಕ್ಷ್ಮಿಯೋ ನೆರದಳೋಎಂಬಂತೆ ಮೈನೆರದು ಬಂದುಘಳಿಗೆ ದಿಗಲುಬಿದ್ದಂತೆ ಇದ್ದು, ಬಳಿಕ ಪೇಳಕೂಡದಲಜ್ಜೆಯೊಳ್ಮುಳುಗಿ, ಮಿತ್ರೆಯಾದ ಚಿತ್ರಲೇಖೆಯನ್ನಾದರೂ ಮೊಗವೆತ್ತಿನೋಡದೆ, ಮಾಲತಿಮೊದಲಾದ ಹುಡಗಿಯರೊಡನಾದರೂ ಮಾತನಾಡದೆ ಬಳಹಜಾರಕ್ಕೆ ಬಾರದೆ, ಕಪೋತಶಾಲೆಯೊಳ್ ದೂರದಲ್ಲಿನಿಂತು ಬಂದುಬಗೆಯಾದ ಮನೋಹರವಾದ ಭಾವವಂತಾಳಿರಲು, ಆದಂಕಂಡುಚಿತ್ರಲೇಖೆಯು ಯುವರಾಜಪುತ್ರನಪುಣ್ಯವು ಫಲಿಸಿತೋ ಎಂದು ಸಂತೋಷಪಡುತ ಈಶುಭವಂ ನಮ್ಮರಸಿಯಾದ ಸುಲೋಚನಾದೇವಿಗೆ ತಿಳಿಸೆಂದು ಚಿನ್ನದತಟ್ಟೆಯೊಳ್ ಅರಳಿದಪುಷ್ಪಂಗಳನ್ನಿರಿಸಿ ಮಾಸಂತಿಯಂ ಕಳುಹಿಸಿ, ತಾನು ರಾಜಪುತ್ರಿಯಂ ಮುಟ್ಟಿಕೊಂಡು ಮೈಸವರಿ ಮುಖವನೋಡಿ ಇನಸ್ವಕೆಲವು ಚಿಹ್ನೆಗಳಂಕಂಡು ಕನ್ಯೆಸಂಪನ್ನೆಯಾದಳು ಲಗ್ನವು ಚನ್ನಾಗಿಯೇ ಇರುವದು ಪುಣ್ಯವುಇಂತಿರ

ಬೇಕೆಂದು ನುಡಿದು ಬ್ಯಾಗನೆ ವಸಿಗೆಯುಂಮಾಡುವಾ ಎಂದು ರಾಜಪುತ್ರಿಗೆ
ತನ್ನ ಮನದಲ್ಲಿದ್ದಂತೆ ಅಲಂಕಾರವಂಮಾಡಿ, ಚಿನ್ನದನೀರಿನಿಂದ ಸಂಣನಾಗಿ
ಹೂವ್ವುಬಳ್ಳಿಗಳಂ ಬರಸಿರುವ ಬಿಳಿಯಪತ್ತಲವನ್ನುಡಿಶಿ ಹಸಿಯವಳದ ಬ
ಳ್ಳಿಯುಂಹಿಂತಿರಸವಂತೆಗಮು ರಂಗುಗೊಳಿಶಿದ ಚಂದ್ರಗಾವಿಯ ಕುಪ್ಪಸವಂ
ವಪ್ಪುವಂತೆತೊಡಿಶಿ, ಮುತ್ತು ವಜ್ರಗಳಬಡವೆಗಳನ್ನಿಟ್ಟು, ಬಂದುಪಚ್ಚೆಯ
ಮಾಗಾಯಿಬಾವುಲಿಯುಂ ಮುಂರುವಿನೋಳ್ ಶಿಕ್ಕಿಸಿ ಮಲ್ಲಿಗೆ ಮೊಗ್ಗಗಳ
ಜಡೆಕುಚ್ಚುಗಳಂ ಹಿಮ್ಮಡಿಸೋಂಕುವಂತೆ ಆಳವಡಿಶಿ, ಪಾಲ್ಗಡಲಿನತೆರೆಗ
ಳಂತೆ ಹಸನಾದ ಬಿಳಿಯವಸ್ತ್ರದ ಹಾಸಿಗೆಯೊಳು ಕುಳ್ಳಿರಿಸಿ, ನಾಲ್ಕುಕಡೆ
ಯೊಳು ಕೆತ್ತನೆಯ ದೀವಿಗೆ ಕಂಭಗಳನ್ನಿರಿಶಿ, ಮೂರುಬಂಣದ ಧಾರದಿಂಸು
ತ್ತಿ, ನಾರಿಯರೆಲ್ಲ ಕೂಡಿ ಗೌರೀಕಲ್ಯಾಣವಂ ಪಾಡುತ್ತಿರಲು ಹನ್ನೆರಡುಬಗೆ
ಫಲಂಗಳಂ, ವೀಳ್ಯವಂ, ಚಿಗುಳಿಉಂಡೆಗಳಂ ಚಿನ್ನದ ತಟ್ಟೆಯೊಳ್ತುಂಬಿ
ಸುವಾಸಿನಿಯರ ಕೈಮುಟ್ಟಿಸಿ ಮಡಲುತುಂಬಿ, ಕ್ಷೀರಸಮುದ್ರದಲ್ಲಿರುವ ಮ
ಹಾಲಕ್ಷ್ಮಿಯಂತಿರುವ ರಾಜಪುತ್ರಿಗೆ ಆರತಿಯನ್ನೆತ್ತಿ ವಸಿಗೆಯಂ ಬೆಳಸಿ,
ದಿನದಿನದೊಳು ಸಂಭಾರದಿಂಕೂಡಿದ ಹುಗ್ಗಿಯುಂ ಹುಡಿಗಿಯರಿಗೆ ಊಟ
ವಂಮಾಡಿಸುತ್ತ ನಾಲ್ಕನೆಯದಿನದೊಳ್ಪನ್ನೀರಿನಿಂದ ಮಜ್ಜನವಂಮಾಡಿಸಿ,
ಕುರುಳುಗಳನ್ನಾರಿಸಿ, ಸಾಮ್ರಾಣಿಯಧೂಪದಿಂದ ವಾಸನ್ನೆಯುಂಕಟ್ಟಿ, ಯ
ಳೆಗಂಟುಹಾಕಿ, ಪಣೆಯೊಳ್ಸಾದಿನಬೊಟ್ಟಿಟ್ಟು, ಆಭರಣಗಂಳಿಂದ ಅಲಂ
ಕರಿಸಿ, ಮುತ್ತೈದೆಯರಪಾದಂಗಳಿಗೆ ಅಡ್ಡಬೀಳಸಿ, ಹಾಲನ್ನವಂಆರೋಗ
ಣೆಯಂಗೈಸಿ, ಆರತಿಅಕ್ಷತೆಯಂ ಬೆಳಸುತ್ತಲಿರುವಾಗ? ರಾಜಾಂತಃಪುರದಿಂ
ಸುಲೋಚನಾದೇವಿಯು ಶುಭಲಗ್ನದೊಳು ಕುಮಾರನಂಪಡೆದಳೆಂಬ ಸಮಾ
ಚಾರವು ಬಂದಬಳಿಕ ಸೌಗಂಧಿಕಾದೇವಿಯು ಪವಳಿಸುವ ಮಂಚದಮೇಲೆ
ಬೇವಿನಚಿಗುರುಗಳಂ, ನಾಗಬೆತ್ತವಂ, ಮಂತ್ರಿಶಿದವಿಭೂತಿಯುಂ, ಯಂತ್ರ
ದತಾಯತಿಯುಂ ಸಹಾ ಮಡಗಿ, ರಾಜಪುತ್ರಿಯು ನಿದ್ರೆಯಂಗೈಯುತ್ತಿರು
ವಾಗ ಇಬ್ಬರಿಬ್ಬರು ಎಚ್ಚರದಿಂದಿರುವದೆಂದು ಕೆಳದಿಯರಿಗೆ ಕಟ್ಟುಮಾ
ಡಿ, ಮಾಲತಿಮೊದಲಾದ ಸಖಿಯರೊಡಗೂಡಿ ವೇಗಸಿಂ ರಾಣಿಯು ಪ್ರಸವಿಶಿ
ರುವ ಅಂತಃಪುರವಂ ಪ್ರವೇಶಿಸಿ ಅಲ್ಲಿ ಮುತ್ತಿನ ಮಣಿಯಂತಿರುವ ಮೊಗು

ವಂನೋಡಿ ಸಂತೋಷಪಡುತ್ತಿರುತ್ತಿರಲು. ಆಗ ವಿಜಯವರ್ಮರಾಯನು ಸುಲೋಚನಾದೇವಿಯು, ಮಂತ್ರಿ, ಪುರೋಹಿತರು ಮತ್ತೂ ಚಿತ್ರಲೇಖೆ ಮೊದಲಾದವರುಕೂಡಾ ನಮ್ಮ ಸೌಗಂಧಿಕಾದೇವಿಯು ಪುಣ್ಯದಿಂದ ಅವಳು ಹುಟ್ಟಿದ ಮನೆಯೊಳು ಈಪರಿಯಾದ ಶುಭಲಕ್ಷಣಂಗಳು ಕೋಟಿಪಾಲು ಹೆಚ್ಚಾಗುವವೆಂದು ಭಾರಿಭಾರಿಗು ಸೌಗಂಧಿಕಾದೇವಿಯು ಸೌಭಾಗ್ಯವನ್ನೇ ವರ್ಣಿಸುತ್ತಲಿರಲು ಬಳಿಕ ಚಿತ್ರಲೇಖೆಯು ಸುವಾಸಿನಿಯರೊಡಗೂಡಿ ಹನ್ನೊಂದನೇದಿನ ಸುಲೋಚನಾದೇವಿಗೆ ಮಂಗಳಸ್ನಾನವಂಮಾಡಿಸಿ, ದಿವ್ಯದುಕೂಲವಂ ಉಡಿಸಿ, ಪರಿಪರಿ ಅಲಂಕಾರಗೊಳಿಸುತ್ತಲಿರಲಾಗ ವಿಜಯವರ್ಮರಾಯನು ಸ್ನಾನಾಹ್ನಿಕಗಳಂ ನೆರವೇರಿಸಿ ಮಂತ್ರಿ, ಪುರೋಹಿತ ಮೊದಲಾದವರೊಡಗೂಡಿ ಮಂಗಳಕರವಾದ ಮಂಟಪಕ್ಕೆಬಂದು ಪತ್ನಿಯಾದ ಸುಲೋಚನಾದೇವಿಸಹಿತನಾಗಿ ಹಸೆಯೊಳು ಕುಳಿತು ಕುಮಾರಂಗೆ ಕೀರ್ತಿವರ್ಮನೆಂದು ನಾಮಕರಣವಂಮಾಡಿ ಇಮ್ಮಡಿಯಾದ ಸಂತೋಷದಿಂ ಇಷ್ಟಬಂಧುಗಳೊಡಗೂಡಿ ಮೃಷ್ಟಾನ್ನ ಭೋಜನಂಗೈದುಸುಖದಿಂದಿರುತ್ತಿರಲು.

ಅತ್ತಲಾ ಸೌಗಂಧಿಕಾದೇವಿಯು ದಿನದಿನದೋಳ್ ಹೆಚ್ಚಿಬರುವಯೌವನದಿಂಕೂಡಿ ಒಮ್ಮೆ ವೀಣೆಯುಂಪಿಡಿದು ತಾನವಂನುಡಿಯಿಸುತ ಗಾನಕ್ಕೆ ಸಮಾನವಾದ ವಿದ್ಯೆ ಉಂಟೇಯೆಂದು ಯೋಚಿಸುತ, ಮತ್ತೊಮ್ಮೆ ಏಕಾಂತದಲ್ಲಿ ಕುಳಿತು ಮೃದುವಾದ ಪದಂಗಳಂ ಶೇರಿಶಿ ದ್ರಾಕ್ಷಾಪಾಕದಿಂ ಸರಸಕವಿತೆಯುಂಮಾಡಿ ಇದರರಸವಂ ಶಂಕರನು ಕೂಡಬಲ್ಲನೊ ಇಲ್ಲವೊ ಎಂದು ತನ್ನಲ್ಲಿತಾನೆ ನುಡಿಯುತ ಇಂತು ಪರಿಪರಿಯಾದ ಲೀಲೆಗಳಲ್ಲಿ ಇರುತ ಹೊತ್ತುಕಳೆಯುವ ಚಿತ್ತದೋಳ್ ಬ್ಯಾಸರಂಗೊಂಡು; ಒಂದುದಿನ ಸಖಿಯರೊಡಗೂಡಿ ಚಿತ್ರಶಾಲೆಯುಂನೈದಿ ಚಿತ್ರಲೇಖೆಯು ಹೆಗಲೋಳ್ತೋಳನಿಟ್ಟು ವಿಚಿತ್ರವಾಗಿ ಬರದಿರುವ ಚಿತ್ರವಂ ಅಲ್ಲಲ್ಲಿನಿಂತುನೋಡುತಮಾತನಾಡುತ ಬರುವಸಮಯದೋಳ್ ಇಲ್ಲಿಬರದಿರುವದು ಸತ್ಯಲೋಕವು, ಅಲ್ಲಿ ನಾಲ್ಕುಮುಖಂಗಳಿಂದ ಒಪ್ಪಿ ಕುಳಿತಿರುವಂತೆ ಬರದಿರುವದೇ ಬ್ರಹ್ಮನು ಈತನ ಎದುರಾಗಿ ಕುಳಿತಿರುವಳೇ ಸರಸ್ವತೀದೇವಿಯು, ಎಂದು ನುಡಿಯುವ ಸಖಿಯರೋಳ್ ಓರ್ವಳು ಎದ್ದು ಚಿತ್ತಲೆ ಕೈಮುಗಿದು ನಿಂತಿರುವಂ

ತೆ ಬರದಿರುವ ಹುಡುಗರಂ ನೋಡಿ, ಇವರ್ಯಾರೆಂದು ನಗುವಳಂನೋಡಿ, ಚಿಪ್ರತಿ ಇಂತು ಅನ್ನಬಾರದು, ಇವರು ಬ್ರಹ್ಮನ ಮಾನಸಪುತ್ರರು, ಮಹಾ ಪವಿತ್ರರು ವಿರಕ್ತರು ಋಷಿಗಳೊಳ್ ಉತ್ತಮರು ಇವರ ಹೆಸರೆತ್ತಿ ಹಾಸ್ಯವಂಮಾಡಬಾರದೆಂದು ಹೇಳುತ್ತಾ, ಇದು ಶಿವನಿಗೆ ವಾಸಯೋಗ್ಯವಾದ ಕೈಲಾಸವು, ಇದಂ ಚನ್ನಾಗಿನೋಡುವಾಯೆಂದು ಬಂದು ನಂದಿಯನ್ನೇರಿ ಕುಮಾರ ಮೊದಲಾದ ಮಕ್ಕಳುಗಳಿಂ, ಪ್ರಮಥಗಣಂಗಳಿಂ, ಋಷಿಗಳ ಸಮೂಹಗಳಿಂ ಪರಿವೃತನಾದ ಚಂದ್ರಶೇಖರನ ವಾಮಭಾಗದೊಳ್ ಇರುವ ಪಾರ್ವತಿಯಂಕಂಡು ಆ ದೇವಿಯ ಪಾದಾರವಿಂದಗಳಿಗೆ ಪ್ರಣಾಮವಂಗೈದು, ಮುಂದೆನಡೆತರುವಾಗ ಮೂರುಕಾಲಿನಿಂದ ಕುಣಿದಾಡುವಂತ ಬರದಿರುವದು ಯಾವದೇವರೆಂದು ಕೇಳುವ ಎಳೆಹುಡುಗಿಯಾದ ಮಾಲತಿಯ ಮಾತಂ ಕೇಳಿ ನಗುತ ಹಿಂತಿರುಗಿನೋಡಿ ಮೊಗದಸಂಜ್ಞೆಯಿಂದ ಬೆದರಿಸೆ, ಈ ಕಾಲದ ಬಾಲೆಯರು ಏನೇನು ಕಲಿತಿರುವರೋ ಎಂದು ಅಚ್ಚರಿಗೊಂಡು, ಅಲ್ಲಿಂದಮುಂದೆ ಲಕ್ಷ್ಮಿಯೊಡಗೂಡಿ ಗರುಡನನ್ನೇರಿ ಬ್ರಹ್ಮಮನ್ಮಥರಿಗೆ ತಂದೆಯಾದ ಶ್ರೀಮಹಾವಿಷ್ಣುವಂಕಂಡು ಈತನೇ ಪೂರ್ವದೊಳ್ಇಂದ್ರನಿಗೆ ಸಹಾಯವಾಗಿ ದಾನವರದರ್ಪವನ್ನಡಗಿಸಿ, ಮಂದರಗಿರಿಯಂಧರಿಸಿದನು, ಈತನು ಉಪೇಂದ್ರನೆನಿಸುವನೆಂದು ಹೇಳಿ ಮನದೊಳ್ ಈ ಮಹಾನುಭಾವನಂನೋಡಿದರೆ ನನ್ನ ಭಾವದೊಳ್ ಭಾವನಂನೋಡಿದಂತೆ ಲಜ್ಜೆಯಾಗುವದು ಯಾತಕ್ಕೋಯೆಂದು ಚಿಂತಿಸಿ, ಏನೋಯೆಂದು ಉಪೇಕ್ಷೆಯಿಂದ ಇರುತ ಬ್ರಹ್ಮನು ತನ್ನ ಭಾಮೆಯಂ ಬಾಯೊಳಗೆ ಮಡಗಿಕೊಂಡಿರುವನು. ಶಿವನು ತನ್ನ ಅಂಗನೆಗೆ ಅರ್ಧಾಂಗವಂಕೊಟ್ಟಿರುವನು. ವಿಷ್ಣುವು ತನ್ನ ಎದೆಯ ಮೇಲೆ ಹೆಂಡತಿಯ ಕುಳ್ಳಿರಿಸಿಕೊಂಡಿರುವನು. ಇಂತಿರುವ ಇವರಂ ಎಂತು ದೇವರೆನ್ನಬೇಕೆಂದು ಹೇಳುವ ಮಾಲತಿಯನ್ನೋಡಿ, ಇವಳಂ ಆಚೆಗೆ ಕಳುಹಿಸೆಂದು ಶಿಟ್ಟುಮಾಡಲಾಗ ತಾಯೇ ನೀವಿಂತು ಕಟ್ಟುಮಾಡಿದಮೇಲೆ ಮಾತನಾಡುವದಿಲ್ಲವೆಂದು ಅಡ್ಡಬೀಳುವ ಮಾಲತಿಯನ್ನೋಡಿನಗುತ, ಈಗ ಹರಿಯುವದೋ ಎಂಬಂತೆ ಬರದಿರುವ ಹೊಳೆಯಂನೋಡೆಂದು ಕೈತೋರಿ ಇದು ಮಂದಾಕಿನಿಯು, ಅದು ಮಂದಾರ ಪಾರಿಜಾತಾದಿ ವೃಕ್ಷಂಗ

ಳಿಂದ ಒಪ್ಪಿರುವ ನಂದನವನವು, ಅಲ್ಲಿಂದ ಆಚೆಗೆ ಬರದಿರುವದೇ ಅಮರಾವತೀಪಟ್ಟಣವು, ಅದರೊಳ್ ಕುಂದಣದ ಮಂದಿರಂಗಳು ಕಾಣುವವು, ಅದರಮೇಲೆ ಕುರುವಿಂದ ಮಣಿಗಳ ಹಜಾರಗಳಿರುವವು, ಅದರೊಳ್ಕುಳಿತುಕೊಂಡಂತೆ ಬರಸಿರುವ ಚಂದ್ರನಂತೆ ಇರುವ ಜಯಂತನಂ ನೋಡಿದಿಂದು, ಇಂತಿರುವ ಮಗನಂಪಡೆದ ಕಾಂತೆಯು ಭಾಗ್ಯವೇ ಭಾಗ್ಯವೆಂದು ನುಡಿಯುತ್ತ, ಅಲ್ಲಿಂದ ಮುಂದೆ ನಿಂತಿರುವ ಆದಿತ್ಯರಿಂ, ಕೈಗಳಂಕಟ್ಟಿರುವ ವಸುಗಳಿಂ, ಕುಳಿತಿರುವ ರುದ್ರರಿಂ, ಸುತ್ತುವರಿದಿರುವ ದಿಕ್ಪಾಲಕರಿಂ, ಎದುರಾಗಿ ನರ್ತನಂಗೈವ ರಂಭಾದಿ ವೇಶ್ಯಾಜನಂಗಳಿಂ, ಕೈಯ್ಯತ್ತಿ ನಿಂದಿರುವ ವಂದಿಮಾಗಧರಿಂ ಕೂಡಿ ಮಣಿಮಯವಾದ ಸುಧರ್ಮ ಎಂಬ ಸಭಾಮಧ್ಯದೊಳ್ ರತ್ನಸಿಂಹಾಸನದಲ್ಲಿ ಕುಳಿತಿರುವ ದೇವೇಂದ್ರನಂ ನೋಡಿ, ಈತನು ಮೂರುಲೋಕಂಗಳಂ ಪಾಲಿಸುವ ಯೋಗವಂಪಡೆದು ಬಹು ಭೋಗಂಗಳಂ ಅನುಭವಿಸುವನು ಎಂದು ಕೈತೋರಿ ಅವನ ಸೌಂದರ್ಯವಂ ಆಂದವಂ ನೋಡಿ ಅಚ್ಚರಿಗೊಂಡಿರಲು. ಆಗ ಮನ್ಮಥನು ಇದೇ ಸಮಯವೆಂದು ತನ್ನ ಮುಖ್ಯಾಯುಧವಾದ ಕೆಂದಾವರೆಯೆಂಬ ಫಿರಂಗಿಯೊಳ್ ಪರಾಗವೆಂಬ ಮದ್ದಂತುಂಬಿ, ದುಂಬಿಗಳೆಂಬ ಗುಂಡಂಹಾಕಿ, ಮಂದಮಾರುತವೆಂಬ ಹದವಂಕೊಟ್ಟು, ಮಾವಿನಚಿಗುರೆಂಬ ಜಾವಿಗೇಬತ್ತಿಯಂ ಹಚ್ಚಿ, ಈಪರಿ ಸಜ್ಜುಗೊಳಿಸಿ ಸೌಗಂಧಿಕಾದೇವಿಯ ಮನವೆಂಬ ಗುರಿಯಂನೋಡಿ ಹೊಡೆಯಲು. ಆಕ್ಷಣದೊಳ್ಸುಕುಮಾರಾಂಗಿಯಾದ ಆ ಸೌಗಂಧಿಕಾದೇವಿಯು ಆಪೆಟ್ಟಂತಾಳಲಾರದೆ ಮೈಯ್ಯೆಲ್ಲವುಪುಳಕಂಗೊಂಡು, ತುಟಿಯುಅದರಿ, ಬೆಮರೇರಿ, ಪೇಳಕೂಡದ ಪರಿಪರಿಯಾದಚಿಹ್ನೆಗಳಂತಾಳಿ, ಮನದೊಳ್ಕಳವಳಿಸಿ, ಬಳಲಿ ಭೂಮಿಯೊಳ್ ಇಳಿದಂತಾಗಿ ಈಪರಿಯಿಂ ಕೆಳದಿಯರು ತಿಳಿವರೆನುತ ಘಳಿಗೆಯಷ್ಟಾಯಿತು ಕೇಳಬನ್ನಿರೆಂದು ಕೆಲವರಂಕಳುಹಿ, ಗಿಣಿಗಳಿಗೆ ಫಲಗಳಂಕೊಡಿಸುವ ಸಮಯವಾಯಿತು ಪೋಗಬೇಕೆಂಬ ನೆವದಿಂದ ಚಿತ್ರಶಾಲೆಯನ್ನೋಡುವ ಲೀಲೆಯಂಬಿಟ್ಟು, ಬಾಲೆಯಾದಮಾಲತಿಯ ಕೈಪಿಡಿದು ತನ್ನ ಮಂದಿರಕ್ಕೆ ಬಂದು ತೂಗುವಉಯ್ಯಾಲೆಯ ಮೇಲಿರುವ ಹಂಸತೂಲಿಕಾತಲ್ಪದೊಳ್ಕುಳಿತು ಸರಪಣಿಯಂಪಿಡಿದು ಕಾಲುಗುರಿನಿಂ

ನೆಲವಂ ಕೆರೆಯುತ್ತ, ಅಧರವಂ ಹಲ್ಲುಗಳಿಂ ಕಡಿಯುತ್ತ, ಅಳುತ್ತೋರುವನೋಟವಿಂ ನೋಡುತ, ಮನದೊಳ್ಪರಿಪರಿಯಾಗಿ ಚಿಂತಿಸುತ ಅತ್ಯಂತದೀರ್ಘವಾಗಿ ನಿಟ್ಟುಸುರಂ ಬಿಟ್ಟು, ನಾನು ಈಗ ನಿಮಿಷಮಾತ್ರ ಮಲಗುವೆನು; ಮಾಲತಿಯೆ ನೀನು ಹೋಗೆಂದು ಕಳುಹಿ ಬೇಗದಿಂ ಬಾಗಿಲಂ ಮುಚ್ಚಿ, ಮನ್ಮಥಶಾಸ್ತ್ರವಂ ಓದಿದವಳಾದಕಾರಣ ಇಮ್ಮಡಿಯಾದ ವಿರಹವೇದನೆಯು ತಾಳಿ, ಮತ್ತೂ ಪವಳಿಸಿ, ಮನದೊಳಿರುವಭಾವವಂ ಪರರಿಗೆಂತು ಪೇಳಲಿ, ಅಥವಾ ಪೇಳದರೆ ಇದಂ ನನ್ನ ತಾಯಿತಂದೆಗಳು ತಿಳಿದರೆ ಈಗಲೇ ಮದುವೆಯಂ ಮಾಡುವದಕ್ಕೆ ಸನ್ನಹಿಸುವರು, ಅದಂ ನಾನು ಅಂಗೀಕರಿಸಿದರೆ ಈಗ ನಾನು ನೋಡಿದ ಚಿತ್ರದೊಳ್ಬರದಿರುವ ಪುರುಷನಂತೆ ಇರುವ ಪುರುಷನು ಮೂರುಲೋಕದಲ್ಲಿ ಹುಡುಕಿದರೂ ಸಿಕ್ಕುವನಾಗಿ ತೋರಲಿಲ್ಲ; ಆದ್ದರಿಂ ಏನುಮಾಡಲೆಂದು ದುರ್ಘಟವಾದ ಚಿಂತೆಯಂ ಮಾಡಿ ನಾನೆಂತು ಕೊನೆಮುಟ್ಟುವೆನೋ ನಾನು ಅರಿಯೆ ಹಾ, ಎಂದು ಅಳುತ ಕಂಬನಿಯಂ ತುಂಬುತ, ತಾಪದಿಂ ಹೊರಳುತ, ಚಿತ್ರದೊಳ್ಬರದಿದ್ದ ಪುರುಷನಂ ತನ್ನ ಚಿತ್ತದೊಳ್ಬರದಿರುವಂತೆ ಎಲ್ಲೆಲ್ಲಿಯು ಕಾಣುತ್ತ, ಒಮ್ಮೆ ಇರುತ, ಮತ್ತೊಮ್ಮೆ ಎಲ್ಲೆಲ್ಲಿಯೂ ಅವನನ್ನೇ ನೋಡುತ, ಮೋಹಸಾಗರದೊಳ್ಮುಳುಗಿ ಪಾರವಂ ಕಾಣದೆ, ದೇಹದೊಳ್ತಾಪವಂಗೊಂಡು ಘಳಿಗೆ ಯುಗವಾಗಿ ಕಳೆಯಲಾರದೆ; ಊಟಕ್ಕೆ ಏಳದೆ, ಆಟಕ್ಕೆ ಸೇರದೆ, ಶಾರದಾದೇವಿಯಂತೆ ಬಿಳ್ಪೇರಿ, ಮನ್ಮಥನಬಾಣಂಗಳ ಪೆಟ್ಟಂ ತಾಳಲಾರದೆ ಅಂತಃಪುರದ ಉದ್ಯಾನವನದೊಳುರಿಯುವ ಬೆಂಕಿಯಂತೆ ತೋರುತಲಿರುವ ಬೆಳ್ದಿಂಗಳೊಳ್ಬಿದ್ದು ಪ್ರಾಣಗಳನ್ನಾದರೂ ಬಿಡುವೆನೆಂದು ಯಾರಿಗೂ ತಿಳಿಯದಂತೆ ಶಯ್ಯಾಗೃಹದಿಂದ ಹೊರಟು ವಸಂತವನವಂ ಸೇರಿ, ಅಲ್ಲಿ ಪುಷ್ಪಂಗಳವಾಸನೆಯಿಂದಕೂಡಿ ಎದುರಾಗಿ ಬೀಸುವ ತಂಗಾಳಿಯು ಸೋಕೆತಟ್ಟೆ ಸರ್ವಾಂಗಗಳು ಕಂದಿ, ಮುಂದುಗಡೆಯ ಅಂಗಳದೊಳಗೆ ಬೆಂಕಿಯಂತಿರುವ ಬೆಳ್ದಿಂಗಳೊಳ್ಬಿದ್ದು ಹೊರಳುತ ಹಾಗೇ ಎದ್ದು ತಲ್ಲಣಿಸುತ ನಿಮಿಷದೊಳ್ವರ್ಷದಂತೆ ಬರುವ ವಿರಹಭಾರವಂ ಸಹಿಸಲಾರದೆ ಮೂರ್ಛೆಯಂಗೊಂಡಿರಲು.

ಆಬಳಿಕ ಅಂತಃಪುರದಲ್ಲಿರುವ ಚಿತ್ರಲೇಖೆ ಮೊದಲಾದ ಕೆಳದಿಯರು

ಚಿತ್ರಶಾಲೆಯಿಂದ ಬಂದಬಳಿಕ ರಾಜಪುತ್ರಿಯಂ ಕಾಣದೆ ಇದೇನುವಿಚಿತ್ರ ವೆಂದು ತತ್ತರಗೊಳುತ, ಸುತ್ತುಮುತ್ತಲಿರುವ ಮನೆಗಳೊಳ್ಹುಡುಕಿ ಎಲ್ಲಿಹೋದಳೋ ಹುಡುಕಿನೋಡಿರೆಂದು ನುಡಿಯುತ ಎಲ್ಲರೂ ಘಾಬರಿಬಿದ್ದು, ವಸಂತವನಕ್ಕೆ ಒಬ್ಬಳೇ ಪೋಗಿರಲಾರಳು; ಆದರೂ ನೋಡಬರುವಾ ಎಂದು ಎಲ್ಲರೂ ಅಲ್ಲಿಗೆಪೋಗಿ ಅಲ್ಲಿ ಸುರಹೊನ್ನೆಯ ಮರದಕೆಳಗೆ ಕಪ್ಪುರದ ದಿಣ್ಣೆಯೊಳ್ಮಲಗಿರುವ ಸೌಗಂಧಿಕಾದೇವಿಯಂಕಂಡು, ಇವಳು ಹುವ್ವುಗಳಂ ತುಳಿದರೆ ಬಾಡುತಲಿರುವ ಪಾದಗಳಿಂದ ಈ ಕಪ್ಪುರದ ಧೂಳಿಯಂ ತುಳಿಯುತ ಎಂತುನಡೆದುಬಂದಳೋ, ಇಂತಲ್ಲದೆ ಇಲ್ಲಿರುವ ಈ ಸೌಗಂಧಿಕಾದೇವಿಯ ಕೈಬೆರಳುಗಳನ್ನೋಡಿ ಮೃದುವಾದ ಚಿಗುರುಗಳೆಂದು ತಿಳಿದು ಚಿವುಟಬೇಕೆಂದು ಕೋಗಿಲೆಗಳು ಬಂದರೆ ಏನುಗತಿಯಾಗುವದೋ, ಮತ್ತು ಗಿಣಿಯು ಬಂದು ಇವಳತುಟಿಯಂಕಂಡು ತೊಂಡೆಯ ಹಣ್ಣೆಂದು ತಿಳಿದು ಕಚ್ಚಿದರೆ ನಾವೇನುಮಾಡಬಲ್ಲೆವು. ತುಂಬಿಗಳು ಇವಳ ಮುಖವಂ ವಾಸನೆಯಿಂದ ಇದು ಬಿಳಿದಾವರೆಯೆಂದು ತಿಳಿದು ಗುಂಪುಗುಂಪಾಗಿ ಸುತ್ತುವರಿದರೆ ಮಾಡುವದೇನು; ಕಾಮನಕಟಾಕ್ಷದಿಂದ ಪಕ್ಷಿಗಳೆಲ್ಲವೂ ಮಲಗಿರುವ ಸಮಯವಾದ್ದರಿಂದ ನಮಿಗೆ ಈ ರಾಜಪುತ್ರಿಯು ಕ್ಷೇಮದಿಂ ಸಿಕ್ಕಿದಳು. ಆದ್ದರಿಂದ ಇನ್ನು ಏನಾದರೂಮಾಡಬಹುದೆಂದು ಎಲ್ಲರೂ ಬಂದು ಮೂರ್ಛೆಯನ್ನೈದಿರುವ ಮುಗ್ಧೆಯನ್ನೋಡಿ, ಇದು ಗ್ರಹವು ಸೋಂಕಿ ಇಂತಾಗಿರುವದೋ ಮತ್ತುಮಲ್ಲದೆ ವನದೇವತೆಯ ಮಹಿಮೆಯೋ; ಮತ್ತು ಯಾರಾದರು ಮಾಟವಂಮಾಡಿರುವರೋ ತಿಳಿಯದು, ಇದೇನು ಮಾಯವೋ ಎಂದು ಮೈಯಲ್ಲ ಮುಟ್ಟಿನೋಡಿ ದಿಗಿಲುಬಿದ್ದು ಅರಸಿ ಕೇಳಿದರೆ ನಮಿಗೆಲ್ಲ ಆಜ್ಞೆಯಂಮಾಡಿಸುವಳು ಎಂದು ಭಯಗೊಂಡಿರುವರು ಕೆಲವರು. ಇದಂತಿರಲಿ ಸೌಗಂಧಿಕಾದೇವಿಯು ಸುರಕ್ಷಿತವಾಗಿ ಎದ್ದು ಎಂದಿನಂತಿದ್ದರೆ ಸಾಕು. ನಾವುಗಳು ಏನಾದರೂ ಆಗುವಾ, ಎನ್ನುವರು ಕೆಲವರು. ಯಂತ್ರಧಾರಿಣಿಯುಂಕರದು ಕೇಳಿದರ ಅವಳು ಏನಾದರೂ ಹೇಳುವಳು, ಹೋಗಿಬರುವಾ ಎನ್ನುವರು ಕೆಲವರು. ಇಂತು ಎಲ್ಲರೂ ಘಾಬರಿಯಿಂದ ಮಾತನಾಡುತಲಿರಲು, [illegible]

ನೋಡಿ, ಇದು ಗ್ರಹವು ಅಲ್ಲ, ಮುನಿಪೇವರೂ ಅಲ್ಲ, ಮಾಟವೂ ಅಲ್ಲ, ಪೇಳುವೆನು ಕೇಳ್ ಲೋಕದೊಳ್ಜನಗಳಿಗೆ ಮನದ್ದೇವರುಗಳು ತ್ರಿಮೂರ್ತಿಗಳು. ಇದು ಅವರಿಗೂಕೂಡ ಮನದೇವತೆಯಾದ ಮನ್ಮಥನ ಮಾಯೆಯೇಹೊರ್ತು ಮತ್ತೊಂದಲ್ಲವೆಂದು ಪೇಳಿ, ವೇಗದಿಂದೆದ್ದು ಬಂದುಹಿಡಿ ಮಲ್ಲಿಗೆಯಮೊಗ್ಗುಗಳಂ ಬಿಡಿಸಿ ಅವರೊಳೊಂದು ಸಂಪಿಗೆಯ ಹೂವಂ ಇರಿಸಿ, ಅದಂ ತಾಳೆಯ ಹೂವಿನೊಳ್ಗುಟುಕಟ್ಟಿ ಮುಡಪುಮಾಡಿ ಚಂದ್ರನಿಗೆ ಎದುರಾಗಿ ಮೂರುಭಾರಿನಿವಾಳಿಶಿ, ಮಂದಮಾರುತನಿಗೆ ಕೂಡಾ ಇದೇ ಪರಿಯಾಗಿ ನಿವಾಳಿಶಿ ಅವರಿಂದಲೇ ಸೌಗಂಧಿಕಾದೇವಿಗೆ ರಕ್ಷೆಯಂಮಾಡಿ, ಮನ್ಮಥನಂಕುರಿತು ಎಲೈ ಮಹಾನುಭಾವನೇ; ನಿನ್ನ ಸಂಕಲ್ಪದಿಂದ ಈ ರಾಜಪುತ್ರಿಯು ಎದ್ದು, ಎಂದಿನಂತಿದ್ದರೆ ನಿನಗೆ ಕಲ್ಪೋಕ್ತವಾಗಿ ಪೂಜೆಯಂ ಮಾಡಿಸುತ್ತೇವೆಂದು ಪ್ರಾರ್ಥನೆಯಂಮಾಡಿ ಮಿಾಸಲಂಕಟ್ಟಲು. ಬಂದು ನಿಮಿಷಮಾತ್ರದೊಳ್ ಆ ಸೌಗಂಧಿಕಾದೇವಿಯು ಮೆಲ್ಲನೆ ಎದ್ದು ಅಲ್ಲಾಡುವದಕ್ಕೆ ಕೂಡ ಬಲವಿಲ್ಲದೆ ಇರುವ ಆ ಬಾಲೆಯಂ ಕುರಿತು ಅಮ್ಮ ನೀನು ಇಂತು ಇಲ್ಲಿಗೆ ಬಂದು ಈ ಸಾಹಸವಂ ಮಾಡಬಹುದೇ, ನಿನಗೆ ಏನು ಬುದ್ಧಿ ಬಂತು ಒಪ್ಪುಚೆಂದವಾಯಿತೆಂದುನುಡಿಯುತ, ಮೈಶಖಿಯಿಂದ ಕಂದಿರುವ ನೀಲಮಣಿಸರಂಗಳಂತಿರುವ ಮುಕ್ತಾಹಾರಂಗಳಂ, ಬಾಡಿರುವ ಸುರಹೊನ್ನೆಯ ಹೂವುಗಳಂ ನೋಡಿ ವಿರಹತಾಪವು ಮೈಯೊಳ್ಬಂಕಿಯಂತೆ ಪರಿರುವದು. ಈ ಪರಿ ಇರುವಾಗ ಈ ಕಾಂತೆಯು ಈ ಕಪ್ಪುರಪರಾಗದೊಳ್ಬಿದ್ದು ಇನ್ನೂ ಬದುಕಿರುವದು ಮಹಾನುಭಾವನಾದ ಕಾಮನಕಟಾಕ್ಷದ ಮಹಿಮೆಯೇ ಹೊರ್ತು ಮತ್ತೊಂದು ನಿಮಿತ್ತವಂ ಕಾಣೆವು. ಈ ಸಮಯಕ್ಕೆ ನಾವೇ ಪುಣ್ಯಾತ್ಮರೆಂದು ನುಡಿಯುತ ಪ್ರಾರ್ಥನೆಯಂಮಾಡಿದ ಪರಿಯಾಗಿ ಮನ್ಮಥಪೂಜೆಯಂ ಮಾಡಿ ಕೃತಾರ್ಥರಾಗುವಾ ಎಂದು ಸುಕುಮಾರಾಂಗಿಯಾದ ಸೌಗಂಧಿಕಾದೇವಿಗೆ ಸುಗಂಧಮಾದ ಪನ್ನೀರಿನಿಂದ ಶೀತೋಪಚಾರಾರ್ಥವಾಗಿ ಜಳಕವಂ ಮಾಡಿಸಿ, ತಾವರೇದಂಟುಗಳ ನೂಲುಗಳ ನೇಗೆಯಿಂದ ಮಾಡಿ ಮಡಗಿರುವ ಮಡಿಶೀರೆಯನ್ನುಡಿಶಿ, ತಾವರೆಯಹೂವುಗಳಂಶೀಳಿ ಬಿಚ್ಚೋಲೆಯಂತೆಕಿವಿಗಳೊಳಿಟ್ಟು, ಮಲ್ಲಿಗೆಯಮೊಗ್ಗುಗ

ಳಿಂ ಸಂಪಿಗೆಯ ಮೊಗ್ಗುಗಳಿಂ ಮಾಡಿರುವ ಬಾವುಲಿಗಳನ್ನಿಟ್ಟು, ಪಾರಿಜಾತ ಮೊಗ್ಗುಗಳ ತೊಟ್ಟುಗಳಿಂ ಸಾಲಾಗಿ ಪೋಣಿಸಿ ಮಾಡಿರುವ ಚಂದ್ರಮುರು ಗಳಿಂದ ಅಲಂಕರಿಸಿ ಶಾವಂತಿಗೆಯ ಹುವ್ವುಗಳನ್ನೇ ಜಡೆಬಿಲ್ಲೆಗಳಂತೆ ಜಡೆ ಯೊಳ್ ಅಳವಡಿಸಿ, ಕೆಂದಾವರೆಯ ಮೊಗ್ಗಂ ಚಂದವಾದ ಚೌರಿಯ ಕುಪ್ಪಿ ಗೆಯಂತೆ ಇರಿಸಿ, ದುಂಡುಮಲ್ಲಿಗೆಯ ಸರಂಗಳೊಳ್ ಅಲ್ಲಲ್ಲಿ ಪರಿಮಳ ವಾದ ಮರುಗದ ದಳಗಳಂ ತಾಯಿತಿಗಳಂತೆ ಸೇರಿಸಿ ಕಟ್ಟಾಣಿಯಂತೆ ಕಟ್ಟಿ, ಸಣ್ಣಜಾಜಿಯ ಮೊಗ್ಗುಗಳಂ ಎಂಟು ಸಾಲಾಗಿ ಎತ್ತರವಾಗಿ ಪೋಣಿಸಿ ಕೀಲುಗಳಲ್ಲಿ ದವನದ ಚಿಗರುಗಳಂ ಸೇರಿಸಿ ಮನೋಹರವಾಗಿ ಮಾಡಿದ ಕಂಕಣಂಗಳಂ ಕರಂಗಳೊಳ್ ಅಳವಡಿಸಿ, ಸುಗಂಧರಾಜಪುಷ್ಪವಂ ದಟ್ಟ ವಾಗಿಕಟ್ಟಿ ಅಡ್ಡಿಕೆಯಂ ಕೊರಳೊಳ್ಕಟ್ಟಿ, ಇಂತು ಸೌಗಂಧಿಕಾದೇವಿಗೆ ಕುಸುಮಗಳಿಂದಲೇ ಅಲಂಕಾರವಂಮಾಡಿ, ಮೊಗದೊಳ್ಬಾಳಂಬದ ಹುವ್ವಿ ನ ರೇಕಿನಿಂ ಬೊಟ್ಟಿಟ್ಟು, ಅರಳಿದ ಕನ್ನೈದಿಲೆಯಂ ಕಿವಿಯಸಂದಿಯೊಳ್ಸಿ ಕ್ಕಿಸಿ, ಇಕ್ಕೆಲದೊಳ್ ಹಸ್ತಲಾಗವನಿತ್ತು ಮಲ್ಲಿಕಾಮಂಟಪಕ್ಕೆ ಕರತರಲು.

ಆಗ ಸೌಗಂಧಿಕಾದೇವಿಯು ವನಲಕ್ಷ್ಮಿಯೇ ರೂಪುಗೊಂಡು ಬಂ ದಂತೆ, ಮನ್ಮಥನ ದೇವತೆಯೋ ಎಂಬಂತೆ ಮತ್ತು ಮೂರುಲೋಕವಂಮೋ ಹಗೊಳಿಸುವ ಸಮ್ಮೋಹನ ವಿದ್ಯೆಯೋ ಎಂಬಂತೆ, ಬಳ್ಳಿಯಂತೆ ಸೋಲು ತ, ಮಿಂಚಿನಂತೆ ಪೊಳೆಯುತ ಹುವ್ವುಗಳಂ ಕಟ್ಟಿರುವ ಮಂಟಪಕ್ಕೆ ಬಂದು ಪನ್ನೀರಿನಿಂ ಚಳೆಯಂಕೊಟ್ಟಿರುವ ಹುವ್ವಿನಹಾಸಿಗೆಯೊಳ್ಕುಳಿತು, ಯದು ರಾಗಿ ಕತ್ತುರಿಯಿಂ ಸಾರಿಸಿ ಅವರೊಳ್ಮನ್ಮಥಯಂತ್ರಾಕಾರವಾಗಿ ಪಚ್ಚ ಕ ಪ್ಪುರದಿರಂಗವಲ್ಲಿಯಂಬರದು,ಅದರಮೇಲೆ ಚಿಗರುಗಳಿಂದಗದ್ದಿಗೆಯಂಮಾ ಡಿ,ಆ ಗದ್ದಿಗೆಯೊಳ್ ಅರಳಿದ ಕನ್ನೈದಿಲೆಯನ್ನಿರಿಸಿಅದರಮಧ್ಯದೊಳ್ಕ ಸ್ತೂರಿ ಕುಂಕುಮಕೇಸರಿಗಳಿಂದ ಬಿಂದು ಗಿಣಿಯುಂ, ಕಾಮಬೀಜಸಹಿತ ನಾಗಿ ಸರ್ವಾಂಗಸುಂದರನಾದ ಮನ್ಮಥನಂ, ಅವನ ಕೈಗಳೊಳ್ಕಬ್ಬಿನಬಿಲ್ಲಂ ಪುಷ್ಪಬಾಣಂಗಳಂ, ಅವನಮುಡುಬಿನದೊಳ್ ಚಂದ್ರನಂ, ವಸಂತನಂ ಅವರ ಸುತ್ತಲೂ ಗಿಣಿಗಳಂ, ಕೋಗಿಲೆಗಳಂ, ಹಂಸೆಗಳಂ, ತುಂಬಿಗಳಂ, ಕೂಡಾ ಚಿತ್ರಲೇಖೆಯ ಕೈಯಿಂದ ಬರಸಿ, ಆ ಚಿತ್ರದೊಳ್ಮಂದವಮಾರು

ತವೆಂಬ ಮಂತ್ರದಿಂದ ಪ್ರಾಣಪ್ರತಿಷ್ಠೆಯಂಮಾಡಿ, ಬಳಿಕ ಷೋಡಶೋಪಚಾರಂಗಳಂ ಮಾಡಲುಜ್ಜುಗಿಸಿ ಮನ್ಮಥನೆ! ನಿನ್ನಂ ಧ್ಯಾನಿಸುವೆನು, ಅಂಗಜನೆ! ನಿನಗೆ ಸಿಂಹಾಸನವಂ ಸಮರ್ಪಿಸುವೆನು, ಸ್ಮರನೆ: ಸ್ನಾನವಂಮಾಡಿಸುವೆನು, ರತಿಪತಿಯೆ; ದಿವ್ಯದುಕೂಲವಂ ಅರ್ಪಿಸುವೆನು, ಮನಸಿಜನೆ; ಮನೋಹರವಾದ ಉಪವೀತವಂ ಕೊಡುವೆನು, ಮಕರಧ್ವಜನೆ, ನಿನಗೆ ಗಂಧವಂ ಅರ್ಪಿಸುವೆನು, ಶ್ರೀಪುತ್ರನೆ ಅಕ್ಷತೆಯಿಂದ ಆರಾಧಿಸುವೆನು, ಪುಷ್ಪಬಾಣನೆ; ನಿನ್ನಂ ಪುಷ್ಪಗಳಿಂದ ಪೂಜಿಸುವೆನು, ಮದನನೆ; ದಿವ್ಯಧೂಪದಿಂ ಧೂಪಿಸುವೆನು, ಕಂದರ್ಪನೆ ದೀಪವಂ ಸಮರ್ಪಿಸುವೆನು, ಅನಂಗನೆ ನಿನಗೆ ನೈವೇದ್ಯವಂ ಮಾಡುವೆನು, ಕುಸುಮಬಾಣನೆ ತಾಂಬೂಲವಂ ಅರ್ಪಿಸುವೆನು, ಕಾಯಜನೆ ನಿನಗೆ ಕರ್ಪೂರನೀರಾಜನವಂ ಗೈವೆನು, ಪುಷ್ಪಧನ್ವನೆ ಮಂತ್ರಪುಷ್ಪವಂ ಸಮರ್ಪಿಸುವೆನು, ಪ್ರದ್ಯುಮ್ನನೆ ಪ್ರದಕ್ಷಿಣೆಯಂ ಮಾಡುವೆನು, ಮೀನಕೇತನನೆ! ನಮಸ್ಕಾರವಂ ಗೈವೆನು, ಕಾಮನೆ ಕಾಮಿತವರವಂ ಕೊಡೆಂದು ಪ್ರಾರ್ಥಿಸಿ ಈಪರಿ ಉಪಚಾರಂಗಳಂ ನೆರವೇರಿಸಿ, ಮತ್ತು ಕಾಮನೆ ನಿನಗೆ ಕೈಮುಗಿವೆನು, ಪಂಚಬಾಣನೆ ನಿನಗೆ ಪ್ರಣಾಮವು, ಕಂದರ್ಪನೆ! ನಿನಗೆ ವಂದನೆಯು, ಸ್ಮರನೆ! ನಿನಗೆ ಸಾಷ್ಟಾಂಗವಾಗಿ ಎರಗುವೆನು, ರತಿಪತಿಯೆ! ನಿನಗೆ ತಲೆಬಾಗುವೆನು, ಪ್ರದ್ಯುಮ್ನನೆ ನಿನ್ನಲ್ಲಿ ಪ್ರಪತ್ತಿಯಂ ಮಾಡುವೆನು, ಮಾರನೆ ನಿನಗೆ ಶರಣುಮಾಡುವೆನು, ಮನಸಿಜನೆ ನಮಸ್ಕಾರವಂಮಾಡುವೆನು, ಅನಂಗನೆ ನಿನಗೆ ಅಂಜಲಿಬಂಧವಂ ಗೈವೆನು, ಮನ್ಮಥನೆ ನಿನ್ನ ಪಾದಂಗಳಿಗೆ ಮರಳಿಮರಳಿ ಎರಗುವೆನೆಂದು ಈ ಹತ್ತು ನಾಮಂಗಳಂ ಪೇಳಿ ಹತ್ತುಬಗೆಯಾದ ಪುಷ್ಪಂಗಳಿಂದ ಪೂಜಿಸಿ, ಬಳಿಕ ಗಿಣಿಗಳು ಮುಟ್ಟದಿರುವಫಲಂಗಳಂ, ತುಂಬಿಗಳುಸವಿಯದಿರುವ ಮಕರಂದಮಂ ಕೂಡೆ ನೈವೇದ್ಯವಂಮಾಡಿ, ಅರಳಿದ ಸೂರ್ಯಕಾಂತದ ಹೂವಿನಿಂ ನೀರಾಜನವಂಗೈದು, ಈ ದಶನಾಮಗಳಿಂದ ಯಾರು ತ್ರಿಲೋಕಪತಿಯಾದ ಮನ್ಮಥನಂ ಪೂಜಿಸುವರೋ; ಅವರು ದಶಾವಸ್ಥೆಗಳೊಳಗಾದವರಾದರೂಶೀಘ್ರದಿಂದಲೇ ತಮ್ಮಮನಸ್ಸಿಗೆ ಬೇಕಾದ ಪುರುಷರೊಡನೆ ಸಂಭೋಗ ಶೃಂಗಾರದೊಳ್ ಸುಖವಂ ಪಡೆ

ಯುವರೆಂದು ಚಿತ್ರಲೇಖೆಯು ಪೇಳುವ ಕಲ್ಪೋಕ್ತ ಪುರಾಣವಂ ಕೇಳಿ,
ಕಾಂಕ್ಷಿತಫಲಪ್ರದನಾದ ಮಹಾನುಭಾವನಾದ ತ್ರಿಲೋಕಪತಿಯಾದ ಆ
ಮನ್ಮಥನಂ ವಾಹನ ಮೊದಲಾದ ಸಕಲ ಪರಿವಾರಸಮೇತನಾಗಿ ಧ್ಯಾನವಂ
ಗೈಯುತ ನಿಶ್ಚಲವಾಗಿರುವ ಸಮಯದೊಳ್ಸಮೀಪದಲ್ಲಿರುವ ರಮಣೀ
ಯವಾದ ಗುಜ್ಜುಮಾವಿನಮರಗಳ ಗುಂಪಿನೊಳ್ಕುಳಿತಿರುವ ದೇವಲೋ
ಕದಿಂ ಬಂದ ಲೀಲಾಶುಕವು ಈ ನಾರಿಯರು ಎಲ್ಲರು ಮಾಡುವ ಅತಿಮ
ನೋಹರಂಗಳಾದ ಶೃಂಗಾರಚೇಷ್ಟೆಗಳೆಲ್ಲವಂ ಕ್ರಮವಾಗಿ ನೋಡಿ ಈ
ಭೂಲೋಕದಲ್ಲಿರುವ ಬಾಲೆಯರೆಲ್ಲರೂ ಸ್ವರ್ಗಲೋಕದ ಕಾಂತೆಯರಂತೆ
ಕಾಣಿಸುವರು, ಇದೇನೆಂದು ತನ್ನ ಮನದೊಳ್ತಾನೇ ಆಶ್ಚರ್ಯಪಡುತ
ಈಗ ಈ ಕಾಂತೆಯರಿಂದ ಕ್ರಮವಾಗಿ ಮಾಡಲ್ಪಟ್ಟ ಮನ್ಮಥನಪೂಜೆಯಂ
ನಾನು ಯಾವಾಗಲೂ ಎಲ್ಲಿಯೂ ನೋಡಲಿಲ್ಲ ಆದಕಾರಣ ಈಗ ದೈವ
ವು ಈ ರತಿಪತಿ ಪೂಜೆಯಂ ನನಗೋಸ್ಕರವೇ ರಚಿಸಿದಂತಾಯಿತು. ಮ
ತ್ತು ಈಗ ನಾನು ಮನ್ಮಥನ ಅರಗಿಣಿಯೇ ಸಾಕ್ಷಾತ್ಕಾರವಾದಂತೆ ಧ್ಯಾನ
ವಂ ಮಾಡುತ್ತಲಿರುವ ಈ ರಾಜಪುತ್ರಿಯು ಎದುರಾಗಿ ಪೋಗುವಾ ಎಂದು
ಯೋಚಿಸಿ, ಮಾವಿನಮರಗಳ ಗುಂಪಿನಿಂದ ಎದ್ದು ಮನ್ಮಥನಂ ಬರದು
ಪೂಜಿಸಿರುವ ಪುಷ್ಪಮಂಟಪದ ಮುಂದೆ ರೆಕ್ಕೆಗಳಂ ಪಟಪಟಾಯೆಂದು
ಬಡಿಯುತ್ತ, ಮಧುರವಾದ ನುಡಿಗಳಂನುಡಿಯುತ್ತ ಸೌಗಂಧಿಕಾದೇವಿಯ
ಮುಂದೆ ಬಂದು ಕುಳ್ಳಿರಲು. ಆಗ ಸೌಗಂಧಿಕಾದೇವಿಯು ಆಗಿಣಿಯರೆಕ್ಕೆ
ಗಳಶಬ್ದಗಳಂಕೇಳಿ ಕಣ್ದೆರದು ಎದುರಾಗಿ ಕುಳಿತಿರುವ ಶುಕವನ್ನೋಡಿ, ಇ
ದು ಈ ಲೋಕದ ಗಿಳಿಯಲ್ಲ, ಪಂಚರತ್ನಗಳಿಂದ ಮಾಡಿದಂತಿರುವದು
ಮಾತ್ರ ಮನ್ಮಥನ ಬಿರುದುಗಳಂ ನುಡಿಯುತ್ತಲಿರುವದು ಆದ್ದರಿಂದ ಮ
ನ್ಮಥನ ವಾಹನವಾದ ಗಿಣಿಯೇ ನನಗೆ ಪ್ರತ್ಯಕ್ಷವಾಯಿತು, ನಾನು ಕೃತಾ
ರ್ಥಳಾದೆನು ಎಂದು ಮನದೊಳ್ಸಂತೋಷವಂಪಟ್ಟು ಮಿತ್ರೆಯಾದಚಿ
ತ್ರಲೇಖೆಯ ಮೊಗವಂನೋಡಲು. ಆ ಚಿತ್ರಲೇಖೆಯು ಎನ್ನ ಒಡತಿಯೆ;
ನಿನ್ನ ಮಹಿಮೆಯಂ ಯಾರುಬಲ್ಲರು, ಉಪಶ್ರುತೀದೇವಿಯ ಕಟಾಕ್ಷ
ದಿಂ ಭೂಲೋಕದೊಳ್ ಅವತರಿಸಿರುವ ನೀನು ಶಚಿಯೋ, ಸರಸ್ವತಿ

ಯೋ ನಾನು ಅರಿಯೆ. ಇಂತಿಲ್ಲದಿದ್ದರೆ ಈ ಪೂಜೆಯೋಳ್ ಜಗತ್ಪತಿ ಯಾದ ಮನ್ಮಥನ ಮುಖ್ಯವಾಹನವಾದ ಈ ಶುಕವು ನಿನಗೆ ಪ್ರತ್ಯಕ್ಷ ವಾಗುವದೆಂದರೇನು; ನಿನ್ನ ಸೇವೆಯೋಳ್ ನಾವೆಲ್ಲರೂ ಇದ್ದದ್ದರಿಂದ ಈ ದೇವತಾಶುಕದ ದರ್ಶನವಂ ಗೈದೆವು, ಇದು ಯಾರಿಗೆ ಲಭಿಸುವದೆಂದು ಪೇಳಲಾಗ ಸೌಗಂಧಿಕಾದೇವಿಯು ವೇಗದಿಂದೆದ್ದು ಆ ಪಂಚವರ್ಣದಗಿಣಿಗೆ ಪ್ರದಕ್ಷಿಣೆ ನಮಸ್ಕಾರಂಗಳಂಮಾಡಿ, ಪರಮ ಭಕ್ತಿಯಿಂದ ಕೈಗಳಂಮುಗಿದು ನಿಂತಿರಲು.

ಆಕಾಲವೋಳ್ ಲೀಲಾಶುಕವು ಎಲೈ ಸೌಗಂಧಿಕಾದೇವಿಯೆ, ನೀನು ಮಾಡಿದ ಕಲ್ಪೋಕ್ತಪೂಜೆಯಿಂದ ನಮ್ಮ ಅರಸಾದ ಮನ್ಮಥಮಹಾರಾಯನು ನಿನ್ನಲ್ಲಿ ಕರುಣೆಯನ್ನಿಟ್ಟು ನೀನು ಮನದೊಳು ಬಯಸಿರುವ ಪುರುಷನಿಗೆ ನಿನ್ನಂ ವಿವಾಹವಂಮಾಡಿಸಿ ನೀವೀರ್ವರು ಸುಖದಿಂದಿರುವ ಸಮಾಚಾರವಂ ನಿನಗೆ ಪೇಳುವದೆಂದು ಕಟ್ಟುಮಾಡಿ ನನ್ನಂಕಳುಹಿಸಿರುವನು. ನಾನು ಅದೇಪರಿಯಾಗಿ ಮಾಡುವೆನು, ನೀನು ಚಿಂತೆಯಂ ಮಾಡಬೇಡವೆಂದು ಸಂತೋಷಕರಗಳಾದ ಮಾತುಗಳಿಂದ ಸಂತೈಸಲೂ ಚಿತ್ರಲೇಖೆಮೊದಲಾದವರೆಲ್ಲರು ಆ ಗಿಳಿಯ ಅಮೃತಸಮೃಶವಾದ ನುಡಿಯಂಕೇಳಿಸಂತೋಷಗೊಂಡು, ಈ ರಾಜಪುತ್ರಿಯ ಪ್ರಭಾವವೆಂತುಟೋ; ನಮ್ಮ ಪುಣ್ಯಾತಿಶಯವೆಂತುಟೋ ಎಂದು ಪೇಳುತ, ಬೆಳ್ದಿಂಗಳೆಲ್ಲ ಮಲಿನವಾಗಿ ಬರುವದಂಕಂಡು ಬೆಳಗಾಯಿತು ಹೋಗುವಾಎಂದು ಪೇಳಲು. ಸೌಗಂಧಿಕಾದೇವಿಯು ಆ ಲೀಲಾಶುಕವಂ ತನ್ನ ಕರಕಮಲದಮೇಲೆ ಕುಳ್ಳರಿಸಿಕೊಂಡು ಪರಮೇಶ್ವರನಂ ವರಿಸಲೋಸುಗ ತಪವಂಮಾಡಿ ಬಳಲಿ ಬಳಿಕ ಶುಕನಂಪಿಡಿದುಬರುತಲಿರುವ ಶ್ಯಾಮಲಾದೇವಿಯೋ ಎಂಬಂತೆ ತೋರುತ, ಇಂತಲ್ಲದೇ ಚಿತ್ರಲೇಖೆಯ ಹಸ್ತಲಾಗದಿಂದೊಡಗೂಡಿಬಳುಕುತಬಂದುಮೆಲ್ಲನೆ ನಿಜಾಂತಃಪುರವಂಸೇರಿ, ತಾನು ಮನಳಿಸುವ ಮನೆಯೋಳ್ ಹೊಸದಾಗಿ ಮುತ್ತಿನಸರಗಳ ಸರಪಣಿಗಳಿಂದಕೂಡಿದ ಪವಳದ ಒಂದು ಸಣ್ಣಮಂಚವಂಚನ್ನಾಗಿ ಮಾಡಿಸಿ, ಅದಕ್ಕೆ ತಕ್ಕಹಾಸಿಗೆಯಂದಿಂಬುಗಳಂ ಮಾಡಿಸಿ, ಆಗಿಣಿಯಂ ಅದರೊಳು ಕುಳ್ಳರಿಸಿ, ಅದಕ್ಕೆ ಯೋಗ್ಯವಾದ ಕೆತ್ತನೆಯ ಬಟ್ಟಲಂ ಮಾಡಿಸಿ

ಅದರೊಳಗೆ ಮಧುರವಾದ ಅನ್ನಂಗಳಂ, ರುಚಿಕರಂಗಳಾದ ಫಲಂಗಳಂ ಸಹಾ ಆ ಗಿಣಿಗೆ ಕೊಡುತ ಏಕಾಂತದೊಳ್ ಎಲೈ ಲೀಲಾಶುಕವೆ ; ನೀನು ಮನ್ಮಥನ ಅರಗಿಣಿಯೆಂದು ಪೇಳಿದೆ; ಇದು ಯಥಾರ್ಥವೇ ಸರಿ, ಆದರೆ ನಾನು ಮನುಷ್ಯಳಾದ್ದರಿಂದ ಮರಳಿ ಕೇಳುವೆನು ಕೋಪಗೊಳ್ಳಬ್ಯಾಡ, ನೀನು ಮನ್ಮಥವಾಹನವಾದ ದೇವಲೋಕದ ಶುಕವೆನ್ನುವದಕ್ಕೆ ನಿದರ್ಶನವೇನು, ಲಕ್ಷಣವೇನು ಅದಂ ಪೇಳಿದರೆ ಕೇಳಿ ಸಂತೋಷಪಡುವೆನು ಎಂದು ನುಡಿಯಲಾ ಸೌಗಂಧಿಕಾದೇವಿಯ ಸರಸವಚನಂಗಳಂ ಲೀಲಾಶುಕವು ಕೇಳಿ ತನಗೆ ಸಮಯವು ಒದಗಿತೆಂದು ತಿಳಿದು ಎಲೈ ರಾಜಪುತ್ರಿಯೆ ; ಕೇಳು ಮನಸಿಜನಾದ ಮನ್ಮಥನು ಸಕಲಜನಂಗಳ ಮನಸದೊಳ್ ಇರುವನು. ಅದು ಕಾರಣ ಆ ಮಹಾತ್ಮನಿಗೆ ವಾಹನವಾದ ನನಿಗೆ ಯಾರ ಮನದೊಳ್ ಏನು ಇರುವದೋ ಅದನೆಲ್ಲವಂ ಪೇಳುವುದೇ ನನಿಗೆ ಲಕ್ಷಣ, ಇದಲ್ಲದೆ ಭೂತಭವಿಷ್ಯದ್ವರ್ತಮಾನಂಗಳಾದ ಕಾರ್ಯಂಗಳನೆಲ್ಲವಂ ಬಲ್ಲೆನೆಂದು ಪೇಳಲಾ ಮಾತಿಗೆ ಕಳಿಂಗರಾಜಪುತ್ರಿಯು ಈಗ ನನ್ನ ಮನಸ್ಸಿನೊಳಿರ್ದ ಭಾವನಂ ಪೇಳಿದರೆ ಕೇಳುವೆನೆನ್ನುವ ಸಮಯದೊಳ್ ಆ ಗಿಣಿಯು ಕಣ್ಣುಗಳಂ ಮುಚ್ಚಿ, ಕ್ಷಣಮಾತ್ರ ಧ್ಯಾನವಂ ಮಾಡುವಂತೆ ಸುಮ್ಮನಿದ್ದು, ಬಳಿಕ ಕಣ್ಣುಗಳಂ ತೆರೆದು ಎಲೈ ಸುಕುಮಾರಾಂಗಿಯೆ; ನೀನು ನಾಲ್ಕು ದಿನಂಗಳ ಕೆಳಗೆ ಸಂಗೀತಸಾಹಿತ್ಯ ಮೊದಲಾದ ಲೀಲಾವಿಶೇಷಂಗಳಿಂದ ಹೊತ್ತುಕಳೆಯಲಾರದೆ ಬ್ಯಾಸರಗೊಂಡು ಚಿತ್ರಶಾಲೆಯನ್ನೈದಿ ಅಲ್ಲಿ ವಿಚಿತ್ರವಾಗಿ ಬರದಿರುವ ಸತ್ಯಲೋಕ, ಕೈಲಾಸ, ವೈಕುಂಠಗಳಂ ನೋಡುತ, ಬಳಿಕ ಸುಧರ್ಮಸಭೆಯೊಳ್ ಒಡ್ಡೋಲಗಂಗೊಂಡಿರುವಂತೆ ಬರದಿರುವ ದೇವೇಂದ್ರನಂ ಕಂಡು ಮೋಹವಂಗೊಂಡು ಚಿಂತೆಯಂ ಮಾಡುತಲಿದ್ದೀಯೋ ಎಂದು ಪೇಳಲಾ ಶುಕದ ಮಧುರಂಗಳಾದ ಮಾತುಗಳಂ ಕೇಳಿ ಸೌಗಂಧಿಕಾದೇವಿಯು ಆ ಗಿಣಿಯಂ ಮಹಾಮಹಿಮೆಯುಳ್ಳದ್ದೆಂದು ತಿಳಿದು ಪ್ರದಕ್ಷಿಣೆ ನಮಸ್ಕಾರವಂ ಮಾಡಿ ಎಲೈ ಅರಗಿಣಿಯೆ; ನನ್ನ ತಪವು, ಪುಣ್ಯವು, ಐಶ್ವರ್ಯವು, ಸೌಭಾಗ್ಯವು, ಮತ್ತೂ ನನ್ನ ಇಷ್ಟದೇವತೆಯೂ ಕೂಡ ನಿನ್ನರೂಪದಿಂದ ಪ್ರತ್ಯಕ್ಷವಾಯಿತೆಂದು ಸ್ತೋತ್ರವಂಗೈದು, ಈಗ ನೀನು ಮನ್ಮಥ

ನ ವಾಹನವಾದ ಗಿಣಿಯೇ ಸರಿಯೆಂದು ನಿಶ್ಚಯವಾಗಿ ತಿಳಿದೆನು. ಆದ್ದರಿಂ ಈಗ ನಿನ್ನಂ ಕುರಿತು ಒಂದು ಕಾರ್ಯಗೌರವವಂ ಕೇಳಬೇಕೆಂದು ಇರುವೆನು ಎನುತ್ತ ಮೊಗದೊಳ್ ಮಂದಹಾಸವಂ,ನೇತ್ರಂಗಳೊಳ್ ಲಜ್ಜೆಯಂ, ಮನದೊಳ್ ಸಂತೋಷಮಂ, ಮೈಯ್ಯೊಳ್ ಪುಳಕಮಂಗೊಂಡು ಇರಲಾಕಳಿಂಗರಾಜಪುತ್ರಿಯಂ ಕಂಡು ಲೀಲಾಶುಕವು ಎಲೈ ಅರಸಿಯೆ ನಿನ್ನಮನದೊಳಿರುವ ಭಾವನಂ ತಿಳಿದಿರುವ ನನ್ನಎದುರಾಗಿ ನಾಚಿಗೆಗೊಳ್ಳಲು ಕಾರಣವೇನು, ಕಳಿಂಗರಾಯನೆಂತುಟೊ, ನಾನು ಅತನಂತೆ ಎಂದು ನುಡಿದು, ನೀನು ಕೇಳಬೇಕೆನ್ನುವ ಕಾರ್ಯಗೌರವವಂ ನಾನು ತಿಳಿದಿರುವೆನು, ಅದಂ ಪೇಳುವೆನು ಕೇಳು, ನೀನು ಚಿತ್ರಶಾಲೆಯೊಳ್ ಕಂಡ ವಿಚಿತ್ರರೂಪವುಳ್ಳ ಪುರುಷನಂತಿರ್ಪ ಪುರುಷನು ಲೋಕತ್ರಯಂಗಳಲ್ಲಿಯೂ ಇಲ್ಲದೇಯಿರುವಾಗ ಈ ಯೋಚನೆಯು ಎಂತು ಕೊನೆಮುಟ್ಟುವದೋ, ನಾನು ಎಂತು ಸುಖವನ್ನೈದುವೆನೋ ಎಂದು ಸಂತಾಪವಂಗೊಂಡು ಇದ್ದೀಯೆ, ಆದ್ದರಿಂ ಇದಂ ನೆರವೇರಿಸುವದೆಂದು ನನಗೆ ಮನ್ಮಥನ ಆಜ್ಞೆಯಾಗಿರುವದು. ಈ ದುರ್ಘಟವಾದ ಕಾರ್ಯವಂ ನೆರವೇರಿಸಲೋಸುಗ ನಾನು ಬದ್ಧಕಂಕಣನಾಗಿರುವಾಗ ನಿನಿಗೆ ಈ ಚಿಂತೆಯಾತಕ್ಕೆಂದು ನುಡಿಯಲಾಮಾತಿಗೆ ಸೌಗಂಧಿಕಾದೇವಿಯು ಎಲೈ ಶುಕಚಂದ್ರನೆ, ಈ ಕಾರ್ಯಭಾರವಂ ನೀನು ವಹಿಸಿರುವದರಿಂದ ನಿನ್ನ ಪಾದಾರವಿಂದಂಗಳನ್ನೇ ನಂಬಿ ಇರುವೆನು ಮತ್ತೂ ಈ ಅಶಕ್ಯವಾದ ಕಾರ್ಯವು ಯೇನುಮಾಡಿದರೆ ಕೈಗೂಡುವದೋ, ಆ ಪುರುಷನು ಎಲ್ಲಿರುವನೋ ನನಗೆ ಎಂತು ದೊರಕುವನೋ ಎಂದು ಅಜ್ಞಾನದಿಂದ ಸಂಶಯಂಗೊಂಡಿರುವೆನೆಂದು ನುಡಿಯಲಾಮಾತಂಕೇಳಿ ಆ ದೇವಶುಕವು ಕೆಲವು ಹೊತ್ತು ಸುಮ್ಮನಿದ್ದು, ಹಾ, ಈಗತಿಳಿಯಿತು ಆಯಿತುಕೆಲಸವೆಂದು ನಗುತ್ತ, ಎಲೈ ಪುಣ್ಯವತಿಯೆ, ಕೇಳು ಬ್ರಹ್ಮನು ಲೋಕದೊಳ್ ಹೆಂಗಸರ ಸೃಷ್ಟಿಯಂ ಮಾಡುವದಕ್ಕೆ ಮೊದಲಲ್ಲಿಯೆ ಅವರಿಗೆ ಅನುರೂಪರಾದ ಪುರುಷರಂ ಸೃಷ್ಟಿಯಂ ಮಾಡಿರುವನು. ಆದರೂ ನಾವು ಒಂದು ಉಪಾಯವಂ ಚಿಂತಿಸಿ ಕಾರ್ಯವಂ ಕೈಗೊಳ್ಳಬೇಕು ನಾನು ಈಗ ಪೇಳುವ ವಾಕ್ಯವಂ ಸಾವಧಾನಳಾಗಿ ಕೇಳಿ ಚಿತ್ತದೊಳ್ ಇರಿಸಬೇಕು. ಮತ್ತೂ

ವೇದವಾಕ್ಯಂಗಳಂತೆ ನಡೆಯಿಸುತ್ತೀನೆಂದು ಪ್ರತಿಜ್ಞೆಯಂ ಮಾಡಿದರೆ ನಾನು ಪೇಳುವೆನು-ಅಲ್ಲದಿದ್ದರೆ ಪೇಳಕೂಡದೆಂದು ನುಡಿಯಲಾಗಿಣಿಯನುಡಿಯಂ ಕೇಳಿ ಸೌಗಂಧಿಕಾದೇವಿಯು ವೇದಂಗಳಂ ಯಾರುಬಲ್ಲರು, ವೇದಂಗಳೂ ನೀನೆ, ವೇದಾರ್ಥಂಗಳೂ ನೀನೆ ಎಂದು ತಿಳಿದಿರುವೆನು. ಮತ್ತು ಈ ಲೋಕವ, ಈ ಶರೀರವನ್ನಾದರೂ ಬಿಡುವೆನು. ನಿನ್ನ ಆಜ್ಞೆಯಂ ಮೀರುವಳಲ್ಲವೆಂದು ಭಾಷೆಯಂಕೊಟ್ಟು, ಎಲೈ ಶುಕವೇ! ನನ್ನ ಮನೋನಿಶ್ಚಯವಂ ನೀನು ತಿಳಿದಿರ್ದೂ ನನ್ನಿಂದ ಇಷ್ಟುಮಾತುಗಳನ್ನಾಡಿಸುವದು ನಿನಗೆ ಧರ್ಮವೇ? ಎಂದು ತಲೆವಾಗಿ ಕಣ್ಣುಗಳಿಂದ ಗಳಗಳನೆ ಕಂಬನಿಗಳನ್ನು ಮುತ್ತಿನಸರಗಳಂತೆ ಸುರಿಯಿಸುತ ನಿಟ್ಟುಸುರಂಬಿಡಲಾ ನೀರಜಾಕ್ಷಿಯಂ ನೋಡಿ, ಲೀಲಾಶುಕವು ಈ ಮಾತಿಗೆ ಇಷ್ಟ್ಯಾಕೆ ಚಿಂತೆ, ಚಿಂತಿಸಬೇಡೆಂದು ಸವಿನುಡಿಗಳಿಂದ ಸಂತೈಸಿ, ಆದರೆ ಪೇಳುವೆನು ಕೇಳು ಈ ಚಿತ್ರದೊಳಿರುವಂತೆ ರೂಪವಂ ತಾಳಿದವನಂ ಹುಡುಕುವಾ ಎಂದರೆ ನೀನು ಅಷ್ಟು ಕಾಲವಿಳಂಬವಂ ಸೈರಿಸಲಾರೆ, ಆದ್ದರಿಂದ ಈಗ ಸ್ವಯಂವರ ಮಹೋತ್ಸವವೆಂದು ಸಾರಿಸಿ, ದೇಶದೇಶಂಗಳ ಅರಸುಗಳಂ ಕರಸಿ, ಬಳಿಕ ಕೂಡಿರುವ ರಾಜಮಂಡಲದೊಳ್ ನಾಲ್ಕು ದಂತಗಳುಳ್ಳ ಬಿಳಿಯ ಆನೆಯಂ, ವಾಯುಪುತ್ರನ ಮನವೇ ಕಡಿವಾಣವಾಗಿ ರೆಕ್ಕೆಗಳಿಂ ಕೂಡಿರುವ ಅಶ್ವರತ್ನವಂ, ಸಕಲ ಕಾಲಂಗಳಲ್ಲಿಯು ಬೇಕಾದ ವಸ್ತುಗಳಂ ಕೊಡುವವೃಕ್ಷವಂ, ದಿನದಿನದೊಳ್ ಹನ್ನೆರಡುಭಾರ ಸುವರ್ಣವಂ ಕೊಡುವ ಮಣಿಯಂ, ಸಕಲ ಭಕ್ಷ್ಯಭೋಜ್ಯಂಗಳಂ ಕೊಡುವ ಧೇನುವಂ, ಪದ್ಮಿನೀ ಮೊದಲಾದ ಜಾತಿಗಳಲ್ಲಿ ಸಾಂಕರ್ಯವಿಲ್ಲದಂತೆ ಲಕ್ಷಣಂಗಳಿಂದ ಒಪ್ಪಿರುವ ನಾಲ್ಕುಮಂದಿ ಹೆಂಗಸರಂ, ಆಕಾಶದೊಳು ನಡೆಯುವ ವಿಮಾನವಂ, ಯಾವ ರಾಜಕುಮಾರನು ತಂದುಕೊಡುವನೋ ಅವನ ಕಂಠದೊಳು ಪುಷ್ಪಮಾಲಿಕೆಯಂ ಹಾಕಿ ವರಿಸುವೆನೆಂದು ಪ್ರತಿಜ್ಞೆಯಂ ನೀನು ಸಭಾಮಧ್ಯದೊಳು ಮಾಡಿದರೆ ಆ ರಾಜಮಂಡಲದೊಳು ಯಾವವನು ಇವನೆಲ್ಲವಂ ತರುವನೋ ಆ ಸುಕುಮಾರನೇ ನೀನು ಚಿತ್ರದಲ್ಲಿ ನೋಡಿದ ಪುರುಷನ ರೂಪಮಹಿಮೆಗಳಿಂದ ಪೂರ್ಣನಾಗಿರುವನಲ್ಲಿ ಸಂದೇಹವಿಲ್ಲವೆಂದು ಪೇಳಲಾಗಿಣಿಯ ಮಾತಂ

ಕೇಳಿ ಸೌಗಂಧಿಕಾದೇವಿಯು ಮಹಾಮಂತ್ರದಂತೆ ಮನಸ್ಸಿನೊಳು ಇಟ್ಟು ಎಲೈ ಲೀಲಾಶುಕವೇ! ಈಗ ನೀನು ನನ್ನಲ್ಲಿ ಅಂತಃಕರಣಪೂರ್ವಕವಾಗಿ ಹೇಳಿದ ವೃತ್ತಾಂತವೆಲ್ಲವಂ ನಮ್ಮ ತಾಯಿ ತಂದೆಗಳಾದ ಸುಲೋಚನಾದೇವಿ, ವಿಜಯವರ್ಮರಾಯ ಇವರೀರ್ವರಿಗೂ ನನ್ನ ಮುಖ್ಯಸಖಿಯಾದ ಚಿತ್ರಲೇಖೆಯ ಮುಖದಿಂದ ವಿಸ್ತಾರವಾಗಿ ತಿಳಿಯಿಸುವಂತೆ ನೀನೆ ಪ್ರಯತ್ನವಂ ಮಾಡಬೇಕಲ್ಲದೆ ಮತ್ತೊಬ್ಬರಿಂದ ಈ ಕಾರ್ಯವು ಆಗಲಾರದೆಂದು ಹೇಳಿ ಮಜ್ಜನ ಭೋಜನಾದಿಗಳಂಬಿಟ್ಟು ಕುಳಿತಿರಲು. ಆ ಲೀಲಾಶುಕವು ಅದೇಪರಿಯಾಗಿ ಮಾಡುವೆನೆಂದು ಹೇಳುತ್ತಿರುವಷ್ಟರೊಳು, ಆ ರಾಜಪುತ್ರಿಯಂ ಎಬ್ಬಿಸಬೇಕೆಂದು ಬಂದ ಚಿತ್ರಲೇಖೆಯಂ ಕರದು ಲೀಲಾಶುಕವು ಎಲೈ ಚಿತ್ರಲೇಖೆಯೆ; ನೀನು ರಾಜಪುತ್ರಿಗೆ ಪ್ರಾಣರೂಪಳಾಗಿರುವ ಸಖಿಯು, ಇದಲ್ಲದೆ ಸಕಲವಿದ್ಯದಲ್ಲಿಯು ನಿಪುಣೆಯು, ದುರ್ಘಟಂಗಳಾದ ಕಾರ್ಯಂಗಳ ಘಟನೆಯಂ ಮಾಡುವದರಲ್ಲಿ ಚತುರೆಯು, ಪರರ ಮನಸ್ಸುಗಳಂ ರಂಜಿಸುವಂತೆ ಮಾತುಗಳನ್ನಾಡುವದರಲ್ಲಿ ಜಾಣೆಯು, ಸಮಯಗಳನ್ನರಿತು ರಾಜರ ಸನ್ನಿಧಿಯಲ್ಲು, ರಾಜಾಂತಃಪುರದಲ್ಲಿಯು, ಉಚಿತಗಳಾದ ವಚನಂಗಳಂ ಹೇಳಿ ಉಚಿತಂಗಳಾದ ಕಾರ್ಯಂಗಳು ವಿಹಿತವಾಗಿ ನಡಯಿಸುವದರಲ್ಲಿ ಮಂತ್ರಿಗಳಿಗಿಂತಲೂ ಪ್ರವೀಣೆ. ಅದಂ ತಿಳಿದಿರುವೆನು, ಇಂತಿರುವ ಪ್ರಾಣಸಖಿ ಇರುವಾಗ ಈ ಸೌಗಂಧಿಕಾದೇವಿಗೆ ಈಪರಿಯ ಚಿಂತೆಯಾಕೆಂದು ನುಡಿದು, ಮತ್ತೂ ತಾನು ಆ ರಾಜಪುತ್ರಿಗೆ ಹೇಳಿದ ಮಾತುಗಳೆಲ್ಲವಂ ಅವಳ ತಂದೆ ತಾಯಿಗಳಿಗೆ ತಿಳಿಯಿಸುವದೆಂದು ಹೇಳಲು. ಆ ಮಾತಂಕೇಳಿ ಚಿತ್ರಲೇಖೆಯು ಎಲೈ ಶುಕವೇ; ನೀನು ನನ್ನಲ್ಲಿ ವಾತ್ಸಲ್ಯದಿಂದ ಈಪರಿಯಾಗಿ ಅಪ್ಪಣೆಯಂ ಕೊಡುವೇ ಎಂದು ನುಡಿದು, ಮತ್ತು ನೀನು ಅಪ್ಪಣೆಯಂಕೊಟ್ಟಂತೆ ಮಾಡುವೆನೆಂದು ಬಿನ್ನವಿಸಿ ಆ ಶುಕಕ್ಕೆ ಪ್ರಣಾಮವಂ ಮಾಡಿ ಅದರ ತಾತ್ಪರ್ಯವಂ ಮನಸ್ಸಿಗೆ ತಂದು ಅಲ್ಲಿಂದಬಂದು ಎತ್ತರವಾಗಿ ಮಾಡಿರುವ ಜಾಜೀಹುವ್ವಿನ ಹಾಸಿಗೆಯ ಮೇಲೆ ಪವಳಿಸಿರುವ ಸೌಗಂಧಿಕಾದೇವಿಯ ಕರಕಮಲವಂಪಿಡಿದು ಮೆಲ್ಲನೆ ಎಬ್ಬಿಸಿ ಮಜ್ಜನಗೃಹಕ್ಕೆ ಕರೆತಂದು ಪರಿಮಳಯುಕ್ತವಾದ ಪರಮಶೀತೋದಕದಿಂದ ಮಜ್ಜ

ಸವಂ ಮಾಡಿಸುವಾಗ ಬಳಲಿ ಬಿಳ್ಪೇರಿ ಕೃಶವಾಗಿರುವ ಸುಕುಮಾರ ಶರೀರವಂ ನೋಡಿ ಮನದೊಳು ಪರಿತಾಪವಂಗೊಂಡು, ವೇಗದಿಂದ ಈಪರಿಯುಂ ಸುಲೋಚನಾದೇವಿಗೂ, ವಿಜಯವರ್ಮರಾಯನಿಗೂ ಬಿನ್ನೈಸಬೇಕೆಂದು ನಿಶ್ಚೈಸಿ, ರಾಜಪುತ್ರಿಗೆ ಭೋಜನಾದ್ಯುಪಚಾರಂಗಳಂ ಬಲಾತ್ಕಾರದಿಂದ ಮಾಡಿಸಿ ಲೀಲಾಮಂದಿರಕ್ಕೆ ಕರತಂದು ಬಳಿಕ ರಾಜಪುತ್ರಿಯು ಅನುಭವಿಸುತ್ತಲಿರುವ ವಿರಹತಾಪವ ನೋಡಿ ಅದಂ ತಾನೇ ಅನುಭವಿಸುವಂತೆ ತೋರ್ಪಡಿಸುತ ಕಳಿಂಗರಾಜನಿರುವ ಅಂತಃಪುರಕ್ಕೆ ಬಂದು ಸಮಯವಂ ನೋಡುತ್ತಿರಲು. ಅಲ್ಲಿ ವಿಜಯವರ್ಮರಾಯನು ಸ್ನಾನಾಹ್ನಿಕಗಳನ್ನೆರವೇರಿಸಿ ತನ್ನ ಧರ್ಮಪತ್ನಿಯುಮನೆಯೊಳು ಭೋಜನಂಗೈದು, ಬಳಿಕ ದಂಪತಿಗಳೀರ್ವರು ಚಿನ್ನದ ಚೌಕಿಯೊಳು ಕುಳಿತು ಕಪ್ಪುರವೀಳ್ಯವಂ ಸವಿಯುತ, ವಿದ್ಯಾಸಾಗರನು ಸುಗಂಧರಾಜೇಂದ್ರನ ಕಟಕಕ್ಕೆ ಪೋಗಿ ಬಂದಬಳಿಕ ಅವನು ಪೇಳಿದ ಆ ರಾಜಕುಮಾರನ ಪರಾಕ್ರಮವಂ ಬಣ್ಣಿಸುತ ತನ್ನ ಪುತ್ರಿಯಾದ ಸೌಗಂಧಿಕಾದೇವಿಗೆ ವಿವಾಹ ಸಮಯವಾಯಿತೆಂದು, ಮಾತನಾಡುತಲಿರುವ ಸಮಯದೊಳು ಚಿತ್ರಲೇಖೆಯು ಇದೇಸಮಯವೆಂದು ಎದುರಾಗಿ ಪೋಗಿ ರಾಜದಂಪತಿಗಳ ಪಾದಂಗಳಿಗೆರಗಿ ನಿಲ್ಲಲು, ರಾಯನು ಅವಳಂನೋಡಿ ವಿಶೇಷವಾಗಿ ವಸ್ತ್ರಾಭರಣಂಗಳಂ ಧರಿಸದೆ ಇರುವದರಿಂದಲು, ಮೊಗದೊಳ್ ಏನೋಬಂದು ಹೊಸಪರಿಯಾಗಿರುವ ಭಾವದಿಂದಲು ಅವಳ ಅಭಿಪ್ರಾಯವಂ ತಿಳಿಯಬೇಕೆಂದು ಎಲೈ ಚಿತ್ರಲೇಖೆಯೆ; ಕುಮಾರಿಯು ಕುಶಲದಿಂದಿರುವಳೇ ಎಂದು ಕೇಳಲಾಚಿತ್ರಲೇಖೆಯು ಮಹಾರಾಯನೇ ; ಶ್ರೀ ಉಪಶ್ರುತೀದೇವಿಯ ಕಟಾಕ್ಷದಿಂದ ನಿನಿಗೆ ಪುತ್ರಿಯಾಗಿ ಉದಯಿಸಿರುವ ಮಹಾಪುಣ್ಯವತಿಯಾದ ಸೌಗಂಧಿಕಾದೇವಿಗೆ ಯಾವದರಲ್ಲಿ ಏನುಕಡಮೆ ಎಂದು ಬಿನ್ನವಿಸಲಾಮಾತ್ರಂ ಕೇಳಿ ವಿಜಯವರ್ಮರಾಯನು ತನ್ನ ಮನದೊಳು ಈ ಚಿತ್ರಲೇಖೆಯುಂ ಕುಮಾರಿಯು ಏನಾದರೂ ಬಿಡಿಮಾತುಗಳಿಂದ ಕೋಪವಂಮಾಡಿರುವಂತೆ ಕಾಣುತಲಿಧೆ ಎಂದು ಊಹಿಸಿ, ಎಲೈ ಚಿತ್ರಲೇಖೆಯೆ; ನೀನ್ಯಾಕೆ ಏನೋಬಂದು ಪರಿಯಿಂದಇರುವೆ ನಮ್ಮ ಪುತ್ರಿಯು ನಿನ್ನನ್ನೇನಾದರೂ ಅಂದಳೋ ಅಥವಾ ಅಲ್ಲಿರುವ ಸಖೀರುಗ

ಳಲ್ಲಿ ಏನಾದರು ಮಾತುಕಥೆಗಳು ನಡದಿರುವದೋ ಎಂದು ಕೇಳಲಾ ಚಿತ್ರಲೇಖೆಯು, ಸ್ವಾಮಿಯೆ; ನಿನ್ನ ಕಟಾಕ್ಷವಿರುವಾಗ ಈ ಸಂಗತಿಗಳೊಂದೂ ನಡೆಯಲಾರವು. ನಮ್ಮ ಅರಸಿಯು ನನ್ನಂ ತನ್ನ ಪ್ರಾಣವಾಗಿ ಕಾಣುತ್ತಿರುವಳು ಎಂದು ನುಡಿದು ತಾನು ಬಂದಿರುವ ಕಾರ್ಯವಂ ಪೇಳುವದಕ್ಕೆ ನಾಚಿಗೆಗೊಂಡು ತಲೆಬಾಗಿ ಸೊಗಸುನೋಟದಿಂ ಕೆಲಬಲದೊಳ್ ನೋಡುತ ಭಯವಂ, ಉತ್ಸಾಹವಂ, ತ್ವರೆಯಂ, ಕೌತುಕವಂ ಗೊಂಡಿರಲು. ವಿಜಯವರ್ಮರಾಯನು ಆ ಚಿತ್ರಲೇಖೆಯಂ ಕರದುಕೊಂಡು ಪೋಗಿ ಮಾತನಾಡಿಬಾ ಎಂದು ರಾಣಿಗೆ ಅಪ್ಪಣೆಯಂ ಕೊಡಲು. ಸುಲೋಚನಾದೇವಿಯು ಸೌಗಂಧಿಕಾದೇವಿಯ ಯೌವನಾರಂಭವಂ ಪೇಳುವದಕ್ಕೆ ಬಂದಿರಬಹುದೆಂದು ಕೇಳಲಾ ಸುಲೋಚನಾದೇವಿಗೆ ಚಿತ್ರಲೇಖೆಯು ಕುಮಾರಿಯ ಬ್ಯಾಸರವಂ, ಅವಳು ಚಿತ್ರಶಾಲೆಗೆ ಬಂದಿರ್ದುದಂ, ಒಬ್ಬಳೇ ವಸಂತವನವಂ ಕುರಿತು ಪೋಗಿರ್ದುದಂ, ಅಲ್ಲಿ ಬೆಳ್ದಿಂಗಳ ಶಖೆತಟ್ಟಿ ಮೂರ್ಛೆ ಪೋದುದಂ, ಅದಂ ಕಂಡು ತಾವೆಲ್ಲರೂ ಹುಡುಕಿ ಬೆದರಿ ಮನ್ಮಥನಿಗೆ ವಿಜ್ಞಾಪಿಸಲಂ ಕಟ್ಟಿ ಮೂರ್ಛೆಯಿಂದೆಬ್ಬಿಸಿ ಪೂಜೆಯಂ ಗೈಸಿದುದಂ, ಆ ಕಾಲದೊಳು ಮನ್ಮಥನ ವಾಹನವಾದ ಗಿಣಿಯು ಪ್ರತ್ಯಕ್ಷವಾದುದಂ ಕೂಡಾ ಪೇಳಲಾಗ ಸುಲೋಚನಾದೇವಿಯು ಎಲೈ ಚಿತ್ರಲೇಖೆಯೆ; ನನ್ನ ಮಗಳು ನಿನ್ನಿಂದ ಮರಳಿ ಹುಟ್ಟಿದಂತಾಯಿತು. ಈ ಸೌಗಂಧಿಕಾದೇವಿಯು ನನ್ನ ಮಗಳಲ್ಲ ನಿನ್ನ ಮಗಳೆಂದು ಪೇಳಿ ಅವಳಂ ಅಪ್ಪಿಕೊಂಡು ಬಳಿಕ ಅವಳಿಗೆ ತಾನು ಅಲಂಕಾರವಂ ಕೈಕೊಳ್ಳುವ ಬಂದುವಾರದ ಒಡವೆಗಳನೆಲ್ಲವಂ ಕೊಟ್ಟು, ತ್ವರೆಯಿಂದ ಎದ್ದು ರಾಯನ ಸಮೀಪಕ್ಕೆ ಬಂದು ಚಿತ್ರಲೇಖೆಯು ಪೇಳಿದವೃತ್ತಾಂತವೆಲ್ಲವಂ ಬಿನ್ನವಿಸಲು. ರಾಯನು ವೇಗದಿಂದೆದ್ದು ನೋಡಿಬರುವಾ ಎಂದು ಚಿತ್ರಲೇಖೆಯಂ ಮುಂದುಮಾಡಿಕೊಂಡು ರಾಣಿಯೊಡನೆ ಅಂತಃಪುರಮಾರ್ಗದಿಂ ತೆರಳಿ ಬರುವಾಗ ಅಲ್ಲಲ್ಲಿರುವ ಸಖಿಯರು ಅರಳಿದ ತಾವರೆಯ ಕೇಸರಂಗಳಂ ಬಿಡಿಸಿ ಎಸಳುಗಳಂ ಕತ್ತರಿಸಿ ಬೇರೆ ಬೇರೆ ರಾಶಿಗಳಂ ಮಾಡಿ ಹಾಸಿಗೆಗಳಂ ಮಾಡುವರು ಕೆಲವರು. ದುಂಡುಮಲ್ಲಿಗೆಯ ಮೊಗ್ಗುಗಳಂ ಪೋಣಿಸಿ ಬಲೆಗಳಂ ಮಾಡಿ ಮಾಲೆಗಳಂ

ಕಂಚುಕಂಗಳಂ ಇಳಿಯಬಿಟ್ಟು ಮಂಚಗಳಿಗೆ ಮೇಲುಹೊದ್ದಿಕೆಗಳಂ ಮಾಡುವರು ಕೆಲವರು, ಪಚ್ಚಕರ್ಪೂರದ ಧೂಳಿಗಳಂ ಮರಳುಗುಪ್ಪೆಗಳಂತೆ ಮಾಡಿ ಅದರಮೇಲೆ ಚಂದ್ರಕಾಂತಶಿಲೆಗಳಿಂದ ನಿರ್ಮಿತವಾದ ಕೊಪ್ಪರಿಗೆಗಳನಿಟ್ಟು ಅದರೋಳ್ ಪನ್ನೀರುಗಳಂ ತುಂಬಿ ಬದ್ದೆಪಾವುಡೆಗಳಿಂದ ಬಾಯಿಕಟ್ಟಿ ತಂಪಾಗಿ ಘಾಳಿಬೀಸುವ ನೆರಳುಗಳಲ್ಲಿರಿಸುವರು.ಕೆಲವರು ಮಲ್ಲಿಗೆ ಮೊದಲಾದ ಪುಷ್ಪಬೀಸಣಿಗೆಯಂ ಪಿಡಿದು ಇದು ಬಾಡಿರುವದು ಹೊಸದಾಗಿ ತರಿಸೀಎನ್ನುವರು ಕೆಲವರು. ಕಸ್ತೂರ್ಯಾದಿಗಂಧಂಗಳಂ ಹದ ಮಾಡುವರು ಕೆಲವರು, ಕುಸುಮಾಂಜನಂಗಳಂ ಮಾಡುವರು ಇಕ್ಷುರಸ ಮೊದಲಾದ ಪಾನಕಗಳಂ ಶೋಧಿಸುವರು ಕೆಲವರು, ಈಪರಿ ಶೀತೋಪಚಾರವಸ್ತುಗಳ ಸನ್ನಹಿಸುವರಂನೋಡಿ ಚಿತ್ರಲೇಖೆಯು ಪೇಳಿದ ಮಾತುಗಳಿಗೆ ಇದೇ ನಿದರ್ಶನವೆಂದು ಪೇಳುತ ಚಿತ್ರಶಾಲೆಯದಾಂಟಿ ಕುಮಾರಿ ಇರುವ ಮಂದಿರಕ್ಕೆ ಬರುವಷ್ಟರೊಳ್ ಚಿತ್ರಲೇಖೆಯು ಬೇಗದಿಂಪೋಗಿ ರಾಯನೂ ರಾಣಿಯೂ ಕೂಡ ಇಲ್ಲಿಗೆದಯಮಾಡುವರೆಂದು ಪೇಳಲಾ ಮಾತು ಕೇಳಿದ ಸೌಗಂಧಿಕಾದೇವಿಯು ಭಯದಿಂ ಬೇಗನೆ ಎದ್ದು ದೇಹದೊಳ್ಳಂಟಿರುವ ಪುಷ್ಪರೇಕುಗಳಂ ಕಪ್ಪುರದ ಧೂಳಿಯಂಕೂಡಾ ಸೆರಗಿನಿಂದ ಪೊರಶಿಕೊಂಡು ಮೊಗದೊಳ, ಕಪೋಲಂಗಳೋಳ, ಇರುವಕಿರುಬೆಮರಂ ಕರವಸ್ತ್ರದಿಂ ವರಸುತ, ಮಿತ್ರೆಯಾದ ಚಿತ್ರಲೇಖೆಯ ಕೈಲಾಗದಿಂ ಶಯ್ಯಾಗೃಹದ ಮುಂಭಾಗದೊಳು ಬಂದು ಯದುರಾಗಿ ಬರುವ ತಾಯಿತಂದೆಗಳಿಗೆ ವಂದನೆಯಂಮಾಡುವಾಗ ಕೆನ್ನಡಿಗಳಂತಿರ್ಪಕಪೋಲಂಗಳು ಬಿಳ್ದಾವರೆಗಳಂತೆ ಬಿಳ್ಪೇರಿರುವದಂ, ಮಿಂಚಿನಂತೆ ಪೊಳೆಯುವ ತನುಲತೆಯು ಬೆಳ್ಳಿಯತಗಡಿನಂತಾಗಿರುವದಂ, ಪದ್ಮರಾಗದಂತೆಸೆವ ತುಟಿಯು ಭಾರಿಭಾರಿಗು ಬಿಡುವ ನಿಟ್ಟುಸುರಂ ಪೊರಲಾರದೆ ಬಳಲಿಕೆಯಿಂದೊಡಗೂಡಿರುವದಂ, ಮತ್ತು ಕಿರುನುಡಿಗಳಂ ಮೊಗದೊಳ್ ತುಂಬಿರುವ ಲಜ್ಜೆಯಂ, ಸಖೀಜನಗಳೋಳ್ ಕೋಪವಂ, ಬ್ಯಾಸರವಂಕೂಡಾನೋಡಿ ವಿರಹತಾಪದಿಂದೀಪರಿಯಾಗಿರುವಳೆಂದು ತಿಳಿದು, ಎಲೈ ಪುತ್ರಿಯೆ ; ಮನೋಹರವಾದ ಪತಿಯಿಂದ ಒಡಗೂಡಿ ಸುಮಂಗಲಿಯಾಗಿ ಸುಖದಿಂಪಿರೆಂ

ದು ಆಶೀರ್ವಾದವಂಮಾಡಲು. ಸುಲೋಚನಾದೇವಿಯು ನಮಸ್ಕಾರವಂಮಾಡುವವುಗಳಂ ಕೈಗಳಿಂದೆತ್ತಿ ಅಪ್ಪಿಕೊಂಡು ಶಿರಸ್ಸನ್ನಾಘ್ರಾಣಿಸಿ ಮುದ್ದಾಡಿ ಕಂಬನಿದುಂಬಿ ಹೆಣ್ಣು ಮಕ್ಕಳಂ ಎಷ್ಟುದಿವಸ ಸಾಕಿದರೂ ಯಾರಿಗಾದರು ಕೊಡಬೇಕೆಂದು ನುಡಿಯುತ ವ್ಯಸನವಡುತ ಎಲೈ ಚಿತ್ರಲೇಖೆಯೆ, ಕುಮಾರಿಯಂ ಜೋಪಾನದಿಂದ ಕಾಪಾಡಬೇಕೆಂದು ವಾತ್ಸಲ್ಯದಿಂದ ಪೇಳುವೆನೆಂದು ನುಡಿಯಲು.ಆಬಳಿಕ ವಿಜಯವರ್ಮರಾಯನು ಪತ್ನಿಯೊಡಗೂಡಿ ಲೀಲಾಶುಕವನ್ನೋಡಬೇಕೆಂದು ಬಂದು, ಮುತ್ತಿನತೂಗುಮಂಚದಮೇಲೆ ಕುಳಿತುಮಾಲತಿಯೊಡನೆ ಮೃದುವಾದ ಮಾತುಗಳಂ ಪೇಳುತಲಿರುವಗಿಣಿಯುಂಕಂಡುಕೈಮುಗಿದುನಿಲ್ಲಲುಶುಕವುವಿಜಯೀಭವಮಹಾರಾಜ! ಎಂದುಆಶೀರ್ವಾದವಂಮಾಡಿ,ಕುಳ್ಳಿರಬೇಕೆಂದು ಪೇಳಲಾರಾಯನು ಶುಕದನುಡಿಗಳಂ ಕೇಳಿ, ರತ್ನಗಳ್ಗಂತಿರುವ ರೆಕ್ಕೆಗಳ ಬಣ್ಣವಂನೋಡಿ, ಆಶ್ಚರ್ಯವಂ ಸಂತೋಷವನಂಗೊಂಡು ಇದು ಶುಕಾಚಾರ್ಯನೋ? ಗೌರೀದೇವಿಯು ಕರದೊಳಿರುವ ಶುಕವೋ? ಅಲ್ಲದೇ ಚಿತ್ರಲೇಖೆ ಪೇಳಿದಂತೆ ಮನ್ಮಥನ ವಾಹನವೋ ಎಂದು ಸಂಭ್ರಮವಂಗೊಂಡು ಎಲೈ, ಶುಕಶ್ರೇಷ್ಠನೆ; ನನ್ನ ಪುತ್ರಿಯೊಳ್ದಯೆಯನ್ನಿಟ್ಟು, ಈಲೋಕವಂಕುರಿತು ದಯಮಾಡಿದ್ದರಿಂದ ಲೋಕವೆಲ್ಲ ಪವಿತ್ರವಾದುದು. ಈಗ ನಿನ್ನದರ್ಶನದಿಂದ ನಾವು ಆ ಮನ್ಮಥನು ನೋಡಿದಂತೆ ಕೃತಾರ್ಥರಾದೆವೆಂದು ನುಡಿಯಲಾ ಲೀಲಾಶುಕವು ಎಲೈ ವಿಜಯವರ್ಮರಾಯನೆ; ಉಪಶ್ರುತೀದೇವಿಯ ಕಟಾಕ್ಷದಿಂ ಭೂಲೋಕದೊಳ್ಪುಟ್ಟಿದ ನಿನ್ನ ಪುತ್ರಿಯ ಸಮೀಪಕ್ಕೆ ನಾನು ಬರುವದೇನಚ್ಚರಿಯು, ಇದಲ್ಲದೆನಮ್ಮ ಅರಸಿನ ಆಜ್ಞೆಯೆಂತಾಗಿರುವದೆಂದರೆ! ಕಳಿಂಗನಗರದೊಳ್ ಸೌಗಂಧಿಕಾದೇವಿಯ ಸಮೀಪಕ್ಕೆಪೋಗಿ, ಅವಳಿಗೆಅನುರೂಪನಾದ ಪುರುಷನಂಸಂಘಟನೆಯುಂಮಾಡಿ, ಆ ವಿವಾಹೋತ್ಸವವಂನೋಡಿ ಬಾ ಎಂದು ಕಳುಹಿಸಿರುವದರಿಂದ ನಾನು ಇಲ್ಲಿಗೆ ಬಂದೆನು ನಿನ್ನಪುತ್ರಿಯು ಚಿತ್ರದೊಳ್ಬರದಿರುವ ಒಬ್ಬ ಪುರುಷನಂ ಕಂಡು, ಅಂತಪ್ಪಪುರುಷನನ್ನೇ ವರಿಸಬೇಕೆಂದು ಇರುವದಂ ತಿಳಿದೆನು. ಅದು ಅಶಕ್ಯವಾದಕಾರಣ ಸ್ವಯಂವರವೆಂದು ಸಾರಿಸಿ; ಐರಾವತಾದಿ ಎಂಟುವಸ್ತುಗಳಂ

ಪಣಂಗಳಾಗಿ ಕುರಿತರೆ ಈ ಕಾರ್ಯವು ಕೈಗೂಡುವುದೆಂದು ಪೇಳಿ, ಈಗ ಸಕಲದೇಶದ ಅರಸುಗಳಿಗೂ ಸ್ವಯಂವರಕ್ಕೆ ಬರುವದೆಂದು ಪತ್ರಂಗಳಂ ಬೇಗ ಕಳುಹಿಸುವದೆಂದು ನುಡಿಯಲಾ ಮಾತಂಕೇಳಿ, ರಾಯನು ಸಂತೋಷಪಟ್ಟು, ಉಪಶ್ರುತಿದೇವಿಯು ಕಟಾಕ್ಷವೇ ಈ ಶುಕರೂಪವಾಗಿ ಬಂದು ನಮ್ಮವಂಶವಂ ಉದ್ಧಾರವಮಾಡುವದೆಂದು ತಿಳಿದು, ಆ ಶುಕಕ್ಕೆ ಅಂಜಲಿಯುಂಮಾಡಿ, ಪತ್ನಿಯೊಡಗೂಡಿ ಮಂಗಳಪ್ರಭಾವವಂ ವರ್ಣಿಸುತ ತನ್ನ ಅಂತಃಪುರಕ್ಕೆ ಬಂದು, ಅಲ್ಲಿ ರಹಸ್ಯವಾದ ಒಂದು ಸ್ಥಳದೊಳ್ ಕುಳಿತು ರಾಣಿಯಂಕುರಿತು ಎಲೈ ಪ್ರಿಯಳೇ ಈ ಭೂಲೋಕದೊಳ್ ದೇಶಂಗಳನೆಲ್ಲಾ ಜಯಿಸುತ್ತ ಬರುವ ಸುಗಂಧರಾಜೇಂದ್ರನೆಂಬ ಕರ್ಣಾಟಕದೇಶದ ಅರಸಿನಿಂದ ಭಯಗೊಂಡು ಪುತ್ರಿಯನ್ನಾದರೂ ಕೊಟ್ಟು ದೇಶವನುಳಿಸಿ ಕೊಳ್ಳಬೇಕೆಂದು ಇರ್ದೆನು, ಈಗ ಈ ಶುಕವು ದೈವಗತಿಯಿಂದ ಬಂದು ಸ್ವಯಂವರವೆಂದು ಮಾಡಿ ಅವರೊಳ್ ಈ ದುರ್ಘಟಂಗಳಾದ ಪಣಂಗಳಂ ಕುರಿಯುವಂತೆ ಸೌಗಂಧಿಕಾದೇವಿಯಿಂದ ಪ್ರತಿಜ್ಞೆಯಂಮಾಡಿಸಿದ್ದರಿಂದ ದೇಶದೊಡಗೂಡಿ ನಾನು ಉಳಕೊಂಡೆನು. ಈ ಪಣಂಗಳಂ ಆ ಸುಗಂಧರಾಜನು ಪರಾಜಿತನಾದರೆ ಸಂಮತವೇ ಸರಿ, ಅಥವಾ ಸಾಧಿಸಿಕೊಂಡು ಬಂದರೆ ಅವನಿಗಿಂತಲೂ ಅನುರೂಪನಾದ ವರನು ತ್ರಿಲೋಕಂಗಳಲ್ಲಿಯೂ ದೊರಕಲಾರನು, ಆದರೆ ಒಂದು ಸಂದೇಹವುಂಟು, ಈ ಐವತ್ತಾರು ದೇಶಂಗಳಲ್ಲಿರುವ ರಾಜಕುಮಾರರಲ್ಲಿ ಯಾರಿಗೂ ಈ ಪಣಂಗಳಂ ಸಾಧಿಸುವದು ಅಶಕ್ಯವಾದರೆ ಲೋಕದೊಳ್ ವರನೆಂತು ದೊರಕುವನು, ಸಯಂವರವಂ ಎಂತು ಮಾಡುವದು ಪಾಣಿಗ್ರಹಣವೆಂತು ನೆರವೇರುವದು, ಸೌಗಂಧಿಕಾದೇವಿಯು ಮನೋರಥವೆಂತು ಪೂರ್ಣವಾಗುವದು, ನಾನೆಂತು ಕೃತಾರ್ಥನಾಗುವೆನು, ಈಶ್ವರಿಯು ಯೇನು ಮಾಡುವಳೋ ಯೆಂದು ನುಡಿದು ಆದರೆ ದೇವಲೋಕದಿಂದ ಬಂದಿರುವ ಗಿಳಿಯು ಅಸತ್ಯವಂ ಪೇಳಲಾರದು, ದೇವಿಯ ಕಟಾಕ್ಷವು ನಿಷ್ಫಲವಾಗಲಾರದು, ನಮ್ಮ ವಂಶದೊಳ್ ಅಪಕೀರ್ತಿ ಎಂದಿಗೂ ಬರಲಾರದು ಎಂದು ನಿಶ್ಚೈಸಿ ಹರ್ಷವಂ ತಾಳಿ ಅಲ್ಲಿಂದ ಆಸ್ಥಾನಮಂಟಪವನ್ನೈದಿ ಮಂತ್ರಿಯಂ ಕರಸಿ ಎಲೈಧ

ನಂಜಯನೆ; ನಮ್ಮ ಸೌಗಂಧಿಕಾ ದೇವಿಗೆ ವಿವಾಹವಂ ಮಾಡುವ ಸಮಯವಾಗಿರುವದು ಆದ್ದರಿಂ ಪಟ್ಟಣವೆಲ್ಲವಂ ಶೃಂಗರಿಸುವಂತೆಯು ಪದಾರ್ಥಂಗಳೆಲ್ಲವಂ ಸನ್ನಾಹಿಸುವಂತೆಯು ಅಧಿಕಾರಿ ಜನಂಗಳಿಗೆ ನಿಯಮಿಸುವದು, ಇದಲ್ಲದೆ ದೇಶ ದೇಶದ ಅರಸುಗಳಿಗೂ ಸ್ವಯಂವರದ ಲಗ್ನ ಪತ್ರಿಕೆಗಳಂ ಕಳುಹಿಸಬೇಕೆಂದು ನಿರೂಪಿಸಲಾಗ ಮಂತ್ರಿಯು ಮಹಾಪ್ರಸಾದವೆಂದು ಚೋಳ, ನೇಪಾಳ, ಪಾಂಚಾಲ ಮೊದಲಾದ ನಾನಾ ದೇಶದ ಅರಸುಗಳಿಗೆ ಅವರವರ ಮರ್ಯಾದೆಗಳಿದ್ದಂತೆ ಸ್ವಯಂವರ ಪತ್ರಿಕೆಗಳಂ ಬರಸಿ, ರಾಜಾಧಿರಾಜನಾದ ಕರ್ನಾಟಕ ದೇಶದ ಅರಸಿಗೆ ಪತ್ರವಂ ಬರೆಯಿಸಬೇಕೆನಲಾಗ ಕಳಿಂಗರಾಯನು ಮಂತ್ರಿಯೊಡನೆ ಆಲೋಚಿಸಿ ಕರ್ನಾಟ ದೇಶದ ಅರಸುಗಳ ಬಿರುದಾವಳಿಯಂ ಬೊಕ್ಕಸದಿಂದ ತರಿಸಿ ಪಕ್ಕಣೆಯಂಬರೆಯಿಶಿದನದೆಂತೆನೆ * ಶ್ರೀ ಮತ್ಸಕಲಮಹೀಮಂಡಲಮಣಿ ಭೂಷಣಾಯಿತ ನಾನಾ ದೇಶಾತಿಶಾಯಿ ಸಹ್ಯಪರ್ವತ ಕೂಟದರ್ಶನೀಯ ಕರ್ನಾಟದೇಶ ಪರಮೈಶ್ವರ್ಯನಿಲಯ ರತ್ನಪುರ ಮಹಾಸಂಸ್ಥಾನ ಕುಲಕ್ರಮಾಗತ ರತ್ನಸಿಂಹಾಸನಾರೂಢರಾದ ನಿಜಭುಜಪರಾಕ್ರಮನಿರ್ಜಿತ ನೇಪಾಳ, ನಿಷಧ, ಪಾಂಚಾಲಾದಿ ಸಕಲ ಭೂಪಾಲಮೌಳಿ ಮಾಲಾಘಟಿತ ನವರತ್ನರುಚಿರರಾಜಿನೀರಾಜಿತಪಾದಾಂಭೋಜರಾದ ಸಕಲ ಸರಸಕವಿಜನ ಜೇಗೀಯಮಾನವಿಮಲಕೀರ್ತಿಚಂದ್ರಿಕಾಧವಳೀಕೃತ ಸಕಲದಿಗಂತರರಾಜ ಚಕ್ರವರ್ತಿವಂಶಸಂಭೂತರಾದ ವೀರ ವೀರಾಗ್ರರಣರಂಗಶೂರಸತ್ಯಪರಾಕ್ರಮ ಗಂಡಭೇರುಂಡಧ್ವಜ ಬಿರುದ ರಾಜಾಧಿರಾಜನರಪತಿ ಸುಗಂಧರಾಜಮಹಾರಾಜೇಂದ್ರರವರ ಸಮುಕ್ಷಂಗಳಿಗೆ:- ಕಳಿಂಗದೇಶದ ಗಜಪತಿವಿಜಯವರ್ಮರಾಯರವರು ಮಾಡುವವಿನಯಾರ್ಥ:- ಈ ಪಾಲ್ಗುಣ ಬಹುಳ ಪಂಚಮೀಪರಿಗೆ ನಿಮ್ಮ ಅಭಿಮಾನಬಲದಿಂದ ಸಂತುಷ್ಟರಾಗಿ ಮತ್ತು ನಿಮ್ಮ ಕೀರ್ತಿಪ್ರತಾಪಂಗಳಂ ಕೇಳಿ ಸಂತೋಷಪಡುತ್ತ ಸುಖದಿಂದಿರುವೆವು. ಅಲ್ಲಿ ದಿನ ದಿನದೋಳ್ ಪ್ರವರ್ಧಮಾನವಾಗಿ ಬರುವ ಸಾರ್ವಭೌಮಪದದ ಪರಮೈಶ್ವರ್ಯಕ್ಕೆ ಪತ್ರಿಕಾಮುಖದಿಂದ ನಿರೂಪಿಸಬೇಕೆಂದು ಅಪೇಕ್ಷಿಸುತಲಿದ್ದೇವೆ. ಪ್ರಕೃತದಲ್ಲಿ ನಮ್ಮ ಪುತ್ರಿಯಾದ ಸೌಗಂ

ಧಿಕಾದೇವಿಯು ಸ್ವಯಂವರವ ಮಾಡಬೇಕಾಗಿ ಉದ್ಯೋಗಿಸಿರುವ ಕಾರಣ, ಇಲ್ಲಿಗೆ ಸಕಲದೇಶಾಧಿಪತಿಗಳು ಬರುವರು, ಆದ್ದರಿಂದ ಈ ಮಹೋತ್ಸವಕ್ಕೆ ತಾವು ಇಲ್ಲಿತನಕ ದಯಮಾಡಿಸಿ, ಈ ಮಹೋತ್ಸವವಂ ನೆರವೇರಿಸಬೇಕೆಂದು ಅಪೇಕ್ಷೆ ಇರುವದ್ದರಿಂದ, ನೀವು ವಿದ್ವಾಂಸರು ಮಹಾಮಂತ್ರಿಗಳು, ಸೇನಾಪತಿಗಳು, ಮತ್ತು ಚತುರಂಗಬಲಸಮೇತರಾಗಿ ನನ್ನಲ್ಲಿ ಕರುಣವನ್ನಿಟ್ಟು ಇದೇನು ಕೆಲಸವೆಂದು ಉಪೇಕ್ಷೆಯಂಮಾಡದೆ ದರ್ಶನವಂ ಕೊಡುವಂತೆ ಮಾಡಬೇಕೆಂದು ಪತ್ರಿಕೆಯಂ ಬರಯಿಸಿಸೇನಾಪತಿಯಂ ಕರಸಿ ಮಂತ್ರಿಯ ಬಳಿಯಲ್ಲಿರುವ ಸ್ವಯಂವರ ಪತ್ರಿಕೆಗಳಂ ಬೇಗದಿಂ ಆಯಾಯ ದೇಶದ ಅರಸುಗಳಿಗೆ ತಿಳಿಪಿಸುವದಲ್ಲದೆ! ಚಿನ್ನದ ನೀರಿನಿಂ ಬರದಿರುವ ನೀಲವರ್ಣದ ಪತ್ರಿಕೆಯಂ ಕರ್ನಾಟದೇಶದರಸಾದ ಸುಗಂಧರಾಜೇಂದ್ರನಿಗೆ ತಿಳಿಪಿಸುವಂತೆ ಮಾಡೆಂದು ನಿರೂಪಿಸಿ ಕಳುಹಲು. ಆ ಸೇನಾಪತಿಯು ಮಂತ್ರಿಯಬಳಿಗೆ ಬಂದು ಸ್ವಯಂವರ ಲಗ್ನಪತ್ರಿಕೆಗಳಂ ತೆಗೆದುಕೊಂಡು ನೂರಾರು ಜನ ರಾಹುತರ ಗೊತ್ತುಗಾರರಂ ಕರಯಿಸಿ, ಇಬ್ಬರಿಬ್ಬರು ಬಂದೊಂದು ದೇಶಕ್ಕೆ ಪೋಗುವಂತೆ ಕಟ್ಟು ಮಾಡಿ, ಅವರಲ್ಲಿ ಚತುರನಂ ನೋಡಿ-ನೀನು ಸುಗಂಧ ರಾಜನಿರುವ ಕಟಕಕ್ಕೆ ಸಿಂಧುದೇಶದ ಕುದುರೆಗಳ ರಾವುತರಿಂದೊಡಗೂಡಿ ಬೇಗ ಹೋಗಿ ಸಮಯಮಂ ತಿಳಿದು ಆ ರಾಯಂಗೆ ಪತ್ರಿಕೆಯಂ ಒಪ್ಪಿಸಿ, ಅವನ ಅಪ್ಪಣೆಯಾದಂತೆ ನಡೆಯುವದೆಂದು ಪೇಳಿ ಕಳುಹಲು. ರಾವುತರಿಗೆ ಗೊತ್ತುಗಾರನಾದ ಚಿತ್ರವೇದಿಯೆಂಬುವನು-ಉತ್ತಮಾಶ್ವಗಳರನ್ನೇರಿದ ತನ್ನ ಸೈನಿಕರೊಡಗೂಡಿ, ವಿಜಯನಗರದಿಂದ ಹೊರಟು ವೇಗದಿಂ ವಿಂಧ್ಯಗಿರಿ ಪ್ರಾಂತ್ಯದೊಳ್ ಬರುವಾಗ, ಮುಂದುಗಡೆ ಬಂದುಯೋಜನ ದೂರದಲ್ಲಿ ಕಾಣಿಸುವ ಪರ್ವತಂಗಳಂ ಬಂದು ಘಳಿಗೆಯೊಳಗಾಗಿ ಹಿಂದೆ ಬಂದುಯೋಜನದೊಳು ಕಾಣುತ, ಇವು ನದಿಗಳು, ಇವು ಪಟ್ಟಣಗಳು, ಇವು ಅರಣ್ಯಗಳು ಎಂದು ಪೇರ್ಬಡಿಸಿ ನೋಡುವದಕ್ಕೆ ತಡುವುಗೊಡದೆ ನಡದು, ನರ್ಮದಾ ನದೀತೀರದೊಳ್ ಎದುರಾಗ ಕನಕಮಯಂಗಳಾದ ಧ್ವಜಪತಾಕೆಗಳಂ, ಮಣಿಕಲಶಂಗಳಂ,

ಕಂಗೊಳಿಸುವ ಸೌಧಪಂಕ್ತಿಗಳಿಂ ರಂಗುವಿೂರಿರುವ ಗೋಪುರಂಗಳಿಂ, ಕುಲಗಿರಿಗಳಂತೆಸೆವ ಕೊತ್ತಲಂಗಳಿಂ, ಶೇಷನಿಂ ಎತ್ತಲ್ಪಟ್ಟ ಫಣೆಗಳಂತಿರ್ಪ ಎತ್ತರವಾಗಿ ಕಾಣಿಸುವ ಕೋಟೆತೆನೆಗಳಿಂ, ಇವರ ಮಧ್ಯದೊಳ್ ಮೇರುಪರ್ವತದಂತೆ ಸಾಸಾವರ್ಣ ಮಣಿಕಲಶಂಗಳಿಂದೊಪ್ಪಿರುವ ರಾಜಮಂದಿರವಂ ಕೂಡಾ ನೋಡಿ ಸಕಲ ದೇಶಂಗಳ ಲಕ್ಷ್ಮಿಯು ಇಲ್ಲಿಯೇ ವಾಸವಂ ಮಾಡಿರುವಳು, ಈ ಕಟಕವು ಸುಗಂಧರಾಜೇಂದ್ರನ ಜಯಲಕ್ಷ್ಮಿಯು ಕರದೊಳಿರುವ ಮಣಿಕಟಕವಾಗಿರುವದೆಂದು ಆಶ್ಚರ್ಯಪಡುತ, ತಮ್ಮ ವಸ್ತ್ರ ಮುಸ್ತೈದುಗಳು ವಿಜಾತೀಯಂಗಳಾಗಿರುವದ್ದರಿಂದ, ಇಲ್ಲಿ ರಾಜಾಜ್ಞೆ ಇಲ್ಲದೆ ನಮ್ಮಂ ಕಟಕದೊಳ್ ಬಿಡುವರೋ ಇಲ್ಲವೋ! ಎಂದು ಯೋಚನೆಯಂ ಮಾಡುತ ಮೆಲ್ಲನೆ ಬರುತ್ತಿರಲಾಗ, ಕಟಕದ ಕಡೇ ಉಕ್ಕಡಂಗಳ ಕಾವಲುಗಾರರು ಅವರ ವೇಷಭಾಷೆಗಳಿಂದ ಇವರು ಕಳಿಂಗದೇಶದ ರಾವುತರಾಗಿರಬಹುವೆಂದು, ಮತ್ತೂ ನಮ್ಮ ರಾಜೇಂದ್ರನ ಗುರುವು ಮೊದಲು ಬಂದಿರ್ದನಲ್ಲವೇ? ಆ ಗುರುವಿನ ರಾಯನಕಡೇಯಿಂದ ಬಂದು ಇರಬಹುದೆಂದು ಊಹಿಸಿ, ಇವರು ತಡದರೇನೋ ತಡೆಯದೆ ಇದ್ದರೇನೋ, ಬೇಗದಿಂ ಚಾರದರ್ಪಣನಿಗೆ ತಿಳುಹಿಸುವಾ-ಎಂದು ಪೋಗಿ ಪೇಳಲು; ಅವನು ತ್ವರೆಯಿಂದ ರಾಜೇಂದ್ರನ ಬಳಿಗೆಪೋಗಿ-ಸ್ವಾಮಿ! ರಾಜೇಂದ್ರನೇ, ಕಳಿಂಗದೇಶದಿಂದ ರಾವುತರು ಬಂದಿರುವರಂತೇ! ಎಂದು ಬಿನ್ನವಿಸಿ ಅಪ್ಪಣೆಯಂಗೊಂಡು ಆ ರಾವುತರಂ ಕರತಂದು ರಾಜಮಂದಿರದ ಮುಂದುಗಡೆಯೊಳ್ ನಿಲ್ಲಿಸಿ, ಅವರೊಳ್ ಗೊತ್ತುಗಾರನಾದ "ಚಿತ್ರವೇದೀ" ಎಂಬವನಂ ಒಡ್ಡೋಲಗಂಗೊಂಡಿರುವ ಸುಗಂಧರಾಜೇಂದ್ರನೆದುರಾಗಿ ಕರತಂದು ಪರಾಕೆಂದು, ಬಿನ್ನವಿಸಲಾಗ ಭೂಪಾಲಕುಲತಿಲಕನು-ಅವನಂ ಕಟಾಕ್ಷಿಸಿ ಪುಬ್ಬಿನಿಂದ ಸನ್ನೆಯಂ ಮಾಡಲು, ಚಿತ್ರವೇದಿಯು ಸ್ವಯಂವರಪತ್ರಿಕೆಯುಂ ಮುಂದಿಟ್ಟು ಪ್ರಣಾಮವಂ ಮಾಡಿದನು. ಆ ಸಮಯದೊಳ್ ಮಂತ್ರಿಯಾದ ಸುಮತಿಯು ಅದಂ ನೋಡಿ, ಇದು ಲಗ್ನಪತ್ರವಾಗಿರಬಹುದೆಂದು ತಿಳದು, ರಾಜಾಧಿರಾಜನ ಸವಿಾಪಕ್ಕೆ ತಂದು ಬರದಿರುವ ಬಿರುದಾವಳಿಯಂ ಓದುತಿರಲಾಗ, ರಾಜೇಂದ್ರನು-ವಿದ್ಯಾಸಾಗರನು ಪೇಳದಂತಾದುದೆಂದು ನಸುನಗುತ, ಸಂತೋ

ಕ್ಷದಿಂ ಚಿತ್ರವೇಷಿಗೂ, ಅವನಕಡೆ ರಾವುತರಿಗೂ, ಬೇಕಾದ ಚಿತ್ರವಸ್ತ್ರಭೂಷಣಂಗಳಂ ಕೊಟ್ಟು, ಒಡ್ಡೋಲಗವಿಂದೆದ್ದು-ಸುಮತಿಯಂ ಕುರಿತುನಾವಾಗಿ ಬಿಟ್ಟಿರುವ ಕೆಲವು ದೇಶದ ಅರಸುಗಳು ಸ್ವಯಂವರಾರ್ಥವಾಗಿ ಬರುವರು, ಅವರಂ ಅಲ್ಲಿಯೆ ವಿಚಾರಿಸಿಕೊಳ್ಳುವಾ ಎಂದು ನುಡಿಯುತ, ಸೇನಾಪತಿಯುಂ ಕರಸಿ-ಶತ್ರುಂಜಯನು ಈ ಕಟಕವಂ ಕಾದಿರಲಿ, ನೀನು ಕೆಲವು ಸೈನ್ಯದಿಂದೊಡಗೂಡಿ ಸಂಗಡ ಬರುವನ್ನನು ಪೇಳ, ಆ ರಾತ್ರಿಯೊಳ್ ಸುಖದಿಂದಿದ್ದು:-ಮರುದಿನ ಉದಯದೊಳ್ ಸ್ವಯಂವರಾರ್ಥವಾಗಿ ಕಳಿಂಗನಗರವಂ ಕುರಿತು ಸೇನಾಸಮೇತನಾಗಿಹೊರಟು, ದಿನಕ್ರಮದಿಂ ಬರುತೆ ಮಾರ್ಗದೊಳಿರುವ "ಕಪಿಲಾ" ಎಂಬ ನದಿಯುಂ ಆನೆಗಳನ್ನೆ ಸೇತುವೆಯಾಗಿ ನಿಲ್ಲಿಸಿ ದಾಂಟಿಬರುವಾಗ, ಮಾರ್ಗದಲ್ಲಿರುವ ಉತ್ಕಲದೇಶದ ಅರಸು ತನ್ನ ಮನದೊಳ್ ಈಗ ಸೌಗಂಧಿಕಾಸ್ವಯಂವರಕ್ಕೋಸುಗ ನಾನು ಕಳಿಂಗನಗರಿಯಂ ಕುರಿತು ತೆರಳಿದರೆ! ನನ್ನ ರಾಜ್ಯಲಕ್ಷ್ಮಿಯುಈಮಾರ್ಗದೊಳ್ ಬರುವ ಸುಗಂಧರಾಜನಂ ಸ್ವಯಂವರಿಸಿದರೆ ನನಿಗೇನುಗತಿ ಎಂದು ಭಯಪಡುತ, ಈ ರಾಯನು ಬಂದಮೇಲೆ ನನ್ನಂ ಸ್ವಯಂವರದೊಳ್ ಕೇಳುವರ್ಯಾರೆಂದು ಸಕಲ ಸಂಭಾರವಂ ಸನ್ನಹಿಸಿಕೊಂಡು, ಸುಗಂಧರಾಜನ ಎದುರಾಗಿ ಪೋಗಿ ಮರ್ಯಾದೆಯಿಂದ ಕರತಂದು, ಸೇನಾಸಮೇತನಾದ ಆ ರಾಯಂಗೆ ಮಜ್ಜನಭೋಜನಾದಿಸತ್ಕಾರಂಗಳಂ ಮಾಡಿಸಿ. ವಿಚಿತ್ರವಸ್ತ್ರಾಭರಣಂಗಳಂ ಸಮರ್ಪಿಸಿ. ಬಳಿಕ ಕಳಿಂಗನಗರಿಗೆಪೋಗುವದಕ್ಕೆ ಮಾರ್ಗವಂ ತೋರಿಸುತ, ತಾನೊಬ್ಬ ಸೇವಕನಂತೆಸೇನೆಯೊಡನೆ, ಬರುತಿರಲಾಉತ್ಕಲದೇಶದ ರಾಜನೊಡಗೂಡಿದ ಸುಗಂಧರಾಜೇಂದ್ರನುಕಳಿಂಗದೇಶದೊಳ್‌ಉಪವಿಂಧ್ಯಗಿರಿಯ ಸಮೀಪವಂ ಸೇರಲು; ಆ ಸಮಾಚಾರವಂ ಕಳಿಂಗರಾಯನು ತನ್ನ ಸೇನಾಪತಿಯ ಮುಖದಿಂದ ಕೇಳಿ, ತನಿಗೆ ಗಜಪತಿ ಎಂಬ ಹೆಸರಂ ಸಾರ್ಥಕವಾಗಿ ತೋರಿಸುವಂತೆ, ಬಾದೇಪರಿಯಾದ ಆಕಾರದಿಂ ಅಲಂಕಾರಗಳಿಂ ಒಪ್ಪಿರುವ ಹನ್ನೆರಡುಸಾವಿರಆನೆಗಳನ್ನೇರಿದ ಸೈನಿಕರೊಡಗೂಡಿ, ಉಪವಿಂಧ್ಯಗಿರಿಗೆ ಸರಿಯಾಗಿರುವ ಗುಡಾರದ ಸಮೀಪಕ್ಕೆ ತನ್ನಂ ಎದುರ್ಗೊಳ್ಳಲೋಸುಗ ಬರುತ್ತಿರಲು, ಅದಂ ಕೇಳಿ ಸುಗಂಧರಾಜೇಂದ್ರನು- ಆ ಕಳಿಂಗ

ರಾಯನಂ ಹತ್ತುಮೂರುದೂರ ಎದುರ್ಗೊಂಡುಬಂದು, ವಯಸ್ಸಿನಲ್ಲಿಯೂ, ಜ್ಞಾನದಲ್ಲಿಯೂ ಹಿರಿಯವನೆಂದು, ಮತ್ತು ಮುಂದೆ ಮಾವನಾಗುವನೆಂದು ಮನದೊಳ್ ಯೋಚಿಸಿ,ನಮಸ್ಕಾರವಂಮಾಡಲುದ್ಯೋಗಿಸಲು; ಆಸುಗಂಧರಾಜೇಂದ್ರನಂ ನಮಸ್ಕಾರಮಾಡಲೀಸದೆ, ವಿಜಯವರ್ಮರಾಯನು ಆಲಿಂಗನವಂ ಮಾಡಿಕೊಂಡು, ನಿಮ್ಮ ಗುಣಗಳಂ ಕಿವಿಗಳಿಂದ ಕೇಳಿ ಸಂತೋಷಪಡುತಿರ್ದೆನು; ಈಗ ನೇತ್ರಂಗಳಿಂದ ನೋಡಿ ಅಧಿಕವಾದ ಆನಂದಸಮುದ್ರದ ತೆರೆಗಳೊಳ್ ತೂಗ್ಯಾಡುವೆನೆಂದು ಮಾತನಾಡುತ್ತ, ಈರ್ವರೂ ಗುಡಾರಕ್ಕೆ ಬಂದ ಬಳಿಕ, ವಿಜಯವರ್ಮರಾಯನು-ಸುಗಂಧರಾಜೇಂದ್ರನಂ ರತ್ನಪೀಠದೊಳ್ ಕುಳ್ಳಿರಿಸಿ, ಅನರ್ಘ್ಯ ವಸ್ತ್ರಭೂಷಣಗಳಿಂದ ಉಪಚರಿಸಿ ಕರಗಳಂ ಮುಗಿದು ಸಮೀಪದೊಳು ಕುಳಿತು, ಅಲ್ಲಿರುವ ಉತ್ಕಲದೇಶದ ಅರಸನಂ ಕುಶಲವಂಕೇಳಿ, ಹಾಗೇ ಸುಮತಿ ವೀರಸೇನ ಮೊದಲಾದವರಂ ಇವರಿವರ್ಯ್ಯಾರೆಂದು ವಿಚಾರಿಸಿ, ಉಚಿತವಾಗಿ ವಸ್ತ್ರಾಭರಣಂಗಳಂ ಕೊಟ್ಟು,ಬಳಿಕ ಈರ್ವರೂಸೇನಾಸಮೇತರಾಗಿ ತೆರಳಲಾಗ,ಕಳಿಂಗಪತಿಯ ಸೇನಾಗಜಂಗಳೆಂಬ ಕಾಲಮೇಘಂಗಳಿಂದಭೂಮಿಯೇ ಗಗನದಂತೆಯೂ? ಸುಗಂಧರಾಜನ ಸೇನಾಗಮನದಿಂದೆದ್ದ ಧೂಳಿಯಿಂ ಕವಿದ ಆಕಾಶವು ಭೂಮಿಯಂತೆಯೂ? ತೋರಿ,ನೋಡುವರಿಗೆ ಆಶ್ಚರ್ಯವಂ ಪುಟ್ಟಿಸುತ್ತಿರಲು,

ಇಂತು ವೈಭವದಿಂದ, ಗೋದಾವರೀನದೀತೀರದೊಳು ವಿಶಾಲವಾಗಿ ಮಾಡಿರುವಕಟಕವಂನೈದಿದಬಳಿಕ,ವಿಜಯವರ್ಮರಾಯನುಸುಗಂಧರಾಜೇಂದ್ರನ ಅಪ್ಪಣೆಯಂಗೊಂಡು ತನ್ನ ನಗರವಂ ಕುರಿತು ತೆರಳಲು; ಅನಂತರ ಕರ್ನಾಟಕಸೇನಾಜನಂಗಳು ತಮ್ಮ ದೇಶದಿಂದ ತೆರಳಿದ ಬಳಿಕ; ಇಂತು ಸಕಲ ಸಮೃದ್ಧವಾದ ರಾಜ್ಯವಂ ನಾವೆಲ್ಲಿಯೂ ನೋಡಲಿಲ್ಲವೆಂದು ಸಂತೋಷ ಪಡುತ; ಅಲ್ಲಲ್ಲಿ ಎಲ್ಲರೂ ಅಂಬಾಡಿಯ ವೀಳ್ಯದೆಲೆಗಳಿಂದ ಕಟ್ಟಿರುವ ಅರವಟ್ಟಿಗೆಗಳೊಳು ಹಾಯಿಗೊಂಡು ಕುಳಿತು, ವಸಂತಕಾಲ ಬರುವವ್ಯಾಳೆಗೂ, ಗೋದಾವರೀನದೀತೀರಕ್ಕೆ ಸೇರಿದ ಸೊಗಸಿಗೂ,ಸ್ವಯಂವರೋತ್ಸವದ ಸೊಂಪಿಗೂ, ಈ ಪದಾರ್ಥಂಗಳ ಸಮೃದ್ಧಿಗೂ, ನಮಿಗೀಗ ಬಲು ಸುಮ್ಮಾನವಾಯಿತೆಂದು ನಾರಿಕೇಳಮದ್ಯಗಳಂ ಕುಡಿದು,ನಾನಾಜಾತೀಯ್ಯ

ರಾವ ನಾರಿಯರಿಂದೊಡಗೂಡಿ ವಿಹಾರವಂಗೈಯುತ್ತ, ಸುಖದಿಂದಿರುತ್ತಿರ್ದರೆಂಬಲ್ಲಿಗೆ* ಗದ್ಯ ॥ ಕುಂಡಲಿಶಯನಖಂಡಪರಶು ಪುಂಡರೀಕಭವಾದಿ ದೇವಪ್ರಮುಖನಿಖಿಲಸುರವರಪರಿಭವಪರೀತ ಪ್ರಚಂಡಬಲಚಂಡಮುಂಡಖಂಡನನಿಪುಣ ಕೋದಂಡಕಾಂಡಮಂಡಲಾಗ್ರಧರಭುಜಾದಂಡಪರಿಮಂಡಿತಚಾಮುಂಡಿಕಾ ಕಟಾಕ್ಷವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲ ಭಾಷಾಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾನಿಸ್ಸಹಾಯನಿರ್ಮಾಣಧೌರೇಯ ಘಟಿಕಾಶತಗ್ರಂಥ ದಿನದಿನಪ್ರಬಂಧನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನ ಸೂತ್ರಸುಚರಿತ್ರ ಚಾಮರಾಜಮಹಾರಾಜಪುತ್ರನರಪತಿ ಬಿರುದ ಮಹಿಶೂರ ಪುರವರಾಧೀಶ ಶ್ರೀಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನವೀನಕೃತಿಯೊಳು ಸೌಗಂಧಿಕಾವಿರಹವಂ, ಲೀಲಾಶುಕಾಗಮನವಂ, ದೇಶದೇಶಗಳಿಗೆ ಸ್ವಯಂವರಲಗ್ನಪತ್ರಿಕಾಪ್ರೇಷಣವಂ, ಕಳಿಂಗಪುರಿಗೆ ಮಗಧರಾಜೇಂದ್ರನ ಆಗಮನವಂಕೂಡಾಬಣ್ಣಿಸಿರುವ ದಶಮಾಶ್ವಾಸ ನಿರೂಪಣಕ್ಕೆ ಮಂಗಳಮಹಾ ಶ್ರೀ

## ಪತ್ತನೇ ಅಧ್ಯಾಯ ಸಂಪೂರ್ಣವು



ಶುಭಮಸ್ತು.

ಶ್ರೀ ಚಾಮುಂಡಿಕಾಂಬಾಯೈನಮಃ

# ಹನ್ನೊಂದನೇ ಅಧ್ಯಾಯ

ವಜ್ರಪಣಪ್ರಾರಂಭ.



ಇಂತು ಸುಗಂಧರಾಜೇಂದ್ರನು ಸೇನೆಯಿಂದೊಡಗೂಡಿ ಕಳಿಂಗ ದೇಶಕ್ಕೆಬಂದು, ವಿಜಯವರ್ಮರಾಯನಿಂದ ಸತ್ಕೃತನಾಗಿ, ಗೋದಾವರೀ ನದೀತೀರದಲ್ಲಿರುವ ಕಟಕದೋಳ್ಸುಖದಿಂದಿರುತ್ತಿರಲು. ಆ ಕಾಲದೋಳ್ ದೇಶ ದೇಶಂಗಳ ಅರಸುಗಳು ಇಮ್ಮಡಿಯಾದ ವಿಭವದಿಂದ ವಿಜಯನಗರವಂ ಕುರಿತು ತೆರಳಿ ಬರುತ್ತಿರಲು, ಅದರೋಳ್ ಕೆಲವು ರಾಜರು ಈ ಸಮಯದೋಳ್ ಸೇನೆಯು ಶ್ಯಾನೆಇರಬೇಕೆಂದು ಹೊಸದಾಗಿ ಬಲವಂ ಕಟ್ಟಿ, ಚಿತ್ರವರ್ಣಂಗಳಾದ ವಸ್ತ್ರಂಗಳಿಂದ ಶಿಸ್ತು ಮುಸ್ತೈದುಗಳಂ ಮಾಡಿಕೊಂಡು ತೆರಳುವರು ಕೆಲವರು, ಸೇನೆಯೊಳಿರುವ ಆನೆ ಕುದುರೆಗಳಿಗೆ ಚಿನ್ನದ ಪಡವೆಗಳನ್ನಿಟ್ಟು, ಸೇವಕ ಜನಂಗಳಿಗೆ ರತ್ನದಾಭರಣಂಗಳಂ ಚಿತ್ರದುಕೂಲಂಗಳಂ ತೊಟ್ಟು, ತಮ್ಮ ಐಶ್ವರ್ಯವಂ ತೋರಿಸುತ್ತ ಬರುವರು ಕೆಲವರು, ಇವರ ಪ್ರತಿಷ್ಠೆಯಂ ಯಾರು ನೋಡುವರು, ಕಳಿಂಗ ನಗರದೋಳು ಸೌಗಂಧಿಕಾದೇವಿಯ ಸಮೀಪದಲ್ಲಿ ಘಟಕರಾಗಿರುವ ಜನಂಗಳಿಗೆ ಧನಂಗಳಂ ಕೊಟ್ಟು ಅವರ ಮುಖದಿಂದ ಕಾರ್ಯವಂ ಕೈಕೊಳ್ಳಬೇಕೆಂದು ಆನೆ, ಒಂಟೆ, ಭಂಡಿಗಳಮೇಲೆ ಧನವಂ,ವಸ್ತ್ರ ಭೂಷಣಂಗಳಂ ತೆಗೆದುಕೊಂಡು ತೆರಳುವರು; ರೂಪವಂತರಾದ ಕೆಲವರು ಲೋಕದೋಳು ತಂದೆಯು ಕುಲವಂವಿದ್ಯೆಯಂ ಗುಣಂಗಳಂ ನೋಡಿ ಪುತ್ರಿಯಂ ಕೊಡುವನು; ತಾಯಿ ಐಶ್ವರ್ಯವಂ ಬಂಧುಬಳಗವಂನೋಡಿ ಮಗಳಂ ಕೊಡುವಳು; ಕನ್ಯೆಯಾದರೋ ರೂಪವಂತನಂ ನೋಡಿ ವರಿಸುವಳು; ಅದು ಕಾರಣ, ಇವರ ಸೇನೆಯು ಧನವು ಸ್ವ

ಯಂವರವೊಳು ಸಾಧನವಲ್ಲವೆಂದು ಸೊಗಸಿನಿಂ ಬರುವರು; ಕೆಲಂಬರು ಸೌಗಂಧಿಕಾದೇವಿಗೆ ವಿದ್ಯೆಯಂ ಪೇಳಿದ ವಿದ್ಯಾಸಾಗರನ ಅಳಿಯನೇ ನಮ್ಮ ಪುರೋಹಿತನು, ಆದ್ದರಿಂದ ಅವನ ಮುಖದಿಂದಲೇ ಸಂಧಾನವಂ ಮಾಡಬೇಕೆಂದು ಯೋಚಿಸುತ ನಡೆಯುವರು; ಕೆಲವರು ವಿಜಯವರ್ಮರಾಯನಿಗೂ ನಮಿಗೂ ನಂಟತನ ಸಮೀಪದೊಳ್ ಅಂಟಿರುವಾಗ ಮತ್ತೊರ್ವನಿಗೆ ಗಂಟುಬೀಳುವದುಂಟೇ ಎಂದು ನಂಬಿಗೆಯಿಂದ ನಡೆಯುವರು; ಕೆಲವರು ನೆಮ್ಮದಿಯಿಂದ ಇರ್ದೆವು, ಈಗ ಈ ಸುಗಂಧರಾಜೇಂದ್ರನೆಂಬ ಓರ್ವ ಕರ್ನಾಟಕ ದೇಶಾಧಿಪತಿಯು ಪ್ರಬಲನಾಗಿರುವದ್ದರಿಂದ, ಸ್ವಯಂವರಕ್ಕೆ ಪೋಗುವದೋ ಬ್ಯಾಡವೋ ಎಂದು ಚಿಂತೆಯಂ ಮಾಡುವಂತೆ ಬಂತೂ ಎನ್ನುವರು; ಇದಲ್ಲದೆ ಕೆಲವರು ವಯಸ್ಸು ಮೀರಿದ ಅರಸುಗಳು ರಾಜ್ಯಂಗಳಂ ಬಿಟ್ಟು, ಮಾರ್ಗದೊಳು ಧನಂಗಳಂ ವ್ಯಯವಂ ಮಾಡಿ ಕಳಿಂಗಪುರಿಗೆ ಪೋಗಿ, ಸ್ವಯಂವರವು ಕೈಗೂಡದೆ, ಕೆಲಸಕೆಡಬಾರದು ಕ್ಷೇತ್ರಯಾತ್ರೆಯನ್ನಾದರೂ ಮಾಡುವಾ ಎಂದು ಮನದೊಳು ಚಿಂತಿಸಿ ಹೊರಡುವರು. ಕೆಲಂಬರು ಪರ್ವತರಾಜ್ಯದರಸುಗಳು-ಸುಗಂಧರಾಯನೆಂಬೋರ್ವ ಹುಡುಗನು ಕೈಲಾಗದರಸುಗಳಂ ಕೊಂದು ಕೊಬ್ಬಿನಿಂ ಮೆರೆಯುವನಂತೆ, ಈಗ ನಾನು ಅವನ ಗರ್ವವಂ ಅಲ್ಲಿಯೇ ಅಡಗಿಸುವೆನೆಂದು ಗರ್ವದಿಂ ಸರ್ವಜನಂಗಳೊಡನೆ ಪೇಳುವರು, ಕೆಲಂಬರು ಎಲ್ಲರೂ ಬರುವಲ್ಲಿ ನಾವು ಪೋಗದಿರುವದು ಸಮಾನರೊಳು ಅವಮಾನವು, ಸ್ವಯಂವರವು ನಮಿಗೆ ಕೈಗೂಡುವುದೆನ್ನುವದರಲ್ಲಿ ಅನುಮಾನವು, ದೇಶದೇಶದ ವಿನೋದವನ್ನೋಡುವುದೊಂದೇ ಸುಮ್ಮಾನವೆಂದು ಪೊರಡುವರು. ಇಂತು ಶಸ್ತ್ರವಿದ್ಯಾಕುಶಲರಾದ, ಶಾಸ್ತ್ರಜ್ಞರಾದ, ಮನ್ಮಥ ನಳ ಕೂಬರ ಜಯಂತರಂತೆ ಸುಕುಮಾರಾಂಗರಾದ ಚೋಳ, ನೇಪಾಳ, ಪಾಂಚಾಲ ಮೊದಲಾದ ದೇಶಂಗಳ ರಾಜಕುಮಾರರೊಳ್ ಕೆಲವರು ಅಲಂಕೃತಂಗಳಾದ ರಥಂಗಳೊಳು ಕುಳಿತು, ಕೆಲವರು ಶೃಂಗರಿಸಿದ ತುರಂಗಗಳನ್ನೇರಿ, ಕೆಲವರು ಅತ್ಯುನ್ನತಂಗಳಾದ ಮತ್ತಗಜಂಗಳನ್ನಾರೋಹಣವಂಗೈದು, ಚತುರಂಗಸೇನೆಗಳಿಂದೊಡಗೂಡಿ ತೆರಳಿ ಸಮುದ್ರಕ್ಕೆ ಬರುವ ನದೀ

ಪ್ರವಾಹಂಗಳಂತೆ ಕಳಿಂಗ ದೇಶವಂ ಕುರಿತು-ಬರುವ ಐವತ್ತಾರು ದೇಶದ ಸೇನೆಗಳಿಗೆ ಭೂಮಂಡಲವೆಲ್ಲ ಮಾರ್ಗವಾಗಿ ಎಲ್ಲಿನೋಡಿದರೂ ನಡದುಬರುವಂತಿರುವ ಕುಲಪರ್ವತಂಗಳಂತಿರ್ಪ ರಥಂಗಳಿಂದಲೂ, ಎತ್ತೆತ್ತಲೂ ಆ ಪರ್ವತಂಗಳಂ ಸುತ್ತಿ ಕವಿದಿರುವ ಮುಗಿಲುಗಳ ಮೊತ್ತ ಮೊತ್ತಂಗಳಂತಿರುವ ಮತ್ತಗಜಂಗಳಿಂದಲೂ, ಯಾವ್ಯಾವ ಬಳಿಯಲ್ಲಿಯೂ ಹುಲ್ಲೆಗಳ ಹಿಂಡು ಹಿಂಡುಗಳಂತೆ ಹಾರ್ಯಾಡುತ್ತ ಕುಣಿಯುವ ಕುದುರೆಗಳಿಂದಲೂ, ಯಾವಕಡೆಯಲ್ಲಿಯೂ ಮೇರೆಯಂ ಮೀರಿತೆರೆಗಳಂ ದಕೂಡಿ ಭೂಮಿಯೊಳು ಏರೇರಿ ಬರುವ ಸಮುದ್ರಗಳಂತೆ ತುಂಬಿ ತುಳಕುವ ಕಾಲ್ಬಲಗಳಿಂದಲೂ, ಇಂತು ಮಲ್ಲದೆ ತರ ತರದ ಬಣ್ಣದಿಂದೊಪ್ಪಿ ಅಂತರಿಕ್ಷದೋಳ್ ನಡೆಯುವ ವೃಕ್ಷಂಗಳೋ ಎಂಬಂತೆಸೆವ ಧ್ವಜಪತಾಕೆಗಳಿಂದಲೂ, ಈಪರಿಯಾದ ಗಿರಿ ಸಮುದ್ರಗಳು ಮೊದಲಾದ ವಸ್ತುಗಳಿಂದ ಕೂಡಿ ಭೂಮಿಯೇ ನಡೆಯುವಂತೆಯೂ, ಗರುಡಗಂಧರ್ವ ಲೋಕಂಗಳಿರುವಂತೆ ಗಜಾಶ್ವಲೋಕಂಗಳಂ, ಬ್ರಹ್ಮನು ಈಗಲೇ ಸೃಷ್ಟಿಯಂಗೈದನೋ ಎಂಬಂತೆಯೂ ಕಾಣಿಸಿ, ಮತ್ತು ಕುದುರೆಗಳ ಕುಣಿದಾಟದಿಂದೆದ್ದ ಧೂಳಿಯುಪಟಲಂಗಳೆಂಬಮೇಘಂಗಳು ಸೇನೆಗಳೊಳಿರುವ ಪಟಹನಿಸ್ಸಾಣಭೇರೀಧ್ವನಿಗಳಿಂದ ಗುಡುಗುತ, ಝಳಪಿಸುವ ಆಯುಧಂಗಳ ಬೆಳಕಿನಿಂದ ಮಿಂಚುತ; ಆನೆಗಳ ಘೂತ್ಕಾರದಿಂ ಝಲ್ಲೆಂದು ಮಳೆಗರೆಯುತ್ತ, ಸುಗಂಧರಾಜೇಂದ್ರನಾಗಿ ಅವತರಿಶಿರುವ ತಮ್ಮ ಸ್ವಾಮಿಯಾದ ಇಂದ್ರನವಿವಾಹವಂ ನೋಡಬೇಕೆಂದು ಬಂದಿರುವವರೋ; ಎಂಬಂತೆ, ನೋಡುವರಿಗೆ ಅಚ್ಚರಿಯಂ ಪುಟ್ಟಸುತ್ತಿರಲೂ. ಕೆಲವರು ಬ್ಯಾಗ ಬ್ಯಾಗ ಪೋಗಿ ಶೇರುವಾ ಎಂದು ದೂರ ದೂರಂಗಳಾಗಿ ಬಿಡದಿಗಳಂ ಮಾಡುತ್ತ ನಡೆಯುವರು. ಕೆಲವರು ತಮ್ಮ ತಮ್ಮೊಳಗೆ ಪೂರ್ವದೊಳಿದ್ದ ವೈರವಂ ಈಗ ತೀರಿಸಿಕೊಳ್ಳಬೇಕೆಂದು ಶೂರರಾದವರಂ ಶೇರಿಶಿಕೊಂಬುವರು; ಕೆಲಂಬರು ಈ ರಾಜಮಂಡಲದೊಳು ಯಾರ್ಯಾರಿಗೆ ಏನೇನು ನಡೆಯುವದೋ ನೋಡುವಾ, ಎಂದುಪೊರಮಡುವರು. ಕೆಲಂಬರು ವೈದಿಕರು ಈ ಸ್ವಯಂವರದೊಳು ಕಳಿಂಗರಾಜನು ಬೇಕಾದ ದಾನಂಗಳಂ ಮಾಡು

ಕ್ಕೈಸೀವಿ ಬೇಡುತ್ತ ತೆರಳುವರು, ಕೆಲಂಬರು ವಿದ್ವಾಂಸರು ತರ್ಕ, ವೇದಾಂತ ಶಬ್ದಶಾಸ್ತ್ರಂಗಳಲ್ಲಿ ಯುಕ್ತಿಗಳಂಹೊಸದಾಗಿನೋಡಿ, ನಮಿಗೆ ವಿದ್ಯಾಸಾಗರನೊಡನೆ ಶಾಸ್ತ್ರಪ್ರಸಂಗವು ನಡದರೆ ತಡೆಯುವೇ ವಿಶೇಷಫಲವಾಗುವದು ಎಂದು ತಮ್ಮ ತಮ್ಮ ವಿದ್ಯಾರ್ಥಿಗಳೊಡನೆ ಮಾತನಾಡುತ್ತ ಹಗ್ಗಗಳ ಕಡಿವಾಣಂಗಳಂ ಕಟ್ಟಿರುವ ತಟ್ಟುವಾಣಿಗಳಮೇಲೆ ಕುಳಿತು, ಹಿರಿಯರ ಕಾಲದಿಂ ಬಂದ ಹರಕು ಶಾಲುಗಳಂ ಮಡಿಸಿ ಹೆಗಲುಗಳ ಮೇಲೆ ಸವರಿಸಿಕೊಂಡು ಬರುವರು; ಕೆಲಂಬರು ನಾಡುನಾಡಿನ ಘನ ವರ್ತಕರು ಈ ಸೇನೆಗಳ ಒಡಗೂಡಿ ನಡದರೆ ಬ್ಯಾಡರ ಭಯವಿಲ್ಲವೆಂದು ವಾಡೆಗಳ ಸರಕುಗಳಂ ಗಾಡಿಗಳ ಮೇಲೆ ತುಂಬಿ ಕೊಡಾಬರುವರು; ಇದಲ್ಲದೆಕೆಲಂಬರು ದೇಶದೇಶದ ವೇಶ್ಯಾಜಾತಿಯ ಕಾಂತೆಯರಲ್ಲಿ ಹೊಂತಕಾರಿಯರು, ದೂರ ದೇಶಗಳಿಂದ ಸುಕುಮಾರರಾದ ರಾಜಕುಮಾರರೆಲ್ಲ ಕಳಿಂಗಪುರಿಯಂ ಕುರಿತು_ಬರುವರೋಳ್‌ರೂಪುರೇಖೆಗಳು, ವಿಲಾಸಂಗಳು, ಕಲಾಮರ್ಮಂಗಳು ರತಿಚಮತ್ಕಾರಂಗಳು, ಉದಾರಗುಣಂಗಳು ಯಾರಲ್ಲಿ ಎಂತಿರುವದೋ, ಇಂತಿರುವ ಸಮಯ ದೊರಕುವದೇ; ಎಂದು ಚಿಂತಿಸುತ ಹೊರಟು, ಹಗಲಲ್ಲಿ ನಡೆಯುವೇ ಲಾಮಂಚದ ಕಡಿಕೆಗಳಂ ಕಟ್ಟಿರುವ ಪೂಮಂಚಗಳನೊಳಕೊಂಡ ಗುಬುರು ಗಾಡಿಗಳೊಳ್ ಕುಳಿತು, ತಂಪಾಗಿ ಅವುಷಧಗಳಂ ಸೇವಿಸುತ, ಇಂಪಾಗಿ ಪಚ್ಚಕರ್ಪೂರವಂ ಮೊಗದೊಳ್ ಹಚ್ಚಿಕೊಳುತ,ನಿಮಿಷನಿಮಿಷಕ್ಕೆ ಕನ್ನಡಿಗಳನ್ನೋಡುತ್ತ, ಬಿಸಲಿಗೆ ಮೊಗವಂ ತೋರಲೀಸದ ವಿಟಪುರುಷರೊಡಗೂಡಿ ಪಯಣಂ ತೆರಳುವರು; ಈರೀತಿಯಲ್ಲಿ ಜನರುಗಳು ನಾನುಮುಂದೆ ತಾನುಮುಂದೆನುತ ನಡೆಯುತ, ತಮಿಗೆ ನಮಿಗೆ ಸಯಂವರ ಒದಗುವದೆಂದು ಬರುತ್ತಿರುವ ರಾಯರುಗಳಂ ತ್ವರೆಯಿಂದ ಬನ್ನಿರೆಂದು ಕರೆಯುವವೋ; ಎಂಬಂತೆ, ಚಲಿಸುವಧ್ವಜಪಟಗಳಿಂದೊಪ್ಪಿದ ಕಳಿಂಗನಗರದ ಮುಂದುಗಡೆಯೊಳ್ ಬಂದ ಒಂದೊಂದು ದೇಶದ ಅರಸುಗಳ ಸಮಾಚಾರವಂ ಚಾರರಿಂದ ವಿಚಾರಣೆಯಂಗೈದು, ಅವರಿಗೆ ಉಪಚಾರವಂ ಮಾಡಬೇಕೆಂದು ವಿಜಯವರ್ಮರಾಯನು-ಕೆಲವರಿಗೆ ಎದುರಾಗಿ ಮಂತ್ರಿಗಳಂ, ಅನ್ಯರಿಗೆ ಸೇನಾಪತಿಗಳಂ, ಮಗಧಪತಿ ಮೊದಲಾದವರಿಗೆ ತನ್ನ ಮಗ

ನಾದ ಕೀರ್ತಿವರ್ಧನಂ ಸಹಾ ಕಳುಹಿ ಬಹುಮಾನಂಗಳಂ ಮಾಡಿ ಮರ್ಯಾದೆಯಿಂದ ಕರತಂದು, ಅವರವರ ಸೇನಾನಿವೇಶಂಗಳಿಗೋಸುಗ ಶಿಂಗರಿಶಿರುವ ಕಟಕಂಗಳಿಗೆ ಕಳುಹಿ, ಯಾವ ಯಾವ ಅರಸುಗಳಿಗೆಏನೇನು ಪದಾರ್ಥಗಳಿಷ್ಟಂಗಳೋ, ಆಯಾಯ ಸಾಮಗ್ರಿಗಳಂ ಸಮಗ್ರವಾಗಿ ತುಂಬಿರುವ ಉಗ್ರಾಣಂಗಳಂ ಐವತ್ತಾರು ಕಟಕಂಗಳೊಳ್ ಬೇರೆ ಬೇರೆ ಇರಿಶಿ, ತನ್ನ ಮುಖ್ಯ ಸೇವಕರಾದ ನೂರಾರು ಜನಂಗಳಂ ಬಂದೊಂದುಕಡೆಯೊಳ್ ವಿಚಾರಿಸಿಕೊಳ್ಳುವಂತೆ ನಿಯಮಿಸಿ, ಹುಲಿಯ ಹಾಲುಮೊದಲ ಗಿಂಣಾದರೂ ತಂದು ಒದಗಿಸುವಂತೆ ಕಟ್ಟುಮಾಡಿ, ಮತ್ತೂ ಪರಿಪರಿಯಾದ ವಸ್ತುಗಳಂ ಅರಸುಗಳಿಗೆಲ್ಲರಿಗೂ ಕಳುಹಿಸುತ,ಸ್ವಯಂವರ ಸನ್ನಾಹದಲ್ಲಿರುವ ಸಮಯದೊಳ್ ಈ ದೇಶದೇಶದರಾಯರುಗಳು ಇಲ್ಲಿಯ ಸಕಲ ವಸ್ತುಗಳ ಸಮೃದ್ಧಿಯಿಂದಲೂ, ನಡೆಯುವ ಉಪಚಾರಂಗಳಿಂದಲೂ, ದೇಶದೇಶವವಿನೋದದಿಂ ಕೂಡಿದ ಆಟಗಳ ನೋಟದಿಂದಲೂ, ಹೊಸದಾಗಿ ಬರುವ ವಾರನಾರಿಯರ ಗಾನವಂ ಕೇಳುತ್ತ, ಅಭಿನಯವಂ ನೋಡುತ್ತ,ಸುಖದಿಂದಿರುತ್ತ ತಮ್ಮ ತಮ್ಮ ಪಟ್ಟಣಂಗಳಂ ಮರೆತು, ಸೌಗಂಧಿಕಾದೇವಿಯೊಳ್ಳಾಶೆಯಿಂದ ತಮ್ಮ ತಮ್ಮ ಕಾಂತೆಯರಂ ಕೂಡ ಚಿಂತಿಸದೆ, ಆ ಸೌಗಂಧಿಕಾದೇವಿಯ ಚೇಟೀಜನಂಗಳಿಗೆ ಲಕ್ಷಾಂತರ ಸಂಖ್ಯೆಯಾದ ಧನವಂ ಭೂಷಣಂಗಳಂ ವಿಚಿತ್ರ ವಸ್ತ್ರಂಗಳಂ ಕೊಟ್ಟು, ಆ ದೇವಿಯ ಭಾವಚಿತ್ರಪಟಂಗಳಂ ತರಿಸಿ ಹಗಲೆಲ್ಲ ನೋಡುತ್ತ, ಇರುಳಲ್ಲಿ ಅದೇ ರೂಪವಂ ಕನಸಿನೊಳ್ಕಾಣುತ ಕಾಮನ ಬಾಣಂಗಳಿಗೆ ಗುರಿಯಾಗಿ, ಈ ಕಳಿಂಗರಾಜ ಕನ್ಯೆಯಂ ಕಂಣಾರ ಕಾಣುವದು ಎಂದಿಗೋ? ಎಂದು ಕಳವಳಿಸುತ, ಘಳಿಗೆ ಯುಗವಾಗಿ ಕಾಲವಂ ಕಳೆಯಲಾರದೆ! ಗುಡಾರಂಗಳ ಮುಂದುಗಡೆಗೆ ಬಂದು ಎದುರಾಗಿ ಬರುವರೆಲ್ಲರಂ ತಮ್ಮಂ ಕರೆಯುವದಕ್ಕೆ ಬಂದ ಕಳಿಂಗರಾಯನ ಕಡೆಯವರೆಂದು ಭ್ರಾಂತಿಗೊಂಡು ಮಂತ್ರಿಗಳ ಮೇಲೆ ರಾಜ್ಯಭಾರಂಗಳಂ ಬಿಟ್ಟು ಸ್ವೇಚ್ಛಾವಿಹಾರದಿಂ ಸುಖದಿಂದಿದ್ದರು

ಆಕಾಲದೊಳ್ ಸೂರ್ಯನು ಈ ಸ್ವಯಂವರದ ಮಹೋತ್ಸವಕ್ಕೆ ತನ್ನಂಕರೆಯಲಿಲ್ಲವೆಂಬ ಅವಮಾನವಂ ಸಹಿಸಲಾರದೆ ನಡದನೋ

ಎಂಬಂತೆಯೂ, ಸುಗಂಧರಾಜೇಂದ್ರನಪರಾಕ್ರಮದಿಂ ಸೋತು ದುರ್ಗಮಂ ಸೇರುವದಕ್ಕೆ ಪೋಗುವನೋ, ಎಂಬಂತೆಯೂ, ದೇಶ ದೇಶದ ಚತುರಂಗಬಲದ ಓಡ್ಯಾಟದಿಂದ ಎದ್ದಂತಾ ಧೂಳಿಯು ಮುಚ್ಚಿ ಮರೆಮಾಡಿತು, ಈಗ ನನಗೆ ಕಳಿಂಗದೇಶವಂಕೂಡ ನೋಡದಂತಾಯಿತು ಇಲ್ಲಿದ್ದೇನು ಫಲವೆಂದು ತೆರಳಿದನೋಯೆಂಬಂತೆಯೂ, ಸಕಲ ರಾಜಪುತ್ರರುಗಳ ವಿಚಿತ್ರಮಣಿ ಕಿರೀಟಂಗಳು ಮೊದಲಾದ ಒಡವೆಗಳ ಬೆಳಕೇ ಎಳೆಬಿಸಲಾಗಿರುವಾಗ ನನ್ನ ಬಿಸಲಂ ಯಾರು ಕೇಳುವರು ಎಂದು ದುಃಖದಿಂಪೊರಡುವನೋ ಎಂಬಂತೆಯು, ಚಕೋರಂಗಳ ಬಾಯಿಬಡಿದು ನೈದಿಲುಗಳನ್ನರಳಿಸಿ ಮಾರ್ಗಸರಿಗೆ ತಾಪವನ್ನುಂಟುಮಾಡಿ, ಇಂತುಮಾಡಿದ ಪಾಪವಂ ಪೋಗಲಾಡಿಸಲೋಸುಗ ಸಮುದ್ರದೋಳ್ಮುಳುಗಿಬರುವೆನೆಂದು ತೆರಳಿದನೋ, ಎಂಬಂತೆಯು, ಸುಗಂಧರಾಜನಾಗಿ ಅವತರಿಶಿರುವ ಇಂದ್ರನ ವಿವಾಸವಂ ದಿಕ್ಪಾಲಕನಾದ ವರುಣನಿಗೆ ಪೇಳಬೇಕೆಂದು ಪೋದನೋ; ಎಂಬಂತೆಯು, ಗಗನಲಕ್ಷ್ಮಿಯಾಡಿಸುವ ಕುರುವಿಂದ ಮಣಿಯ ಬುಗರಿಯು ಗ[illegible]ದು ತಿರಗಿ ಅಸ್ತಗಿರಿಯು ತಡಮದರಿಂದ ಬೀಳುವದೋ ಎಂಬಂತೆಯು, ವಾಸರಲಕ್ಷ್ಮಿಯು ನಿದ್ರೆಯಂಗೈಯುವದಕ್ಕೆ ಮೊದಲು ಮನೋಹರವಾದ ಮದ್ಯವಂ ತುಂಬಿ ಮಡಗಿದಬಟ್ಟಲಂತೆಯು, ಆಕಾಶವೆಂಬ ಪಿರಿದಾದ ಗುಬುರಿನ ತಾಳವೃಕ್ಷದೋಳ್ ಬೆಳದು ಬಲಿತು ಬಣ್ಣವೇರಿ ಕಳತು ಬೀಳುವ ಫಲವ್ರೋ ಎಂಬಂತೆಯು, ಪಶ್ಚಿಮ ದಿಕ್ಕೆಂಬ ಕಾಂತೆಯು ಮೊಗದೋಳ್ ಹಚ್ಚಿಕೊಳ್ಳಬೇಕೆಂದು ಕುಂಕುಮವಂ ತುಂಬಿದ ಕುಂದಣದಭರಣಿಯೋ ಎಂಬಂತೆಯು, ಅಸ್ತಮಯಗಿರಿಯ ಶಿಖರದಿಂ ಮರೆಯಾಗುತ್ತಿದ್ದನು. ಆಗ ಪಕ್ಷಿಗಳೆಲ್ಲ ಸಂಚಾರವಂ ಬಿಟ್ಟು ಕಲಕಲ ಧ್ವನಿಗಳಂ ಮಾಡುತ ಮರಗಳ ಪೊಟರೆಗಳಲ್ಲಿ ಬೇಲಿಗಳ ಗುಬುರುಗಳಲ್ಲಿ ಗೋಪುರಂಗಳ ಗೂಡುಗಳಲ್ಲಿ, ಚಂದ್ರಶಾಲೆಗಳಲೋವೆಗಳಲ್ಲಿ ಗುಂಪು ಗುಂಪಾಗಿ ಶೇರಿ, ತಮ್ಮ ತಮ್ಮ ಮರಿಗಳಿಗೆ ಆಹಾರಂಗಳಂ ಕೊಡುತಲಿದ್ದವು. ತುಂಬಿಗಳು ಮಕರಂದದಿಂದ ಹೊಟ್ಟೆಗಳತುಂಬಿ ಝೇಂಕಾರದಿಂ ಹೆಚ್ಚಿ ಮುಚ್ಚಿಕೊಳ್ಳುತ್ತಿರುವ ತಾವರೆಗಳೊಳ್ ಬೇಗ ತಾವು

ಮಾಡಿದವು. ಚಕ್ರವಾಕ ಪಕ್ಷಿಗಳು ಗಂಡು ಹೆಣ್ಣು ಜೊತೆ ಜೊತೆಯಾಗಿ ಹಗಲೆಲ್ಲ ವಿಹಾರದಿಂದಿದ್ದು, ಸೂರ್ಯನು ಅಸ್ತಂಗತನಾಗುವ ಸಮಯದಲ್ಲಿ ಒಂದೊಂದು ಮೊಗದೊಳ್ ಮೊಗವನ್ನಿಟ್ಟು ನಿಟ್ಟುಸಿರುಬಿಟ್ಟು ಪೋಗಲಾರದೆ ಕಂಬನಿಗಳಂ ತುಂಬಿ ತುಳುಕುವ ವ್ಯಸನದಿಂ ನದೀ ತೀರಂಗಳೊಳ್ ಎರಗಿ ಸೊಕ್ಕಿ ಸೊರಗಿ ರೆಕ್ಕೆಗಳಂ ಚಾಚಿ ಒಂದೊಂದನಪ್ಪಿಕೊಳ್ಳುತ್ತ, ಕೊರಳು ಹಿಡಿದು ತಳ್ಳಿದಂತಾಗಲಾಗ ಒಂದೊಂದನಗಲಿ ಪೋಗುತ್ತ, ಕಾಣಬರುವಷ್ಟು ದೂರ ತಿರಿ ತಿರಿಗಿ ನೋಡುತ್ತ ವಿರಹವಂ ಅನುಭವಿಸಿದವು. ಆಗ ಈ ಚಕ್ರವಾಕ ಪಕ್ಷಿಗಳ ವಿರಹಾಗ್ನಿಯೋ ಆಕಾಶಕ್ಕೆ ಏರಿತೋ; ಎಂಬಂತೆಯು, ಪತಿಯಾದ ಸೂರ್ಯನ ಪಯಣವನ್ನೋಡಿದ ಪದ್ಮಲತೆಗಳ ಅನುರಾಗವೇ ಕೆಂಪುದೋರಿ ವಡಗೂಡಿಪೋಗುವದೋ ಎಂಬಂತೆಯೂ, ಸೌಗಂಧಿಕಾದೇವಿಯು ಸ್ವಯಂವರೋತ್ಸವವನ್ನೇ ಹಬ್ಬಾಗಿ ಮೆಚ್ಚಿ ನಮ್ಮಂ ಬಿಟ್ಟು ಸುಮ್ಮನೇ ಪೋದರೆಂದು ಅರಸುಗಳ ಮೇಲೆ ಮಸಸುಬಂದಂತೆ ಕೋಪವಂ ಮಾಡುವ ದಿಕ್ಕಾಂತೆಯರ ಕೆಂಪಾದ ಕಣ್ಣುಗಳ ಕಾಂತಿಯೋ ಎಂಬಂತೆಯೂ, ಅಸ್ತಮಯಪರ್ವತವೆಂಬ ಆನೆಯ ಕುಂಭಸ್ಥಳದೊಳ್ ಬರೆದಿರುವ ಚಿತ್ರವೋ ಎಂಬಂತೆಯು, ಪುಷ್ಕರದ್ವೀಪದ ಪಶ್ಚಿಮನಗರಂಗಳೊಳ್ ಭುಜಗಳಂ ತಟ್ಟಿ ಕಣಕ್ಕಾಡುವ ಪುಷ್ಟಮುಟ್ಟಾದ ಬಿರದು ಜಟ್ಟಿಗಳದಟ್ಟಿಗಳಿಂದೆದ್ದ ಕೆಮ್ಮಟ್ಟಿಗಳ ಧೂಳಿಯು ಘಾಳಿಯಿಂದೆದ್ದು ಕಾಣಿಸುವದೋ ಎಂಬಂತೆಯೂ, ಸಂಧ್ಯಾಕಾಲದೊಳ್ ನಾಟ್ಯವಂಗೈವ ಪರಮೇಶ್ವರನಿಗೆ ದೇವದಾನವರೆಲ್ಲ ಕೂಡಿ ಪೂಜೆಯಂ ಮಾಡಿದ ದಾಸವಾಳದ ಹುವ್ವುಗಳ ರಾಶಿಯೋ ಎಂಬಂತೆಯೂ, ಪಡುವಣಬೆಟ್ಟದಲ್ಲಿರುವ ಕೆಟ್ಟ ಕಾಡ್ಕೋಣಗಳು ಸೂರ್ಯನ ರಥಕ್ಕೆ ಕಟ್ಟಿರುವ ಕುದುರೆಗಳನ್ನೋಡಿ ಜಾತಿವೈರದಿಂ ಮೇಲೆ ಬಿದ್ದು ರಥವಂ ಕೆಡಹಿ ಸೂರ್ಯನಂ ಸಮುದ್ರದೊಳ್ ದಬ್ಬಿ ಕುದುರೆಗಳಂ ಸೀಳಿ ಚೆಲ್ಲ್ಯಾಡುವ ರಕ್ತವೋ ಎಂಬಂತೆಯೂ, ಮನ್ಮಥನು ಒಡ್ಡೋಲಗಕ್ಕೆ ಬರುವ ಸಮಯವಾಯಿತೆಂದು ಮೊದಲು ಮಲಯಮಾರುತನೆಂಬ ಸೇವಕನು ಬಂದು ಕೆಂಬಣ್ಣದಿಂದೊಪ್ಪಿದ ಕಂಬಳಿಗಳ ಹೊಸದಾಗಿ ಹಾಸಿಸುವದೋ ಎಂಬಂತೆಯೂ, ರಾತ್ರಿಯೆಂಬೋರ್ವ ಸತಿಯು ಪತಿ

ಯು ಬರುವನೆಂದು ಬೇಗ ಚಂದ್ರಗಾವಿಯ ಶೀರೆಯನ್ನುಟ್ಟು ಕುಂಕು ಮದ ಬೊಟ್ಟನಿಟ್ಟು ಬೈತಲೆಯೊಳ್ ಧರಿಸಿದ ಚಂದ್ರನೋ ಎಂಬಂತೆಯೂ, ಮತ್ತೂ ಕೆಂದಾವರೆಗಳೆಲ್ಲ ಬಾಡಿಗಿ ಸೇರಿದಂತೆ ಮೊದಲು ಮೊದಲು ಪವಳದ ಕಾಂತಿಯಿಂದೊಪ್ಪಿ, ಬಳಿಕ ಪಾರಿವಾಳದ ಪುಪ್ವಿನ ಬಣ್ಣವಂ ತಾಳಿ, ಅಷ್ಟರೊಳ್ ಪದ್ಮರಾಗದಂತೆ ರಂಗಾಗಿ, ಲೋಕರಂಜಕವಾದ ಸಂಜೆಗೆಂಪು ದೇಶದೇಶಂಗಳಂ ಸೋಂಕಿ, ಕಳಿಂಗನಗರಿಯೊಳ್ ಗುಜ್ಜರಿಯು ಹೊತ್ತಾಯಿತೆಂದು ರಾಜಬೀದಿಗಳಲ್ಲಿ ತೆರಳುವ ಮೋಜುಗಾರರ ಬಿಳಿಯಬಟ್ಟೆಗಳೊಳ್ ವೋಕುಳಿಯನಿಟ್ಟಂತೆ ಮಾಡಿ, ಪುರದಸೌಧ ಗವಾಕ್ಷಗಳೊಳ್ ನಿಂತು ನೋಡುವ ನಾರಿಯರ ಮುತ್ತಿನಹಾರಂಗಳನೆಲ್ಲವಂ ಕೆಂಪಿನ ಸರಂಗಳಂತೆ ತೋರ್ಪಡಿಸಿ, ಕಳಿಂಗದೇಶದ ಕಾಂತೆಯರ ತುಟಿಗಳ ಬಣ್ಣವಂ ಇಮ್ಮಡಿಯಾದಂತೆ ಮಾಡಿ, ಅರಸುಗಳ ಸ್ಫಟಿಕಂಗಳೊಳಿರುವ ಬಿಳಿಯ ಗುಡಾರಂಗಳನೆಲ್ಲ ಕೆಂಪು ಸಕಲಾತಿಯಬಿಡಾರಂಗಳಂತೆ ಮಾಡಿ, ಚಿಗುರುಗಳೊಳ್ ಬಳಸಿ ಸೊಗಸುಗಾತಿಯರ ತ್ವಾರಣದ ಬಣ್ಣದಿಂದ ಸಿಗ್ಗುಗಿಸುವ ಉಗುರುಗಳೊಡನೆ ಸಲಿಗೆಯ ಗೈದು, ರಂಗಾರೆಯರ ಬೀದಿಯೊಳ್ ವಿಶ್ರಾಂತಿಯಂ ಗೊಂಡು, ಗುಲಗಂಜೆಗಳ ಪುಂಜಪುಂಜಂಗಳ ಮಳಿಗರವಂತೆ ರಂಜಿಸುತ್ತಿರಲು; ಆ ಸಮಯದೊಳ್ ಸಂಕೇತಸ್ಥಳಗಳಿಗೆ ಬೇಗ ಬೇಗ ಪೋಗಬೇಕೆಂದು ತುಳದಾಡುವ ಜಾರಿಣೀ ಜಾರರಿಗೆ ಮೈಯುಬ್ಬಿಸುವ ಹಬ್ಬವಾಗಿ, ಎಲ್ಲಿಲ್ಲಿಗೋ ಪೋಗಿ ಕೊಳ್ಳೆಯಂ ಮಾಡಬೇಕೆಂದು ಕಾದಿರುವ ಕಳ್ಳರಿಗೆಲ್ಲ ಕಾಮಿತಾರ್ಥಂಗಳನ್ನೀವ ಮನೆದೇವರಾಗಿ, ಹಗಲು ಕುರುಡಾದ ಪಕ್ಷಿಗಳಿಗೆಲ್ಲ ನೋಡುವದಕ್ಕೆ ಸಿದ್ಧಾಂಜನವಾಗಿಯೂ, ಇದಲ್ಲದೆ ವಿಯೋಗಿನಿಯರಾದ ತರುಣಿಯರ ವಿರಹಾಗ್ನಿಯೊಳ್ ಶೀತೋಪಚಾರಂಗಳಿಂದ ಎದ್ದ ಪೊಗೆಯೆಲ್ಲ ಏಕವಾಗಿ ತೋರುವದೋ? ಎಂಬಂತೆಯೂ, ಕಪ್ಪಾಗಿ ಕಾಣಬರುವ ಆಕಾಶವೇ ಇಳಿದು ಬಂದುದೋ; ಎಂಬಂತೆಯೂ, ಸೂರ್ಯನಿಲ್ಲದೆ ಇರುವ ಸಮಯವಂ ತಿಳಿದು ಮಂದೇಹದ್ವೀಪದಿಂ ಬಂದಿರುವ ರಾಕ್ಷಸರ ಮೈ ಬಣ್ಣವೋ; ಎಂಬಂತೆಯೂ, ಆಕಾಶವೆಂಬ ಅಕ್ಕಸಾಲೆಯು ಸೂರ್ಯಬಿಂಬವೆಂಬ ಚಿನ್ನದ ಗಟ್ಟಿಯಂ ಸಂಜೆಗೆಂಪೆನುವ ಬೆಂಕಿಯೊಳ್ ಕಾಯಿ

ಸಿ ಸಮುದ್ರದ ತೀರಿನೊಳ್ ಅಜ್ಜಲು ಅದರಿಂದಿದ್ದ ಧೂಮವೋ, ಎಂಬಂತೆಯುಂ, ಚಕ್ರವಾಳಗಿರಿ ಎಂಬ ಎತ್ತರವಟಿಯನ್ನಿಟ್ಟು ಸಂಜೆಗೆಂಪೆನ್ನುವ ದೀಪವಂ ಹಚ್ಚಿ ಗಗನವೆಂಬ ಮುಚ್ಚಳವಂ ಮುಚ್ಚಿ ಹಿಡಿದ ಕಾಡಿಗೆಯು ಪುಡಿಯು ಉದುರುವುದೋ, ಎಂಬಂತೆಯುಂ, ಮಾಯಾರೂಪಳಾದಶ್ಯಾಮಳಾದೇವಿಯು ವಿಶ್ವರೂಪದರ್ಶನವೋ, ಎಂಬಂತೆಯುಂ, ಅಷ್ಟಮೂರ್ತಿಯಾದ ಶಿವನು ನಾಟ್ಯಸಮಯದಲ್ಲಿ ಧರಿಶಿದ ಗಜಚರ್ಮವೋ; ಎಂಬಂತೆಯು, ಆಗ ಆ ಪರಮೇಶ್ವರನ ಮುಡಿಸಡಲಿ ಜಗುಳುವ ಜಡೆಗಳೋ, ಎಂಬಂತೆಯುಂ, ಕಾಮನು ದಂಡೆತ್ತಿ ಬರುವನೆಂದು ಇಳಿಯುವದಕ್ಕೆ ಮಾಡಿರುವ ಕಪ್ಪು ಸೂರೆಯು ಪಟದ ಗುಡಾರವೋ: ಎಂಬಂತೆಯು, ಸೂಜಿಯು ಮೊನೆಗೆ ಎಡೆಗೊಡದೆ ಎತ್ತೆತ್ತಲುಂ ಕವಿದು ಕಣ್ಣುಗಳಂ ಮುಚ್ಚುತ್ತ ಬರುವ ಕಾರ್ಗತ್ತಲೆಯೊಳು ಕೆಲವರು ಚಿತ್ತಿನಿಯರು ಅತ್ತೆಮಾವಂದಿರಂ ಮರೆಯಿಸಿ ಸುತ್ತಮುತ್ತಿರುವರಿಗೆ ತಿಳಿಯದಂತೆ ಹೊತ್ತು ಗೊತ್ತಿಗೆ ಮನೆಯ ಕೆಲಸಗಳಂ ತೀರಿಸಿ ಈ ಕಾಂತರಳು ಬರುವುದಂ ಬಯಸುತ್ತಿರ್ದ ಸಮಯವದಗಿತೆಂದು ಇದರ ಬಲದಿಂದಲೇ ದೇವೇಂದ್ರನು ಅಹಲ್ಯೆಯಂ ಅನುಭವಿಶಿದನೆಂದು ಅಂಧಕಾರವನ್ನೇ ಪೊಗಳುತ್ತ, ಹಗಲು ರಾತ್ರಿಯಲ್ಲ ಇರುಳಾಗಿಯೇ ಮಾಡದೇಹೋದನೆಂದು ಬ್ರಹ್ಮನಂ ನಿಂದಿಸುತ್ತ, ಕರಿಯ ಚಂದ್ರಕಾಳೀಶೀರೆಯನ್ನುಟ್ಟು ಅದೇ ಪರಿಯಾದ ಕುಪ್ಪಸಂಗಳಂ ತೊಟ್ಟು, ನೀಲದ ವಡವೆಗಳನ್ನಿಟ್ಟು ಕನ್ನೈದಿಲಂ ಮುಡಿಯೊಳು ಮುಡಿದು, ಕಣ್ಣು ಕಪ್ಪುಗಳಿಂದ ಬಲವಾಗಿ ಕೂರಗಳಂ ತಿದ್ದಿ, ಕತ್ತೂರಿಯ ಗಂಧವಂ ತೊಡೆದು, ಕರಿಯ ಸಣ್ಣ ಶಾಲುಗಳ ಮೇಲು ಮುಸುಕುಗಳಂ ಹೊದ್ದು, ಕಾಲುಂಗುರಂಗಳಂ ತೆಗೆದು, ಕಾಲು ಸರಗೆಜ್ಜೆಗಳಂ ಕಳೆದು, ಪೊರಮಟ್ಟು ರಾಜಬೀದಿಯಂ ಬಿಟ್ಟು ಸಂದಿಗೊಂದಿಗಳೊಳ್ ಬರುತ ಮುಖಚಂದ್ರನಂ ಕಾಣಲೀಸದೆ ಕೆಲಬಲದೊಳ್ ಕೂಡಾ ನೋಡದೆ, ತಮಗೆ ಕುಂಟಣಗಾತಿಯರು ಹೇಳಿರುವ ಸಂಕೇತಸ್ಥಳಂಗಳಲ್ಲಿರುವ ಮಂಟಪಂಗಳಿಗೆ ಒಂಟಿ ಒಂಟಿಯಾಗಿ ಬಂದು ಅಲ್ಲಿ ಕಾದಿರುವ ತುಂಟ ನೀಟುಗಾರರೊಡನೆ ಒಡವೆವಸ್ತ್ರಗಳು ಅಲ್ಲಾಡಿ ಧ್ವನಿಯಾಗದಂತೆ, ನಖಕ್ಷತಂಗಳಲ್ಲಿಯು ದಂತಕ್ಷತಂಗಳಲ್ಲಿಯು ಸೀತ್ಕಾರವಂಗೈಯದಂತೆ, ಮಾತುಗಳ

ನ್ನಾಡಲಿ ವಸಸ್ವಿನೀಜಾಲ ಪರಿಯಂ ಕೈಸೋಂಕುಗಳವರೇ ಒಬ್ಬರೊ ಬ್ಬರಿಗೆ ತಿಳಿಯಿಸುತ ಸವ್ಯದವಾದ ಸಂಭೋಗವ ಗೈದು, ಮೆಲ್ಲನೆ ಎ ಪ್ಪದ ಮುದ್ದಾಡಿ ಮನೆಗೆ ಪತಿಬರನ ಸಮಯವಾಯಿತೆಂದು ತತ್ತರಿಸಿ ಸುತ್ತ ಲೂ ನೋಡುತ್ತಿರಲು;ಆಗ ಆಸ ಮನೆಯ ಬಟ್ಟೆಬಯಲಾಗ, ಕೂಗಲೇ ಹು ಟ್ಟಬೇಕೆ, ಈ ಚಂದ್ರನೆಂಬ ನೆಪ ಗೆಗಳಂ ಮುರಿಯುತ, ಸಡಲಿರುವ ಬಟೆ ಗಳಂ ಘಟ್ಟಿಯಾಗಿ ಉಟ್ಟುಕೊಳ್ಳುತ, ಜಾರಿರುವ ತುರುಬುಗಳಂ ಸವರಿ ಸುವ ಜಾರಿಣಿಯರು ಕವಿದಿರುವ ಮಳೆಗಾಲದ ಮುಗಿಲಿನೊಳ್ ಪೊಳೆವ ಬಳ್ಳಿ ಮಿಂಚುಗಳಂತೆ ವೇಗದಿಂ ಪೋಗುತಿರುವವಂ ನೋಡಬೇಕೆಂದು ದೇವತೆಗಳು ಹಚ್ಚಿರುವ ದೀಪಂಗಳೋ; ಎಂಬನ್ತೆಯೂ,ತನ್ನ ಕಾಂತನು ಬ ರುವವಂ ತಿಳಿದು ರಾತ್ರಿಯೆಂಬ ಕಾಂತೆಯು ಆರತಿಯನೆತ್ತಲೋಸುಗ ಇರು ಳೆಂಬ ನೀಲದ ತಟ್ಟೆಯೊಳು ತುಂಬಿದ ವಜ್ರಂಗಳೋ;ಎಂಬಂತೆಯು, ಕತ್ತ ಲೆಯೆಂಬ ಮುತ್ತೆರವಾದ ಪೋಹಳಧೂಪದಿಂದ ಆಕಾಶವೆಂಬ ವನದೊಳ್ ಆಗಲೇ ಮುಡಿದ ಮೊಗ್ಗೆಗಳೋ,ಎಂಬನ್ತೆಯು, ಸಂಧ್ಯಾಕಾಲದೊಳು ನಾ ಟ್ಯವಾಗೈವ ಗಂಗಾಧರನ ಶಿರದೊಳು ತುಂಬಿ ತುಳುಕುವ ದೇವಗಂಗೆಯ ತರಂಗಗಳ ತುಂತುರುವನಿಗಳೋ, ಯೆಂಬಂತೆಯು, ಸೂರ್ಯನೆಂಬ ಸಿಂಹ ವು ಪಡುವಣಬೆಟ್ಟವೆಂಬ ಮದ್ದಾನೆಯ ಕುಂಬಸ್ಥಳಂಗಳಂ ಶೀಳಿ ಕೋಪ ದಿಂದ ಎತ್ತೆತ್ತಲು ಎರಚಿದ ಮುತ್ತುಗಳ ಮೊತ್ತಗಳೋ; ಎಂಬಂತೆ ಯು, ಬಿತ್ತರವಾಗಿ ನಕ್ಷತ್ರಂಗಳು ಥಳಥಳಸುತ ಕಾಣಿಸುತ್ತಿರಲಾ ಸವು ಯದೊಳು ಮೂರುಲೋಕವಂ ಪನ್ನೀರಿನಿಂ ಮುಳಗಿಸುವಂತೆ ಪಚ್ಚಕರ್ಪೂ ರದ ರಾಶಿಯೊಳು ಇರಿಶಿದಂತೆ ಇಂಪಾಗಿ ತಂಪುದೋರಿ ಬಳ್ಳಿಗಳಂ ಅಲ್ಲಾ ಡಿಸುತ, ಮಲ್ಲಿಗೆ ಮೊದಲಾದ ಮೊಗ್ಗೆಗಳಂಅರಳಿಸುತ,ಚಕ್ರವಾಕಪಕ್ಷಿಗಳ ಕಂಬನಿಗಳ ತುಂತುರುಗಳಂ ಹೊತ್ತು ಭಾರದಿಂ ಮೆಲ್ಲನೆ ಬರುತ ವಿರಹ ವಂ ಅನುಭವಿಸುವ ತರುಣಿಯರಿಗೆ ಉರಿಯಂತೆ ತೋರುತ, ಮುನಸುಗೊಂ ಡಿರುವ ಸತಿಪತಿಗಳ ಜಗಳವಂ ಜಗುಳಿಸುತ, ಮಾರವೀರನ ಸ್ವಾರಿಯಂ ಸಾ ರುವ ತಳವಾರನಂತೆ ಮಂದಮಾರುತವು ಬೀಸುತ್ತಿರಲು; ಅಷ್ಟರೊಳು ಮೂಡಣದಿಕ್ಕಿನಲ್ಲಿ ಮನ್ಮಥನೇರಿಬರುವ ಮದ್ದಾನೆಯ ಮೊಗದೊಳು ಕ

ಟ್ಟಿಸುವ ವಜ್ರದ ಗುರಾಣಿಯೋ; ಯೆಂಬಂತೆ ಸುಗಂಧರಾಜೇಂದ್ರನ ರೂಪ ಬಂದಿರುವ ದೇವೇಂದ್ರನ ಸಮೀಪಕ್ಕೆ ಬರುವ ಅಮೃತವಂ ತುಂಬಿರುವ ಕಲಶವ್ರೋ; ಯೆಂಬಂತೆ, ಪಾರೆನೋಟದಿಂ ನೋಡುವ ಪೂರ್ವದಿಕ್ಕೆಂಬ ಕಾಂತೆಯು ಬಂದು ಕಿವಿಯು ವಜ್ರದ ವಾಲೆಯೋ; ಯೆಂಬಂತೆ, ವಿರಹಿಜನಂಗಳಂ ಜಯಿಸಬೇಕೆಂದು ಬರುವ ಮನ್ಮಥ ಮಹಾರಾಜೇಂದ್ರನಿಗೆ ಪಿಡಿದ ಶ್ವೇತ ಛತ್ರವ್ರೋ; ಯೆಂಬಂತೆ, ಕಸ್ತೂರಿಯ ತಿಲಕವಂ ಧರಿಶಿದ ನಿಶಾಲಕ್ಷ್ಮಿಯು ನಗುವ ಸೊಗಸು ಮೊಗವ್ರೋ, ಯೆಂಬಂತೆ, ಸೌಗಂಧಿಕಾದೇವಿಯ ಸ್ವಯಂವರ ಮಹೋತ್ಸವಮಂ ನೋಡಬೇಕೆಂದು ದೇವತೆಗಳು ಯತ್ತಿದ ಹಗಲುಬತ್ತಿಯೋ, ಯೆಂಬಂತೆ, ರತೀದೇವಿಯು ವಿನೋದದನ್ತೆ ಕಿರಣಂಗಳೆಂಬ ಧಾರವ ಪಿಡಿದು ಆಡಿಸುವ ಎರೇರಿಬರುವ ಗುಂಡುಚಕ್ರದ ಘಾಳಿಯ ಪಟವ್ರೋ; ಯೆಂಬನ್ತೆ, ಗಗನಲಕ್ಷ್ಮಿಯು ವಿಲಾಸದಿಂದಾಡುವ ಗುಂಡಾದ ಮುತ್ತಿನ ಚೆಂಡು ಉದಯಗಿರಿಯೆಂಬ ಲಗ್ಗೆಯೆಂತಾಕಿ ಪುಟಹಾರಿ ಯೆದುರೇರಿ ಬರುವದೋ; ಯೆಂಬನ್ತೆ, ವಿಶ್ವರೂಪನಾದ ಈಶ್ವರನ ಅರ್ಧಾಂಗಳಾದ ಗೌರೀದೇವಿಯು ಬಂದು ಕಡೆಯು ಪೇರ್ವೋಲೆಯೋ; ಯೆಂಬಂತೆ, ಇಂದ್ರನ ಸಾಮ್ರಾಜ್ಯ ಲಕ್ಷ್ಮಿಯು ತನ್ನ ಪತಿಯು ಯಲ್ಲಿರುವನೋ; ಯೆಂದು ಉದಯಾದ್ರಿಯನ್ನೇರಿ ನಾಲ್ಕು ಕಡೆಯೊಳು ನೋಡುವಾಗ ಹಿಂಭಾಗದಲ್ಲಿ ಕಾಣುವ ವಜ್ರದ ರ್ವಾಗಟೆಯೋ, ಯೆಂಬನ್ತೆ, ನಕ್ಷತ್ರಂಗಳೆಂಬ ಮೊಗ್ಗುಗಳೊಳು ಬಂದು ಅರಳಿತೋ, ಯೆಂಬಂತೆ, ದೇವಗಂಗೆಯೊಳು ಅರಳಿದ ಬಿಳಿಯ ನೈದಿಲೋ; ಯೆಂಬನ್ತೆ, ಗಗನಸರೋವರದೊಳು ವಿಹಾರಕ್ಕೆ ಬರುವ ರಾಜಹಂಸವ್ರೋ; ಯೆಂಬನ್ತೆ, ಮನ್ಮಥನು ತನ್ನ ಮೊಗವಂ ನೋಡಿಕೊಳ್ಳುವ ಗುಂಡು ಕನ್ನಡಿಯೋ; ಯೆಂಬನ್ತೆ ಚಂದ್ರನು ಉದಯಗಿರಿ ರಾಜಂಗೆ ಕಿರೀಟದನ್ತೆ ತೋರಿ ಮೆಲ್ಲ ಮೆಲ್ಲನೆ ಯೇರೇರಿ ಬರುತ ಜಗತ್ತಿನೊಳು ಜನಂಗಳಿಗೆಲ್ಲ ಮಿತ್ರನಂತೆ ಮಹಾರಾಜನಂತೆ ಇಷ್ಟದೈವದಂತೆ ಆನದವಂ ಬಡಿಸುತ ಚಕೋರಂಗಳ ಚಾಪಲ್ಯವಂ ಪೋಗಲಾಡಿಸುತ ಕನ್ನೈದಿಲುಗಳ್ಗಂ ಕರಲಾಘುವದಿಂದ ಅರಳಿಸುತ ವಿರಹಿಣೀ ಜನಂಗಳನ್ನರಳಿಸುತ ಮದನಸಾಮ್ರಾಜ್ಯವಂ ವಿಚಾರಿಸುತ ಯುವರಾಜರಂ ಕಳಾಸೌಂದ್ರನಾಗಿ ಮತ್ತೂ

ಹುಟ್ಟುಸೊಗಸುಗಾರನಾದಕಾರಣ ಬರುತಲೀ ರಾತ್ರಿಯೆಂಬ ಕಾಂತೆಯು ಉಟ್ಟಿರುವ ಕತ್ತಲೆ ಎಂಬ ಕರಿಯ ಶೀರೆಯಂ ಕಳೆದು ಬೆತ್ತಲೆಯಂ ಮಾಡಿ ಎತ್ತಿತ್ತಲು ಕರಂಗಳಂ ಸೋಂಕಿಸಿ ಸೊಂಪುಗೂಡಲು; ಆಗ ರಾತ್ರಿಯೆಂಬ ಸತಿಯು ಹಾಯಿಗೊಂಡು ಕಮಲಂಗಳೆಂಬ ಕಣ್ಣುಗಳಂ ಮುಚ್ಚಿ ನಕ್ಷತ್ರಂಗಳೆಂಬ ನಸುಬೆಮರೇರಿ ಪರ್ವತನಿತಂಬ ಭಾಗಂಗಳೊಳ್ ಕರಗುವ ಚಂದ್ರಕಾಂತಶಿಲೆಗಳ ಜಲಂಗಳಿಂದ ದ್ರವಿಸಿದಳೋ? ಎಂಬಂತೆ ತೋರಿ, ಸಂಭೋಗ ಶೃಂಗಾರದ ಇಂಪು ಸೊಂಪುಗಳಂ ದಂಪತಿಗಳ ಗುಂಪಿಗೆ ಉಪದೇಶವಂ ಗೈವ ತೆರವಂ ತೋರಿಸುವ ಸಮಯದೊಳ್, ಬಿಡದಿಯುಲ್ಲಿರುವ ಸುಗಂಧರಾಜ ಚಂದ್ರನು ಚಂದ್ರಶಾಲೆಯನ್ನೇರಿ ಚಂದ್ರನಂ ನೋಡಿ, ಕೂಡ ಬಂದಿರುವ ಕಲವಿಂಕನೊಡನೆ-ಎಲೈ ನರ್ಮಸಚಿವನೇ, ಈಚಂದಿರನು ಜನಂಗಳಿಗೆಲ್ಲ ಆನಂದವಂಪುಟ್ಟಿಸುತ, ಮಹಾ ವಿಷ್ಣುವಿಗೆ ಮೈದನನೆನಿಸಿ, ಚತುರ್ಮುಖನ ಅವತಾರನಾಗಿ, ಮಹೇಶ್ವರನ ಶಿರೋಭೂಷಣವಾಗಿ, ಮನ್ಮಥನ ಮಾವನಾಗಿ, ಅಮರರಿಗೆಲ್ಲ ಅಮೃತವಂ ಕೊಡುತ, ಓಷಧಿಗಳಂ ಪಾಲಿಸುತ, ರಾಜನೆನಿಸಿ ನಮ್ಮ ವಂಶಕ್ಕೆ ಮೂಲಪುರುಷನಾಗಿರುವ ಈತನ ಮಹಿಮೆಯಂ ಎಂತು ಬಣ್ಣಿಸಲಪ್ಪುದು. ಲಕ್ಷ್ಮಿಯೊಡಹುಟ್ಟಿದವನಿಗೆ ಲಕ್ಷಣಂಗಳಂ ಪೇಳುವದೇನೆಂದು ಕೈಗಳಂಮುಗಿಯಲು,ಆಗಕಲವಿಂಕನು-ಸುಗಂಧರಾಜನರಪತಿಯಂ ಕುರಿತು-ಎಲೈ ಮಹಾರಾಜನೇ, ನಿಷ್ಕಳಂಕವಾದ ನಿಮ್ಮ ವಂಶಕ್ಕೆ ಮೂಲಪುರುಷನಾದ ಈ ಮೃಗಾಂಕನೊಳ್ ಕಳಂಕವಿರುವದೇನೆಂದು ನಿಶ್ಶಂಕನಾಗಿ ಕೊಂಕುಮಾತುಗಳಿಂದ ಕೇಳಿದ ಕಲವಿಂಕನಂ ಕುರಿತು ಸುಗಂಧರಾಯನು-ಎಲೈ ಮಂಕನೇ, ಕೇಳು, ಮೊದಲು ರಾಜಸೂಯಯಾಗವಂ ಮಾಡಿ ರಾಜಾಧಿರಾಜನೆನಿಸಿ ವಿರಾಜಮಾನನಾದ ಈ ನಕ್ಷತ್ರರಾಜನೊಳಿರುವ ಕಪ್ಪಂ ನೋಡಿ ನೆಪ್ಪು ಕಾಣದೆ ತಪ್ಪುಮಾತುಗಳನ್ನಾಡುವರು, ಅದಂ ಒಪ್ಪಕೂಡದು, ಅದೆಂತೆನೆ,-ಕೆಲವರು ಕವಿಗಳು ಈ ಚಿಪ್ಪನನ್ನೋಡಿ, ಚಂದ್ರನೆಂಬ ತಿಳಿಗೊಳದೊಳ್ ಅರಳಿರುವ ಕನ್ನೈದಿಲೆಯೋ; ಎನ್ನುವರು. ಕೆಲವರು ಸುತ್ತಿಕೊಂಡು ಮಲಗಿರುದ ಚಂದ್ರಬಿಂಬವೆಂಬ ಶೇಷತಲ್ಪದೊಳ್ ಮಲಗಿರುವ ಮಹಾ ವಿಷ್ಣುವೋ, ಎನ್ನುವರು. ಕೆಲವರು ಮನ್ಮಥನಸತಿ

ಯಾದ ರತಿಯು ಕ್ರೀಡಾರ್ಥವಾದ ಚಂದ್ರನೆಂಬ ವಜ್ರ ಪಂಜರದೊಳ್ ಕಪ್ಪನೇರಿರುವ ಕೋಗಿಲೆಯೋ, ಎನ್ನುವರು ಕೆಲವರು ಗಗನ ಲಕ್ಷ್ಮಿಯು ಮೊಗದಂತಿರುವ ಇಂದು ಮಂಡಲದಲ್ಲಿ ಸೊಗಸಿನಿಂದಿಟ್ಟ ಸಾದಿನ ಬೊಟ್ಟಿದೆನ್ನುವರು. ಕೆಲವರು ನೊಸಲು ಕವಿದಿರುವ ಕತ್ತಲೆಯನೆಲ್ಲ ಕತ್ತರಿಶಿ ಕರಗಿ ಉಂಡೆಯಂ ಮಾಡಿ ನುಂಗಿರುವ ಗುಳಿಗೆಯೋ, ಎನ್ನುವರು ಕೆಲವರು ರೋಹಿಣೀ ದೇವಿಯು ಮೊಗವಂ ಮುದ್ದಿಡಲು ಅವಳ ಮೊಗದ ಕಸ್ತೂರಿಯು ಬೊಟ್ಟು ಹತ್ತಿರುವುದೋ, ಎಂದು ಹೇಳುವರು. ಈಪರಿಯಿಂದ ಸರಸ ಕವಿಗಳು ನೂರಾರು ತರವಾಗಿ ವರ್ಣಿಸಿ ಕೃತಾರ್ಥರಾಗುವರು. ಆದರೆ-ನಾನು ಪರಮಾರ್ಥವಂ ಹೇಳುವೆನು ಕೇಳು, ವಿರಾಟ್ಪುರುಷನ ಮನೆಯ ಕನ್ನಡಿಯಂತಿರುವ ಈ ಚಂದ್ರಮಂಡಲದೊಳ್ ಭೂಭಾಗವೆಲ್ಲ ಪ್ರತಿಬಿಂಬವಾಗಿ ಕಾಣುವದೆಂದು ಸಕಲ ಪುರಾಣಂಗಳಲ್ಲಿಯೂ ಹೇಳಿರುವದು, ಈ ಚಂದ್ರನ ಮಹಿಮೆಯಂ ಚಂದ್ರಶೇಖರನೆಬಲ್ಲನಲ್ಲದೆ ನಾವೇನುಬಲ್ಲೆವೆಂದು ನುಡಿದು, ಉಲ್ಲಾಸದಿಂ ನೋಡುತ್ತಿರುವ ಸಮಯದೊಳ್, ಸುಗಂಧರಾಜನಾಗಿ ಅವತಾರವಾಗಿರುವ ದೇವೇಂದ್ರನ ವಿವಾಹಕ್ಕೆ, ಅಮರಾವತಿಯ ಸಕಲ ವಸ್ತುಗಳು ಬಂದೊಂದು ಪರಿಯಾಗಿ ಭೂಲೋಕವಂ ಸೇರಿರುವವು. ನಾನು ಇಲ್ಲಿ ಈ ದುಷ್ಟ ರಾಕ್ಷಸರ ಕಾಲುಗಳ ತೊಳೆಯುವ ಕಾಲ್ವೆಯಾಗಿ ಇರಲಾರೆನೆಂದು, ದೇವಗಂಗೆಯೇ ಬಹು ಪ್ರವಾಹಂಗಳಾಗಿ ಭೂಮಿಗೆ ಇಳಿದು ಬಂದುದೋ; ಎಂಬಂತೆ, ಎದುರಾಗಿ ಬರುವ ಮಗನಂ ನೋಡಿ, ಮಮತೆಯಿಂದ ಮುದ್ದಾಡಬೇಕೆಂದು ಹಾಲ್ಗಡಲು ಉಬ್ಬುಬ್ಬಿ ಭೂಮಿಯಿಂದ ಆಕಾಶಕ್ಕೆ ತುಂಬಿ ತುಳುಕುವದೋ, ಎಂಬಂತೆ, ಬ್ರಹ್ಮಾಂಡವೆಂಬ ಚಿನ್ನದ ಭರಣಿಯ ತುಂಬ ತುಂಬಿರಿಶಿದ ಪಚ್ಚ ಕಪ್ಪುರದ ಪುಡಿಯೋ; ಎಂಬಂತೆ, ಆಕಾಶವೆಂಬ ಕಾಳಮೇಘವು ಮಲ್ಲಿಗೆಯ ಹುವ್ವುಗಳೆಂಬ ಮಳೆಗರದುದೋ; ಎಂಬಂತೆ, ಸುಗಂಧರಾಜನ ಧೈರ್ಯಗುಣವಂ ಕೇಳಿ ಬೆದರಿ ಅಡ್ಡಬೀಳಬೇಕೆಂದು ಬಂದ ಹಿಮವಂತನೋ, ಎಂಬಂತೆ, ಅಷ್ಟಮೂರ್ತಿಯಾದ ಮಹೇಶ್ವರನು ಮೈಯಲ್ಲಿ ಹಚ್ಚಿಕೊಂಡಿರುವ ವಿಭೂತಿಯೋ, ಎಂಬಂತೆ, ಮೂರು ಲೋಕಂಗಳಂ ವ್ಯಾಪಿಶಿರುವ ಮನ್ಮಥ ಮಹಾರಾಯನ ಕೀರ್ತಿಯೋ; ಎಂ

ಬಂತೆ ತೋರಿ ಪರ್ವತಂಗಳನೆಲ್ಲ ರಜತಗಿರಿಗಳಂ ಮಾಡುತ್ತ, ಸಕಲ ಸಮುದ್ರಂಗಳಂ ಹಾಲ್ಗಡಲುಗಳಂ ಗೈಯುತ್ತ, ದ್ವೀಪಂಗಳನೆಲ್ಲ ಶ್ವೇತದ್ವೀಪಂಗಳನ್ನಾಗಿ ರಚಿಸುತ್ತ, ಬ್ರಹ್ಮಾಂಡರೂಪಿಣಿಯಾದ ಮೂಲಪ್ರಕೃತಿಯು ತಮೋರಜೋಗುಣಂಗಳಂ ಬಿಟ್ಟು ಶುದ್ಧ ಸತ್ವಮಯಳಾದಳೋ, ಎಂಬಂತೆ, ಆನಂದಮಯನಾದ ಪರಬ್ರಹ್ಮನ ಅನಂತತೇಜೋವಿಶೇಷದೊಳ್ ಪ್ರಾಕೃತವೆಲ್ಲವು ಐಕ್ಯಮಂ ಪಡೆದುವೋ; ಎಂಬಂತೆ, ಸಕಲ ವಸ್ತುಗಳೊಳ್ ಸೇರಿ ಬಿಳ್ಪೇರಿ ತಂಪುದೋರಿ ಸೊಂಪುವಿಹಾರಿಸುತ ಬರುವ ಬೆಳುದಿಂಗಳ ಬೆಳಕಿನೊಳ್ ಕಳಂಗಪ್ಪುದಲ್ಲಿ ಚಂದ್ರಿಕಾ ವಿಹಾರವಂ ಮಾಡುವ ನಾರಿಯರ ವೈಯಾರಂಗಳಂ ನೋಡಿ ಬರುವಾ ಎಂದು ಕಲಸಿಂಕನೊಡಗೂಡಿ ಸಾಧಾರಣ ಜನರಂತೆ, ಆ ಪುರದೊಳ್ ಪ್ರವೇಶಮಿಟ್ಟು ಗೋಪುರಂಗಳಂ ನೋಡುತ್ತ, ಅಲ್ಲಲ್ಲಿ ನೂಪುರಧ್ವನಿಗಳಂ ಕೇಳುತ್ತ, ಭಾಪುರೇ ಎಂದುತಲೆದೂಗುತ್ತ, ಈ ಪರಿಯಿಂದ ಬರಲಾಗ, ಒಂದು ಕಡೆಯೊಳು ಮಲ್ಲಿಗೆ,ಮೊಲ್ಲೆ, ಮರುಗ, ದವನ, ಶಾವಂತಿಗೆ, ಇರುವಂತಿಗೆ, ಸುರಗಿ, ಸಂಪಿಗೆಗಳಂ, ಜಾಜಿ ಅರಳಿಸಿ ಅದರ ಸೊಗಡಗೂಡಿ ಸಾಲದೆ,ಸುಗಂಧರಾಜೇಂದ್ರನಮೈಸೋಂಕಿ ಸುಗಂಧವಂ ಪಡೆಯಬೇಕೆಂದು ಬಂದುದೋ, ಎಂಬಂತೆ, ಪಾರಿಗಾರರ ಮನೆಮೇವರಾದ ತಂಗಾಳಿಯು ಘಮಘಮಿಸುತ ಮೆಲ್ಲನೆ ಬೀಸಲು, ಸುಗಂಧರಾಜೇಂದ್ರನು-ಇಲ್ಲಿ ಎಲ್ಲಿಯೋ, ಪುಷ್ಪವಾಟಿಗಳಿರುವವೆಂದು ತಿಳಿದು, ಸಮೀಪದಲ್ಲಿರುವ ಕಪ್ಪುರದ ಕರಂಡಂಗಳು,ಕಸ್ತೂರಿಯ ಡಬ್ಬಿಗಳು, ಜವಾಜಿಯ ಭರಣಿಗಳು, ಪನ್ನೀರಿನ ಕೂಜಾಯಿಗಳು, ಮಲ್ಲಿಗೆ ತೈಲ ಮೊದಲಾದುದಂ ತುಂಬಿದ ಸ್ಫಟಿಕಶಿಲೆ ಕುಪ್ಪಿಗೆಗಳು, ಗಂಧವಂ ತುಂಬಿದ ಬಟ್ಟುವಾದ ಬಟ್ಟಲುಗಳು, ರಾಶಿಗಳಂ ಮಾಡಿರುವ ಪರಿಪರಿಯ ಮೊಗ್ಗೆಗಳು,ಕಾಣುವಂತೆ ಎತ್ತಿ ಕಟ್ಟಿರುವ ಹೂವಿನ ಕುಚ್ಚುಗಳು, ಕಟ್ಟುತಿರುವ ಕೊನೆಯರಳಿದ ಬಿಡಿಹೂವುಗಳು, ತಟ್ಟೆಗಳೊಳು ತುಂಬಿಡುವ ಸುಮಹಾಸಗಾರರ ಹಾರಂಗಳು, ಜಡೆ ಕುಚ್ಚುಗಳು, ಮೊಗ್ಗೆಗಳ ಮಲಕುಗಳು, ಮತ್ತೂ ತರತರವಾದ ಒಪವೆಗಳು, ತಾವರೆ ಎಸಳುಗಳೊಳು ಬರೆದ ಭಾವಚಿತ್ರಂಗಳು, ಇವುಮೊದಲಾದ ವಸ್ತುಗಳಿಂದ ತುಂಬಿ ತುಳುಕುತ, ಮನ್ಮಥನ ಅಸ್ತ್ರಶಾಲೆಗಳಂತೆಸೆವ

ಪುಷ್ಪಸಂಗಡಿಗಳ ಮುಂದುಗಡೆಯೊಳು ನಿಂತು, ಅನಂಗನ ಖಡ್ಗಗಳಂತೆ ಕಂಗೊಳಿಸುವ ಬಾಲೆಯರಾದ ವಾರಿಗಾತಿಯರಂ ಲೀಲೆಯಿಂದ ನೋಡುತ್ತ ಮೆಲ್ಲನೆ ಬರುತ್ತ, ಮತ್ತೂ ಆ ಬೀದಿಯೊಳು ತಿರುಗುವ ಸೊಗಸುಗಾರರಂ ಕಂಡು ಎದ್ದು ದಯಮಾಡಬೇಕೆಂದು ಕೈಗಳಂ ಪಿಡಿದು ತೊಡೆಗೆ ತೊಡೆ ಸೋಂಕುವಂತೆ ಕುಳ್ಳಿರಿಸಿ, ಹುವ್ವು ಹದನಾಗಿ ತಮಗೆ ಒಪ್ಪುವಂತೆ ಆಗಳಿರುವದೆಂದು ನುಡಿಯುತ್ತ, ಕಪ್ಪುರದ ಪುಡಿಯುಂ ರೆಪ್ಪೆಗಳಿಗೆ ಸವರಿ, ಶ್ರೀಗಂಧತೈಲವಂ ಮುಂಗೈಗಳಿಗೆ ಹಚ್ಚಿ, ಜವ್ವಾಜಿಯಂತೆಗದು ಉಗುರಿನಿಂ ಕಿವೀಸಂದಿನೊಳು ಗೀರಿ, ಹಾರವಂ ಕಂಠದೊಳು ಅಳವಡಿಸಿ, ಮತ್ತೂ ಹುವ್ವುಗಳ ಮಾಟನೆವದಿಂದ ಅವರಂ ಮಾರನಾಟದೊಳು ಶೇರಿಸಿ ಮನಂಗಳಂ ಕರಗಿಸಿ ಧನಂಗಳಂ ಸೆಳೆಯುತ್ತ, ಬೆಳ್ದಿಂಗಳಿಗೆ ಅಭಿಮಾನಿ ದೇವತೆಗಳಂತಿರುವ ಪೂಲೆಗಾತಿಯರ ಮಾತುಗಳಂ ಕೇಳಿ ನಗುತ್ತ, ಅಲ್ಲಿಂದ ಮುಂದೆ ನಡೆದು ಬರುವಾಗ, ಕಿವಿಗಿಂಪಾಗಿ ಝುಂಪೆ ಮೊದಲಾದ ತಾಳಂಗಳಂ ಕೂಡಿ ಕೇಳಬರುವ ಮದ್ದಳೆಗಳ ಸದ್ದುಗಳಂ ಕೇಳಿ, ಇದೇ ಸೂಳೆಗೇರಿ ಎಂದು ಹಾರಿಹಾರಿ ಬೀಳುತ್ತ, ನಾಳೆಯಿಂದ ಈ ಸೂಳೆಯರ ಪಾಳಯದಲ್ಲಿ ವಹ್ಯಾಳಿವಂ ನೋಡುತ್ತ ನಾನು ಇಲ್ಲಿಯೇ ಇರುವೆನು ನಿನ್ನ ಕಟಕವೂ ಬೇಡ, ಕಳಿಂಗರಾಯನೂ ಬೇಡವೆಂದು ನುಡಿಯುವ ಕಲವಿಂಕನಂ ಕುರಿತು-ಎಲೈ ಚಪಲಚಿತ್ತನೆ, ಇಲ್ಲಿ ಎತ್ತರವಾಗಿ ಎದುರಾಗಿ ಕಾಣುವವು ವೇಶವಾಟಿಯಲ್ಲ, ವೇದಘೋಷಂಗಳಾಗುವವು ಆದ್ದರಿಂದ ದೇವಾಲಯಂಗಳಾಗಿರಬೇಕೆಂದು ಮರೆಮಾಚಿ ನುಡಿಯುವ ಸುಗಂಧರಾಜೇಂದ್ರನ ನುಡಿಗಳಿಗೆ ಕಲವಿಂಕನು ಕಳವಳಿಸಿ ಮನದೊಳು ಮುಕ್ಕಾಲು ಕಳೆ ಇಳಿದು-ಇಲ್ಲಿ ಎಲ್ಲಿ ಬಂತು ದೇವಾಲಯಂಗಳೆಂದು ದೇವರುಗಳಂ ಬೈಯುವದಂ ಕೇಳಿ-ಎಲೈ ಪಾಪಿಯೆ, ದೇವರುಗಳು ನಿನಗೆ ಏನುಮಾಡಿದರೆಂದು ಪೇಳುತ್ತ, ಮುಗುಳುನಗೆಗೊಂಡು ಮುಂದಕ್ಕೆ ನಡೆಯುವಾಗ, ಕಲವಿಂಕನು ಕೇಳಿ-ಬರುವ ಶಬ್ದವು ವೇದಘೋಷವೋ; ಅಲ್ಲದಿರೆ ಉಪಾಂಗಂಗಳಂ ಕೂಡಿ ನುಡಿಸುವ ವೀಣೆಯ ಧ್ವನಿಯೋ; ಇದುವಲ್ಲದಿರೆ ಶ್ರುತಿಗೂಡಿ ಬಾಲೆಯರು ಪಾಡುವ ರಾಗಾಲಾಪವೋ; ಪಂಜರಂಗಳಲ್ಲಿರುವ ಗಿಣಿಗಳ ಕೂಗಾಟವೋ ಎಂದು

ಸಂಶಯಂಗೊಂಡು, ಮೆಲ್ಲನೆ ಆಲೈಸುತ ಬರುತ ಸುಗಂಧರಾಜೇಂದ್ರನು ಕುರಿತು-ಬುದ್ಧಿ, ಬುದ್ಧಿ, ಈ ಸದ್ದನಾಲಿಸಬೇಕು, ಇದು ವೇದ ಪಾರುವರ ಸದ್ದುಗಳಲ್ಲ, ಘುಲ್ಲು ಘಲ್ಲೆಂದು ಗೆಜ್ಜೆಗಳ ಸದ್ದುಗಳು ಕೇಳುವದೆಂದು ನುಡಿಯಲು; ಆ ಕುಂಟಣಿಮಾತುಗಳಂ ಕೇಳಿ, ಕೋಪಗೊಂಡಂತೆ ಮಾಡಿ ಬರುತ್ತಿರಲು; ಕಲವಿಂಕನು ಶ್ರುತಿಯಂ, ಮೃದಂಗಮಂ, ಸಾರಂಗಿಯಂ, ಮುಖವೀಣೆಯಂ, ತಾಳವಂ ಮೇಳವಿಸಿ ಮೂಜಗಂಗಳಂ ಮೋಹಗೊಳಿಸುವಂತೆ ಗೆಜ್ಜೆಗಳಂ ಸದ್ದುಮಾಡಿ, ಘುಲ್ಲು ಘಲ್ಲೆಂದು ಶ್ರೀವರ್ಣನಂಗಳೊಳ್ಳು ಅಲ್ಲಲ್ಲಿ ಮೆಲ್ಲಮೆಲ್ಲನೆ ಪಲ್ಲಿಸುತ, ವಿತರಣನಿಸ್ತಂದ್ರ ವೈಭವ ಭೂದೇವೇಂದ್ರ ಸುರುಚಿರ ಕರುಣಾಸಾಂದ್ರ, ಸುಗಂಧರಾಜ ನೃಪಚಂದ್ರ ಪರಾಕುಪರಾಕೆಂದು ಉಲ್ಲಾಸದಿಂದ ಸೊಲ್ಲುಕಟ್ಟುಗಳನುಪ್ಪಾಡಿಸುವಸೂಳೆಯರ ಬಾಲೆಯರ ಸಂಚಲಕೊರಳಿನ ಸಂಗೀತದ ಸಂಗತಿಗಳಂ ಕೇಳಿ, ಕರ್ನಾಟಭೂಪಾಲನಂ ಕುರಿತು-ಎಲೈ ಸ್ವಾಮಿಯೇ, ಚಂದ್ರನ ಬೆಳ್ದಿಂಗಳಂತೆ ನಿನ್ನ ಕೀರ್ತಿಯು ಜಗವನೆಲ್ಲವಂ ವ್ಯಾಪಿಸಿರುವದು, ಎಂದು ಪೊಗಳಿ, ತನ್ನಸುತಿಗಳಂಕೇಳಿ ಮನದೊಳ್ಳು ಸಂತೋಷವಂ ಪಟ್ಟು, ಮರಳಿ ಮರಳಿ ಕೇಳಿ ತಲೆದೂಗುತ್ತಾ, ಬರುವ ರಾಜಶಿರೋಮಣಿಗೆ ಕೈಮುಗಿದು-ಸ್ವಾಮಿಯೆ, ನಿಮ್ಮ, ಅಪ್ಪಣೆಯಾದರೆ ಈ ಮಂದಿರಕ್ಕೆ ಸದ್ದುಮಾಡದಂತೆ ಪೋಗಿ ಆ ಹುಡುಗಿಯರನ್ನೋಡಿ ಬರುವೆನೆನಲು, ಆ ನುಡಿಯಂಕೇಳಿ, ಎಲೈ ಕಾಮಾತುರನೆ, ಕಂಡ ಕಂಡ ಮನೆಗೆಲ್ಲಾ ಪೋಗುವವೇ, ಹೋದರೂ ಹುಡುಗಿಯರ ನೀನುಏನಮಾಡುವೆ, ಬೆಡಗುಗಾತಿಯರು ಇರುವ ಕಡೆಗೆ ನಡೆ ಎಂದು ನುಡಿಯುತ ಒಡೆಯನೊಡಗೂಡಿ ನಡೆಯುತ್ತ, ಬರುತ ಬಂದು ಮಂದಿರದ ಬಾಗಿಲ ಕೈಸಾಲೆಯಲ್ಲಿ ಒರ್ವ ಮುದಿಸೂಳೆಯು ಎಳೆ ಹುಡುಗಿಯರಂ ಕುರಿತು, ಎಲೈ ಬಾಲೆಯರಾ ಕೇಳಿ, ಮನ್ಮಥನಬಾಣಂಗಳೆಂಬುವದು ಬೇರೆಬಂದಿಲ್ಲ, ನಿಮ್ಮಂತಿರುವ ಕನ್ನೆಗಳಕೈಗಳೇ ಅರವಿಂದಗಳು, ಅಧರಬಿಂಬವೇ ಅಶೋಕಕುಸುಮವು, ಮಂದಹಾಸವೇ ಮಾವಿನಹೂಗೊಂಚಲುಗಳು, ಪಲ್ವರಸೆಯೇ ಎಳೆದುಂಡು ಮಲ್ಲಿಗೆಗಳು, ಕಂಣುಗಳೇ ಕನ್ನೈದಿಲುಗಳು, ಇಂತುಮನ್ಮಥನ ಬಾಣಂಗಳು ಅಂಗನೆಯರಿಗೆ ಅಂಗವಾಗಿರುವುದೆಂದು ರಹಸ್ಯವನ್ನುಪದೇಶಿಸಂ

ಮಾತುತ್ತಂ, ಈ ಯೌವನದ ಮೊದಲು ಮೊದಲು ಮಾರೆನೋಟಗಳ್ ಪಟುಗಳು ಸಿಂಗಾರರ ಮನಸ್ಸುಗಳಲ್ಲಿ ನಾಟುವಂತೆ ಮಾಡಿ, ಅವರ ರೂಪವಂ ನೋಡಿ, ಮೋಹಿಸದ ಐಶ್ವರ್ಯವಂ ವಿಚಾರಿಸುತ, ಒಂದೊಂದು ದಿನ ಒಂದೊಂದು ಬೆಡಗು ತೋರಿಸುತ, ಪರಿಪರಿ ಉಪಚಾರಗಳಿಂದ, ಮಾತು ಕಥೆಗಳಿಂದ, ಪಗಡೆ ಚತುರಂಗವಾಟಗಳಿಂದ, ಅಭಿನಯದಚಿತ್ರರಗಳಿಂದ, ಬರಿಯ ವ್ಯಸನಂಗಳಿಂದಲೇ ಕಳೆಯಿಸುತ್ತ, ವ್ಯಸನೋದಯದಂತೆ ಬಿಸಲಿಗೆಮೊಗವು ತೋರಿಸದೆ, ಬಿಗಿಯಾಗಿ ರವಿಕೆಗಳಂ ತೊಟ್ಟು, ಶರಗುಗಳಂ ಭಾರಿಭಾರಿ[illegible]ಸುತ, ಜಾರರಂ ಪ್ರೀತಿಗೊಳಿಸಿ, ಅಂಜನ ವಶ್ಯ ಮದ್ದುಗುಳಿಗೆಗಳಿಂದ ಹುಚ್ಚಿಗೆ ಹೆಚ್ಚು ಕಡಿಮೆಯಾಗ ಮೋಹವಂ ಬೆಳೆಸಿ, ಧನ ಕನಕ ಮೊದಲಾದ ವಸ್ತುಗಳನೆಲ್ಲ ಬೀದಿಗಳ್ಳರಾಗಿ ಸುಲಿಗೆಗೊಳ್ಳುವದೊಂದೇ ನಮಿಗೆ ಕುಲಧರ್ಮವೆ ಮ ಬುದ್ಧಿಯಂ ಪೇಳುವ ಮುದುಕಿಯ ಮಾತುಗಳಂ ಕೇಳಿ, ಸೊಗಸುಗಾರರಿಗೆಲ್ಲ ಇವಳು ಮಾರಿಯಾಗಿರುವಳೆಂದು ಬೈಯುವ ಕಲವಿಂಕನಂ ನೋಡಿ, ಪುಂಡರೊಳ್ ಪುಂಡನೆಂದು ನಸು ನಗುತ ಮುಂದೆ ನಡೆತಂದು ನೋಡುತ್ತಿದ್ದನು.

ಮತ್ತೊಂದು ಚಂದ್ರಶಾಲೆಯ ಮುಂದುಗಡೆಯೊಳು ಮುತ್ತಿನ ಬೊಂಬೆಯಂತೆ ಬೆಳ್ದಿಂಗಳಲ್ಲಿ ಕುಳಿತು ವೀಣೆಯಂಪಿಡಿದು ಆರೋಹಣಾವರೋಹಣಕ್ರಮದಿಂದ ಹಿಂದು ಮುಂದು ಒಂದಂದಗಳ ಸಂಗತಿಗಳು ಮರಳಿಬಾರದಂತೆ ಹಿಂದೋಳ ರಾಗವಂ ಬಾಯಿಸುವ ಸುಂದರಿಯನೋಡಿ, ಸುಚರಿತ್ರರಾಯನನಂದನನು, ಒಂದು ನಿಮಿಷ ಅಲ್ಲಿಯೇ ನಿಂತು ಆನಂದವಂಬಟ್ಟು, ಮುಂದೆ ಬರುತ್ತ, ಮತ್ತೊಂದು ಉಪ್ಪರಿಗೆಯ ಉಬ್ಬು ಚಪ್ಪರದ ಕೆಳಭಾಗದೊಳು, ಸರಪಣಿಗಳಲ್ಲಿ ಅಳವಡಿಸಿದ ಗಗ್ಗರಿಗಳ ಘುರ್ಘುರಧ್ವನಿಗಳಂ. ಕಾಲು ಸರದ ಗೆಜ್ಜೆಗಳ ಘಲ್ಲೆನುವ ಶಬ್ದವಂ ಕೇಳಿ ತಲೆ ಎತ್ತಿ ನೋಡಿ, ಒಡ್ಯಾಡುವ ತುಂಬಿಗಳಂತಿರುವ ಸುಳಿಗುರುಳುಗಳಂ, ಹಾರುವ ಪಕ್ಷಿಗಳಂತೆಸೆವ ಕುಚಂಗಳಂ, ಹಾಯಾಡುವ ಮೀನುಗಳಂತೆ ಹೊಳೆವ ಕಣ್ಣುಗಳಂ, ವೇಗದಿಂ ಬರುವ ಮಿಂಚಿನಂತೆ ಥಳಥಳಿಸುವ ಶರೀರವಂ, ಬೀಸುವ ಮನ್ಮಥನ ಬೀಸಣಿಗೆಯಂತೆ, ಬಿಚ್ಚುವ ಶರಗಂ, ವೇಗದಿಂಬರುವ

ಮನ್ಮಥನ ಬಾಣಗಳಂತೆ, ತಾರುಣ್ಯದಿಂ ಬಿದುರುವ ಮಲ್ಲಿಗೆಗಳನ್ನೋಡಿ ಇವಳ್ಯಾರೋ ಇಲ್ಲಿ ಬಾಯಾರ್ಯೊಯ್ಯುತ್ತಿರುವಳು, ಇವಳ ಪರ್ಯ್ಯಾಗ್ರಹ ದಲ್ಲಿ ಕೇರಿದವರೆ ಎಂತಿರುವರೋ ಎಂದು ಕೆಳಗಿಳಿಸುವ ಕಲವಿಂಕನುತ್ಕೈಸನ್ನ ಯಿಂದ ಬೆದರಿಸುತ್ತ, ಬೀದಿಯೊಳು ಬರಲಾಗ, ಎದುರಾಗಿ ಸಣ್ಣ ಬಿಳೀಶೀರೆ ಯನ್ನುಟ್ಟು, ಬರಿಯಮುತ್ತಿನ ವಡವೆಗಳನ್ನಿಟ್ಟು, ಪಚ್ಚೆ ಕಸ್ತೂರಿಯ ಬೊಟ್ಟನ್ನಿಟ್ಟು, ಅರಳಿದ ಮೊಲ್ಲೆ ಮಲ್ಲಿಗೆ ಸರಗಳಂ ಮುಡಿದು, ಮುಖವಾಸನೆಗೆ ತುಂಬಿಗಳುಬಂದು ಎರಗುವದೆಂದು ಬೀದು ಸಂಪಿಗೆಯಮೊಗ್ಗಂ ತಂದು ತುರುಬಿನೊಳ್ ಶಿಕ್ಕಿಸಿ, ಬಿಳಿಯ ಮುಸುಕಂ ಪೊದ್ದು, ಬೆಳ್ದಿಂಗಳೊಳ್ಬರದು ಬೀದಿಯೊಳ್ಬರುವ ಯುಳಿಜಾರಿಣಿಯನ್ನೋಡಿ, ಕಲವಿಂಕನು ಅವಳ ಕಣ್ಣುಗಳ ಕಪ್ಪನೋಟದ ಕಪ್ಪುಬೆಳಕಿನಿಂ ಗುರುತು ಹಿಡಿದು ಆ ಚಕ್ಷಿಯಂ ಕರಿತು—ಎಲ್ಲೈ ಪಲ್ಲವಾಧರೆಯೆ, ಎಲ್ಲಿ ಪೋಗುವೆ? ನೀನಿಲ್ಲಿಯೇ ನಿಲ್ಲು ನಿಲ್ಲೆಂದು ಬಿಳಿಯ ಶಲ್ಯವಂ ಪಿಡಿದುಕೊಳಿಯಲು, ಅವಳು ನಡುವೆ ಇವರೆಲ್ಲಿ ಬಂದರೆಂದು ಮನದೊಳ್ ನಿಮಿಷತಲ್ಲಣಂಗೊಂಡು ಬಾಲೆಯರು ಧೀರರಾದಕಾರಣ ಬಾಯಿಂದ ಬಿಟ್ಟೆ,ಬಿಟ್ಟೆ, ತೆಗೆತೆಗೆ, ಎಲಾ, ಎಲ್ಲಾದರೊ ಪೋಗುವನೆಂದು ಬೆದರ ನುಡಿಯಂನುಡಿದರೂ ಬಿಡುವದಿಲ್ಲವೆಂದು ತಡೆಯುವ ಕಲವಿಂಕನ ಹುಡುಗುತನಕ್ಕೆ ಆ ಬಾಲೆಯು—ಗಡ ಗಡನೆ ನಡುಗಿ,ಮತ್ತೊಂದು ಬೆಡಗಂ ತೋರುವೆನೆಂದು ಯತ್ನೈ ಸಲ್ಲನೇ,ನೀನು ಪಿಡಿದಿರುವದು ಬಲ್ಲಿಯಲ್ಲ, ಮಲ್ಲಿಗೆಯದಂಡೆಯೆಂದು ನುಡಿಯಲಾಮಾತು ನಿಜವೆಂದು ಕಲವಿಂಕನು ತಾನು ಪಿಡಿದಿರ್ದ ಬಿಳಿಯ ಶಲ್ಯವಂಬಿಟ್ಟು ಬೆಳ್ದಿಂಗಳಂಪಿಡಿಯಲು, ಅಷ್ಟರೊಳವಳು ಮೆಲ್ಲನೆಎಲ್ಲಿಗೋ ಗೊತ್ತಿಲ್ಲದೆಪೋದಳು, ಇದನೆಲ್ಲವನೋಡಿ ಸುಗಂಧರಾಜಭೂವಲ್ಲಭನು—ಎಲ್ಲೈಕಲವಿಂಕನೇ,ನಿನಗೆಇಲ್ಲಿ ಮತಿಮೋಸವಾಯ್ತಲ್ಲವೇಎಂದುನುಡಿಯಲಾನುಡಿಯಂ ಕೇಳಿ ಕಲವಿಂಕನು—ಎಲ್ಲೈ ಸ್ವಾಮಿಯೇ, ಇಂದಿನ ಬೆಳ್ದಿಂಗಳಿಂತು ನನ್ನಂ ಮೋಸವಂಮಾಡಿದುದಲ್ಲದೆ ನನ್ನಂ ಗೆಲ್ಲುವರ್ಯಾರೆಂದು ಬಿನ್ನವಿಸಲು,ಆಕಲವಿಂಕನೊಡನೆ ಸುಗಂಧರಾಜೇಂದ್ರನು ಚಂದ್ರಕಿರಣಂಗಳ ಹೊಳಪುಗಳಂ ಅಲ್ಲಲ್ಲಿ ತೋರಿಸುತ, ಪುರ ಮಧ್ಯದೊಳಿರುವ ಉಪವನಂಗಳ ಅಂಚಿ

ನೊಳ್ ಬರುತ್ತ, ಎಲ್ಲೆ ನೋಡಿನಡಲ್ಲಿ ಅರಳಿದ ದುಂಡುಮಲ್ಲಿಗೆಯು ಮೊಗ್ಗೆಗಳೆಳದಳಂಗಳಲ್ಲಿರುವ ಮಕರಂದವದೊಳ್ ಕಲತು ತುಂಬೆಮರಿಗಳಿಗೆ ತುಪ್ಪವದೊಳ್ ಹಾಲುಬೆರವಂತೆ ಕಾಣುವವೆಂದು ತೋರಿ, ಮತ್ತೂ ಅಲ್ಲಿಂದ ಮುಂದೆ ನಡೆತಂದು, ಝಳಪಿಸುವ ಮನ್ಮಥನಕತ್ತಿಗಳಂತೆ ಮೊನೆದೋರಿ ಪೊಳೆವ ಕಾಣಿಸುವ ಚಂದ್ರಕಿರಣಂಗಳ್-ಒಂದೊಂದು ಗುಟುಕಾಗಿ ಹೊಟ್ಟೆಗಳು ತುಂಬುವಂತೆ ಕೊಕ್ಕುಗಳಿಂದ ಚಪ್ಪರಿದು ಕುಡಿದು, ಘರ್ರೆಂದು ತೇಗಿ ರೆಕ್ಕೆಗಳನಲ್ಲಾಡಿಸಿ ಮೆಲ್ಲ ಮೆಲ್ಲನೆ ಕಬ್ಬುಬಿಲ್ಲಿನ ಕಲಹಂಗಳಂ ಮಾಡುವ ಚಕೋರ ಪಕ್ಷಿಗಳ ಆನಂದ ಬಾಷ್ಪಜಲಂಗಳು ಅರಳಿದ ನೈದಿಲೆಗಳೊಳ್ ಬಿಂದು ಬಿಂದುಗಳಾಗಿ ಕಾಣಿಸುವುದು ನೋಡೆಂದು ತೋರಿಸಲು, ಆ ಕಲವಿಂಕನು ವಿಸ್ಮಯಂಗೊಂಡು ನೋಡುತ್ತ-ಸ್ವಾಮಿಯೇ, ಚಂದ್ರನು ಆಕಾಶದೊಳ್ ಜನಿಸಿದರೆ ಇಲ್ಲಿ ಯಾಕೆ ಕಲ್ಲುಗಳು ಕರಗುವದೆಂದು ಕೇಳಲು, ಆ ಕಲವಿಂಕನಂ ಕುರಿತು-ಸುಗಂಧರಾಜ ಭೂವಲ್ಲಭನು ಎಲ್ಲೆ ಕೇಳು, ಹಗಲು ವಿಹರಿಸುತ್ತಿರ್ದು, ಇರುಳಾಗುವ ಸಮಯದೊಳ್ ಸತಿ ಪತಿಗಳು ಅಗಲಿ ಪೋಗಿ, ಕತ್ತಲೆಯೊಳ್ ಕಣ್ಣುಗಳು ಕಟ್ಟಿದಂತಿರ್ದು, ಮೆಲ್ಲ ಮೆಲ್ಲನೆ ಅಲ್ಲಲ್ಲಿ ಬೆಳ್ದಿಂಗಳು ತಲೆದೋರಲು ಅದಂ ಎಳೆಬಿಸಲೆಂದು ತಿಳಿದು ತಮ್ಮ ಪತಿಗಳನ್ನೆನದು ವನಂಗಳನೆಲ್ಲವಂ ಹುಡುಕಿ, ಕಳವಳಿಸಿ ತಿರುಗುವಾಗ ತಿಳಿಗೊಳಂಗಳೊಳ್ ತಮ್ಮ ತಮ್ಮ ನೆರಳು ಕಂಡು ಗಂಡನಂ ಕಂಡೆನೆಂದು ನಲಿದು, ದಂಡೆಯೊಳ್ ಪೋಗಿ ನೋಡಿ ಮಾತಾಡದೆ ಇರುವುದು ಕಂಡು ತನ್ನವಲ್ಲಭನಲ್ಲವೋ? ಅಲ್ಲದೆ ನನ್ನೊಪ್ಪದೆ ಮುನಿಸಿಗೊಂಡನೋ? ಎಂದು ನಿಟ್ಟುಸುರಂಬಿಟ್ಟು ಕಂಗೆಟ್ಟು ಶೋಕವಂ ಗೈವ ಚಕ್ರವಾಕ ಜಾತಿಯು ಹೆಣ್ಣು ಹಕ್ಕಿಗಳ ಗೋಳಾಟವಂ ನೋಡಲಾರದೆ ಕರಗುವವೋ ಎಂಬಂತೆ ಚಂದ್ರಕಾಂತಶಿಲೆಗಳು ಕರಗಿ ನೀರಾಗುವವೆಂದು ನನಿಗೆ ತೋರುವುದೆನುತ ನುಡಿಯಲಾ ಸುಗಂಧರಾಜೇಂದ್ರನ ಬುದ್ಧಿ ಚಮತ್ಕಾರವಂ ನೋಡಿ ಕಲವಿಂಕನು-ಎಲ್ಲೆ ಸಕಲಕಲಾವಲ್ಲಭನೇ, ಒಂದೊಂದು ದಿನದೊಳ್ ಒಂದೊಂದು ಶೃಂಗಾರಕಾವ್ಯವಂ ರಚಿಸುವ ನಿಮ್ಮ ಸರಸಕವಿತೆಯ ಮಾಧುರ್ಯವಂ ಸರಸ್ವತಿಯೇ ಬಲ್ಲಳೆಂದು

ಸ್ತುತಿಯಂಗೈಯುಲಾವಮಾತಿಗೆ ಸುಗಂಧರಾಜನು ಮೈಯುಬ್ಬಿ ಮತ್ತೊಂದು ಬೀದಿಯೊಳ್ ಮೇಲು ಮಚ್ಚುಗಳಲ್ಲಿ ಉಲ್ಲಾಸದಿಂ ಪೆಚ್ಚಿ ರಮಣಿಯರು ಮೆಚ್ಚುವಂತೆ ರತಿಗಳಂಮಾಡಿ ಬಳಲಿ ಬಾಯಾರಿ ಮಸ್ಸವಂತುಂಬಿ ಮಡಗಿರುವರೆಂದು ಭ್ರಮೆಯಿಂದ ಪಚ್ಚೆಗಲ್ಲಿನ ಬರಿಯ ಬಟ್ಟಲುಗಳಂ ಅಲ್ಲಾಡದಂತೆ ಮೆಲ್ಲನೆ ಎತ್ತಿ ಕುಡಿಯುವ ವಿಟರುಗಳನ್ನೋಡಿ ಹಾಸ್ಯವಂಗೈವ ನಾರಿಯರ ಮುಗುಳುನಗೆಗಳಿಂದ ಬೆಳದಿರುವ ಬೆಳ್ದಿಂಗಳಂ ಅಲ್ಲಲ್ಲಿ ನೋಡುತ್ತ ಮೆಲ್ಲನೆ ನಡೆದುಬರುವಾಗ ಕಡಮ ಮಾಡಿದ ಪವಳದ ಕಂಭಗಳಂನಿಲ್ಲಿಸಿ ಅದರಮೇಲೆ ಅಲ್ಲಲ್ಲಿ ಮುಲ್ಲಿಗೆಯ ಚಪ್ಪರಂಗಳನ್ನೆತ್ತಿಕಟ್ಟಿರುವ ಬೀದಿಸಾಲಿನ ಕೈಸಾಲೆಯೊಳ್ ಅರಳಿಬರುವ ಹುವ್ವುಗಳಂ ಲೋವೆಗಳಮೇಲೆ ನಿಂತುಬಿಡಿಸಿ, ಬಳಿಕ ಚಪ್ಪರಗಳ ನೆರಳಿನೊಳ್ ಅಲ್ಲಲ್ಲಿ ಬಿಲ್ಲೆ ಬಿಲ್ಲೆಗಳಾಗಿ ಕಾಣುವ ಬೆಳ್ದಿಂಗಳಂ ಚಲ್ಲಿರುವ ಹುವ್ವುಗಳೆಂದು ತಿಳಿದು ಕೈಗಳಿಂದ ಬಾಚುವ ಬಾಲೆಯರ ಭ್ರಾಂತಿಯುಕೆಲಸವಂ ಕಂಡು ನಸುನಗುತ ಇವರು ಮುಗ್ಧೆಯರೆಂದು ಕಲವಿಂಕನೊಡನೆ ಪೇಳುತ್ತ, ಅಲ್ಲಿಂದ ಮುಂದೆ ಮತ್ತೊಂದು ಮಣಿಮಂದಿರದ ಚಂದ್ರಶಾಲೆಯ ಮುಂದುಗಡೆಯೊಳ್ ರತಿಗೆ ಸವತಿಯರಂತಿರುವ ಕೆಲರು ಸತಿಯರು ಪತಿಗಳಿಂದೊಡಗೂಡಿ ರತಿಗಳಂಮಾಡಿ ಅಲಸಿ ಬ್ಯಾಸಿಗೆಯ ಶಕೆತಟ್ಟಿ ಉಟ್ಟಿರುವ ಬಿಳಿಯ ಬಟ್ಟೆಗಳ ಕಳದಿಟ್ಟು ಮುಂದಮಾಗುತಕ್ಕೆ ಮೈಗಳಂಕೊಟ್ಟು ಕೆಲವು ಹೊತ್ತು ಹಾಯಿಗೊಂಡು ಮಲಗಿರ್ದು, ಮೆಲ್ಲನೆ ಎದ್ದು ಮಡಗಿರ್ದ ಉಡುಗೆಗಳೆಂದು ಬೆಳ್ದಿಂಗಳಂ ಕೈಗಳಿಂದೆತ್ತೆತ್ತಿ ನೋಲುತ್ತ, ಮುತ್ತುಗಳ ಪೋಣಿಸಿರುವ ಹೊರಶರಗುಗಳ ಭಾರ ತೋರುವದಿಲ್ಲ ಸೀರೆಗಳಲ್ಲವೆಂದು ಅಲ್ಲಲ್ಲಿ ಹುಡುಕಿ ಬ್ಯಾಸರಂಗೊಂಡು ಹಿಂತಿರುಗಿ ಪೆತ್ತಲೆ ನಾಚಿಗೊಂಡು ಬರುವ ಬೆಡಗುಗಾತಿಯರನ್ನೋಡಿ ಬೆರಗಾಗಿ ನಿಲ್ಲುವ ಕಲವಿಂಕನಂ ಎಚ್ಚರಿಸುತ್ತ, ಅಲ್ಲಿಂದ ತೆರಳಿ ಮತ್ತೊಂದು ಹತ್ತರದಲ್ಲಿ ಕಾಣಿಸುವ ಚಿತ್ರರದ ಮಾಳಿಗೆಯೊಳ್ ಹೊತ್ತುಕಳದುಬಂದ ಚಿತ್ರವಲ್ಲಭರನ್ನೋಡಿ ಕೋಪವಂಮಾಡಿದಂತೆ ಕೆಲರು ಚಿತ್ತರಿಯರು ಪೂಮಾಲೆಗಳಿಂದ ಇವರಂಬಿಗಿದುಕಟ್ಟಿ ಬಡಿಯಬೇಕೆಂದು ಬಂದು ಮುತ್ತಿನ ಗಮಾ

ಕ್ಷಂಗಳ ಜಾಲಂದರಗಳೊಳ್ ದೂರಿರುವ ಬೆಳ್ದಿಂಗಳಂ ಮಲ್ಲಿಗೆಸರಗ ಳೆಂದು ತೆಗೆಯುವ ಸೊಗಸಾದ ಬೆರಳುಗಳ ಉಗುರುಗಳ ಬೆಳಕಿನಿಂದ ಅಲ್ಲಲ್ಲಿ ಮಿಂಚುಗಳ ಕಂಡಂತೆ ಕಣ್ಣುಗಳಂಮುಚ್ಚುತ್ತಬಂದು ನಾಲ್ಕಾರು ಬೀದಿಗಳಂ ಈ ಪರಿಯಿಂದದಾಂಟಿ, ನಗರದ ರಂಗಮಧ್ಯದೊಳ್ ಕಾಣಿ ಸುವ ಮಣಿಕಲಶಂಗಳಂ, ಅವರ ಮಧ್ಯದೊಳ್ ಗಗನವಂ ಸೋಂಕುವಂತೆ ನೆಟ್ಟನೆ ಕಟ್ಟಿರುವ ಬಿರುದಾದ ಗಜಧ್ವಜವಂ, ಪರ್ವತಂಗಳಂತಿರುವ ಚಿನ್ನ ಬೆಳ್ಳಿಯ ನೂರಾರು ಉಪ್ಪರಿಗೆಗಳಂ, ಅವರ ಅಂತರದಲ್ಲಿ ಕಾಣಿಸುವ ಚಂದ್ರಶಾಲೆಗಳಂ, ಎಲ್ಲೆಲ್ಲಿಯು ನಿಲ್ಲಿಸಿರುವ ಚಿನ್ನದ ಬಾಳೆಯಕಂಭಗಳಂ, ಎತ್ತೆತ್ತಲುಂ ಎತ್ತಿಕಟ್ಟಿರುವ ಮುತ್ತು ಪಚ್ಚೆಯ ತೋರಣಂಗಳಂ, ಅದ ರೊಳ್ ಕಾಣುತ್ತಿರುವ ಮಲಕಿನ ಗವಾಕ್ಷಂಗಳಂ, ಅಲ್ಲಿ ಪ್ರೋಡ್ಯಾಡುವ ಎಳೆ ಮೀನುಗಳಂತೆ ಪೊಳೆವ ಕಣ್ಣುಗಳ ಥಾಳ ಥಳ್ಯವಂ ಕೂಡ ನೋಡಿ ಇದೇನು ಆಕಾಶದೊಳ್ ಸಮುದ್ರವು ಕಾಣಿಸುವುದೆಂದು ವಿಸ್ಮಯಗೊಂ ಡಿರುವ ಕಲವಿಂಕನ ಭ್ರಾಂತಿಯು ನೋಟವಂಕಂಡು, ಎಲೈ ಕಲವಿಂಕನೇ.- ಇದೇನು ಇಂತು ನಿಂತು ನೋಡುವೆ, ಇದು ಕಳಿಂಗರಾಜನ ಮಂದಿರವೆಂದು ಗಜಧ್ವಜದಿಂದ ತಿಳಿಯಬಾರದೇ ಎಂದು ಪೇಳಲು, ಆ ಮಾತಿಗೆ ಕಲವಿಂ ಕನು-ಸ್ವಾಮಿಯೇ, ಗಜಧ್ವಜ ಪಟವಂ ಯಾರು ನೋಡಿದರು, ಇಲ್ಲಿ ಗವಾಕ್ಷಂಗಳೊಳ್ ನಿಂತುನೋಡುವ ಗಜಗಮನೆಯರ ಕಣ್ಣುಗಳ ಬೆಳ ಕಿನ ಕಡಲಿನೊಳ್ ಮುಳುಗಿರ್ದೆನು ಎಂದು ನುಡಿಯಲಾಸಮದೊಳ್ ಆ ಮಾತಿನಿಂದ ಸುಗಂಧರಾಜೇಂದ್ರನು ಸಾಮ್ರಾಜ್ಯವಿಭವದಿಂ, ಭಯಲೇ ಶವಿಲ್ಲದ್ದರಿಂ,ಯೌವನಭಾರದಿಂ, ರಸಜ್ಞನಾದುದರಿಂ,ಮೃದುವಾದಮನಸಿನಿಂ ಚಂದ್ರನ ಬಿಸಲಿನಿಂ, ಮಂದಮಾರುತದ ಮೈಸೋಂಕಿನಿಂ, ಮನ್ಮಥನ ಬಾ ಣವರ್ಷದಿಂ, ವೀಣೆ ಸಂಗೀತ ಶ್ರವಣ ಮೊದಲಾದ ಕಾಮೋದ್ದೀಪನ ವಿಭಾವಂಗಳಿಂ, ಕಳಿಂಗರಾಜನ ಮಗಳನೆನಹುಬಂದು, ಆಗ ಅದೊಂದುಬ ಗೆಯ ಶೃಂಗಾರದೊಳ್ ಅಯೋಗವಿಪ್ರಲಂಭದಿಂದ ಉದ್ಭವಿಸಿದವಿರಹತಾ ಪವು ತಲೆದೋರಿ ಅದೇ ನಿಮಿಷದೊಳ್ ಬೆಳ್ದಿಂಗಳು ಬೆಂಕಿಯಂತೆ ತೋರಿ, ತಂಗಾಳಿಯು ವಿಷಜ್ವಾಲೆಗೂ ಮೀರಿ, ದುಂಡು ಮಲ್ಲಿಗೆಯು

ಸೊಗಡು ಆಗತೇ ಎಷ್ಟೇ ಗುಂಡಿಗೆಯುಂ ತಲ್ಲಣಂಗೊಳಿಸುವದಾಗ ಮನ್ಮಥನು ಕ್ರೂರಮಾರಕನಾಗಿತೋರಿ, ಬೀದಿ ಕೈಸಾಲೆಗಳಲ್ಲಿ ಕಟ್ಟಿರುವ ಪಂಜರದ ಗಿಣಿಗಳ ನುಡಿಗಳು ಕರ್ಣಕಠೋರಂಗಳಾಗಿ, ಅಲ್ಲಲ್ಲಿ ಮೇಲುಮಂದಿರಂಗಳೊಳ್ ನುಡಿಯಿಸುವ ವೀಣೆಯೆ ಆದಿಯಾದ ಮಧುರವಾದ್ಯಂಕೂಡಿದ ಸಂಗೀತವು ಆರೋಹಣಾ ವರೋಹಣದಿಂದೊಪ್ಪಿದ ಸಪ್ತಸ್ವರಂಗಳೆಂಬ ಮೊನೆಯಾದ ಹಲ್ಲುಗಳಿಂಕೂಡಿ ಮನಸಂ ಕತ್ತರಿಸುವ ಗರಗಸದಂತೆ ತೋರಿ, ಒಂದು ನಿಮಿಷದೊಳ್ ಮದನನ ಮಾಯಾಪ್ರಭಾವದಿಂದ ಪ್ರಿಯಂಗಳಂ ಅಪ್ರಿಯಂಗಳಂತೆ ತಿಳಿದು ಕಳವಳಿಸಿ, ತನ್ನೊಳಗೆ ತಾನು ಬಿಡಾರದಂ ಕುರಿತು ಪೋಗುವಾ ಎಂದರೆ ಮನಸು ಬಾರದು, ಕಟಕದ ಗುಡಾರಕ್ಕೆ ಸೇರುವಾ ಎಂದರೆ ಈ ಉರಿಯುವ ಬೆಳ್ದಿಂಗಳೊಳ್ ಎಂತು ನಡೆಯಬಹುದು, ನರ್ಮದಾ ತೀರಕ್ಕೆ ತೆರಳುವಾ ಎಂದರೆ ಅದು ಸಂಭವಿಸಲಾರದು, ರತ್ನಪುರವಂ ಕುರಿತು ತೆರಳುವೆನೆಂದರೆ ಅದೆಂತು ಕೂಡುವುದು, ಇಲ್ಲಿಯೇ ನಿಂತಿರುವೆನೆಂದರೆ ಮನ ಪತ್ತುಬಡದು, ಈಗ ನಾನು ಎಲ್ಲಿಗೆ ಬಂದಿರುವೆನೋ, ಎಚ್ಚರವಾಗಿರುವೆನೋ; ಇಲ್ಲದಿರೆ ಕನಸೋ; ಚಿತ್ತವಿಭ್ರಮವೋ ಈಗ ನಾನು ಅನುಭವಿಸುವುದು ಸುಖವೋ; ತಾಪವೋ; ಏನಿದು ಬಂದೂ ತಿಳಿಯದಂತೆ ಮಾಯೆಯೊಳ್ ಮುಳುಗಿ ಇರುವೆನೆಂದು ಒಂದು ನಿಮಿಷ ಸುಮ್ಮನೆ ನಿಂತಿರ್ದು, ಹಾ ಮರತೆನು, ಈಗ ಸೌಗಂಧಿಕಾದೇವಿಯ ಅಂತಃಪುರದಲ್ಲಿರುವೆನಲ್ಲವೆ? ಎಂದು ತಿಳಿದು, ಆ ರಾಜಪುತ್ರಿಯು ಎದುರಾಗಿಬಂದಂತೆ ಕಂಡು ಆಲಿಂಗನವಂಗೈಯಬೇಕೆಂದು ಮುಂದಕ್ಕೆ ಮೂರು ಅಡಿಗಳಂನಿಟ್ಟು ನಾಚಿಗೆಗೊಂಡು ಇದೇನು ಇಲ್ಲಿ, ಕಾಂತೆ ಎಲ್ಲಿರುವಳು ಬರಿಯ ಬಯಲಿನೊಳ್ಯಿಾತಿರುವ ಭ್ರಾಂತಿ ಏನೆಂದು ಚಿಂತೆಯಂಗೈದು, ಈಪರಿಯಂ ಕಲವಿಂಕನು ಕಂಡರೆ ತರ ತರದ ಹಾಸ್ಯವಂ ಮಾಡುವನೆಂದು ಹಿಂತಿರಿಗಿ ನೋಡಲಾಗ ಕಲವಿಂಕನು-ಈ ಸುಗಂಧರಾಜೇಂದ್ರನ ಶೃಂಗಾರ ಚೇಷ್ಟೆಯಂತಿಳಿದು ಎದುರಾಗಿ ಬಂದು, ಸ್ವಾಮಿಯೇ-ಸೌಗಂಧಿಕಾದೇವಿಯವರ ಅಂತಃಪುರದಿಂದ ಯಾವಾಗ ಇಲ್ಲಿಗೆ ಬಿಜಯಂಗೈದಿರೆಂದುಕೈಗಳಂಮುಗಿಯಲು, ಅದನ್ನೋಡಿ ರಾಜೇಂದ್ರನು-ಎಲೈ ಕಲವಿಂಕನೇ, ಎದುರಾಗಿ ಯಾ

ರೋ ಒರ್ವನರನಾಥನ ಸ್ವಾರಿಯು ಬರುತಿರುವುದಂ ನಾನು ಮುಂದಕ್ಕೆ ಮೂರಡಿಗಳಂನಿಟ್ಟು ನೋಡಿದರೆ ನೀನು ಎಲ್ಲಿಲ್ಲಿಯೋ ಯಾವುದೋ ಅಂತ್ರಃಪುರವೆಂದು ಅಸಂಗತವಾಗಿ ನುಡಿಯುವೆ, ಎನಲಾಮಾತಂಕೇಳಿ ಕಲವಿಂಕನು-ತಾವು ಅಪ್ಪಣೆಯನ್ನಿತ್ತಮಾತು ನಿಜವಾಗಿಯೇ ಇರುವದು, ಅಹುದಹುದು, ನಾಬಲ್ಲೆನೆಂದು ಅಡ್ಡವಾಗಿ ತಲೆದೂಗಿ ನಸುನಗುತನಡೆಯುತಲಿರಲಾ ಸಮಯದೊಳ್ ಸುಗಂಧರಾಜೇಂದ್ರನು ರಾಜಮಂದಿರದ ಪುರೋಭಾಗದಲ್ಲಿ ಪರಿಪರಿಯಾದ ಬಿರದುವಾದ್ಯಧ್ವನಿಗಳಿಂ, ಚಿನ್ನ ಬೆಳ್ಳಿಯ ಭಲ್ಯಗಳ ಸಾಲುಗಳಿಂ, ಅಲಂಕರಿಸಿದಗಜಾಶ್ವಂಗಳಿಂ, ಅಷ್ಟಮಂಗಳದ್ರವ್ಯಂಗಳಂಪಿಡಿದು ನಡೆಯುವಸುಮಂಗಲಿಯರಿಂ, ನರ್ತನಂಗೈವನರ್ತಕೀಜನಂಗಳಿಂದೊಪ್ಪಿ, ಬೆಳ್ದಿಂಗಳೊಳ್ ವಜ್ರದ ಹಳಕುಗಳಂಹೂವಿನದಳಂಗಳಂತೆ ಕೆತ್ತಿರುವ ಕುಂದಣದ ಅಂದಳದೊಳ್ ಕುಳಿತುಬರುವ ಕಳಿಂಗರಾಯನಂಕಂಡು-ಎಲೈ ಕಲವಿಂಕನೇ, ಈ ರಾಯನು ಎಲ್ಲಿಗೆ ಪೋಗುವನೋ ವಿಚಾರಿಸೆಂದು ನಿಯಮಿಸಲಾಕಲವಿಂಕನು-ಆ ಜನಂಗಳ್ಗೊಳಪೊಕ್ಕು ಆ ರಾಯನ ಸ್ವಾರಿಯುಪರಿಯಂತಿಳಿದುಬಂದು-ಮಹಾರಾಜನೇ, ವಿಜಯವರ್ಮರಾಯನು ಬೆಳಗಾದರೆ ಸ್ವಯಂವರವೆಂದು ತಿಳಿಸಲೋಸುಗ ನಮ್ಮ ಸೇನಾಕಟಕಕ್ಕೆ ಪೋಗುವನೆಂದು ಬಿನ್ನವಿಸಲು; ಆಗಸುಗಂಧರಾಜೇಂದ್ರನುತನ್ನ ಕಟಕವಂಸೇರಬೇಕೆಂದು ತ್ವರೆಯಿಂದ ತೆರಳಿ, ಈಗ ನಮ್ಮ ಈರ್ವರ ಚಂದ್ರಿಕಾವಿಹಾರ ಚನ್ನಾಯಿತೆಂದು ಕಲವಿಂಕನೊಡಗೂಡಿ ನಡೆಯುವ ಜನಂಗಳಿಗೆಲ್ಲ ನಡೆ ಮಡಿಗಳಂ ಹಾಸಿದಂತಿರುವ ಬೆಳ್ದಿಂಗಳನ್ನೋಡೆಂದು ನುಡಿಯುತ ವೇಗದಿಂ ಕಟಕವಂಸೇರಿ, ಕರಗಿರುವ ಚಂದ್ರಕಾಂತಶಿಲೆಗಳ ತಿಳಿನೀರಿನಿಂ ಕರಚರಣಂಗಳಂತೊಳೆದು, ಕನಕ ಪೀಠದೊಳ್ ಕುಳಿತುಕೊಳ್ಳುವಷ್ಟರೊಳ್ ಬಂದ ಕಳಿಂಗರಾಯನಂ ಎದುರುಗೊಂಡು ಮಾನವಂಮಾಡಿ ಕರತಂದು ಬಳಿಕ ಈರ್ವರೂ ಪೀಠಂಗಳೊಳ್ ಕುಳ್ಳಿರಲು, ಆಗ ವಿಜಯವರ್ಮ ಗಜಪತಿಯು ಸುಗಂಧರಾಜ ನರಪತಿಯಂ ಕುರಿತು-ಎಲೈ ರಾಜಾಧಿರಾಜನೇ, ತಾವು ನಾಳೆ ಬೆಳಗಾದ ಐದುಘಳಿಗೆ ವಳಗಾಗಿ ಸ್ವಯಂವರ ಸಭಾಮಂಟಪಕ್ಕೆ ಚಿತ್ತೈಸಬೇಕೆಂದು ನುಡಿದು ತನ್ನ ಪುರೋಹಿತನಾದ ಅಗ್ನಿ

ಶರ್ಮ್ಮದಿಂದ ಚಿನ್ನದಬಟ್ಟಲಲ್ಲಿರುವ ರನ್ನದ ಅಕ್ಷತೆಯಂತೋರಿಸಿ ಆಜ್ಞೆಯಂ ಗೊಂಡು ಅಲ್ಲಿಂದತೆರಳೆ, ಕಾಂಭೋಜ ರಾಜನಂ ಕಂಡು, ಕಾಶ್ಮೀರದೇಶದ ಅರಸಂ ಕರೆದು, ಮಾಳವನೊಡನೆ ಮಾತಾಡಿ, ಮಗಧನೊಂದಿಗವುಂದಲಿಸಿ, ಚೋಳ ಭೂಪಾಲಂಗೆಪೇಳಿ, ಕೇರಳಪತಿಯಕುಶಲಮಂಕೇಳಿ, ದ್ರವಿಡದೇಶದೊಡೆಯನೊಡನೆ ನುಡಿದು, ಇಂತು ರಾಜಕುಮಾರರೆಲ್ಲರಂ ಸ್ವಯಂವರ ಮಹೋತ್ಸವಕ್ಕೆ ಕರೆದು, ಆರಟ್ಟದೇಶದ ಅರಸನಿಂದೊಡಗೂಡಿ ನಿಜ ನಗರಕ್ಕೆ ಬಂದು, ಪಟ್ಟದ ಮಹಿಷಿ ಇರುವ ಪವಳದ ಬಳತೊಟ್ಟಿಗೆ ನೆಟ್ಟನೆ ಪೋಗಿ, ಪುತ್ರಿಯಿರುವ ಚಿತ್ರಶಾಲೆಯಿಂದ ಚಿತ್ರಲೇಖೆಯಂ ಕರೆಸಿ–ಎಲೈ ಮೃಗನೇತ್ರೆಯೆ, ನಾಳೆ ಸೂರ್ಯೋದಯವಾದ ಬಳಿಕ ಕುಮಾರಿಯಾದ ಸೌಗಂಧಿಕಾದೇವಿಗೆ ಮಂಗಳ ಸ್ನಾನಮಂ ಮಾಡಿಸಿ, ದಿವ್ಯದುಕೂಲಮಂ ಉಡಿಸಿ, ಮಣಿಭೂಷಣಂಗಳಂ ಅಳವಡಿಸಿ, ತಡೆಮಾಡದೆ ಕರೆತರುವದೆಂದು ನುಡಿದು, ಪತ್ನಿಯಂ ಕೈಪಿಡಿದು ಪವಳಿಸುವ ಕನ್ನಡಿಯ ಮನೆಗೆ ನಡೆದನು.

ಇತ್ತಲಾ ಸೌಗಂಧರಾಜಭೂಮೀಂದ್ರನು ಕಲವಿಂಕನಂ ಕಂಡು ನಸುನಗುತ ಕನಕಪೀಠದಿಂದೆದ್ದು ಬಿಸಿಬಿಸಿಯಾಗಿ ಆರೋಗಣೆಯಂಗೈದು, ಆಬಳಿಕಕುಸುಮಗಳ ಜಾಲರಿಯ ಮುಸುಕಿನಿಂದ ಹಸನಾಗಿರುವಹಂಸತೂಲಿಕಾತಲ್ಪದೊಳ್ ಪವಡಿಸಿ, ಪಂಚಬಾಣನತಾಪದಿಂ ಹೊರಳುತ್ತ, ಬೆಳಗಾಗುವುದಂ ಬ್ರಹ್ಮಕಲ್ಪವಾಗಿತಿಳಿದು, ಘಳಿಗೆಯುಯುಗವಾಗಿಕಳೆಯಲಾರದೆ ಕಳವಳಿಸಿ, ನಡನಡುವೆ ಬೆಚ್ಚುವನೋ ಎಚ್ಚರವೋ ಕನಸೋ ಮನಸಿನಭ್ರಮೆಯಿರುವ ಪರಿಯೋ ಎಂದು ತಿಳಿಯದಂತೆ ನಿಮಿಷಕ್ಕೆ ಒಂದುಸಾರಿ ಯಾರೆಂದು ಕೇಳುತ, ಕ್ಷಣದೊಳಗೆ ಘಳಿಗೆಯುಷ್ಟಾಯಿತೆಂದು ಕೇಳುತ, ಒಂದೊಂದುಸಾರಿ ಯಾರನೋ ಅಪ್ಪಿಕೊಂಡಂತೆ ಮಾಡಿ, ಆ ಬಳಿಕ ಅಂಬುಗಳ ಸಾಧನೆಯು ಆರುತಿಂಗಳಿಂದ ಇಲ್ಲವೆಂದು ಮರೆಮಾಚಿನುಡಿಯುತ, ಕೈಗಳಂ ಮುಷ್ಟಿಯಾಗಿ ಪಿಡಿದು ಅಷ್ಟರೊಳ್ ತಿಳಿದು ಕಠಾರಿಯಂ ಪಿಡಿದು ಕಾಳಗಕ್ಕೆ ಬರುವರೇ ಯಿಲ್ಲವೆಂದು ಪೇಳುತ, ಯಾರನೋಮುದ್ದಿಡುವನಂತೆ ಮಾತ್ದಾಡಿ, ಆಬಳಿಕ ಈ ವಟಪತ್ರಶಾಯಿ ಚಿತ್ರಪಟವಂ ಯಾರು ಬರದರೋ ಎಂದು ಮಾತಂ ತಿರಿಗಿಸುತ, ಸುಮ್ಮನೆ ಮೈಯ್ಯಲ್ಲಬೆಮರೇರಿ ಬ್ಯಾ

ತಿಗೆಯು ಕಳೆಬಂತು ಬೇಸಣಿಗೆಯಿಂದ ಬ್ಯಾಗ ಬೇಸರೀ ಎನ್ನುತ, ಈಪರಿಯಿಂದ ಪವಡಿಸಿರಲು, ಚಂದ್ರನು ತಾನು ಗಗನದೊಳ್ ತಪವಂಗೈದರೂ ಸೌಗಂಧಿಕಾದೇವಿಯ ಮೊಗದ ಕಳೆಯು ಸನ್ನಿಗೆ ಇಲ್ಲವಾದುದೆಂದು ವ್ಯಸನದಿಂದ ಇದ್ದ ಕಾಂತಿಯಂ ಬಿಟ್ಟನೋ ಎಂಬಂತೆಯು, ವಿರಹಿಣೀ ಜನಂಗಳನಿಟ್ಟುಸುರಗಳ ಕಳೆತಟ್ಟ ತೇಜಸ್ಸಂ ಬಿಟ್ಟನೋ ಎಂಬಂತೆಯು, ಚಕ್ರವಾಕಪಕ್ಷಿಗಳ ಶಾಪದಿಂದ ಕಂಗಟ್ಟು ಕಳೆಗುಂದಿದವನೋ ಎಂಬಂತಯು, ಸುಗಂಧರಾಜಚಂದ್ರನಕೀರ್ತಿಯು ಬೆಳಕು ಲೋಕಂಗಳೊಳ್ ತುಂಬಿ ತುಳುಕುವಾಗ ತನ್ನ ಬೆಳ್ದಿಂಗಳಂ ನೋಡುವರ್ಯಾರೆಂದು ವಿರಕ್ತನಾದನೋ ಎಂಬಂತೆಯು, ಮೆಲ್ಲಮೆಲ್ಲನೆ ಕಾಂತಿಯಿಂದ ಕಡಮೆಯಾಗಿ ಮಿಂಚುತೋರದ ಬಿಳಿಯಬಂಣವಂ ತಾಳಿ ನಿರಾಕಾಂತೆಯ ಮೊಗದೊಳಟ್ಟು ಮಲಿನವಾಗಿರುವ ಗಂಧದ ಬೊಟ್ಟನಂತೆಯು, ಆಕಾಶಲಕ್ಷ್ಮಿಯು ಸೂರ್ಯನತಾಪವಂತಾಳಲಾರದೆ ರಾತ್ರಿಯೊಳ್ ಬೆಳ್ದಿಂಗಳೆನ್ನುವ ದಧ್ಯನ್ನವಂ ಭುಂಜಿಸಿ ಬಿಟ್ಟಿರುವ ಬೆಳ್ಳಿಯ ಹರಿವಾಣವೋ ಎಂಬಂತೆಯು, ಪಶ್ಚಿಮದಿಶೆಯೆಂಬ ಸತಿಯು ಮದ್ಯವಂ ಕುಡಿದು ಮಡಗಿರುವ ಬಿಳಿಯ ಗಾಜಿನ ಬಟ್ಟಲೋ ಎಂಬಂತೆಯು, ಚಕೋರಂಗಳಿಗೆ ನೈದಿಲುಗಳಿಗೆ ಕೂಡ ಆಗಬಾರದ ವಿಪತ್ತುಗಳಂ ಸೂಚಿಸಲೋಸುಗ ಎದ್ದಿರುವ ಅಣಬೆಯೋ ಎಂಬಂತೆಯು, ಬಿಳಿಯಬಟ್ಟೆಗಳಿಂದ ಹೊಲಿದಿರುವ ಮನ್ಮಥನ ತೊಡೆಯ ಬಟುವಾದ ಸಿಂಬೋ ಎಂಬಂತೆಯು, ಇಂತು ಪರಿಪರಿಯಾಗಿ ತೋರಿ, ಮಿತ್ರನಾಗಿರುವ ಸೂರ್ಯನ ಪತ್ನಿಯಾದ ಪದ್ಮಿನೀಲತೆಯಂತಿಳಿಯದೆ ಕರಗಳಿಂದ ಮುಟ್ಟಿ, ಅಬಲಕಾಸಹತ್ಯಾಪವಂಗೊಂಡು, ಈ ಪಾಪವಂ ಮಾಡಿ ಇನ್ನು ಇರಬಾರದೆಂದು ಭೃಗುಪತನವಂ ಮಾಡುವನೋ ಎಂಬಂತೆಯು, ಇಂತಲ್ಲದೆ ಚಕ್ರವಾಕಜಾತಿಯ ಸತಿಪತಿಗಳಂ ಅಗಲಿಸಿ ವಿಯೋಗಿನಿಯರಾದ ಕಾಂತೆಯರಂ ಕಾಡಿಸಿದ ದುಷ್ಕಾರ್ಯವಂ ಕಂಡು ಕಲ್ಲುಗಳು ಕೂಡ ಕರಗಿದವು ಇಂತಿರ್ಪ ಪಾಪವಂ ನಾನು ಯಂತು ಪೋಗಲಾಡಿಸಿಕೊಂಬೆನೆಂದು ಚಿಂತೆಯಂಗೈದು ಕೊನೆಗಾಣದೆ ಸಮುದ್ರದೊಳ್ ಬಿದ್ದನೆಂಬಂತೆಯು, ಚರಮಗಿರಿಯ ಶಿಖರದಿಂದ ಮರೆಯಾಗಲು ಆಗಪತಿವ್ರತೆಯರಾದವರು ಪತಿಯಂ ಬಿಟ್ಟು ನಿಮಿಷನಿಲ್ಲಲಾರರೆಂದು ತೋರಿಸುವಂತೆ

ತಾರೆಗಳೆಲ್ಲ ತಮ್ಮಲ್ಲಿ ತಾವೇ ಕರಗಿ ಮಾಯವಾದಂತೆಯೂ, ಮತ್ತೆ ಸೂರ್ಯನ ರಥವಂ ನಡಸುವ ಅರುಣನೆಂಬ ಹೆಳವನು ಸಂಭ್ರಮಂ ಪುಟ್ಟಿಪನು ಆದ್ದರಿಂದ ನಮ್ಮ ಪತಿಯು ಬರುವತನಕ ಭೂಲೋಕದೊಳಿರ್ದ ಕಾಲವಂ ಕಳೆಯುವಾ ಎಂದು ಯಾರಿಗೂ ತಿಳಿಯದಂತೆ ದೀಪಂಗಳೊಳ್ ಅಡಗಿದವೋ, ಎಂಬಂತಾಗಲು ಸಂಭೋಗಶೃಂಗಾರಂಗಳಂ ನೋಡಿ ನಗುತ್ತಿರ್ಪವೋ ಎಂಬಂತೆ ಬೆಳಗುತ್ತಿರ್ದ ಜಿಡ್ಡಂಗಳೆಲ್ಲ ಉದಯಿಸುವ ಸೂರ್ಯನ ಭಯದಿಂದ ಚದರಿ ಅಲ್ಲಲ್ಲಿರುವ ದೀಪಂಗಳೊಳ್ ಬೆರಸುವುವೋ ಎಂಬಂತೆ, ಮನೆಮನೆಯ ದೀಪಂಗಳೆಲ್ಲ ಬಿಳ್ಪೇರಿತೋರುತ್ತಿರುವ ಸಮಯದೊಳ್ ಅಗಲಿರ್ಪೋಗಿರ್ದ ಕೋಕಪಕ್ಷಿಗಳಿಗೂ ತಮಗೂ ಏಕಸಾಮಸಕ್ಷತ್ರದ ಅಭಿಮಾನದಿಂದ ರಾತ್ರಿ ಕಳೆಯುವ ಸಮಯವಾಯಿತೆಂದು ಒಂದಕ್ಷರದ ಸಂಕೇತದಿಂದ ಕರೆಯುವವೋ ಎಂಬಂತೆ, ಬೇಕಾಗಿ ಮುಸಿಸುಗೊಂಡಿರುವ ಮುಗ್ಧೆಯರಿಗೆ ಬೆಳಗಾಯಿತು ಕೆಲಸಕೆಡುವುದು ಬ್ಯಾಗ ರತಿಗಳಂ ಮಾಡಿರಿ ಕೋಪವಂ ಬಿಡಿರೀ ಎಂದು ಒಂದುವರ್ಣದಿಂ ಸಂಕೇತವಂ ಮಾಡುವವೋ ಎಂಬಂತೆ, ಇವಲ್ಲದೆ ಮನೆಗಳಂ ಬಿಟ್ಟು ಪೋರಮಟ್ಟು ಯಲ್ಲಿಯೋ ಮನಸ್ಸಿಗೆ ಬಂದ ವಲ್ಲಭರೊಡಗೂಡಿ ಇರುಳೆಂಬುವದಿಲ್ಲ ಒಂದು ಘಳಿಗೆಯಾಗಿ ತೋರಿ ಮಾರನವಿಹಾರವಂ ಮಾಡುವ ಜಾರಿಣಿಯರಾದ ನಾರಿಯರಿಗೆ ಉದಯಕಾಲವಾಯಿತು ನಿಮ್ಮ ಕೋಲಾಹಲಂಗಳು ಸಾಕು ಪಳರೆಂದು ಎಚ್ಚರಿಸುವುದಕ್ಕೆ ಸನ್ನೆಯಂ ಮಾಡುವವೋ ಎಂಬಂತೆ, ಕೋಳಿಗಳೆಲ್ಲ ಕೋ ಎಂದು ಕೂಗಲಾಗ ಜಾರಿಣಿಯರು ಉಪ್ಪರಿಗೆಗಳೊಳ್ ರತಿಗಳಂ ಮಾಡುವ ದಂಪತಿಗಳ ಕಂಠಸ್ವರಂಗಳಂ ಕೇಳಿ ಅದರಂತೆ ತಾವು ನುಡಿಯುತ್ತ ಹಾಸ್ಯವಂ ಮಾಡುವವೋ ಎಂಬಂತೆ, ರೋವೆಗಳಗೂಡುಗಳಲ್ಲಿರ್ದ ಪಕ್ಷಿಜಾತಿಗಳ ಅವ್ಯಕ್ತಮಧುರಂಗಳಾದ ಧ್ವನಿಗಳಂ ಇಂತಲ್ಲದೆ ಪಟ್ಟಣದಬಾಗಿಲುಗಳಂ ತೆಗೆಯುವದಕ್ಕೆ ಸೂಚಕವಾದ ವಾಲಗದ ಭೂಪಾಳಾದಿ ರಾಗಂಗಳಂ ಮತ್ತೂ ಕೊತ್ತಳಂಗಳಮೇಲೆ ಹಾರಿಸುವ ಫಿರಂಗಿಗಳ ಶಬ್ದಂಗಳಂ, ಐವತ್ತಾರುದೇಶದ ಅರಸುಗಳ ಸೇನೆಗಳೊಳ್ ಮೊಳಗಿಸುವದಕ್ಕೆ ಮೊದಲಾದ ಬಿರುದು ವಾದ್ಯಧ್ವನಿಗಳಂ ಕೇಳಿ ಬೆಚ್ಚು ಬಿದ್ದು ಜಾಲಂದರದ ಗವಾ-

ಕ್ಷಂಗಳಿಂ ಬೀದಿಗಳನೋಡುತ್ತ ಬ್ಯಾಗಬ್ಯಾಗನೆ ಎದ್ದು ನಿದ್ದೆಗೆಟ್ಟು ಆ ಗರೆಪ್ಪಿಗಳವುಚ್ಚಿರುವ ಕಾಂತರ ಮೊಗವಂ ಸುವ್ವಾದ್ದಿ ಸಪ್ಪುವಾಡದೆ ಸಡಲಿರುವ ಶಿರೆಗಳಂ ದಡಬಡನಾಗಿ ಸುತ್ತಿ ಮೇಲುವುಚ್ಚುಗಳಿಂದ ಇ ಳಿದು ಬೀದಿಯೊಳ್ ನಡೆದು ಬರುತ ಎತ್ತೆತ್ತಲು ಎರಡು ರಂಗಿನ ಸಕಲಾ ತಿಯಂತೆ ತೋರುವ ಮೂಡಲುಕೆಂಪು ಗಳಕಿಬಿದೊಡಗೂಡಿದ ಆರೆಗತ್ತ ಲೆಯಂ ನೋಡಿ ನಡುನಡುವೆ ಭಯಗೊಂಡು ಚದರಿರುವ ತಿಲಕಂಗಳಿಂದ, ಅಳ್ಳಿಕೊಂಡಿರುವ ಕಣ್ಣುಕಪ್ಪುಗಳಿಂದ, ತುಟಿಗಳೊಳ್ ಕರೆಕಟ್ಟಿ ಕ ಪೋಲಂಗಳಂ ಉಬ್ಬಿಸುವಂತೆ ತುಂಬಿರುವ ಕಪ್ಪುರವೀಳ್ಯದಿಂದ, ಪವಳಂಗ ಳಂತಿರುವ ಪಲ್ಲರಸೆಯಿಂದ, ಅರೆನಿದ್ದೆಯಿಂದ ಕಿರುಗೆಂಪುವೋರಿ ಬಿಗಿಯುತ ಲಿರುವ ನಾರೆಗಂಣುಗಳ ಯುವೆಗಳಿಂದ, ತುರುಬಿನಿಂದುದುರುವ ಮಲ್ಲಿಗೆಸ ರಂಗಳಿಂದ, ಅಲ್ಲಲ್ಲಿ ನಸುದೋರುವ ನಖದಂತಕ್ಷತಂಗಳಿಂದ,ಕೊರಳೊ ಳ್ ಶಿಕ್ಕುಬಿದ್ದಿರುವ ಮುತ್ತಿನಸರಂಗಳಿಂದ, ಒಪ್ಪಿ ಕುಚಜಘನಭಾರದಿಂ ಬ ಳುಕಿ ತಡತಡದು ನಡೆಯುತ್ತ ಅಲಸಿಗೆಯಿಂದ ನಿಟ್ಟುಸುರಂಬಿಡುತ ನೀಳೆ ವಾದನೋಟದಿಂ ಕೆಲಬಲದೊಳ್ ನೋಡಿ ನೆರಳುಗಳಂ ಕಂಡು ಬೆದರು ತ್ತ ಮುಖವಾಸನೆಗೆ ಬರುವ ತುಂಬಿಗಳಂ ಶರಗಿನಿಂ ಬೀಶಿ ಹಾರಿಸುತ್ತ, ನು ಣ್ಪಾದ ತುರುಬುಗಳಿಂ ಜಾರುವ ಮೇಲುಮುಸುಕಂಗಳಂ ಘಾರಿಘಾರಿಗು ಸವರಿಸುತ್ತ, ರಾತ್ರಿಕಾಂತೆಯೆಂಬಂದು ಬಟುರೂಪುಗೊಂಡಂತೆ ಕಳ್ಳದಾರಿ ಯೊಳ್ ಬರುತ್ತಿರಲು, ಆಗ ತಂಗಾಳಿಯು ಇಂತಿರುವಜಾರಿಣಿಯರ ಸು ಕುಮಾರ ಶರೀರಂಗಳೊಳ್ ಪೂಶಿರುವ ಕಸ್ತುರಿ ಕಪ್ಪುರಗಂಧಗಳ ವಾ ಸನೆಯಿಂಕೂಡಿ ಘಮಘಮಿಸುತ ಮೆಲ್ಲಮೆಲ್ಲನೆ ಈ ಬೂಲೋಕದೊ ಳ್ ಸ್ತ್ರೀಪುರುಷರ ರತಿಚಮತ್ಕಾರಂಗಳ ಸಮಾಚಾರವಂ ತರಿಸುವ ಮ ನ್ಮಥಮಹೀಪಾಲನ ಗೂಢಚಾರನಂತೆ ಬಂದು ಮುತ್ತಂಗಳ ಉಬ್ಬುಚ ಪ್ಪರಂಗಳಿಂದೊಪ್ಪಿರುವ ಉಪ್ಪರಿಗೆಗಳ ಗವಾಕ್ಷಂಗಳೊಳ್ ದೂರಿ ಅಲ್ಲಿ ಉದುರುವ ಮುತ್ತಿನಸರಂಗಳಿಂ, ಚಮರುವ ಬೊಟ್ಟನಿಂ, ಉದುರುವ ಮಲ್ಲಿಗೆಸರಂಗಳಿಂ, ಬೆದರಿದಂತೆ ಲಜ್ಜೆಯಿಂದೊಪ್ಪಿದ ವಾರೆನೋಟಂಗಳಿಂ, ಚಲಿಸುವ ಕಂಕಣಂಗಳಿಂ, ಫಲಿಸುವ ಮನೋರಥಂಗಳಿಂ ಕೂಡಿ ಉಪರ

ತಿಗಳಂ ಮಾಡಿ ಬಳಲಿ ಬಳುಕಿ ಸೊಕ್ಕಿ ಸೊರಗಿ, ಮೊಗಮೆಲ್ಲ ತುಂಬಿರುವ ಬೆಂಗಸೆಗಣ್ಣುಗಳಂ ಮುಚ್ಚಿ ಪತಿಗಳ ವಕ್ಷಸ್ಥಳಂಗಳಲ್ಲಿ ಗಲ್ಲವನ್ನಿಟ್ಟು ಅಲ್ಲಿಯೆ ಮಲಗಿ ನಿದ್ರೆಯಂಗೈವ ನಾರಿಯರ ಮುದ್ದುಮೊಗಂಗಳ ಗದ್ದಂಬಿನೊಳ್ ತಿದ್ದಿರುವ ಕಸ್ತೂರಿಯ ಮಕರಿಕಾ ಪತ್ರಲತೆಗಳಿಗೆ ಸಣ್ಣಮೊಗ್ಗೆಗಳಂತಿರುವ ಸಸುಬೆವರ ತುಂತುರುಗಳಮೇಲೆ ಬಿದ್ದು ಬದ್ದಾಡಿ ಅವರ ಆಯಾಸಪರಿಹಾರವಂಗೈದು, ಅಲ್ಲಿಂದ ಚಂದ್ರಶಾಲೆಗಳ ಲೋವೆಗಳೊಳ್ ಮರಳಿ ಮರಳಿ ಸುರತಂಗಳಂ ಮಾಡಿ ಅಲಸಿ ಪಾಯಿಗೊಂಡು ನಿದ್ರೆಯೊಳಿರ್ದ ಕಣ್ಣುಗಳಂ ತೆರೆಯಲಾರದೆ ಯಿರುವ ಪಾರಾವತಂಗಳಿಗೆ ಪ್ರಜ್ಞೆಯನ್ನುಂಟುಮಾಡಿ, ಕಚ್ಚಿಕೊಂಡಿರುವ ಚಿಗರುಗಳಂ ಬಿಚ್ಚಿ, ಮೊಗ್ಗೆಗಳಂ ಅರಳಿಸಿ, ನೈದಿಲುಗಳಂ ಮುಚ್ಚಿ, ಕಮಲಂಗಳಂ ಬಿಚ್ಚಿ ಬೀಳುವಂತೆ ಮಾಡಿ, ಹೆಚ್ಚಾಗಿ ಮಕರಂದಮಂ ಕುಡಿದು ಹುಚ್ಚಾಗಿ ಬಿದ್ದಿರುವ ತುಂಬಿಗಳನ್ನೆಚ್ಚರಗೊಳಿಸಿ, ಚಕ್ರವಾಕಂಗಳಂ ಎಬ್ಬಿಸಿ, ಚಕೋರಗಳ ಬಾಯಿಗೆ ಮುದ್ರೆಯಂ ಮಾಡಿ, ಎಳೆಬಾಳೆಗಳ ಸುಳಿಗಳಂಬಿಡಿಸಿ, ಅಲ್ಲಿರುವ ಪಚ್ಚೆಕಪ್ಪುರದ ಧೂಳಿಗಳೊಳ್ ಹೊರಳಾಡಿ, ನದಿಗಳ ತೆರೆಗಳಂ ಚೆಲ್ಲಿ, ವಾರನಾರಿಯರ ಕುಚಪರ್ವತಂಗಳಿಗೆ ಸನ್ನೆಬಿದ್ದು ಅಲ್ಲಿರುವ ಗಂಧವಡಿಗಳಂಗೊಯ್ದಾಡಿ, ಮದವೇರಿ ಬಿಡಿಸಿಕೊಂಡಿರುವ ಮನ್ಮಥನ ಪಟ್ಟದಾನೆಯೇ ಬಂದು ಧಾಳಿಯಂಗೈವಂತೆ ಕೇಳಿಯಂಮಾಡುತ, ಬೆಳಗಾಗುವಸಮಯವಾಯಿತು ಬೇಗನೆ ಏಳರೆಂದು ಭೂಪಾಲರಿಗೆಲ್ಲ ಪೇಳುವಂತೆ ಬೀಸುತ್ತಿರಲಾಸುಪ್ರಭಾತಸಮಯದೊಳ್ ಸ್ವಯಂವರಾರ್ಥವಾಗಿ ಬಂದಿರುವ ನಾನಾದೇಶದರಸುಗಳು ಮೆಲ್ಲ ಮೆಲ್ಲನೆ ಎದ್ದು ಗೋಬ್ರಾಹ್ಮಣದರ್ಶನವಂಗೈದು ಫಲಮೊದಲಾದ ಶುಭವಸ್ತುಗಳಂ ನೋಡುತ ತಮ್ಮ ತಮ್ಮ ಕಾರ್ಯಂಗಳೊಳ್ ಇರುತ್ತಿದ್ದರು.

ಅತ್ತಲಾ ಸುಗಂಧರಾಜೇಂದ್ರನು ಮನಸಿನೊಳಿರ್ದ ಕಳಿಂಗರಾಜಕನ್ಯೆಯಂ ಕನಸಿನೊಳ್ ಕಂಡು ಅವಳಂ ನೋಡುವನೋ ಎಂಬಂತ ಕಣ್ಣುಗಳಂ ಮುಚ್ಚಿ, ಆ ಚಿತ್ತರಿಯಂ ಮುದ್ದಿಸುವನೋ ಎಂಬಂತೆ ತುಟಿಗಳಂ ಶೇರಿಸಿ, ಮದನಬಾಣಂಗಳ ಪೆಟ್ಟುಗಳಾದ ಮಣಿದಿರುವನೋ ಎಂಬಂತೆ

ವೇಗವೇಗದಿಂ ಉಚ್ಛ್ವಾಸಗಳಂ ಬಿಡುತ, ವಿರಹತಾಪದಿಂ ಮೂರ್ಛೆಯಂಗೊಂಡಿರುವಸಂತೆ ನಿದ್ರೆಯಂ ಮಾಡುವಾಗ ತುಂಬೆಗಳ ಗಾನದಿಂ, ಪಾರಾವತಂಗಳ ಕುಹೂಕಾರಂಗಳಿಂ, ಪಂಜರಂಗಳಲ್ಲಿರುವ ಗಿಣಿಗಳ ಮನೋರಂಜನಂಗಳಾದ ಮಾತುಗಳ ಕಲಕಲದಿಂ ವಡಗೂಡಿದ ಶಂಖ ಕಾಹಳೀ ಮುರಜ ಮೊದಲಾದವಾದ್ಯಗಳು ಮೊಳಗುವದರಿಂದೆಚ್ಚರಂಗೊಂಡು, ವಂದಿಮಾಗಧರು ರಾಜಾಧಿರಾಜ; ಆಶ್ರಿತಕಲ್ಪಭೂಜ; ಅವಧರಿಸು, ಮಾರ್ತಾಂಡಮಂಡಲವು ಪೂರ್ವದಿಕ್ಕೆಂಬ ಕಾಂತೆಗೆ ಕುರುವಿಂದಮಣಿಗಳ ಕರ್ಣಕುಂಡಲದಂತೆ ತೋರುತ್ತ ಬರುವದು ಪರಾಕೆಂದು ಬಿನ್ನವಿಸುವ ಬಿರುದುಪದ್ಯಗಳಂ ಕೇಳಿ ಬೆಳಗಾಗುವದರಿಂದ ಅರಳುವ ಕಮಲಂಗಳೋಯೆಂಬಂತಿರುವ ಕಣ್ಣುಗಳಂ ಮೆಲ್ಲ ಮೆಲ್ಲನೆ ತೆರೆದು ಧ್ವಜಕಲಶಾದಿರೇಖೆಗಳ ದೊಪ್ಪಿದ ಕರಂಗಳಂ ನೋಡಿ, ಕನ್ನಡಿಯು ಪಟದೊಳ್ ಬರದಿರುವ ಕಾಮೇಶ್ವರಿಗೆ ಕೈಮುಗಿದು, ಸುಪ್ರಭಾತ ಶ್ಲೋಕಂಗಳಂ ಪೇಳುವವಿಪ್ರಯುಗ್ಮವನ್ನು ನಮಸ್ಕರಿಶಿ, ಗೋಪ್ರದಕ್ಷಿಣೆಯಂ ಮಾಡಿ, ಮತ್ತು ಫಲಪುಷ್ಪಾದಿ ಶುಭವಸ್ತುಗಳಂ ನೋಡಿ, ಮೆಲ್ಲನೆ ಬಂದು ಪನ್ನೀರಿನಿಂದ ಮುಖಮಜ್ಜನವಂಗೈದು, ಆಯಾಯದೇಶದ ಅರಸುಗಳ ಸಮಾಚಾರಂಗಳಂ ಚಾರದರ್ಪಣನಿಂದ ಕೇಳುತ್ತ, ಪರಿಮಳಜಲದಿಂದ ಜಳಕವಂ ಮಾಡಿ, ಸರಿಗೆ ಪಟ್ಟೆ ಮಡಿಯನ್ನುಟ್ಟು, ಮುಖದೊಳ್ ಪುಂಡ್ರವನ್ನಿಟ್ಟು, ಸೂರ್ಯನಿಗೆ ಅರ್ಘ್ಯವಂ ಕೊಟ್ಟು, ನಿತ್ಯದಾನವಂ ಮಾಡಿ, ಕುಲದೇವಿಯಂ ಪೂಜಿಶಿ, ಹಾವಿಗೆಯಂ ಮೆಟ್ಟಿ ಭೋಜನಶಾಲೆಯನ್ನೈದಿ, ವೀರಸೇನ ಮೊದಲಾದ ರಾಜಬಂಧು ಸಮಾಜದೊಡನೆ ಭೋಜನಂಗೈದು, ತಾಂಬೂಲವಂ ಸವಿಯುತ ಸೊಗಸಿನಿಂ ಹೊರ ಹಜಾರಕ್ಕೆ ಬಂದು ಒಡ್ಡೋಲಗಂಗೊಂಡಿರಲು; ಆಗ ಕಳಿಂಗರಾಜಮಂತ್ರಿಯು ಶಿಂಗರಿಸಿದ ಆನೆಗಳ ಮೇಲೆ ಕನಕಕಲಶಂಗಳನ್ನಿರಿಶಿ, ಕೆಲವು ಮಣಿಭೂಷಣಂಗಳಂ ಚಿತ್ರವಸ್ತ್ರಂಗಳಂ ಕಾಣಿಕೆಗೊಂಡು, ಆನೆಗಳಸೇನೆಗಳಂದೊಡಗೂಡಿ ಬಂದು ಒಡ್ಡೋಲಗಂಗೊಂಡಿರುವ ಸುಗಂಧರಾಜೇಂದ್ರನ ಚರಣಂಗಳಗೆರಗಿ ಒಪ್ಪಿಶಿ, ತನ್ನ ಮಣಿಕಿರೀಟ ನೆಲಸೋಂಕುವಂತೆ ಪ್ರಣಾಮವಂ ಮಾಡಿ, ಆ ರಾಯನ ವಚನದಿಂದ ಉಚಿತಪೀಠದೊಳ್ ಕುಳಿತು ನಿಮಿಷ ಸುಮ್ಮನಿರ್ದು, ಎ

ದ್ದ ಕೈಗಳಂ ಮುಗಿದುಕೊಂಡು ವಿನಯದಿಂದ ಮಹಾರಾಜೇಂದ್ರನೇ, ಸ್ವಾಮಿಯವರ ಸನ್ನಿಧಿಗೆ ಪೋಗಿ ಸ್ವಯಂವರ ಸಭಾಮಂಟಪಕ್ಕೆ ಬಿಜಯಂಗೈಯ್ಯಬೇಕೆಂದು ಬಿನ್ನವಿಸಿ ಬಾ ಎನುತ ನಮ್ಮ ಗಜಪತಿಗಳು ನಿರೂಪಿಸಿ ನನ್ನಂ ಕಳುಹಿರುವರು, ಆದ್ದರಿಂ ಚಂದ್ರನಂ ನೋಡಬೇಕೆಂದು ಬಯಸುವ ಚಕೋರಂಗಳ ಗುಂಪುಗಳಂತೆ ಸ್ವಾಮಿಯವರ ದರ್ಶನವಂಗೈಯಬೇಕೆಂಬ ಕಳಿಂಗನಗರದ ಜನಂಗಳ ನೇತ್ರಂಗಳು ಸಫಲಂಗಳಾಗುವಂತೆ ದಯೆಮಾಡಿ ಪಟ್ಟಣದ ಅಲಂಕಾರವಂ ಪರಾಂಬರಿಸಿ, ಕಾದಿರುವ ರಾಜರುಗಳಂ ಕಟಾಕ್ಷಿಸಿ, ವಿದ್ಯಾಸಾಗರ ಮೊದಲಾದ ವಿಪ್ರರುಗಳಂ ಕಂಡು ಪೂಜಿಸಿ, ಮರಳಿ ಕಟಕಕ್ಕೆ ಬರುವಂತೆ ಚಿತ್ತದೊಳ್ ತರಬಹುದೆಂದು ಬಿನ್ನವಿಸಿ, ಇಂತಲ್ಲದೆ ನಮ್ಮ ಕಳಿಂಗವಲ್ಲಭನು ಉಲ್ಲಾಸದಿಂದ ರತ್ನಾಕರನಿಗೆ ಬಂದು ರತ್ನವನ್ನಿತ್ತಂತೆ, ಅಮೃತಮಯನಾದ ಚಂದ್ರನಿಗೆ ಹಾಲನ್ನವನ್ನಿಕ್ಕಿದಂತೆ, ತಮಗೆ ಆರೋಹಣಕ್ಕೆ ಯೋಗ್ಯವಾದ ಒಂದು ತೇಜಿಯಂ ತಮ್ಮ ಪಾದಾರವಿಂದ ಸನ್ನಿಧಿಯೊಳ್ ಒಪ್ಪಿಸುವಂತೆ ನನಿಗೆ ಅಪ್ಪಣೆಯನಿತ್ತು ಕಳುಹಿಸಿರುವನು, ಅದು ಬಾಗಿಲೊಳ್ ಕಾದಿರುವುದೆಂದು ಬಿನ್ನವಿಸಲು, ಆ ಮಂತ್ರಿ ಧನಂಜಯನೊಡನೆ ಸುಗಂಧರಾಜನು ಮೇಘಗಂಭೀರವಾದ ಧ್ವನಿಯಿಂದ ಆ ಅಶ್ವರತ್ನಮಂ ಎದುರಾಗಿ ತರುವುದೆಂದು ನಿರೂಪಿಸಲು, ಆಗ ಧನಂಜಯನಿಂದ ತರಿಸಲ್ಪಟ್ಟ ಆ ತೇಜಿಯು ಕೆಲಬಲದೊಳ್ ಕನಕರಜ್ಜುಗಳ ಕಡಿವಾಣಂಗಳಂ ಪಿಡಿದು ಬಲಿಷ್ಠರಾದ ಭಟರು ಬಿಗಿಯಾಗಿ ಹಿಂತಿರಿಗಿಸುವ ಹಿಡಿತವಂ ಎಣಿಸದೇ, ಮತ್ತು ಬೆದರಿದ ಹುಲ್ಲೆಯಂತೆ ಹಾರ್ಯರಿ ಕುಣಿಯುತ, ಬೆನ್ನುತಟ್ಟುತ ಪಾರ್ಶ್ವದೊಳ್ ಬರುವ ಅಶ್ವರಕ್ಷಕರು ಪೇಳುವ ತುರುಷ್ಕ ಭಾಷಾ ಭೇದಂಗಳಂ ಕೇಳಿ ಹಾಯಿಗೊಂಡು ಹೇಷಾರವಂಗಳಂ ಮಾಡುತ, ಆಕಾಶವನ್ನಾದರೂ ದಾಟುವೆನೆಂದು ತಲೆಯಂ ಎತ್ತಿ ನೋಡುತ, ಅಲ್ಲಿ ಉಚ್ಚೈಶ್ರವಸ್ಸೆಂಬ ಕುದುರೆ ತನಿಗೆ ಸರಿಯಾಗಿರುವುದೆಂದು ತಿಳಿದು ಲಜ್ಜೆಗೊಂಡಂತೆ ಭೂಮಿಗೆ ತಲೆಯಂ ಬೊಗ್ಗಿಸುತ, ಆ ಕುದುರೆಯನ್ನೇರುವ ದೇವೇಂದ್ರನೇ ಈ ಸುಗಂಧರಾಜೇಂದ್ರನೆಂದು ತಿಳಿದುದೋ ಎಂಬಂತೆ ತಲೆದೂಗುತ, ವೇಗದೊಳ್ ಪ್ರಸಿದ್ಧವಾದ ವಾಯುವಂ ಕೋಪದಿಂ ಕಬಳಿಸುವುದೋ ಎಂಬಂತೆ ಮೂ

ಗಿನಸೊಳ್ಳೆಗಳಿಂದ ಉಸುರುಗಳಂ ಬಿಟ್ಟು, ಫೇಂದುತ್ತ, ಕಡಿವಾಣದ ಸರಪಣಿಗ
ಳಂ ಕಡಿದು ನೂತನವಾಗಿ ಬಂದುಪಾಲ್ಗಡಲಂ ಪುಟ್ಟಿಸುವುದೋ ಎಂಬಂತೆ
ಬಿಳುಪಾದ ನೊರೆಗಳಂ ಉಗುಳುತ್ತ, ನವರತ್ನದಾಭರಣಗಳಕಾಂತಿಯಿಂದ ತಿ
ರಿತ್ರಿರಿಗಿದಾಗೆಲ್ಲ ಒಂದೊಂದುಬಣ್ಣವಾಗಿ ಕಾಣಿಸುತ್ತ, ಸೂರ್ಯನ ಹರಿತಾ
ಶ್ವವು ರಥಕ್ಕೆ ಕಟ್ಟುವದಕ್ಕೆ ಯೋಗ್ಯವಲ್ಲದೆ ಆರೋಹಣಯೋಗ್ಯವ
ಲ್ಲವೆಂದು ನಗುವುದೋ ಎಂಬಂತೆ ಹೀಂಕಾರವಂ ಮಾಡುತ್ತ, ಕಟ್ಟಿರುವ
ಚಾಮರಂಗಳಿಂ, ಚಲಿಸುವ ಚಂದ್ರಹಾರಂಗಳಿಂ, ಗಿಣಿಯತಾಳಿಗಳಿಂ, ಹುಲಿ
ಯುಗುರುಗಳಿಂ ಕೂಡಿದ ಪದಕಗಳ ಸಾಲುಸಾಲಿನ ಸರಂಗಳಿಂದೊಪ್ಪಿ ಉ
ಚ್ಚೈಶ್ರವಸ್ಸಿನ ಅವತಾರವೋ ಎಂಬಂತೆ, ಸೂರ್ಯಾಶ್ವದಪ್ರತಿಬಿಂಬವೋ
ಎಂಬಂತೆ ತೋರಿ, ಭೂಮಿಯಂ ಅದರಿಶಿ ಧೂಳಿಗಳು ಯೇಳುವಂತೆ ಅಡಿಗ
ಳನ್ನಿಡುತ್ತ, ಬೆಳ್ಳಿಯ ಮುರಕವಂ ಮೆರೆಯುತ್ತ, ಚಿತ್ರದೊಳ್ ಬರದಂತೆ, ವಾರೆ
ಕೋರೆಯೆಂಬುವುದು ಶರೀರದೊಳ್ ಯಲ್ಲಿಯೂ ಇಲ್ಲದೆ, ಗರುತ್ಮಂತನಿಂ
ದ ವೇಗದರೀತಿಯಂ ಕಲಿತು ಆತನ ಚಿಹ್ನವಂ ಶಿರದೊಳ್ ಧರಿಶಿ ಇರುವು
ದೋ ಎಂಬಂತೆ ವಿರಾಜಿಸುವ ಸುಮಾಸಗರಿಯ ಸೊಗಸಿನಿಂ ಬಂದು ಸು
ಗಂಧರಾಜೇಂದ್ರನ ಮುಖವಂ ನೋಡಿದಮಾತ್ರದಿಂದಲೇ ಮುಗಿಲು ಗುಡು
ಗಿದಂತೆ ಹೇಷಾರವಂ ಮಾಡಿ ಭೂಮಿಯಂ ಸೋಂಕಿ ಸೋಂಕದಂತೆ ಕು
ಣಿಯುತ್ತ ಬರುತ್ತಿರಲು, ಧನಂಜಯನು-ಎಲೈ ಮಹಾರಾಜನೆ, ಅಶ್ವರತ್ನವು
ಬಂದಿರುವುದೆಂದು ಬಿನ್ನೈಸಲು; ಆ ನುಡಿಯಂ ಕೇಳಿ ಆ ಕುದುರೆಯಂ ದೂ
ರದಿಂ ನೋಡಿ, ರಾಜೇಂದ್ರನು ಸುಮತಿ ವೀರಸೇನರೊಡನೆ ಅನಾದಿಕಾಲ
ದಿಂ ಬಂದ ಸಿಂಹಾಸನದೊಳ್ಕುಳಿತು ಭೂಮಿಯನ್ನಾಳುವ ಕಳಿಂಗವತಿ
ಗೆ ಕಡಮೆಯೇನೆಂದು ನುಡಿದು, ಪೀಠದಿಂದೆದ್ದುಬಂದು ವಜ್ರಕುಂಡಲಂಗ
ಳಂ ಕಿವಿಗಳೊಳ್ ಇಟ್ಟು, ನವರತ್ನದ ಕಿರೀಟವಂ ಶಿರದೊಳ್ ಧರಿಶಿ, ಮಿಂ
ಚಿನಂತೆ ಮಿಂಚುವ ಅಂಗಿಯಂ ತೊಟ್ಟು, ತಾರಾಮಂಡಲವೆಂಬ ಪದಕದಿಂ
ದೊಪ್ಪಿದ ದುಂಡುಮಲ್ಲಿಗೆಯ ಮೊಗ್ಗುಗಳಂತಿರುವ ಆಣಿಮುತ್ತಿನ ಸರಂಗ
ಳಂ ಕಂಠದೊಳ್ ಅಳವಡಿಶಿ, ಕಿವಿಯೊಳ್ ಪಚ್ಚೆಬಾವುಲಿಯನ್ನಿಟ್ಟು, ಕೆಂ
ಪುಗಳ ಬಾಹುಪುರಿಯಂಕಟ್ಟಿ, ಕರ್ನಾಟಯುವರಾಜನೆಂಬ ಅಕ್ಷರಂಗಳಂ ಕೆ

ತ್ತಿರುವ ವಜ್ರದ ಮುದ್ರೆಯುಂಗುರವಂ ಧರಿಸಿ, ದೇಶದೇಶದ ಅರಸುಗಳು ನೋಡಲೆಂದು ಬಿರುದಿನಗಂಡ ಪೆಂಡ್ಯವಂ ಪಾದದೊಳ್ಕಟ್ಟಿ, ಲುಪ್ರಗ್ರಡಿಯನ್ನೋಡುತ ತನ್ನ ಮುಖಕಾಂತಿಯಿಂದ ಚಂದ್ರನಂ ಜಯಿಸುವರವಂ ಬಂತ ಕಳಂಕಕ್ಕೆ ಸರಿಯಾಗಿ ಕಸ್ತೂರಿಯ ತಿಲಕವಂ ಪಣೆಯೊಳ್ತಿದ್ದಿ, ಕಲವಿಂಕನೊಪ್ಪಿಸುವ ಕಪ್ಪುರವೀಳ್ಯವಂ ಸವಿಯುತ್ತ, ಸುಮತಿಯ ಹಸ್ತಲಾಗದಿಂ ತೆರಳಿ ಆ ತುರಂಗದ ಸಮೀಪಕ್ಕೆ ನಡೆತರಲು,-

ಆಗ ಆ ಅಶ್ವರತ್ನವು ಸುಗಂಧರಾಜೇಂದ್ರನ ಮನೋಭಾವವಂತಿಳಿದುದೋ ಎಂಬಂತೆ ಜತೆ ಕೂದಲುಗಳನ್ನು ಕೆದರುಕೊಳ್ಳುತ ಕಿವಿಗಳಂ ನೆಟ್ಟನೆಗೈದು, ಪುಷ್ಯರಾಗದ ಬಣ್ಣದಿಂದೊಪ್ಪುವ ಅರೆನೋಟದಿಂನೋಡಿ ರಾಜೇಂದ್ರನು ಆರೋಹಣಕ್ಕೆ ಬ್ಯಾಗ ಬರಬೇಕೆಂದು ಕರೆಯುವಂತೆ ಬಲಗಾಲಿನಿಂ ಭೂಮಿಯಂ ಕೆರೆಯುತ್ತ, ಭಾರಿ ಭಾರಿಗು ಘುರ್ಘುರಧ್ವನಿಯಂಮಾಡಿ ಫೂತ್ಕಾರವಂ ಗೈಯುತ್ತಿರಲು; ಆ ತೇಜಿಯನ್ನೋಡಿ ಸುಗಂಧರಾಜೇಂದ್ರನು ತನ್ನ ಕರಕಮಲದಿಂ ಮೈ ಸವರುತ್ತ ತಟ್ಟುತಲಿರುವಾಗ ಸುಮತಿಯು ಸಮೀಪಕ್ಕೆ ಬಂದು ಎಲೈ ಮಹೀಪತಿಯೇ, ಈ ಅಶ್ವವಂ ವಿಜಯವರ್ಮರಾಯನು ಸ್ವಾಮಿಯಂ ಪರೀಕ್ಷಿಸಬೇಕೆಂದು ಕಳುಹಿಸಿದಂತೆ ಕಾಣುವದು, ಅವಧಾನದಿಂ ಸ್ವಾರಿಯಂಮಾಡಬೇಕೆಂದು ಏಕಾಂತದೊಳ್ ಬಿನ್ನವಿಸಲು, ಅದಂಕೇಳಿ ಅಶ್ವಹೃದಯದೊಳ್ ಪಾರಂಗತನಾದ ಸುಗಂಧರಾಜೇಂದ್ರನು ಎಲೈ ಸುಮತಿಯೇ, ಕೇಳು ಕಳಿಂಗಪತಿಯು ನಮಿಗೆ ಸಂತೋಷವಂ ಮಾಡಬೇಕೆಂದು ತನ್ನ ಮನೆಯಲ್ಲಿ ರತ್ನದಂತೆ ಮಡಗಿರ್ದ ಈ ಅಶ್ವವಂ ಕಳುಹಿಸಿರುವನು, ಇಂತಲ್ಲದೆ ಸುಳಿಗಳಂ ರೇಖೆಗಳಂ ಅಲಂಕಾರವಂ ನಡಗೆಯಂ ಬಣ್ಣವಂ ಧ್ವನಿಯಂ ನೋಡಿದ್ದರಿಂದಲೇ ಇದರ ಹೃದಯ ಇಂತಿರುವದೆಂದು ತಿಳಿದೆನು, ಮತ್ತೂ ಯಾರ್ಯಾರಿಗೂ ಏರುವುದಕ್ಕೆ ಶಕ್ಯವಿಲ್ಲದೆಯಿದ್ದರೂ ಸದ್ದು ಮಾಡದೆ ನಡೆಯುವಂತೆ ಮಾಡುವೆನು, ನೋಡೆಂದು ನುಡಿದು, ಆ ಅಶ್ವರತ್ನಕ್ಕೆ ನಮಸ್ಕಾರವಂಮಾಡಿ, ರಾಜಹಂಸವನ್ನೇರುವ ಭಾರತೀಪತಿಯಂತೆ ತುರಗಮನ್ನೇರಿ, ತೆರಳಿ ಉದಯಗಿರಿಯಿಂದ ಬರುವ ಚಂದ್ರನಂತೆಸೆವ ತನ್ನನ್ನೋಡಿದ ನಿಮಿಷದೊಳ್ ಎದು

ರಾಗಿರ್ಪ ಸೇನಾಸಮುದ್ರದಲ್ಲಿ ಮುರಜ ಪಣವ ನಿಸ್ಸಾಳ ಪಟಹ ಮೊದಲಾದ ವಾದ್ಯಂಗಳ ಶಬ್ದವು ಕಿವಿಯುವಂತೆ ಖುರ ಪುಟಂಗಳಿಂದ ಧರೆಯುಂತ್ರುಳಿಯುವ ಭೂ ನಭೋಂತರಂಗಳು ತುಂಬುವಂತೆ ಹೇಷಾರವಂಗಳಂಮಾಡುವ ಚಿನ್ನ ಬೆಳ್ಳಿಯ ಜರೀ ಸರಪಣಿಗಳ ಬಲೆಯ ಮುಸುಕುಗಳ ಕಾಂತಿಯಿಂ, ಒಣ್ಣ ಬಣ್ಣದ ಬಟ್ಟೆಗಳ ಹೊಳಪಿನಿಂ, ಗಗನಮಂಡಲದೊಳ್ ಬಂದೀ ಕಡೆ ವಜ್ರಂಗಳನ್ನಿರಚಿವಂತೆ,ಮತ್ತೊಂದುಕಡ ನವಿಲುಗರಿಗಳಂಹಾಸಿದಂತೆ, ಮತ್ತೊಂದು ಪ್ರದೇಶದೊಳ್ ತಗಡುಗಳಂ ಬಡಿದಂತೆ ಮಾಡುವ ಸಾಲು ಮಿಾರಿಹಾರುವ ಮುತ್ತುಗಳನ್ನಿರಚಿದಂತೆ ನೊರೆಗಳಂ ಫೂತ್ಕರಿಸುತ್ತಲಿರುವ ಅಶ್ವಂಗಳನ್ನೇರಿ ಓಡಿಸುವ ಸೇನಾಪತಿಗಳು, ವಾಹಿನೀನಾಥರು, ಚಮೂವಲ್ಲಭರು, ಅನೀಕಿನೀನಾಯಕರು, ಅಕ್ಷೋಹಿಣೀಪತಿಗಳುಕೂಡ ಸುತ್ತುವರಿದು ಬರುವಾಗ ವಂದಿಮಾಗಧರು ಕೈಯೆತ್ತಿ ಇವರು ಮಂತ್ರಿಗಳು, ಅವರು ಸೇನಾಪತಿಗಳು, ಇವರು ದೇಶಾಧಿಕಾರಿಗಳು, ಅವರು ಪಾಳೆಯಗಾರರು ಇವರು ಸಂಸ್ಥಾನಪತಿಗಳು, ಸ್ವಾಮಿಯವರಚರಣಂಗಳಿಗೆ ಪ್ರಣಾಮವಂ ಮಾಡುವರು ಪರಾಂಬರಿಸಬಹುದು ರಾಜಾಧಿರಾಜ ಮಹಾರಾಜ ಪರಾಕೆಂದು ಜೇಜೇರೆ ಬಿನ್ನವಿಸುವ ನುಡಿಗಳಂಕೇಳಿ ಚಂದ್ರಕಿರಣಂಗಳಂತೆ ಪೊಳೆವ ಕಟಾಕ್ಷದಿಂ ನೋಡುತ್ತ, ರಾಜ್ಯಲಕ್ಷ್ಮಿಯು ನೆಲೆಗೊಂಡಿರುವ ಬಿಳಿದಾವರೆಯಂತೆ ಸೇನಾಸಮುದ್ರವಂ ಉಬ್ಬಿಸುವ ಚಂದ್ರಬಿಂಬದಂತೆತೋರಿ ಸುತ್ತಲು ಕಟ್ಟಿರುವ ಆಣಿಮುತ್ತುಗಳ ಕುಚ್ಚುಗಳಿಂದ ಚಿತ್ರವಾದಬಿರುದಿನ ಬಿಳಿಯ ಕೊಡೆಯ ನೆರಳಿನೊಳ್ ಬರುತ, ಎಡ ಬಲದೊಳ್ ಬೀಸುವ ಚಾಮರಂಗಳ ಕಿರು ಗಾಳಿಯಿಂದ ಅದರಿ ಜಾರುವ ಸರಿಗೆವಲ್ಲಿಯ ಶರಗುಗಳನೆತ್ತಿ ಸವರಿಸುವ ನರ್ಮಸಚಿವರಂ ತಿರಿ ತಿರಿಗಿ ನೋಡುತ್ತ ಕಟಕದಿಂತೆರಳಿ ಕಳಿಂಗ ನಗರದ ರಾಜ ಬೀದಿಯೊಳ್ ನಕ್ಷತ್ರ ಬೀದಿಯೊಳ್ ಬರುವ ಚಂದ್ರನಂತೆಬರುತ್ತಿರಲು, ಆಗ ಆ ಪುರದನಾರಿಯರು ಸ್ವಯಂವರೋತ್ಸವಕ್ಕೆ ತಮ್ಮ ತಮ್ಮ ಬಿರುದುಗಳೊಡಗೂಡಿ ದೇಶ ದೇಶದ ಅರಸುಗಳು ಬರುವದಂ ನೋಡಬೇಕೆಂದು ಬ್ಯಾಗ ಬ್ಯಾಗ ಬೆಳಗಾಗುವಸಮಯದಲ್ಲಿಯೇ ಭೋಜನಂಗಳಂಗೈದು ಉಪ್ಪರಿಗೆಗಳಲ್ಲಿ, ಚಂದ್ರಶಾಲೆಗ

ಳಲ್ಲಿ, ಮುಡಿವಾಳದಚಪ್ಪರಂಗಳಲ್ಲಿ, ಬಿಸಲು ಮಚ್ಚುಗಳಲ್ಲಿ, ಲೋವೆಗಳಲ್ಲಿ,ಗವಾಕ್ಷಂಗಳಲ್ಲಿ, ಕೈಸಾಲೆಗಳಲ್ಲಿಯೂ ತಾವು ನಾವು ಎಂದು ಬ್ಯಾಗತುವುಗಳಂಮಾಡಿಕೊಂಡು, ಅಲಂಕಾರಗಳಂಮಾಡಿಕೊಳಲುಜ್ಜುಗಿಸಿ ಕೆಲವರು ಜಡೆಗಳಲ್ಲಿ ಮೊಗ್ಗುಗಳಂ ಪೋಣಿಸುವರು, ಕೆಲವರು ಪಣೆಯೊಳ್ ತಿಲಕವಂ ಕಣ್ಣುಗಳೊಳ್ ಕಾಡಿಗೆಯ ತೊರೆಗಳಂ ತಿದ್ದುವರು, ಕೆಲವರು ಕಪೋಲಂಗಳೊಳ್ ಚಿತ್ರ ಪತ್ರಂಗಳಂ ಬರೆಯುವರು, ಕೆಲವರು ಗಲ್ಲಗಳೊಳ್ ದೃಷ್ಟಿ ಬೊಟ್ಟುಗಳನ್ನಿಡುವರು, ಕೆಲವರು ಶೀರೆಗಳ ನೆರಿಗೆಗಳಂ ಪಿಡಿಯುವರು, ಕೆಲವರು ವಸನೆಗಳನ್ನಳವಡಿಸಿ ಕೊಂಬುವರು, ಕೆಲವರು ನಡನಡುವೆ ಕನ್ನಡಿಗಳೊಳ್ ಬಿಪಗಂ ನೋಡುವರು. ಈ ಪರಿ ನಡೆಯುಂದ ಹೂಡಗಿಯರು ಮೊದಲಾದ ಕಾಂತೆಯರೆಲ್ಲ ಪಡಬಡಲಾಗಿ ಅಲಂಕಾರಗಳಂ ಮಾಡಿಕೊಳ್ಳುತ್ತಿರುವ ನಡು ಸಮಯದೊಳ್ ಕೆಲವರು ನಾಡು ನಾಡಿನ ಅರಸುಗಳ ಬಿರುದುಭೇರಿ ಮೊದಲಾದ ವಾದ್ಯಗಳ ಧಣಂ ಧಣ ಧ್ವನಿಗಳಂ ಕೇಳಿ ಎಲ್ಲಿರ್ದ ಪಡವೆಗಳನಲ್ಲಿಯೆ ಬಿಟ್ಟು ಅಲಂಕಾರಗಳು ಎಷ್ಟಾದರಷ್ಟೆ ಸಾಕೆಂದು ಎದ್ದು ಸಂಭ್ರಮದಿಂ ಪೋಡ್ತ್ಯಾಡುವರು, ಕೆಲವರು ಮೂಗುತಿಯಂ ಕಿವಿಯೊಳ್,ವಾಲೆಯಂತುರುಬಿನೊಳ್,ವಡ್ಯಾಣವಂ ಕೊರಳೊಳ್ ಅಡ್ಡಿಕೆಯಂ ಪಾದದೊಳ್, ಬಾಹುಪುರಿಯಂ ನಡುವಿನೊಳ್, ಕಾಲುಂಗುರವಂ ಕರಾಂಗುಳಿಯೊಳ್ ಇಡುತ ಇಂತು ವಿನಿಮಯದಿಂ ಶಿಂಗರಿಸುವರು, ಕೆಲವರು ಲತಾಂಗಿಯರು ಬಣ್ಣ ಬಣ್ಣದ ಮಡಿ ಶೀರೆಗಳನ್ನುಡುತ ನೆರಿ ಇಡುತಲೇ ಬೆರಗಾಗಿ ಬ್ಯಾಗ ನಡೆಯುವರು, ಕೇವರು ವಾಮಲೋಚನೆಯರು ಓಡಿಬರುವಾಗಬಳಸಿಗಿನ ಗಂಟು ಸಡಲಿ ಪಿಡಿದಿರುವ ನೆರಿಕುಚ್ಚುಗಳ ಮುಡಿಗಳು ಝುಗ್ಗನೆ ಬಿಚ್ಚಿ ಜಾರಿ ಬೀಳುವ ಸರಿಗೆ ಶರಗುಗಳಂಕೂಡ ಸರಿಮಾಡಿಕೊಳ್ಳದೆ ನಗುವರನ್ನೋಡದೆ ನಡೆಯುವರು, ಇಂತು ಪುರನಾರಿಯರು ಸಂತೋಷ ಸಂಭ್ರಮಂಗಳಿಂದ ನಡೆ ತರುವಾಗ ಪಾದ ವಿನ್ಯಾಸಂಗಳಿಂದ ಕಾಲುಂಗುರಂಗಳ ಖಣ ಖಣೀರೆನ್ನುವ ಶಬ್ದದಿಂದೊಡಗೂಡಿ ಓಡಿ ಪೋಗುವರ ಬೆಂಬಿಡದು ಕೈಗಳಿಂದ ಓಡ್ಯಾಡಿಸುವ ಒಡ್ಯಾಣಗಳ ಕಿರುಘಂಟೆಗಳು ಅಲ್ಲಾಡುವಲ್ಲಿ ಖಣಿ ಖಣಿ ಧ್ವನಿಗಳಿಂದೊಪ್ಪಿ

ಹತ್ತಾರು ಅಂತಸ್ತುಗಳ ಮೇಲ್ಮಚ್ಚುಗಳ ಮೆಟ್ಟಿಗೆಗಳಲ್ಲಿ ಅಡಿಗಳನ್ನಿಟ್ಟು ಏರುವಾಗ ಹುಟ್ಟಿದ ಧಡ ಧಡವೆಂಬ ಧ್ವನಿಗಳಿಂದ ಮಣಿಗಳಿಂಮಾಡಿರುವ ಗೋಡೆಗಳಲ್ಲಿ ಮಾರ್ಧ್ವನಿಗಳುಂಟಾಗಲು ಅದಂ ಮುಗಿಲ ಗುಡುಗೆಂದು ಭ್ರಮೆಗೊಂಡು, ತೋವೆಗಳಲ್ಲಿರುವ ನವಿಲುಗಳು ಗರಿಗಳಂಬಿಚ್ಚಿ ಕುಣಿಯಲು ಅದರ ಪಿಂಛಗಳಂನೋಡಿ ಕಾಲ ಮೇಘಂಗಳೆಂದರಿತು ಭ್ರಮಿಸಿ ಚೆದರಿ, ಹಂಸೆಗಳು ಚಂದ್ರಶಾಲೆಗಳ ಗೂಡುಗಳಂಬಿಟ್ಟು ಪೊರಮಟ್ಟು ಕೂಗುತ್ತಿರಲು ಅವುಗಳ ಕ್ರೇಂಕಾರಂಗಳಿಗೆ ಸರಿಯಾದ ಪುರ ತರುಣಿಯರ ಮಾತುಗಳ ಕಲ ಕಲ ಧ್ವನಿಯು ಕರ್ಣಾಮೃತವಾಗಿ ಕೇಳಿಬರುತ್ತಿರುವ ಸಮಯದೊಳ್ ಬೀದಿಯೊಳ್ ಸ್ವಾರಿಬರುವ ರಾಯರುಗಳನ್ನೋರ್ವರೋರ್ವರಾಗಿ ಕೈ ತೋರಿ ಒಬ್ಬರೊಬ್ಬರಿಗೆ ಪೇಳುತ್ತ, ಈ ರಥವನ್ನೇರಿಬರುವವನು ಜಯದ್ರಥರಾಯನ ಕುಮಾರನು, ಅಂದಳದೊಳ್ಕುಳಿತು ಬರುವನು ಅಂಗ ದೇಶದ ಅರಸು ಮಗನು, ಇದೋ ಇಲ್ಲಿ ಕುದುರೆಯಂ ಕುಣಿಸುತ ಕುಲುಕುತ್ತ ಜೋಕೆಯಾಗಿ ಬರುವರು ಕುರುಕುಂತಲದೇಶದ ಅರಸುಗಳ ಕುವರರು, ಕನಕದ ಕಾಂತಿಯಿಂದೊಪ್ಪಿ ಮಿರಿ ಮಿರನೆ ಮಿಂಚುವ ಸ್ವರ್ಣ ಸೊಗಸು ಹೂವುಗಳ ಶಾಲುವಂ ಪೊದ್ದಿರುವನೇ ಕಾಶ್ಮೀರ ರಾಜನು, ಅದೋ ಚಂದ್ರಬಿಂಬದಂತಿರುವ ಮೊಗದೊಳ್ ಕಸ್ತೂರಿತಿಲಕವನ್ನಿಟ್ಟಿರುವನೇ ನೇಪಾಳ ಭೂಪಾಲನು, ತಿದ್ದಿದಂತಿರುವ ಪುರ್ಬುಗಳಿಂ ಶಾರೆಗಣ್ಣುಗಳಿಂ ಅಣಿ ಮುತ್ತುಗಳಿಗೆ ಸರಿಯಾದ ಪಲ್ವರಶೆಯಿಂ ಉಬ್ಬಿಕೊಂಡಿರುವ ತಾವರೇ ಎಸಳನಂತೆ ಚನ್ನಾದ ಕೆನ್ನೆಗಳಿಂದೊಪ್ಪಿ ತುಟಿಗಳ ಅಂಚಂಚಿನೊಳ್ ಕೊಂಚ ಕೊಂಚವಾಗಿ ನಗುತ ಕಾಂಚನ ದುಕೂಲವಂಪೊದ್ದು ಮಿಂಚಿನಂತೆ ಮಿಂಚುತ್ತ ಪಂಚಬಾಣನಂತೆ ಬರುವನೇ ಪಾಂಚಾಲರಾಯನು, ಅವನ ಹಿಂಭಾಗದೊಳ್ ರಂಭಾದಿ ನಾರಿಯರುಕೂಡ ನೋಡಿ ಮೋಹಿಸುವ ರೂಪದಿಂದೊಪ್ಪಿರುವನೇ ಶಿವನ ಪಾದಾಂಭೋಜ ಭಕ್ತನೆನಿಸಿದ ಕಾಂಭೋಜ ದೇಶದರಾಜನು, ಸುತ್ತ ಮುತ್ತಲು ನಿಂತು ಪೊಗಳುವ ವೃತ್ತ ಪದ್ಯಗಳಂ ಕೇಳುತ ಮುತ್ತುಗಳ ಮಲಕು ಝಲ್ಲರಿಯಂ ಪೊದ್ದಿರುವ ಮತ್ತಗಜವಂನೇರಿ ಮೆಲ್ಲನೆ ಬರುತ ಪಾರಿವಾಳದ ಹೂ

ವಿನ ಬಾಣಕ್ಕೆ ಮಿಂಚುಗೊಳಿಸಿದಂತೆ ರಂಗಾದ ಚಂದ್ರಗಾವಿಯ ವಲ್ಲಿಯಂ ಪೊದ್ದು ನೋಡುವರ ಕಣ್ಣುಗಳಂ ಮಲಯಮಾರುತದಂತೆ ತಂಪಿಸುತ ಬರುವವನೇ ಪಾಂಡ್ಯ ಮಧುರಾನಗರದ ಮಹೀಪಾಲ ಪುತ್ರನು. ಇದೋ ಇಲ್ಲಿ ಮಾರು ಮಾರುದ್ದ ಜಡೆಗಳಿಂದೊಪ್ಪಿದ ನಾರಿಯರು ವೈಯ್ಯಾರದಿಂ ಚಾಮರಗಳಂ ಬೀಸುವಾಗ ಅವರ ಕರಕಂಕಣಂಗಳ ಝಣತ್ಕಾರವಂ ಕೇಳಿ ತಿರಿತಿರುಗಿ ನೋಡಿ ನಸುನಗುತ ಹ್ಯಾರಳವಾದ ಸೊಗಸಿಂ ಬರುವವನೇ ಕೇರಳದೇಶದ ಅರಸನು, ಮತ್ತು ಒಬ್ಬೊಬ್ಬನೊಳ್ ಒಂದೊಂದು ಚಂದವೆಂದು ನುಡಿಯುತ ನೋಡುತ್ತಿರುವಾಗ ಮಾರ್ಗಂಗಳಂ ಬಿಡಿರೆಂದು ಕೆಲವರು, ಕೂಗುವರು ಕೆಲವರು, ವೀಳಕ್ಕೆಗಳಂ ಕಟ್ಟಿ ನಿಲ್ಲಿರೀ ಎಂದು ಹೇಳುವರು ಕೆಲವರು, ತಟ್ಟೆಗಳೊಳ್ ಚಿನ್ನ ಬೆಳ್ಳಿ ಹೂವುಗಳಂ ತುಂಬಿರೆಂದು ನುಡಿಯುವರು ಕೆಲವರು, ಪನ್ನೀರುಗಳಂ ಚಲ್ಲಿರೀ ಎನ್ನುವರು ಕೆಲವರು, ಮಣಿಗೋಪುರದ ಸಮೀಪಕ್ಕೆ ಮಹಾರಾಜನು ಬಂದನೆಂದು ಎದುರಾಗಿ ಬರುವ ಭಟರಿಗೆ ಕೈಗಳನ್ನೆತ್ತಿ ತೋರುವರು, ಈ ಪರಿಯಿಂದ ಕೂಗುತ ಓಡ್ಯೋಡಿ ಬರುವ ಕಳಿಂಗರಾಜ ಭಟರ ಕೋಲಾಹಲವನ್ನೋಡಿ ಮೇಲುಪ್ಪರಿಗೆಗಳಲ್ಲಿರುವ ಬಾಲೆಯರೆಲ್ಲ ಈಗ ಬರುವವನು ಯಾವನೋ ಒಬ್ಬ ರಾಜಾಧಿರಾಜನು, ಅವನನ್ನೋಡಬೇಕೆಂದು ನೂರು ಮಡಿಯಾದ ಸಂಭ್ರಮದಿಂದ ಮುಂದೆ ನಿಂತಿರುವರ ಮೇಲೆಲ್ಲ ಒಂದೆಸಿಂತಿರುವರು ಮುಸಿಸಿಗೊಳ್ಳುತ್ತ ಅಟ್ಟಣೆಗಳಲ್ಲಿ ಅಡಿಗಳನ್ನಿಟ್ಟು ನಿಟ್ಟಿಸಿ ಮೊಗಂಗಳಂ ಎತ್ತಿ ನೋಡುವರು ಕೆಲವರ, ಗವಾಕ್ಷಗಳ ಜಾಲಂಧ್ರಗಳೊಳ್ ನೋಡಸಾಲದೆಂದು ಕದಗಳಂ ಅರೆತೆರೆದು ಮರೆಯಾಗಿ ಮೊಗಂಗಳು ನಸುದೋರುವಂತೆ ವಾರನೋಟದಿಂ ನೋಡುವರು ಕೆಲವರು, ಗುಜ್ಜರಿ ಮನಾಬಿಯರು ಉಪ್ಪರಿಗೆಗಳಂ ಉಬ್ಬಿ ಚಪ್ಪರಂಗಳನ್ನೇರುವರು, ಕೆಲವರು ಬೋವೆಗಳಮೇಲೆ ಸಾಹಸದಿಂದ ನಿಲ್ಲುವರು, ಇಂತು ಚಂದ್ರೋದಯ ಸಮಯದೊಳ್ ಸಮುದ್ರದ ತೆರೆಗಳು ಅಲ್ಲಾಡುವುದಕ್ಕೆ ಮೊದಲಾದಂತೆ ಪುರನಾರಿಯರ ಗುಂಪಿನೊಳ್ ಮನೋರಥಂಗಳು ಉಬ್ಬುಬ್ಬಿ ಬಂದು ಆಗ ಅದೊಂದು

ಪರಿಯಾದ ಸಂಭ್ರಮವು ತಲೆದೋರಿರುವ ಸಮಯದಲ್ಲಿ ರಾಜಬೀದಿಯೊಳ್ ಮೊದಲು ಮೊದಲು ಸಾವಿರಗಜಂಗಳಮೇಲೆ ಬಿಗಿದಿರುವ ಭೇರೀ ಪಟಹ ನಿಸ್ಸಾಣ ಮುರಜ ಡಿಂಡಿಮ ಪಣವ ಮೊದಲಾದ ಬಿರುದು ವಾದ್ಯಂಗಳು ಧ್ವನಿಗಳಿಂ ಭೂವ್ಯಾಕಾಶಂಗಳಂ ತುಂಬಿ ಭೋರೆಂದು ಮೊಳಗುತ್ತ ಬಂದ ಬಳಿಕ ಕ್ಷೀರಸಮುದ್ರದ ತರಂಗಂಗಳಂತೆ ಬಂದೇಬಂಣವಾದ ಲಕ್ಷತುರಂಗಂಗಳನ್ನೇರಿ ರಾಹುತರು ಬಿಚ್ಚುಕತ್ತಿಗಳಂ ಪಿಡಿದು ಹತ್ತುತ್ತರದೊಳ್ ಸಾಲ್ದೀರಿ ಎತ್ತುತ್ತರವಾಗಿ ಕುಣಿಯಿಸಿ ಹಾರಿಸುತಲಿರ್ದರು. ಆನಂತರ ಈ ಅಶ್ವಸೇನೆಯ ಮಧ್ಯದೊಳ್ ಜಲಧಿಯಲ್ಲಿ ಮೈನಾಕಪರ್ವತ ಎದ್ದಂತೆ ಉದ್ಭವಾಗಿ ಕಾಣಿಸುವ ಮದ್ದಾನೆಯಮೇಲೆ ಕಟ್ಟಿ ನೂರಾರು ಜನಂಗಳು ಪಿಡಿದಿರುವ ಗಗನಮಂ ಸೋಂಕುವ ಗಂಡಭೇರುಂಡ ಬಿರುದ ವಿಜಯಧ್ವಜ ಬರುವುದಂ ಬೀದಿಯೊಳ್ ಕೆಳಗೆ ನಿಂತಿರುವ ಪುರುಷರೆಲ್ಲರು ತಲೆಗಳನ್ನೆತ್ತಿ ವಿಸ್ಮಯಂ ಬಟ್ಟು ನೋಡುವಾಗ ಅವರ ಪಾಗುಗಳು ಹಿಂಭಾಗದೊಳ್ ಬೀಳುವುದಂ ಕಂಡು ಮಚ್ಚುಗಳಮೇಲಿರುವ ಬಾಲೆಯರೆಲ್ಲರು ಘೊಳ್ಳೆಂದು ನಗುತ ಒಬ್ಬರೊಬ್ಬರು ಮೊಗಂಗಳನ್ನೋಡಿ ಕೈಗಳಿಂತೋರಿ ಮನಬಂದಂತೆ ಮಾತುಗಳನಾಡುತ್ತಲಿರುವಾಗ ಚಿನ್ನ ಬೆಳ್ಳಿಯ ಗಗ್ಗರಿಗಳ ಸಾಲುಭಲ್ಲೆಗಳಂ ಪಿಡಿದ ಕಾಲ್ಬಲಂಗಳ ಗುಂಪುಗಳು ಸೊಂಪಾಗಿ ನಡೆಯಲು ಅವುಗಳ ಹಿಂಭಾಗದೊಳ್ "ರಾಜಾಧಿರಾಜ ಮಹಾರಾಜ ಚಂಡಶಾಸನ ಉದ್ದಂಡ ಪರಾಕ್ರಮ ಪರರಾಜತಿಮಿರಮಾರ್ತಾಂಡ ಭೂಮಂಡಲಾಖಂಡಲ; ವಿಜಯೀಭವ" ಎಂದು ಕೈಗಳನ್ನೆತ್ತಿ ಉಘ್ಘಡಿಸುವ ವಂದಿಮಾಗಧರಗುಂಪುಗಳು ಬರುತ್ತಿರಲು ಬಳಿಕ ಮುಖವೀಣೆ ವೇಣು ಮೃದಂಗ ಡಮರುಗ ಸಾರಂಗಿ ಮೊದಲಾದ ಮಧುರವಾದ್ಯಗಳ ಸುಕುಮಾರರಸಂಗಳಿಂದೊಪ್ಪಿ ಹಾವಭಾವಂಗಳಂ ಕೂಡಿ ಅಭಿನಯಿಸುತ ಘಲ್ಲು ಘಲ್ಲೆಂದು ತಾಳಾನುಗುಣವಾಗಿ ಕುಣಿಯುತ, ಅಲ್ಲಲ್ಲಿ ನಿಂತಿರುವ ವಿಟರುಗಳ ಮನಗಳಂ ನೋಟದಿಂ ತಲ್ಲಣಂಗೊಳಿಸುತ, ನಸುನಗುತ ಬೇಕಾಗಿ ಶರಗುಗಳಂ ಜಾರಿಸುತ, ಕೋರೆಸಂಜ ಬರುವ ವಾರನಾರಿಯರು ಸಾಲ್ದೀರಿಬರುತ್ತಿರಲು;

ಬಳಿಕ ಸ್ವಾಮಿಃಪರಾಕ್, ಜಯವರ್ಧಮಾನ, ಎಚ್ಚರ, ಭಾಪ್ಮೆ, ಪರಾಂಬರಿಕೆ, ಕ
ಟಾಕ್ಷಿಸಬೇಕೆಂದು ಚಿನ್ನವಿಸುತ ರನ್ನಗಳಂ ಕೆತ್ತಿರುವ ಪಿಡಿಗಳುಳ್ಳ ಚಿ
ನ್ನದ ಬೆತ್ತಗಳಂ ಪಿಡಿದು ಪುರಜನಂಗಳಿಗೆ ದರ್ಶನವಂ ಮಾಡಿಸುವ
ಅವಸರದ ಗುರಿಕಾರರೊಳಗುಂಪಿನೊಳ್ ಬಂದೇತರವಾದ ಬಣ್ಣವ
ಸ್ತ್ರಗಳಂ ಧರಿಸಿ ಬಂದುರಂಗಳಾದ ತುರಂಗಂಗಳನ್ನೇರಿ ಬರುವ ಸು
ಮತಿ ವೀರಸೇನ ಶತ್ರುಂಜಯ ಮೊದಲಾದ ರಾಜಕುಮಾರಕರು ಕೆ
ಲಬಲದಲ್ಲಿಯೂ, ಕೆಲರು ಹಿಂಭಾಗದಲ್ಲಿಯೂ ಬರುತ್ತಿರಲಾಗ ಗ್ರಹಮಂಡಲ
ದೊಳ್ ಸೂರ್ಯನಂತೆ, ನಕ್ಷತ್ರರಾಶಿಯೊಳ್ ಪೂರ್ಣಚಂದ್ರನಂತೆ, ನವ
ರತ್ನಗಳೊಳ್ ಪದ್ಮರಾಗಮಣಿಯಂತೆ, ಕಲ್ಪವೃಕ್ಷಂಗಳೊಳ್ ಪಾರಿ
ಜಾತದಂತೆ, ದೇವಸೇನಾಮಧ್ಯದಲ್ಲಿ ನಡೆಯುವ ದಿಕ್ಪಾಲಕರೊಳ್ ತ್ರಿ
ಲೋಕಪತಿಯಾದ ದೇವೇಂದ್ರನಂತೆ, ರಾಜಮಂಡಲಿಯೊಳ್ ಸುಗಂಧ
ರಾಜೇಂದ್ರನು ಸಾಂದ್ರವೈಭವದಿಂದೊಪ್ಪಿ ರಾಜಬೀದಿಯೊಳ್ ತೇಜಿ
ಯು ಕುಣಿಯಿಸುತ, ಬಪ್ಮಭೂಮಿಸಿಂಧೂಳಗಳು ಯೇಳುವಂತೆ ಮಾ
ಡುತ, ಬಂದುಕಡೆತಿರುಗಿಸುತ, ಪಾರೆಯಾಗಿ ಅದೊಂದುಬಗೆಯಾಗಿ ಸ
ಡೆಯಿಸಿ ಜಗ್ಗಿ ತೋರಿಸುತ್ತ, ನೂರಾರುವರಾರದ್ದರ ಬಂಡೀಪರಿಯಾಗಿ
ಹಾರಿಸುತ, ನಡನಡುವೆ ಪೌರನಾರಿಯರಂ ಮಿಂಚುಪ್ರೊಳೆವಂತೆ ನೋ
ಡುತ, ಕಲಪಿಂಕನೊಪನೆ ನಸುನಗುತ, ಬಂದೊಂದುಕಡೆನಿಂತಿರುವ ಕಾಂ
ತೆಯರ ಕುಟಿಗಳ ಕಾಂತಿಗಳಿಂದ ಚಿಗರುಗೊಂಡಂತೆ, ಸುಂದರಿಯರ ಮಂ
ದಹಾಸಗಳಿಂ ಕುಸುಮಿಸಿಯಿರುವವೆಂಬಂತೆ, ಲತಾಂಗಿಯರ ಕುಚಕುಂ
ಭಂಗಳಿಂದ ಫಲಿಸಿರುವಂತೆ, ಸುಳಿಗುರುಳುಗಳಿಂದ ಅಳಿಗಳು ಮುತ್ತಿರುವವು
ವೆಂಬಂತೆ, ಅವರ ಸವಿನುಡಿಗಳಿಂದ ಗಿಣಿ ಗೊರವಂಕ ಕೋಗಿಲೆಗಳು
ಕೂಗಿದಂತಾಗಿ ಮನ್ಮಥನ ಉದ್ಯಾನದ ವೃಕ್ಷವಾಟಿಗಳಂತೆ ಕಾಣಿಸುವ
ರಾಜಬೀದಿಯೊಳ್ ಆ ಕಾಂತೆಯರ ಕಣ್ಣಗಳ ಬೆಳಕುಗಳು ಬೆಳವಳಿ
ದು ಬೀದಿಯೊಳ್ ಕಟ್ಟಿರುವ ಕನ್ನೈದಿಲ ತೋರಣಂಗಳಂತೆ ತೋ
ರಲು; ಮತ್ತು ಹದಿನಾಲ್ಕು ಲೋಕಂಗಳಂ ಯೇರಿಯೇರಿ ಯಿಳಿದುಬರುವ ಪ
ಕ್ಷಕ್ಕೆ ಮನ್ಮಥನು ಬಿಡಿಸು ಸಿದ್ಧ್ರೀಕಗಳಿಂದಲೇ ಸೋಪಾನಂಗಳಿಂ

ಮಹಾರಾಜನ ಸೌಂದರ್ಯಕ್ಕೆ ಎಂಟುದಿಕ್ಕು ಅಂತಸ್ತುಗಳಮೇಲೆ ಹತ್ತಿ ತುಂಬಿರುವ ನಾರಿಯರು ಯುವರಾಜನ ನೋಡುತ್ತಿರಲು ; ಸ್ಫಟಿಕಶಿಲೆಗಳೊಳ್ ಪ್ರತಿಬಿಂಬಿತರಾದ ಸುಂದರಿಯರ ಮುಖಗಳೊಳ್ ನೆರಳುಗಳು ಕಾಣುವಂತೆ, ಕನ್ನಡಿಗಳೊಳ್ ಮಹಾಶ್ರೀಯಂತೆ ಆಕಳಂಕಪುರಿಯ ಕಾಂತೆಯರ ಮಾನಸಂಗಳೊಳ್ ನೆಲೆಗೊಂಡು ಸುಗಂಧರಾಜೇಂದ್ರನಂ ಕಂಡಳಿಗೆಯೊಳ್ ಮನ್ಮಥನೇ ರೂಪುಗೊಂಡುಬಂದನು ನಿಜವೆಂದು ಯೆಲ್ಲರಿಗೆ ಮನಸ್ಸಿಗೆ ಎನಿಸ್ಸೀ ಆಶ್ಚರ್ಯವಾಗಿ ಕೆಲವರು ಪರಗಾಗಿನಿಂತು ನೊಕ್ಕಿ ನೂರಾಗಿ ಕನಸುಬೀಳುವಂತೆ ಮೈಮರೆತಿರುವರಾಗಿ ನೋಡುತ್ತಾ ಮೈಯಲ್ಲಿ ಪುಳಕಂಗೊಂಡು ನಡುಗಿ ನಸುಬೆವರೇರಿ ನಾಚಿಕೆಗೊಂಡು ಕಾಮನಿಗೆ ವಶರಾಗಿ ಕಳವಳಿಸಿ ಕಳವಳಾಗಿ ಬಳಲಿತರೀವಾಗಿ ಕೆಳದಿಯರಿಗೆ ತಿಳಿಯದಂತೆ ಬಂದೊಂದು ನೆವದಿಂದ ತೆರಳಿ, ಮತ್ತೊಂದುಕಡೆ ನಿಂತು ಮರಳಿಮರಳಿ ನೋಡುತ್ತಿರಲು; ಕೆಲವರು ನನ್ನನ್ನೇ ಯದುರಾಗಿ ತಿರುಗಿನಿಮಿಷ ನೋಡಿದನೆನ್ನಲು; ಮತ್ತೆ ಕೆಲವರು ಕಿವಿಗಳಂ ಸೋಂಕುವಂತೆ ತಿದ್ದು ಪಡಿಯಾದ ಪುರುಷರಗಳಂ ಕಂಡನೆನ್ನಲು, ಕೆಲವರು ಯುಲೈ ಕನ್ನೆಯೆ! ಆತನ ಕೆನ್ನೆಗಳಬಣ್ಣದ ಚೆನ್ನನೋಡೆನ್ನಲು, ಕೆಲವರು ಬಾಪುರಿಯ ಪಚ್ಚೆಸ್ರೋಳಪತಿರಿಗದಾಸಲ್ಲಿ ಕಾಮನಬಿಲ್ಲು ನಿಲ್ಲಿಸಿದಂತೆ ಕಾಣಿಸುವುದನೋಡೆಂದು ಪ್ರೋರೋರ್ವರಂ ಚಿವುಟುತ್ತ ತೋರುತ್ತಿರಲು; ಮತ್ತೆ ಕೆಲವರು ಈಮಹಾರಾಜಚಂದ್ರನಂ ಪಡೆದಿದ ಗುಣವತಿಯ ಪುಣ್ಯವೆಂತಹುದೋ ಎನ್ನುತ್ತಿರಲು, ಕೆಲವರು ಕಾಮಿನಿಯರು ಈಮಹಾತಂ ಸಹಿಸಲಾರದೆ ಆ ಗುಣವತಿಯ ಪುಣ್ಯವೇನು ಆಪಂತಿರಲಿ ಈ ಮಹಾಪುರುಷನಂ ಪ್ರೇಮದಿಂದರಿತು ಕಾಂತನಂಮಾಡಿಕೊಳ್ಳುವ ಕಾಂತೆಯಿನ್ನಿರುವಳೋ ಅನ್ನನೋಂಪೇನೋಂಪೆಂದು ನೊಂಪುಗೂಡಿ ನುಡಿಯುತ್ತಿರಲು, ಇಂತು ಪರಿಪರಿಯಾಗಿ ಪೇಳುವಪೌರನಾರಿಯರ ಗುಂಪುಗುಂಪುಗಳ ಮಾತುಗಳಂ ಕಿವಿಗಿಂಪಾಗಿ ಕೇಳುತ್ತ ಉಪಚಾರಾರ್ಥವಾಗಿ ಹುವ್ವುಗಳ ಚೆಲ್ಲುವರವೇಲೆಲ್ಲ ಹೂಗಳಂ ಎರಚುತ್ತ ಮಂಗಳಾರ್ಥವಾಗಿ ಆರತಿಗಳನ್ನೆತ್ತುವ ಚಿತ್ತಾರಿಯರ ಕೈತಟ್ಟುಗಳಂ ನವರತ್ನಗ

ಸ್ವಾರಿಯ ವೈಯ್ಯಾರವಂ ವಿಜಯವರ್ಮರಾಯನು ಯೇಳುನೆಲೆಯುಳ್ಳ ವಾಲಗದ ಮೇಲುಮಚ್ಚಿನಮೇಲೆ ನಿಂತುನೋಡುತ್ತಿರ್ದು ವೇಗದಿಂದಿಳಿದು ಕಾದಿರುವ ಮಂತ್ರಿ ಸೇನಾಪತಿ ಪುರೋಹಿತರಿಂದೊಡಗೂಡಿ ತನ್ನರಮನೆಯ ಬಾಗಿಲಂ ಮೀರಿ ಯದುರಾಗಿ ಬರಲು ಕಳಿಂಗರಾಯನುಂ ಕಂಡು ಭಾವಜ್ಞನಾದ ಸುಗಂಧಮಹೀಪಾಲನು ಕುಣಿಸುವ ಕುದುರೆಯಿಂದಿಳಿಯಲು, ಆಬಳಿಕ ಈರ್ವರು ಓರೋರ್ವರಾಗಿ ವಿನಯದಿಂದ ಆಲಿಂಗನಂಗೈಯ್ಯಲು; ಅನಂತರದಲ್ಲಿ ಕಳಿಂಗಪತಿಯು ತನ್ನ ಕೈಗಳಿಂದ ರತ್ನಗಳಿಂ ತುಂಬಿರುವ ತಟ್ಟೆಯನ್ನೆತ್ತಿ ಕಾಣಿಕೆಯಂ ಒಪ್ಪಿಸಲು; ಆಗ ಸುಗಂಧಮಹಾರಾಜೇಂದ್ರನು ಯಲೈ ವಿಜಯವರ್ಮರಾಯನೇ, ತಾವು ವಯಸ್ಸಿನಲ್ಲಿಯೂ ಜ್ಞಾನದಲ್ಲಿಯೂ ಹಿರಿಯರು, ನಾನು ಬಾಲಕನು, ಈ ಹೊಸಮರ್ಯಾದೆಯಂ ಮಾಡಿ ಪ್ರೀತಿಯಂ ತೋರಿಸಿದ್ದರಿಂದ ನನ್ನ ಮನಸ್ಸಿಗೆ ಬಹಳ ಸಂತೋಷವಾಗುವದೆಂದು ನುಡಿಯಲಾಸುಗಂಧರಾಜೇಂದ್ರನ ಮಧುರವಾದ ಮಾತುಗಳಂ ಕೇಳಿ ಗಜಪತಿಯಾದ ವಿಜಯವರ್ಮರಾಯನು ಯಲೈ ನರಪತಿಕುಮಾರನೇ; ನನ್ನ ವಯಸ್ಸಿನಿಂದಲೇನು? ಜ್ಞಾನದಿಂ ಯಾರಂ ರಕ್ಷಣಂಗೈವೆನು? ನೀನು ರಾಜಕುಲದೋಳ್ ಪುಟ್ಟಿ ತೇಜವಂಪಡೆದು ಮೂಜಗಂಗಳೊಳ್ ವಿಖ್ಯಾತಿಯಂಗೊಂಡ ರಾಜಾಧಿರಾಜನೆಂದು ತಿಳಿದು ಕಾಣಿಕೆಯಂ ಒಪ್ಪಿಸಿದೆನೆಂದು ಚಿತ್ತದೊಳ್ ತರಬೇಕೆಂದು ವಿನಯದಿಂ ನುಡಿಯಲು.

ಆಗ ಕಲಿಂಗನು ಯಲೈ ರಾಯನೆ; ಕೇಳಬಹುದು ಹೆಣ್ಣಂಕೊಡುವಾಗ ಅಳಿಯನಂ ಬೇಡಿ ಬೇಕಾದುದನ್ನೆಲ್ಲವಂ ಕೊಟ್ಟು ಯದುರಾಗಿಬಂದು ಕರೆದುಕೊಂಡುಹೋಗುವದು ಲೋಕಮರ್ಯಾದೆಯಾಗಿಹುದೆಂದು ಶುಭಸೂಚನೆಯಾಗಿ ನುಡಿಯುವದಂ ಕೇಳಿ ಕರ್ನಾಟಭೂಪತಿಯಾದ ಸುಗಂಧರಾಜೇಂದ್ರನು ಕಡೆಗಣ್ಣಿನಿಂದ ಸನ್ನೆಯಂ ಮಾಡುತ್ತ ಸಂತೋಷದಿಂ ವಿಜಯವರ್ಮರಾಯನೊಡನೆ ಅವನ ಅರಮನೆಯಕುರಿತು ನಡೆತರುತ ಬಾಗಿಲೊಳ್ ಉಕ್ಕಿನ ಜರಿಸರಪಣಿಯ ಕವಚಗಳಂ ತೊಟ್ಟು ಚಕ್ರಗಳಂತೆ ಕೋರೆಗಳಾಗಿ ಬಿಳಿಯ ಪಾಗುಗಳಂ ತಲೆದೊ

ಗಳು ಅರೆಗಾಣುವಂತೆ ಸುತ್ತಿ ಬಿಳಿಯ ಕಾಲುಕುಪ್ಪಸಗಳಂ ತೊಟ್ಟು ಶ್ವೇತದ್ವೀಪದೊಳ್ ಪುಟ್ಟಿ ಬಂದಿರುವಂತೆ ತೋರುತ್ತ, ಚಿತ್ರಗಳಂ ಬಿಚ್ಚುಕತ್ತಿಗಳಂ ಪಿಡಿದು ತೋರಣಸ್ತಂಭಂಗಳೊಳ್ ನೆಟ್ಟುನಿಲ್ಲಿಸಿದ ಬೊಂಬೆಗಳಂತೆ ಚಲಿಸದೆ ನಿಂತು ಕಾದಿರುವ ರಾಹುತರಿಂದ ವೀರರಸ ಮಂತೋರಿಸುವ ರಾಜಮಂದಿರದ್ವಾರಮಂಡಪಂಕಂಡು ಅಲ್ಲಿಂದ ಮುಂದೆ ಬಂದೊಂದು ತೆರದ ಲೋವೆಗಳಲ್ಲಿ ನಾನಾಜಾತಿ ಪಕ್ಷಿಗಳ ಗೂಡುಗಳಿಂ ದೊಪ್ಪಿ ಹಿಮಗಿರಿ ಶಿಖರಂಗಳಂತೆ ಬೆಳ್ಪಾಗಿ ಆಕಾಶವಂ ಸೋಂಕಿರುವ ಉಪ್ಪರಿಕೆಗಳನ್ನೋಡಿ ಅವರೊಳ್ ಅಲ್ಲಲ್ಲಿ ಸುತ್ತಲೂ ಕಾಣಿಸುವ ಮುತ್ತಿನ ಗವಾಕ್ಷಂಗಳೊಳ್ ನಿಂತು ನೋಡುತ್ತಿರುವ ಅಂತಃಪುರದ ನಾರಿಯರ ಪಡವೆಗಳಂ ಕಂಡು ತಲೆಯೆತ್ತಿ ನೋಡದೆ ನಡೆಯುತ್ತ ಬಂದು ಪಾರ್ಶ್ವದೊಳ್ ಬತ್ತಳಿಕೆ ಬಿಲ್ಲು ಬಾಣ ಭಲ್ಲೆ ಮುಸಲ ಶೂಲ ವಜ್ರಮುಷ್ಟಿಗಳಂ ಮಡಗಿರುವ ಆಯುಧಶಾಲೆಗಳಂ ಪಾತಾಳದ ಮಾರ್ಗಂಗಳಂತೆ ನೀಳವಾಗಿ ಆಳವಾಗಿರುವ ಗರುಡಗಳಂ ನೋಡುತ್ತ ಅಲ್ಲಲ್ಲಿ ನೀತಿಶಾಸ್ತ್ರದೊಳ್ ನಿಪುಣರಾಗಿ ಧರ್ಮಾಧರ್ಮಂಗಳಂ ವಿಚಾರಿಸಿ ವ್ಯವಸ್ಥೆಯಂಗೈವ ಅಧಿಕಾರಿಗಳು ಇದಲ್ಲದೆ ರಾಜ್ಯವನ್ನೆಲ್ಲವಂ ಕೈಯೊಳಗೆ ಪಿಡಿದಂತೆ ಲೆಖ್ಖವಂ ಪಿಡಿದು ನೋಡುತ್ತಲಿರುವ ಕರಣಿಕರು ಮತ್ತಂ ದೇಶದೇಶಂಗಳಿಗೆ ಪತ್ರಂಗಳಂ ಅಗ್ರಹಾರಂಗಳಿಗೆ ಧರ್ಮಶಾಸನಂಗಳಂ ಬರೆಯುವ ರಾಜಹಿತರಾದ ನೂರಾರುಜನ ರಾಯಸದವರು ಇವರುಗಳಿಂ ತುಂಬಿರುವ ಬೆಳ್ಳಿಯ ಕಂಭಸಾಲಿನ ಹಜಾರಂಗಳನ್ನೋಡುತ್ತ, ಅಲ್ಲಿಂದಮುಂದೆ ನಡೆತಂದು ಅತ್ಯುನ್ನತವಾದ ಒಂದು ಬಾಗಿಲನ್ನೋಡಿ ಆ ಕೇಳಿಯೊಳ್ ಸದ್ದುಮಾಡದಿರಿ, ಏಳಿ, ಕೈಕಟ್ಟಿ ವಲ್ಲಿಗಳಂ ನಡುವಿಗೆ ಸುತ್ತಿರೀ, ಸಾಲಾಗಿ ನಿಲ್ಲಿರೀ, ಮಾರ್ಗಂಗಳಂ ಬಿಡೀ ಯಚ್ಚರಾಯೆಂದು ಕೂಗುವ ದ್ವಾರಪಾಲಕರ ಕೋಲಾಹಲ ಧ್ವನಿಗಳಂ ಕೇಳಿ ಸುಮತಿಯು ಹಸ್ತಲಾಗದಿಂ ನಡೆಯುತ್ತ, ಅಲ್ಲಿಂದ ಮುಂದೆ ವಂದುಕಡೆಯೊಳ್ ತರ್ಕ ವೇದಾಂತ ಶಬ್ದಂಗಳಂ ಉಪ್ಪಳಿಸುತ ಪ್ರಸಂಗಗಳಂ ಮಾಡುತ್ತಲಿರುವ ಮತಮತದ ವಿದ್ವಾಂಸರುಗಳಂ, ಒಂದುಕಡೆ

ಯೊಳ್ ಶಬ್ದಾರ್ಥ ಚಿತ್ರಂಗಳಿಂದಬ್ಬಿ ನವರಸಭರಿತವಾದ ಕಾವ್ಯ ಪ್ರಬಂಧಂಗಳಂ ಪವಿತ್ರವಾದ ನಿಬಂಧನೆಯಿಂದೊಪ್ಪಿದ ದೇಶಭಾಷಾ ಗ್ರಂಥಂಗಳಂ, ಅದ್ಭುತಸಂವಿಧಾನಂಗಳುಳ್ಳ ನವೀನ ನಾಟಕಂಗಳಂ, ಪೇಳುತ್ತಲಿರುವರಿಂ, ನವರಸ ರಸವಂ ತಿಳಿದು ಅಹಹವೆಂದು ತಲೆದೂಗುವ ರಸಜ್ಞರಿಂ, ಒಂದುಕಡೆಯೊಳ್ ವೀಣೆ ಸಾರಂಗಿ ಮೊದಲಾದುವಂ ಪಿಡಿದು ಘನ ನಯದೇಶೀಯಂಗಳಂ ಸಂಗತಿ ಕಾಲಾನುಗುಣವಾಗಿ ರಾಗಂಗಳಂ ತಿಳಿದು ತಾನವಂಗಳನಲಂಗೈವ ವೈಣಿಕಶಿರೋಮಣಿಗಳಿಂ, ಒಂದುಕಡೆಯೊಳ್ ದೇಶದೇಶಜಾತೀಯಂಗಳಂ ತಿಳಿದು ವೇಷಭಾಷೆಗಳನಾಕರಿಯಾಗಿ ತೋರಿಸುತ ನಾನಾಜಾತಿ ಮೃಗಪಕ್ಷಿಗಳಂತೆ ಕೂಗುತ್ತ ಹಾಸ್ಯವಂಮಾಡುವಪರಿಹಾಸಕಜನಂಗಳಿಂ, ಮತ್ತೊಂದುತಾಣದೊಳ್ ಅಲ್ಲಲ್ಲಿನಿಂತು ಬಣ್ಣಬಣ್ಣದ ಉಡುಗೆಗಳಂ ನಡುವುಗಳಿಗೆಸುತ್ತಿ ಕೈಗಳನ್ನೆತ್ತಿ ಐವತ್ತಾರು ದೇಶದ ಅರಸುಗಳ ಬಿರುದು ಪದ್ಯಗಳಂ ಕೈವಾರವಂಮಾಡುವ ಶುಭವರ್ಗಂಗಳಿಂ, ಯಿದುಮಲ್ಲದೆ ಅಲ್ಲಲ್ಲಿ ಆಣಿಮುತ್ತುಗಳಸರವಣಿಗಳಿಂದೊಪ್ಪಿರುವಕೆತ್ತನೆಯ ವಾತಿ ಮಯುರ ಬಾವುಲಿಗಳಲ್ಲಾಡುವಂತೆ ಝಣಕಂಕಣಂಗಳು ಚಲಿಸಿ ಧ್ವನಿಯಂ ಕೊಡುವಂತೆ ಕಾಲುಗೆಜ್ಜೆಗಳಂ ತಾಳದೊಳ್ಮೇಳವಿಸಿ ಘಲ್ಲೆನ್ನುವಂತೆ ಕುಣಿಯುತ್ತ ಸಾರಂಗಿ ಮುಖವೀಣೆ ಮೃದಂಗ ನಾದಂಗಳೆಲ್ಲ ಶ್ರುತಿಗೂಡುವಂತೆ ಯಿಂಪಾಗಿ ಪಾಡುತ್ತ ಕೆಲಬಲದಿನೋಡುತ್ತ ನಡನಡುವೆ ನಸುನಗುತ ಬಂದೊಂದುಸಾರಿ ಹಿಂತಿರುಗಿ ಜಡೆಯಲಂಕಾರವಂತೋರಿಸುತ ಭಾರಿಭಾರಿಗು ಕರವಸ್ತ್ರದಿಂ ಕಿರುಬೆವರುಗಳಂ ಒರಸುತ್ತ, ಬೇಕಾಗಿ ಜಾರಿಸುವ ಸೆರಗನ್ನಾಗಾಗ ಸವರಿಸುತ, ಕಾಮನಬಾಣಗಳಂ ಬೀಸುವಂತೆ ಕಣ್ಗಳಿಂ ನೋಡುತ್ತ, ನೋಡುವರನ್ನೆಲ್ಲ ಮೋಹಸಮುದ್ರದೊಳ್ ಮುಳುಗಿಸುವ ವಾರಕಾಂತೆಯರಿಂ, ಇದುಮಲ್ಲದೆ ಅಂತಃಪುರದಿಂ ಎದುರಾಗಿ ಬರುವ ನಾರಿಯರಿಗೆ ಸ್ವಯಂವರ ಸಮಯವೆಂದು ತಿಳಿಸುವದಕ್ಕೆ ಮೊಡ್ಯೋಡಿಪೋಗುವ ಚೇಟೀಜನಂಗಳ ಸಂದಣಿಗಳಿಂದೊಪ್ಪಿ ಧೂಪಿಸುವ ಕೃಷ್ಣಾಗರು ಸಾಂಬ್ರಾಣಿ ಧೂಪಂಗಳಿಂದ ಮೇಘಂಗಳು ಮುಚ್ಚಿದಂ

ತಾಗಿ ಮತ್ತೊಂದುಕಡೆ ಮೇಲುಕಟ್ಟುಗಳಲ್ಲಿ ಕಟ್ಟಿರುವ ಜಾತಿಜಾತಿ ಮೊಗ್ಗೆಗಳ ಗೊಂಚಲುಗಳಿಂದುದುರುವ ಮಕರಂದದ ತುಂತುರುಹನಿಗಳಿಂ ಹಿಮಕಾಲದಂತೆ ತೋರಿ, ಒಂದೊಂದು ಪ್ರದೇಶದೊಳ್ ನೀಲದಗ ಗವಾಕ್ಷಂಗಳಲ್ಲಿ ಹೊರಸೂಸುವ ಮಿಂಚುವ ಮುತ್ತಿನ ದಂಡೆಗಳ ಸಮೂಹಂಗಳಿಂದ ನಕ್ಷತ್ರಸರಿಯಿಂ ತೋರಿಸುವ ಉನ್ನತವಾದ ಉಬ್ಬುಚಪ್ಪರವೆಂಬ ಆಕಾಶದಿಂದೊಪ್ಪಿ ಮತ್ತಮಲ್ಲಿ ಗ್ರಹದೇವತೆಗಳಂತೆ ಕಂಬಸಾಲುಗಳಲ್ಲಿ ನಿಲ್ಲಿಸಿರುವ ಕೆತ್ತನೆಯ ಚಿತ್ತಾರದ ಬೊಂಬೆಗಳಿಂ ಸಕಲದೇಶದಲಕ್ಷ್ಮಿಗಳೆಲ್ಲ ಇಲ್ಲಿಯೇ ಬಂದು ನೆಲೆಗೊಂಡು ನಿಂತಿರುವಂತೆ ತೋರಿಸುತ್ತ, ಎಲ್ಲಿ ನೋಡಿದರೂ ಸಾಲು ಸೂರೆಯ ಪಟಗಳೊಳ್ ಸರಿಗೆಯಿಂದ ಮಣಿಗಳಿಂ ಬಿಗಿದಿರುವ ಹಾಸಿಗೆಗಳಂ ಹಾಸಿ ಅಲ್ಲಲ್ಲಿ ನೂರಾರು ಚಿನ್ನದ ತಟ್ಟೆಗಳಲ್ಲಿಟ್ಟು, ಕಸ್ತೂರಿಯ ಗಂಧ ಕಪ್ಪುರ ತಾಂಬೂಲಂಗಳಿಂ ತುಂಬಿರುವ ಬಟ್ಟಲುಗಳಂ ಮಡಗಿ, ಕೊನೆಯರಳಿ ಬರುವ ಮೊಗ್ಗುಗಳ ಹಾರಂಗಳಂ ಬಿಡಿಹೂವುಗಳಿಂ ಜಗತಿಗಳಂ ಮಾಡಿ ಅದರ ವಾಸನೆಯಿಂದ ಘಮಘಮಿಸಿ ಬಂದವರ ಪರವಶಂಗೊಳಿಸುತ್ತ, ಮತ್ತು ಸಕಲೈಶ್ವರ್ಯದಿಂದೊಪ್ಪಿ ಸಾವಿರ ಮುಖಂಗಳುಳ್ಳವನಿಂದಲೂ ಬಣ್ಣಿಸುವದಕ್ಕೆ ಶಕ್ಯವಲ್ಲದಿರುವ ಅಲಂಕಾರದಿಂದೊಪ್ಪಿ, ಇದು ಅಮರಾವತಿಯಲ್ಲಿರುವ ಸುಧರ್ಮ ಸಭೆಯೋ ಎಂಬಂತೆ ಸಂಶಯಂಗೊಳಿಸುತ್ತ ಸ್ವಯಂವರ ಸಭಾಮಂಟಪದ ಮಧ್ಯರಂಗಕ್ಕೆ ಬಂದು ಗಗನಮಧ್ಯಕ್ಕೆ ಬಂದಿರುವ ಪೂರ್ಣಚಂದ್ರನಂತೆ ನಾಲ್ಕು ಕಡೆಯಲ್ಲಿಯೂ ನೋಡುವರಿಗೆಲ್ಲ ಸಂತೋಷಮಂ ಸಂಭ್ರಮಂಗೊಳಿಸಿ, ನಿಮಿಷನಿಂತು ನೋಡುತ್ತಿರುವಷ್ಟರೊಳ್ ಎದುರಿನಲ್ಲಿ ವಜ್ರದ ಶಿಲೆಗಳ ನಿಲುಗನ್ನಡಿಯ ಬಿಲ್ಲೆಗಳಿಂ ಚಿತ್ರವಾಗಿ ಬಿಗಿದಿರುವ ಚಿತ್ತಾರದ ನೂರಾರು ಕಂಭಸಾಲುಗಳಿಂದ ಬಲು ಎತ್ತರವಾಗಿ ಕಾಣಿಸುವ ಹಿರಿಯ ಹಜಾರದೊಳ್ ಹತ್ತಿರತ್ತಿರದಲ್ಲಿರಿಸಿರುವ ಕೆತ್ತನೆಯ ಸಿಂಹಾಸನಂಗಳೊಳ್ ಕುಳಿತು ಉತ್ತಮಾಭರಣಂಗಳಂ ಧರಿಸಿ ಮೆರೆಯುತ್ತಿರುವ ಐವತ್ತಾರು ದೇಶದ ಅರಸುಗಳೆಲ್ಲ ಸೂರ್ಯನಂ ಕಂಡ ತಾವರೆಗಳಂತೆ ಸುಗಂಧರಾಜೇಂದ್ರನಂ ಕಂಡು ಸಂಭ್ರಮಂಗೊಂಡು ತಮ್ಮ ತಮ್ಮ ಪೀಠಂಗಳಿಂದಿಳಿದು ಎದುರಾಗಿ ಬಂದು

ಸಂತೋಷಮಂತಾಳುವರು ಕೆಲವರು, ಭಯಗೊಂಡವರು ಕೆಲಂಬರು, ವಿಸ್ಮಯಂಬಡುವರು ಕೆಲವರು, ಅಸೂಯೆಯಂತಾಳುವರು ಕೆಲವರು, ತಲೆದೋರುವ ಕೋಪದಿಂದೊಪ್ಪುವರು ಕೆಲವರು, ಉತ್ಸಾಹಂಗೊಂಡು ನೋಡುವರು ಕೆಲವರು, ನಾಚಿಕೆಗೊಂಡವರು ಕೆಲವರು, ಇಂತು ಎಮರಾಗಿ ಬಂದರಾಜರುಗಳನ್ನೋಡಿ ಸುಗಂಧರಾಜೇಂದ್ರನು ಕೈಗಳಂ ಮುಗಿವರಿಗೆ ಬದುಲಾಗಿ ಮಾನವಂ ಮಾಡುತ್ತ, ಕೆಲವು ಅರಸುಗಳಂ ಅಪ್ಪಿಕೊಳ್ಳುತ್ತ, ಕೆಲವು ರಾಯರುಗಳ ಕೈಗಳಂ ಪಿಡಿಯುತ್ತ, ಮತ್ತಲ್ಲಿ ಪ್ರಣಾಮಂ ಮಾಡುವ ಕೆಲವು ಮಹೀಪಾಲರಂ ಹೀಗೆ ಉಂಟೇ ಎಂದು ಪಿಸುಮದಿಂ ನುಡಿಯುತ್ತ, ಕೆಲವರಂ ಮನ್ನಿಸುತ್ತ, ಅಲ್ಲಲ್ಲಿಯೇ ಎಲ್ಲರು ಕುಳ್ಳಿರಬಹುದೆಂದು ಕೈಯಂ ತೋರಿ ಮೆಲ್ಲನೆ ಬರುತ್ತ, ಒಂದುಕಡೆ ಸುಮತಿಯು ಹಸ್ತಾಲಂಗದಿಂ ಮತ್ತೊಂದುಕಡೆಯೊಳ್ ಕಳಿಂಗರಾಯನ ಹಸ್ತದಲ್ಲಿ ಕರವನ್ನಿಟ್ಟು ಹತ್ತಾರುಮೆಟ್ಟಿಗೆಗಳನ್ನೇರಿ ಯುತ್ತರದ ಹಜಾರಕ್ಕೆ ಬಂದು ಮೇರುಪರ್ವತದೊಳ್ ಧ್ರುವಪೀಠವನ್ನೈದುವ ಧ್ರುವರಾಯನಂತೆ ಮರಕತಸಿಂಹಾಸನವನ್ನೇರುವಸಮಯದೊಳ್ ಗಂಭೀರವಾಗಿ ಮೊಳಗುವ ಪಟಹ, ಪಣವ, ಮುರಜ, ಭೇರೀಭಾಂಕಾರಂಗಳಿಂದ ಬಿರುದು ಪದ್ಯಧ್ವನಿಗಳಿಂದ ಮೃದಂಗ, ವೀಣಾ, ವೇಣು ಮಧುರನಾದಂಗಳಿಂದ ವಾರಕಾಂತೆಯರ ಕಂಠಸ್ವರಗಳಿಂದ, ಅಡ್ಡಬೀಳುವದಕ್ಕೆ ಬರುವ ಪಾಳೆಯಗಾರರ ಮೆರೆಯುವ ಸುವರ್ಣರತ್ನಕಿರೀಟಂಗಳ ಖಣಖಣಶಬ್ದಂಗಳಿಂದ, ವೇತ್ರಧಾರಿಗಳಾದ ಕಂಚುಕಿಗಳ ಕೋಲಾಹಲಂಗಳಿಂದ, ತಿರುಗಾಡುವ ಸಖೀಜನದ ನೂಪುರಧ್ವನಿಗಳಿಂದ, ಸಭಾಮಂಟಪದೊಳಿರುವ ಸಾಮಾಜಿಕರ ಕಲಕಲಧ್ವನಿಗಳಿಂದ, ಆ ಚಂದ್ರಶಾಲೆಯ ಬಳೆಲೋವೆಗಳ ಗೂಡುಗಳಲ್ಲಿರುವ ನಾನಾಪಕ್ಷಿಗಳ ಕಲರವಂಗಳಿಂದ, ಮೇಲುಕಟ್ಟುಗಳೊಳ್ಕಟ್ಟಿರುವ ಮುತ್ತುಪವಳದ ಕುಚ್ಚುಗಳ ನೆಗಂಗಳು ಗವಾಕ್ಷಂಗಳ ಘಾಳಿಯಿಂಪಲ್ಲಾಡಿ ವಂವಕ್ಕೆವಂದು ತಗಲಿ ಅದರಿಂಪುಟ್ಟಿದ ಅದೊಂದುಪರಿಮನೋಹರವಾದ ಶಬ್ದದಿಂದ, ರಾಜರು ರಾಜಸೇವಾಜನಂಗಳು ಧರಿಸಿರುವ ವಿಚಿತ್ರವಸ್ತ್ರಂಗಳ ಮರ್ಮರಧ್ವನಿಗಳಿಂದಲೂ, ಒಪ್ಪಿ ಆ ಸ್ವಯಂವರ ಸಭಾಮಂಟಪವು ಭೂಮಿಗೆ ಎರಗಿದ

ಗಂಧರ್ವಕಿನ್ನರ ಲೋಕಂಗಳೋ ಎಂಬಂತೆ ತೋರಿ ಸಕಲಜನಂಗಳಿಗೆ ಆನಂದಮಂ ಆಶ್ಚರ್ಯಮನ್ನುಂಟುಮಾಡಲಾಗ ಸುಗಂಧರಾಜೇಂದ್ರನು ಸಿಂಹಾಸನದೊಳು ಕುಳಿತು ಕಳಿಂಗರಾಜನು ದೇಶದ ರಾಯರುಗಳಿಗೆಲ್ಲ ಮಾಡುತ್ತಿರುವ ಉಪಚಾರಂಗಳಂ ನೋಡುತ್ತಿರಲು; ಅಲ್ಲಿ ಮೊದಲು ಅರಸುಗಳಂ ಪರಿಪರಿ ನೋಡುತ್ತಿರ್ದ ಸಭಾಜನಂಗಳೆಲ್ಲರೂ ಯಲ್ಲಿಯೂ ನೋಡುವದಕ್ಕೆ ಮನಸ್ಸಿಲ್ಲದೆ ಸುಗಂಧರಾಜೇಂದ್ರನ ಮೊಗದ ಸೌಂದರ್ಯವನ್ನೇ ನೋಡುತ್ತಿರಲು; ಮತ್ತೂ ಅಲ್ಲಿದ್ದ ರಾಜರುಗಳೆಲ್ಲ ಈತನನ್ನೇ ದಿಟ ಸೌಗಂಧಿಕಾದೇವಿಯೊಳಿದ್ದ ಅಭಿಲಾಷೆಯನ್ನಾಗಲೇ ಬಿಡುತ ಈ ಮಹೋತ್ಸವವನ್ನೋಡುವುದೇ ಫಲವಾಗಿ ತಿಳಿಯುತಲಿರಲಾಗ ಕಳಿಂಗರಾಜನು ಆ ಪಟ್ಟದೇಶದ ಅರಸಾದ ಕುಸುಮಧ್ವಜರಾಜನಿಂದೊಡಗೂಡಿ ಬಂದಿರುವ ಅರಸುಗಳಂ ಪರಿಪರಿ ಉಪಚಾರಂಗಳಂ ಮಾಡಿ ಕುಳ್ಳಿರಿಸಿ, ಆ ಬಳಿಕ ಅವರವರ ಮಂತ್ರಿಗಳಂ ಸೇನಾಪತಿಗಳಂ ಮತ್ತು ಪಂಡಿತರುಗಳಂ ಉಚಿತಸ್ಥಳಂಗಳಲ್ಲಿ ಕುಳ್ಳಿರಿಸಿ ಉಪಚಾರವಚನಂಗಳಂ ಪೇಳಿ ಸುಮುಹೂರ್ತಂ ಬಂತೆಂದು ಬೇಗ ತನ್ನ ಮಗಳಿರುವ ಚಿತ್ರಶಾಲೆಯಿಂದ ಚಿತ್ರರೇಖೆಯುಂ ಕರೆಯಿಸಿ ಈ ಸುಮುಹೂರ್ತದೊಳ್ ಕುಮಾರಿಯಂ ಕರೆತರುವುದೆಂದು ಪೇಳಿ ಕಳುಹಿ ಸೌಗಂಧಿಕಾದೇವಿಯು ಬರುವುದಂ ಪ್ರತೀಕ್ಷಿಸುತ್ತಿರಲೂ; ಸಭಾಮಂಟಪದೊಳ್ ಅರಸುಗಳೆಲ್ಲ ಪರಿಪರಿಯ ವಿದ್ಯಾವಿನೋದಂಗಳನ್ನೋಡುತ್ತ ವಿಲಾಸದಿಂದಿರುತಿರ್ದರೆಂಬಲ್ಲಿಗೆ * *

ಗದ್ಯ॥ ಕುಂಡಲಿಶಯನಖಂಡಪರಶುಪುಂಡರೀಕಭವಾಖಂಡಲಪ್ರಮುಖನಿಖಿಲಸುರವರಪರಿಭವಪರಿಣತಪ್ರಚಂಡಮುಂಡಖಂಡನನಿಪುಣಕೋದಂಡಕಾಂಡಮಂಡಲಾಗ್ರಧರಭುಜಾದಂಡಪರಿಮಂಡಿತಚಾಮುಂಡಿಕಾಕಟಾಕ್ಷವೀಕ್ಷಣಪ್ರವರ್ಧಮಾನಭೂಮಂಡಲಾಧಿಪತ್ಯಸತ್ಯವ್ರತಾದಿಸಕಲಭಾಷಾಸಾಮ್ರಾಜ್ಯಸರ್ವಂಕಷಚತುರ್ವಿಧಸರಸಕವಿತಾನಿಸ್ಸಹಾಯನಿರ್ಮಾಣಧೌರೇಯಷಟ್ಪಿಕಾಶತಗ್ರಂಥವಿನವಿನ ಪ್ರಬಂಧಧುರಂಧರತ್ರಿಭುವನಪವಿತ್ರಾತ್ರೇಯಸಗೋತ್ರ ಆಶ್ವಲಾಯನಸೂತ್ರಸುಚರಿತ್ರಚಾಮರಾಜಮಹಾರಾಜಪುತ್ರನಗಪತಿಬಿರುದಮಹೀಶೂರಪುರವರಾಧೀಶಶ್ರೀಕೃಷ್ಣರಾಜವಡೆಯರವರಿಂದರ

ಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ಈ ನವೀನಕೃತಿಯೊಳ್ಕಳಿಂಗನಗರಿಗೆ ಸಕಲ ರಾಜಾಗಮನವಂ, ಎಗಂಧರರಾಜೇಂದ್ರನ ಚಂದ್ರಿಕಾವಿಹಾರವಂ, ಸ್ವಯಂವರ ಸಭಾಮಂಟಪ ಪ್ರವೇಶ ಮೊದಲಾದ್ದಂ ಬಣ್ಣಿಸಿರುವ ಹನ್ನೊಂದನೇ ಆಶ್ವಾಸನಿರೂಪಣಕ್ಕೆ ಮಂಗಳಮಹಾ * * * * * * *

## ಹನ್ನೊಂದನೇಅಧ್ಯಾಯಂ ಸಂಪೂರ್ಣವು.



ಶುಭಮಸ್ತು.

## ಪನ್ನೆರಡನೇ ಅಧ್ಯಾಯಂ.

ಅನಂತರದಲ್ಲಿ ಅಂತಃಪುರದ ಚಿತ್ರಶಾಲೆಯೊಳ್ಸೌಗಂಧಿಕಾದೇವಿಯು ಪ್ರಮಂಚದಿಂದೆದ್ದು ಪುರಂದರನ ಚಿತ್ರದರ್ಶನವಂಗೈದು, ಸಾಷ್ಟಾಂಗವಾಗಿ ಎರಗಿ ಪರಿಚಾರಿಕಾಜನಂಗಳು ಒಪ್ಪಿಸುವ ಪುರಿಮಳೋದಕದಿಂದ ಕರಪಾದಂಗಳಂತೊಳೆದು ಮುಖಮಜ್ಜನಂಗೈದು ಸಖೀಜನಂಗಳಂ ಬಂದೊಂದು ನೆಮದಿಂದಕಳುಹಿ, ದೇವೇಂದ್ರನಂಬರದಿರುವ ಚಿತ್ರದಸಮೀಪದೊಳ್ ಯತ್ತರವಾದ ಚಿತ್ತರದ ಪೀಠದೊಳ್ಕುಳಿತು ಇಂದ್ರನ ಅಂದ ಚಂದವನ್ನೋಡುತ ಚಿತ್ರಲೇಖೆ ಇಲ್ಲದಿರುವದಂತಿಳಿದು ಮಾಲತಿಯಂಕರೆದು-ಎಲೈಮಾಲತಿಯೆ ! ಈ ಚಿತ್ರಪಠದಲ್ಲಿ ಮಡಗಿರುವಪವಳದ ಪೆಟ್ಟಿಗೆಯಂ ತೆಗೆದುಕೊಂಡು ಬಾ ಎಂದು ಕಳುಹಲು. ಆ ಮಾಲತಿಯು ಅಮಂದಿರಕ್ಕೆ ಪೋಗಿ ಪವಳದ ಪೆಟ್ಟಿಗೆಯಂ ಕಂಕಳೊಳು ಇಟ್ಟು ಚಿತ್ರಂಗಳನ್ನೋಡುವ ಎದುರುಕನ್ನಡಿಯುಬಿಲ್ಲೆಯಂ ಬಿಗಿದಿರುವ ಕುಂದಣದ ಕೀಲುಕಡ್ಡಿಯಮಣೆಯಂ ಕೈಯೊಳ್ಪಿಡಿದು ಸೌಗಂಧಿಕಾದೇವಿಯ ಸಮೀಪಕ್ಕೆಬಂದು ಪೆಟ್ಟಿಗೆಯಂ ಎದುರಾಗಿಟ್ಟು ಬಂದೊಂದು ಭಾವಚಿತ್ರದ ಪಟಪಂತೆಗದಿರಿಸಿ ಎಲೈ ಅರಸಿಯೆ! ನಿನ್ನಮನದೊಳಿರುವಂತೆಕಾಣುವದುನೋಡೆಂದು ಭೂತಕನ್ನಡಿಯನ್ನೆತ್ತಿ ವಂಮೊಂದುದೇಶವಂ ಆ ದೇಶದ ಅರಸಿನ

ಸೊಗಸುಗಳಂಜೇನ್ನೇರೆ ತೋರಿಸುತ್ತಿರಲು;ಸೌಗಂಧಿಕಾದೇವಿಯು ಅದನ್ನೋಡುತ ದೇವೇಂದ್ರನ ಭಾವಚಿತ್ರಕ್ಕೆ ಸರಿನೋಡುತ್ತಿರಲು, ಅಷ್ಟರೊಳೆಗೆ ಚಿತ್ರಲೇಖೆಯು ಕಾಲುಸ್ವರದ ಧ್ವನಿಯಂ ಕೇಳಿ ತ್ವರೆಯಿಂದೆದ್ದು ಪೆಟ್ಟಿಗೆಯನ್ನಲ್ಲಿಯೇ ಬಿಟ್ಟು ಎದುರಾಗಿಬರಲು, ಆ ರಾಜಪುತ್ರಿಯುಂ ಕಂಡು ಚಿತ್ರಲೇಖೆಯು ಸ್ವಯಂವರ ಸಮಯವಾಯಿತ್ತಂತೆ ಬ್ಯಾಗಯೊಳಂದು ಕರತಂದು ಸುವಾಸಿನೀಬೃಂದದಿಂ ಸಕಲಮಂಗಳದ್ರವ್ಯಂಗಳಂ ತುಂಬಿರುವ ಮಂದಿರದೊಳೊಂದು ಮಣಿಪೀಠದಲ್ಲಿ ಕುಳ್ಳಿರಿಶಿ ಬಿಳದಾವರೆಯಂತಿರುವ ಮೊಗದೊಳು ಕೇಸರಂಗಳಂತೆ ಶೋಭನಾಕ್ಷತೆಗಳನ್ನಿಟ್ಟು ವೀಳ್ಯಂಕೊಟ್ಟು ಮುತ್ತೈದೇರು ಹರಶಿಮಂಗಳಂಗಳಂ ಪಾಡುತ್ತಿರಲಾಗ ಆರತಿಯನ್ನೆತ್ತಿ ಮಲ್ಲಿಗೆಎಣ್ಣೆಯನ್ನೊತ್ತಿ ಹಸ್ತಪಾದಂಗಳಿಗೆ ಅರಸಿನಮಂಹಚ್ಚಿ ಹಸ್ತಲಾಗದಿಂ ಮಜ್ಜನಗೃಹಕ್ಕೆ ಕರೆತಂದು ಅಲ್ಲಿ ಕೆಲವು ವಾಸನೆಯಂಕಟ್ಟಿ ಬಾಯಿಕಟ್ಟಿ ಮಡಗಿರುವ ಬಿಸಿನೀರ ಕೊಪ್ಪರಿಗೆಗಳಂ ಶೀತೋಪಚಾರಾರ್ಥವಾಗಿ ಪಚ್ಚಕಾರಿ ಶೋಧಿಶಿದ ತಿಳಿನೀರುಗಳತುಂಬಿಯಾತ್ತಿಕಟ್ಟಿರುವ ಬಿಂದಿಗೆಗಳಂ ಮತ್ತು ಶೀತೋಪಚಾರವೇ ತಡೆಯಲಾರದ ಶರೀರಕ್ಕೆ ಬಿಶಿನೀರಿನಿಂ ಎಂತು ಮಜ್ಜನಮಂ ಮಾಡಿಸಬಹುದೆಂದು ಉಗರುಬೆಚ್ಚನ ನೀರಂ ಕಾಯಿಶಿ ಮಡಗಿ ಕಾದಿರುವ ಪರಿಚಾರಿಕಾ ಜನಂಗಳನ್ನೋಡುತ ಕುಂದಣದಮಣೆಯೊಳ್ ಕುಳಿತರೆ ಮೈಯುಲ್ಲ ಕುದುವದೆಂದು ಚಂದ್ರಕಾಂತಶಿಲೆಯ ಚೌಕಿಯೊಳ್ ಕುಳ್ಳಿರಿಶಿ ಸ್ಪಟಿಕಶಿಲೆಗಳ ಕೊಳಗತಪ್ಪಲೆಗಳಂದ ನಸುಬಿಸಿಯಾದ ಪರಿಮಳದ ತಿಳಿನೀರ್ಗಳಂ ಮುತ್ತುಗಳ ಮಳೆಗರದಂತೆ ಮೊಗ್ಗುಗಳ ಮಳೆಗರದಂತೆ ಯಿಕ್ಕೆಲದೋಳೆರೆಯುತ ನಡು ನಡುವೆ ಚಂದ್ರಕಾಂತ ಕಲಶದೋಳ್ ತುಂಬಿರುವ ಮಧುರಜಲವಂ ತಂದು ಒಪ್ಪಿಸುತ, ದಾಳಿಂಬ ದ್ರಾಕ್ಷ ಮೊದಲಾದ ಪಣ್ಗಳ ರಸಗಳಂ ತೆಗದು ಒಪ್ಪಿಸುತ,ದವನಪಂದುಗಗಳಬೀಸಣಿಗೆಗಳಂದಬೀಸುತ, ಕ್ರಡವಾವರೆ ನಡೆಯಲಾರಳು ಯೇಳಿ ಯೇಳಿ ಬ್ಯಾಗೆಂದು ನುಡಿಯುತ್ತ ಯಿಪರಿಯಿಂದ ಮಜ್ಜನವಂ ಮಾಡಿಶಿ ತೆಳುವಾದ ವಸ್ತ್ರಗಳಂದ ಬಾಗನೆ ಮೈವರಿಶಿ ಪೊಗೆಯುಶಕೆಯಂ ಸೈರಿಸಲಾರಳೆಂದು ಸಾಮ್ರಾಣಿಯ ಧೂಪದಿಂದ ವಾಸನೆ

ಮಾತ್ರ ಬರುವಂತೆ ಮಾಡಿ, ಆ ಸಮಯದೊಳ್ ಪ್ರಸ್ಥಾನವಂ ಚಿತ್ರವಾ ಮಾಗಿಸಿ ಹಂಸವನ್ನು ಮೀರಿ ಮಂದಗತಿಯಿಂದ ವಿಚಿತ್ರವಾದ ಸ್ನಿಗ್ಧವಾದ ಹೂವುಗಳ ರಾಶಿಗಳ ಮೇಲೆ ಹಾಸಿದ ಆ ಬಾಲೆಯರು ಕೆಲಬಲದಿ ಬೀಸುತ ಬಂದು ಘಳಿಗೆಯಾದ ಬಳಿಕ ಜಳಕವಾಡಿದ ಬಳಿಕೆ ಮೆಲ್ಲನೆ ಪೋಗಲಾಗ ವಿಶೇಷವಸ್ತ್ರಗಳಂ ನೆರಿಹಿಡಿದ ಉಡಿಗೆಗಳಂ, ಇರಿಸಿರುವ ತಟ್ಟೆಗಳಂ ಕೈಗಳೊಳ್ ಇಟ್ಟು ಕಾದಿರುವ ಕಾಂತೆಯರನ್ನೋಡಿ ವಾಸಂತಿ ಮೊದಲಾದ ಕೆಳದಿಯರು ತಮ್ಮೊಳಗೆ ತಾವು ನಮ್ಮ ಸೌಗಂಧಿಕಾದೇವಿಯ ಕೆನ್ನೆಗಳ ಬೆಳಕಿನೊಳ್ ಕುಂಕುಮ ಕೇಸರದಚ್ಚೀಪುಹಚ್ಚಿದರಿಂದಯೇನು ಹೆಚ್ಚು ಸ… ನಗುವೆಲ್ಲ ಬೆಳ್ದಿಂಗಳಂತಿರುವಲ್ಲಿ ಚಂದನಲೇಪದಿಂದೇನು ಚಂದವು ಇವಳ ಉಸುರುಗಳೇ ಘುಮ್ಮು ಘುಮಿಸುತ ಸುಗಂಧವಂ ಕೊಡುವಾಗ ಗಂಧವಡಿಯಿಂದೇನು ಕೆಲಸವು, ಪವಳದಂತಿರುವ ತುಟಿಯ ಕೆಂಪಿನ ಹೊಳಪು ನಟ್ಟನೆ ಕಾಣಿಸುವಾಗ ಬೈತಲೆಯೊಳ್ ಅಲಂಕರಿಸಿದ ಸಿಂದೂರವು ಎಲ್ಲಿ ಕಾಣುವುದು, ಪಲ್ವರಿಸೆಯ ಪ್ರಭೆಯು ಮುತ್ತುಗಳ ಸರಂಗಳಂತೆ ಜಲಿಸುವಾಗ ಹಾರಂಗಳಂ ಯಾವಪದಾರ್ಥವೆಂದು ಅಲಂಕಾರಂಗಳಂ ಮಾಡಬಹುದು, ಉಗುರುಗಳ ಕಾಂತಿಯೇ ಮೊಗ್ಗುಗಳಂತೆ ಕಾಣಿಸುವಾಗ ಪುಷ್ಪಂಗಳಿಂದ ಪ್ರಯೋಜನವಂ ಕಾಣೆವು, ಚಿಗುರಿನಂತೆಸೆವಯೆಳೆಪಾದಗಳ ಕಾಂತಿಯೊಳ್ ಅಳತಿಗೆಯ ರಸವು ಯಾವ ಮಹಾ ವಸ್ತುವೆಂದು ಹಚ್ಚಬೇಕು, ಮಿಂಚಿನಂತಿರುವ ಮೈಬಳ್ಳಿಯ ಹೊಳಪು ಕಂಚುಗಳಮುಚ್ಚುತ್ತ ಕವಿದು ಬರುವಾಗ ಮೇಲುಮುಸುಕಿನಿಂದ ಕೆಲಸವೇನಿರುವದು, ಇದರಮೇಲೆ ಅಲಂಕಾರವು ಮಾಡುವದೆಲ್ಲ ಲೋಕಾಚಾರವಂ ಬಿಡಬಾರದೆ ನಡೆಯಿಸಲ್ಲೋನುಗವೆಂದು ನುಡಿಯಲಾ ವಾಕ್ಯವಂ ಕೇಳಿ ಎಲ್ಲ ಸಖಿಯರಾ; ಲೋಕದವರಂತೆ ನೀವು ಏನೇನು ಅಲಂಕಾರಂಗಳಂ ಮಾಡುವಿರೋ ಎಂತುಟೋ ನಾ ಕಾಣೆನು, ಈಗ ವಿರಹಭಾರವು ಪೊರಲಾರದಿರುವ ನಮ್ಮ ಸೌಗಂಧಿಕಾ ದೇವಿಗೆ ಅಳತಿಗೆಯ ಹಚ್ಚಿಸಿದರೆ ಅಂಗಾಲುಗಳಿಗೆ ಅತಿಭಾರವಾಗಿ ತೋರುವುದು, ಪಗಡೆಹೂವುಗಳಿಂದ ಪೋಣಿಸಿದ ಪತ್ಯಾಣವಂ ನಡುವಿನೊಳ್ ಕಟ್ಟಿದರೆ ನಡೆಯುವದಕ್ಕೆ ತಡವಾಗಿ ಬಳಲಿ ಅಲ್ಲಲ್ಲಿ ನಿಲ್ಲುವ

ಳು, ಶೀತೋಪಚಾರವೆಂದು ಕಪ್ಪೂರದ ಗಂಧವಂ ಹಚ್ಚಿ ದರೆಲೆಗಳೇ ಉಸುರುಗಳಂ ಬಿಸಿಯಾಗಿ ಬಿಡುವಳು, ಒಂದೊಂದು ಸಮಯದಲ್ಲಿ ಲೀಲೆಯಿಂದ ಲೀಲಾಶುಕವಂ ಪಿಡಿದಿರ್ದರೆ ಕರಕಮಲವಾಗಲೇ ಕಂದಿದಂತೆ ಕಾಣುವದು ಕೆಳದಿಯರು ಹಸ್ತಲಾಘವ ಕೊಡದಿರ್ದರೆ ತಾನಾಗಿ ಪಲ್ಲವದಕ್ಕೆ ಬ್ಯಾಸರಂಗೊಂಡು ಬಿಸುಸುಯ್ಯುವಳು, ಇಂತಿರುವ ಕಾಂತೆಯು ಒಡವೆಗಳ ಭಾರವನ್ನೆಂತು ಸೈರಿಸುವಳೋ ಎಂದು ಹೇಳುತ್ತ, ಮತ್ತಂ ಸೌಗಂಧಿಕಾದೇವಿಯನ್ನೋಡಿ ಎಲ್ಲೆ ಅರಸಿಯೆ! ಇಂದು ನೀನು ಕೆಲವು ಭೂಷಣಂಗಳನ್ನಾದರೂ ಧರಿಸದೊಳ್ ಸುಗಮನಸ್ಸು ಮಾಡಬೇಕೆಂದು ಬಿನ್ನೈಸಲಿಂಗ ಮಾಲತಿಯು ಇನ್ನೇನು ಬ್ಯಾಗ ಸ್ವಯಂವರವಾಗುವದು, ಬ್ಯಾಸರ ಬಳಲಿಕೆ ವಿರಹತಾಪವೆಲ್ಲವೂ ಓಡಿಪೋಗಿ ತನಗೆ ತಾನೆ ನಿಲುಕುವುದೆಂದು ಹೇಳಲಾ ಮಾತಂ ಕೇಳಿ ಕೆಳದಿಯರೆಲ್ಲರೂ ನಗುತ್ತಿರಲು; ಚಿತ್ರಲೇಖೆಯು ಒಂದು ನಿಮಿಷ ಸುಮ್ಮನಿರಬಾರದೇ ಎಂದು ಕೋಪವಂ ಮಾಡಿದಂತೆ ನುಡಿದು ಸೌಗಂಧಿಕಾದೇವಿಗೆ ಸರಿಗೆಯ ನೇಗೆಯಂಗ್ಯದ ಹೂವ್ವಲತೆಯ ಬಿಳೀ ಶೀರೆಯನ್ನುಡಿಸಿ, ಮತ್ತೂ ಮುತ್ತುಗಳಿಂದ ತರತರದ ಸಣ್ಣ ಹೂವುಗಳಂತೆ ಹೊಲದಿರುವ ಕರಿಯ ಕುಪ್ಪಸವಂ ವಪ್ಪುವಂತೆ ತೊಡಿಸಿ, ಮುಂಗುರುಳುಗಳಲ್ಲಿ ಮುತ್ತುಗಳಂ ಕೆಂಪಿನ ಸಣ್ಣ ಪದಕಂಗಳಂ ಪೋಣಿಸಿ ಅವರ ಮೇಲೆ ಕೆಂಪು ವಜ್ರಗಳ ಸೂರ್ಯಹರೆ ಚಂದ್ರಬೊಟ್ಟುಗಳನ್ನಿಟ್ಟು, ಇರುಳುಗಳೆಲ್ಲ ಕೂಡಿ ಸೌಗಂಧಿಕಾದೇವಿಯ ಮುಂಗುರುಳುಗಳಾಗಿ ಸೂರ್ಯನಂ ವೈಯಾರದಿಂದ ಹಿಂಭಾಗದೊಳ್ ನೂಕಿದವೆಂಬಂತೆ ಪದ್ಮರಾಗಮಣಿಯ ರ್‍ಯಾಗಟೆಯ ಬಿಲ್ಲೆಯಂ ಬಿಗಿದು, ಈ ಕಾಂತೆಯ ಮೊಗದ ಕಾಂತಿಗೆ ಸೋತು ಬೆವರಿ ಚಂದ್ರನು ತನ್ನ ಪದಿನಾರು ಕಳೆಗಳಿಂದ ಬೇರೆ ಬೇರಾಗಿ ಕಾಯಬೇಕೆಂದು ಇವಳ ಬೆನ್ನಿನೋಳ್ಮರೆಬಿದ್ದನೆಂಬಂತೆ ವಜ್ರದ ಒಂದೊಂದು ಪಳುಕುಗಳ ಜಡೆಬಿಲ್ಲೆಗಳಂ ಸಾಲಾಗಿ ತಿರುಹಿ, ವಜ್ರಕುರುವಿಂದಗಳ ತರತರದ ಸಣ್ಣ ಸಣ್ಣ ಚಳತುಂಬುಗಳ ಸಾಲಿನಿಂದೊಪ್ಪಿದ ಮುತ್ತಿನವಾಲೆಗಳಂ ಕಿವಿಗಳೊಳಿಟ್ಟು, ಮನ್ಮಥನ ಕಡೆಯಿಂದ ಬಂದು ಕಿವಿಯೊಳ್ಮಾತನಾಡುವವೆಂಬಂತೆ ನವಿಲು ಗಿಣಿ ಬಾವುಲಿಗಳನ್ನಿಟ್ಟು, ಬಂದಿರುವ ರಾಯರುಗಳನೆಲ್ಲ

ಗೆಲ್ಲಬೇಕೆಂದು ಮದನನು ತನ್ನ ಬಿರುದಾದ ಧ್ವಜಪತಾಕೆಗಳ ನೆತ್ತಿದನೆಂಬಂತೆ ಮೀಸುಗಳ ಸಾಲಿನಂತಿರುವ ಮುತ್ತಿನ ತಳೆಯ ಸರಪಣಿಗಳಂ ಮುರುಗಳಿಗೆ ಶಿಕ್ಕಿಸಿ, ಕುಚದ್ವಯದೊಡಹುಟ್ಟಿದವು ಮುತ್ತುಗಳುಅಹುದೆಂಬು ಸೂಚಿಸುವಂತೆ ಕಂಠದೊಳ್ ಬರಿಯ ಮುತ್ತುಗಳ ಉತ್ತುಂಡವಂ ಅಲಂಕರಿಸಿ, ರೋಮರಾಜಿಯೆಂಬ ಲತೆಯು ಪುಷ್ಪಿಸಿರುವ ಗೊಂಚಲುಗಳೆಂಬಂತೆ ಮುತ್ತಿನ ಯೆಳುಸರಗಳಿಂದೊಪ್ಪಿದ ಪಚ್ಚೆಗಿಣಿಯು ತಾಳಿಪದಕವಂ ಕೊರಳಲ್ಲಿ ಶಿಂಗರಿಸಿ, ಮನಸ್ಸಿನೊಳಗಿರ್ದ ಮನ್ಮಥನು ಅರಗಿಣಿಯನ್ನೇರಿ ಬೈಲಿಗೆ ತೆರಳ ಬಂದನೆಂಬಂತ ತೋರಿಸುವ ಕುಚಭಾರದಿಂ ಬಳಲಿ, ನಿಲ್ಲಲಾರಳೆಂದು ಒಡನಡುವಿಗೆ ಬಲವಾಗಬೇಕೆಂದು ಕಟ್ಟಿದಂತೆ ಮಣಿಯು ಕಿರುಘಂಟೆಗಳ ಸಾಲಿನಿಂದೊಪ್ಪಿದ ವಡ್ಯಾಣವಂ ಬಿಗಿದು, ಎಳೆದಾವರೆಯ ದಂಟುಗಳಂತೆ ನುಣುಪೇರಿ ಬಿಳ್ಪುದೋರಿ ಕಾಮನಿಗೆ ಹೊಸಬಿರುದಾದ ಪುಷ್ಪಗದೆಗಳಂತಿರುವ ತೋಳುಗಳಿಗೆ ನವರತ್ನದ ಭಾಪುರಿಗಳಂಕಟ್ಟಿ, ಪಂಚಬಾಣನ ಕೈಲಿರುವ ವಜ್ರಮುಷ್ಟಿಗಳಂತೆ ಒಂದೊಂದು ಮಣಿಶಿಲೆಯು ಕಡೆದು ಮಾಡಿದ ವಂಕಿ ಬಳೆಗಳಂ ತೊಡಿಶಿ, ಮನ್ಮಥನು ತನ್ನಮುದ್ದಾನೆಗೆ ಮುದ್ದಾಗಿರಬೇಕೆಂದು ತೊಡಿಶಿದ ಬಿರುದು ಗಗ್ಗರಂಗಳಂತೆ ಚಿನ್ನ ರನ್ನಗಳ ಕಾಲು ಸರಪಾಡಗಗಳಂಪಾದಂಗಳೊಳಳವಡಿಶಿ, ನಿನ್ನ ಉಗುರುಗಳಂ ಪೋಲಲಾರೆವು ನಿಜವೆಂದು ಬಂದು ಕಾಲುಗಳ ಮೇಲೆ ಬಿದ್ದ ನಕ್ಷತ್ರಗಳ ಗುಂಪಿನಂತೆ ಮುತ್ತಿನ ಗೆಜ್ಜೆಗಳಿಂ ಕೂಡಿದ ವೀರಮುದ್ರಿಕೆ ಕಿರುಪಿಲ್ಲಿ ಬೊಬ್ಬಲಿಗಳನ್ನಿಟ್ಟು, ಮೈಬಣ್ಣದ ಮಿಂಚಿನೊಳ್ ಶಣಸ್ಯಾಡುವದಕ್ಕೆಬಂದು ಸುತ್ತಿರುವ ಬಳ್ಳಿಮಿಂಚಿನಂತೆ ತೋರುವ ಚಿನ್ನದ ಕಾಲುಂಗುರಗಳಂ ತೊಡಿಶಿ,ವಿರಹಿಜನಂಗಳನ್ನಿರಿದು ರಕ್ತದಿಂ ಕೂಡಿದ ಮನ್ಮಥನ ಕೈಲಿರ್ದ ಭಲ್ಯದ ಅಲಗಿನಂತೆ ಒಪ್ಪುವ ಕೆಂಪು ಪಳುಕಿನ ತಿಲಕವಂ ಫಣೆಯೊಳಿಟ್ಟು, ಮೊಗದ ಸೌಂದರ್ಯ ಸಮುದ್ರದೊಳ್ ಪುಟ್ಟಿರುವ ಕೌಸ್ತುಭವೋ ಇದೆಂಬಂತೆ ಪಿರಿಯ ಆಣಿಮುತ್ತಿನ ಮೂಗುತಿಯನ್ನಿಟ್ಟು, ಸುಳಿಗುರುಳುಗಳು ಕಪೋಲಂಗಳೊಳ್ಮಿರೆದೊಪ್ಪಿಳಿದು ಇರುವದಕ್ಕೆ ಸರಿಯಾಗಿ ಮಕರಿಕಾಪತ್ರಂಗಳಂ ಬರದು ಹಣೆವಷ್ಟು ಹಳ್ಳವಾದ ಗದ್ದದೊಳು ನಕ್ಕರೆ ಸಸು

ಹಳ್ಳಸೋರಿರುವ ಕೆನ್ನೆಯೊಳುಂ ಬಂದೊಂದು ಕಾಡಿಗೆಯು ದೃಷ್ಟಿಬೊ
ಟ್ಟನ್ನಿಟ್ಟು, ಮನ್ಮಥನ ಸಾಮ್ರಾಜ್ಯ ಲಕ್ಷ್ಮಿಯ ಮುದ್ರೆ ಉಂಗುರ ಇದೆಂ
ಬಂತೆ ಒಂದು ಪಚ್ಚೆಯ ಉಂಗುರವಂ ಅಂಗುಳಿಯೊಳಿಟ್ಟು ಇವುಗಳಭಾ
ರವಂ ಸಹಿಸಲಾರದೆ ಶಕೆಗೊಂಡಿರುವಳೆಂದು ಮಲ್ಲಿಗೆಯಬೀಸಣಿಗೆ ಯಿಂದ
ಬೀಸುತ್ತಲಿರುವಾಗಲೆಪಚ್ಚಕರ್ಪೂರದ ಗಂಧವಂ ಕುಚಕಲಶಂಗಳಿಗೆ ಹಚ್ಚಿ,
ಕುಪ್ಪಸದ ಕೊನೆಗಳಂ ಗಂಟಿಟ್ಟು ವೀಳ್ಯವನ್ನಿಪ್ಪಿತ್ತಿ, ಕಿವಿಗಳಂ ಸೋಂಕಿ
ರುವ ಕಣ್ಣುಗಳಿಗೆ ಕಪ್ಪಿನ ರೇಖೆಯಂ ಬಲ್ಲಿತಿದ್ದುವದೆಂದು ನುಡಿ
ಯಲಾಗ ಮಾಲತಿಯು ನಮ್ಮ ಅರಸಿಗೆ ಯಾವ ಅಲಂಕಾರವು ಮಾಡ
ಕೂಡದು ಇದೇನು ಹುಚ್ಚುಹುಚ್ಚಪಳಂದು ನೀನಳಿಸಲು ಆ ಮಾ
ತಂ ಕೇಳಿ, ಕೆಳದಿಯರೆಲ್ಲರು ಕೈ ನೆಪಲ್ಲುಗಳು ಕಾಣುವಂತೆ ನಗುತ್ತಿರಲು,
ವಾಸಂತಿಯು ಬೇಗಬೇಗನೆ ಅಲಂಕಾರವಂ ಮಾಡಿ ಮುತ್ತು ಸರಿಗೆಕರ
ಗುಗಳಂಪೊಪ್ಪಿ ಸಂಜೆಗೆಂಪಿನಂತೆ ರಂಗಾಗಿ ಹೊಳೆವಾಪ ಚಂದ್ರಗಾವಿಯ
ಮೇಲುಮುಸುಕಂ ಹಿಂಗರಿಸಿ, ನಿನಿಗೆ ನೀನೇ ಸರಿಯಾದಕಾಂತೆ ನೋಡೆಂ
ದು ತೋರಿಸುವಂತೆ ನಿಲುಗನ್ನಡಿಯ ತಂದು ನಿಲ್ಲಿಸಲು, ಸೌಗಂಧಿಕಾದೇ
ವಿಯು ಅದರೊಳ್ ತನ್ನ ಅಲಂಕಾರವನ್ನು ನೋಡಿ ನಸುನಕ್ಕು ನಾಚಿಕೆಗೊಂ
ಡು ಕನ್ನಡಿಯಿಂ ದುರಳಿನೋಡದೆ ತಲೆವಾಗಿ ಪುಳಕಂಗೊಂಡಿರಲಾ ಸೌ
ಗಂಧಿಕಾದೇವಿಯಂ ಕಂಡು ನಾರಿಯರೆಲ್ಲ ತಮ್ಮ ತಮ್ಮ ಮನಸ್ಸುಗ
ಳೊಳ್ ತಾವೆಲ್ಲ ಗಂಡಸರಾಗಿ ಇವಳನ್ನು ನೋಡಿದರೆ ಯಂತಿರುವದೋ
ಯೆಂದು ದಿನದಿನವು ನೋಡುತ್ತಿದ್ದವರಾದರೂ ವಿಸ್ಮಯಂಬಟ್ಟು ಯಾವ
ಅರಸಿಗೆ ದೇಶಿತಿರುಗಿರುವದೋಯೆಂದು ನುಡಿಯುತ ಅಲ್ಲಿಂದ ಮೆಲ್ಲನೆ ಹಸ
ಲಾಘವಂಗೊಟ್ಟು, ಸುಲೋಚನಾದೇವಿಯು ಅನಂಗಲೇಖೆಯು ಕೂಡ
ಇರುವ ಹಜಾರಕ್ಕೆ ಕರತಂದು ಅವರಪಾದಂಗಳಿಗೆ ನಮಸ್ಕಾರವಂ ಮಾಡಿ
ಸಲಾಗ, ಸುಲೋಚನಾದೇವಿಯು ನಗುಗಳಯುತ್ತ, ಮೊಗವನ್ನು ನೋಡಿ
ಮನಸ್ಸಿನೊಳ್ ವ್ಯಸನವು, ಪ್ರೀತಿ ಸಂತೋಷವಂತಾಳಿ, ಆನಂದ
ಭಾಷ್ಪಗಳಂತೆ ತೋರಿರುವ ಕಂಬನಿಗಳಂ ಪೊಪ್ಪಿ, ಮಾತನಾಡುವದಕ್ಕೆ
ಕೊರಳಿಲ್ಲದೆ ಮೆಲ್ಲನೆ ಚಿಂತೆಯಿಂದ ಸುಮಂಗಲಿಯಾಗಿ ನೂರಾರುಕಾ

ಲ ಸುಖದಿಂದಿರೆಂದು ಹರಸಿ ಅಪ್ಪಿಕೊಂಡು ಮೈದಡವಿ ಶುಭಮುಹೂರ್ತ ಬರುವ ಸಮಯವಾಯಿತು ಸ್ವಯಂವರಮಂಟಪಕ್ಕೆ ಬ್ಯಾಗ ಸೌಗಂಧಿಕಾ ದೇವಿಯಂ ಕರೆದುಕೊಂಡು ಹೋಗಿಬನ್ನಿರೆಂದು ಚಿತ್ರಲೇಖೆ ಮೊದಲಾದವರೊಡನೆ ಹೇಳಲುಬಳಿಕ, ಸೌಗಂಧಿಕಾದೇವಿಯು ಅಲ್ಲಿಂದ ಯದುರಾಗಿ ಕೆಂಪುಮಣಿಯ ಝಲ್ಲರಿಯಿಂದೊಪ್ಪಿದ, ಪಚ್ಚೆಕಲ್ಲುಗಳಬಿಗಿದ ಪನ್ನಂಗದಿಂ ಮತ್ತು ಮುತ್ತುಗಳ ಸಾಲುಕುಚ್ಚುಗಳಿಂ, ಪದ್ಮರಾಗದ ಸಂಣಕಲಶಗಳಿಂ, ಗಿಣಿ ಹಂಸೆ ಸಾಲುಗಳಂತೆ ಕೆತ್ತಿರುವ ಪ್ರಾಚರತ್ನಗಳಿಂ, ಮೃದುವಾದ ಉಲಾರದಿಂಬುಗಳಿಂದೊಪ್ಪಿ ಕಂದರ್ಪನೇರುವ ಅಂದಳವಿದೆ ಯೆಂಬಂತೆ ಕಾಣಿಸುವ ಪವಳದ ಪಲ್ಲಕ್ಕಿಯೊಳ್ ಮೆಲ್ಲನೆ ಕುಳಿತು ಸಹಸ್ರದಳ ಕಮಲದೊಳ್ಕುಳಿತಿರುವ ಮಹಾಲಕ್ಷ್ಮಿಯೋಯೆಂಬಂತೆ, ಮತ್ತೂ ಮೇಘಪಂಕ್ತಿಯಂ ಪಾಸರಿಸಿಬರುವ ಚಂದ್ರಕಲೆಯಂತೆ ತೋರಿ, ಕಪೋತಶಾಲೆಯಮಾರ್ಗದಿಂದ ಸಭಾಮಂಟಪಕ್ಕೆ ಬರುವಾಗ, ಹಿಂದೆ ಹೋಡ್ಯೋಡಿಬಂದು ದಣಿದು ಮಂದಗತಿಯಿಂದ ಅಲ್ಲಲ್ಲಿಯೇ ನಿಂತು ಕ್ರೇಂಕಾರಂಗಳಂಮಾಡುವ ಮರಿಹಂಸೆಗಳ ಮಧುರಸ್ವರಮಂಕೇಳಿ ಕೆಳದಿಯರೊಳ್ ಪೋರ್ಸ್ವಳನ್ನೋಡಿ ಯುಬ್ಬೈ ನೀನು ಆಹಂಸೆಗಳಿಗೆ ನನ್ನ ಭಾವಚಿತ್ರವಂ ತೋರಿ ಆಡಿಸುತ್ತಲಿರುಯೆಂದುಹೇಳಿ, ಅಲ್ಲಿ ಕುಣಿಯುತ ಕೂಗ್ಯಾಡುವ ನವಿಲುಗಳಂ ಕಂಡು ಕೂಗದಿರು ನಾನು ಬ್ಯಾಗ ಬರುವೆನೆಂದುಸುರುತ ಅಲ್ಲಿಂದ ಸಾಲಾಗಿ ಕಟ್ಟಿರುವ ಪಂಜರಂಗಳೊಳ್ ಪಂಚವರ್ಣದ ಗಿಣಿಗಳಾಡುವ ನುಡಿಗಳಂ ಕೇಳಿ ನಿಂತು ಫಲಗಳಂ ತರಿಸಿ ಕೊಟ್ಟು, ಕೆಲವುಗಿಣಿಗಳಂ ಮುದ್ದಿಟ್ಟು, ಅಲ್ಲಿಂದ ಲೀಲಾಶುಕವಿರುವ ಮಂದಿರದಮುಂದೆ ಬಂದು ಅಂದಳದಿಂದಿಳಿದು ಆ ಶುಕಕ್ಕೆ ಅಂಜಲಿಯಂ ಮಾಡಿ ಅದರಿಂದೊಪ್ಪಗೊತ್ತಿ ಮರಳಿ ಅಂದಳದೊಳ್ಕುಳಿತು ಬರುವಸಮಯದಲ್ಲಿ ಕೆಲವರು ಬಾಲೆಯರು ಭಗ್ನಿಯನ್ನುವರು, ಕೆಲವರು ಅಂಗನೆಯರುಲಪಧಾನನೆಂದು ನುಡಿಯುವರು, ಕೆಲರು ಜವ್ವನದ ಜಗ್ಗುಗಾತ್ರಿಯರುಜತ್ವನನೆಂದು ಕೂಗುವರು, ಕೆಲವರು ಮಾನಿನಿಯರು ಮಾರ್ಗಂಗಳಂ ಬಿಡಿಸುವರು, ಕೆಲವರ ತರುಣಿಯರು ತೆರೆಗಳಂ ಸವರಿಸುವರು ಕೆಲವರು

ಚಿತ್ತ್ರಿಸುರು ಚಿತ್ತ್ರಗಳಂ ಪಿಡಿದು ಪರಾಕೆಂದು ಕೂಗುವರು, ಇವ್ರುವೊ ಪಲಾಪ್ದರಿಂದ ಕಲಕಲಧ್ವನಿಪ್ರುಂಟಾಗಲು; ಆ ಸಮಯದೊಳ್ ಸಭಾಮಂಟಪದಲ್ಲಿ ವೀಣೆಯನ್ನು ಡಿಸುವವನಾಲಿಸುತ, ಶೃಂಗಾರಕಾರ್ಯಗಳಂ ಕೇಳುತ, ಪಗಡೆಯನ್ನಾಡುತ, ಚದರಂಗವನ್ನೋಡುತ್ತ, ಪರಿಹಾಸವಂ ಕೇಳುತ್ತ, ಅಭಿನಯದ ಹಾವಭಾವಗಳನ್ನೀಕ್ಷಿಸುತ ಇಂತು, ವಿನೋದಗಳ ದರ್ಶನದೊಳ್ಳಾಸಕ್ತರಾಗಿರುವ ರಾಜಕುಮಾರರೆಲ್ಲರು ಆಟಗಳನೋಟಗಳಂಬಿಟ್ಟು, ಏಕಕಾಲದೊಳ್ ನಿಮೇಷರಹಿತಂಗಳಾದ ಕಣ್ಗಳಿಂದ ಅಮರರಂತೆ ತೋರಿ, ರಾಜಾಂತಃಪುರದ ಬಾಗಿಲ ಮುಂಭಾಗವನ್ನೇ ನೋಡುತ, ಅಡ್ಡವಾಗಿತಿರುಗುವರಮೇಲೆಲ್ಲ ಅಸೂಯೆಯಂ ಮಾಡುತ, ಮಾತುಗಳನಾಡುವರಮೇಲೆ ಮಾತ್ಸರ್ಯವಂಗೊಳ್ಳುತ, ಬಿರುದ ವಾದ್ಯಧ್ವನಿಗಳಿಗೆ ಬ್ಯಾಸರಂಬಡುತ, ಸಭಾಮಂಟಪದ ಒಳಗಿನ ಲೋವೆಗಳಲ್ಲಿರುವ ನವಿಲು, ಕೋಗಿಲೆಗಳ ತ್ಯಾಗ್ಯಟಕ್ಕೆ ಕೋಪವಂ ಮಾಡುತ, ಹಿಂಭಾಗದೊಳ್ನಿಂತು ಗುಸಗುಟ್ಟುವ ಸೇವಕಜನಂಗಳಮೇಲೆ ಸಿಟ್ಟುಗೊಂಡು ಕಣ್ಣುಗಳಂ ಕೆಂಪ್ರುಮಾಡುತ, ಯಿಂತಲ್ಲದೆ ಸದ್ದುಮಾಡದಿರೆಂದು ಕೂಗುವ ಕಂಚುಕಿಗಳ ಆರ್ಭಟವಿಂ ಅಸೂಯೆಯಂಗೊಂಡು, ಮುಖಂಗಳೊಳ್ ವಿಕಾರಂಗಳಂತಾಳುತ, ವಂದಿಗಳು ಪರಿಪರಿಯಾಗಿ ಪೊಗಳುವ ಬಿರುದುಪದ್ಯಗಳಂ ಬಾಡವೆಂದೆಸಿಸಿ, ಮುಖವೀಣಾವೇಣುಮೃದಂಗವಾದ್ಯಗಳು ಕರ್ಣಕಠೋರಂಗಳಾಗಿ, ಕುಣಿಯುವ ವಾರನಾರಿಯರ ಗೆಜ್ಜೆಗಳಸದ್ದುಗಳು ಕೂಡ ಕಿವಿಗಳಿಗೆ ಸಿಡಿಲುಗಳಂತೆ ತೋರಿ ಯಾವೆಯಿಡದೆ, ಯಿಂತುಬರುವಳೋ ಹ್ಯಾಗಿರುವಳೋ, ಯಾವಾಗಕಾಣುವೆವೋ ಯೆಂದು ಸಂಭ್ರಮಂಗೊಂಡು ನೋಡುತಿರಲು, ಸೌಗಂಧಿಕಾದೇವಿಯು ಈ ಮಂಟಪಕ್ಕೆ ಒಂದಬಳಿಕ ನಮ್ಮ ಮನಸ್ಸುಗಳು ಯೇನೇನು ಚಂದವಾಗುವವೊ, ಈಗಲೇ ಸವರಿಸಿಕೊಂಡಿರಬೇಕೆಂದು ಕೆಲವರು ರಾಜಕುಮಾರರು ನೆರಿಪಿಡಿದರುಮಾಲೆಗಳಂ ಕೈಗಳಿಂ ಸುಮ್ಮನದಿಂ ಪಿಡಿದು ಸಮಾನರಲ್ಲಿ ಭಾಸಮಾನರಾಗಿರುವರು, ಕೆಲವರು ಚೆಲುವಾದ ಬಿಳಿಯ ಕರವಸ್ತ್ರಗಳಿಂದ ಮೊಗದ ಕೆರುಬೆಮರ್ಗಳಂ, ಜನರ ತಿರುಗಾಟದಿಂದೆ

ದ್ದ ಪಚ್ಚೆಕಪ್ಪುರದ ಧೂಳಿಯಿಂ ವರಶಿ, ಕಂಜು ಮೊಗಂಗಳಂ ಕಳೆಗೊಳಿಸುವದು, ಕೆಲವರು ಕುಂಪಣಿವರೇಕಿನಿಂ ಬೆರದ ಅರದವೀಳ್ಯವಂ ದವಡೆಗಳುಬ್ಬುವಂತೆ ಅಳವಡಿಸಿ ತುಟಿಗಳಿಗೆ ಬ್ಯಾಗ ಕರೆಯೇರುವಂತೆ ಸವಿಯುತಲಿರುವರು, ಕೆಲವರು ಪಾರೆಶಿಖಿಯೊಳ್ ಶಿಕ್ಕಿಶಿರುವ ಶೇಖರವ ಮುತ್ತುಗಳ ಬಿತ್ತರದ ಕುಚ್ಚುಗಳ ಸರಂಗಳೊಳ್ ವಂದುವಾಸರಿಶಿರುವದಂ ಸವರಿಸುತ್ತ, ಹಿಂದೆನಿಂತಿರುವ ಸೇವಕರು ಪಿಡಿದಿರುವ ಕನ್ನಡಿಗಳಂ ತಿರಿತಿರಿಗಿ ನೋಡುತ, ಪುಬ್ಬುಗಳನಲ್ಲಾಡಿಸುತ, ಪಲ್ವದಶೆಯು ಅಂದವಂನೋಡಿ ಅಹುದೆಂದು ತಲೆದೂಗುವರು. ಕೆಲವರು ಸುಕುಮಾರರು ಬ್ಯಾಶಿಗೆಯು ಕೆಳೆಯುಂದು ಬಂಣಬಂಣದ ನಿಲ್ವಂಗಿಗಳ ಕಶೆಗಳಂ ಕಳದು ಚೆನ್ನದಂತಿರುವ ವೈಬಂಣಗಳು ಕಾಣಿಸುವಂತೆಮಾಡಿ, ಸಂಣಮಲ್ಲಿಗೆಯು ಬೀಸಣಿಗೆಯ ಯುಳೆಪಾಳಿಗೆ ಕಣ್ಣುಗಳಕೊನೆಮುಚ್ಚಿ ತಂಣಗೆ ನೋಡುತ್ತ, ಹೆಣ್ಣುಗಳಂ ಮೋಹಮೊಳ್ಮುಳಿಗಿಸುವ ಬಿಂನಾಣದಿಂ ಜೊಪ್ಪಿ ಮಾರನಂತಿರುವರು, ಕೆಲಬರು ಪಿರಿದಾದ ದಿಂಬುಗಳಮೇಲೆ ಬಾಹುಭುಜವನ್ನಿಟ್ಟು ಮುಕ್ಕಾಲು ಮೊಗಕಾಣುವಂತೆ ನೋಡುತ್ತ ತಮ್ಮ ಕರದೊಳ್ ಕಪ್ಪೋಲಂಗಳನ್ನಿಟ್ಟು, ಆ ಕಾಂತೆಯೊಳ್ ಮನಸ್ಸಿನಿಂದ ಕಳವಳಂಗೊಂಡು ಕಂಬಗಳಮುಂದಿರುವ ಬೊಂಬೆಗಳಂತೆ ಚಲಿಸದೆ ಕುಳಿತಿರುವರು; ಕೆಲಬರು ಭೂವಲ್ಲಭರು ಕೈಲಿರ್ದ ಮಲ್ಲಿಗೆಯ ಗೊಂಡೆಯೊಳ್ ಗಲ್ಲವನ್ನಿಟ್ಟು ಬಿಳಿಯ ಶಲ್ಯದಸರಿಗೆ ಕರಗುಗಳ ನೆರಿಗಳುಹಾರುವಂತೆ ಕಾಲುಗುರಿನಿಂ ನೆಲವಂ ಕೆರೆಯುತ್ತ ಯುವೆಯಿಡದೆ ಒಂದೇಕಡೆಯೊಳ್ ಲಕ್ಷ್ಯವನ್ನಿಟ್ಟು, ನೋಡುತ ಪಲ್ಲಳಂ ತುಟಿಯುಂಸವಿಯುತ ಮೊದಲುಕೊನೆಯಿಲ್ಲದ ಆಲೋಚನೆಯಲ್ಲಿ ಮುಳುಗುತಲಿರುವರು. ಇದುವಲ್ಲದೆ ಕೆಲವರು ಪಲ್ಲವಂಗಳಂತಿರುವ ಕೈಬೆರಳುಗಳಿಂದ ಮೆಲ್ಲಮೆಲ್ಲನೆ ಸಂಣಯುಳೇಮಿಾಶೆಯನ್ನತ್ತಿ ಕೋರೆಯುಂತಿದ್ದಿಸೌರುತ್ತ, ಉಂಗುರಂಗಳ ಜೆಳಕಿನಿಂ ಹೊದ್ದಿರುವದುಕೂಲಂಗಳಂ ನಿಮಿಷಕ್ಕೆ ವಂದುರಂಗುಗೊಳಿಸುತ, ಪುಬ್ಬುಗಳನೆತ್ತರಿಶಿ ನೋಡುತ್ತ ಕಾಮುನಿಗೆ ಸಾಟಿಯಾಗಿರುವರು; ಕೆಲವರು ಲಾಟ ಮರಾಟಾದಿದೇಶಗಳ ನೀಟುಗಾರರು ತಾವರೆಯ ಬಳ್ಳಿಯಿಂದ

ಕೂಡಿ ಪಿಡಿದು ಸರ್ರೆಂದು ತಿರಿಗಿಸುತ್ತ ಒಂದೊಂದುಸಾರಿ ಕಣ್ಣುಗಳಿಗೆ ಒತ್ತುತ್ತ, ಒಮ್ಮೆ ಆಘ್ರಾಣಿಸುವಾಗ ಬೊಗಸೆಗಣ್ಣುರೆಪ್ಪೆಗಳ ಮೊನೆಗಳಂಮುಚ್ಚಿ, ಹಾಯಿಗೊಳುವನೆವದಿಂದ ಮೊದಲು ಭಾವಚಿತ್ರದೊಳ್ಕಂಡ ಸೌಗಂಧಿಕಾದೇವಿಯ ರೂಪವಂ ಮನದೊಳ್ ಭಾವಿಸುತಲಿರುವರು, ಕೆಲಬರು ಮೊಳಕೈಗಳಂ ಮಂಚದ ಹಿಂಭಾಗವಂಊರಿ, ಕೊರಳೊಳಿರ್ದ ಹಾರಂಗಳು ಜಡೆಬೀಳುವಂತೆ ಮಾಡಿ ಮೊಗವಂ ತಿರಿಗಿ ಹಿಂದೆ ನಿಂತಿರುವ ನರ್ಮಸಚಿವರೊಡನೆ ನಸುನಗುತ್ತ ಮೆಲ್ಲನೆ ಮಾತನಾಡುವರು, ಕೆಲವರು ಸರಸರಾದ ಅರಸುಮಕ್ಕಳು ಆಲಿಂಗನದ ಅಭ್ಯಾಸವಂ ಗೈವರಂತೆ ಅಷ್ಟದಿಂಬಿನೊಳ್ ಯುವತಿಯನ್ನಿಟ್ಟು ಅಪ್ಪಿಕೊಂಡು ಅಧರಚುಂಬನವಂ ಸಾಧನಗೈವರಂತೆ, ಕಪ್ಪುರದಗುಳಿಗೆಯಂ ಕೊನೆತುಟಿಗಳಿಂದ ಸವಿಯುತ್ತ ಕುಚಕಲಶಂಗಳಂಪಿಡಿದು ನಖಕ್ಷತಂಗಳು ಕಲಿಯುವರಂತೆ ನಿಂಬೆಹಣ್ಣುಗಳಂಪಿಡಿದು ಉಗುರುಗಳಿಂದ ಚಿವುಟುತ್ತ, ಸಂಭೋಗಶೃಂಗಾರರಸವಂತೋರಿಸುತಲಿರುವರು; ಇದುವಲ್ಲದೆ ಕೆಲವರು ವನಿತೆಯರು ವಶವಾಗುವಂತೆ ಮಾಡಿರುವ ಮಂತ್ರಿಸಿದ ವಿಭೂತಿಯಂ ಕಟ್ಟುಕಾವುಗಳಂ, ಒಂದೊಂದುನೆವದಿಂದ ಮೊಗವಂತಿರಿಗಿಸಿ, ಹಣೆಗೆ ಹಚ್ಚಿಕೊಳ್ಳುವರು; ಕೆಲವರು ಬಾಹುಗಳಲ್ಲಿ ಕಟ್ಟಿರುವ ಪಂಚರತ್ನಗಳ ಬಂದಿಯೊಳಿರುವ ಯಂತ್ರದ ತಾಯಿತಿಗಳಂ ಮುಂದುಗಡೆಗೆ ತಿರುಗಿಸುವರು; ಕೆಲವರು ಮದನಮಂತ್ರವಂ ಮೆಲ್ಲನೆ ಬಾಯೊಳಗೆ ನೂರೆಂಟುಸಾರಿ ಜಪಿಸುತ್ತಿರುವರು. ಕೆಲವರು ತಾವುತಾವು ಪೂಜೆಯಂಗೈಯುತ್ತಿರುವ ಯಿಷ್ಟದೇವತೆಗಳಿಗೆ ಮನಸ್ಸಿನೊಳಗೆ ವಿನಾಸಲುಗಳಂಕಟ್ಟಿ, ಹರಕೆಗಳಮಾಡಿ ಒಳಒಳಗೆ ಕೈಮುಗಿದು ಧ್ಯಾನವಂಗೈವರು; ಯಿಂತುಮಲ್ಲದೆ ಕೆಲವರು ನಾಡಿನಾಡಿನ ಅರಸುಗಳು ಪಾದಂಗಳೊಳ್ ಗಂಡಪೆಂಡ್ಯವಂಧರಿಸಿ ಬಾಗಿಲೊಳ್ ಭೇರುಂಡಧ್ವಜದಂಡಮಂ ನಿಲ್ಲಿಸಿ, ಭೂಮಿಗೆ ಅಖಂಡಲನೆನಿಸಿ, ಅಖಂಡಪ್ರತಾಪದಿಂದ ಮಾರ್ತಾಂಡನಂತೆ ಮೆರೆಯುತ್ತ ಮಂಜಾದ ಸೌತರ್ಯವಂಗೊಂಡಿರುವ ಕರ್ನಾಟ ಮಂಡಲೇಶ್ವರನಂ ಕಂಡಾಗಲೆ ನಮ್ಮ ನಮ್ಮ ಗಂಡಸುತನಂಗಳನೆಲ್ಲ ನಾವೇ ಕಂಡುಕೊಂಡಿರುವೆವು; ಈ ರಾ

ಜನಮಂಡಲಿಯೊಳ್ ಈಗ ನಾವುರಾಯರೆಂದು ಕೇಳುತಿರುವೆವು, ನಮಗೆ ಯಾಕೆ ಸ್ವಯಂವರದ ದುರಾಶೆಯು, ನೋಟವೇ ಫಲವೆಂದು ನಾನಾವಿನೋದಂಗಳನ್ನೋಡುತ್ತ ಮಾತನಾಡುತ್ತಲಿರುವರು, ಈಪರಿಯಿಂದ ರಾಜರುಗಳೆಲ್ಲ ತೇಜದಿಂದೊಪ್ಪಿ ಶೃಂಗಾರಚೇಷ್ಟೆಗಳಿಂದ ವಿರಾಜಿಸುತ್ತ ಕಳಿಂಗರಾಜಪುತ್ರಿಯು ಸಭೆಗೆ ಬರುವ ಸೊಗಸಿನ ಹೊರ್ಪರಿಯನ್ನೋಡುವ ಸಂಭ್ರಮಂಗೊಂಡು, ನಿಮಿಷವು ಯುಗದಂತೆ ಬ್ಯಾಸರಂಗೊಳುತ್ತ, ಮಮತೆಯಿಂ, ಮರುಳಿನಿಂ, ತವಕದಿಂ, ಸೊಗಸಿನಿಂ, ತ್ವರೆಯಿಂ, ಉತ್ಸಾಹದಿಂಕೂಡಿ ಮನ್ಮಥನ ಬಾಣಂಗಳಿಗೆ ತೆರೆಮರೆಯಾಗಿ, ಗುರಿಯಾಗಿರಲಾಗ ಯಿದಿರಾಗಿ ರಾಜಾಂತಃಪುರದ ಬಾಗಿಲೊಳ್ ಮೊದಲು ಉಬ್ಬಿಬರುವ ಕಡಲಿನ ತೆರೆಗಳ ಝುಳಝುಳಧ್ವನಿಗಳಂ ನನುಕಾರಂಗೈವ ನೂರಾರುತರದ ನೂಪುರಧ್ವನಿಗಳಿಂ, ಕೇಳುವರಕಿವಿಗಳಿಗೆ ಯಿಂಪುದೊಂಪುಗಳುದೋರಿಬರುವ ಸಖೀಜನಂಗಳು ವೋರೋರ್ವರು ಮಾತುಗಳನ್ನಾಡುವಾಗ ಯಿಲ್ಲಿ, ವಾಸಂತಿಯೆ ವಾಸನೆಯುಳ್ಳಗಂಧದಿಂ, ಹರಿದ್ರಾಕುಂಕುಮಗಳಿಂ, ಸುವಾಸಿನಿಯರಿಗೆ ಅಲಂಕಾರಂಮಾಡು; ಯಿಲ್ಲೈ, ಮಾಲತಿಯೆ, ಮಾಲತಿಪುಷ್ಪಮಾಲೆಯಂ ಮಾನಿನಿಯ ಜಡೆಯೊಳ್ ಸವರಿಸು, ಯಿಲ್ಲೈ ಚಿತ್ರಲೇಖೆಯೆ ಯೀವಿಚಿತ್ರಮಂನೋಡು; ಯಿಲ್ಲಿಲ್ಲಿನೋಡಿದರೂ ಪಲ್ಲಕ್ಕಿಯನ್ನೇರಿರುವ ಪಲ್ಲವಾಧರಿಯೆ ಕಾಣುವಳು, ಯಿಲ್ಲೈ ಸರಸಿಯೆ ಅರಸಿಯಾದ ಸೌಗಂಧಿಕಾದೇವಿಗೆ ವ್ಯಾಳೆಯುತಳದು ವೀಳ್ಯವಂ ಮಪ್ಪಿಸು, ಯಿಲ್ಲೈ ನಾರಿಯೆ ದೂರವಾಗಿನಿಂತು ತಾರಿಗಳಂಬೀಸು, ಯಿಲ್ಲೈ ಸುಮಿತ್ರೆಯೇ ರಾಜಪುತ್ರಿಗೆ ದೃಷ್ಟಿತಗೆಯುವ ವಸ್ತುಗಳಂ ಪಿಡಿದು ನಡೆ, ಯಿಲ್ಲೈ ಕಳದಿಯೇ ಪರಿಮಳಯುಕ್ತಮಾದ ವಿಮಲಜಲಮಂ ತುಂಬಿರುವ ಚಂದ್ರಕಾಂತಶಿಲೆಯ ಚಂಬುಗಳಬಾಯಿಕಟ್ಟಿ ಪಿಡಿದು ಸಂಗಡಲೇ ಬರುತ್ತಿರೂ, ಯಿಲ್ಲೈಸುಂದರಿಯರಾ? ನೀವು ಮಡತ್ತಿಯ ಅಂದಳದ ಯಿಡಬಲದೊಳಂ ಕಾಳಂಜಿಗಳಪಿಡಿದು ನಡೆಯಿರಿ, ಯಿಲ್ಲೈ ಬಾಲೆಯರ ನೀವು ಯೇಟ್ಟುವಡೆಗಳಂ ಪಿಡಿದು ಕಸ್ತೂರಿಯ ಧೂಳುಗಳು ಯೇಳವಂತೆ ಬೀಸುತ್ತಾ ತೆರಳಿ, ಯಿಲ್ಲೈ ಪಲ್ಲವಪಾಣಿಯೆ? ಅಲ್ಲಲ್ಲಿ ಗವಾಕ್ಷಂಗಳ

ಜಾಲಂಧರದಿಂದಬಂದ ಬಿಸಲು ಸೌಗಂಧಿಕಾದೇವಿಯ ಕಣ್ಗಳೆಂಬ ಕನ್ನೈ
ದಿಲಂ ಸೋಂಕದಂತ ಮರೆಯಾಗಿ ಮಲ್ಲಿಗೆಯ ಝಾಲರಿಗಳ ಬಿಳಿಯ ಕೊ
ಡೆಯ ಪಿಡಿದು ಮೆಲ್ಲನೆ ನೋಡಿಕೊಂಡುನಡೆ; ಎಲೈ ಕನ್ಯೆಯರಾ !
ನೀವು ಚಿನ್ನದ ಛತ್ರಗಳಂಪಿಡಿದು ಹತ್ತುತ್ತರದೊಳ್ ಸಾಲ್ದೀರಿಯುತ್ತ
ತ್ತಲುಂನೋಡುತ್ತ, ಅಲ್ಲಲ್ಲಿ ಅಡ್ಡಬೀಳುತ್ತಿರುವ ಬಿತ್ತರಿಗರಂ ವ
ಡತಿಗೆ ತಿಳಿಯುವಂತೆ ಕೈಗಳನ್ನೆತ್ತಿ ಯಚ್ಚರಪರಾಕೆಂದು ನುಡಿಯುತ
ನಡೆಯಿರೀ- ಎಲೈ; ಮಂದಹಾಸೆಯರಾ ನೀವು ತೆರೆಗಳಂ ಸವರಿಸಿ, ಅ
ಲ್ಲಿ ಒಂದು ಕುಂದಣದಪೀಠವನ್ನಿರಿಸಿ, ಗಂಧಪುಷ್ಪತಾಂಬೂಲಫಲಗ
ಳಂ ತುಂಬಿದ ತಟ್ಟೆಗಳಂ ಪನ್ನೀರಿನ ಕುಚಾಯಿಗಳನ್ನಿಟ್ಟು, ತೆರೆಯ
ಜಾಲಂಧರದ ಮುಸುಕಿನ ಕಸೆಗಳಂ ಬಿಚ್ಚಿ ಯಚ್ಚರದಲ್ಲಿ ಕಾಪಿರಿ, ಮುಂ
ದೆಮುಂಗೆ ನಡೆಯಿರೀ ಯೆಂದು ನುಡಿಯುವ ಚೆಡಗುಗಾತಿಯರ ಮಾತುಗ
ಳು ಏಕಸಮಾಗಿ ಫಲಿಸಿರುವ ಮಾವಿನಮರಂಗಳ ಗುಂಪುಗಳಲ್ಲಿ ಕುಳಿತು
ತೂಗುವ ಗಿಣಿ, ಕೋಗಿಲೆಗಳ ಮಧುರಸ್ವರಂಗಳಂತೆ ಕಿವಿಗಳೊಳ್ ಅ
ಮೃತರಸವಂ ಹಿಂಡಿದಂತೆ, ಗಂಧರ್ವವೇದದ ಪದಕ್ರಮವರ್ಣಂಗಳಂತೆ,
ನವರಾಗಂಗಳ ಅಕ್ಷರತಾನಂಗಳಂತೆ, ವೀಣೆ, ಸಾರಂಗಿ ಮೊದಲಾದ ವಾ
ದ್ಯಗಳರಾದನಕ್ಕೆ ಶ್ರುತಿಗೊಡುವಂತೆ, ಕಿನ್ನರರ ಕನ್ನೆಯರು ಚನ್ನಾಗಿಪಾ
ಡುವ ಪದಂಗಳಿಗೆ ಪಲ್ಲವಿಗಳಂತೆ, ಮನ್ಮಥನ ಯೋಗಶಾಸ್ತ್ರದ ದೀಕ್ಷಾನಾ
ದಂಗಳು ಯಿವೇಯೆಂಬಂತೆತೋರಲು, ಆ ಸತಿಯರ ಮಾತುಗಳ ಮಧು
ರಧ್ವನಿಗಳಂಕೇಳಿ ಮನಸ್ಸಿನೊಳ್ ಕಳವಳಿಸಿ ಕಾಮನ ಧನುಷ್ಟಂಕಾರ
ಶಬ್ದವಂಕೇಳಿ ಬೆದರಿದಂತೆ ರಾಯರುಗಳೆಲ್ಲ ಅಗಲವಾದ ಕಣ್ಣುಗಳಿಂದ
ನೋಡುತ್ತಿರಲಾಗ, ಅಂತಃಪುರದ ವಳಗಣ ಬಾಗಿಲಿಂದ ಬಾಲೆಯರ
ವಡವೆಗಳ ಯಳೆಬಿಸಲಿಗೆ ಚದರಿಬರುವ ಕಾರಿರುಳಂತೆ, ಪುರುಷರಮೇಲೆ
ಬೀಸುವ ಅನಂಗನಂಧಕಾರಾಸ್ತ್ರದಂತೆ, ಪ್ರತ್ಯಕ್ಷನಾಗಿ ಬರುವ ಮನ್ಮ
ಥನ ಮೈಬಣ್ಣದಂತೆ, ಕನ್ನೈದಿಲುಗಳಿಂದ ಯಾರೋ ರತಿದೇವಿಯಂ
ಪೂಜಿಸುವವರಂತೆ, ಕೆಳದಿಯರ ಕಣ್ಣುಗಳ ಕಪ್ಪುಬೆಳಕುಗಳು, ನೀಲಮ
ಣಿಗಳ ಚಪ್ಪರಗಳನ್ನೆತ್ತಿದಂತ್ತೆ ಮುಪ್ಪೆಂದು ಹೇಳಮನೋಡುವರ ಕಂ

ಣುಗಳ ಮನಸುಗಳಂಕೂಡ ಕವಿದು ಕಳವಳಗೊಳಿಸುವ ಸಮಯದೊಳ್, ಸುವರ್ಣನೇತ್ರಗಳ ಕಾಂತಿಯು ಕಾರ್ಮುಗಿಲೊಳ್ ಮಿಂಚುಗಳು ಪೊಳೆದಂತೆ ಪೊಳೆಯಲು;

ಆ ಬಳಿಕ ಬರಿಯ ಪದ್ಮರಾಗದ ಮಣಿಯ ಪದಕಗಳ ಕಾಂತಿಯು ಸಭಾಮಂಟಪದಲೆಲ್ಲಾ ಸಂಧ್ಯಾರಾಗವೇರಿದಂತೆ ಕೆಂಪೇರಿಬರಲು, ಅಷ್ಟರೊಳ್ ಪಚ್ಚೆಮಣಿಯ ಬಾವುಲಿಗಳ ಬೆಳಕಿನಿಂ ಸ್ವಯಂವರಕ್ಕೆ ಸೂರ್ಯನೇ ಬಂದಂತೆತೋರಿ, ಅಲ್ಲಿಂದ ವಜ್ರಕಂಕಣಂಗಳ ಪಂಕಿಬಳೆಗಳ ಹೊಳಪು ಬೆಳ್ದಿಂಗಳಂತೆ ಬಿಳುಪಾಗಿ, ಆಮೇಲೆ ಮುತ್ತಿನಮಾಲೆ ಚಳತುಂಬುಗಳಪ್ರಭೆಯು ನಕ್ಷತ್ರಗಳ ಮಳೆಗರದಂತೆ ಕಾಣಿಸಿ ನೋಡುವರಿಗೆ ಯಿದು ಉಷಃಕಾಲವೋ, ಸಂಧ್ಯಾಸಮಯವೋ, ಹಗಲೋ ಯಿರುಳೋ ಯೆಂದು ತಿಳಿಯದಂತೆ ಭ್ರಮೆಗೊಳಿಸುತ, ಯೇಳುತರವಾದ ರೂಪಂಗಳೆ ನಿದರ್ಶನಕ್ಕೆ ನಿವಾಸವಾಗಿ ತೇಜೋಲೋಕದಂತೆ ತೋರುತ್ತಲಿರುವಾಗ ಬರಿಯ ಸ್ತ್ರೀರುಗಳಿಂದಲೇ ವಂದುಲೋಕವಿರುವದೆಂಬಂತೆ ಮೂರುಲೋಕಂಗಳಲ್ಲಿರುವ ರೂಪವತಿಯರಾದ ನಾರಿಯರೆಲ್ಲಾ ಯೆಣಿಸಬೇಕೆಂದು ಮನ್ಮಥನು ಪಟ್ಟಿಗೂಡಿಸಿಯಿರುವನೆಂಬಂತೆ, ಸಪ್ತದ್ವೀಪಗಳಂ ಸೃಷ್ಟಿಯಂಗೈದು ಬೇಸರಂಗೊಂಬ ಬ್ರಂಹನು ಹೊಸತಾಗಿ ಸುಂದರೀದೀಪವೊಂದು ವಂದು ನಿರ್ಮಿಶಿದನೋ ಯೆಂಬಂತೆ ಸರಿಬೆರಿಕೆಯಾಗಿರುವ ಬ್ರಂಹಸೃಷ್ಟಿಯನ್ನೋಡಿ ನಕ್ಕು ಮನ್ಮಥನು ಬ್ರಹ್ಮನನಾಚಿಕೆಗೊಳಿಸುವಂತೆ ನಿರ್ಮಿಶಿದ ನಾರೀಪ್ರಪಂಚವೆಂಬಂತೆ, ಗಣಿತಿಯಂಮಾಡಲೋಸಗ ಬಾತಿಯೊರಿಂ ತುಂಬಿರುವ ಪಂಚಬಾಣನ ಭಂಡಾರವೋಯೆಂಬಂತೆ, ಸೌಭರಿಋಷಿಯುಪರಿಯನ್ನೋಡಿ ರತೀದೇವಿಯೋ ಬಹು ಸತೀರೂಪಂಗಳಂ ತಾಳಿರುವಳೋ ಯೆಂಬಂತೆ, ಪ್ರಕೃತಿಪರಮಾತ್ಮರೊಳ್ನಾನುಹೆಚ್ಚು ತಾನುಹೆಚ್ಚು ಯೆಂದು ಕಲಹಬಂದು ಈಗಿನ ಪಂಚಭೂತಂಗಳನಲ್ಲದೆ ಮನೋಹರಂಗಳಾಗಿ, ಸುಕುಮಾರಂಗಳಾಗಿ ಸುಗಂಧದಿಂದೊಪ್ಪಿ, ಚಿತ್ತರದ ಬೆಳಕಿನಿಂದ ಕೂಡಿ ಹೊಸದಾಗಿ ಕೆಲವು ಅವಯವಂಗಳನುಂಟುಮಾಡಿ, ಪ್ರತಿಜ್ಞೆಗೋಸುಗಂಮಾಡಿರುವ ನಾರಿಯರ

ನವೀನ ನಿರ್ಮಾಣವೆಂಬಂತೆ, ಸುಗಂಧರಾಜೇಂದ್ರನು ಇಂದ್ರನೆಂದುತ್ತಿಳಿದು ಸ್ವಯಂವರೋತ್ಸವವಂ ನೋಡಬೇಕೆಂದು ಬಂದ ಕಿನ್ನರ, ವಿದ್ಯಾಧರಕನ್ಯೆಯರೆಂಬಂತೆ ಕಳಿಂಗರಾಜಪುತ್ರಿಯು ಕೆಳದಿಯರ ಗುಂಪುಗುಂಪುಗಳು ಸೊಂಪುಗೂತ್ತಿ ಬರುವ ಸಮಯದೊಳ್ ಆ ಸತಿಯರ ಸೌಂದರ್ಯಪ್ರವಾಹಂಗಳೊಳ್ ಹುಟ್ಟಿಪಲ್ಲಿರುವ ಯೌವನಮಟ್ಟದಲ್ಲಿ ನಿಲ್ಲುವ ಮೊದಲಿಂದ ಮುಳುಗಿ ತೇಲುವ ರಾಜಕುಮಾರರ ಲೋಚನಂಗಳೆಲ್ಲ ಹರಿಯುವ ಹೊಳೆಯು ಹೊಸನೀರಿಗೆ ಯಿದಿರೇರಿ ಪೋಗುವ ಮೀನುಗಳಂತೆ ನೋಟಗಳಂ ಹಿಂಬಿಟ್ಟವೆ ಮುಂದಾಗಿ ಬರುತ್ತಿರುವ ಸುಂದರಿಯರ ಪಾದಪ್ರದೇಶಗಳೊಳ್ ಬಿದ್ದು ಅಲ್ಲಿಂದ ಮೆಲ್ಲನೆ ಜಾನುಗಳ ಜಗತಿಗಳನ್ನೇರಿ ನುಣ್ದೊಡೆಗಳೆನ್ನುವ ಮಳಲೊಟ್ಟೆಗಳ ಮೇಲಾಗಿ ತೇಲಿ ಅಲ್ಲಿ ಮೆಲ್ಲನೆ ತಿರುಗಾಡಿ ಆಮೋದದಿಂದಲ್ಲಿನಿಂದು ಸುಳಿಗಳಂತಿರುವ ನಾಭಿಗಳಲ್ಲಿ ಸುಳಿದಾಡಿ ರೋಮರಾಜಿಯ ಮಾರ್ಗವಂ ಹಿಡಿದೇರಿ ತಾವರೆಯ ಮೊಗ್ಗೆಗಳಂತೆ ಕಾಣಿಸುತ್ತ ಕುಲುಕುವ ಕುಚಂಗಳಂ ನೋಂಕಿ ಇವು ಪಕ್ಷಿಗಳು ನುಂಗಿಬಿಡುವವುಯೆಂದು ಹೆದರಿ, ಯೇರುವದಕ್ಕೆ ದಾರಿಯಿಲ್ಲದೆ ಅಲ್ಲಿಯೇ ತಿರಿತಿರಿಗಿ ಬಳಸಿ, ಮೆಲ್ಲನೆ ಶಂಖದಂತಿರುವ ಕೊರಳುಗಳಮೇಲೆ ಹಾರಿ ಅಲ್ಲಿಂದ ಗಲ್ಲಂಗಳನ್ನೇರಿ ಚಿಣಿಮುತ್ತುಗಳಂತಿರುವ ಪಲ್ಲವರಸೆಯಂ ಮುಟ್ಟಿ, ಕಪೋಲಶುಕ್ತಿಗಳಂ ದಾಟಿ ದಾಬಳಿಕ ಅಲ್ಲಿ ಸೀಳವಾಗಿ ಹೊಸಪರಿಯ ಹೊಳಪಿನಿಂದೊಪ್ಪಿರುವ ಮೀನುಗಳಂತಿರುವ ಕಂಣುಗಳಂ ಕಂಡು ಸ್ವಜಾತಿಯೊಳಂತಿರುವ ಸೌಂದರ್ಯವಂಟೇ ಯೆಂದು ವಿಸ್ಮಯಂಗೊಂಡು ಬಿಟ್ಟು ಬರಲಾರದೆ ಅಲ್ಲಿಯೇ ಸುಳಿದಾಡುತ್ತ ಸುಖದಿಂದಿರಲಾ ಸಮಯದೊಳ್ ಆ ನಾರಿಯರ ಲಾವಣ್ಯವೆಂಬ ಅಮೃತರಸವು ಯತ್ತೆತ್ತಲೂ ಯಿರಚಿದಂತೆ ತೋರಿ ಅವರ ಕಟಾಕ್ಷಗಳ ಪ್ರಭಾಪುಂಜದಿಂದ, ಸಭಾಮಂಟಪವನ್ನೆಲ್ಲವಂ ಇಂಪಾದ ತಂಪಿನೊಳ್ಮುಳುಗಿಸಿ ನಗುವ ಮೊಗ್ಗೆಗಳ ಬೆಳ್ದಿಂಗಳಿಂದ ಪುಳಕಂಗಳನ್ನುಂಟುಮಾಡಿ ಕುರುಳುಗಳ ಸವರಿಸುವದಂ, ಬಿಚ್ಚಿರುವ ಪೂಮಾಲೆಗಳ ಕಟ್ಟಿಕೊಳ್ಳುವದಂ, ಮೊಗಗಳಂ ಪರಿಸುವದಂ, ವಡ್ಯಾಣಗಳಂ ಬಿಗಿಯಾಗಿ ಅಮುಕುವುದಂ, ಹಾರಂಗಳಂ ಸರಿಮಾಡಿಕೊಳ್ಳುವುದಂ, ಅಲ್ಲಲ್ಲಿ

ಕಟ್ಟಿರುವ ಕನ್ನಡಿಗಳನ್ನೋಡುವಂತೆ ಕಪೋಲಗಳಲ್ಲಿಯೇ ಪ್ರತಿಫಲಿತಂ
ಮ ಪಲಾಸಗಳಂ ನೋಡಿಕೊಳ್ಳುವುದಂ ಸೋಲುವ ನಡುವುಗಳಿಂಪ ತ್ರಿ
ಭಂಗಿಯಾಗಿ ಗಜವೃಷಭ ಹಂಸಗತಿಗಳಿಂದ ಮೆಲ್ಲಮೆಲ್ಲನೆ ನಡೆಯುವು
ದಂ ಒಬ್ಬರೊಬ್ಬರಮೇಲೆ ತೋಳುಗಳನ್ನಿಟ್ಟು,ಲೀಲೆಯಿಂದ ಪೋಲ್ಯಾ
ಡುತ್ತ ಬರುವುದಂ, ನಡನಡುವೆ ಕ್ರೋಂಚವಾಗಿ ಕೂಸಿಪಲ್ಲರಸೆಕಾಣುವಂ
ತೆ ನಗುತ್ತಿರುವುದಂ, ಇವು ಮೊದಲಾದ ಪರಿಯಾಯ ಮನೋಹರಂಗಳಾದ ಅಂ
ಗವಿನ್ಯಾಸಂಗಳೆಲ್ಲ ಅನಂಗವಿಲಾಸಗಳಾಗಿ ಕಾಲದಶಂಗಳೆರಪೂ ಶೃಂಗಾರ
ರಸಮಯಂಗಳಾದಂತೆ ತೋರಿ, ನೋಡುವ ನಾಡುನಾಡಿನ ಅರಸುಗಳಿಗೆ ತ
ಕವುಂ ಹೆಚ್ಚಿಸುತ, ಮಮತೆಯಂಪುಟ್ಟಿಸುತ ಲವಲವಿಕೆಯಂ ಬಳಿಯಿಸುತ
ಮಿತಿಮೀರಿದ ಪ್ರೇಮವಂಉಂಟುಮಾಡಿಸುತ ಮನಸ್ಸುಗಳಂ ಕರಗಿಸುತ
ಆಶ್ಚರ್ಯವಂಅತಿಶಯಂಗೈಯುತ್ತ ಮೋಹಪಮೋಳ್ಮುಳುಗಿಸುತ್ತಿರಲು;
ಇತುಬರುವ ತರುಣೀಪುರ ಗುಂಪಿನೊಳ್ ಪರಿವೇಷದೊಳಗಿರುವ ಚಂದ್ರ
ರೇಖೆಯಂತೆ, ಮಲ್ಲಿಗೆಯ ಚಪ್ಪರದೊಳ್ ಕುಳಿತು ಉತ್ಸವವಂತೆರಳಿದಮ
ನ್ಮಥನ ವನದೇವತೆಯಂತೆ, ಪಿರಿಯಆಣಿಮುತ್ತಿನ ಕುಚ್ಚುಗಳಿಂದ ಅಚ್ಚ
ರಂಗೊಡುವ ಅಂದಳದೊಳ್ ಕುಳಿತುಬರುವಕಳಿಂಗರಾಜನಂದನೆಯುಕಂ
ಡು, ಯಲ್ಲೆಲ್ಲಿಯೋ ನೋಡುತ್ತಿರ್ದ ರಾಜಕುಮಾರರೆಲ್ಲ ಸೂಜಿಗಲ್ಲಿನಿಂ
ದ ತಿರಗುವ ಲೋಹದ ಮೊಳಗಳಂತೆ ಒಂದೇಕಡೆಯೊಳ್ ಪ್ರವಾಹರೂ
ಪಮಾಗಿತಿರಿಗಿ ಚಲಿಸದೆ ಸ್ತಂಭೀಭಾವವನ್ನೈದಿ,ಮೂರ್ಛೆಯಲ್ಲದೇ,ನಿದ್ರೆ
ಗೆಡೆರವೆ ಕನಸುಮಿಲ್ಲದೆ ಯೇನೋಒಂದು ಶೃಂಗಾರಾವಸ್ಥೆಯೊಳ್ ಮು
ಳುಗಿ ಆಬಳಿಕ ಮೆಲ್ಲಮೆಲ್ಲನೆ ತಮ್ಮೊಳಗೆತಾವೇ ಯಚ್ಚತ್ತುಸುತ್ತಲೂ
ಕಟ್ಟಿರುವ ಕನ್ನಡಿಗಳಲ್ಲಿಯುಂ, ಮಣಿಭಿತ್ತಿಗಳಲ್ಲಿಯುಂ, ಬೆಳಗುವ ಭೂ
ಷಣಂಗಳಲ್ಲಿಯುಂ, ತಮ್ಮ ಮನಸ್ಸುಗಳಲ್ಲಿದ್ದಪರಿಯೊಗಿಯೇ ಸೌಗಂಧಿ
ಕಾದೇವಿಯ ಪ್ರತಿಬಿಂಬಗಳಂ ಸಾವಿರಾರುಕಡೆನೋಡಿ,ಲೋಕೈಕವೀರ
ನಾದ ಮಾರನು ತಮ್ಮುಗಳನೆಲ್ಲರಂ ಜಯಿಸಬೇಕೆಂದುಅಕ್ಷಯ ತೂಣೀ
ರದಿಂದ, ಸೌಗಂಧಿಕಾದೇವಿಯೆಂಬ ಒಂದು ಮೋಹನಾಸ್ತ್ರಮಂ ಪ್ರಯೋ
ಗಿಸಲು, ಆ ಅಸ್ತ್ರವುಬಾಣೇ ಹತ್ತಾರುನೂರುಸಾವಿರವಾಗಿ ಕಾಣಿಸಿಕೊಂ

ಬಂತೆ ಯಲ್ಲೆಲ್ಲಿ ನೋಡಿದರೂ ಸೌಗಂಧಿಕಾದೇವಿಯನ್ನೇ ಕಂಡು ಇದೇನು ಮನೋಭ್ರಾಂತಿಯೋ ಎಂದು ಚಿಂತಿಸಿ, ಇವಳು ರಾಜಪುತ್ರಿಯು ಇವು ಮಾರ್ಪೊಳವೆಂದು ವಿಂಗಡಿಸಲಾರದೆ ಸಮೀಪದೊಳ್ ಕಟ್ಟೆದ್ದ ಕನಡಿಯೊಳ್ ಬರುವ ಕಾಂತೆಯಂ ಕಂಡು ಇದೇನು ಯಿಷ್ಟು ಸಮೀಪಕ್ಕೆ ಈ ಗುಂಪಿನೊಳ್ ಬಂದಳೆಂದು ತಾವೇ ನಾಚಿಕೆಗೊಂಡು ಯಿದ್ದಸ್ಥಳಂಗಳಂ ಪಾಸರಿಸುವರು ಕೆಲವರು, ಈ ಕಾಂತೆ ಯಿಂತಿವ್ಯಾಕೆ ಲಜ್ಜೆಯಂ ಬಿಟ್ಟು ಮೇಲೆ ಬಿದ್ದು ಬರುವಳೆಂದು ಯೋಚಿಸುವರು ಕೆಲವರು, ಸಖೀಜನಂಗಳ ಮಾತುಗಳ ಮಧುರಸ್ವರಂಗಳ ಕುರುಹಿನಿಂದ ರಾಜಪುತ್ರಿಯಿರುವ ಸ್ಥಳವಂಗೊತ್ತಾಗಿ ತಿಳಿದು, ತಂಮತಂಮ ಚಿತ್ತಂಗಳೊಳ್ ಈ ಭೂಲೋಕದಲ್ಲಿ ಯಿಂತಿರುವ ಕಾಂತೆಯು ಯಂತು ಪುಟ್ಟಿದಳೋ ಯನ್ನುವರು ಕೆಲವರು ಪುಟ್ಟಿದರೆ ಫಲವೇನು, ಈ ಸತಿಗೆ ಸರಿಯಾದ ಪುರುಷನೆಲ್ಲಿರುವನೆನ್ನುವರು ಕೆಲವರು, ಕಳಂಗರಾಜನಿಗೆ ಮಗಳಲ್ಲಿಯದು; ಸುಳ್ಳು ಯಿದೇನೋ ಇಂದ್ರಜಾಲವಂ ಮಾಡಿ ನಂಮಂ ಮೋಸಗೊಳಿಸುವರೆನ್ನುವರು ಕೆಲವರು, ಈ ನಾರಿಯು ಯಾರನ್ನೂ ವರಿಸುವದಾಗಿ ತೋರುವದಿಲ್ಲವೆನ್ನುವರು ಕೆಲವರು, ಅಮರಾವತಿಯಿಂದ ದೇವೇಂದ್ರನೇ ಬಂದರೆ ಇವಳು ವರಿಸುವಳೋ ಯೇನೊ ಕಾಣೆನೆನ್ನುವರು ಕೆಲವರು, ಮನ್ಮಥನು ಪುರುಷನಾಗಿದ್ದ ಪೂರ್ವದೊಳ್ ಪುರಹರನಿಂದ ಭಂಗವಂಪಡದು ಈಗ ನಾರಿಯರೂಪವಂತಾಳಿದನೊ ಯೇನೋ ಯನ್ನುವರು ಕೆಲವರು, ಮಹಾವಿಷ್ಣು ಮಾಡಿದ ಜಗನ್ಮೋಹಿನೀ ರೂಪಕ್ಕೆ ಯಿದು ಮೇಲುಪಜ್ಞೆಯಾಗಿರುವದೆನ್ನುವರು ಕೆಲವರು, ಈ ಭಾಮೆಯು ಭೂಮಿಚಿತ್ರವೇ ಭ್ರಾಂತೀದೇವಿಯನ್ನುವರು ಕೆಲವರು, ಇವಳ ಪ್ರತಿಬಿಂಬವೇ ಶಚೀದೇವಿಯೆಂದು ಪೇಳುವರು ಕೆಲವರು, ಇವಳು ರತೀದೇವಿಯೆಂದು ಮನ್ಮಥಾಸ್ತ್ರಂಗಳಾದ ಪುಷ್ಪಗಳಂ ಮುಟ್ಟಿ ಪ್ರಮಾಣವಂ ಮಾಡಬಹುದೆನ್ನುವರು ಕೆಲವರು, ಮಾತುಗಳನ್ನಾಡದೆ ಆ ಕಾಂತೆಯ ಕಪೋಲಂಗಳಲ್ಲಿ ಜಾರಿಬೀಳುವ ದೃಷ್ಟಿಗಳಂ ಸಾಹಸದಿಂದ ನಿಲ್ಲಿಸುವರು ಕೆಲವರು; ಆ ಕೋಮಲೆಯ ಸುಳಿಗುರುಳೆನ್ನುವ ಉರುಳೊಳು ಶಿಕ್ಕಿಬಿದ್ದಿಸಿಕೊಂಡು ಬರಲಾರದ ನೋಟಗಳಲ್ಲಿಯೇ ಸುಳಿದಾಡಿಸು

ವರು ಕೆಲವರು, ಹುಬ್ಬುಗಳ ಕೊನೆಯನ್ನೋಡುವರು ಕೆಲವರು, ಕೆಂಪು ತುಟಿಗಳಲ್ಲಿಯೇ ದೃಷ್ಟಿಯನ್ನಿಡುವರು ಕೆಲವರು, ಬಾಲೆಯಂತೆ ಸರ್ವಾಂಗ ಗಳಂ ನೋಡಬೇಕೆಂದು ಹೋಗಿ ವಂದನ್ನೂ ಚನ್ನಾಗಿ ನೋಡದೆ ಬರಿಯ ಲಾವಣ್ಯದ ಸೊಸೆಯನ್ನೋಡುವಂತೆ ವೀಕ್ಷಣಂಗಳಂ ಪ್ರಸರಿಸುವರು ಕೆಲವರು, ನಿಂತುನೋಡುತ್ತ ಯಿಷ್ಟು ಶರೀರದೊಳಗೆ ನಮ್ಮ ಕಣ್ಣುಗಳು ಯಾವ ಪುಣ್ಯಸಂಪನ್ನವಾಗಿರುವವೋ ನಮಗೆ ನೈಯಿಲ್ಲ ಕಣ್ಣುಗಳಾದರೆ ಮತ್ತೆ ನೋಟವದೆಂತಿರುವದೋ ಯೆಂದು ನುಡಿಯುತ್ತ, ಈ ತರುಣಿಯಂ ನಿರ್ಮಿಸುವ ಶಿಲ್ಪಶಾಸ್ತ್ರಂ ಮದನನು ಮೊದಲುವಾಗಿದ್ದನೇನೋ ಯೆಂದು ಬಣ್ಣಿಸುತ್ತ, ಬ್ರಹ್ಮನು ಬಲುಕಷ್ಟಪಟ್ಟು ಅಷ್ಟಿಷ್ಟಯನ್ನದಂತೆ ಯೆಷ್ಟೋ ಇಷ್ಟವಸ್ತುಗಳಂ ಭಟ್ಟಿಕಾಸಿ ಆ ವಸ್ತುಗಳ ಸಾರವಂ ತೆಗದು ಈ ನಾರಿಯನ್ನಿರ್ಮಿಸಿ, ಮಿಕ್ಕಾದ ವಸ್ತುಗಳಿಂದಕಾರ್ಯವೇನೆಂದು ಬಿಟ್ಟುಬಿಡಲು, ಆ ಹಿಪ್ಪೆಗಳೇ ಈಗ ಚಂದ್ರನೆಂದು, ನಕ್ಷತ್ರಗಳೆಂದು, ಕಮಲವೆಂದು, ಕಸ್ತೂರಿಯೆಂದು ಮಾತ್ರ ಸುಕುಮಾರಸುಗಂಧವಸ್ತುಗಳು ಲೋಕದೊಳು ನಿಂತವು; ನಿಜವೆಂದು ಪೊಗಳುತ್ತ ಆ ಸೌಗಂಧಿಕಾದೇವಿಯ ಸೌಂದರ್ಯವಂ ಯಡೆಬಿಡದೆ ನೋಡುತ್ತ ಮೋಹಸಮುದ್ರದೊಳು ಬಿದ್ದು ಯೇಳಲಾರದೆ ಬೆನ್ನುತಟ್ಟುವ ನಮ್ಮ ಸಚಿವರೊಡನೆ ಕೂಡ ಮಾತನಾಡದೆ ಯಿರಲಾಸಮಯದಲ್ಲಿ ಮನ್ಮಥನು ಮಂದಮಾರುತವೆಂಬ ಪ್ರಾಣಾಯಾಮವಮಾಡಿ, ಮಧುರವಾಗಿ ಕೂಗುವ ಕೋಗಿಲೆಗಿಣಿಗಳ, ಕಲರವಂಗಳೆಂಬ ಬೀಜಶಕ್ತಿಗಳಂಪೇಳ ತುಂಬಿಗಳ ಝೇಂಕಾರವೆಂಬ ಮಂತ್ರಾವರ್ತಿಯಂ ಮೊಲ್ಲಸಮಾಡಿ ಸೌಗಂಧಿಕಾದೇವಿಯಂ ಮಂತ್ರದೇವತೆಯೆಂದು ಧ್ಯಾನಿಸಿ, ವಿನೋದವನ್ನೋಡಬೇಕೆಂದು ಸ್ತಂಭನ ಮೋಹನಂಗಳಂ ಪ್ರಯೋಗಿಸಿದನೆಂಬಂತೆ, ಆ ರಾಜಕುಮಾರರೆಲ್ಲ ವ್ಯಗ ಳುಮರವಾಗಿ ಬೆರಗಾಗಿ ರಾಜಯೋಗಿಗಳಂತೆ ಸೌಗಂಧಿಕಾದೇವಿಯ ಅಖಂಡ ಸೌಂದರ್ಯದೊಳು ಸಮರಸಭಾವದಿಂದ ಐಕ್ಯಂಗೊಂಡು ಮನ್ಮಥಾದ್ವೈತಬ್ರಹ್ಮವಿದ್ಯೆಯೊಳು ನಿರ್ವಿಕಲ್ಪನಿಷ್ಠೆಯಲ್ಲಿ ನಿಂತು ಅನಿರ್ವಾಚ್ಯವಾದ ಆನಂದವನ್ನನುಭವಿಸಲಾಸಮಯದೊಳು ಚಿತ್ತಂಗಳುಂಟಿರದ

ಚಿತ್ರಿಪುರು ಪತ್ರರಾಜನಸಾತ್ರ ಮುಂದುಗಡೆ ಬರುವಂತೆನಿಯಮಿಸಿ, ಮತ್ತೆ ಯೀರುವರನ್ನೆಲ್ಲ ಚಿತ್ರದ ತೆರೆಯುಪತ್ರರದಲ್ಲಿರುವಂತೆ ಕಟ್ಟು ಮಾಡಿ, ಯಿರಡುಕಡೆಯೊಳು ಯುತ್ತರವಾದ ಪಾಸಾರದ ಜಗತಿಯಲ್ಲಿ ಸಿಂಹಾಸನಂಗಳೊಳು ಸಾಲಾಗಿ ಕುಳಿತಿರುವ ರಾಜಕುಮಾರರಿಂದಯಿದುವೆ ರಾಜಬೀದಿಯೆಂಬುದು ನಿಜವೆಂದುತೋರುವ ಪವಳದ ಕಂಭಸಾಲಿನ ಕೈಸಾಲೆಗಳ ಮಧ್ಯರಂಗಕ್ಕೆ ಬಂದು ಮಾನಸ ಸರೋವರದಲ್ಲಿರುವ ರಾಜಹಂಸೆಗಳ ಗುಂಪಿನೊಳ್ ತಲೆಯುತ್ತಿದ ತಾವರೆಬಳ್ಳಿಯಂತೆ ನಕ್ಷತ್ರವೀಧಿಯೊಳ್ ಬರುವ ರೋಹಿಣಿಯಂತೆ ಮೇಘಪಙ್ತಿಯಲ್ಲಿ ಪೊಳೆಯುವ ಯಳೆಮಿಂಚಿನಂತೆ ಸಮುದ್ರದ ಅಂಚಿನಲ್ಲಿರುವ ಸುರಹೊನ್ನೆ ಸಾಲುಗಿಡಗಳ ನಡುವೆ ಚಲಿಸುವ ಹವಳದಬಳ್ಳಿಯಂತೆ, ಆ ಸೌಗಂಧಿಕಾದೇವಿಯು ಸಕಲಜನಮನೋಹರವಾಗಿ ಗಂಭೀರವಾಗಿ ಬರುತಬರುತ ಕಟಾಕ್ಷಪ್ರಸರಣಗಳಿಂದಲೇ ಕೆಲವರಂ ಕೃತಾರ್ಥರಂಮಾಡುತ ನಸುನಗ ಮಾತೆಯೀರಿ ಬರುವಮೊಗದತಳಕಿನಿಂದಲೇ ಕೆಲವರ ಮನೋರಥಗಳಂ ಪೂರೈಸುತ, ನವರತ್ನಾಭರಣಂಗಳ ಧ್ವನಿಗಳಿಂದ ಅನ್ಯರಂ ಹರ್ಷಗೊಳಿಸುತ, ಸರ್ವಾನಂದಮೂರ್ತಿಯೆಂಬ ದೇವತೆಯು ಯಿವಳೆಂದು ತೋರುವಂತೆ ಮೆಲ್ಲನೆ ಮುಂದಕ್ಕೆ ಬರುತ, ಅಲ್ಲಿ ಸಿಂಹಾಸನಂಗಳೊಳ್ ಕ್ರಮವಾಗಿ ಕುಳಿತಿರುವ ವೋರೋರ್ವ ರಾಜಪುತ್ರರಂ ಬೇರೆಬೇರೆ ಯಾರುಯಾರೆಂದು ಕೇಳುವದಕ್ಕೋಸ್ಕರ ಅಂದಳವಂ ಅಲ್ಲಲ್ಲಿ ನಿಲ್ಲಿಸುವಂತೆ ಅಪ್ಪಣೆಯಂ ಕೊಡುವ ತಾತ್ಪರ್ಯವಂ ಕಟಾಕ್ಷಪ್ರಸರಣದಿಂದಲೆ ಸೂಚನೆಯಂ ಗೈಯ್ಯಲಾ ಸೌಗಂಧಿಕಾದೇವಿಯ ಮನೋಭಾವವಂ ತಿಳಿದು, ಕಳಾಕುಶಲೆಯಾದ ಚಿತ್ರಲೇಖೆಯೆಂಬ ಸಖಿಯು ಪವಳದ ಪಲ್ಲಕ್ಕಿಯ ಅಂಚಿನೊಳ್ ನಿಂತು ನಾಲ್ಕುಕಡೆಯೊಳ್ ಕಾದಿರುವ ಕಂಚುಕಿಜನಂಗಳ ಮೊಗಂಗಳಂ ನೋಡಲು, ಕುಲಕ್ರಮಾಗತರಾದ ಆಯಾಸವಯಂಗಳಂ ತಿಳಿದ ಬುದ್ಧಿಶಾಲಿಗಳಾದ ಆ ಕಂಚುಕಿ ಜನರು ಸದ್ದುಮಾಡದಿರಿ, ಯೆಂದು ಸಭೆಯಂ ಕುರಿತು ಗಂಭೀರವಾಗಿ ನುಡಿಯಲು, ಆಗ ಸಭಾಜನಂಗಳೆಲ್ಲ ಈಗಲೆ ನಮ್ಮಗಳಿಗೆ ಅವಶ್ಯವಾಗಿ ನೋಡತಕ್ಕ ಈ ಸ್ವಯಂವರೋತ್ಸವದ ಸೊಗ

ನೆಲ್ಲ ಇರುವುದು ನೋಡುವಾಯುಂಡು, ಪೂರ್ವದೊಳ್ ಒರ್ವನಿಂ ಗರ್ಜಿಸುತಲಿರುವ ಮಹೋದಧಿಯು ಜಗದ್ವಿಖ್ಯಾತ ಪರಾಕ್ರಮಶಾಲಿಯಾದ ಶ್ರೀ ರಾಮಚಂದ್ರನ ಭಯದಿಂದ ಸುಮ್ಮನೆಯಾದಂತೆ ಕಾಮನ ಭಯಕ್ಕೆ ಕಟ್ಟುಬಿದ್ದು, ಮೌನವ್ರತವಂ ಧರಿಸಿರುವ ಸಮಯದಲ್ಲಿ ಆ ಸೌಗಂಧಿಕಾದೇವಿಯ ಮುಖ್ಯ ಸಖಿಯಾದ ಚಿತ್ರಲೇಖೆಯು ಜಗತ್ತಿನಲ್ಲಿರುವ ವೃತ್ತಾಂತಗಳಂ ದೇಶದೇಶದ ಅರಸುಗಳ ವಂಶಾವತರಣಂಗಳಂ, ಬಿರುದಾವಳಿಗಳಂ, ಕಾವ್ಯನಾಟಕಂಗಳಂ, ರಾಜಧರ್ಮಗಳಂ, ನಾನಾದೇಶದ ಸ್ವಭಾವಂಗಳಂ, ತಾರತಮ್ಯವಂ, ವಿದ್ಯೆಗಳೊಳ್ ನೈಪುಣ್ಯವಂ, ಚಮತ್ಕಾರಂಗಳೊಳ್ ಚತುರತನವಂ, ಮಾತುಗಳ ಜಾಣ್ಮೆಯುಂ, ಯುಕ್ತಿಗಳೊಳ್ ತಿಳ್ಮೆಯುಂ, ಶೃಂಗಾರದ ಬಂಡವಾಳವಂ, ತಿಳಿದವಳಾದಕಾರಣ, ಯಿವನುಲ್ಲದೆ ನಾನಾದೇಶಗಳಿಂದ ಭಾವಚಿತ್ರಗಳಂ ತರಿಸಿ ಎಷ್ಟೋಬರದಿರುವ ಅನುಭವದಿಂದ ಅರಸುಗಳೆಲ್ಲರಂ ಬಲ್ಲವಳಂತೆ ಒಂದೊಂದುಕಡೆನಿಂತು ಒರ್ವೋರ್ವರ ವಂಶವಂ, ಐಶ್ವರ್ಯವಂ, ಸೇನೆಯುಂ, ಪ್ರತಾಪವಂ, ವಿದ್ಯೆಯುಂ, ವಿತರಣವಂ, ಕೀರ್ತಿಯುಂ, ಮಿಕ್ಕಾದ ಗುಣಂಗಳೆಲ್ಲ ಸೌಗಂಧಿಕಾದೇವಿಗೆ ಬಿನ್ನವಿಸಲೋಸುಗ, ಒರ್ವೋರ್ವ ಭೂಪಾಲನಂ ಕೈತೋರಿ, ಅರಸಿಯೇ ಕೇಳು-ಸರಸನಾಗಿರುವ ಈ ಅರಸು ಮಗಧದೇಶದ ಪ್ರಜೆಗಳಂ ರಂಜನೆಯಿಂದ ಪಾಲಿಸುತ, ಪರರಾಯರಿಗೆ ತಾಪವಂ ಕೊಡುವ ಪರಂತಪರಾಯನ ವಂಶದೊಳ್ ಪುಟ್ಟಿ ಪೆಸರಾಗಿ ಯಜ್ಞಧೂಮಂಗಳಿಂದ ಮೇಘಂಗಳಂ ಬೆಳೆಯಿಸಿ, ಮಹಾಧಾರ್ಮಿಕನೆನಿಸಿದ ಪುಷ್ಪಸೇನನೆಂಬ ರಾಯನು, ಈತನ ಪಾಣಿಯುಂ ಪಿಡಿವ ಬಾತಿಯುಂ ಪಾಟಲೀಪುತ್ರನೆಂಬ ಪುರದ ಜನಂಗಳೆಲ್ಲ ಮಣಿಗವಾಕ್ಷಗಳೊಳ್ ನಿಂತುನೋಡುವರೆಂದು ಬಿನ್ನವಿಸಿದ ಮಾತಿಗೆ ಸೌಗಂಧಿಕಾದೇವಿಯು ಸುಮ್ಮನೇಯಿರ್ದ ಭಾವವಂತಿಳಿದು ಅಲ್ಲಿಂದ ಮುಂದಕ್ಕೆ ನಡೆತಂದು ಯತ್ರ್ಯೆ-ಪಡತಿಯೇ ಕೇಳು, ಈ ರಣರಂಗ ಶೂರನು ಪರರಾಯರ ಹೆಂಗಸರುಗಳಿಗೆ ಕಂಬನಿಗಳಿಂದಲೇ ಮುಕ್ತಾಹಾರಂಗಳಂಮಾಡಿ ಮತ್ತೂ ತನ್ನ ಶತ್ರುಗಳಂ ದೇವಲೋಕದ ಅಂಗನ

ಯುರೊಡನೆ ಶೃಂಗಾರರಸವಂ ಅನುಭವಿಸುವಂತೆಮಾಡಿ, ಖ್ಯಾತಿಯಂ ಪಡೆದು, ರೂಪದೊಳ್ ಅಲಂಗನಿಗೆ ಸರಿಯಾದ ಅಂಗದೇಶದ ಮಹೀಪತಿಯಾದ ರತ್ನಾಂಗದರಾಯನು, ಈತನ ಅಂಗಸಂಗವಂ ಬಯಸಿದ ಕೋಮಲಾಂಗಿಗೆ ಗಂಗಾಸರಯೂ ಸಂಗಮಸ್ಥಳವು ಜಲಕ್ರೀಡೆಗೆ ಸರೋವರದಂತೆ ಇರ್ಪುದು, ಯೆಂದು ನುಡಿಯಲಾಮಾತಿಗೆ ಆ ಸೌಗಂಧಿಕಾದೇವಿಯು ಸಂಪಿಗೆಹುವ್ವಿನ ಸೊಗಡಿಗೆ ಹಿಂತಿರುಗುವ ಹೆಣ್ಣುದುಂಬಿಯಂತೆ ನೋಟವಂಬೆಳಸಿದ ಭಾವವಂ ಕಂಡು ಮುಂದಕ್ಕೆ ಬಂದು ಯಬ್ಬೆ ಬಾಲೆಯೇ ಪೇಳುವೆನು ಲಾಲಿಸು, ಯುದ್ಧರಂಗದೊಳ್ ಶತ್ರುರಾಯರುಗಳಿಗೆ ಪರ್ವತರಾಯನಂತೆ ಧೈರ್ಯದಿಂದ ಯೆದುರಾಗಿ ನಿಂತು, ತನ್ನ ಪರಾಕ್ರಮದ ಕಾಂತಿಯಂ ದಿಕ್ಕಾಂತೆಯರ ಸೀಮಂತಗಳಲ್ಲಿ ಸಿಂಧೂರದಂತೆ ಯೇರಿಸಿ ಅವಂತೀಪುರವಂ ಆಳುವ ವೀರಭೋಜನೆಂಬ ರಾಯನು ಈತನೊಡನೆ ಲೀಲೆಯಿಂದ ವ್ಯೋಲ್ಯಾಡುವ ಬಾಲೆಯು, ಮಹಾ ಕಾಳೀದರ್ಶನವಂ ಕಾಲಕಾಲದಲ್ಲಿಯೂ ಮಾಡುತ ಸ್ವಪ್ರಾಯೆಂಬನದಿ ಯತ್ತೆಡೆಗಳಮೇಲೆ ಕೂರಿಬರುವ ಮಲಯಮಾರುತದಿಂದ ತಂಪುದೋರುವ ಉಪವನಂಗಳೊಳ್ ಸೊಂಪುಗೊಳ್ಳುವಳೆಂದು ಬಿನ್ನವಿಸಲಾಗ, ಕಾಲಮೇಘವಂ ಕಂಡ ರಾಜಹಂಸೆಯಂತೆ ಆ ಸೌಗಂಧಿಕಾದೇವಿಯು ಈ ರಾಯನಂ ನೋಡಿ, ವಿಮುಖಿಯಾಗಿರುವದಂ ತಿಳಿದು ಮುಂದಕ್ಕೆ ಮೂರಡಿಗಳನ್ನಿಟ್ಟು ಯಬ್ಬೆ ನಾರಿಯೆ ಕೇಳು? ಈ ವೀರನು ಶೂರಸೇನದಶಾರ್ಣಶಂಗಳಂ ಪಾಲಿಸುತ ಸಾಮಾದಿವೇದಂಗಳಂ ಕಲಿತು, ಜ್ಯೋತಿಷ್ಟೋಮಾದಿ ಯಜ್ಞಗಳಂಮಾಡಿ, ಋಷಿಗಳು ಬಣ್ಣಿಸುವಂತೆ ಪರಿಶುದ್ಧಾಚಾರದಿಂದೊಪ್ಪಿ ಶತ್ರುಗಳ ಮಂದಿರಂಗಳಮೇಲೆ ಯಳೆಗರಿಕೆಗಳು ಹುಟ್ಟುವಂತೆಮಾಡಿ, ಬಾಣವಿದ್ಯೆಯೊಳ್ ಪ್ರವೀಣನೆನಿಸಿ, ರೂಪದೊಳ್ ಪಂಚಬಾಣನಿಗೆ ಸರಿಯಾದ ಈ ಸುಷೇಣರಾಯನು ಉತ್ತರಮಧುರೆಯನ್ನಾಳುವನು, ಈ ಜಾಣನಿಗೆ ರಾಣಿಯಾದವಳು ಜಲಕ್ರೀಡೆಯೊಳ್ ಕುಚಕುಂಭಗಳಿಗೆ ಹಚ್ಚಿರುವ ಕಸ್ತೂರಿ ಗಂಧದಿಂದ ಕಾಳಿಂದೀನದಿಗೆ ಕಪ್ಪು ಬಣ್ಣವಂ ಹಚ್ಚಿಸುತ, ಜಲಪ್ರವಾಹಗಳಿಂದ ತುಂಪೇರಿ ಶಿಲಾತ

ಸಂಗಳಿಂದ ಪರಿಪಾಳಿಸುವ ಗೋವರ್ಧನಪರ್ವತದೊಳ್ ಸಂತೋಷವರ್ಷನವಂ ಮಾಡುತ, ಗರಿಗಳಂ ಬಿಚ್ಚಿ ಕುಣಿದಾಡುವ ನವಿಲುಗಳಂ ನೋಡುತ, ವೃಂದಾವನದೊಳ್ ಸದಾವಸಂತವಿಹಾರದಿಂದ ಸುಖವಂಗೊಳ್ಳಬಹುದೆಂದು ನುಡಿಯಲಾಮಾತಂ ಕೇಳಿ, ಸೌಗಂಧಿಕಾದೇವಿಯು ಸೂರ್ಯನಂನೋಡಿದ ಚಕೋರಜಾತಿಯ ಹೆಣ್ಣುಹಕ್ಕಿಯಂತೆ ಮೊಗದೊಳ್ ಲವಲವಿಕೆಯಂ ಬಿಟ್ಟು ಇರುವದಂ ಕಂಡು, ಅಲ್ಲಿಂದ ಪುರೋಭಾಗದೊಳ್‌ನಿಂತು ಎಲೈ ಭಾಮೆಯೇ, ನನ್ನ ಮಾತಂ ಪರಿಭಾವಿಸು ಶೋಭಾತಿಶಯವುಳ್ಳ ಈ ಭೂಪಾಲನು ಧನುರ್ಧಾರಿಗಳಾದ ವೀರರುಗಳಲ್ಲಿ ಅಗ್ರೇಸರನಾಗಿ, ಭಗೀರಥ ರಂತಿದೇವರಂತೆ ಜಗದ್ವಿಖ್ಯಾತನಾದ ಹೇಮಾಂಗದ ರಾಯನೆಂಬ ನಿಮ್ಮ ಪಿತಾಮಹನಿಗೆ ದೌಹಿತ್ರನಾಗಿ ಕೀರ್ತಿಯಂಪಡೆದು ಕನಕಾಂಗದಂಗಳಂ ಧರಿಶಿರುವ ರತ್ನಾಂಗದನೆಂಬ ರಾಯನು, ಈತನು ಸುಖನಿದ್ರೆಯಂಗೈಯುತ್ತಿರುವಾಗ ಪೂರ್ವಸಮುದ್ರರಾಜನು ತರಂಗಶಬ್ದವೆಂಬ ಮೃದಂಗಧ್ವನಿಗಳಿಂದ ಯೆಚ್ಚರಂಗೊಳಿಸುವನು, ಈರಾಯನೊಡಗೂಡಿದವಳು ವಿಶಾಖಾನಗರಿಯ ರಾಜಮಂದಿರದ ಚಂದ್ರಶಾಲೆಯೊಳ್ ವಿಹಾರವಂಗೈಯುತ್ತ ಅಲ್ಲಲ್ಲಿರುವ ಸಮುದ್ರದೊಳಗಣ ದ್ವೀಪಂಗಳಿಂದ ತೇಲಿಬರುವ ಲವಂಗದ ಹೂವುಗಳಸೊಗಸುಗೂಡಿ ಬರುವ ಯೆಳೆಗಾಳಿಯ ಸೋಂಕಿನಿಂದ ಸುರತಶ್ರಮದ ನಸುಬೆಮರುಗಳಂ ಪೋಗಲಾಡಿಸುತ ಸುಖಮಂಪಡೆಯುವಳೆಂದು ನುಡಿಯಲಾಮಾತಿಗೆ ಹೈಮಂತಕಾಲದ ಪದ್ಮದಂತೆ ಬಣ್ಣಕಡಮೆಯಾದ ಸೌಗಂಧಿಕಾದೇವಿಯ ಮೊಗಮನ್ನೋಡಿ, ಅಲ್ಲಿಂದ ತೆರಳಿ ಎಲೈ ಕಾಂಚನಾರಿಯೇ ಮಿಂಚಿನಂತೆ ಪೊಳೆಯುವ ನೋಟಗಳಂ ಇಲ್ಲಿ ಕೊಂಚಮಾಗಿ ಸಂಚರಿಸುವಂತೆ ಮಾಡು, ಇಲ್ಲಿ ಮಲ್ಲಿಗೆ ಮೊಗ್ಗುಗಳಂತಿರುವ ಮುತ್ತಿನಸರಂಗಳಂ ಧರಿಶಿ, ಶರೀರಕ್ಕೆ ಘುಮುಘುಮಿಸುವ ಚಂದನಾನುಲೇಪನಮಂಗೈದು, ಚಂದ್ರಗಾವಿಯ ವಲ್ಲಿಯಂ ಪೊದ್ದು ಸಂಜೆಗೆಂಪಿನಿಂಕೂಡಿದ ಚಂದ್ರನಂತೆ ಪೊಳೆಯುವ ಈ ರಾಜಕುಮಾರನು ಪಾಂಡ್ಯಮಲಯಧ್ವಜರಾಯನ ಕುಮಾರನಾದ ಮಂದಾರಧ್ವಜರಾಯನು, ಈ ಸುಂದರ

ಕರಾರವಿಂದವಂ ಪಿಡಿದವಳು, ಯೆಲೆಬಳ್ಳಿಗಳಿಂದ ಸುತ್ತುವರಿದ ಅಡಿಕೆಮರಗಳಿಂದ, ಯಾಲಕ್ಕಿಯ ಲತೆಗಳಿಂದ ಆಲಿಂಗಿತಂಗಳಾದ ಚಂದನವೃಕ್ಷಂಗಳಿಂದಲೂ, ಕಸ್ತೂರಿಯ ಕಪ್ಪು, ಹೊಂಗೇಮರಗಳ ಚಿಗರುಗಳ ಹಾಸಿಗೆಗಳಿಂದೊಪ್ಪಿ, ಮಂದಮಾರುತಕ್ಕೆ ತೌರುಮನೆಯಾದ ಮಲಯಪರ್ವತದೊಳ್ ಕ್ರೀಡೆಯಂಗೈಯುತ್ತ, ಮೀನಾಕ್ಷೀಕಟಾಕ್ಷಂಗಳಿಗೆ ಪಾತ್ರಳಾಗಿ, ದಕ್ಷಿಣದೇಶದ ಐಶ್ವರ್ಯವಂ ಪಡೆಯುವಳೆಂದು ನುಡಿದ ನುಡಿಗೆ ಕೊಂಚವಾಗಿ ಮೊಗವಂ ಯೆತ್ತಿ ನೋಡಿ ಆ ರಾಜನೊಳ್ ಕಳಿಂಗರಾಜನಂತೆ ಭಕ್ತಿದೋರಿ, ಮನದೊಳಗೆ ಕೈಮುಗಿದಂತೆ ಭಾವಿಶಿ, ಮುಂದಕ್ಕೆ ನಡೆಯುವಂತೆ ಚಿತ್ರಲೇಖೆಯಂ ಪುರ್ಬಿನಿಂ ಸನ್ನೆಯಂಗೈಯಲು, ಅಲ್ಲಿಂದ ನಡೆತಂದು ತರುಣಿಯೇ! ನನ್ನ ನುಡಿಯಂ ಕೇಳು, ಸಪ್ತದ್ವೀಪಂಗಳಲ್ಲಿಯೂ ಸುವರ್ಣ ಯೂಪಸ್ತಂಭಂಗಳಂ ನಿಲ್ಲಿಶಿ, ಏಕಕಾಲದೊಳ್ ತಾನು ಒಬ್ಬನೇ ಬಹು ರೂಪವಂ ಗೊಂಡು ಯಜ್ಞಂಗಳಂ ಸಾಂಗಮಾಡಿ ದತ್ತಾತ್ರೇಯ ಮಹಾಮುನಿಯ ಅನುಗ್ರಹವಂ ಪಡೆದು ತಾನು ಜಲಕ್ರೀಡೆಯನ್ನಾಡುವಾಗ, ರಾವಣಾಸುರನಂ ಗಿಣಿಯಂತೆ ಹಿಡಿದು ಪಂಜರದಲ್ಲಿ ಪಾಡಗಿರ್ದ ಮಹಾವಿಷ್ಣುವಿನ ಸುದರ್ಶನಾವತಾರನಾದ, ಕೀರ್ತಿಯಂ ಪೂರ್ತಿಯಾಗಿ ಪಡೆದ ಕಾರ್ತವೀರ್ಯರಾಯನ ಕುಲಪ್ರದೀಪನಾದಪ್ರತೀಪರಾಯನು, ಈ ಭೂಪತಿಯಂ ಪತಿಯಾಗಿ ಪಡೆದವಳು ಮಾಹಿಷ್ಮತೀ ಪುರದ ಸಾಮ್ರಾಜ್ಯವನ್ನನುಭವಿಸುತ ನರ್ಮದಾ ನದೀ ತೀರಂಗಳೊಳ್ ಜಲವಿಹಾರವಂ ಮಾಡುವಳೆಂದು ಬಿನ್ನವಿಸಲಾಮಾತಿನೊಳ್, ಸೌಗಂಧಿಕಾದೇವಿಯು ನರ್ಮದಾನದಿಯೆಂಬ ಮಾತನೇ ಮನದೊಳಿಟ್ಟು, ನರ್ಮದಾನದೀ ತೀರದಲ್ಲಿ ಸುಗಂಧ ರಾಜೇಂದ್ರನೆಂಬ ಅರಸು ದೇಶದೇಶಂಗಳಂ ಜಯಿಶಿ, ಕರ್ನಾಟದೇಶದಿಂದ ಬಂದು ಕಟಕವಂ ಗೈದಿರುವನೆಂದು ಕೇಳಿರ್ದನು, ಆತನಂ ನೋಡುವಾ ಎಂದು ಬಾಗಿರುವ ತಲೆಯಂ ಕೊಂಚವಾಗಿಯೆತ್ತಿ ಅರನೋಟದಿಂದ ಹಜಾರದೊಳಿರುವ ರಾಜಕುಮಾರರೆಲ್ಲರಂ ಒಂದೇ ನಿಮಿಷದೊಳ್ ಮಿಂಚುಪೊಳೆದು ದೂರುವಂತೆ ನೋಡಿಯೂ ನೋಡದಿರುವಷ್ಟರೊಳ್, ಬರಿಯ ಪಚ್ಚೆಯ ಮಣಿಗಳಂ

ಕೆತ್ತಿರುವ ಎತ್ತರದ ಸಿಂಹಾಸನದೊಳ್ ಕುಳಿತು, ಅರಗಿಣಿಯಮೇಲೆ ಕುಳಿತಿರುವ ಕುಸುಮಶರನಂತೆ ಸರ್ವಾಂಗಸುಂದರನಾದ ಸುಗಂಧರಾಜೇಂದ್ರನ ಚಂದ್ರನಂತಿರುವ ಮೊಗವುಂ, ಕಳಂಕದಂತೆಸೆವ ತಿಲಕವಂ, ಪರಿವೇಷದ ತೆ ಒಪ್ಪುವ ಕುಂಡಲಪ್ರಭೆಯುಂ, ನಕ್ಷತ್ರಪಂಕ್ತಿಗಳಂತೆ ಮಿಂಚುವ ಹಾರಂಗಳುಂ, ಬೆಳ್ದಿಂಗಳಿಗೆ ಸರಿಯಾದ ನಗೆಯನ್ನೋಡಿ, ಆತ್ರನ ಸೊಗಸು ನೋಟಗಳು ಸೋಂಕಿದ್ದರಿಂದ ಮೈಯಲ್ಲ ತಂಗಾಳಿ ಸೋಂಕಿದಂತೆ ತಂಪೇರಿ ಮೈಯಲ್ಲ ಝುಮ್ಮೆಂದು ಪುಳಕಂಗೊಂಡು, ಚಂದ್ರಕಾಂತಶಿಲೆಯ ಪುತ್ಥಳಿಯುಂಬಂತೆ ಕಳೆಕರಗಿ ಸೊಕ್ಕಿ ಸೊರಗಿ, ಮೋಹವೆಂಬ ಕಾರ್ಗತ್ತಲೆ ಕವಿದು ನಿಮಿಷ ಮೂರ್ಛೆಯುಂಗೈದಂತೆ ನಿರ್ವಿಣ್ಣಳಾಗಿ, ಮನಸ್ಸಿನೊಳಗಿರ್ದ ಮನ್ಮಥನ ಆರ್ಭಟವಂ ಕೇಳಿ ಕಣ್ದೆರದಳೆಂಬಂತೆ ಬಹು ಪ್ರೌಢೆಯಾವಕಾರಣ ಮೆಲ್ಲನೆ ತಲ್ಮೆಯಂ ತಂದು ಮರಳಿ ನೋಡುವದಕ್ಕೆ ಮನಸ್ಸು ಲಜ್ಜೆಯೊಳ್ ಮುಳುಗಿ ತಲೆವಾಗಿ ಮರುಳಾಗಿ, ಮನೋರಥವೆಲ್ಲಲ್ಲಿಗೋ ಹೋಗಿ ಇದೇನು ವಿಚಿತ್ರ, ಚಿತ್ರದೊಳ್ ಬರದಿರ್ದ ದೇವೇಂದ್ರನೇ ಶರೀರವಂತಾಳಿ ಬಂದು ಕುಳಿತಿರುವನೋ ಎಂದು ಸಂಶಯಂಬಟ್ಟು ಸನ್ನೆಯಿಂದ ಮಾಲತಿಯಂ ಕರೆದು ಎಲೈ ಮಾಲತಿಯೇ! ನೀನು ಚಿತ್ರಶಾಲೆಗೆ ಹೋಗಿ ಅಲ್ಲಿ ಬರದಿರುವ ದೇವೇಂದ್ರನ ಕೊರಳಿಗೆ ಸರಿಯಾಗಿ ಮಧೂಕಮಾಲೆಯಿಂದ ಕೂಡಿದ ಒಂದು ಮಣಿಹಾರವಂ ಕಟ್ಟಿರ್ದಸು, ಅದಂ ತೆಗದುಕೊಂಡುಬಾ ಎಂದು ಕಳುಹಿ, ಬಂದು ನಿಮಿಷ ಸುಮ್ಮನಿದ್ದು ನನ್ನ ಭ್ರಾಂತಿಯಂ ಏನೆಂದು ಹೇಳಬಹುದು, ಎಷ್ಟಾದರೂ ಬಾಲ್ಯದೊಳ್ ಮಂದಬುದ್ಧಿಯೇ ಎಂದು ತನ್ನ ತಾನೇ ನೀವಳಿಸುತ ಈ ಭೂಪಾಲನ ರೂಪವೆಲ್ಲಿ, ಆ ಚಿತ್ರರೂಪವೆಲ್ಲಿ, ಈ ಮೊಗದಸೊಗಸು, ಈ ನಗೆಯ ಸೊಬಗು, ಈ ಪಲ್ವರಸೆಯುಹಸನು, ಈ ತುಟಿಗಳ ಅಂದ, ಗಲ್ಲದ ಚಂದ, ಕೆನ್ನೆಗಳ ನುಣುಪು, ನೋಟಗಳ ಪೊಳಪು, ಈ ಪುರ್ಬುಗಳ ತೀಡು, ಈ ಬೊಗಸೆಗಂಣುಗಳಿರುವ ಭಾವ, ಈ ಎಳೆ ಮಿಾಸೆಗಳ ಕೊರೆ, ಈ ವೀಳ್ಯವಂ ಸವಿಯುವಪರಿ, ಈ ಕುಳಿತಿರುವ ವೈಯ್ಯಾರ, ಈತಿರುತಿರಿಗಿ ನೋಡುವ ವಿಲಾಸ, ಈ ಲಾವಣ್ಯವೆ

ಲ್ಲ ಚಿತ್ರದಲ್ಲಿ ಯೇನುಯಿರುವದು. ಮೂರು ಲೋಕಂಗಳಲ್ಲಿಯೂ ಇಲ್ಲವೆಂದು ಪರಿಭಾಷಿಸುತ ನೋಡಿಯೂ ನೋಡದಂತ್ರ ಇರುವ ನನ್ನ ಮನಸ್ಸಂ ಇಂತು ಕರಗಿಸುವಾಗ, ಈತನೊಡಗೂಡುವಳ ಭೋಗಭಾಗ್ಯವಂ ಪೇಳುವುದೇನು, ಈ ರಾಜಕುಮಾರನು ನಿಜಮಾಗಿ ದೇವೇಂದ್ರನ ರೂಪವಂ ತಾಳಿ, ಗಿಣಿಯಂ ಮೊದಲೇ ಕಳುಹಿ, ಈಗ ನನ್ನ ಮನವಂ ಮೋಸಗೊಳಿಸಿದನೋ, ಈ ಎರಡು ಪರಿಯಲ್ಲದೆ ಮತ್ತೊಂದು ಇಲ್ಲವೆಂದು ಆಲೋಚಿಸುತ, ನಿಮಿಷನಿಮಿಷಕ್ಕೆ ಮರುಳುಯೇರಿ, ಮದನಬಾಣಗಳಿಗೆ ಮೈಗೊಟ್ಟು ತಾಳಲಾರದೆ ಈಗಲೇ ಈ ರಾಜಕುಮಾರನಂ ಅಪ್ಪಿಕೊಳ್ಳಬೇಕೆಂದು ಸಂಭ್ರಮದೊಳ್ ಮುಳುಗುತ, ಲಜ್ಜೆಯಿಂದ ಮನವಂ ಹಿಮ್ಮೆಟ್ಟಿಸುತ ಯೇನೇನೂ ತೋರದೆ, ವಿಪ್ರಲಂಭ ಶೃಂಗಾರದ ದಶಾವಸ್ಥೆಗಳಂ ಒಂದೊಂದು ನಿಮಿಷದಲ್ಲಿಯೇ ಅನುಭವಿಸುತ್ತಲಿರಲಾ ಸಮಯದೊಳ್ ಚಿತ್ರಲೇಖೆಯು, ಮತ್ತೆ ಕೆಲವು ರಾಜರುಗಳ ವೃತ್ತಾಂತವಂ ಪೇಳುತ್ತಿರಲಾ ಮಾತುಗಳಂ ಕೇಳಿಯು ಕೇಳದಂತೆ, ಕೆಲವು ಮಾತುಗಳಂ ಕನಸಿನೊಳ್ ಕೇಳಿದಂತೆ, ಕೆಲವರು ಗುಣಕಥನವಂ ಸುಗಂಧರಾಜೇಂದ್ರನ ಸುಗುಣಂಗಳಂ ಪೇಳುವ ನುಡಿಗಳೆಂದು ಕೇಳುತ, ಮೆಲ್ಲನ ಅಲ್ಲವೆಂದು ತಲ್ಮೆಯಿಂದ ತಿಳಿದು ಬ್ಯಾಸರಂಗೊಂಡು ಚಿತ್ರಲೇಖೆಯಮೇಲೆ ಬಂದ ಕೋಪವನೆಲ್ಲವಾ ಪುಬ್ಬುಗಳಲ್ಲಿಯೇ ತೋರಿಸಲಾಭಾವವಂ ತಿಳಿದು ಚಿತ್ರಲೇಖೆಯು ಇದೇನು ನನ್ನ ಮಾತನ್ನೀಗ ಸೌಗಂಧಕಾದೇವಿಯು ಕೇಳಿಯೂ ಕೇಳದಂತೆ ನಟಿಸುವಳು, ಇದಕ್ಕೆ ಕಾರಣವೇನೆಂದು ಚಿಂತಿಸಿ ಇದರ ಮರ್ಮ ಈಗ ತಿಳಿಯಿತು, ಈ ಕಾಂತೆಯ ಮನಸ್ಸು ಆ ಮಹೀಕಾಂತನೊಳ್ ನಿಂತಿತೋ ಏನೋ, ಇದಕ್ಕಿಂತ ನಮಗೆ ಸಂತೋಷವೇನು, ಇವರೀರ್ವರೂ ಅನುರೂಪರಾಗಿರುವರು, ಇದನ್ನೋಡಿದರೆ ಇವರಿವರಿಗೆ ಶರಗುಗಂಟುಬೀಳುವಂತೆ ತೋರುವದು, ಇಷ್ಟರಲ್ಲೇ ಲೀಲಾಶುಕವು ಯೇನುಮಾಡುವದೋ ನೋಡಬೇಕೆಂದು ಯೋಚಿಸುತ, ಎಲೈ ಮಾನಿನಿಯೇ! ಮನವಿಟ್ಟು ಲಾಲಿಸು, ಕುಲಪರ್ವತಂಗಳೊಳಗೆ ಶ್ರೇಷ್ಠಮಾಗಿ, ಭೂಮಿದೇವಿಯ ನಿತಂಬ ಭಾಗದಂತೆ ತೋರುವ ಸಹ್ಯಪರ್ವತ

ದೊಳ್ ಸಂಪ್ರದಾಯದಿಂದ ಸಕಲ ಲಕ್ಷಣಂಗಳಿಗೆ ನಿವಾಸ ಭೂಮಿಯಾದ ಚಂದ್ರವಂಶದ ಪರಂಪರೆಯೊಳ್ ನಹುಷರಾಯನಿಗೆ ಯಯಾತಿರಾಯನು ಕುಮಾರನಾಗಿಜನಿಸಿ, ದೇವಯಾನಿ ಶರ್ಮಿಷ್ಠೆಯೆಂಬ ರಮಣಿಯರ ಪಾಣಿಗಳಂ ಪಿಡಿದು ಸಕಲ ಪುಣ್ಯಕರ್ಮಂಗಳಂ ಉಂಟೆನಿಸಿ, ಧರ್ಮಸಂಸ್ಥಾಪನಂಗೈದನೆಂದು ನೀನು ಕೇಳಿಯೇ ಇರುವೆ, ಇಂತು ತ್ರಿಲೋಕ ವಿಖ್ಯಾತನಾದ ಯಯಾತಿರಾಯನ ಪುತ್ರನಾದ ಯದುರಾಯನಿಂದ ಯಾದವವಂಶವೆನಿಸಿದ ಮಹಾರಾಜಕುಲದ ಪರಂಪರೆಯೊಳ್ ಕೀರ್ತಿಪ್ರತಾಪಂಗಳಿಂದೊಪ್ಪಿ, ಪವಿತ್ರಚರಿತ್ರನಾದ ಸುಚರಿತ್ರನೆಂಬ ಮಹಾರಾಯನು ಸಹ್ಯಪರ್ವತರಾಜ್ಯವಂ ಪಾಲಿಸುವನು; ಆತನ ಪಟ್ಟದರಸಿಯಾದ ಗುಣವತೀದೇವಿಯು ಗರ್ಭಾಬ್ಧಿಯೊಳ್ ಪೂರ್ಣಚಂದ್ರನಂತೆ ಉದಯಿಸಿ ಬಾಲ್ಯಕಳೆಯುವದಕ್ಕೆ ಮೊದಲೇ ನಿಮ್ಮ ಗುರುವಾದ ವಿದ್ಯಾಸಾಗರನಿಂದ ಅರವತ್ತುನಾಲ್ಕು ಕಲೆಗಳಂ ಕಲಿತು, ಯುವರಾಜಪಟ್ಟದೊಳ್ ಅಭಿಷಿಕ್ತನಾಗಿಯೇ ಚೈತ್ರಯಾತ್ರೆಯಂತೆರಳಿ, ದೇಶದೇಶದ ಅರಸುಗಳಂ ಜಯಿಸಿ, ಪರರಾಯರ ನಾರಿಯರ ಕಣ್ಣನೀರಿನ ಪ್ರವಾಹಂಗಳೊಳ್ ತನ್ನ ಕೀರ್ತಿಗಳೆಂಬ ಹೆಣ್ಣು ಹಂಸೆಗಳಂ ಆಡುವಂತೆಮಾಡಿ, ಪರಾಕ್ರಮದ ಬೆಳಕಿನೊಳ್ ಸೂರ್ಯನಂ ಆಕಾಶದೀಪದಂತೆಇರಿಸಿ, ನಂಬಿದವರಂ ನರೇಂದ್ರರಂ ಮಾಡುತ, ಮಲೆತವರಂ ಅಮರಲೋಕಭೋಗಕ್ಕೆ ಕಳುಹಿಸಿ, ವಿದ್ವಾಂಸರ ಮನೆಗಳ ಮುಂದುಗಡೆಯೊಳ್ ಮದ್ದಾನೆಗಳ ಗಂಡಭಾಗಂಗಳಿಂದ ಮೆಂಡಾಗಿ ಸುರಿಯುವ ಮದಧಾರೆಗಳಿಂದ ಕೆಸರಾಗುವಂತೆಮಾಡಿ, ವಿತ್ತರಣಗುಣದಲ್ಲಿ ಕಲ್ಪವೃಕ್ಷವಂ ಮರವೆಂದು, ಕಾಮಧೇನುವಂ ಪಶುವೆಂದು, ಚಿಂತಾಮಣಿಯಂ ಪಾಷಾಣವೆಂದು ತಿರಸ್ಕಾರವಂಗೈದು, ರೂಪದಲ್ಲಿ ನಾನು ಪೇಳುವದೇನು? ಮನ್ಮಥಜಯಂತರಿಗೂ ತಂದೆಯೇ ಎನ್ನಬಹುದು; ನೀನೇ ನೋಡೆಂದು ನುಡಿದು, ಇಂತಲ್ಲದೆ ಕ್ಷಮೆಯೊಳ್, ವಾತ್ಸಲ್ಯದೊಳ್, ಪ್ರೇಮದೊಳ್, ಗಾಂಭೀರ್ಯದೊಳ್, ಶೌರ್ಯ, ಧೈರ್ಯಂಗಳೊಳ್, ಸಕಲ ಕಲ್ಯಾಣಗುಣಂಗಳೊಳ್ ಕೂಡ ಶ್ರೀ ಮಹಾವಿಷ್ಣುವಿಗೆ ತಮ್ಮನೋ ಅಣ್ಣನೋ ಎಂದು ಪೇಳುವಂತೆ ಒಪ್ಪಿ, ಸಕಲ

ಸಾಮ್ರಾಜ್ಯದಲ್ಲಿಯೂ ತ್ರಿಲೋಕಾಧಿಪತಿಯಾದ ದೇವೇಂದ್ರನ ಅವತಾರವೇ ಎಂಬಂತೆ ತೋರಿ ಸಕಲಲೋಕಂಗಳಂ ಪಾಲಿಸುವನಹುದು ಎಂದು ಮುಖಭಾವದಿಂದಲೇ ಕಾಣಿಸುವ ಈ ಮಹಾರಾಜನು ಕರ್ನಾಟದೇಶವನಾಳುವನು, ನೀನು ಕರ್ಣಾಂತಲೋಚನೆಯು, ಈ ರಾಜನು ರತ್ನಪುರಾಧೀಶನು, ನೀನು ನಾರೀಶಿರೋರತ್ನವು, ಈತನು ಸುಗಂಧರಾಜೇಂದ್ರನು, ನೀನು ಸೌಗಂಧಿಕಾದೇವಿಯು, ಇಂತು ಪೆಸರಿನಲ್ಲಿಯೂ ರೂಪದಲ್ಲಿಯೂ ಗುಣಂಗಳಲ್ಲಿಯೂ ಒಂದೇಪರಿಯಾಗಿರುವ ನಿಮಗಿರ್ವರಿಗೂ ಪಾಣಿಗ್ರಹಣವು ನೆರವೇರಿದರೆ ಪೂರ್ಣಿಮಾ ಪೂರ್ಣಚಂದ್ರನಂತೆ ಶೃಂಗಾರವು ಸಮರಸಭಾವವಂ ಪಡೆಯುತ ಮನ್ಮಥನ ಮನೋರಥವೆಲ್ಲ ಫಲಿಸುವದೆಂದು ನುಡಿಯಲಾಮಾತುಗಳನೆಲ್ಲ ಕರ್ಣಾಮೃತಗಳಾಗಿ ಕೇಳಿ ಮಕರಂದದ ಮಳೆಗರೆವ ಎಳೆಮಾವಿನ ಮರವಂಬಿಟ್ಟು ಮತ್ತೊಂದು ಕಡೆಗೆ ಪೋಗದ ಮರಿದುಂಬಿಗಳ ಗುಂಪಿನಂತೆ ಸೌಗಂಧಿಕಾದೇವಿಯು ಲಜ್ಜೆಯ ಮಿಂಚುಗೂಡಿದ ಹೊಸಹೊಳಪಿನ ನೋಟಗಳನ್ನು ಸುಗಂಧರಾಜೇಂದ್ರನ ಸುತ್ತುಮುತ್ತಲುಂ ಸೋಂಕಿ ಸೋಂಕಿಸದಂತೆ ಸುಳಿದಾಡಿಸುತ ತನ್ನ ಮನದೊಳು ನನ್ನ ಮನಸ್ಸಿನಲ್ಲಿರ್ದ ಪುರುಷನಿಗೋಸುಗ ಈ ಸ್ವಯಂವರವಂ ಸಾರಿ ಪಣಂಗಳಂ ತರಬೇಕೆಂದು ಪ್ರತಿಜ್ಞೆಯಂಮಾಡಿಯಿರ್ದೆನು, ಈಗ ಪ್ರಾಣವಲ್ಲಭನೇ ದೊರಕಿದ ಬಳಿಕ ಪಣಂಗಳಿಂದ ಕೆಲಸವೇನೆಂದು ನಿರೂಪಣಂಗೈದು ಈ ರಾಜಕುಮಾರನೊಡನೆ ಮಾತುಗಳನ್ನಾಡದಿರ್ದರೆ ಇನ್ನು ನಾನು ಒಂದು ನಿಮಿಷವು ನಿಲ್ಲಲಾರೆನೆಂದು ಮನ್ಮಥನ ಬಾಣಂಗಳ ಚಲ್ಲಾಟಕ್ಕೆ ತಲ್ಲಣಂಗೊಂಡು ಮಧೂಕಪುಷ್ಪಂಗಳಂ ಬೆರದು ಪೋಣಿಸಿದ ಮುತ್ತಿನ ಸರವಂ ಸುಗಂಧರಾಜೇಂದ್ರನ ಅಂದವಾದ ಕಂಠದೊಳು ಅಲಂಕಾರಮಾಡುವೆನೆಂದು ಯೋಚಿಸುತ್ತಿರಲಾ ಸೌಗಂಧಿಕಾದೇವಿಯ ಭಾವವಂ ನಿಜಪ್ರಭಾವದಿಂ ಪರಿಭಾವಿಸಿ ದೇವಲೋಕದ ಗಿಣಿಯು ಹಾ? ಕೆಲಸಕೆಡುವುದೆಂದು ತ್ವರೆಯಿಂದ ಎಲೈ ತರುಣಿಯೇ? ಈಗ ಇಲ್ಲಿಂದತೆರಳಿ ತೆರೆಯುಮರೆಗೆ ನಡೆಯಬಹುದು, ಮತ್ತು ನಿನ್ನೊಡನೆ ಪೇಳುವಕೆಲವು ನುಡಿಗಳು ಇಹವು, ನಿನ್ನ ಮನದೊಳಿರುವಂತೆಮನ್ಮಥನು ಹಾರಾಜನು

ನೆರವೇರಿಸುವನು ನಡೆಯೆಂದು ನುಡಿಯಲಾ ಮಾತುಗಳಂ ಕೇಳಿ ಸೌಗಂಧಿಕಾದೇವಿಯು ಲೀಲಾಶುಕವಂ ಕ್ರೂರಗ್ರಹದಂತೆ ತಿಳಿದು ಮತ್ತೆ ಮೊದಲಭಾಷೆಯಂ ಕೊಟ್ಟಿರುವಳಾದಕಾರಣ ಬಾಯಿಯೆತ್ತದೆ ಅದರ ಮಾತುಗಳಂ ಮೀರಲಾರದೆ ಮೊಗದಲ್ಲಿ ನಗುದೋರದೆ ಮನಸ್ಸಿನಲ್ಲಿಯೂ ನಿಲ್ಲದೆ ಪತಿಯಂಬಿಟ್ಟು ದೂರದೇಶಕ್ಕೆ ಪೋಗುವ ಸತಿಯಂತೆ ಸಿಟ್ಟುಸುರಂ ಬಿಟ್ಟು ಅಂದಳಮಂ ಅಲ್ಲಿ ನಿಲ್ಲಿಸಿ ಮೆಲ್ಲನೆಯಿಳಿದು ಮಾಲತಿಯ ಕರದೊಳು ತನ್ನ ಕರಪಲ್ಲವವನ್ನಿಟ್ಟು ಎಲ್ಲಿಯೂ ನೋಡದೆ ಗಿಣಿಯಪಂಜರವಂ ತರುವಂತೆ ಚಿತ್ರಲೇಖೆಯನ್ನೋಡಿ ಪ್ರಾರ್ಥಿಸಿ ಸನ್ನೆಗೈದು ಮಲ್ಲಿಗೆಯ ಜಡೆಕುಚ್ಚುಗಳು ಅಲ್ಲಾಡುವಂತೆ ಹಾರಂಗಳು ನಲಿಗೆಗೊಳ್ಳುವಂತೆ ಕೊರಳಿನ ಮೂರು ಗೆರೆಗಳು ಪುಷ್ಟಿಯಿಂದ ಅಂದವಾಗಿ ಕಾಣುವಂತೆ ವಾರೆಯಾಗಿ ಮೊಗವಂ ತಿರುಗಿಸಿ, ಸಾಣೆಯೊಳ್ ತೀರಿದ ತೀರುಗಳಂತಿರುವ ಕೋರೆನೋಟಗಳಿಗೆ ಸುಗಂಧರಾಜಕುಮಾರನಂ ನಿಮಿಷಗುರಿಯಾಗಿ ಮಾಡಲಷ್ಟರೊಳು ಲಜ್ಜೆಯೆಂಬ ತೆರೆಯು ಮರೆಯಾಗಲು, ಅಲ್ಲಿಂದ ಮುಂದೆ ನಡೆಯುವದಕ್ಕೆ ಬಳಲಿ ಬಲವಿಲ್ಲದೆ ನಿಲ್ಲುವದಕ್ಕೆ ಮನಸ್ಸಿಲ್ಲದೆ ಕುಚಭಾರದಿಂ ಬಳುಕುತ ನಿತಂಬಗೌರವದಿಂ ಅಲ್ಲಲ್ಲಿ ನಿಲ್ಲುವಾಗ ಕಿವಿಯ ಮುತ್ತಿನ ಚಳತುಂಬು-ಸಾಲುಗಳಿಂದೊಪ್ಪಿದ ಕಿತ್ತನೆಯು ವಾಲೆ ಬಾವಲಿಗಳು ಅಲ್ಲಾಡಿ ಹೊದ್ದಿರುವ ಚಂದ್ರಗಾವಿಯ ಮುಸುಕಂ ಮಾಸರಿಸಿ ಕಾಣುವಂತೆ ವೈಯಾರದಿಂದ ಅಡಿಗಳನ್ನಿಡುವಾಗ ಕಾಲುಸರದ ಗೆಜ್ಜೆಗಳು ಘಲ್ಲೆಂಬ ಧ್ವನಿದೋರಲು, ಸುಗಂಧರಾಜನಮನಸ್ಸು ಝಲ್ಲೆಂದು ತಲ್ಲಣಗೊಳ್ಳುವದು, ಆಗ ಅವಳ ಮೊಗದ ಪರಿಮಳವನೊಳಕೊಂಡುತಂಗಾಳಿಯು ಘುಮ್ಮೆಂದು ಸುಳಿಯಲು ಸುಗಂಧರಾಜನ ಮೈಯಲ್ಲೆಲ್ಲ ಝುಮ್ಮೆಂದು ಪುಳಕವುಂಟಾಗುವದು, ಇಂತು ಸಕಲರಾಜರುಗಳ ಮನಸ್ಸುಗಳಂ ದೊಡಗೂಡಿದ ಸೌಗಂಧಿಕಾದೇವಿಯು ಮನ್ಮಥನ ಪಟ್ಟದಾನೆಯಂತೆ ಮೆಲ್ಲನೆ ನಡೆಯುತ ತೆರೆಯ ಸಮೀಪವನ್ನು ಕುರಿತು ತೆರಳುತ್ತಿರಲು;

ರಾಜಕುಮಾರರೆಲ್ಲರೂ ಮೋಹವೆಂಬ ಕಗ್ಗತ್ತಲೆಯಂ ವಿಷಮಪನೋಟದಿಂದಲೆ ಪುಟ್ಟಿದ ವಿಷದಂತಿರುವ ವಿರಹತಾಪವಂ ಕೂಡ ನೊಂದಿ, ಸೌಗಂಧಿ

ಕಾವೇರಿಯು ಸಖಿಗೆಯು ಭಾವವಂ ನೋಡಿ ನಿರ್ವಿಣ್ಣರಾಗುತ್ತ, ಕಾರ್ಮು ಗಿಲಿನಿಂ ಮರೆಯಾದ ಎಳೆ ಮಿಂಚಿನಂತೆ ತೆರೆಯಿಂ ಮರೆಯಾದ ಕಳಿಂಗ ರಾಜ ಕನ್ಯೆಯುಂ ಕಂಡು, ನವನಿಧಿಗಳಂ ಪೋಗಲಾಡಿಸಿಕೊಂಡವರಂತೆ, ಸತ್ಯಲೋಕದಿಂದ ಪಾತಾಳಲೋಕಕ್ಕೆ ಜಗುಳಿ ಬೀಳುವಂತೆ, ಹೃದಯಂ ಗಳಲ್ಲಿ ಯೇನೋ ಒಂದು ಪರಿ ತಲ್ಲಣವಂಗೊಂಡು ಸ್ವಯಂವರವು ನ ಮಗೆ ಬ್ಯಾಪವೇಬೇಡ, ಇನ್ನೊಂದುಸಾರಿ ಆ ಸೌಗಂಧಿಕಾದೇವಿಯುಂನೋ ಡಿಸಲೆ ಸಾಕುಸಾಕೆಂದು ಚಿಂತಿಸುತ್ತಿರಲು; ಆ ತೆರೆ ಮರೆಯಲ್ಲಿ ಕನಕಪೀ ಠದೊಳ್ ಕುಳಿತು ಜಾಲಂಧರದ ನಿರಾಜಿಯ ಗವಾಕ್ಷದೊಳ್ ಒಂದೊಂ ದು ಸವದಿಂ ಮೊಗವಂ ತಿರುಗಿಸಿದಾಗಲೆಲ್ಲ ಸುಗಂಧರಾಜೇಂದ್ರನ ಸೊ ಬಗಂ ನೋಡುವದರಲ್ಲಿಯೇ ಲವಲವಿಕೆಗೊಂಡಿರುವ ರಾಜಪುತ್ರಿಯುಂ ಕಂ ಡು ಲೀಲಾಶುಕವು ಎಲೆ ಮುಗ್ಧೆಯೇ! ಕೇಳು, ಲೋಕದೊಳ್ ಸ್ವಯಂ ವರವಂಮಾಡಿದ ತರುಣಿಯರಿಲ್ಲವೆ? ಈಗ ನೀನೇ ಹೊಸದಾಗಿ ಸ್ವಯಂವ ರವಂ ಮಾಡುವಳಂತೆ ತಿಳಿದಿರುವೆ? ಈ ಬಾಲಭಾವವಂ ಬಿಡು, ಜಗದೊ ಳು ಒಬ್ಬ ಪುರುಷನು ನೀನು ಮೋಹಿಸಿರುವ ಚಿತ್ರದೊಳಿರ್ದಂತೆ ಸುಂ ದರನಾಗಿರ್ದಮಾತ್ರದಿಂದಲೇನು? ಪುರಂದರನಲ್ಲಿರ್ದ ಪ್ರಭಾವವಂ, ಪ್ರ ತಾಪವಂ, ಕೀರ್ತಿಯುಂ, ಸಾಮ್ರಾಜ್ಯವಂ, ಮತ್ತೆ ಯಾವ ಗುಣವಂ ಈ ರಾಜಕುಮಾರನಲ್ಲಿ ಕಂಡಿರುವೆ? ದೀಪವಂ ಫಲವೆಂದರಿತು ಬೀಳುವ ಪತಂಗದಂತೆ ರೂಪವಂ ಮಾತ್ರ ಕಂಡು ಮೋಹಿಸುವದರಿಂದ ಮೋಸ ಬರುವದಲ್ಲದೆ ಉಲ್ಲಾಸವಾಗಲಾರದು, ಪೂರ್ವದೊಳ್ ಬಾಲ್ಯದಲ್ಲಿಯೇ ಸುಬಾಹುವಂ ಸಂಹರಿಸಿ, ಮಾರೀಚನಂ ಓಡಿಸಿ, ಬ್ರಹ್ಮನಿಗೆ ಬದಲಾದ ವಿಶ್ವಾಮಿತ್ರನ ಯಾಗವಂ ಪಾಲಿಸಿ, ವಿಶ್ವವಿಖ್ಯಾತನಾಗಿ, ಶಿಲೆಯುಂ ಅಬಲೆ ಯುಂಮಾಡಿದ ಪ್ರಭಾವವಂ ಕಂಡಿರ್ದರೂ? ದೇವದಾನವರಿಂದ ಎತ್ತಲ ಶಕ್ಯವಾದ ಮಹಾದೇವನ ಧನುವನ್ನೆತ್ತುವದಂ ಪಣವಾಗಿ ಕುರಿತು ಮಗ ಳನ್ನಿತ್ತ ಜನಕರಾಯನಿಗೆ ಬುದ್ಧಿಸಾಲದೆಂದು ತಿಳಿದಿರುವೆಯೋ ಏನೋ? ಅಂತಿರ್ಪ ಶ್ರೀರಾಮಚಂದ್ರನ ಚಂದ್ರಮುಖಿಯಂ ಪೂರ್ವದೊಳ್ ಬಿಸರ್ಗ ರಾಕ್ಷಸನು ಅಪಹಾರವಂಗೈದ ಸಮಾಚಾರವನ್ನಾದರೂ ಕೇಳಬಲ್ಲೆಯೋ

ಇಲ್ಲವೊ? ಆಕಾಲದಲ್ಲೀ ಅಂತಿರುವಾಗ ಇಷ್ಟುಜನ ಎದುರಾಗಿ ಕಂಡು ಮೋಹವಂಗೊಂಡಿರುವ ರಾಜರಲ್ಲಿ ಯಾರಲ್ಲಿ ಏನು ಕಪಟ ಸಂಧಾನವಿರುವುದೋ, ಬಲವೆಂತಿರ್ಪುದೋ, ನೀನು ಚಿತ್ರವಂನೋಡಿ ಮೋಹಿಸಿದ ಸಮಾಚಾರವಂ ತರಿಳಿ ಅದರಂತೆ ರೂಪವಂತಾಳ ಬರುವ ಮಾಯಾವಿಗಳಾದ ರಾಜರುಗಳು ಎಷ್ಟುಜನವಿರುವರೊ, ಮತ್ತೂ ಅದೇ ವೇಷವಂಧರಿಸಿ ಮನುಷ್ಯರೂಪವಂತಾಳಿ, ರಾಕ್ಷಸರು ರಾಜಪುತ್ರಿಯರಂ ಮೋಸಗೊಳಿಸುವುದುಂಟು, ಇದನೆಲ್ಲವಂ ವಿಚಾರಿಸದೆ, ಚಂದವನ್ನೇನೋಡಿ ಬಬ್ಬನಂ ವರಿಸಿದರೆ ಕಳಿಂಗರಾಜನಿಗೆ ಕೀರ್ತಿ ಎಂತುಬರುವುದು, ನಿನಗೆ ಸುಖವೆಂತು ದೊರೆಯುವದು, ನನ್ನನ್ನೇನನ್ನವರು, ಮನ್ಮಥನಿಗೆ ಎಂತು ಮಾತಿನವಾಶಿಬರುವದು, ಬಹುಚಂದವಾಯಿತು, ಪೂರ್ವದ ಮಾತು ಅದಂತಿರಲಿ, ಈಗ ನೀನು ಕಂಡಂತೆ, ಆರಟ್ಟದೇಶದ ಅರಸಾದ ನಿಮ್ಮ ಕಾಕುಧ್ವಜರಾಯನ ಮಗಳು ಎಲ್ಲಿಗೆ ಹೋಗಿರುವಳೆಂದು ನೀನು ತಿಳಿದಿರ್ಪೆ, ಮತ್ತೂ ಪ್ರಬಲನಾಗಿರುವನನ್ನೇ ಭೂಮಿಯು ತನಗೆ ಪತಿಯಾಗಿ ವರಿಸುವಳೆಂದು ನೀನು ಕೇಳಿರುವೆಯುಷ್ಟೆ? ಆದ್ದರಿಂದ ಈಗ ನಾನು ಪೇಳಿದುದನೆಲ್ಲವಂ ಮನದಲ್ಲಿ ಯೋಚಿಸಿ ವಿಹಿತವಿದ್ದಂತೆಮಾಡು, ಎಲ್ಲವಂ ಬಲ್ಲವಳಿಗೆ ನಾನು ಪೇಳುವದೇನೆಂದು ನುಡಿಯಲಾಗ, ಕೋಪವನೆಲ್ಲವಂ ಮೂಗಿನಮೇಲೆ ಇರಿಸಿದಂತೆ ಇಮ್ಮಡಿಯಾದ ಕೆಂಪುಬಣ್ಣದಿಂ ಹೆಚ್ಚಿದ ಲೀಲಾಶುಕದ ಮೊಗಮನ್ನೋಡಿ ಸೌಗಂಧಿಕಾದೇವಿಯು, ಈ ಶುಕವು ಪೇಳುವುದೆಲ್ಲ ತನಗೆ ಹಿತವೆಂದು ತಿಳಿದು ಕೈಗಳಂಮುಗಿದು ಎಲೈ ಸರ್ವಜ್ಞನೇ? ಹುಡುಗಿಯಾದ ನಾನು ಏನುಬಲ್ಲೆನು, ನನ್ನ ಅಪರಾಧವಂ ಮನ್ನಿಸಿ, ನಿನ್ನ ಮನದೊಳಗಿರ್ದಂತೆ ಕಾರ್ಯವನ್ನೆರವೇರಿಸು, ಮತ್ತೂ ನನ್ನನ್ನೀರಿನೋಳ್ಮುಳುಗಿಸುವುದಂ ಪಾಲಿನೋಳ್ ತೇಲಿಸುವುದಂ, ನಿನ್ನನ್ನೇಕೂಡಿರುವುದೆಂದು ನುಡಿದು, ನಾನು ಇಂತು ತ್ವರೆಯುಂಮಾಡಿ ಲೀಲಾಶುಕದ ಮನಸ್ಸಿಗೆ ಮುನಿಸುತೋರ್ಪಂತೆ ಮಾಡಿಕೊಂಡೆನೆಂದು ತನ್ನ ಮನದೋಳ್ ಸುಮ್ಮನೆ ಚಿಂತಿಸುತ, ಕಣ್ಣುಗಳೊಳ್ ಕಂಬನಿಯುಂ ಮಿಂಚುತೋರಿಸುತ ತಲೆಬಾಗಿ ಗದ್ಗದಸ್ವರದಿಂದಕೂಡಿರಲಾ ಸೌಗಂಧಿಕಾದೇವಿಯು ಬಾಡಿರುವ

ಮೊಗದ ಸೊಬಗಂ ಕಂಡು ಆ ದೇವಶುಕವು ಎಲೈ ಅರಸನೇ! ನಿನ್ನ ಮನಸ್ಸಿನಲ್ಲಿರ್ದ ಪುರುಷನೇ ಈಗ ನಾನು ಪೇಳುವ ಪಣಂಗಳಂ ತರುವನು, ಸಂಶಯವಂಬಿಡು ನೀನು ಇಷ್ಟರೊಳ್ ಬ್ಯಾಸರಗೊಳ್ಳಬ್ಯಾಡ, ವಾರಿಧಿಗಳು ಮೇರೆತಪ್ಪಿದರೂ, ಕುಲಗಿರಿಗಳು ನೆಲವಂ ಬಿಟ್ಟರೂ, ಸಪ್ತಪಾತಾಳಲೋಕಂಗಳು ಭೂಮ್ಯಾಕಾಶಂಗಳಿಂದ ಕೂಡಿ ಕೆಳಗೆ ಮೇಲಾದರೂ ನಾನು ಪೇಳಿದ ಮಾತುಗಳು ಅಸತ್ಯವಾಗಲಾರವು. ನಮ್ಮ ಮನ್ಮಥ ಮಹಾರಾಜನ ಆಜ್ಞೆಯಂ ತಿರಿಗಿಸುವುದಕ್ಕೆ ನೊಸಲಿನೊಳು ಕಣ್ಣಯಿರುವನಿಂದಲೂ ಆಗಲಾರದೆಂದು ತಿಳಿದು ಸಂತೋಷಪಡಿರಿ, ನಿನಿಗೀಗಲೇ ಒಂದು ನಿದರ್ಶನವಂ ಮಾಡಿಕೊಡುವೆನೆಂದು ಧೈರ್ಯವಂ ಪೇಳಿ, ಬಳಿಕ ಮಾಲತಿಯೇ ಮೊದಲಾದ ಕೆಳದಿಯರೊಳು ಪ್ರಿಯಸಖಿಯಾದ ಚಿತ್ರಲೇಖೆಯಂ ಕರೆದು ಎಲೈ ಸಖೀಶಿರೋಮಣಿಯೇ! ಇಲ್ಲಿ ನಮ್ಮ ಸೌಗಂಧಿಕಾದೇವಿಯ ಸ್ವಯಂವರಾರ್ಥವಾಗಿ ಬಂದಿರುವ ರಾಯರುಗಳಂ ಕುರಿತು ತೆರೆಯ ಮುಂದುಗಡೆಯೊಳು ನಿಂತು ನಮ್ಮ ಒಡತಿಯಾದ ಸೌಗಂಧಿಕಾದೇವಿಯು ಕೆಲವು ಪಣಂಗಳಂ ಕುರಿತು ಇರುವಳು, ಆ ಪಣಂಗಳೊಳು ಚತುರ್ದಂತವಾಗಿ ಶುಭವಾಗಿ ಶುಭ್ರವಾಗಿರುವ ಆನೆಯಂ ತಂದುಕೊಡುವದೊಂದು ಪಣವು, ಇದಂ ಯಾರು ನೆರವೇರಿಸುವಿರೀ ಎಂದು ನೀನು ಕೇಳು ನಡೆಯೆಂದು ನುಡಿಯಲು; ಆ ದೇವಲೋಕದ ಗಿಣಿಯಮಾತಂ ಕೇಳಿ ಚಿತ್ರಲೇಖೆಯು ಮಹಾಪ್ರಸಾದವೆಂದು ತೆರೆಯ ಮುಂದುಗಡೆಯೊಳು ಬಂದು ನಿಂದು ಸಕಲ ರಾಜಕುಮಾರರು ಕೇಳುವಂತೆ ಒಂದು ಮಾತಂ ಮಧುರವಾಗಿ ಇಂತೆಂದು ಬಿನ್ನವಿಸಿದಳು:-ಅದೆಂತೆನೆ, ಎಲೈ ರಾಜಾಧಿರಾಜಕುಮಾರರುಗಳಿರಾ! ನೀವೆಲ್ಲರು ಚಿತ್ತವಿಟ್ಟು ಲಾಲಿಸಬಹುದು, ಈಗ ತಮ್ಮಗಳ ವಂಶಾವತಾರಂಗಳಂ ಸದ್ಗುಣಂಗಳಂ ಕೂಡ ಕೇಳಿ ನಮ್ಮ ಅರಸಿಯಾದ ಸೌಗಂಧಿಕಾದೇವಿಯು ಆನಂದ ಸರಸ್ಸಿನಲ್ಲಿ ಓಲ್ಯಾಡುವಳು. ನಿಮ್ಮ ಪರಾಕ್ರಮ ಭಾವಂಗಳಿಗೆ ಅನುರೂಪವಾಗುವಂತೆ ತಾನು ಮಾಡುವ ಬಂದೊಂದು ಪರಿನೋಂಪಿಗೋಸುಗ ಕೆಲವು ವಸ್ತುಗಳಂ ಪಣಂಗಳಾಗಿ ಕುರಿತು ಇವೆಲ್ಲವಂ ತಂದಿತ್ತ ರಾಜಕುಮಾರನಂ ತನಗೆ ಚಿತ್ತವಲ್ಲಭನನ್ನಾಗಿ

ವರಿಸುವೆನೆಂದು ಪ್ರತಿಜ್ಞೆಯಂ ಮಾಡಿರುವಳು. ಆ ಪಣಂಗಳೊಳು ಈಗ ಚತುರ್ದ್ದಂತಂಗಳಂತ ಕೂಡಿ ಬೆಳ್ದಿಂಗಳ ಬಣ್ಣವಾಗಿ ವಿಲಕ್ಷಣಂಗಳಾದ ರೇಖೆಗಳಿಂದ ಸುಳಿಗಳಿಂದ ಬಿಂದುಗಳಿಂದ ಕೂಡ ಒಪ್ಪಿರುವ ಒಂದು ಮದ್ದಾನೆಯಂ ತಂದು ಕೊಡಬೇಕೆನ್ನುವದು ಒಂದು ಪಣವೆಂದು ಬಿನ್ನವಿಸಲು; ಆ ಮಾತಂ ಕೇಳಿದ ಮಹಾರಾಜಕುಮಾರರುಗಳೆಲ್ಲ ಸುಮ್ಮನೆ ಇರಲು, ಅದರೊಳು ಪಣವದೆ ನಮಗೇನೆಂದು ನೆಮ್ಮದಿಯಿಂದ ಇರುವರು ಕೆಲವರು, ಬಿಳಿಯ ಆನೆ ಇಲ್ಲದಿದ್ದರೆ ಪಚ್ಚೆಯ ಆನೆಯಂ ಪಣವಾಗಿ ಕೇಳಲಿ, ಸೌಗಂಧಿಕಾದೇವಿಯಂ ಇನ್ನೊಂದು ಸಾರಿ ನೋಡಿ ನೊಂದಿರುವ ನಮ್ಮ ಮನಸ್ಸುಗಳಂ ಆನಂದಪಡಿಸುವವೆಂದು ತೆರೆಯನ್ನೇ ನೋಡುವರು ಕೆಲವರು, ಇದುಮಲ್ಲದೆ ರೂಪ, ಲಾವಣ್ಯ, ಚಾತುರ್ಯ ಮೊದಲಾದ್ದರಿಂದ ಸೌಗಂಧಿಕಾದೇವಿಯೊಡನೆ ಸಮಾನಳಾದ ಚಿತ್ರಲೇಖೆಯ ಮೊಗದ ಬೆಡಗಂ ಕಂಡು ಕಳವಳಿಸುವರು ಕೆಲವರು, ಇದೇನು ಅಶಕ್ಯವಾದ ಪಣನಿರೂಪಣವು, ಇದು ಯಾರಿಂದ ಆಗುವದು ಎಂದು ಭಾರಿಭಾರಿಗು ಪರಸ್ಪರ ಮುಖಗಳ ನ್ನೋಡುತ ಬಹುದೂರ ಚಿಂತೆಯಂಗೈಯ್ಯುವರು ಕೆಲವರು, ಇದೇನೋ ಲೋಕವಿಚಿತ್ರಮಾದ ಸಂಕೇತವೆಂದು ಶಂಕಿಸುವರು ಕೆಲವರು, ಈ ಪರಿಯಿಂದ ರಾಜಕುಮಾರರೆಲ್ಲರು ಯೇನೇನೂ ತೋರದೆ, ಬದಲು ಹೇಳುವದಕ್ಕೆ ಬಾರದೆ ಮೌನವ್ರತಮಂ ಧರಿಸಿರಲು; ಇಂತು ನಿಸ್ತರಂಗ ಸಮುದ್ರದಂತೆ ಏಕಾಂತಭಾವವಂ ಪೊಂದಿರುವ ಸಭಾಮಂಟಪದೊಳು ಶುಭಾಂಗನಾದ ಸುಗಂಧರಾಜಭೂಕಾಂತನು ಈ ಕಾಂತೆಯು ಪಣವಾಗಿ ಕುರಿತಿರುವ ವಸ್ತುಗಳು ಲೋಕಾಂತರದಲ್ಲಿಯೆ ಇರುವದು, ಇದನೆಂತು ಸಾಧಿಸಬಹುದು, ಎಲ್ಲರಂತೆ ನಾನು ಸುಮ್ಮನಿದ್ದರೆ ನನ್ನಂ ಸಾಧಾರಣನೆಂದು ತಿಳಿಯುವಳು, ನಮ್ಮ ವಂಶದೊಳು ಚಂದ್ರ ಬುಧ ಯಯಾತಿ ನಹುಷ ಮೊದಲುಗೊಂಡು ಇಂದಿನವರಿಗೂ ಅಪಕೀರ್ತಿಯುಂಬುವದಿಲ್ಲ. ಈಗ ರಾಜಕುಲಕ್ಕೆಲ್ಲಾ ಅಪಮಾನ ಬಂದುದೆಂದು ಒಂದು ಮುಹೂರ್ತವಾಲೋಚಿಸುತಿರ್ದು ಸಾಕ್ಷಾತ್ಸ್ಪರಂಧರನಾದ ಕಾರಣ ಏನೋ ಒಂದು ಧೈರ್ಯದಿಂದ ಉತ್ಸಾಹವಂಗೊಂಡು ಶ್ರೀ ಚಾಮುಂಡೇಶ್ವರಿಯ ಪಾದಾರವಿಂದಗಳಂ ಹೃದಯಪುಂಡ

ರೀಕದೊಳು ನೆನೆದು ಈ ದುರ್ಘಟವಾದ ಪದಾರ್ಥವಸ್ತುವಂ ಫಣಿರಾಜಲೋ
ಕವೆಂದಲುಗೊಂಡು ಪರಮೇಷ್ಠಿಯ ಲೋಕದೊಳಗಾಗಿ ಇರ್ದರೂ ತಂ
ದು ಕೊಡುವೆನೆಂದು ತನ್ನ ಮನದೊಳಗೆ ತೋರಿ, ಮಂತ್ರಿಶಿರೋಮಣಿ
ಯಾದ ಸುಮಿತ್ರೆಯು ಸಂತೋಷ-ಚಿತ್ರಲೇಖೆ ಪೇಳಿದ ಮಾತಿಗೆ ಪ್ರತ್ಯುತ್ತರ
ವಂ ಕೊಡೆಂದು ಆಜ್ಞಾಪಿಸಲು; ಭಾವಜ್ಞಳಾದ ಸುಮಿತ್ರೆಯು-ಮೂರ
ಡಿಗಳಂ ಮುಂದಿಟ್ಟು ಕೈಗಳಂ ಮುಗಿದುಕೊಂಡು ರಾಜಕುಮಾರರೆಲ್ಲರೂ
ಕೇಳುವಂತೆ ಎಲೈ ಮಹಾರಾಜರುಗಳಿರಾ! ನೀವೆಲ್ಲರು ಚಿತ್ತವಿಟ್ಟು ಲಾಲಿಸ
ಬಹುದು, ಮಹಾವಂಶಗಳಲ್ಲಿ ಜನಿಸಿ, ಪ್ರತಾಪಶಾಲಿಗಳೆನಿಸಿ, ಪ್ರಭಾವವಂ
ತಳೆದು, ತ್ರಿಲೋಕದೊಳು ಗಾನವಂ ಗೈಯುತ್ತಿರುವ ಚರಿತ್ರೆಗಳಂ ಪಡೆ
ದಿರುವ ನಿಮ್ಮ ಸಭೆಯೊಳು ಪೂರ್ಣವಾಗಿ ಕುರಿತಿರುವ ವಸ್ತುವು ದುರ್ಘ
ಟವೆಂದರೆ ರಾಜಕುಲಕ್ಕೆಲ್ಲ ಅವಮಾನ ಬರುವುದೆಂದು ನಮ್ಮ ಸುಗಂಧ
ಮಹಾರಾಯನು ಮಾಡುವ ಪ್ರತಿಜ್ಞೆಯನ್ನೇ ತಾವೆಲ್ಲ ಮಾಡಿದ ಪ್ರತಿ
ಜ್ಞೆಯೆಂದು ಚಿತ್ತರಂಗದೊಳು ತರಬೇಕೆಂದು ನುಡಿದು, ಆ ಬಳಿಕ ಚಿತ್ರ
ಲೇಖೆಯು ನಸುನಗುವ ಮೊಗವಂ ಮಾಡಿ ಎಲೈ ಸಖೀಮಣಿಯೇ, ನಿಮ್ಮ
ಒಡತಿಯಾದ ಸೌಗಂಧಿಕಾದೇವಿಯು ಪ್ರತಿಜ್ಞೆಯಂ ಮಾಡಿರುವ ಪ್ರಸಂಗ
ಳೊಳು ಈಗ ಪೇಳಿದ ಚತುರ್ದಂತವಾದ ಬಿಳಿಯ ಆನೆಯಂ ತ್ರಿಲೋಕ
ಗಳಲ್ಲಿ ಎಲ್ಲಿರ್ದರೂ ತಂದು ಕೊಡುವೆವೆಂದು ರಾಜಾಧಿರಾಜೇಂದ್ರರಾದ
ನಮ್ಮ ಸುಗಂಧರಾಜನರಪತಿಯವರು ಅಪ್ಪಣೆಯಂ ಕೊಟ್ಟಿರುವುದಂ
ನಿಮ್ಮ ದೇವಿಯವರಿಗೆ ವಿಜ್ಞಾಪನಂಗೈಯಬಹುದೆಂದು ಎಲ್ಲರೂ ಕೇಳುವಂ
ತೆ ಪೇಳಲು; ಆ ಮಾತಂ ಕೇಳಿ ಚಿತ್ರಲೇಖೆಯು ಮಂತ್ರಿ ಇದ್ದರೆ ಇಂತಿರ
ಬೇಕೆಂದು ಸಂತೋಷಪಟ್ಟು ಕಾಲುಸರ ಅಂದಿಗೆಗಳು ಒಡ್ಯಾಣದ ಕಿ
ರುಘಂಟೆಗಳು ಕರಕಂಕಣಂಗಳು ಕೂಡಾ ಒಂದೇ ಕಾಲದೊಳು ಘಲ್ಲೆಂ
ದು ಧ್ವನಿಗೊಡುವಂತೆ, ಜಡೆಯಲ್ಲಿ ಕುಚ್ಚುಗಳು ಕುಣಿದಾಡಿ, ಕಾಣಿಸುವಂತೆ
ಮುಡಿದಿರುವ ಮೊಗ್ಗೆಗಳು ಉದುರುವಂತೆ, ಮಿಂಚುಹೊಳೆದಂತೆ ವಾನೋ
ಟವಂ ತಿರಿಗಿಸುತ ಅಪೊಂದು ಗತ್ತಿನಿಂದ ಘಾರ್ಯೆಂದು ಹಿಂತಿರುಗಿ ಅರ
ಸಿಗೆ ತಿಳುಹಿಸಬೇಕೆಂದು ತೆರೆಮರೆಗೆ ಪೋಗುತ್ತಿರಲು; ಅಷ್ಟರಲ್ಲಿಯೇ

ನೇಪಾಳ, ಪಾಂಚಾಲದೇಶದ ಭೂಪಾಲರು ಕೋಪಗೊಂಡು ಈಪರಿಯಿಂದ ಸ್ವಯಂವರದಲ್ಲಿ ಪಣಗಳಂ ಕೇಳಿದವರಂ, ತಂದವರಂ ಕೂಡ ನಾವೆಲ್ಲಿಯೂ ಕಾಣೆವು, ಚತುರ್ದಂತವೆಂದರೇನು? ಬಿಳಿಯ ಆನೆಯೆಂದರೇನು? ಭೂಲೋಕಕ್ಕೆ ತರುವ ಸಮಾಚಾರವೆಂತು, ಇಂತು ಭೂಮಿಯೊಳಗೆ ಇಲ್ಲದೇ ಇರುವುದಂ ತಂದಿತ್ತವನಂ ವಲ್ಲಭನನ್ನಾಗಿ ವರಿಸುವೆನೆಂದು ಕುರಿತಿರುವುದಂ, ಇದಂತಂದುಕೊಡುವೆವೆಂದು ಸಾವಿತ್ರಿಯು ಮುಖದಿಂದ ಸುಗಂಧರಾಜೇಂದ್ರರವರು ಅಪ್ಪಣೆಯಂಕೊಡುವುದಂ ಕೇಳಿದರೆ ನಮಗೆ ಆಶ್ಚರ್ಯವಾಗಿ ತೋರುವುದು, ಸುಮ್ಮನೆ ಇರುವದು ಕ್ಷತ್ರಿಯಧರ್ಮವಲ್ಲವೆಂದು ರಾಜೇಂದ್ರರವರು ಅಪ್ಪಣೆಯನ್ನಿತ್ತಂತೆಕಾಣುತ್ತೆ, ಸೌಗಂಧಿಕಾದೇವಿಯು ಈ ಪಣವಂ ಕೇಳಿದ್ದರಿಂದ ಬಾಲಭಾವವನ್ನೇ ತೋರಿಸುವಂತೆ ಕಾಣಲಾಯಿತು. ಇದಂತಿರಲಿ, ಸ್ವಯಂವರದ ನೆವದಿಂದ ದೇಶದೇಶಂಗಳಿಂದ ನಮ್ಮನ್ನೆಲ್ಲರಂ ಕರೆಸಿ ತನ್ನ ಕನ್ನೆಯಿಂದ ಕಠಿಣ ಪಣವಂಪೇಳಿಸಿ, ಕೈಲಾಗದವರೆಂದು ನಮ್ಮ ಮಾನವಂ ಕಳೆಯುವದೇ ಕಾರ್ಯವೆಂದಿರುವ ಕಳಿಂಗರಾಯನ ಕಪಟವಿದ್ಯವೆಲ್ಲ ಕರತಲಾಮಲಕವಾಗಿ ತಿಳಿಯಬಂತು, ಇದು ಸ್ವಯಂವರವಲ್ಲ, ಸ್ವಯಂಕೃತಾಪರಾಧವೆಂದು ನುಡಿಯುತ ಸಭಾಮಂಟಪದಿಂದ ಏಳುವದಕ್ಕೆ ಉದ್ಯುಕ್ತರಾಗಲು; ಮಿಕ್ಕಾದ ಅರಸುಗಳೊಳು ಕೆಲವರು ನೇಪಾಳಭೂಪಾಲನು ನಿರೂಪಿಸುವದು ವಿಹಿತವಾದ ಮಾತೆಂದು ತಲೆದೂಗುತ್ತಿರಲು; ಆಸಮಯದೊಳು ಸೌಗಂಧಿಕಾದೇವಿಯು ಸಮೀಪದಲ್ಲಿರುವ ಲೀಲಾಶುಕವು ವಜ್ರಾಯುಧವಂ ಸಂಗ್ರಹಿಸುವದಕ್ಕೆ ಸಮಯಒದಗಿತೆಂದು ಸಂತೋಷವಂಬಟ್ಟು ಸೌಗಂಧಿಕಾದೇವಿಯಂ ಕುರಿತು ಎಲೈ ರಾಜಪುತ್ರಿಯೇ! ಈಗ ಈ ರಾಯರುಗಳಿಗೆ ಸಮಾಧಾನವಾಗುವಂತೆ ಒಂದು ಕಾರ್ಯವಂ ಸಂಧಾನವಂಗೈವೆನು ಅವಧಾನದಿಂದನೋಡೆಂದು ನುಡಿದು, ಅಲ್ಲಿಂದ ಎದ್ದು ಪಕ್ಷಗಳ ಪಟಪಟಾತ್ಕಾರದಿಂದ ಸಭಾಮಂಟಪದ ಜನಂಗಳ ಮನಂಗಳಿಗೆ ವಿಸ್ಮಯವಂ ವಿಲಾಸವಂ ಗೊಡುತ, ವಿಚಿತ್ರಗತಿಯಿಂದ ಚಿತ್ರಲೇಖೆಯು ಭುಜಶಾಖೆಯಮೇಲೆ ಕುಳಿತು ತೂಗ್ಯಾಡುತ್ತಿರಲು; ಆಲೀಲಾಶುಕವು ಕಂಡು ಜನಂಗಳೆಲ್ಲರು ಇದೇನು ಅಪೂರ್ವವಾದ

ಗಿಣಿ ಎಂಬ ರೂಪವನ್ನೀಕ್ಷಿಯೇ ವಿಸ್ಮಯಂಬಡುತಲಿರುವ ಸಮಯದೊ
ಳು ಆ ಶುಕವು, ಎಲೈ ರಾಜರುಗಳಿರಾ! ತಾವು ಇಷ್ಟೇತಕೆ ಕೋಪಗೊಳ್ಳ
ಬೇಕು, ನಮ್ಮ ಅರಸಿಯು ಇನ್ನೊಂದು ಮಾತಂ ಬಿನ್ನವಿಸುವಂತೆ ನನ್ನಂ
ಕಳುಹಿಸಿ ಇರುವಳು, ಕಟಾಕ್ಷದಿಂದಆಲೈಸಬಹುದು, ಪರೋಕ್ಷದಲ್ಲಿರ್ದ
ವಸ್ತುವಂ ಪಣವಾಗಿ ಕೇಳಿದ್ದು ಬಾಲಭಾವವೆಂದು ಹೇಳುವವಕ್ಕೆ ಸಾಧ
ನವಾದುದು, ಅದಂತಿರಲಿ, ಈಗ ಪ್ರತ್ಯಕ್ಷದಲ್ಲಿಯೆ ಇದ್ದವಸ್ತುವಂ ಪ
ಣವಾಗಿನಿರೂಪಣಂಗೈದಿರುವಳು, ತಾವೆಲ್ಲರು ಪರಾಂಬರಿಸಿಅದಂನೆರವೇರಿ
ಸುವಂತೆಮಾಡಬಹುದು ಎಂದು ನುಡಿಯಲು;ಆಮಾತಿಗೆಮಹೀಪಾಲರೆಲ್ಲರು
ಪಣವಂ ಸಾಧಿಸುವ ಪ್ರಯತ್ನವಿಲ್ಲದೆ, ಪರಿಣಯವಾಗಬೇಕೆಂಬ ಮನಸ್ಸಿಲ್ಲ
ದೆ, ಪರಮಾಶ್ಚರ್ಯಕರವಾದಪಕ್ಷಿಯ ಪರವಂಚಕಂಗಳಾದ ಸವಿನುಡಿಗ
ಳಂ ಕೇಳಿ ಈ ಶುಕವು ಲೋಕಸಾಧಾರಣವಲ್ಲ, ಗೌರಿಯಂಪೂಜಿಸುವ
ಸೌಗಂಧಿಕಾದೇವಿಗೆ ಆ ಮಹಾದೇವಿಯು ತನ್ನ ಕರದಲ್ಲಿರ್ದ ಶುಕವಂ ದ
ಯಪಾಲಿಸಿ ಇರುವಳೋ? ಅಲ್ಲದಿರೆ, ಈಗ ತಾನೇ ಮನ್ಮಥನ ಸವಾರಿ
ಯು ಬಂದು ಇಳಿದು ತಾನು ಸೌಗಂಧಿಕಾದೇವಿಯೊಡನೆ ಮಾತನಾಡುವ
ತನ್ನ ವಾಹನವಂ ಮುಂದೆ ಕಳುಹಿದನೋ, ಇದುಮಲ್ಲದೆ ಪೂರ್ವ
ದೋಳ್ ಪಕ್ಷಿರಾಯನಿಗೆ ತತ್ವೋಪದೇಶವಂ ಮಾಡಲೋಸುಗ ನಾ
ರದನಿಂದ ಬಂದ ಲೀಲಾಶುಕವೇ ಮರಳಿ ಕಾರಣಾಂತರದಿಂದ ಬಂದು
ಕಳಿಂಗ ರಾಜಪುತ್ರಿಯಬಳಿಯಲ್ಲಿರುವದೋ? ಯಾವದೂ ತಿಳಿಯುಕೂ
ಡದೆಂದು ಸಂಶಯದೋಳ್ ಮುಳುಗಿ ಎಲ್ಲರೂ ಕೋಪವಂಬಿಟ್ಟು ಆಶ್ಚ
ರ್ಯರಸವಂ ಅನುಭವಿಸುತ್ತಿರಲು; ಆಗ ನೇಪಾಳ, ಪಾಂಚಾಲದೇಶದ ಅರ
ಸುಗಳು ಈ ಶುಕದೊಡನೆ ಮಾತನಾಡುವದೇ ಸಾಕೆಂದು ಎಲೈ ಅಪೂರ್ವ
ಶುಕವೇ! ನಿನ್ನ ಮಾತುಗಳಂ ಕೇಳಿಯೇ ನಮ್ಮ ಮನಸ್ಸು ಆನಂದದೋ
ಳ್ ಮಗ್ನಂಗಳಾದವು. ಈಗ ನಿಮ್ಮ ಅರಸಿ ಹೇಳಿದ ಪ್ರತ್ಯಕ್ಷಮಾದ ಪ
ಣವದೇನು ನುಡಿಯಬಹುದೆಂದು ಸಂತೋಷದಿಂದ ಕೇಳಲು; ಆಮಾತಿಗೆ
ಲೀಲಾಶುಕವು ಭೂಪಾಲರಂಕುರಿತು ಎಲ್ಲರೂ ಲಾಲಿಸಬೇಕು:-ಈಗ ಉದ
ವಿಂಧ್ಯಗಿರಿಯ ಝರಿಯೊಳ್ ದೇವತೆಗಳ ಮಹಾಯುಧವು ಬಿದ್ದಿರುವದು,

ಅದಂ ತಾವೆಲ್ಲರು ಪರಾಂಬರಿಸಿ ಎತ್ತಣಂತೆ ಚಿತ್ತಂಗಳಲ್ಲಿ ತರಬೇಕೆಂಬ ಪ್ರಾರ್ಥನೆಯಂಗೈವಳು. ಈ ಪಣವಂ ಸಾಧಿಸಿ ತಂದಿತ್ತವರಿಗೆ ಮಿಕ್ಕಾದ ಪಣಂಗಳು ಸುಲಭಂಗಳಾಗುವವೆಂದು ನುಡಿಯಲು; ಆ ಲೀಲಾಶುಕದ ಮಾತಿಗೆ ಎಲ್ಲರೂ ಉಲ್ಲಾಸಗೊಂಡು ಬಾಲಕನು ನುಡಿದರೂ, ಶುಕವು ಹೇಳುವದಾದರೂ ಯುಕ್ತಿಯುಕ್ತವಾದ ವಚನವಂ ಗ್ರಹಿಸಬೇಕೆಂದು ಲೋಕಮರ್ಯಾದೆಯಿರುವಂತೆ ಈಗಲೂ ಶುಕವು ಹೇಳುವದರಿಂದ ಸೌಗಂಧಿಕಾದೇವಿಯ ಮನೋಭಾವವು ಬಹು ತಾತ್ಪರ್ಯಗರ್ಭದಿಂದ ತಿಳಿದವು, ಇದು ನಮಗೆಲ್ಲ ಸಮ್ಮತವೆಂದು ಕಳಿಂಗ ರಾಜನಂನೋಡಿ ಉಪವಿಂಧ್ಯಪರ್ವತದ ಸಮೀಪವಂ ಕುರಿತು ಹೋಗಿಬರುವದು ನಿಮ್ಮ ಪುತ್ರಿಯ ತಾತ್ಪರ್ಯವಹುದೇ ಎಂದು ಕೇಳಲು; ಆ ಮಾತಿಗೆ ಚಿತ್ರಲೇಖೆಯು ಎಲೈ ಭೂಪಾಲ ಶಿರೋಮಣಿಗಳಿರಾ! ಕೇಳಿ—ನಮ್ಮ ಸೌಗಂಧಿಕಾದೇವಿಯ ಸವಿಮಾತುಗಳಿಗೂ, ಗಿಣಿಯ ನುಡಿಗಳಿಗೂ ಭೇದವುಂಟೇ ಎಂದು ನುಡಿಯಲು; ರಾಜಕುಮಾರರೆಲ್ಲರೂ ಈ ಶುಕವು ನಿರೂಪಿಸಿದ ಅರ್ಥವು ಮನ್ಮಥನ ಆಜ್ಞೆಯೆಂದು ತಿಳಿದು, ಒಬ್ಬರೊಬ್ಬರ ಮೊಗಂಗಳಂನೋಡುತ ಎಳರೀ ಉಪವಿಂಧ್ಯಗಿರಿಯಂನೋಡಿಬರುವ ಎಂದು ಮಾತನಾಡುತಲಿರಲು; ಆಸಮಯದೊಳ್ ಕಳಿಂಗರಾಜನು, ತನ್ನ ಮಂತ್ರಿಯಾದ ಧನಂಜಯನಂ ಕರೆದು, ಐವತ್ತಾರು ಮತ್ತಗಜಂಗಳಿಗೆ ಅಲಂಕಾರವಂ ಬೇಗಮಾಡಲೀ ಎಂದು ನೇಮಿಸಲು, ಆಕ್ಷಣದೊಳ್ ಕಳಿಂಗಮಂತ್ರಿಯು ಮಹಾಪ್ರಸಾದವೆಂದು, ರಾಜಮಂದಿರದ ಮುಂದುಗಡೆ ಬಂದು, ಬಂದೀತರವಾದ ಗಜಬೃಂದವಂನೋಡಿ, ಶೀಘ್ರವಾಗಿ ಅಲಂಕಾರವಂಗೈವಂತೆ ಅಧಿಕಾರಿಗಳಿಗೆ ನಿಯಮಿಸಲು; ಆಕ್ಷಣದಲ್ಲಿಯೇ, ಆ ಅಧಿಕಾರಿಗಳು ತರತರದ ಆನೆ ಕುದುರೆಸಾಲುಗಳನ್ನು ಸರಿಗೆಯ ಪೊಲಿದಿರುವ ಮುತ್ತುಗಳಝಾಲರಿಗಳುಳ್ಳ ಬಣ್ಣಬಣ್ಣದ ಬಟ್ಟೆಗಳ ಉಲ್ಲಾರಗಳಂ ಪೊದ್ದಿಸಿ, ಬಟ್ಟು, ಚತುರಶ್ರ, ಅಷ್ಟದಳ, ಶತದಳ, ಸಹಸ್ರದಳ ಕಮಲಗಳಂತೆ ತೋರುವ, ಒಂದೊಂದು ತರದ ಕೆತ್ತನೆಯ ಗುರಾಣಿಗಳಂ ಮೊಗಂಗಳಲ್ಲಿ ಕಟ್ಟಿ, ಶುಂಡಾಲಂಗಳಿಗೆ ಚಂದ್ರದಿಂದ ಚಿತ್ರಗಳಂ ಬರೆದು, ಚಿನ್ನಬೆಳ್ಳಿಯ ಘಂಟೆ ಸರ

ಪಟ್ಟೆಯ ಸಾಲುಗಳಂ, ಗಗ್ಗರಿಗಳಂ, ಬಿರುದು ಪೆಂಡೆಗಳಂ ಅಲಂಕರಿಸಿ, ಕುಂಭಸ್ಥಳಂಗಳ್ ಕೆಲಬಲದೊಳ್ ಚೌರಿಗಳಂ ತೂಗುವಂತೆ ಕಟ್ಟಿ, ಪಿರಿಯ ತಳಕು ಚಾಮರಗಳಂ ಕಿವಿಗಳೊಳ್ ಇಟ್ಟು, ಮೇಲೆ ಕೆತ್ತನೆಯ ತೊಟ್ಟಿಲುಗಳನ್ನಿರಿಸಿ, ಅದರೊಳ್ ಜಾಕಿಗಳನ್ನಿಟ್ಟು, ಮೃದುವಾದ ಉಪ್ಪರದಿಂಬುಗಳಂ ಸವರಿಸಿ, ಸುವರ್ಣ ದಂಡಗಳಿಂದ ಒಪ್ಪಿ ಬೆಳಗುವಂತಿರುವ ಬೆಳಗುವ ತೋಡೆಗಳನ್ನಿರಿಸಿ, ಚೌರಿಗಳಂ ಬೀಸುವದಕ್ಕನಾರಿಯರುಇಬ್ಬರಿಬ್ಬರಂ ಹಿಂಭಾಗದೊಳಿರುವಂತೆ ಕಟ್ಟುಮಾಡಿ, ಇಂತು ಪರಿಪರಿಯ ಅಲಂಕಾರಯುತವಾಗಿರುವ ಮಹಾಗಜಗಳಂ ಸಾಲಾಗಿ ನಿಲ್ಲಿಸಿ, ಮಂತ್ರಿಯೊಡನೆ ಪೇಳಲು; ಮಂತ್ರಿಯು ಆ ಕ್ಷಣದಲ್ಲಿಯೆ ವಿಜಯವರ್ಮರಾಯನ ಬಳಿಗೆ ಹೋಗಿ, ಅಲಂಕೃತವಾದ ಗಜಂಗಳು ಸಿದ್ಧವಾಗಿರುವದೆಂದು ಬಿನ್ನವಿಸಲು, ಆಬಳಿಕ ಕಳಿಂಗಪತಿಯು ರಾಜಕುಮಾರರೆಲ್ಲರಂ ಉಪವಿಂಧ್ಯಗಿರಿಗೆ ದಯಮಾಡಬಹುದು ಎಂದು ಪೇಳಲು; ಆಗ ಎಲ್ಲರೂ ಮಂದರಗಿರಿಯ ಗುಹಾಂತರಗಳಿಂದ ಇಳಿದು ಬರುವ ಮಹಾಸಿಂಹಗಳಂತೆ, ಸಿಂಹಾಸನಂಗಳಿಂದ ಎದ್ದು, ನರ್ಮಸಚಿವರ ಹಸ್ತಲಾಘವಗಳಿಂದ ಇಳಿದು, ಓರೋರ್ವರು ಕೈಗಳಂ ಪಿಡಿದು ಸುಗಂಧರಾಜೇಂದ್ರನಂ ಸುತ್ತುವರಿದು ಆತನಂ ಮುಂದುಮಾಡಿಕೊಂಡು, ಹಿಂಭಾಗದೊಳ್ ಎಲ್ಲರೂ ನಡೆಯುತ್ತ, ಪರಿಪರಿಯ ವಿಲಾಸಗಳಿಂದೊಪ್ಪಿ ಹಿಂತಿರಿಗಿತಿರಿಗಿ ತೆರೆಯಂ ನೋಡುತ್ತ, ಎದುರುಘಾಳಿಗೆ ಯೇರುವ ನಾವೆಗಳ ಪತಾಕೆಗಳಂತೆ ಮನಸ್ಸುಗಳನೆಲ್ಲ ಸೌಗಂಧಿಕಾದೇವಿಯ ಸಮೀಪದಲ್ಲಿಯೆ ಬಿಟ್ಟು, ಅಭಿಮಾನವಂ ಬಿಡಲಾರದೆ ಉಪವಿಂಧ್ಯಗಿರಿಗೆ ಪೋದಬಳಿಕ, ಜಯವೋ, ಪರಾಜಯವೋ, ಈಗಲೇ ಚಿತ್ರಲೇಖೆಯನ್ನಾದರೂ ಇನ್ನೊಂದುಸಾರಿ ನೋಡುವಾ ಎಂದು ಮುಂದಕ್ಕೆ ನಡೆಯದೆ, ಒಂದೊಂದು ನೆಪದಿಂದ ಹಿಂದೆ ನಿಂತು, ಮೆಲ್ಲಮೆಲ್ಲನೆ ಜಗ್ಗುತೋರಿಸುತ, ನರ್ಮ ಸಚಿವರ ಭುಜಗಳೊಳ್ ಹಸ್ತಗಳನ್ನಿಟ್ಟು, ಮನಸ್ಸಿನೊಳ್ ವ್ಯಸನವಿದ್ದರೂ, ಮೇಲೆ ಶೃಂಗಾರವಿನೋದಂಗಳಂ ತೋರಿಸುತ ಸಭಾ ಮಂಟಪದಿಂದ ತೆರಳಿ, ತಮ್ಮ ತಮ್ಮ ವಾಹನಂಗಳಂ ತರುವಂತೆ ಸೇನಾಪತಿಗಳಿಗೆ ಪೇಳುತ್ತಿರಲಷ್ಟೆ

ತೋಳ್ ವಿಜಯವರ್ಮರಾಯನು ರಾಜಕುಮಾರರೆಲ್ಲರಂ ಕುರಿತು, ಬಂದೀ ಪರಿಯಾದ ಅಲಂಕಾರದಿಂದೊಪ್ಪುವ ಗಜಂಗಳು ಸನ್ನದ್ಧಗಳಾಗಿರುವವು, ಇವುಗಳನ್ನೇರಿ ಉಪವಿಂಧ್ಯಗಿರಿಗೆ ಸವಾರಿಯಂ ತೆರಳಬಹುದು ಎಂದು ಹೇಳಲು; ಆವಾತಂ ವಿವಾಹಾರ್ಥವೆ ರಾಜಕುಮಾರರೆಲ್ಲರೂ ಸಾಲಾಗಿ ನಿಲ್ಲಿಸಿರುವ ಮದ್ದಾನೆಗಳಂ ನೋಡಿ, ಗಜಪತಿಗಳ ಸಂಸ್ಥಾನಗಳಲ್ಲಿ ಗಜಂಗಳಿಗೆ ಕಡಮೆಯೇನೆಂದು ಸ್ತುತಿಯಂಗೈಯುತ್ತ, ವಿನಯಾದಿ ಗುಣಂಗಳಿಗೆ ಮೆಚ್ಚಿ ಕೊಂಡಾಡುತ್ತ, ಒಬ್ಬರಂ ಒಬ್ಬರು ಮರ್ಯಾದೆಯಂ ಮಾಡುತ್ತ, ಹವಳದ ಏಣಿಗಳಿಂದ ಏರಿ ವೈಯ್ಯಾರದಿಂದ ಗಜಾರೋಹಣಂಗೈದು, ತಮ್ಮ ತಮ್ಮ ಬಿರುದುಗಳೊಡಗೂಡಿ, ಭೇರಿ, ಪಟಹ, ನಿಸ್ಸಾಣ, ಕಾಹಳ, ಮುರಜ, ಪಣವ ಮೊದಲಾದ ಅಷ್ಟಾದಶ ವಾದ್ಯಧ್ವನಿಗಳು ಭೂವ್ಯಾಕಾಶಗಳಂ ತುಂಬಿ ಭೋರೆಂದು ಮೊಳಗುತ್ತಿರಲು, ಸವಾರಿಯಂ ತೆರಳಿ ಕಳಿಂಗ ರಾಜಧಾನಿಯ ರಾಜವೀಧಿಯೊಳ್ ಸುಗಂಧರಾಜೇಂದ್ರನ ಹಿಂಭಾಗದಲ್ಲಿ ಮೆಲ್ಲಮೆಲ್ಲನೆ ನಡೆಯುತ್ತ ಬರುವಾಗ, ಚತುರ್ಮುಖನ ನಾಲ್ಕು ದಿನದ ಅಧಿಕಾರಿಗಳಾದ ದೇವೇಂದ್ರರೆಲ್ಲರೂ ಬಂದೀ ಕಾಲದಲ್ಲಿ ಭೂಲೋಕವಂ ಕುರಿತು ಬಂದರೆಂಬಂತೆ ತೋರಲು, ಅವರ ಮಧ್ಯದೊಳ್ ಸುಗಂಧರಾಜೇಂದ್ರನು, ಅತಿ ಪರಾಕ್ರಮಶಾಲಿಯಾದ ವೃತ್ರಾಸುರನಂ ಪರಿಹರಿಸಿ ಖ್ಯಾತಿಯಂ ಪಡೆದ ಮಹೇಂದ್ರನಂತೆ ತೋರಲು, ಮೇರು, ಮಂದರ, ಕರವೀರ, ಗಂಧಮಾದನ, ವಿಂಧ್ಯ ಮೊದಲಾದ ಗಿರಿಗಳೆಲ್ಲ ಪೂರ್ವದೊಳ್ ಪಕ್ಷಪ್ರಹಾರಿಯಾದ ಇಂದ್ರನಿಂ ಭಯಗೊಂಡಿದ್ದು, ಈಗ ಸ್ವಯಂವರ ಮಹೋತ್ಸವ ಸಂತೋಷಸಮಯವಾದ್ದರಿಂದ, ಅವನ ಪ್ರಸಾದವಂ ಪಡೆಯಬೇಕೆಂದು ಆನೆಗಳ ರೂಪವಂ ತಾಳಿ ಸೇವೆಯಂ ಮಾಡಲೋಸುಗ ಬಂದವೆಂಬಂತೆ ತೋರುವ ಉದ್ದವಾದ ಮದ್ದಾನೆಗಳಂ, ಅದರಮೇಲೆ ಕುಳಿತು ಮಾರು ದೂರದೊಳ್ ಬರುವ, ಸುಕುಮಾರರಾದ, ರಾಜಕುಮಾರರಂ, ಕಳಿಂಗಪುರ ಕಾಂತೆಯರು ಗವಾಕ್ಷಂಗಳಲ್ಲಿ ನಿಂತು ನೋಡುತ್ತ, ಇಂತಿರಬೇಕು ಪುಣ್ಯವೆಂದು ನುಡಿಯುತ್ತ, ತಮ್ಮ ಅಂದಚಂದಂಗಳಂ ತೋರಿಸುತ್ತ, ಚಿತ್ರರದ ಸೊಗಸಿನ ವಾರೆನೋಟಗಳಪ್ಪೊ

ಳಪಿನಿಂ ಆ ಅರಸುಗಳ ಮನಸ್ಸುಗಳಂ ಸೂರೆಗೊಳ್ಳುತ್ತ, ಸ್ವಯಂವರ ಮಹೋತ್ಸವವನ್ನೋಡಬೇಕೆಂದು ಬಂದು ಗಗನದಲ್ಲಿಯೇ ನಿಂತಿರುವ ಗಂಧರ್ವ ಕಾಂತೆಯರಂತೆ ತೋರಲು ಆಗ ಅವರ ಸೌಂದರ್ಯರಸವು ಪ್ರದ ಕರೆಯೊಳ್ ನಡೆಯುವಂತೆ ಆನೆಗಳನ್ನೇರಿ ನಡೆಯುವಾಗ, ರಾಜ ಕುಮಾರರೆಲ್ಲರೂ ಕೈಗೆ ಸಿಕ್ಕಿದ ಸಾವಿರಾರು ಚಂದ್ರಬಿಂಬಗಳ ಸಾಲಿನಂತೆ ಆ ಕಳಿಂಗ ಪುರಿಯ ಕಾಂತೆಯರ ಮೊಗಂಗಳಂ ನೋಡಿ ಮರುಳಾಗಿ, ಹಿಂದೆ ಚಾಮರಂಗಳಂ ಬೀಸುವ ನಾರಿಯರಿಂದಲೂ, ಮುಂದೆ ವೀಣಾ, ವೇಣು, ಮೃದಂಗ, ಮೊದಲಾದ ವಾದ್ಯಧ್ವನಿಗಳಂ ಕೂಡಿ ಕುಣಿಯುತ್ತ ನಡೆಯುವ ವಾರನಾರೀ ಜನಗಳಿಂದಲೂ, ಆಗ ಪ್ರಪಂಚವೆಲ್ಲ ಸ್ತ್ರೀ ಮಯವಾದಂತೆ, ಕಾಲವೆಲ್ಲ ಅಲಂಕಾರಸ್ವರೂಪವಾದಂತೆ, ದೇಶವೆಲ್ಲ ಶೃಂಗಾರ ರಸಾತ್ಮಕವಾದಂತೆ ತೋರಿ, ಅತಿಸುಂದರಿಯರಾದ ಆ ತರುಣಿ ಯರು ಕರಕಮಲಂಗಳಿಂದ ಎರಚುವ ಸುಗಂಧಪುಷ್ಪಗಳು ತಮ್ಮ ಮೈಗಳಿಗೆ ತಗಲಿದಾಗೆಲ್ಲ ಆ ಕಾಂತೆಯರ ತನುಲತೆಗಳಂ ಸೋಂಕಿದಂತೆ ಹಾಯಿಕೊಂಡು ಪುಳಕಂಗೊಳ್ಳುತ್ತ ಗಿರಿಗಳಂತಿರುವ ಕರಿಗಳಿಂದೆದ್ದು, ಈ ನೀಟುಗಾತಿಯರು ನಿಂತಿರುವ ಬೀದಿಗಳಂ ದಾಟಿ ಮಾರನಾಟ್ಯವಂ ನಾಡುವೆವೆಂದು ಕೆಲವರು ಉದ್ಯೋಗಿಸುತ, ಕಳಿಂಗಪುರಿಯ ಕೋಟೆ ಪೇಟೆಗಳೆಲ್ಲ ಬರಿಯ ಕಾಂತೆಯರಿಂದಲೇ ಕಟ್ಟಿರುವಂತೆ ಭ್ರಮೆಗೊಳ್ಳು ತ, ಉಪವಿಂಧ್ಯಗಿರಿಯ ಪಯಣವಂ ಬಿಟ್ಟು, ಇಲ್ಲಿಯೇ ಆನೆಗಳನ್ನಿಲ್ಲಿ ಸಿದರೆ ಸುಖವೆಂದು ಪಣಸಾಧನವಂ ಪ್ರಜ್ಞೆಗೊಳ್ಳದೆ, ತಮ್ಮ ಸೇನಾ ಕಟಕಂಗಳುಕೂಡಾ ಮನಸ್ಸಿಗೆಬಾರದೆ, ಸ್ವಕೀಯವಾದ ದೇಶ, ಕೋ ಶಂಗಳಂ ಪೊಟ್ಟಮೊದಲೇ ಮರತು, ತಮ್ಮ ಕಾಂತೆಯರಂ ಮನಸ್ಸಿ ನೊಳ್ ನೆನೆಯದಂತಾಗಿ, ಈ ಮೋಹನಾಂಗಿಯರಮೇಲಣ ಮಮತೆ ಯಿಂದ ಮೈಗಳಂಕೂಡ ಮರತು ಮೋಹ ಸಮುದ್ರದೊಳ್ ಮುಳುಗಿ ನಡೆಯುತ ನಡುನಡುವೆ ಪ್ರಜ್ಞೆಗೊಳ್ಳುತ, ಈ ಸುಂದರಿಯರ ಸೌಂದ ರ್ಯವನ್ನೋಡಿಯೂ ಮುಂದಕ್ಕೆ ಅಡಿಗಳನ್ನಿಡುವವು, ಈ ನಡತೆ ಯಿಂದಲೇ ಗಜಂಗಳಿಗೆ ಮಂದಬುದ್ಧಿಯುಂಟು ಮದುನಿಜವೆಂದು ನುಡಿಯು

ತ ಮತ್ತು, ಕಾಮನ ಕಠಾರಿಯಂತಿರುವ ಈ ಕಳಿಂಗಪುರದ ಕಾಂತೆಯರ
ಸೊಗಸಾದ ನಡಗೆಯಿಂದಲೂ, ತೊಡೆ ತೋಳುಗಳಿಂದಲೂ, ಕುಲುಕು
ವ ಕುಚಕುಂಭಗಳಿಂದಲೂ ಕೂಡಿ ಮೊದಲಿಂದ ಕೊನೆಗೆ ಸೋತುತಲೆಗ
ಳಂ ಬಗ್ಗಿಸಿ ನಡೆಯುವವೋ ಎಂಬಂತೆ, ತೋರುತ್ತಲಿರುವ ಮದ್ದಾನೆಗ
ಳ ದೆಸೆಯಿಂದಲೇ ರಾಜಬೀದಿಯಂ ದಾಂಟಿ, ಗೋಪುರ ಚತ್ವರದ್ವಾರ
ಪ್ರಾಕಾರಂಗಳಂ ನೋಡುತ್ತ, ಪುರದ ಪುರೋಭಾಗದಲ್ಲಿ ನಡೆತರಲಾಗ
ಉದ್ಯಾನಂಗಳಂ ಕೆಲಬಲದೊಳ್ ನೋಡುತ್ತ, ಸಣ್ಣ ಕಾಲುವೆಗಳೊ
ಳ್ ಹರಿಯುವ ತಿಳಿನೀರುಗಳು ಶಿಲೆಗಳಂ ಬಡಿದು ದಡದಡನೆಂದು ಮೇಲು
ಧ್ವನಿಗೊಡುವುದೇ ಮೃದಂಗನಾದವಾಗಿ, ಗಿಣಿ, ಗೊರವಂಕ, ಕೋಗಿ
ಲೆಗಳ ಕೂಗುಗಳು ಮುಖವೀಣೆ, ವೇಣು ಮೊದಲಾದ ಶ್ರುತಿಗಳಂತೆ
ಕೂಡಿ, ಮದ್ದಾನೆಗಳ ಮದವಾಸನೆಗೆ ಬಂದು ಎರಗುವ ತುಂಬಿಗಳ
ಗುಂಪುಗಳ ಝೇಂಕಾರವೆಂಬ ತಂತೀಸ್ವರದ ಸರಸ ಸಂಗೀತವಂ ಕೇ
ಳುತ್ತ, ಪುಷ್ಪಿಸಿರುವ ಮಾವಿನಮರಂಗಳ ಎಳೆ ಚಿಗುರುಗಳ ಗುಬುರುಗ
ಳಂ ನೋಡಿ, ಮದನ ಬಾಣಾಗ್ನಿಜ್ವಾಲೆಗಳೆಂದು ತಿಳಿಯುತ್ತ, ಅಲ್ಲಲ್ಲಿ
ಬರೀ ಪೂವಿನ ಅರವಟ್ಟಿಗೆಗಳಂ ನೋಡಿ ಇದು ಮನ್ಮಥನ ಅಸ್ತ್ರಶಾಲೆ
ಗಳೆಂದು ಮರುಗಿತಲ್ಲಣಂಗೊಳುತ, ಅಮರಾವತಿಯಿಂದ ನಂದನವನದ
ಮಾರ್ಗದೊಳ್ ಗಂಗಾತೀರಕ್ಕೆ ತೆರಳುವ ದೇವೇಂದ್ರನಂತೆ ಸುಗಂಧ
ರಾಜೇಂದ್ರನು ಸಕಲ ರಾಜರಿಂದೊಡಗೂಡಿ, ಗೋದಾವರೀ ನದೀತೀರ
ಸಮೀಪವಂ ಕುರಿತು ಬರುತ; ಅಲ್ಲಿ ಒಡದು ಎರಡಾಗಿ ಶೀಳಿರುವ ಉ
ಪವಿಂಧ್ಯಪರ್ವತದ ಭಾಗಂಗಳಂ ಕಂಡು, ಅತಿ ವಿಸ್ಮಯಂಗೊಂಡು,
ಇಂತಿಪ್ಪ ಪರ್ವತವಂ ಸೀಳಿದಾಯುಧವು ವಜ್ರಾಯುಧಮಲ್ಲದೆಮತ್ತೊಂ
ದಲ್ಲವೆಂದು ಮೊದಲಲ್ಲಿಯೇ ಸಂಶಯಂಗೊಳ್ಳುತೆ, ಪರ್ವತದಸುತ್ತಲೂ
ಸಿಡಿದು ಬಿದ್ದಿರುವ ಗಂಡಶೈಲಂಗಳಂ, ಮಂಟಪಗಳ ಶಿಲಾಖಂಡಂಗಳಂ,
ಮತ್ತೂ ಗರಿಕೆ ಮೊದಲುಗೊಂಡು ಯಾವದೂ ಪುಟ್ಟದಂತೆ ಸುಟ್ಟಿರುವ
ಭೂಮಿಯಂ, ಇರುವೆಗಳುಕೂಡಾ ಸಂಚರಿಸದೆಇರುವದಂ ನೋಡಿ, ಕೆಲ
ವರು ಇದು ಆಯುಧವೆಂದರೇನು, ಗಿರಿಯಂ ಒಡದು ಭೂಮಿಯಂ ಸುಡು

ವೃಷಂದರೇನು, ಇದು ಬಡಬಾನಲವೋ, ಅಲ್ಲದೆ ಕಾಲಮೃತ್ಯುವೋ, ಕಾಲಾಗ್ನಿ ರುದ್ರನ ಅಗ್ನಿನೇತ್ರವೋ, ಹೇಷ್ಯಕಾರ್ಯಕಾರಣವಾಗಿ ಬಂದು ವಾಸವಂಮಾಡಿರುವುದೆಂದು ಭಯಪಟ್ಟು ವಿಸ್ಮಯಂಗೊಂಡು, ಮುಂದೆ ತೆರಳುವದಕ್ಕೆ ತತ್ತರಂಬಡುತ, ಆನೆಗಳನಲ್ಲಿಯೇ ನಿಲ್ಲಿಸಬೇಕೆಂದು ಯೋಚಿಸುತಲಿರಲಾಗ, ವಿಜಯವರ್ಮರಾಯನು ರಾಯರುಗಳೆಲ್ಲರನ್ನೋಡಿ ಬಿಸಲಿನೊಳ್ ಸವಾರಿ ತೆರಳಿದ್ದರಿಂದ ಶ್ರಮವಾಗಿ ತೋರುವದು, ಆದ್ದರಿಂದ ಒಂದು ನಿಮಿಷ ಗೋದಾವರೀ ತೀರದ ಸಾಲುಮಲ್ಲಿಗೆಯ ಬಳ್ಳಿಗಳ ಚಪ್ಪರಂಗಳ ಅಂಚಿನಲ್ಲಿ ನಿಲ್ಲಿಸಿರುವ ಗುಡಾರಂಗಳ ನೆರಳಿಗೆ ದಯಮಾಡಬೇಕೆಂದು ಪ್ರಾರ್ಥಿಸಲಾಗ ಎಲ್ಲರೂ, ತಮ್ಮ ಆನೆಗಳು ಉಪವಿಂಧ್ಯಗಿರಿಯಂ ಕಂಡು ಮತ್ತೊಂದು ಆನೆಗಳ್ ಹಿಂದಿನ ಗಜವೆಂದು ಸನ್ನೆಬೇಳುವವು ಎನುತ ಓಸರಿಸಿ ನಡೆಯಿಸಿದರೆಂಬಂತೆ, ಆ ಗಿರಿಗೆ ದೂರದಲ್ಲಿಯೇ ಸವಾರಿಯಂ ತೆರಳಿ ಬರುತ, ಸಪ್ತಮರುತ್ತುಗಳು ಬೀಸಿದ್ದರಿಂದ ಸಪ್ತಭಾಗಂಗಳಾದಳೆಂಬಂತೆ, ಈ ಭೂಮಿ ಮೊದಲಾಗಿ ಮೇಲೆ ಏಳುಲೋಕ, ಕೆಳಗೆ ಏಳುಲೋಕವಿರುವದೆಂದು ಎಲ್ಲರಿಗದಂ ತಿಳಿಯಿಸುವಳೆಂಬಂತೆ, ಮತ್ತಂ ಸಪ್ತ ಋಷಿಗಳು ಗೋದಾವರಿಯಂ ಹಂಚಿಕೊಂಡರೆಂಬಂತೆ, ತನ್ನೊಳ್ ಸ್ನಾನವಂಗೈದವನ ಸಪ್ತಗೋತ್ರದ ಜನಂಗಳ ಪಾಪಂಗಳಂ ಪರಿಹರಿಸಿ ಬ್ರಹ್ಮಲೋಕವಂನೀವೆನೆಂದು ತೋರಿಸುವಂತೆ, ಸಮುದ್ರರಾಜನು ಏಳುಪ್ರಾಕಾರಮಾದುದಂ ನೋಡಿ ತಾನೂ ಏಳುರೂಪವಂ ತಾಳಿ ಪತಿಗೆ ಸರಿಯಾದ ಸತಿ ಅಹುದೆಂದೆನಿಸಿಕೊಂಬಳೆಂಬಂತೆ, ಭೂಮಿದೇವಿಯು ವಕ್ಷಸ್ಥಳದೊಳ್ ಧರಿಸಿದ ಮುತ್ತಿನ ಏಳುಸರಂಗಳ ಕಟ್ಟಾಣಿಯಂತೆ, ವಿಂಧ್ಯಗಿರಿ ಮಲಗಿದಾಗ ಶಿಖರಂ ಮುರಿದುಬಿದ್ದ ಪಚ್ಚ ಕರ್ಪೂರದ ಏಳೆಲೆಯ ಬಾಳೆಯ ನೀಳವಾದ ಅರಳಿದ ಸುಳಿಗಳೆಂಬಂತೆ, ಸೌಗಂಧಿಕಾದೇವಿಯು ವಿವಾಹದ ಸಪ್ತಪದಿಗಳಂ ತೋರಿಸುವಂತೆ, ಸುಗಂಧ ರಾಜೇಂದ್ರನಿಗೆ ಇಲ್ಲಿರುವ ವಜ್ರವಲ್ಲದೆ, ಇನ್ನು ಏಳುಪಣಂಗಳು ಇರುವುವೆಂದು ತಿಳಿಯಿಸುವಂತೆ, ಏಳು ಪ್ರವಾಹಂಗಳಾಗಿ ಹರಿಯುವ ಗೋದಾವರೀ ಎಂಬ ಮಹಾನದಿಯಂ ಕಂಡು ಕೈಗಳಂಮುಗಿದು ಎ

ಲ್ಲೆಲ್ಲಿಯುಂ ತಲೆಗಳಂಬಾಗಿ ತೂಗ್ಯಾಡುವ ಶಾಲಿವನಂಗಳಂ, ಎಲ್ಲರಂ ಬೇರ್ಬೇರೆ ಬಂದೊಂದು ಬಿಲ್ಲಿನಿಂದ ಗೆಲ್ಲಬೇಕೆಂದು ಮನ್ಮಥನು ಮಾಡಿಗಿರ್ದ ಧನುಸ್ಸುಗಳಿಂ ತುಂಬಿರುವ ಉಗ್ರಾಣಂಗಳಂತೆ ಕಾಣುವ ಕಬ್ಬಿನ ಅಗ್ರಂಗಳಂ, ಕದಳೀವನಂಗಳಂ, ಮೊಲ್ಲೆ, ಮಲ್ಲಿಗೆ, ಮೊದಲಾದ ಲತೆಗಳ ಕೈತೋಟಂಗಳಂ ನೋಡುತ್ತೆ, ಮತ್ತು ಉಪವಿಂಧ್ಯಗಿರಿಗೆ ಬಂಧುಬಳಗದಂತಿರುವ, ಬಂಡೇತರದ ಸರಿಗೆಯುಕೆಲಸದ ಕೆಂಪುಸಕಲಾತಿಯ ಗುಡಾರಂಗಳಿಗೆ ಬರುತ್ತ, ಅವರ ರಂಗಿನಿಂದ ಆನೆಗಳೆಲ್ಲ ಕೆಂಪುಆನೆಗಳಾಗಿ, ಬಿಳಿಯ ಉಡಿಗೆಗಳೆಲ್ಲ ಚಂದ್ರಗಾವಿಯ ಬಣ್ಣಮಂತಾಳಿ, ಗೋದಾವರೀ ಪ್ರವಾಹಂಗಳೆಲ್ಲ ಶೋಣನದವೆನಿಸಿ, ಸೂರ್ಯಲೋಕವು ಇಳಿದುಬಂದಂತೆ, ಮಧ್ಯಾಹ್ನ ಸಂಧ್ಯಾಕಾಲ ರಾಗವೆಂಬಂತೆ, ಚಿಗರುವ ಉಪವನಂಗಳೊಡನೆ ಭೇದವಂ ಕಾಣದೆ ಇರುವದನ್ನೋಡಿ ಕಳಿಂಗರಾಜನ ಐಶ್ವರ್ಯವಂ, ದೇಶದ ಸೌಕರ್ಯವಂ, ಸೇವಕರ ಚಾತುರ್ಯವಂ, ಕಾರ್ಯಂಗಳೊಳ್ ಜಾಗ್ರತೆಯುಂ ಸಹ ಕಂಡು ಹರ್ಷವಂಗೊಂಡು, ವಿಮಾನಂಗಳಿಂದ ಮೇರುಶಿಖರಂಗಳಿಗೆ ಇಳಿಯುವ ದೇವತೆಗಳಂತೆ ಗಜಂಗಳಿಂದ ಇಳಿದು ಗುಡಾರಂಗಳಿಗೆ ಬಂದು ನಿಮಿಷ ಕುಳಿತು ವಿಶ್ರಾಂತಿಯಂಗೊಳ್ಳುತ್ತಿರಲಾಸಮಯದಲ್ಲಿ ಕಳಿಂಗ ಮಂತ್ರಿಯಾದ ಧನಂಜಯನು ಗೋದಾವರೀ ನದೀತೀರದಲ್ಲಿ ಫಲಾಹಾರವಂ ಗೈವುದಕ್ಕೆ ದಯಮಾಡಬೇಕೆಂದು ಬಿನ್ನೈಸಿ, ಬೆಳಗ್ಗೆ ಭೋಜನಂಗಳಾಗಿರುವುದು ಇಷ್ಟರೊಳ್ ಏನೆಂದು ಸಂಕೋಚಪಡುತಲಿರುವ ಅವರೆಲ್ಲರಂ ಸವಾರಿಯಿಂದ ಶ್ರಮವಾಗಿರುವುದು ಏಳಬೇಕೆಂದು ವಿನಯ ವಿಶ್ವಾಸಂಗಳಿಂದ ಕೂಡಿದ ಬಲಾತ್ಕಾರದಿಂದ ಕರೆತರಲು, ರಾಜಕುಮಾರರೆಲ್ಲರೂ, ಗೋದಾವರಿಯ ಬಳಗಣ ಮಳಲ್ದಿಟ್ಟುಗಳಲ್ಲಿ ಕಟ್ಟಿರ್ದ ಮುಡಿವಾಳದ ತಡಿಕೆಗಳಂ ಬಿಗಿದಿರುವ ಮಲ್ಲಿಗೆಯ ಚಪ್ಪರಂಗಳ ಸಾಲಿನೊಳ್ ಹಿಮಗಿರಿಯ ಜರಿಯಿಂದ ತೆರಳುವ ಗಂಗಾನದಿಯ ಅಂಚಿನ ಚಂದ್ರಕಾಂತಶಿಲಾತಲಂಗಳಿಗಿಂತಲೂ ಶೀತಂಗಳಾದ ನೆಲಂಗಳನ್ನೋಡಿದಮಾತ್ರದಿಂದಲೇ ಮಾರ್ಗಶ್ರಮವನೆಲ್ಲವಂ ಕಳೆದು, ಅರಳಿರುವ ಕಮಲಂಗಳಂ ಮೀರಿ ಕೊಳತು ತೂಗ್ಯಾಡುವ ಹೊಸ, ಕಾ

ರಂಡಪ ಮೊದಲಾದ ಪಕ್ಷಿಗಳಪಕ್ಷಧ್ವನಿಗಳೊಡಗೂಡಿದ ಕ್ರೇಂಕಾರಂಗಳಂ ವಿಚಿತ್ರವಾದ ರಾಗಮಾಲಿಕೆಗಳಂತೆ ಕೇಳುತ್ತಾ, ಪರಿಮಳಮಂಕೂಡಿ ಬರುವ ತಂಗಾಳಿಗೆ ಸಕಲೇಂದ್ರಿಯಂಗಳಂ ತಂಪಿನಿಂದಿಂಪುಗೊಳಿಸುತ್ತ, ಸ್ಫಟಿಕ ಶಿಲಾಸೋಪಾನಂಗಳೊಳ್ ನಿಂತು ಪಾದಂಗಳಂ ತೊಳದು, ಬೆಳ್ಳಿಯ ಮಣೆಗಳಲ್ಲಿ ಕುಳಿತು, ಅಷ್ಟರಲ್ಲಿಯೇ ಸಾವಿರಾರು ಪಾಚಕಪರಿಚಾರಕ ರಿಂದ ಹೊತ್ತು ತರಸಿರುವ ಬುತ್ತಿಗಳಲ್ಲಿರುವ ನೂರೊಂದುತರದ ಭಕ್ಷ್ಯಂ ಗಳಂ, ಸಂಬಾರಂಗಳಂಕೂಡಿ ವಾಸನೆಯಿಂದ ಕಳಿಂಗದೇಶವನೆಲ್ಲವಂ ಘ ಮಘಮಿಸುವಂತೆ ಮಾಡುವ ದಧ್ಯನ್ನ ಮೊದಲಾದ ಚಿತ್ರಾನ್ನಗಳಂ, ಪರಿ ಪರಿಯ ವ್ಯಂಜನಂಗಳಂ, ಸಾವಿರಾರು ಚಿನ್ನ ರತ್ನಗಳ ತಟ್ಟೆ ಬಟ್ಟಲುಗ ಳನ್ನಿರಿಸಿ, ಬಡಿಸಿರುವ ಎಡೆಗಳನ್ನೋಡಿದಮಾತ್ರದಿಂದ ಬಾಯಿಯೊಳ್ ನೀರೂರಿ, ವಿನೋದಮಾತುಗಳನ್ನಾಡುತ್ತಾ, ಸವಿನೋಡುತ್ತಾ, ಉಪವಿಂಧ್ಯ ಗಿರಿಯಲ್ಲಿರುವ ಆಯುಧದ ಸದಾಚಾರವಂಕೊಡೆ ಮರತು, ಮಧುರಭೋ ಜನಂಗೈದು, ತಿಳಿನೀರುಗಳಂ, ಪರಿಮಳವಂಕಟ್ಟಿರುವ ಎಳನೀರುಗಳಂ, ಫಲ ರಸಂಗಳಂ ಪಾನಕಂಗಳಂ ಪುಷ್ಪಾಸವಂಗಳಂ ಕೂಡ ಪಾನವಂಗೈದು ಕ ರಂಗಳಂ ತೊಳದು ಬಳಿಕ ಕರ್ಪ್ರೂರ ವೀಳ್ಯವಂ ಸವಿಯುತ್ತಾ ಮನಸ್ಸಿ ಬಂದ ಬಂದಕಡೆಗಳಲ್ಲಿ ಚಿತ್ತರದ ಚೌಕಿಗಳೊಳು ಕುಳಿತು ಗೋದಾವರಿ ಯ ಜಲದಲ್ಲಿ ಮಿಂಚುಪೊಳೆವಂತೆ ಥಳಥಳಿಸುತ್ತಾ ಪೊಳೆಯುವ ಮೀನು ಗಳಂನೋಡಿ ಮುತ್ತುಗಳನ್ನೆರಚುತ್ತಾಚಂಡವಾಗಿರುವ ಮತ್ಸ್ಯಂಗಳಂ ಹಿ ಡಿದು ವಜ್ರದ ಬಾವುಲಿಗಳಂ ಚುಚ್ಚಿ ಮರಳಿ ಬಿಡುತ್ತಾ ಸೌಗಂಧಿಕಾದೇ ವಿಯ ಕಣ್ಣುಗಳನ್ನೆನೆಯುತ್ತಾ ಚಕ್ರವಾಕ ಪಕ್ಷಿಗಳ ಜೊತೆಗಳನ್ನೋ ಡಿ ಅವಳ ಕುಚಗಳಂ ಸ್ಮರಿಸುತ್ತಾ ಇಂತು ಪರಿಪರಿಯ ವಿಲಾಸಂಗಳಂ ದಿರುವ ಸಮಯದೊಳು; ಕಳಿಂಗರಾಜಧಾನಿಯಿಂದ ರಾಜಾಂತಃ ಪುರದ ನಾರೀ ಜನಂಗಳು ಸೌಗಂಧಿಕಾದೇವಿಯಂ ಸುತ್ತುವರಿದು ಸಾವಿರಾರು ಅಂದಳಂಗಳೊಳು ಕುಳಿತು ಸಕಲ ಶುಭವಾದ್ಯಧ್ವನಿಗಳಿಂದೊಡಗೂಡಿ ಬರುವದನ್ನು ನೋಡಿ ಎಲ್ಲಿಲ್ಲಿ ನೋಡುತಿರ್ದವರೂ ತಿರಿತಿರಿಗಿ ತಲೆ ಗಳನ್ನೆತ್ತಿ ನೋಡುತ್ತಾ ಉತ್ತುಪಾಕ್ಷಂಗಳನ್ನೇರಿ ಬಿಚ್ಚುಕತ್ತಿಗಳಂ ಪಿ

ಡಿದು ನೋಡುವ ಪುರುಷರ ಚಿತ್ತಂಗಳಂ ಕತ್ತರಿಸುವ ರೂಪಾಸ್ತ್ರಂಗಳಂ ವಹಿಸಿ ರಾಹುತರಂತೆ ಸೇವೆಯಂ ಮಾಡುತ್ತ ಬರುವ ಬಿತ್ತರಿಯ[illegible] ಹತ್ತುಸಾವಿರ ಸೇನೆಯನ್ನೋಡಿ ಅಂತಃಪುರದ ಕಾವಲುಇಂತಿರಬೇಕೆಂದು ಶ್ರೀಮಂತನಾದ ವಿಜಯವರ್ಮರಾಯನ ಮಿತ್ರನದ ಮರ್ಯಾದೆಗೆ ಸಂತೋಷವಂ ಬಟ್ಟು ಇದೀಗ ನಿಜವಾಗಿ ಮನ್ಮಥನ ಸೇನೆಯೆಂದು ನುಡಿಯುತ್ತ ವಿಭ್ರಮದಿಂದ ನೋಡುತ್ತ ಮತ್ತು ಆ ಕುವಲಯಾಕ್ಷಿಯರು ಕುದುರೆಗಳಂ ಕುಣಿಯಿಸುತ್ತ ಬರುವಾಗ ಕುಲುಕುವ ಕುಚಂಗಳಂ ಕುಣಿದಾಡುವ ಚಂದ್ರಹಾರಂಗಳಂ ಅಲ್ಲಾಡುವ ಕಾಂಚೀದಾಮ ಕಂಕಣಂಗಳಂ ಚಲಿಸುವ ಮುತ್ತಿನ ವಾಲೆಗಳಂ ಚದರಿರುವ ಬೊಟ್ಟುಗಳಂ ಮುತ್ತುಗಳು ಪೋಣಿಸಿದಂತೆ ಕಪೋಲಂಗಳಲ್ಲಿ ತೋರುವಕಿರುಬೆವರುಗಳಂ ಬಳುಕುವ ಬಡನಡುವುಗಳಂ ಕೂಡೆ ನೋಡಿ ನೋಡಿ ಮರುಳಾಗಿ ಮಿಂಚುಗಳದಂಡು ಹೊರಟಂತೆ ಕಾಣುತ್ತ ಈ ಕುದುರೆಗಳಿಗೆ ಇರುವ ಪುಣ್ಯವು ಯಾರಿಗೂ ಇಲ್ಲವೆಂದು ನುಡಿಯುತ್ತಲಿರಲಷ್ಟರೊಳು ಕಳಿಂಗರಾಜನು ಮಲ್ಲಿಗೆಯ ಹುವ್ವುಗಳ ಮುಸುಕುಗಳಂ ಪೊದ್ದಿಸಿರುವ ಪಲ್ಲಕ್ಕಿಗಳಲ್ಲಿ ಕುಳಿತು ಬಂದ ಅಂತಃಪುರದ ನಾರಿಯರೆಲ್ಲ ನದೀತೀರದಲಾಮಂಚದ ಗುಡಾರಕ್ಕೆ ನಾಲ್ಕು ಕಡೆಯೊಳು ಮರೆಯಾಗಿ ಕಟ್ಟಿರುವ ಮಲ್ಲಿಗೆಯ ತೆರೆಗಳ ನಡುವೆ ಯಿಳಿದು ಕಮಲಂಗಳಿಗು ತಮ್ಮ ಮುಖಂಗಳಿಗು ಭೇದವಂ ಕಾಣಿಸದೆ ಮಳಲೊಟ್ಟುಗಳಿಂದ ಎದೆಪುಟ್ಟುವ ಗೋದಾವರೀ ಜಲದಲ್ಲಿ ಇಳಿದು ಜಲದೇವತೆಗಳಂತೆ ತೋರಿ ನಾಗ ಕನ್ನೆಯರು ಎದ್ದುಬಂದರೆಂಬ ಸಂಶಯಂಗೊಳಿಸುತ ಜಲವಿಹಾರದಿಂದ ಶ್ರಮಪರಿಹಾರವಂ ಗೈದು ಬಳಿಕ ಮಧುರಾಹಾರವಂ ಮಾಡಿದ ಸಮಾಚಾರವಂ ತಿಳಿದು.

ಬಳಿಕ ಉಪವಿಂಧ್ಯಗಿರಿಯ ಸುತ್ತಲೂ ನಿಲ್ಲಿಸಿರುವ ಸಾಲುಚಪ್ಪರಂಗಳ ಕೆಳಗೆಲ್ಲ ಹುವ್ವುಗಳಂ ಹಾಸಿರುವ ಪರೀಕ್ಷಾರಂಗಮಂಟಪಂಗಳಿಗೆ ಮಹೀಪಾಲರೆಲ್ಲರಂ ಕರತಂದು ಎದುರಾಗಿ ಕರೆಯುವರೆಗೆ ಸೌಗಂಧಿಕಾದೇವಿ ಮೊದಲಾದವರಂ ಬರುವಂತೆ ಪೇಳಿ ರಾಜಕುಮಾರರಂ ಕುರಿತು ಉಪವಿಂಧ್ಯಗಿರಿಯ ಮಧ್ಯಭಾಗದಲ್ಲಿ ವಿಚಿತ್ರಕಾಂತಿಯಿಂದ ಮಹಾಪರಿ

ವರ್ಣದಿಂದೊಪ್ಪಿ ಕಾಣಿಸುವ ಆಯುಧ ವಿಶೇಷವೇಕ್ಷಣವಸ್ತ್ವೆಂದು ಹೇಳಲು ಕಳಿಂಗರಾಯನ ಮಾತಿಗೆ ರಾಜರೆಲ್ಲರು ಯಾರು ಮುಂದೆ ನೋಡಿ ಬರುವರೋ ಎಂದು ನಿಮಿಷನಿಂತು ಚಿಂತಿಸಲಾಗ ನೇಪಾಳ ದೇಶದ ಅರಸು ಲಂಬಿಕಾಗುರುವಿನ ಅನುಗ್ರಹದಿಂದ ಪಡೆದ ಮಂತ್ರಪ್ರಭಾವವುಳ್ಳವನಾದವಾತನು ಮಂತ್ರದೇವತೆಯಂ ಮನದೊಳು ಧ್ಯಾನಿಸಿ ನಡೆಯುವುದಕ್ಕೆ ಮೊದಲು ಮಾಡಲಾಗ ನಾಡು ನಾಡಿನ ರಾಯರೆಲ್ಲಾ ಮೆಲ್ಲ ಮೆಲ್ಲನೆ ಭಯವಂ ಬಿಡುತ ಅತ್ಯಂತ ಸಾಹಸಂಗಳನ್ನುಂಟು ಮಾಡಿಕೊಳ್ಳುತ ಒಬ್ಬರನ್ನೋಡಿ ಒಬ್ಬರು ತೆರಳ ನೂರುಮಂದಿ ಕುರುಡರು ಕೂಪವಂ ಪ್ರವೇಶಿಸುವವಕ್ಕೆ ಪೋಪಂತೆ ಪೋಗುವಾಗ ಸೌಗಂಧಿಕಾದೇವಿಯು ತೆರೆಯಮರೆಯಲ್ಲಿ ನಿಂತು ಅರಸುಗಳ ಸಾಹಸವನ್ನೋಡಲಾಸಕ್ತಳಾಗಿ ಸಮೀಪದಲ್ಲಿರುವ ಗೋದಾವರೀ ನದಿಯಂ ಕುರಿತು ಎಲೈ ಗೋದಾವರೀ ದೇವಿಯೇ! ಈಗ ಸುಗಂಧರಾಜೇಂದ್ರನು ಈ ಆಯುಧವನ್ನೆತ್ತಿದರೆ ನಿನ್ನ ಹೆಸರಿನಿಂದ ವಿಳಸಿಪ ಸುವಾಸಿನಿಯರಂ ಸಕಲಾಲಂಕಾರಗಳಿಂದ ಪೂಜಿಸುವೆನೆಂದು ಮನದೊಳು ಮೀಸಲಂ ಕಟ್ಟಿ ನೋಡುತ್ತಿರಲಾಗ ಮಾರುಮೂರ ನಡದು ಇನ್ನು ಪಾರಿಯೂದೂರಲಾರೆವೆಂದು ಹಿಂತಿರುಗುವರು ಕೆಲವರು, ಅಪೆರಂ ಇಜೀನೆಂದು ನೇವಳಿಸಿ ಮುಂದೆ ನಾಲ್ಕು ಅಡಿಗಳನ್ನಿಟ್ಟು ಕೆಂಡಗಳಂ ತುಳಿವಂತಾಗಿ ಭೂಮಿಯನೋಡಿ ಹಾರಿ ಬೀಳುವರು ಕೆಲವರು, ಇವರೇನು ಧೀರರು ಯಿದು ರಾಜಧರ್ಮವೇ ಎಂದು ಯಿನ್ನು ಕೆಲವು ದೂರ ನಡದು ಜ್ವಾಲೆಗಳ ಶಕೆತಟ್ಟಿ ಘೋರಿ ಬಂದು ಆಶ್ಚರ್ಯಪಡುವರಂತೆ ಮೂರ್ಛಿತರಾದವರು ಕೆಲವರು, ಇವರನ್ನೋಡಿ ನಗುತ ಮಂತ್ರ ಔಷಧಿಗಳ ಬಲದಿಂದ ಸಮೀಪಕ್ಕೆ ಪೋಗಬೇಕೆಂದು ನಡದು ಮೂಗು ಕಿವಿಗಳೊಳು ರಕ್ತಂಗಳು ಸುರಿದು ಇದು ದೇವತಾ ಪ್ರಭಾವಸ್ಥಲವು ಪರೀಕ್ಷಾಯೋಗ್ಯವಲ್ಲವೆಂದು ಕೂಗುತ ತಮ್ಮ ತಮ್ಮ ಸೇವಕರ ಗುಂಪಿನೊಳು ಬಂದು ಬೀಳುವರು ಕೆಲವರು, ಇಂತು ಕೆಲವರು ಭೂಪತಿಗಳು ತಾಪವಂಗೊಂಡು ರೋಷದಿಂ ಕಂದಿ ಕೋಪದ ಕೆಲಸವು ನಡೆಯದೆ ಶ್ರೀಪತಿಯೇ ಕಡೆಹಾಯಿಸಬೇಕೆಂದು ಪಶ್ಚಾತ್ತಾಪವಂಗೊಂಡು ತೋಪುಗಳದ್ದೆಡೆಗೆ ನಡದು

ಶೀತೋಪಚಾರಂಗಳಂ ಮಾಡಿಕೊಳ್ಳಲಾಗ ಮಹಾಕಾಳಿಯ ಅನುಗ್ರಹವಂ ಪಡೆದ ಅವಂತೀ ವೀರಭೋಜ ರಾಜನು, ಕಾರ್ತವೀರ್ಯವಂಶದಲ್ಲಿ ಕೀರ್ತಿಯಂ ಪಡೆದ ಪ್ರತೀಪ ಭೂಪಾಲನು, ಮಥುರಾಪುರದ ಅರಸಾದ ಸುಷೇಣರಾಯನು, ನೇಪಾಳರಾಜನು, ಈನಾಲ್ಕು ಜನಂಗಳು ಜ್ವಾಲೆಗಳನೆಣಿಸದೆ ಒಳಪೊಕ್ಕು ಉಪವಿಂಧ್ಯಗಿರಿಯ ಮಧ್ಯರಂಗಕ್ಕೆ ಪೋಗಿ ಮೇರುಗಿರಿಯ ರತ್ನಶಿಖರದಂತೆ ಬಿದ್ದಿರುವ ಮಹಾಯುಧದ ಆಕಾರವಂ, ಕಾಂತಿಯಂ, ನೂರು ನೂರು ಅಂಚುಗಳಂ, ಔನ್ನತ್ಯವಂ, ಮೊನೆಯಂಕೂಡಾ ನೋಡಿ ಇದು ದೇವೇಂದ್ರನ ವಜ್ರಾಯುಧದ ಲಕ್ಷಣಂಗಳಿಂದೊಪ್ಪಿರುವದು. ಇದು ಯೇನೋನಿಮಿತ್ತವಿಲ್ಲದೆ ಭೂಮಿಗೆ ಬೀಳಲಾರದೆಂದು ಆಲೋಚಿಸಿ ನಾಲ್ಕುಮಂದಿಯು ಸಮಾನಬಲವುಳ್ಳವರಾದ ಕಾರಣ ತಾವು ಪರಾಂಬರಿಸಬಹುದು, ತಾವುಪರಾಂಬರಿಸಬಹುದೆಂದು ಓರ್ವೋರ್ವರು ಮರ್ಯಾದೆಯ ಮಾತುಗಳನಾಡುತ ಹೊತ್ತಾಯಿತೆಂದು ನುಡಿಯುತ್ತಾಯಿದನ್ನೆತ್ತುವ ಪರಿಯೆಂತೆಂದು ಚಿಂತಿಸುತ ಸುತ್ತಲೂ ಮುತ್ತಿರುವ ಜನಂಗಳೊಳು ಮಾನಹೀನನಾಗುವದೆಂದು ಅಭಿಮಾನಕ್ಕೆ ಬಿದ್ದು ಅಳೆಯುತ ಹತ್ತಿರಕ್ಕೆ ಒತ್ತೊತ್ತಿ ಪೋಗುವಾಗ ಕತ್ತುಪಿಡಿದು ಯತ್ತಿಬಿಸುಟಂತಾಗಿ ಹೆದರಿ ಹಿಮ್ಮೆಟ್ಟಿದವರೊಳು ವೀರಭೋಜನು ಶಿವನ ಪಟ್ಟದರಸಿಯ ಮೇಲೆ ಸಿಟ್ಟುಗೊಂಡು ನೆಟ್ಟನೆದೂರಿ ಕೈಗಳಂ ಮುಟ್ಟುವದಕ್ಕೆ ಪೋಗಿ ಬಿಟ್ಟಕೈ ಬಿಟ್ಟಂತೆ ನಿಲ್ಲಲೂ ಈ ಜಟ್ಟದ ಮಹಿಮೆಯು ಬಲುಕೆಟ್ಟದೆಂದು ಪಟ್ಟಿಗೆ ಜನರುಗಳೆಲ್ಲ ಕೂಗುವಾಗ ಹೂವಿನಕೊಟ್ಟಿಗೆಯೊಳಿರುವ ನಾರದನ ಪಟ್ಟದ ಗಿಣಿಯು ತನ್ನ ಮನದಲ್ಲಿ ದಾನವರು ಯತ್ತಲಾರದ ವಜ್ರಾಯುಧವಂ ಮಾನವರು ಎತ್ತುವೆವು ಎಂದು ಪೋಗುವರು, ಏನು ಬುದ್ಧಿಹೀನರೋ ಎಂದು ಭೂಲೋಕದವರ ದುರಭಿಮಾನವನ್ನೋಡಿ ಆಶ್ಚರ್ಯವಂ ಬಡುತಲಿರಲಾಗ ನೇಪಾಳದ ಅರಸು ಏನಿದು ಅಚ್ಚರಿಯು ನಾನು ಸಮುದ್ರದೊಳು ನಾವೆಯಿಲ್ಲದೆ ನಡೆಯುವೆನು ವಾಹನವಿಲ್ಲದೆ ಗಗನದೊಳು ಸಂಚರಿಸುವೆನು ಮತ್ತು ಪರ್ವತಂಗಳಾದರೂ ಚಲಿಸುವಂತೆಮಾಳ್ಪೆನೆಂಬ ಅಹಂಕಾರವಿರುವದು ಪಶುಪಂಗಳಿಗೆ ಪಂಚಾ

ಗ್ನಿಜ್ವಾಲೆಗಳಿಗೆ ಕೂಡಾ ಮೈಗೊಟ್ಟು, ಆಹಾರವಂಬಿಟ್ಟು, ಆರುಮಾಸ ನಿಂತು ತಪವಂ ಮಾಡುವೆನು. ಇಂತೆನ್ನ ನನ್ನ ಸಮೀಪದೊಳ್ ಸೇರಲೀಸದು, ಕಾಳೀ ಕಟಾಕ್ಷಕ್ಕೆ ಪಾತ್ರನಾದ ವೀರಭೋಜನು ಎತ್ತಿದ ಕೈ ಎತ್ತಿದಂತೆ ನಿಂತಿರುವನು, ಇದರ ಮಹಿಮೆಯಂ ಜಾನಪರಿಯಿಂ ಪರೀಕ್ಷಿಯಂಗೈವೆನೆಂದು ಮಂದಮಂದ ಪ್ರದಕ್ಷಿಣವಾಗಿ ಬಂದು, ನಿಜಗುರುವಂ ಮನದೊಳ್ ನೆನದು, ಇರ್ದೇನೆಂದು ಕಣ್ಣುಗಳಂ ಮುಚ್ಚಿ ನೋಡುತ್ತಿರಲು, ಆಗ ರಾಜಬೃಂದದೊಳ್ ಸುಗಂಧರಾಜನು ಸಾವಿರ ಕಣ್ಗಳಿಂದೊಪ್ಪಿ ನಿಂತಿರುವಂತೆ ಕಾಣಬರಲು, ಬಿಚ್ಚಿಬಿದ್ದಂತೆ ಕಣ್ದೆರದು, ಬಂದು ನಿಮಿಷ ಆಲೋಚನೆಯಂಗೈದು, ಧರ್ಮಸಂಸ್ಥಾಪನಾರ್ಥವಾಗಿ ಮಹೇಂದ್ರನು ಅವತಾರವಂಗೈದಿರುವನು, ಇಂತಲ್ಲದೆ ಬಿಳಿಯಾನೆಯಂ ತಂದುಕೊಡುವೆನೆಂದು ಪ್ರತಿಜ್ಞೆಯಂ ಮಾಡಿದ ಮಾತುಗಳು ಈಗ ಸಲುಬಹುದು, ಇದು ವಜ್ರಾಯುಧವೇ ನಿಜವೆಂದು ತಾನು ತಿಳಿದು, ಈ ದೇವರಹಸ್ಯವಂ ಪೇಳಿದಡೆ ಜನರು ಹಾಸ್ಯಮಂ ಮಾಡುವರು, ಆದ್ದರಿಂ ನಾಳೆ ತಾನೇ ತಿಳಿಯುವದೆಂದು ವೀರಭೋಜ ಮೊದಲಾದ ರಾಜರುಗಳೊಡನೆ ಎಲೈ ಭೂಪಾಲಮಣಿಗಳಿರಾ, ಇದು ಮನುಷ್ಯಕಾರ್ಯವಲ್ಲ ದೇವತೆಗಳ ಚಾತುರ್ಯವು, ನಮ್ಮ ಶೌರ್ಯವು ಇದರಮೇಲೆ ನಡೆಯುವದಾಗಿ ಧೈರ್ಯವು ತೋರಲಿಲ್ಲ; ಇದರಿಂದ ನಮಗೆ ಅವಮಾನವೇನು, ಬಿಳಿಯಾನೆಯಂ ತಂದು ಕೊಡುವೆನೆಂದು ಪ್ರತಿಜ್ಞೆಯಂ ಮಾಡಿದ ಮೊನೆಗಾರನು ಆಯುಧವನ್ನೆತ್ತಲಾರನೆ ನಡೆಯಿರೀ ಎಂದು ನುಡಿದು ಅವರೊಡಗೂಡಿ ಆ ಆಯುಧಕ್ಕೆ ಪ್ರದಕ್ಷಿಣವಂ ಮಾಡಿ ನಮಸ್ಕರಿಸಲು, ಬಳಿಕ ಭೋಜನಿಗೆ ಬಾಹು ಪೂರ್ವದಂತಾಗಲು, ಇವನ್ನೆಲ್ಲವನ್ನೋಡಿ ಕಳಿಂಗಪುರದ ಜನರು, ಇದು ತ್ರಿಮೂರ್ತಿಗಳ ಶಕ್ತಿತ್ರಯದಲ್ಲಿ ಯಾವದೋ ಒಂದು ಮಹಾ ಶಕ್ತಿಯೋ ಹೊರ್ತು ಆಯುಧವಲ್ಲ; ಈ ವಸ್ತುವಂ ಪಡೆವಾಗ ಇಂತು ಯಾಕೆ ಕಾರಿತಳೋ? ಈ ಕಾಂತೆ, ಎಂದು ಚಿಂತೆಯಂ ಮಾಡಲು ಆಗ ರಾಯರುಗಳಲ್ಲಿ ಕೆಲವರು ಈ ದುರ್ಘಟವಾದ ಪಣವಂ ಸುಗಂಧರಾಜೇಂದ್ರರವರು ಸಾಧಿಸಿ, ಸೌಗಂಧಿಕಾದೇವಿಯ ಪಾಣಿಯಂ ಪಿಡಿಯಬಹುದು ಎಂದು ನುಡಿ

ಯುತ್ತಿರ್ದರು; ಕೆಲವರು ಬಿಳಿಯ ಆನೆಯಂ ತಂದು ಕೊಡುವರಿಗೆ ಬೆಟ್ಟದೊಳ್ ಬಂದು ಕಲ್ಲನೆತ್ತುವರು ಇದು ಆಶ್ಚರ್ಯವೆಂದುಸುರುವರು; ಕೆಲವರು ಅವರು ನಮ್ಮಂತೆ ಮನುಷ್ಯರಲ್ಲ ದೇವಾಂಶ ಪುರುಷರು ಎತ್ತಿದರೂ ಎತ್ತಬಲ್ಲರೆನ್ನುವರು; ಕೆಲವರು ಪೂರ್ವದೊಳ್ ಸಾರ್ವಭೌಮನಾದ ಉಪರಿಚರವಸುರಾಯನು ಕೋಲಾಹಲ ಪರ್ವತವಂ ಉಗುರಿನಿಂದ ಒಂದು ಯೋಜನದೂರ ಹಾರಿಸಲಿಲ್ಲವೇ ಅನ್ನುವರು; ಕೆಲವರು ಇದು ಮಲ್ಲಿಕೆ ಸೌಗಂಧಿಕಾದೇವಿಗೆ ಪರಿಣಯವಾಗುವಂತೆ ನಮ್ಮ ಬುದ್ಧಿಗೆ ತೋರುವದಿಲ್ಲವೆಂದು ಮೆಲ್ಲಮೆಲ್ಲನೆ ಮಾತನಾಡಿಕೊಳ್ಳುವರು; ಕೆಲವರು ಇದು ಕಳಿಂಗರಾಜನ ಅರವತ್ತುವರುಷದ ಮೇಲಣ ವಿವೇಕದ ಕಾರ್ಯವೆಂದು ಗುಸುಗುಸುನೆ ಗೇಲಿಯಂ ಮಾಡುತ್ತಿರಲಾಗ, ಸೌಗಂಧಿಕಾದೇವಿಯು ಈ ಲೀಲಾಶುಕವನ್ನಂಬಿ ನಾನಿಂತು ಭೂಮ್ಯಾಕಾಶಂಗಳೊಳ್ ಎಲ್ಲಿಯೂ ಸೇರದೆ ಅಂತರಾಳದೊಳ್ ನಿಂತೆನೆಂದು ಚಿಂತಾಕ್ರಾಂತಳಾಗಿರಲು, ಆ ಭಾವನಂ ತಿಳಿದು ಲೀಲಾಶುಕವು ಚಿತ್ರಲೇಖೆಯಂ ಕರೆದು, ಎಲೈ ಸಖಿಯೇ ಸ್ವಯಂವರ ಸಭಾಮಂಟಪದಲ್ಲಿ ಕುಳಿತು ಪಣವಂ ಮೂರು ಲೋಕಂಗಳಲ್ಲಿ ಎಲ್ಲಿದ್ದರೂ ತರುವೆನೆಂದು ಪ್ರತಿಜ್ಞೆಯಂ ಮಾಡಿದ ರಾಯನಂ ಕುರಿತು, ಈ ಸಮಯದೊಳ್ ಪೇಳತಕ್ಕ ನುಡಿಗಳಂ ಪೇಳು ನಡೆ ಎಂದು ನುಡಿಯಲು, ಆ ಮಾತಿಗೆ ರಾಜಪುತ್ರಿಯು ಈ ಮೋಹನಾಂಗನ ಮಾತಂ ಕೇಳಿಯುವತನಕ ಶುಕದ ಮನಸ್ಸಿಗೆ ಸಮಾಧಾನವಾಗವೇನೋ ಎಂದು ಆಲೋಚನಾಸಮುದ್ರದೊಳ್ ಮುಳುಗಿರಲು; ಆಗ ಚಿತ್ರಲೇಖೆಯು ಹಾಸಿನ ತೆರೆಯ ಮುಂದುಗಡೆಗೆ ಬಂದು ನಿಲ್ಲಲು, ಎಲ್ಲರೂ ಮಾತನಾಡುವದಂ ಬಿಟ್ಟು ನಿಟ್ಟನೋಡುತ್ತ ಪುಬ್ಬುಗಳನೆತ್ತಿ ನಿಶ್ಶಬ್ದವಾಗಿ ಆಲಿಸುತ್ತಿರಲಾಗ ಚಿತ್ರಲೇಖೆಯು ಸುಮತಿಯಂ ಕುರಿತು ಎಲೈ ಕರ್ನಾಟ ರಾಜಮಂತ್ರಿಯೇ ಕೇಳು ನಿಮ್ಮ ಆಳಿದವರು ನಮ್ಮ ಬಡತಿಗೆ ಚತುರ್ದಂತಗಳುಳ್ಳ ಬಿಳಿದಾದ ಗಜವಂ ತಂದುಕೊಡುವೆನೆಂದು ಭಾಷೆಯಂ ಕೊಟ್ಟಿರುವರು, ಆ ಮಾತು ನಿಜವೆಂದು ನಂಬುವದಕ್ಕೆ ಈ ಪ್ರಾಣಂ ನಮ್ಮ ಅರಸಿ ಬಯಸಿರುವಳೆಂಬುವಂ ತಾವು ತಿಳಿದಿದ್ದರೂ ಚಿತ್ತ

ವೊಳ್ ವಿಳಂಬವಂ ಸಹಿಸಿರುವದಂ ನೋಡಿದರೆ ವಿಸ್ಮಯವಾಗಿದೆ ಎಂದು ನುಡಿಯಲು ಆ ಮಾತಿಗೆ ಸುಮಿತ್ರೆಯು ಎಲೈ ಸಖೀಮಣಿಯೇ ಕೇಳು ನಮ್ಮ ನರಪತಿಯವರು ಈ ನರನಾಥನ ಬಲವಂ, ಪ್ರತಾಪವಂ, ಸಾಹಸವಂ ಸಾಂಗವಾಗಿ ನೋಡಬೇಕೆಂದು ಸಾವಕಾಶವಂ ಸಹಿಸಿದರು, ಈಗ ಮಾಯಾಮಾರುತವು ಮಲ್ಲಿಗೆಯುಲ್ಲಾಸಿಸಿದಂತೆ ಕಾಳಯುದ್ಧವಂ ಕೈಯಿಂದ ಎತ್ತುವದನ್ನೋಡಬೇಕೆಂಬದಾಗಿ ನಿಮ್ಮ ಬಡತಿಯರಿಗೆ ಬಿನ್ನವಿಸಬಹುದೆಂದು ನುಡಿಯಲಾ ಮಂತ್ರಿಯ ಮಾತುಗಳಂ ಕೇಳಿ ಮಹೀಪಾಲರೆಲ್ಲರು ಅರಸು ಮಾತಾಡದಿದ್ದರು ಮಂತ್ರಿಯು ದಿಟ್ಟತನದಿಂ ಮನಸುಬಂದಂತೆ ಹೇಳುವನು ಇಂತಿರಬ್ಯಾಡವೆ ಧೈರ್ಯವೆಂದು ವಿನೋದವಂ ಮಾಡುವ ಸಮಯದೊಳು ಸುಗಂಧರಾಜೇಂದ್ರನು ಸತ್ಯಸಂಧನಾದ್ದರಿಂ ಮನಗೊಳು ಭಯವಿಲ್ಲದೆ ಮಂಚವಿಂದಿಳಿದು ರಾಜಕುಲವೆಲ್ಲ ಉಲ್ಲಾಸವಂಗೊಳ್ಳಬಹುದು; ಇಂತಲ್ಲದೆ ಗೌರೀವಲ್ಲಭನು ಈಗ ನನ್ನಂ ಕರುಣಿಸುವಂತೆ ವಾತ್ಸಲ್ಯದಿಂದ ತಾವೆಲ್ಲರು ನೋಡಬಹುದೆಂದು ವಿನಯದಿಂ ನುಡಿದು, ಅಲ್ಲಿಯೇ ಒಂದು ಮಲ್ಲಿಕಾಮಂಟಪಕ್ಕೆ ಹೋಗಿ ಗೋದಾವರೀ ಜಲದಿಂದ ಕರಪಾದಂಗಳಂ ತೊಳೆದು ಮಡಿಯನುಟ್ಟು ಶುದ್ಧಾಚಮನವಂ ಮಾಡಿ ಸಿದ್ಧಾಸನದೊಳು ಬದ್ಧಾಂಜಲಿಪುಟನಾಗಿ ಹೃದ್ಧ್ಯಾನಮುಖದಿಂದ ತನ್ನ ಗುರುವರೇಣ್ಯನನ್ನು ಮತ್ತು ಸಕಲಜಗಜ್ಜನನಿಯಾದ ಶ್ರೀ ಚಾಮುಂಡೀ ದೇವಿಯಂ ಮನದೊಳು ನೆನದು ಸ್ಮರಿಸಿದ ಮಾತ್ರದಿಂದಲೇ ಸಮೀಪದೊಳು ಬಂದು ನಿಂದು ಕೈಗಳಂ ಮುಗಿದ ಛಾಯಾಗುಪ್ತನೆಂಬ ಯಕ್ಷನೊಡನೆ ಈ ವೃತ್ತಾಂತವೆಲ್ಲವಂ ಹೇಳಲಾಕ್ಷಣದೊಳು ಛಾಯಾಗುಪ್ತನು ಈ ರಾಜೇಂದ್ರನೇ ದೇವೇಂದ್ರನೆಂದು ತಿಳಿದವನಾದಕಾರಣ ಎಲೈ ಸ್ವಾಮಿಯೇ ಮೂರುಲೋಕಂಗಳೊಳು ನಿಮಗೆ ಅಶಕ್ಯವೇನಿರುವದು ದೇವೀಕಟಾಕ್ಷಬಲದಿಂದ ಸಹಸ್ರಾಕ್ಷನಲ್ಲಿರುವ ಸತ್ವಸಾಹಸಂಗಳು ನಿಮ್ಮಲ್ಲಿರುವಾಗ ಈ ಬಂದಾಯುಧವನೆತ್ತುವದು ಲಕ್ಷ್ಯವೇ ಎಂದು ಬಲಪ್ರಭಾವಂಗಳಂ ಸೂಚಿಸಲು;

ಆಗ ಸುಗಂಧರಾಜೇಂದ್ರನು ಬಲಭುಜವು ಅಲ್ಲಾಡಲು ಅಲ್ಲಿಂದ

ಮೆಲ್ಲನೆ ಎದ್ದು ರಾಜಬೃಂದದ ಮಧ್ಯದೊಳು ಹೊರಟು ಪರಾಶರವ್ಯಾಸರಿಗೆ ಸರಿಯಾದ ಬ್ರಾಹ್ಮಣರ ಸಭೆಗೆ ಬಂದು ಭಕ್ತಿಯಿಂದ ಕೈಗಳಂ ಮುಗಿದು ಹಾಗೆ ವಿದ್ಯಾಗುರುವಾದ ವಿದ್ಯಾಸಾಗರನಂ ಕಂಡು ತಂದೆತಾಯಿಗಳಾದ ಸುಚರಿತ್ರರಾಯ ಗುಣವತೀದೇವಿಮೊದಲಾದವರನ್ನೋಡಿದಂತೆ ಹರ್ಷಮಂಗೊಂಡು ಅವನ ಚಾರಿತ್ರ ಅಶಕ್ಯಪಣವಂ ಸಾಧಿಸುವೆನು ಆಶೀರ್ವಾದವಂ ಮಾಡಬೇಕೆಂದು ನುಡಿದು ಸಾಷ್ಟಾಂಗಪ್ರಣಾಮವಂ ಮಾಡಲು ಸುಗಂಧರಾಜಕುಮಾರಂಗೆ ಆಚಾರ್ಯನಾದ ವಿದ್ಯಾಸಾಗರನು ಧೀರ್ಘಾಯುಷ್ಮಂತನಾಗಿ ಪರ್ವತರಾಜಸುತ ಪರಾಯುರಿಗೆ ಚಲಿಸದೆ ವೃತ್ರಾಸುರನಂ ಸಂಹರಿಸಿದ ದೇವೇಂದ್ರನಂತೆ ಇಂತಪ್ಪ ಧ್ರುವಕಾರ್ಯಂಗಳನ್ನೇ ಸಾಧಿಸುತ ಕೀರ್ತಿಯಂ ಪಡೆಯುವನಾಗೆಂದು ಆಶೀರ್ವಾದವಂ ಮಾಡಲು, ಸುಗಂಧರಾಜೇಂದ್ರನು ಅಲ್ಲಿಂದ ತೆರಳಿ ಕಳಿಂಗರಾಜಮೊದಲಾದ ಹಿರಿಯರಿಗೆಲ್ಲಾ ಕೈಗಳಂ ಮುಗಿದು ಸುಮತಿಯ ಕೈಯಲ್ಲಿ ಪೂಜಾದ್ರವ್ಯಗಳಂ ತೆಗೆಕೊಂಡು ಈರ್ವರೂ ನಡದು ಪೋಗುತ್ತ ಹೂವುಗಳು ಬಾಡದೇ ಅಗ್ನಿಜ್ವಾಲೆಗಳೆಲ್ಲಾ ಮಂದ ಮಾರುತನಂತೆ ತಂಪುದೋರುತ್ತ ಬರಲು ಸುಖದಿಂದ ನಡೆಯುತಲಿರುವ ಸುಗಂಧರಾಜ ಸುಮತಿಗಳೀರ್ವರನೋಡಿ ಜನರೆಲ್ಲಾ ಮೊದಲಲ್ಲಿಯೇ ವಿಸ್ಮಯಂಬಟ್ಟು ದೇವತೆಗಳಂತೆ ನಿಮೇಷರಹಿತರಾಗಿ ನೋಡುತ್ತಲಿರಲಾಗ ಸುಗಂಧರಾಜೇಂದ್ರನು ಉಪವಿಂಧ್ಯಗಿರಿಯಮಧ್ಯದಲ್ಲಿರುವ ಆಯುಧವನ್ನೋಡಿ ಆಶ್ಚರ್ಯವಂಬಟ್ಟು ಎಲೈ ಸುಮತಿಯೇ ಇದಂಯಾವ ಆಯುಧವೆಂದು ಪೂಜಿಸಬೇಕೆಂದು ಕೇಳಲಾಮಾತಿಗೆ ಸುಮತಿಯು ಪರಿಭಾವಿಸಿ ಲಕ್ಷಣಂಗಳನೆಲ್ಲಾ ನೋಡಿ ಇದು ಮಹೇಂದ್ರನ ಆಯುಧದ ಚಿಹ್ನಂಗಳಿಂದೊಪ್ಪಿರುವದು ಇಂತಲ್ಲದೇ ಈಗ ನಾನು ಒಂದು ಮಾತಂ ಬಿನ್ನವಿಸುವೆನು ಇಂದ್ರನು ತ್ರಿಲೋಕಾಧಿಪತಿಯಾದ ಕಾರಣ ಈ ಮೂರು ಲೋಕಂಗಳಲ್ಲಿದ್ದ ವಸ್ತುಗಳೆಲ್ಲಾ ಆತನದೇ ಇರುವಾಗ ಈ ಆಯುಧವಂ ಇಂದ್ರಾಯುಧವೆಂದು ಪೂಜೆಯಂ ಮಾಡುವಲ್ಲಿ ವಿಚಾರವೇನೆಂದು ನುಡಿಯಲಾಮಾತಂ ಸುಗಂಧರಾಜೇಂದ್ರನು ಮನದಂದು ಅವನು ಪಠಿಸುವದಕ್ಕೆ ಯೋಗ್ಯನೆಂದು ತಿಳಿದು ಬಳಿಕ ಮೊದಲು ಪೂ

ಷ್ಪಾಂಜಲಿಯಂ ಮಾಡಿ, ಅರ್ಘ್ಯಪಾದ್ಯ್ಯಮೊದಲಾದ ಉಪಚಾರಂಗಳಂಗೈದು ಬಳಿಕ ಹನ್ನೆರಡು ಭಾರದ ತ್ರೀಕದಧಿಯಿಂದಲೂ. ಗೋಕ್ಷೀರದಿಂದಲೂ, ಘೃತದಿಂದಲೂ, ಫಲರಸಂಗಳಿಂದಲೂ, ಮಧುವಿನಿಂದಲೂ, ಕರ್ಪೂರಾದಿ ವ್ಯಚಂದನದಿಂದಲೂ, ಧಾರಾವರ್ಷಂಗಳಂತೆ ಅಭಿಷೇಕಮಂ ಮಾಡಿ, ಅಗರು ಸಾಂಬ್ರಾಣಿಗಳಿಂದ ಧೂಪಿಸಿ, ಧನಂಗಳಿಂದ ಸಕಲಜಾತಿ ಪುಷ್ಪಂಗಳಿಂದ ನವರತ್ನಗಳಿಂದ ಕೂಡ ಪೂಜಿಸಿ, ವಜ್ರ ಸೂಕ್ತಂಗಳಿಂದ ಸ್ತುತಿಯಂಗೈದು ಪ್ರದಕ್ಷಿಣವಾಗಿ ಬಂದು ನಮಸ್ಕರಿಸುತ್ತಲಿರಲು. ಆಗ ರಾಯರುಗಳೊಳು ಕೆಲವರು ಡಂಭಭಕ್ತಿಕಾಲವಲ್ಲದೆ ಪರಮಾರ್ಥವನ್ನು ಯಾರುಕೇಳುವರೆನ್ನುವರು. ಕೆಲವರು ಕೊನೆಗೂ ನೋಡುವಾ ಯಿಷ್ಟರೊಳು ತ್ವರೆ ಏನೆಂದು ನುಡಿಯುವರು, ಕೆಲವರು ಅಭಿಷೇಕಪೂಜೆಗಳಿಂಗಳ ನೋಡಿದರೆ ಏನೋ ಒಂದು ಮಹಿಮೆ ಇರುವಂತ ತೋರುವದೆನ್ನುವರು, ಕೆಲವರು ದೇಶಂಗಳಂ ಜಯಿಸಿ ಪ್ರತಾಪವಂತನೆನಿಸಿ ಹೆಸರಿಗೆ ಬಂದ ನರಪತಿ ಕುಮಾರನು ಲಾಘವಬರುವ ಕಾರ್ಯವಂ ಮಾಡುವನಲ್ಲ ಶಿವನೇಬಲ್ಲನೆನ್ನುವರು, ಈಪರಿಯಿಂದ ಜನಂಗಳೆಲ್ಲರು ಭಿನ್ನರುಚಿಗಳಾದ ಕಾರಣ ಮನಸ್ಸುಬಂದಂತೆ ಮಾತುಗಳನಾಡುವದಂ ಮೆಲ್ಲನೆ ಕೇಳಿ ಸೌಗಂಧಿಕಾದೇವಿಯು ಹಿತಸಖೀಜನರೊಡಗೂಡಿ ಬಂದು ಮಲ್ಲಿಕಾಮಂಟಪಕ್ಕೆ ಬಂದು, ಪಡಿಯನ್ನಿಟ್ಟು ಗೌರಿಯಂ ಪೂಜಿಸಿ, ಸುಗಂಧರಾಜೇಂದ್ರನಕಡೆನೋಡಿ ಈ ರಾಜನು ಆ ಆಯುಧವನ್ನೆತ್ತುವನೋ ಎತ್ತಲಾರನೋ ಈ ಮಾನವೇಂದ್ರನಿಗೆ ಏನಾದರೂ ಅವಮಾನವಾದರೆ ನನ್ನ ಪ್ರಾಣವಂ ತೃಣವಾಗಿ ತಿಳಿಯುವೆನೆಂದು ಅಭಿಮಾನವಂಗೊಂಡು ಮನಸ್ಸು ತಡೆಯಲಾರದೆ ಉಪಶ್ರುತೀದೇವಿಯಂ ಧ್ಯಾನಿಸಿ, ಎಲೈ ದೇವಿಯೆ ನಾನು ಜನ್ಮಾಂತರದಲ್ಲಿಯೂ ನಿನ್ನ ಪೂಜಿಸಿದ್ದದ್ದೇಉಂಟಾದರೆ, ನಾನು ಅನ್ಯಪುರುಷರನ್ನ ಅಜ್ಞಾತನ್ಮಾಂತರದಿತ ತಿಳಿದು ಸುಗಂಧರಾಜೇಂದ್ರನನ್ನೇ ಪತಿಯಾಗಿ ಮನಸ್ಸಿನೊಳ್ ವರಿಸಿರುವೆನು; ಎನ್ನಂ ಪತಿವ್ರತೆಯಂ ಮಾಡಬೇಕೆಂದು ನಿನ್ನ ಹೃದಯದಲ್ಲಿದ್ದರೆ ಪರ್ವತದಂತೆ ಬಿದ್ದಿರುವ ಈ ಆಯುಧವು, ಹೂವಿನಚಂಡಿನಂತ ಸುಗಂಧರಾಜೇಂದ್ರನ ಕರಕಮಲಕ್ಕೆ ಅಲಂಕಾರವಾಗುವಂತೆ

ಮಾಡೆಂದು ನುಡಿದು, ಪುಷ್ಪಾಂಜಲಿಯಂ ಸಮರ್ಪಿಸಿ, ಗದ್ಗದ ಸ್ವರದಿಂ ಬೇಡಿಯು ಸ್ತ್ರೀಯೋಗ್ಯಯುಕ್ತ ಕಂಚುಕಿಗಳಂ ತುಂಬಿ ವೈರಿಸಂಹಾರಕ್ಕೆ, ನನು ಸ್ಮರಣವಂ ಮಾಡಬೇಕೆಂದು ವಿಶ್ವಾಸಮುಕಾಲದೊಳ್ ಸುಗಂಧ ರಾಜೇಂದ್ರನು. ಆ ದಿವ್ಯಾಸನ ತ್ರೋಣಿಯಿಂದ ಭೂಮಿಯುಂ ಎತ್ತಿದಂತೆ, ತನ್ನ ಬಲದ ಪಾದದಿಂದ ಆ ದಿವ್ಯಾಯುಧದ ಪಿಡಿಯಂ ಪಿಡಿದು ಅಲ್ಲಾ ಡಿಸಿ, ಬ್ರಹ್ಮಾಂಡವೆಲ್ಲ ಭಾಗಗಳಿರನ್ಂ ಎತ್ತಿ ಕುಕ್ಕುವಂತೆ ನಿವಾಟಿ ಎತ್ತಲು, ಆ ಸಮಯದೊಳ್ ಸಾವಿರ ಸಿಡಿಲುಗಳು ಬಂದೇ ಕಾಲ ದಲ್ಲಿ ಬೀಳುವಂತೆ, ಕುಲಪರ್ವತಂಗಳನ್ನಲ್ಲಾಡಿಸಿ, ಭೂಮಂಡಲವಂ ಗಡಗಡನೆ ನಡುಗಿಸಿ, ಸಮುದ್ರಂಗಳಂ ಘೋರೆಂದು ಮೊರೆಯುವಂತೆ ಮಾಡಿ, ತ್ರಿವಿಕ್ರಮನ ಪಾದನಖದಿಂದೊಡೆಯುವ ಬ್ರಹ್ಮಾಂಡ ಕಟಾಹದ ಶಬ್ದವನ್ನನುಕರಿಸುವ ಒಂದು ಅದ್ಭುತ ಧ್ವನಿ ಉಂಟಾಗಲು, ಆ ಮಹಾಧ್ವನಿಯು ದ್ವೀಪಾಂತರಗಳಲ್ಲಿ ಪ್ರಬಲಿಸಿರುವ ರಾಕ್ಷಸ ಸಂಹಾರ ಯಾತ್ರೆಗೆ ಜಯಭೇರಿ ಧ್ವನಿಯಾಗಿ, ಇಂದ್ರನು ಭೂಲೋಕದೊಳ್, ಸುಗಂಧರಾಜೇಂದ್ರನಾಗಿರುವನಂ ಚತುರ್ದಶ ಲೋಕಂಗಳಿಗೂ ತಿಳಿಯು ವಂತೆ ಮೊಳಗಿಸಿದ ಬಿರುದುವಾದ್ಯಧ್ವನಿಯಾಗಿ ಪರಾಕ್ರಮವೆಂಬ ಬಾಲ ಕನ ಜಾತಕರ್ಮೋತ್ಸವದ ಪುಣ್ಯಾಹದ ಘೋಷವಾಗಿ, ಕೀರ್ತಿಯೆಂಬ ನರ್ತಕಿಯ ನಾಟ್ಯಕ್ಕೆ ಮೃದಂಗಧ್ವನಿಯಾಗಿ, ಭೂಲೋಕದೊಳ್ ಕವಿ ಜನಂಗಳೆಂಬ ಮಯೂರಂಗಳಿಗೆ ಕಾರ್ಮುಗಿಲು ಗುಡುಗಾಗಿ, ಓಡಿಹೋ ಗಿರುವ ದೇವತೆಗಳನ್ನೆಲ್ಲ ಕೂಡಿಸುವದಕ್ಕೆ ಸಾವಿರದ ಡಿಂಡಿಮಧ್ವನಿಯಾಗಿ ಸೌಗಂಧಿಕಾದೇವಿಯ ವಿವಾಹೋತ್ಸವಾರಂಭದೊಳ್ ಮೊಳಗಿಸುವ ಮಂಗಳ ಪಟಹಧ್ವನಿಯಾಗಿ ತೋರಲು, ಆಗ ಕಳಿಂಗದೇಶದ ಜನಂಗಳೆ ಲ್ಲರು ಒಂದು ಮುಹೂರ್ತಮೂರ್ಛೆಗೊಂಡವರಂತೆ ಸ್ತಬ್ಧರಾಗಿದ್ದು ಮೆಲ್ಲನೆ ಎಚ್ಚರಗೊಂಡು ಅಚ್ಚರಿಪಡುತ್ತಿರಲು, ಆಕ್ಷಣದೊಳ್ ವಿ ಪಕ್ಷರಾಗಿರುವ ರಾಯರುಕೂಡಾ ಆಯುಧದ ಸ್ವಭಾವವಂ, ಸುಗಂಧರಾ ಜೇಂದ್ರನ ಪ್ರಭಾವವಂಕೂಡ ಕಂಡು ಅಸೂಯೆಯಂ, ಹಾಸ್ಯವಂ, ಕಾ ಪಟ್ಯವಂ, ಅಹಂಕಾರವಂ ಕೂಡ ಬಿಟ್ಟು, ಭಯಭಕ್ತಿಗಳಂತಾಳಿ, ಪ್ರೂ

ಗಳಿಂದ ಝಗ್ಗನೆ ಎದ್ದು ರತ್ನಕಿರೀಟಗಳಂ ನೆಲಕ್ಕೆ ಸೋಕುವಂತೆ ಸಾಷ್ಟಾಂಗವಾಗಿ ನಮಸ್ಕರಿಸುವವರಂ ನೋಡಿ, ಇದೇನು ಅಧಿಕಚಾತುರ್ಯಾದಿಗಳು, ತಾವೆಲ್ಲಾ ಹಿರಿಯರೆಂದು ಓರ್ವೋರ್ವರಂ ಆಲಿಂಗನಂಗೈದು, ನನಗೆ ಬಂದ ಜಯವೂ, ಕೀರ್ತಿಯೂ ತಮ್ಮದಲ್ಲವೇ, ಕ್ಷತ್ರಿಯಕುಲದಲ್ಲಿ ಭೇದವೆಲ್ಲಿಹುದೆಂದು, ವಿನಯದ ನುಡಿಗಳಿಂದವರೀ ಹರ್ಷವಂಗೊಳ್ಳಿಸುತ್ತ ಆ ಆಯುಧವಂ ಸಹಸ್ರ ಗಜಗಳಂ ಕಟ್ಟಿರುವ ಶಿಲಾಶಕಟದಮೇಲೆ ಇರಿಸಿ ವಸ್ತ್ರಾದಿಗಳಿಂದ ಅಲಂಕರಿಸಿ ಸರ್ವರಾಯುಧರಂ ಆನೆಗಳನ್ನೇರುವಂತೆ ನಿಯಮಿಸಿ, ಸೌಗಂಧಿಕಾದೇವಿ ಇರುವ ತೆರೆಯಂ ಬೆಳ್ಳಿಗಳಂತಿರುವ ಕಟಾಕ್ಷಂಗಳಿಂ ವೀಕ್ಷಿಸುತ್ತ, ವಿಲಾಸದಿಂ ಗಜವನ್ನೇರಿ ಅಪ್ಸರಸೆಯರಂತೆಯು ಅಗ್ನಿಶರ್ಮ, ವಿದ್ಯಾಸಾಗರ ಮೊದಲಾದ ಬ್ರಾಹ್ಮಣೋತ್ತಮರೇ ದೇವಋಷಿಗಳಂತೆಯು, ಗೋದಾವರೀ ಸಪ್ತಭಾಗಂಗಳೊಳ್ ಗಂಗಾಪ್ರವಾಹಂಗಳಾಗಿಯೂ, ಉನ್ನತವಿಂಧ್ಯಗಿರಿಯೇ ಮೇರುಪರ್ವತದಂತೆಯು, ತೋರುತ್ತಿರಲು;

ಸುಗಂಧರಾಜನು, ಸರ್ವರಾಜಬೃಂದದೊಡನೆ ಕಳಿಂಗಪುರಿಗೆ ಸವಾರಿಯಂ ತೆರಳುತ್ತ, ಮುಂದೆ ನಡೆಯುವ ಸೌಗಂಧಿಕಾದೇವಿಯ ವೈಯ್ಯಾರವಂ ದೂರದಿಂ ನೋಡುತ ನೂರುಮಡಿಯಾದ ವೈಭವ ವಿಲಾಸಂಗಳಿಂದ ಪುರವಂ ಪ್ರವೇಶಿಸಿ, ಅರಮನೆಯೊಳ್ ಸಭಾಮಂಟಪವನ್ನೈದಲು, ಆಗ ಭೂಪಾಲರೆಲ್ಲರೂ ಸುಗಂಧರಾಜೇಂದ್ರನಂ ಮರಕತ ಸಿಂಹಪೀಠದೊಳ್ಕುಳ್ಳಿರಿಸಿ, ತಮ್ಮ ತಮ್ಮ ಸೇನಾಕಟಕಂಗಳಿಂ ವಿಚಿತ್ರ, ವಸ್ತ್ರ ಧನ ರತ್ನ ಭೂಷಣಂಗಳಂ ತರಿಸಿ ಕಾಣಿಕೆಯಾಗಿ ಒಪ್ಪಿಸಿ, ಓಲಗವಂ ಬೆಳೆಯಿಸಲು; ಆಗ ಏಕಾಂಗಿ ತೆರೆಯ ಮರೆಯಲ್ಲಿ ಸೌಗಂಧಿಕಾದೇವಿಯ ಸವಿಾಪದೊಳಿರುವ ಲೀಲಾಶುಕವು, ತಾನು ಸುಧರ್ಮ ಸಭೆಯೊಳ್ ಕಂಡಿರ್ದ ಓಲಗಕ್ಕಿಂತಲೂ ಅತಿಶಯವಂಗೊಂಡ ನಡ್ವೋಲಗವ ವೈಭವವಂ ಕಂಡು ಲೀಲೆಯುಂತಾಳಿ, ಈಗ ನಾನು ಲೀಲಾಶುಕನಾದೆನೆಂದು ಆನಂದಭಾಷ್ಪಂಗಳಿಂ ಮಿಪ್ಪಿ, ರೆಕ್ಕೆಗಳನಲ್ಲಾಡಿಸಿ ತಿರುಗಾಡುತ್ತ ಕುಣಿಯುತ್ತಲಿರಲು, ಆ ಶುಕವನ್ನೋಡಿ, ಶುಕವಾಣಿಯಾದ ರಾಜಪುತ್ರಿಯು

ತನ್ನ ಮನಸಿನೊಳಗೇನು? ಈಗಿಳಿಯು ಕಾಣದುತ್ತ ನಸುಗಂತಲೂ ಸಂತೋಷಪಡುವದು, ಈ ಪಕ್ಷಿಗೆ ಈ ಅಭಿಪ್ರಾಯವೆಲ್ಲಿಯದೆಂದು ಯೋಚಿಸಿ ಏನಾದಾಗಿ ಮುಂದಗಿರುವ ಮಹಾಯುದ್ಧವನ್ನೊತ್ತಿ, ಇದು ವಜ್ರಾಯುಧವೇ ಎಂದು ತೋರುವದು, ರೂಪದಿಂದಲೂ, ಪ್ರಕಾಶದಿಂದಲೂ, ಈ ಭೂಪತಿಯಂ ದೇವೇಂದ್ರನೆಂದು ತಿಳಿಯಬಹುದು. ಈ ಮಹಾಪುರುಷನೆಲ್ಲಿ, ನಾನೆಲ್ಲಿ, ಲೀಲಾಶುಕವು ಬಂದು ನೆರವೇರಿಸಿದ ಸಂಘಟನವೇನು, ಆಶ್ಚರ್ಯಕರವೆಂದು ಪರ್ಯಾಲೋಚಿಸಿ, ಅಲ್ಲದಿರೆ ನಾನು ಶಚೀದೇವಿಯ ಅವತಾರವೋ ಏನೋ ಎಂದು ಸಂಶಯಬಡುತ್ತಿರಲಾಗ; ಲೀಲಾಶುಕವು ಆ ಸೌಗಂಧಿಕಾದೇವಿಯ ಮನಸ್ಸಿನ ಪರಿಯಂ ತಿಳಿದು, ಇವಳಿಗೆ ತಾನು ಶಚೀದೇವಿ ಎಂದು ತಿಳಿಯುವ ಸಮಯವಲ್ಲವೆಂದು ತಾನು ತಿಳಿದು, ಬೇಗ ಬಂದು ರಾಜಕುಮಾರಿಯಂ ಕುರಿತು ಎಲೈ ಅರಸಿಯೆ! ಇನ್ನೇನು ಬಂದು ಪ್ರಾಪ್ತವಾದುದು, ಮಿಕ್ಕಾದ ವಾಕ್ಯಂಗಳಂ ಈ ರಾಜೇಂದ್ರನು ತರುವಾಷ್ಟರಲ್ಲಿ ನಿನ್ನ ಮನ್ಮಥನಿಗೆ ಈ ಸಂತೋಷವೃತ್ತಾಂತವಂ ತಿಳುಹಿ, ಅಲ್ಲಿಂದ ಅಮರಾವತಿಗೆ ಪೋಗಿ ಶಚೀದೇವಿಯಂ ಕಂಡು, ಸತ್ಯಲೋಕಕ್ಕೆ ಪೋಗಿ ಭಾರತೀದೇವಿಯೊಡನೆ ಮಾತಾಡಿ, ಹಾಗೇ ಕೈಲಾಸಪರ್ವತಕ್ಕೆ ಬಂದು ಶ್ರೀಪಾರ್ವತೀದೇವಿಯ ದರ್ಶನವಂಗೊಂಡು, ಅಲ್ಲಿಂದ ಕ್ಷೀರಸಾಗರಕ್ಕೆ ಪೋಗಿ ಲಕ್ಷ್ಮೀದೇವಿಯ ಯೋಗಕ್ಷೇಮವಂ ತಿಳಿದು, ಅಲ್ಲಲ್ಲಿ ಸುತ್ತಿಕೊಂಡು ಬೇಗ ಬರುವೆನು, ಈ ದೇವಿಯರನೆಲ್ಲ ನೋಡಿ ಬಹಳ ದಿನಂಗಳಾದವು, ಆದ್ದರಿಂ ಕಣ್ಣುಗಳಲ್ಲಿ ಕಟ್ಟಿದಂತೆಯಿದೆ ಎಂದು ನುಡಿಯಲಾಗಿಳಿಯ ನುಡಿಗಳಂ ಕೇಳಿ ಸೌಗಂಧಿಕಾದೇವಿಯು, ಇದೇನು? ಈ ಶುಕವು ಶಚೀದೇವಿ ಮೊದಲಾದವರಂ ಕಂಡುಬರುವೆನೆನ್ನುವದು, ಆದ್ದರಿಂದ ನಾನು ಶಚೀದೇವಿಯೂ ಅಲ್ಲ, ಶಾರದಾದೇವಿಯೂ ಅಲ್ಲ, ಲಕ್ಷ್ಮಿಯೂ ಅಲ್ಲ, ಪಾರ್ವತಿಯೂ ಅಲ್ಲ, ನಾನು ಒಬ್ಬ ಅರಸಿನ ಮಗಳು ಈ ವಿಭವವೆಲ್ಲಾ ದೇವೀ ಕಟಾಕ್ಷಬಲವೆಂದು ಮನದಲ್ಲಿ ತಿಳಿದು ಶುಕವಂ ಕುರಿತು ನಿನ್ನಂ ಇಷ್ಟದೈವವೆಂದು, ಗುರುವೆಂದು, ತಂದೆತಾಯಿಗಳೆಂದು, ನಿಜವಾಗಿ ನಂಬಿರುವೆನು; ನೀನು ಅಮರಾವತಿಗೆ ಹೋದರೆ ನಿಮಿಷಮಾನು

ಇಲ್ಲಿ ನಿಲ್ಲಲಾರೆನೆಂದು ಪೇಳೆ ಕಂಡಿರುವ ಮುಖದಿಂದೊಪ್ಪಿರಲು, ಆರಾಜ
ಪುತ್ರಿಯೊಡನೆ ಲೀಲಾಶುಕವು ಆ ವಜ್ರಾಯುಧದ ಮಹಿಮೆಯಂ ಪೇಳು
ತ್ತಿರಲಷ್ಟರೊಳ್ ಸುಗಂಧರಾಜೇಂದ್ರನು ಸಭಾಮಂಟಪದಲ್ಲಿ ವಿದ್ವ
ಜ್ಜನಂಗಳು ಮೊದಲಾದ ಸಕಲರಿಗೂ ಧನಕನಕ ವಸ್ತ್ರವಾಹನಂಗಳಂ
ಮಳೆಗರೆದಂತೆ ಕೊಟ್ಟು ಒಡ್ಡೋಲಗದಿಂದ ಎದ್ದು ಸಕಲ ರಾಜರುಗಳಂ
ಜೊತೆಗೂಡಿ ಮಡಿಯನ್ನುಟ್ಟು ಸಂಧ್ಯಾದೇವಿಯನ್ನಭಿವಂದಿಸಿ, ಮಧುರ
ಭೋಜನಂಗೈದು, ಬಳಿಕ ಕಳಿಂಗರಾಜನೊಪ್ಪಿಸಿದ ಅಪೂರ್ವ ರತ್ನಾಭರ
ಣಂಗಳಂ, ಚೀನಾಂಬರಂಗಳಂ ಧರಿಸಿ, ಕರ್ಪೂರ ವೀಳ್ಯವಂ ಸವಿಯುತ್ತ
ತನ್ನಂ ಮೊಂಡಾಗಿ ಕೊಂಡಾಡುತ್ತಿರುವ ಮಂಡಲೇಶ್ವರರೆಲ್ಲರಂ ಅವರವರ
ಸೇನಾಕಟಕಕ್ಕೆ ಪೋಗುವಂತೆ ಅಜ್ಞಾಪಿಸಿ, ಅರಮನೆಯಿಂದ ತೆರಳಿ, ಶ್ರೀ
ಗಂಧತೈಲದಿಂದ ಪ್ರಜ್ವಲಿಸುತಲಿರುವ ಕರದೀಪಿಕಾಸಹಸ್ರಗಳ ಸಾಲುಗ
ಳಿಂದಲೂ, ಸಕಲ ಬಿರುದುವಾದ್ಯಧ್ವನಿಗಳಿಂದಲೂ ಒಪ್ಪಿ, ಗಜಾರೂಢ
ನಾಗಿ ಸಂಗಡ ಬರುತಲಿರುವ ಕಳಿಂಗರಾಯನಂ ಕುರಿತು, ಈ ಸ್ವಯಂವ
ರೋತ್ಸವದ ಸನ್ನಾಹವು ಮತ್ತೊಬ್ಬರಿಗೆ ಯೋಗ್ಯವೇ? ತಮಗೆ ಬಹಳ
ಶ್ರಮವಾಯಿತು, ಅರಮನೆಗೆ ದಯಮಾಡಬಹುದೆಂದು ವಿನಯದಿಂ ನುಡಿ
ದು ಕಳುಹಿ ಆನಂದಭರಿತನಾಗಿ ಬಿಡದಿಯಂ ಮಾಡಿರುವ ಮಣಿಮಂದಿರಕ್ಕೆ
ಬಂದು, ತನ್ನ ಮುಖ್ಯ ಮಂತ್ರಿಯಾದ ಸುಮತಿಯಂ ಕುರಿತು ಎಲೈ ಸು
ಮತಿಯೇ! ಸೇನಾನಾಯಕನಾದ ವೀರಸೇನನೊಡಗೂಡಿ ನಮ್ಮ ಕಟಕಕ್ಕೆ
ಪೋಗಿ ಜಾಗರೂಕನಾಗಿರೆಂದು ನಿಯಮಿಸಿ ಕಳುಹಿ; ಕಲವಿಂಕನ ಹಸ್ತ
ಲಾಗದಿಂದ ಪವಡಿಸುವ ಚಂದ್ರಶಾಲೆಯನ್ನೈದಿ, ಎದುರಾಗಿರುವ ಚಂದ್ರ
ಬಿಂಬವಂ ನರ್ಮಸಚಿವನಾದ ಕಲವಿಂಕನಿಗೆ ತೋರಿ, ಸೌಗಂಧಿಕಾದೇ
ವಿಯ ಮೊಗಮಂನೆನೆದು, ಇನ್ನು ಎಷ್ಟುಪಣಂಗಳಿರುವವೋ ಎಷ್ಟುವಿ
ಳಂಬವಂ ಸಹಿಸಲೀ ಎಂದು ನಿಟ್ಟುಸುರುಗಳಂಬಿಟ್ಟು ಮರುಳಾಗಿರಲು,
ಆ ಮಹೀಪಾಲನಂ ನಗಿಸಬೇಕೆಂದು ಕಲವಿಂಕನು ನೀಳವಾಗಿ ಬಿಸುಸುಯ್ದು
ಕಳವಳಿಸುತ್ತ, ಇದೇನೆಲಾ! ಆಯಾಸವಂಗೊಳ್ಳುವೇ ಎಂದು ಕೇಳಿದ ರಾ
ಜೇಂದ್ರನಂ ಕುರಿತು ಸ್ವಾಮಿಯೇ! ಈಗ ಚಂದ್ರಶಾಲೆಯನ್ನೇರಿ ಬರ

ವಾಗ ಒಂದುಕಡೆಯೊಳ್ ಬರದಿರ್ದ ದೊಡ್ಡ ಹೆಣ್ಣು ಕಪಿಯ ಮೊಗಮಂ ನೋಡಿ ಊರಲ್ಲಿರುವ ನನ್ನ ಪತ್ನಿಯ ಮೊಗವಂನೆನೆದು, ಈಗ ವಿರಹ ತಾಪವಂ ಅನುಭವಿಸುವೆನೆಂದು ನಗಜೇ ನುಡಿಯಲಾ ಕಲವಿಂಕನ ಮಾತಿಗೆ ಸುಗಂಧರಾಜೇಂದ್ರನು ನಕ್ಕು ತುಂಟನೆಂದು ನುಡಿಯುತ್ತ ಪುಷ್ಪವಂ ಚದಮೇಲೆ ಪವಳಿಸಿ ವಿಚಿತ್ರ ಕಥೆಗಳಂ ಕೇಳುತ್ತ, ಅಪರೊಳ್ ಬರುವ ಸೌಕುಮಾರ್ಯ, ಸೌಂದರ್ಯ, ಸೌಭಾಗ್ಯ, ಸೌಖ್ಯಗಳೆಂಬ ಮಾತು ಗಳಂ ಕೇಳಿದಾಗೆಲ್ಲಾ ಸೌವರ್ಣಪ್ರಕಾಶದಿಂದ ಸೌಗಂಧಿಕಾದೇವಿಯೇ ಬಂದಳೆಂದೆಷ್ಟು ನೋಡುತ್ತ, ಎದುರಾಗಿ ನಿಲ್ಲಿಸಿದಂತೆಯೂ, ಮನದೊಳ್ ಬರದಂತೆಯೂ, ಮತ್ತು ನೇತ್ರ ಮೊದಲಾದ ಸರ್ವೇಂದ್ರಿಯಂಗಳು, ಜೀವವು, ದೇಶಕಾಲಂಗಳು, ಸರ್ವಪ್ರಪಂಚವೂ ಸೌಗಂಧಿಕಾದೇವಿಯೇ ಎಂದು ತಿಳಿಯುತ್ತ, ಒಂದೊಂದುಸಾರಿ ತಿಳುಹುಗೊಂಡು ಆ ಸರ್ವಾಂಗ ಸುಂದರಿಯಾದ ಭೂಲೋಕ ಚಂದ್ರಲೇಖೆಯಾದ, ಕಾಮಿತಕಲ್ಪವಲ್ಲಿ ಯಾದ, ತ್ರಿಭುವನ ಸಮ್ಮೋಹನವಿದ್ಯೆಯಾದ, ಅಲಂಕಾರಾಭಿಮಾನಿದೇವತೆಯಾದ, ಶೃಂಗಾರ ರಸಮಂಜರಿಯಾದ, ಸುಗಂಧರಾಜಸಂಜೀವಕರಣಿ ಯಾದ, ಮನ್ಮಥ ಮಹಾಮಾಯೆಯಾದ ಆ ಸೌಗಂಧಿಕಾದೇವಿಯು, ಪಚ್ಚ ಕರ್ಪೂರದಿಂ ಕದಡಿದ ಪನ್ನೀರ್ಗಳ ಮಳೆಗರದಂತಿರುವ ವಾರೆನೋಟಗಳಿಂದ ನನ್ನಂ ಯಾವಾಗನೋಡುವಳೋ ? ಎಂದು ಕೂಡುವೆನೋ? ಈ ರಾತ್ರಿಯಂ ನಾನೆಂತು ಕಳೆಯುವೆನೋ ಎಂದು ವಿರಹಸಂತಾಪದಿಂ ಹಲವಳಿಸುತ್ತ, ಒಂದೊಂದು ಘಳಿಗೆಯೊಳ್ ಮಾನಸಿಕ ಸಂಭೋಗಶೃಂಗಾರದೊಳ್ ಸರಸಭಾವದಿಂದ, ಸೌಗಂಧಿಕಾದೇವಿಯಂ ಭೋಗಿಸುತ ನಡ ನಡುವೆ ನಿದ್ರಾಂಗನೆಯೊಡಗೂಡಿ ಹಾಯೆಗ್ಗೊಳುತ್ತ ಸುಖದಿಂದಿರುತ್ತಲಿರ್ದನೆಂಬಲ್ಲಿಗೆ ;

ಗದ್ಯ॥ ಕುಂಡಲಿಶಯನ ಖಂಡಪರಶು ಪುಂಡರೀಕಭವಾಖಂಡಲಪ್ರಮುಖ ನಿಖಿಲ ಸುರವರಪರಿಭವ ಪರಿಣತ ಪ್ರಚಂಡಬಲ ಚಂಡಮುಂಡ ಖಂಡನನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷವೀಕ್ಷಣಪ್ರವರ್ಧಮಾನ ಭೂಮಂಡಲಾಧಿಪತ್ಯ

ಪ್ರತಾಪ ಸಕಲಭಾಷಾಸಾಮ್ರಾಜ್ಯ ಸರ್ವಾಂಕಷ ಚಿತ್ರಬಂಧ ಗದ್ಯಪದ್ಯವಿ ಶಾರದನಿಷ್ಣಾತರಾಯ ನಿರ್ಮಾಣ ಧೌರೇಯಷಟ್ಪದಿಕಾಶತಗ್ರಂಥ ದಿನದಿನಪ್ರಬಂಧಾದಿ ಬಂಧನಧುರಂಧರ ತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನ ಸೂತ್ರ ಸುಚರಿತ್ರ ಚಾಮರಾಜಮಹಾರಾಜ ಪುತ್ರ ಸರಸ್ವತಿ ಜಿಹ್ವಾ ನಾ ಹೀಶೂರ ಪುರವರಾಧೀಶ ಶ್ರೀ ಕೃಷ್ಣರಾಜವಡೆಯರವರಿಂದ ರಸಿಕಜ ನಾನಂದಕರವಾಗಿ ವಿರಚಿತವಾದ. ಸೌಗಂಧಿಕಾಪರಿಣಯವೆಂಬ ಈ ನ ವೀನಕೃತಿಯೊಳ್, ಸ್ವಯಂವರ ಸಭಾಮಂಟಪಕ್ಕೆ ಸೌಗಂಧಿಕಾದೇವಿ ಯ ಆಗಮನವಂ, ಪಣನಿರೂಪಣವಂ, ಸುಗಂಧರಾಜೇಂದ್ರನು ವಜ್ರಾ ಯುಧಪಣೋದ್ಧಾರವಂಮಾಡಿ, ಭರತಖಂಡದಲ್ಲಿರುವ ಮಂಡಲೇಶ್ವರರೆಲ್ಲ ರಂ ಪರಾಜಿತರಂಗೈದ ಸಾಮರ್ಥ್ಯ ಮೊದಲಾದ್ದಂ ಬಣ್ಣಿಸಿರುವ ಪನ್ನೆರಡ ನೇ ಆಶ್ವಾಸನಿರೂಪಣಕ್ಕೆ ಮಂಗಳಮಹಾ.

ಹನ್ನೆರಡನೇ ಅಧ್ಯಾಯ ಸಂಪೂರ್ಣವು.

---

## ಪದಿಮೂರನೇ ಅಧ್ಯಾಯ.

---

ಈ ರೀತಿಯಲ್ಲಿ ಸುಗಂಧಮಹಾರಾಜೇಂದ್ರನು ವಜ್ರಪಣವಂ ಗೆದ್ದು ದೇಶಾಧಿಪತಿಗಳಿಂದ ಶ್ಲಾಘಿತನಾಗಿ ಸುಮತಿಯೊಡಗೂಡಿ ವಿಹಾರವನ್ನಿಯ್ಯುತ್ತಿರಲು; ಪೂರ್ವದಲ್ಲಿ ಸ್ವರ್ಗಲೋಕದೊಳ್ ಅಮರಾವತೀ ಪಟ್ಟಣದಲ್ಲಿ ದೇವೇಂದ್ರನು ಶಚೀದೇವೀಸಮೇತನಾಗಿ ನಂದನವನದ ರಮಣೀಯತೆಯನ್ನೀಕ್ಷಿಸಿ ಐರಾವತವನ್ನೇರಿ ವೈಭವದಿಂ ಬರುತ್ತಿರಲಾಗ ದೂರ್ವಾಸನೆಂಬ ಮುನಿಯು ಪುಷ್ಪಮಾಲಿಕಾನಿಮಿತ್ತದಿಂ ಶಾಪವಂಕೊಟ್ಟು ತೆರಳಿದನಂತರ ಶಚೀದೇವೇಂದ್ರರು ಅದೃಶ್ಯರಾಗಿ ಭೂಲೋಕವಂ ಸೈದಲು, ಸುರರೆಲ್ಲರೂ ವ್ಯಸನಾಕ್ರಾಂತರಾಗಿರುವದಂ ತಿಳಿದು ಅತಳಾದಿ ಲೋಕಂಗಳಲ್ಲಿರುವ ದೈತ್ಯರಾಕ್ಷಸರೆಲ್ಲರೂ ಸಂಘೀಭವಿಸಿ ಸ್ವರ್ಗವನಾಕ್ರಮಿಸಲೆಳಸಿ ಬಂದು ಭೇರಿ ನಿಸ್ಸಾಳ ಮೊದಲಾದ ವಾದ್ಯಧ್ವನಿಗಳಿಂದ

ಸ್ತುವಿಲ್ಲದೆ, ಅದ್ವೈತಶಾಸ್ತ್ರದಂತೆ ಏಕಾಕಿಯಾಗಿ ಛಂದಶ್ಶಾಸ್ತ್ರದಂತೆ ಅಲಂಕಾರರಹಿತವಾಗಿ, ತರುಮೂಲದಂತೆ ಅಧೋಗತಿಯನ್ನಪೇಕ್ಷಿಸುತ, ಸನ್ನಿಹಿತಪ್ರಸವಳಾದ ಭಾಗ್ಯಶಾಲಿಯ ಸ್ತನದಂತೆ ವಿಮುಕ್ತಾಹಾರವಾಗಿ, ಲೋಕಾಯುತಿಕನಂತೆ ಭೂಲೋಕಭೋಗವನ್ನಪೇಕ್ಷಿಸುತ, ಸಾಯುಜ್ಯದಂತೆ ನಿರ್ಧೂತಾವರಣವಾಗಿ, ದಾನಶೂರನಂತೆ ದಾನೋದಕವಂ ವರ್ಷಿಸುತ್ತ ಬರುತ ಚಂದ್ರಸೂರ್ಯಮಂಡಲಗಳು ಪಾರ್ಶ್ವಗಳೊಳ್ ಘಂಟಾದ್ವಯದಂತೆ ಕಾಣಿಸಲು, ತಾರಾಗಣಂಗಳ ತಾರಕಾಭರಣದಂತಾಗಲು, ಗ್ರಹಮಂಡಲವು ಗ್ರೈವೇಯಘಂಟಾಸ್ವರದಂತಾಗಲು, ಕಾಲಮೇಘಂಗಳು ನೀಲಾಸ್ತರಣದಂತೆಸೆಯಲು, ಸಂಧ್ಯಾರಾಗವು ಕುಂಭಸ್ಥಳದ ಚಂದಿರವಾಗಲು, ಗ್ರಾಸಬುದ್ಧಿಯಿಂದ ನೀಲಮೇಘವಂ ಶೆಳೆಯುತ, ಮೇಘಾತರಂಗಂಗಳಂ ಸೋಪಾನಬುದ್ಧಿಯಿಂ ತಿಳಿಯುತ, ಕುಲಾಚಲಂಗಳಂ ಕಬಳವೆಂದು ತಿಳಿಯುತ, ಸಮುದ್ರದೊಳ್ ಪ್ರತಿಬಿಂಬಿಸುವ ತನ್ನರೂಪವಂ ನೋಡಿ ಶತ್ರುಗಜಬುದ್ಧಿಯಿಂದ ಕೊಂಬುಗಳಂ ಸವರಿಸುತ, ಅಲ್ಲಿ ಕಾಣಿಸುವ ನಕ್ಷತ್ರಛಾಯೆಯಂ ನೋಡಿ ಇದೇ ಸ್ವರ್ಗಮಾರ್ಗವೆಂದೆಣಿಸುತ, ಶಿಶುವಂ ಮುದ್ದಿಸುವ ಉಮಾದೇವಿಯ ಹಸ್ತದಿಂ ಚಿಮ್ಮಿಬಂದ ಹೇರಂಬಮೂರ್ತಿಯೋ ಎಂಬಂತೆ ಜಂಬೂದ್ವೀಪದೊಳಿಳಿದು ಮಹಾಜಂಬೂವೃಕ್ಷಪಲ್ಲವಂಗಳಂ ಭಕ್ಷಿಸಿ, ಆ ನದೀಜಲಪಾನಮಂಗೈದು ಕೆಲವುಕಾಲವಲ್ಲಿಯೇ ಇದ್ದು ಅದನ್ನುಪೇಕ್ಷಿಸಿ, ಲವಣಸಮುದ್ರವಂ ದಾಂಟಿಪ್ಲಕ್ಷದ್ವೀಪವನ್ನಾಶ್ರಯಿಸಿ, ಮಹಾಪ್ಲಕ್ಷವೃಕ್ಷ ಚಿಗರುಗಳಂ ಚಲ್ಲಾಡುತ, ಸಮೀಪಗತವಾದ ಇಕ್ಷುಸಾಗರತೀರದೊಳ್ ಇಕ್ಷುವನವಂ ಕಂಡು ಅದರ ಸಮೀಪದಲ್ಲಿರುವ ಮಹಾವನಮಧ್ಯಗತವಾದ ವೈನತೇಯ ಸರೋವರವಂ ನೋಡಿ, ಅಲ್ಲಲ್ಲಿ ಸ್ವೇಚ್ಛೆಯಿಂ ಬೆಳೆದಿರುವ ಇಕ್ಷುವನವಂ ಭಕ್ಷಿಸುತಲಿರುವ ಹೆಣ್ಣಾನೆಗಳ ಹಿಂಡುಗಳನ್ನೋಡಿ ವ್ಯಾಮೋಹಿತವಾಗಿ, ಈ ಸ್ಥಳವು ತನಗೆ ವಾಸಯೋಗ್ಯಮೆಂದೆತಿಳಿದು ಮನುಷ್ಯಲೋಕದ ಸಾಧಾರಣವಾದ ಮಹಾಗಜದಂತಾಗಿ, ವಿಸ್ತಾರವಾದ ಕರ್ಣಗಳಂ ಕೊಡಹುವದರಿಂದೆರಚುವ ಮದೋದಕಶೀಕರಂಗಳಿಂದ ವನವೆಲ್ಲವೂ ಮಹಾಪರಿ

ಮಾಳಯುಕ್ತಮಾಗಿ ಪುಷ್ಪಸುಗಂಧವೆಲ್ಲಲೀನವಾಗಲು, ಅವಂ ಪಟಾಕ ಪರ್ಣಮಂತ್ರೆ ತ್ಯಜಿಸುತ ಅವರಿಂದೆದ್ದ ಭ್ರಮರಷಂಡಂಗಳು ದಾವಾಗ್ನಿಯ ಧೂಮರಾಜಿಯಂತೆ ಸರ್ವಾಂಗಸಾನಂಗಳಾಗಿ ಗಂಡಸ್ಥಲವನ್ನಾಶ್ರಯಿಸುತ್ತಿರಲು, ಮತ್ತಿ ... ವಿಶಾಲಂಗಳಾದ ಹೆಮ್ಮಾನೆಗಳ ಹಿಂಡುಗಳು ಹುಚ್ಚೆಗೊಂಡಂತೆ ಹೆಚ್ಚಿದ ಮದದಿಂ ಬಂದು ಶುಂಡಾಗ್ರಗಳಿಂ ಆ ಗಜಾಧಿಪತಿಯನ್ನೇ ವರಿಸುತ ಕ್ಷಣಮಾಂ ಬಿಡದೆ ಇರುತ್ತಿರಲು, ಅವುಗಳ ರೂಪಲಾವಣ್ಯಗಳಿಂ ಮೋಹಿಸಿ ಅನುನಯಪಡಿಸುತ, ಅವುಗಳೊಡನೆ ಮನಬಂದಂತೆ ಜಲಕೇಳಿಯನ್ನಾಡುತ, ಅವುಗಳಿಗೆ ಇಕ್ಷುಸಲ್ಲಕೀವನಂಗಳಂ ತೋರಿಸುತ, ಪ್ರೀತಿಪಾತ್ರಮಾಗಿ ಭೂಲೋಕದ ಗಜಸಮೂಹಂಗಳಂ ಬಂಧುಬಳಗಂಗಳಂ ಮಾಡಿಕೊಂಡು, ಮೃದುಮಧುರಂಗಳಾದ ಪರ್ಣತೃಣಂಗಳಂ ಭಕ್ಷಿಸುತ ಕರಿಣೀಸಮೇತಮಾಗಿ ಇಕ್ಷುಸಾಗರದೋಳ್ ಜಲಪಾನಮಂಗೈದು ಘೂತ್ಕಾರದಿಂ ಪುಷ್ಕರಾಗ್ರದಿಂದೇಳುವ ಉದಕಬಿಂದುಗಳಂ, ಅಂತರಿಕ್ಷಮಂ ನಕ್ಷತ್ರತಳದಂತೆ ಮಾಡುತ, ಪದ್ಮಸರೋವರಮಂ ಕಲಕಿ ಪದ್ಮನಾಳಗಳಂ ಭಕ್ಷಿಸುತ, ಉನ್ನತವಾದ ಇಕ್ಷುವನಮಂ ಗೋಯ್ದಾಡುತ ಬೃಂಹಿತರವದಿಂ ದಿಕ್ತಟಂಗಳಂ ಕಂಪಗೊಳಿಸುತ, ಹೆಚ್ಚಿಬರುವ ಮದದಿಂ ಪರ್ವತತಟಮಂ ವಿಷಾಣಾಗ್ರದಿಂ ಕೆಡಹುತ, ಸಾಧಾರಣ ಗಜಬುದ್ಧಿಯಿಂ ಮತ್ಸರಗೊಂಡು ಬರುವ ಸಿಂಹಗಳಂ ಶೀಳಿ ಸಮುದ್ರಕ್ಕೆ ಎಸೆಯುತ, ರಭಸದಿಂ ಸಮಿಪಕ್ಕೆ ಬರುವ ಶರಭಗಳಂ ಸಂಹರಿಸಿ ಜೊಸಕುತ, ಪಕ್ಷಗಳಂಸಹಿತಮಾದ ಪರ್ವತದಂತೆ ಇರುವ ಗಂಡಭೇರುಂಡಗಳ ಶಿರಗಳಂ ತುಂಡುತುಂಡುಮಾಡುತ, ಉಬ್ಬಿದ ಕೊಬ್ಬಿನಿಂ ಬರುವ ಹೆಬ್ಬುಲಿಗಳಂ ತಬ್ಬಿಬ್ಬುಗೊಳಿಸಿ ಅಬ್ಬರವನ್ನಡಗಿಸುತ, ಕಲಹಕ್ಕೆ ಕಾಲುಕೆರೆಯುತ್ತ ಕಾಣಿಸಿಕೊಳ್ಳುವ ಕರಡಿ, ಖಡ್ಗಕಾಡುಕೋಣಗಳ ಕಾಲುಗಳಂಪಿಡಿದು ಈಡ್ಯಾಡುತ, ಸಮರಕ್ಕೆ ಸಮರಿಸುವ ಸಾಳ್ವಗಳಂ ಸಂಹರಿಸಿ ಸವರುತ, ಇಂತೀಪರಿಯಿಂದ ಏಕಾಂತಸದನಮಾದ ಆ ವನಮಂ ನಿರಾತಂಕಮಂ ಮಾಡುತ, ಕಾಂತಾಪರಿವಾರದಿಂ ಕೂಡಿ ಸಂತತ ಕ್ರೀಡಾವಿಲಾಸದಿಂ ಬಹುವತ್ಸರಾಂತಂಗಳಂ ಕಳೆಯುತ್ತಿರಲು ;

ಬಂದಾನೊಂದು ಸಮಯದೊಳ್ ಪಾತಾಳದಲ್ಲಿ ವಾಸಮಂಗೈವ ಜಂಗ್ರಬಾಹುವೆಂಬ ರಾಕ್ಷಸನು ಮೃಗವನಂ ಬೇಟೆಯಾಡುವ ಭೂಲೋಕದೊಳ್ ಸ್ವೇಚ್ಛಾವಿಹಾರಮಂಗೈವ ಅಪೇಕ್ಷೆಯಿಂ ಬಂದನಾಗಿ, ಆ ದ್ವೀಪದೊಳಿರುವ ದೇಶಗಳ ರಮಣೀಯತೆಯಂ ಕೂಡ ನೋಡುತ್ತ ತನ್ನೊಳ್ ಭೂಮಿಯಿಷ್ಟವಾದ ತನ್ನ ನಿವಾಸವಂ ಮಾಡಿಲ್ಲಿ ಚರಿಸುತ್ತ ಅಲ್ಲಲ್ಲಿ ಬರುವ ಮೃಗಗಳಂ ಭಕ್ಷಿಸುತ್ತ, ಬಾಹುಬಾಹುಬಲ್ಯದಿಂ ಕಳೆಯುತ್ತಿರಲಾಗ ವನಗಜಗಳೊಡನೆ ಕಾದುತ್ತ, ಕೈಗಳಿಂ ಇಕ್ಕಿಯುಂ ಹಿಡಿಯುತಂತೆ ಗುಹೆಗಳಂ ಪ್ರೊಕ್ಕು, ಅಲ್ಲಿರುವ ಸಿಂಹಗಳಂ ಹಿಡಿದು ಕೆಳಗೆ ಬಿಸುಟು ವನಗಳ ವೃಕ್ಷ ಸಮೂಹಗಳ ಮೇಲೆ ಬಗೆದು ಬಿಡಿಸುತ್ತ, ವಿನೋದದಿಂ ತಿರುಗುತ್ತಿರಲಾಗ ಮಧ್ಯದೊಳ್ ಇಂದ್ರನ ವಜ್ರಪ್ರಹಾರದಿಂ ಕಡಿಯಲ್ಪಟ್ಟು ಉರುಳಿರುವ ಕುಲಪರ್ವತದಂತೆ ಪಕ್ಷಗಳಂ ಕೆದರಿಕೊಂಡು ಗಜವಿಷಾಣಘಾತದಿಂ ಒಡೆದಿರುವ ವಕ್ಷಸ್ಥಳದಿಂ ವಿಗತಪ್ರಾಣವಾಗಿಬಿದ್ದಿರುವ ಭೇರುಂಡಮಂ ನೋಡಿ, ಅದರ ಸಮೀಪವನ್ನೈದಿ ವಿಸ್ಮಿತನಾಗಿ ಹಿಸುಕಿದನು. ಈ ಭೇರುಂಡಕ್ಕೆ ಈ ದುರ್ದೆಶೆ ಒದಗಿತೋ ಇದರ ಪಕ್ಷಘಾತದಿಂ ವನಂಗಳೊಳಿರುವ ವೃಕ್ಷಂಗಳುರುಳಿ ಪರ್ವತಂಗಳು ಕಂಪಿಸುತ್ತಿರುವವು, ರಾಕ್ಷಸರೂ ಪಲಾಯನಂಗೈವರು, ಉಳಿದ ಪ್ರಾಣಿಗಳ ಪಾಡೇನು? ಇದು ಯಮನ ಪಾಶದಿಂದ ನಷ್ಟಮಾದುದೋ? ಈ ಬ್ರಹ್ಮಸೃಷ್ಟಿಯೊಳಗಾರ ಸಾಮರ್ಥ್ಯದಿಂ ಮರಣಮಂ ಹೊಂದಿರುವದೋ? ಶಿವಶಿವಾ! ಯಾವ ಪ್ರಾಣಿಗಾದರೂ ಮೃತ್ಯು ತಪ್ಪದೆಂದು ಯೋಚಿಸುತ್ತ, ಆ ಭೇರುಂಡದ ಪಕ್ಕತ್ತಿನೊಳಿರುವ ರುಚಿಕರವಾದ ಹೊಸಮಾಂಸವಂ ಕಂಡು ಬಾಯೊಳ್ ನೀರೊಡೆಯುತ್ತಿರಲು, ರಭಸದಿಂ ಬಂದು ತನ್ನ ದಂಷ್ಟ್ರಗಳಿಂದ ಅದರ ಮಾಂಸವಂ ಕಚ್ಚಿ ಕಿತ್ತು ಭಕ್ಷಿಸುತ್ತ, ಅದರ ರುಚಿಯು ತಲೆಗೇರಿ ಪತ್ನೀಪುತ್ರರಂ ನೆನೆಯುತ್ತ, ಅಪಾರವಾದ ಈ ಮಾಂಸವು ತನ್ನ ರಾಕ್ಷಸರ ಪರಿವಾರಕ್ಕೆಲ್ಲಾ ಸಂವತ್ಸರ ಗ್ರಾಸವಾಗುವದು, ಅದರಿಂದ ಇದಂ ಉಪೇಕ್ಷಿಸಬಾರದೆಂದು ನಿಶ್ಚೈಸಿ, ಈ ಭೇರುಂಡವು ತನ್ನ ಬಾಹುಬಲದಿಂದಲೇ ಸಂಪ್ರಾಪ್ತವಾದುದೆಂದು ಸ್ವಜನಗಳು ತಿಳಿಯಬೇಕೆಂದು ಗುರುತಿಗೋಸುಗ ಕೈಯೊಳಗಿರುವ ಪರಶು

ವಿನಿಂದ ಆ ಭೇರುಂಡದ ಪಕ್ಷಸಮೂಹದೊಳ್ ಒಂದು ಗರಿಯಂ ಛೇದಿಸಿ ಅದಂ ಹೊತ್ತುಕೊಂಡು ಹೋಗುತ್ತ, ಮತ್ತೂ ಮಾರ್ಗದೊಳ್ ಆಗಾಗೆ ಶರಭವು ಸಂಹೃತವಾಗಿ ನೆಲದೊಳ್ ಸವೆದಿರುವುದನ್ನೋಡಿ ಇದೇನಂ ಆಶ್ಚರಿಯು? ಈ ಶರಭವು ಭೇರುಂಡದಿಂ ಸಂಹೃತವಾಯಿತೆಂದು ಹೇಳುವದಕ್ಕೆ ಶರಭಗಳಂ ಶಲಭಗಳಂತೆ ಭಾವಿಸುವ ಭೇರುಂಡವು ಸಹ ಹತವಾಗಿರುವದ್ದರಿಂದಲೂ, ಭೂಮಿಯೊಳ್ ಲೋಕಾತಿಶಯವಾದ ಪ್ರಾಣಿ ಯಾವದೋ ಒಂದು ವಾಸವಂ ಮಾಡಿಕೊಂಡಿರಬೇಕೆಂದು ಯೋಚಿಸಿ ಹೋಗುತ್ತ, ಪಾದಘಾತದಿಂದಿಳಿದು ಹೋಗಿರುವ ಶಿಲಾತಲವನ್ನೋಡಿ ಇದೇನು ಚೋದ್ಯವೋ? ಈ ದ್ವೀಪದೊಳ್ ಯಾವಕಾರಣದಿಂದಲೋ ಭೂವರಾಹವೇ ವಾಸಗೊಂಡಿರಬಹುದು, ಇದು ಪರೀಕ್ಷಿಸಲುಶಕ್ಯವೆಂದು ಯೋಚಿಸಿ ಹೋಗುತ್ತ ಅಲ್ಲಿ ಮಹಾನಿಶಾಸಮುದಾಯದಂತೆ ಅತಿ ನೀಲವರ್ಣವಾಗಿ ದೂರದೊಳ್ ಒಂದು ಮಹಾವನವು ಕಾಣಬರುತ್ತಿರಲು, ಅದರ ಸಮೀಪವನ್ನೈದಿ ಅಲ್ಲಿ ಬಹುವಿಧವಾದ ಗಜಬೃಂಹಿತಗಳಂ ಕೇಳಿ ಮಾರ್ಗಗೊಂಡು ಬರುತ್ತ, ಅಡಿಗಡಿಗೂ ಶುಕಪಿಕ ಶಾರಿಕಾನಿನಾದಂಗಳಂ ಕ್ರೀಡಿಸ ಭ್ರಮರಝಂಕಾರಗಳು ಕಿವಿಗಿಂಪಾಗಿರಲು, ಆ ವನದ ಮಧ್ಯಭಾಗದೊಳ್ ಭೂಮಿದೇವಿಯ ವಿಲಾಸದರ್ಪಣವೋ ಎಂಬಂತೆ, ಸಮುದ್ರವೆಲ್ಲವೂ ಸಂಕ್ಷೋಭವಿಸಿ ಸರೋವರರೂಪವಂತಾಳಿದಂತೆ ಒಂದು ತೀರದೊಳ್ ನಿಂತು ನೋಡಿದರೆ ಮತ್ತೊಂದುತೀರ ಕಾಣಿಸದೆ ಜಲರಾಶಿಮಗ್ನಳಾದ ಭೂಸತಿಯಂ ತರಪಣಿಸಿ ತ್ವರೆಯಿಂ ಧುಮುಕಿದ ಆದಿವರಾಹಮೂರ್ತಿಯ ವಿನಿರ್ಗಮಮಾರ್ಗವೋ ಎಂಬಂತೆ, ಜಲಮಧ್ಯದೊಳ್ ಕಾಣಿಸುವ ಪರ್ವತ, ವನ, ನದೀ, ಮೇಘ-ತಾರಕಾದಿ ಪ್ರತಿಬಿಂಬಗಳಂ ಚಂಚಲದಿಸಂ ಯಿಂಬಿಟ್ಟಿರುವ ಶ್ರೀಮನ್ನಾರಾಯಣನ ಉದರದೇಶವೋ ಎಂಬಂತೆ ಅತಿ ಗಂಭೀರವಾಗಿ ಸಕಲ ಜಗವನ್ನಿರ್ಮಿಸಲೆಣಿಸಿದ ಹಿರಣ್ಯಗರ್ಭನ ಪ್ರಥಮಸೃಷ್ಟಿಯ ಕಮಂಡಲುವೋ ಎಂಬಂತೆ, ಕುಂಭಸಂಭವಸಹಸ್ರಗಳಿಂದ ಪಾನಂಗೈಯಲಶಕ್ಯವಾದ ಅಪೂರ್ವಾಂಭೋನಿಧಿಯೋ ಎಂಬಂತೆ, ಜಗವಂ ಪ್ರಳಯಮಂ ಮಾಡಲೆಣಿಸಿದ ಕಲ್ಪಾಂತಮೇಘಂಗಳಂ

ಪಾನಂಗೈಯಲ್ಪಟ್ಟು ಎಂದೆನಿಸಂತೆ ಪೂರ್ಣವಾಗಿರುವ ಮಹಾಪಯೋನಿಧಿಯೋ ಎಂಬಂತೆ ಕಂಗೊಳಿಸುವ, ಬಹುಯೋಜನ ವಿಸ್ತಾರವಾಗಿ, ಸ್ಫಟಿಕಶಿಲಾಸೋಪಾನಗಳಿಂ, ಕಮನೀಯ, ಕಲ್ಲೋಲ, ತರಂಗಮಾಲಿಗಳಿಂ, ವಿಕಸಿತಕಲ್ಹಾರಕಮಲಕುವಲಯರಾಜಿಯೊಳ್ ವಿಹರಿಸುತ್ತಲಿರುವ ಕಾದಂಬ, ಬಕ, ಚಕ್ರವಾಕ ಮಧುರಧ್ವನಿಗಳಿಂ, ಮಧುಪಾನಮತ್ತ, ಭೃಂಗೀಝಂಕಾರ ವಿಪಂಚಿಕಾಗೀತದಿಂ ನಿರ್ಭರವಾಗಿ ಉಬ್ಬಿಬರುವ ತರಂಗಗಳ ಅಬ್ಬರವೆಂಬ ಮೃದಂಗಶಬ್ದದಿಂ, ವಾಯುವೇಗದಿಂ ಚಲಿಸುವ ಪಲ್ಲವಗಳೆಂಬ ಅಂಗುಳಿಗಳಂ ತೋರುವ ನರ್ತಕಿಯ ಚಂದವಾಗಿ ಬೆಳ್ಯುತಿರ್ಪ ತೀರದಲ್ಲಿರುವ ಕುಸುಮಲತೆಗಳಿಂ ಸಂಗೀತಶಾಲೆಯಂತೆ ರಮಣೀಯವಾಗಿ. ವಿನತಾತನಯನಾದ ಗರುಡನಿಗೆ ವಿಹಾರಯೋಗ್ಯವಾದ ಸ್ವಾದೂದಕವೆಂಬ ಮಹಾಸರೋವರವಂ ನೋಡಿ, ಇದು ದೇವತಾ ವಿಹಾರಯೋಗ್ಯವೆಂದು ನಿಶ್ಚೈಸಿ, ಆ ಸರೋವರದ ಪೂರ್ವದಿಕ್ಕಿನಲ್ಲಿ ಪ್ರತ್ಯಂತಪರ್ವತಗಳಿಂದೊಡಗೂಡಿ ಬಂದು ಜಲಕೇಳಿಯನ್ನಾಡುವ ಹಿಮಾಚಲವೋ ಎಂಬಂತೆ, ಹೆಣ್ಣಾನೆಗಳಿಂದೊಡಗೂಡಿ ಸ್ವೇಚ್ಛೆಯಿಂದ ಜಲಕ್ರೀಡೆಯಂ ಮಾಡುತ್ತಲಿರುವ ಅತಿ ಶುಭ್ರವಾದ ಮಹಾಗಜವನ್ನು ಕಂಡು, ಇವರಿಂದಲೇ ಶರಭ ಭೇರುಂಡಗಳೆರಡೂ ಸಂಹೃತಗಳಾಗಿರುವುವೆಂದು ಹೇಳಬಹುದು. ಇವರೆ ಸಾಧಾರಣಯೂಥಪತಿಯಾಗಿರುವದರಿಂದ ಇವನಿಂ ಶಕ್ಯವಾಗದು, ಇನ್ನೇನು ನಿಮಿತ್ತವಿರುವದೋ ಎಂದು ಭಾವಿಸುತ್ತ, ಅದರ ಸೌಂದರ್ಯವನ್ನೋಡಿ ವಶವಂ ಮಾಡಿಕೊಳ್ಳಬೇಕೆಂಬ ಬುದ್ಧಿಯಿಂದ ಕೇಕಿನೋಡಬೇಕೆಂದು ದಿಕ್ತಟಂಗಳು ಮುಚ್ಚುವಂತೆ ಕಲ್ಪಾಂತಮೇಘವು ಗಂಭೀರವಾಗಿ ಗುಡುಗಿದಂತೆ ಸಿಂಹನಾದವಂ ಮಾಡುತ್ತಿರಲು, ಅದಂ ಕೇಳಿ ಹೆಣ್ಣಾನೆಗಳು ಚದರಿ ಬೆರಗಾಗಿ, ಆ ಗಜರಾಜನ ಹಿಂಭಾಗದೊಳ್ ನಿಲ್ಲಲು, ಉಗ್ರಬಾಹುವು ಅದಂ ನೋಡಿ ಬಂದು ಮಹಾ ತಾಳವೃಕ್ಷವಂ ಮುರಿದು ಆ ಗಜಾಧಿಪತಿಯ ಮೇಲೆ ಎಸೆಯಲು, ಆ ಗಜರಾಜನು ಅದಂ ತೃಣವಾಗಿ ತಿಳಿದು ವೇಗದಿಂ ಪೋಗಿ ತನ್ನ ಕೊಂಬುಗಳಿಂದ ಪರ್ವತದೊಳ್ ಹಿಡಿದಿದ್ದ ಒಂದು ಗುಂಡು ಕಲ್ಲಂ ನಿವಾಟಿ,

ಸೊಂಡಲಿನಿಂದ ತೆಗೆದು ಆ ರಾಕ್ಷಸನನ್ನು ಮೇಲೆ ಎಸೆಯಲು, ಆ ಗುಂಡುಹಾರಿ ಬರುತ್ತ ಮಾರ್ಗದೊಳ್ ತಡೆಯಾದ ವೃಕ್ಷಂಗಳಂ ಮುರಿದು ಕೆಡಹುತ್ತ ಬರುತ್ತಿರಲದಂ ನೋಡಿ ಆ ರಾಕ್ಷಸನು ಕೆಟ್ಟೆನೆಂದು ಅತಿವೇಗದಿಂ ಓಡಿ ಹೋಗಲಾ ಶಿಲೆಯು ರಾಕ್ಷಸನು ನಿಂತಿದ್ದೆಡೆಯೊಳ್ ಬೀಳಲು, ರಾಕ್ಷಸನು ಹತನಾದನೆಂದು ತಿಳಿದು ಗಜವು ಎಂದಿನಂತೆ ಹೆಣ್ಣಾನೆಗಳಂ ಸೊಂಡಲಿನಿಂದ ನೇವರಿಸುತ್ತಿರಲು; ಆಗ ಆ ರಾಕ್ಷಸನು ಆ ಶಿಲೆಯಂ ನೋಡಿ ಸಹಸ್ರ ರಾಕ್ಷಸರ ಸಂಘದಿಂದಲಾದರೂ ಕದಲಿಸಲಶಕ್ಯವೆಂದು ತಿಳಿದು, ಈ ಗಜವು ಸಾಧಾರಣವಲ್ಲ, ಯಾವ ಕಾರಣದಿಂದಲೋ ಯಾವ ದೇವತೆಯೋ ಗಜರೂಪವಂ ತಾಳಿರಬಹುದು, ಇದರಿಂದಲೇ ಶರಭ ಭೇರುಂಡಗಳು ಸಂಹೃತಂಗಳಾಗಿರುವವು, ಆದ್ದರಿಂ ಜೀವದಾಶೆಯಂ ಬಿಟ್ಟವನು ಇದಂ ಕೊಲ್ಲುವನು, ಈ ಗಜವು ಯಾವ ಪುಣ್ಯಾತ್ಮನಿಗೆ ವಶವಾಗುವದೋ, ಆ ಮಹಾಪುರುಷನು ಈ ದ್ವೀಪಾಧಿಪತಿಯಾಗುವನದರಲ್ಲಿ ಸಂಶಯವಿಲ್ಲ ಯಾವ ಉಪಾಯದಿಂದಲಾದರೂ ಇದಂ ವಶವಂ ಮಾಡಿಕೊಳ್ಳಬೇಕೆಂದೆಣಿಸಿ ಎಂದಿನಂತೆ ಆ ಭೇರುಂಡಪಕ್ಷಿಯ ಗರಿಯಂ ತೆಗೆದುಕೊಂಡು ತನಗೆ ಮುಖ್ಯ ನಿವಾಸಸ್ಥಳವಾದ ಪಾತಾಳಲೋಕವಂ ಕುರಿತು ಬಂದು ತನ್ನ ಆಸ್ಥಾನದ ಬಳಿಯಲ್ಲಿ ಆ ಗರಿಯನ್ನಿಟ್ಟು, ತನ್ನ ಮಂತ್ರಿಯಂ ಕುರಿತು ಎಲೈ ಕುಂಭಕರ್ಣನೆ! ನಾನು ಮೃಗಯಾವಿನೋದದಿಂ ಪ್ಲಕ್ಷದ್ವೀಪದವನದಲ್ಲಿ ಸಂಚರಿಸುವ ಸಮಯದೊಳು ಒಂದು ಶರಭವು ಎದುರಾಗಲು ಅದಂ ಸಾಹಸದಿಂ ಸಂಹರಿಸಿ ಬರುತ್ತಿರಲಷ್ಟರೊಳು ಭೇರುಂಡನು ಕಾಣಿಸಿಕೊಳ್ಳಲು ಅದಂ ಸಂಹರಿಸಿ ನಿಮ್ಮ ಸಂತೋಷಕ್ಕೋಸುಗ ಅದರ ಗರಿಯಂ ತರುತ್ತಿರಲಾಗ ಬಂದು ಮಹಾಗಜವು ಕರಿಣೀಸಮೂಹದೊಡನೆ ಜಲಕೇಳಿಯಮಾಡುವದಂ ನೋಡಿ ಅದರೊಡನೆ ಸೆಣಸಿ ಸಂಹರಿಸುವದಕ್ಕೆ ಕೈಬಾರದೆ ಹಿಡಿದು ತರುವದಕ್ಕೆ ಸಾಮಗ್ರಿ ಇಲ್ಲದ್ದರಿಂದ ಸುಮ್ಮನೇ ಬಂದೆನು, ಯಾವತೆರದಿಂದಲಾದರೂ ಆ ತುಂಟಗಜವಂ ಹಿಡಿಯದಿದ್ದರೆ ನನಗೆ ನಿದ್ರಾಹಾರಗಳು ರುಚಿಸವು, ಅದಕ್ಕೆ ಎತ್ನವಂ ಮಾಡೆಂದು ಹೇಳಲಾ ಉಗ್ರಬಾಹುವಿನ ಮಾತಂ ಕೇಳಿ ಕುಂಭಕರ್ಣನು ತನ್ನ ಮನದೊಳು

ಶರಭನೊಡನೆ ಸೆಣಸುವದಕ್ಕೆ ಮಹಾರಾಕ್ಷಸರು ಹಿಮ್ಮೆಟ್ಟುವರು, ಮತ್ತು ಭೇರುಂಡವು ರಾಕ್ಷಸರಂ ಭಕ್ಷಿಸುವದೆಂದು ಕೇಳಿದುದುಂಟು, ಈಗ ಶರಭಭೇರುಂಡಗಳಂ ಸಂಹರಿಸಿ ಬಂದೆನೆಂಬ ಈ ರಾಕ್ಷಸನವಾಕ್ಯದಲ್ಲಿ ವಿಶ್ವಾಸತೋರುವದಿಲ್ಲ, ಅನ್ಯರಂ ವಂಚಿಸುವಂತೆ ಮಂತ್ರಿಯಾದ ನನ್ನಲ್ಲಿಯೂ ಈ ಕಪಟವಾಕ್ಯವಂ ಪೇಳುವನು, ಈಪರಿಯಾಗಿ ಅನೃತವನ್ನಾಡುವದರಿಂದ ಬರುವ ಸಂಪತ್ತುಗಳೆಲ್ಲವೂ ವಿಪತ್ತುಗಳಾಗುವವು, ಹೀಗೆ ಹೇಳುತ್ತಿದ್ದರೆ ಇವರ ಫಲವು ಸ್ವಲ್ಪಕಾಲದಲ್ಲಿಯೇ ನಿದರ್ಶನಕ್ಕೆ ಬರುವುದು, ಮತ್ತು ಆ ಗಜವಂ ತುಂಟಗಜವೆಂದು ಹೇಳುವದಂ ಕೇಳಿದರೆ, ಇದರಿಂ ನಾಶವಾಗಿ ಬಂಧನವಾಗಿರಬಹುದೆಂದರಿತು, ಅಯ್ಯಾ! ಪ್ರಭುವೆ, ಭೇರುಂಡನಂ ಜಯಿಸಿದವಗೆ ಮದಗಜವೆಂಬುದು ಎಷ್ಟುಮಾತ್ರವು, ಇದಕ್ಕೋ ಸಾಮಗ್ರಿಗಳಂ ಒದಗಿಸಿ ಕೋಟೆ ಬ್ಯಾಟೆಗಾರರನ್ನಾದರೂ ಸನ್ನಾಹಗೊಳಿಸುವೆನು, ತಿಳುಹಬಹುದೆಂದು ನುಡಿದು, ಯೋಜನಾಯತವಾದ ಮಹಾಸರಪಣಿಗಳಂ, ಸಂಕೋಲೆಗಳಂ, ಹಗ್ಗದ ಉರುಳುಗಳಂ ದಾಪಿನ ಆನೆಗಳಂ, ಆಯುಧಪಾಣಿಗಳಾದ ಬಹುಮಂದಿ ರಾಕ್ಷಸಭಟರಂ ಕೂಡ ಸಜ್ಜುಗೊಳಿಸಿ, ಪ್ಲಕ್ಷದ್ವೀಪಕ್ಕೆ ಪೋಗುವಂತೆ ನಿಯಮಿಸಿ ಕಳುಹಿ, ಉಗ್ರಬಾಹುವಿನಬಳಿಗೆ ಬಂದು ಸಕಲವಂ ಸಿದ್ಧಪಡಿಸಿ ಕಳುಹಿಸಿ ಇದ್ದೇನೆಂದು ಬಿನ್ನವಿಸಲು, ಉಗ್ರಬಾಹುವು ಶಂಕುಕರ್ಣ ಸಮೇತನಾಗಿ ಮತ್ತೂ ಅರ್ಜುನನ ಶರಹತಿಗೆ ಹಿಮ್ಮೆಟ್ಟಿ ಮೃತರಾಗಿ ಪಿಶಾಚರೂಪವಂತಾಳಿದ ನಿವಾತಕವಚರಸಂಘವೋ ಎಂಬಂತೆ ತೋರುವ ರಾಕ್ಷಸರ ಸಂಘದಿಂದೊಡಗೂಡಿ ಪಾತಾಳದಿಂ ಪೊರಟು ಪ್ಲಕ್ಷದ್ವೀಪವನೈದಿ ತೆರಳುತ ಮಾರ್ಗದೋಳ್ ಬಿದ್ದಿರುವ ಶರಭವಂ ಮಂತ್ರಿಗೆ ತೋರಿಸಲು, ಆಗ ಶಂಕುಕರ್ಣನು ಸಮೀಪದಲ್ಲಿ ಗಜಪಾದಕ್ಷತದಿಂದಿಳಿದಿರುವ ಶಿಲಾತಲವಂ ನೋಡಿ ಈ ಶರಭನು ಈ ಅರಸನಿಂ ಹತನಾದುದು ನಿಜವಲ್ಲ, ಹೀಗಿರುವಲ್ಲಿ ಭೇರುಂಡನಂ ಸಂಹರಿಸಿದುದು ಯಾವ ನಿಶ್ಚಯವೆಂದು ಮನದೊಳ್ ಯೋಚಿಸುತ, ಎಲೈ ಅರಸೇ! ಭೇರುಂಡವು ಯಾವಬಳಿಯಲ್ಲಿ ಬಿದ್ದಿರುವುದು ಎಂದು ಕೇಳಲಾಗ ಉಗ್ರಬಾಹುವು ಹಾಗೆ ಮುಂದಕ್ಕೆ ಬಂದು ತನ್ನ ಮಂತ್ರಿಗೂ ಪರಿ

ನಾಟಕಸ್ತ್ರೀ ಕೂಟಾ ವ್ಯಾಪ್ತವಾದ ಭೇರುಂಡವಂ ತೋರಿ ಇದೇ ಸನ್ನಿಂ- ಸಂಪತ್ತು ಸಮಾಪವಂದು ಪೇಳುತಾಗ, ಭಟರುಗಳೆಲ್ಲರೂ ಮಿತ್ರವಿಹಾರಿವ ಸಂತೋಷದಿಂ ಭುಜಂ ಆಸ್ಫಾಲಿಸುತ್ತ ಭುಜಗಳಂ ತಟ್ಟಿ ಸಿಂಹನಾದವಂ ಮಾಡುತ್ತಿರಲು; ಉಗ್ರಾಟಾದುಪ್ರ ಸೂರಾರುವಂದಿ ಪಾಚಕರಂ ಕರೆದು ಎಲ್ಲೈ ಪಾಚಕಗಳಿರಾ, ಇದು ನಮ್ಮ ಪರಿವಾರಕ್ಕೆಲ್ಲಾ ಪ್ರೀತಿಯವಾಗಲಿ, ನಮ್ಮ ಪತ್ನೀಪುತ್ರರಿಗೆ ಎಡೆಗಳು ಸಿದ್ಧವಾಗಲಿ, ಭೇರುಂಡ ಶರಭಗಳ ಮಾಂಸಗಳಿಂ ಪಾಕವಂ ಮಾಡಿರಿ, ಮತ್ತೂ ವಿಶೇಷವಾಗಿ ಜೀಂಟಿಯಂ ಮಾಡಿ ಭಟರುಗಳು ತಂದು ಒದಗಿಸುವ ಮೃಗಪಕ್ಷಿಗಳಂ ತೆಗದುಕೊಳ್ಳಿರೀ, ಉಪ್ಪು ಬೇಕಾದರೆ ಪೂರ್ವದಿಕ್ಕಿನ ಸಮುದ್ರದಿಂ ಭಟರು ತಂದು ಒದಗಿಸುವರು, ಮಧುರ ಬೇಕಾದರೆ ದಕ್ಷಿಣದಿಕ್ಕಿನಲ್ಲಿರುವ ಇಕ್ಷು ಸಾಗರದ ಶರ್ಕರೆಗಳಂ ತಂದುಕೊಡುವರು, ಮೃಗದ ರಕ್ತದಿಂ ಕೂಡಿದ ಇಕ್ಷು ರಸದಿಂ ಪಾನಕವು ಸಿದ್ಧವಾಗಿರಲಿ, ಉಪ್ಪು ಖಂಡವ ತೆಗದು ಮಪ್ಪಿನಿಂ ಹುರಿದು ತುಪ್ಪದಿಂ ಕಲಸಿ, ಸಾಟಿಸಿ ತಿರುಗಿಸಿದರೆ ಕರ್ಪೂರಗಂಧವೆಸಗುವದು, ಮತ್ತದನು ಮದ್ಯದಿಂ ಕಲಸಿ, ಸಕ್ಕರೆಯಿಂ ಬೆರಸಿ, ಹೊಸದಾದ ಪಡೆಗೆ ಹುದುಗಿಸಲದು ಯಿತ್ತರದ ಭಕ್ಷ್ಯಗಳಾಗುವದು; ಹೆನ್ನರಗಳಂ ತೆಗೆದು ಚೆನ್ನಾಗಿ ಸೋರಿಸಿ, ಕಣ್ಣುಗುಡ್ಡೆಗಳಿಂ ಕಲಸಿ ಸಕ್ಕರೆಯುಂ ಬೆರಸಿ ಸಣ್ಣ ಶಾವಿಗೆಯಾಗುವದು; ಅಸ್ಥಿಯೊಳ್ ಬರ್ದಿರ್ಪ ಅಮೃತಪಿಶಿತವಂ ಮಸ್ತಿಷ್ಕ ಪಂಕದಿಂ ಕೂಡೆ ಸಲುರುಚಿಯಾದ ಪ್ರೋಗರವಾಗುವದು, ಚಂಪಕಗಂಧದಿಂ ತಂಪಾದ ತನಿಗರುಳಂ ಇಂಪಿನಿಂ ಸಂಹರಿಸಿ ಹುರಿಯಲದು ಸೊಂಪಾದ ಶಾಕವಾಗುವದು; ಹಳೆ ಅವರೇಕಾಯಿ ಹೊಸಪರಿಯಗಂಧದಿಂ ಹಸನಾಗಿ ತೋರ್ಪ ಮಿದುಳಿನೊಳ್ ಮಧುವೆರೆಯೆ ಹಸಿದಿರುವ ರಕ್ಕಸರ ಪಾಯಸವಾಗುವದು, ಬದನೆಯಕಾಯಿಯೊಡನೆ ಮೃದುಮಾಂಸವಂ ಹುರಿದು ಮಡದಿ ಸಂಬಾರವೆರಸಿ ಬಡಿಸಲದು ಮಕ್ಕಳಿರಿಗೆ ಬಿದಿರೂರ ತಾಳದವಾಗುವದು, ಬಿರುಳ ಮಾಂಸವ ತೆಗದು ತಿರುಹಿ ಪೂರಣಗೊಂಡಾ ಮಸ್ತಿಯೊಳ್ ಪಚಕಿಸಿ ಕರಿದರೆ ಕರಿಗಡಬುಗಳಾಗುವದು, ಕಚ ಪವಸಂಬಾರಿಸಿ ಪಚ್ಚಡಿಗಳಂ ಮಾಡಿಸುವದು, ಹೆಚ್ಚಾದ ಕಜ್ಜಾಯಗಳಂ ಮಾಡಲೋಸುಗ

ಸ್ವಚ್ಛಮತ್ಸ್ಯಂಗಳಂತರಿಸಿಕೊಳ್ಳುವದು, ಮಂಡೂಕಗಳಂತುಪ್ಪಿದೊಳ್
ಹುರಿದು ಸಂಡಿಗೆಗಳಂಮಾಡುವದು, ತಂಡತಂಡದ ಮೃಗದ ಪಲಲದಿಂ
ಮಿಗಿಲಾದ ಉಂಡಲಿಗೆಗಳಂಮಾಡಿ ಭಕ್ಷಿಸುವದು, ಬಹುವಿಧಮದ್ಯದಿಂ
ಬಿಸಿಯುಚೋಷ್ಯವಮಾಡಿ ಹುರಿದ ವಗ್ಗರಣೆಗನುಕೂಲವಾಗಿರ್ಪ ಮ
ರಿಮತ್ಸ್ಯರಾಶಿಗಳಂ ತಂದು ಒದಗಿಸುವರು, ಮರೆಮಾಚಿ ಫಲವೇನು, ಮ
ಸವಕಾರ್ಯವು ಲಭಿಸೆ ಸುರೆಯಸಾಗರತಟದಿ ಸುರಿಸುರಿದು ಕುಡಿವುದಕೆ
ಸರಸಗೃಹವಂ ನಿಮಗೆ ಕೊಡಿಸುವೆನು, ಎಂದುಪೇಳಿ, ಮತ್ತು ಎಲೈ
ರಾಕ್ಷಸರುಗಳಿರಾ! ಈದಿನ ಮಾಡಿಸುವ ಘಾತನವಂ ಭುಂಜಿಸಿ ಪಾನವಂ
ಮಾಡಿ ರಾತ್ರಿಯಂ ಕಳೆದು ನಾಳೆಯ ದಿವಸ ಇಲ್ಲಿಯ ಮದಗಜವಂ ಹಿಡಿ
ದು ಕಟ್ಟಿ ವಶಮಂಮಾಡಿಕೊಂಡರೆ ಇದಕ್ಕಿಂತ ಅಧಿಕವಾದ ಭೇರುಂಡನಂ
ಸಂಹರಿಸಿ, ಮತ್ತು ನಿಮ್ಮೆಲ್ಲರಿಗೂ ಅಧಿಕವಾದ ಘಾತನವಂಮಾಡಿಸಿ, ಸು
ರಾಸಮುದ್ರವನ್ನೇ ಉಚಿತವಾಗಿ ಕೊಡಿಸುವೆನು. ಇದಕ್ಕೆ ಕುಲದೇವತೆ
ಯಾದ ನಿಕುಂಭಿಲಾದೇವಿಯ ಪಾದಪಂಕಜವಂ ಕುರಿತು ಶಪಥವಂಮಾಡು
ವೆನೆಂದು ನುಡಿಯಲು; ಅದಂಕೇಳಿದ ಭಟರು ಸಂತೋಷದಿಂ ಹಿಗ್ಗಿ ಕಾ
ಕುಪಾಕುತ ಸಿಂಹನಾದವಂಮಾಡುತ್ತಿರಲು; ಶಂಕುಕರ್ಣನು ಉಗ್ರಬಾ
ಹು ಪೇಳಿದ ಶಪಥವಾಕ್ಯವಂಕೇಳಿ, ಈ ಅರಸು ನಿನ್ನೆ ದಿವಸ ಭಕ್ಷಿಸಿದ
ಭೇರುಂಡಮಾಂಸದಿಂ ಮದಹೆಚ್ಚಿ ತಲೆಗೇರಿ ವಿವೇಕವಿಲ್ಲದೆ ಶಪಥವಂ
ಮಾಡುವನು, ಈತನಿಗೆ ಬಾಲಬುದ್ಧಿಯು ಇನ್ನೂ ತೊಲಗಿಲ್ಲ, ಈ
ಭೇರುಂಡವು ಈತನಿಂ ಹತವಾದದ್ದು ಸತ್ಯವಾದರೆ ಮುಂದೆ ಹೀಗೆ ಮಾ
ಡುವನೆಂದು ನಂಬಬಹುದು, ಹೀಗೆ ಅಶಕ್ಯವಾದ ಕಾರ್ಯವಂ ಕುರಿತು
ಶಪಥವಂ ಮಾಡಿ ತಪ್ಪಿದರೆ ಆ ದೋಷವೇ ಕಾಲಾಂತರದಲ್ಲಿ ಸಂತತಿಗೆ
ಸಂಶಯವನ್ನುಂಟುಮಾಡುವದೆಂದು ಯೋಚಿಸುತ, ಈಗ ತಿಳಿಯಲಾಯಿ
ತು, ನೆನಸಿದಂತೆ ಮದಗಜವು ತನ್ನ ವಶವಾದಬಳಿಕ, ಮತ್ತು ಮತ್ತೊಂ
ದು ಭೇರುಂಡನಂ ಸಂಹರಿಸಿ ಘಾತನವಂ ಮಾಡಿಸುವೆನೆಂದು ಭಟರಿಗೆ ಹೇಳಿ
ದ ಮಾತಿನಿಂದಲೀ ಮದಗಜದಿಂದಲೇ ಈಗಿನ ಭೇರುಂಡವು ಮೃತವಾದು
ದೆಂದು ತಿಳಿದು ಮುಂದೆ ವಶವಾಗುವ ಗಜದಿಂದ ಮತ್ತೊಂದು ಭೇರುಂ

ಡವು ಎದುರಾದರೆ ಸಂಹಾರಗೊಳಿಸುವೆನೆಂಬ ಭರವಸದಿಂದ ಈ ವಾಕ್ಯವಂ ಭಟರಿಗೆ ಹೇಳಿದನು, ಅದರಿಂದ ಈಗಿನ ಭೇರುಂಡವು ಇಲ್ಲಿಯು ಗಜದಿಂದಲೇ ಮೃತವಾಯಿತಲ್ಲದೆ, ಈ ಅರಸಿನಿಂದ ಸಂಹೃತವಾದುದು ಅಪಷ್ಟವು, ಗಜಗಳಂ ಮಶಕಗಳಂತೆ ಭಾವಿಸುವ ಭೇರುಂಡವು ಇಲ್ಲಿಯು ಗಜದಿಂ ಮೃತವಾದುದುಂಟಾದರೆ ಅದು ಅಮಾನುಷಗಜವೇ ಹೊರತು ಸಾಧಾರಣ ಗಜವಲ್ಲ, ಶಾಪವಶದಿಂದಲೋ, ಮತ್ತಾವಕಾರಣದಿಂದಲೋ, ಯಾರೋ ಗಜರೂಪವಂತಾಳಿ ಬಂದಿರುವದರಿಂದ ಇದು ತಿಳಿಯಲಶಕ್ಯವು, ಇದರಲ್ಲಿ ವಿಮರ್ಶೆಯಂ ಮಾಡದೆ ಆ ಗಜವಂ ಹಿಡಿಯಲೆಳಸಿದರೆ ಏನು ಆಪತ್ತು ಸಂಭವಿಸುವದೋ, ತೋರಿದ ಅರ್ಥವಂ ಹೇಳಿದರೆ ಮದಜ್ಞಾನವನ್ನು ತಿಳಿದು ಈ ಅರಸು ಲಜ್ಜಿತನಾಗುವನು, ಅಥವಾ ಕೋಪಗೊಳ್ಳುವನೋ, ಎಂದು ಗೊಣಗುಟ್ಟುತ್ತಿರಲಾ ಶಂಕುಕರ್ಣನಂ ನೋಡಿ ಉಗ್ರಬಾಹುವು ಎಲೈ ಮಂತ್ರಿಯೆ! ನಾನು ಭಟರಿಗೆ ಹೇಳಿದುದು ನಿನಗೆ ಸಮ್ಮತವಿಲ್ಲದೆ ಸುಮ್ಮನೆ ನೀನೇ ಗುಸುಗುಟ್ಟುತಲಿರುವೆಯೆಂದು ಕೇಳಲು, ಶಂಕುಕರ್ಣನು ಮಹಾಪ್ರಭುವೇ! ದೈವಯೋಗದಿಂದ ಮುಂದಣ ಮನೋರಥವು ಕೂಡ ಘಟಿಸಬಹುದೆಂದು ಹೇಳಿಕೊಂಡೆನು ಎನಲಾ ಉಗ್ರಬಾಹುವು ದೈವಬಲದಿಂದಲ್ಲದೆ ನನ್ನ ಪೌರುಷದಿಂ ಘಟಿಸಲಾರದೆಂದು ಹೇಳಿದಂತಾಯಿತು ಎನಲಾ ಮಂತ್ರಿಯು, ಪ್ರಭುವೇ! ಭೇರುಂಡನಂ ದೈವವೇ ತಂದುಬಿಟ್ಟಿತಲ್ಲದೆ ಅದರ ವಾಸವನ್ನಾರೈದು ಹುಡುಕಿದವರ್ಯಾರು, ಎನಲಾ ಮಾತಿಗೆ ಉಗ್ರಬಾಹುವು ಒಡಂಬಟ್ಟು ಆಪ್ತಜನರಿಂ ಕೂಡಿ ಭೋಜನವಂ ಮಾಡಿ, ಪಾನವಂಗೈದು ವಿಶ್ರಮಿಸಿಕೊಳ್ಳುತ್ತಿರಲು, ಅದೇ ರೀತಿಯಲ್ಲೇ ಆತನ ಪರಿವಾರವೆಲ್ಲವೂ ಅಶನಪಾನವಂ ಮಾಡಿ ನಿದ್ರೆಯಿಂದ ಆ ದಿನವಂ ಕಳೆದು, ಆ ಮಾರನೇ ದಿನವೇ ಬೇಹುಗಾರರಾದ ರಾಕ್ಷಸರು ಆ ಮಹಾಗಜವಂ ಹುಡುಕಿ ಅದರ ವಾಸವಂ ತಿಳಿದುಬಂದು ಉಗ್ರಬಾಹುವಿಗೆ ಬಿನ್ನೈಸಲು, ಅದಂ ಕೇಳಿ ಉಗ್ರಬಾಹುವು, ಅವರಂ ಕುರಿತು ಎಲೈ ಭಟರುಗಳಿರಾ! ಆ ಮಹಾಗಜದ ಸಮೀಪದೊಳ್ ದಾಪಿನ ಆನೆಗಳಂ ನಿಲ್ಲಿಸಿ ಹೊರಗೆ ಹೋಗದಂತೆ ಆಯುತವಾದ ನೇರಪಣಿಗಳಿಂ ಅದರ ಪರಿವಾರದ

ಸುತ್ತಲೂ ಸಾಲಾಗಿರುವ ತಾಳವೃಕ್ಷಪಙ್ಕ್ತಿಗಳಿಗೆ ಬಳಿಗವಂತೆ ಬಲವಾಗಿ ಸುತ್ತಿ ಕಟ್ಟಿ, ಅಪರಸಂಖ್ಯಾತ ಶೂಲಕುಂತಪಾಣಿಗಳಾದ ರಾಕ್ಷಸರೊಡಗೂಡಿ ಕಾದಿರಿ ಎಂದು ನಿಯಮಿಸಿ, ಬಳಿಕ ಮಂತ್ರಿ ಸಮೇತನಾಗಿ ಬಂದು ನೋಡುತ್ತಿರಲಾ ಸಮಯದೊಳ್ ಸೂರ್ಯನು ಉದಯಿಸುತ್ತಿರಲು; ಆ ಕಾಲದೊಳ್ ಆ ಗಜವು ಕಾವಿಯ ಬಟ್ಟೆಯಂ ಗೂಡಿ ಹೊದ್ದಂತೆ ಕೆಂಪಾಗಿ ತೋರುತ್ತಿರಲು, ದಾಪಿನ ಆನೆಯವರು ಗಜದ ಸಮೀಪದಲ್ಲಿ ತಮ್ಮ ಆನೆಗಳನ್ನಿಳಿಸಿ, ಅದರ ಬೆನ್ನಿನಲ್ಲಿ ಅಡಗಿರಲು, ಕೆಲವರು ಸಂಕೋಲೆಗಳಂ ಹವರಿಸುತ ಆ ಆನೆಯು ಕಾಲುವರೆಯಾಗಿ ನಿಂದಿರಲು, ಆಗಲೂ ಮಹಾಗಜಕ್ಕೆ ನಿದ್ರೆ ತಿಳಿಯದೆ ಸುಖದಿಂ ಸಮೀಪದಲ್ಲಿ ಮಲಗಿ ನಿದ್ರೆಗೈವ ಕರಿಣೀಸ್ಕಂಧಭಾಗದಲ್ಲಿ ಸೊಂಡಿಲನ್ನಿಟ್ಟು ನಿದ್ರೆಯ ಮೊಬ್ಬಿನಿಂ ಮಲಗಿರಲು; ಆಗ ಮಾವುತರು ಮಾಡುವ ಸನ್ನೆಯಂತೆ ದಾಪಿನ ಆನೆಗಳು ಸಮೀಪವಂ ಪೊಂದುವದಕ್ಕೆ ಭಯದಿಂ ಹಿಮ್ಮೆಟ್ಟಿ ತಿರುಗುತ್ತಿರಲು; ಅದಂ ನೋಡಿ ಉಗ್ರ ರಾಕ್ಷಸರು ಗಜವಂ ಎಚ್ಚರಗೊಳಿಸಿರೆಂದು ಭಟರಿಗೆ ನೇಮಿಸಲಾ ಭಟರು, ಉದಯಕಾಲಯೋಗ್ಯವಾದ ಭೂಪಾಳಿ ರಾಗದಿಂ ಭೂಪತಿಗಳಂ ಎಚ್ಚರಗೊಳಿಸುವಂತೆ, ಗಜಮೋಹಕವಾದ ಗಾನವಂ ಗೈಯುತ್ತ, ಮೃದಂಗಗಳಿಂ ಮೃದುವಾಗಿ ಧ್ವನಿಯಂ ಮಾಡುತ್ತಿರಲು, ಆ ಅಪೂರ್ವಶಬ್ದವಂ ಕೇಳಿ ಮಹಾಗಜವು ಎಚ್ಚರವಾಗಿ ನಾಲ್ಕು ದಿಕ್ಕುಗಳಂ ನೋಡುತ್ತ, ದಾಪಿನ ಆನೆಯನ್ನಾಶ್ರಯಿಸಿರುವ ರಾಕ್ಷಸರಂ ನೋಡಿ ತ್ವರೆಯಿಂದೆದ್ದು, ಹತ್ತಿರ ಸುತ್ತಿಕೊಂಡಿರುವ ಮೊತ್ತವಾದ ಮತ್ತು ಕರಿಣಿಗಳು ತತ್ತರಗೊಳ್ಳುತ್ತ, ಸುತ್ತಿರುವ ಸರಪಣಿಯು ಬಲಿಯುನ್ನತಿಕ್ರಮಿಸಲಾರದೆ ಸುತ್ತಲಿರುವದನ್ನೋಡಿ ಕೋಪದಿಂ ಭೂಮಿಯು ಕಂಪಿಸುವಂತೆ ಬೃಂಹಿತ ಧ್ವನಿಯಂ ಮಾಡಲದಂ ಕೇಳಿ, ಗಿರಿಗಹ್ವರಂಗಳಲ್ಲಿರುವ ಮಹಾಸಿಂಹಗಳು ಕುಪಿತಗಳಾಗಿ ಕೂಗಲು, ಆ ಸಿಂಹನಾದದಿಂದ ಮಹಾಗಜವು ಮತ್ತೂ ಕ್ರುದ್ಧವಾಗಿ ಬಂದು ದಾಪಿನ ಆನೆಗಳಂ ಪತ್ತರಿಸಿ, ಆ ಆನೆಗಳ ಮೇಲೆ ಅಡಗಿದ್ದ ರಾಕ್ಷಸರುಗಳ ಕಾಲುಗಳಂ ಪಿಡಿದು ಗಿರಗಿರನೆ ತಿರುಗಿಸಿ ರಾಕ್ಷಸರನ್ನೇ ಬಡಿದು ಕೆಡಹುತ್ತಿರಲು ; ಅದಂನೋಡಿ ಶಂಕಾ

ಕರ್ಣನು ಈ ಮದಗಜಕ್ಕೆ ಕೋಪಬಂದಬಳಿಕ, ಅನುನಯಕ್ಕೂ, ದಂಡನೆಗೂ ಒಳಗಾಗಲಾರದೆಂದು ಪೇಳಿ ಭಯಮಂಕಲ್ಪಿಸಿ ವಶವಂಮಾಡಿಕೊಳ್ಳುವದೆಂದು ನಿಯಮಿಸಲು; ಆಗಭಟರೆಲ್ಲರು ಬಳಸಿನಿಂತು ಒಂದೇವೇಳೆ ಸಿಂಹನಾದಗಳಂಮಾಡಿ ಅನೇಕಭೇರೀಕಾಹಳಧ್ವನಿಗಳಂ ಮಾಡುತ,ಈ ಗಜವು ಗ್ರಾಸಾರ್ಥವಾಗಿ ನಮ್ಮಮೇಲೆ ಬಾರದಿರದೆಂದು ಇಕ್ಷುದಂಡಗಳಂ, ಕದಳೀ, ಸಲ್ಲಕೀಶಾಖೆಗಳಂ ಎಸೆಯುತನಿಶ್ಶಬ್ದವಾಗಿರಲಾ ಗಜವು, ಅದಂ ಬಂದಂ ಲಕ್ಷ್ಯಮಾಡದೆ ತ್ವರೆಯಿಂಬಂದು ಸುತ್ತಲಿರುವ ವೃಕ್ಷಗಳಂ ಕಿತ್ತು, ಸರಪಣಿಗಳಂ ತಾವರೆಯ ನೂಲುಗಳಂತೆ ಹರಿದು ಇಕ್ಕೆಲದೊಳ್ ರಕ್ಕಸರಂ ಪಕ್ಕಲಿಕ್ಕುತ್ತಿರಲಾರಾಕ್ಷಸರು, ಪರಶು, ಕುಂತ, ಶೂಲ,ಗದೆಗಳಿಂದ ಆ ಮದ್ದಾನೆಯುಂ ಪ್ರಹರಿಸುತ, ಕಪ್ಪುಗಳಮಾರ್ಗವಾಗಿ ಅಟ್ಟಿ ಕೆಡಹಲ್ಕೋಸುಗ ರಾಕ್ಷಸಾಧಿಪನ ಅಪ್ಪಣೆಯಂ ಕೇಳಲಾಗ, ರಾಕ್ಷಸರಾಯನು ಯಾವಸಾಹಸದಿಂದಲಾದರೂ ಆ ಮದ್ದಾನೆಯಂ ವಶಮಾಡಿಕೊಳ್ಳಿರೆಂದು ಭಟರಿಗೆ ಆಜ್ಞಾಪಿಸುತ್ತಿರಲು; ಆ ಗಜವು, ರಕ್ಕಸರು ಪ್ರಯೋಗಿಸುವ ಆಯುಧಪ್ರಹಾರವಂ ಲಕ್ಷ್ಯವಂಮಾಡದೆ ಅಲ್ಲಿ ಸುತ್ತಲಿರುವ ಸರಪಣಿಗಳಂ ಕಿತ್ತುಬಿಸುಟು, ಘುಡಿಘುಡಿಸುತ, ಒಂದೊಂದು ಪೆಟ್ಟಿನಿಂದ ನೂರಾರುರಕ್ಕಸರಂ ಸಂಹರಿಸಿ, ಕಾಲುಗಳಿಂ ಹೊಸಕಿ ಶೀಳಿ ಬಿಸುಡುತ ಓಡಿಬರುವರಕ್ಕಸರಮೇಲೆ ಕವಿದುಬರುತ್ತಿರಲು; ಅದಂನೋಡಿಉಗ್ರಬಾಹುವು ಈ ಗಜವಂ ಯಾವ ಉಪಾಯದಿಂದಲಾದರೂ ಸಾಧ್ಯವಾಗುವಂತೆ ಮಾಡಿರೆಂದು ನುಡಿದು, ಬಳಿಕ ಎಲೈ ಭಟರುಗಳಿರಾ! ಇನ್ನು ಸಾಹಸವಂಮಾಡಿ,ದೂರವಾಗಿಪೋಗಿ ನಿಂತುಗಜವು ವಿಶ್ರಮಿಸಿಕೊಂಡಬಳಿಕ ನಾನು ಅಪ್ಪಣೆಯಂ ಕೊಡುವೆನೆನಲು; ಆ ಸೇನೆಯೊಳ್ ಹಾಗವಾಲು ನಷ್ಟವಾಗಿ ಉಳಿದ ರಕ್ಕಸಭಟರೆಲ್ಲರು ಆ ಮದ್ದಾನೆಯೊಡನೆ ಹೋರ್ರಾಟವಂಬಿಟ್ಟು, ಒಂದೆಡೆಯೊಳ್ ಗುಂಪಾಗಿನಿಂತು ಅದನ್ನೇ ಬೆರಗಾಗಿ ನೋಡುತ್ತಿರಲು; ಆ ಸಮಯದೊಳಾಗಜವು ಈ ರಕ್ಕಸರಗುಂಪಂನೋಡಿ, ಏನೋ ಕಪಟದಿಂ ಒಟ್ಟಾಗಿ ತನ್ನಮೇಲೆ ಬೀಳುವರೆಂದು ತಿಳಿದು ಕೋಪದಿಂ ಹೊರಟು ಗಿರಿಶಿಖರವಂ ಹುಡುಕುತ ಪೋಗುತ್ತಿರಲು; ಆಗ

ಕೋಪವೆಚ್ಚಿ ಬರುವಂತೆ ಮದ್ದಾನೆಯು ಶರೀರವು ಬೆಳೆಯುವುದಂ ನೋಡಿ, ಶಂಕರ್ಷಣನು ಮಹಾಪ್ರಸಾದಬಂತೆಂದು ತಿಳಿದು, ತನಿಗೆ ತೋರಿದವ ರಿಯಂ ತಿಳುಹಿದರೆ ಈ ರಾಕ್ಷಸರಾಯನು ಕೇಳುವನೋ? ಇಲ್ಲದೆ ಮೂ ರ್ಖತನದೊಳ್ ನಿಂತು ಪ್ರಾಣವಂ ಕಳದುಕೊಳ್ಳುವನೊ ತಿಳಿಯಕೂಡ ದಾಪ್ಪರಿಂದ, ವಂಚನೆಯಿಂದಲಾದರೂ ಈ ಸ್ಥಳದಿಂದೀರಾಯನಂ ತೊಲಗಿ ಸದಿದ್ದರೆ ಇವನಿಗೆ ಕ್ಷೇಮವಾಗಲಾರದು; ಉಳಿದ ರಕ್ಕಸರು ದೂರವಾಗಿ ಪೋಗಿರುವವರಿಂ, ಅವರಂ ಸನ್ನೆಯಂ ಮಾಡಿ ಕರೆಯುವಪಕ್ಷಾದರು ನಾವ ಕಾಶವಾಗುವದೆಂದರಿತು ಅಯ್ಯಾ ರಾಕ್ಷಸಾಧಿಪತಿಯೆ! ಈ ತುಂಟಗಜವಂ ವಶಗೊಳಿಸುವ ಮೂಲಿಕಾ ಸಮುದಾಯವು ಈ ವನದೊಳ್ ಹೇರಳ ವಾಗಿರುವದು, ಆದ್ದರಿಂ ಅದಂ ಸಾಧಿಸಬಹುದು ಆಗ್ರಹವಂ ಬಿಟ್ಟು ಬಾ ರೆಂದು ಉಗ್ರಬಾಹುವಂ ಹಸ್ತವಂ ಪಿಡಿದು ದೂರದೊಳಿರುವ ಮಾತೊಂ ದು ಗಿರಿಶಿಖರವಂ ನೈದಿಸಿ ಅಯ್ಯಾರಾಯನೇ! ಈಗ ಈ ಮದ್ದಾನೆಯಂ ನೋಡುವನಾಗು, ಎನಲಾ ಮಹಾಗಜವು ಹೆಚ್ಚಿ ಬರುವ ವರ್ಷಾಕಾಲಮೇ ಘದಂತೆ ಬೆಳೆದು ಗಿರಿಶಿಖರಕ್ಕಿಂತಲೂ ಇಮ್ಮಡಿಯಾಗಿ ಕಾಣಿಸುತ, ಕೊಂ ಬುಗಳಿಂ ಆ ಗಿರಿಶಿಖರವಂ ವಿರಾಟುತ್ತಿರಲು; ಆ ಗಜದ ಉತ್ಸಾಹವಂ ನೋಡಿ ಉಗ್ರಬಾಹುವು ವಿಸ್ಮೈ ಮಂತ್ರಿಯೆ! ಇದು ಗಜವಲ್ಲ ರಾಕ್ಷಸ ಕುಲವಂ ನಾಶಗೊಳಿಸಲೋಸುಗ ಗಜರೂಪವಂತಾಳಿ ಬಂದ ಮೃತ್ಯು ವೆಂದು ಪೇಳಬೇಕು, ಇನ್ನೇನುಗತಿಯು, ಗಿರಿಶಿಖರವಂ ವಿಹಾಟುತ್ತಲಿದೆ, ನೇನೆ ವಿನಾಗುವದೋ, ನನಿಗ್ಯಾಕೆ ಈ ದುರ್ಬುದ್ಧಿ ಉಂಟಾಯಿತೋ ಎಂದು ಪೇಳುತಿರುವ ಸಮಯದೊಳ್ ನದೀವನ ಸಮೇತವಾದ ಗಿರಿಶಿ ಖರವಂ ವಿಹಾಟಿಸುವ ರಭಸದಿಂ ಕೋಟಿ ಸಿಡಿಲುಗಳು ವಿಕವಾಗಿ ಭೂಮಿ ಯುಂ ಇಬ್ಬಗಿಸುವಂತೆ ಘೋರವಾದ ಶಬ್ದವುಂಟಾಗಲು, ಅದರಿಂ ಪ್ರಾ ಣಿಸಮೂಹವೆಲ್ಲವು ಭಯದಿಂ ಮೂರ್ಛೆಗೊಂಡು ನೆಲವಂ ಕಚ್ಚಿರಲು; ಆಗಲಾಮದ್ದಾನೆಯು ಕೊಂಬಿನಿಂ ವಿಹಾಟದ ಗಿರಿಶಿಖರವಂ ಸೊಂಡಲಿನಿಂ ತೆಗೆದುಕೊಂಡು ನೋಡಿ ತೂಗಿ ಗುಂಪುಕೂಡಿರುವ ರಾಕ್ಷಸರಮೇಲೆ ಎಸೆಯಲು, ಗಿರಿಶಿಖರವು ಭೋರಿಡುತ ಬಂದು ರಕ್ಕಸರ ಗುಂಪಿನಮೇಲೆ

ಬೀಳಲು, ಅದರಿಂ ಆ ಪ್ಲಕ್ಷದ್ವೀಪವೆಲ್ಲ ಪ್ರಕ್ಷುಬ್ಧಮುಮಾಗಲು, ಮತ್ತು ಆ ಭೂಭಾಗವೆಲ್ಲವು ಉಯ್ಯಾಲೆಯಂತೆ ಎರಡುಮೂರ್ಪೂರ್ತ ತೂಗುತ್ತಿರಲು, ಶಿಡಿಗೆ ಸಿಕ್ಕಿದ ಇಲಿಗಳಂತೆ ಆ ರಕ್ಕಸರೆಲ್ಲರೂ ಭೂತಲದೊಳಡಗಿ ಹತರಾಗಲು; ಅದಂನೋಡಿ ಉಗ್ರಬಾಹುವು ಉರಸ್ತಾಡನವಂಗೈಯುತ ಮೂರ್ಛಿತನಾಗಲು, ಆಗ ಶಂಕುಕರ್ಣನು ಶೈತ್ಯೋಪಚಾರದಿಂ ಮೂರ್ಛೆಯಂ ತಿಳುಹಿಸಿ, ಐಯ್ಯಾ! ರಾಕ್ಷಸರಾಯನೇ ಆಪತ್ತು ಸಂಭವಿಸಿದ ಕಾಲದಲ್ಲಿ ಪ್ರಭುವಾದವನು ಧೈರ್ಯಹೀನನಾದರೆ ಉಳಿದವರ ಬಾಳು ಏನಾಗಬೇಕು, ನೀನಾದರೂ ಕ್ಷೇಮವಂತನಾದೆಯಲ್ಲಾ, ಮೀರಿ ಹೋದ ಕಾರ್ಯಕ್ಕೆ ಮಿಡುಕಿ ಫಲವೇನು ವ್ಯಸನವಂಬಿಡೆಂದು ಹೇಳಲು;

ಆ ಕಾಲದೊಳ್‌ಗಿರಿಶಿಖರವಂ ವಿರಾಟ ಬಿಸುಟದ್ದರಿಂದ ರಕ್ಕಸರೆಲ್ಲರೂ ಮೃತರಾದರೆಂದು ತಿಳಿದು ಮದ್ದಾನೆಯು ಎಂದಿನಂತೆ ಹೆಣ್ಣಾನೆಗಳಂ ಸಂಧಿಸುವ ಕುತೂಹಲದಿಂದ ಭೂಮಿಯಂ ಸೋಂಕದೆ ಬರುತ್ತಿರಲದಂನೋಡಿ ಉಗ್ರಬಾಹುವು ಎಲೈ ಮಂತ್ರಿಯೆ! ಮಹಾಗಜವು ಭೂಮಿಯಂ ಸೋಂಕದೆ ವೇಗದಿಂಬರುತಲಿದೆ ಇದೇನು ಚೋದ್ಯವೆಂದು ಕೇಳಲು, ಆಗ ಮಂತ್ರಿಯು ಎಲೈ ರಾಯನೇ! ಇದು ಅಮಾನುಷಗಜವಾದದ್ದರಿಂ ಗಿರಿಯಂ ವಿರಾಟ ರಕ್ಕಸರಂ ಸಂಹರಿಸಿತು, ವಿವೇಕ ಯಂ ಮಾಡದೆ ಕೆಣಕಿದುದರಿಂದ ಈ ಆಪತ್ತು ಸಂಭವಿಸಿತು. ಇಲ್ಲಿಯೂ ಇರಕೂಡದು, ಸ್ವಸ್ಥಾನವನ್ನೈದುವನಾಗು ಎಂದು ಹೇಳಲು; ಉಗ್ರಬಾಹುವು ಜಯವಂ ಸಂಪಾದಿಸಬೇಕೆಂದುಪೋಗಿ ಪರಾಜಯವಂ ಹೊಂದಿ ಹ್ಯಾಗೆ ಜನಗಳಿಗೆ ಮುಖವಂ ತೋರಿಸಲಿ, ನಾನೊಂದೆಣಿಸಿದರೆ ತಾನೊಂದಾಯಿತು, ಬಹುಕಾಲದಿಂದ ಅಸಹಾಯಶೂರರಾದ ರಾಕ್ಷಸಭಟರೆಲ್ಲರು ಒಂದು ತುಂಟಗಜದಿಂ ಹತರಾಗಿ ಲೋಕಾಪವಾದಕ್ಕೆ ಗುರಿಯಾದಬಳಿಕ, ನಾನು ಲಜ್ಜಾರಹಿತನಾಗಿ ಸ್ವಸ್ಥಾನವಂ ಹೊಂದುವದಕ್ಕಿಂತಲೂ ಮರಳಿಬಂದು ಮತ್ತು ಈ ಆನೆಯೊಡನೆ ಸೆಣಸಿ ಪ್ರಾಣವನಾದರೂ ಬಿಡುವೆನೆಂದು ಪೇಳಲು, ಆ ಮಾತಂ ಕೇಳಿ ಶಂಕುಕರ್ಣನು ಐಯ್ಯಾ ರಾಕ್ಷಸರಾಜನೆ ನ್ಯಾಯಾನ್ವದೋಂದು ಕಾಡಾನೆಯಿಂದ ಪ್ರಾಣವಂ ಹೋಗಲಾಡಿಸಿಕೊಂಡರೆ ಜಗತ್ತಾನೆ ಏನು ಯುಕ

ಸ್ಸಂಟಾಯಿತು, ಆದ್ದರಿಂ ಅಮಾನುಷಗಜವಂ ವಶಗೊಳಿಸುವದಕ್ಕೆ ತಕ್ಕ ಪ್ರಯತ್ನವಂಮಾಡಿ ಸಾಧಿಸಿದರೆ ಲೋಕಾಪವಾದಪ್ರತೀಕಾಲಗಿಯಶಸ್ಸು ಉಂಟಾಗಿ ಈ ದ್ವೀಪಾಧಿಪತ್ಯವಂ ಮಾಡುತ ಯಶೋವಂತನಾಗಿರುವೆ ಎಂದು ಪೇಳಲು; ಉಗ್ರಬಾಹುವು ಪನ್ಯೈ ! ಮಂತ್ರಿಯೆ ಯಶೋವಂತನಾಗುವೆ ಎಂದು ಆಶೆಯಂತೋರಿಸುವೆ! ಪ್ರಾಣವಂ ರಕ್ಷಿಸಿ ಕರತಂದವನಾದುದರಿಂದ ನಿನ್ನಂ ಪ್ರಾಣಾಪ್ತನೆಂದು ತಿಳಿದಿರುವೆನು, ಸೇನೆಯು ನಷ್ಟವಾದನಂತರ ಏನು ಯತ್ನ ಸಾಗುವದೆಂದು ಪೇಳಲು, ಮಂತ್ರಿಯು, ರಾಯಾನೇ! ಸೇನೆಯು ಹೊರಟಾಗಲೇ ಅದರ ಆಶೆಯಂ ಬಿಟ್ಟೆನು, ಭೀಮಂಡನಂನೋಡಿದಾಗ ನಿಶ್ಶೇಷವಾಗಿ ಆಶೆಯಂ ಬಿಟ್ಟೆನು, ಹೋದಮಾತಿಗೆ ಹೇಳಿ ಫಲವೇನು, ಸ್ವಸ್ಥಾನವಂನ್ನೈದುವದಕ್ಕೆ ಲಜ್ಜೆ ಉಂಟಾದರೆ, ರಸಾತಲದೋಳ್ ರಾಕ್ಷಸ ಕುಲಪುರೋಹಿತರಾದ, ಮಾರೀಚ, ವಿದ್ಯುಜ್ಜಿಹ್ವ, ಕಾಲನೇಮಿ ಮೊದಲಾದ ಮಾಯಾವಿದ್ಯಾವಿಶಾರದರಾದ ರಾಕ್ಷಸರಿಗೆ ವಿದ್ಯಾಗುರುಗಳಾದ, ಶವಭಕ್ಷಕ, ಮೇದೋಹೋತ್ರ, ಶೌಷ್ಕಲಕರೆಂಬ ಬ್ರಹ್ಮರಾಕ್ಷಸರಿರುವರು, ಅವರು ಮಹಾಸಿದ್ಧಿಯಂ ಸಂಪಾದಿಸಿ, ರಾವಣಾದಿಗಳು ಮಾಡುವ ನಿಕುಂಭಿಳಾ ಯಾಗಕ್ಕೆ ಆಧ್ವರ್ಯವಂಮಾಡಿದವರು, ಅವರ ಉಪಾಸನೆಯಿಂದ ನೆನೆದ ಕಾರ್ಯವೆಲ್ಲ ಕೈಗೂಡುವದು, ಆದ್ದರಿಂ ಅವರ ಸಮೀಪವನ್ನೈದುವನಾಗು, ಮತ್ತೂ ನಮಗೆ ಪ್ರಿಯಮಿತ್ರರಾದ, ನರಾಂತಕ, ಹ್ರಸ್ವಕರ್ಣ, ವಿದ್ಯುನ್ಮಾಲಿಗಳು ನಷ್ಟರಾದ ಬಳಿಕ ಮಾಯಾವಿದ್ಯವಂ ಶ್ರಮದಿಂ ಸಂಪಾದಿಸಬೇಕಾಯಿತು, ಶುಕ್ರಾಚಾರ್ಯರಾದರೋ, ಕಶ್ಯಪಕುಲೋತ್ಪನ್ನರಾದ ದೈತ್ಯಸಂಘಕ್ಕೆ ಗುರುಗಳಾದ್ದರಿಂದ ಪುಲಸ್ತ್ಯವಂಶಸ್ಥರಾದ ರಾಕ್ಷಸರಿಗೆ ಸಮರ್ಪಕವಾಗಿ ವಿದ್ಯೆಯಂ ಹೇಳುವರಲ್ಲ, ಆದ್ದರಿಂ ಶೌಷ್ಕಲಕನಂಶರಣುಹೊಕ್ಕುಮನೋಭೀಷ್ಟವಂ ಸಂಪಾದಿಸಬೇಕಾಯಿತೆಂದು ಹೇಳಲು, ಅದಂಕೇಳಿ ಉಗ್ರಬಾಹುವು ಐಯ್ಯಾ ಮಂತ್ರಿಯೇ, ಶುಕ್ರಾಚಾರ್ಯರು, ಶತ್ರುಗಳ ಮಂತ್ರಿಯಾದ ಬೃಹಸ್ಪತಿ ಕುಮಾರಂಗೆ ವಿದ್ಯೆಯಂ ಹೇಳಿದವರಾದ್ದರಿಂದ ಅವರ ಶಿಷ್ಯರಾದ ದೈತ್ಯರಿಗೆ ಮಿತ್ರರಾಗಿರುವ ನಮ್ಮಂಥಾವರಿಗೆ ವಿದ್ಯೆಯಂ ಪೇಳುವ

ದರಲ್ಲಿ ಸಂಶಯ ಉಂಟೇ ಎನಲು, ಶಂಕುಕರ್ಣನು ಅಯ್ಯೋ ರಾಕ್ಷಸರಾಯನೇ, ಪುತ್ರಿಯಾದ ದೇವಯಾನಿಯ ನಿರ್ಬಂಧದಿಂದಲೂ, ಕಚನುಮಾಡುವ ಅಕುಟಿಲಭಕ್ತಿಯಿಂದಲೂ, ಅಸುರರು ಆ ಕಚನಲ್ಲಿ ಮತ್ಸರವನ್ನೆಣಿಸಿ, ಅವನು ಭಸ್ಮವಂ ಮಾಡಿ ಆ ಭಸ್ಮವಂ ಮದ್ಯದೊಳ್ ಕದಡಿ ಕುಡಿಸಲು, ಅದಂ ತಿಳಿಯದೆ ಪಾನಂಗೈದ ಶುಕ್ರಾಚಾರ್ಯರು, ಕಚನಂ ತಮ್ಮ ಉದರದಲ್ಲಿರುವನೆಂಬುದಾಗಿ ತಿಳಿದು ಸತ್ತ್ವವಂತನಾದ ಆ ಕಚನು ತಮ್ಮ ಆಜ್ಞೆಯಿಂ ತಮ್ಮ ಉದರವಂ ಭೇದಿಸಿಕೊಂಡು ಬಂದಬಳಿಕ ತಮ್ಮಂ ಬದುಕಿಸುವನೆಂದು ನಿಶ್ಚಯಿಸಿ, ಮೃತಸಂಜೀವಿನೀ ವಿದ್ಯೆಯಂ ಉಪದೇಶವಂಗೈದು ಅವನು ಬದುಕಿಸಿ ತಾವೂ ಬದುಕಿದರಲ್ಲದೆ ಶಿಷ್ಯಸಾಮಾನ್ಯರಿಗೆ ಹೇಳದವರಲ್ಲವೆಂದು ಹೇಳಲು ; ಉಗ್ರಬಾಹುವು ಎಲೈ ! ಶಂಕುಕರ್ಣನೆ! ಶಿಷ್ಟರಾದ ಶುಕ್ರಾಚಾರ್ಯರು, ಬ್ರಾಹ್ಮರಿಂ ಸ್ಮರಿಸಲಯೋಗ್ಯವಾದ ಮದ್ಯವಂ ಎಂತು ಪಾನವಂಗೈದರೆನಲು, ಶಂಕುಕರ್ಣನು ಅಯ್ಯಾ ರಾಕ್ಷಸಾಧಿಪನೆ! ದೈತ್ಯಗುರುವಾದ ಶುಕ್ರಾಚಾರ್ಯನು ಅಂದುಮೊದಲುಗೊಂಡು ಬ್ರಾಹ್ಮಣನು ಮದ್ಯಪಾನವಂಗೈದರೆ ಪತಿತನಾಗಲಿ ಎಂದು ಶಪಿಸಿದನು, ಆ ಮಾತಿಗೆ ಬ್ರಹ್ಮಾದಿಗಳು ಸಮ್ಮತರಾದರು ಎಂದು ಹೇಳಲು, ಉಗ್ರಬಾಹುವು ಎಲೈ ಮಂತ್ರಿಯೆ! ಇಷ್ಟು ವಿವರವಂ ತಿಳಿದು ಹೇಳಿದಬಳಿಕ ನಿನ್ನ ಮಾತಂ ಮೀರಿ ನಡೆಯುವವನಲ್ಲ, ನನ್ನ ಮನೋರಥವೆಲ್ಲವೂ ನಿನ್ನ ಅಧೀನವೆಂದು ಹೇಳುತ್ತಿರಲು ; ಅಷ್ಟರೊಳ್ ಸೈನ್ಯಕ್ಕೆ ಅನ್ನೋದಕವಂ ತಂದುಕೊಡುವದಕ್ಕೆ ಪೋಗಿದ್ದ ರಾಕ್ಷಸರು ಗಡದಿಂ ತಮ್ಮ ಸೇನೆಯು ನಷ್ಟವಾದುದಂ ತಿಳಿದು ರಾಕ್ಷಸನಾಯಕನೆಲ್ಲಿಹನೋ ಎಂದು ಹುಡುಕುತ್ತ ಬರುತ್ತಿರಲು, ಉಗ್ರಬಾಹುವು ಅವರಿಂದೊಡಗೂಡಿ ಆ ಸ್ಥಳವಂಬಿಟ್ಟು ಶಂಕುಕರ್ಣಸಮೇತನಾಗಿ ರಸಾತಲವನ್ನೈದುತ್ತಿರಲು; ಇತ್ತಲಾ ಆ ದ್ವೀಪದ ಅರಸುಗಳೆಲ್ಲರೂ ಭೂಕಂಪನವಾದುದಂನೋಡಿ ಶಾಂತಿಯಂ ಮಾಡುತ್ತಿರಲು ;

ಅತ್ತಲಾ ಉಗ್ರಬಾಹುವು ರಸಾತಲವನ್ನೈದಿ ಶಾಷ್ಕಲರಿರುವ ಸ್ಥಾನವಂ ವಿಚಾರಿಸಿಕೊಂಡು ಪೋಗಿ ಅವರಂಕಂಡು ನಾನಾ

ವಿಧವಾದ ರತ್ನಗಳಂ, ದುರ್ಲಭವಾದ ವಾಹನಗಳಂ, ವಸ್ತ್ರಮಾಲ್ಯಗಳಂ ಮುಂದಿರಿಸಿ ನಮಸ್ಕರಿಸಿ ಮಂತ್ರಿಯೊಡಗೂಡಿ ನಿಂತಿರಲು, ಅವರಂನೋಡಿ ಶೌಷ್ಕಲಕನು ಏನಿರ್ಯೆ ನೀವ್ಯಾರೆಂದೆನಲು, ಶಂಕುಕರ್ಣನು ಸ್ವಾಮಿಾ ಈ ರಾಜನು, ಪಾತಾಳಲೋಕವಾಸಿಯಾದ ಭೀಮಬಾಹುವಿಗೆ ಪುತ್ರನಾದ ಉಗ್ರಬಾಹುವು, ಈತನಿಗೆ ಮಂತ್ರಿಯಾದ ನನ್ನನ್ನು ಶಂಕುಕರ್ಣನೆಂದು ಹೇಳುವರು, ತಮ್ಮ ಪಾದವಂಕಂಡು ಕೃತಾರ್ಥರಾಗಬೇಕೆಂದು ಬಂದೆವೆನಲು,ಅದಂಕೇಳಿ ಶೌಷ್ಕಲಕನು ಏನುಕಾರ್ಯವಂಕುರಿತು ಬಂದಿರುವಿರಿ ಎನಲಾ ಶಂಕುಕರ್ಣನು ಸ್ವಾಮಿಾ, ಪೌರುಷದಿಂದೊಡಗೂಡಿ ಸಾಧನವಿಲ್ಲದೇಇರುವ ಈ ರಾಜನು ನಖದಂಷ್ಟ್ರಗಳಿಂದ ರಹಿತವಾದ ಮಹಾಸಿಂಹದಂತೆ ವ್ಯಸನಪಡುತ, ಶೂರರಾಕ್ಷಸರಿಗೆ ಪರಮಸಾಧನವಾದ ಮಾಯಾವಿದ್ಯವಂ ಸಂಪಾದಿಸಲೋಸುಗ ಬಂದಿರುವನು ಎಂದು ಬಿನ್ನೈಸಲು; ಅದಂಕೇಳಿದ ಶೌಷ್ಕಲಕರು ಎಲೈ ರಾಜನೆ ನಿನ್ನ ತಂದೆಯಾದ ಭೀಮಬಾಹುವು ನಮಗೆ ವಿಶೇಷ ಸತ್ಕಾರವಂ ಮಾಡಿರುವನು, ಆದ್ದರಿಂ ಆವನ ಪುತ್ರನಾದ ನೀನು ಬಯಸಿದುದಂ ಪೇಳುವೆನು ಕೇಳು, ಒಂದು ಸಂವತ್ಸರ ವ್ರತಸ್ಥನಾಗಿರೆಂದುಪೇಳಿ, ಬಳಿಕ ಮುಂಡನವಂ ಮಾಡಿಸಿ, ಗೋಚರ್ಮವಂ ಪೊದ್ದಿಸಿ, ಆಚರಿಸುವ ನಿಯಮವಂ, ಮತ್ತು ಮಯಾಸುರನಿಂದಾಚರಿಸಲ್ಪಟ್ಟ ಸಂಪ್ರದಾಯವಂಕೂಡ ಪೇಳಿ ಮಂತ್ರೋಪದೇಶವಂಮಾಡಿ, ಅಕ್ಷರಲಕ್ಷಸಂಖ್ಯೆಯಿಂ ನಿರ್ಜೀವಮನುಷ್ಯವಾಹನನಾಗಿ ಜಪವಂಮಾಡುತ ನಿತ್ಯದಲ್ಲಿಯೂ ಈ ಮಂತ್ರಸಿದ್ಧಿಗೋಸುಗ ಉಕ್ತವಾದ ದ್ರವ್ಯಗಳಿಂ ಹೋಮತರ್ಪಣಗಳಂ ಮಾಡುತ್ತಿರು, ಮಂತ್ರಸಿದ್ಧಿಯಾಗಿ ನಿದರ್ಶನಕ್ಕೆ ಬರುವದು ಎಂದುಹೇಳಿ ಕಳುಹಿಸಲು;

ಬಳಿಕ ಉಗ್ರಬಾಹುವು ಶೌಷ್ಕಲಕರ ಆಜ್ಞಾನುಸಾರವಾಗಿ ಅಚಲಚಿತ್ತನಾಗಿ ಜಪಹೋಮಗಳಂಮಾಡುತ ಒಂದುಸಂವತ್ಸರಪರ್ಯಂತರ ವ್ರತಸ್ಥನಾಗಿದ್ದು ಕಾಲಕಾಲದಲ್ಲಿ ನೆನೆದ ಕಾರ್ಯ ಲಭಿಸುವದಕ್ಕೆ ಪ್ರತ್ಯಕ್ಷ ಪರೋಕ್ಷದಲ್ಲಿ ನಿದರ್ಶನ ಉಂಟಾದ್ದಂ ಶೌಷ್ಕಲಕರಿಗೆ ತಿಳುಹಿಸಲವರು ಸಿದ್ಧಿಉಂಟಾಗುವದೆಂದು ಮನದೊಳ್ನೆನೆದು ಜಪಸಾಂಗವಾಗಲೋಸುಗ

ಯುಂ ಮಹಾಶಿ ನಸಾದನಾವಿದ್ಯವಂ ಸಂಪಾದಿಸಿದವನಾದರೂ, ಪ್ಲಕ್ಷದ್ವೀಪ ವಾಸಿಯಾದ ಆ ಮಹಾಗಜವಂ ವಶಪಡಿಸಿಕೊಳ್ಳುವದಕ್ಕೆ ಉಪಾಯವೇ ನೆಂದು ಕೇಳುವನು, ಆ ಗಜವಾದರೋ, ಚತುರ್ದಂತಗಳಿಂ ಕೂಡಿ ಸ್ಫಟಿಕಸದೃಶವಾಗಿ, ಸುಲಕ್ಷಣಬಿಂದುಗಳಿಂ ಯುಕ್ತವಾಗಿ, ಅಂತರೀಕ್ಷಗಾಮಿಯಾಗಿ, ಇರುವದರಿಂದ, ಯಾವನಿಮಿತ್ತದಿಂದಲೋ ಐರಾವತಪ್ರಭೂಮಿಯಂ ಕುರಿತು ಬಂದು ಇಕ್ಷುಸಾಗರದ ತೀರದೊಳಿರುವ ಇಕ್ಷುವನವಂ, ಸುಂದರಗಳಾದ ಹೊಂಗೊನೆಗಳಂ, ಕ್ರೀಡಾಯೋಗ್ಯವಾದ ಮಹಾಸರೋವರವಂ ಕಂಡು ನೋಡಿ, ಇದು ವಾಸಯೋಗ್ಯವೆಂದರಿತು, ಸ್ವರ್ಗವಾಸಸೌಖ್ಯವಂ ಮರೆತು ವಿಹರಿಸುತ್ತಲಿರುವದು, ಅದು ರಾಕ್ಷಸರ ಬಲಾತ್ಕಾರಕ್ಕೆ ವಶವಾಗುವದುಂಟೆ, ಅಥವಾ ವಶವಾಗಬೇಕಾದರೆ, ಆ ಗಜಕ್ಕೆ ಒಡೆಯನಾದ ದೇವೇಂದ್ರನ ರೂಪದರ್ಶನದಿಂದಲ್ಲದೆ ಮತ್ಯಾವ ಉಪಾಯದಿಂದಲೂ ವಶವಾಗುವದಿಲ್ಲವೆಂದು ಯೋಚಿಸಿ, ಉಗ್ರಬಾಹುವಂ ಕುರಿತು ಐಯ್ಯಾ ರಾಕ್ಷಸರಾಯನೇ, ಸ್ವಲ್ಪಕಾರ್ಯವಿಶೇಷವಿರುವದು ಹೋಗಿಬರುವೆನೆಂದು ಪೇಳಿ ಅಲ್ಲಿಂದ ಪೊರಟು ಬಲಿಸದನವನ್ನೈದಿ ಅಲ್ಲಿ ದೇವಾಸುರಯುದ್ಧವಂ ಪ್ರತ್ಯಕ್ಷವಾಗಿ ನೋಡಿರುವ ಶಿಲ್ಪಿಗಳು ಶಾಸ್ತ್ರೋಕ್ತವಾಗಿ ಬರೆದಿರುವ ಸಪರಿವಾರನಾದ ದೇವೇಂದ್ರನ ಭಾವಚಿತ್ರವಂ ನೋಡಿ ಅದಂ ಬರದುಕೊಂಡುಬಂದು ಉಗ್ರಬಾಹುವಿನ ಸಮೀಪವನ್ನೈದಿ ಅವನೊಡಗೂಡಿ ಪಾತಾಳಲೋಕಕ್ಕೆ ಬಂದು ಅಲ್ಲಿ ಸ್ವಲ್ಪಕಾಲವಿದ್ದು, ತಿರಿಗಿ ರಾಕ್ಷಸಸಂಘವಂ ಕೂಡಿಸಿಕೊಂಡು ಪ್ಲಕ್ಷದ್ವೀಪಕ್ಕೆ ಬಂದು ಉಗ್ರಬಾಹುವಂ ಕುರಿತು, ಐಯ್ಯಾ! ರಾಯನೇ ಯಾವಸಾಹಸದಿಂದಲಾದರೂ ಇಲ್ಲಿರುವ ಮದಗಜವಂ ಸಾಧಿಸಬೇಕೆಂದು ನಿನಗೆ ಮನೋರಥವಿರುವಪಕ್ಷ, ಈ ಗಜದ ಲಕ್ಷಣವಂ ವಿಚಾರಿಸಿನೋಡಿದರೆ ಯಾವಕಾರಣದಿಂದಲೋ ಐರಾವತಪ್ರಭೂಲೋಕಕ್ಕೆ ಬಂದಿರುವದು ಸಂಶಯವಿಲ್ಲ, ಇದಂ ವಶವಂ ಮಾಡಿಕೊಳ್ಳಬೇಕಾದರೆ ದೇವೇಂದ್ರನ ರೂಪವಂ ಧರಿಸಿ ಕಾಣಿಸಿಕೊಂಡಲ್ಲದೆ ವಶವಾಗದು, ಆದ್ದರಿಂ ಆ ದೇವೇಂದ್ರನಂ ಕಂಡು ಅವನರೂಪದಂತೆ ರೂಪವಂ ಧರಿಸುವದಕ್ಕೆ ಆತನು ಎಲ್ಲಿರುವನೋ, ನಮ್ಮಂಥಾವರಿಗೆ ಸ್ವರ್ಗವು ದು

ಗರಾಗಿಪ್ಪ, ಮತ್ತು ಶಿಕ್ಷಣದಕ್ಷನಪ್ಪ ಮಲ್ಲಯುದ್ಧವಾದುದರಿಂದ ಪರಿವಾರಂ, ನೇತ್ರನಾದ ದೇವೇಂದ್ರನಂ ನೋಡಿ ಚಾಕ್ಷುಷಶಿಲ್ಪಿಗಳು ಭಿತ್ತಿಯ ಪಟದಲ್ಲಿ ಬರೆದಿರುವ ಆತನ ಭಾವಚಿತ್ರವಂ ನೋಡಿ ಅದೇ ಪರಿಯಾಗಿ ಬದಲುಕೊಂಡು ಬಂದು ಇರುವೆನು, ಇದಂ ನೋಡಿ ಶಾಪಸ್ಫುಲಿಕರಿಂದ ಉಪದಿಷ್ಟನಾದ ಮಂತ್ರವಂ ಧ್ಯಾನಿಸುತ ದೇವೇಂದ್ರನಂತಾಗಿ, ಮತ್ತು ನಿನ್ನ ಪರಿವಾರಕ್ಕೆ ಆತನ ಪರಿವಾರದಂತೆ ರೂಪವನ್ನುಂಟುಮಾಡಿ ವಂದಿಗಳಿಂ ಸ್ತೋಗಳಿಕೆಯೊಳ್ತೂತ ಪೋದರೆ ಆ ಐರಾವತವು ತನ್ನ ಒಡೆಯನಾದ ದೇವೇಂದ್ರನು ತನ್ನಂ ಬಿಟ್ಟು ಇರಲಾರದೆ ಬಂದನೆಂದು ತಿಳಿದು ನಿನ್ನ ವಶವಾಗುವುದು ಎಂದು ಹೇಳಿ ಚಿತ್ರಪಟವಂ ತೋರಿಸಲು, ಉಗ್ರಬಾಹುವು ಅದಂ ಚೆನ್ನಾಗಿ ನೋಡಿ, ಮಂತ್ರಿಯಂ ಭೂರಿಭೂರಿಗೂ ಶ್ಲಾಘಿಸುತ, ಇಂದ್ರನ ಭಾವಚಿತ್ರದೊಳಲಂಕರಿಸಿರುವಂತೆ ವಸ್ತ್ರಾಭರಣಗಳಿಂದ ಅಲಂಕೃತನಾಗಿ, ತನ್ನ ಪರಿವಾರವಂ ಅವನ ಪರಿವಾರದಂತೆಯು, ಶಂಕುಕರ್ಣನಂ ಬೃಹಸ್ಪತಿಯಂತೆಯೂ ಅಲಂಕರಿಸಿ, ತನ್ನ ಗುರುವಂ ಮನದೊಳ್ ನೆನೆದು ಇಂದ್ರನರೂಪವಂ ಧ್ಯಾನಿಸಲಾ ಮಂತ್ರಪ್ರಭಾವದಿಂದ ತಾನು ಸಾಕ್ಷಾದ್ದೇವೇಂದ್ರನಂತೆ ಜನಗಳಿಗೆ ಕಾಣಿಸುತ್ತಿರಲು; ಪರಿವಾರವೆಲ್ಲವಂ ಸ್ಪೃಶಿಸಿ ಊದಿದಮಾತ್ರದಿಂ ಅವರೆಲ್ಲರೂ ಇಂದ್ರನ ಪರಿವಾರದಂತಾಗಲು; ಆಗ ವಂದಿಮಾಗಧರು ದೇವೋತ್ತಮನೆ! ಜಯವೆಂದು ಪೊಗಳಲು; ಅವರಿಂದೊಡಗೂಡಿ ಹೊರಟು ಸರೋವರ ಸಮೀಪದಲ್ಲಿ ಸಲ್ಲಕೀವೃಕ್ಷದ ಚಿಗರುಗಳಂ ಮೆಲ್ಲುತ್ತಿರುವ ಐರಾವತವಂ ಕಂಡು ಸ್ವಲ್ಪದೂರದಲ್ಲಿ ನಿಂದಿರಲು, ವಂದಿಮಾಗಧರು, ಜಯಸುರಾಧಿಪನೆ! ದಾನವದರ್ಪಘ್ನನೇ! ತ್ರಿಲೋಕಾಧಿಪತಿಯೇ! ಐರಾವತಾರೂಢನೇ! ಜಯವೆಂದು ಪೊಗಳುತ್ತಿರಲು; ಅದಂ ಕೇಳಿ ಐರಾವತವು ಅವನಂ ನೋಡಿ ದೇವೇಂದ್ರನೆಂದು ತಿಳಿದು ಪರಿವಾರವೆಲ್ಲವಂ ನಿರೀಕ್ಷಿಸುತ ಒಡೆಯನಾದ ದೇವೇಂದ್ರನು ತನ್ನಂ ಸಂತೈಸಲು ಬಂದನೆಂದು ಕಂಬನಿಗಳಂ ತುಂಬುತ, ಸೊಂಡಿಲನ್ನೆತ್ತಿ ಕುಂಭಸ್ಥಳದಲ್ಲಿಟ್ಟು ಬಾಗಿದ ಶಿರಸ್ಸಿನಿಂದಭಿವಂದಿಸುತ್ತಿರಲು; ಅದಂ ನೋಡಿ ಉಗ್ರಬಾಹುವು ತಾನು ಕಪಟದೇವೇಂದ್ರನಾದರೂ ಕಂಬನಿಗೊಳ್ಳುತ್ತಿರಲು,

ಮಾವುತನು ಅಂಕುಶವಂಪಿಡಿದು ಆ ಮಹಾಗಜದ ಸಮೀಪವನ್ನೈದಿ ನಿಬ್ಬ
ದಡಸಿ ಸ್ತೋತ್ರಮಂ ಮಾಡುತ್ತಿರಲಾಗಜವು ಆ ಮಾವುತನಂ ತನ್ನ ಪಕ್ಕ
ಸುಕೆತ್ತಿಳಿಸು ಸೊಂಡಲಿನಿಂ ಮೈದಡವುತ್ತಿರಲು, ಆಗಲಾ ಮಾವುತನು ಆ
ದರ ಸೊಂಡಲಂ ಪಿಡಿದು ಮುಂದಕ್ಕೆ ಬರುವಂತೆ ಸನ್ನೆಯಂ ಮಾಡಿದ
ಮಾತ್ರದಿಂದಲೇ ಸಮ್ಯಗ್ಭಾವದಿಂ ಕೂಡಿ ಕಪಟದೇವೇಂದ್ರನ ಬಳಿಯ
ಲ್ಲಿ ಬಂದು ನಿಲ್ಲಲು; ಆಗ ಕಪಟದೇವೇಂದ್ರನಾದ ಉಗ್ರಬಾಹುವು ಗಜ
ವು ವಶವಾಯಿತೆಂದು ತಿಳಿದು, ಆ ಗಜಕ್ಕೆ ಮುತ್ತಿನ ಉಲಾರವಂ ಹೊದ್ದಿಸಿ,
ಪಚ್ಚೆ ಬಾವುಲಿಗಳಿಂದಲೂ, ರತ್ನದ ದಂಡೆಗಳಿಂದಲೂ, ಚಿನ್ನದ ಕಾಲ್ಕಡಗಗ
ಳಿಂದಲೂ, ಸ್ವರ್ಣದ ಸರಪಣಿಗಳಿಂ ಕೂಡಿದ ಘಂಟೆಗಳಿಂದಲೂ, ಅಲ್ಲಲ್ಲಿ
ಕಿರುಘಂಟೆಗಳಂ ಕಟ್ಟಿರುವ ಗೆಜ್ಜೆ ಸರಗಳಿಂದಲೂ ಅಲಂಕರಿಸಿ, ಕಪೋ
ಲಂಗಳಲ್ಲಿ ಚಿತ್ರಪತ್ರಗಳಂ ಬರೆದು, ರತ್ನದ ಚಂದ್ರಸೂರ್ಯ ಮುತ್ತಿನ
ಬಟ್ಟುಗಳನ್ನಿಟ್ಟು, ಕುಂಭಸ್ಥಳಗಳಿಗೆ ಸಿಂಧೂರವಂ ಲೇಪಿಸಿ, ಪುಷ್ಪಮಾ
ಲೆಗಳಂ ಹಾಕಿ, ಇಕ್ಷುಖಂಡ ಮೊದಲಾದ ಭಕ್ಷಣಪದಾರ್ಥಗಳಂ ಮುಂದಿ
ರಿಸಿ ಮಂಗಳಾರತಿಯಂ ಮಾಡುತ್ತಿರಲು; ಬಳಿಕ ಇಂದ್ರವೇಷದ ಉಗ್ರ
ಬಾಹುವು ಐರಾವತಕ್ಕೆ ಪ್ರದಕ್ಷಿಣೆಮಾಡಿ ಮಾತಲಿಯುಂತಿರ್ಪ ಮಾವುತನ
ಹಸ್ತಾಲಂಬದಿಂ, ಬೃಹಸ್ಪತಿಯವೇಷಧರನಾದ ಶಂಕುಕರ್ಣನಿಂದೊಡಗೂಡಿ
ಗಜಾರೋಹಣಮಾಗಿ ಅಲ್ಲಲ್ಲಿ ತಿರುಗಾಡುತ್ತ ನಿತ್ಯದಲ್ಲಿಯೂ ಇದೇ ಪರಿ
ಯಾಗಿ ಸರೋವರವಂ ಪ್ರದಕ್ಷಿಣಂಗೈಯುತ್ತ ನಾಲ್ಕಾರು ದಿವಸ ಅಲ್ಲಿ
ಯೇ ಇರುತ್ತಿರಲು;

ಆಗ ಕಪಟದೇವತೆಗಳಾದ ರಾಕ್ಷಸರು ಒಬ್ಬೊಬ್ಬರಾಗಿ
ತಮ್ಮತಮ್ಮ ರೂಪಿನಿಂ ಐರಾವತಕ್ಕೆ ಕಾಣಿಸಿಕೊಂಡು ಆಹಾರವಂ ಕೊ
ಡುತ್ತ, ಅದಂ ಕಾಲಕಾಲದಲ್ಲಿ ಪೊಗಳುತ್ತ ಮೈದಡವುತ್ತ ಪರಿಪರಿ
ಭಕ್ಷ್ಯಗಳಂ ಕಬಳವಂ ಕಟ್ಟಿಕೊಡುತ್ತ, ಚಿಗುರುಗಳಂ ಹಾಸಗೆಯಂ ಮಾ
ಡಿಕೊಡುತ್ತ ಪಳಗಿಸುತ್ತಿರಲು, ಐರಾವತವು ಆ ರಾಕ್ಷಸರಂ ನೋಡಿ ಯಾ
ವಕಾರ್ಯಾರ್ಥವಾಗಿಯೋ ಒಡೆಯನಾದ ದೇವೇಂದ್ರನು ರಾಕ್ಷಸರ ಪರಿ
ವಾರವಂ ಕಟ್ಟಿಕೊಂಡು ಇರುವನೆಂದು ತಿಳಿದು, ಒಡೆಯ ಹೇಳಿದಂತೆ ಕೇ

ಅಲಂಕಾರವಾದ ತುರುಬಿನಂತೆ ಮಹಾಪ್ಲಕ್ಷವೃಕ್ಷ ಪ್ರಕಾಶಿಸುವದು, ಸಮೀಪಗತರಾದ ನೇತ್ರಗಳು ಯಾರುತಾನೇ ಇದರ ಉನ್ನತವಂ ಇಷ್ಟೆಂದು ಹೇಳುವಪಕ್ಕೆ ಶಕ್ತರಾದಾರು, ಮತ್ತು ಸಹಸ್ರಸಂಖ್ಯಾಯೋಜನೋನ್ನತವಾದ ಪಂಚಸ್ಕಂಧ ಶಾಖೋಪಶಾಖೆಗಳಿಂದ ಸ್ವರ್ಗವಂ ತಾಮುಕುವಂತೆ, ನಕ್ಷತ್ರಮಂಡಲವಂ ಪುಷ್ಪನಿಕರವಂಮಾಡಿಕೊಂಡು ಇರುವಂತೆ, ಸೂರ್ಯಚಂದ್ರಗ್ರಹಂಗಳೇ ಫಲಗಳಾಗಿರುವಂತೆ, ಅಂತರಾಳಲಗ್ನವಾದ ಮೇಘಮಂಡಲವೇ ಪರ್ಣನಿಕರವಾಗಿರುವಂತೆ ಕಂಗೊಳಿಸುವದರಿಂದ, ಈ ವೃಕ್ಷವಲ್ಲಿ ಉದ್ಭವಿಸಿದ ಒಂದೊಂದು ಫಲವು ಮನುಷ್ಯರ ಗೃಹಪ್ರಮಾಣವಿರುವದು, ಆ ಫಲವು ಭಕ್ಷಿಸುವ ಪ್ರಾಣಿಗಳಿಗೆ ಅಮೃತಸಮಾನವಾಗಿರುವದಲ್ಲದೆ ಆ ಫಲದ ರಸವೇ ಪ್ಲಕ್ಷವತೀ ಎಂಬ ನಾಮವಂಪಡೆದು ನದೀರೂಪದಿಂ ಇಕ್ಷುಸಾಗರದಲ್ಲಿ ಸಂಗತವಾಗುವದು, ಇಂತಿಪ್ಪ ಈ ಬಸರೀವೃಕ್ಷದಲ್ಲಿ ವಾಸವಂಮಾಡಿಕೊಂಡು ಫಲವಂ ಭಕ್ಷಿಸಿಕೊಂಡಿರುವ ಭೇರುಂಡ, ಶರಭ, ಸಾಳ್ವಮುಖ್ಯಗಳಾದ ಪಕ್ಷಿಗಳೂ ಇನ್ನೂ ಪ್ರಬಲಪ್ರಾಣಿಗಳು, ಮತ್ತು ಋಷಿಸಂಘಗಳುಕೂಡ ಆ ವೃಕ್ಷಛಾಯೆಯಲ್ಲಿ ಆಶ್ರಯಿಸಿಕೊಂಡು ಇರುವರು, ಇಂತಿರುವ ವೃಕ್ಷವಂ ಗರುಡನು ತನಗೆ ವಾಸಯೋಗ್ಯವೆಂದು ತಿಳಿದು ಈ ಸರೋವರದಲ್ಲಿ ಜಲಪಾನವಂಗೈದು ಪತ್ನೀರುಗಳಿಂದೊಡಗೂಡಿ ವಿಹರಿಸುತ ಈ ಮಹಾ ವೃಕ್ಷದೊಳ್ಕುಳಿತು ಫಲವಂಮೆಲ್ಲುತ, ತನಗೆ ವಾಸವಾದ ಪಾತಾಳಲೋಕದಲ್ಲಿ ಸಂಚರಿಸುತ ಇರುವದರಿಂದ ಇದಂ ವೈನತೇಯಸರೋವರವೆಂದು ಸ್ವಾಮೂದಕವೆಂದುಪೇಳುವರು, ಇಂತಲ್ಲದೆ, ಇಲ್ಲಿ ಇನ್ನೇನು ವಿಶೇಷವಿರುವದೋ ಪರೀಕ್ಷಿಸಲಶಕ್ಯವಾಗುದರಿಂದ ಈಮಾರ್ಗವಂಬಿಟ್ಟು ಪ್ರತ್ಯೇಕಮಾರ್ಗದಿಂ ತೆರಳಬೇಕೆಂದು ಪೇಳಲು, ಆ ಮಾತಂಕೇಳಿ ಉಗ್ರಬಾಹುವು ಸಮೀಪದಲ್ಲಿರುವ ಮಂತ್ರಿಯೊಡನೆ ಮಾತನಾಡುತ ಪ್ಲಕ್ಷವೃಕ್ಷವಂತೋರಿಸುತ, ಅಸುತಪ್ತವೆಂಬ ನದಿಯಂದಾಂಟಿ ಶಾಂತಭಯವೆಂಬ ನದಿಯಂದಾಂಟಿ ಶಾಂತಭಯವೆಂಬ ಖಂಡವಂಕುರಿತು ಬರುತ್ತಿರಲು; ಅತ್ತಲಾ ಆ ದ್ವೀಪಪ ಅರಸುಗಳು ಉಗ್ರಬಾಹುವು ರಾಕ್ಷಸಸಂಘಸಮೋ

ಮಿಯಮಂಕಂಬು ಅವರಲ್ಲಿ ಪ್ರಜಾಸಂರಕ್ಷಣೆಯಂಗೆಯ್ದನು. ಆ ಪೃಥುರಾಯನು ಮನುಷ್ಯನಲ್ಲವೆ? ಮತ್ತೆ ಕೆಲಪ್ರಕಾಲವಮೇಲೆ ಮನುವಿನ ಎರಡನೇ ಮಗನಾದ ಪ್ರಿಯವ್ರತರಾಯನಂ ದೇವರ್ಕಳು ಪ್ರಾರ್ಥಿಸಲು, ಆತನು ರಥಾರೂಢನಾಗಿ ಮೇರುವಂ ಬಲಬರಲು, ಆ ರಥಚಕ್ರದಿಂದುಂಟಾದ ಹಳ್ಳಗಳೇ ಸಪ್ತಸಮುದ್ರಂಗಳಾದವು. ಮತ್ತು ಆತನ ಏಳುಮಂದಿ ಪುತ್ರರಲ್ಲಿ ಜ್ಯೇಷ್ಠನಾದ ಆಗ್ನೀಧ್ರರಾಯನಿಗೆ ಜಂಬೂದ್ವೀಪಾಧಿಪತ್ಯವಂ ನಿಯಮಿಸಿ, ಎರಡನೇ ಮಗನಾದ ಅಗ್ನಿಜಾರಾಯನಿಗೆ ಈ ಪ್ಲಕ್ಷದ್ವೀಪಾಧಿಪತ್ಯವಂ ನಿಯಮಿಸಿದನು. ಆತನು ತನಿಗೆ ಪುತ್ರನಾದ ಶಾಂತಭಯ, ಶಿಶಿರ, ಶುಭೋದಯ, ಆನಂದ, ಸಿಕ್ತ, ಕ್ಷೇಮಕ, ಧ್ರುವರೆಂಬ ಏಳುಮಂದಿ ರಾಯರಿಗೂ ಈ ದ್ವೀಪವಂ ವಿಭಾಗವಂಮಾಡಿ ಕೊಟ್ಟು ಅವರುಗಳಹೆಸರನ್ನೇ ಈ ಖಂಡಗಳಿಗೆ ಉಂಟುಮಾಡಿ, ಈ ಖಂಡಗಳ ಕೊನೆಗಳಲ್ಲಿ ಗೋಮೇಧ, ಚಂದ್ರ, ನಾರದ, ದುಂದುಭಿ, ಸೋಮಕ, ಸೇಮನ, ವೈಭ್ರಾಜವೆಂಬ ಏಳು ಮರ್ಯಾದಾಪರ್ವತಂಗಳಂ ನಿಲ್ಲಿಸಿ, ಈ ಪರ್ವತಂಗಳಲ್ಲಿ ಪುಟ್ಟಿದ ನದಿಗಳಂ, ಅನುತಪ್ತಾ, ಶಿಖಾ, ವಿಪಾಪಾ, ತ್ರಿದಿವಾ, ಕ್ರಮಾ, ಅಮೃತಾ, ಸುಕೃತಾ ಎಂಬ ನಾಮಾಂಕಿತಗಳನ್ನಾಗಿಮಾಡಿ, ಮತ್ತು ಪುತ್ರರಂಕುರಿತು ಧರ್ಮದಿಂ ಪ್ರಜಾಪಾಲನೆಯಂಮಾಡಿಕೊಂಡುಬರುವಂತೆ ನಿಯಮಿಸಿದ್ದರಿಂದ, ಈ ಭೂಲೋಕಾಧಿಪತ್ಯವು ಮನುಷ್ಯರಿಗೆ ಸಹಜವು. ಅನ್ಯರಿಗೆ ಆಗಂತುಕವು. ಈ ವರ್ಷಂಗಳಲ್ಲಿ ಈಗ ಹೇಳಿದ ರಾಯರುಗಳ ಸಂತತಿಪರಂಪರೆಯಿಂದ ಬಂದ ಅರಸುಗಳಿರುವರು, ನಮಗಿಂತಲೂ ಬಲಿಷ್ಠರೂ ಉಂಟು, ಸಮಬಲರೂ ಉಂಟು, ನ್ಯೂನಬಲರೂ ಉಂಟು. ಆದ್ದರಿಂ ದೈವಯೋಗದಿಂದನ್ಯರಿಗೆ ಇಲ್ಲಿಯ ಆಧಿಪತ್ಯವುಂಟಾದರೆ ಶ್ರೇಯಸ್ಕಾಮಿಯಾದವನು ಈ ಲೋಕವಿರುದ್ಧವಾದ ನಡೆಯಂ ನಡೆಯಕೂಡದು. ಮತ್ತೂ ಇಲ್ಲಿಯ ಕುಲಾಚಲಂಗಳನ್ನಾಶ್ರಯಿಸಿಕೊಂಡು ಕೆಲವು ಎಡೆಯೊಳ್ ಯಕ್ಷರು, ಕೆಲವುಕಡೆಯೊಳ್ ಕಿಂಪುರುಷರು, ಕೆಲವುಕಡೆಯೊಳ್ ವಿದ್ಯಾಧರರು, ಸಮುದ್ರವಂ ಮೇಲೆಕ್ಷಿಪ್ಪಿಸುವ ಕಪಿನಾಯಕರು, ಇನ್ನೂ ಪ್ರಬಲಪ್ರಾಣಿಗಳು

ಅಲ್ಲಿನ್ನಿರುವವು, ಇದಂತಿರಲಿ ಪೂರ್ವದೊಳಿಲ್ಲಿ ದಾನವರಾಕ್ಷಸಸಂಘವು ಕೆಲವು ಕಾಲದವರೆಗೆ ರಾಮಸೇತುವಿನ ನಿಮಿತ್ತವಾಗಿ ಕಪಿನಾಯಕರುಗಳಿಂದ ಅಮೂಲಾಗ್ರವಾಗಿ ತೆಗೆದುಕೊಂಡುಹೋದ್ದರಿಂದಲ್ಲಿಯ ಹಳ್ಳಗಳು ಸಮುದ್ರದಂತೆ ಜಲಸಂಪೂರ್ಣವಾಗಿ ಶೋಭಿಸುತಲಿಹವೆ ನೋಡುವನಾಗು; ಮತ್ತು ಸ್ವಬಲ ಪರಬಲ ವಿಚಾರವಿಲ್ಲದೆ ದೇಶಕಾಲಜ್ಞಾನಶೂನ್ಯರಾಗಿ ಶತ್ರುಗಳಮೇಲೆಬಿದ್ದು ನಷ್ಟರಾಗುವದು ರಾಕ್ಷಸರ ಕುಲಧರ್ಮವು. ಅದಕ್ಕೆ ರಾವಣಾದಿಗಳೇ ನಿದರ್ಶನವು ಆದ್ದರಿಂ ಯಾವಕಾರ್ಯವನ್ನಾದರೂ ಆರಂಭಿಸುವಲ್ಲಿ ವಿಮರ್ಶೆಯಿಂದ ಮಾಡುವನಾಗು, ಪ್ರಬಲರಂ ದುರ್ಬಲರು ಅನುವರ್ತಿಸುವರು. ಇಂಥಾ ಪ್ರಬಲರಂ ಉಪಾಯಗಳಿಂದ ಮಿತ್ರರಂ ಮಾಡಿಕೊಳ್ಳಬೇಕು. ಸಮಬಲರಂ ಸಾಮಾದಿ ಚತುಷ್ಟಯದಿಂದ ವಶವಂ ಮಾಡಿಕೊಳ್ಳಬೇಕು. ಈ ದ್ವೀಪದಲ್ಲಿ ಆಧಿಪತ್ಯವಂ ಮಾಡುತ್ತಿರುವ ಅರಸುಗಳಲ್ಲಿ ಕೆಲವರು ಧೈರ್ಯವನ್ನೆಣಿಸುವರು ಮತ್ತೆ ಕೆಲವರು ಪ್ರಸಾದರಂ ಅಪೇಕ್ಷಿಸುವರು, ಇದಂ ತಿಳಿದು ನಡೆದರೆ ಶ್ರೇಯಸ್ಸು ಉಂಟಾಗುವದೆಂದು ಪೇಳುತ ಶಿವಾಎಂಬ ನದಿಯಂ ದಾಂಟೆ ಶುಭೋದಯವೆಂಬ ಪುರಂಡವಂ ಕುರಿತು ಪೋಗುತ್ತಿರಲು;-ಅಷ್ಟರೊಳ್ ರಾಕ್ಷಸ ಸಂಘವು ಮುಂದೆ ನಡೆದು ಪರ್ವತಗಳಲ್ಲಿರುವ ಪ್ರಾಣಿಗಳಂ ಭಕ್ಷಿಸುತ,ಋಷ್ಯಾಶ್ರಮಗಳಿಗೆ ಆತಂಕವನ್ನುಂಟುಮಾಡುತ ವ್ಯಾಘ್ರಗಳಂತೆ ಪ್ರಜೆಗಳಂ ಪಶುಗಳಂ ಭಕ್ಷಿಸುತ್ತಿರಲು; ಅದಂತಿಳಿದ ಅಲ್ಲಿಯ ಅರಸುಗಳಿಂದ ಕಳುಹಿಸಲ್ಪಟ್ಟ ಸೇನಾಜನಗಳು ಪೋಗಿ ರಾಕ್ಷಸರಂ ನಿಗ್ರಹಿಸಿ ಬಂಧಿಸಿ ಹಿಡಿದುಕೊಂಡು ಪೋಗುತ್ತಿರಲು; ಮತ್ತು ಹಿಂದಣಿಂದ ಹೆಚ್ಚಿಬಂದ ರಾಕ್ಷಸರು ಗ್ರಾಮಗಳಂ ದಹಿಸುತ ಪ್ರಜೆಗಳಂ ಭಕ್ಷಿಸುತ, ರೂಪವತಿಯರಂ ಪಿಡಿಯುತ, ಅಗ್ರಹಾರಂಗಳಂ ಸೂರೆಗೊಳ್ಳುತ ಯಜ್ಞಾದಿಗಳಂ ಕೆಡಿಸುತ್ತಿರಲಾಗ, ಪ್ರಜೆಗಳೆಲ್ಲರೂ ಗಿರಿಗಹ್ವರಗಳಂ ಸೇರುತ್ತಲಿರುವದಂ ನೋಡಿ ರಾಕ್ಷಸರು ಅವರಂ ಅಲ್ಲಿಯೂ ಇರದಂತೆ ಆತಂಕಪಡಿಸುತ್ತಿರಲು; ಅದಂ ಕೇಳುತ ಚಂದ್ರದ್ಯುಮ್ನರಾಯನು ಚಂದ್ರಪುರಿ ಎಂಬ ತನ್ನ ಪಟ್ಟಣವಂ ರಕ್ಷಿಸಿಕೊಂಡಿರುವಂತೆ ಆಪ್ತರಾದ ದುರ್ಗಪಾಲಕರಂ ನಿಯಮಿಸಿ ಸೇನಾಸಮೇತ

ನಾಗಿ ಹೊರಟುಬಂದು ವಿಪಾಪಾ ಎಂಬ ನದೀತೀರದಲ್ಲಿರುವ ಉಗ್ರಬಾಹುವಿನೊಡನೆ ಯುದ್ಧವಂಮಾಡಲೆಣಿಸಿ ಬರುತ್ತಿರಲು, ಅದಂಕೇಳಿದ ಉಗ್ರಬಾಹುವು ಮಹಾಗಜವನ್ನೇರಿ ರಥಸ್ಥನಾಗಿರುವ ಚಂದ್ರದ್ಯುಮ್ನರಾಯನ ಮೇಲೆ ಕಾಣಿಸಿಕೊಂಡು ತನ್ನ ಬಾಣಪ್ರಹಾರದಿಂದ ಆ ರಾಯನಂ ಸುತ್ತಿ ಬರುವ ಸೇನೆಯಂ ಕ್ಷೋಭೆಪಡಿಸುತ್ತಿರಲು ; ಆಗ ಕ್ರುದ್ಧನಾದ ಚಂದ್ರದ್ಯುಮ್ನರಾಯನು ತನ್ನ ಬಾಣದಿಂ ರಾಕ್ಷಸರ ಹೃದಯವಂ ಛೇದಿಸುತ ಛಿನ್ನಾಭಿನ್ನವಾಗಿ ಮಾಡುತ್ತಿರಲು; ಆ ಪೆಟ್ಟಂ ಸಹಿಸಲಾರದೆ ರಾಕ್ಷಸರು ಓಡಿಹೋಗಿ ಐರಾವತದ ಹಿಂಭಾಗದೊಳ್ನಿಲ್ಲಲು, ಅದಂನೋಡಿ ಕ್ರುದ್ಧನಾದ ಉಗ್ರಬಾಹುವು, ತನ್ನ ಕೈಕೋದಂಡದಿಂ ಹೊರಡುವ ಬಾಣಪರಂಪರೆಯಿಂದ ಆ ರಾಯನ ರಥವಂ ಮುಚ್ಚುತ್ತಿರಲು, ಆ ರಾಯನು ಅವನೆಲ್ಲವಂ ತನ್ನಬಾಣದಿಂ ಛೇದಿಸಿ, ನೂರುಬಾಣಂಗಳಿಂದ ಗಜವಂ, ಐದುಬಾಣಗಳಿಂದ ಮಾವುತನಂ, ಮತ್ತೈದುಬಾಣಗಳಿಂದ ಉಗ್ರಬಾಹುವಿನ ಕವಚವಂಕೂಡಾ ಛೇದಿಸಲು, ಆಗ ಆ ಮಹಾಗಜವು ಕೋಪದಿಂ ಮುಂದುವರಿದು ಬರಲು, ಅದಂನೋಡಿ ಚಂದ್ರದ್ಯುಮ್ನರಾಯನು ಒಂದು ಗದೆಯಂಬೀಸಿ ಆ ಗಜದಮೇಲೆ ಪ್ರಯೋಗಿಸಿ ಹಿಮ್ಮೆಟ್ಟುವಂತೆ ಮಾಡಿ, ಮತ್ತೊಂದು ಅಮೋಘವಾದ ಬಾಣವಂ ಪ್ರಯೋಗಿಸಿ ಉಗ್ರಬಾಹುವಿನ ಕೈಯೊಳಿರ್ದ ಕೋದಂಡವಂ ಖಂಡಿಸಲು, ಆ ಉಗ್ರಬಾಹುವು ಕೆಣಕಿದ ಸಿಂಹದಂತೆ ಘೋರವಾಶಿಯಾದ ಭಲ್ಲ್ಯವಂ ಚಂದ್ರದ್ಯುಮ್ನನಮೇಲೆ ಪ್ರಯೋಗಿಸಲದಂ ಚಂದ್ರದ್ಯುಮ್ನನು ಮತ್ತೊಂದುಗದೆಯಿಂದ ಖಂಡಿಸಿ, ತನ್ನ ಕೈಭಲ್ಲ್ಯದಿಂ ಮಾವುತನನ್ನಿರಿದು ಕೆಡಹಲು, ಈ ಪರಿಯಿಂ ಧೀರ್ವರೂ ಒಬ್ಬೊಬ್ಬರಂ ಜಯಿಸಲೆಣಿಸಿ ನಾನಾವಿಧ ಶಸ್ತ್ರಾಸ್ತ್ರಗಳಂ ಪ್ರಹರಿಸುತ ಅದಕ್ಕೆ ಪ್ರತೀಕಾರವಂ ಮಾಡುತ್ತಿರುವಷ್ಟರೊಳ್ ರಾಕ್ಷಸಭಟರು ತಾಳವೃಕ್ಷಪ್ರಮಾಣವಾದ ಒಂದು ಪರಿಘಾಯುಧವಂ ತಂದು ಗಜಾಧಿಪನಮುಂದೆ ಇರಿಸಲು, ಅದಂ ಆ ಮಹಾಗಜವು ಸೊಂಡಲಿನಿಂದೆತ್ತಿ ಬೀಸಿ ರಥದಮೇಲೆ ಪ್ರಹರಿಸಿದಮಾತ್ರಕ್ಕೆ ರಥವು ಚೂರ್ಣವಾಗಿ ರಾಯನ ಎದೆಪಡೆದು ಅಶ್ವಸಾರಥಿಗಳುಕೂಡಾ ಹತರಾ

ಗಲು; ಆಗ ಉಗ್ರಬಾಹುವು ಜಯಭೇರಿಯಂ ಹೊಡೆಯಿಸಿ ಓಡುತ್ತಲಿರುವ ಶತ್ರುಸೈನ್ಯವಂ ಉಪೇಕ್ಷಿಸಿ ಚಂದ್ರದ್ಯುಮ್ನರಾಯನ ಪುರದಸಮೀಪಕ್ಕೆ ಪೋಗಲು ಅಲ್ಲಿಯ ದುರ್ಗಪಾಲನು ಉಗ್ರಬಾಹುವಂ ಎದುರ್ಗೊಂಡು ಬರದೆ ಸೇನೆಯುಂ ಪ್ರೋತ್ಸಾಹಪಡಿಸುತ, ಪ್ರಾಕಾರದಮೇಲೆ ಸಜ್ಜುಗೊಳಿಸಿ ಮಡಗಿರುವ ಫಿರಂಗೀ ಗುಂಡುಗಳಿಂ ರಾಕ್ಷಸ ಸೈನ್ಯವಂ ನಾಶಗೊಳಿಸುತ್ತಿರಲು, ಉಗ್ರಬಾಹುವು ಅದಂ ಎಣಿಸದೆ ಗಜವಂ ಪ್ರೇರಿಸಲು ಆ ಮಹಾ ಗಜವು, ಶತ್ರುಗಳಿಂ ಪ್ರಯೋಗಿಸಲ್ಪಟ್ಟ, ಪರಿಘ, ಭಲ್ಯಾ, ಶೂಲಗಳಂ ತೃಣದಂತೆ ಎಣಿಸಿ, ಆ ಪುರದ ಗೋಪುರ ದ್ವಾರದ ಸಮೀಪವಂ ಸೈದಿ ಮಸ್ತಕದಿಂದೊತ್ತರಿಸಲು ಆ ಘಾತಕ್ಕೆ ಆ ಬಾಗಿಲು ಮುರಿದು ಬಿದ್ದುಹೋದದ್ದಲ್ಲದೆ ಅದರ ಸಮೀಪದಲ್ಲಿದ್ದ ಪ್ರಾಕಾರವುಕೂಡಾ ಬೀಳಲು, ಉಗ್ರಬಾಹುವು ಆ ಮಹಾ ಮಾರ್ಗದಿಂ ಸೈನ್ಯಸಮೇತನಾಗಿ ಪುರವಂ ಪ್ರವೇಶಿಸಿ, ರಾಜಬೀದಿಯೊಳ್ ಬರುತ ಎದುರಾಗಿ ಕಾಣುತಲಿರುವ ಮತ್ತು ನಾಲ್ಕು ಆವರಣದ ಬಾಗಿಲುಗಳಂ ಮೊದಲಿನಂತೆ ಐರಾವತದಿಂದ ಕೆಡಹಿಸಿ ಪೋಗಿ ಆ ಸ್ಥಾನದಬಳಿಯಲ್ಲಿ ನಿಲ್ಲಲು ಅಷ್ಟರೊಳ್ ಉಗ್ರಬಾಹುವಿನಕಡೆ ರಾಕ್ಷಸರು ಪುರವಂ ಸೂರೆಗೊಳ್ಳುತ, ರಾಜಾಂತಃಪುರವಂ ಪ್ರವೇಶಿಸುವದಂ ಕಂಡು ಶಂಕುಕರ್ಣನು ಉಗ್ರಬಾಹುವಂ ಕುರಿತು ಅಯ್ಯಾ ರಾಯನೇ! ಯುದ್ಧವಂ ಮಾಡುವರಿಗೆ ಜಯಾಪಜಯವು ಲೋಕಪ್ರಸಿದ್ಧವು. ಇಂತಿರುವಲ್ಲಿ ಅರಸಾದವನು ಯುದ್ಧದಲ್ಲಿ ನಷ್ಟವಾದಬಳಿಕ, ಅನಾಥರಾದ ಅವನ ಪತ್ನೀಪುತ್ರರಂ ಮಾನದಿಂ ರಕ್ಷಿಸಿದರೆ, ಆ ದೇಶದ ಪ್ರಜೆಗಳು ನಮ್ಮಲ್ಲಿ ಅನುರಾಗದಿಂ ನಡದುಕೊಳ್ಳುವರು. ಈ ವರ್ತಮಾನವಂ ಕೇಳಿ, ಮುಂದೆ ಯುದ್ಧವಂ ಮಾಡಲೆಣಿಸಿದ ರಾಯರುಗಳುಕೂಡ ಶರಣಾಗತರಾಗುವರು. ಇಂತಿರುವಲ್ಲಿ ನೀನಾದರೆ ಈ ಈ ದ್ವೀಪವನೆಲ್ಲವನ್ನಾಳಬೇಕೆಂದು ಬಂದವನಲ್ಲದೆ, ಎದುರಾದ ಶತ್ರುಗಳಂ ಸಂಹರಿಸಿ ಏಕದೇಶ ರಾಜ್ಯವನ್ನಾಳಬೇಕೆಂದು ಬಂದವನಲ್ಲ. ಆದ್ದರಿಂದ ನಿನಗೆ ಬಿನ್ನವಿಸತಕ್ಕ ಪರಿಯಂ ಮೊದಲೇ ತಿಳುಹಿಸಿರುವೆನು. ಈಗ ಈ ಚಂದ್ರದ್ಯುಮ್ನರಾಯನ ಪುತ್ರನಿಗೆ ಈ ರಾಜ್ಯಾಧಿಪತ್ಯವನ್ನಿಟ್ಟು

ಮಾಡಿ ಕಪ್ಪಗಳಿಂ ಕೊಡುವಂತೆ ಕಟ್ಟುಮಾಡಿದರೆ, ಈ ಅರ್ಥವಂ ತಿಳಿದ ದೇಶಾಂತರದ ಅರಸುಗಳುಕೂಡ, ನಿನ್ನ ಶೌರ್ಯವಂ, ಏತತ್ಪ್ರತಾಪವಂ, ಅಂದರ್ಥವಂ ಸಹಸುವನಂ ತಿಳಿದು ತಾವಾಗಿ ಬಂದು ಶರಣಾಗತರಾಗುವರು. ಮಲತವರಂ ದಂಡಿಸಬಹುದು. ಇಂದಿನಾರಭ್ಯ ರಾಕ್ಷಸಕುಲ ಸ್ವಭಾವವಾದ ದೌರ್ಜನ್ಯವಂ ಬಿಟ್ಟು, ನ್ಯಾಯದಿಂ ಪ್ರಜೆಗಳಂ ಸಂರಕ್ಷಿಸುತ್ತಿದ್ದರೆ ಬಹುಕಾಲ ಈ ಅಖಂಡದ್ವೀಪಾಧಿಪತ್ಯವಂ ಹೊಂದಿ ದುಃಖರಹಿತನಾಗುವೆಯೆಂದು ಹೇಳಲು, ಅದಂ ಕೇಳಿ ಉಗ್ರಬಾಹುವು ಆ ಚಂದ್ರದ್ಯುಮ್ನರಾಯನ ಅಂತಃಪುರದ ರಕ್ಷಣೆಗೆ ಅಲ್ಲಿಯ ಪ್ರಾರ್ಥ್ಯೇಕರಂ ನಿಯಮಿಸಿ, ಮೇಲುವಿಚಾರಣೆಗೆ ವೃದ್ಧನಾದ ತನ್ನ ಕಡೇ ರಾಕ್ಷಸನೊಬ್ಬನಂ ಕಟ್ಟುಮಾಡಿ, ಆ ರಾಯನ ಮಗನಾದ ಸುಮಂತನೆಂಬ ಅರಸಿಗೆ ಆ ರಾಜ್ಯಾಧಿಪತ್ಯವನ್ನುಂಟುಮಾಡಿ, ಕಪ್ಪವಂ ಗೊತ್ತುಮಾಡಿ, ಹೆಚ್ಚು ಕಡಮೆ ನಡಿಯದಂತೆ ತನ್ನ ಬಳಿಯಲ್ಲಿದ್ದ ಶೋಣಾಕ್ಷನೆಂಬ ರಾಕ್ಷಸನಿಗೆ ಗೊತ್ತುಮಾಡಿ ನಿಲ್ಲಿಸಿ, ಬಳಿಕ ಆನಂದನಾಮಖಂಡವಂ ಕುರಿತು ತೆರಳುತ್ತಿರಲು, ಆ ಖಂಡಾಧಿಪತಿಗಳು ಕೆಲವರು ಚಂದ್ರಪುರಿಯ ವರ್ತಮಾನವಂ ಕೇಳಿ, ರಾಕ್ಷಸಾಧಿಪತಿಯೊಡನೆ ಯಾಕೆ ವೈರವಂ ಬೆಳಸಬೇಕೆಂದು ತಮ್ಮ ತಮ್ಮ ಪರಿವಾರದೊಡಗೂಡಿ ಅನರ್ಘ್ಯವಸ್ತುವಾಹನಂಗಳು, ಶ್ಲಾಘ್ಯವಾದ ಮದ್ಯಮಾಂಸಗಳಂ ತಂದು ರಾಕ್ಷಸಾಧಿಪತಿಯಂ ಕಂಡು ತಂದಿರುವವೆಲ್ಲವಂ ಒಪ್ಪಿಸಿ, ತಮ್ಮ ತಮ್ಮ ಯೋಗಕ್ಷೇಮಗಳಂ ಪೇಳಿಕೊಳ್ಳಲು, ಉಗ್ರಬಾಹುವು ಪ್ರಸನ್ನನಾಗಿ ಅವರೆಲ್ಲರಿಗೂ ಉಚಿತಪ್ರಕಾರ ಮರ್ಯಾದೆಗಳಂ ಮಾಡಿಸಿ, ಕಪ್ಪಗಳಂ ಗೊತ್ತುಮಾಡಿಕೊಂಡು, ತನಿಗೆ ಆಪ್ತರಾದ ರಾಕ್ಷಸಾಧಿಪರಂ ಅವರಬಳಿಯಲ್ಲಿರುವಂತೆ ನಿಯಮಿಸಿ ಅವರಂ ಕಳುಹಿ, ಆ ಬಳಿಕ ತನಿಗೆ ರಾಜಧಾನಿಯಾಗಬೇಕೆಂದು ಸುಪ್ರಭಾವದಿಯಿಂ ಶೋಭಿತವಾದ ಗುಮ್ರವಂತ ಪರ್ವತಪ್ರಾಂತ್ಯದಲ್ಲಿ ಎರಡನೇ ಅಮರಾವತಿಯಂತೆ ಸಕಲ ವಸ್ತು ಸಮೃದ್ಧವಾದ ವಿಮಲಪುರವೆಂಬ ಪಟ್ಟಣವಂ ರಚಿಸಿ ಕೆಲವುಕಾಲ ವಾಸವಂ ಮಾಡಿಕೊಂಡಿರ್ದು, ಬಳಿಕ ಆ ಪಟ್ಟಣದ ಸಂರಕ್ಷಣಾರ್ಥವಾಗಿ ಆಪ್ತರಾದ ಪ್ರಮುಖರಾದ

ರಾಕ್ಷಸರನ್ನಿರಿಸಿ, ಮೊದಲಿನಂತೆ ಐರಾವತಾದಿಗಜಗಳಿಂ ವಿಜಯಯಾತ್ರೆಯಂ ಮಾಡಲುದ್ಯೋಗಿಸಿ, ಕೆಲವೆಡೆಯ ಅರಸುಗಳಂ ಸೋಲಿಸಿ, ಕೆಲವರಿಂ ದಂಡನೆಯಂ ಪ್ರಕಟಂ ಮಾಡಿಕೊಳ್ಳುತ್ತ, ಅವರುಗಳು ತನ್ನ ಆಜ್ಞೆಯಂ ಮೀರಿ ನಡೆಯದಂತೆ ತನ್ನ ಕಡೇ ರಾಕ್ಷಸರುಗಳಿಗೆ ನಿಯಮಿಸುತ್ತ, ದೇಶಾಧಿಪತಿಗಳಿಂ ಲಬ್ಧವಾದ ಅಮೌಲ್ಯವಸ್ತುವಾಹನಗಳಂ ವಿಮಲಪುರಿಗೆ ಕಳುಹಿಸುತ್ತ, ಶಂಕುಕರ್ಣನೊಡನೆ ಕಾಲೋಚಿತಾನುಗುಣವಾದ ಮಂತ್ರಾಲೋಚನೆಯಿಂದ ನಿಶ್ಚೈಸಿದಮೇರೆಗೆ ಆಧಿಪತ್ಯವಂ ಮಾಡುತ್ತ, ಆಯಾಯ ದೇಶ ಮರ್ಯಾದಾನುಸಾರವಾಗಿ ನಡೆಯುತ್ತ ತೆರಳುತ್ತಿರಲು, ಬಳಿಕ ಆ ಮಹಾ ಗಜವು ರಾಕ್ಷಸಾಧಿಪತಿಯ ಅಭಿಪ್ರಾಯಾನುಸಾರವಾಗಿ ನಡೆಯುತ್ತ, ದುರ್ಗಮವಾದ ನದಿಗಳಂ ಪಾದ ಸೋಂಕದಂತೆ ದಾಟುತ್ತ, ತಿಟ್ಟುಗಳಂ ಸಮಮಾಡಿ, ರಾಕ್ಷಸ ಸೇನೆಯು ನಡೆಯುವದಕ್ಕೆ ಅನುಕೂಲವಂ ಮಾಡುತ್ತ, ರಾಕ್ಷಸರಿಗೆ ಅಶಕ್ಯವಾದ ಕಾರ್ಯವಂ ನಿರ್ವಹಿಸಿಕೊಡುತ್ತ, ಪ್ಲಕ್ಷದ್ವೀಪವಂ ಬಳಸಿ ಬರುತ್ತಿರಲು, ಆಗ ಉಗ್ರಬಾಹುವು ಆ ಮಹಾಗಜವು ತನಗೆ ಮಾಡಿಕೊಡುತ್ತಲಿರುವ ಮಹಾ ಕಾರ್ಯಗಳಂ ನೋಡಿ ವಿಸ್ಮಿತನಾಗಿ ಬಾರಿಬಾರಿಗೂ ಅದಂ ಶ್ಲಾಘಿಸುತ್ತ ತನ್ನ ಪ್ರಾಣಕ್ಕಿಂತ ಅತಿಶಯವಾಗಿ ಅದಂ ರಕ್ಷಿಸುತ್ತ; ಅದರಮೇಲೆ ಕುಳಿತು ಪ್ಲಕ್ಷದ್ವೀಪವೆಲ್ಲವಂ ಜಯಿಸಿಕೊಂಡು ಬಂದು, ಮೊದಲಿನಂತೆ ತನ್ನ ಆಸ್ಥಾನವಾದ ವಿಮಲಪುರಿಯಲ್ಲಿ ವಾಸವಂ ಮಾಡುತ್ತ, ನಿತ್ಯದಲ್ಲಿಯೂ ತಂಡತಂಡದಿಂ ತಪ್ಪದೇ ಬರುವ ದೇಶಾಧಿಪತಿಗಳಿಂ ಕಪ್ಪಗಳನ್ನೊಪ್ಪಿಸಿಕೊಳ್ಳುತ್ತ ತನ್ನ ಐಶ್ವರ್ಯಕ್ಕೆ ತಾನೇ ಪಾರಗಾಣದೆ, ಮಂತ್ರಿಯಂ ಮಹಾ ಸನ್ಮಾನದಿಂ ಕಾಣುತ್ತ, ಮಹಾ ಇಕ್ಷುವನವಂ ಬೆಳಸಿ, ಕರಿಣೀಸಮೇತವಾಗಿ ಈ ಮಹಾ ಗಜವು ಈ ವನದೊಳ್ ಯಥೇಷ್ಟವಾಗಿ ಸುಖದಿಂ ವಿಹರಿಸಿಕೊಂಡಿರಲಿ ಎಂದು ರಕ್ಷಕರಾದ ರಕ್ಕಸರಿಗೆ ನಿಯಮಿಸಿ, ಆ ಗಜವಂ ಆ ಇಕ್ಷುವನಕ್ಕೆ ಕಳುಹಿಸಿ ಬಹುಕಾಲ ಸುಖದಿಂದಿರ್ದು, ಬಳಿಕ ಅಖಂಡದ್ವೀಪಾಧಿಪತಿಯಾದೆನೆಂದು ಮದಿಸಿ, ರಾಕ್ಷಸರಮೇಲೆ ರಾಜ್ಯಭಾರವಂ ಬಿಟ್ಟು ಸ್ತ್ರೀಲೋಲುಪನಾಗಲು, ಆಗ ಪ್ರಜೆಗಳೆಲ್ಲರೂ ಜೀವನಾರ್ಥ

ವಾಗಿ ರಾಕ್ಷಸರ ಮನೋನುಗುಣವಾಗಿ ನಡೆದುಕೊಳ್ಳುವದರಿಂದ ಧರ್ಮವು ಮೆಲ್ಲಮೆಲ್ಲನೆ ಶರತ್ಕಾಲ ಮೇಘದಂತೆ ತೊಲಗುತ್ತಿರಲು ;—

ಅತ್ತಲಾ ಜಂಬೂದ್ವೀಪದಲ್ಲಿ ಭರತಖಂಡದೊಳ್ ಪೂರ್ವಭಾಗದಲ್ಲಿ ಲವಣಸಮುದ್ರದ ತೀರದಲ್ಲಿರುವ ಮಹೇಂದ್ರಪರ್ವತದ ಸಮೀಪದೊಳಿರುವ ಕಳಿಂಗರಾಜಧಾನಿಯಾದ ವಿಜಯನಗರದೊಳ್ ಆ ದೇಶಾಧಿಪತಿಯಾದ ವಿಜಯವರ್ಮರಾಯನಿಂ ತನ್ನ ಪುತ್ರಿಯಾದ ಸೌಗಂಧಿಕಾದೇವಿಯ ಸ್ವಯಂವರಾರ್ಥವಾಗಿ ಕರೆಯಿಸಲ್ಪಟ್ಟ ದೇಶಾಧಿಪತಿಗಳೆಂಬ ನಕ್ಷತ್ರಮಂಡಲಮಧ್ಯದೊಳ್ ಉದಯಿಸಿ ಬಂದ ಚಂದ್ರನಂತೆ ಒಪ್ಪುವ ಸುಗಂಧ ಮಹಾರಾಯನು ಸೌಗಂಧಿಕಾದೇವಿಯಿಂದ ಉದ್ದೇಶಮಾಡಲ್ಪಟ್ಟ ಎಂಟು ವಿಧಪಣಂಗಳಲ್ಲಿ ವಜ್ರೋದ್ಧಾರವೆಂಬ ಪ್ರಥಮಪಣವಂ ಗೆದ್ದು, ವಿಜಯವರ್ಮರಾಯನಿಂ ಮಾಡಲ್ಪಟ್ಟ ಉಪಚಾರವಂ ಕೈಗೊಂಡು ಮಂತ್ರಿ ಸುಮತಿಯಿಂದೊಡಗೂಡಿ ತನ್ನ ಬಿಡಾರವನ್ನೈದಿ ಸುಖದಿಂದಿದ್ದು ಮಾರನೇದಿನ ಸ್ನಾನಾದಿ ನಿತ್ಯಕರ್ಮಗಳಂ ಕ್ರಮವಾಗಿ ನೆರವೇರಿಸಿ, ಬಳಿಕ ಶ್ರೋತ್ರಿಯೋತ್ತಮರಾದ ಬ್ರಾಹ್ಮಣರುಗಳ ಸಮುದಾಯಕ್ಕೆ ಯಥೋಚಿತವಾಗಿ ನಿತ್ಯದಾನವನ್ನಿತ್ತು, ತನಗೆ ಆಪ್ತಮಿತ್ರರಾದ ರಾಜಪುತ್ರರೊಡಗೂಡಿ ಮನೋಹರವಾದ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಮೊದಲಾದ ಸಕಲವಿಧ ಭಕ್ಷ್ಯಗಳಿಂ ಸಹಿತವಾದ ಮೃಷ್ಟಾನ್ನ ಭೋಜನವಂ ಮಾಡಿ, ಅಮೂಲ್ಯ ವಸ್ತ್ರಾಭರಣ ಗಂಧಮಾಲ್ಯಗಳಿಂದ ಅಲಂಕೃತನಾಗಿ, ಶೃಂಗರಿಸಿದ ದಿವ್ಯಾಶ್ವವನ್ನೇರಿ ಮಿತ್ರ ಪರಿವಾರದಿಂ ಸುಮತಿ ಸಮೇತನಾಗಿ ಬಿಡಾರದಿಂ ಹೊರಟು ಆ ಕಳಿಂಗರಾಜನ ಆಸ್ಥಾನವಂ ಕುರಿತು ಬರುತ್ತಿರಲು, ಅದಂ ತಿಳಿದ ವಿಜಯವರ್ಮರಾಯನು ಮಂತ್ರಿ ಪರಿವಾರ ಸಮೇತನಾಗಿ ಎದುರುಗೊಂಡು ಬಂದು ಆಸ್ಥಾನದ ಮುಂಭಾಗದೊಳ್ ನಿಂತು ಎದುರಾಗಿ ಬರುತ್ತಿರುವ ಸುಗಂಧ ಮಹಾರಾಯನಂ ಸಮ್ಮಾನದಿಂ ಕಂಡು ಅಂತಃಪುರದ ಸಮೀಪಕ್ಕೆ ಕರತಂದು ಮೊದಲಿನಂತೆ ಆಸ್ಥಾನವನ್ನೈದಿಸುತ್ತಿರಲಾಗ ಸುಗಂಧರಾಜೇಂದ್ರನು ತುರಗದಿಂದಿಳಿದು ಅಂತಃಪುರದ ಮುಂಭಾಗದೊಳಿರುವ ರತ್ನಮಂಟಪ

ಕ್ಕೆ ಬರುತ್ತಿರಲು, ಅದಂ ತಿಳಿದ ರಾಜಪುತ್ರಿಯಾದ ಸೌಗಂಧಿಕಾದೇವಿಯು, ಅತಿ ಶುಭ್ರವಾದ ಸಣ್ಣ ಮುತ್ತುಗಳಿಂದ ಸಿಂಗರಿಸಿದ ತೆರೆಯ ಮರೆಯೊಳ್ ಬಂದು ನಿಲ್ಲಲು, ಶರತ್ಕಾಲ ಮೇಘಖಂಡಗಳ ಮಧ್ಯದೊಳ್ ಸುಳಿದಾಡುವ ಚಂದ್ರನ ಪ್ರಭೆಯಂತೆ ಆ ದೇವಿಯ ತನುಕಾಂತಿಯು ಹೊರಹೊಮ್ಮಿ ಸಮೀಪದಲ್ಲಿರುವ ವಜ್ರಸ್ತಂಭಗಳಂ ವ್ಯಾಪಿಸಿ ಪುಷ್ಯರಾಗ ಸ್ತಂಭಗಳಂತೆ ಮಾಡುತ್ತಿರಲು, ತನು ಸುಗಂಧವು ಕಮನೀಯಕಹ್ಲಾರ ಪುಷ್ಪ ಪರಿಮಳದಂತೆ, ದುಂಬಿಗಳ ಹಿಂಡುಗಳಂ ಭ್ರಮೆಗೊಳಿಸುತ್ತಿರಲು, ಅಲ್ಲಲ್ಲಿ ತೆರೆಯಂ ಸರಿಸಿಕೊಂಡು ಆ ಮಹಾರಾಜ ಪುತ್ರನಂ ಮನದಣಿವಂತೆ ನೋಡಲೋಸುಗ ಬರುತ್ತಿರುವ ಸಖೀಜನರುಗಳ ಪಾದವಿನ್ಯಾಸದಿಂ ಘಲ್ಲೆನ್ನುತ್ತಿರುವ ಮಂಜುಮಂಜೀರಧ್ವನಿಗಳು ಅಂತಃಪುರ ಪುರೋಭಾಗವಂ ತುಂಬುತ್ತಿರಲು, ನಾರೀಜನರುಗಳ ಮುಖಪ್ರಭೆಯಿಂದ ಆ ಪ್ರದೇಶವೆಲ್ಲವೂ ವಿಕಸಿತ ಕಮಲವನದ ಚಂದವಾಗಲು, ಪ್ರಜಾಸೃಷ್ಟಿಯೆಲ್ಲವು ಸ್ತ್ರೀಮಯವಾದಂತೆ ತೋರುತ್ತಿರಲು, ಮೇಘವು ಲಾವಣ್ಯವಂ ವರ್ಷಿಸಿತೋ ಎಂಬಂತೆ ಕಾಣುತ್ತಿರಲು, ಆ ತಪವೆಲ್ಲವು ಆಭರಣ ಪ್ರಭೆಯಿಂದ ಇಂದ್ರಚಾಪ ತೋರಣಮಯವಾಗುತ್ತಿರಲು, ಭಿತ್ತಿಭಾಗವೆಲ್ಲವು ಸ್ತ್ರೀವಿಲಾಸಮಯವಾದಂತೆ ಕಂಗೊಳಿಸುತ್ತಿರಲು, ಸುಗಂಧರಾಜನು ಸುಮಂತ್ರಿಯ ಹಸ್ತಲಾಘವದಿಂದ ಕಳಿಂಗರಾಜಾಂತಃಪುರದಲ್ಲಿ ಸುಮಮಾಲಿಕಾಲಂಕೃತವಾಗಿ, ದಿವ್ಯಾಗರು ಧೂಪಗಳಿಂ ಭೂಷಿತವಾಗಿರುವ ರತ್ನಮಂಟಪದಲ್ಲಿ ಮಣಿಪೀಠದೊಳ್ ಕುಳ್ಳಿರಲು, ಸುಮಂತ್ರಿಯು ವಿನಯದಿಂ ಸಮೀಪವನ್ನೈದಿರಲು ಆಗ ಸೌಗಂಧಿಕಾದೇವಿಯು ಕಾಂಡಪಟದೊಳ್ ರತ್ನಪೀಠದಲ್ಲಿ ಕುಳಿತು ಚಿತ್ರಲೇಖೆಯಂ ಕರೆದು ರಾಯನಿಗೆ ಹೇಳಿ ಕಳುಹಿಸುವ ತನ್ನ ಅಭಿಪ್ರಾಯವಂ ಹೇಳಿಕಳುಹಿಸಲು ಚಿತ್ರಲೇಖೆಯು ಬರುವುದಂ ಕಂಡು ರಾಯನು ಎಲೈ ಸಖೀ ಶಿರೋಮಣಿಯೆ ಬಾರೆಂದು ಕರೆಯಲು ಸಖಿಯು ಬಂದು ರಾಯನಿಗೆ ನಮಸ್ಕರಿಸಿ ಉಚಿತಪ್ರಕಾರವಾಗಿ ನಿಂತು ರಾಯನಂ ಕುರಿತು, ತನ್ನ ಒಡತಿಯ ಅಭಿಪ್ರಾಯವಂ ಹೇಳಲುಜ್ಜುಗಿಸಿ

ಅಯ್ಯಾ ರಾಜಶಿರೋಮಣಿಯೇ! ಸಕಲ ರಾಜಕುಮಾರರ ಅಹಂಕಾರವಂ ಅಪಹಾಸಗೊಳಿಸುವ ನಿನ್ನ ಮಧುರ ವಚನವು ಯಾರಿಗೆ ರಮಣೀಯವಾಗಲಾರದು, ನಿನ್ನ ಸೌಲಭ್ಯವೇ ನಮ್ಮಂಥಾವರಿಗೆ ಅವಕಾಶವನ್ನುಂಟುಮಾಡುವದು. ಮತ್ತು ಲೋಕಶ್ಲಾಘ್ಯವಾದ ಗಾಂಭೀರ್ಯದಿಂ ವಿರಾಜಿಸುತ್ತಿರುವ ನೀನು ಯಾವ ಲೋಕಕ್ಕೆ ತಾನೇ ಸ್ವಾಮಿಯಲ್ಲ? ಪ್ರಕೃತಿ ಮಧುರಂಗಳಾದ ಸಲ್ಲಾಪಂಗಳು ಯಾರನ್ನಾದರು ತನ್ನವರಂ ಮಾಡುವದು, ಸ್ವಭಾವಸಿದ್ಧಂಗಳಾದ ಸದ್ಗುಣಂಗಳು ಯಾರನ್ನಾದರೂ ಸಂರಕ್ಷಿಸುವವು. ನಿನ್ನ ಪ್ರಥಮ ದರ್ಶನದಿಂದಲೇ ಕೃತಕೃತ್ಯರಾದೆವೆಂಬ ಭರವಸೆವನ್ನುಂಟುಮಾಡುವದರಿಂದ ನಮ್ಮಂತೆ ಎಲ್ಲರಿಗೂ ಮನೋಹರನಾದ ಸಕಲ ಲೋಕಾತಿಶಾಯಿಯಾದ ಸುಚರಿತ್ರನಾದ ನಿನಗೆ ಮಾಡುವ ಉಪಚಾರಂಗಳು ಮೇರುವಿಗೆ ಸ್ವರ್ಣಪುಷ್ಪಂಗಳರ್ಚಿಸಿದಂತಾಗುವದು. ಸ್ತುತಿಗಳು ಪ್ರಾಕೃತವಾಕ್ಯಗಳಿಂ ಸರಸ್ವತಿಯಂ ಸ್ತೋತ್ರವಂಗೈಯುವಂತಾಗುವದು. ಪ್ರಿಯವನ್ನಾಚರಿಸಲೆಣಿಸಿದರೆ, ಜನಗಳಿಗೆ ಚಾಪಲ್ಯವಂತೆ ತೋರುವದು. ಕೊಡೋಣವೆಂಬುವದು ಚಂದ್ರನಿಗೆ ನೂಲೆಳೆಯಂ ಸಮರ್ಪಿಶಿದಂತಾಗುವದು. ನಮ್ಮೆಲ್ಲರ ಚಿತ್ತವೃತ್ತಿಯಂ ಅಪಹರಿಶಿದವಂಗೆ ಕೊಡೋಣವೆಂಬುವದ್ಯಾವುದು, ಪ್ರಾಣೇಶನೆಂಬುವಗೆ ಹೇಳುವ ಉಪಚಾರೋಕ್ತಿಗಳುಂಟೇ ಎಂದು ಸ್ತುತಿಶಿ, ನಮ್ಮ ಒಡತಿಯು ಸಂಕಲ್ಪಿಶಿದ ವಚ್ರಪಣ ನಿರ್ವಾಹವೆಂಬ ಉಪಕಾರವಂ ಮಾಡಿದವಂಗೆ ಪ್ರತ್ಯುಪಕಾರವೆಂಬುವದ್ಯಾವುದು? ಅಸದೃಶವಾದ ನಿನ್ನ ದರ್ಶನದಿಂ ಜನ್ಮಸಾಫಲ್ಯ ಉಂಟಾದ ನಮ್ಮಿಂದ ನಿನಗೆ ಸಫಲವಾಗುವ ಕಾರ್ಯವ್ಯಾವದಿರುವದು. ನಾಥನಾದ ನಿನ್ನನ್ನಾಯಾಸಪಡಿಸಲೋಸುಗ ಪಣವೆಂಬ ಚಾಪಲ್ಯವಂಗೈದು ಏನೋ ಒಂದು ಸಂಕಲ್ಪವಂ ಮಾಡಿದೆನೆಂದು ಮಿಡುಕುತ್ತ ಲಜ್ಜಿತಳಾಗಿ ಹೇಳಲಂಜಿ ಮನದೊಳ್ ಕಳವಳಿಸುತ, ಕೇಳಿದರೆ ನಿನಗೆನ್ನ ದಾಷ್ಟ್ರೀಕವೆಂದು ತೋರ್ಪುದೋ, ಉಸುರಿದಡೆ ಮನಃಪರೀಕ್ಷೆ ಎಂದು ತಿಳಿಯುವನೋ, ಮಾತನಾಡಿದರೆ ಲಜ್ಜಾರಹಿತಳೆಂದು ಮನಕ್ಕೆ ಬರುವದೋ, ಯಾಚಿಶಿದರೆ ದೈನ್ಯವೆಂದರಿವನೋ,

ಸಮ್ಮತಿಸಿದ್ದರೆ ಅದು ಕಷ್ಟವೆಂದು ತೋರುವನೋ, ತಿಳುಹಿದರೆ ಇದೇನು ಹೊಸಪರಿಯೆಂದು ಭಾವಿಸುವನೋ, ಸಂಕಲ್ಪವಿದೆಂದು ಸೂಚಿಸಿದರೆ ಸ್ತ್ರೀ ಸ್ವಭಾವಚಾಪಲ್ಯವೆಂದು ಚಿತ್ತೈಸುವನೋ, ಮನೋರಥವಿದೆಂದು ಸೂಚಿಸಿದರೆ ಅದಕ್ಕೆ ಪಾರವಿಲ್ಲನೆಂದು ಉಪೇಕ್ಷಿಸುವನೋ, ಅಶಕ್ಯವಿದೆಂದರುಹಿದರೆ ಇಷ್ಟುಕಷ್ಟದಿಂ ಫಲವೇನೆಂದು ಮನಕ್ಕೆ ಬಾರದೋ, ಕರ್ತವ್ಯವಂ ವಿಜ್ಞಾಪಿಸಿದರೆ ಇದು ಯಾವಅವಶ್ಯಕವೆಂದು ಕೇಳದಿರುವನೋ, ಪ್ರಾರ್ಥಿಸಿದರೆ ಹಾಸ್ಯಗೊಳಿಸುವನೋ, ಸಮಸ್ತಕಾರ್ಯವಂ ಪೇಳದರೆ ಬುದ್ಧಿಗೆ ಸಮರ್ಪಕವಾಗದೋ ಎಂದು ನಾನಾವಿಧ ವಿಕಲ್ಪಗೊಳುತ, ನಿನ್ನ ಮಧುರಾಲಾಪವನ್ನು ಸಮನಸ್ಕಂನೋಡಿ ಎಲೈ ಸಖಿಯೇ! ಪ್ರಾಣೇಶನು ಏನುಮಾತನಾಡಿದನೇ, ಆತನಮನದೊಳೇನು ಎಣಿಸಿರುವನೇ, ಇನ್ನೆಷ್ಟು ಪೇಳುವಳಾಗೆಂದು ಕಪೋಲವಂನೇವರಿಸುತ್ತ, ನಿನ್ನ ಸದ್ಗುಣ ಕಥನಂಗಳಂಮಾಡುವ ಸಖೀಜನಂಗಳಿಗೆ ಬೇಕಾದುದಂ ಕೊಡುತ, ಅಡಿಗಡಿಗೆ ನಿನ್ನನ್ನೇ ನೆನೆದು ಪರವಶಳಾಗುತ್ತ, ನೀನು ಕುಳಿತಿರ್ದ ಪೀಠವಂ ತನ್ನ ಇಷ್ಟದೇವತೆಯಂತೆ ಕಾಣುತ್ತ, ಸುಂದರವಾದ ನಿನ್ನ ಪಾದ ಸೂಂಕಿತದೆಸೆಯಲ್ಲಿ ಮತ್ತೊಬ್ಬರು ಸಂಚರಿಸದಂತೆ ಆಜ್ಞಾಪಿಸುತ್ತ, ತನ್ನ ತಂದೆಯಾದ ರಾಯನು ಬಿಡಾರವನ್ನೈದುತ್ತಿದ್ದರೆ ನಿನ್ನ ಕುಶಲವನ್ನುಚ್ಚರಿಸಲೋಸುಗಬಂದ ಆಮಹಾನುಭಾವನಿಗೆಏನೇನು ಉಪಚಾರಗಳಂಮಾಡದಿರೆಂದು ಬಾರಿಬಾರಿಗೆ ಕೇಳುತ, ಎಷ್ಟುಆಯಾಸದಿಂ ಬಂದನೊ ಎಂದು ವ್ಯಸನಪಡುತ, ವಜ್ರೋದ್ಧಾರದಿಂದ ಕಮಲಕೋಮಲವಾದ ಹಸ್ತವು ಎಷ್ಟುಕಂದಿರುವದೋ ಎಂದು ಚಿಂತಿಸುತ್ತ, ನಿನ್ನ ಶೌರ್ಯ, ಧೈರ್ಯ, ಗಾಂಭೀರ್ಯ, ಔದಾರ್ಯ, ಮಾಧುರ್ಯಾದಿಗಳಂ ಕೇಳದುದರಿಂದ, ಕೆಲಬಲದೊಳ್ ಪೇಳುತ್ತಿರುವ ಸಖೀಜನಂಗಳಲ್ಲಿ ರುಚಿಯಿಲ್ಲದೆ, ಪ್ರತ್ಯುತ್ತರಕೊಡುವದರಲ್ಲಿ ಅಡ್ಡಮುಖವಂಮಾಡುತ, ಸಕಲ ಕಾಮಿನೀಜನಕಾಂಕ್ಷಣೀಯವಾದ ನಿನ್ನ ಕಮನೀಯಸೌಂದರ್ಯದಲ್ಲೇ ನಿರಂತರ ಲಗ್ನಚಿತ್ತಳಾಗಿ, ಅಲ್ಲಿ ಸುಳಿದಾಡುವ ಸಖೀಜನಂಗಳಂನೋಡಿ ನೀನೇ ಬಂದನೆಂದು ಬಾರಿಬಾರಿಗೂ ಭಾವಿಸಿ, ಥಟ್ಟನೆ ಎದ್ದು ಲಜ್ಜೆಯಿಂ ಮರೆಯಾ

ಗುತ್ತ, ನಿನ್ನ ವಿರಹತಾಪದಿಂ ಚಂದ್ರಿಕಾಸಿಕರವಂದಾವಾನಲಜ್ವಾಲೆಯಂತೆ ಭಾವಿಸುತ್ತ, ಕರ್ಪೂರರಾಶಿಯಿಂ ಬೆರಸಿದ ಪಾಟೀರಪಂಕೋದಕವಂತಳಿಯುತಲಿದ್ದರೆ, ಉಷ್ಣೋದಕವಂ ಯಾಕೆಯೆರಚುವಿರೆಂದು ಕಳವಳಗೊಳುತ, ಶೈವಾಲದಿಂ ರಚಿಸಿದ ಪುಷ್ಪಶಯ್ಯೆಯ ಪರಾಗವಂತ್ಯುಷ್ಣಾಗ್ನಿಚೂರ್ಣವೆಂದುತ್ತಿಳಿದು ಅದಂಬಿಟ್ಟು ತೆರಳುತ, ಧಾರಾಗೃಹವಮಧ್ಯದೊಳ್ ಹಿಮಬಿಂದುಗಳಂ ಎರಚುತಲಿರುವ ತುಂತುರವನಿಗಳನ್ನೋಡಿ, ಇದೇನುವಿಚಿತ್ರವು ಮೇಘವು ಉಷ್ಣೋದಕವಂ ವರ್ಷಿಸುವುದುಂಟೇ ಎಂದು ಭ್ರಮೆಗೊಳುತ, ತಳಿರುಗಳಿಂದ ರಚಿಸಿರುವ ಕಮಲದಳತಲ್ಪವನ್ನೋಡಿ, ಈ ಅಗ್ನಿಶಿಖಿಯಿಂದ ಸಂಪಾತವಂ ಮಾಡೆಕೆಣಿಸಿದ ಮುಗ್ಧಸಖೀಜನಂಗಳಿಗೆ ಇನ್ನೂ ವಿವೇಕ ಉದಯಿಸಲಿಲ್ಲವೆಂದು ಜರಿಯುತ ಅತಿಪ್ರಯಾಸದಿಂ ರಾತ್ರಿಯಂಕಳೆದು, ರವಿವಿರಹಸಂತಪ್ತಳಾದ ಕಮಲಿನಿಯು, ಇನದರ್ಶನವಂ ಅಪೇಕ್ಷಿಸುವಂತೆ, ಸರ್ವಲೋಕದರ್ಶನೀಯನಾದ ನಿನ್ನ ಆಗಮನವನ್ನೇ ಅಪೇಕ್ಷಿಸುತ, ನನ್ನೊಡನೆ ತನ್ನ ಮನೋರಥವೆಲ್ಲವಂ ವಿಸ್ತಾರವಾಗಿಪೇಳಿ, ನಿನ್ನ ಪಾದಪದ್ಮಂಗಳಿಗೆ ವಿನಯದಿಂ ನಮಿಸಿ, ವಿಜ್ಞಾಪಿಸಿದೆನೆಂದು ತಿಳುಹಿಬಾರೆಂದು ತನ್ನಂ ಕಳುಹಿಸಿದಳೆಂದು ವಿಜ್ಞಾಪಿಸಲಾವಾಕ್ಯಮಂ ಕೇಳಿ ಸುಗಂಧಮಹಾರಾಯನು ತನ್ನಮನದೊಳ್ ಸೇವಕಳಾದ ಈ ಸಖಿಯು ವ್ಯಕ್ತತಾನುಸಾರವಾಗಿ ಇಷ್ಟು ನಿಪುಣವಾಕ್ಯವಂ ಪೇಳಿದುದರಿಂದ ಈ ಜನಕ್ಕೆ ಒಡತಿಯಾದ ಸೌಗಂಧಿಕಾದೇವಿಯು ಎಷ್ಟುಪ್ರೌಢೆಯಾಗಿರುವಳೋ ಎಂದು ಆಲೋಚಿಸಿ, ಎಲೈ ಚತುರಳಾದ ಸಖಿಯೇ! ನಿಮ್ಮ ಮನೋನುಗುಣವಾಗಿ ನಡೆಯುವ ನಮ್ಮಲ್ಲಿ ಮರೆಮಾಚುವದುಂಟೇ! ನಿಮ್ಮ ಮನೋರಥವಿದ್ದರೂ ಪೇಳಬಹುದು, ಯಾರೊಡನೆ ಈ ಸಂದೇಹವು ಯಾವದಿದ್ದರೂ ಸಾಧಿಸಿಕೊಡುವೆನು, ನಿಮ್ಮ ಅವಶ್ಯಕವು ನಮ್ಮದಲ್ಲವೇ? ಬಡಬಾಗ್ನಿಯು ಸಮುದ್ರವಂ ಶೋಷಿಸುವದಲ್ಲದೆ, ಅದಂಹೊಂದುವ ನದಿಗಳಂ ಎಂತು ಉಪೇಕ್ಷಿಸುವದೋ? ಅದೇರೀತಿಯಲ್ಲಿ ಮದನಸಂತಾಪವು ಪುರುಷನಂ ಸಂತಾಪಗೊಳಿಸುವಂತೆ, ಬಾಲೆಯರಂ ಶ್ರಮಪಡಿಸುವದಿಲ್ಲ, ಹಗಲುಕಳದಬಳಿಕಲ್ಲವೆ ಚಂದ್ರಕಿರಣವು ಕುಮುದಿನಿಯ ಸಂತಾಪಶಮನ

ಮಾಡೋಣವೆಂಬುದು, ಆದಂತಿರಲಿ ; ಸೌಗಂಧಿಕಾದೇವಿಯು ಹೇಳಿದ ವಾಕ್ಯವಂ ಕೇಳುವಳಾಗೆಂದು ವಿಶ್ವಾಸದಿಂ ಕೇಳಲಾ ಚಿತ್ರಲೇಖೆಯು, ದೇವಸೀ ನಾಥನಾದ ನಿನ್ನಲ್ಲಿ ಹೇಳುವುದರಿಂದಲೇ ಸಫಲವಾಗಬೇಕು, ವಜ್ರೋದ್ಧಾರವಂ ಮಾಡಿ ದಿಗಂತವಿಶ್ರಾಂತ ಕೀರ್ತಿಯಿಂ ಮೆರೆಯುವ ನಿನಗೆ ಅಶಕ್ಯವಾದುದು ಇನ್ನು ಯಾವದಾದರೂ ಉಂಟೆ ? ಶಾಶ್ವತ ಸೌಮಂಗಲ್ಯವಂ ಪ್ರಾರ್ಥಿಸುವ ನಮ್ಮ ದೇವಿಯು ಅನುಮಾಡುವ ಗಜಗೌರಿಯ ನೋಂಪಿಗೋಸುಗ ಚತುರ್ದಂತದಿಂಕೂಡಿ ಶುಭ್ರಸ್ಫಟಿಕಸನ್ನಿಭವಾಗಿ ಸುಲಕ್ಷಣಗಳಿಂ ಯುಕ್ತವಾಗಿರುವ ಒಂದು ಗಜಶ್ರೇಷ್ಠವಂ ತಂದಿತ್ತು ಮನೋರಥ ಸಫಲವಾಗುವಂತೆ ಮಾಡಬೇಕೆಂಬುವದೊಂದು ಸಂಕಲ್ಪವಿರುವದೆಂದು ವಿಜ್ಞಾಪಿಸಲದಂ ಕೇಳಿ, ಸುಗಂಧರಾಜನು ಎಲೈ ಸಖಿಯೇ! ನಿಮ್ಮ ಸೌಗಂಧಿಕಾದೇವಿಯು ಸತ್ಯಸಂಕಲ್ಪಳಾದರೆ ದೇವತಾಪ್ರಸಾದದಿಂದದು ಸಾಧ್ಯವಾದೀತೆಂದು ಹೇಳುತ್ತಿರಲಾಗ ಯಾವುಸೂಚಕವಾದ ಭೇರೀಶಂಖಕಾಹಳಾದಿ ವಾದ್ಯಧ್ವನಿಗಳು ಘೋರೆಂದು ಮೊಳಗಲು ಅದಂನೋಡಿ ಸಖೀಜನಂಗಳೆಲ್ಲರೂ ಶುಭಸೂಚಕವೆಂದು ಹೇಳಿಕೊಳ್ಳುತ್ತಿರಲು ; ಸುಗಂಧರಾಜನು ತನ್ನ ಮನದೊಳ್ ಈ ರಾಜಪುತ್ರಿಯು ಸಖೀಮುಖದಿಂದ ಹೇಳಿಕಳುಹಿಸಿರುವ ವಾಕ್ಯವಂ ಪರಿಭಾವಿಸಿನೋಡಿದರೆ, ಸುಲಕ್ಷಣಲಕ್ಷಿತವಾಗಿ ಚತುರ್ದಂತಗಳಿಂಕೂಡಿ ಶುಭ್ರವರ್ಣವುಳ್ಳ ಗಜವು ಭೂಲೋಕದಲ್ಲಿ ಕಂಡುಕೇಳಿದುದೇ ಇಲ್ಲ, ಇಲ್ಲದವಸ್ತುವಂ ತಂದುಕೊಡುವದೆಂದು ಹೇಳಿ ತನ್ನ ಮನೋರಥವನ್ನು, ಇದಕ್ಕೆ ಉತ್ತರ ಮಾಡುವ ನನ್ನ ಕ್ರಮವನ್ನು ಕೂಡಾ ನಿಷ್ಫಲವಾಗುವಂತೆ ಮಾಡಿಕೊಳ್ಳುವದಕ್ಕೆ ಇವಳು ಮುಗ್ಧಳಲ್ಲ, ಇನ್ನೇನಾದರೂ ವಿಕಲ್ಪವಂ ಎಣಿಸುವದಕ್ಕೆ ಈ ಸಖಿಯು ಹೇಳಿದಮಾತಿನಲ್ಲಿ ಯಾವದಕ್ಕೂ ಅಸ್ಪದವಿಲ್ಲ. ಇರುವ ವಸ್ತುವಂ ತಿಳಿದು ಅದಂ ಬಯಸಿದಳೆಂದರೆ, ಲೋಕದಲ್ಲಿರುವ ಪದಾರ್ಥಜ್ಞಾನವು ನಮಗೆ ಉಂಟಾಗಿರುವಂತೆ ಎಷ್ಟುಪ್ರೌಢೆಯಾದರೂ ರಾಜಪುತ್ರಿಯಾದ ಈ ಸ್ತ್ರೀಗೆ ತಿಳಿಯಲಾರದು. ಮತ್ತು ಸ್ತ್ರೀಯರುಗಳಲ್ಲಿ, ಮೈತ್ರೇಯಿ, ಗಾರ್ಗೀ, ಸುಲಭಾ, ಶಾಂಡಿಲೀಯರುಗಳೆಂಬ ಸ್ತ್ರೀಯರು

ಗಳಿಗೆ ಲೋಕವ್ಯವಹಾರವು ಪರೋಕ್ಷದಲ್ಲಿ ಕರತಲಾಮಲಕದಂತೆ ತೋರುತ್ತಲಿತ್ತು ಎಂಬುವದು ಪ್ರಸಿದ್ಧವಲ್ಲವೆಂದರೆ, ಈ ಸ್ತ್ರೀಯರುಗಳು ಬಹುಕಾಲ ತಪಸ್ಸಿನಿಂ ಯೋಗಿನೀಯರುಗಳಾದ್ದರಿಂದ ತಿಳಿಯುವದು ಯುಕ್ತವೇಸರಿ. ಹಾಗೆ ಈ ರಾಜಪುತ್ರಿಯು ತಪಸ್ವಿನಿಯೂ ಅಲ್ಲ, ಮತ್ತೆ ಯಾವ ಭರವಸದಿಂದ ಈ ಅಶಕ್ಯವಾದ ಪಣವಂ ಅಪೇಕ್ಷಿಸಿದಳೆಂದರೆ, ಯಾವಮಹಾತ್ಮರೋ ಇವಳಲ್ಲಿ ಉಂಟಾಗಿರುವ ಸದ್ಗುಣರೂಪಾದಿಗಳಂ ನೋಡಿ ಇವಳಿಗೆ ಸದೃಶನಾದ ಪತಿಯು ಲಭಿಸುವದಕ್ಕೆ ಲೋಕದಲ್ಲಿ ಸಾಧಾರಣ ಜನರಿಗೆ ಅಶಕ್ಯವಾದ ವಸ್ತುಗಳು ಇರುವವಂ ತಿಳಿದು ಅದಂ ತಂದುಕೊಡುವದಕ್ಕೆ ಯಾರು ಶಕ್ತರೋ ಆತನೇ ನಿನ್ನ ಪತಿಯಾಗುವನೆಂದುಹೇಳಿ, ಈ ವಸ್ತುಗಳನ್ನೇ ಪಣವಾಗಿ ಕಲ್ಪಿಸಿಹೇಳಿ, ಇದು ವಶವಾದಬಳಿಕ ಪಾಣಿಗ್ರಹಣವಂ ಮಾಡಿಕೊಳ್ಳಬಹುದು ಎಂದು ಹೇಳಿರಬಹುದಾದ್ದರಿಂ ಈ ಸಖಿಯು ನನ್ನ ಮನಮರುಗುವಂತೆ ರಾಜಪುತ್ರಿಯು ಹೇಳಿದ ವಾಕ್ಯವಂಹೇಳಿ ನನ್ನಂ ಒಪ್ಪಿಕೊಳ್ಳುವಂತೆ ಮಾಡಿದ್ದರಿಂದ, ಯಾವವಸ್ತುವು ಲೋಕತ್ರಯದಲ್ಲಿ ಯಾರಲ್ಲಿದ್ದರೂ ತಂದುಕೊಡಬೇಕಾಯಿತು ಈ ವಸ್ತುಗಳು ತುರಗಶೃಂಗವೆಂಬಂತೆ ಇರುವದೇ ಅಪ್ರಸಿದ್ಧವಾದರೆ ನಾವು ಕೊಟ್ಟ ಭಾಷೆಗೆ ತಪ್ಪದಂತೆ ಚರಾಚರವಂ ಸೃಜಿಸುವ ಬ್ರಹ್ಮದೇವನ ಪ್ರಸಾದವನ್ನಾದರೂ ಪಡೆದು ತಂದುಕೊಡಬೇಕಾಯಿತು. ಲೋಕದಲ್ಲಿ ಹೀಗೆ ರಾಜಪುತ್ರಿಯರು ಬಹಳವಾಗಿರುವಲ್ಲಿ ಮುನ್ನಿನ ಹಾನಿವೃದ್ಧಿಯಂ ತಿಳಿಯದೆ ಮಹಾಸಾಹಸವಂಮಾಡಿದರೆ ಈ ಸ್ತ್ರೀಗೆ ನಾನು ವಶ್ಯನಾದೆನೆಂಬ ಲೋಕಾಪವಾದ ಉಂಟಾದರೆ ಎಂತು ಪರಿಹರಿಸಕೊಳ್ಳಬೇಕೆಂದರೆ ಯಾವಸಾಹಸದಿಂದಲಾದರೂ ಹಿಡಿದ ಕಾರ್ಯವಂ ನಿರ್ವಹಿಸಿ ಬೇಡಿರುವ ವಸ್ತುಗಳಂ ಈ ರಾಜಪುತ್ರಿಗೆ ತಂದುಕೊಟ್ಟು ಕೃತಕೃತ್ಯನಾದಬಳಿಕ ರಾಜಪುತ್ರಿಯಾದ ಲೋಪಾಮುದ್ರಾದೇವಿಯಂ ಅಗಸ್ತ್ಯಮಹಾಮುನಿಗೆ ಕೊಟ್ಟಂತೆ, ಕೋಟಿಧನ ವರದಕ್ಷಿಣಾಸಮೇತವಾಗಿ ಯೋಗ್ಯನಾದ ಋಷಿಕುಮಾರನಿಗೆ ಮೂರ್ಖಳಾದ ಈರಾಜಪುತ್ರಿಯಂ ಕೊಟ್ಟು, ಸ್ತ್ರೀಗೆ ವಶ್ಯನಾಗಲಿಲ್ಲವೆಂಬ ಲೋಕದ ಜನರಲ್ಲಿ ಶ್ಲಾಘನೆ

ಉಂಟಾಗುವಂತೆ ಮಾಡಿಕೊಳ್ಳುವೆನೆಂದು ನಿಶ್ಚೈಸಿ, ಕೊನೆಯಿನಾಸುಯೊಳ್ ಹಸ್ತಮಂ ಇಡಲೆಳಸಿದ ರಾಜಕುಮಾರನಂ ನೋಡಿ ಸುಮತಿಯು, ಇವರಿಗೆ ಅವಂ ತಿಳಿಯದಂತೆ ವಿಶಾಖೆಯುಮೇಲಣ ಪುಷ್ಪಪರಾಗಮಂ ಬೆರಸಿಕೊಕ್ಷೆತೋಳಸುಗಪ್ಪೋಲ್ ಎಂಬಂತೆ ಕರವಸ್ತ್ರವಂ ರಾಯನಿಗೆ ಒಪ್ಪಿಸಲು, ಆಗ ಆ ರಾಯನು ಮತ್ತೂ ಮನದೊಳಗೆ ಆಲೋಚಿಸುತ್ತ ಜಗದೀಶ್ವರಿಯ ಅನುಗ್ರಹದಿಂ ನಾನು ಹಿಡಿದ ಕಾರ್ಯವು ಸುಲಭದಿಂದ ಲಭಿಸುವದಲ್ಲದೇ ದುರ್ಲಭವಾಗಲಾರದು. ನನಗೆ ಅಶಕ್ಯವಾದ ಕಾರ್ಯೋದ್ಯೋಗದಲ್ಲಿ ಮೊದಲು ನನ್ನ ಮನಸ್ಸೇ ಒಡಂಬಡುವದಿಲ್ಲ. ನನ್ನ ಶ್ರಮವಂ ಸಫಲಗೊಳಿಸುವದಕ್ಕೆ ಜಗದೀಶ್ವರಿಯೇ ಬೆಂಬಲವಾಗಿರುವದ್ದರಿಂದ ಈ ರಾಜಪುತ್ರಿಯು ಸತ್ಯಸಂಕಲ್ಪಳಾಗಿ ಧನ್ಯಳಾಗುವಳೇ ಹೊರ್ತು ಸಾಧಾರಣಸ್ತ್ರೀಯರುಗಳಂತೆ ಇರತಕ್ಕವಳಲ್ಲವೆಂದು ನಿಶ್ಚೈಸುತ್ತಿರಲು; ಆಗ ರಾಯನ ಬಲಭುಜವು ಅದರುತ್ತಿರಲು ಅದನ್ನೋಡಿ ಸುಮತಿಯು ರಾಯನು ಸಂಕಲ್ಪಿಸಿದ ಕಾರ್ಯವು ಶೌರ್ಯಮೂಲಕದಿಂದ ಲಭಿಸುವದೆಂದು ನಿಶ್ಚೈಸುತ್ತಿರಲಾ ಚಿತ್ರಲೇಖೆಯು ಸೌಗಂಧಿಕಾದೇವಿಯು ಕಳುಹಿದ ದಿವ್ಯಗಂಧಮಂ ರಾಯನಿಗೆ ಅನುಲೇಪನಂಗೈದು, ಮಾಲತೀ ಕುಸುಮಶೇಖರದಿಂದಲಂಕರಿಸಿ, ಅಮೂಲ್ಯವಸ್ತ್ರಭೂಷಣಗಳಂ ಮುಂದಿರಿಸಿ, ಸುವರ್ಣದ ಭರಣಿಯಿಂದ ರತ್ನಸರವಂ ತೆಗದು ಬಿಡಿಸಿ, ರಾಜಶಿರೋಮಣಿಯೆ! ಈ ರತ್ನಸರವು ಪೂರ್ವದಲ್ಲಿ ಪೃಥುಚಕ್ರವರ್ತಿಯಿಂದಾಜ್ಞಾಪ್ತಳಾದ ಭೂದೇವಿಯು ಗೋರೂಪವಂ ಪಡೆದು ಲೋಕದಲ್ಲಿ ಸಕಲವಸ್ತುಗಳಂ ಸಮೃದ್ಧಿಯಾಗಿ ಉಂಟುಮಾಡುವದಕ್ಕೆ ಹಿಮಾಚಲವಂ ಕರುವಂಮಾಡಿ ಕ್ಷೀರವಂ ಕರೆಯುವಂತೆ ಅಮೋಘವಾದ ರತ್ನಂಗಳಂ, ಸಂಜೀವನಾದಿ ದಿವ್ಯೌಷಧಿಗಳು ಮೊದಲಾದ ವಸ್ತುಗಳಂ ದೇವತೆಗಳಿಗೆ ಕೊಡುತ್ತಿರಲು, ಆಗ ಉಂಟಾದ ಮಣಿನಿಕರವಂ ಬ್ರಹ್ಮದೇವನು ಕೆಲವುದೇವತೆಗಳಿಗೆ ಕೊಟ್ಟು, ಆದರಲ್ಲಿ ಶ್ರೇಷ್ಠವಾದ ರತ್ನಂಗಳಂ ಕುಬೇರನ ವಶವಂ ಮಾಡಲು, ಕಾಲಾಂತರದೊಳ್ ಷೋಡಶಮಹಾರಾಯರಲ್ಲಿ ಪ್ರಸಿದ್ಧನಾದ, ದೇವಕಾರ್ಯನಿರ್ವಾಹಕನಾದ, ಅಂಗರಾಜನಿಂದ, ಆವನ ಆಳಿಯ

ನಾದ ಗಜಪತಿಯಾದ ಕಳಿಂಗರಾಯನಿಗೆ ಲಬ್ಧವಾಗಿ ಅದೇ ಪರಂಪರೆಯಿಂದ ವಿಜಯವರ್ಮರಾಯನ ವಶವಾದುದರಿಂ, ಇದಂ ಪುತ್ರಿಗಿಂತಧಿಕವಾಗಿ ಪ್ರೇಮದಿಂದ ರಕ್ಷಿಸುತಲಿರ್ದ ಈ ರಾಯನಿಂದ ವರ್ಷವರ್ಧನ ಮಹೋತ್ಸವದಲ್ಲಿ ಸೌಗಂಧಿಕಾದೇವಿಗೆ ಲಭಿಸಿದ್ದರಿಂ ಆ ಸೌಗಂಧಿಕಾದೇವಿಯು ಈ ವಸ್ತುವು ತಮಗೆ ಯೋಗ್ಯವೆಂದು ಭಾವಿಸಿ ಕಳುಹಿಸಿರುವಳು; ಸಮಸ್ತಾಭರಣಂಗಳಿಂದೊಪ್ಪುವ ತಮಗೆ ಇತರಾಭರಣಗಳೆಲ್ಲವೂ ಭಾರಪ್ರಾಯವಾದರೂ, ಕೌಸ್ತುಭರತ್ನವಂ ಶಿಲಾಶಕಲವೆಂದುಪೇಕ್ಷಿಸದೆ, ಲಕ್ಷ್ಮೀದೇವಿಗೆ ಒಡಹುಟ್ಟಿದುದೆಂಬ ಪ್ರೇಮದಿಂ ನಾರಾಯಣನು ವಕ್ಷಸ್ಥಳದಲ್ಲಿ ಧರಿಸಿರುವಂತೆ ಈ ರತ್ನಸರವಂ ನಮ್ಮ ಸೌಗಂಧಿಕಾದೇವಿಯಲ್ಲಿ ಪ್ರೇಮವಿಟ್ಟು ಧರಿಸಬೇಕು, ಮತ್ತು ಈ ವಸ್ತುವು ಇರುವದೇಶದಲ್ಲಿ ಅನಾವೃಷ್ಟಿಯಭಯವು ಸಂಭವಿಸದು. ಮನ್ಮಥವಿಲಾಸಸಮಯದೊಳ್ ಪುರುಷನು ಸ್ತ್ರೀಶತಂಗಳನಾದರೂ ಸಂಭೋಗಿಸುವನು. ಮತ್ತು ಗೋದೋಹನಕಾಲದಲ್ಲಿ ಧರಿಸಿದರೆ ಅಪರಿಮಿತ ಕ್ಷೀರವು ಲಭಿಸುವದು. ಇದುಹೊರತು ಈ ದಿವ್ಯರತ್ನಹಾರದಲ್ಲಿ ಇನ್ನೇನು ಮಹಾತ್ಮ್ಯವಿರುವದೋ ಎಂದುಪೇಳಿ ಸುಗಂಧರಾಜೇಂದ್ರನ ಕಂಠದೊಳಲಂಕರಿಸಲು; ಆಗ ಆ ರತ್ನಸರದ ಪ್ರಭೆಯು ಬಾಲಸೂರ್ಯನಕಾಂತಿಯಂತೆ ಆ ಮಂಟಪದ ವಜ್ರಸ್ತಂಭಗಳಂ ಪದ್ಮರಾಗಸ್ತಂಭಗಳಂತೆ ಮಾಡುತ, ಮತ್ತು ರಾಯನ ದೇಹಕಾಂತಿಯಿಂದೊಡಗೂಡಿ ದೇವಿಗೆ ಮರೆಯಾಗಿರುವ ತೆರೆಯನ್ನತಿಕ್ರಮಿಸಿ ಮುತ್ತಿನ ಶೆರಗಿನಿಂದೊಪ್ಪುವ ದೇವಿಯ ದುಕೂಲವಂ ಕೌಸುಂಭವಸ್ತ್ರದಂತೆ ಮಾಡುತ, ರಾಯನ ಅನುರಾಗವೇ ಹೊರಹೊಮ್ಮಿ ದೇವಿಯ ಹೃದಯವಂ ವ್ಯಾಪಿಸುವಂತೆ ತೋರಲು ಅದಂನೋಡಿ ಸಖೀಜನರು ತಮ್ಮೊಳ್ ತಾವು ತಿಳಿಯದವರಂತೆಯೇ ಏಸಿರೇ! ಈ ಸಮಯದಲ್ಲಿ ದೇವಿಗೆ ಕೌಸುಂಭವಸ್ತ್ರವಂ ಒಪ್ಪಿಸಿದಿರಾ ! ಎಂದು ಓರ್ವಳು, ಕುಂಕುಮಪರಾಗವಾಗಿರಬೇಕು ಅದರಿಂ ಕೆಂಪುಕಾಣುವದು ಒದರಿಬಿಡೆಂಬುವಳೊರ್ವಳು, ಅದು ದಿಟವೆಂದು ಕುಂಕುಮವಂ ಒರಸುವದಕ್ಕೆ ಕೈನೀಡುವಳೋರ್ವ ಮುಗ್ಧಕನ್ಯೆಯು, ದೇವಿಯ ಶರೀರದ ಪ್ರಭೆಯಲ್ಲಿ ರಾಯನ

ಮಾಪಾದ ಐದನೇಯುಗಾವರ್ತವೋ ಎಂಬಂತೆಯೂ, ಬ್ರಹ್ಮನಿಂ ಸಂಗ್ರಹಿಸಲ್ಪಟ್ಟ ಸ್ತ್ರೀರತ್ನಕೋಶವೋ ಎಂಬಂತೆಯೂ, ಮತ್ತು ಶೃಂಗಾರರಸವೇ ಅಂತಃಪುರ ರೂಪಗೊಂಡಂತೆಯೂ ಇರುವ ಆ ಕನ್ಯಕಾಂತಃಪುರದಲ್ಲಿ ಕಟಾಕ್ಷವಿಕ್ಷೇಪದಿಂ ಕುವಲಯ ಮಾಲೆಗಳಿಂ ಶೋಭಿಸುವಂತೆ, ಭ್ರೂವಿಲಾಸದಿಂ ಮನ್ಮಥ ಚಾಪಗಳಂ ಉಂಟುಮಾಡುವಂತೆ, ಕೇಶಕಲಾಪದಿಂ ಕೃಷ್ಣಪಕ್ಷದ ರಾತ್ರಿಯಂತೆ, ಮುಗುಳುನಗೆಗಳಿಂ ವಿಕಸಿತ ಕುಸುಮಯುಕ್ತವಾದ ವಸಂತಸಮಯದಂತೆ, ಆಭರಣನಿಕರಗಳಿಂದ ಮಯೂರನಿವಹವಂ ರಚಿಸಿರುವಂತೆಯೂ ಕಂಗೊಳಿಸುವ ಸಖೀಬೃಂದವಂ ನೋಡುತ್ತ, ಸಂಗೀತಕಾಲದೊಳ್ ಅನ್ಯೋನ್ಯ ಹಸ್ತಾವಲಂಬನವೇ ಪಾಣಿಗ್ರಹಣವಾಗಿ ವೇಣುಗಾನವೇ ಚುಂಬನಭೇದವಾಗಿ; ವಿಪಂಚಿಕಾಭ್ಯಾಸದಲ್ಲಿ ನಖವ್ಯಾಪಾರ ಉಂಟಾಗಿ, ಮೃದಂಗದಲ್ಲಿ ಆಲಿಂಗನ ಉಂಟಾಗಿ ಅನುಲೇಪನದಿಂದಸ್ತನಸ್ಪರ್ಶ ಉಂಟಾಗಿ, ವಸ್ತ್ರಾಂತರಧಾರಣೆಯಲ್ಲಿ ನೀವಿಮೋಚನ ಉಂಟಾಗಿ, ಸುರತಾಭ್ಯಾಸವಂ ಮಾಡುವಂತೆ ಶೋಭಿಸುವ ಶೋಭನಾಂಗಿಯರಂ ನೋಡುತ, ಮತ್ತೊಂದೆಡೆಯೊಳ್ ನೇತ್ರಗಳೇ ಕರ್ಣಾಲಂಕಾರವಾದ ನೀಲೋತ್ಪಲಗಳಂತೆ, ಮುಗುಳುನಗೆಗಳೇ ಶ್ರೀಗಂಧದ ಅಂಗರಾಗದಂತೆ, ಅಧರಕಾಂತಿಯೇ ಕುಂಕುಮಾನುಲೇಪದಂತೆ, ಜಲತೆಯೇ ಚಂಪಕಕುಸುಮದ ದಂಡೆಯಂತೆಯೂ ತೋರುತಲಿರುವದರಿಂ, ಮತ್ತೊಂದು ಆಭರಣವಂ ಅಪೇಕ್ಷಿಸದೆ ಪ್ರಕಾಶಿಸುವ ಸ್ತ್ರೀಸಮೂಹವಂ ನೋಡುತ, ಮತ್ತೊಂದೆಡೆಯೊಳ್ ಅಳತ್ತಿಗೆಯರಸವೇ ಪಾದಭಾರವಾಗಿ, ಅಂಗರಾಗವೇ ಅಂಗಭಾರವಾಗಿ, ಅಂಶುಕಧಾರಣೆಯೇ ಆಯಾಸವನ್ನುಂಟುಮಾಡುವದಾಗಿ, ಮುಡಿದ ಪುಷ್ಪವೇ ಮುಡಿಗೆ ಭಾರವಾಗಿರುವ ಸುಕುಮಾರಾಂಗಿಯರಂ ನೋಡುತ, ಮತ್ತೊಂದೆಡೆಯೊಳ್ ಪರಸ್ಪರವಾಗಿ ಎಲೈ ಶೋಭನಾಂಗಿಯೇ ! ಶುಕಪಂಜರಕ್ಕೆ ಮುತ್ತಿನಛಾದರವಂ ಪೊದ್ದಿಸಿ, ದಾಡಿಮಫಲವಂ ಕೊಡುವಳಾಗು ? ಎಲೈ ಕಲವಾದಿನಿಯೇ ! ಮಣಿಮಯ ಪುತ್ಥಳಿಗಳ ಕಂಚುಕಗಳಲ್ಲಿ ಮಕರಿಕಾಪತ್ರಗಳಂ ಬರೆಯುವಳಾಗು. ಎಲೈ ಉತ್ಪಲಳೇ ನೀಲೋತ್ಪಲಗಳಂ

ಪುರಹತ ಜಗಲಿಗಳಂ ಗುಡಿಸುವಳಾಗು. ಎಲೈ ಕಾಮಿನಿಯೇ! ಕಾಮಿಜಂ ನೆಗಳಿಗೆ ಕಾಮಲದ ಮಕರಂದವಂ ಕುಡಿಸುವಳಾಗು. ಎಲೈ ಮಾನಿನಿಯೇ! ಮಯೂರಿರಂಗಳಂ ಧಾರಾಗೃಹಂಗಳಂ ನೃತ್ಯಿಸುವಳಾಗು. ಎಲೈ ಚತುರೆಯೇ! ಚಕ್ರವಾಕಗಳಿಗೆ ಮೃಣಾಳಶಕಲಗಳಂ ಕೊಡುವಳಾಗು. ಎಲೈ ಕೋಮಲಾಂಗಿಯೇ! ಕೋಗಿಲೆಗಳಿಗೆ ಕೋಮಲವಾದ ಮಾವಿನಕಿಸಲಯಂಗಳಂ ಕೊಡುವಳಾಗು. ಎಲೈ ಮಾಧವಿಯೇ! ಮರಿಗಿಳಿಗಳಿಗೆ ಮಾತುಗಳಂ ಕಲಿಸುವಳಾಗೂ ಎಂದು ಮಾತನಾಡುತ್ತಲಿರುವ ಚೇಟೀಜನರಂ ನೋಡುತ ಬರುತ್ತಿರುವ ಸಮಯದೊಳ್, ಅಂತಃಪುರದ ನಾರೀಜನಂಗಳು ಮುತ್ತಿನ ಜಾಲಂದರದ ಗವಾಕ್ಷದೊಳ್ ಕುಳಿತು ಹೊರಗೆ ಕೈಸಾಲೆಯ ಮಾರ್ಗದೊಳ್ ಬರುತಲಿರುವ ಸುಂದರಾಂಗನಾದ ಸುಗಂಧರಾಜನಂ ನೋಡುತ್ತಿರಲಾಗ ವಿಜಯವರ್ಮರಾಯನು ಸುಗಂಧರಾಜೇಂದ್ರನು ಕನ್ಯಾಂತಃಪುರದಿಂ ತೆರಳಿಬರುವದಂ ತಿಳಿದು ಆಸ್ಥಾನದಿಂದೆದ್ದು ಪರಿವಾರಸಮೇತನಾಗಿ ಎದುರುಗೊಂಡು ಬರಲಾಗ ಸುಮತಿಯು, ಚಿತ್ರಲೇಖೆಯು ಸುಗಂಧರಾಜೇಂದ್ರನೊಡನೆ ವಿಜ್ಞಾಪನೆಯಂಗೈದ ವೃತ್ತಾಂತವೆಲ್ಲವಂ ವಿಜಯವರ್ಮರಾಯನಿಗೆ ತಿಳುಹಿಸಲವನು ಸುಗಂಧರಾಜೇಂದ್ರನಂ ಶ್ಲಾಘಿಸುತ್ತಿರಲು, ಬಳಿಕ ಸುಗಂಧರಾಜೇಂದ್ರನು ತುರಗಾರೂಢನಾಗಿ ಸುಮತಿಯೊಡಗೂಡಿ ಬಿಡಾರಕ್ಕೆ ಕುರಿತು ಬರುತ್ತಿರುವ, ಛತ್ರಚಾಮರಗಳಿಂ ಶೋಭಿತನಾದ ಸುಗಂಧರಾಜೇಂದ್ರನ್ನೋಡುವ ಕುತೂಹಲದಿಂ ಬಂದು ಪ್ರಾಸಾದಪಙ್ಕ್ತಿಗಳ ಗವಾಕ್ಷದಿಂ ನೋಡುತ್ತಿರುವ ತರುಣೀಜನಂಗಳು, ಮಾನಿನೀಮಾನಪನ್ನಗಹ ಮದನನೋ, ಜಯಶೀಲನಾದ ಜಯಂತನೋ, ನಯನಂಗಳಂ ಸಫಲಗೊಳಿಸುವ ನಳಕೂಬರನೋ, ಚಪಲಾಕ್ಷಿಯರ ಮನಸ್ಸಂ ಚಂಚಲಗೊಳಿಸುವ ಚಂದಿರನೋ, ದೈವಯೋಗದಿಂದಿಳೆಗೆಬಂದು ದರ್ಶನವಂ ಕೊಡುವ ದೇವೇಂದ್ರನೋ ಎನ್ನುತ ರಾಯನ ಸೌಂದರ್ಯಸಾಗರದಲ್ಲಿ ಮಗ್ನಮಾನಸರಾಗಿ ರೆಪ್ಪೆಯಂ ಮುಚ್ಚದೆ ನೋಡುತ, ತಮಗಾಗುವ ಮದನಾವಸ್ಥೆಯನ್ನರಿಯದೆ ಇರುವರಾಗಿ ಪರಸ್ಪರವಾಗಿ ಎಲೈ ಚಪಲೆಯೇ! ಈ ಚತುರ

ನಹೋನ್ನೋಡುತ್ತ ಚಪಲದಿಂದ ಶರಗನ್ನರಿಯುವೆ ಬೆರಗಾಗುವೇ ಎಂದು ಓರ್ತ ಸ್ಮೃತಿ ಧೈರ್ಯವು, ಎಲ್ಲೆ ತರಳೆಯೇ' ಸಡಿಲಿದ ನೀವೀಬಂಧನನ್ನರಿಯದೆ ನಡೆಗಂದಿಂ ಧಾರನ್ನೋಡುವೆ ? ಮಧುರಾಧರಂಗಳ ನಗುವರು ಎಂದು ಮುಕ್ತೋಲ್ಲೀರ್ಗಳು, ಎಲ್ಲೆ ಸಹಜಾನಾರೆಳೆ ! ಸುಂದರಾಂಗನನ್ನೋಡಿ ಸುರತಸುಖವನು ಬಯಸಿ ಸ್ವೇದ ದೇಹ ಮಾ ಡುಂಬನೇ ? ಎಂದು ಪಾತ್ರೋಪರ್ಗಳು, ಎಲ್ಲೆ ಪುಷ್ಪ ಹಿಡಿವಂತ ನೋಡುತ್ತಿರುವೆ ಮುಖ ನಿನ್ನ ಕುಚಾಕುಟ್ಮಲಗಳಂ, ಎಲ್ಲೆ ಮುಗ್ಧೆಯೇ ! ಮುಂಗುರುಳುಗಳಂ ಜಾರಿ ಮುತ್ತಿನ ಚಂದ್ರಸೂರ್ಯ ಬಟ್ಟುಗಳಂ ಸುಜ್ಜ ಮಾಡಿಕೊ, ಎಲ್ಲೆ ಪೇಶಲಾಂಗಿಯೇ ! ಕೆದರಿದ ಕೇಶಪಾಶಂಗಳಂ ಬಂಧಿಸು. ಎಲ್ಲೆ ಸರಸಳೇ ! ಸಖೀಜನಂಗಳು ಪರಿಹಾಸವಂ ಮಾಡುವರು ಜಾರುಗಿದ ಕಾಂಚೀದಾಮವನ್ನಂ ಸರಿಮಾಡಿಕೊ, ಎಲ್ಲೆ ಬಾಲೆಯೇ ! ಕನ್ನಡಿಯಂತಿರ್ಪ ಕಪೋಲಂಗಳಲ್ಲಿ ಬಿರಿತ್ಯುತುವ ಬಿಲೆಯಂ ನಿವಾರಿಸಿಕೊ, ಎಲ್ಲೆ ಲಜ್ಜಾರಹಿತಳೇ, ಸಡಿಲಿದವಳ ಶರಗಂ ಸಾಗಿಸಿಕೊ, ಎಲ್ಲೆ ಕಪಟವಿನೀತಳೇ ! ಕಪಟವಂ ಬಿಟ್ಟು ಕಟಕರಂ ಕುರಿತು ತೆರಳುವ ಕರ್ನಾಟಪತಿಯಂ ಜನ್ಯಾಗಿ ನೋಡು. ಎಲ್ಲೆ ಯೌವನೋನ್ಮತ್ತಳೇ ಯಾರಂ ಕುಚಕುಟ್ಮಲಗಳಂ ಒತ್ತುವೇ, ಎಲ್ಲೆ ಮಾತ್ಸರಶಾಲಿನಿಯೇ ! ವಾತಾಯನದಿಂದ ಬಬ್ಬರಂ ನ್ನೋಡಲೀಸೆ, ಎಲ್ಲೆ ಪರವಶಳೇ ! ನನ್ನ ಶರಗನ್ಯಾಕೆ ಬಿಡಿಯುವೇ, ಧೈರ್ಯಹೀನಳೇ ! ಭೀತಿಯಿಂ ಗುರುಜನವಂ ಯಾಕೆ ಕೇಳುವೇ, ಭಗ್ನಹೃದಯಳೇ ! ಮದನಜ್ವರದಿಂ ಪುಟ್ಟಿದ ಪುಳಕವನ್ನಡಗಿಸಿಕಿ, ಎಲ್ಲೆ ಪ್ರೌಢೆಯೇ ಯಾಕೆ ಕಳವಳಗೊಳ್ಳುವೆ, ಎಲ್ಲೆ ವಿಲಾಸಿನಿಯೇ ! ಬಹುಕಾಲದಿಂ ನಿನಗೆ ವಿರಹ ಉಂಟಾಗಿರುವದು. ಎಲ್ಲೆ ಶೂನ್ಯಹೃದಯಳೇ ! ಮನೆಯಂ ಬಿಟ್ಟು ಬಂದುದಂ ಮರೆತೆಯಾ ? ಎಲ್ಲೆ ಚಂಚಲಳೇ ! ರತಿಸುಖವಂ ನೆನೆಯುತ್ತ ಕಣ್ಣುಗಳಂ ಮುಚ್ಚುವೆ ? ನಿನ್ನ ಹೃದಯನು ಮುಂದೆ ತೆರಳುವನು ನೋಡು. ಎಲ್ಲೆ ಅನಂಗಪರವಶಳೇ ! ಬಿಸಿಲಿಗೆ ಶರಗಂ ಮರೆಮಾಡಿಕೊ, ಎಲ್ಲೆ ಭೀತಳೇ ! ಪತಿ ನೋಡುವನೆಂದು ಭಯವಂ ಬಿಟ್ಟು ರಾಯನಂ ಮನದಣಿವಂತೆ ನೋಡು

ವಳಾಗು. ಎಲೈ ಅಗಸ್ತ್ಯನೇ! ಪರಪುರುಷನ ಅದರ್ಶನವ್ರತದಿಂದ ನಷ್ಟಳಾಗಿ ಭಿತ್ತಿಯ ಮರೆಯಲ್ಲಿ ನಿಂತು ನೋಡುವೆ ಯಾಕೆ? ಅದು ಕೋ! ಕಾಣಿಸುವದು ರಾಯನಿಗೆ ಅಲಂಕರಿಸಿರುವ ಮಾಲತೀ ಕುಸುಮ ಶೇಖರವು, ನಿರೀಕ್ಷಿಸು. ಆತನ ಕಂಠದೊಳಳವಡಿಸಿರುವ ರತ್ನಹಾರವಂ ಎಂದು ಮಾತನಾಡುತಲಿರಲು, ಆಗ ಸುಗಂಧ ಮಹಾರಾಜೇಂದ್ರನು ತ್ವರಿತದಿಂ ತುರಗಸ್ಕಂಧದೊಳ್ ಹಸ್ತವಂ ಮಡಗಿ, ಅಡ್ಡಲಾಗಿ ಸುಮತಿಯೆಂಬ ಮಂತ್ರಿಯುವಾತಂ ಲಾಲಿಸುತ್ತ, ಮೇಘಮಂಡಲದಿಂ ಹೊರೆಯಾಗುವ ಚಂದ್ರನಂತೆ ಚಾಮರಗಳಿಂ ಮರೆಯಾಗುತ್ತ, ಅಂಗವಂತದ ಅನಂಗನಂತೆ, ಯೌವ್ವನವೇ ಮೂರ್ತೀಕರಿಸಿ ಇರುವದೋ ಎಂಬಂತೆ ತೆರಳುತ್ತಿರಲು ತರುಣಿಯರು ಈತನಂ ಪಡೆದ ತಾಯಿಯ ಸುಕೃತವಂ ಎಷ್ಟೆಂದು ಹೇಳಬಹುದೆಂದು ನುಡಿಯುತ್ತ, ಕುವಲಯ ಮಾಲೆಗಳಂ ಲಜ್ಜಿಗೊಳಿಸುವ ತಮ್ಮ ಕಟಾಕ್ಷಧಾರೆಗಳಿಂದವನಂ ನೋಡುತ್ತಿರಲು, ಮತ್ತೂ ಆ ತರುಣಿಯರ ಕಟಾಕ್ಷಕಾಂತಿಗಳಿಂದ, ಅವನಿಗೆ ಹಿಡಿದಿರುವ ಶ್ವೇತಛತ್ರವು ಮಯೂರಬಿಂಬಗಳಿಂದ ರಚಿಸಿರುವದೋ ಎಂಬಂತೆ ಶೋಭಿಸುತ್ತಿರಲು, ಆಗ ಆ ಸುಗಂಧ ಮಹಾರಾಜೇಂದ್ರನು ವನಿತೆಯರ ಹೃದಯಂಗಳಂದೊಡಗೂಡಿ ತೆರಳುವನೋ ಎಂಬಂತೆ ಪುಷ್ಪಗಳಿಂ ಕೂಡಿದಲಾಜಗಳಿಂ ಪೂಜಿತನಾಗಿ, ಅನೇಕ ದೇಶಾಧಿಪತಿಗಳ ಪ್ರಣಾಮಗಳನ್ನವಲೋಕಿಸುತ ತೆರಳುತ, ಅಪರಿಮಿತ ಛತ್ರಪಙ್ಕ್ತಿಛಾಯಾನಿಕರದಿಂದತಿಶೀತಳವಾದ ಬಿಡಾರದ ಪುರೋಭಾಗದಲ್ಲಿ ತುರಗದಿಂದಿಳಿದು ಸುಮತಿಯು ಒಪ್ಪಿಸುವ ಹಸ್ತಲಾಘವದಿಂದ ಬಿಡಾರವನ್ನೈದಿ ಸುಖದಿಂದಿರುತಿರ್ದನಾ ಬಳಿಗೆ,

ಗದ್ಯ॥ ಕುಂಡಲಿಶಯನ ಖಂಡಪರಶು ಪುಂಡರೀಕಭವಾಖಂಡಲಪ್ರಮುಖನಿಖಿಲ ಸುರವರ ಪರಿಭವ ಪರಿಣತ ಪ್ರಚಂಡಬಲಚಂಡ ಮುಂಡವಿಖಂಡನ ನಿಪುಣ ಕೋದಂಡಕಾಂಡಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾ ಶತಗ್ರಂಥ ದಿನದಿನ

ಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸಗೋತ್ರ ಆಶ್ವಲಾಯನಸೂತ್ರ ಸುಚರಿತ್ರ ಚಾಮರಾಜ ಮಹಾರಾಜ ಪುತ್ರ ನರಪತಿ ಬಿರುದ ಮಹೀಶೂರ ಪುರವರಾಧೀಶ ಶ್ರೀ ಕೃಷ್ಣರಾಜ ಒಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ಈ ನವೀನ ಕೃತಿಯೊಳ್ ಗಜಾವತರಣಂ, ಸುಗಂಧರಾಜೇಂದ್ರನು ಗಜವಂತಂದೀವೆನೆಂದು ಪ್ರತಿಜ್ಞೆಯಂ ಮಾಡಿದ್ದು ಮೊದಲಾದ್ದಂ ಬಣ್ಣಿಶಿರುವ ಹದಿಮೂರನೇ ಆಶ್ವಾಸ ನಿರೂಪಣಕ್ಕೆ ಮಂಗಳ ಮಹಾ ॥ ಶ್ರೀ ಶ್ರೀ ಶ್ರೀ *

ಹದಿಮೂರನೇ ಅಧ್ಯಾಯ ಸಂಪೂರ್ಣವಾದುದು.

---

ಶ್ರೀ.

ಶ್ರೀ ಚಾಮುಂಡಿಕಾಂಬಾಯೈ ನಮಃ.

## ಹದಿನಾಲ್ಕನೇ ಅಧ್ಯಾಯ ಪ್ರಾರಂಭ.

---

ಈ ರೀತಿಯಲ್ಲಿ ಸುಗಂಧಮಹಾರಾಯನು ಚತುರ್ದಂತಗಳಿಂಕೂಡಿ ಅತಿ ಶುಭ್ರವಾದ, ಸುಲಕ್ಷಣ ಲಕ್ಷಿತವಾದ ಮದಗಜವಂ, ಗಜಗೌರೀವ್ರತವನ್ನಾಚರಿಸಲೋಸುಗ ತಂದುಕೊಡಬೇಕೆಂದು ಪ್ರಾರ್ಥಿಸಿದ ಸೌಗಂಧಿಕಾದೇವಿಯ ಪ್ರಾರ್ಥನೆಗೆ ಸಮ್ಮತನಾಗಿ ಹೊರಟು ತನ್ನ ಬಿಡಾರವನ್ನೈದಿ, ಆ ಮಾರನೇದಿನ ಸ್ನಾನ ಭೋಜನಾದಿಗಳಂ ಮಾಡಿ ಸುಮತಿ ಸಮೇತನಾಗಿ ಆಸ್ಥಾನದಲ್ಲಿ ಕುಳಿತು, ತನಿಗೆ ವಿದ್ಯಾಗುರುವಾದ ವಿದ್ಯಾಸಾಗರನಂ ಕರೆಯಿಸಿ, ಉಚಿತದಿಂ ಕುಳ್ಳಿರಿಶಿಕೊಂಡು, ಅವರಂ ಕುರಿತು ಸ್ವಾಮಿ ಆಚಾರ್ಯರೇ! ಕಳಿಂಗ ರಾಜಪುತ್ರಿಯಾದ ಸೌಗಂಧಿಕಾದೇವಿಯು ಗಜಗೌರೀ ನೋಂಪಿಯಂ ಮಾಡಲಿಚ್ಛಿಶಿ, ಸುಲಕ್ಷಣಲಕ್ಷಿತವಾಗಿ, ಶುಭ್ರವರ್ಣವಾಗಿ, ಚತುರ್ದಂತಗಳಿಂ ಒಪ್ಪುವ ಒಂದು ಮದ

ಗಜವಂ ತಂದು ಕೊಡಬೇಕೆಂದು ಬೇಡಿಕೊಂಡದ್ದರಿಂದ ಇದು ಬಹು ಜಯವೆಂದು ತೋರುತ್ತಲಿದೆ. ಅದಕ್ಕೆ ಸಮ್ಮತನಾಗಿ ಬಂದೆನು. ಆದ್ದರಿಂ, ಉತ್ತಮಗಜದ ಲಕ್ಷಣವೆಂತಿರುವುದು. ಅವರಲ್ಲಿ ರಾಜಯೋಗವಾದ್ಯಾವು ? ಪಟ್ಟಕ್ಕೆ ಯೋಗ್ಯಂಗಳಾವುವು ? ಅವುಗಳ ಲಕ್ಷಣಂಗಳಂ ವಿಸ್ತಾರವಾಗಿ ಹೇಳಬೇಕೆನಲು, ಈ ಮಾತಂ ಕೇಳಿ ವಿದ್ಯಾಸಾಗರನು ಎಲೈ ಸುಗಂಧರಾಜಕುಮಾರನೇ ! ಶಾಸ್ತ್ರೋಕ್ತವಾದ ಗಜಲಕ್ಷಣವಂ ವಿಸ್ತಾರವಾಗಿ ಹೇಳುವೆನು. ಅದಂ ಲಾಲಿಸುವನಾಗು ;—ಎಲೈ ಪ್ರಭುವೇ ! ಪೂರ್ವದಲ್ಲಿ ಕಶ್ಯಪಋಷಿಗೆ ಕ್ರೋಧಾದೇವಿಯೆಂಬ ಓರ್ವಳು ಹದಿಮೂರನೇ ಪತ್ನಿ ಇದ್ದಳು. ಅವಳಲ್ಲಿ ಹನ್ನೆರಡುಜನ ಪುತ್ರಿಯರು ಉಂಟಾದರು. ಆ ಹನ್ನೆರಡುಜನದಲ್ಲಿ ಭದ್ರಮಂದ್ರಾ ಎಂಬುವಳು ಐರಾವತವೆಂಬ ಮಹಾ ಗಜವಂ ಪ್ರಸವಿಸಿದಳು. ಶತಾ ಎಂಬುವಳಲ್ಲಿ ಅಷ್ಟದಿಗ್ಗಜಗಳು ಜನಿಸಿದವು. ಮಾತಂಗೀ ಎಂಬುವಳಲ್ಲಿ ಮಾತಂಗಗಳೆಂಬ ಗಜಗಳು ಜನಿಸಿದವು. ಇದಲ್ಲದೇ, ಪೂರ್ವದಲ್ಲಿ ಮತಂಗನೆಂಬ ಮಹಾ ಋಷಿಯು ತನ್ನ ಯೋಗಶಕ್ತಿಯಿಂ ಬ್ರಹ್ಮಾಂಡವಂ ಇಭಾಗವಂ ಮಾಡಿ ತಾಳಗಳಂತೆ ಮಾಡಿಕೊಂಡು ಈಶ್ವರನಂ ಸಂತೋಷಗೊಳಿಸಲೋಸುಗ ಸಾಮಗಾನವಂ ಮಾಡುತ ತಾಳವಂ ಬಡಿಯುತ್ತಿರುವ ಸಮಯದೊಳ್ ಆ ಸಾಮವೇದಧ್ವನಿಯಿಂದ ಕೆಲವು ಆನೆಗಳು ಪುಟ್ಟಿ ಸಾಮಜಗಳೆಂದು ಪ್ರಸಿದ್ಧಗಳಾದವು. ಪೂರ್ವದಲ್ಲಿ ಈ ಗಜಗಳೆಲ್ಲವು ಮನಬಂದಂತೆ ಆಕಾಶದಲ್ಲಿ ಸಂಚರಿಸುತ ಸುಖದಿಂದ ಸ್ವರ್ಗದಲ್ಲಿದ್ದವು. ಅನಂತರದಲ್ಲಿ ಮುನಿಶಾಪದಿಂದ ಆ ಗಜಗಳು ಭೂಮಿಯೊಳ್ ವನಗಳಲ್ಲಿ ಸಂಚರಿಸುತ್ತಲಿದ್ದವು. ಇಂತಲ್ಲದೆ, ಸಮುದ್ರ, ಮೇರುಪರ್ವತ, ಗಂಗಾ, ಪ್ರಯಾಗ, ಇವುಗಳ ಮಧ್ಯದಲ್ಲಿರುವ ವನವು ಪ್ರಾಚ್ಯವೆಂಬ ಹೆಸರುಳ್ಳದ್ದು. ಲೋಹಿತಾನದಿಗೆ ಪಶ್ಚಿಮಭಾಗದಲ್ಲಿರುವ ತ್ರಿಪುರೀ ಎಂಬ ದೇಶ, ಕೋಸಲದೇಶ, ಚೇದೀದೇಶ, ಇವುಗಳ ಮಧ್ಯದಲ್ಲಿರುವ ವನವು ಕಾರೂಷವೆಂದು ಹೇಳಲ್ಪಡುವದು. ಶ್ರೀಕ್ಷೇತ್ರ, ಗೌಡ, ಬಂಗಾಳದೇಶ, ಮಾಂಸಳದೇಶ ಇವುಗಳ ಮಧ್ಯದಲ್ಲಿರುವ ವನವು ಮಾಂಸಳೀಯವೆನಿಸಿಕೊಂಬು

ವದು. ವಿಂಧ್ಯ, ತ್ರಿಕೂಟ, ಕಳಿಂಗದೇಶ, ದ್ರವಿಡದೇಶ, ಇವುಗಳ ಮ
ಧ್ಯದಲ್ಲಿರುವ ವನವು ಕಳಿಂಗವನವೆಂದು ಪ್ರಸಿದ್ಧವಾಗಿ ಸಮುದ್ರಪರ್ಯಂ
ತವಿರುವದು. ಶ್ರೀಶೈಲ, ವೇದಾದ್ರಿ, ಸಮಯಪರ್ವತ, ದಶಾರ್ಣನದಿ,
ಇವುಗಳ ಮಧ್ಯದಲ್ಲಿರುವ ವನವು ದಶಾರ್ಣವೆನಿಸಿಕೊಂಬುವದು. ಸಹ್ಯ
ಪರ್ವತ ಮೊದಲುಗೊಂಡು ಭೃಗುಕಚ್ಛವೆಂಬ ದೇಶಪರ್ಯಂತವೂ ಮಧ್ಯ
ದಲ್ಲಿರುವ ವನವು ಅಪರಾಂತವೆನಿಸಿಕೊಂಬುದು. ಸ್ವರವತೀ, ಅವಂತೀ,
ಇವುಗಳ ಮಧ್ಯದಲ್ಲಿರುವ ವನವು ಸೌರಾಷ್ಟ್ರವೆನಿಸಿಕೊಂಬುವದು.
ಕಾಲಂಜರಪರ್ವತ, ಕುರುಕ್ಷೇತ್ರ, ಸಿಂಧುನದಿ, ಸಮುದ್ರಸಂಗಮಸ್ಥಾ
ನಗಳಲ್ಲಿ ಹಿಮವತ್ಪರ್ವತ ಪರ್ಯಂತವು ವ್ಯಾಪಿಸಿರುವ ವನವು ಪಂಚನದ
ವೆನಿಸಿಕೊಂಬುದು. ಈ ರೀತಿಯಲ್ಲಿ, ಪ್ರಾಚ್ಯವೆಂಬದಾಗಿಯೂ, ಕಾರೂ
ಷವೆಂಬದಾಗಿಯೂ, ಮಾಂಸಲೇಯವೆಂಬದಾಗಿಯೂ, ಕಳಿಂಗವೆಂಬದಾ
ಗಿಯೂ, ದಶಾರ್ಣವೆಂಬದಾಗಿಯೂ, ಅಪರಾಂತವೆಂಬದಾಗಿಯೂ, ಸೌ
ರಾಷ್ಟ್ರವೆಂಬದಾಗಿಯೂ, ಪಂಚನದವೆಂಬದಾಗಿಯೂ, ಪ್ರಸಿದ್ಧಂಗಳಾ
ದ ಈ ಎಂಟು ವನಂಗಳು ಗಜಗಳಿಗೆ ಉತ್ಪತ್ತಿಸ್ಥಾನವೆಂದು ಪೂರ್ವದ
ಋಷಿಗಳು ಪೇಳುವರು. ಇನ್ನು ಗಜಗಳ ಪ್ರಮಾಣವಂ ಪೇಳ್ವೆನು.
ಮನುಷ್ಯರ ಹಸ್ತದಲ್ಲಿ ಕಿರುಬೆಟ್ಟಂ ಬಿಟ್ಟು ಮಿಕ್ಕ ನಾಲ್ಕು ಬೆಟ್ಟುಗಳಂ
ಮಡಿಸಿ ಮುಷ್ಟಿಯಂ ಮಾಡಿ ಮೊಳಕೈಯಿಂದ ಕಿರುಬೆಟ್ಟಿನ ಕೊನೆಯ
ವರಿಗೆ ಅಳವ ಪ್ರಮಾಣವು ಒಂದು ಅರತ್ನಿಯೆನಿಸಿಕೊಂಬುದು. ಆನೆಗ
ಳಿಗೆ ಪಾದದಿಂದ ಕುಂಭಸ್ಥಳಕ್ಕೆ ಸಮವಾಗಿ ಉದ್ದವಾಗಿ ಅಳದ ಅಳತೆ
ಯು ಔನ್ನತ್ಯವೆನಿಸಿಕೊಂಬುದು. ಹಣೆಯಿಂದ ಬಾಲದವರಿಗೆ ನೀಳವಾ
ಗಿ ಅಳದ ಅಳತೆಯು ದೈರ್ಘ್ಯವೆನಿಸಿಕೊಳ್ಳುವದು. ಬೆನ್ನಿನಿಂದ ಪಾರ್ಶ್ವ
ಸಹಿತ ಹೊಟ್ಟೆಯನ್ನಳದರೆ ಅದು ವಿಸ್ತಾರವೆನಿಸಿಕೊಂಬುದು. ಏಳು
ಅರತ್ನಿ ಪ್ರಮಾಣ ಔನ್ನತ್ಯವು, ಒಂಭತ್ತು ಅರತ್ನಿ ಪ್ರಮಾಣ ದೈರ್ಘ್ಯ
ವು ಹತ್ತು ಅರತ್ನಿ ಪ್ರಮಾಣ ವಿಸ್ತಾರವೂ ಉಳ್ಳ ಗಜಗಳು ಉತ್ತ
ಮಗಜಗಳೆನಿಸಿಕೊಂಬುವವು. ಇವುಗಳು ಶುಭಕರಂಗಳು. ಈ ಪ್ರಮಾ
ಣಕ್ಕಿಂತಲೂ ಅಧಿಕವಾಗಿ ಒಂದು ಅರತ್ನಿ ಪ್ರಮಾಣ ಔನ್ನತ್ಯವು, ದೈ

ರ್ಘ್ಯವೂ, ವಿಸ್ತಾರವೂ, ಉಳ್ಳ ಆನೆಗಳು ಮಧ್ಯಮಗಳೆನಿಸಿಕೊಂಡು ಅರಾಳಗಳೆಂಬ ಹೆಸರು ಪಡೆಯುವವು. ಈ ಅರಾಳ ಗಜಗಳಿಗಿಂತಲೂ ಒಂದು ಅರತ್ನಿ ಪ್ರಮಾಣ ಹೆಚ್ಚಾದ ಔನ್ನತ್ಯವೂ, ದೈರ್ಘ್ಯವೂ, ವಿಸ್ತಾರವೂ ಉಳ್ಳ ಗಜಗಳು ಅತ್ಯರಾಳವೆನಿಸಿಕೊಂಬುವವು. ಅರಾಳಗಜಗಳೂ, ಅತ್ಯರಾಳಗಜಗಳೂ ಪ್ರಮಾಣಕ್ಕೆ ಅಧಿಕವಾಗಿರುವದರಿಂದ ಯೋಗ್ಯಗಳಲ್ಲ. ಏಳು ಅರತ್ನಿ ಪ್ರಮಾಣ ಔನ್ನತ್ಯವೂ, ಒಂಭತ್ತು ಅರತ್ನಿ ಪ್ರಮಾಣ ದೈರ್ಘ್ಯವೂ, ಹತ್ತು ಅರತ್ನಿ ಪ್ರಮಾಣ ವಿಸ್ತಾರವೂ ಉಳ್ಳ ಉತ್ತಮಗಜಗಳಿಗಿಂತಲೂ, ಒಂದು ಅರತ್ನಿ ಪ್ರಮಾಣ ಕಡಮೆಯಾದ ಉನ್ನತತ್ವವೂ, ದೈರ್ಘ್ಯವೂ, ವಿಸ್ತಾರವೂ, ಉಳ್ಳ ಗಜಗಳು ಮಧ್ಯಮಗಳೆನಿಸಿಕೊಂಬುವವು. ಈ ಮಧ್ಯಮ ಗಜಗಳಿಗಿಂತಲೂ, ಒಂದು ಅರತ್ನಿ ಪ್ರಮಾಣ ಉಚ್ಚವೂ, ದೈರ್ಘ್ಯವೂ, ವಿಸ್ತಾರವೂ ಕಡಮೆಯಾಗಿರುವ ಗಜಗಳು ಕನಿಷ್ಠವೆನಿಸಿಕೊಂಬುವವು. ಈ ಕನಿಷ್ಠ ಗಜಗಳಿಗಿಂತಲೂ, ಹ್ರಸ್ವವಾದ ಗಜಗಳು ವಾಮನಗಜಗಳೆನಿಸಿಕೊಂಬುವವು. ಇವು ನಿಷಿದ್ಧಗಜಗಳು, ಗಜಗಳಿಗೆ ಮುಖ್ಯವಾಗಿ, ಭದ್ರವೆಂಬುದಾಗಿಯು, ಮಂದ್ರವೆಂಬುದಾಗಿಯು, ಮೃಗವೆಂಬುದಾಗಿಯೂ ಮೂರುಜಾತಿಗಳಿರುವವು. ಈ ಮುಖ್ಯಜಾತಿಗಳಲ್ಲಿ ಭೇದಗಳೆಂತಹದ, ಭದ್ರಮಂದ್ರ, ಭದ್ರಮೃಗ, ಭದ್ರಮಂದ್ರಮೃಗ, ಮಂದ್ರಭದ್ರ, ಮಂದ್ರಮೃಗ, ಮಂದ್ರಭದ್ರಮೃಗ, ಮೃಗಮಂದ್ರ, ಮೃಗಭದ್ರ, ಮೃಗಭದ್ರಮಂದ್ರಗಳೆಂಬದಾಗಿ ಒಂಭತ್ತು ಜಾತಿಗಳಿರುವವು, ಇವುಗಳಶರೀರಗಳಲ್ಲಿ ಪೂರ್ವಾರ್ಧಭೇದಂಗಳಿಂದಲೂ, ಉತ್ತರಾರ್ಧಭೇದಂಗಳಿಂದಲೂ, ಪೂರ್ವಾರ್ಧಭದ್ರಮಂದ್ರಮೊದಲಾಗಿ ಒಂಭತ್ತು ಜಾತಿಗಳೂ, ಉತ್ತರಾರ್ಧಭದ್ರಮಂದ್ರ ಮೊದಲಾಗಿ ಒಂಭತ್ತುಜಾತಿಗಳು ಸಹಾ ಹದಿನೆಂಟುವಿಧಂಗಳಾಗುವವು, ಇವು ಸಂಕೀರ್ಣಜಾತಿಗಳೆನಿಸಿಕೊಂಬುವವು, ಈ ಸಂಕೀರ್ಣಜಾತಿಗಳು ಹದಿನೆಂಟೇ ಪರಿಯೆಂದು ಕಾಶ್ಯಪನು ಹೇಳಿರುವನು, ಮತ್ತು ಈ ಆನೆಗಳ ಪ್ರಮಾಣವನ್ನು ಹೇಳುವೆನು. ಐದು ಅರತ್ನಿಪ್ರಮಾಣ ಉನ್ನತತ್ವವೂ, ಏಳುಅರತ್ನಿಪ್ರಮಾಣ ದೈರ್ಘ್ಯವೂ, ಎಂಟುಅರತ್ನಿಪ್ರಮಾಣ ವಿಸ್ತಾರವೂ, ಉಳ್ಳ

ಗಜಗಳು ಮೃಗಜಾತಿಗಳೆನಿಸಿಕೊಳ್ಳುವವು, ಈ ಮೃಗಜಾತಿಗಳಿಗಿಂತಲೂ ಒಂದು ಅರತ್ನಿಪ್ರಮಾಣ ಅಧಿಕವಾದ ಉನ್ನತತ್ವವು, ದೈರ್ಘ್ಯವು, ವಿಸ್ತಾರವುಳ್ಳ ಗಜಗಳು ಮಂದ್ರಜಾತಿಗಳೆನಿಸಿಕೊಳ್ಳುವವು, ಈ ಮಂದ್ರಜಾತಿ ಗಜಗಳಿಗಿಂತಲೂ, ಒಂದು ಅರತ್ನಿ ಪ್ರಮಾಣ ಅಧಿಕವಾದ ಉನ್ನತತ್ವವು, ದೈರ್ಘ್ಯವು, ವಿಸ್ತಾರವುಳ್ಳ ಗಜಗಳು ಭದ್ರಜಾತಿಗಳೆನಿಸಿಕೊಳ್ಳುವವು. ಮತ್ತು ಸಂಕೀರ್ಣ ಜಾತಿಗಳಿಗೆ ಪ್ರಮಾಣವು ನಿಯಮವಿಲ್ಲದೆ ನ್ಯೂನಾಧಿಕವಾಗಿರುವವು. ಎಲೈ ಸುಗಂಧಮಹಾರಾಜನೆ ! ಈ ಗಜಗಳ ಲಕ್ಷಣಗಳಂ ಪೇಳುವೆನು ಕೇಳು:--ಭದ್ರಜಾತಿಗಳ ಲಕ್ಷಣವೆಂತೆಂದರೆ— ಪರ್ವತಗಳಲ್ಲಿ ಸಂಚಾರವಂ ಮಾಡುತ ಕಂಕಳುಗಳಲ್ಲಿಯೂ, ಅಂಡಕೋಶಗಳಲ್ಲಿಯೂ, ಸಮಪ್ರಮಾಣವುಳ್ಳವಾಗಿ, ದೃಢವಾದ ಶರೀರವು, ಕೂರ್ಮನಂತೆ ತುಂಡಾದ ಅಂಗಾಲುಗಳು, ಉಗುರುಗಳ ಮಧ್ಯದಲ್ಲಿ ರೋಮಗಳೂ, ಅಧಿಕವಾದ ಮಾಂಸವು ಉಳ್ಳವಾಗಿ ಪ್ರಶಸ್ತವಾದ ಪಾದಗಳಿಂದಲೂ, ನಖಗಳಿಂದಲೂ, ಶರೀರದಲ್ಲಿ ಬಿಂದುಗಳಿಂದಲೂ ಮನೋಹರಗಳಾಗಿ ಕೃಶವೂ ಅಲ್ಲದೆ ಅತ್ಯಂತ ಸ್ಥೂಲವೂ ಅಲ್ಲದೆ ಇರುವದಾಗಿ, ಜೇನುತುಪ್ಪದಂತೆ ವರ್ಣವುಳ್ಳ ನೇತ್ರಗಳೂ, ಎರಡು ಕೊಂಬುಗಳೂ ಉಳ್ಳವಾಗಿ, ಧನುಸ್ಸಿನಂತೆ ಬಗ್ಗಿರುವ ಬೆನ್ನುಮೂಳೆಯಿಂ ಕೂಡಿರುವ ಅಂಗಪ್ರತ್ಯಂಗಗಳಲ್ಲಿಯೂ ವಿಶದವಾಗಿ ಕಾಣುತ, ಶುಭಕರಗಳಾದ ಆನೆಗಳು ಭದ್ರಜಾತಿಗಳೆನಿಸಿಕೊಳ್ಳುವವು, ಈ ಆನೆಗಳ ಆರೋಹಣವು ಯಶಸ್ಸಂ, ಬಲವಂ ಪರಾಕ್ರಮವಂ ಸಹ ಉಂಟುಮಾಡುವದು ಮತ್ತು ಪಾಪವಂ ಪರಿಹರಿಸುವದು. ಇಂತಲ್ಲದೆ ಮಂದ್ರಜಾತಿಗಳ ಲಕ್ಷಣವೆಂತೆಂದರೆ:--ನದಿಗಳಲ್ಲಿ ಸಂಚಾರವು, ಉನ್ನತವಾದ ಪ್ರಮಾಣವು ಶರೀರದ ಪೂರ್ವಾರ್ಧದಲ್ಲಿ ಬೊಗ್ಗಿರೋಣವು, ಶರೀರದಲ್ಲಿ ಸುಕ್ಕಿಲ್ಲದೆ ಇರೋಣವು, ಕ್ಷಮೆಯು, ಯುದ್ಧದಲ್ಲಿ ಆಸಕ್ತಿಯು, ವಿಸ್ತಾರವಾದ ಸೊಂಡಿಲು, ಕಿವಿಗಳು, ಮುಖವು, ದಪ್ಪವಾದ ಹೊಟ್ಟೆಯು, ಪೃಥುನಾಳವು, ಎರಡು ಕೊಂಬುಗಳೂ ಶರೀರದಲ್ಲಿ ದಾರ್ಢ್ಯವಿಲ್ಲದ್ದರಿಂ, ಸ್ವಲ್ಪ ಜೋಲುವ ಚರ್ಮಮಾಂಸಗಳುಳ್ಳದ್ದಾಗಿ, ಶಾಮವರ್ಣವಾದ ನೇತ್ರಗಳುಳ್ಳ ಗಜಗಳು ಮಂದ್ರಜಾತಿ

ಗಳೆನಿಸಿಕೊಳ್ಳುವವು, ಇವು ಮಧ್ಯಮಗಜಗಳು. ಮೃಗಜಾತಿಗಜಗಳ ಲಕ್ಷಣಂಗಳೆಂತೆಂದರೆ:—ವನದಲ್ಲಿ ಸಂಚಾರವು. ಶಿಥಿಲವಾದ ಚರ್ಮಮಾಂಸ ಗಳು, ದೀರ್ಘಗಳಾಗಿ, ಕೃಶಗಳಾಗಿರುವ ಎರಡು ಕೊಂಬುಗಳು, ಮನೋಹರವಾದ ವರ್ಣವು, ಶರೀರದಲ್ಲಿ ದಪ್ಪವಾದ ಸುಕ್ಕುಗಳು ಮನೋಹರವಾದ ರೇಖೆಗಳೊಡಗೂಡಿದ ನೇತ್ರಗಳೂ, ನಖಗಳೂ, ಮಾಂಸವು ಬಾಲವು, ಹಣೆಯೂ ಉದ್ದವಾಗಿ, ಶರೀರದಲ್ಲಿ ಪಕ್ಕವುದ್ದವಾಗಿ. ಮೃದುವಾದ ರೋಮಗಳೂ, ಕೃಶವಾದ ಸ್ಕಂಧಿ, ಪಾದಗಳು, ಶಿರವು, ದಪ್ಪವಾದ ಬಾಲವು, ಕಿರಿದಾದ ಗುಹ್ಯವು, ಬೆನ್ನುಮೂಳೆಗಳು ಉಳ್ಳ ಆನೆಗಳು ಮೃಗಜಾತಿಗಳೆನಿಸಿಕೊಳ್ಳುವವು, ಇವು ಅಧಮಗಜಗಳು. ಇದಲ್ಲದೆ ಸಂಕೀರ್ಣಜಾತಿ ಆನೆಗಳ ಶರೀರದಲ್ಲಿ ಯಾವ ಯಾವ ಭಾಗದಲ್ಲಿ ಯಾವ ಯಾವ ಲಕ್ಷಣಗಳಿರುವವೋ ಆಯಾಯ ಲಕ್ಷಣಗಳಂ ತಿಳಿದು ಸಂಕೀರ್ಣಜಾತಿಭೇದಗಳಂ ತಿಳಿಯತಕ್ಕದ್ದು. ಮತ್ತು ಎಲೈ ಸುಗಂಧ ಮಹಾರಾಯನೆ! ಆನೆಗಳು ಬ್ರಹ್ಮಾದಿದೇವತೆಗಳಿಂದ, ತಮ್ಮ ತಮ್ಮ ಅಂಶಗಳಿಂದ ಪೂರ್ವದಲ್ಲಿ ನಿರ್ಮಿಸಲ್ಪಟ್ಟವು. ಆದ್ದರಿಂದ ಆಯಾಯ ದೇವತಾಂಶಗಳಿಂ ಪುಟ್ಟಿದ ಗಜಗಳ ಲಕ್ಷಣಗಳಂ ಪೇಳುವೆನು ಕೇಳುವನಾಗು-ಯಾವ ಗಜಕ್ಕೆ ಶರೀರದಲ್ಲಿ ಬಿಂದುಗಳು ಚನ್ನಾಗಿ ವ್ಯಕ್ತವಾಗಿ, ಶುಭ್ರ ವರ್ಣವುಳ್ಳವಾಗಿ, ಮನೋಹರಗಳಾಗಿಯೂ ಇರುವವೊ, ಮತ್ತು ಕಡೆಗಂಣುಗಳು ಕೆಂಪಾಗಿಯೂ, ದಪ್ಪವಾಗಿ ಬಲವಾದ ಕೊಂಬುಗಳುಳ್ಳವಾಗಿಯೂ ಇರುವವೋ ಆ ಗಜವು ಬ್ರಹ್ಮಾಂಶವೆಂದು ತಿಳಿಯಬೇಕು. ಈ ಗಜವು ಅರಸುಗಳಿಂದ ಪೂಜಿಸಲ್ಪಟ್ಟರೆ, ವಿಜಯಮಂ, ಆರೋಗ್ಯವಂ ಕೂಡಾ ಕೊಡುವದು ಕಂಕಳಿಲ್ಲಿ, ಕತ್ತಿನಲ್ಲಿ ಸಮವಾದ ಪ್ರಮಾಣವುಳ್ಳ ವಿಸ್ತಾರವಾದ ಆಸನವು, ಮುಖದಲ್ಲಿ ಕೆಂದಾವರೆಯಂತೆ ವರ್ಣವು, ರೋಮಕೂಪದಲ್ಲಿ ಎರಡೆರಡು ಕೂದಲುಗಳು, ಬಹುಕಾಲ ಮದವಂ ಸುರಿಸೋಣವು, ಮೇಘಧ್ವನಿಯಂ ಕೇಳಿ ಸಂತೋಷಪಡೋಣವು, ಇಂತುಳ್ಳ ಗಜವು ಪ್ರಜಾಪತ್ಯಾಂಶವೆಂದು ಹೇಳತಕ್ಕದ್ದು, ಈ ಆನೆಯು ಪೂಜೆಯಂ ಮಾಡುವವರಿಗೆ ಪ್ರಜಾವೃದ್ಧಿಯನ್ನುಂಟುಮಾಡುವದು, ಯಾವ ಆನೆಗಳಿಗೆ

ಮುಖದಲ್ಲಿ ಬಿಂದುಗಳೂ, ಎದೆಯಲ್ಲಿ ಸ್ವಸ್ತಿಕ; ವರ್ಧಮಾನ, ನಂದ್ಯಾವರ್ತ ಮೊದಲಾದ ರೇಖೆಗಳಂತೆ ಸುಕ್ಕುಗಳು, ಕನ್ನೈದಿಲೆಪುಷ್ಪಕ್ಕೆ ಸಮಾನವಾದ ನೇತ್ರಗಳೂ ಇರುವವೋ ಆ ಗಜವು ಇಂದ್ರಾಂಶವೆನಿಸಿಕೊಂಬುವದು, ಈ ಆನೆಯು ಸ್ವಾಮಿಗೆ ಸಂಪತ್ತನ್ನು, ಯುದ್ಧದಲ್ಲಿ ಜಯವನ್ನೂ ಕೊಡುವದು, ಮತ್ತೂ ಯಾವ ಆನೆಗೆ ಕೆಂಪಾದ ನಾಲಿಗೆಯೂ, ತುಟಿಯೂ, ನೆಲ್ಲಿಕಾಯಿಯಂತೆ ಹಸರುವರ್ಣವಾದ ಕಣ್ಣುಗಳು, ಸ್ಫುಟವಾದ ಕೊಂಬುಗಳು ಇರುವವೋ, ಆ ಆನೆಯು ಕುಬೇರಾಂಶದಿಂ ಪುಟ್ಟಿದ್ದು, ಆ ಆನೆಯು ಅರಸುಗಳಿಂ ಪೂಜಿಸಲ್ಪಟ್ಟರೆ ದ್ರವ್ಯರತ್ನಸಮೃದ್ಧಿಯಂ ಕೊಡುವದು, ಯಾವ ಆನೆಯು ಕಪ್ಪಾಗಿ ಘಟ್ಟಿಯಾಗಿ ತುಪ್ಪಕ್ಕೆ ಸಮಾನವಾದ ವರ್ಣವುಳ್ಳ ಕೊಂಬುಗಳುಳ್ಳದ್ದಾಗಿ, ಶಿರೋಭಾಗದಲ್ಲಿ ಹಳ್ಳವುಳ್ಳದ್ದಾಗಿ, ಹಿಂಭಾಗದಲ್ಲಿ ಸುಂದರವಾಗಿ, ಮೇಘದಂತೆ ಧ್ವನಿಯಂ ಗೈಯುತ್ತ ಅತ್ಯಂತ ಮದೋದಕವಂ ಸುರಿಸುತ್ತಾ ಇರುವದೋ, ಆ ಆನೆಯು ವರುಣಾಂಶದಿಂ ಪುಟ್ಟಿದ್ದು, ಈ ಆನೆಯು ಯುದ್ಧದಲ್ಲಿ ತನ್ನ ಸ್ವಾಮಿಗೆ ಜಯವಂ ಕೊಟ್ಟು ಶತ್ರುಗಳಂ ಸಂಹರಿಸುವದು. ಮತ್ತು ಕಂಠದಲ್ಲಿ ಮೂರುಸುಕ್ಕು ಉಳ್ಳದ್ದಾಗಿ ಜೇನುತುಪ್ಪದಂತೆ ಕಣ್ಣುಗಳು ತಾಳೇ ಹೂವಿನಂತೆ ಹೊಂಬಣ್ಣವಾದ ಕೊಂಬುಗಳು, ಕೊನೆಯಲ್ಲಿ ಕೆಂಪುವರ್ಣ ಉಳ್ಳ ದಪ್ಪವಾದ ಸೊಂಡಿಲು, ಶರೀರದಲ್ಲಿ ಬಿಂದುಗಳುಳ್ಳದ್ದಾಗಿ, ಶುಭ್ರವರ್ಣವಾಗಿರುವ ಗಜವು ಚಂದ್ರಾಂಶದಿಂ ಪುಟ್ಟಿದ್ದು. ಈ ಆನೆಯು ಯುದ್ಧದಲ್ಲಿ ಸ್ವಾಮಿಗೆ ಜಯವಂಕೊಡುವದು, ಅಗ್ನಿಜ್ವಾಲೆಯಂತೆ ಕೆಂಪಾದ ಕೂದಲು, ಪಿಂಗಳವರ್ಣವುಳ್ಳ ಕಣ್ಣುಗಳು, ಬಾಲದ ಕೇಶವು, ಸೊಂಡಿಲು ಉಳ್ಳ ಗಜವು ಅಗ್ನಿಯ ಅಂಶದಿಂ ಜನಿಸಿದ್ದು, ಈ ಆನೆಯು ಯುದ್ಧದಲ್ಲಿ ಅಗ್ನಿಯಂತೆ ಶತ್ರುಗಳಂ ಭಸ್ಮವನ್ನಾಗಿಮಾಡುವದು, ಉಕ್ಕಿನಂತೆ ಕೃಷ್ಣವರ್ಣವು, ಕಿವಿಗಳಲ್ಲಿಮಾತ್ರ ಶುಭ್ರವರ್ಣವು, ದೀಪಜ್ವಾಲೆಯಂತೆ ಕೆಂಪಾದನಖಗಳೂ ಉಳ್ಳವಾಗಿ, ಮೈತುಂಬಿಕೊಂಡಿರುವ ಗಜವು ಅಗ್ನಿ, ವಾಯು ಇವರೀರ್ವರ ಅಂಶದಿಂ ಪುಟ್ಟಿದ್ದು. ಈ ಗಜವು ಅತಿಕೋಪಿಷ್ಟವಾಗಿ, ಸರ್ವದಾ ಅಂಕುಶವಂ ಲಕ್ಷ್ಯವಂಮಾಡದೆ

ಯುದ್ಧದಲ್ಲಿ ಮಾತ್ರ ಶತ್ರುಗಳಿಗೆ ಭಯವನ್ನುಂಟುಮಾಡುವುದು, ಯಾವ ಗಜವು ದಂತಗಳ ಮಧ್ಯದ ಪ್ರದೇಶದಿಂದ ಕ್ರಮವಾಗಿ ಸಣ್ಣನಾದ ಸೊಂಡಿಲು, ಬಿಳಿಯ ವಾಸನೆಯುಳ್ಳ ಜಲಬಿಂದುಗಳೊಡಗೂಡಿದ ಘೂತ್ಕಾರವು, ಮೇಘದಂತೆ ಗಂಭೀರವಾದ ಧ್ವನಿಯೂ, ಸುಕ್ಕಿಲ್ಲದೆ ದಪ್ಪನಾದ ಶರೀರವು, ಶಿಲಾವಾದ ಚರ್ಮವು, ಅಂಜನದಂತೆ ಕಪ್ಪುವರ್ಣವು, ಸರ್ವಾಂಗಗಳಲ್ಲಿಯೂ ರೋಮಗಳಿಂದೊಡಗೂಡಿರೋಣವು, ತಾಳೇಹುವ್ವಿನಂತೆ ಹೊಂಬಣ್ಣವಾದ ಘಟ್ಟಿಯಾದ ಬಟುವಾದ ಕೊಂಬುಗಳೂ, ಕೂದಲುಗಳಿಂದೊಡಗೂಡಿದ ತ್ರುಟಿಯು, ಸಮವಾದ ದವಡೆಗಳೂ, ಮನೋಹರವಾದ ಮುಖವೂ, ಕೊನೆಯಲ್ಲಿ ಕೆಂಪಾಗಿ ಅಧಿಕವಾದ ರೆಪ್ಪೆಗಳುಳ್ಳ ಜೇನುತುಪ್ಪದವರ್ಣವಾದ ಕಣ್ಣುಗಳುಳ್ಳದ್ದಾಗಿಯು, ಮತ್ತು ಮೃದುವಾಗಿ, ವಿಸ್ತಾರವಾಗಿ, ಘಟ್ಟಿಯಾಗಿ, ಭೇದರಹಿತಗಳಾಗಿ, ತಾಳೆಪತ್ರದಂತೆಯೂ ನಗಾರಿಯಂತೆಯೂ ಧ್ವನಿಯುಳ್ಳ ಕರ್ಣಗಳು, ಲಕ್ಷ್ಮೀದೇವಿಯ ಕುಚಕಲಶದಂತೆ ಮನೋಹರವಾಗಿ ಸಮವಾಗಿ ಉನ್ನತವಾಗಿ ವರ್ತುಳವಾಗಿರುವ ಕುಂಭಸ್ಥಳಗಳು, ಹ್ರಸ್ವವಾಗಿ ದಪ್ಪವಾದ ಕಂಠವು, ದೀರ್ಘವಾಗಿ ತುಂಬಿಕೊಂಡು ಋಜುವಾಗಿ ವಕ್ರವಲ್ಲದೇ ಇರುವ ಹೆಗಲುಗಳು, ಸಜ್ಜುಮಾಡಿದ ಧನುಸ್ಸಿನಂತೆ ಬೊಗ್ಗಿದ ಬೆನ್ನುಮೂಳೆಯು, ದೀರ್ಘಗಳಾಗಿ ಋಜುಗಳಾಗಿ ಮೇಲಿನಿಂದ ಕ್ರಮವಾಗಿ ಸಣ್ಣನಾದ ಮುಂಗಾಲುಗಳು, ಆಮೆಯಂತೆ ವರ್ತುಳವಾದ ಹೆಜ್ಜೆಗಳಲ್ಲಿ ಶುಭಕರಗಳಾದ ಇಪ್ಪತ್ತು ನಖಗಳು, ವಿಸ್ತಾರವಾದ ಎದೆಯು, ಸಣ್ಣನಾದ ಹೊಟ್ಟೆಯು, ಸೂಕ್ಷ್ಮಗಳಾದ ಕುಚಗಳು, ಕೃಶವಾಗಿ ದೀರ್ಘವಾದ ಬಾಲವೂ ಉಳ್ಳದ್ದಾಗಿ, ಶಂಖ, ಚಕ್ರ, ಗದಾಕಾರಗಳಾದ ಬಿಂದುಗಳಿಂದಲಾದರೂ, ಸುಕ್ಕುಗಳಿಂದಲಾದರೂ ಕೂಡಿರುವದೋ, ಆ ಗಜವು ವಿಷ್ಣುವಿನ ಅಂಶದಿಂದ ಜನಿಸಿದ್ದು, ಈ ಗಜವು ಪಟ್ಟಾಭಿಷೇಕಕ್ಕೆ ಯೋಗ್ಯವಾಗಿ, ಸಕಲಕಾರ್ಯ ಸಿದ್ಧಿಯಂ, ನವರತ್ನಗಳಂ, ರಾಜ್ಯಸಮೃದ್ಧಿಯಂ, ಕೂಡಾ ಉಂಟುಮಾಡುವದು. ಇನ್ನೂ ಸತ್ವ ರಜ ಸ್ತಮೋಗುಣಗಳಂ ಪಡೆದಿರುವ ಗಜಗಳ ಸ್ವಭಾವವಂ ಹೇಳುವೆನು. ರುಚಿಯುಕ್ತ

ವಾದ ಆಹಾರದಲ್ಲಿ ಪ್ರೀತಿಯೂ, ದೇಹದಲ್ಲಿ ಸುಕ್ಕುಗಳಿಲ್ಲದೇ ಇರೋಣವು, ಕಾರ್ಯಗಳಲ್ಲಿ ಸ್ಥೈರ್ಯವು, ಶೌರ್ಯವು, ಉಳ್ಳ ಗಜವು ದೇವತೆಗಳಿಗೆ ಯೋಗ್ಯವಾದ ಸ್ವಭಾವ ಉಳ್ಳದ್ದು. ಮೃದುವಾದ ಚರ್ಮವು, ಸ್ಥಿರಸ ಭಾವವು, ಒಳ್ಳೆ ಬುದ್ಧಿಯು, ಸ್ತಬ್ಧವಾದ ಚಂಚಲದೃಷ್ಟಿಯುಳ್ಳ ಗಜವು ಗಂಧರ್ವರಿಗೆ ಯೋಗ್ಯವಾದ ಸ್ವಭಾವ ಉಳ್ಳದ್ದು. ಸರ್ವದಾ ನೀರಿನಲ್ಲಿ ಮುಳುಗುತ್ತ, ಆಹಾರದಲ್ಲೇ ಇಚ್ಛೆ ಉಳ್ಳದ್ದಾಗಿ ಭಯಪಡುವ ಗಜವು ಬ್ರಹ್ಮಜಾತಿಗೆ ಯೋಗ್ಯವಾದ ಸ್ವಭಾವ ಉಳ್ಳದ್ದು. ಇಂದ್ರಿಯಂಗಳಂ ನಿಗ್ರಹಿಸಿ ದ್ವಂದ್ವಯುದ್ಧದಲ್ಲಿ ಸಮರ್ಥವಾಗಿ ಭಯವಿಲ್ಲದೆ ಶೌರ್ಯದಿಂದೊಡಗೂಡಿ ಸರ್ವದಾ ಸಂತೋಷ ಉಳ್ಳ ಗಜವು ಕ್ಷತ್ರಜಾತಿಗೆ ಯೋಗ್ಯವಾದ ಸ್ವಭಾವ ಉಳ್ಳದ್ದು, ಈ ನಾಲ್ಕು ಜಾತಿಯ ಗಜಗಳು ಸತ್ವಗುಣಯುಕ್ತಗಳಾಗಿ, ಸುಣ್ಣವಾದಶರೀರ ಕಾಂತಿಯೂ, ಶ್ಲೇಷ್ಮಪ್ರಕೃತಿಯೂ ಉಳ್ಳವಾಗಿರುವವು. ಬಾಯಲ್ಲಾದರೂ, ದಂತಗಳ ಮಧ್ಯೆದಲ್ಲಾದರೂ ಕಬಳಗಳಂ ಇಟ್ಟುಕೊಳ್ಳುತ್ತ, ಪ್ರಜ್ಞೆಯು, ಮತ್ಸರಯುಕ್ತವಾದ ಕೋಪವು ಉಳ್ಳ ಆನೆಯು ವೈಶ್ಯಜಾತಿಗೆ ಯೋಗ್ಯವಾದ ಸ್ವಭಾವ ಉಳ್ಳದ್ದು, ಸರ್ವಕಾಲದಲ್ಲೂ ದಂಡಸಾಧ್ಯವಾಗಿ, ಮೂರ್ಖತನವಂ ವಹಿಸುತ್ತ, ನೀಚವಾದ ಮಂದವಾದ ಬುದ್ಧಿ ಉಳ್ಳದ್ದಾಗಿ ಯುದ್ಧದಲ್ಲಿ ಪರಾಕ್ರಮ ಉಳ್ಳ ಆನೆಯು ಶೂದ್ರಜಾತಿಗೆ ಯೋಗ್ಯವಾದ ಸ್ವಭಾವ ಉಳ್ಳದ್ದು. ನಂಬಿಸಿ ಜನರಲ್ಲಿ ಮತ್ಸರವಂ ಸಾಧಿಸುತ್ತ, ಕ್ರೂರವಾಗಿ, ಆಹಾರಗಳಿಂದ ಮದಿಸಿ ವಕ್ರವಾಗಿ ನಡೆಯುವ ಗಜವು ಸರ್ಪಜಾತಿಗೆ ಯೋಗ್ಯವಾದ ಸ್ವಭಾವ ಉಳ್ಳದ್ದು. ಈ ಮೂರುಜಾತಿ ಗಜಗಳೂ ರಜೋಗುಣಯುಕ್ತವಾಗಿ ಯುದ್ಧದಲ್ಲಿ ಕ್ರೂರಸ್ವಭಾವದಿಂದೊಡಗೂಡಿ ಪಿತ್ತಪ್ರಕೃತಿಗಳಾಗಿ ಸರ್ವದಾ ಉಷ್ಣಶರೀರ ಉಳ್ಳದ್ದಾಗಿರುವವು. ವಿವೇಕವಿಲ್ಲದೇ ಮಾರ್ಗವಂ ಬಿಟ್ಟು ಹಳ್ಳಕೊಳ್ಳಗಳಲ್ಲಿ ಹುಚ್ಚುಹಿಡಿದಂತೆ ಸಂಚರಿಸುವ ಗಜವು ಪಿಶಾಚಿಗಳಿಗೆ ಯೋಗ್ಯವಾದ ಸ್ವಭಾವ ಉಳ್ಳದ್ದು. ರಾತ್ರಿಯಲ್ಲಿ ಇಚ್ಛೆಬಂದಂತೆ ಸಂಚರಿಸುತ್ತ, ಮನುಷ್ಯರಂ ಸಂಹರಿಸುತ್ತ, ವೇಗವೂ, ಬಲವೂ, ಉಳ್ಳ ಗಜವು ರಾಕ್ಷಸರಿಗೆ ಯೋಗ್ಯವಾದ ಸ್ವಭಾ

ಉತ್ತಮ ವಯಸ್ಸೆನಿಸುವದು. ಈ ವಯಸ್ಸಿನಲ್ಲಿ ಯುದ್ಧ ಮೊದಲಾದ ಕೌಶಲ್ಯವಂ ಕಲಿಸಬೇಕು. ಹದಿನಾಲ್ಕು ವರುಷ ಮೊದಲಾಗಿ ಮೂವತ್ತು ವರುಷ ಪರ್ಯಂತವು ಮಧ್ಯಮ ವಯಸ್ಸೆಂದು ತಿಳಿಯತಕ್ಕದ್ದು. ಮೂವತ್ತು ವರುಷ ಮೊದಲುಗೊಂಡು ಎಪ್ಪತ್ತು ವರುಷಪರ್ಯಂತವು ಅಧಮ ವಯಸ್ಸೆಂದು ತಿಳಿಯತಕ್ಕದ್ದು. ಎಪ್ಪತ್ತು ವರುಷದ ಮೇಲೆ ಆನೆಗಳು ಯಾವ ಕೆಲಸಕ್ಕೂ ಯೋಗ್ಯವಾಗಲಾರವು. ಉತ್ತಮ ವಯಸ್ಸು, ಮಧ್ಯಮ ವಯಸ್ಸು ಅಧಮ ವಯಸ್ಸುಗಳಲ್ಲಿ ಆನೆಗಳಂ ಕಾರ್ಯಗಳಲ್ಲಿರಿಸಬೇಕು. ಮನೋಹರವಾದ ನೀಲರೂಪವು, ಮುಖದಲ್ಲಿ ಸುವಾಸನೆಯು ತುಂಬಿಕೊಂಡಿರುವ ಶರೀರವು, ಉನ್ನತವಾದ ಕುಂಭಸ್ಥಳಗಳೂ, ಚಂದ್ರನಂತೆ ಉಗುರುಗಳು, ಕೆಂಪಾದ ಬಿಂದುಗಳು, ಜೇನುತುಪ್ಪದ ವರ್ಣ ಉಳ್ಳ ಕೊಂಬುಗಳು, ಅತ್ಯಂತ ಧೈರ್ಯವೂ ಉಳ್ಳ ಗಜವು ಯಾವ ಅರಸಿನಿಂದ ಪೂಜಿಸಲ್ಪಡುತ್ತಲಿದೆಯೋ, ಆ ಅರಸು ನಾಲ್ಕು ಸಮುದ್ರ ಮಧ್ಯಭೂಮಿಯನೆಲ್ಲವಂ ಏಕಚ್ಛತ್ರಾಧೀಶ್ವರನಾಗಿ ಆಳುವನು. ಕಾಲವಿಶೇಷದಿಂದ ಮದಿಶಿರುವ ಹೆಂಗಾನೆಯಲ್ಲಿ, ಮದಿಶಿಸ ಗಂಡಾನೆಯು ಸಂಗದಿಂದ ಪುಟ್ಟುವ ಗಜವು ಗಂಧಹಸ್ತಿ ಎನಿಸಿಕೊಳ್ಳುವದು. ಗಂಧವೆಂಬುದು ಜೇನುತುಪ್ಪದಂತೆ ವಾಸನೆ ಉಳ್ಳದ್ದಾಗಿ ಮೂತ್ರಪುರೀಷಗಳಲ್ಲಿ ಬೆಮರಿನಲ್ಲಿ ಕೂಡಾ ಇರುವದು. ಯಾವ ಗಜಕ್ಕೆ ಮೂತ್ರಪುರೀಷ ಮೊದಲಾದ್ದರಲ್ಲಿ ಸುವಾಸನೆ ಇರುವದೋ, ಆ ಗಜವು ಗಂಧಹಸ್ತಿ ಎನಿಸಿಕೊಳ್ಳುವದು. ಇಂಥಾ ಗಂಧಹಸ್ತಿಯಂ ಸಂರಕ್ಷಿಸುವ ಅರಸಿಗೆ ಯುದ್ಧದಲ್ಲಿ ವಿಜಯ ಉಂಟಾಗುವದು. ವ್ಯಕ್ತವಾಗಿ ಕಾಣುವ ಹೆಗಲುಗಳು, ಉನ್ನತವಾದ ವಕ್ಷಸ್ಸು, ಜೇನುತುಪ್ಪದಂತೆ ಪಿಂಗಳವರ್ಣಗಳಾದ ದಂತಗಳು, ಕಟಿಪಶ್ಚಾದ್ಭಾಗವು ಪಿಂಗಡಿಸಿರೋಣವು, ಹೊಟ್ಟೆಯು, ಉಭಯಪಾರ್ಶ್ವಗಳು ತುಂಬಿಕೊಂಡಿರೋಣವು, ಬೆನ್ನು ಧಪ್ಪವಾಗಿರೋಣವು, ದೃಢವಾದ ದೇಹವು, ಸಂಧಿಗಳು ಸಮವಾಗಿಯು, ಮನೋಹರವಾದ ಕಾಂತಿಯು, ದೀರ್ಘವಾಗಿ ವಿಸ್ತಾರವಾದ ಶರೀರವು, ಸೌಂದರ್ಯವು, ಇವುಗಳು ಗಜಗಳಿಗೆ ಶರೀರಗುಣಗಳೆನಿಸಿಕೊಳ್ಳುವವು. ಸೊಂಡಿಲು, ಮುಖವು, ದಂತಗ

ಳು, ಶಿರಸ್ಸು, ನೇತ್ರಗಳು, ಕಿವಿಗಳು, ಕತ್ತು, ಗಂಡಸ್ಥಳವು, ಎದೆಯು, ಶರೀರವು, ಗುಹ್ಯವು, ಅಂತಃಪ್ರದೇಶವು, ಈ ಹನ್ನೆರಡೂ ಕ್ಷೇತ್ರಗಳೆನಿಸಿಕೊಳ್ಳುವವು. ಇವುಗಳಿಗೆ ಒಂದೊಂದಕ್ಕೆ ಹತ್ತತ್ತು ವರುಷಗಳ ಮೇರೆ ನೂರಿಪ್ಪತ್ತು ವರುಷಗಳು ಗಜಗಳಿಗೆ ಪರಮಾಯುಸ್ಸೆಂದು ತಿಳಿಯತಕ್ಕದ್ದು. ಈ ಹನ್ನೆರಡು ಕ್ಷೇತ್ರಗಳೂ, ಯಾವ ಗಜಕ್ಕೆ ಲಕ್ಷಣಯುಕ್ತವಾಗಿರುವದೋ, ಆ ಗಜವು ಪೂರ್ಣಾಯುಸ್ಸಂ ಪಡೆಯುವದು. ಎಷ್ಟು ಕ್ಷೇತ್ರಗಳು ಲಕ್ಷಣಗಳಿಂದ ಹೀನಗಳಾಗಿರುವವೋ, ಕ್ಷೇತ್ರ ಒಂದಕ್ಕೆ ಹತ್ತು ವರುಷದ ಮೇರೆಗೆ ಆಯುಸ್ಸು ಕಡಮೆಯಾಗಿರುವದು. ಮತ್ತು ಭದ್ರಜಾತಿಗಳಿಗೆ ನೂರಿಪ್ಪತ್ತು ವರುಷ ಆಯುಸ್ಸೆಂದು, ಮಂದ್ರಜಾತಿಗಳಿಗೆ ಎಂಭತ್ತು ವರುಷ ಆಯುಸ್ಸೆಂದು, ಮೃಗಜಾತಿ ಗಜಗಳಿಗೆ ನಾಲ್ವತ್ತು ವರುಷ ಆಯುಸ್ಸೆಂದು ತಿಳಿಯತಕ್ಕದ್ದು. ಮತ್ತು ಗಜಗಳ ಶಿರಸ್ಸಿನಲ್ಲಿ ಬ್ರಹ್ಮದೇವನೂ, ಹಣೆಯಲ್ಲಿ ಕುಮಾರಸ್ವಾಮಿಯು, ಕುಂಭಸ್ಥಳಗಳಲ್ಲಿ ವೀರಭದ್ರನು, ನೇತ್ರಗಳಲ್ಲಿ ಸೂರ್ಯಚಂದ್ರರು, ಸೊಂಡಲಿನ ಕೊನೆಯಲ್ಲಿ ವಿಘ್ನೇಶ್ವರನು, ಶ್ವಾಸಗಳಲ್ಲಿ ಏಕಾದಶರುದ್ರರು, ಮುಖದಲ್ಲಿ ಭಾಗ್ಯಲಕ್ಷ್ಮಿಯು, ಕೊಂಬುಗಳಲ್ಲಿ ವೀರಲಕ್ಷ್ಮಿಯು, ಕೊಂಬುಗಳ ಕೊನೆಯಲ್ಲಿ ಧರ್ಮನು, ಕಪೋಲಗಳಲ್ಲಿ ನೃಸಿಂಹಸ್ವಾಮಿಯು, ನಾಲ್ಕು ಪಾದಗಳಲ್ಲಿ ನಾಲ್ಕು ವೇದಗಳು, ಸೊಂಡಲಿನ ಮಧ್ಯದಲ್ಲಿ ಮಹಾವಿಷ್ಣುವು, ನಖಾಗ್ರಗಳಲ್ಲಿ ಅಷ್ಟಮೀಚಂದ್ರನು, ವೇಗದಲ್ಲಿ ವಾಯುವು, ನಾಭಿಯಲ್ಲಿ ಅಗ್ನಿಯು, ಹೊಟ್ಟೆಯಲ್ಲಿ ವಿಧಾತೃವು, ಗುಹ್ಯದಲ್ಲಿ ಪ್ರಜಾಪತಿಯು, ಮಿಕ್ಕಿಲಾದ ಅಂಗಗಳಲ್ಲಿ ಲೋಕಭಾರವಂವಹಿಸುವ ಸರ್ವಾಧಿಪತಿಗಳೂ ಕೂಡಿ ವಾಸವಾಗಿರುವರು. ಇಂತಲ್ಲದೆ ಉತ್ತಮ ಗಜಗಳ ಅವಯವ ಲಕ್ಷಣಗಳಂ ಪೇಳುವೆನು ಅದೆಂತೆನೆ:—ಮೃದುವಾಗಿ, ಬಟುವಾಗಿ, ಸೂಕ್ಷ್ಮಗಳಾದ ಬಿಂದುಗಳು, ಸುಕ್ಕುಗಳು, ಮೇಘದಂತೆ ಧ್ವನಿಯು, ಚಿಗುರಿನಂತೆ ಕಾಂತಿಯು, ರೋಮಕೂಪಗಳಲ್ಲಿ ಎರಡೆರಡು ರೋಮಗಳು ಉಳ್ಳದಾಗಿ, ಪರಿಮಳಯುಕ್ತವಾದ ನಿಶ್ವಾಸದಿಂ ಕೂಡಿರುವ

ಕೊಂಬುಗಳಿಂದ ಕೆಳಕ್ಕೆ ಕ್ರಮವಾಗಿ ಸಣ್ಣನಾಗಿರುವ ಘಟ್ಟಿಯಾದ ಕೊನೆಯುಳ್ಳ ಸೊಂಡಲಿದ್ದರೆ ಆ ಗಜವು ಉತ್ತಮವೆನಿಸಿಕೊಂಬುವುದು. ಈ ಗಜವು ಸ್ವಾಮಿಗೆ ಧನವೃದ್ಧಿಯೂ, ಪುತ್ರಪ್ರಾಪ್ತಿಯೂ, ಧಾನ್ಯಕೋಶಗಳವೃದ್ಧಿಯೂ, ಶತ್ರುನಾಶವುಂಕೂಡಾ ಉಂಟುಮಾಡುವದು. ಕುಂದ, ತಾಳೇಹುವ್ವು, ತುಪ್ಪ, ಜೇನುತುಪ್ಪ, ಚಂದ್ರ, ಕಾಡುಮಲ್ಲಿಗೆಹುವ್ವು, ಇವುಗಳಿಗೆ ಸಮಾನವಾಗಿರುವ ಕಾಂತಿಯುಳ್ಳದ್ದಾಗಿ, ಸ್ಥೌಲ್ಯವು, ರೇಖೆಗಳಿಲ್ಲದೇ ಇರೋಣವು, ನುಣುಪು, ಮಂಡಲಾಕಾರವಾದ ರೇಖೆಯಿಂದೊಡಗೂಡಿದ ಮೂಲಪ್ರದೇಶವೂವುಳ್ಳದ್ದಾಗಿ, ಸಮವಾಗಿ, ದೃಢಗಳಾಗಿ, ದೀರ್ಘಗಳಾಗಿ, ಶತ್ರುಗಳಂ ಸಂಹರಿಸುವದರಲ್ಲಿ ಸಮರ್ಥಗಳಾದ ಕೊಂಬುಗಳುಳ್ಳ ಗಜವು ಉತ್ತಮವು. ಈ ಕೊಂಬುಗಳ ಮಧ್ಯದಲ್ಲಿ ಬಿಲ್ವವೃಕ್ಷದಂತೆಯೂ, ವರ್ಧಮಾನ, ಛತ್ರ, ಚಾಮರ, ಧ್ವಜ, ಇವುಗಳಿಗೆ ಸಮಾನಗಳಾದ ರೇಖೆಗಳಿದ್ದರೆ ಶುಭವು. ಮತ್ತು, ದಂಡ, ಹೆಂಟೇಗೊದ್ದ, ಗೃಧ್ರ, ಗೂಬೆ, ಮೊದಲಾದ್ದಕ್ಕೆ ಸಮಾನವಾದ ರೇಖೆಗಳಿದ್ದರೆ ಶುಭವಲ್ಲ. ಕುಂಭಸ್ಥಳದ ಮೂಲವು, ಬಿಂದುಗಳಿಂ ಸಹಿತವಾಗಿ, ನುಣುಪಾಗಿ, ಕಾಂತಿಯುಕ್ತವಾಗಿದ್ದರೆ ಶುಭವು. ಮುಖವು ನೀಟವಾಗಿ, ಪಾಟಲೀಪುಷ್ಪದಂತೆ ಪರಿಮಳಯುಕ್ತವಾಗಿದ್ದರೆ ಶುಭವು. ನೇತ್ರಗಳು ಕೊನೆಗಳಲ್ಲಿ ಕೆಂಪಾಗಿ, ಸುತ್ತಲೂ ಬಿಳುಪಾಗಿ, ಮಧ್ಯದಲ್ಲಿ ನೀಲವರ್ಣವಾಗಿಯೂ, ಮತ್ತು ಮಂಡಲಾಕೃತಿ ಉಳ್ಳದ್ದಾಗಿ, ಮೃದುವಾದ ರೋಮಗಳುಳ್ಳ ರೆಪ್ಪೆಗಳಿಂದೊಡಗೂಡಿದ್ದರೆ ಶುಭವು, ದುಂದುಭಿಗಳಂತೆ ಧ್ವನಿಯೂ, ಮೃದುವಾದ ಚರ್ಮವು, ಮಚ್ಚೆಗಳೂ, ಛಿದ್ರವಿಲ್ಲದೇ ಇರೋಣವು, ಉಳ್ಳದ್ದಾಗಿ ಸರ್ವದಾ ಚಲಿಸುತಲಿರುವ ಕರ್ಣಗಳು ಶುಭಕರಗಳು, ಇವುಗಳು ಸ್ವಾಮಿಗೆ ಜಯವನ್ನುಂಟುಮಾಡುವವು. ಉಬ್ಬಿಕೊಂಡು, ರೋಮಯುಕ್ತಗಳಾಗಿ, ವ್ಯಕ್ತಗಳಾದ ಕುಂಭಸ್ಥಳಗಳು, ಮತ್ತೂ ಉನ್ನತವಾದ ಇಂಥಾ ಕುಂಭಸ್ಥಳಗಳುಳ್ಳ ಶಿರಸ್ಸು ಉತ್ತಮವು, ಕೃಶವಾಗಿ, ದೀರ್ಘವಾಗಿ, ವಿಸ್ತಾರವಾಗಿ, ಜೋಲುವ ಕತ್ತು, ಬಗ್ಗಿದ ಹೆಗಲು, ಉಳ್ಳದ್ದಾಗಿದ್ದರೆ ಶುಭವ

ಲ್ಲ. ಇದಕ್ಕೆ ವ್ಯತಿರಿಕ್ತವಾದರೆ ಶುಭವನ್ನುಂಟುಮಾಡುವದು. ಹಿಂಭಾಗವು ಸಮವಾಗಿ ಘಟ್ಟಿಯಾಗಿ ವ್ಯಾಪ್ತವಾಗಿದ್ದರೆ ಶುಭವು. ಪಕ್ಕೆಯಾಲಿಯು ಮಾಂಸದಿಂದನಂತೆ ಮನೋಹರವಾಗಿ ಧನುಸ್ಸಿನಂತೆ ಬಾಗಿದ್ದ ಬೆನ್ನುಮೂಳೆಯೂ ಶುಭಕರವಾದದ್ದು. ವಿಸ್ತಾರವಾಗಿ ಉಬ್ಬಿರುವ ಹೆಗಲು ಶುಭಕರವು. ಇಂಥಾ ಹೆಗಲು ಸ್ವಾಮಿಗೆ ಬಹುಕಾಲ ಸಿಂಹಾಸನ ಸ್ಥಿತಿಯನ್ನುಂಟುಮಾಡುವದು. ಶರೀರಕಾಂತಿಗೆ ಸಮಾನವಾದ ಕಾಂತಿಯುಳ್ಳ ಸೂಕ್ಷ್ಮವಾದ ರೋಮಗಳು, ಒಂದೊಂದು ರೋಮಕೂಪಗಳಲ್ಲಿ ಎರಡೆರಡಾಗಿದ್ದರೆ ಶುಭಕರವು. ಆಸನದಲ್ಲಿ, ಹೆಗಲಿನಲ್ಲಿ, ಕಂಠದಲ್ಲಿ, ರೋಮಗಳಲ್ಲಿ, ಶಿಶ್ನದಲ್ಲಿ ಕೂಡಾ ಕೆಂಪುವರ್ಣವುಳ್ಳ ಆನೆಯು, ರೋಮಕೂಪಗಳಲ್ಲಿ ಎರಡೆರಡು ರೋಮಗಳಿಂದೊಡಗೂಡಿಯಿದ್ದರೆ ಸ್ವಾಮಿಗೆ ಕುಲನಾಶವಂ ಮಾಡುವದು. ಶುಭ್ರವರ್ಣವು, ಹೊಂಬಣ್ಣವು, ಕಮಲದಂತೆ ವರ್ಣವುಳ್ಳ ಮಚ್ಚೆಗಳಿಂದೊಡಗೂಡಿದ ಆನೆಯು ಸ್ವಾಮಿಗೆ ವಂಶಾಭಿವೃದ್ಧಿಯಂ ಕೊಡುವದು. ನವಿಲಿನಂತೆಯು, ಗಾರ್ಧಭದಂತೆಯು, ಕಪಿಯಂತೆ, ಕಾಗೆಯಂತೆ, ಹದ್ದಿನಂತೆ ಬಿಂದು ಉಳ್ಳ ಆನೆಯಂ ದೂರದಲ್ಲಿ ಬಿಟ್ಟುಬಿಡಬೇಕು. ಸರ್ವಲಕ್ಷಣಗಳಿಂದಲೂ ಒಡಗೂಡಿದಂತೆ ಹೀನವಾದ ಆನೆಯು, ಮೊಕಳೀ ಎನ್ನಿಸಿಕೊಳ್ಳುವದು. ಆ ಆನೆಯು ಯುದ್ಧದಲ್ಲಿ ಪ್ರಾಣವಂ ಕೊಲ್ಲುವದು. ಯಾವ ಆನೆಗೆ ನಡೆಯುವಾಗ್ಯೆ ಕಾಲುಗಳು ಕೂಡುವವೋ ಆ ಆನೆಯು ನಪುಂಸಕವೆಂಬ ಹೆಸರುಳ್ಳದ್ದು ಇದು ಯೋಗ್ಯವಲ್ಲ. ಎಡದ ಕೊಂಬು ಒಂದೇ ಉಳ್ಳ ಆನೆಯು ಸ್ವಾಮಿಗೆ ಕುಲನಾಶವಂ ಮಾಡುವದು. ಬಲದಕಡೆ ವಾರೆಯಾಗಿ, ಅಧೋಮುಖಗಳಾದ ಕೊಂಬುಗಳುಳ್ಳ ಆನೆಯು, ಎಡದ ಕೊಂಬು ಮಾತ್ರ ಅಧೋಮುಖವಾಗಿ ಕುರಿಯ ಕೊಂಬುಗಳಂತೆ ಮೊಟಕಾದ ಕೊಂಬುಗಳುಳ್ಳ ಆನೆಯು ಯುದ್ಧದಲ್ಲಿ ಸ್ವಾಮಿಯನ್ನೇ ಕೊಲ್ಲುವದು. ಸೊಂಡಲಿನಲ್ಲಿ ತಿಗಣೆಯಂತೆ ದುರ್ವಾಸನೆಯುಳ್ಳ ಆನೆಯು, ಸ್ವಾಮಿಯಿಂದಗರ್ಭಿಣಿಯಾಗಿರುವ ಸ್ತ್ರೀಯಂ ಕೊಲ್ಲುವದು. ಕಣ್ಣುಮೊದಲಾದ ಅವಯವಗಳಿಂದ ಹೀನಗಳಾದ ಆನೆಗಳು ವ್ಯಾಳಹಸ್ತಿಗಳೆನಿಸಿಕೊಳ್ಳು

ವವು, ಇದು ಸ್ವಾಮಿಯ ನೇತ್ರವಂ ಅಪಹರಿಸಿರುವದು. ಒಂದು ಕಿವಿ, ಒಂದು ಕಣ್ಣು, ಒಂದುಪಾರ್ಶ್ವದಿಂದಲೂ ಹೀನವಾಗಿ, ಶರೀರವೋಘದಂತೆ ಶರೀರಕಾಂತಿಯು, ಕಾವೀಕಲ್ಲಿನಂತೆ ಕೆಂಪಾದ ಉಗುರುಗಳು ಉಳ್ಳ ಆನೆಯು ಪ್ರಾತನಗಜವೆನಿಸಿಕೊಳ್ಳುವದು. ಈ ಆನೆಯು ಸ್ವಾಮಿಯ ಮೂಲನಾಶನವಂಮಾಡುವದು, ಇಂಥಾ ಆನೆಯಂ ಶತ್ರುವಿನ ಪಟ್ಟಣದಮಧ್ಯದಲ್ಲಿ ಬಿಡಬೇಕು. ಹ್ರಸ್ವವಾಗಿ, ಸೂಕ್ಷ್ಮವಾದ ಕಿವಿಯು, ಬಾಲವು, ಶಿಶ್ನವು, ಉದ್ದವಾದ ಸೊಂಡಿಲೂ, ಸಣ್ಣವಾದ ಕತ್ತು, ದುಷ್ಟವಾದ ಮನಸ್ಸು, ಕಪ್ಪಾದ ಶರೀರವು, ಕಪ್ಪಾದ ನಾಲಿಗೆಯು ಉಳ್ಳ ಗಜವು ಮಾಯಾಕವೆನಿಸಿಕೊಳ್ಳುವದು, ಈ ಗಜವು ಸೇನಾಪತಿಯಂ, ರಾಜ್ಯವಂ ಕೂಡ ನಾಶನಮಾಡುವದು ; ಎಲೈ ಸುಗಂಧಮಹಾರಾಜನೆ! ಇದುವರಿಗೆ ಉತ್ತಮ, ಮಧ್ಯಮ, ಅಧಮಗಜಗಳ ಲಕ್ಷಣವು ಪೇಳಲ್ಪಟ್ಟಿತು, ಇನ್ನು ಗಜಗಳಲ್ಲಿರುವ ಸುಳಿಗಳ ಶುಭ ಅಶುಭಫಲಗಳಂ ಪೇಳುವೆನುಕೇಳು :--

ಗಜಗಳಿಗೆ ಚರ್ಮದಲ್ಲಿ, ಮುರಿದದಂತಗಳಕೊನೆಯಲ್ಲಿ, ಮಸ್ತಕದ ಕೂದಲುಗಳಲ್ಲಿ, ಬಿಂದುಗಳಲ್ಲಿ, ರೋಮಗಳಲ್ಲಿ, ಬಾಲದಲ್ಲಿ, ಸಹಾ ಸುಳಿಗಳು ಕಾಣುವವು, ಇದರಲ್ಲಿ ಮಸ್ತಕದಕೂದಲುಗಳಲ್ಲಿಯೂ, ದಂತಗಳ ಕೊನೆಯಲ್ಲಿಯೂ, ರೋಮಗಳಲ್ಲಿಯೂ ಇರುವ ಸುಳಿಗಳು ಶುಭಫಲವನ್ನೀಯುವವು; ಚರ್ಮದಲ್ಲಿಯೂ, ಬಿಂದುಗಳಲ್ಲಿಯೂ, ಬಾಲದಲ್ಲಿಯೂ, ಇರುವ ಸುಳಿಗಳು ಅಶುಭಫಲವಂ ಕೊಡುವವು, ಇವುಗಳಲ್ಲಿ ಪ್ರದಕ್ಷಿಣಾಕಾರವಾದ ಸುಳಿಯು ಶುಭವಂಕೊಡುವದು. ಅಪ್ರದಕ್ಷಿಣವಾದಸುಳಿಯು ಅಶುಭವಂಕೊಡುವದು. ಪೀತವರ್ಣವಾದ ಕೂದಲುಗಳು, ಮೃದುವಾದ ಸೊಂಡಿಲು ಉಳ್ಳ ಆನೆಯು ಎಡದಭಾಗದಲ್ಲಿ ಪ್ರದಕ್ಷಿಣಾಕಾರವಾದ ಸುಳಿಯು, ಬಲಭಾಗದಲ್ಲಿ ಅಪ್ರದಕ್ಷಿಣಾಕಾರವಾದಸುಳಿಯು ಇದ್ದರೂ ಆ ಸುಳಿಗಳು ಶುಭಫಲಗಳಂಕೊಡುವವು, ಅಸ್ಥಾನದಲ್ಲಿ ಹುಟ್ಟಿದ ಸುಳಿಯು ಶುಭಕರವಾದಾಗ್ಯೂ ಶುಭವಂ ಕೊಡಲಾರದು, ವಿಹಿತಸ್ಥಾನದಲ್ಲಿರುವ ಸುಳಿಯು ಅಶುಭವಾದಾಗ್ಯೂ ಶುಭಫಲವಂಕೊಡುವದು, ಹಣೆಯಲ್ಲಿ, ಸ್ತನಗಳಮಧ್ಯದಲ್ಲಿ, ಕಣ್ಣುಗಳಮೇಲೆ, ಕುಂಭಸ್ಥಳಗಳ ಮಧ್ಯ

ವಲ್ಲಿ, ಇದರಕೆಳಗೆ, ದಂತಗಳಕೊನೆಗಳಲ್ಲಿ, ಕಿವಿಗಳಮಧ್ಯದಲ್ಲಿ ಸಹಾ ಇರುವ ಸುಳಿಗಳು ಸ್ವಾಮಿಗೆ ಜಯವಂ ಕೊಡುವವು. ಸ್ತನಗಳ ಮಧ್ಯದಲ್ಲಿ ಶಿರಸ್ಸಿನಲ್ಲಿ, ಕುಂಭಸ್ಥಳದ ಮಧ್ಯದಲ್ಲಿ, ಕಿವಿಗಳ ಕೆಳಗೆ, ಬಾಲಯಲ್ಲಿ, ಈ ಸ್ಥಾನಗಳಲ್ಲಿ ಸುಳಿಯುಳ್ಳ ಗಜವು ಪಂಚಮಂಗಳವೆನಿಸಿಕೊಳ್ಳುಬುದು. ಶಿರಸ್ಸಿನಲ್ಲಿರುವ ಸುಳಿಯು ಪಟ್ಟಾಭಿಷೇಕವಂ, ಸ್ತನಗಳ ಮಧ್ಯದಲ್ಲಿರುವ ಸುಳಿಯು ಜಯವಂ, ಕಿವಿಗಳ ಮಧ್ಯದಲ್ಲಿರುವ ಸುಳಿಯು ಸುಖವಂ, ಕುಂಭಸ್ಥಳದಲ್ಲಿರುವ ಸುಳಿಯು ಸಂತೋಷವಂ ಸಹಾ ಕ್ರಮವಾಗಿ ಕೊಡುವವು. ಗಲ್ಲದ ಕೆಳಗೆ, ತುಟಿಗಳಲ್ಲಿ, ಕೊರಳಿನಲ್ಲಿ, ಕಿವಿಗಳಲ್ಲಿ, ನೇತ್ರ ಸಮೀಪದಲ್ಲಿ, ನಾಭಿಯಲ್ಲಿ, ಕಂಕಳಲ್ಲಿ, ಎರಡು ಪಾರ್ಶ್ವದಲ್ಲಿ, ಭುಜ, ಶಿರಸ್ಸುಗಳಲ್ಲಿ, ಬಾಲದಲ್ಲಿ, ವೃಷಣಗಳ ಸಮೀಪದಲ್ಲಿ, ಕೀಲುಗಳಲ್ಲಿಯೂ ಇರುವ ಸುಳಿಗಳು ಶ್ರೇಷ್ಠಗಳಾಗಲಾರವು. ಬಲದಕೊಂಬು ಬಿರಿದುಯಿದ್ದರೆ ಸ್ವಾಮಿಯ ಸೇನೆಗೆ ಭಯ ಉಂಟಾಗುವದು. ಎಡದುಕೊಂಬು ಒಡದಿದ್ದರೆ, ಪುತ್ರನು, ಪುರೋಹಿತನು, ಇವರುಗಳಂ ಸಹಿತವಾಗಿ ಸ್ವಾಮಿಯಂ ಕೊಲ್ಲುವದು. ಎರಡು ಕೊಂಬುಗಳೂ ಬಿರಿದುಯಿದ್ದರೆ ಸ್ವಾಮಿಗೆ ಕುಲನಾಶವಾಗುವದು. ಮತ್ತೂ ಆನೆಗಳಿಗೆ ಮದೋದಕವು ಸ್ರವಿಸುವ ಸ್ಥಳಗಳಂ ಪೇಳುವೆನು. ಗಂಡಸ್ಥಳವು, ಕರ್ಣಗಳು, ನೇತ್ರಗಳೂ, ವಕ್ಷಸ್ಥಳವು, ವೃಷಣಗಳು, ಸೊಂಡಿಲು, ಸ್ತನವು, ಪಾದವು, ಸಹಾ ಈ ಎಂಟು ಸ್ಥಾನಗಳಲ್ಲಿ ಮದವು ಸ್ರವಿಸುವದು. ವಾಸೆಯು, ನಾಗರವು, ಶೀಧು, ಘರ್ಮ, ಮದ, ಶೀಕರವು, ಚಿಕ್ಕೆಯು, ಮಬವು, ಎಂಬದಾಗಿ ಗಜಗಳ ಮದಕ್ಕೆ ಎಂಟು ಹೆಸರುಗಳು. ಮತ್ತೂ ಯುದ್ಧದಲ್ಲಿ ಕೊಂಬುಗಳಿಂದ ಪ್ರಹರಿಸುವ ಕ್ರಮಗಳಂ ಪೇಳುವೆನು. ಪ್ರಹರಿಸುವದನ್ನರಿಯದೇ ಇರುವ ಗಜವು ಯುದ್ಧಕ್ಕೆ ಯೋಗ್ಯವಲ್ಲವಾದ್ದರಿಂದ ಶತ್ರುಗಳಂ ತಿವಿಯುವಂತೆ ಗಜಗಳಿಗೆ ಅಭ್ಯಾಸವಂ ಮಾಡಿಸಬೇಕು. ಸಂಪಾತವು, ಉಲ್ಲೇಖವು, ಕರ್ತರೀಯು, ತಲಘಾತವು, ಪಾರ್ಶ್ವಘಾತವು, ಆರಾಘಾತವು, ಸೂಚೀಪಂತವು, ತಾಡಿತವು, ಸಂಧಿತವು, ಎಂಬ ಇವುಗಳ ಯುದ್ಧದಲ್ಲಿ ಕೊಂಬು

ಗಳ ಯುದ್ಧ ಭೇದಗಳು:— ಇವುಗಳಲ್ಲಿ ಗಜಗಳು ಪರಸ್ಪರವಾಗಿ ಮುಖಗಳಿಂ ತಾಕಿದರೆ ಅದು ಸಂಪಾತವೆನಿಸಿಕೊಳ್ಳುವದು. ಕೊಂಬುಗಳಿಂದ ಮೇಲಕ್ಕೆ ಎತ್ತಿಹಾಕುವದು ಉಲ್ಲೇಖವೆನಿಸಿಕೊಳ್ಳುವದು. ಅಡ್ಡಲಾಗಿಯು, ಮೇಲಕ್ಕಾಗಿಯು ದಂತಗಳಿಂದ ಎತ್ತಿಹಾಕುವದು ಪರಿಲೇಖನವೆನಿಸಿಕೊಳ್ಳುವದು. ಉಭಯ ಪಾರ್ಶ್ವಗಳಲ್ಲಿಯೂ ಕೊಂಬುಗಳಿಂದ ತಿವಿದರೆ ಅಪಕರ್ಷಣೀಯವೆನಿಸಿಕೊಳ್ಳುವದು. ಕೊಂಬುಗಳ ಮಧ್ಯಪ್ರದೇಶದಲ್ಲಿ ಮುಖದಿಂ ತಿವಿದರೆ ಅದು ತಲಾಘಾತವೆನಿಸಿಕೊಳ್ಳುವದು. ಪಾದಮೂಲದಿಂದ ಅಡ್ಡಲಾಗಿ ತಿರಿಗಾಡೋಣವೆ ಪಾರ್ಶ್ವಘಾತ ವೆನಿಸಿಕೊಳ್ಳುವದು. ಪರಸ್ಪರ ಅಭಿಮುಖಗಳಾಗಿ ಸಮೀಪದಲ್ಲಿ ಪ್ರಹರಿಸೋಣವೇ ಆರಾಘಾತವೆನಿಸಿಕೊಂಬುದು. ಸೊಂಡಿಲ ಮಧ್ಯಪ್ರದೇಶದಲ್ಲಿ ತಿವಿಯೋಣವೇ ಸೂಚೀಘಾತವೆನಿಸಿಕೊಳ್ಳುವದು. ಪರಸ್ಪರವಾಗಿ ಕೊಂಬುಗಳಂ ಮಶಿಯೋಣದರಿಂದ ಪುಟ್ಟಿದ ಪ್ರಹಾರವು ತಾಡಿತವೆನಿಸಿಕೊಂಬುದು. ಮೇಲೆಮೇಲೆ ಪರಸ್ಪರವಾಗಿ ತಿವಿಯೋಣವೇ ಸಾಧಿತವೆನಿಸಿಕೊಂಬುದು. ಇಂತಲ್ಲದೇ ಹೆಂಣಾನೆಗಳ ಲಕ್ಷಣಗಳಂ ಪೇಳುವೆನು. ಬಟುವಾದ ಕುಂಭಸ್ಥಳವೂ, ಸ್ತನಗಳೂ, ಮನೋಹರವಾದ ರೋಮಗಳು, ಗುಬ್ಬಚ್ಚಿಯ ನೇತ್ರದಂತೆ ವರ್ಣವುಳ್ಳ ನೇತ್ರಗಳು, ಶುಭ್ರವಾಗಿ ನುಣುಪಾದ ಮುಖವು, ವಿಸ್ತಾರವಾದ ಎದೆಯು, ಮಹತ್ತಾದ ಕಟಿಪಶ್ಚಾದ್ಭಾಗವು, ಮನೋಹರವಾದ ಗಮನವು, ಸಹಾ ಉಳ್ಳದ್ದಾಗಿ, ಸೌಂದರ್ಯವು, ಕೆಂದಾವರೆಯಂತೆ ಕೆಂಪು ವರ್ಣವುಳ್ಳ ದಂತಪಙ್ತಿ ಉಳ್ಳದ್ದಾಗಿಯೂ ಇರುವ ಹೆಂಣಾನೆಯು ಯೂಥಪತಿಯಾದ ಗಜವಂ ಪ್ರಸವಿಸುವದು. ಇಂಥಾ ಹೆಂಣಾನೆಯು, ಯಾವ ಅರಸಿಗೆ ಇರುವದೋ ಆ ಅರಸು ಸ್ತ್ರೀ ಸಂಪತ್ತು ಉಳ್ಳವನಾಗುವನು. ಇಂಥಾ ಆನೆಯಂ ಸರ್ವಕಾಲದಲ್ಲಿಯೂ ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು. ಪುರುಷ ಗಜಗಳಿಗೆ ಯಾವ ಲಕ್ಷಣಗಳು ಪೇಳಲ್ಪಟ್ಟವೋ, ಆ ಲಕ್ಷಣಗಳೇ ಸ್ತ್ರೀ ಗಜಗಳಿಗೂ ಇರಬೇಕೆಂದು ಋಷಿಗಳು ಪೇಳುವರು. ಗಜದ ಶೂರತ್ವವು, ಭಯಶೀಲತ್ವವೂ ಸಹಾ ಮಾವುತನ ಅಧೀನವಾದ್ದರಿಂದ

ತನ್ನ ಸ್ವಾಧೀನದಲ್ಲಿರುವ ಶೂರನಾದ ಮಾವುತನನ್ನು ಇಡಬೇಕು. ಸನ್ನಾಹಯುಕ್ತವಾಗಿಯೂ, ಶೌರ್ಯವೂ, ಶೂರನಾದ ಮಾವುತನೂ, ಪ್ರತಾಪವೂ, ಉಳ್ಳ ಒಂದು ಗಜವು ಆರುಸಾವಿರ ಅಶ್ವಂಗಳಂ ಜಯಿಸುವದು. ಗಜವು ಯುದ್ಧದಲ್ಲಿ ನೂರು ಪ್ರಹಾರಗಳನ್ನಾದರೂ ಸಹಿಸುವದು. ಗಜಗಳು ಸಂತೋಷಯುಕ್ತಗಳಾದರೆ, ಸ್ವಪಕ್ಷದಲ್ಲಿರುವರಂ ಸಂರಕ್ಷಿಸುವದು. ಕೋಪಯುಕ್ತಗಳಾದರೆ ಶತ್ರುಸೇನೆಯಂ ಚೂರ್ಣವಂ ಮಾಡಿ ಸ್ವಾಮಿಗೆ ಹಿತವನ್ನೇ ಮಾಡುವದು. ಆದ್ದರಿಂದ ಗಜಗಳಿಗೆ ಸಮಾನವಾದ ಬಲವು ಯಾವ ಪ್ರಾಣಿಗಳಿಗೂ ಇಲ್ಲ. ಈಪರಿಯಾಗಿ ಹೇಳಲ್ಪಟ್ಟ ಲಕ್ಷಣಗಳಂ ಚನ್ನಾಗಿ ತಿಳಿದು ಪರೀಕ್ಷಿಸಿ, ಉತ್ತಮ, ಮಧ್ಯಮಾಧಮ ಗಜಗಳಂ ತಿಳಿಯಬೇಕೂ, ಎಂದು ವಿಸ್ತಾರವಾಗಿ ಹೇಳಿದ ವಿದ್ಯಾಸಾಗರನ ವಚನವಂ ಕೇಳಿ ಸಂತೋಷಭರಿತನಾಗಿ ಸುಗಂಧಮಹಾರಾಜೇಂದ್ರನು, ಎಲೈ ಗುರುವಾದ ವಿದ್ಯಾಸಾಗರನೇ ಭೂಲೋಕದಲ್ಲಿ ಪುಟ್ಟಿರುವ ಗಜಗಳ ಲಕ್ಷಣಗಳಂ ನಿಮ್ಮಿಂದ ಕೇಳಿ ಅತ್ಯಂತ ಸಂತೋಷವಾಯಿತು ಎಂದು ಹೇಳಿ, ಕೃಶವಾಗಿ, ದೀರ್ಘವಾಗಿ, ವಿಸ್ತಾರವಾಗಿ, ಜೋಲುವ ಕತ್ತು, ಬಗ್ಗಿದ ಹೆಗಲು ಉಳ್ಳದ್ದಾಗಿ ನಡೆಯುವಾಗ ಕಾಲುಗಳು ಮಣಿಯುವದಾಗಿ, ಮುಡದ ಕೊಂಬು ಒಂದೇ ಉಳ್ಳದ್ದಾಗಿ, ಮತ್ತು ಒಂದು ಕಿವಿ, ಒಂದು ಕಣ್ಣು, ಒಂದು ಪಾರ್ಶ್ವಗಳಿಂದಲೂ ಹೀನವಾಗಿ, ಕರೀ ಮೇಘದಂತೆ ಶರೀರಕಾಂತಿಯೂ, ಕಾವೀ ಬಣ್ಣದಂತೆ ಕೆಂಪಾದ ಹದಿನಾರು ಉಗುರುಗಳು ಉಳ್ಳದ್ದಾಗಿಯೂ, ಹ್ರಸ್ವವಾಗಿ, ಸೂಕ್ಷ್ಮವಾದ ಕಿವಿಯೂ, ಬಾಲವೂ, ಶಿಶ್ನವೂ, ಉದ್ದವಾದ ಸೊಂಡಿಲು, ಸಣ್ಣವಾದ ಕತ್ತು ಕಪ್ಪಾದ ನಾಲಿಗೆಯು ಈ ಲಕ್ಷಣಗಳುಳ್ಳ ಆನೆಯು ಪಟ್ಟಕ್ಕೆ ಅಯೋಗ್ಯವಾದ್ದು.

—*( ಪಟ್ಟಕ್ಕೆ ಯೋಗ್ಯವಾದ ಆನೆಗಳು. )*—

ಜಲಬಿಂದುಗಳಿಂದೊಡಗೂಡಿದ ಫೂತ್ಕಾರದಿಂ, ಮೇಘದಂತೆ ಘರ್ಜಿಸುತ್ತ, ಸುಕ್ಕು ಇಲ್ಲದೆ ದಪ್ಪವಾದ ಶರೀರವು, ಶಿಲುವಾದ

ಚರ್ಮವು, ಅಂಜನದಂತೆ ಕಪ್ಪುವರ್ಣವು, ಸರ್ವಾಂಗಗಳಲ್ಲಿಯೂ ರೋಮಗಳೂ, ತಾಳೇಹೂವಿನಂತೆ ಹೊಂಬಣ್ಣವಾದ ಕೊಂಬುಗಳೂ, ಸಮವಾದ ದವಡೆಗಳು, ತಾಳಪತ್ರದಂತೆಯು, ನಗಾರಿಯಂತೆಯು ಧ್ವನಿಯುಳ್ಳ ಕರ್ಣಗಳು, ಉನ್ನತವಾಗಿ ವರ್ತುಲಗಳವಾದ ಕುಂಭಸ್ಥಳಗಳು, ಹ್ರಸ್ವವಾಗಿ, ಧಪ್ಪವಾದ ಕಂಠವು, ಸಜ್ಜುಮಾಡಿದ ಧನುಸ್ಸಿನಂತೆ ಬಾಗಿರುವ ಬೆನ್ನುಮೂಳೆಯು, ಬರ್ತುಳವಾದ ಹೆಜ್ಜೆಗಳು, ಶುಭಕರಗಳಾದ ಇಪ್ಪತ್ತು ನಖಗಳು, ವಿಸ್ತಾರವಾದ ಎದೆಯು, ಸಣ್ಣನಾದ ಹೊಟ್ಟೆಯು, ಸೂಕ್ಷ್ಮಾಂಗಗಳಾದ ಕುಚಗಳು, ಶಂಖಚಕ್ರಗದಾಕಾರವಾದ ಬಿಂದುರೂಪವಾದ ಸುಳಿಗಳು, ಇಂತು ಸುಲಕ್ಷಣಗಳಿಂ ಕೂಡಿರುವ ಗಜವು ವಿಷ್ಣ್ವಂಶದಿಂ ಜನಿಸಿರುವದ್ದರಿಂ ಪಟ್ಟಕ್ಕೆ ಯೋಗ್ಯವಾಗಿ ಸಕಲ ಶುಭಕಾರ್ಯಂಗಳಂ, ತನ್ನ ಒಡೆಯನಿಗೆ ಐಶ್ವರ್ಯವಂ, ಜಯಲಕ್ಷ್ಮಿಯಂ ಕೂಡ ಉಂಟುಮಾಡುವುದು. ಮತ್ತೂ, ಗಜಗೌರೀ ವ್ರತಕ್ಕೆ ಯೋಗ್ಯವಾಗಿ, ಶುಭ್ರವರ್ಣವಾಗಿ, ಚತುರ್ದಂತಗಳಿಂದೊಪ್ಪುತ, ಮನೋನುಸಾರಿಯಾದ ಗಜವು ನಿಂಮಿಂದ ಹೇಳಲ್ಪಡಲಿಲ್ಲ. ಸೌಗಂಧಿಕಾದೇವಿಯು ಅಪೇಕ್ಷಿಸುವದು ಈ ಗಜವೇ ಹೊರ್ತು, ನಿಮ್ಮಿಂದ ಹೇಳಲ್ಪಟ್ಟ ಗಜಗಳಲ್ಲಿ ಒಂದೂ ಅಲ್ಲ. ನಾನು ಸೌಗಂಧಿಕಾದೇವಿಯು ಪೇಳಿದ ಗಜವನ್ನೇ ತಂದುಕೊಡುವೆನೆಂದು ಪಣವಂ ಒಪ್ಪಿಕೊಂಡು ಬಂದಿರುವೆನು. ಆ ಗಜವು ಯಾವದು, ಎಲ್ಲಿರುವದೆಂದು ಕೇಳಿದ ಸುಗಂಧಮಹಾರಾಜನಂ ಕುರಿತು ವಿದ್ಯಾಸಾಗರನು ಎಲೈ ರಾಜೇಂದ್ರನೇ, ಈ ಲೋಕದಲ್ಲಿ ಚತುರ್ದಂತಗಳುಳ್ಳ ಗಜವು ಯಾವ ರಾಯರಲ್ಲಾದರೂ ಇರುವದು. ಮತ್ತೂ, ಶುಭ್ರವರ್ಣವಾಗಿ, ಎರಡು ಕೊಂಬುಗಳುಳ್ಳ ಆನೆಯು ಲಭಿಸೀತು. ಸುಲಕ್ಷಣ ಬಿಂದುಗಳುಳ್ಳ ಗಜವು ನಿನ್ನಲ್ಲಿಯೇ ಇರುವದಲ್ಲವೆ ಚತುರ್ದಂತಗಳುಳ್ಳ ಅತಿ ಶುಭ್ರವಾದ, ಸುಲಕ್ಷಣ ಬಿಂದುಗಳಿಂದಯುಕ್ತವಾದ ಗಜವು ದೇವಲೋಕದಲ್ಲಿಯೇ ಹೊರ್ತು ಭೂಮಿಯಲ್ಲಿ ಪುಟ್ಟಲರಿಯದು. ಇಂಥಾ ಗಜವಂ ಶಾಸ್ತ್ರದಲ್ಲಿ ತಿಳಿದಿರುವೆವುಂಟು ಎಂದು ಪೇಳಲೂ, ಆ ಮಾತಂ ಕೇಳಿ ಸುಗಂಧಮಹಾರಾಜನು ಹಾಗಾದರೆ ಸೌಗಂಧಿಕಾದೇವಿಯು ಅಪೇ

ಕ್ಷಿಶಿವ ಗಜವು ಗರ್ಭಭವನಾಗಿರುವುದೆಂದು ನುಡಿದು ಉಪಾಧ್ಯಾಯರಿಗೆ ವೀಳ್ಯವಂ ಕೊಟ್ಟು ಕಳುಹಿಸಿ, ಬಳಿಕ ವಿಕ್ರಾಂತ ಸದನನು ಪೌತ್ರಾಪಿ ತನಿಗೆ ಅನುಚರನಾದ ಛಾಯಾಗುಪ್ತನಂ ಸ್ಮರಿಸಲಾಕ್ಷಣವಲ್ಲಿಯೇ ಆ ಯಕ್ಷನು ಬಂದು ರಾಯನಿಗಭಿವಂದಿಸಿ, ರಾಜಾಧಿರಾಜನೇ ನನ್ನಂ ಸ್ಮರಿಸಿದ್ದು ಯಾವಕಾರ್ಯಕ್ಕೋಸುಗ ಅಪ್ಪಣೆಯಾಗಬೇಕೆಂದು ವಿಜ್ಞಾಪಿಸಲಾ ಸುಗಂಧರಾಜೇಂದ್ರನು, ಎಲೈ ಜಗದೀಶ್ವರಿಯ ಆಜ್ಞಾನುಸಾರವಾಗಿ, ತ್ರಿಲೋಕ ಸಂಚಾರದಲ್ಲಿ ಸಮರ್ಥನಾಗಿ, ಕಾಮರೂಪನಾದ ಯಕ್ಷಾಧಿಪನೇ, ಒಂದು ಮಹಾ ಕಾರ್ಯವಂ ಕುರಿತು ನಿನ್ನಂ ಸ್ಮರಿಸಿದೆನು ಅದೆಂತೆನೆ. ಕಳಿಂಗರಾಜಪುತ್ರಿಯಾದ ಸೌಗಂಧಿಕಾದೇವಿಯು ತಾನು ಮಾಡುವ ನೋಹಿಗೆ ಚತುರ್ದಂತಗಳುಳ್ಳ, ಅತಿ ಶುಭ್ರನಾದ, ಸುಲಕ್ಷಣ ಬಿಂದುಗಳಿಂದೊಡಗೂಡಿದ ಮದಾರ್ದ್ರನೆಯು ಬೇಕೆಂದು ಹೇಳಿರುವದರಿಂ, ಅಂಥಾ ಮಹಾ ಗಜವು ಯಾವ ಲೋಕದಲ್ಲಿ, ಯಾವ ದ್ವೀಪ, ಪರ್ವತಗಳಲ್ಲಿರುವದೋ ಅದಂ ತಿಳಿದುಬಂದು ಹೇಳುವದು ನಿನಗೆ ಅವಶ್ಯಕವು. ಇದು ನಿನಗೆ ಲೀಲಾಮಾತ್ರವೆಂದು ತಿಳಿದಿರುವೆನು. ಮತ್ತು ನಿನಗೆ ಮಾರ್ಗದಲ್ಲಿ ಶುಭ ಉಂಟಾಗಲಿ ಪೋಗಿ ಬಾ ಎನಲು, ಅದಂ ಕೇಳಿ ಆ ಯಕ್ಷನು ಆಜ್ಞಾಪಿಸಿದಂತೆ ನಡೆದುಕೊಳ್ಳುವೆನೆಂದು ಹೇಳಿ ರಾಯನಿಗೆ ಅಭಿವಂದಿಸಿ, ಆಗಲೇ ಅಂತರಿಕ್ಷಮಾರ್ಗವನ್ನೈದಿ ಅತಿವೇಗದಿಂಪೋಗುತ್ತ, ವಿದ್ಯಾಧರಸ್ಥಾನವಾದ ಭುವರ್ಲೋಕವಂ ಹೊಂದಿ ಹುಡುಕುತ್ತ, ಅಲ್ಲಿಂದ ಸ್ವರ್ಗಲೋಕವನ್ನೈದಿ, ಆ ಲೋಕವು ರಾಕ್ಷಸರಿಂದಾಕ್ರಾಂತವಾಗಿ ದೇವತಾಪ್ರಚಾರವಿಲ್ಲದೆ ಶೂನ್ಯವಾಗಿರುವದಂ ಕಂಡು ಗಜಶಾಲೆಯಂ ಹೊಂದಿ ರಾಕ್ಷಸರ ಗಜಗಳಿಂ ನಿಬಿಡವಾದ ಆಶಾಲೆಯಂ ಬಿಟ್ಟು ಹಾಗೇ ನಂದನವನವಂಪೊಕ್ಕು ಆ ವನವು ರಾಕ್ಷಸರಿಂದ ರಕ್ಷಿತವಾಗಿರುವದಂ ನೋಡಿ ಆ ಲೋಕವಂಬಿಟ್ಟು ಮನೋವೇಗದಿಂ ಬಂದು, ಜಂಬೂದ್ವೀಪದ ವರ್ಷಂಗಳಲ್ಲಿಯೂ ಹುಡುಕುತ್ತ ನಾನಾಪರ್ವತಪ್ರಾಂತ್ಯಗಳೊಳ್ ಯಥೇಚ್ಛವಾಗಿ ಕರಿಣೀ ಕದಂಬಗಳೊಡನೆ ವಿಹರಿಸುತ್ತಲಿರುವ ಮಹಾಗಜಗಳ ತಂಡಗಳನ್ನೋಡುತ್ತ, ಹಾಗೆ ಲವಣಸಮುದ್ರವಂದಾಂಟಿ ಪ್ಲಕ್ಷದ್ವೀಪವಂ

ಸೇರಿ ಮಹಾಪ್ಲಕ್ಷವೃಕ್ಷದ ಸುತ್ತಲೂ ನಿರೀಕ್ಷಿಸುತ್ತ, ವೈನತೇಯಸರೋವರದ ಪ್ರಾಂತ್ಯದಲ್ಲಿ ಹುಡುಕುತ್ತ, ಅಲ್ಲಿ ಮಹಾಗಜವು ಕಿತ್ತು ಬಿಸುಟಿರುವ ಗಿರಿಶಿಖರವಂ ನೋಡುತ್ತ, ಭೂಮಿಗಿಳಿದಿರುವ ಗಜಪಾದಗಳ ಘಾತವಂನಿರೀಕ್ಷಿಸಿ ಇಲ್ಲಿ ಯಾವುದೋ ಒಂದು ಮಹಾಗಜವಿರುವದೆಂದು ತಿಳಿದು, ಅಲ್ಲಿ ಉದರಿರುವ ಸರಪಣಿಗಳಂ ಕಂಡು ಯಾರೋ ಮಹಾಗಜವಂ ಹಿಡಿದುಕೊಂಡು ಹೋಗಿರಬೇಕೆಂದು ಭಾವಿಸಿ ಅದು ಎಲ್ಲಿರುವದೋ ನೋಡಬೇಕೆಂದು ಕುತೂಹಲದಿಂದ ಅದರ ಹೆಜ್ಜೆಯ ಮಾರ್ಗವಂ ಹಿಡಿದು ಬರುತ್ತ, ಮಹಾನದಿಗಳಂ ದಾಂಟಿ, ಇಕ್ಷುಸಮುದ್ರದ ತೀರದಲ್ಲಿ ಇಕ್ಷುವನವು ಗಜದಿಂ ಸೂರೆಯಾಗಿರುವದಂನೋಡಿ, ರಾಕ್ಷಸಾಕ್ರಾಂತವಾಗಿರುವ ಆ ದ್ವೀಪವಂ ಕಂಡು ತಾನು ನಿಜರೂಪವಂಬಿಟ್ಟು ಅಲ್ಲಿಯ ಜನದಂತೆ ಕಾಣಿಸಿಕೊಂಡು ಚಂದ್ರಪುರಿಯಂ ಪೊಕ್ಕು ಆ ಪುರಿಯು ರಾಕ್ಷಸಾಧೀನವಾಗಿ ಧರ್ಮಲೋಪವಾಗಿರುವದಂ ತಿಳಿದು, ಅಲ್ಲಿಂದ ಮಣಿಕೂಟಪರ್ವತವನ್ನೈದಿ, ಅಲ್ಲಿಯೂ ರಾಕ್ಷಸರ ಮಂದಿರಗಳಂ ನೋಡುತ್ತ, ಅರುಣಾನದಿಯಂ ದಾಂಟಿ ಯಶಸ್ವಿಖಂಡವನ್ನೈದಿ ಯಕ್ಷಸದನವಂ ನೋಡುತ್ತ, ವಿಮಲಾನದಿಯಂದಾಂಟಿ ವಜ್ರಕೂಟಪರ್ವತವನ್ನೈದಿ ಸಮುದ್ರಖಂಡದಲ್ಲಿ ರಾಕ್ಷಸರ ಪುರವನ್ನೋಡಿ, ಹಾಗೇ ಸುಗುಣಾನದಿಯಂ ದಾಂಟಿ ಶಾಂತಿಖಂಡವನ್ನೈದಿ ಸಾವಿತ್ರೀನದೀತೀರದಲ್ಲಿ ಪುರವಂ ರಚಿಸಿಕೊಂಡು ವಾಸಗೊಂಡಿರುವ ರಾಕ್ಷಸರ ಸಂಘವಂನೋಡಿ ಧರ್ಮವು ನಷ್ಟವಾಯಿತೆಂದು ತಿಳಿಯುತ್ತ, ಈ ರಾಕ್ಷಸರಿಗೆ ಯಾವವನಧಿಪತಿಯಾಗಿರುವನೋ ಅವನಲ್ಲಿ ಒಂದು ಮಹಾಗಜವಿರಬಹುದೆಂದು ನಿಶ್ಚಯಿಸಿ ಬರುತ್ತ ಕ್ಷೇಮಖಂಡವನ್ನೈದಿ ಧೂಮ್ರವಂತ ಪರ್ವತಪ್ರಾಂತ್ಯದಲ್ಲಿ ಸುಪ್ರಭಾನದೀತೀರದೊಳ್ ಎರಡನೇ ಅಮರಾವತಿಯೋ ಎಂಬಂತಿರುವ ವಿಮಲಪುರವಂಕಂಡು, ಅಲ್ಲಿಯ ಹರ್ಮ್ಯಪ್ರಾಸಾದಚಿತ್ರಶಾಲೆಗಳಂನೋಡಿ ರತ್ನತೋರಣ, ಸಹಸ್ರ ಕಲಶಧ್ವಜ ಪತಾಕೆಗಳಿಂ ಕಂಗೊಳಿಸುವ ಕನಕಮಯವಾದ ರಾಜಭವನವಂ ನಿರೀಕ್ಷಿಸುತ್ತ, ಕುಬೇರನ ಭವನದಂತೆ ನಾನಾರತ್ನ ರಾಶಿಗಳಿಂ ನಿಬಿಡವಾದ ಕೋಶಗೃಹಗಳಂ, ಮಹೋರಗನಿ

ಕರದಿಂ ಕೂಡಿದ ಮಂದರಗುಹೆಯಂತೆ ಅತಿ ಭೀಷಣವಾದ ಪ್ರವೇಶದ್ವಾರ
ಗಳಂ ಸಹಾ ನೋಡುತ, ಅಪರಿಮಿತವಾದ ರಾಕ್ಷಸರಿಂ ನಿರ್ಮಿತವು ಪಟ್ಟ
ಣಂತೆ ಭೀಷಣವಾಗಿಯೂ, ತೀಕ್ಷ್ಣದಂಷ್ಟ್ರನಯುಗ್ಮಯುಕ್ತವ ರಾಕ್ಷಸರ
ಸಂಘದಿಂ ಸಂಯಮಿಸೀಪಟ್ಟಣದಂತೆ ಭಯಂಕರವಾಗಿಯೂ, ಬಹು
ರತ್ನಪ್ರಭಾನಿಕರದಿಂ ತೇಜೋಲೋಕದಂತೆಭಾಸಮಾನವಾಗಿಯು ಇರುವ
ವಿಮಲಪುರಿಯ ತುರಂಗಶಾಲೆಯಂ ನೋಡುತ, ಹಾಗೆ ಗಜಶಾಲೆಯನ್ನೈದಿ,
ಅಲ್ಲಿ ಸಾಧಾರಣವಾಗಿ ಚತುರ್ದಂತಗಳಿಂ ಕೂಡಿರುವ ಮದಗಜಗಳಂ
ಕಂಡು, ಅಲ್ಲಿಂದ ಪುರೋದ್ಯಾನವನ್ನೈದಿ ಅಲ್ಲಿ ರಚಿಸಿರುವ ಇಕ್ಷುವನ
ವಲ್ಲಿ ಇಭಾನುಸಾರವಾಗಿ ಕರಣೀಕದಂಬಗಳಿಂಕೂಡಿ ವಿಹರಿಸುತ, ಸಲ್ಲ
ಕೀಪಲ್ಲವಗಳಂ ಮೆಲ್ಲುತ, ಹಿಮಾಚಲವೇ ಪ್ರತ್ಯಕ್ಷವಾಗಿ ಬಂದಿರುವ
ದೋ ಎಂಬಂತೆ ಕಾಣುವ, ಮಹೋನ್ನತವಾಗಿ, ಅತಿ ಶುಭ್ರವಾಗಿ,
ಸುಲಕ್ಷಣ ಲಕ್ಷಿತ ಬಿಂದುಗಳಿಂ ಕೂಡಿರುವ ಮಹಾಗಜವಂಕಂಡು ಆ
ಶ್ಚರ್ಯಗೊಳುತ ನಮ್ಮರಾಯನ ಸಂಕಲ್ಪವು ಅನ್ಯಥಾ ಆಗುವದುಂಟೆಮುಂ
ದೆ ರಾಯನಿಗೆ ರಾಣಿಯಾಗುವ ತರುಣಿಯು ಅದೃಷ್ಟಫಲಬದಗಿತೆಂದು ತಿಳಿ
ಯುತ, ಇದಂ ಈಗಲೇ ಯಾವಸಾಹಸದಿಂದಲಾದರೂ ತೆಗೆದುಕೊಂ
ಡು ಅಂತರ್ಧಾನವಾಗಿಪೋಗಿ ರಾಯನಿಗೆ ಒಪ್ಪಿಸಬೇಕೆಂದು ಚಾಪಲ್ಯಪ
ಡುತ, ಮಧ್ಯೆ ರಾಕ್ಷಸರು ಎದುರಾದರೆ ಅವರೊಡನೆ ಯುದ್ಧವಂ ಮಾಡು
ವಲ್ಲಿ ಗಜವು ಸಮುದ್ರಗತವಾದಡೆ ಸ್ವಾಮಿಕಾರ್ಯವು ಕೆಟ್ಟು, ನಾನೂ
ಅಪಯಶಸ್ಸಿಗೆ ಪಾತ್ರನಾಗಿ, ಸ್ವಾಮಿಗೆ ಉಂಟಾಗುವ ಯಶಸ್ಸಿಗೂ ವಿ
ಘ್ನನಾಗಿ. ಧರ್ಮಕಂಟಕರಾದ ರಾಕ್ಷಸರೂ ನಷ್ಟವಾಗದೆ ಕಾರ್ಯವೆಲ್ಲವೂ
ಕೆಡುವುದೆಂದಾಲೋಚಿಸಿ, ಸ್ವಾಮಿಯು ಹೇಳಿದರೀತಿಗೆ ಮಾಡಬೇಕಲ್ಲದೆ
ಹುಚ್ಚುಹಿಡಿದಂತೆ ಹೆಚ್ಚು ನಡತೆಯಂ ನಡಿಯುವದು ಭೃತ್ಯಧರ್ಮವಲ್ಲ
ವೆಂದು ನಿಶ್ಚಯಿಸಿ, ಅಡಿಗಡಿಗೂ ಆ ಗಜದ ಸೌಂದರ್ಯ ಲಕ್ಷಣಗಳಂ
ನೋಡುತ, ಈ ಗಜವು ಯಾವ ಪುರುಷನಿಗೆ ವಶವಾಗಿ ಆವನಲ್ಲಿ ಅನು
ರಾಗದಿಂದಿರುವದೋ, ಆತನಿಗೆ ತ್ರೈಲೋಕಾಧಿಪತ್ಯವು ದೊರೆಯುವ
ದರಲ್ಲಿ ಸಂಶಯವಿಲ್ಲ, ಇದರ ಮಹಾತ್ಮ್ಯದಿಂದಲೇ ಇಲ್ಲಿಯ ರಾಕ್ಷಸಾ

ಧಿಪತಿಯಃ ಈ ದ್ವೀಪವನ್ನಾಳುವನು ಈ ರಾಕ್ಷಸನಿಗೆ ಧರ್ಮಬುದ್ಧಿ ಉಂಟಾದರೆ ಸಕಲ ಅಭ್ಯುದಯಗಳಿಗೂ ಪಾತ್ರನಾಗುವನೆಂದು ಆಲೋಚಿಸುತ್ತಿರಲು, ಆ ವನದಲ್ಲಿ ಆ ಮಹಾಗಜವಂ ರಕ್ಷಿಸುತ್ತಲಿರುವ ರಾಕ್ಷಸರ ಸಂಘವಂ ನೋಡಿ, ಆ ದ್ವೀಪಾಧಿಪತ್ಯವು ರಾಕ್ಷಸನಿಗೆ ಉಂಟಾಗಿರುವದಕ್ಕೆ ಕಾರಣವಂ ವಿಚಾರಿಸಿಕೊಂಡು ಅಲ್ಲಿಂದ ಹೊರಟು ಅಮೃತಾಖ್ಯ ಖಂಡವನ್ನೋಡುತ ವೃತುಭವಾನದಿಯಂ ದಾಂಟಿ ಹಿರಣ್ಮಯಪರ್ವತಕ್ಕೆ ಬಂದು ಅಭ್ರಖಂಡವಂ ಸೇರಿ, ಸತ್ಯಂಭರಾನದಿಯಂ ದಾಂಟಿ ಲವಣಸಮುದ್ರವನ್ನತಿಕ್ರಮಿಸಿ ಜಂಬೂದ್ವೀಪದೊಳ್ ಗಂಧಮಾದನಪರ್ವತವನ್ನೈದಿ, ಅಲ್ಲಿಂದ ಭರತಖಂಡದೊಳ್ ಪೂರ್ವಸಮುದ್ರದ ತೀರದಲ್ಲಿ ಮಹೇಂದ್ರಪರ್ವತ ಪ್ರಾಂತ್ಯದೊಳ್ ಕಂಗೊಳಿಸುವ ಕಳಿಂಗದೇಶಕ್ಕೆ ರಾಜಧಾನಿಯಾದ ವಿಜಯನಗರದ ಪುರೋದ್ಯಾನದ ಬಳಿಯಲ್ಲಿರುವ ಸುಗಂಧರಾಜೇಂದ್ರನ ಬಿಡಾರದ ಸಮೀಪದಲ್ಲಿಳಿದು ರಾಜಭವನವಂ ಪೊಕ್ಕು ಅಲ್ಲಿ ಸ್ನಾನ ಭೋಜನಾದಿಗಳಂ ಮಾಡಿ ರಾಜಕುಮಾರನೊಡನೆ ಸಲ್ಲಾಪವಂಗೈಯುತ್ತಿರುವ ಸುಗಂಧರಾಜನನ್ನೋಡಿ ತಾನು ತಿಳಿದಿರುವ ಅರ್ಥವಂ ಮೆಲ್ಲನೆ ಸೂಚಿಸಲು, ಅದಂ ಕೇಳಿ ಸುಗಂಧರಾಯನು ಝುಗ್ಗನೆ ಎದ್ದು ಸುಮತಿಯ ಹಸ್ತಲಾಸ್ಯದಿಂ ಏಕಾಂತಸದನಕ್ಕೆ ಬರಲು, ಆಗ ಛಾಯಾಗುಪ್ತನು ರಾಯನಿಗೆ ಅಭಿವಂದಿಸಿ ಕೈಕಟ್ಟಿನಿಂದಿರಲಾಗ, ರಾಯನು ಏನೈ ಯಕ್ಷಾಧಿಪನೆ ಕ್ಷೇಮದಿಂ ಬಂದೆಯಾ ಕುಳಿತು ನೀನು ತಿಳಿದಿರುವ ಅರ್ಥವಂ ಪೇಳುವನಾಗೆನಲಾ ಯಕ್ಷನು, ಅಯ್ಯಾ ರಾಜಾಧಿರಾಜನೆ ನಿನ್ನ ಆಜ್ಞಾನುಸಾರವಾಗಿ ಸ್ವರ್ಗವನ್ನೈದಿ ಆ ಲೋಕವು ದೇವೇಂದ್ರನಿಂದಲೂ, ದೇವತೆಗಳಿಂದಲೂ ರಹಿತವಾಗಿ, ರಾಕ್ಷಸಾಕ್ರಾಂತವಾಗಿ ಕಾಲಿಡುವದಕ್ಕೆ ಅವಕಾಶವಿಲ್ಲದೆ ಅಶುಚಿಯಾಗಿದ್ದರೂ ಗೋಷ್ಪದಪ್ರದೇಶವುಳಿಯದಂತೆ ಹುಡುಕಿ ಅಲ್ಲಿ ಗಜವಂ ಕಾಣದೆ ಅಲ್ಲಿಂದ ಹೊರಟು ಜಂಬೂದ್ವೀಪ ವರ್ಷವನಂಗಳಲ್ಲಿ ಹುಡುಕಿ ಅಲ್ಲಿಯೂ ಇಲ್ಲದೆ ಹಾಗೇ ಲವಣಸಮುದ್ರವಂ ದಾಂಟಿ ಪ್ಲಕ್ಷದ್ವೀಪದಲ್ಲಿ ಹುಡುಕುತ್ತಾ ಹೋಗುತ್ತಿರುವಲ್ಲಿ ಎಂದು ಹೇಳುತ್ತಿರುವಷ್ಟರೊಳ್ ಸುಗಂಧರಾಜನು ಸುಮತಿಯ

ನ್ನೋಡಿ ಅಲ್ಲಿ ಆನೆಯು ಇರಬಹುದೆಂದು ಹೇಳಿ, ಮತ್ತು ಯಕ್ಷಾಧಿಪನಂ ಕುರಿತು ಪ್ಲಕ್ಷದ್ವೀಪದೊಳೇನಾಯಿತು ಎಂದು ಕೇಳಲು, ಆ ಯಕ್ಷನು ಜೀಯ್ಯ! ಆ ಪ್ಲಕ್ಷದ್ವೀಪದಲ್ಲಿ ಧೂಮ್ರವಂತ ಪರ್ವತದಬಳಿಯೊಳ್ ಕ್ಷಮೋಖಂಡದಲ್ಲಿ ಸುಪ್ರಭಾನದೀತೀರದೊಳ್ ಉಗ್ರಬಾಹು ಎಂಬ ರಾಕ್ಷಸಾಧಿಪತಿಯು ಎರಡನೇ ಅಮರಾವತಿಯಂತಿರ್ಪ ವಿಮಲ ಪುರವೆಂಬ ಪಟ್ಟಣದ ಬಹಿರುದ್ಯಾನದ ಇಕ್ಷುವನದಲ್ಲಿ ತಾವು ಅಪ್ಪಣೆಕೊಟ್ಟಂತಿರ್ಪ ಬಂದು ಮಹಾಗಜವು ಚತುರ್ದಂತಗಳಿಂ ಕೂಡಿ, ಶುದ್ಧಸ್ಫಟಿಕಸದೃಶವಾದ ಪರಮೇಶ್ವರನೇ ಗಜರೂಪವಂ ಧರಿಸಿರುವಂತೆ ಅತಿ ಶುಭ್ರವಾಗಿ, ಮಹಾ ಸುಲಕ್ಷಣಬಿಂದುಗಳಿಂ ಕೂಡಿ, ಇಚ್ಛಾನುಸಾರವಾಗಿ ಕರಿಣೀಕದಂಬದೊಡಗೂಡಿ, ರಾಕ್ಷಸಸಂಘದಿಂ ರಕ್ಷಿತವಾಗಿ ರಾಕ್ಷಸಾಧಿಪತಿಯು ವಶವಾಗಿರುವದ್ದರಿಂದ ಆ ರಾಕ್ಷಸನು ಆ ದ್ವೀಪಾಧಿಪತ್ಯವಂ ಪಡೆದು, ಅನೇಕಕೋಟಿ ರಾಕ್ಷಸರಿಂ ಕೂಡಿ, ಭೂಲೋಕದೇವೇಂದ್ರನೆಂದು ಹೊಗಳಿಸಿಕೊಳ್ಳುತ್ತ, ಧರ್ಮಮಾರ್ಗಕ್ಕೆ ಕಂಟಕನಾಗಿರುವನೆಂದು ಮತ್ತು ಅಲ್ಲಿಯ ರೀತಿಯನ್ನೆಲ್ಲವಂ ವಿಸ್ತಾರವಾಗಿ ವಿಜ್ಞಾಪಿಸಲು ; ಆ ವಾಕ್ಯವಂ ಕೇಳಿ ಶ್ಲಾಘಿಸುತ ರಾಜೇಂದ್ರನು ಎಲೈ ಯಕ್ಷಾಧಿಪನೆ! ನೀನು ಹೇಳಿದುದೆಲ್ಲವೂ ತಿಳಿಯಲಾಯಿತು, ನಿನಿಗೆ ಬಹಳ ಶ್ರಮವಾಗಿರುವದು ಆದ್ದರಿಂದ ಮನಕೆ ಬಂದ ಆಹಾರವಂಮಾಡಿಕೊಂಡು ವಿಶ್ರಮಿಸಿಕೊಳ್ಳುತ ನೆನೆದಾಗ ಬರುವದೆಂದು ನುಡಿದು ಅವನಂ ಕಳುಹಿ ಸುಮತಿಗಿಂತೆಂದನು :-

ಎಲೈ ಮಂತ್ರಿಯೆ ! ಛಾಯಾಗುಪ್ತನು ಹೇಳಿದ ಮಾತಿನಲ್ಲಿ ಸ್ವರ್ಗಲೋಕವೂ ರಾಕ್ಷಸಾಕ್ರಾಂತವಾಗಿ, ದಾನವಾಂತಕನಾದ ದೇವೇಂದ್ರನ ಪ್ರಯತ್ನವೇನೂ ಸಾಗದೆ ಎಲ್ಲಿಯೋ ಮರೆಯಾಗಿರುವಂತೆ ಕಾಣುತಲಿದೆ, ಇದಕ್ಕೆ ಏನು ನಿಮಿತ್ತವಿರುವದೋ ಭೂಲೋಕದಲ್ಲಿಯೂ ಪ್ಲಕ್ಷದ್ವೀಪವನ್ನಾಶ್ರಯಿಸಿದ ಸಂಘಕ್ಕೆ ಲವಣಸಮುದ್ರವೆಂಬುವದು ಕಾಲುಕಡಲಾಗುವದು, ಹಾಗೇ ಮೇರುಮಂದರಾದ್ರಿಗಳು ಕ್ರೀಡಾಪರ್ವತಗಳಾಗುವವು, ಬಳಿಕ ಭರತಖಂಡವೆಂಬುದು ಎಷ್ಟುಮಾತ್ರವು, ಈ ಪರಿಯಲ್ಲಿ ಧರ್ಮಕಂಟಕರಾದ ದುಷ್ಟರಾಕ್ಷಸರು ಲೋಕಗಳನೆಲ್ಲವನ್ನಾಕ್ರಮಿಸಿ ಬರುತಲಿ

ದ್ದರೆ ಅದಂ ನೋಡುತ್ತ ಅವಮಾನವಿಲ್ಲದೇ ಇರುವ ನನ್ನಂಥಾವರು ಭೂಮಿಯಲ್ಲಿದ್ದುದಕ್ಕೆ ಫಲವೇನು, ನಾವು ಸಾಧಾರಣರಂತೆ ಅಶನವಸನಕ್ಕೋಸುಗಲೇ ಇರುವಂತಾಯಿತೆಂದು ನುಡಿಯಲಾ ರಾಯನ ವಾಕ್ಯವಂ ಕೇಳಿ ಸುಮತಿಯು ಐಯ್ಯಾ ರಾಜಾಧಿರಾಜನೇ ! ಪ್ರಾಕೃತಜನರಂತೆ ನೀನು ಪೇಳುವದುಂಟೆ, ಪೂರ್ವದಲ್ಲಿ ಈಗಿನಂತೆ ಪಾತಾಳವಾಸಿಗಳಾದ ರಾಕ್ಷಸರಿಂದ ಲೋಕಗಳು ಆಕ್ರಾಂತವಾಗಿ, ಧರ್ಮವು ಉತ್ಸನ್ನವಾಗುವದಂ ತಿಳಿದು, ದೇವತೆಗಳು ಮನುಷ್ಯರೂಪದಿಂದವತರಿಸಿ ದುಷ್ಟರಂ ನಿಗ್ರಹಿಸಿ ಧರ್ಮಸಂಸ್ಥಾಪನೆಯಂಗೈದರೆಂದು ಬಹುವಾಗಿ ಕೇಳಿರುವದಷ್ಟೆ, ಈಗಲೂ ದುಷ್ಟನಿಗ್ರಹಕ್ಕೋಸುಗ ದೇವಾಂಶರಾದ ನಿಮ್ಮಂಥಾ ಮಹಾಪುರುಷರು ಉದಯಿಸಿರುವಲ್ಲಿ ಜಂಬೂದ್ವೀಪದ ರಾಕ್ಷಸರು ಆಕ್ರಮಿಸುವರೆಂಬುವದು ಸಂಭವಿಸಲಾರದೆಂದು ಪೇಳಲು, ಅದಂಕೇಳಿ ರಾಜೇಂದ್ರನು ಐಯ್ಯಾ ಮಂತ್ರಿಯೆ, ಧರ್ಮಕ್ಕೆ ಲೋಪವು ರಾಕ್ಷಸರಿಂದ ಉಂಟಾಗುವದೆಂದು ಕೇಳಿದ ಮಾತ್ರಕ್ಕೆ ಅನ್ನೋದಕವನ್ನಾದರೂ ತ್ಯಜಿಸಿ ಶಕ್ತರಾದವರು ತತ್‍ಕ್ಷಣದಲ್ಲಿಯೆ ದುಷ್ಟನಿಗ್ರಹಕ್ಕೆ ಯತ್ನವಂ ಮಾಡಬೇಕಲ್ಲದೆ, ಮಾತೃ ಪಿತೃ, ಗುರು, ದೇವತೆಗಳಿಗಿಂತಲೂ ಅಧಿಕವಾಗಿ ಸ್ವರ್ಗಾಪವರ್ಗವಂ ಕೊಡುವ ಧರ್ಮದ ವಿಷಯದಲ್ಲಿ ಉಪೇಕ್ಷಾವಂತರಾದವರು ನರಕಭಾಜನರಾಗುವರೆಂದು ಕೇಳಿರುವೆಯಷ್ಟೆ, ದೇವತಾಕಟಾಕ್ಷದಿಂದೊದಗಿರುವ ಮಹಾ ಸಾಧನಗಳಲ್ಲಿ ಈಗಲೇ ಒಂದು ಮಹಾಸ್ತ್ರಪ್ರಯೋಗವಂ ಮಾಡಿ ರಾಕ್ಷಸವಂಶವಂ ನಾಶಗೊಳಿಸದಿದ್ದರೆ ಪಾಪಿಷ್ಠರಗತಿಯಂ ಹೊಂದುವನೆಂದು ಧನುಸ್ಸಿಗೆ ನಾರಿಯಂ ಕಟ್ಟುವದಕ್ಕೆ ಯತ್ನವಂಮಾಡಲು, ಆ ರಾಯನನ್ನೋಡಿ ಐಯ್ಯಾ ರಾಕ್ಷಸವನದಾವಾನಲನೇ! ನೀನು ಧರ್ಮಸ್ಥಾಪನವಂ ಮಾಡುವದಕ್ಕೆದಕ್ಷನೆಂದು ತಿಳಿದು, ಅದಕ್ಕೋಸುಗಲೇ ಬಹು ಸಾಧನಗಳಂ ಕೊಟ್ಟು ಯಕ್ಷಾಧಿಪತಿಯಂ ನಿಯಮಿಸಿ ಶ್ರೇಯೋವಂತನಾಗಿರೆಂದು ಪೇಳಿದ ದೇವಿಯ ವಾಕ್ಯಕ್ಕೆ ಅರ್ಥವೇನೆಂದರೆ:—ತಾವು ದಯಪಾಲಿಸಿರುವ ಸಾಧನಂಗಳಿಂದ ದುಷ್ಟರಂ ನಿಗ್ರಹಿಸಿ, ಭೂಭಾರವನ್ನಿಳಿಹಿಸಿ ಯಶೋವಂತನಾಗಿರೆಂದು ಪೇಳಿದಂತಾಯಿತು, ಹೀಗಲ್ಲದೆ ತಾಳ್ಮೆಯಿಲ್ಲದವನ ಜೀವ

ನಾರ್ಥವಾಗಿ ಮಹಾಸಾಧನಗಳಂ ದೇವಿಯು ಕೃಪೆಮಾಡಿ ಕೊಡಲಿಲ್ಲ, ಹೀಗೆ ದೇವತಾನುಗ್ರಹಕ್ಕೆ ಪಾತ್ರನಾಗಿ ಬಹುಸಾಧನಗಳಂ ಕೂಡಿದ್ದಾಗ್ಯೂ, ಆ ಸಾಧನಗಳು ಕಾಲದೇಶಾನುಗುಣವಾಗಿ ಫಲವಂ ಕೊಡುವವು, ವಿಮರ್ಶೆಯಿಲ್ಲದೆ ದುಡುಕುವವನಿಗೆ ಫಲಿಸಲಾರವು, ಪ್ರಭುವಾದವನು ಆಪದ್ಧನವಂ ರಕ್ಷಿಸಿಕೊಂಡಿರುವಂತೆ ಸಾಧನಗಳಂ ರಕ್ಷಿಸಿಕೊಂಡು ಅವಶ್ಯಕವಾಗಿ ಬಂದುಬದಗಿದ ಕಾರ್ಯವಂ ಆ ಸಾಧನಮೂಲಕದಿಂ ಗೆಲ್ಲಬೇಕು ; ಆದ್ದರಿಂ ದೈವಸಹಾಯದಿಂದುಂಟಾದ ಯಶಸ್ಸು ಪೌರುಷದಿಂದುಂಟಾದ ಯಶಸ್ಸಿಗೆ ಸಮಾನವಾಗಲಾರದು, ಆದ್ದರಿಂ ಕಾಲ ದೇಶ ವಸ್ತು ವಿಮರ್ಶಪೂರ್ವಕವಾಗಿ ಯತ್ನವಂ ಮಾಡಿದರೆ ಕಾರ್ಯ ಕೈಗೂಡುವದರಲ್ಲಿ ಸಂಶಯವಿಲ್ಲ, ಇದರಲ್ಲಿ ಕಾಲನಿರ್ಣಯವೆಂತೆಂದರೆ,-ನಿನ್ನೇದಿನ ಪ್ರಹರಿಸಿ ಹೊರಟು ಹೋದ ಶತ್ರುವಿನಮೇಲೆ ಈಗ ಖಡ್ಗವಂ ಪ್ರಯೋಗಿಸುವದೆಂಬುದು ನಿಷ್ಫಲವಾಗುವದರಿಂದ ದ್ವಂದ್ವಯುದ್ಧವನ್ನಪೇಕ್ಷಿಸುವದು ಸಮಕಾಲನಿರೀಕ್ಷಣವಂ ಮಾಡುವದೇ ಕಾಲನಿರೀಕ್ಷಣವೆಂದು ಹೇಳಬೇಕಾಯಿತು, ದೇಶವೆಂದರೆ,-ಲಕ್ಷ್ಯವಂ ಹಿಂಭಾಗದಲ್ಲಿ ಮಾಡಿಕೊಂಡು ಮುಂಭಾಗದಲ್ಲಿ ಬಾಣವಂ ಪ್ರಯೋಗಿಸಿದರೆ ಅದು ನಿಷ್ಫಲವಾಗುವದರಿಂದ ಅಭಿಮುಖವನ್ನಪೇಕ್ಷಿಸುವದೆಂಬುದೇ ದೇಶವಿಮರ್ಶೆ ಎಂದು ಹೇಳಬೇಕಾಯಿತು, ವಸ್ತುವಿಮರ್ಶೆ ಏಂತೆಂದರೆ :—ಲಕ್ಷ್ಯ, ಸಾಧನ, ಪೌರುಷವೆಂದು ವಸ್ತುವು ತ್ರಿವಿಧವು, ಇದಕ್ಕೆ ಅನುರೂಪವಾಗಿ ಯತ್ನವಂ ಮಾಡದಿದ್ದರೆ ಕಾರ್ಯ ಸಫಲವಾಗಲಾರದು, ಏಕೆಂದರೆ-ಶತ್ರುವಿನ ಗಜಸಂಹಾರಕ್ಕೆ ಶುಷ್ಕಪರ್ಣವಂ ಬಹುಬಲದಿಂ ಬೀಶಿ ಬಿಸುಟರೆ ಸಾಧನವು ಅಲ್ಪವಾದುದರಿಂ ಕಾರ್ಯ ನಿಷ್ಫಲವೂ, ಮತ್ತೂ ಬಹುಬಲದಿಂದ ಭಲ್ಲ್ಯವಂತೂಗಿ ಮಕ್ಷಿಕದಮೇಲೆ ಎಸೆದರೆ, ಲಕ್ಷ್ಯವು ಅಲ್ಪವಾದುದರಿಂದ ಅದು ಸಫಲವಲ್ಲ. ಮತ್ತೂ ದುರ್ಬಲನಾದ ಬಾಲಕನು ಎತ್ತಲಾರದ ಪರಶುವಿನಿಂದ ಮಹಾವೃಕ್ಷವಂ ಛೇದಿಸುವೆನೆಂದು ಪರಶುವನ್ನೆತ್ತಲಾರದೆ ಇರುವಲ್ಲಿ ಪೌರುಷವು ಸ್ವಲ್ಪವಾದುದರಿಂದ ಅದು ನಿಷ್ಫಲವಾಗುವುದು. ಆದ್ದರಿಂದ ಲಕ್ಷ್ಯ, ಸಾಧನ, ಪೌರುಷಾನುಗುಣವಾಗಿ ಕಾರ್ಯ ಯತ್ನವಂ ಮಾಡಿದರೆ ಬಹು ಬಲದಿಂ

ಖಡ್ಗವನ್ನೆತ್ತಿ ಕದಳೀಸ್ತಂಭವನ್ನೇರಿ ಬಿಟ್ಟಂತೆ ಕಾರ್ಯ ಸಫಲವಾಗು
ವದು, ಇದೇ ದೇಶಕಾಲ ವಸ್ತುವಿಮರ್ಶೆ ಎನಿಸುವದು. ಈ ಅರ್ಥದಲ್ಲಿ
ರಾಮಾದಿಗಳ ಚರಿತ್ರೆಯೇ ನಿದರ್ಶನವು, ಹೀಗಲ್ಲದೆ ಛಾಯಾಗು
ಪ್ತನು ಹೇಳಿದುದಂತೇಳ ಒಮ್ಮೆಂದೊಮ್ಮೆಯೇ ದ್ವೀಪಾಂತರವಾಸಿಗ
ಳಾದ ರಾಕ್ಷಸರಮೇಲೆ ಇದ್ದ ಬಳಿಯಿಂ ಮಹಾಸ್ತ್ರವಂ ಪ್ರಯೋಗಿಸ
ಲೆಣಿಸಿದರೆ ಅದು ವಿಶ್ವಾಂತರನಾಗುವದೋ, ಅದರಲ್ಲಿ ಅಪರಾಧಿಗಳೂ
ಉಂಟು, ನಿರಪರಾಧಿಗಳೂ ಉಂಟು, ನಿರಪರಾಧಿಗಳಲ್ಲಿ ಅಸ್ತ್ರದೇವ
ತೆಗಳಿಗೆ ಸಂಹಾರವು ಸಮ್ಮತವಾಗಲಾರದು, ತಿರಿಗೀ ಅದು ಕ್ರೈಸೇರ
ದು. ರಾಕ್ಷಸರೆಲ್ಲರೂ ಧರ್ಮಕಂಟಕರೆಂದು ಹೇಳುವರೆ ಧರ್ಮಸ್ಥಾಪಕ
ರಾದ ದೇವತೆಗಳಿಗೆ ಸಹಾಯರಾದ ನೈಋತ್ಯದಿಕ್ಪತಿಯೂ, ವಿಭೀಷ
ಣಾದಿಗಳೂ ಇರುವರು, ಇದರಿಂದ ಪೂರ್ವಿಕರಾದ ಮಹಾರಾಜರು ಅಪ
ರಾಧಿಗಳಂ ದಂಡಿಸಿದರಲ್ಲದೆ, ಜಾತಿವೈರವಂ ಮಾಡಿದವರಲ್ಲ, ಹಾಗೆಯೇ
ಮಹಾಶೂರನಾದ ನೀನು ವಿಮರ್ಶೆಯಿಂದ ಕಾರ್ಯಾರಂಭವಂ ಮಾಡ
ಬೇಕು. ಸೇವಕನಾದ ನನಗೆ ನೀವು ಸಂರಕ್ಷಕರಾದ ಸ್ವಾಮಿಯೂ,
ಮಂತ್ರೋಪದೇಶವಂ ಮಾಡಿದ್ದರಿಂದ ಪೂಜ್ಯನಾದ ಗುರುವು, ಆದಾ
ಗ್ಯೂ ಮಂತ್ರಿತ್ವವೆಂಬ ಭೃತ್ಯಪದದಲ್ಲಿರುವಂತೆ ಅಪ್ಪಣೆಯಾಗಿರುವ
ದರಿಂದ ಸಮಯಾನುಗುಣನಾಗಿ ವಿಜ್ಞಾಪಿಸಿದೆನು, ಚಿತ್ತಕ್ಕೆ ಬಪ್ಪಿ
ದಂತೆ ನಡಸಬಹುದೆಂಬ ಮಂತ್ರಿಯು ವಾಕ್ಯವಂ ಕೇಳಿ, ಎಲೈ ಮಿತ್ರನೆ
ಕಾಲದೇಶವನ್ನರಿತು ಖಂಡಿತವಾಗಿ ಕಾರ್ಯವಂ ತಿಳುಹಿಸಬೇಕೆಂದು
ನಿನ್ನಂ ಮಂತ್ರಿಪದದಲ್ಲಿ ನಿಯಮಿಸಿರುವೆನು. ಪ್ರಭುಗಳಾದವರು
ಎಷ್ಟು ನೀತಿಜ್ಞರಾದಾಗ್ಯೂ, ಸಮಯವಿಶೇಷದಲ್ಲಿ ಖಂಡಿತವಾಗಿ ಉ
ಚಿತವಂ ಪೇಳುವನಾಗಿ, ಆಪ್ತನಾಗಿ, ದಕ್ಷನಾಗಿ, ಶುಚಿಯಾದ ಪುರು
ಷನು ಮಂತ್ರಿಪದಸ್ಥನಾಗಿರಬೇಕೆಂದು ಮಹಾತ್ಮರಾದ ಕಾಮಂದಕಾದಿ
ಗಳವಚನವಿರುವದು. ಮುಂದೆ ಮಾಡತಕ್ಕ ಕಾರ್ಯವೇನು ಎನಲು,
ಸುಮತಿಯು ಅಯ್ಯಾ ರಾಜಶಿರೋಮಣಿಯೇ! ಛಾಯಾಗುಪ್ತನು
ಹೇಳಿದ ವಾಕ್ಯದಿಂದ ಉಗ್ರಬಾಹುವೆಂಬ ರಾಕ್ಷಸನು ಮಹಾ ಗಜವೂಲ

ಕದಿಂದ ಪ್ಲಕ್ಷದ್ವೀಪಾಧಿಪತ್ಯವಂ ಪಡೆಯುತ್ತ, ಧರ್ಮಕಂಟಕನಾಗಿರುವನು ಸಿದ್ಧಮಾಯನಾದುದರಿಂದವನ ನಿಗ್ರಹವು ನಮಗೆ ಅತ್ಯಾವಶ್ಯಕವು, ಅದಕ್ಕೆ ಪಣವೆಂಬ ನಿಮಿತ್ತ ಉಂಟಾಗಿ ಇದೂ ಅವಶ್ಯಕವಾದ್ದರಿಂದ ಆ ದುಷ್ಟನಿಗ್ರಹ ಪೂರ್ವಕವಾಗಿ ಆ ಮಹಾಗಜವು ನಮಗೆ ಲಭಿಸೀತು, ಇದಕ್ಕೆ ಅನಾಯಾಸದಿಂ ಪ್ಲಕ್ಷದ್ವೀಪವನ್ನೈದಲೋಸುಗ ಛಾಯಾಗುಪ್ತನು ಸೇವಕನಾಗಿರುವದ್ದರಿಂದ, ಹತ್ತಿಯರಾಶಿಗೆ ಅಗ್ನಿಕಣ ಸೋಂಕಿದಂತೆ ನಿನ್ನ ಬಾಣಾಗ್ನಿಯಿಂದ ರಾಕ್ಷಸಸಂಘವು ನಷ್ಟವಾಗುವದರಲ್ಲಿ ಸಂಶಯವಿಲ್ಲ. ಈ ಎರಡು ಕಾರ್ಯವನಿರ್ವಹಿಸಿದರೆ ಅಪ್ರಾರ್ಥಿತವಾಗಿ ಯಶಸ್ಸು ಲಭಿಸುವದು. ಆ ಪ್ಲಕ್ಷದ್ವೀಪವಂ ನಾವು ಹೊಂದಿದ ಬಳಿಕ ಅಲ್ಲಿಯ ಪ್ರಕೃತವಿದ್ದಂತೆ ಕಾರ್ಯೋದ್ಯೋಗವಂ ಮಾಡಬೇಕೆಂದು ವಿಜ್ಞಾಪಿಸಲಾ ಮಂತ್ರಿಯ ಬಿನ್ನಪವಂ ಕೇಳಿ ಸುಗಂಧಮಹಾರಾಯನು ಹಾಗೆ ಆಗಲೀ ಎಂದು ನುಡಿದು ಸುಖದಿಂದಾರಾತ್ರಿಯಂ ಕಳೆದು, ಮಾರನೇದಿನ ಅರುಣೋದಯದೊಳೆದ್ದು, ಆಪ್ತರಾದ ಸೇನಾಪತಿ ವೀರಸೇನ ಮೊದಲಾದ ಅಧಿಕಾರಿಗಳಂ ಕರೆಸಿ ಸೇನಾಕಟಕದೊಳ್ ಜಾಗ್ರತೆಯಿಂದಿರುವಂತೆ ನಿಯಮಿಸಿ ಕಳುಹಿ, ಬಳಿಕ ಸ್ನಾನಾಹ್ನಿಕಾದಿಗಳನ್ನರವೇರಿಸಿ, ಛಾಯಾಗುಪ್ತನಂ ಸ್ಮರಿಸಲು ಆ ಕ್ಷಣದಲ್ಲಿಯೇ ಸನ್ನಿಹಿತನಾಗಿ ಅಭಿವಂದಿಸಿ ನಿಂದಿರಲು, ಯುದ್ಧಕ್ಕೆ ಬೇಕಾದ ಶಸ್ತ್ರಾಸ್ತ್ರಗಳಂ, ಮತ್ತು ಉಪಯುಕ್ತವಾದ ವಸ್ತುಗಳಂ ಕೂಡಾ ಅವನ ಕೈಯೊಳ್ ಕೊಟ್ಟು, ಇಷ್ಟದೇವತೆಯನ್ನಭಿವಂದಿಸಿ, ಸುಮತಿಸಮೇತನಾಗಿ ಹೊರಟು ಕೆಲವುದೂರ ಕಾಲುನಡೆಯಿಂದಲೇ ತೆರಳುತ, ಸಂಗಡ ಬಂದವರಂ ಹಿಂದಕ್ಕೆ ಕಳುಹಿ, ಛಾಯಾಗುಪ್ತನ ಭುಜಪೀಠಗಳಲ್ಲಿ ಮಂತ್ರಿಯೊಡನೆ ಕುಳಿತು, ಎಲೈ ಯಕ್ಷಾಧಿಪನೆ! ಪ್ಲಕ್ಷದ್ವೀಪವಂ ಕುರಿತು ತೆರಳುವನಾಗು ಎಂದು ನಿಯಮಿಸಲು, ಅವನು ಮಹಾಪ್ರಸಾದವೆಂದು ಮೆಲ್ಲಮೆಲ್ಲನೆ ಆಕಾಶವನ್ನವಲಂಬಿಸಿ ಕೆಲವುದೂರ ಮಂದಗಮನದಿಂದ ಹಂಸೆಯಂತೆ, ಮತ್ತೆ ಕೆಲವುದೂರ ಅಲಸದೇ ಚಲಿಸುವ ವಿಮಾನದಂತೆ ತೆರಳುತ್ತ, ಕೆಲವು ಹೊತ್ತು ಎತ್ತಿದ ಸತ್ತಿಗೆಯಂತಿರ್ದು ಮೇ

ಘಮ ಮೊತ್ತದೋಳ್ ಸುತ್ತುತ ಇತ್ತರವಾಸ ಮಾರುತದಿಂ ರಾಯನಿಗೆ ಶ್ರಾಂತಿಯಿಲ್ಲದಂತೆ ಮಾಡುತ, ಸ್ಕಂಧಪೀಠದೋಳ್ ಕುಳಿತಿರ್ದ ರಾಯ ಸುಮಂತ್ರಿಗಳಂ ಮಹಾ ಸತ್ವಶಾಲಿಗಳೆಂದು ಮೆಚ್ಚುತ, ಅಲ್ಲಲ್ಲಿರುವ ವಿಶೇಷಗಳಂ ತೋರಿಸಿ ವಿಜ್ಞಾಪಿಸುತ, ಬಳಿಕ ಗರುಡನಂತೆ ಅತಿವೇಗದಿಂ ಹೊರಟು ಪಾರಿಯಾತ್ರ ಹಿಮಾಚಲಗಳಂ ದಾಂಟಿ ಗಂಧಮಾದನವೆಂಬ ಮಹಾಪರ್ವತವಂ ಸೈದಲು, ಅಲ್ಲಿ ರಾಜ ಮಂತ್ರಿಗಳಿರ್ವರೂ ಕೆಲವು ಹೊತ್ತು ವಿಶ್ರಮಿಸಿಕೊಳ್ಳುತ ವಿನೋದದಿಂ ದಿರುತ್ತಿರಲು ; ಆಗ ಭಾಯಾಗಂಡ್ಲನು ಸುಗಂಧರಾಜನಂಕುರಿತು ಎಲೈ ರಾಜಾಧಿರಾಜನೇ ! ಇಲ್ಲಿ ಕಾಣಿಸುವದು ಯಕ್ಷಾಧಿಪತಿಯಾದ ಕುಬೇರನ ಅಳಕಾಪುರಿಯ ಬಹಿರುದ್ಯಾನವನದಲ್ಲಿರುವ ಸೌಗಂಧಿಕಾ ಸರೋವರವೆಂದು ಪೇಳ, ಇದುಕೋ ವಿಕಸಿತಕುಮುದಕಲ್ಹಾರ ಪರಿಮಳಗಳಿಂ ಕೂಡಿ ತರಂಗ ಸಂಬಂಧದಿಂದ ಪಾಟೀರಪಂಕದಂತೆ ಅತಿ ಶೀತಳಮಾಗಿ ಮೆಲ್ಲಮೆಲ್ಲನೆ ಸಂಚರಿಸುವ ಮಂದಮಾರುತಗಳ ಸ್ನೇಹದಿಂದಾಲಿಂಗಿಸಿಕೊಂಡು ಎಮ್ಮ ಗೋಳಲು ಕಳುಹಿಸುವಂತೆ, ಕಮಲ ಮಧುಪಾನದಿಂ ಮತ್ತವಾದ ಭ್ರಮರಝಂಕಾರರವದಿಂ ಪಥಿಕರಂ ಬಾರೆಂದು ಕರೆಯುವಂತೆ, ಮುನಿಜನ ಮನಸ್ಸಿನಿಂ ನಿರ್ಮಿಶಿರುವದೋ ಎಂಬಂತೆ, ಮುಕ್ತಾಫಲಪ್ರಭೆಗಳಿಂ ರಚಿಶಿರುವದೋ ಎಂಬಂತೆ, ಸಜ್ಜನಗುಣಿಗಳಿಂ ತುಂಬಿರುವಂತೆ, ವರುಣನ ವಿಹಾರಾರ್ಥವಾದ ದರ್ಪಣಗೃಹದಂತೆ, ಶರತ್ಕಾಲ ಮೇಘವೇ ದ್ರವೀಭೂತವಾಗಿರುವದೋ ಎಂಬಂತೆ, ವೈಢೂರ್ಯಾಚಲವೇ ಉದಕರೂಪವಾಗಿರುವದೋ ಎಂಬಂತೆ, ತ್ರಿಲೋಕ ಪುಣ್ಯರಾಶಿಯೇ ಸರೋವರವಾಗಿರುವಂತೆ, ಚಂದ್ರಕಿರಣಂಗಳೇ ಪಾನೀಯರೂಪವಂ ವಹಿಶಿರುವದೋ ಎಂಬಂತೆ, ಕೈಲಾಸಪರ್ವತವೇ ರಸರೂಪದಿಂ ಪ್ರವರ್ತಿಶಿರುವದೋ ಎಂಬಂತೆ ಸೌಗಂಧಿಕಾ ಕುಸುಮಗಳ ಪರಿಮಳದಿಂ ಘಮಘಮಿತವಾದುದರಿಂ ಕರ್ಪೂರರಾಶಿಯೇ ಜಲರೂಪವಂ ತಾಳಿರುವಂತೆ, ಭೂಮಿದೇವಿಯು ಸ್ಫಟಿಕನಿರ್ಮಿತ ಧಾರಾಗೃಹವೋ ಎಂಬಂತೆ, ಕಂಗೊಳಿಸುವ ಈ ಸರೋವರವು ಅನೇಕ ಪ್ರಕಾರದಿಂ ಜಲಕೇಳಿಯಿಂ

ಮಾಡುತ, ಉಮಾದೇವಿಯ ಕರಸರೋರುಹದಲಗಳಿಂ ತಳಿಯುತಲಿರುವ ಪರಮೇಶ್ವರನ ಶಿರೋಭೂಷಣ ಚಂದ್ರಕಲಶದಿಂ ಜಾರಿದ ಅಮೃತರಸದಿಂ ಕೂಡಿದ ಅತ್ಯಂತ ಮಧುರವಾದ ಜಲದಿಂ ಕೂಡಿಪ್ಪುದು; ಮತ್ತು ಇದರೊಳ್ ಪ್ರತಿಬಿಂಬಿಸಿರುವ ತೀರವನದಿಂದತಿನೀಲವಾಗಿ, ದಿವದಲ್ಲಿಯೂ ನಿಶಾಸಮಯದಂತೆ ತೋರುತಲಿರುವುದರಿಂ, ನೀಲೋತ್ಪಲದಿಂ ಮರೆಯಾಗಿರುವ ಪತಿಯಂ ಕಾಣದೆ ವ್ಯಾಕುಲಪಡುತಲಿರುವ ಚಕ್ರವಾಕವನಿತಾನಿಕರದಿಂ ನೋಡುವರಿಗೆ ವಿನೋದವನ್ನುಂಟುಮಾಡುತ, ಪ್ರದೋಷಕಾಲ ತಾಂಡವದರ್ಶನಕ್ಕೋಸುಗ ಕೈಲಾಸ ಪರ್ವತವಂ ಕುರಿತು ಮಾರ್ಗವಿಡಿದು ಬಂದ ಬ್ರಹ್ಮದೇವನು ಸಂಧ್ಯೋಪಾಸನೆಯಂ ಗೈದು ಬಳಿಕ ಕಮಂಡಲದಿಂ ಜಲವಂ ತುಂಬಿಕೊಳ್ಳುತ್ತಿದ್ದರೂ ಎಂದಿನಂತೆ ತುಂಬಿ ತುಳುಕುವುದರಿಂದ ಅಪೂರ್ವಾಂಭೋನಿಧಿಯೋ ಎಂಬಂತೆ ಅಪರಿಮಿತ ಸಿದ್ಧಾಂಗನಾಕರಗಳಿಂದರ್ಚಿತವಾದ ಜಲದೇವತಾ ಪೂಜಾ ಕುಸುಮಗಳಿಂ ರಮಣೀಯವಾಗಿ, ಸೋಮವಾರದರ್ಶನಾಪೇಕ್ಷಿಗಳಾಗಿ ಬರುವ ಸಪ್ತ ಋಷಿಗಳಿಂದುಚ್ಚರಿಸುವ ಅಬ್ಲಿಂಗಾಘಮರ್ಷಣಸೂಕ್ತಗಳಿಂದ ಪವಿತ್ರತಮವಾಗಿ, ಬಹು ವಿಲಾಸದಿಂ ಜಲಕ್ರೀಡೆಯಂಗೈವ ಯಕ್ಷೇಶ್ವರನ ನಿತಂಬಿನೀ ಕುಚಕುಟ್ಮಲಕುಂಕುಮ ಪ್ರಕ್ಷಾಳನದಿಂ ಕೆಲವೆಡೆಯೊಳ್ ಪಾಟಲವರ್ಣವಾಗಿ, ಮತ್ತೊಂದೆಡೆಯೊಳ್ ಹರವೃಷಭ ವಿಷಾಣಾಗ್ರಘಾತದಿಂ ಝರ್ಝರಿತವಾದ ಶಿಲಾಶಕಲಗಳಿಂ, ಒಂದೆಡೆಯೊಳ್ ವರುಣಹಂಸಗಳಿಂ ಭಕ್ಷಿಸಿದ ಮೃಣಾಳಕೇಸರಶೇಷದಿಂ ಒಂದೆಡೆಯೊಳ್ ಯಮಮಹಿಷಮುಖದಿಂ ಜಾರಿದ ಫೇನಪುಂಜದಿಂ ಒಪ್ಪಿ ಸ್ನಾನಾರ್ಥವಾಗಿ ಬಂದು ತೆರಳಿದ ಸಪ್ತಮಾತೃಕಾಚರಣಮುದ್ರಾಂಕಿತವಾಗಿ ಇನ್ನೊಂದೆಡೆಯೊಳ್ ಪ್ರಮಥಗಣಗಳಿಂ ಧೂಳನಂಗೈದು ಅವಯವಗಳಿಂ ಉದುರಿದ ಭಸ್ಮರಾಜಿಗಳಿಂ ಧೂಸರವಾದ ಮಣಿಸೋಪಾನಗಳಿಂ, ಒಂದೆಡೆಯೊಳ್ ಜಲಾವಗಾಹನಂಗೈದು ಮೇಲೆ ಬರುವ ಹೇರಂಬ ಮೂರ್ತಿಯ ಗಂಡಸ್ಥಳದಿಂ ಜಾರಿದ ಮದೋದಕ ಧಾರೆಗಳಿಂ ಸಿಕ್ತವಾಗಿ ಅತಿ ವಿಸ್ತಾರವಾದ ಮೃದ್ಯಗಳಿಂ, ಇದೇ

ಶರ್ವಾಣಿಯು ಸಿಂಹಾವತರಣಮಾರ್ಗವೆಂಬ ಬೆಂಬಿಡಿದು ಬರುವ ವಿಜಯಾದಿ ಸಖೀರುಗಳ ತುರುಬುಗಳಿಂ ಜಗುಳಿದ ಮಂದಾರ ಪುಷ್ಪಗಳಿಂ, ವಿದ್ಯಾಧರರಿಂದರ್ಚಿತವಾದ ಶಿವಪೂಜಾ ಬಿಲ್ವದಳಗಳಿಂ ಶೋಭಿಸುತ್ತ, ಅಮೃತದಂತೆ ಸರ್ವೇಂದ್ರಿಯಗಳಂ ಆಹ್ಲಾದಗೊಳಿಸುತ್ತ, ಅತಿ ನೈರ್ಮಲ್ಯದಿಂ ಚಕ್ಷುಸ್ಸಿಗೆ ಪ್ರೀತಿಯನ್ನುಂಟುಮಾಡುತ್ತ ಶೀತಳವಾದುದರಿಂ ಸ್ಪರ್ಶಸುಖವನ್ನುಂಟುಮಾಡುತ್ತ, ಸೌಗಂಧಿಕಾದಿ ಕುಸುಮಗಳಿಂ ಘ್ರಾಣೇಂದ್ರಿಯವಂ ತೃಪ್ತಿಗೊಳಿಸುತ್ತ, ಹಂಸಾದಿರವದಿಂ ಶ್ರೋತ್ರವಂ ಸುಖಗೊಳಿಸುತ್ತ, ಸ್ವಾದುವಾದುದರಿಂದ ರಸನೇಂದ್ರಿಯಕ್ಕೆ ರುಚಿಯನ್ನುಂಟುಮಾಡುತ್ತ ಪುರಾಣಪುರುಷನ ಚರಿತ್ರೆಯಂತೆ ಪ್ರಕಟವಾದ ಮೀನ ಕೂರ್ಮಲಕ್ಷಣಯುಕ್ತವಾಗಿ, ಶ್ರೀನಗರದಂತೆ ಲಲಿತಾಯತನ ಶೋಭಿತವಾಗಿ, ಷಣ್ಮುಖಲೀಲೆಯಂತೆ ಕ್ರೌಂಚವನಿತಾಪ್ರಳಾಪಸಂಯುತವಾಗಿ, ಭಾರತಸಮರ ಸಮಯದಂತೆ ಧಾರ್ತರಾಷ್ಟ್ರಕುಲಗಳ ಪಕ್ಷಕ್ಷೋಭೆಯಿಂಕೂಡಿ, ಮನ್ಮಥಧ್ವಜವಂತೆ ಮಕರಾಧಿಷ್ಠಿತವಾಗಿ, ಅರಣ್ಯದಂತೆ ವಿಜೃಂಭಿಸುತ್ತಿರುವ ಪುಂಡರೀಕ ನಿಕರಗಳಿಂ ಕೂಡಿ, ಕದ್ರೂಸ್ತನದಂತೆ, ನಾಗಸಹಸ್ರಗಳಿಂ ಪಾನಸಂಗೈಯ್ಯುವ ಪಯೋಭಾರದಿಂ ಕೂಡಿ ನಯನಗಳಿಗಾನಂದದಾಯಕವಾಗಿ, ನೋಡತಕ್ಕ ವಸ್ತುಗಳಲ್ಲಿ ಇದೇ ಅತ್ಯತಿಶಯವಾಗಿರುವದರಿಂದ ಈ ಜಲದಿಂದಲೇ ಬ್ರಹ್ಮನು ಅಮೃತವಂ ಸೃಜಿಸಿದನೋ ಎಂಬಂತೆ ಇರುವ ಈ ಸೌಗಂಧಿಕಾಸರೋವರವು ಅತ್ಯಾಹ್ಲಾದಕರವಾದುದು ಎಂದು ವಿಜ್ಞಾಪಿಸಲು, ಆ ವಾಕ್ಯವಂ ಕೇಳಿ ಸುಗಂಧರಾಜೇಂದ್ರನು ಮಂತ್ರಿಯಂ ಕುರಿತು, ಐಯ್ಯಾ ಸುಮತಿಯೇ ! ಈ ದೇವತಾ ಸರೋವರವಂ ನೋಡಿದ ಬಳಿಕ ಇದಕ್ಕೆ ಸದೃಶವಾದ ವಸ್ತುವು ಯಾವಲೋಕದಲ್ಲಿಯೂ ಇರುವದಾಗಿ ತೋರುವದಿಲ್ಲ, ಇಲ್ಲಿ ವಾಸವಂಗೈವ ಮಹಾತ್ಮರಿಗೆ ಸಾಲೋಕ್ಯಮುಕ್ತಿ ಎಂಬುದು ಬೇರೆ ಉಂಟೆ, ಸಕಲ ದೇವಋಷಿಗಳ ಮಜ್ಜನದಿಂದ ತಿಪಾವನವಾದ ಈ ಜಲದಲ್ಲಿ ಸ್ನಾನವಂ ಮಾಡಿದವರಿಗೆ ತಿರಿಗಿ ಕರ್ಮಲೇಪನವೆಂಬುದ್ಯಾವದಿರುವದು, ಇವರ ರಮಣೀಯತೆಯನ್ನೋಡಿ ಸದಾ

ದಿಗೂ ಕಂದವೇ ಸೌರಭ್ಯಗುಣಗಳಿಂ ಯುಕ್ತವಾಗಿರುವವರಿಂದ ಅಳಕಾದೇವಿಯು ಮುಡಿಯುವದಕ್ಕೆ ಯೋಗ್ಯವಾಗಿರುವವು. ಈ ಕುಸುಮವು ಇಂದ್ರಾದಿಗಳ ಅಂತಃಪುರಕ್ಕೆ ಯೋಗ್ಯವಾದುದೂ ಎಂದು ಹೇಳಿದ ವಾಕ್ಯಮಂ ಕೇಳಿ ಸುಗಂಧರಾಜನು ಅವುಗಳಂ ಸ್ವೀಕರಿಸಿ ವಿಶ್ರಮಿಸಿಕೊಂಡು ಮನದಣಿಯುವಂತೆ ಸರೋವರವನೋಡುತ ಅಲ್ಲಿಯ ವನದಲ್ಲಿ ಮೆಲ್ಲಮೆಲ್ಲನೆ ಸಂಚರಿಸುತ ಮೃಗಪಕ್ಷಿಗಳನ್ನವಲೋಕಿಸುತ ಮಧುರವಾದ ಶುಕಶಾರಿಕಾದಿಧ್ವನಿಗಳಂ ಕಿವಿಗಿಂಪಾಗಿ ಕೇಳುತಲಿರುವ ಸಮಯದೋಳ್ ಯಕ್ಷಾಧಿಪನು ಎಲೈ ! ರಸಿಕಶಿಖಾಮಣಿಯಾದ ರಾಜೇಂದ್ರನೇ ! ಇದು ಕುಬೇರನು ವಿಹರಿಸುವ ರತ್ನಶಾಲೆಯು, ಇದು ದೇವಿಯರು ಇಳಿಯುವ ಗೃಹವು, ಇದುನಳಕೂಬರನ ಕ್ರೀಡಾಸದನವು, ಇವೆಲ್ಲವೂ ದೇವಿಯರ ಲೀಲಾಹಂಸೆಗಳು, ಇದುಸಖಿಯರುಗಳ ವಿಲಾಸಸ್ಥಾನವು, ಇವುಮಾಣಿಭದ್ರಾದಿಭೃತ್ಯರುಗಳಿಳಿಯುವ ಕೈಸಾಲೆಗಳು, ಇವು ನರ್ತನವಂ ಮಾಡುವದಕ್ಕೆ ಬರುವರಂಭಾದಿಅಪ್ಸರಸ್ತ್ರೀರುಗಳಿಳಿಯುವ ಬಿಡದಿಗಳು, ಈ ವೃಕ್ಷಗಳು ಸಂತಾನವೃಕ್ಷದ ಸಂತತಿಯಲ್ಲಿ ಸಂಭೂತವಾದುದರಿಂ ಬೇಡಿದವರಿಗೆ ದಿವ್ಯಾನುಲೇಪನ ಮಾಲ್ಯತಾಂಬೂಲಾದಿಗಳಂ ಕೊಡುವವು, ಇದು ದೇವಿಯರ ಅಲಕ್ತಕ ರಂಜಿತವಾದ ಚರಣಸ್ಪರ್ಶದಮಹಿಮೆಯಿಂದ ಸರ್ವದಾ ಪುಷ್ಪಯುಕ್ತವಾಗಿ ಪರಿಮಳದಿಂ ಕೂಡಿರುವವು, ಮತ್ತೂ ಮಂದಾರಶಾಖೆಯಿಂದುದಯಿಸಿರುವ ಈ ವೃಕ್ಷಗಳು ಬೃಂದಾರಕನಿತಂಬಿನೀಬೃಂದದ ಆಲಿಂಗನದಿಂ ಪರವಶಗಳಾಗಿ ಅವರ ಅಂಗರಾಗದಿಂದನುಲಿಪ್ತಗಳಾಗಿ ಸಡಿಲುತಲಿರುವ ಪುಷ್ಪಗಳನ್ನರಿಯದೆ ಸ್ತಬ್ಧಗಳಾಗಿರುವವು, ಇತ್ತಲಾ ದೂರದಲ್ಲಿಕಾಣಿಸುವುದೇ ನರನಾರಾಯಣಾಶ್ರಮವು, ಇದುಕೋ ಪೂರ್ವದಿಕ್ಕಿನಲ್ಲಿ ಹೊಂಬಣ್ಣದಿಂ ಥಳಥಳಿಸುವುದೇ ಆಂಜನೇಯ ನಿವಾಸಯೋಗ್ಯವಾದ ಸುವರ್ಣ ಕದಳೀವನವು, ಇದರ ಮೇಲುಭಾಗದಲ್ಲಿನಿಂತುನೋಡಿದರೆ ಪರಮೇಶ್ವರನಿಗೆ ನಿವಾಸಸ್ಥಾನವಾದ ಕೈಲಾಸಪರ್ವತವು ಕಾಣಿಸುವದು, ಇವೆಲ್ಲವೂಹರಿವರ್ಷವೆಂಬುವದಾಯೆಂದು ಹೇಳುವಸಮಯದಲ್ಲಿಯೇ ಸೂರ್ಯನರಥವು ಅಸ್ತಾಚಲ ಶಿಖರವನ್ನಲಂಕರಿಸುತ್ತಿರಲಾ ತರಣಿಯ ಕನಕಕಾಂತಿಯಿಂ ಅಲ್ಲಿರ್ದ ವಜ್ರಮಣಿನಿಕರಂಗಳು ಮಕತರಾಶಿಯಂ ತಾಳಲು, ಮರಕತಂಗಳು ಮಹಾನೀಲಮಣಿಗಳಂತೆಕಾಣಿಸಲು,

ಪುಷ್ಯರಾಗವು ಗೋಮೇಧಿಕವರ್ಣವಾಗಲು, ಗೋಮೇಧಿಕವು ಗಾರುತ್ಮತರತ್ನವಂ ಪೋಲುತ್ತಿರಲು, ಗೈರಿಕಭೂಮಿಯು ಶಾತ್ವಲಭೂಮಿಯಂತಾಗಲು, ಗಿರಿನದೀಜಲಂಗಳು ಎಳೆಪಸರಾಗಲು, ಆಗ ತರಣಿಯು ಸಂಧ್ಯಾರಾಗಲಕ್ಷ್ಮಿಯೊಡನೆ ಕೇಳಿಯಂಮಾಡಿದ್ದರಿಂದ ಸಂಧ್ಯಾಲಕ್ಷ್ಮಿಯ ಕುಚಕುಂಭ ಕುಂಕುಮಗಳಿಂ ಪಂಕಿಲವಾದ ತನ್ನ ತನುವಂ ಮಜ್ಜನಂಗೈಸಲೋಸುಗವೋಯೆಂಬಂತೆ ಸಮುದ್ರದೊಳ್ ಮಗ್ನನಾಗಲು, ಇಂತಿರುವಲ್ಲಿ ಸುಗಂಧಮಹಾರಾಜೇಂದ್ರನು ಮಹಾಮಾತ್ಯನಾದ ಸುಮತಿಯಿಂದೊಡಗೂಡಿ ಸುಗಂಧ ಯುಕ್ತನಾದ ಗಂಧವಹನಿಂದತಿ ಶೀತಳವಾದ ಗಂಧಮಾದನವೆಂಬ ಮಹಾ ಪರ್ವತದ ಪ್ರಾಂತದಲ್ಲಿರುವ ಸೌಗಂಧಿಕಾ ಸರೋವರದಲ್ಲಿ ಸಾಯಂಕಾಲದ ಸಂಧ್ಯಾನಿಯಮಗಳನ್ನೆರವೇರಿಸಿ, ಇಷ್ಟದೇವತೆಯಾದ ಜಗದೀಶ್ವರಿಯಪಾದಪಂಕಜಗಳಂ ಧ್ಯಾನಿಸಿ ಛಾಯಾಗುಪ್ತನು ತಂದು ಒಪ್ಪಿಸಿದ್ದ ಅಮೃತಸದೃಶಮಾದ ದಿವ್ಯಫಲಗಳಂ ಸವಿದು, ಯಕ್ಷಾಧಿಪನಿಂರಚಿಸಲ್ಪಟ್ಟ ತರುಗಳ್ ತಲ್ಪದಲ್ಲಿ ಸುಖನಿದ್ರೆಯಂಗೈಯುತ ಆ ರಾತ್ರಿಯಂಕಳೆದನು. § * * * * *

ಕುಂಡಲಿಶಯ ಖಂಡಪರಶು ಪುಂಡರೀಕಭವಾಖಂಡಲಪ್ರಮುಖನಿಖಿಲಸುರವರಪರಿಭವ ಪರಿಣತಪ್ರಚಂಡಬಲಚಂಡಮುಂಡವಿಖಂಡನಸಿಪುಣಕೋದಂಡಕಾಂಡಮಂಡಲಾಗ್ರಧರಭುಜಾದಂಡ ಪರಿಮಂಡಿತಚಾಮುಂಡಿಕಾ ಕಟಾಕ್ಷವೀಕ್ಷಣಪ್ರವರ್ಧಮಾನ ಭೂಮಂಡಲಾಧಿಪತ್ಯಸತ್ಯಪ್ರತಾಪ ಸಕಲಭಾಷಾಸಾಮ್ರಾಜ್ಯಸರ್ವಂಕಷ ಚತುರ್ವಿಧ ಸರಸಕವಿತಾಸಿಸ್ಸಹಾಯನಿರ್ಮಾಣಧೌರೇಯ ಘಟಿಕಾಶತಗ್ರಂಥ ದಿನದಿನಪ್ರಬಂಧನಿಬಂಧನಧುರಂಧರ ತ್ರಿಭುವನ ಪವಿತ್ರಾತ್ರೇಯಸಗೋತ್ರಸುಚರಿತ್ರ ಚಾಮರಾಜ ಮಹರಾಜಪುತ್ರನರಪತಿ ಬಿರುದವುಹೀರೂರ ಪುರವರಾಧೀಶ ಶ್ರೀ ಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತಮಾದಸೌಗಂಧಿಕಪರಿಣಯವೆಂಬ ಈ ನವೀನಕೃತಿಯೊಳ ಸುಗಂಧರಾಜೇಂದ್ರನು ಗಜಪಣವಂ ಸಾಧಿಸುವೆನೆಂದು ತೆರಳಿ ಗಂಧಮಾದನ ಪರ್ವತದ ಸಮೀಪದಲ್ಲಿರುವಸೌಗಂಧಿಕಾಸರೋವರದ ತೀರವಂ ಸೇರಿದ ಕಥೆಯಂ ಬಣ್ಣಿಸಿರುವಪದಿನಾಲ್ಕನೇ ಆಶ್ವಾಸನಿರೂಪಣಕ್ಕೆ ಮಂಗಳಮಹಾ *

ಹದಿನಾಲ್ಕನೇ ಅಧ್ಯಾಯ ಸಂಪೂರ್ಣವು.

ಶ್ರೀರಸ್ತು.

# ಪದಿನೈದನೆಯ ಅಧ್ಯಾಯವು.

ಅನಂತರದಲ್ಲಿ ಅತ್ತಲಾ ಪ್ಲಕ್ಷದ್ವೀಪದೊಳು ವಿಮಲಪುರಿಯಲ್ಲಿ ಅರಿಷ್ಟ ಸೂಚಕವಾದ ಭೂಕಂಪವು ಕೆಂಡಗಳ ಮಳೆಗಳೂ ಮತ್ತು ಧೂಮಕೇತುಗಳ ಆವಿರ್ಭಾವವು ಕೂಡಿಯಾಗಿ ಪರಿಪರಿಯಾದ ಅಪಶಕುನಗಳು ಉಂಟಾದುದಂ ಆ ಪುರದಲ್ಲಿ ವಾಸಗೊಂಡಿರುವ ರಾಕ್ಷಸರುಗಳೆಲ್ಲರೂ ಕಂಡು ಅಚ್ಚರಿಗೊಂಡು ಭಯಸಂಭ್ರಾಂತರಾಗುತ್ತಿರಲದನ್ನೋಡಿ ಆದ್ವೀಪವನ್ನಾಕ್ರಮಿಸಿಕೊಂಡಿರುವ ಉಗ್ರಬಾಹುವು ತನ್ನಮಂತ್ರಿಯಾದ ಶಂಕುಕರ್ಣನಂ ಕುರಿತು ಎಲೈ ಮಂತ್ರಿವರ್ಯನೆ! ಇಷ್ಟುದಿನವೂ ಇಲ್ಲದ ಅಪಶಕುನಂಗಳು ಇಂದು ಕಾಣುತ್ತಲಿರುವವು, ಇವರ ಪರಿಯಂ ಆಲೋಚಿಸಿ ಪೇಳುವನಾಗುಯೆನಲೂ ಅದಂ ಕೇಳಿ ಶಂಕುಕರ್ಣನು ಎಲೈ ರಾಕ್ಷಸರಾಯನೆ! ಅಪಶಕುನಗಳ ವಿವರವಂ ಆಲೋಚಿಸಿನೋಡಿದರೆ ನಮ್ಮ ರಾಕ್ಷಸರ ಕುಲಕ್ಕೆ ಮಹದ್ವಿಪತ್ಸೂಚಕವಾಗಿ ಕಾಣುತ್ತಲಿದೆ, ಅದ್ದರಿಂದ ಯಾವಕಾರ್ಯವಂ ಮಾಡಬೇಕಾದರೂ ಸಾವಧಾನ ಚಿತ್ತನಾಗಿ ಆಲೋಚಿಸಿ ಮಾಡಬೇಕಲ್ಲದೆ ದುಡುಕಲಾಗದೂ, ಇದರಿಂದ ಆ ಅಪಶಕುನಗಳು ಶಾಂತವಾಗುವವೆಂದು ಬಿನ್ನವಿಸೆ ತನ್ನಮನದಲ್ಲಿ ನಾನಾವಿಧವಾದ ವಿಕಲ್ಪಗಳನ್ನೆಣಿಯುತ್ತಿರಲೂ;

ಆಸಮಯದಲ್ಲಿ ಸೂರ್ಯನು ಸುಗಂಧರಾಜೇಂದ್ರ ಉಗ್ರಬಾಹು ಇವರೀರ್ವರ ಸಮರಸನ್ನಾಹವನ್ನೋಡ ಬೇಕೆಂಬ ಕುತೂಹಲದಿಂದಲೋಯೆಂಬಂತೆ ಅತಿಶೀಘ್ರದಿಂದುದಯಗಿರಿ ಶಿಖರವನ್ನೇರಿ ಬರುತ್ತಿರಲೂ, ಆಸಮಯದೊಳ್ ಗಂಧಮಾದನ ಪರ್ವತಪ್ರಾಂತದಲ್ಲಿರುವ ಸೌಗಂಧಿಕಾ ಸರೋವರದ ಸಮೀಪದಲ್ಲಿ ಇಳಿದಿರ್ದ ಸುಗಂಧ ರಾಜೇಂದ್ರನು ಪ್ರಾತಃಕಾಲದೊಳೆದ್ದು ಸಂಧ್ಯಾದಿಸತ್ಕರ್ಮಗಳನ್ನೆರವೇರಿಸಿ ಅಮೃತಸಮಾನವಾದ ದಿವ್ಯಫಲಗಳಂ ಮೆದ್ದು ಮೊದಲಿನಂತೆ ಸುಮತಿಯೊಡಗೂಡಿ ಯಕ್ಷಾಧಿಪನಾದ ಛಾಯಾಗುಪ್ತನ ಭುಜಪೀಠದಲ್ಲಿ ಕುಳಿತು ತರಳಿತ ತೇಜೋಲೋಕದಂತೆ ಅಧಿಕವಾದ ಪ್ರಭೆಯಿಂದ ಅಂತರಿಕ್ಷವಂ ಬೆಳಗುವ ಬಿಂದುಮಹಾಪರ್ವತವನ್ನೋಡಿ ಛಾಯಾಗುಪ್ತನಂ ಕುರಿತು ಈಪರ್ವ

ಶವುಯಾವದೆಂದುಕೇಳಲು, ಅವನುಜೀಯರಾಜಕುಲತಿಲಕನೆ! ಸುರಾಸುರಮುಕು ಟಮಣಿಪ್ರಭಾಪಟಲದಿಂ ನೀರಾಜಿತವಾದ ಚರಣಾಂಬುಜಗಳಿಂದೊಪ್ಪುವ ಪರ ಮೇಶ್ವರನಿಗೆ ನಿವಾಸ ಸದನವಾದ ಕೈಲಾಸಪರ್ವತವಿದು, ಇದರ ಮೇಲುಭಾ ಗದೊಳಗೆ ಅತ್ಯಂತ ಉನ್ನತವಾಗಿ ಮಹಾನೀಲಪರ್ವತದಂತೆ ಕಾಣಿಸುವದೇ ದಕ್ಷಿಣಾಮೂರ್ತಿಯು ತಪಸ್ಸಂ ಮಾಡುತ್ತಿರ್ದ ಮಹಾ ವಟವೃಕ್ಷವು, ಈಗ ಲೂ ಅವರು ಕುಳತಿರ್ದ ಪೀಠವಂ ಮಹರ್ಷಿಗಳು ಪೂಜಿಸುವರು ಎಂದು ಬಿ ನ್ನವಿಸಲು, ಅದಂ ಕೇಳಿ ಆ ನೃಪ ಮಂತ್ರಿಗಳೀರ್ವರೂ ಪರಪರ ಮಹಾದೇವನೇ ಎಂದು ನಮಸ್ಕರಿಸಲು, ಮತ್ತೆ ಕೆಲವುದೂರದಮೇಲೆ ರತ್ನಕಲಶ ಸಹಸ್ರಪ್ರ ಭೆಯಿಂದಾಕಾಶವಂ ಭಿತ್ತಿಯಿಲ್ಲದ ಅಪೂರ್ವ ಚಿತ್ರದಂತೆ ಮಾಡುತಲಿರುವ ಪು ರವನ್ನೋಡಿ ಸುಗಂಧರಾಯನು ಇಲ್ಲಿ ಯಾರು ಇರುವರೆಂದು ಕೇಳಲಾಗ ಯಕ್ಷನು ಎಲೈ ರಾಜವಂಶ ಮುಕ್ತಾಫಲನೆ! ಇದು ಕುಬೇರನಿಗೆ ನಿವಾಸಸ್ಥಾ ನವಾದ ಅಳಕಾಪುರಿಯು, ಇದು ಅನೇಕಯೋಜನಾಯತವಾಗಿ ಸ್ವರ್ಣ ಗೋಪುರ ಹರ್ಮ್ಯಪ್ರಾಸಾದ ಚಿತ್ರಶಾಲಾ ಗೃಹಪಾಲಗಳಿಂದ ಶೋಭಿಸುವದು, ಮತ್ತು ಈ ಪಟ್ಟಣವು ಪೂರ್ವದಲ್ಲಿ ತ್ವಷ್ಟೃಬ್ರಹ್ಮನಿಂದ ನಿರ್ಮಿತವಾಗಿ, ಯಕ್ಷ ಗಂಧರ್ವ, ಕಿನ್ನರ, ವಿದ್ಯಾಧರಾದಿಗಳಿಗೆ ಆವಾಸಸ್ಥಾನವಾಗಿರುವದು ಇಂತಲ್ಲದೆ ಇದರಲ್ಲಿ ಮೇರುಶಿಖರದಂತೆ ಅತ್ಯುನ್ನತವಾಗಿ ಅನೇಕಸಹಸ್ರ ರತ್ನಕಲಶ ಧ್ವಜಪತಾಕಾ ನಿಕರದಿಂ ಅಲಂಕೃತವಾಗಿ ಕಾಣಿಸುವದೇ-ಕುಬೇರ ಭವನವು, ಅದರ ಸಮೀಪದಲ್ಲಿ ಮರಕತರತ್ನಗಳ ಕಾಂತಿ ಸಮೂಹದಿಂ ಕೂ ಡಿರುವುದೇ ನಳಕೂಬರನ ಕುಮಾರಭವನವು, ಪದ್ಮರಾಗ ನಿರ್ಮಿತವಾಗಿ ಸಂಧ್ಯಾಸಮಯದಂತೆ ಕಂಗೊಳಿಸುವದೇ ದೇವಿಯರ ಅಂತಃಪುರವು, ಅದು ಕೋ ನಂದನವನಕ್ಕಿಂತಧಿಕವಾಗಿ ನಿಶಾಸಮಯದಂತತಿನೀಲವಾಗಿ ಕಾಣಿ ಸುವದೇ ಕುಬೇರನ ಚೈತ್ರರಥವೆಂಬ ಉದ್ಯಾನವನವು, ಇದು ಕೋ ಕವಿಗ ಳಿಗೆ ವರ್ಣಿಸಲಶಕ್ಯವಾಗಿ ನಾನಾ ರತ್ನ ಪ್ರಭೆಯಿಂ ಚಿತ್ರವರ್ಣವಾಗಿ ಕಾಣು ವುದೇ ಪುಷ್ಪಕವೆಂಬ ವಿಮಾನವು ಎಂದು ಹೇಳುತ ಮುಂದೆ ತೆರಳುತ್ತಿರಲು,

ಆಗ ಆ ಸುಗಂಧಮಹಾರಾಯನು ಆ ಅಳಕಾಪುರದ ಹೊರಗಣ ಉದ್ಯಾ ನವನಗಳನ್ನೋಡುತ, ಅಲ್ಲಲ್ಲಿರುವ ಮಣಿಗ್ರೀವಾದಿಗಳ ವಿಹಾರ ಸದನಗಳ

ನ್ನೀಕ್ಷಿಸುತ, ಇದೇನ್ಯೆ! ದೃಷ್ಟಿಪಥವಂಮೀರಿ ಪಾರವಿಲ್ಲದ ಆಕಾಶವೆಂದೆ ಕಾಣಿಸುವದು ಆವುದೆನಲು, ಅದಂ ಕೇಳಿ ಯಕ್ಷಾಧಿಪನು ಇದು ಲಕ್ಷಯೋಜನ ವಿಸ್ತಾರವಾಗಿ, ಮಹಾಮೀನ ನಕ್ರಾದಿಗಳಿಗೆ ಆವಾಸವಾಗಿರುವ ಲವಣ ಸಮುದ್ರವು, ಇದು ಕೋ ಮಹಾಶಬ್ದದಿಂ ಗುಡುಗುತ ಭೂಮಿಯಲ್ಲಿ ವರ್ಷಿಸಲೋಸುಗ ಸಮುದ್ರದಲ್ಲಿ ಜಲಪಾನವಂಗೈಯ್ಯುತ್ತಲಿರುವ ಮಹಾ ಮೇಘಗಳ ತಂಡಗಳು ಅಗಸ್ತ್ಯಮಹಾಮುನಿಯನ್ನನುಕರಿಸುವಂತೆ ಕಾಣಿಸುವವು, ಅದುಕೋ ತಿಮಿ ತಿಮಿಂಗಿಲವೆಂಬ ಮತ್ಸ್ಯಗಳು ಗ್ರಾಸಬುದ್ಧಿಯಿಂದ ಯಡೆತಿಟ್ಟುಗಳನ್ನಂಗೆಲೆಣಿಸಿ ಪಾತಾಳ ಕುಹರಗಳಂತೆಸೆವ ತಮ್ಮ ಬಾಯಿಗಳಂ ತೆರೆದು ಪಕ್ಷಘಾತದಿಂ ಸಮುದ್ರವಂ ಕಲಕುತ, ಅವರ ರಭಸಕ್ಕೆ ಎದ್ದು ಬರುವ ತರಂಗಗಳಂ ಯಡೆತಿಟ್ಟುಗಳಂ ಮುಳಗಿಸುತ, ಎದುರಾಗಿ ಬರುವ ಮಕರ ಕರ್ಕಟಗಳಂ ಮೆಲ್ಲುತ, ತನ್ನಂ ಗ್ರಹಿಸಲು ಪಾರ್ಶ್ವದಲ್ಲಿ ಬಾಯ್ದೆರದು ಬರುವ ಮಹಾ ಸರ್ಪಗಳಂ ಖಂಡಿಸುತ, ಮಹಾತಾಳ ಪ್ರಮಾಣದಿಂ ಕೂಡಿದ ಕೊಂಬಿನಿಂದೊಪ್ಪುವ ಮದ್ಗುವೆಂಬ ಹೆಣ್ಣು ಕಪ್ಪೆಯೊಡನೆ ಕಲಹವಂ ಮಾಡಿ ಅದರ ಕೊಂಬಂ ಮುರಿದು, ಆ ಬಳಿಕ ಯದುರಾಗಿ ಬಂದ ಮಹಾ ಕೂರ್ಮದೊಡನೆ ಕಲಹವಂ ಮಾಡುತಲಿರುವದರಿಂ ಆ ರಭಸಕ್ಕೆ ಎದ್ದ ಸಮುದ್ರೋದಕವು ಮೇಘಮಂಡಲವಂ ತುಡುಕುವದು, ಅದು ಕೋ ಮಹಾಮಕರಗಳ ಸ್ತ್ರೀಪುರುಷ ಯುಗ್ಮವು ಸರಸವಾಡುತ ಸಂಚರಿಸುವ ರಭಸಕ್ಕೆ ಸಮುದ್ರವು ಇಬ್ಭಾಗವಾಗಿ ಒಳಗೆ ಕಾಣಿಸುವ ಪರ್ವತ ಶಿಖರದೋಳ್ ರಾಶಿ ರಾಶಿಯಾಗಿರುವ ಪದ್ಮರಾಗ ಮಣಿಗಳು ಬಡಬಾಗ್ನಿಯಂತೆ ಕಂಗೊಳಿಸುವವೆಂದು ವಿಜ್ಞಾಪಿಸುತ ತೆರಳುತ್ತಿರುವಲ್ಲಿ, ಆ ಲವಣ ಸಮುದ್ರದ ಪಶ್ಚಿಮ ತೀರವು ಸಮೀಪವಾಗಲು, ಅದನ್ನೋಡಿ ಅದುಕೋ ತೌರುಮನೆಯಿಂದ ಪತಿ ಗೃಹವನ್ನೈದಲೆಣಿಸಿ ತಲೆವಾಗಿ ಭಯ ವಿನಯದಿಂ ಬರುತ್ತಿರುವ ಕನ್ನೆಯರಂತೆ, ಮಹಾಪರ್ವತದಿಂದುದ್ಭವಿಸಿ ಭೂಭಾಗವಂ ಭೇದಿಸುತ, ಸಮುದ್ರವು ಸಮೀಪವಾಗಲು ಶಾಂತವಾಗಿ ಮಳಲೊಟ್ಟುಗಳಂ ಕೂಡಿಬರುವ ನದಿಗಳು ಸಮುದ್ರದಲ್ಲಿ ಸಂಗಮಂಗೊಂಡು ಅನ್ಯೋನ್ಯವಾಗಿರುವಂತೆ ಕಾಣಿಸುವವೆಂದು ಪೇಳುತ, ಸಮುದ್ರದ ಪಶ್ಚಿಮತೀರವಂ ಸೇರಿ ಪ್ಲಕ್ಷದ್ವೀಪದ ಯಶಸ್ವಿಖಂಡವಂ ಹೊಂದಿ ಮಣಿ

ಕೂಟಪರ್ವತವಂ ಅತಿಕ್ರಮಿಸಿ, ಅರುಣಾನದಿಯುಂ ದಾಂಟಿ ತೆರಳುತ ಇದು
ಕೋ! ಪುಷ್ಪಿಸಿರುವ ಕಕ್ಕೆ ಮರಗಳಿಂ ಖಚಿತವಾದ ವನದಿಂ ಸುತ್ತುವರಿದು
ಉನ್ನತವಾದ ಶಿರೋಭಾಗದೊಳ್ ಅತಿ ನೀಲವಾದ ವನದಿಂ ಕೂಡಿ ಶೋಭಿ
ಸುವ ಪರ್ವತಯುಗ್ಮವು ಭೂದೇವಿಯು ಹರಿದ್ರಾಚೂರ್ಣದಿಂದ ಅನುಲಿಪ್ತವಾದ
ಚೂಚುಕಗಳಿಂ ಕೂಡಿದ ಸ್ತನಯುಗ್ಮದಂತೆ ಕಂಗೊಳಿಸುವದು ಎಂದು ಪೇಳುತ,
ಸಮುದ್ರಖಂಡವನ್ನೋಡುತ ವಜ್ರಕೂಟ ಪರ್ವತವನ್ನತಿಕ್ರಮಿಸಿ, ಕ್ಷಮಾ
ಖಂಡವನ್ನೈದಿ, ಧೂಮ್ರವಂತ ಪರ್ವತಶಿಖರದ ಮೇಲುಭಾಗದಲ್ಲಿ ನಿಂತು
ಮುಂದೆ ಕಾಣುವ ಪಟ್ಟಣವ್ಯಾವುದು ಎಂದು ಛಾಯಾಗುಪ್ತನಂ ಕೇಳಲು, ಅವ
ನು ಎಲೈ ಸ್ವಾಮಿಯೇ! ಅದೇಯೇ ಅಪರಿಮಿತ ರತ್ನಕಲಶ ಪಂಗ್ತಿಯಿಂದಲೂ
ಕನಕರಚಿತ ಗೋಪುರ ಹರ್ಮ್ಯಗಳಿಂದಲೂ, ಸುವರ್ಣ ಸ್ತಂಭಗಳಿಂ ಕೂ
ಡಿರುವ ಪ್ರಾಸಾದ ಪಂಗ್ತಿಯಿಂದಲೂ, ಸಮುದ್ರದಂತೆ ನಾನಾರತ್ನವಾಸ ಭೂ
ತಗಳಾದ ಅಂಗಡಿಬೀದಿಗಳಿಂದಲೂ, ಅತ್ಯಂತ ಖಾತವಾದ ಅಗಳಿನಿಂದಲೂ,
ಐದು ಸುತ್ತಿನ ಕೋಟೆ ಕೊತ್ತಲುಗಳಿಂದಲೂ, ತೋರಣ, ಧ್ವಜಪತಾಕಾನಿಕ
ರದಿಂ ಕೂಡಿರುವ ರಾಕ್ಷಸಭವನಗಳಿಂದಲೂ, ಕುಬೇರ ಭವನವಂ ಅಪಹಾಸ
ಗೊಳಿಸುವ ರಾಜಭವನಗಳಿಂದಲೂ, ಮತ್ತು ಕಲಿಪುರುಷನ ಬಂಧುಗಳಂತೆ ನಿತಿ
ಭೀಷಣರಾದ ರಾಕ್ಷಸನಿಕರಗಳಿಂ ಅನೇಕವಿಧಉದ್ಯಾನಪಂಗ್ತಿಯಿಂ ಸುತ್ತುವರಿ
ದಿರುವ ಶಾಖಾನಗರದಿಂದತಿಭೀಷಣವಾದ ಸಂಯಮಿನೀಪಟ್ಟಣದಂತೆ ತೋರುವ
ಈ ವಿಮಲಪುರವು, ಉಗ್ರಬಾಹುಎಂಬ ರಾಕ್ಷಸಾಧಿಪತಿಗೆ ಆವಾಸಸ್ಥಾನವಾ
ಗಿರುವದು ಎಂದು ಪೇಳಿ, ಮುಂದೆ ತೆರಳುತ ಸುಪ್ರಭಾ ನದೀತೀರದೊಳಿದು
ಇಲ್ಲಿಗೆ ಆ ವಿಮಲಪುರದ ಶಾಖಾನಗರವು ಒಂದು ಯೋಜನದೂರದಲ್ಲಿರುವದ
ರಿಂದ ರಾಕ್ಷಸರ ಸಂಚಾರವು ಇಲ್ಲಿ ಬಹಳವಾಗಿರುವದು, ಮತ್ತು ಮಹಾಗ
ಜವು ಇರುವ ಪುರದ ಹೊರಗಣ ಉದ್ಯಾನವನವು ಇಲ್ಲಿಗೆ ಮೂರುಯೋಜನ
ದೂರದಲ್ಲಿರುವದೆಂದು ನುಡಿದು ಆ ನದೀತೀರದ ಉದ್ಯಾನವನದಲ್ಲಿ ನೃಪ ಮಂ
ತ್ರಿಗಳನ್ನಿಳುಹಿಸಿ, ತಳಿರುಗಳಿಂ ಹಾಸಿಗೆಯಂ ಮಾಡಿ ಬಳಿಕ ಅಮೃತ ಸದೃಶ
ವಾದ ಫಲಗಳಂ ತಂದುಕೊಡಲು, ಆಗ ರಾಜ ಮಂತ್ರಿಗಳಿರ್ವರೂ ಸ್ವಲ್ಪ
ಹೊತ್ತು ವಿಶ್ರಮಿಸಿಕೊಂಡು ಸಾಯಂಕಾಲವಾಗಲು ಸಂಧ್ಯಾನಿಯಮವಂ ನೆರ

ವೇರಿಸಿ ಛಾಯಾಗುಪ್ತನು ತಂದಿತ್ತ ಫಲಗಳಂ ಭುಂಜಿಸಿ ಸುಖನಿದ್ರೆಯಿಂ ಆ ರಾತ್ರಿಯಂ ಕಳೆದು. ಅರುಣೋದಯ ಸಮಯದೊಳ್ ಸುಗಂಧರಾಜೇಂದ್ರನು ಸುಮತಿಯಂ ಕುರಿತು ಎಲೈ ಮಿತ್ರನೆ! ನಾವು ರಾಕ್ಷಸನ ಪುರದ ಸಮೀಪಕ್ಕೆ ಬಂದ ಬಳಿಕ ಇನ್ನಾಕೆ ವಿಳಂಬವು. ಧನುಷ್ಟಂಕಾರವಂ ಮಾಡಿ ರಾಕ್ಷಸರಂ ಕೆಣಕಿ ಮೇಲುಬಿದ್ದು ಬಂದವರೆಲ್ಲರಂ ಸಂಹರಿಸಿ, ಮಹಾಗಜವಂ ವಶವಂ ಮಾಡಿಕೊಂಡು ತೆರಳೋಣವೋ? ಮತ್ತೇನಾದರೂ ವಿಮರ್ಶೆ ಉಂಟೋ? ಎಂದು ಕೇಳಲು; ಆ ಮಾತಂ ಕೇಳಿ ಸುಮತಿಯು ಐಯ್ಯಾ! ರಾಜಶಿರೋಮಣಿಯೇ ಕಪಟಶೀಲರಾದ ರಾಕ್ಷಸರ ಕಪಟಮೂಲದಿಂದಲೇ, ಲೋಕ ಮೆಚ್ಚುವಂತೆ ಅವರಂ ನಿಗ್ರಹಿಸಿ, ಮುಖ್ಯ ಕಾರ್ಯವಾದ ಬಳಿಕ ಸಂಗಡಲೇ ಮಹಾಗಜವು ಸ್ವಾಧೀನವಾಗುವದು, ಈಗ ಆಗುವ ಕಾರ್ಯವು ಮತ್ತೆರಡು ದಿನವಮೇಲೆ ಆದರೆ ಬಾಧಕವೇನು, ಇಷ್ಟರಲ್ಲಿ ಯುದ್ಧಕ್ಕೆ ನಿಮಿತ್ತ ಉಂಟಾಗುವದಕ್ಕೆ ಛಾಯಾಗುಪ್ತನಂ ಹಂಸರೂಪವಂ ತಾಳುವಂತೆ ನಿಯಮಿಸಿ, ನಾವೀರ್ವರೂ ಆ ಹಂಸಾರೂಢರಾಗಿ ಅಲ್ಲಲ್ಲಿ ಸಂಚರಿಸುತ್ತಲಿದ್ದರೆ ರಾಕ್ಷಸಾಧಿಪತಿಯಾದ ಉಗ್ರಬಾಹುವಿಗೆ ತಿಳಿದು ನಮ್ಮನ್ನಾದರೂ ಕರೆಕಳುಹಿಸುವನು, ಇಲ್ಲದಿರೆ ನೋಡಲೆಣಿಸಿ ತಾನಾಗಿ ನಮ್ಮ ಬಳಿಗೆ ಬರುವನು, ಇದೆರಡೂ ಘಟಿಸದಿದ್ದರೆ ಆ ಬಳಿಕ ಯಾವ ನಿಮಿತ್ತದಿಂದಲಾದರೂ ಯುದ್ಧಯತ್ನವಂ ಮಾಡಿ ಕಾರ್ಯವಂ ಸಾಧಿಸಬಹುದೆಂದು ವಿಜ್ಞಾಪಿಸೆ, ಛಾಯಾಗುಪ್ತನಂ ಕರೆದು ಎಲೈಯಕ್ಷಾಧಿಪನೆ! ಮುಂದಣ ಕಾರ್ಯಕ್ಕೋಸುಗ ಹಂಸರೂಪವಂ ತಾಳುವನಾಗೆಂದು ನಿಯಮಿಸಲೂ, ಆಕ್ಷಣದಲ್ಲಿಯೇ ಛಾಯಾಗುಪ್ತನು ಮಹಾಪ್ರಸಾದವೆಂದು ಬ್ರಹ್ಮಲೋಕದಿಂದಿಳಿದು ಬಂದ ಮರಾಳನಂತೆ ದಿವ್ಯಹಂಸ ರೂಪವಂ ತಾಳಲೂ, ಆಗ ಸುಗಂಧರಾಜೇಂದ್ರನು ಸ್ನಾನಾಹ್ನಿಕಗಳನ್ನೆರವೇರಿಸಿ ಸುಮತಿಯೊಡಗೂಡಿ ಹಂಸರೂಪನಾದ ಛಾಯಾಗುಪ್ತನನ್ನೇರಿ ಸುಪ್ರಭಾನದಿಯ ಉಭಯತೀರದೊಳ್ ಮನಬಂದಂತೆ ಸಂಚರಿಸುತ್ತಿರಲು, ಆನದಿಯೊಳ್ ಜಲಕ್ರೀಡೆಯನ್ನಾಡುತ್ತಿದ್ದ ರಾಕ್ಷಸರು ಅವರಂ ನೋಡಿ ಆಶ್ಚರ್ಯಪಟ್ಟು ವೇಗದಿಂ ಪೋಗಿ ಆಸ್ಥಾನದಲ್ಲಿ ಕುಳ್ಳಿರ್ದ ಉಗ್ರಬಾಹುವಿಗೆ ಈ ಅರ್ಥವಂ ತಿಳುಹಿಸಲೂ, ಅದಂ ಕೇಳಿ ರಾಕ್ಷಸಾಧಿಪನು ಅವರ್ಯಾರು, ಅವರಿಳಿಯುವ ಸ್ಥಾನವಂ ತಿಳಿದು ನಾವು ಬರಹೇಳಿದೆವೆಂದು

ಕರತರುವರಾಗಿಯುಂದು ಅಧಿಕಾರಿಗಳಿಗೆನಿಯಮಿಸಲವರು ಮಹಾಪ್ರಸಾದವೆಂ ದುನದೀತೀರದಲ್ಲಿಸ್ನಾನಜಪವಂಮಾಡುತಲಿರುವನೃಪಮಂತ್ರಿಗಳ ಬಳಿಗೆಬಂದು ಇವರ್‍ಯಾರೋ ಮನುಷ್ಯಾಧಿಪರುಗಳೆಂದು ನಿಶ್ಚೈಸಿ ಅವರ ನಿಯಮವು ನೆರವೇರಿದ ಬಳಿಕ ಸಮೀಪಕ್ಕೆ ಪೋಗಿ ಕೈಮುಗಿದು. ಅಯ್ಯಾ ನರಪತಿಗಳೇ ! ತಾವು ಇಲ್ಲಿಗೆ ಬಂದಿರುವದಂ ನಮ್ಮ ರಾಕ್ಷಸೇಶ್ವರನು ತಿಳಿದು ನಿಮ್ಮನ್ನೋಡಲೆಣಿಸಿ ಕರತರಲೋಸುಗ ನಮ್ಮಂ ಕಳುಹಿಸಿರುವನು, ನೀತಿಜ್ಞನಾದ ನಮ್ಮ ಅರಸಿನ ಬಳಿಗೆ ರಾಕ್ಷಸನೆಂಬ ಶಂಕೆಯುಂ ಬಿಟ್ಟು ಬರಬಹುದು, ಮತ್ತು ನಮ್ಮ ಅರಸನು ಬಹುಮಂದಿ ನರಪತಿಗಳು ಅನುವರ್ತಿಸುತ್ತಲಿರುವರು ಎಂದು ಪೇಳಲು, ಅದಂಕೇಳಿ ಅವರಿರ್ವರೂ ಆ ರಾಕ್ಷಸರಂ ಕುರಿತು ನಿಮ್ಮ ರಾಕ್ಷಸೇಶ್ವರನು ನಮ್ಮನ್ನೋಡಲೆಣಿಸಿದಬಳಿಕ ನಮಗೆ ಬಹಳ ಸಂತೋಷವಾಯಿತು ಇದಕೋ ಬರುವೆವೆಂದುಪೇಳಿ ಆಗಲೇ ಹಂಸಾರೂಢರಾಗಿಅಂತರಿಕ್ಷಮಾರ್ಗದಿಂ ಪೋಗುತ ರಾಕ್ಷಸಾಧಿಪತಿಯ ಸಮ್ಮುಖಕ್ಕೆ ಪೋಗುತ್ತಲಿರುವ ಸಿಂಹ, ಗಜ, ವರಾಹ, ವಾನರ, ಸರ್ಪ, ಮಾರ್ಜಾಲ, ಹಯ, ಗಾರ್ದಭಗಳಂತೆ ಮುಖವುಳ್ಳ ಪಟುಭಟರಂ, ಶೂಲ, ಕುಂತ, ಮುಸಲ, ತೋಮರ, ಶಕ್ತಿ, ಖಡ್ಗ, ಪರಶು ಮೊದಲಾದ ಆಯುಧಗಳಂ ಪಿಡಿದು ತೆರಳುತ್ತಿರುವ ಪದಾತಿ ಸಂಘವಂ ಎರಡು, ಮೂರು, ನಾಲ್ಕು ಮುಖಗಳಿಂದತಿಭೀಷಣರಾಗಿ, ಗಜೋಷ್ಟ್ರ, ಗರ್ದಭಾಶ್ವ, ವೃಷಭಾರೂಢರಾಗಿ ವಿವಿಧಾಯುಧಗಳಂ ಝಳಪಿಸುತ ಪೋಗುತಲಿರುವ ಯಾತುಧಾನ ನಿಕರವಂಕೂಡ ನೋಡಿ ಇವರ ನಿಗ್ರಹವು ದೇವತೆಗಳಿಂದಲೂ ಆಗಲಾರದೆಂದು ಯೋಚಿಸುತಲಿರುವ ನೃಪತಿಯನ್ನೋಡಿ ಇಂಗಿತಜ್ಞನಾದಸುಮತಿಯು ಐಯ್ಯಾ ರಾಜೇಂದ್ರನೇ! ಮನದೊಳೇನೋಬಂದು ಅರ್ಥವಂ ಊಹಿಸಿಕೊಂಡು ಚಿಂತಿಸುತ್ತಿರುವಂತೆ ತೋರುತಲಿದೆ, ಈ ರಾಕ್ಷಸರು ಮದಾಂಧರು, ಅನಾಚಾರಶೀಲರು, ಸತ್ಯವೆಂಬುದು ಯಳ್ಳಷ್ಟಿಲ್ಲ, ಮತ್ತು ಸ್ವಬಲ ಪರಬಲ ವಿಚಾರವಿಲ್ಲ, ಜ್ಞಾನಶೂನ್ಯರು, ಧರ್ಮಕಂಟಕರು, ಆದ್ದರಿಂದ ಇವರಿಗೆ ದೈವಸಹಾಯ ನಡಿಯಲಾರದು, ನಿನಗೆ ದೈವಬಲದಿಂದ ಒದಗಿರುವ ಸಾಧನಗಳನ್ನೋಡಿದರೆದಾವಾಗ್ನಿಗೆ ಸಿಲುಕಿರುವ ತೃಣರಾಶಿಗಳಂತೆಇವರು ನಷ್ಟರಾಗುವರು, ಆದ್ದರಿಂ ಮನದ ವಿಕಲ್ಪವಂ ಬಿಡೂ ಎಂದು ಪೇಳುತ ವಿಮಲಪ್ರ

ರದ ಸಮೀಪವನ್ನೈದಿ ಪ್ರಾಕಾರಗಳಂ ದಾಂಟಿ, ಕಾಲವು ತ್ಯುವೇ ರಾಕ್ಷಸರಂ ಕರೆಯಲುಬಂದಂತೆ ನೃಪಮಂತ್ರಿಗಳೀರ್ವರೂ ಉಗ್ರಬಾಹುವಿನ ಆಸ್ಥಾನದ ಬಳಿಯಲ್ಲಿ ಹಂಸೆಯಿಂದಿಳಿದು ರಾಕ್ಷಸಾಧಿಪನ ಸಮೀಪಕ್ಕೆ ಪೋಗಲು, ಇವರ ನ್ನೋಡಿ ಉಗ್ರಬಾಹುವು ಸ್ವಲ್ಪವಾಗಿ ಪೀಠದಿಂದೆದ್ದವನಂತೆ ಕುಳಿತು, ಅವರಂ ಉಚಿತಪ್ರಕಾರದಲ್ಲಿ ಕುಳ್ಳಿರಿಸಿ,ಎಲೈ ನೃಪಮಂತ್ರಿಗಳಿರಾ! ಸ್ವಾಗತವೇ? ಎಲ್ಲಿಂ ದ ಬಂದಿರಿ,ನಿಮ್ಮ ದೇಶವ್ಯಾವುದು, ನೀವು ಯಾರ ಪುತ್ರರೆನಲು,ಐಯ್ಯಾ ರಾಕ್ಷಸೇ ಶ್ವರನೇ! ಈ ನೃಪೋತ್ತಮರು ಜಂಬೂದ್ವೀಪದ ಭರತಖಂಡವನ್ನಾಳುವ ಸು ಚರಿತ್ರಮಹಾರಾಯರ ಕುಮಾರರು, ಇವರಂ ಸುಗಂಧಮಹಾರಾಜರೆಂದು ಪೇ ಳುವರು, ಇವರಿಗೆ ಭೃತ್ಯಭಾವದಲ್ಲಿರುವ ನನ್ನಂ ಸುಮತಿಯೆಂದು ಪೇಳುವರು. ಇವರು ವಿಜಯ ಯಾತ್ರಾರ್ಥವಾಗಿ ಸೇನೆಯಿಂದೊಡಗೂಡಿ ಮಲತವರಂ ದಂ ಡಿಸುತ, ಶರಣಾಗತರಂ ಸಲಹುತ, ತುಂಟರಂ ನಿಗ್ರಹಿಸುತ, ಲವಣಸಮುದ್ರ ದ ಪೂರ್ವ ತೀರವನ್ನನುಸರಿಸಿ ಬರುತ, ಆ ಸಮುದ್ರದ ವಿಸ್ತಾರವನ್ನೋಡಲೆಣಿಸಿ ಅದನ್ನೋಡುತ, ಈ ಪ್ಲಕ್ಷದ್ವೀಪಕ್ಕೆ ಬಂದು ಅಲ್ಲಲ್ಲಿ ಕುಲಾಚಲ ವನಗಳ ರಮಣೀಯತೆಗಳನ್ನೋಡುತ, ಸಮುದ್ರವಂ ಹೊಂದುತ್ತಿರುವ ನದೀತೀರದಲ್ಲಿ ಇಳಿದೆವು ಎನಲು ಆದಂ ಕೇಳಿ ಉಗ್ರಬಾಹುವು ತನ್ನ ಮನದೊಳ್ ಮನು ಷ್ಯರಿಗೆ ಸಮುದ್ರತರಣಶಕ್ತಿ ಉಂಟಾದ ಬಳಿಕ ಯಾವದು ಏನಾಗಬಾರದು ಕಾಲಗತಿಯಂಥಾದ್ದು ಹರಹರಾ! ಎಂದು ವಿಸ್ಮಯಪಡುತ ಮನುಷ್ಯರಿಗೆ ದೇವ ತಾಯೋಗ್ಯವಾದ ಈ ಹಂಸೆಯು ವಶವಾದಬಳಿಕ ದೈವಸಂಕಲ್ಪವೆಂತಿರಬಾರದು ಎಂದು ವ್ಯಸನಪಡುತ ಮನುಷ್ಯಮಾತ್ರದವರು ಹೀಗೆ ಬಲಿಷ್ಠರಾಗಿ ಸಮುದ್ರ ತೀರವಂ ಬಳಸಿ ಬರುತ ದೇಶಗಳಂ ಒತ್ತಿಕೊಳ್ಳುತಿದ್ದರೆ ಅದೇ ಜಂಬೂದ್ವೀ ಪದ ಇಳಾವರ್ತ ಖಂಡದಲ್ಲಿ ವಜ್ರಪುರವನ್ನಾಳುವ ದೇವತೆಗಳ ಸಂಘವೆಂಬ ಮೇಘಮಂಡಲಕ್ಕೆ ಜಂಝಾಮಾರುತನಾದ ನಮ್ಮ ಜಂಝಾಮಾರುತನೆಂಬ ರಾಕ್ಷಸಾಧಿಪತಿಯು ಇಂಥಾವರನ್ನೋಡಿ ಸಹಿಸಿಕೊಂಡಿರುವನೆಂಬುವದು ಆಶ್ಚ ರ್ಯವು, ಅಲ್ಲದಿದ್ದರೆ ಉಪೇಕ್ಷಾವಂತನಾಗಿರುವನೋ? ಈಗ ಉಂಟಾಗಿರುವ ಸಂಪತ್ತಿನಿಂದಲೇ ಸಂತುಷ್ಟನಾಗಿರುವನೋ ? ಮತ್ತೇನಾದರೂ ವಿಶೇಷವಾಗಿ ಯು ದ್ಧಸಾಧನವನ್ನಪೇಕ್ಷಿಸುತ ತಪಸ್ಸನ್ನಾರ್ಜಿಸುವದಕ್ಕೆ ತಪೋವನವಂ ಹೊಂದಿ

ರುವನೋ ಎಂದು ಪರಿಪರಿ ಏಕಲ್ಪವಂ ಮಾಡುತ ಎಲೈ ನೃಪೋತ್ತಮನೇ! ನ ಮ್ಮ ಪುರದ ಸಮೀಪಕ್ಕೆ ಸಮಿಸುತ್ತ ಬಂದವನಾದೆ ಎಂದು ಕೇಳಲು, ಎಲೈ ರಾಕ್ಷಸನಾಯಕನೇ! ನೀನು ಪರಾಕ್ರಮಶಾಲಿಯೆಂದು ಕೇಳಿ ನಿನ್ನನ್ನೋಡಿ ಬಂದೆನೆಂ ದು ಸುಗಂಧರಾಜಕುಮಾರನು ಪೇಳಲು, ನನ್ನ ಪರಾಕ್ರಮಪರೀಕ್ಷೆಗೆ ಬಂದವ ರಾವರ? ಇವರು ನಮಗೆ ಶತ್ರುಭಾವದಿಂ ಬಂದಿರಬಹುದೂ ಎಂದು ರಾಕ್ಷಸಾ ಧಿಪತಿಯು ತಿಳಿದವನಾಗಿ, ಎಲೈ ನೃಪೋತ್ತಮನೇ! ನೀನು ನಮ್ಮಂ ಕುರಿತು ಬಂ ದಬಳಿಕ ನಿನ್ನ ರಾಜ್ಯಲಕ್ಷ್ಮಿಯು ನಮ್ಮ ಲಕ್ಷ್ಮಿಯಂ ನೋಡಲೆಣಿಸಿ ಬಂದಂತಾ ಯಿತು ಎಂದು ರಾಕ್ಷಸಾಧಿಪತಿಯು ಪೇಳಲು, ಅದಂ ಕೇಳಿ ಸುಗಂಧರಾಯನು ಈ ರಾಕ್ಷಸನು ಹೇಳಿದ ಮಾತಿನಿಂದ ಇಲ್ಲಿ ಬಂದಿರುವ ನಮ್ಮಂ ಕಾವಲು ಮಾ ಡಿಕೊಂಡು ನಮ್ಮ ರಾಜ್ಯವಂ ತನ್ನ ವಶವಂಮಾಡಿಕೊಳ್ಳುವನೆಂದು ಪೇಳಿದಂತಾ ಯಿತೆಂದು ತಿಳಿಯಲು, ಆ ಮಾತಿಗೆ ಸುಮತಿಯು ಎಲೈ ರಾಕ್ಷಸಧಿಪನೇ! ನಮ್ಮ ಲಕ್ಷ್ಮಿಯು ನಿಮ್ಮ ಲಕ್ಷ್ಮಿಯಂ ನೋಡಲೆಣಿಸಿ ಬಂದುದ್ಯಾಕೆಂದರೆ? ತನಗೆ ಸವ ತಿಯಂ ಮಾಡಲೆಣಿಸಿ ಕನ್ಯಾರ್ಥವಾಗಿ ಬಂದಳೆಂದು ತಿಳಿಯಬೇಕೆನಲು, ಉಗ್ರ ಬಾಹುವು ಈ ನೃಪತಿಯು ಪೇಳಿದ ಮಾತಿನಿಂದ ನಮ್ಮ ರಾಷ್ಟ್ರವಂ ತಮ್ಮವ ಶವಂ ಮಾಡಿಕೊಳ್ಳುವದಕ್ಕೆ ಬಂದೆವೆಂದು ಹೇಳಿದಂತಾಯಿತೆಂದು ತಿಳಿಯಲು, ಆ ಮಾತಿಗೆ ರಾಕ್ಷಸಮಂತ್ರಿಯಾದ ಶಂಕುಕರ್ಣನು ಎಲೈ ನೃಪೋತ್ತಮನೇ! ಲಕ್ಷ್ಮೀರುಗಳು ಒಬ್ಬರಬಳಿಗೆ ಒಬ್ಬರು ಹೋಗಿಬರುವದು ಯುಕ್ತವಾದ ರೂ ನಮ್ಮಲ್ಲಿ ಬಂದ ಲಕ್ಷ್ಮಿಗೆ ನಾವು ಮಾಡುವ ಉಪಚಾರಭಕ್ತಿಗಳಿಗೆ ಪರ್ಯ ವಸಾನ ಉಂಟಾದಬಳಿಕಲ್ಲವೇ ಮರಳಿಹೋಗುವದೆಂಬುದೂ ಎಂದು ಪೇಳ ಲು, ಸುಗಂಧರಾಜನು ಈ ರಾಕ್ಷಸಮಂತ್ರಿಯು ಹೇಳಿದ ಮಾತಿನಿಂದ ನಮ್ಮಂ ಇಲ್ಲಿಂದ ಬಿಟ್ಟುಕಳುಹಿಸಿದಾಗಷ್ಟೆ ನಮಗೆ ರಾಜ್ಯದಾಶೆಯು ಎಂದು ಹೇಳಿದಂ ತಾಯಿತೆಂದು ತಿಳಿಯಲು, ಸುಮತಿಯು ಎಲೈ ರಾಕ್ಷಸಮಂತ್ರಿಯೇ! ಚಪಲರು ಗಳಲ್ಲಿ ಮಾಡಿದ ಉಪಚಾರ ಭಕ್ತಿಗಳು ಅವರ ಚಾಪಲ್ಯವಂ ಹೋಗಲಾಡಿಸು ವದುಂಟೇ ಎಂದು ಕೇಳುತ್ತಿರಲು, ರಾಕ್ಷಸಾಧಿಪತಿಯು ಈ ನೃಪಮಂತ್ರಿಯು ಹೇಳಿದ ಮಾತಿನಿಂದ ನೀವು ತಮ್ಮಂ ನಿರ್ಬಂಧವಂ ಪಡಿಸಿದರೆ ನಾವು ನಿಮಿಗೆ ದಕ್ಕುವರಲ್ಲವೆಂದು ಹೇಳಿದಂತಾಯಿತೆಂದು ತಿಳಿಯಲು, ಶಂಕುಕರ್ಣನು ಎಲೈ

ನೃಪಮಂತ್ರಿಯೇ! ಆಶ್ರಯನಿಷ್ಠವಾದ ದೋಷವಂ ಆಶ್ರಿತವಸ್ತುವಿನಲ್ಲಿ ಆರೋಪಣೆಗೈಯುವವುಂಟೇ ಎಂದು ಹೇಳಲು, ಸುಮತಿಯು ಎಲೈ ರಾಕ್ಷಸಾಧಿಪತಿಯೇ! ಯುಕ್ತವಂಹೇಳಿದವನಾದೆ ಅಗ್ನಿಯ ಉಷ್ಣವು ಜಲದಲ್ಲಿ ಸಂಬಂಧಿಸಿ ಸ್ವಾಭಾವಿಕವಾದ ಶೈತ್ಯವಂಹೋಗಲಾಡಿಸುವಂತೆ, ಅರಸಿನ ಗುಣಗಳು ತನ್ನಲ್ಲಿ ಆಶ್ರಯಿಸಿರುವ ಲಕ್ಷ್ಮಿಯು ಸ್ಥೈರ್ಯ ಗುಣವಂ ವ್ಯಾಪಿಸಿ ಚಾಂಚಲ್ಯವನ್ನುಂಟುಮಾಡುವದು ಎಂದುಹೇಳಲು, ಶಂಕುಕರ್ಣನು ಈ ನೃಪಮಂತ್ರಿಯು ಹೇಳಿದ ಮಾತಿನಿಂದ ರಾಕ್ಷಸರು ನ್ಯಾಯತಪ್ಪಿ ನಡೆಯುವರಾದ್ದರಿಂದ ಇವರಿಗೆ ಐಶ್ವರ್ಯವು ಸ್ಥಿರವಾಗಿ ಇರಲರಿಯದು ಎಂದು ಹೇಳಿದಂತಾಯಿತೆಂದು ತಿಳಿದು ಉಗ್ರಬಾಹುವಂ ನೋಡಿ ಅಯ್ಯಾರಾಕ್ಷಸೇಶ್ವರನೆ! ಈ ನೃಪಮಂತ್ರಿಯು ಹೇಳಿದ ವಾಕ್ಯವು ನಿನ್ನ ಮನಕ್ಕೆ ಬಂದಿರುವವಷ್ಟೆ ಎಂದು ನುಡಿದು ನೃಪನನ್ನೋಡಿ ಈ ಅರ್ಥವು ಸಾರ್ವತ್ರಿಕವೂ ಯೆಂದು ಹೇಳಲು, ಆ ಮಾತಿಗೆ ನೃಪತಿಯು ತನ್ನ ಮನದೊಳು ನೀತಿತಪ್ಪಿ ನಡೆಯುವ ಪುರುಷನು ಎಷ್ಟು ಗುಣವಂತನಾದರೂ ಅವರಂ ತ್ಯಜಿಸಿ ಲಕ್ಷ್ಮಿಯು ಸ್ಥಾನಾಂತರವನ್ನೈದುವದರಿಂದ ನ್ಯಾಯನೀತಿಯುಂ ತಿಳಿದು ನಡೆದುಕೊಳ್ಳುವನಾಗೆಂದು ರಾಕ್ಷಸಮಂತ್ರಿಯು ತಮ್ಮ ಅರಸಿಗೆ ತಿಳುಹಿಸಿ ಯಾರಿಗಾದರೂ ಈ ಅರ್ಥವೇ ಆಗುವದೆಂದು ನನ್ನನ್ನೋಡಿ ಹೇಳಿದಂತಾಯಿತೆಂದು ತಿಳಿಯಲು, ಸುಮತಿಯು ಹಾಗೇ ತಮ್ಮ ರಾಯನನ್ನೋಡಿ ಅವರಿಂದಲೇ ಶ್ರೇಯಸ್ಸಾಮಿಯಾದವರು ವಿಹಿತದಿಂ ನಡೆದುಕೊಳ್ಳಬೇಕೆಂದು ಹೇಳಲು, ಆದಂಕೇಳಿ ಶಂಕುಕರ್ಣ ಉಗ್ರಬಾಹುಗಳು ತಮ್ಮ ಮನದೊಳ್ ಈ ನೃಪಮಂತ್ರಿಯು ತಮ್ಮರಾಯನಿಗೆ ಹೇಳಿದ ವಾಕ್ಯದಿಂ ನಾವು ಧರ್ಮಮಾರ್ಗವಂ ಮೀರಿ ನಡೆಯುವರಾದ್ದರಿಂದ ನಮಗೆ ಶ್ರೇಯೋಲಾಭ ಉಂಟಾಗಲಾರದೆಂದು ಒಂದು ಅರ್ಥವು, ಲೋಕಾಭಿರಾಮವಾಗಿ ಹೇಳಿದುದು ಒಂದು ಅರ್ಥವು ಎಂದು ತಿಳಿದು ಬಂದವರೊಡನೆ ವಾಕ್ಕಲಹವ್ಯಾಕೆ ಉತ್ತರಪ್ರತ್ಯುತ್ತರಗಳು ಲಲಿತವಾಗಿ ಉಂಟಾದಬಳಿಕ ಹೃದಯಕಾಪಟ್ಯವೆಂತಿದ್ದರೂ ಇರಲೀಯೆಂದು ಆಲೋಚಿಸಿದ ಬಳಿಕ ತಮೋಗುಣ ಸ್ವಭಾವನಾದ ಉಗ್ರಬಾಹು ಈ ಪೂರ್ವೋಕ್ತವಾಕ್ಯವನೆಲ್ಲವಂ ಮರೆತು ನೃಪಮಂತ್ರಿಗಳಿಗೆ ವಾಹನವಾದ ರಾಜಹಂಸೆಯಂ ನೋಡುತ ಈ ವಾಹನ ಮೂಲಕದಿಂದ ಈ ಮನುಷ್ಯರಿಗೆ ಬಹು ಸಾಹ

ನಬುದ್ಧಿ ಉಂಟಾಗಿರುವದು. ಯಾವ ವುಪಾಯದಿಂದಲಾದರೂ ಈ ಹಂಸೆಯಂ ನಾವು ಸ್ವಾಧೀನವಮಾಡಿಕೊಂಡರೆ ಪಕ್ಷಹೀನವಾದ ಗೃಧ್ರಗಳಂತೆ ಈ ಸ್ಥಳವಂ ಬಿಟ್ಟು ಚಲಿಸಲಾರದೆ ನಮ್ಮವಶವಾಗಿ ಬಿದ್ದಿರುವರು, ಪಾವನವಾದ ಹಂಸೆಯು ನಮಿಗೆ ಬಹು ಕಾರ್ಯಕ್ಕೆ ಸಾಧನವಾಗುವದು ಎಂದು ನಿಶ್ಚಯಿಸಿ ಯಲೈ ನೃಪೋತ್ತಮನೇ! ನೀವೀರ್ವರೂ ಬಹುದೂರದಿಂ ಬಂದಿರುವದರಿಂದ ಶಾಂತರಾಗಿರುವಿರಿ ಬಿಡಾರವಂ ಬಿಡಸಿರುವೆನು. ಮತ್ತು ನಿಮ್ಮ ವಾಹನಕ್ಕೆ ಬೇಕಾದ ಉಪಚಾರವಂ ಮಾಡಿಸುವೆನು ನೀವು ವಿಶ್ರಮಿಸಿಕೊಳ್ಳುತ ಈ ಪುರೋದ್ಯಾನದೇಶಗಳನ್ನೋಡುತ ಸುಖದಿಂ ನಾಲ್ಕಾರು ದಿವಸವಿದ್ದು ಮರಳಿತೆರಳಬಹುದು ಯಂದು ಹೇಳಲು, ಸುಗಂಧರಾಜೇಂದ್ರನು ಎಲೈ ರಾಕ್ಷಸಾಧಿಪತಿಯೇ! ಉಚಿತವಾಗಿ ಹೇಳಿದ ನಿನ್ನವಾಚ್ಮಾಧುರ್ಯದಿಂದಲೇ ಅತಿಥಿಸತ್ಕಾರ ಉಂಟಾದಂತಾಯಿತು. ಸುಪ್ರಭಾನದೀ ತೀರವುರಮಣೀಯವಾಗಿರುವದರಿಂದ ಅಲ್ಲಿ ಸ್ನಾನಾದಿಗಳನ್ನೆರವೇರಿಸುತಬರುತ ಹೋಗುತಲಿಧ್ದೇವೆ. ಮತ್ತು ನೀನುಹೇಳಿದಂತೆ ನಾಲ್ಕಾರುದಿವಸವಿರುವೆವು ಎಂದು ಹೇಳಿ ಸುಮತಿ ಸಮೇತನಾಗಿ ಹಂಸಾರೂಢನಾಗಿ ಅಂತರಿಕ್ಷಮಾರ್ಗದಿಂ ತೆರಳುತ್ತಿರಲು; ಅವರನ್ನೋಡಿ ಆ ಪುರದ ರಾಕ್ಷಸರೆಲ್ಲರೂ ಆಶ್ಚರ್ಯಪಡುತ್ತಿರಲೂ; ಆಗ ಉಗ್ರಬಾಹುವು ಶಂಕುಕರ್ಣನಂ ಕರೆದು ಯಲೈ ಮಂತ್ರಿಯೆ! ಈಗ ಬಂದಿದ್ದ ನೃಪ ಮಂತ್ರಿಗಳನ್ನೋಡಿರುವೆಯಷ್ಟೆ? ಅವರು ಏನುನಿಮಿತ್ತ ಬಂದಿರುವರೋ ? ದೇವತೆಗಳಿಗೆ ಯೋಗ್ಯವಾದ ಹಂಸೆಯು ಇವರ ವಶವಾಗಿರುವದಕ್ಕೆ ಕಾರಣವೇನು? ಮತ್ತು ಇವರಲ್ಲಿ ಖಡ್ಗಬಂದೇ ಹೊರತು ಮತ್ತೇನೂ ಯುದ್ಧಸಾಮಗ್ರಿ ಇರುವಂತೆ ತೋರುವದಿಲ್ಲ. ರಾಕ್ಷಸಶಬ್ದ ಶ್ರವಣಮಾತ್ರದಿಂದಲೇ ಪಲಾಯನಂಗೈವ ಮನುಷ್ಯರು ನಾವಿದ್ದಬಳಿಗೆ ಬರುವದಕ್ಕೆ ಕಾರಣವೇನು. ಅವರ ಧೈರ್ಯ ಗಾಂಭೀರ್ಯ ಚಾತುರ್ಯಗಳ ನೋಡಿದರೆ ಸಾಧಾರಣ ಮನುಷ್ಯರಂತೆ ಕಾಣಿಸುವದಿಲ್ಲ, ಅವರೂ ಜಗನ್ಮೋಹಕವಾದ ಹಂಸೆಯಂ ಕಂಡದ್ದರಿಂದಿವರಿಗೆ ಬೇಕಾದ ವಸ್ತುಗಳಂಕೊಟ್ಟು ಆ ಹಂಸೆಯಂ ವಶವಂ ಮಾಡಿಕೊಂಡರೆ ನಮಿಗೆ ಯಾವಲೋಕ ಸಂಚಾರವೂ ಅಶಕ್ಯವಾಗಲಾರದು, ಇದರಲ್ಲಿ ನಿನಗೆ [illegible]ಗೆನಲು; ಶಂಕುಕರ್ಣನು ಅಯ್ಯಾ ರಾಕ್ಷಸಾಧಿಪತಿಯೇ! ಈಗ ಬಂದಿದ್ದ ನೃಪ ಮಂತ್ರಿಗ

ಳು ನಮ್ಮಂತೆ ಕಾಮರೂಪಿಗಳಲ್ಲ. ಅವರ ಸ್ವಭಾವವೇ ಆ ರೀತಿಯಲ್ಲಿರುವ ದು, ಶೂರರಾಗಿ ಸಾಹಸಿಗಳಾಗಿರುವದ್ದರಿಂದಲೇ ಭಯರಹಿತರಾಗಿ ಇಲ್ಲಿಗೆ ಬಂದಿರುವರು, ಇಲ್ಲಿ ಈಚೆಗೆ ನಡೆಯುವ ಉತ್ಪಾತಗಳನ್ನೋಡಿದರೆ ಪ್ರಾಣಿ ಮಾತ್ರವಂ ಕೊಕಬಾರದೆಂದು ತೋರುವದು, ಅವರು ಎಷ್ಟುಶ್ರಮದಿಂದ ಯಾ ವನಿಮಿತ್ತವಾಗಿ ಹಂಸೆಯಂ ಪಡದಿರುವರೋ ಅದಂ ನಾವು ಅಪೇಕ್ಷಿಸಿದರೆ ಯೇ ನುಕೇಳುವರೋ?ಅಥವಾ ನಿನ್ನ ಮಹಾಗಜದ ರೀತಿಯಂತಿಳಿದು ಅದನ್ನೇ ಕೇಳು ವರೋ? ಆದ್ದರಿಂ ಮೊದಲು ವಿಮರ್ಶೆಯಂ ಮಾಡದೆ ಮಹಾಗಜವಂ ಕೊಕಿದಂ ತೆ ಇವರಂ ಕೊಕಿದರೆ ಯೇನು ಅಸಂಗತವಾಗುವದೋ, ಇಲ್ಲದ ಅರ್ಥವಂ ಊ ಹಿಶಿಕೊಂಡು ಹೇಳುವನೆಂದು ನನ್ನಂ ತಿಳಿಯಬ್ಯಾಡ, ಮತ್ತು ಈಗಸ್ವರ್ಗಲೋ ಕದಿಂದ ಬಂದ ರಾಕ್ಷಸರು ಹೇಳಿದ ವರ್ತಮಾನವಂ ಕೇಳಿದರೆ ದೇವೇಂದ್ರನು ಅದೃಶ್ಯನಾಗಿ ಅವನಿಗೆ ವಾಹನವಾದ ಐರಾವತವು ಕೂಡ ಸ್ವರ್ಗದಲ್ಲಿರುವಂತೆ ತೋರುವದಿಲ್ಲ, ದೇವತೆಗಳ ಸಂಚಾರವು ಅಲ್ಲಿರುವಂತೆ ಕಾಣಿಸುವದಿಲ್ಲ, ಇ ದಲ್ಲದೇ ನೀನು ಚಿತ್ರಪಟವನ್ನೋಡಿ ದೇವೇಂದ್ರನ ರೂಪವಂಮಹಿಶಿ ಮಹಾಗ ಜವಂ ವಶಮಾಡಿಕೊಂಡಿರುವದ್ದರಿಂದ ಅದರ ಮೂಲಕದಿಂದಲೇ ಈ ದ್ವೀಪವು ನಿನಿಗೆ ಸ್ವಾಧೀನವಾಗಿರುವದು, ನೀನು ಗಜವಂ ಸ್ವಾಧೀನವಂ ಮಾಡಿ ಕೊಳ್ಳು ವಲ್ಲಿ ಯಾವರೂಪವಂ ವಹಿಶಿದ್ದೆಯೋ ಆ ರೂಪವನ್ನು ಈಗ ಬಂದಿರುವ ನೃಪಮಂತ್ರಿಗಳ ರೂಪವಂ ಕೂಡಾ ಪರಿಭಾವಿಶಿ ನೋಡಿದರೆ ಯೇನೂ ಭೇದ ತೋರುವದಿಲ್ಲ, ಆದ್ದರಿಂ ಪ್ರಕೃತದಲ್ಲಿ ಅವರಂ ಕೊಕದೆ, ಅವರ ಹಂಸೆಯ ನ್ನೋಡಿ ಮರುಳಾಗದೇ, ಸಂಪ್ರೀತಿಯಿಂದವರಂ ಕಳುಹಿಸಿದರೆ ಯಲ್ಲವೂ ಕ್ಷೇ ಮವಾಗುವದು ಯಂದು ಪೇಳಲದಂ ಕೇಳಿ ಉಗ್ರಬಾಹುವು ದೈವಬಲವು ತ ಪ್ಪಿದವನಾದುದರಿಂ ಮಂತ್ರಿಯ ಮಾತಿನಲ್ಲಿ ವಿಶ್ವಾಸವಂಮಾಡದೆ ಹಂಸೆಯ ಸೌಂದರ್ಯವಂ ಮನದೊಳ್ನೆನೆನೆದು ರಾಜಪುತ್ರನಿಗೆ ಕಪಟವನ್ನಾದರೂ ಆಚ ರಿಸಿ ಹಂಸೆಯಂವಶವಂ ಮಾಡಿ ಕೊಳ್ಳಬೇಕೆಂದು ನಿಶ್ಚೈಶಿ ಅಂತಃಪುರಕ್ಕೆ ತೆರ ಳುತ್ತಿರಲು ;

ಅತ್ತಲಾ ಹಂಸಾರೂಢರಾಗಿ ರಾಕ್ಷಸನ ಆಸ್ಥಾನದಿಂ ಹೊರಟು ಬಂದ ನೃಪಮಂತ್ರಿಗಳು ಸುಪ್ರಭಾ ನದೀತೀರದಲ್ಲಿಳಿದು ಸ್ನಾನಾಹ್ನಿಕಗಳನ್ನೆರ

ವೇರಿಸಿ ಅತಿರಮಣೀಯವಾದ ಆ ನದಿಯತೀರದ ಉದ್ಯಾನವನದಲ್ಲಿ ಮನೋಹರವಾದ ಅಶೋಕವೃಕ್ಷದ ಛಾಯೆಯೊಳ್ ಕುಳಿತಿರುವಷ್ಟ್ಲ ಸುಗಂಧವಾಜೇಂಪ್ರಸು ನಾಲ್ಕು ದಿಕ್ಕುಗಳಲ್ಲಿಯೂ ಸೋಂತಿ ಇದು ಏಕಾಂತಪ್ರದೇಶವೆಂದು ತಿಳಿದು ಸುಮತಿಯಂ ಕುರಿತು ಅಯ್ಯಾ ಮಿತ್ರನೆ! ರಾಜಸಭೆಯಲ್ಲಿ ರಾಕ್ಷಸಾಧಿಪತಿಯು ವಾಲ್ಯೈಸುತ್ತಿರುವ ರಾಕ್ಷಸ ಸಂಘವನ್ನೋಡಿದರೆ ಮನುಷ್ಯ ಲೋಕಕ್ಕೆ ಇಮ್ಮಡಿಯಾದಂತೆ ತೋರುವದು, ಇವರಲ್ಲಿ ಒಂದು ಪ್ರಾಣಿಯಾದರು ಹೊರಟರೆ ಮನುಷ್ಯರ ವ್ಯವಹಾರವನ್ನೆ ಅಡಗಿಸುವದು, ಇಷ್ಟು ಕೋಟಿಸಂಖ್ಯೆಯಿಂಕೂಡಿರುವ ರಾಕ್ಷಸರಿಗೆ ಯಾವಲೋಕವು ತಾನೇಜಯಿಸಲಶಕ್ಯವು. ಈಸಂಘವಂ ಪಾತಾಳ ಲೋಕವು ತಾನೆ ಎಂತು ಸಹಿಸಿದ್ದುದು, ಹೀಗೆ ಈದ್ವೀಪದಲ್ಲಿ ಎಲ್ಲೆಲ್ಲಿ ಪುರವಂ ರಚಿಸಿಕೊಂಡಿರುವರೋ ? ಈ ಐದು ಯೋಜನ ವಿಸ್ತಾರವಾದ ಪುರದ ಐದು ಪ್ರಾಕಾರದ ಸುತ್ತಲೂ ಇರುವ ಶಾಖಾನಗರವಲ್ಲದೆ ನೂತನವಾಗಿರಚಿಸಿರುವ ರಾಕ್ಷಸರ ಲಕ್ಷ್ಯೋಪಲಕ್ಷಸದನಂಗಳಂ ನೋಡಿದರೆ ಈ ಪುರವು ಪುರಾತನವಲ್ಲವೆಂದು ತೋರುವದು, ಈ ರಾಕ್ಷಸರು ಧರ್ಮಕಂಟಕರಾದುದರಿಂದಲೇ ಇವರಂ ಅವಶ್ಯವಾಗಿ ಸಂಹರಿಸಬೇಕಲ್ಲದೆ ನ್ಯಾಯದಿಂದಿರುತಿರ್ದರೆ ಇವರ ಐಶ್ವರ್ಯವನ್ನೋಡಿ ಗುಣಜ್ಞರಾದವರು ಸಂತೋಷಪಡಬೇಕು, ಇದಂತಿರಲಿ, ಇವರೊಡನೆ ಯುದ್ಧವಂ ಮಾಡುವದಕ್ಕೆ ಸಮಯವಂ ನಿಮಿತ್ತವಂಕೂಡಾ ಹೇಳುವೆನೆಂದು ಹೇಳಿದ್ದೆಯಷ್ಟೆ, ಯುದ್ಧವು ಯಾವಾಗ ಘಟಿಸುವದು ಎಂದು ಹೇಳಲವಂ ಕೇಳಿ ಸುಮತಿಯು ಅಯ್ಯಾ ರಾಜಶಿರೋಮಣಿಯೇ! ಯುದ್ಧವೆಂಬ ಯಾಗವಂ ಮಾಡಲೆಣಿಸಿ ರಾಕ್ಷಸ ಸಂಘಗಳನ್ನೇ ಪಶುಗಳೆಂದು ಉದ್ದೇಶವಂಮಾಡಿ ಧರ್ಮಸ್ಥಾಪನವೆಂಬ ದೀಕ್ಷೆಯಂಗೊಂಡು ಧನುಸ್ಸುಖಡ್ಗಗಳೆಂಬ ಸ್ರುಕ್ಸ್ರುವಗಳಂ ಪಿಡಿದು ಶೌರ್ಯಲಕ್ಷ್ಮಿಯೆಂಬ ಪತ್ನಿಯೊಡಗೂಡಿ ಪ್ಲಕ್ಷದ್ವೀಪವೆಂಬ ಮಹಾ ಕ್ಷೇತ್ರದಲ್ಲಿ ವಿಮಲಪುರಿಯನ್ನೇ ಕುಂಡವನ್ನಾಗೆಣಿಸಿ ಅಸ್ತ್ರಜ್ವಾಲೆಯೆಂಬ ಅಗ್ನಿಯಂ ಪ್ರತಿಷ್ಠೆಯಂ ಮಾಡಿ ರಾಕ್ಷಸರ ಅವಯವಗಳಂ ಅಂಗಹೋಮವಂ ಮಾಡಿ ಯಶಸ್ಸೆಂಬ ಸಮುದ್ರದಲ್ಲಿ ಅವಭೃತಸ್ನಾನವಂ ಮಾಡಲೆಣಿಸಿ ಬಂದ ಬಳಿಕ ರಾಕ್ಷಸ ಪಶುಗಳು ಮರಳಿ ಜೀವವಂತರಾಗಿರುವದುಂಟೇ ? ರಾಕ್ಷಸರ ಕಪಟೋಪಾಯವು ನಿನ್ನ ಚಿತ್ತಕ್ಕೆ ಹೇ

ದ್ಧವಾಗಿರಬೇಕೆಂದು ಯುದ್ಧಸಮಯವಂ ಪೇಳುವೆನೆಂದುನಿಲ್ಲಿಸಿದೆನು, ಈಗ ರಾಕ್ಷಸನು ನಮ್ಮ ಹಂಸವಂ ನೋಡಿರುವವರಿಂದ ಇನ್ನೇನಾದರೂ ಕಪಟ ವನ್ನಾಚರಿಸುವನು, ಅದು ನಮಿಗೆ ಯುದ್ಧಕ್ಕೆ ಅವಕಾಶವಾಗುವದೂ ಯೆಂದು ಹೇಳುತ್ತಿರುವ ಸಮಯದೊಳ್ ಸೂರ್ಯನು ಅಸ್ತಾಚಲವನ್ನೈದಲು, ಆ ಮಾತನಾಲಿಸಿ ರಾಜಮಂತ್ರಿಗಳೀರ್ವರೂ ಮಹಾಗಜವಂ ನೋಡುವ ಕುತೂಹಲದಿಂದ ಹಂಸಾರೂಢರಾಗಿ ಪುರೋದ್ಯಾನಗಳನ್ನೋಡುವವರಂತೆ ತೆರಳುತ್ತ ಅಲ್ಲಲ್ಲಿ ನಿರ್ಮಿಸಿರುವ ಪುಷ್ಪ ಫಲಭರಿತಂಗಳಾದ ವೃಕ್ಷಪಂಕ್ತಿಗಳಂ, ಸ್ಫಟಿಕ ಮಣಿ ಸೋಪಾನಂಗಳಿಂ ಕೂಡಿದ ಸರೋವರಂಗಳಂ, ಯಾತುಧಾನ ನಿತಂಬಿನೀಚರಣಾಲಕ್ತಕ ರಂಜಿತವಾಗಿ ಪುಷ್ಪಧೂಳಿಗಳಿಂ ಧೂಸರಿತವಾದ ಪಾತಿಗಳಿಂ ಶೋಭಿಸುವ ಕುಸುಮಲತಾರಾಜಿಗಳಂ, ಅಲ್ಲಲ್ಲಿಯ ಕ್ರೀಡಾಪರ್ವತದ ಗುಹಾಂತರಗಳೊಳ್ ಮಿಥುನೀಕರಿಸಿ ವಿಲಾಸದಿಂದಿರುವ ರಾಕ್ಷಸಯುಗ್ಮಗಳಂ, ಅನವರತ ಮದಿರಾಪಾನ ಮತ್ತರಾಗಿ ಪುಷ್ಪಾಪಚಯವಂ ಮಾಡುತ ಸೋದರ ದಂಪತಿಗಳಿಂದಾಲಿಂಗಿಸುತ ಪತ್ನಿಯೆಂದು ಚಿಕ್ಕಮ್ಮನಂ ಚುಂಬಿಸುತ, ಸೊಸೆಯರ ಬಳಿಗೆ ಮಿತ್ರರಂ ಕಳುಹಿಸುತ, ಮಿತ್ರಪತ್ನೀರುಗಳ ಕುಚಗಳಂ ಪಿಡಿಯುತ, ಹೆಂಗಸರ ವಸ್ತ್ರವಂ ಗಂಡಸರು ಹೊದಿಯುತ, ಗಂಡಸರ ನೆರಿಗಳಂ ಹೆಂಗಸರು ಹೊದಿಯಲೆಣಿಸಿ ಶೆಳೆಯುತ, ಮಾತೃಪಿತೃಗುರುಗಳೆಂ ದುಶಪಥಗಳಂ ಮಾಡುತ, ಸಂಗಡಲೇ ಅವರಂಬೈದು ನಿಂದಿಸುತ, ತೊದಲುನುಡಿಯಿಂದ ಒಂದಂನೆನೆದು ಮತ್ತೊಂದಂ, ನುಡಿಯುತ, ಹಾವೆ ವರ್ತನೆಯಿಲ್ಲದೆ ತಾರುಮಾರಾಗಿ ತೂರಿಬೀಳುತಲಿರುವ ರಾಕ್ಷಸಸ್ತ್ರೀಪುರುಷರನ್ನೋಡಿ ಇಂಥಾ ದುರಾತ್ಮರಿಂದಲೇ ಮಹಾನರಕಸ್ಥಾನವು ತುಂಬಿರುವದು, ಇವರನ್ನೋಡಿದರೆ ಮಹಾನದೀಸ್ನಾನವಂ ಮಾಡಿ ಸೂರ್ಯಾವಲೋಕನವಂ ಮಾಡಿದಲ್ಲದೆ ಸಜ್ಜನರಿಗೆ ಸತ್ಕರ್ಮಾಧಿಕಾರ ಉಂಟಾಗಲಾರದೆಂದು ಮುಂದೆ ತೆರಳುತ, ಯುದ್ಧದಿಂ ನರರನ್ನಿಗ್ರಹಿಸಿ ಅವರ ಸ್ತ್ರೀಯರುಗಳಂಹಿಡಿದು ತರುವ ರಾಕ್ಷಸರನ್ನೋಡುತಉಷ್ಟ್ರಗಜಗಳಮೇಲೆ ಧನವಂ ಹೇರಿಕೊಂಡು ಧರಣೀಪತಿಯಾನ ಉಗ್ರಬಾಹುವಿಗೆ ಒಪ್ಪಿಸಿ ಪ್ರಸಾದಕ್ಕೆ ಪಾತ್ರರಾಗುವೆವೆಂದು ಬರುತಿರುವ ನರಪತಿಗಳನ್ನಿರೀಕ್ಷಿಸುತ ತೆರಳುತ್ತಿರುವಾಗ ಅಪೂರ್ವವಾದ ಮದೋದಕ ಗಂಧಕ್ಕೆ ಪರವಶ

ಗಳಾಗಿ ಅಂಧಕಾರ ಸಂಘದಂತೆ ಗುಂಪುಗುಂಪಾಗಿ ಹೋಗುತ್ತಿರುವ ಮದಗಜಂಗಳಂ ಕಂಡು ಮಹಾಗಜವು ಈ ಪ್ರಾಂತ್ಯದಲ್ಲಿಯೇ ನೆಲಸಿರಬೇಕೆಂದು ನಡೆಯುತ್ತಿರಲ್ ಮತ್ತೊಂದು ವನಮಧ್ಯದೊಳ್ ಪ್ರವಹಿಸುತಲಿರುವ ನದಿಯ ಉಭಯ ತೀರದಲ್ಲಿಯೂ ಅತಿಕೋಮಲವಾಗಿ ಮನ್ಮಥನ ಚಾಪಕ್ಕೆ ತೌರೂರಂತೆ ಬೆಳೆದಿರುವ ಉನ್ನತವಾದ ಇಕ್ಷುವನದಲ್ಲಿ ಇಷ್ಟಾನುಸಾರವಾಗಿ ಕರಿಣಿಗಳ ಹಿಂಡುಗಳೊಡಗೂಡಿ ಸರಸವಾಡುತ ಕೈಲಾಸಪರ್ವತವೇ ಗಜರೂಪವಂ ತಾಳಿದಂತೆ ಕಟಸ್ಥಿತ ಧವಳಾಪ್ರವಹಿಸುವ ಗಂಗಾನದಿಯು ಪ್ರವಾಹದಂತಿರುವ ನಾಲ್ಕು ಕೊಂಬುಗಳುಳ್ಳ ಮಹಾಮಣಿಗಳಂ ಅನುಕರಿಸುವ ಸುಲಕ್ಷಣಬಿಂದುಗಳಿಂ ಶೋಭಿಸುವ ಮಹಾಗಜವಂ ಕಂಡು ರಾಯನಿಗೆ ಸಂತೋಷವುಂಟಾಗಿ ಹಾಸ್ಯವಸನವು ತಲೆದೋರಿ ನೇತ್ರಗಳಲ್ಲಿ ಕಂಬನಿದುಂಬುತ್ತಿರಲು, ಅದಂ ನೋಡಿ ಸುಮತಿಯು ಅಯ್ಯಾ ರಾಯನೆ! ನಾವು ಸಂಕಲ್ಪಿಸಿ ಬಂದಂತೆ ಸುಲಕ್ಷಣ ಲಕ್ಷಿತವಾದ ಗಜವು ಲಬ್ಧವಾದ ಬಳಿಕ ಹರ್ಷ ಉಂಟಾಗಬೇಕಲ್ಲದೆ ವ್ಯಸನ ಸೂಚಕವಾದ ಬಾಷ್ಪ ಉಂಟಾಗಿರುವದರಿಂದ ನಿನಗೂ ಈ ಗಜಕ್ಕೂ ಯಾವ ಜನ್ಮದಲ್ಲೋ ಸಖ್ಯವಿರುವದೆಂದು ತೋರುತಲಿದೆ, ಇಂಥಾ ಮಹಾಗಜವು ಯಾವ ಪುಣ್ಯ ವಿಶೇಷದಿಂದಲೋ ಈ ರಾಕ್ಷಸಾಧಿಪತಿಯ ವಶದಲ್ಲಿರುವದೆಂದು ಹೇಳಿ, ಅಲ್ಲಿಂದ ತೆರಳಿ ಪುರವಂ ಸುತ್ತಿಬಂದು ಮೊದಲಿನಂತೆ ನದೀತೀರದಲ್ಲಿಳಿದು ವಿಶ್ರಮಿಸಿಕೊಳ್ಳುತ್ತಿರಲು; ಆಗ ಉಗ್ರಬಾಹುವಿನಿಂದ ಆಜ್ಞಪ್ತರಾದ ರಾಕ್ಷಸರಿಬ್ಬರು ಬಂದು ರಾಯನಿಗೆ ಕೈಮುಗಿದು ನಮ್ಮ ರಾಕ್ಷಸಾಧಿಪತಿಗಳು ನಿಮ್ಮಂ ನೋಡಬಯಸಿ ನಮ್ಮಂ ಕಳುಹಿಸಿದರೂ ಎಂದು ಬಿನ್ನವಿಸಲೂ, ಅದಂ ಕೇಳಿ ರಾಜ ಮಂತ್ರಿಗಳು ಆ ರಾಕ್ಷಸಭಟರಂ ಕುರಿತು ಇದೋ ಬರುವೆವೆಂದು ಹೇಳಿ ಹಂಸಾರೂಢರಾಗಿ ತೆರಳಿ ಆಸ್ಥಾನಮಂಟಪದಲ್ಲಿಳಿದು ಸಭೆಯಂ ಪ್ರವೇಶಿಸಲು, ಆಗ ಉಗ್ರಬಾಹುವು ನೃಪಮಂತ್ರಿಗಳಂ ಕಂಡು ಸ್ವಲ್ಪ ಎದ್ದು ಉಚಿತಪ್ರಕಾರದಲ್ಲಿ ಕುಳ್ಳಿರಿಸಿಕೊಂಡು ಎಲೈ ನೃಪೋತ್ತಮನೇ ಸ್ನಾನಾದಿ ನಿತ್ಯಕರ್ಮಗಳು ನೆರವೇರಿದವೇ? ನಾವು ಬಯಸಿದ ಕ್ಷಣವೇ ಬಂದವರಾದಿರಿ, ಭೂಚರ ವಾಹನಕ್ಕಿಂತಲೂ ಖೇಚರವಾಹನಸಂಚಾರದಿಂ ಬಹುಸುಖ ಉಂಟಾಗುವದಲ್ಲವೇ? ಎನಲು, ಅದಂ ಕೇಳಿ ಸುಗಂಧರಾಜೇಂದ್ರನು ಎಲೈ ರಾಕ್ಷಸಾಧಿಪತಿಯೇ ಭೂತಳದಲ್ಲಿ ಪಳ್ಳ

ತಿಟ್ಟು, ಮುಳ್ಳು ಪಂಕಗಳಿಂದ ಆಯಾಸ ಉಂಟಾಗುವದು, ಆಕಾಶ ಗಮನ ದಲ್ಲಿ ಆ ದೋಷ ಲೇಶವಿಲ್ಲವೆನಲು, ಅದಂಕೇಳಿ ಉಗ್ರಬಾಹುವು, ಎಲೈ ರಾ ಜಕುಮಾರನೇ ! ಈ ಹಂಸೆಯು ನಿಮ್ಮ ಸುಕೃತವಿಶೇಷದಿಂದತಾನೇ ಪ್ರಾಪ್ತ ವಾಗಿ ನಿಮ್ಮ ವಶದಲ್ಲಿಧೆಯೋ ? ಇಲ್ಲದಿರೆ ಏನಾದರೂ ವಿಶೇಷ ಉಂಟೋ ? ಎಂದು ನುಡಿಯಲು, ಅದಂ ಕೇಳಿ ಸುಗಂಧರಾಜನು ಈ ವಾಹನವು ದೇವತಾ ಪ್ರಸಾದದಿಂದ ಲಬ್ಧವಾಯಿತು, ಇದರಮೇಲೆ ಕುಳಿತು ಇಚ್ಛಾನುಸಾರವಾಗಿ ಅಂತರೀಕ್ಷದೊಳ್ ಸಂಚರಿಸುತ ಭೂಮಂಡಲವಂ ನೋಡಿದರೆ ಈ ಪ್ಲಕ್ಷ ದ್ವೀಪವು ಕುಲಾಲಚಕ್ರಪ್ರಮಾಣವಾಗಿ, ಕುಲಪರ್ವತಗಳು ಪಗಡೇಕಾಯಿ ಯಂತೆ, ಮಹಾಗಜಾದಿಗಳು ಮಶಕಗಳಂತೆ, ಮಹಾ ರಾಕ್ಷಸರು ಕೀಟಪ್ರಾ ಯರಾಗಿಯೂ ಕಾಣಿಸುತ ಉತ್ಸಾಹವು ಹೆಚ್ಚಿಬರುವದೆಂದು ನುಡಿಯಲು, ಅದಂ ಕೇಳಿ ಉಗ್ರಬಾಹುವು ತನ್ನ ಮನದೊಳ್ ಈ ನೃಪತಿಯು ಗರ್ವಾಂಧನಾಗಿ ನಮ್ಮಂಥಾ ರಾಕ್ಷಸಶ್ರೇಷ್ಠರಂ ಕೀಟಗಳೆಂದು ಕುಹಕವಂ ಮಾಡುವಂತೆ ತೋ ರುತಲಿಧೇ ಎಂದು ಕೋಪದಿಂದ ವಾರೆಗಂಣಿನಿಂದ ನೋಡಲು, ಅದನ್ನೋಡಿ ಶಂಕುಕರ್ಣನು ರಾಕ್ಷಸರು ಕೀಟಪ್ರಾಯರೆಂದು ನೃಪನು ಹೇಳಿದ ಮಾತಿನಿಂದ ನಮ್ಮ ಧೊರೆಯಾದ ಉಗ್ರಬಾಹುವಿಗೆಕೋಪಉಂಟಾಗಿರುವಂತೆ ಕಾಣುವದು, ಆದ್ದರಿಂದಇವರೀರ್ವರಿಗೂ ಕಲಹವುಪ್ರಾಪ್ತವಾದೀತು, ಅದರಿಂಈತನ ಕ್ರೋಧ ವಂಶಾಂತಿಗೊಳಿಸಬೇಕೆಂದುನಿಶ್ಚಯಿಸಿ ಅಯ್ಯಾಉಗ್ರಬಾಹುವೇ! ದೂರಗತವಾ ದ ವಸ್ತುವು ನೋಡುವವರಿಗೆ ಸೂಕ್ಷ್ಮವಾಗಿಕಾಣುವದು ವಿಹಿತವೇ ಸರಿ, ಈ ಅರ್ಥದಲ್ಲಿ ವಿಕಲ್ಪಘಟಿಸಲಾರದೆಂದು ಬಿನ್ನೈಸಲು, ಉಗ್ರಬಾಹುವುಹಾಗೆತಾನೆ ಯಿದ್ಧೀತೆಂದು ತಿಳಿದು ಈ ವಾಹನವು ಅವಶ್ಯಕ ಕಾರ್ಯಉಂಟಾದಲ್ಲಿ ಅನ್ಯರಿ ಗೂ ಅನುಕೂಲಿಸುವದೋ ?ಇಲ್ಲವೋ ಎಂದು ನೃಪತಿಯಂ ಕೇಳಲೂ, ಅದಂ ಕೇಳಿ ಸುಗಂಧರಾಜನು ಈ ವಾಹನವು ಆದರಿಸುವ ಜನರಿಗೆ ಉಪಯೋಗಿಸುವ ದೆಂದು ನುಡಿಯಲು, ಅದಂ ಕೇಳಿ ಉಗ್ರಬಾಹುವು ಅಪೂರ್ವವಾಗಿರುವ ವಸ್ತು ವಂ ಅನ್ಯರು ಅಪೇಕ್ಷಿಸುವದು ಯುಕ್ತವಲ್ಲ, ಆದರೂ ನಮ್ಮದಾಗಿ ಒಂದು ವ ಸ್ತುವಂ ಸ್ವೀಕರಿಸಿ ಈ ವಾಹನವಂ ನಿಮ್ಮ ಗುರುತಾಗಿ ಕೊಡಬಹುದೋಯೆಂ ದು ಕೇಳಲ , ಅದಂಕೇಳಿ ಸುಗಂಧರಾಜನು ಎಲೈ ರಾಕ್ಷಸಪ್ರಭುವೇ! ನಿಮಿಗೆ

ಅಪೇಕ್ಷೆ ಇದ್ದರೆ ಸಪ್ತವಸ್ತುವಂ ಕೊಡುವವಾದರೆ ನಿನ್ನ ವಶವಾಗುವೆನು ಎಂದು ಹೇಳಲದಂ ಕೇಳಿ ಉಗ್ರಬಾಹುವು ಅಯ್ಯಾ ಸ್ತ್ರೀಶ್ರೋತ್ತಮೇ! ಅಮೂಲ್ಯವಾದ ರತ್ನಗಳು, ಮುತ್ತು ಸ್ತ್ರೀರತ್ನಗಳು, ದೇಶಕೋಶ ವಾಹನ ಮೊದಲಾದ್ದು ಇರುವವು, ಇವರೊಳಗೆ ಬಯಸಿದುದಂ ಹೇಳಬೇಕೆನಲು, ಸುಗಂಧರಾಜನು ಅಯ್ಯಾ ರಾಕ್ಷಸಾಧಿಪತಿಯೆ! ನೀನು ಹೇಳುವ ವಸ್ತುಗಳೆಲ್ಲವು ನಮ್ಮಲ್ಲಿ ಹೇರಳವಾಗಿರುವವು, ಈ ಹಂಸೆಯಂತೆ ಆಕಾಶಸಂಚಾರಕ್ಷಮವಾದ ವಾಹನವಿದ್ದರೆ ಬಂದು ನಿಮ್ಮ ವಶವಾಗುವೆನೆನಲು, ಅದಂ ಕೇಳಿ ಉಗ್ರಬಾಹುವು ಈ ರಾಯನು ನಮ್ಮ ಮಹಾಗಜದ ರೀತಿಯಂತಿಳಿದು ಅದರಲ್ಲಿ ದೃಷ್ಟಿಯನ್ನಿಟ್ಟು ಹೇಳುವಂತೆ ತೋರುತ್ತಲಿದೆಯೆಂದು ನಿಶ್ಚೈಸಿ ಈ ಅರ್ಥವಂ ಶಂಕಾಕರ್ಣನಿಗೆ ತಿಳುಹಿಸಿದರೆ ಅವನು ಸಮ್ಮತನಾಗನು, ಅದ್ದರಿಂ ಸಿಂಹಾಸ್ಯನೆಂಬ ಮಂತ್ರಿಯೊಡನೆ ಆಲೋಚಿಸಬೇಕೆಂದು ಯೋಚಿಸಿ, ನೃಪತಿಯನ್ನೋಡಿ ನಿಮಗೆ ನಿತ್ಯಕರ್ಮಕಾಲವುಸನ್ನಿಹಿತವಾಗಿರುವದು ಮರಳಿ ಸಾಯಂಕಾಲಕ್ಕೆಬರಬೇಕೆಂದು ಹೇಳಿ ನೃಪಮಂತ್ರಿಗಳಂ ಕಳುಹಿಸಲು, ಅವರು ಮೊದಲಿನಂತೆ ಹಂಸಾರೂಢರಾಗಿ ನದೀತೀರವಂ ಕುರಿತು ತೆರಳಿದ ಬಳಿಕ ಉಗ್ರಬಾಹುವು ಸಿಂಹಾಸ್ಯನೆಂಬ ಮಂತ್ರಿಯನ್ನೇಕಾಂತದಲ್ಲಿ ಕರೆದು ಎಲೈ ಮಂತ್ರಿಯೆ! ರಾಜಪುತ್ರನಿಗೂ ನಮಗೂ ಉಂಟಾದ ಸಂವಾದವಂ ತಿಳಿದಿರುವೆಯಷ್ಟೆ? ಇದರಲ್ಲಿ ನಿನಗೆ ತೋರಿದ ಅರ್ಥವಂ ಹೇಳುವನಾಗೆನಲು, ಅವನು ಅಯ್ಯಾ ರಾಕ್ಷಸರಾಯನೆ! ಆ ನೃಪತಿಯು ನಿನ್ನಲ್ಲಿರುವ ಮಹಾಗಜದಲ್ಲಿ ದೃಷ್ಟಿಯನ್ನಿಟ್ಟು ತನ್ನ ಹಂಸೆಯಂ ಕೊಡುವನೆಂದು ಸಮ್ಮತನಾಗಿ ಹೋಗಿರುವನು, ಮಹಾಗಜಮೂಲದಿಂದ ನಿನಗೆ ಸಕಲಸಂಪತ್ತುಗಳೂ ಉಂಟಾಗಿರುವದರಿಂದ ಅದಂ ಕೊಡುವಲ್ಲಿ ನಿನ್ನ ರಾಜ್ಯಲಕ್ಷ್ಮಿಯು ಅವರಲ್ಲೇ ಕುಳಿತು ತೆರಳುವಳು, ಅದ್ದರಿಂ ಗಜವಂ ಅನ್ಯರಿಗೆ ಕೊಡಕೂಡದು, ಹಂಸೆಯಾದರೋ ಅಂತರಿಕ್ಷಗಮನಕ್ಕೆ ಮಾತ್ರ ಉಪಯೋಗವಾಗಿರುವದು, ಅದ್ದರಿಂ ಅವರಂ ಮೋಸಗೊಳಿಸಲೆಳಸಿ ಬಯಸಿದುದಂ ಕೊಡುವೆವೆಂದು ಹೇಳಿ ಹಂಸೆಯಂ ಮೊದಲು ಸ್ವಾಧೀನವಂ ಮಾಡಿಕೊಂಡು ಕಾಲಹರಣವಂ ಮಾಡುತ್ತಿದ್ದರೆ ಅವರಿಗೆ ಇಚ್ಛಾನುಸಾರಗಮನತಪ್ಪಿದ ಬಳಿಕ ಮನುಷ್ಯಮಾತ್ರರಾದ ಅವರಿಂದ ಆಗತಕ್ಕದ್ದೇನೆಂದು ಹೇಳಲದಂ ಕೇಳಿ ಉಗ್ರಬಾಹುವು

ದೈವಬಲತಪ್ಪಿದುದರಿಂ ಆ ದುರ್ಮಂತ್ರಿಯು ಮಾತಿನಲ್ಲಿ ವಿಶ್ವಾಸವಂಮಾಡಿ ಕಾರ್ಯಾಂತರದೊಳಿರುತ್ತಿರಲು: ಆ ನೃಪಮಂತ್ರಿಗಳಿಬ್ಬರೂ ಸಾಯಂಕಾಲದ ಸಮಯದಲ್ಲಿ ಮೊದಲಿನಂತೆ ಹಂಸರೂಪಧರರಾಗಿ ಉಗ್ರಬಾಹುವಿನ ಆಸ್ಥಾನದ ಬಳಿಗೆ ಬಂದು ಇಳಿದು ಅವನ ಸಮೀಪದಲ್ಲಿ ಉಚಿತವಂ ಕುಳಿತಿರಲವನಾ ಎಲೈ ನೃಪತಿಯೇ! ನಿಮ್ಮ ಹಂಸಗಿಂತ ಶತಗುಣಾಧಿಕವಾದ ಮಹಾಗಜವಂ ಕೊಡುವೆವು ಹಂಸೆಯಂ ಕೊಡುವರಾಗಿ ಅದರ ಸ್ವಭಾವವೆಂತಿರುವದು ಹೇಳಬಹುದೆಂದು ನುಡಿಯುಲಾಮಾತಿಗೆ ಸುಮತಿಯು ಅಯ್ಯಾ ರಾಕ್ಷಸಾಧಿಪತಿಯೇ! ಈ ಹಂಸೆ ಇರುವ ಪ್ರದೇಶದಲ್ಲಿ ಹಿಂಸಾದಿಗಳೂ ಅಸತ್ಯವೂ ನಡೆಯಕೂಡದು, ನೀನು ನಿಯತನಾಗಿರುವನಾದರೂ ನಿನ್ನ ಸ್ವಜನರ ಮನೋಗತವೆಂತಿರುವದೋ? ಈ ಹಂಸೆಗೆ ಜುಗುಪ್ಸೆತೋರಿದ ಬಳಿಕ ನಿಮ್ಮಂ ಮೀರಿ ನಮ್ಮಂ ಉಪೇಕ್ಷಿಸಿ ತನಿಗೆ ಜನ್ಮಸ್ಥಾನವಾದ ಮಾನಸ ಸರೋವರವನ್ನೈದುವದು, ಹಾಗಾದರೆ ನಿಮ್ಮ ಮನೋರಥವು ವ್ಯರ್ಥವಾಗುವದು ಯಂದು ಹೇಳಲಾ ಉಗ್ರಬಾಹುವು ಎಲೈ ನೃಪಮಂತ್ರಿಯೇ! ನೀನು ಹೇಳಿದ ಮರ್ಯಾದೆಯಿಂದ ನಡೆದುಕೊಳ್ಳುವೆವು, ನಾವಾಗಿ ಅಪೇಕ್ಷಿಸಿ ತೆಗೆದುಕೊಂಡ ವಸ್ತುವಿನಲ್ಲಿ ಉಪೇಕ್ಷೆಯಂ ಮಾಡುವದಕ್ಕೆ ನಾವು ಮರುಳುಗಳೇ ಎನಲು ಆಗ ಸುಮತಿಯು ಹಾಗಾದರೆಹಂಸೆಯು ನಿಮ್ಮ ವಶವಾದದು ನೋಡಿಕೊಳ್ಳುವರಾಗಿ, ನಾವು ಯೇರುವದಕ್ಕೆ ಅನುರೂಪವಾದ ಗಜವಂತೋರಿಸೀ ಎನಲು, ಆ ಮಾತಿಗೆ ಉಗ್ರಬಾಹುವು ಅದು ನಾಳೆ ಆಗುವದು ಪ್ರಕೃತದಲ್ಲಿ ಕುಳಿತು ಸಂಚರಿಸುವದಕ್ಕೆ ರಥವು ಸಿದ್ಧವಾಗಿರುವದು, ಇದರಿಂ ಸಂಚರಿಸುವರಾಗೀಯಂದು ಹೇಳಿ ಮನೋಹರವಾದ ರಥವಂ ತರಿಸಿ ನಿಲ್ಲಿಸಿ ಹಂಸೆಯಂ ಕೈಯಿಂದ ನವರುತ ವಿಸ್ತಾರವಾದ ಸುವರ್ಣ ಪಂಜರದಲ್ಲಿ ಕೂಡಿ ಮೃದುವಾದ ಮೃಣಾಳಶಕಲಗಳಂ ಕಮಲ ಕೇಸರಗಳಂ ಕೂಡ ಕೊಡುತ ರಾಜಮಂತ್ರಿಗಳಂ ಕುರಿತು ಹೋಗಿಬನ್ನಿರೆಂದು ಹೇಳಲವರುರಥವನ್ನೇರಿ ನದೀತೀರವಂ ಕುರಿತು ತೆರಳಿದರು.

ಇತ್ತಲಾ ಶಂಕುಕರ್ಣನು ಇದೆಲ್ಲವಂ ತಿಳಿದು ಉಗ್ರಬಾಹುವಂಕುರಿತು ಅಯ್ಯಾ ಅರಸೇ! ಇಷ್ಟುದಿವಸ ಪರ್ಯಂತವೂ ರಾಜಕಾರ್ಯದಲ್ಲಿ ನನ್ನೊಡನೆ ಮಂತ್ರಾಲೋಚನೆಯಂ ಮಾಡುತ ಬಹು ಯಶೋವಂತನಾಗಿರುವನಾದ್ದ

ಈಗಅನ್ಯರ ಆಲೋಚನೆಯು ನಿನ್ನ ಮನಕ್ಕೆ ಬಂದಬಳಿಕ ನಿನ್ನ ಯೋಗಕ್ಷೇಮವೇನಿದ್ದರೂ ಅದನ್ನೇ ಹೋಯಿತು, ನಾನು ಇಲ್ಲಿದ್ದು ಫಲವೇನು ವಿದೇಶಗತೆನಾಗುವೆನು, ಆದರೂ ಬಹುಕಾಲ ನಿನ್ನಲ್ಲಿದ್ದುದರಿಂ ಈಗಲೂ ನಿನ್ನ ಕ್ಷೇಮವನ್ನೇ ಬಯಸಿ ಮೇಲ್ಪರಿದು ಖಂಡಿತವಾಗಿ ಹೇಳುವೆನು, ಆ ಹಂಸೆಯಂ ಎಂದಿನಂತೆ ಅವರವರವಂಮಾಡಿ ಸಮ್ಮಾನದಿಂ ಕಳುಹಿಸಿ ಕೊಡುವನಾಗು, ಇಲ್ಲದಿರೆ ಅವರಂ ಕರೆಕಳುಹಿ ಆನೆಯ ಮೇಲೆ ಅಟೆಯುಂಬಿಟ್ಟು ಕೊಟ್ಟುಕಳುಹೂ, ಈ ಎರಡರ್ಥವನ್ನತಿಕ್ರಮಿಸಿ ನಡವರೆ ರಾಕ್ಷಸರಿಗೆ ಕ್ಷೇಮವುಂಟಾಗಲಾರದು" ಇದು ನಿಶ್ಚಯವು, ಇವರಮೇಲೆಅದೃಷ್ಟವಿದ್ದಂತಾಗುವದೆಂದುಬಿನ್ನವಿಸಿ ಉಗ್ರಬಾಹುವು ಎಷ್ಟು ಬಹುಬಡಿಸಿದರೂ ಸುಮುತನಾಗದೇ ಪತ್ನೀ ಪುತ್ರಸಮೇತನಾಗಿ ಪಾತಾಳಲೋಕವಂ ಕುರಿತು ತೆರಳಲು;

ಇತ್ತಲಾ ನದೀತೀರದಲ್ಲಿಳಿದಿರುವ ರಾಯನು ಮತ್ತೆ ಮೂರು ನಾಲ್ಕುದಿನದಮೇಲೆ ಛಾಯಾಗುಪ್ತನನ್ನೆಣಿಯಲು ಆಗ ಹಂಸರೂಪವಂ ತಾಳಿ ರಾಕ್ಷಸನಬಳಿಯೊಳ್ ಪಂಜರದಲ್ಲಿದ್ದ ಛಾಯಾಗುಪ್ತನು ರಾತ್ರಿಯೊಳ್ ಸೂಕ್ಷ್ಮರೂಪದಿಂ ಪಂಜರದರಂಧ್ರದಿಂ ಹೊರಟು ನೃಪತಿಯಿದ್ದೆಡೆಗೆ ಬಂದು ಹಂಸರೂಪವಂಬಿಟ್ಟು ಕಾಣಿಸಿಕೊಂಡು ಅಭಿವಂದಿಸಿ ನಿಂದಿರಲು, ಸುಗಂಧರಾಜನು ಎಲೈ ಯಕ್ಷಾಧಿಪತಿಯೆ; ಅದೃಶ್ಯನಾಗಿ ನಾವು ಕುಳಿತುಕೊಳ್ಳುವ ರಥವಂ ರಕ್ಷಿಸುತಲಿರುವನಾಗೆಂದು ಸುಖನಿದ್ರೆಯಂಗೈದು ಅರುಣೋದಯದೊಳೆದ್ದು ನದಿಯೊಳ್ ಸ್ನಾನಾಹ್ನಿಕಗಳನ್ನೆರವೇರಿಸಿ ಅಸ್ತ್ರಮಂತ್ರಗಳಂ ನ್ಯಾಸಪೂರ್ವಕವಾಗಿ ಜಪಿಸಿ ರಥದಬಳಿಯಲ್ಲಿ ಸನ್ನಿಹಿತರಾಗಿರಬೇಕೆಂದು ಪ್ರಾರ್ಥಿಸಿ ಸುಮತಿಯೊಡನೆ ರಥಾರೂಢನಾಗಲು, ಅತ್ತಲಾ ಉಗ್ರಬಾಹುವಿನ ಆಸ್ಥಾನದೊಳ್ ಪಂಜರದಲ್ಲಿದ್ದ ಹಂಸೆಯುಂಕಾಣದೆ ಗ್ರಾಸಾರ್ಥವಾಗಿ ಕೊಟ್ಟ ತಾವರೇ ದಂಟುಗಳುಮಾತ್ರ ಉಳಿದಿರುವದನ್ನೋಡಿ ಪಂಜರರಕ್ಷಕರು ಉಗ್ರಬಾಹುವಿಗೆ ವಿಜ್ಞಾಪಿಸಲು, ಅವನು ರಭಸದಿಂದೆದ್ದು ಬಂದು ನೋಡಿ ಹಾ! ಮೋಸವಾಯಿತು ಎನೋ ಅಚಾತುರ್ಯ ನಡೆದಿರುವದರಿಂದ ಹಂಸವು ಅದೃಶ್ಯವಾಯಿತು ಶಂಕುಕರ್ಣನ ವಾಕ್ಯದಲ್ಲಿ ಉಪೇಕ್ಷೆಯಂಮಾಡಿದ್ದಕ್ಕೆ ಏನು ಅನಿಷ್ಟ ಸಂಭವಿಸುವನೋ? ಗಜವಂ ಕೊಡಬೇಕೆಂದು ಹೇಳಿದರೆ

ಅವರಿಗೆ ಏನು ಪ್ರತ್ಯುತ್ತರವಂ ಕೊಡಲೀ ಎಂದು ಚಿಂತಿಸುತ ಭಟರನ್ನೋಡಿ ಹಂಸೆಯು ಎಲ್ಲಿ ಹೋಗಿರುವದು ಹುಡುಕಿತರುವರಾಗಿಯೆಂದು ನಿಯಮಿಸಿ ಯಾವದೂ ಮನಸಕ್ಕೆ ಬಾರದೆ ವ್ಯಸನಪಡುತ ಆಸ್ಥಾನದಲ್ಲಿ ಕುಳಿತಿಪ್ಪ ಸಮಯದೊಳ್ ನೃಪಮಂತ್ರಿಗಳು ರಥಾರೂಢರಾಗಿ ಬಂದು ಆಸ್ಥಾನದಬಳಿಯಲ್ಲಿಳಿದು ರಾಜಸಭೆಗೆ ಪೋಗಿ ಉಚಿತದಿಂ ಕುಳಿತು ಬಳಿಕ ಸುಮತಿಯು ಉಗ್ರಬಾಹುವಂನೋಡಿ ಅಯ್ಯಾ ರಾಕ್ಷಸಾಧಿಪತಿಯೇ! ನಾವು ಈ ಪುರದ ರಮಣೀಯತೆಯಂ ನೋಡಲೆಣಿಸಿ ಬಂದು ಯೆಂಟುದಿನಸವಾಯಿತು ಲವಣ ಸಮುದ್ರದ ಪೂರ್ವತೀರದಲ್ಲಿಳಿದಿರುವ ನಮ್ಮ ಸೇನೆಗಳು ನಾವು ಹೇಳಿಬಂದಂತೆ ಹೋಗದೇ ವಿಳಂಬವಂ ಮಾಡಿದುದರಿಂದ ಎಷ್ಟು ವ್ಯಸನಪಡುವದೋ? ನಮ್ಮ ರಾಜೇಂದ್ರನಿಗೆ ಸೇನೆಯನ್ನೋಡಲೆಣಿಸಿ ಮನತವಕವಿಡುತಲಿದೆ, ನೀವು ಆಡಿದರೀತಿಗೆ ಮದಗಜವಂ ಕೊಡಿಸಿದಡೆ ಜಾಗ್ರತೆಯಿಂದ ತೆರಳುವೆವು ಎಂದು ಪೇಳಲು; ಅದಂಕೇಳಿ ಉಗ್ರಬಾಹುವು ಅಯ್ಯಾ ನೃಪಮಂತ್ರಿಯೇ! ನೀವು ಕೊಟ್ಟಿದ್ದ ಹಂಸೆಯು ನಿನ್ನೆರಾತ್ರಿ ವೇಳೆಯಲ್ಲಿ ಅದೃಶ್ಯವಾಗಿಹೋಯಿತು ಆದರ ಚಿಂತೆಯಲ್ಲೀ ಇರುವೆನೆಂದು ಪೇಳಲು, ಸುಮತಿಯು ಇದೇನಾಶ್ಚರ್ಯವು ಹಂಸೆಯಂ ಯಾರು ಕೆಣಕಿದರೋ ಅಥವಾ ಅಶುಚಿ ಸಂಬಂಧವುಂಟಾಯಿತೋ ನಿನ್ನ ವಶವಾದ ಬಳಿಕ ಅದರ ಯೋಗಕ್ಷೇಮವು ನಿನಿಗೇ ತಿಳಿಯಬೇಕು. ನಿನ್ನಂ ಮೀರಿ ಎಲ್ಲಿಗೆ ಹೋಗುವದು ಅದಂ ನಿನ್ನವಶವಂ ಮಾಡಿದಾಗಲೇ ಅದರ ಚಿಂತೆಯಂ ಬಿಟ್ಟೆವು ನಾವು ನಮ್ಮ ಸೇನೆಗೆ ತೆರಳುವದಕ್ಕೆ ಉಪಯುಕ್ತವಾದ ಗಜವಂ ತಂದುಕೊಡುವಂತೆ ನಿನ್ನ ಭಟರಿಗೆ ಆಜ್ಞಾಪಿಸೆಂದು ಹೇಳಲಾಮಾತಿಗೆ ಉಗ್ರಬಾಹುವು ಪ್ರತ್ಯುತ್ತರವಂ ಕೊಡದೆ ಸುಮ್ಮನೆ ಇರಲು; ಸುಗಂಧರಾಜೇಂದ್ರನು ಎಲೈ ರಾಕ್ಷಸಾಧಿಪತಿಯೇ ನಮ್ಮ ಮಂತ್ರಿಯು ಹೇಳಿದ ಮಾತಿಗೆ ಉತ್ತರವಂ ಕೊಡದೆ ನಮಿಗೆ ಅಡಿಪರ್ಥವನ್ನಡಸದೆ ಸುಮ್ಮನೆ ಇರುವ ಪರಿಯೇನು ಉದಾಸೀನತ್ವವೋ? ಅಲ್ಲವೆ ಅಪಲಾಪಬುದ್ಧಿಯೋ ಎಂದು ಕೇಳುತ್ತಿರಲಾಗ ಉಗ್ರಬಾಹುವು ತಾಳ್ಕೈ ನೃಪತಿಯೇ; ಎರಡು ಮೂರು ದಿವಸದಲ್ಲಿ ಹೇಳುವೆವೂ ಎಂದಪ್ಪೇಳಲಾಗ ಸುಮತಿಯು ಎಲೈ ರಾಕ್ಷಸೇಶ್ವರನೇ ನಮಿಗೆ ಪ್ರಯಾಣವು ತ್ವರ್ಯವಾದ್ದರಿಂದ ಬದಲುತ್ತರವಂ ಹೇಳದೆ ಗಜವಂ ತಂದು ನಿಲ್ಲಿಸುವಂತೆ ಭಟರಿಗೆ

ನೇಮಿಸುವನಾಗು ಎನಲಾಮಾತಿಗೆ ಉಗ್ರಬಾಹುವಿನ ಪುತ್ರನಾದ ಬಭ್ರುವೆಂಬ ರಾಕ್ಷಸನು ಎದ್ದು ಎಲೈ ನೃಪಮಂತ್ರಿಯೇ! ರಾಕ್ಷಸಕುಲ ಚಕ್ರವರ್ತಿಗಳಾದ ಪ್ರಭುಗಳಂ ಮನುಷ್ಯರಂ ಕಂಡಂತೆ ಹಲವುಪರಿ ಮಾತನಾಡುವೆ, ರಾಜಸಭೆಯಲ್ಲದೆ ಮತ್ತೊಂದೆಡೆಯಲ್ಲಾದರೆ ನಿನ್ನ ನಾಲಿಗೆಯಂ ಕುಯಿಸಿ ಕಳುಹಿಸಿರುವೆನೆಂದುಹೇಳಲು, ಸುಮತಿಯು ಎಲೈ ರಾಕ್ಷಸಪುತ್ರನೇ ನೀನು ಹೇಳುವ ಮಾತು ಸಾಗದಿದ್ದರೂ ಮನಬಂದಂತೆ ಹರಟಿದರೆ ನಿನ್ನ ಶಿರವು ಉಳಿಯಲಾರದೆಂದು ನುಡಿದು ಎಲೈ ಉಗ್ರಬಾಹುವೇ ಗಜವಂ ತಂದುಕೊಟ್ಟಲ್ಲದೇ ಇಲ್ಲಿಂದ ಏಳುವದಕ್ಕೆ ನಮ್ಮ ರಾಯನ ಅಪ್ಪಣೆ ಇಲ್ಲವೆಂದು ಹೇಳಲು ಆ ಮಾತಿಗೆ ಉಗ್ರಬಾಹುವಿಗೆ ಕೋಪ ಉಂಟಾಗಿ ಕಂಗಳಂ ಕೆಂಪು ಮಾಡಿಕೊಂಡು ಘುರನೆ ತಿರಿಗಿಸುತ ಸೌಮ್ಯರೂಪಮಂ ಮರೆಮಾಡಿ ತನ್ನ ಸಹಜರೂಪವಂ ತಾಳಿ ತುಟಿಯಂ ನಾಲಿಗೆಯಿಂ ಸವರುತಲಿರಲು ಅವನನ್ನೋಡಿ ಬಭ್ರುವೆಂಬ ಕುಮಾರನು ಎಲೈ ಮನುಷ್ಯಮಂತ್ರಿಯೇ ಸ್ವಬಲ ಪರಬಲವನ್ನರಿಯದೆ ನೊಕ್ಕಿದ ಸ್ವಾನದಂತೆ ಬೊಗುಳುವೆ, ನಿನ್ನಂ ಶಕಲವಂಗೈದು ಭಕ್ಷಿಸುವೆನೆಂದು ಖಡ್ಗವಂ ಹಿಡಿದು ಝಳಪಿಸುತಲಿರಲದಂ ಕಂಡು ನೃಪತಿಯು ಈ ಕುಮಾರನಂ ಸಂಹರಿಸಿ ರಾಕ್ಷಸಾಧಿಪತಿಗೆ ಕೋಪ ಉಂಟಾಗುವಂತೆ ಮಾಡದಿದ್ದರೆ ಗಜವಂ ಕೊಟ್ಟು ಸಂಧಿಗಾದರೂ ಪ್ರಾರ್ಥಿಸಿ ಬರುವನು ಅದಕ್ಕೆ ನಾವು ಒಡಂಬಡಬೇಕಾಗುತ್ತಿದ್ದರಿಂ ರಾಕ್ಷಸರೆಲ್ಲರೂ ಹತರಾಗದೆ ಎಂದಿನಂತೆ ಧರ್ಮವು ಭ್ರಷ್ಟವಾಗುವದು, ಆದ್ದರಿಂದೀಗಲೇ ಈ ಹುಡುಗನಂ ಸಂಹರಿಸಬೇಕೆಂದು ನಿಶ್ಚೈಸಿ ಕೋಪದಿಂ ಕೋಶದಿಂ ಕತ್ತಿಯಂ ಕಿತ್ತು ಎಲೈ ರಾಕ್ಷಸಕುಮಾರನೇ ನಮ್ಮಿರ್ವರೊಳ್ ಭಕ್ಷಿಸುವವರಿ ಎಂತೆಂದು ಪ್ರಹರಿಸಿದ ಮಾತ್ರದಿಂದವನು ಎರಡು ತುಂಡಾಗಿ ಸಭೆಯ ಹವಳದ ಸ್ತಂಭವೂ ಕೂಡ ತುಂಡು ತುಂಡಾಗಲು ಅದನ್ನೋಡಿ ಸುಮತಿಯು ತನ್ನ ಕೈ ಖಡ್ಗದಿಂದ ರಾಕ್ಷಸಾಧಿಪತಿಯ ಆಯುಧವಂ ಹಿಡಿದಿರುವ ರಾಕ್ಷಸರ ಬಾಹುವಂ ಕತ್ತರಿಸಿ ಒಬ್ಬರಿಗೂ ತಿಳಿಯದಂತೆ ಅತಿ ಜಾಗ್ರತೆಯಿಂದ ಅವರ ಬಳಿಯಲ್ಲಿದ್ದ ಖೇಟವಂ ತೆಗೆದು ತಮ್ಮ ರಾಯನ ಕೈಯಲ್ಲಿ ಕೊಟ್ಟು ಬಿದ್ದಿದ್ದ ಬಭ್ರುಕುಮಾರನ ಖೇಟವಂ ತಾನು ತೆಗದುಕೊಳಲು ಬಳಿಕ ನೃಪಮಂತ್ರಿಗಳೀರ್ವರೂ ಸುತ್ತಮುತ್ತಲಿರುವ ರಾಕ್ಷಸರಂ ಖಡ್ಗದಿಂ ಪ್ರಹರಿಸುತ್ತಿರಲು, ಅ

ದಂ ಕಂಡ ಉಗ್ರಬಾಹುವು ಖಡ್ಗವಂ ತೆಗೆದುಕೊಂಡು ರಭಸದಿಂ ಬರುತ್ತಿರಲಾಗ ರಾಜಸಭೆಯಲ್ಲಿದ್ದ ಶೂರರಾದ ರಾಕ್ಷಸಭಟರು ನೃಪಮಂತ್ರಿಗಳಂ ಸುತ್ತಿಕೊಂಡು ಮೇಲೆಬಿದ್ದು ಆಯುಧಗಳಂ ಪ್ರಹರಿಸುತ್ತಿರಲು ಆಗ ನೃಪಮಂತ್ರಿಗಳು ಅವರ ಆಯುಧಗಳಂ ಖೇಟ್ಯಗಳಿಂ ತಡೆಯುತ, ಒಂದೊಂದು ಪೆಟ್ಟಿಗೆ ಎರಡುಮೂರು ರಾಕ್ಷಸರ ಶಿರಗಳನ್ನಿಳುಹುತ, ಹಾರಿ ಕುಪ್ಪಳಿಸುತ, ನಿಂತಲ್ಲಿ ನಿಲ್ಲದೇ ಕುಲಾಲಚಕ್ರದಂತೆ ತಿರುಗುತ್ತಲಿರುವದರಿಂ ಆ ಸಭೆಯು ಎಲ್ಲಿ ನೋಡಿದರೂ ನೃಪಮಂತ್ರಿಗಳ ಮಯವಾಗಿರುವಂತೆ ಕಾಣಿಸುತ್ತಿರಲಾಗ ರಾಕ್ಷಸಭಟರುಗಳು ಅತಿ ಕುಪಿತರಾಗಿ ತಮ್ಮಗಳ ಮೇಲೆ ಭಲ್ಯ, ಪರಶು, ಶೂಲ, ಕುಂತ, ತೋಮರ, ಗದೆಗಳಂ ಎಸೆಯುತ ಮೇಲೆಕವಿದು ಬರುವದಂ ಕಂಡು ಶುಷ್ಕಪರ್ಣರಾಶಿಯಲ್ಲಿ ಪ್ರವೇಶಿಸಿದ ಸುಂಟರುಗಾಳಿಯಂತೆ ರಾಕ್ಷಸಸಂಘದೊಳ್ಪೊಕ್ಕು ಶಿರಗಳನ್ನೀಡಾಡುತ ಖೇಟಗಳಿಂದವರ ಪ್ರಹಾರಗಳಂ ತಡೆಯುತ ಖಡ್ಗಗಳಂ ಅತಿ ವೇಗದಿಂ ಪ್ರಯೋಗಿಸಿ ರಾಕ್ಷಸರ ಶರೀರಂಗಳಂ ಛಿನ್ನಾಭಿನ್ನವಾಗಿ ಭೇದಿಸುತ್ತಿರಲು ಆ ಖಡ್ಗಪ್ರಭೆಯಿಂದ ಕೆಲವು ಕಾಲ ಕೋಟಿ ಮಿಂಚುಗಳು ಏಕವಾಗಿ ಉದಯಿಸಿದಂತೆ ಸಭೆಯಲ್ಲವೂ ಪ್ರಕಾಶಿಸುತ್ತಿರಲು; ಮತ್ತೆ ಕೆಲವು ಹೊತ್ತಿನ ಮೇಲೆ ಮುತ್ತುಗದ ಹುವ್ವಿನ ಮೊತ್ತಗಳಂತೆ ರಾಕ್ಷಸರ ಅವಯುವಗಳಿಂದುದುರುತಲಿರುವ ಮಾಂಸಖಂಡಗಳಿಂ ಹರಹಿ ರೌದ್ರವಾಗಿ ಕಾಣಿಸುತ ಮರಳಿ ನೋಡಿದರೆ ಶತಸಹಸ್ರ ಅಂಡೆಗಳಿಂದೆರಚುವ ಓಕಳಿಯ ವರ್ಷಗಳಿಂದಲೋ ಎಂಬಂತೆ ರಕ್ತಧಾರೆಗಳಿಂದ ಸಂಧ್ಯಾಸಮಯದಂತೆ ಕಾಣಿಸುತ್ತಿರುವ ಆ ಸಭೆಗೆ ಹಾರಿ ನೆಗೆಯುತ ಹಲ್ಲು ಮಸೆದು ಸಿಂಹನಾದವಂ ಮಾಡುತ ರಾಕ್ಷಸಸ್ಸಂಘವು ಬಂದುದಲ್ಲದೆ ಮರಳಿ ಹಿಂದಕ್ಕೆ ಹೋಗುವದೆಂಬುದಿಲ್ಲದೆ ನಷ್ಟವಾಗುತ್ತಿರಲು ಮತ್ತು ಆ ಸಭೆಯು ಸ್ತಂಭವಂ ಭೇದಿಸಿ ಘುಡಿಘುಡಿಸುತ ರಾಕ್ಷಸರ ತಂಡಗಳಂ ಸಂಹರಿಸುವ ನರಸಿಂಹಮೂರ್ತಿಯುಗ್ರದಿಂದುಗ್ರವಾದ ಹಿರಣ್ಯಕಶಿಪುವಿನ ಅಪೂರ್ವ ಸಭೆಯಂತೆ ತೋರುತ್ತಿರಲು ಮತ್ತೂ ಇವರೀರ್ವರೂ ಕುಳಿತು ಬಂದ ರಥವಂ ಹಿಂತಿರಿಗಿ ತೆಗೆದುಕೊಂಡು ಹೋಗುವದಕ್ಕೆ ರಾಕ್ಷಸರು ಯತ್ನವಂ ಮಾಡಿ ದವಾಗ್ನಿಜ್ವಾಲೆಗೆ ಎರಗಿದ ಪತಂಗಗಳಂತೆ ರಥವಂ ರಕ್ಷಿಸುವ ಅಸ್ತ್ರಜ್ವಾಲಾ ಕದಂಬದಿಂ ಸುಡುತ ಶರೀರಗಳು ಸೀದುಹೋಗು

ತ ರಥದ ಸಮೀಪವಂ ಸೇರಲಾರದೆ ಪಲಾಯನಂಗೈಯುತ್ತಿರಲು; ಮತ್ತೆ ಕೆಲಂಬರು ಅದೃಶ್ಯವಾಗಿ ಛಾಯಾಗುಪ್ತನು ಪ್ರಹರಿಸುವ ರಭಸದಿಂ ಎದೆವಡೆದು ರಕ್ತವಂ ಕಾರುತ ಮೂರ್ಛಿತರಾಗಿ ಬಿದ್ದು ಹೊರಳುತ್ತಿರಲು, ಆಗ ಆ ಪುರವೆಲ್ಲವು ಘೋಷಭರಿತವಾಗಿ ಗುಸುಗುಟ್ಟುತ ಗುಂಪುಗೂಡುತ ಹಾಗೆ ಬೆದರಿ ಓಡುತ ಮೂಲಾನುಮೂಲವಂ ಅರಿಯದೆ ಮನಬಂದಂತೆ ಮಾತನಾಡುತ್ತಿರುವ ರಾಕ್ಷಸರ ತಂಡಗಳಂ ಆಭರಣಗಳಂ ಮರೆಮಾಡಿ ಚಪ್ಪಳೆಗಳಂ ಹುಯ್ಯುತ ಬಾಲಕರುಗಳಂ ಬೀದಿಗೆ ಬಿಡದೆ ಬಾಗಿಲುಗಳಂ ಬಂಧಿಸುತ ಪ್ರೋಡ್ಯಾಡುತ್ತಿರುವ ಸ್ತ್ರೀರುಗಳಂ, ಅವರುಗಳಂ ಸಂತೈಸುತ್ತಿರುವ ವೀರಭಟರುಗಳಂ ಕೂಡ ವ್ಯಾಕುಲವಾಗುತ್ತಿರಲು, ಅದನ್ನೋಡಿ ಉಗ್ರಬಾಹುವು ಕೆಲವುಕಾಲ ರಾಜಮಂತ್ರಿಗಳೊಡನೆ ಖಡ್ಗಯುದ್ಧವಂಮಾಡಿ, ಬಳಿಕ ಖಡ್ಗಯುದ್ಧದಿಂದಿವರೀರ್ವರೂ ಸಾಧ್ಯರಾಗರೆಂದು ಭಲ್ಯವಂ ಪಿಡಿದು ಮೇಲ್ವರಿದು ಬರುತ್ತಿರಲದಂ ಕಂಡು ನೃಪತಿಯು ಹಾರಿ ಖಡ್ಗದಿಂದವನ ಭಲ್ಯವಂ ಇಕ್ಕಡಿಯಾಗಿ ಖಂಡಿಸಿ ತ್ವರಿತದಿಂ ಸುಮತಿಯೊಡಗೂಡಿ ರಥವನ್ನೇರಲಾಗ ಸುಮತಿಯು ಸಾರಥಿಯಂತೆ ಮುಂದೆ ಕುಳಿತು ತುರಗಗಳಂ ನೈವಡವುತ್ತಿರಲಾಗ ಸುಗಂಧರಾಜೇಂದ್ರನು ರಾಕ್ಷಸರ, ರಕ್ತಗಳಂ ನೆನೆದಿರುವ ವಸ್ತ್ರವಂ ಬದಲುಮಾಡಿ ದಿವ್ಯ ಕವಚವಂ ತೊಟ್ಟು ಛಾಯಾಗುಪ್ತನ ವಶದಲ್ಲಿ ಧನುವಂ ಬತ್ತಳಿಕೆಗಳಂಕೂಡ ತೆಗೆದುಕೊಂಡ ಧನುಸ್ಸಿಗೆ ಹೆದೆಯಂಕಟ್ಟಿ ಜ್ಯಾಘಾತವಂ ಮಾಡುತ್ತಿರಲಾಗ ಅದರಿಂದುಂಟಾದ ಝೇಂಕಾರಧ್ವನಿಯು ದಿಕ್ತಟಗಳಂ ವ್ಯಾಪಿಸುತ, ರಾಕ್ಷಸರ ಹೃದಯಗಳಂ ತಲ್ಲಣಗೊಳಿಸುತ ಭೂಭಾಗವಂ ಗಡಗಡನೆ ನಡಗಿಸುತ್ತಿರಲು, ಆ ಮಹಾಧ್ವನಿಗೆ ಬೆದರಿದ ತುರಗಗಳು ಕಡಿವಾಣಗಳಂ ಹರಿದುಕೊಂಡು ಮೇಲೆಕುಳಿತಿರುವ ರಾವುತರಂ ಕೆಡಹಿ ಕಾಲುಗಳಿಂ ತುಳಿಯುತ ದಿಕ್ಕುದಿಕ್ಕುಗಳಿಗೆ ಓಡುತ್ತಿರಲು, ಮದ್ದಾನೆಗಳು ಸರಪಣಿಗಳಂ ಹರಿದುಕೊಂಡು ಮಾವುತರಂ ಕೆಡವಿ ಸೊಂಡಲಿನಿಂ ಸೀಳುತ, ಎದುರಾಗಿ ಬರುವ ಭಟರಂ ಕೊಂಬುಗಳಿಂ ತಿವಿದು ಕಾಲುಗಳಿಂ ಹೊಸಕುತ, ಓಡಿಪೋಗಿ ಬಾಲಕರಂ ಬಾಧಿಸುತ ಆ ಪುರವಂ ವ್ಯಾಕುಲಪಡಿಸುತ್ತಿರಲಾಗ ಉಗ್ರಬಾಹುವು ರಥವನ್ನೇರಿ ಭೇದಿಸಲಶಕ್ಯವಾದ ಕವಚವಂ ಧರಿಸಿ, ಘರ್ಜಿಸುವ ಮೇಘದಂತೆ ಧನುವಂ ಸಜ್ಜುಗೊಳಿಸುತ,

ಯುದ್ಧೋದ್ಧತರಾದ ಪಟುಭಟರಿಂ ಕೂಡಿ ಬರುವದಂ ಕಂಡು ಸುಗಂಧರಾ
ಜೇಂದ್ರನು ಸಾರಥಿಯಾಗಿರುವಂತೆ ಛಾಯಾಗುಪ್ತನಿಗೆ ನಿಯಮಿಸಿ, ರಥಭಾ
ಗದೋಳ್ ಕುಳಿತು ಚಕ್ರವಂ ರಕ್ಷಿಸುತ ಯುದ್ಧವಂ ಮಾಡುವಂತೆ ಸುಮತಿ
ಗಾಜ್ಞಾಪಿಸಿ, ತಾನು ರಥದೋಳ್ ಕುಳಿತುಜ್ಯಾನಾದವಂ ಮಾಡುತ್ತಿರಲದ
ನ್ನೋಡಿ ರಾಕ್ಷಸಭಟರು ನಾಲ್ಕುಕಡೆಯಲ್ಲೂ ಮೇಘಗಳು ಉದಕಧಾರೆ
ಗಳಂ ವರ್ಷಿಸುವಂತೆ ಬಾಣಂಗಳಂ ವರ್ಷಿಸುತ ಬರುತ್ತಿರಲಾಗ, ನೃಪತಿ
ಸುಮತಿಗಳಿರ್ವರ ಚಾಪಗಳಿಂ ಹೊರಡುವ ಬಾಣಪರಂಪರೆಗಳಿಂದ ರಾಕ್ಷಸರ
ಬಾಣಂಗಳು ತುಂಡುತುಂಡಾಗಿ ಬೀಳುತ್ತಿರಲು, ಭುಜಗಳು ಕತ್ತರಿಸಿ ಭೂಮಿ
ಯೊಳ್ ಬೀಳಲು, ಹೃದಯಂಗಳು ಬಂದರಿಗಳಂತೆ ಛಿದ್ರಗಳಾಗಲು, ಇದೆ
ಲ್ಲವನ್ನೋಡಿ ಅತ್ಯಂತಕುಪಿತನಾದ ಉಗ್ರಬಾಹುವು ನಿಜಧನುವಂ ಝೇಂಕಾರ
ಗೊಳಿಸುತ ಅಪರಿಮಿತ ಬಾಣಗಳಂ ಹೂಡಿ ಸುಗಂಧರಾಜೇಂದ್ರನಮೇಲೆ ಪ್ರ
ಯೋಗಿಸುತ್ತಿರಲು, ಅವನ ಬೆಂಬಿಡಿದು ಬರುವ ಶೂರರಾದ ರಾಕ್ಷಸರಥಿಕರು
ದರ್ಪದಿಂ ಭಲ್ಲ್ಯಗಳಂ ಬೀಸುತ, ದೀರ್ಘಂಗಳಾದ ಗದೆಗಳಂ ಪ್ರಯೋಗಿಸುತ,
ತೀಕ್ಷ್ಣಂಗಳಾದ ಶೂಲಂಗಳನ್ನೆಸೆಯುತ, ಎಡ್ಡೆಡೆಗೆ ಬಾಣಂಗಳಂ ಬೀ
ರುತ ಬೊಬ್ಬಿರಿದು ಕೂಗುತ್ತಿರಲು ; ಆಗ ರಾಜಮಂತ್ರಿಗಳಿರ್ವರೂ ಆ ರಾ
ಕ್ಷಸರು ಬೀರುವ ಆಯುಧಂಗಳನೆಲ್ಲವಂ ಅತ್ಯಂತ ತೀಕ್ಷ್ಣಂಗಳಾದ ತಮ್ಮ
ಬಾಣಂಗಳಿಂ ತುಂಡುತುಂಡಾಗಿ ಕತ್ತರಿಸುತ, ಮತ್ತೂ ಒಬ್ಬೊಬ್ಬ ರಥಿಕನ
ಮೇಲೆ ನೂರು ನೂರು ಬಾಣಂಗಳಂ ಪ್ರಯೋಗಿಸುತ್ತಿರಲಾ ಬಾಣಂಗಳು
ರಾಕ್ಷಸರು ಪ್ರಯೋಗಿಸಿದ ಬಾಣಂಗಳಂ ಭೇದಿಸುತ, ಹುತ್ತವಂ ಹೋಗುವ
ಮಹಾಸರ್ಪಗಳಂತೆ ಶತ್ರುಗಳ ಹೃದಯಂಗಳಂ ಭೇಧಿಸಿಕೊಂಡು ಭೂಮಿಯಂ
ಪೊಗುತಿರಲು; ಆಗ ರಾಕ್ಷಸರು ಈ ರಾಜ ಮಂತ್ರಿಗಳು ಮನುಷ್ಯಮಾತ್ರದ
ವರಲ್ಲ, ರಾಕ್ಷಸರಂ ನಷ್ಟಗೊಳಿಸಲೆಣಿಸಿ ಕಾಲಮೃತ್ಯುವೇ ಈ ರೂಪದಿಂ
ಬಂದಿರುವದೆಂದು ಸಂಘಸಂಘವಾಗಿ ಹೇಳಿಕೊಳ್ಳುತ ಮರಳಿ ರೋಷ ಹೆಚ್ಚಿ
ಬರುವದನ್ನೋಡಿ ಛಾಯಾಗುಪ್ತನು ರಥಾಶ್ವವಂ ಚಬುಕುಮಾಡಿ ಮಂಡಲಾ
ಕಾರವಾಗಿ ತಿರಿಗಿಸುತ ನಿಂತಲ್ಲಿ ನಿಲ್ಲದೆ ಕುಲಾಲಚಕ್ರದಂತೆ ರಾಕ್ಷಸರಿಗೆ ಭ್ರ
ಮೆಯನ್ನುಂಟುಮಾಡುತ್ತಿರಲಾಗ ರಾಕ್ಷಸ ಸಂಘವು ಕಲಕಿ ನೃಪಮಂತ್ರಿಗಳ

ಬಾಣಗಳಿಂದ ಘಾಯವಡೆದು ರಕ್ತಮಸಗಿ ಪುಷ್ಪಿಸಿದ ಮುಳ್ಳುಮುತ್ತುಗದ ಮರಗಳಂತೆ ತೋರುತ ಮರಳಿ ಮರಳಿ ನೃಪಮಂತ್ರಿಗಳಮೇಲೆ ಬಾಣಂಗಳಂ ಕವಿಯುತ್ತಿರಲಾಗ ಸುಮತಿಯು ರೋಷಾವಿಷ್ಟನಾಗಿ ತನಗೆ ಉಪದಿಷ್ಟವಾದ ಮಹಾಸ್ತ್ರಮಂತ್ರದಿಂ ಬಾಣವನ್ನಭಿಮಂತ್ರಿಸಿ ಎದೆಯಲ್ಲಿ ಹೂಡಿ ರಾಕ್ಷಸರ ಸಂಘವಮೇಲೆ ಪ್ರಯೋಗಿಸಲು, ಆ ಮಹಾಸ್ತ್ರವು ಖಾಂಡವವನವಂ ದಹಿಸುವ ಅಗ್ನಿಯಂತೆ ಪ್ರಜ್ವಲಿಸುತ ಚಾಪದಿಂ ಹೊರಡುತ್ತಿರಲು ಅದರಿಂದ ಉದ್ಭವಿಸಿದ ಬಾಣಪರಂಪರೆಗಳಿಂ ಸಾಲುಸಾಲಾಗಿ ಹೊರಡುವ ಭಲ್ಲೆಗಳಿಂ, ಗುಂಪುಗುಂಪಾಗಿ ನಡೆವ ತೋಮರಗಳಿಂ, ಒಟ್ಟಾಗಿ ಬೀಳುತ್ತಿರುವ ಗದೆಗಳಿಂ, ಪಙ್ತಿಯಾಗಿ ನಡೆಯುವ ಚಕ್ರಗಳಿಂ, ರಾಕ್ಷಸರ ಶರೀರಗಳು ಛಿನ್ನಾಭಿನ್ನವಾಗುತ, ರಥಸಾರಥಿಗಳ ಶಿರಗಳು ಸಡಲಿ ಉದರುತ, ತುರಗರಾಜಗಳು ತುತ್ತುಮುರಾಗುತ, ಧ್ವಜಪತಾಕೆಗಳು ಧ್ವಂಸವಾಗುತ, ರಥಚಕ್ರಗಳು ಪುಡಿಪುಡಿಯಾಗುತ, ಅಚ್ಚುಗಳು ಮುರಿದು ನುಚ್ಚು ನುಚ್ಚಾಗುತ, ಆ ಭೂಮಿಯೆಲ್ಲವೂ ತುಂಬುತ ಚಿತ್ರವರ್ಣವಾಗುತ್ತಿರಲು ; ಆಗ ಉಗ್ರಬಾಹುವು ಅತಿತ್ವರೆಯಿಂ ಬಂದು ಮಹಾಗದೆಯಂ ಬೀಸುತ ನಿಲ್ಲು ನಿಲ್ಲೆಂದು ಘರ್ಜಿಸಿ ಸಿಹ್ಮನಾದವಂ ಮಾಡುತ್ತಿರಲವನ್ನೋಡಿ ನೃಪತಿಯು ಒಂದು ಮಹಾಶಕ್ತಿಯಿಂ ಪ್ರಯೋಗಿಸಿ ಆ ಗದೆಯಂ ಇಕ್ಕಡಿಯಾಗಿ ಖಂಡಿಸಿ ಅವನಂ ಕುರಿತು ಎಲೈ ರಾಕ್ಷಸಾಧಮನೇ ! ನಿನ್ನ ಗರ್ವವು ಇನ್ನೂ ಶಮನವಾಗದು, ಯಾವ ಆಯುಧವಿದ್ದರೂ ಪ್ರಯೋಗಿಸುವನಾಗೆಂದು ನುಡಿಯಲದಂ ಕೇಳಿ ಅತ್ಯುಗ್ರನಾದ ಉಗ್ರಬಾಹುವು ಎಲೈ ಮನುಷ್ಯಪಶುವೇ ! ಇರಕಟವಾದ ಈ ಪುರವಂ ಬಿಟ್ಟು ಪ್ರಾಕಾರದ ಹೊರಗೆ ವಿಸ್ತಾರವಾದ ರಣಭೂಮಿಯಲ್ಲಿ ನಿಲ್ಲುವನಾಗು, ನಡೆ ನಡೆ ನಿನ್ನಾಡಂಬರವನ್ನಡಗಿಸುವೆನೆಂದು ಹೇಳಲು ; ಆಗ ಸುಗಂಧ ಮಹಾರಾಜೇಂದ್ರನು, ಎಲೈ ರಾಕ್ಷಸಕೀಟವೇ ! ಶೂರರಾದವರು ಎಲ್ಲಿನಿಂತರಲ್ಲಿಯೇ ರಣಭೂಮಿಯಾಗುವದು, ಮತ್ತು ಪ್ರಾಕಾರವೆಲ್ಲಿಹುದು. ನೋಡೆಂದು ನುಡಿದು. ಅಮೋಘವಾದ ಬಾಣವಂ ತೆಗೆದು ವಜ್ರಾಸ್ತ್ರಮಂತ್ರದಿಂದ ಅಭಿಮಂತ್ರಿಸಿ ಆ ಪುರದ ಪ್ರಾಕಾರಗಳಮೇಲೆ ಪ್ರಯೋಗಿಸಲು, ಆಗ ಆ ಬಾಣದಿಂ ಕೋಟಿ ಸಿಡಿಲುಗಳು ಏಕಕಾಲದಲ್ಲಿ ಹೊರಟು ಸೋಂಕಿದ ಮಾತ್ರದಿಂದಲೇ ಗಿರಿ ಶಿಖರ

ಗಳು ಉರುಳುವಂತೆ ಐದುಸುತ್ತಿನ ಪ್ರಾಕಾರಗಳು ಒಡೆದು ಉರುಳಿಬೀಳುತ, ಅಗಳುಗಳು ಮುಚ್ಚಿಹೋಗುತ ನೆಲಸಮವಾಗುತ್ತಿರಲು ; ಅದಂ ನೋಡಿ ರಾಕ್ಷಸರು, ಇದೇನೋ ಮಹಾ ಪ್ರಳಯಕಾಲ ಒದಗಿತೆಂದು ಬಹು ಭೀತರಾಗಿ ಎಲ್ಲವಂ ಬಿಟ್ಟು ನಮಗೆ ಸಂರಕ್ಷಕರಾರೆಂದು ಹಾಹಾಕಾರಪಡುತ ದಿಕ್ಕು ದಿಕ್ಕುಗಳಿಗೆ ಪಲಾಯನವಂಗೈಯ್ಯುತ್ತಿರಲು ; ಆಗ ಪುರದ ಮಹಾಪ್ರಾಕಾರವು ನಷ್ಟವಾದುದನ್ನೋಡಿ ಉಗ್ರಬಾಹುವು ಮಹಾಗಜವಂ ತಂದು ನಿಲ್ಲಿಸುವಂತೆ ನಿಯಮಿಸಿ ದೂತರಂ ಕಳುಹಲಾಗ ಸುಗಂಧರಾಜನು ಮಹಾಗಜವಂ ಘೋರಿಗೊಳಿಸಬಾರದೆಂದರಿತು, ಮಹಾಶರವಂ ಪ್ರಯೋಗಿಸಿ ರಾಕ್ಷಸಾಧಿಪತಿಯಾದ ಉಗ್ರಬಾಹುವಿನ ಸಾರಥಿಯಂ ಛೇದಿಸಲಾಗ ಉಗ್ರಬಾಹುವು ಅತ್ಯುಗ್ರನಾಗಿ, ನೃಪತಿಗೆ ಸಾರಥಿಯಾಗಿ ಕುಳಿತಿರ್ದ ಛಾಯಾಗುಪ್ತನಮೇಲೆ ಕೆಲವು ಬಾಣಂಗಳಂ ಪ್ರಯೋಗಿಸಿ ಅವನಂ ಅಲ್ಲಿ ಕುಳ್ಳಿರಲಾರದಂತೆಮಾಡಿ, ಮತ್ತೈದು ಬಾಣಗಳಿಂದ ನೃಪನ ರಥಾಶ್ವಗಳಂ ಪ್ರಹರಿಸಲಾ ಬಾಣಪ್ರಹಾರವಂ ಸಹಿಸಲಾರದೆ ಆ ರಥಾಶ್ವಗಳು ದಿಕ್ಕುಕಾಣದೆ ಉಗ್ರಬಾಹುವಿನ ರಥವಂ ಬಳಸಿ ಬರುತ್ತಿರಲದಂನೋಡಿ ಅತಿ ಕುಪಿತನಾದ ನರಪತಿಯು, ಮಯೂರಪಿಂಛದಿಂ ಚಿತ್ರವಾಗಿ ಮಹೋರಗದಂತಿರ್ಪ ಬಾಣದಿಂದುಗ್ರಬಾಹುವಿನ ಧನುವಂ ಛೇದಿಸಲು ; ಆಗ ಕ್ರುದ್ಧನಾದ ಉಗ್ರಬಾಹುವು ತನಗೆ ವಿದ್ಯಾಗುರುವಾದ ಶೌಷ್ಕಲಕ ಋಷಿಯಿಂದ ಲಬ್ಧವಾದ ನಿತ್ಯವಲ್ಲಿಯಿಂ ಪೂಜಿತವಾದ ಘಂಟೋಪತದಿಂದಲಂಕೃತವಾದ, ಮಹೋರಗದಂತೆ ಅತ್ಯುಗ್ರವಾದ ಒಂದು ಶೂಲಾಯುಧವಂ ಪಿಡಿದು ತೂಗುತಲಿರುವವನ್ನೋಡಿ ನೃಪತಿಯು ಈ ಶತ್ರುವಿಗೆ ಇದು ಪ್ರಬಲ ಸಾಧನವೆಂದು ತಿಳಿದು, ಅಶನಿ ಎಂಬ ಅಸ್ತ್ರವಂ ಆಕರ್ಣಾಂತವಾಗಿ ಸೆಳೆದು ಶತ್ರುವಿನ ಶೂಲದಮೇಲೆ ಪ್ರಯೋಗಿಸಲಾರಾಕ್ಷಸನ ಹಸ್ತದಿಂ ದವಾಗ್ನಿಯಂತೆ ಪ್ರಜ್ವಲಿಸುತ ಬರುವ ಮಹಾಶೂಲವು ನೃಪತಿಯ ಅಶನಿ ಎಂಬ ಅಸ್ತ್ರವಂ ಅಶನವಂಮಾಡಿಕೊಂಡು ನೃಪನಮೇಲೆ ಬರುವದನ್ನೋಡಿ ಸುಮತಿಯು ಸ್ತಂಭನಾಸ್ತ್ರದಿಂದಾಶೂಲವಂ ತಡೆದು ನಿಲ್ಲಿಸಿರಲಾಗ ನೃಪತಿಯು, ಕಾಲಚಕ್ರವೆಂಬ ಮಹಾಸ್ತ್ರವಂ ಪ್ರಯೋಗಿಸಿ ಶತ್ರುವಿನ ಶೂಲವಂ ಇಬ್ಭಾಗವಾಗಿ ಛೇದಿಸಿ ಮತ್ತೊಂದು ಬಾಣವಂ ಪ್ರಯೋಗಿಸಲುದ್ಯುಕ್ತ

ನಾಗಲು, ಉಗ್ರಬಾಹುವು ತನ್ನ ಶೂಲವು ನಷ್ಟವಾದುದನ್ನೋಡಿ ಖಿನ್ನನಾಗಿ ಮಾಯಾವಿದ್ಯದಿಂ ನೃಪಮಂತ್ರಿಗಳಂ ಸಂಹರಿಸಲೆಣಿಸಿ, ಅದೃಶ್ಯನಾಗಿ ವ್ಯಾಘ್ರ ಸಿಂಹ, ವರಾಹ, ಶರಭ, ಭೇರುಂಡ, ಸರ್ಪಗಳರೂಪಗಳಂ ತೋರಿಸುತ ನೃಪ ತಿಯ ರಥದಮೇಲೆ ಕವಿದು ಬರುವವನ್ನೋಡಿ ಸುಮತಿಯು ಆ ರಾಕ್ಷಸನ ಮಾಯಾರೂಪಗಳಿಗೆ ಪ್ರತಿಕ್ರಿಯೆಗಳನ್ನಾಚರಿಸುತ್ತಿರಲಾಗ ಉಗ್ರಬಾಹುವು ತನ್ನ ಯತ್ನ ಸಾಗದೇ ಇರುವದಂ ತಿಳಿದು ನೃಪತಿಯಮೇಲೆ ವೃಕ್ಷಗಳಂ ಕಿತ್ತು ಎಸೆಯುತ, ಶಿಲಾವರ್ಷಗಳಂ ವರ್ಷಿಸುತ, ಕ್ಷಣಮಾತ್ರ ಕಾಣಿಸಿ ಕೊಂಡು, ಹಾಗೆ ಅದೃಶ್ಯನಾಗುತಲಿರುವ ರಾಕ್ಷಸನಮೇಲೆ ಕೋಪ ಉಂಟಾಗಿ ನೃಪತಿಯು ಈ ದುರಾತ್ಮನೊಡನೆ ಎಷ್ಟುಹೊತ್ತು ಹೋರ್ರಾಡುವದೆಂದು ಜಲ ಮಂಸ್ಪೃಶಿಸಿ ಶುಚಿರ್ಭೂತನಾಗಿ ಜಗದೀಶ್ವರಿಯನ್ನೆನದು ಅವರ ಪ್ರಸಾದದಿಂದ ಲಬ್ಧವಾದ ಮಹಾಸ್ತ್ರವಂ ಸ್ಮರಿಸಿ, ಅಮೋಘವಾದ ಒಂದು ಮಹಾಶರವಂ ತೆಗೆದು ಧನುಸ್ಸಿನೊಳ್ಹೂಡಿ ಶತ್ರುಗಳಾದ ರಾಕ್ಷಸರಂ ಸಂಹರಿಸಬೇಕೆಂದು ಪ್ರಾರ್ಥಿಸಿ ಬಿಡಲಾ ಮಹಾಸ್ತ್ರವು ತ್ರಿಪುರಾಂತಕನ ಫಾಲಲೋಚನಾಗ್ನಿ ಯಂತೆ ಮಹಾಜ್ವಾಲಾಮಾಲಾಯುಕ್ತವಾಗಿ, ಕೋಟಿ ಸಿಡಿಲುಗಳೆರಗಿದಂತೆ, ಧ್ವನಿಗೈಯ್ಯುತ ಪೊರಡಲದರ ರಭಸದಿಂ, ಕುಲಾಚಲಸಮೇತವಾದ ಭೂಭಾ ಗವೆಲ್ಲವು ಕಂಪಿಸುತ, ಸಮುದ್ರಗಳುಅಲ್ಲೋಲ ಕಲ್ಲೋಲವಾಗುತ, ತಾರಾ ಚಕ್ರಗಳು ಮೇರೆಮಿರಿ ತಿರುಗುತ, ಪ್ರಾಣಿ ಸಂಘಗಳುರಳಿ ನೆಲಮಂ ಕಚ್ಚುತ ನದೀ ತಟಾಕ ಜಲಗಳೆಲ್ಲವೂ ಶೋಷಿಸುತ್ತಿರುವವನ್ನೋಡಿ, ಅಂತರಿಕ್ಷಗತ ರಾದ ಸಿದ್ಧ ವಿದ್ಯಾಧರರು ಇದೇನೆಂದು ವಿಸ್ಮಯಪಡುತ್ತಿರಲಾಗ ಮಹಾಸ್ತ್ರವು ಸೋಂಕಿದ ಮಾತ್ರದಿಂ ರಾಕ್ಷಸಾಧಿಪತಿಯಾದ ಉಗ್ರಬಾಹುವು ದಗ್ಧನಾಗಿ ರಾ ಕ್ಷಸಸಂಘ ಸಮೇತವಾದ ಆ ಪುರವೂಕೂಡ ಉರಿದು ಉಡುಗಿಪೋಗಲು ; ಅದನ್ನೋಡಿ ಸುಗಂಧರಾಯನು ಇನ್ನು ವಿಳಂಬವಂಮಾಡಿದರೆ ಈ ಮಹಾ ಸ್ತ್ರವು ಪಾತಾಳಲೋಕವಂ ದಹಿಸುವದೆಂದು ತಿಳಿದು ತ್ವರಿತದಿಂದದಂ ಉಪ ಸಂಹಾರವಂ ಮಾಡಿ ಈಗಿನ ಭೂಭಾರವು ನಿವೃತ್ತವಾಯಿತೆಂದರಿತು ಭಸ್ಮೀ ಭೂತವಾದ ಆ ಪುರವನ್ನೋಡುತ, ಸುಮತಿ ಭಾಮಾಗುಪ್ತರಿಂದೊಡಗೂಡಿ ಮೊದಲಿನಂತೆ ಸುಪ್ರಭಾ ನದೀತೀರವಂ ಸೇರಿ, ಕವಚವಂ ಸಡಲಿಸಿ, ಆ ಸುಪ್ರ

ಭಾಸದ್ದೀ ಜಲದಲ್ಲಿ ಸ್ನಾನವಂಮಾಡಿ ಬಳಿಕ ವಿಶ್ರಮಿಸಿಕೊಳ್ಳುತ್ತ ಭಾಯಾ ಗುಪ್ತನಂ ಕರೆದು ಅಯ್ಯಾ ಯಕ್ಷಾಧಿಪತಿಯೆ! ಮಹಾಗಜದ ಯೋಗಕ್ಷೇಮವು ಎಂತಿರುವದು, ಮತ್ತೂ ಈ ಪುರದಲ್ಲಿ ಏನು ಉಳಿದಿರುವದು ಆದನೆಲ್ಲವಂ ತಿಳಿದು ಬಂದು ಹೇಳುವನಾಗೆನಲಾ ಯಕ್ಷನು ಮಹಾಪ್ರಸಾದವೆಂದು ಅಲ್ಲಿಂದ ತೆರಳಿ ಅಸ್ತ್ರಜ್ವಾಲೆಯಿಂದ ಪುರದ ಸುತ್ತಲೂ ಇರುವ ಉದ್ಯಾನವನಗಳು ಕೆಲವೆಡೆಯೊಳ್ ಭಸ್ಮವಾಗಿ, ಕೆಲವೆಡೆಯೊಳ್ ಇದ್ದಲಾಗಿ, ಕೆಲವೆಡೆಯೊಳ್ ಎಲೆಗಳೆಲ್ಲಾ ಕಂದಿಹೋಗಿ ವೃಕ್ಷಮಾತ್ರ ಉಳಿದಿರುವದಂ ಮತ್ತಮಲ್ಲಲ್ಲಿ ನಾನಾ ವಿಕಾರರಾದ ರಾಕ್ಷಸರು ಉರುಳಿ ಬಿದ್ದಿರುವದಂ ಕೂಡಾ ನೋಡುತ, ಹೆಜ್ಜಾನೆ ಹಿಂಡುಗಳು ಮಹಾಸ್ತ್ರಶಬ್ದದಿಂ ಗತಪ್ರಾಣಗಳಾಗಿ ಬಿದ್ದಿರುವದನ್ನೋಡಿ ಮಹಾಗಜದ ಯೋಗಕ್ಷೇಮವೆಂತಿರುವದೋ ಎಂದು ಚಿಂತಿಸುತ ಮುಂದೆ ತೆರಳಿ ಇಕ್ಷುವನಕ್ಕೆ ಪೋಗಿ, ಅಲ್ಲಿ ಏಕಾಕಿಯಾಗಿ ವ್ಯಸನಪಡುತ, ಕರಿಣಿಗಳ ವಿಯೋಗದಿಂ ಕಂಬನಿದುಂಬುತ, ತನಗೆ ಪಾಲಕರ್‍ಯಾರೆಂದು ನಾಲ್ಕು ದಿಕ್ಕುಗಳನ್ನೋಡುತ, ಗ್ರಾಸವಿಲ್ಲ ಉಪೇಕ್ಷೆಯಂ ಮಾಡುತಲಿರುವ ಮಹಾಗಜವನ್ನೋಡಿ ದೈವಯೋಗದಿಂ ಜೀವಿಸಿಕೊಂಡಿರುವದೆಂದು ತಿಳಿದು ಆಶ್ಚರಿಪಡುತ, ಅಲ್ಲಿಂದ ಹೊರಟು ವಿಮಲಪುರಿಯನ್ನೈದಿ ಆಸ್ಥಾನ, ಅರಮನೆ ಮುಂತಾದ್ದೆಲ್ಲವೂ ಭಸ್ಮವಾಗಿರುವದನ್ನೋಡುತ ಕೋಶಗೃಹದ ಬಳಿಗೆ ಬಂದು ಅಸ್ತ್ರಘಾತದಿಂ ಬಿದ್ದಿರುವ ಕೋಶಗೃಹವನ್ನೋಡಿ, ಇಲ್ಲಿ ವಿಶೇಷವೇನಿರುವದೆಂದು ಕಾಲಿನಿಂ ಕೆದಕೆ ಅಲ್ಲಿ ಸಿಕ್ಕಿದ ರತ್ನಗಳಂ ತೆಗದುಕೊಂಡು ರಾಮನಿದ್ದೆಡೆಗೆ ಬಂದು ಕೈಮುಗಿದು, ಅಯ್ಯಾ ರಾಜಶಿರೋಮಣಿಯೇ! ಮಹಾಗಜವು ಕ್ಷೇಮದಿಂದಿರುವದು, ರಾಕ್ಷಸನ ಕೋಶಗೃಹವು ಉರುಳಿ ಬಿದ್ದುದರಿಂದ ಅಸ್ತ್ರಜ್ವಾಲೆಗೆ ತಗಲದೆ ಈ ರತ್ನಗಳು ಅಮೂಲ್ಯವಾದುದರಿಂದ ದೇವತಾರ್ಪಣಗಳು ಎಂದು ಭಾವಿಸಿ ನಿನ್ನ ವಶದಲ್ಲಿರಲೆಂದು ಆ ಯಕ್ಷಾಧಿಪನ ಕೈಯಲ್ಲಿ ಕೊಟ್ಟು ಆ ಮಾರನೇದಿನ ಉಗ್ರಬಾಹುವು ನಷ್ಟನಾದುದಂ ತಿಳಿದು ಅಲ್ಲಲ್ಲಿ ಪುರವಂ ರಚಿಸಿಕೊಂಡಿದ್ದ ರಕ್ಕಸರೆಲ್ಲರೂ ಪಾತಾಳವಂ ಕುರಿತು ಪಲಾಯನಂಗೈಯ್ಯಲಾ ದ್ವೀಪವೆಲ್ಲವು ಆತಂಕರಹಿತವಾಗಿ, ಪ್ರಜೆಗಳೆಲ್ಲರೂ ಸಂತೋಷಪಡುತ್ತಿರಲು, ಇವೆಲ್ಲವಂ ತಿಳಿದ

ಅಲ್ಲಿಯ ಪೂರ್ವೀಕರಾದ ಅರಸುಗಳು ಈ ರಾಯನಂ ಅವತಾರ ಪುರುಷನೆಂದರಿತು, ತಮ್ಮಲ್ಲಿರುವ ವಸ್ತುಗಳಂತೆಗೆದುಕೊಂಡುಬಂದು ರಾಯನಂಕಂಡು ಅಭಿವಂದಿಸಿ ಕೈಕಾಣಿಕೆಗಳಂ ಒಪ್ಪಿಸಿ, ತಮ್ಮ ವೃತ್ತಾಂತವೆಲ್ಲವಂ ಪೇಳಿಕೊಳ್ಳುತ್ತಿರಲವರಂ ರಾಯನು ಸನ್ಮಾನದಿಂಕಂಡು ಅವರಂ ಕುರಿತು ಮೊದಲಿನಂತೆ ನಿಮ್ಮ ನಿಮ್ಮ ರಾಜ್ಯಗಳನ್ನಾಳುತ, ನಾವು ಪೇಳಿ ಕಳುಹಿದಾಗ ನಿಮ್ಮ ಬಳಿಯಲ್ಲಿರುವ ವಿಶೇಷವಸ್ತುಗಳಂ ಕಳುಹುವರಾಗೀ ಎಂದು ನಿಯಮಿಸಲರಸುಗಳೆಲ್ಲರೂ ಅತಿ ಸಂಭ್ರಮದಿಂ ರಾಯನಂಬಿಟ್ಟು ಪೋಗಲಾರದೆ ಆ ನದೀತೀರದಲ್ಲಿಯೇ ಇರಲು ;

ಆ ಮಾರನೇ ದಿನ ಸುಗಂಧ ರಾಯನು, ಸುಮತಿ ಭಾರ್ಯರಾಪ್ತರೊಡಗೂಡಿ ಗಜವಿದ್ದೆಡೆಗೆ ಬಂದು, ಸುಮತಿಯನ್ನೋಡಿ ಈ ಗಜವು ವಶವಾಗುವದಕ್ಕೆ ಉಪಾಯವೇನೆಂದು ಪೇಳಲಾ ಸುಮತಿಯು ತನ್ನ ಮನದೊಳ್ ಪೂರ್ವದಲ್ಲಿ ಉಗ್ರಬಾಹುವು ತನ್ನ ರಾಕ್ಷಸರೂಪವಂ ಮರೆಮಾಡಿ ಸೌಮ್ಯರೂಪವಂ ಧರಿಸಿದ್ದರಿಂ ಈ ಗಜವು ಅವನಿಗೆ ಸ್ವಾಧೀನವಾಗಿರಬಹುದು, ಆ ಸೌಮ್ಯರೂಪದಿಂದಲೇ ನಮ್ಮೊಡನೆ ಸಭೆಯಲ್ಲಿ ಸಂವಾದವಂ ಮಾಡುತ್ತಿದ್ದನು, ಆಗ ಅವನ ರೂಪವೂ, ನಮ್ಮ ರಾಯನರೂಪವೂ ಬಿಂಬಪ್ರತಿಬಿಂಬಗಳಂತೆ ಏಕರೂಪವಾಗಿ ಇದ್ದುದಾದ್ದರಿಂ ಈ ರಾಯನು ಗಜದ ಪುರೋಭಾಗದಲ್ಲಿ ನಿಂತರೆ ಗಜವು ತಾನೇ ಸ್ವಾಧೀನವಾಗುವದೆಂದು ಆಲೋಚಿಸಿ, ರಾಯನಂಕುರಿತು ಅಯ್ಯಾ ರಾಯನೇ ! ನಿನ್ನ ಗುಣಕ್ಕೆ ಯಾವದುತಾನೆ ಸ್ವಾಧೀನವಾಗಲಾರದು, ನೀನು ಈ ಐರಾವತದ ಪುರೋಭಾಗದಲ್ಲಿ ಪೋಗಿ ನಿಂತರೆ, ನಾಥರಿಲ್ಲದೇ ಕರಿಣಿ ನಿಕರಗಳ ವಿಯೋಗದಿಂ ಕ್ಲೇಶಪಡುತಲಿರುವ ಈ ಗಜವು ಸ್ವಾಧೀನವಾಗುವದೆಂದು ಬಿನ್ನವಿಸಲು, ಅದಂಕೇಳಿ ರಾಯನು ಗಜದ ಮುಂದುಗಡೆಯೊಳ್ ನಿಲ್ಲಲು, ಅವನನ್ನೋಡಿ ಅ ಮಹಾಗಜವು ಮೊದಲಿನಂತೆ ತನ್ನ ಒಡೆಯನು ಬಂದನೆಂದು ತಿಳಿದು ಸೊಂಡಲಂ ಶಿರದೊಳಿಟ್ಟು ಅಭಿವಂದಿಸಿ ಕಂಬನಿದುಂಬಲು, ಆಗ ಸುಮತಿಯು ಮಹಾಗಜವಂ ಪ್ರಸಾದಗೊಳಿಸುವ ಇರಾವತೀ ಸೂಕ್ತವಂ ಪಠಿಸಿ ಮೈದಡವುತ್ತಿರಲು, ಪ್ರಸನ್ನವಾಗಿ ಆ ಮಹಾಗಜವು ಸೊಂಡಲಿನ ಕೊನೆಯಿಂದ ಸುಮತಿಯಂ ತಡವುತ,

ಬಾರೆಂದು ಕರೆವರೆ ಸಂಗಡ ಹೋಗುತ, ಗ್ರಾಸವಂಕೊಟ್ಟರೆ ಗ್ರಹಿಸುತ ಇಛ್ಛಾನುಸಾರವಾಗಿ ನಡೆಯುತಲಿರುವವಂ ಕಂಡು, ವಶವಾಯಿತೆಂದರಿತು ರಾಜಮಂತ್ರಿಗಳೀರ್ವರೂ ಪ್ರದಕ್ಷಿಣವಾಗಿ ಬರುತ್ತಿರಲು, ಅವರನ್ನೋಡಿ ಆ ಮಹಾಗಜವು, ಇವರು ಆರೋಹಣವಂಗೈಯ್ಯುವವಕ್ಕೆ ಅಪೇಕ್ಷಿಸುವರೆಂದು ತಿಳಿದು ಮೆಲ್ಲನೆ ಕುಳಿತುಕೊಳ್ಳುತ್ತಿರಲದಂ ಕಂಡು ಸುಪ್ರೀತನಾದ ಸುಗಂಧರಾಯನು ಸುಮತಿಯು ಹಸ್ತಲಾಘದಿಂದತಿವಿಸ್ತಾರವಾದ, ಕುಳಿತುಕೊಳ್ಳುವದಕ್ಕೆ ಸುಖಕರವಾದ ಆ ಮಹಾಗಜದ ಸ್ಕಂದ ಪೀಠದಲ್ಲಿ ಕುಳ್ಳಿರಲಾಗ ಸುಮತಿಯು ಮುಂಭಾಗದಲ್ಲಿ ಕುಳ್ಳಿರಲು, ಬಳಿಕ ಆ ರಾಜಮಂತ್ರಿಗಳೀರ್ವರೂ ಆ ಘನವಂ ಬಳಸಿಬಂದು ಗಜದಿಂದಿಳಿದು ಛಾಯಾಗುಪ್ತನು ಒದಗಿಸಿಕೊಡುವ ಗ್ರಾಸವಂ ಆ ಮಹಾಗಜವು ಸ್ವೀಕರಿಸುತಲಿರುವವನ್ನೋಡಿ ಸಂತೋಷಪಡುತ, ಒಂದೆರಡುದಿವಸ ಇದೇ ರೀತಿಯಲ್ಲಿ ಗಜಾರೂಢರಾಗಿ ನದೀತೀರದಲ್ಲಿ ಸಂಚರಿಸುತ್ತಿರಲು, ಅವರನ್ನೋಡಿ ಅಲ್ಲಿರವನ್ನೋಡಿ ಅಲ್ಲಿರುವ ಅರಸುಗಳು ಈ ಮಹಾಗಜದ ನಿಮಿತ್ತವಾಗಿಯೇ ಈ ರಾಯನು ಇಲ್ಲಿದ್ದ ರಾಕ್ಷಸರನೆಲ್ಲರಂ ಸಂಹರಿಸಿರಬೇಕು, ಇದು ದೇವಗಜವಾದ್ದರಿಂದಲೇ ಪರ್ಯವಸಾನದಲ್ಲಿ ಈ ದ್ವೀಪಕ್ಕೆ ಕ್ಷೇಮವನ್ನುಂಟುಮಾಡಿತೆಂದು ತಿಳಿದು ರಾಯನಂ ಸ್ತುತಿಸುತ್ತಿರಲು, ಆಗ ರಾಯನು ಅರಸುಗಳಂ ಕುರಿತು ಐಯ್ಯಾ ಅರಸುಗಳಿರಾ ! ಧರ್ಮದಿಂ ಪ್ರಜಾಪಾಲನವಂ ಮಾಡುವರಾಗೀ ಎಂದು ಪೇಳಿ, ಆ ಖಂಡಾಧಿಪತಿಯಾದ ಸುದ್ಯುಮ್ನನೆಂಬ ಅರಸನ್ನೋಡಿ ಎಲೈ ಅರಸೇ ! ನಮ್ಮಿಂದ ಈ ಪುರವು ಶೂನ್ಯವಾಯಿತೆಂಬ ಲೋಕಾಪವಾದ ಉಂಟಾಗದಂತೆ ಮರಳಿ ಇಲ್ಲಿ ಪುರವಂ ರಚಿಸಿಕೊಂಡು ಸುಖದಿಂದಿರುವನಾಗೆಂದು ನಿಯಮಿಸಿ, ನಾವು ಜಂಬೂದ್ವೀಪವಂ ಕುರಿತು ತೆರಳುವೆವು ನಿಮಗೆಲ್ಲರಿಗೂ ಪ್ರೇಮವಿರಬೇಕೆಂದು ಪೇಳಲು, ಆಗ ಆ ಅರಸುಗಳು ಸುಗಂಧರಾಜನಂ ಸ್ತುತಿಗೈವ ಕೋಲಾಹಲ ಶಬ್ದದಿಂದ ಪ್ರದೇಶವೆಲ್ಲವು ಮುಖರಿತವಾಗುತ್ತಿರಲು ;

ಬಳಿಕ ರಾಯನು ಆ ಅರಸುಗಳಂ ಕಳುಹಿಸಿ ನದಿಯಂ ದಾಂಟಿ ಮುಂದೆ ತೆರಳುತ ಎದಿರ್ಗೊಂಡು ಬರುವ ಅರಸುಗಳ ತಂಡಗಳನ್ನೋಡಿ ಸನ್ಮಾನಗೊಳಿಸುತ ರಮಣೀಯಂಗಳಾದ ಉದ್ಯಾನ ವನಗಳಲ್ಲಿಯೂ, ಪುರಂಗಳಲ್ಲಿ

ಕರೆದು ಅಂಧಕಾರವನ್ನಡಗಿಸುವ ಜ್ಯೋತಿರ್ಲತೆ ಇದ್ದರೆ ತರುವನಾಗೆಂದು ಪೇಳಲವನು ಅಂಧಕಾರ ನಿವಾರಣಕ್ಕೆ ಸಾಧನವಿರುವಲ್ಲಿ ಬೇರೆ ಪ್ರಯತ್ನ ವ್ಯಾತಕ್ಕೆಂದು ಉಗ್ರಬಾಹುವಿನ ಭಂಡಾರದಿಂತಂದ ರತ್ನಗಳಂ ರಾಮನ ಮುಂದೆ ರಾಶಿಗೊಳಿಸಲು, ಅವುಗಳ ಪ್ರಭೆಯು ದೀಪಿಕಾ ಸಹಸ್ರವಂತೆ ಹೊಳೆಯುತ ಅಲ್ಲಿಯ ಅಂಧಕಾರವೆಲ್ಲವಂ ತೊಲಗಿಸಿ ಹಗಲಿಸಂತೆ ಮಾಡುತ್ತಿರಲು, ಮತ್ತು ಆ ಪ್ರಭೆಯಿಂದಲೇ ಆ ಸರೋವರದೊಳ್ಮುಕುಳಿತಂಗಳಾದ ಕಮಲಂಗಳೆಲ್ಲವು ವಿಕಸಿತಂಗಳಾಗಿ, ಬಿಸಲೆಂಬ ಭ್ರಾಂತಿಯಿಂದ ಚಕ್ರವಾಕ ಮಿಥುನಂಗಳು ವಿಯೋಗ ದುಃಖವಂ ಬಿಟ್ಟು ಸಂತೋಷವಂಬಟ್ಟು ಸುಖದಿಂದಿರಲು ; ಪಕ್ಷಿಗಳ ಗುಂಪುಗಳು ಗೂಡುಗಳಿಂದ ಹೊರಡುವದಕ್ಕೆ ಕಲಕಲವಂ ಮಾಡುತ್ತಿರಲು, ಇದೆಲ್ಲವಂ ನೋಡಿ ಸುಗಂಧರಾಯನು ಈ ರತ್ನಗಳು ದೇವತಾ ಯೋಗ್ಯವೇ ಹೊರ್ತು ಮನುಷ್ಯಯೋಗ್ಯಂಗಳಲ್ಲವೆಂದು ತಿಳಿಯುತ ತಳಿರುಗಳ ಹಾಶಿಗೆಯಲ್ಲಿ ಸುಖವಿಂದಿರಲು ; ಬಳಿಕ ಆ ಉದ್ಯಾನ ರಕ್ಷಕರಾದ ಯಕ್ಷರು ಇದೆಲ್ಲವನ್ನೋಡಿ ತ್ವರೆಯಿಂ ಪೋಗಿ ತಮಿಗೆ ಒಡೆಯನಾದ ಕುಬೇರನಂ ಕಂಡು ಕೈಮುಗಿದು ಯಾರೋ ನೃಪಮಂತ್ರಿಗಳೀರ್ವರೂ ಗಜಾರೂಢರಾಗಿ ಅಂತರಿಕ್ಷಮಾರ್ಗದಿಂ ಬಂದು ಸೌಗಂಧಿಕಾ ಸರೋವರದ ತೀರದೊಳಿಳಿದು ಇರುವದಂ, ಅವರುಗಳ ಸಮೀಪದೊಳ್ ರಾಶಿಗೊಳಿಶಿರುವ ರತ್ನಗಳ ಕಾಂತಿಯಿಂದ ವನವೆಲ್ಲವೂ ಬೆಳಗುತ್ತಿರುವದಂ ಕೂಡಾ ವಿಜ್ಞಾಪಿಸಲು, ಆ ಕಾಲದೊಳ್ ರಾಕ್ಷಸ ಸಂಘ ಸಮೇತನಾದ ಉಗ್ರಬಾಹುವೆಂಬ ರಾಕ್ಷಸನು ನೃಪನಂಕೆಣಕಿ ಭಸ್ಮವಾಗಿ, ಅವನ ಬಳಿಯಲ್ಲಿದ್ದ ಗಜವು ಆ ಧೊರೆಯ ಸ್ವಾಧೀನ ವಾಯಿತೆಂದು ಹೇಳಿದ ಕಿನ್ನರರ ವಾಕ್ಯವಂಕೂಡಾ ಕೇಳಿ ಏನು ವಿಶೇಷವಿರುವದು ಇದಂ ತಿಳಿಯಬೇಕೆಂದು ನಿಶ್ಚಯಿಸಿರುವ ಕುಬೇರನು ಋಷಿ ವೇಷವಂ ಧರಿಸಿ, ಮಣಿಗ್ರೀವನಂ ಶಿಷ್ಯನಂ ಮಾಡಿಕೊಂಡು, ಸ್ನಾನಾರ್ಥವಾಗಿ ಸೌಗಂಧಿಕಾ ಸರೋವರಕ್ಕೆ ಬರುವಸಂತೆ ಬರುತ್ತಿರಲಷ್ಟರೊಳ್ ಸೂರ್ಯೋದಯವಾಗಲು, ಆಗ ನೃಪಮಂತ್ರಿಗಳು ಆ ಸರೋವರದಲ್ಲಿ ಸ್ನಾನವಂಮಾಡಿ ಕುಳಿತಿರುವದಂ ಕಂಡು ಅವರ ವಶದಲ್ಲಿರುವ ಗಜವನ್ನೋಡಿ ಕುಬೇರನು ಇದು ಇಂದ್ರನಾ ಸ್ಥಾನದಲ್ಲಿದ್ದ ಪ್ರಾಚೀನವಾದ ಐರಾವತವು, ಏನುಕಾರಣ ಅವರಿಗೆ ಸ್ವಾಧೀನ

ವಾಗಿರುವವನೋ ಎಂದು ತಿಳಿಯುತ ರಾಯನಂ ದೂರದಿಂದ ದೃಷ್ಟಿಸಿನೋಡಿ ಇದೇನು ವಿಚಿತ್ರವು ಇಲ್ಲಿಗೆ ದೇವೇಂದ್ರನು ಬಂದಿರುವನು, ಮಹರ್ಷಿಯ ಶಾಪದಿಂ ಸ್ವರ್ಗವು ರಾಕ್ಷಸರ ವಶವಾಗಿ ಶಚೀ ಸಮೇತನಾದ ದೇವೇಂದ್ರನು ಭೂಲೋಕದಲ್ಲಿ ಪುಟ್ಟಿರುವನು, ಶಚೀದೇವಿಯು ಎಲ್ಲಿರುವಳೋ? ಮತ್ತು ಆತನ ವಸ್ತುಗಳು ಎಲ್ಲೆಲ್ಲಿರುವವೋ ಎಂದು ಆಲೋಚಿಸುತ, ಈತನು ಇಂದ್ರನಾದುದರಿಂದಲೇ ಪರಿವಾರ ಸಮೇತನಾದ ಮಹಾರಾಕ್ಷಸನಂ ಸಂಹರಿಸಿ ಈ ಮಹಾಗಜವಂ ಸಾಧಿಸಿಕೊಂಡು ಬಂದಿರುವನು, ಮತ್ತು ಭೂಸ್ಪರ್ಶದೋಷದಿಂದ ತನ್ನಸ್ವಭಾವವಂ ಗಜದ ಸ್ವಭಾವವಂಕೂಡ ತಿಳಿದಿರುವನೋ? ಇಲ್ಲವೋ ಎಂದು ಮನದಲ್ಲಿ ವಿಕಲ್ಪವಂಮಾಡುತ ಸಮೀಪಕ್ಕೆ ಬಂದು ಜಯಶೀಲನಾಗೆಂದು ಹರಸಲು, ಸುಗಂಧರಾಜೇಂದ್ರನು ಯಾರೋ ಋಷಿಗಳು ದರ್ಶನವಂ ಕೊಡಲೋಸುಗ ಬಂದಿರುವರೆಂದು ತಿಳಿದು ಅಭಿವಂದಿಸಿ ಉಚಿತಾಸನದಲ್ಲಿ ಕುಳ್ಳಿರಿಸಿ, ಅರ್ಘ್ಯಪಾದ್ಯಗಳಿಂದುಪಚರಿಸಿ ನಾನು ಧನ್ಯನಾದೆನು, ತಾವು ಬಂದ ಪ್ರಯೋಜನವೇನೆಂದು ಕೇಳಲು, ಕುಬೇರನು ಐಯ್ಯಾ ನೃಪೋತ್ತಮನೇ! ಈ ದೇವತಾಭೂಮಿಗೆ ಮನುಷ್ಯರು ಯಾರೂ ಬರುವದಿಲ್ಲ, ಆದ್ದರಿಂ ನೀನು ಯಾರಪುತ್ರನು, ಏನುನಿಮಿತ್ತದಿಂ ಬಂದವನಾದೆ ಎಂದು ಕೇಳಲು, ಆ ಮಾತಿಗೆ ಸುಮತಿಯು ರಾಯನ ವೃತ್ತಾಂತವೆಲ್ಲವಂ ಪೇಳಿ, ಗಜವು ಬಂದ ನಿಮಿತ್ತವಂ ಅದರಿಂದಾಗುವ ಮನೋರಥವಂ ಕೂಡ ತಿಳುಹಿಸಲು, ಇದೆಲ್ಲವಂ ಕೇಳಿದ ಋಷಿ ವೇಷದ ಕುಬೇರನು ಕಳಿಂಗರಾಜನ ಪುತ್ರಿಯೇ ಶಚೀದೇವಿಯಾಗಿರಬಹುದು, ಈ ಗಜದ ಪಣನಿಮಿತ್ತವಾಗಿ ಶಚೀ ದೇವೇಂದ್ರರಿಗೆ ಸಂಬಂಧ ಉಂಟಾಗಿ ಧರ್ಮಕಂಟಕರಾದ ರಾಕ್ಷಸರು ನಷ್ಟವಾಗಿ ದೇವ ಕಾರ್ಯ ನೆರವೇರುವದಕ್ಕೋಸುಗ ಈಶ್ವರನು ಸಂಕಲ್ಪಿಸಿರುವನು, ಆದ್ದರಿಂ ಮಹರ್ಷಿ ಶಾಪವು ಲೋಕಾನುಗ್ರಹಾರ್ಥವಾಗಿ ಆದುದಲ್ಲದೇ ಇಂದ್ರನಂ ಭಂಗಪಡಿಸುವದಕ್ಕೆ ಉಂಟಾಯಿತೆಂದು ಪೇಳಕೂಡದೆಂದರಿತು ರಾಯನಂ ಮನುಷ್ಯಯೋಗ್ಯವಾದ ಸ್ತುತಿಗಳಿಂ ಸ್ತುತಿಸುತ, ಐಯ್ಯಾ ರಾಯನೇ! ಸ್ನಾನಾರ್ಥವಾಗಿ ನಾವು ಇಲ್ಲಿಗೆ ಬರುವದುಂಟು, ನಮ್ಮ ವಾಸಗೃಹವು ಸಮೀಪದಲ್ಲಿಯೇ ಇರುವದು, ಮರ್ಯಾದಾಪಾಲಕನಾದ ನಿನ್ನಂನೋಡಿ ಬ್ರಾಹ್ಮಣ್ಯದ ಯೋಗಕ್ಷೇಮಕ್ಕೆ

ನೀನು ಬಾಲ್ಯದಿಂದಾರಿತು ನಿನ್ನೊಡನೆ ಸಲ್ಲಾಪವಂಮಾಡಿ ಸಂತುಷ್ಟರಾದೆವೆಂದು ಹೇಳುತ್ತಿರುವ ಋಷಿಶ್ರೇಷ್ಠನ ರೀತಿಯನ್ನೋಡಿ ಐಯ್ಯಾ ಮಹಾನುಭಾವನೆ! ನಿನ್ನ ಸನ್ನಿಧಾನದರ್ಶನಕ್ಕೆ ನಾನು ಮಾರ್ಗಸ್ಥನಾಗಿ ಬಂದಿರುವೆನು, ನನಿಗೆ ದರ್ಶನವಂ ಪಾಲಿಸಿದ ಬ್ರಾಹ್ಮಣರು ರಿಕ್ತಹಸ್ತದಿಂ ತಿರುಗಲಿಲ್ಲ, ಆದ್ದರಿಂ ಈಗ ನನ್ನ ಬಳಿಯಲ್ಲಿರುವ ದಿವ್ಯರತ್ನಶಕಲಗಳಂ ಒಪ್ಪಿಸಿಕೊಂಡು ನಾನು ಮಾಡುವ ನಮಸ್ಕಾರಗಳಂ ಸುಪ್ರೀತನಾಗಿ ತೆರಳಬಹುದೆಂದು ಹೇಳಿ, ಸುಮತಿಯಂ ಕರೆದು ನನ್ನಲ್ಲಿರುವ ಮಣಿಗಳಂ ಇವರಿಗೆ ಸಮರ್ಪಿಸುವನಾಗೆನಲು, ಆಗ ಸುಮತಿಯು ಉಗ್ರಬಾಹುವಿನ ಭಂಡಾರದ ರತ್ನಗಳಂ ತಂದು ಋಷಿಯ ಮುಂದೆ ರಾಶಿಗೆಳಿಸಲು, ಅದನ್ನೋಡಿ ಸಂತುಷ್ಟನಾದ ಋಷಿಯು ರಾಯನಂ ಕುರಿತು ನಿತ್ಯಂ ಶ್ರೀಮಂತನಾಗೆಂದು ಆಶೀರ್ವಾದವಂಮಾಡಿ ಮಣಿಗಣವಂ ಮಣಿಗ್ರೀವನ ಕೈಯಲ್ಲಿ ಕೊಟ್ಟು ಅದರಲ್ಲಿ ಮೂರು ಮಣಿಗಳಂ ಹೊರತಾರೆನೆಂದು ಬಿಸುಟು, ಐಯ್ಯಾ ದಾನಶೂರನಾದ ರಾಯನೇ! ಜಯಶೀಲನಾಗೆಂದು ಮತ್ತು ಹರಸಿ ಅಂತರ್ಧಾನನಾಗಲು; ಅದನ್ನೋಡಿ ಸುಮತಿಯು ಐಯ್ಯಾ ನೃಪೋತ್ತಮನೇ! ಇದೇನೊ ವಿಶೇಷವು ಇರುವದು, ಬ್ರಾಹ್ಮಣರು ಬಿಟ್ಟು ಹೋಗಿರುವ ಮಣಿಗಳು ನಮಿಗೆ ಯೋಗ್ಯವಾಗವೇ ಎನಲು, ರಾಯನು ಯೋಗ್ಯವಾದ್ದರಿಂದಲೇ ನಮಿಗೆ ಒಪ್ಪಿತವೆಂದು ಉಪೇಕ್ಷಿಸಿದವರಂತೆ ಬಿಟ್ಟು ಹೋದರು ಎನಲು, ಅದಂಕೇಳಿ ಸುಮತಿಯು, ಅದೇನು ರಹಸ್ಯವಿರುವದು ಹೇಳೆನಲು, ಆ ಮಾತಿಗೆ ಸುಗಂಧರಾಯನು ಆ ಋಷಿಗಳು ದೇವತೆಯಾಕದೇ ಕುಳಿತಿರ್ದುದೇ ಅವರ ರಹಸ್ಯವೆನಲು, ಆಗ ಸುಮತಿಯು, ಐಯ್ಯಾ ರಾಯನೇ! ಅವರು ಯಾವ ದೇವತೆಗಳು ಎನಲು, ಆಗ ರಾಯನು ಈ ಪ್ರದೇಶವನ್ನಾರು ಆಳುವರೋ ಅವರೇ ಬಂದಿದ್ದರೆಂದು ಹೇಳಲು, ಅದಂ ಕೇಳಿ ಸುಮತಿಯು ರತ್ನನಿಮಿತ್ತವಾಗಿ ಕುಬೇರನು ಬಂದು ರಾಯನ ಚಿತ್ತರೀತಿಯಂ ಪರೀಕ್ಷಿಸಿ ಹೋದನು, ಇದು ಏನು ನಿಮಿತ್ತವೋ ಎಂದು ಮನದೊಳೆಣ್ಣಿಸಿ ಆ ಮೂರು ರತ್ನಗಳಂ ಭಾಂಡಾಗುಪ್ತನ ವಶವಂ ಮಾಡಿ ಅವನಂ ಕುರಿತು ಇಲ್ಲಿರುವ ದೇವತಾ ಯೋಗ್ಯಗಳಾದ ಫಲ ಪುಷ್ಪಗಳಂ ತರುವನಾಗೆಂದು ಆಜ್ಞಾಪಿಸಲವನು ತಂದು ಒಪ್ಪಿಸಿದ ಫಲಗಳನ್ನಾಸ್ವಾದಿಸಿ, ಬಳಿಕ ರಾಜ ಮಂತ್ರಿಗಳಿರ್ವರೂ ಗಜಾರೋಹಣವಂಮಾಡಿ ಗಜವಂ

ಪ್ರೇರಿಸಲು, ಆಗ ಛಾಯಾಗುಪ್ತನ ಬೆಂಬಿಡಿದು ಅಂತರೀಕ್ಷದೋಳ್ ಪೋಗು ತ್ತಿರಲು, ಆಗ ಛಾಯಾಗುಪ್ತನು ರಾಮನಂ ಕುರಿತು ಐಯ್ಯಾ ರಾಜಶ್ರೇಷ್ಠನೆ ! ಇದುಕೊ ಕೈಲಾಸಪರ್ವತಕ್ಕೆ ಸಮಾಸವಾಗಿ ಕಾಣಿಸುವದೇಕಿಂಪುರುಷವರ್ಷದ ಹೇಮಕೂಟ ಪರ್ವತವು, ಇದೇ ಚಿತ್ರರಥನೆಂಬ ಗಂಧರ್ವರಾಜನಿಗೆ ಅನುಚರ ರಾದ ಗಂಧರ್ವರ ಪುರವು, ಇದಕ್ಕೆ ದಕ್ಷಿಣದೇಶದಲ್ಲಿ ಮನುಷ್ಯ ಗಂಧರ್ವರಿರು ವರು ಎಂದು ಪೇಳುತ ಮುಂದೆ ತೆರಳಿ, ಅದುಕೋ ಮಹರ್ಷಿ ಸಿದ್ಧ ದೇವತೆ ಗಳಿಗೆ ನಿವಾಸಸ್ಥಾನವಾದ ಹಿಮಾಚಲವು, ಇದೇ ಗಂಗೋತ್ಪತ್ತಿಗೆ ಮೂಲವಾದ ಬಿಂದು ಸರೋವರವು, ಮತ್ತು ಮಣಿಮಯಗಳಾದ ಶಿಖರಗಳಿಂ ಶೋಭಿಸು ವದೇ ಉಮಾದೇವಿಯ ಶಯನಗೃಹವು, ಇದೇ ವ್ಯಾಸವಸಿಷ್ಠಾದಿ ಋಷಿಗಳ ಆಶ್ರಮವು ಎಂದು ಪೇಳುತ ಮುಂದೆ ತೆರಳಿ ಇದೇ ಭರತ ಖಂಡವು, ಇದಕ್ಕೆ ಮರ್ಯಾದಾ ಪರ್ವತವೇ ಹಿಮಾಚಲವು, ಅಲ್ಲಿಂದ ಪಶ್ಚಿಮಕ್ಕೆ ಮ್ಲೇಂಛರು ಹೂಣಾದಿಗಳ ದೇಶಂಗಳು, ಇದಕೋ ಶುಕ್ತಿಮಂತವೆಂಬ ಕುಲಾಚಲವು, ಅದೇ ಆರ್ಯಾವರ್ತವು, ಇದುಕೋ ಗಂಗಾನದಿಯು, ಇದೇ ಯಮುನಾನದೀ ಸಂಗಮ ವಾದ ಪ್ರಯಾಗಕ್ಷೇತ್ರವು, ಇದಕ್ಕೆ ಪಶ್ಚಿಮದಲ್ಲಿ ಕಾಣುವದೇ ವಿಂಧ್ಯ ಪರ್ವ ತವು, ಇಲ್ಲಿಂದ ಮುಂದೆ ದಕ್ಷಿಣಕ್ಕೆ ದಂಡಕಾರಣ್ಯವು ಎಂದು ತೋರಿಸಲದ ನ್ನೋಡುತ ಸುಗಂಧರಾಯನು ಗೋದಾವರೀ ನದೀ ಮಾರ್ಗಗೊಂಡು ಬರುತೆ ಕಳಿಂಗದೇಶಾಭಿಮುಖವಾಗಿ ಪೊರಟು ಮಣಿಖಚಿತ ಕನಕ ಕಲಶ ಧ್ವಜ ತೋರ ಣಾದಿಗಳಿಂದ ಅಲಂಕೃತವಾದ ವಿಜಯನಗರದ ಸಮೀಪಕ್ಕೆ ಬಂದು ಆ ಮಹಾ ಗಜವಂ ಭೂಮಿಗೆ ಇಳುಹಿಸಿ ಬರುತ್ತಿರಲು, ಆ ಮಹಾ ಗಜದ ಗಂಡಸ್ಥಲದಿಂ ಜಾರಿ ಬೀಳುತ್ತಿರುವ ಮದೋದಕಧಾರಾ ಪರಿಮಳವು ವಿಜಯನಗರವೆಂಬ ಪುರವಂ ವ್ಯಾಪಿಸಲದರಿಂ ವಿಹ್ವಲಂಗಳಾದ ಸಕಲ ರಾಜರ ಸೇನಾಗಜಂಗಳು ಮದಹೆಚ್ಚಿ ಸರಪಣಿಗಳಂ ಒದರಿ ಕಿತ್ತುಕೊಂಡು ಮಾವುತರಿಗೆ ದಕ್ಕದೆ ಹುಚ್ಚು ಹಿಡಿದಂತೆ ದಿಕ್ಕು ದಿಕ್ಕುಗಳಿಗೆ ಓಡ್ಯಾಡುತ್ತಿರಲು ; ಮತ್ತು ಛಾಯಾಗುಪ್ತನ ಬಳಿಯಲ್ಲಿರುವ ದೇವ ಯೋಗ್ಯಂಗಳಾದ ಪುಷ್ಪಗಳ ಪರಿಮಳವು ಆ ಪುರವಂ ವ್ಯಾಪಿಸಿ ಪೌರಜನಂಗಳಿಗೆ ವಿಸ್ಮಯವನ್ನುಂಟುಮಾಡುತ, ಮತ್ತೊಂದು ಪರಿ ಮಳ ದ್ರವ್ಯಗಳಲ್ಲಿಯೂ ಗಂಧವೇ ಇಲ್ಲದಂತೆ ಮಾಡುತ, ಆಘ್ರಾಣಿಸುವ

ರಿಗೆ ಶಿರೋವೇದನೆಯನ್ನುಂಟುಮಾಡುತ, ಉಪವನ ಪುಷ್ಪಂಗಳಲ್ಲಿ ಮಧುಪಾನವಂ ಗೈಯ್ಯುತ್ತಲಿರುವ ಮಧುಕರ ನಿಕರಂಗಳನ್ನಾಕರ್ಷಿಸುತಲಿರುವ ಸಮಯದೋಳ್, ಮಹಾಗಜದ ಕೊರಳೊಳಳವಡಿಸಿರುವ ಮಣಿ ಘಂಟಾನಿನಾದವು ಆ ಪುರವನೆಲ್ಲವಂ ತುಂಬುತ್ತಿರಲದಂ ಕೇಳಿ ಕಳಿಂಗ ರಾಜನ ಅಂತಃಪುರದ ಸ್ತ್ರೀರುಗಳು ಮಹಾ ಘಂಟಾನಿನಾದವು ಎಲ್ಲಿಯದೆಂದು ಆಶ್ಚರ್ಯಪಡುತ, ಉನ್ನತಂಗಳಾದ ಪ್ರಾಸಾದ ಶಿಖರಗಳನ್ನೇರಿ ನೋಡುತ್ತಿರಲು, ಆಗ ನಡೆದು ಬರುವ ಕೈಲಾಸಪರ್ವತವೋ? ಎಂಬಂತ ಅಮೃತ ಲಾಭಾರ್ಥವಾಗಿ ದೇವಾಸುರರಿಂ ಮಥಿಸಲ್ಪಟ್ಟ ಕ್ಷೀರಸಾಗರದ ವಿಮಲತರಮಾದ ಫೇನಸಮುದಾಯವೋ? ಎಂಬಂತೆ ಪುಂಜೀಭೂತಮಾದ ಚಂದ್ರಿಕಾ ನಿಕರಗಳೋ? ಎಂಬಂತಿರುವ ಚತುರ್ದಂತಂಗಳಿಂ ಅತ್ಯಂತ ಶುಭ್ರಮಾದ ಅಮೃತದ ಡಿಂಡೀರಮಂಡಲಗಳೋ? ಎಂಬಂತಿರುವ ಕುಂಭಸ್ಥಲಗಳಿಂದಲೂ ಕೂಡಿ ವಿರಾಜಿಸುತ, ಮತ್ತು ಶರೀರದಿಂ ಕೂಡಿ ನಡದುಬರುವ ಕ್ಷೀರವಾರಾಶಿಯ ಯಶೋರಾಶಿಯೋ ಎಂಬಂತೆ ಹೊಳೆಯುತ್ತಿರುವ ಮಹಾಗಜವಂ ಕಂಡು, ರಾಜಶಿರೋಮಣಿಯಾದ ಸುಗಂಧರಾಜನು ಯಾವದೇಶವನ್ನೋ ಜೈಸಿ ಅಲ್ಲಿಯ ಅರಸುಗಳ ಯಶಸ್ಸನ್ನೇ ಗಜರೂಪವಂಮಾಡಿ ತಂದಿರಬೇಕೆಂದು ನಿಶ್ಚಯಿಸುತ್ತಿರಲು, ಆಗ ರಾಜಮಂಡಲವೆಲ್ಲವೂ ಎದುಗೊಂಡು ಪೋಗಿ ಸಾಲಾಗಿನಿಂತು ಕರಗಳಂ ಮುಗಿಯುತ ಸ್ತುತಿಸುತ್ತಿರಲವರಂ ರಾಯನು ಕುಶಲವಂಕೇಳುತ ಬಿಡಾರದ ಬಳಿಗೆ ಬಂದು ಸುಮತಿಯೊಡನೆ ಗಜದಿಂದಿಳಿದು ಪ್ರದಕ್ಷಿಣವಾಗಿ ಬಿಡಾರವಂ ಹೊಂದುತ್ತಿರಲು, ಆಗ ಆ ಗಜದದೇಹಕಾಂತಿ ಸಮೂಹವು ಚಂದಿರನಿಗೆ ಪರಿವೇಷ ಉಂಟಾದಂತೆ ಆ ಪ್ರದೇಶವಂ ವ್ಯಾಪಿಸಿ, ಮತ್ತು ಗಂಗಾತರಂಗಗಳಿಂ ವ್ಯಾಪ್ತಮಾದ ಶ್ವೇತದ್ವೀಪದಂತೆ ಮಾಡುತ್ತಿರಲು, ಅದಂ ನೋಡಿದ ಪುರಜನರು ಪರಮಸಂತೋಷರಾಗಿ ರಾಯನಂ ಸ್ತುತಿಸುತ್ತಿರಲು, ಆಗ ಸುಗಂಧರಾಜನು ಕಳಿಂಗ ರಾಜಾಂತಃಪುರಕ್ಕೆ ಹೇಳಿ ಕಳುಹಿಸಿ ಚಿತ್ರಲೇಖೆಯಂ ಕರತರಿಸಲವಳು ಬಂದು ರಾಯನಂಗಭಿವಂದಿಸಿ ನಮ್ಮ ದೇವಿಯು ತಮ್ಮ ಪಾದಪಂಕೇರುಹಂಗಳಿಗೆ ಶಿರವಂ ಬಾಗಿರುವೆನೆಂದು ವಿಜ್ಞಾಪಿಸಿರುವಂತೆ ನಿಯಮಿಸಿರುವಳೆಂದು ಬಿನ್ನವಿಸಲು, ಅದಂ ಕೇಳಿ ಅವಳಂ ಸನ್ಮಾನದಿಂ ಕಂಡು ಅವಳಂ

ಕುರಿತು, ಎಲೈ ಸಖೀರನ್ನಳೆ! ನಿಮ್ಮ ದೇವಿಯು ಕ್ಷೇಮದಿಂದಿರುವಳೇ, ಅವಳು ಅಪೇಕ್ಷಿಸಿದಂತೆ ಮಹಾಗಜವು ಬಂದಿರುವದು, ಇದು ದೇವತಾಯೋಗ್ಯವಾದುದರಿಂದ ಗೌರೀದೇವಿಯೇ ಈ ವಸ್ತುವಿನಲ್ಲಿ ಸನ್ನಿಹಿತಳಾಗಿರುವಳು ಅದರಿಂದಿದು ಪೂಜಾಯೋಗ್ಯವು, ಈ ಅರ್ಥವಂ ನಿಮ್ಮ ದೇವಿಗೆ ತಿಳುಹುಸುವಳಾಗು ಮತ್ತು ನಾವು ಪರಮ ಪ್ರೇಮದಿಂದಾಲಿಂಗಿಸಿ ಕುಶಲವಂ ಕೇಳಿದೆವೆಂದು ತಿಳುಹಿಸುವಳಾಗು, ರಾಜ ಶಿರೋಮಣಿಯಾದ ಮತ್ತು ಪತ್ನೀಜನ ಸಮೇತನಾಗಿರುವ ನಿಮ್ಮ ರಾಯಂಗೆ ಅಭಿನಂದಿಸಿದೆನೆಂದು ಬಿನ್ನೈಸುವಳಾಗು, ಇದುಕೋ ಸೌಗಂಧಿಕಾದಿ ಸರೋವರದ ಸೌಗಂಧಿಕಾ ಕುಸುಮಂಗಳು, ಇವು ಸಾಧಾರಣ ಜನಗಳಿಗೆ ದುರ್ಲಭಂಗಳು, ಮತ್ತು ಎಂದಿಗೂ ಕಂದದೆ ಮಹಾ ಪರಿಮಳ ಭರಿತಂಗಳಾಗಿ ಮುಡಿದವರ್ಗೆ ಹರ್ಷಕರಂಗಳಾಗಿರುವವು, ಈ ಕುಸುಮಂಗಳಂ ನಾನೇ ಮುಡಿಸಿದೆನೆಂದು ಪೇಳಿ ಸರಸವಾದ ಮುಡಿಗೆ ಮುಡಿಸುವಳಾಗು, ಇದಂ ದೇವಿಯು ಮುಡಿದುದರಿಂದಲೇ ಸೌಗಂಧಿಕವೆಂಬ ಈ ಪುಷ್ಪದ ನಾಮವು ಸಫಲವಾಗುವದು, ಮತ್ತು ಅಮೋಘಂಗಳಾದ ಈ ಫಲಂಗಳಂ ನಾನು ಪ್ರೇಮದಿಂ ಕಳುಹಿಸಿದೆನೆಂದು ನಿಮ್ಮ ಒಡತಿಗೆ ಒಪ್ಪಿಸುವಳಾಗು, ಮತ್ತು ನಿನ್ನ ಬೆಂಬಿಡಿದು ಈ ಮಹಾಗಜವು ಬರುವದು ನೋಡಿ ಇದಂ ಪೂಜಿಸಲಿ ಎಂದು ಪೇಳಿ ಸಖಿಯಾದ ಚಿತ್ರರೇಖೆಗೆ ಉಚಿತವಾಗಿ ಅಮೂಲ್ಯವಾದ ವಸ್ತ್ರಭೂಷಣಾದಿಗಳಂ ಕೊಡಿಸಿ ಪ್ರೇಮದಿಂ ಗಲ್ಲವಂ ನೇವರಿಸಿ ಎಲೈ ಸಖೀಶಿರೋಮಣಿಯಾದ ಚಿತ್ರರೇಖೆಯೇ! ನೀನು ತೆರಳಬಾರೆಂದು ಕಳುಹಿಸಲು, ಆಗ ಚಿತ್ರರೇಖೆಯು ಮಹಾಪ್ರಸಾದವೆಂದು ರಾಜೇಂದ್ರನಿಗೆ ನಮಸ್ಕರಿಸಿ ರಾಯನು ಕೊಟ್ಟ ವಸ್ತ್ರಭೂಷಣಾದಿ ಸಮಸ್ತ ವಸ್ತುಗಳಂ ತೆಗೆದುಕೊಂಡು ಅಂದಳದಲ್ಲಿ ಕುಳಿತು ವೇಗದಿಂ ದೇವಿಯ ಸಮೀಪವಂ ಕುರಿತು ತೆರಳಲು; ಬಳಿಕ ರಾಯನು ಆ ಗಜಕ್ಕೆ ಯೋಗ್ಯವಾದ ಮಾವುತನನ್ನಿಯಮಿಸಿ, ಆ ಗಜವಂ ಶೃಂಗರಿಸಿ ಯೋಗ್ಯರಾದ ಅಧಿಕಾರಿಗಳಂ ಕರೆಸಿ ಅವರಂ ಕುರಿತು ನೀವು ಈ ಮದಗಜವಂ ಕಳಿಂಗಪತಿಯಾದ ವಿಜಯವರ್ಮರಾಯನ ಆಸ್ಥಾನದಬಳಿಯಲ್ಲಿ ನಿಲ್ಲಿಸಿ ದೇವಿಯು ಮಾಡುವ ಗಜನೋಂಪಿಗೆ ನಾವು ಇದಂ ಕಳುಹಿಸಿದೆವೆಂದು ಪೇಳಿ ಬಳಿಕ ಅಪ್ಪಣೆಯಂಗೊಂಡು ಬರುವದೆಂದು ಆಜ್ಞಾಪಿಸಲು, ಆಗ ಮಹಾಗ

ಜವ ಉಭಯಪಾರ್ಶ್ವದಲ್ಲಿಯೂ ರಾಯನ ಚತುರಂಗಬಲವು ಸಾಲ್ಪರಿದು ನಡೆಯುತ್ತಿರಲು, ರತ್ನದ ಕಾಲುಕಡಗಗಳಿಂದಲೂ, ನವರತ್ನಗಳಿಂದ ರಚಿಸಿದ ಮೇಲುಹೊದ್ದಿಕೆಯಿಂದಲು, ನಕ್ಷತ್ರಪಂಜ್ತಿಗಳಂತೆ ಒಪ್ಪುವ ಮುಕ್ತಾಮಯ ತಾರಕಾಭರಣಂಗಳಿಂದಲೂ, ಉಭಯ ಪಾರ್ಶ್ವಗಳಲ್ಲಿಯೂ ಸೂರ್ಯಚಂದ್ರರಂತೆ ಕಂಗೊಳಿಸುವ ಮಹಾಘಂಟೆಗಳಿಂದಲೂ ಎಡೆಗೆಡೆಗೆ ಅಲಂಕರಿಸಿದ ಕಿರುಘಂಟೆಗಳ ಸರಂಗಳಿಂದಲು, ವಜ್ರದ ಬಾವುಲಿಗಳಿಂದಲು, ರತ್ನದ ಮುಖಪಟ್ಟಿಗಳಿಂದಲು, ಪದ್ಮರಾಗದಿಂ ರಚಿಸಿದ ದಂತಕಟ್ಟುಗಳಿಂದಲು, ಮುಕ್ತಾಮಯವಾದ ಚಂದ್ರಸೂರ್ಯಾ ಭರಣಂಗಳಿಂದಲೂ ಅಲಂಕೃತವಾಗಿ, ರತ್ನಸಾನುಗಳಿಂ ರಂಜಿಸುವ ಮಹಾಮೇರುಪರ್ವತದಂತೆ ಗಾಂಭೀರ್ಯದಿಂ ಆ ಗಜಾಧಿಪತಿಯು ಮೆಲ್ಲಮೆಲ್ಲನೆ ತೆರಳುತ್ತಿರಲು, ಆನಕ ಭೇರಿ ನಿಸ್ಸಾಣ ಕಾಹಳಾದಿ ವಾದ್ಯಂಗಳು ಭೋರೆಂದು ಮೊರೆಯುತ್ತಿರಲು, ವಂದಿಮಾಗಧರು ಹಸ್ತಗಳನ್ನೀಡಿ ಬಗೆ ಬಗೆಯಾಗಿ ಹೊಗಳುತ್ತಿರಲು, ಚಾಮರ ಶ್ವೇತಚ್ಛತ್ರ ಮೊದಲಾದರಾಜಬಿರುದುಗಳಂ ಪಿಡಿದವರು ಮುಂದೆ ಸಾಲು ಸಾಲಾಗಿ ನಡೆಯುತ್ತಿರಲು, ನೂತನವಾಗಿ ಕ್ಷೀರ ಸಾಗರದಿಂದುದ್ಭವಿಸಿ, ದೇವಸೇನಾಪರಿವೃತವಾಗಿ ಬರುವ ಇಂದ್ರನ ಐರಾವತದ ಪ್ರತಿಬಿಂಬವೋ ಎಂಬಂತೆ ಪೌರಜನರೆಲ್ಲರೂ ಸಂಘೀಭವಿಸಿ ನೋಡುತ್ತಿರಲು; ಆ ಮಹಾ ಗಜವಂ ನೋಡುವ ಕುತೂಹಲದಿಂ ಪುರಸ್ತ್ರೀಯರೆಲ್ಲರೂ ಪ್ರಾಸಾದವನ್ನೇರಿ ವಿವಿಧ ಸಲ್ಲಾಪಗಳನ್ನಾಡುತ ವಿಸ್ಮಿತರಾಗಿರಲು, ರಾಯನಿಂದಾಜ್ಞಪ್ತರಾದ ಅಧಿಕಾರಿಗಳು ಆ ಮಹಾಗಜವಂ ಸಂತೈಸುತ ಕರದುಕೊಂಡುಪೋಗಿ ಕಳಿಂಗರಾಯನ ಆಸ್ಥಾನದ ಬಳಿಯಲ್ಲಿ ನಿಲ್ಲಿಸಿ ಆ ರಾಯನಂ ಕಂಡು ಕೈಮುಗಿದು ಸುಗಂಧ ರಾಜೇಂದ್ರನು ಪೇಳಿದ ವಾಕ್ಯವಂ ವಿಜ್ಞಾಪಿಸಲು, ಅದಂಕೇಳಿ ವಿಜಯವರ್ಮರಾಯನು ಸಂತೋಷಭರಿತನಾಗಿ ಆ ಅಧಿಕಾರಿಗಳಂ ಉಚಿತ ವಸ್ತ್ರಾಭರಣಗಳಿಂದುಪಚರಿಸಿ ಬಳಿಕ ಗಜಾಧಿಪತಿಯ ರೀತಿಯನ್ನೋಡಿ ಅದರ ನೆಲೆಯುಂ ಹೀಗೆಂದು ನಿಶ್ಚೈಸುವದಕ್ಕೆ ಅಶಕ್ಯವಾದುದರಿಂದ ಆಶ್ಚರ್ಯ ಸಂತೋಷಗಳಿಂ ಯುಕ್ತನಾಗಿ ಸಮೀಪದಲ್ಲಿರುವ ಅಂತಃಪುರದ ಕಂಚುಕಿಯನ್ನೋಡಿ ಅಂತಃಪುರದ ರಾಣಿಯರು ಗಜರಾಜನಂ ಪೂಜಿಸಲಿ ಎಂದು ಪೇಳಿ ಕಳುಹಲು, ಆ ಮಾತಂ ಕೇಳಿ ಅಲ್ಲಿದ್ದಜನರೆಲ್ಲರೂ

ಮೆಲ್ಲಮೆಲ್ಲನೆ ಹೊರಡುತ್ತಿರಲು, ಅಷ್ಟರಲ್ಲಿಯೇ ಚಿತ್ರಲೇಖೆಯು ಪುಷ್ಪ ಫಲಂಗಳಂ ತಂದು ಸೌಗಂಧಿಕಾದೇವಿಗೆ ಒಪ್ಪಿಸಿ ಸುಗಂಧರಾಜನು ಹೇಳಿದ ಮಾತುಗಳಂ ಹೇಳಿ ಮಹಾ ಗಜವು ಆಸ್ಥಾನದ ಬಳಿಯಲ್ಲಿ ಬಂದಿರುವದೆಂದು ಹೇಳಲು ಅದಂ ಕೇಳಿ ಸೌಗಂಧಿಕಾದೇವಿಯು ದೇವತಾಯೋಗ್ಯಂಗಳಾದ ಆ ಫಲಪುಷ್ಪಂಗಳನ್ನೋಡಿ ಪ್ರೇಮೋತ್ತಮನೇ ಪತಿಯಾಗಿ ಬಂದನೆಂದು ತಿಳಿದು ದೇವತಾ ಪೂಜಾಕಾಲದಲ್ಲಿ ನಿತ್ಯದೊಳ್ ತಂದು ಒಪ್ಪಿಸಿರೀ, ಸಮರ್ಪಣಗಳಾದ ಕುಸುಮಂಗಳಂ ಮುಡಿವೆವು ಎಂದು ಸಖೀ ಜನರಿಗೆ ನಿಯಮಿಸುತ್ತಿರಲು, ಆಗ ಕಂಚುಕಿಯು ಬಂದು ತನ್ನ ರಾಯನು ಹೇಳಿದ ಅರ್ಥವಂ ರಾಣಿಯರಿಗೆ ತಿಳುಹಿಸಲು, ಆಗ ಎಲ್ಲರೂ ಸಂಭ್ರಮದಿಂದ ಅಲಂಕೃತರಾಗಿ ಬಂದು ಗಜರಾಜನಂ ಸುತ್ತುವರಿದು ನಿಂತು ಅದರ ಸೌಂದರ್ಯ ಸೊಬಗುಗಳನ್ನೋಡುತ್ತ ವಿಸ್ಮಿತರಾಗಿರಲು, ಸೌಗಂಧಿಕಾದೇವಿಯು ಆ ಮಹಾ ಗಜವನ್ನೋಡಿ ವಿಸ್ಮಯಪಡುತ್ತ ಈ ಗಜದ ಸೌಂದರ್ಯ ರೀತಿಗಳು ಮಹಾ ಕವಿಗಳಿಂದಲೂ ಕೂಡ ಬಣ್ಣಿಸಲಶಕ್ಯಂಗಳು, ಉಳಿದವರ ವಾಙ್ಮನಗಳಿಗೆ ಶಕ್ಯವೆಂತಹುದು ಎಂದು ತಿಳಿದು ಆ ಗಜರಾಜನಿಗೆ ಷೋಡಶೋಪಚಾರ ಪೂಜೆಯಂ ಮಾಡಿ ನೀರಾಜನವಂಗೈದು ಮೂರು ಬಾರಿ ಪ್ರದಕ್ಷಿಣೆಯಂ ಮಾಡಿ ನಮಸ್ಕರಿಸಿ ನಿತ್ಯದಲ್ಲಿಯೂ ಇದಂ ಪುರೋಹಿತರು ಪೂಜಿಸುತ್ತಿರಲೀ ಎಂದು ನಿಯಮಿಸಿ ಎಂದಿನಂತೆ ಅಂತಃಪುರವ ಪೊಕ್ಕಳು, ಎಲ್ಲರೂ ಗಜವಂ ಪ್ರದಕ್ಷಿಣೆಯಂ ಮಾಡಿ ನಮಸ್ಕರಿಸಿ ಸ್ವಸ್ಥಾನವನೈದಿದರೆಂಬಲ್ಲಿಗೆ * * * * * *

ಗದ್ಯ॥ ಕುಂಡಲಿಶಯನಖಂಡಪರಶುಪುಂಡರೀಕಭವಾಖಂಡಲಪ್ರಮುಖನಿಖಿಲಸುರವರಪರಿಭವ ಪರಿಣತ ಪ್ರಚಂಡ ಬಲ ಚಂಡ ಮುಂಡ ಖಂಡನ ನಿಪುಣ ಕೋದಂಡಕಾಂಡಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲ ಭಾಷಾಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾನಿಸ್ತುಲಾಯು ನಿರ್ಮಾಣ ಧೌರೇಯ ಘಟಿಕಾಶತಗ್ರಂಥ ದಿನದಿನಪ್ರಬಂಧನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನ ಸೂತ್ರ ಸುಚರಿತ್ರ ಚಾಮರಾಜ ಮಹಾರಾಜ ಪುತ್ರ ನರಪತಿ ಬಿರುದ ಮಹಿಶೂರ ಪುರವರಾಧೀಶ ಶ್ರೀ ಕೃ

ಷ್ಣರಾಜಬಡೆಯುರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ಈ ನವೀನಕೃತಿಯೊಳ್ ಸುಗಂಧರಾಜೇಂದ್ರನು ಗಜಪಣವಂ ಸಾಧಿಸಿದನೆಂಬ ಹದಿನೈದನೇ ಆಶ್ವಾಸನಿರೂಪಣಕ್ಕೆ ಮಂಗಳಮಹಾ. ಶ್ರೀ

ಹದಿನೈದನೇ ಅಧ್ಯಾಯ ಸಂಪೂರ್ಣ.

---

ಶ್ರೀರಸ್ತು

## ಹದಿನಾರನೇ ಅಧ್ಯಾಯ ಪ್ರಾರಂಭ.



ಪೂರ್ವದೊಳ್ ದೂರ್ವಾಸನೆಂಬ ಮಹಾ ಮುನೀಶ್ವರನ ಶಾಪದ್ದೆಸೆಯಿಂದ ಮಹೇಂದ್ರನು ಭೂಲೋಕದೊಳ್ ಅವತರಿಸುವದಕ್ಕೆ ಉದ್ಯೋಗಿಸಲು ಅವನ ಆರೋಹಣಕ್ಕೆ ಯೋಗ್ಯವಾದ ಕ್ಷೀರಸಮುದ್ರದೊಳ್ ಲಕ್ಷ್ಮೀಚಂದ್ರಸಹೋದರನಾಗಿ ಉದ್ಭವಿಸಿದ ಉಚ್ಚೈಶ್ರವಸ್ಸೆಂಬ ಅಶ್ವರತ್ನವು ತನ್ನ ಒಡೆಯನಾದ ಪುರಂದರನಿಗೆ ಮಹರ್ಷಿಯ ಶಾಪದ್ದೆಸೆಯಿಂದ ಭೂಲೋಕದೊಳ್ ಜನಿಸುವದಂ ತಿಳಿದು ತಾನು ಒಡೆಯನಿಲ್ಲದೆ ಅತಿ ದುಃಖದಿಂದ ಪತಿಯಿಲ್ಲದ ಸತಿಯಂತೆ ಸೂರ್ಯನಿಲ್ಲದ ಕಿರಣದಂತೆ ಚಂದ್ರನಿಲ್ಲದ ಕಾಂತಿಯಂತೆ ಒಡೆಯನಿಲ್ಲದ ರಾಜ್ಯದಂತೆ ಮನದೊಳ್ಕೊರಗುತ ಕಂಬನಿಯಂ ತುಂಬಿ ಹಂಬಲಿಸುತ ನನಗೆ ಅಧಿಪತಿಯಾದ ಮಹೇಂದ್ರನಿಲ್ಲದ ಬಳಿಕ ಆತನ ಆರೋಹಣಕ್ಕೆ ಯೋಗ್ಯವಾದ ನಾನು ಈಗ ದುಷ್ಟ ರಾಕ್ಷಸರ ವಶವಾಗಿ ಅವರಂ ವಹಿಸುವ ಮಹಾ ಕಷ್ಟವಂ ನಾನೆಂತು ಸಹಿಸುವೆನು, ಮಾನವಂತರಿಗೆ ಅವಮಾನ ಬರುವಲ್ಲಿ ಸ್ಥಾನವಂ ಬಿಟ್ಟು ಪಲಾಯನವಂ ಮಾಡಿ ದೇಶಾಂತರದೊಳ್ ಕಾಲವಂ ಕಳಿಯುತ್ತಿರುವದು ಉತ್ತಮೋತ್ತಮವೆಂದು ಊಹಿಸಿ ಭೂಲೋಕದೊಳ್ ಜಂಬೂದ್ವೀಪದಲ್ಲಿ ಜಾಬಾಲಿಯೆಂಬ ಋಷಿಯ ಆಶ್ರಮವು ಇರುತ್ತಿಹುದು. ಅಲ್ಲಿ ರಾಕ್ಷಸರ ಉಪದ್ರವಗಳು, ಮಾಯೋಪಾಯಂಗಳು ಕೂಡಾ ನಡೆಯಲಾರವು ಆದ್ದರಿಂದ ಆ ಪುಣ್ಯಾಶ್ರಮವಂ ಶೇರಿ ಕೆಲವುಕಾಲವಲ್ಲಿದ್ದು ನನ್ನ ಒಡೆಯನಾದ ಪುರಂದರನು ಪೂರ್ವದಂತೆ ಆಧಿಪತ್ಯವಂ ತಾಳಿದ ಬಳಿಕ ಆತನ ಪಾದಸೇವೆಗೆ

ಯೋಗ್ಯವಾಗಿ ಮೆರೆವುವಾ ಎಂದು ನಿಶ್ಚೈಸಿ ಅಮರಾವತಿಯಿಂ ವೇಗದಿಂ ತೆರಳಿಬರುವಾಗ ಚಲಿಸುವ ನವರತ್ನದ ಕಲ್ಕಿಯಿಂದೊಡಗೂಡಿದ ಸುಮ್ಮಾನ ಗರಿಯಿಂ ಕಟ್ಟಿರುವ ವಜ್ರದ ಹಣೆ ಚಂದ್ರಬೊಟ್ಟಿನಿಂ ಧಗಧಗಿಸಿ ಮೆರೆವ ಪದ್ಮರಾಗದ ಮೊಖವಾಡದಿಂ, ಬಳ್ಳಿ ಮಿಂಚುಗಳಿಗೆ ಮಿಂಚಾಗಿರುವ ಕುಂದಣದ ಕಡಿವಾಣದಿಂ ಕದಲುವ ಕುರುಚು ಕಿವಿಗಳ ಪಾರ್ಶ್ವದೊಳ್ ನಲಿವ ಸಣ್ಣ ಕರ್ಣಚಾಮರಂಗಳಿಂ, ಪಣೆಯೊಳ್ ಮಣಿಗಳಂ ಧರಿಸಿದ ಶೇಷನ ಮರಿಗಳಂತೆ ಹೊಸದಿರುವ ಮಣಿಯ ಕೊಪ್ಪುಗಳಿಂದೊಪ್ಪುವ ಜಡೆಗಳೊಡನೆ ವಿರಾಜಿಸುವ ನಿರಾಜಿಯ ಕಸೆಗಳಿಂ, ಕುಲಿಕ್ಯಾಡುವ ಮುತ್ತಿನ ಸರಗಳಿಂದೊಡಗೂಡಿ ನಾನಾವಿಧ ರತ್ನಗಳಿಂ, ವಿಜಾತೀಯವಾಗಿ ಕೆತ್ತಿರುವ ಪದಕ ಸಾಲುಗಳಿಂ. ಬಾಲಸೂರ್ಯಮಂಡಲದಂತೆಸೆವ ಹಲ್ಲಣದ ಅಂಚಿನೊಳ್ ಸುತ್ತುವರಿದು ಬಿಟ್ಟಿರುವ ಮುತ್ತಿನ ಬಲೆಗಳಿಂ, ಇದರ ನಾಲ್ಕುಕಡೆಯೊಳ್ ತೂಗ್ಯಾಡುವ ಚಮರೀ ಮೃಗದ ಝುಲ್ಲಿಗಳಿಂ, ಮುಂಭಾಗದೊಳ್ ಮುತ್ತಿನ ಸರಗಳಂ ಚೌಕಳಿಯಾಗಿ ಪೆಣೆದು ಕಟ್ಟಿರುವ ದಟ್ಟಿಯಿಂ, ಬಿಳಿಯ ನವಿಲಿನ ಪಿಂಛದಂತೆ ನಲಿದಾಡುವ ಪುಚ್ಛವಂ, ಹಲ್ಲಣವಂ ಕೂಡ ಅನುಸರಿಸಿ ಬಿಗಿದು ಕಟ್ಟಿರುವ ಕಮಲದ ಮೊಗ್ಗುಗಳ ತಂಡದಂತೆ ಸಾಲ್ಗೇರಿಸಿರುವ ನವರತ್ನದ ಗುಬ್ಬಿಗಳಿಂ ಒಪ್ಪಿದ ಪಟ್ಟಿಗಳಿಂ, ಕರ್ಣದಿಂ ಪಾದಪರಿಯಂತವಾಗಿ ಬಿಟ್ಟಿರುವ ಬಿಡಿಮಣಿಗಳ ಪೋಣಿಸಿದ ಬಿರುದು ಕುಚ್ಚುಗಳಿಂ, ಕಲಕಲಧ್ವನಿಯುಂ ಮಾಡುವ ಕನಕ ಗಗ್ಗರಿಗಳಿಂ, ಮುಂಭಾಗದ ಪಾದಗಳೊಳ್ ಧರಿಸಿದ ಪಚ್ಚೆಯ ಪಾದ ಪೆಂಡ್ಯಗಳಿಂ, ಪದ್ಮರಾಗವಂ ಕಡದು ಮಾಡಿದ ಪಾಕಶಾಸನನ ಪಾದಪದ್ಮಗಳಂ ಇರಿಸುವದಕ್ಕೆ ಯೋಗ್ಯವಾದ ಪವಾಡಗಳಿಂ ಒಪ್ಪಿ ಮತ್ತೂ ವಾಯುವೇಗ ಮನೋವೇಗಂಗಳೆಂಬ ಪಕ್ಷಗಳಂ ತಾಳಿ ಅತಿ ಶುಭ್ರಮಾದ ಸರ್ವಲಕ್ಷಣಯುಕ್ತವಾದ ಬಟ್ಟುಗೂಡಿದ ಬೆಳದಿಂಗಳಂತಿರುವ ಸತ್ಯಲೋಕದಿಂದಿಳಿದು ಬರುವ ರಾಜಹಂಸದಂತೆಸೆವ ಘೂಳಿಯಿಂ ಹೊರಳಿ ವೇಗದಿಂ ಜಗುಳಿ ಬೀಳುವ ದೇವಗಂಗೆಯ ತರಂಗವಂತೆ ವಿರಾಜಿಸುವ ಆ ಸುರತುರಂಗವು ಗಗನದಿಂ ಬರುತ ದಿಕ್ಕುವಿದಿಕ್ಕುಗಳಂ ತನ್ನ ಕಾಂತಿಯಿಂ ಬೆಳಗಿಸುತ್ತ ಭೂಲೋಕವನ್ನೈದಿ ಜಾಬಾಲಿ ಆಶ್ರಮದ ಸಮೀಪದೊಳಿರುವಸೀಪವನದೊಳಿದು ಹ್ರಸ್ವಭಾವವಂ ತಾಳಿ ಭೂಲೋಕದ ಅಶ್ವಗಳೊಳ್ತ್ತನೊಂದು ಉತ್ತ

ಮೂಶ್ವದಂತೆ ರೂಪುಗೊಂಡು ಅಲ್ಲಲ್ಲಿರುವ ಎಳೆಗರಿಕೆಗಳಂ ಮೆಲ್ಲಮೆಲ್ಲನೆ, ಮೇಯುತ್ತ ದಿಕ್ಕುದಿಕ್ಕುಗಳನ್ನೋಡುತ ಉತ್ಸಾಹದಿಂ ಹೇಷಾರವವಂಗೈಯುತ ಅಮರಾವತಿಯ ಅವಸ್ಥೆ ಏನಾಯಿತೋ ಎಂದು ನೋಡುವಂತೆ ಆಕಾಶವನ್ನೋಡುತ ಮಂಡಲಾಕಾರವಾಗಿ ಸವ್ಯಾಪಸವ್ಯವಾಗಿ ತಿರಗುತ ನದಿಗಳಂ ಹಾರುತ ಬಯಲು ಭೂಮಿಯೊಳ್ ಘೂಳಿಯಂತೆ ಧಾಳಿಯಂಗೈಯುತ ಸ್ವೇಚ್ಛೆಯಿಂ ವಿಹರಿಸುತ್ತಿರಲು, ಜಾಬಾಲಿ ಎಂಬ ಋಷಿಯು ನಿಜಾಶ್ರಮ ಸಮೀಪದೊಳ್ ಉತ್ತಮೋತ್ತಮವಾದ ಆ ಅಶ್ವವು ಬಂದು ನಿಂದಿರಲದಂಕಂಡು ಇದು ಉಚ್ಚೈಶ್ರವಸ್ಸೆಂದರಿತು ಇದರಿಂದ ಮುಂದೆ ನಡೆಯುವ ಕಾರ್ಯವಿಶೇಷಂಗಳಂ ಅವರ ಪರಿಯಂ ಕೂಡ ತಿಳಿದು ಮತ್ತೂ ಈ ಅಶ್ವಕ್ಕೆ ರಾಕ್ಷಸರ ಬಾಧೆ ತಗಲವಂತೆ ಅವರ ಸಂರಕ್ಷಣೆಯಲ್ಲಿ ಪೂರ್ಣದೃಷ್ಟಿಯನ್ನಿಟ್ಟು ಆದರಿಸುತ್ತಿರಲು;

ಇತ್ತಲಾ ಕಳಿಂಗದೇಶದೊಳ್ ಸುಗಂಧರಾಜನು ಸೌಗಂಧಿಕಾದೇವಿಗೆ ಗಜಗೌರೀ ನೋಂಪಿಗೋಸುಗ ಚತುರ್ದಂತಗಳುಳ್ಳ ಶುಭ್ರವಾದ ದಿವ್ಯ ಗಜವಂ ತಂದು ಎರಡನೆ ಪಣವಂಗೆದ್ದು ಮೂರನೇ ದಿನ ಸೂರ್ಯೋದಯವಾಗುತ್ತಲೇ ತನಿಗೆ ಬಿಡಾರವಾದ ಗೃಹದೊಳ್ ಮಣಿಮಂಚದಿಂದೆದ್ದು ಶುಭವಸ್ತುಗಳನ್ನೋಡಿ ಬಳಿಕ ಮಜ್ಜನ ಗೃಹವಂ ಪೊಕ್ಕು ಪನ್ನೀರುಗಳಿಂದ ಮಜ್ಜನವಂ ಮಾಡಿ ಪೀತಾಂಬರವನ್ನುಟ್ಟು ನಿತ್ಯಕರ್ಮವಂ ಮಾಡಿ ಷಡ್ರಸೋಪೇತವಾದ ಅನ್ನವಂ ಭುಂಜಿಸಿ ಕಪ್ಪುರವೀಳ್ಯವಂ ಮೆಲ್ಲುತ ಅಲಂಕರಿಸಿದ ರಥದೊಳ್ ಕುಳಿತು ತನ್ನ ಬಿಡಾರದಿಂ ಪೊರಮಟ್ಟು ಕಳಿಂಗರಾಯನ ಮಂದಿರಕ್ಕೆ ಬರುತ್ತಿರಲಾ ಕಾಲದೊಳ್ ಕಳಿಂಗಪತಿಯಾದ ವಿಜಯವರ್ಮರಾಯನು ಸುಗಂಧರಾಜೇಂದ್ರನಂ ಎದುರ್ಗೊಂಡು ಬಂದು ಸಭಾಮಂಟಪಕ್ಕೆ ಕರತಂದು ಸಿಂಹಾಸನದೊಳ್ ಕುಳ್ಳಿರಿಸಲಾಗ ಸುಗಂಧರಾಜನು ಮಿತ್ರನಾದ ಸುಮತಿಯ ಮೊಗವಂ ನೋಡಲು, ಸುಮತಿಯು ಕಳಿಂಗರಾಯನಂ ಕುರಿತು ಎಲೈ ಭೂಪತಿಯೇ! ನಿಮ್ಮ ಪುತ್ರಿಯಾದ ಸೌಗಂಧಿಕಾದೇವಿಯು ಹೇಳಿದ ನಾಲ್ಕುದಂತಗಳುಳ್ಳ ಸರ್ವಲಕ್ಷಣಗಳಿಂದೊಪ್ಪುವ ಆನೆಯಂ ನಮ್ಮ ಸುಗಂಧಮಹಾರಾಯನು ತಂದಿತ್ತು ಪಣವಂಗೆದ್ದನು ಇನ್ನೇನು ಪಣವು ಬೇಕೆಂದು ಸೌಗಂಧಿಕಾದೇವಿಯ ಚಿತ್ತದೊಳಿರುವದೋ ಅದಂ ತಿಳಿದು ಹೇಳಬೇಕೆನಲು, ಅದಂ ಕೇಳಿ

ಕಳಿಂಗರಾಯನು ಎಲೈ ಸುಮತಿಯೇ, ಮಹಾತ್ಮನಾದ ಈ ಚಕ್ರಾಧೀಶ್ವರನಿಗೆ ಯಾವಕಾರ್ಯವು ಅಸಾಧ್ಯವಾಗಿರುವದು ಇನ್ನೇನುಕಾರ್ಯವನ್ನಾದರೂ ಲೀಲಾಮಾತ್ರದಿಂದಲೇ ನೆರವೇರಿಸುವನು ಇದರೊಳ್ ಸಂದೇಹಮಿಲ್ಲ ನನ್ನ ಪುತ್ರಿಯು ಪುಣ್ಯಕ್ಕೆಣೆಯುಂಟೆ, ಎಂದು ನುಡಿದು ಬಳಿಕ ಅಂತಃಪುರದ ಬಾಗಿಲೊಳ್ಕಾದಿರುವ ಕಂಚುಕಿಗಳಂ ಕರೆದು ಎಲೈ ಕಂಚುಕಿಗಳಿರಾ! ದೀರ್ಘಸುಮಂಗಲಿಯಾದ ನಮ್ಮ ಸೌಗಂಧಿಕಾದೇವಿಯಂ ಈ ಆಸ್ಥಾನದ ಸಭಾಮಂಟಪಕ್ಕೆ ಕರತರುವದೆಂದು ಅಪ್ಪಣೆಯಂ ಕೊಡಲು; ಆಗ ಆ ಕಂಚುಕಿಗಳು ಮಹಾಪ್ರಸಾದವೆಂದು ವೇಗದಿಂ ತೆರಳಿ ಕಳಿಂಗರಾಯನು ಅಪ್ಪಣೆಯಂ ಕೊಟ್ಟ ವೃತ್ತಾಂತವಂ ಅವನಮಗಳಾದ ಸೌಗಂಧಿಕಾದೇವಿಗೆ ಬಿನ್ನವಿಸಲಾಕ್ಷಣವೆ ಸೌಗಂಧಿಕಾದೇವಿಯು ತನ್ನಪ್ರೇಮಸಖಿಯಾದ ಚಿತ್ರಲೇಖೆಯಹಸ್ತವಂ ಪಿಡಿದು ಮತ್ತು ಅನೇಕ ಸ್ತ್ರೀಯರುಗಳೊಡನೆ ಸಭಾಮಂಟಪದಉತ್ತರಭಾಗದೊಳ್ ಕಟ್ಟಿರುವಕಾಂಡಪಟದಮರೆಯೊಳ್ ಬಂದುರತ್ನಪೀಠದಲ್ಲಿಕುಳಿತು ಆನೆಯಂತಂದಸುಗಂಧರಾಜನ ಪರಾಕ್ರಮವಂ ನೆನನೆನದು ಈಮನೋಹರಾಂಗನಂಗಲೇಖೆಯಂತೆರೆದು ಗವಾಕ್ಷದೊಳ್ ಆಡಿಗಡಿಗೆನೋಡುತ ಆನಂದಭರಿತಳಾಗಿ ತನ್ನಸಖಿಯಂಕುರಿತು ಎಲೈಚಿತ್ರಲೇಖೆಯೆ ! ಮಹಾರಾಜನಾದ ತ್ರಿಖಂಡವಲ್ಲಭನಾದ ಸುಗಂಧರಾಜೇಂದ್ರನಿಗೆನಾನು ಅಭಿವಂದಿಸಿದೆನೆಂದುವಿಜ್ಞಾಪನೆಯಂ ಮಾಡಿನನ್ನಪ್ರತಿಜ್ಞಾಪೂರ್ತಿಯಂಮಾಡುವದಕ್ಕೆ ನೀನೇ ಸಮರ್ಥನಲ್ಲದೆ ಈಧರಣಿಯೊಳ್ ಅಸಾರನಾದಮತ್ತೊಬ್ಬ ರಾಜನಿಂಸಾಧ್ಯವಲ್ಲ, ಆದ್ದರಿಂನನ್ನಲ್ಲಿ ದಯವಿಟ್ಟು ಆನೆಯಂತಂದಿತ್ತಂತೆನಾನುಮಾಡುವ ಜಯಲಕ್ಷ್ಮಿವ್ರತಕ್ಕೋಸುಗಲೋಕಾತಿಶಾಯಿಯಾಗಿ ಅತಿಶುಭ್ರವಾಗಿ ಸರ್ವಲಕ್ಷಣಯುಕ್ತವಾಗಿ ವರ್ಣಾಂತರದ ಕೂದಲುಬಂದಾದರೂಇಲ್ಲದೆ ವಾಯುವೇಗಮನೋವೇಗಯುಕ್ತವಾದರೆಕ್ಕೆಗಳಿಂದೊಡಗೂಡಿ ಮತ್ತೂ ರಾವುತನ ಮನವೇಕಡಿವಾಣವಾಗಿಉಳ್ಳಬಂದು ಅಶ್ವವಂನಾನು ಅಪೇಕ್ಷಿಸಿರುವೆನು, ಈಪ್ರತಿಜ್ಞಾಪೂರ್ತಿಯುಕೂಡ ನಿನ್ನಿಂದಲೇ ನೆರವೇರಬೇಕೆಂದು ಆಸ್ಥಾನದಲ್ಲಿ ಮಿತ್ರಜನರೊಡನೆ ಸಿಂಹಾಸನದಲ್ಲಿ ಕುಳಿತಿರ್ದ ಸುಗಂಧರಾಜೇಂದ್ರನಂಕೇಳುವಂತೆ ಚಿತ್ರಲೇಖೆಯೊಡನೆ ಪೇಳಲಾಚಿತ್ರಲೇಖೆಯು ತೆರೆಯಮುಂದುಗಡೆ

ಯೊಳ್ಬಂದುನಿಂತು ಸುಗಂಧರಾಜೇಂದ್ರನಿಗೆ ಪ್ರಣಾಮವಂ ಮಾಡಿರಾಜಪುತ್ರಿಯಾದಸೌಗಂಧಿಕಾದೇವಿಯು ಅಪ್ಪಣೆಯಂ ಕೊಟ್ಟಪರಿಯಂಬಿನ್ನವಿಸಲಾಗ ಸುಗಂಧಮಹಾರಾಜೇಂದ್ರನು ಆಮಾತಂ ಪ್ರೇಮದಿಂಲಾಲಿಸಿ ದೇವಿಯಪ್ರಾಣಸಖಿಯಾದಚಿತ್ರಲೇಖೆಯಂ ಕುರಿತುಎಲೈ ಸಖೀಶಿರೋಮಣಿಯೇ ! ನೀನುಪೇಳಿದ ಶುಭ್ರವರ್ಣವಾದ ಸರ್ವಲಕ್ಷಣಯುಕ್ತವಾದಈಅಶ್ವವಂ ತರುವದೇನಚ್ಚರಿಯು ಈಪ್ರತಿಜ್ಞಾಪೂರ್ತಿಯಂ ನಾನುಕ್ಷಣಮಾತ್ರದಿಂ ನೆರವೇರಿಸುವೆನೆಂದು ಅಪ್ಪಣೆಯನ್ನಿತ್ತು ಕಳಿಂಗರಾಜನುಭಕ್ತಿಯಿಂಒಪ್ಪಿಸಿದ ಉಡುಗೆರೆಗಳಂ ಸುತ್ತುವೀಳ್ಯವಂಕೂಡಕೈಕೊಂಡು ಆಸ್ಥಾನದಿಂದೆದ್ದುತನ್ನಪರಿವಾರದೊಡಗೂಡಿ ಬಿಡಾರವಂನೈದಿಸ್ವಲ್ಪ ವಿಶ್ರಮಿಸಿಕೊಂಡುಬಳಿಕ ಪ್ರಿಯಮಿತ್ರನಾದ ಸುಮತಿಯಂ ಮುಖ್ಯಸೇನಾಪತಿಯಾದ ವೀರಸೇನನಂಗುರುವಾದವಿದ್ಯಾಸಾಗರನಂ ಕೂಡಕರೆಯಿಸಿ ಇವರೊಡಗೂಡಿ ಮಂತ್ರಾಲೋಚನಾ ಯೋಗ್ಯವಾದರಹಸ್ಯಸ್ಥಲವನ್ನೈದಿ ಅವರೊಡನೆ ಯಥೋಚಿತವಾಗಿ ಕುಳಿತು ಸೌಗಂಧಿಕಾದೇವಿಯು ಪ್ರತಿಜ್ಞೆಯಂಮಾಡಿದ ಅರ್ಥವಂಪೇಳಲು ಅದಂಕೇಳಿವಿದ್ಯಾ ಸಾಗರನುಎಲೈ ಮಹಾರಾಜವಂಶಾಂಬುಧಿ ರಾಕಾಶಶಾಂಕನೇ!ಕೇಳು, ಭೂಲೋಕದೊಳ್ ಕೆಲವುದೇಶಂಗಳೊಳ್ ಅಶ್ವಂಗಳು ಪುಟ್ಟುವವು ಅದರಲ್ಲಿ ಆರಟ್ಟದೇಶದಲ್ಲಿ ಪುಟ್ಟಿದ ಅಶ್ವಂಗಳು ಅತಿಪ್ರಸಿದ್ಧಂಗಳಾಗಿರುವವು ಅದರಲಕ್ಷಣವಂ ಮತ್ತುನಾನಾದೇಶಂಗಳೊಳಿರುವ ಅಶ್ವಲಕ್ಷಣಂಗಳಂ ಉತ್ತಮಾಧಮಂಗಳಾದಸುಳಿಗಳವಿವರವಂ ಜಾತಿಗಳಂ ಗತಿವಿಶೇಷಂಗಳಂ ಕೂಡಪೇಳುವೆನು ಅದಂಲಾಲಿಸಿಸಾವಧಾನಚಿತ್ತನಾಗಿರೆಂದುಪೇಳಿ ಅಶ್ವಶಾಸ್ತ್ರವಂ ವಿವರಿಸಲುದ್ಯೋಗಿಸಿ ಎಲೈಸ್ವಾಮಿಯಾದ ಸುಗಂಧರಾಜೇಂದ್ರನೇ!ಪೂರ್ವದೊಳ್ ಅಮೃತದಿಂದಲೂ ಬಾಷ್ಪೋದಕದಿಂದಲೂ ಅಗ್ನಿಯಿಂದಲೂ ದೇವತೆಗಳಿಂದಲೂ ಅಂಡದಿಂದಲೂ ಗರ್ಭದಿಂದಲೂ ಸಾಮವೇದದಿಂದಲೂ ಅಶ್ವಗಳಉತ್ಪತ್ತಿಯು ಏಳುಪ್ರಕಾರವಾಗಿ ಹೇಳ್ಪಡುವದು.ಅದೆಂತೆನೆ, ಪೂರ್ವದಲ್ಲಿ ಕ್ಷೀರಸಮುದ್ರದದೆಶೆಯಿಂದ ಉಚ್ಚೈಶ್ರವಸ್ಸೆಂಬಹೆಸರುಳ್ಳ ಅಶ್ವವುಪುಟ್ಟಿತು ಮತ್ತೂ ಬ್ರಹ್ಮದೇವನ ಮುಖದಿಂದಲೂ ಅಗ್ನಿಯನಾಲಿಗೆಯಿಂದಲೂ ಇವರುಗಳ ಹಸ್ತಗಳಲ್ಲಿ ಬಾಷ್ಪೋದಕಗಳುಸ್ರವಿಸಿದವು ಆಬಾಷ್ಪೋದಕಂಗಳಲ್ಲಿ ಮೂರುಅಶ್ವಗಳು ಆವಿರ್ಭವಿಸಿದ

ವು ಯುಗಪ್ರಾರಂಭದಲ್ಲಿ ಈಮೂರು ಅಶ್ವಗಳುಬಾಷ್ಪೋದಕಂಗಳಿಂದಪುಟ್ಟಿ
ದವು ಮತ್ತೂ ಪೂರ್ವದಲ್ಲಿ ಪದ್ಮೋತ್ಪನ್ನನಾದ ಬ್ರಹ್ಮನಿಂದಾ ಹೋಮಮಾ
ಡಲ್ಪಡುವಅಗ್ನಿಯದೆಶೆಯಿಂದ ಬಂದುಅಶ್ವವು ಆವಿರ್ಭವಿಸಿತು. ಈಅಶ್ವಬಂದೆಅ
ಗ್ನಿಜನ್ಯವಾದದ್ದು ಇದಲ್ಲದೆ ಪೂರ್ವದೋಳ್ ಇಂದ್ರಾದಿದಿಕ್ಪತಿಗಳು ನವಪ್ರ
ಜೇಶರಂತೆ ಸೃಷ್ಟಿವ್ಯಾಪಾರದೋಳ್ ಪ್ರವರ್ತಿಸಿದರು, ಆಕಾಲದೋಳ್ ಆಅಷ್ಟ
ದಿಕ್ಪತಿಗಳಿಂದ ಎಂಟು ದಿಕ್ಕುಗಳಲ್ಲಿಯೂ ಎಂಟುಅಶ್ವಗಳು ಪುಟ್ಟಿದವು
ಇವೆ ದೇವತೆಗಳಿಂದುಂಟಾದ ಅಶ್ವೋತ್ಪತ್ತಿ ಕ್ರಮವೆಂದು ಹೇಳಲ್ಪಡುವದು, ಮ
ತ್ತೂ ಪೂರ್ವದೋಳ್ ಅಶ್ರುನಾಮಕಳಾದದೇವಸ್ತ್ರೀಯು ಬ್ರಹ್ಮದೇವನುಕೂಡಾ
ಲಕ್ಷ್ಮೀದೇವಿಯು ತಪೋವನದ ಸಮೀಪದೋಳ್ ಪರಸ್ಪರಶಾಪಂಗಳಿಂದ
ಆಅಶ್ರುನಾಮಕಳುಮೊಸಳೆಯ ರೂಪವಂತಾಳಿದಳು ಬ್ರಹ್ಮದೇವನು ಘೂಕ
ರೂಪವಂತಾಳಿದನು ಈರೀತಿಯಿಂದ ಇವರೀರ್ವರುಪರಸ್ಪರಶಾಪಯುಕ್ತರಾಗ
ಲು ಅವರಿಂದ ಅಂಡಗಳು ಜನಿಸಿದವು ಅದೇಅಂಡಜನ್ಯವಾದ ಅಶ್ವಸೃಷ್ಟಿಯು ಮ
ತ್ತೂ ಸ್ತ್ರೀಪುರುಷಾಶ್ವಾಸಂಬಂಧದಿಂದುಂಟಾದ ಅಶ್ವಸೃಷ್ಟಿಯು ಗರ್ಭಸಂಭವ
ವೆಂದು ಹೇಳಲ್ಪಡುವವು ಇಂತಲ್ಲದೆ ಬ್ರಹ್ಮದೇವನುಸೃಷ್ಟಿಕಾಲದೋಳ್ ಸಾ
ಮವೇದದಿಂದಅಶ್ವಗಳಂಸೃಜಿಸಿದನು ಈರೀತಿಯಿಂದಅಶ್ವಗಳ ಉತ್ಪತ್ತಿಯುವಿ
ಳುಪ್ರಕಾರವಾಗಿರುವವೆಂದುಋಷಿಗಳುಪೇಳುವರು, ಪೂರ್ವದಲ್ಲಿ ಬ್ರಹ್ಮದೇವ
ನ ಬೆಮರಿನಿಂದಯುಕ್ತವಾದ ಭಸ್ಮದಿಂಗರ್ದಭಗಳು ಪುಟ್ಟಿದವೆಂದು ಪೂರ್ವೀಕ
ರಾದವಿದ್ವಾಂಸರುಹೇಳುವರು ಆಗರ್ದಭಗಳಿಂದ ಅಶ್ವಯೋನಿಗಳಲ್ಲಿ ಜನಿಸಿದ
ಜಾತಿವಿಶೇಷಂಗಳು ಅಶ್ವತರಂಗಳೆನಿಸುವವು, ಆಅಶ್ವತರಗಳಿಂದಾ ಹೆಣ್ಣುಕುದು
ರೆಗಳಲ್ಲಿ ಹುಟ್ಟಿದ್ದುಗೌರೀಖರವೆಂದು ಹೇಳಲ್ಪಡುವದು, ಆಗೌರೀಖರದಿಂದ ಹೆ
ಣ್ಣುಕುದರೆಗಳಲ್ಲಿ ಪುಟ್ಟಿದ್ದುಮುಕುಬವೆನಿಸುವದು,ಆಮುಕುಬವೆಂಬ ಸ್ತ್ರೀಗ
ರ್ಭವಲ್ಲಿಮುಕುಬವೆಂಬಗರ್ದಭದಿಂದ ಹುಟ್ಟಿದ್ದುಕಿಂಪಷ್ಟವೆನಿಸುವದು,ಆಕಿಂಪ
ಷ್ಟದಿಂಹೆಣ್ಣುಕುದುರೆಗಳಲ್ಲಿ ಜನಿಸಿದ್ದು ಪುನಃಖರವೆಂದುತಿಳಿಯುವದು,ಪೂರ್ವದ
ಲ್ಲಿಅಶ್ವಗಳು ಪಕ್ಷಗಳಿಂಕೂಡಿ ಆಕಾಶದೋಳ್ ಸಂಚರಿಸುತ್ತಿರಲು ಅವುಗಳ
ನ್ನೋಡಿಇಂದ್ರನು ಶಾಲಿಹೋತನೆಂಬ ಋಷಿಯುಂಕುರಿತು ಎಲೈ ಋಷಿಯೇ !
ಈಕುದುರೆಗಳು ನಿನ್ನಸ್ವಾಧೀನಲ್ಲಿದ್ದು ವಾಹನತ್ವವಂಪಡೆಯುವಂತೆಇವುಗಳ

ದೇಕ್ಕೆಗಳಂ ಭೇದಿಸುವನಾಗೆನಲು, ಆಗ ಋಷಿಯು ಐಷೀಕಾಸ್ತ್ರದಿಂದ ಆ ಕುಮರಿಗಳ ಪಕ್ಷಗಳಂ ಇಂದ್ರನ ಪ್ರೀತಿಗೋಸ್ಕರ ಛೇದಿಸಲು ಆ ಕುಮರಿಗಳಿಂದ ಪ್ರಾರ್ಥಿಸಲ್ಪಟ್ಟವನಾದ ಶಾಲಿಹೋತ್ರ ಋಷಿಯು ನಿಮ್ಮ ಪಕ್ಷವೇಗಕ್ಕೆ ಸಮಾನವಾದ ವೇಗವು ಪಾದಗಳಿಗೆ ಉಂಟಾಗಲಿ ಎಂದು ಆ ಕುದುರೆಗಳಿಗೆ ವರವನ್ನಿತ್ತು, ಎಲೈ ಅಶ್ವಗಳಿರಾ! ನೀವು ಇಂದ್ರಾದಿ ದೇವತೆಗಳಿಗೂ ಭೂಪತಿಗಳಿಗೂ ಕೂಡಾ ಪೂಜ್ಯಂಗಳಾಗಿ ವಾಹನತ್ವವಂ ಪಡೆಯುವರಾಗಿ ಎಂದು ಪೇಳಿ, ಮತ್ತೂ ಯಾವ ಧೊರೆಯು ಅನ್ನಪಾನಾದಿಗಳಿಂದ ನಿತ್ಯದಲ್ಲಿಯೂ ನಿಮಗೆ ಪುಷ್ಟಿಯನ್ನುಂಟು ಮಾಡುವನೋ ಆ ರಾಜನು ಸರ್ವದೇಶಂಗಳಲ್ಲಿಯು ವಿಜಯವಂ ಪಡೆಯುವನೆಂದು ಪೇಳಲು ಆ ಅಶ್ವಗಳು ಭೂಲೋಕಕ್ಕೆ ಬಂದು ಭೂಪಾಲಕರಿಗೆ ವಾಹನತ್ವವನೈದಿ ತಮ್ಮಂ ಸಂರಕ್ಷಿಸುವ ಭೂಪಾಲಕರಿಗೆ ಉಪಕಾರಂಗಳಂ ಮಾಡುತ ಧರ್ಮಾರ್ಥಕಾಮಂಗಳೆಂಬ ಪುರುಷಾರ್ಥಂಗಳಂ ಸಾಧಿಸುವವು, ಎಲೈ ರಾಜನೇ! ಮತ್ತೂ ಈ ಅಶ್ವಗಳ ಚಾತುರ್ವರ್ಣ್ಯಲಕ್ಷಣವು ರಹಸ್ಯವಾಗಿರುವದು ಅದಂ ಪೇಳುವೆನು, ಬ್ರಹ್ಮಜಾತಿಯ ಅಶ್ವಲಕ್ಷಣವೆಂತೆನೆ, ಒಳ್ಳೇ ಸ್ವಭಾವದಿಂ ಶುದ್ಧ ವ್ಯಾಪಾರದಿಂ ಕಾಂತಿಯಿಂದೊಡಗೂಡಿ ಲಕ್ಷ್ಮೀಕರಗಳಾಗಿ ಒಳ್ಳೇ ಮನಸ್ಸು ಧೈರ್ಯಯುಕ್ತಗಳಾಗಿ ದೇವಗಂಧರ್ವರಿಗೆ ಯೋಗ್ಯವಾದ ಬಲವು ವ್ಯಾಪಾರಗಳು ಶುಭ್ರವರ್ಣವು ಕೆಂಪುವರ್ಣವು ಜೇನುತುಪ್ಪದಂತೆ ಪಿಂಗಳವರ್ಣವು ಸಹಾ ಉಳ್ಳವನಾಗಿ ಸ್ವೇದಮೂತ್ರಾದಿಗಳಲ್ಲಿ ಲಾವಂಚ ತುಪ್ಪ ಅರಳು ಇವುಗಳೊಡನೆ ಸಮಾನವಾದ ವಾಸನೆ ಉಳ್ಳದ್ದಾಗಿ ಪುಷ್ಪಮಾಲೆಗಳಲ್ಲಿಯೂ ಸುಗಂಧದಲ್ಲಿಯೂ ಆಜ್ಯದಲ್ಲಿಯೂ ಆಸಕ್ತಿ ಉಳ್ಳ ಅಶ್ವಗಳು ಬ್ರಹ್ಮಜಾತ್ಯಶ್ವಗಳು, ಬಹುಧೈರ್ಯವು ತೇಜಸ್ಸು ಭಾರವಂ ಸಹಿಸೋಣವು ಕೋಪವು ಶೌರ್ಯವು ಮಹಾ ಧ್ವನಿಯು ಕ್ರೂರವಾದ ಸ್ವಭಾವವು ಸ್ಥೂಲವಾದ ಶರೀರವು ಯಕ್ಷರಿಗೆ ಯೋಗ್ಯವಾದ ಬಲವು ವ್ಯಾಪಾರಗಳು ಲಕ್ಷಣಗಳು ಕೂಡಾ ಉಳ್ಳವಾಗಿ ಶುಭ್ರ ನೀಲ ಮೊದಲಾದ ಚಿತ್ರವರ್ಣದಿಂದೊಡಗೂಡಿ ಸ್ವೇದಾದಿಗಳಲ್ಲಿ ಪುಷ್ಪಗಳೊಡನೆ ಸಮಾನವಾದ ಒಳ್ಳೇ ವಾಸನೆ ಉಳ್ಳದ್ದಾಗಿ ಮಲ್ಲಿಗೆ ಹೂವಿನಂತೆಯೂ ವೈಢೂರ್ಯದಂತೆಯೂ ನೇತ್ರವುಳ್ಳದ್ದಾಗಿ ವ್ಯಕ್ತವಾದ ಅಂಗಗಳಿಂದೊಡಗೂಡಿ ಕಷ್ಟವಂ ಸಹಿಸುವ ಅಶ್ವಂಗಳು ಕ್ಷತ್ರಿಯಜಾತ್ಯಶ್ವಂಗಳೆನಿಸುವವು, ಸ್ಥಿರವಾದ ಸ್ವಭಾವವು ಭಾರವಂ

ಸಹಿಸೋಣವು ಘೂಳಿ ಬಿಸಲುಗಳಲ್ಲಿ ಶ್ರಮಪಡುತ ಸಂತಾಪವಂ ಹೊಂದದೆ ಸೌಖ್ಯವೆಶೆಯಲ್ಲಿ ಹರ್ಷವಂ ಹೊಂದದೆ ಮಧ್ಯಮವೇಗವುಳ್ಳದ್ದಾಗಿ ಕ್ರೌಂಚ ಪಕ್ಷಿಯ ರೆಕ್ಕೆಯಂತೆ ಶುಭ್ರವರ್ಣದೊಡನೆ ಕೂಡಿರುವ ಕೆಂಪುವರ್ಣವುಳ್ಳದ್ದಾಗಿ, ತಳಿರುಗಳಂತಿರುವ ಕಾಂತಿಯಿಂದೊಡಗೂಡಿ ಜಲಪಾನದಲ್ಲಿ ಆತ್ಯಾಸಕ್ತಿಯು, ಸ್ವೇದಾದಿಗಳಲ್ಲಿ ಆಡು ಕಪಿಗಳು ಇವುಗಳೊಡನೆ ಸಮಾನವಾದ ವಾಸನೆ ಉಳ್ಳದ್ದಾಗಿ, ರಾಕ್ಷಸರಿಗೆ ಯೋಗ್ಯವಾದ ವಾಸನೆ ಉಳ್ಳದ್ದಾಗಿ, ಜಿತೇಂದ್ರಿಯಂಗಳಾದ ಅಶ್ವಗಳು ವೈಶ್ಯಜಾತ್ಯಶ್ವಗಳು; ಅಶುದ್ಧ ವ್ಯಾಪಾರವು ದುರ್ಲಕ್ಷಣಗಳು ದುರ್ಗುಣಂಗಳು ಇತರಜಾತ್ಯಶ್ವಂಗಳಿಂದ ಭಕ್ಷಿಸಿ ಮಿಕ್ಕ ಹುರುಳಿ ಹುಲ್ಲು ನೀರುಗಳಲ್ಲಿ ಆಸಕ್ತಿ ಉಳ್ಳದ್ದಾಗಿ, ರಕ್ಷಿಸುವರಂ ಕಚ್ಚಿ ಒದೆಯುತ ಮುರಿಯುತಲಿರುವ ಮರದಂತೆ ಧ್ವನಿ ಉಳ್ಳದ್ದಾಗಿ, ಸ್ವೇದಾದಿಗಳಲ್ಲಿ ಕಾಗೆ ಗೂಡಿನಂತೆ ವಾಸನೆ ಉಳ್ಳದ್ದಾಗಿ, ಪಿಶಾಚಗಳಿಗೆ ಯೋಗ್ಯವಾದ ಬಲವುಳ್ಳ ಅಧಮಾಶ್ವಂಗಳು ಶೂದ್ರಜಾತ್ಯಶ್ವಂಗಳು; ಈ ರೀತಿಯಾಗಿ ಅಶ್ವಜಾತಿ ಲಕ್ಷಣಗಳಂ ತಿಳಿದ ವೈದ್ಯಶ್ರೇಷ್ಠನು ಲಾಯಗಳಲ್ಲಿ ಜಾತಿಗಳಂ ವಿಂಗಡಿಸಿ ಪ್ರತ್ಯೇಕಪ್ರತ್ಯೇಕವಾಗಿ ಆಯಾಯ ಜಾತಿಗಳ ಅಶ್ವಗಳಂ ಕಟ್ಟಿಸಬೇಕು, ಎಲೈ ರಾಯನೆ ! ಇನ್ನುಮೇಲೆ ಅಶ್ವಗಳ ಪ್ರಕೃತಿಯಂ ಪೇಳುವೆನು–ಗ್ರೀಷ್ಮ ಋತುವಿನ ಅಂತ್ಯದಲ್ಲಿಯೂ, ವರ್ಷಋತುವಿನ ಆದಿಯಲ್ಲಿಯೂ, ನಿಸ್ಸಾರವಾದ ಕಠಿಣವಾದ ತೃಣ, ಬಳ್ಳಿ, ತೆರಗು ಮೊದಲಾದ ಆಹಾರದಿಂದ ಉದರಭರಣವಂ ಮಾಡುವ ಅಶ್ವಗಳು, ಹೆಣ್ಣು ಕುದುರೆಗಳಿಂ ಪುಟ್ಟಿದ ಕುದುರೆಗಳು ವಾತಪ್ರಕೃತಿಗಳೆನಿಸಿಕೊಂಬುವವು; ಈ ಕುದುರೆಗಳು ಕಠಿಣವಾದ ರೋಮವು ಯತಾರ್ಥವಾದ ಜ್ಞಾನವು, ವಿಕಾರವು, ಚಾಂಚಲ್ಯವು ಉಳ್ಳದ್ದಾಗಿ, ಅಶುಚಿಗಳಾಗಿ, ಸರ್ವಕಾಲದಲ್ಲಿಯೂ ಜಾಗರಿಸುತ ನಿದ್ರೆಯಂ ಮಾಡುತಲಿರುವವು. ಪಿತ್ತಪ್ರಕೃತಿಗಳು ಹ್ಯಾಗೆಂದರೆ–ವರ್ಷಾಕಾಲದ ಕೊನೆಯಲ್ಲಿಯೂ, ಹಿಮಕಾಲ ಪ್ರಾರಂಭದಲ್ಲಿಯೂ, ಯೌವನವಂ ವಹಿಸುವದಾದಾಗ್ಯೂ ಬಿಸಲಿಗೆ ಅತ್ಯಂತ ಸಂತಪ್ತಂಗಳಾಗುತ ಅತ್ಯಂತವಾಗಿ ತೃಣಗಳಂ ಭಕ್ಷಿಸುತ ಅತಿ ಪಿತ್ತ ಪ್ರಕೃತಿ ಉಳ್ಳದ್ದಾಗಿರುವವು, ಈ ರೀತಿಯಲ್ಲಿರುವ ಕುದುರೆಗಳಲ್ಲಿ ಜನಿಸಿದ ಕುದುರೆಗಳು ಪಿತ್ತ ಪ್ರಕೃತಿಗಳೆಂದು ಹೇಳಲ್ಪಡುವವು, ಈ ಕುದುರೆಗಳು ತೀಕ್ಷ್ಣವಾದ ಸ್ವಭಾವವು, ಶೌರ್ಯ

ವು ಜಲವಲ್ಲಿ ಅತ್ಯಂತ ಪ್ರೀತಿಯು, ಕಟಿಪಾರ್ಶ್ವಗಳಲ್ಲಿ ಕೆಂಪುವರ್ಣವು, ಒಳ್ಳೇ ಬುದ್ಧಿಯು ಉಳ್ಳದ್ದಾಗಿ, ಅಧಿಕವಾಗಿ ಹುಲ್ಲು ಹುರುಳಿಗಳಂ ಭಕ್ಷಿಸುತ ಅತ್ಯಂತ ರೂಪ ಉಳ್ಳದ್ದಾಗಿರುವವು. ಶ್ಲೇಷ್ಮಪ್ರಕೃತಿಗಳು ಹ್ಯಾಗೆಂದರೆ-ಶರೀರವುತು ವಿನಲ್ಲಿ ಬಲವಾದ ಮಾಂಸದಿಂದೊಡಗೂಡಿ ಸಮರ್ಥಂಗಳಾಗಿರುವವು, ಈ ಕ್ರ ದುರೆಗಳಲ್ಲಿ ಜನಿಸಿದ ಕುದುರೆಗಳು ಧೃಷ್ಟವಾದ ಶರೀರ ಉಳ್ಳದ್ದಾಗಿ, ಮಂದಸ್ವ ಭಾವವು ಅಧಿಕವಾದ ಬಲವು ಕ್ಷಮೆಯು ಉಳ್ಳದ್ದಾಗಿ, ರೋಗದಿಂ ರಹಿತಂಗ ಳಾಗಿ ಮನೋಹರವಾದ ಗಂಭೀರವಾದ ದೃಷ್ಟಿಯಿಂದೊಡಗೂಡಿರುವವು. ಅಶ್ವ ಗಳ ಲಕ್ಷಣಂಗಳಂ ತಿಳಿವವರಿಂದ ಲಕ್ಷಣಸ್ಥಾನವು ಶರೀರವು ಕೂದಲುಗಳ ಬಣ್ಣವು ನಡಿಗೆಯು ಮತ್ತು ಬೆವರು ಮೂತ್ರಾದಿಗಳ ವಾಸನೆಯೂ ಸ್ವರ ವು ಕಾಂತಿಯುಈಪ್ರಕಾರವಾಗಿ ಎಂಟು ಲಕ್ಷಣಗಳು ತಿಳಿಯುತಕ್ಕವು ಇವು ಗಳ ಶರೀರವಲ್ಲಿ ಸಕಲ ಲಕ್ಷಣಗಳಿಗೂ ಆಶ್ರಯವಾದ ಕಾರಣ ಶರೀರ ಲಕ್ಷ ಣವು ಹೇಳಲ್ಪಡುವದು ; ಅದೆಂತೆನೆ-ತುಟಿಗಳು ಎಲ್ಲಾ ಕಡೆಯಲ್ಲೂ ಅತ್ಯಂತ ಕೆಂಪಾಗಿದ್ದರೂ, ಚರ್ಮಗಳುಶ್ಲಿಷ್ಟಗಳಾಗಿ ಮೃದುಗಳಾಗಿ ಸುಕ್ಕುಗಳಿಲ್ಲದೇ ಯಿದ್ದರೂ, ನಾಲಿಗೆಯುಕೆಂಪಾಗಿ ಸೂಕ್ಷ್ಮವಾಗಿ ಕೃಶವಾಗಿದ್ದರೂ, ದವಡೆಗಳು ರಕ್ತವರ್ಣವಾಗಿ ಬಹಳಉದ್ದವಾಗಿವಿಸ್ತಾರವಾಗದಿದ್ದರು, ದಂತಗಳುಸಮವಾ ಗಿ ಸುಖವಾಗಿ ಮಿಂಚುತ ಘಟ್ಟಿಯಾಗಿ ದೊಡ್ಡದಾಗಿದ್ದರೂ, ಕಣ್ಣುಗಳುಹೊ ಳೆಯುತ್ತ ಮೃದುವಾದರೆಪ್ಪೆಗಳಿಂಕೂಡಿ ವಿಸ್ತಾರವಾಗಿ ಜೇನುತುಪ್ಪದಂತೆಪಿಂಗ ಳವರ್ಣವಾಗಿ, ಪ್ರಸನ್ನವಾಗಿ ಕಪಿಂಜಲವೆಂಬಪಕ್ಷಿಯಕಣ್ಣುಗಳಂತೆಯು ಹುಲ್ಲೆಗಳಕಣ್ಣುಗಳಂತೆಯು ಟಿಟ್ಟಿಭಪಕ್ಷಿಗಳಕಣ್ಣುಗಳಂತೆಯು ಯಿರುವ ದಾದರೂ, ಲಲಾಟವುವಳ್ಳೇಸುಳಿಯುಳ್ಳದ್ದಾಗಿ ವಿಶಾಲವಾಗಿದ್ದರೂ, ಶಿರಸ್ಸುಬ ಟುವಾಗಿ ಯರಡುಸುಳಿಗಳಿಂದಲಂಕೃತವಾಗಿದ್ದರೂ, ಕಿವಿಗಳುಕೃಶಗಳಾಗಿ ತೀ ಕ್ಷ್ಣಗಳಾಗಿಗಿಡ್ಡಾಗಿದ್ದರೂ, ಹೆಕ್ಕತ್ತುದೃಢವಾಗಿ ಚನ್ನಾಗಿಜೋಗ್ಗಿನೀಟವಾಗಿದ್ದ ರೂ, ಹೆಕ್ಕತ್ತಿನಕೂದಲುಗಳು ಜಡೆಗಳಲ್ಲದೇದೀರ್ಘಗಳಾಗಿದ್ದರೂ, ಸ್ಕಂಧ ಪ್ರದೇಶವುಶುಭವಾದ ಸುಳಿಯುಳ್ಳದಾಗಿದೃಢವಾಗಿದ್ದರೂ, ವಕ್ಷಸ್ಥಲವುವಿಶಾಲ ವಾಗಿನೀಟವಾಗಿದ್ದರೂ, ಕಂಕಳುನೀಟವಾಗಿಉನ್ನತವಾಗಿದ್ದರೂ, ತೊಡೆಗಳು ತೋಳುಗಳು ಉರುಟಾಗಿಸಮವಾಗಿದ್ದರು, ಮೊಳಕಾಲುಗಳುಚನ್ನಾಗಿದೃಕ್ತ

ವಾಗಿತೋರದೆ ತುಂಬಿಕೊಂಡಿದ್ದರೂ ನಡುವಿನಮುಂಭಾಗಗಳುಬಟುವಾಗಿ
ಕಿಲುವಾಗಿ ಮಾಂಸವರ್ಜಿತವಾಗಿದ್ದರೂ. ಮಬ್ಬುಗಳಮಧ್ಯವುಸಮವಾಗಿ ಸು
ವಾಸನೆಯಾಗಿ ಗಂಟು ಹುಣ್ಣು ಮೊದಲಾದ್ದುಯಿಲ್ಲದಯಿದ್ದರೂ, ಕಾಲುಗಳ
ಗೊರಸುಗಳುಬಟುವಾಗಿ ಪೃಥವಾಗಿ ಮಂಡೂಕಾಕಾರವಾಗಿ ನುಣುಪಾಗಿ
ಹೊಳೆಯುತ್ತಾ ವಿಸ್ತಾರಗಳಾಗಿದ್ದರೂ, ಮೊಗ್ಗುಲುಗಳು ಅತ್ಯಂತ ಉನ್ನತವಾಗಿ
ಪೃಥವಾಗಿ ಸೀಟವಾಗಿ ಸಮವಾಗಿದ್ದರೂ, ಕಿಬ್ಬುಹೊಟ್ಟೆಯುಜೋಲುತ ಬಳ್ಳಿ
ಸುಳಿಯುಳ್ಳದಪ್ಪಗಿ ಬಟುವಾಗಿದ್ದರೂ ಬೆನ್ನುಬಹಳಸೀಟವಿಲ್ಲದೇಸಮವಾಗಿ
ಸ್ವಲ್ಪಬೊಗ್ಗಿದ್ದರೂ, ನಡುವುಬಲಿಷ್ಟಂಧಪ್ಪವಾಗಿ ಬಳ್ಳಿಸುಳಿಯುಳ್ಳದಾಗಿದ್ದರೂ,
ಹಿಂಭಾಗವುಸ್ಥೂಲವಾಗಿದ್ದರೂ, ಬಾಲವು ಮೃದುವಾದ ದೀರ್ಘಗಳಾದಕೂದ
ಲುಗಳಿಂದಯುಕ್ತವಾಗಿಯಿದ್ದರೂ, ವೃಷಣಗಳುಸಮವಾಗಿಯೂ ಬಟುವಾಗಿ
ಯೂ ಬಿಲ್ಲಪತ್ರೆಮರದಕಾಯಿಗಳಿಗೆ ಸಮಾನವಾಗಿಯೂ ಕೂದಲುಗಳು
ಯಿಲ್ಲದೇಯಿದ್ದರೂ, ಗುಹ್ಯವೂ ಮೇಢ್ರವೂ ಕಪ್ಪುವರ್ಣವಿಲ್ಲದೇ ಹ್ರಸ್ವವಾ
ಗಿದ್ದರೂ, ಬಳತೊಡೆಗಳು ಬಟುವಾಗಿ ಸಮವಾಗಿ ಸ್ವಲ್ಪಬೊಗ್ಗುವಕ್ರವಿಲ್ಲದೇ
ಯಿದ್ದರೂ, ಶುಭಕರಗಳೆನಿಸುವವು. ಈರೀತಿಗುಣಗಳಿಂದ ಯುಕ್ತಗಳಾದ ಶರೀ
ರಗಳುಳ್ಳಕುದುರೆಗಳು ಸಂಪತ್ಕರಂಗಳಾಗಿ ಒಡೆಯಗೆ ಜಯವಂ ಪೂಜ್ಯತೆಯಂ
ಉಂಟುಮಾಡುವವು; ಈಲಕ್ಷಣಂಗಳು ಗುಣಂಗಳುಇಲ್ಲದಕುದುರೆಗಳುಪ್ರಶಸ್ತ
ಗಳಲ್ಲ, ಈರೀತಿಯಲ್ಲಿ ಹೆಂಣುಕುದುರೆಗಳಿಗೂ ಲಕ್ಷಣಂಗಳನ್ನೋಡಿಶುಭಾಶು
ಭಂಗಳಂತಿಳಿಯುತಕ್ಕದ್ದು; ಯಿಂತಲ್ಲದೆ ಹೆಂಣುಕುದುರೆಗಳಿಗೆ ತುಟಿಯು ಯೋ
ನಿಯು ಋಜುವಾಗಿ ವಿಸ್ತಾರವಾಗಿ ಚಂಚಲವಾಗದಿದ್ದರೆ ಶುಭಕರಂಗಳು, ಇ
ನ್ನುಮೇಲೆ ಕುದುರೆಗಳಪ್ರಮಾಣವಂ ಪೇಳುವೆನು:_ಕೇಳೈಸುಗಂಧಮಹಾರಾ
ಯನೇ! ಮೂರು ಛತ್ರಗಳಂ ನೀಟವಾಗಿ ಇರಿಸಿದರೆ ಒಂದು ಅಂಗುಲಪ್ರ
ಮಾಣವಾಗುವದು, ಅಂಥಾ ಅಂಗುಲಂಗಳು ಇಪ್ಪತ್ತುನಾಲ್ಕಾದರೆ ಒಂದು
ಹಸ್ತಪ್ರಮಾಣವೆನಿಸುವದು, ಈಪ್ರಮಾಣದಿಂದ ಕುದುರೆಯಮುಖವು ಮು
ವ್ವತ್ತೆರಡು ಅಂಗುಲಗಳ ಉದ್ದವಿದ್ದರೆ ಅದು ಉತ್ತಮಾಶ್ವವೆನಿಸುವದು, ಇ
ದಕ್ಕೆ ಯೆರಡು ಅಂಗುಲ ಪ್ರಮಾಣ ಕಡಮೆಯಾದರೆ ಮಧ್ಯಮಾಶ್ವವೆನಿಸುವದು
ಯಿಪ್ಪತ್ತೆಂಟು ಅಂಗುಲ ಪ್ರಮಾಣ ವಿದ್ದರೆ ಅಧಮಾಶ್ವವೆನಿಸುವದು ;

ಅಶ್ವಗಳಕಂಠವು ಐವತ್ತಾರು ಅಂಗುಲನೀಟವಿದ್ದರೆಉತ್ತಮವು, ನಾಲ್ವತ್ತಾರುಅಂಗುಲಪ್ರಮಾಣವಿದ್ದರೆ ಮಧ್ಯಮವು, ಮೂವತ್ತಾರುಅಂಗುಲನೀಟವಿದ್ದರೆ ಅಧಮವೆನಿಸುವದು, ಕುದುರೆಗಳವಕ್ಷಸ್ಥಲಗಳು ಬೆನ್ನು ನಡವು ಮುಖಪ್ರಮಾಣಕ್ಕೆ ಸರಿಯಾದ ಪ್ರಮಾಣದಿಂದೊಡಗೂಡಿಇದ್ದರೆ ಶುಭಕರವು, ಏಳು ಅಂಗುಲ ಪ್ರಮಾಣವುಳ್ಳ ಕಿವಿಗಳು ಆರುಅಂಗುಳಪ್ರಮಾಣವುಳ್ಳ ದವಡೆಯು ಸೂಕ್ಷ್ಮವಾದಮೊಣಕಾಲುಗಳುಳ್ಳ ಕುದುರೆಗಳು ಶುಭಕರಂಗಳು. ಕೆನ್ನೆಗಳು ವಿಸ್ತಾರವಾಗಿ ಇಪ್ಪತ್ತುಅಂಗುಲ ಪ್ರಮಾಣವಿರಲು ಶುಭಪ್ರದವು, ಜಂಘಾಪ್ರದೇಶಂಗಳ್ ಯಿಪ್ಪತ್ತೆರಡುಅಂಗುಲಪ್ರಮಾಣವಿದ್ದರೆ ಉತ್ತಮಾಶ್ವವೆನಿಸುವದೂ, ಹದಿನೆಂಟುಅಂಗುಲಪ್ರಮಾಣವಿದ್ದರೆ ಮಧ್ಯಮಾಶ್ವವೆನಿಸುವದು, ಹದಿನಾರುಅಂಗುಲಪ್ರಮಾಣವಿರಲು ಅಧಮಾಶ್ವವೆನಿಸುವದು, ಕುದುರೆಗಳಕಾಲುಗೊರಸುಗಳುಏಳುಅಂಗುಲ ಪ್ರಮಾಣವಿದ್ದರೆಉತ್ತಮಾಶ್ವವು, ಆರುಅಂಗುಲಪ್ರಮಾಣವಿದ್ದರೆ ಮಧ್ಯಮಾಶ್ವವು, ಐದುಅಂಗುಲ ಪ್ರಮಾಣವಿದ್ದರೆ ಅಧಮಾಶ್ವವೆನಿಸಿಕೊಂಬುವದು, ಗೊರಸುಗಳಿಂದ ಹೆಗಲಿನಪರ್ಯಂತವಾಗಿಉನ್ನತದಲ್ಲಿ ನಾಲ್ಕುಹಸ್ತಪ್ರಮಾಣವುಳ್ಳಅಶ್ವವು ಉತ್ತಮಾಶ್ವವು, ಮೂರುವರೆಹಸ್ತಪ್ರಮಾಣವುಳ್ಳಅಶ್ವವುಮಧ್ಯಮವು, ಯರಡುವರೆಹಸ್ತಪ್ರಮಾಣವು ಅಧಮವೆನಿ ಕೊಂಬುವದು, ಗೊರಸುಗಳಕೊನೆಯಿಂದಬಲದಕೊನೆಪರ್ಯಂತವು ನೀಟದಲ್ಲಿ ಐದುಹಸ್ತಪ್ರಮಾಣವುಳ್ಳ ಅಶ್ವವುಉತ್ತಮವು, ನಾಲ್ಕುಮೊಳ ನೀಟವುಳ್ಳ ಅಶ್ವವು ಮಧ್ಯಮವು, ಮೂರೂವರೆ ಹಸ್ತ ಪ್ರಮಾಣವುಳ್ಳ ಅಶ್ವವು ಅಧಮವೆನಿಸಿಕೊಂಬುವದು, ಎಲೈ ರಾಯನೆ ! ಮತ್ತು ಈ ಅಶ್ವಜಾತಿಗಳ ವರ್ಣ ಭೇದಂಗಳಂ ಪೇಳುವೆನು -ಕುದುರೆಗಳಲ್ಲಿ ಶುಭ್ರವರ್ಣವು, ನೀಲವರ್ಣವು, ಕೆಂಪುವರ್ಣವು, ಹೊಂಬಣ್ಣವು ಈ ನಾಲ್ಕು ಬಣ್ಣಗಳು ಶುದ್ಧ ವರ್ಣಗಳೆನಿಸುವವು, ಮಿಶ್ರವರ್ಣಗಳು ಅನೇಕಪ್ರಕಾರಂಗಳಾಗಿರುವವು, ಶಂಖಕ್ಕೆ ಸಮಾನವಾದ ಕಾಂತಿಯಿಂದಲೂ, ಶುಭ್ರಗಳಾದ ಬಾಲವು, ರೋಮಗಳು, ಚರ್ಮವು, ಗೊರಸುಗಳು ಇವುಗಳಿಂದ ಯುಕ್ತವಾದ ಅಶ್ವವು ಬ್ರಹ್ಮಜಾತಿ ಎನಿಸುವದು, ಈ ಬ್ರಹ್ಮಜಾತಿಯ ಅಶ್ವದಂತೆ ಶುಭ್ರವಾದ ಅಂಗವು, ಚರ್ಮದಲ್ಲಿ ಕಪ್ಪು ಬಣ್ಣಉಳ್ಳ ಕುದುರೆಯು ಕರ್ಕಳ ಎನಿಸಿಕೊಂಬುದು; ರೋಮಗಳಲ್ಲಿ,

ಬಾಲಗಳಲ್ಲಿ, ಚರ್ಮದಲ್ಲಿ, ಗೊರಸುಗಳಲ್ಲಿ ಕಪ್ಪುಬಣ್ಣ ಉಳ್ಳದ್ದಾಗಿ, ಶೌರ್ಯಯುಕ್ತವಾದ ಕುದುರೆಯು ಶೂದ್ರಜಾತಿ ಎನಿಸಿಕೊಂಡು ಕಾಳನೆಂಬ ಪೆಸರಂ ಪಡದಿರುವದು ; ಕೂದಲು ಮೊದಲುಗೊಂಡು ಸಮಸ್ತಾವಯವಗಳು ರಕ್ತವರ್ಣಂಗಳಾಗಿ ಕೆಂದಾವರೆಗೆ ಸಮಾನವಾದ ಕಾಂತಿಯುಳ್ಳ ಅಶ್ವವು ಕ್ಷತ್ರಜಾತಿ ಎಂದು ಪ್ರಸಿದ್ಧಿಯಂ ಪಡದು ಕಂಜಾಭವೆನಿಸಿಕೊಂಬುದು, ಹೆಕ್ಕತ್ತಿನ ಕೇಸರಗಳಲ್ಲಿಯೂ, ಶರೀರದ ರೋಮಗಳಲ್ಲಿಯೂ ಬಾಲದ ಕೂದಲುಗಳಲ್ಲಿಯೂ, ಹೊಂಬಣ್ಣವುಳ್ಳ ಅಶ್ವವು ವೈಶ್ಯಜಾತಿ ಎನಿಸಿ ಶರಭವೆಂದು ಪ್ರಸಿದ್ಧಿಯುಂ ಪಡೆದಿರುವದು ; ಸಮಸ್ತ ಶರೀರ ರೋಮಗಳಲ್ಲಿಯೂ ಶುಕ್ಲ ರಕ್ತವರ್ಣಂಗಳು ಮಿಶ್ರಂಗಳಾಗಿ, ಮುಖದಲ್ಲಿಯೂ, ಕಾಲುಗಳಲ್ಲಿಯೂ. ಬಾಲಗಳಲ್ಲಿಯೂ ಕೂಡ ಕೆಂಪು ಬಣ್ಣವುಳ್ಳ ಕುದುರೆಗಳು ಬೋಲನೆಂದು ಪೇಳಲ್ಪಡುವವು ; ನೇತ್ರ, ಚರಣ, ಮುಖಂಗಳಲ್ಲಿ ಕಪ್ಪುವರ್ಣ ಉಳ್ಳವಾಗಿ ಶುಭ್ರ ರಕ್ತಮಿಶ್ರವಾದ ರೋಮದಿಂದೊಡಗೂಡಿದ ಕುದುರೆಗಳು ರುರುಜಾತಿ ಎನಿಸಿ ನೀಲವೆಂಬ ಪೆಸರಂ ಪಡದಿರುವವು ; ಕಂಠಪ್ರದೇಶದ ರೋಮಗಳಲ್ಲಿ ಪಾದರೀ ಹುವ್ವಿಗೆ ಸಮಾನವಾದ ಕಾಂತಿವುಳ್ಳವಾಗಿ ಹಿಪ್ಪೆ ಮರದ ಕೊಕ್ಕಿನ ಛಾಯವುಳ್ಳ ನೀಲವರ್ಣವಾದ ಕುದುರೆಯು ಮೇಘವೆಂದು ಪೇಳಲ್ಪಡುವದು ; ಬಳ್ಳ ಪಕ್ವವಾದ ನೇರಳೇ ಹಣ್ಣಿನಂತೆ ಕಾಂತಿಯುಳ್ಳ ಕುದುರೆಯು ಜಂಬ್ವಾ ಎನಿಸುವದು, ಕೂದಲುಗಳಲ್ಲಿ ಬಾಲಗಳಲ್ಲಿ ಸುವರ್ಣಛಾಯವುಳ್ಳವಾಗಿ ರಕ್ತವರ್ಣವುಳ್ಳ ಕುದುರೆಗಳು ಹರಿತವೆಂದು ಪೇಳಲ್ಪಡುವವು, ಅತ್ತಿ ಹಣ್ಣಿನ ವರ್ಣವುಳ್ಳ ಕುದುರೆಯು ರೋಮಗಳಲ್ಲಿ, ಕೇಸರಗಳಲ್ಲಿ, ಬಾಲದ ಕೂದಲುಗಳಲ್ಲಿ, ಮೊಣಕಾಲುಗಳ ಕೆಳಗೆಯು ಕಪ್ಪುವರ್ಣ ಉಳ್ಳವಾಗಿ ಶರೀರ ರೋಮಗಳಲ್ಲಿ ಹೊಂಬಣ್ಣವುಳ್ಳ ಕುದುರೆಗಳು ಸುಮನಸೆಂದು ಪ್ರಖ್ಯಾತವಾಗಿರುವವು ; ಶರೀರವೆಲ್ಲವೂ ಒಂದು ಕಿವಿಯು ಶುದ್ಧ ಶುಭ್ರವರ್ಣವುಳ್ಳವಾಗಿ, ಮತ್ತೊಂದು ಕಿವಿಯು ಕಪ್ಪಾಗಿದ್ದರೆ ಈ ಕುದುರೆಯು ಅಶ್ವಮೇಧಯಾಗಕ್ಕೆ ಯೋಗ್ಯವಾಗಿ ಶ್ಯಾಮೈಕ ಕರ್ಣವೆಂದು ಪೇಳಲ್ಪಡುವದು ; ನಾಲ್ಕು ಕಾಲುಗಳು ಶುಭ್ರವಾಗಿ ಮುಖಮಧ್ಯದಲ್ಲಿಯೂ ಶುಭ್ರವಾದ ಕುದುರೆಗಳು ಸರ್ವದಾ ಕಲ್ಯಾಣಪ್ರದವಾಗಿ ಪಂಚ ಕಲ್ಯಾಣವೆನಿಸಿಕೊಂಬುವವು,

ಮುಖದಲ್ಲಿಯೂ, ಬಾಲದಲ್ಲಿಯೂ, ಪೆಕ್ಕತ್ತಿನ ಕೇಸರಗಳಲ್ಲಿಯೂ ಎದೆಯಲ್ಲಿಯೂ, ನಾಲ್ಕು ಪಾದಗಳಲ್ಲಿಯೂ ಶುಭ್ರವರ್ಣವಾಗಿ, ಮಿಕ್ಕ ಅಂಗಗಳಲ್ಲಿ ಯಾವ ವರ್ಣಗಳಿಂದ ಯುಕ್ತವಾದಾಗ್ಯೂ ಆ ಅಶ್ವವು ಅಷ್ಟಮಂಗಳವೆಂಬ ಹೆಸರಂ ಪಡೆದು ಶ್ಲಾಘ್ಯವಾಗಿರುವದು ; ನೇರಳೇ ಹಣ್ಣಿಗೆ ಸಮಾನವಾದ ವರ್ಣವುಳ್ಳದ್ದಾಗಿ ಮುಖದಲ್ಲಿ ಚಂದ್ರಾಕೃತಿಯಾದ ಶುಭ್ರವರ್ಣವು, ನಾಲ್ಕುಪಾದಗಳಲ್ಲಿ ಶುಭ್ರವರ್ಣವುಳ್ಳ ಕುದುರೆಯು ಮಲ್ಲಿಕಾಕ್ಷವೆಂಬ ಹೆಸರುಳ್ಳದ್ದಾಗಿ ಬಹು ಪೂಜ್ಯವಾಗಿರುವದು ; ನಾಲ್ಕು ಕಾಲುಗಳಲ್ಲಾಗಲೀ ಎರಡುಕಾಲುಗಳಲ್ಲಾಗಲೀ ಶುಭ್ರವರ್ಣವುಳ್ಳವಾಗಿ ಮುಖದಲ್ಲಿ ಪುಂಡ್ರಾಕಾರವಾದ ಶುಭ್ರವಾದರೇಖೆಯುಳ್ಳ ಅಶ್ವವು ಧೌತಪಾದವೆಂದು ಪ್ರಸಿದ್ಧವಾಗಿ ಪ್ರಶಸ್ತವಾದದ್ದೆಂದು ತಿಳಿಯತಕ್ಕದ್ದು ; ಪ್ರತಿ ಸ್ಥಾನಗಳಲ್ಲಿಯೂ ವಿಶಾಲಗಳಾದ ಶುಭ್ರಗಳಾದ ಪಟ್ಟೆಗಳಿಂದಪ್ರಕಾಶಿಸುವ ಕುದುರೆಯು ಯಾವವರ್ಣದಿಂದೊಡಗೂಡಿದ್ದಾಗ್ಯೂ ಆ ಕುದುರೆಯು ಹಲಾಭವೆಂದು ಪ್ರಸಿದ್ಧಿಯಂ ಪಡೆದಿರುವದು, ಉಭಯಪಾರ್ಶ್ವಗಳಲ್ಲಿಯೂ ಶುಭ್ರಗಳಾದ ಬಿಂದು ಸಮೂಹಂಗಳಿಂದ ವಿಚಿತ್ರವಾದ ಕುದುರೆಯು ಯಾವ ವರ್ಣದಿಂದ ಯುಕ್ತವಾದಾಗ್ಯೂ ಕರಂಜವೆಂದು ಹೇಳಲ್ಪಡುವದು ; ಶುಭ್ರವರ್ಣವುಳ್ಳ ಕುದುರೆ ಎಲ್ಲಾ ಕಡೆಯಲ್ಲೂ ಸ್ಥೂಲಗಳಾಗಿಯು ಸೂಕ್ಷ್ಮಂಗಳಾಗಿಯು ಕಪ್ಪು ಬಿಂದುಗಳು ಕಾಣುವವೋ ಆ ಕುದುರೆಯು ಬಿಂಬಕವೆಂದು ಹೇಳಲ್ಪಡುವದು ; ಒಂದು ಬಣ್ಣದಿಂದಲಾದರೂ, ಬಹು ವರ್ಣಂಗಳಿಂದಲಾದರೂ ಕೂಡಿರುವ ಕುದುರೆಗೆ ಕರ್ಣಗಳು ಮನೋಹರಗಳಾಗಿ ಪ್ರಕಾಶಿಸುವವೋ ಆ ಕುದುರೆಯು ದುಷ್ಟವರ್ಣದಿಂ ಪುಟ್ಟುವ ದೋಷಂಗಳಂ ಪರಿಹರಿಸುವದು; ಯಾವ ಕುದುರೆಗೆ ಶರೀರವು ಶುಭ್ರವಾಗಿ ನಾಲ್ಕು ಕಾಲುಗಳುಮಾತ್ರ ಕಪ್ಪಾಗಿರುವವೋ ? ಆ ಕುದುರೆಯು ಪ್ರತ್ಯಕ್ಷವಾದ ಯಮದೂತನೆಂದು ಹೇಳಲ್ಪಡುವದು; ಆದ್ದರಿಂದ ಅಂಥಾ ಕುದುರೆಯು ಸರ್ವಪ್ರಕಾರದಲ್ಲಿಯೂ ತ್ಯಜಿಸತಕ್ಕದ್ದು; ಕುದುರೆಗಳು ಶಿರಸ್ಸಿನಲ್ಲಾದರೂ, ಬಾಲದಲ್ಲಾದರೂ ನಿಂದಿತವಾದ ವರ್ಣವುಳ್ಳದ್ದಾದರೆ ತ್ಯಜಿಸತಕ್ಕದ್ದು; ಯಾವ ಕುದುರೆಗೆ ಸರ್ವಾವಯವಂಗಳು ಒಂದುವರ್ಣವಾಗಿ ಮುಖಮಾತ್ರದಲ್ಲಿ ಬ್ಯಾರೆ ಬಣ್ಣವಿದ್ದಾಗ್ಯೂ ಬಾಲದಲ್ಲಾದರೂ ಬ್ಯಾರೆ ಬಣ್ಣವಿದ್ದಾಗ್ಯೂ ಆ ಕುದುರೆಯು

ತ್ಯಜಿಸತಕ್ಕದ್ದು; ಹೀನದಂತ, ಅಧಿಕದಂತ, ಕರಾಳಿ, ಕೃಷ್ಣತಾಲುಕ, ಉದ್ಧಾಲ ಮುಸಲೀ, ಶೃಂಗೀ ಎಂಬ ಸಂಜ್ಞೆಯುಳ್ಳ ಏಳು ಪ್ರಕಾರವಾದ ಅಶ್ವಗಳು ರಕ್ಷಿಸುವ ಒಡೆಯನಿಗೆ ಅಪಕಾರವನ್ನೆಸಗುತ ಸ್ವಾಮಿದ್ರೋಹಿಗಳೆನಿಸಿಕೊಳ್ಳುವವು ; ಈ ಅಶ್ವಗಳು ತ್ಯಜಿಸತಕ್ಕವು; ಇವುಗಳ ಲಕ್ಷಣಗಳಂ ಪೇಳುವೆನು_ ಮತ್ತಂ, ವ್ಯಾಘ್ರಾಭ, ಸ್ತನಿ, ದ್ವಿಖುರಂ ಕಕುದಿ, ಏಕಾಂಡ, ಜಾತಾಂಡವೆಂಬದಾಗಿ ಪೆಸರುಳ್ಳ ಈ ಕುದುರೆಗಳು ದುಷ್ಟಾಶ್ವವೆನಿಸಿಕೊಳ್ಳುವವು ; ಇವುಗಳ ಲಕ್ಷಣಂಗಳಂ ಪೇಳ್ವೆನು _ಕುದುರೆಗಳಿಗೆ ಸ್ವಾಭಾವಿಕವಾಗಿ ಮುಂಭಾಗದೊಳ್ ತುಟಿಗಳ ಸಮೀಪದಲ್ಲಿ ಆರುಹಲ್ಲುಗಳಿರುವವು, ಆರುಹಲ್ಲುಗಳಿಗೆ ಒಂದು ಕಡಿಮೆಯಾಗಿ ಐದು ದಂತಗಳಿದ್ದಾಗ್ಯೂ ಅದು ಹೀನದಂತಗಳೆನಿಸಿಕೊಳ್ಳುವದು; ಆರು ದಂತಂಗಳಿಗೆ ಒಂದು ಹೆಚ್ಚಾಗಿ ಏಳು ದಂತಂಗಳು ಇದ್ದಾಗ್ಯೂ ಆ ಕುದುರೆಯು ಅಧಿಕದಂತವೆನಿಸಿಕೊಳ್ಳುವದು; ಯಾವ ಕುದುರೆಯ ಮೇಲು ಹಲ್ಲುಗಳು ಕೆಳಗಿನ ಹಲ್ಲುಗಳಿಂದ ಕಡಿಯಲ್ಪಡುವವೋ ಅದು ಕರಾಳೀ ಎನಿಸಿಕೊಳ್ಳುವದು; ಕುದುರೆಯ ದವಡೆಗಳು ಕೃಷ್ಣವರ್ಣವಾಗಿದ್ದರೆ ಆ ಕುದುರೆಯು ಕೃಷ್ಣತಾಲುಕವೆನಿಸಿಕೊಳ್ಳುವದು; ಯಾವ ಕುದುರೆಯ ಮೇಲಣಹಲ್ಲುಗಳಿಂದ ಕೆಳಗಿನ ಹಲ್ಲುಗಳು ಮುಚ್ಚಲ್ಪಡುವವೋ? ಅದು ಉದ್ಧಾಲವೆನಿಸಿಕೊಳ್ಳುವವು ; ಒಂದು ಪಾದಮಾತ್ರವೇ ಶುಭ್ರವಾಗಿ ಪುಷ್ಪಹೀನವಾದ ಅಶ್ವವು ಮುಸಲೀ ಎನಿಸಿಕೊಳ್ಳುವದು; ಕರ್ಣಪ್ರದೇಶದಲ್ಲಿ ಕಾಲಿನಲ್ಲಿ ಸುಳಿಯುಳ್ಳ ಅಶ್ವವು ಶೃಂಗೀ ಎನಿಸಿಕೊಳ್ಳುವದು, ಹುಲಿಯ ಬಣ್ಣವುಳ್ಳ ಅಶ್ವವು ವ್ಯಾಘ್ರಾಭವೆನಿಸಿಕೊಳ್ಳುವದು ; ಸ್ತನಗಳಿಂದ ಕೂಡಿರುವ ಅಶ್ವವು ಸ್ತನೀ ಎನಿಸಿಕೊಳ್ಳುವದು, ಹಸುಗಳ ಗೊರಸಿನಂತೆ ಎರಡು ಗೊರಸುಗಳುಳ್ಳ ಅಶ್ವವು ದ್ವಿಖುರವೆನಿಸಿಕೊಳ್ಳುವದು, ಕುದುರೆಯು ಹಿರಳು ಬಟುವಾಗಿ ದಪ್ಪವಾಗಿದ್ದರೆ ಅದು ಕಕುದಿ ಎನಿಸಿಕೊಳ್ಳುವದು, ಜೋಲುತಲಿರುವ ಒಂದೇ ಅಂಡವುಳ್ಳ ಅಶ್ವವು ಏಕಾಂಡವೆನಿಸಿಕೊಳ್ಳುವದು, ಅಂಡಗಳು ರೋಮಯುಕ್ತಂಗಳಾದರೆ ಆ ಅಶ್ವವು ಜಾತಾಂಡವೆನಿಸಿಕೊಂಬುದು, ಭಸ್ಮದಂತೆ ಬಣ್ಣವುಳ್ಳ ಕುದುರೆಯು ವಕ್ರವಾದ ಬಾಲವುಳ್ಳ ಕುದುರೆಯು ಕೃಷ್ಣವರ್ಣವುಳ್ಳ ಕುದುರೆಯು ತ್ಯಜಿಸತಕ್ಕದ್ದು, ಈ ದುಷ್ಟಾಶ್ವಗಳಂ ಸಂರಕ್ಷಿಸುವ

ಒಡೆಯನಿಗೆ ಹಿತವಂ ಅಪೇಕ್ಷಿಸುವದಲ್ಲಾ, ಅಚ್ಚ ಕಪ್ಪು ಕುದುರೆಯು ದುಷ್ಟಾ ಶ್ವವೆನಿಸಿಕೊಳ್ಳುವದು, ಶುದ್ಧ ಶ್ವೇತವರ್ಣವುಳ್ಳ ಕುದುರೆಯು ಬಹು ಪೂಜ್ಯವಾದದ್ದು; ಇನ್ನು ಈ ಅಶ್ವಜಾತಿಗಳ ಛಾಯಾಪೃಥ್ಭೇದಗಳಂ ಪೇಳುವೆನು_ಬಹು ವರ್ಣಗಳಿಂದ ಮನೋಹರವಾದ ಸ್ಥಿರವಾದ ಮಿಂಚಿನಂತೆ ಪೊಳೆಯುತಲಿರುವ ಛಾಯೆಯು ಪೃಥ್ವೀ ಸಂಬಂಧ ಛಾಯೆ ಎನಿಸುವದು, ವರ್ಷಾಕಾಲದ ಮೇಘದಲ್ಲಿರುವ ಕಾಂತಿಯಂತೆಯು ಜಲದಕಾಂತಿಯಂತೆ ಇರುವ ಛಾಯೆಯು ವರುಣ ಸಂಬಂಧಿಛಾಯೆ ಎನಿಸಿಕೊಳ್ಳುವದು ; ಸುವರ್ಣದಕಾಂತಿಯಂತೆಯು ತಳಿರುಗಳಕಾಂತಿಯಂತೆಯು ಯಿರುವಛಾಯೆಗಳು ಅಗ್ನಿಸಂಬಂಧಿಛಾಯೆಯನಿಸಿಕೊಳ್ಳುವದು, ಬಹುವಿಧವಾಗಿ ಭಿನ್ನಭಿನ್ನವಾದಛಾಯೆಯು ಅಂತರಿಕ್ಷಸಂಬಂಧಿಛಾಯೆಯನಿಸಿಕೊಳ್ಳುವದು ಎಲೈರಾಯನೇ ! ಇನ್ನು ಅಶ್ವಗಳಗತಿಭೇದಂಗಳಂ ಪೇಳುವೆನು_ಸಿಂಹದಂತೆಯು, ಹುಲಿಯಂತೆಯು, ಆನೆಯಂತೆಯು, ಹಂಸೆಯಂತೆಯು, ನವಿಲಿನಂತೆಯು, ಶರಭದಂತೆಯು, ವೃಷಭದಂತೆಯು, ಮುಂಗಿಶಿಯಂತೆಯು, ಒಂಟೆಯಂತೆಯುನಡೆಯುಳ್ಳಕುದುರೆಗಳುಒಡೆಯನಿಗೆಸಂಪದಭಿವೃದ್ಧಿಯಂಕೊಡುವವು; ವಕ್ರವಾಗಿಯು ವಿಷಮವಾಗಿಯು ಯಡವುತಲು ಮುಗ್ಗರಿಸುತಲು ಚಮತ್ಕಾರವಿಲ್ಲದೆ ಮಿಶ್ರಗತಿಯುಳ್ಳ ಕುದುರೆಗಳು ಶ್ರೇಷ್ಟಾಶ್ವಗಳಲ್ಲಿ ಶೇರಿದವು, ಆದಾಗ್ಯೂಗತಿಗಳಿಂದವಕ್ರಗಳಾದರೆ ಪ್ರಶಸ್ತಗಳಲ್ಲವೆಂದುಪೇಳ್ವರು; ಇನ್ನೂಕುದುರೆಗಳಗಂಧಭೇದಂಗಳಂ ಪೇಳುವೆನು_ಕಂಣುಗಳಲ್ಲಿ ಕಿವಿಗಳಲ್ಲಿ ಮುಖದಲ್ಲಿ ಮೂಗಿನಹೊಳ್ಳೆಗಳಲ್ಲಿ ಬೆಮರಿನಲ್ಲಿ ಮೂತ್ರಪುರೀಷಂಗಳಲ್ಲಿಯೂ ಅತ್ತಿಹುವ್ವಿನಂತೆ ಕಡಹದಹುವ್ವಿನಂತೆ ಮೊಲ್ಲೆಹುವ್ವಿನಂತೆ ಬಿಲ್ವಪುಷ್ಪದಂತೆ ತುಪ್ಪದಂತೆ ಹಸುವಿನಹಾಲಿನಂತೆಯು ವಾಸನೆಯುಳ್ಳಕುದುರೆಗಳು ಸುಗಂಧಯುಕ್ತಂಗಳೆನಿಸಿಕೊಂಬುವವು ; ಇವುಗಳಿಗೆಸಮಾನವಲ್ಲದೆ ದುರ್ಗಂಧವುಳ್ಳ ಕುದುರೆಗಳು ದುರ್ಗಂಧಯುಕ್ತಗಳೆನಿಸಿಕೊಳ್ಳುವವು, ಇನ್ನು ಕುದುರೆಗಳಸ್ವರಭೇದವಂಪೇಳುವೆನು_ಯಾವಅಶ್ವಗಳು ವೀಣಾಮೃದಂಗ ಭೇರಿ ಧ್ವನಿಗಳೊಡನೆ, ಮತ್ತೂ ಗಜಕ್ರೌಂಚಪಕ್ಷಿ ,ಶಂಖ, ಸಿಂಹ, ವ್ಯಾಘ್ರಗಳಧ್ವನಿಗಳೊಡನೆ ಸಮಾನವಾದ ಧ್ವನಿಯುಳ್ಳವೋ ಆ ಅಶ್ವಗಳು ಶುಭಕರಂಗಳಾಗಿರುವವು ಯಾವಅಶ್ವಗಳು ಮೊಟಕುಮೊಟಕಾಗಿ ಸೂಕ್ಷ್ಮವಾಗಿ ಗದ್ಗದವಾಗಿ ಕಠಿಣ

ವಾಗಿ ಅಪಸ್ವರವಾಗಿವರಾಹೋಷ್ಟ್ರಮೊದಲಾದ್ದಕ್ಕೆ ಸಮಾನವಾಗಿರುವ ಧ್ವನಿಯುಳ್ಳವೋ ಆ ಕುದುರೆಗಳು ಶುಭಕರಂಗಳಲ್ಲಾ, ಮತ್ತೂ ಆ ಕುದುರೆಗಳು ತನ್ನ ಸ್ವಾಮಿಯು ಐಶ್ವರ್ಯವಂ ಅಪಹರಿಸುವವು, ಮತ್ತೂ ಉತ್ತಮ ಮಧ್ಯಮವು ಪೇಳಲ್ಪಡುವವು, ಬ್ರಹ್ಮ ರುದ್ರ ಇಂದ್ರ ಕುಬೇರ ಯಮ ಗಂಧರ್ವ ವರುಣ ಇವರುಗಳಿಗೆ ಯೋಗ್ಯವಾದ ಸ್ವಭಾವವುಳ್ಳವಾಗಿ ದೇವಸತ್ವಗಳೆಂದು ಪ್ರಸಿದ್ಧಂಗಳಾದ ಅಶ್ವಗಳು ಉತ್ತಮಾಶ್ವಂಗಳು, ರಾಕ್ಷಸಾಸುರ ಪಿಶಾಚ ಪಿತೃದೇವತೆಗಳು ಸರ್ಪಗಳು ಪಕ್ಷಿಗಳು ಇವುಗಳ ಸ್ವಭಾವ ಉಳ್ಳವಾಗಿ ಹೀನಸತ್ವಗಳೆಂದು ಪ್ರಸಿದ್ಧಗಳಾದ ಅಶ್ವಗಳು ಮಧ್ಯಮಾಶ್ವಗಳು, ದೇವಸತ್ವ ಹೀನಸತ್ವಗಳ ಲಕ್ಷಣಗಳಂ ಪೇಳುವೆನು-ಶುಭ್ರಾದಿವರ್ಣಗಳು ಶುಭವಾದ ಸುಳಿಗಳು ಮೃದುವಾದ ಸ್ವರಗಳು ಶುಭವಾದ ಗಮನವು ಇವುಗಳಿಂ ಕೂಡಿ ಒಳ್ಳೇ ಸ್ವಭಾವ ಉಳ್ಳವಾಗಿ, ಸ್ವೇದಾದಿಗಳಲ್ಲಿ ಸುಗಂಧ ಉಳ್ಳವಾಗಿ, ಶುಚಿತ್ವ ಸದಾಚಾರ ಸತ್ಕುಲಪ್ರಸೂತಿ ವಿನಯಗಳಿಂ ಕೂಡಿದ ಅಶ್ವಗಳು ದೇವಸತ್ವಗಳು, ಗಂಧರ್ವರು, ರಾಕ್ಷಸರು, ಋಷಿಗಳು, ಯತಿಗಳು, ಇವರಿಗೆ ಯೋಗ್ಯವಾದ ಸ್ವಭಾವವುಳ್ಳವಾಗಿರುವವು ಪ್ರಶಸ್ತಂಗಳು, ಅಶುಚಿಯಲ್ಲಿ ಕಲಹಂಗಳಲ್ಲಿ ಆಸಕ್ತಂಗಳಾದ ಅಶ್ವಗಳು ಹೀನಸತ್ವಂಗಳು, ಎಲೈ ಸುಗಂಧರಾಯನೇ ! ಈವರಿಗೆ ಅಶ್ವಗಳ ಜಾತಿ ಮೊದಲಾಗಿ ಸ್ವಭಾವದವರಿಗೂ ವಿಶಿಷ್ಟವೂ ವಿಶದವಾಗಿ ಹೇಳಲ್ಪಟ್ಟಿತು, ಇನ್ನುಮೇಲೆ ಈ ಕುದುರೆಗಳಲ್ಲಿರುವ ಸುಳಿಗಳ ವಿವರಗಳಂ ಇದರಿಂದಾಗುವ ಶುಭಾಶುಭ ಫಲಂಗಳಂ ಕೂಡ ಪೇಳುವೆನು, ಸಾವಧಾನವಾಗಿ ಕೇಳುವನಾಗು —ಗರ್ಭಸ್ಥವಾಗಿ ಶಿಶುವಾಗಿರುವ ಅಶ್ವಗಳ ರೋಮಗಳಂ ಗರ್ಭದಲ್ಲಿ ಅತಿ ವೇಗದಿಂ ಸಂಚರಿಸುವ ವಾಯುವು ಚಕ್ರಾಕಾರವಾಗಿ ಸುತ್ತಿಸುವದು, ಇವೇ ಅಶ್ವಂಗಳಲ್ಲಿ ಆವರ್ತಂಗಳಾಗುವವು, ಈ ಸುಳಿಗಳಿಗೆ ಆವರ್ತವೆಂದು, ಶತಪದೀ ಎಂದು, ಶುಕ್ತಿ ಎಂದು, ಅವಲೀಢವೆಂದು, ಪಾದುಕವೆಂದು, ಪಾದುಕಾರ್ಧವೆಂದು, ಸಮೂಹವೆಂದು, ಮುಕುಳವೆಂದು ಈ ಎಂಟು ವಿಧವಾದ ಹೆಸರು ಉಂಟಾಗಿ ಆಯಾ ಆಕಾರ ಜಲದಲ್ಲಿರುವ ಸುಳಿಗಳಿಗೆ ಸಮಾನವಾದ ಆಕಾರವುಳ್ಳವಾಗಿರುವದೋ ಆ ಸುಳಿಯು ಆವರ್ತವೆನಿಸಿಕೊಳ್ಳುವದು, ಜರಿಗೆ ಸಮಾನವಾದದ್ದು ಶತಪದಿ ಎನಿಸುವದು; ಕಪ್ಪೆಚಿಪ್ಪಿಗೆ ಸಮಾ

ನವಾದ ಸುಳಿಯು ಶುಕ್ತಿ ಎನಿಸಿಕೊಳ್ಳುವದು, ಕರುವಿನಿಂದಾ ನೆಕ್ಕಲ್ಪಟ್ಟ ಹಸು ವಿನ ಶರೀರದ ರೋಮಗಳಂತಿರುವ ಸುಳಿಯು ಅವಲೀಢವೆನಿಸಿಕೊಳ್ಳುವದು, ಪೂವಿಗೆ ಸಮಾನವಾದ ಸುಳಿಯು ಪಾದುಕವೆನಿಸಿಕೊಳ್ಳುವದು,ಅರ್ಧಪಾದುಕೆಗೆ ಸಮಾನವಾದ ಸುಳಿಯು ಪಾದುಕಾರ್ಧವೆನಿಸಿಕೊಳ್ಳುವದು, ಹುವ್ವಿನ ಮೊಗ್ಗು ಗಳಿಗೆ ಸಮಾನವಾದ ಸುಳಿಯು ಮುಕುಳವೆನಿಸಿಕೊಳ್ಳುವದು, ಈ ಸುಳಿಗ ಳಲ್ಲಿ ಎರಡಾಗಲೀ ಅನೇಕಗಳಾಗಲೀ ಒಟ್ಟಿಗೆ ಗುಂಪಾಗಿ ಕೂಡಿದ್ದರೆ ಆ ಸುಳಿ ಯು ಸಮೂಹವೆನಿಸಿಕೊಳ್ಳುವದು, ಈ ಆವರ್ತಾದಿ ಸುಳಿಗಳಿಗಿಂತಲೂ ಇತರ ಗಳಾದ ಸುಳಿಗಳು ಕಾಣಲ್ಪಟ್ಟರೆ ಆ ಸುಳಿಗಳಿಗೂ ಕೂಡಾ ಸ್ಥಾನವಿಶೇಷದಿಂದ ಲೂ, ಆಕಾರಂಗಳಿಂದಲೂ ಶುಭಾಶುಭ ಫಲಂಗಳುಂಟಾಗುವವು, ಇವುಗಳ ಪ್ರಮಾಣಂಗಳಂ ಪೇಳುವೆನು ;---ಆವರ್ತವೆಂಬ ಸುಳಿಯು ಅಂಗುಳ ತ್ರಿಭಾ ಗದಲ್ಲಿ ಒಂದು ಭಾಗದ ಪ್ರಮಾಣಉಳ್ಳದ್ದು, ಶತಪಾದಿ ಎಂಬ ಸುಳಿಯು ಒಂದೂ ವರೆ ಅಂಗುಲ ಪ್ರಮಾಣಉಳ್ಳದ್ದು, ಶುಕ್ತಿ ಎಂಬ ಸುಳಿಯು ಮೂರುವರೆ ಅಂ ಗುಲಪ್ರಮಾಣಉಳ್ಳದ್ದು, ಅವಲೀಢವೆಂಬ ಸುಳಿಯು ಅಂಗುಳತ್ರಯ ಪರಿಮಿತ ವಾಗಿರುವದು, ಮುಕುಳವೆಂಬ ಸುಳಿಯು ಅಂಗುಲದ ನಾಲ್ಕು ಭಾಗದಲ್ಲಿ ಒಂದು ಭಾಗ ಪ್ರಮಾಣವುಳ್ಳದ್ದು, ಪಾದುಕವೆಂಬ ಸುಳಿಯು ಹನ್ನೆರಡು ಯವೆಗಳಿಗೆ ಸಮಪ್ರಮಾಣವುಳ್ಳದ್ದು, ಪಾದುಕಾರ್ಧವೆಂಬ ಸುಳಿಯು ಆರು ಯವೆಗಳಿಗೆ ಸಮಾನವಾಗಿರುವುದು, ಸಮೂಹವೆಂಬ ಸುಳಿಯು ಅರ್ಧಾಂಗುಲ ಪ್ರಮಾಣವುಳ್ಳದ್ದಾಗಿರುವುದು ; ಈ ರೀತಿ ಅಶ್ವಗಳ ದೇಹದಲ್ಲಿ ಪುಟ್ಟಿರುವ ಸುಳಿಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಈ ಲಕ್ಷಣಗಳಿಂದ ಯುಕ್ತಗಳಾಗಿ ಸ್ಫುಟಗಳಾಗಿ ಪ್ರದಕ್ಷಿಣಾಕಾರಂಗಳಾಗಿದ್ದರೆ ಆ ಸುಳಿಗಳು ರಕ್ಷಕರಿಗೆ ಶುಭ ವಂಕೊಡುವವು, ಸ್ಥಾನಚ್ಯುತವೆಂದು ವಿವರ್ಣವೆಂದು ದುಸ್ಥಿತವೆಂದು ತಿರ್ಯ ಗಾಯುಕವೆಂದು, ವಿನ್ಯಸ್ತವೆಂದು, ವಿನಿಗೂಢವೆಂದು, ಛಿನ್ನಾಕಾರವೆಂದು, ಚ ಮವೆಂದು, ಮಹತ್ತೆಂದು, ವಾಮಭಾಗದಲ್ಲಿ ಪ್ರದಕ್ಷಿಣಾಕಾರವಾದದ್ದು, ದ ಕ್ಷಿಣಭಾಗದಲ್ಲಿ ಅಪಸವ್ಯವಾದ ಸುಳಿಯು ಕೂಡಾ ನಿಷಿದ್ಧಗಳೆಂದು ಹೇಳಲ್ಪ ಡುವವು, ಇವು ಅಶುಭವಂ ಕೊಡುವವು, ಇವುಗಳಲ್ಲಿ ಯಾವ ಸುಳಿಯು ಇರತಕ್ಕ ಸ್ಥಾನವಂ ಬಿಟ್ಟು ಹೊರಚ್ಚಾಗಿರುವವೋ ಆ ಸುಳಿಯು ಸ್ಥಾನಚ್ಯು

ತವೆನಿಸಿಕೊಳ್ಳುವದು, ಯಾವ ಸುಳಿಯು ಸ್ವಲ್ಪ ಕಾಣುತ ಚನ್ನಾಗಿ ಕಾಣದೇ ಇರುವದೋ ಅದು ದುಸ್ಥಿತವೆನಿಸಿಕೊಳ್ಳುವದು,ಇವುಗಳಿಂದ ರಕ್ಷಕನಿಗೆ ವ್ಯಸನವುಂಟಾಗುವದು, ಸುಳಿಯು ಅಡ್ಡವಾಗಿ ಉದ್ದವಾಗಿದ್ದರೆ ರಾಜ್ಯಹಾನಿ, ಭಯ ಉಂಟಾಗುವದು, ವಿಶೀರ್ಣಂಗಳಾಗಿ, ವಿಶಮಂಗಳಾಗಿ, ಸ್ಥೂಲಂಗಳಾಗಿ, ಉನ್ನತಂಗಳಾಗಿ, ಸವ್ಯಾಪಸವ್ಯಂಗಳಾಗಿ ಚಿತ್ರವರ್ಣಂಗಳಾದ ಕೂದಲುಗಳಿಂದ ಅತ್ಯಂತ ಗುಂಪಾದಂತಿರುವ ಸುಳಿಯು ವಿನ್ಯಸ್ತವೆನಿಸಿಕೊಳ್ಳುವದು, ಆ ಸುಳಿಯು ರಕ್ಷಣೆಯಂ ಮಾಡುವರ ಆಯುಸ್ಸಂ ಧನವಂ ಅಪಹರಿಸುವದು, ಯಾವ ಸುಳಿಯ ಸ್ಥಿತಿಯು ಕಾಣಲ್ಪಡುವದಿಲ್ಲವೋ ಅದು ವಿನಿಗೂಢವೆನಿಸಿಕೊಳ್ಳುವದು, ಆ ಸುಳಿಯಿಂದ ರಕ್ಷಕನು ಮೂಢನಾಗುವನು, ರೋಮಗಳಲ್ಲಿ ಇಬ್ಭಾಗವಾಗಿರುವ ಸುಳಿಯು ಛಿನ್ನಾಕಾರವೆನಿಸಿಕೊಳ್ಳುವದು, ಆ ಸುಳಿಯು ಶೀಘ್ರವಾಗಿ ತನ್ನ ಸ್ವಾಮಿಗೆಶಿರಚ್ಛೇದನವನ್ನುಂಟುಮಾಡುವದು,ಸ್ವಲ್ಪ ಪ್ರಮಾಣವುಳ್ಳಸುಳಿಯುಚಮುವೆನಿಸಿಕೊಳ್ಳುವದುಅದು ಸ್ವಾಮಿಯ ಬಲವಂಅಪಹರಿಸುವದು,ಯಾವ ಸುಳಿಯು ಅಧಿಕಪ್ರಮಾಣವಾಗಿರುವದೋ, ಅದು ಮಹತ್ತೆನಿಸಿಕೊಳ್ಳುವದುಅದು ಸ್ವಾಮಿಗೆವ್ಯಸನವಂಕೊಡುವದು,ವಾಮಭಾಗದಲ್ಲಿ ಪ್ರದಕ್ಷಿಣವಾಗಿರುವಸುಳಿಯುದಕ್ಷಿಣಭಾಗದಲ್ಲಿ ಅಪ್ರದಕ್ಷಿಣವಾಗಿರುವಸುಳಿಯುಕೂಡಸ್ವಾಮಿಗೆ ಸ್ಥಾನಭ್ರಂಶವಂ ಶತ್ರುವೃದ್ಧಿಯಂಕೂಡಾ ಉಂಟುಮಾಡುವದು, ನಿಷಿದ್ಧ ಸ್ಥಾನಂಗಳಲ್ಲಿ ನಿಂದಿತಂಗಳಾದ ಸುಳಿಗಳು ಅತಿ ಕಷ್ಟವಂಕೊಡುವದು, ಉತ್ಕೃಷ್ಟ ಸ್ಥಾನಂಗಳಲ್ಲಿ ಪ್ರಶಸ್ತಂಗಳಾದ ಸುಳಿಗಳು ಸಂಪೂರ್ಣಫಲಂಗಳಂ ಕೊಡುವವು, ಪ್ರಶಸ್ತಂಗಳಾದ ಸ್ಥಾನಂಗಳಲ್ಲಿರುವ ನಿಂದಿತಂಗಳಾದ ಸುಳಿಗಳು ನಿಂದಿತವಾದ ಸ್ಥಾನಂಗಳಲ್ಲಿರುವ ಪ್ರಶಸ್ತವಾದ ಸುಳಿಗಳು ಶುಭಾಶುಭ ಮಿಶ್ರಫಲಗಳಂ ಕೊಡುವವು, ಶುಭಾಶುಭ ಮಿಶ್ರವಾದ ಸುಳಿಗಳಲ್ಲಿ ಯಾವದು ಅಧಿಕವಾಗಿ ಕಾಣುವುದೋ ಅದಂ ಅನುಸರಿಸಿ ಫಲವಂ ತಿಳಿಯಬೇಕೆಂದು ಪೂರ್ವವಿದ್ವಾಂಸರು ಹೇಳುವರು ;; ಇನ್ನು ದಶಧ್ರುವಗಳ ವಿವರವಂ ಹೇಳುವೆನು —ದಶಧ್ರುವವೆಂಬ ಆವರ್ತ ಹತ್ತು ಪ್ರಕಾರವಾಗಿರುವದು, ಸ್ವಸ್ಥಾನಂಗಳಲ್ಲಿರುವವು ಸ್ಥಾನವಂ ಬಿಟ್ಟಿರುವವು ನಿರೂಪಿಸಲ್ಪಡುತಲಿದೆ— ಮುಸುಡಿಯ ಸಮೀಪದಲ್ಲಿ ಒಂದು ಸುಳಿಯು ಲಲಾಟದಲ್ಲಿ ಒಂದು ಸುಳಿಯು

ಶಿರಸ್ಸಿನಲ್ಲಿ ಎರಡು ಸುಳಿಯು, ಎದೆಯಲ್ಲಿ ಎರಡುಸುಳಿಯು ಒಂದೊಂದು ಪಾರ್ಶ್ವದಲ್ಲಿ ಒಂದೊಂದು ಸುಳಿಗಳು ಕಿಬ್ಬುಹೊಟ್ಟೆಯು ಉಭಯ ಪಾರ್ಶ್ವದಲ್ಲಿ ಎರಡು ಸುಳಿಯು ಈ ಸ್ಥಾನಗಳ ಸುಳಿಗಳೇ ದಶಧ್ರುವಗಳೆನಿಸಿಕೊಳ್ಳುವವು ; ಮುಖದಲ್ಲಿ ದಕ್ಷಿಣಭಾಗವಂ ಮಧ್ಯಮ ಭಾಗವನ್ನಾದರೂ ಆಶ್ರಯಿಸಿ ಪ್ರದಕ್ಷಿಣಾಕಾರಗಳಾಗಿ ಎರಡು ಸುಳಿಗಳಿದ್ದರೆ ಧನ ಸೌಭಾಗ್ಯವುಂಟಾಗುವದು ; ಅಪಾನಸ್ಥಾನದಲ್ಲಿ ವಾಮಭಾಗವನ್ನಾಶ್ರಯಿಸಿರುವ ಸುಳಿಯು ಧನನಾಶಕವಾಗುವುದು, ಹುಬ್ಬುಗಳ ಕೊನೆಯಲ್ಲಾದರೂ ಮಧ್ಯದಲ್ಲಿ ದಕ್ಷಿಣಭಾಗದಲ್ಲಿ ಊರ್ಧ್ವಭಾಗದಲ್ಲಾದರೂ ಇರುವ ಸುಳಿಯು ಧನವಂ ಅಪಹರಿಸುವದು ; ಹಣೆಯ ಕೊನೆಯಲ್ಲಿ ಪ್ರದಕ್ಷಿಣಾಕಾರವಾಗಿ ಧ್ರುವವೆಂಬ ಸುಳಿಯು ಯಾವಕುದುರೆಗೆ ಇರುವದೋ ಆ ಕುದುರೆಯು ದೀರ್ಘಾಯುಸ್ಸುಳ್ಳದ್ದಾಗಿ ಸ್ವಾಮಿಗೆ ಸುಖಾಭಿವೃದ್ಧಿಯಂ ಉಂಟುಮಾಡುವದು ; ಯಾವ ಕುದುರೆಯ ಹಣೆಯ ಮಧ್ಯದಲ್ಲಿ ಧ್ರುವವೆಂಬ ಸುಳಿ ಇರುವದೋ ಆ ಅಶ್ವವು ಮಧ್ಯಮಾಯುಸ್ಸುಳ್ಳದ್ದು. ಹುಬ್ಬುಗಳ ಮಧ್ಯದಲ್ಲಿ ಹಣೆಯಲ್ಲಾದರೂ ವಾಮಭಾಗವನ್ನಾಶ್ರಯಿಸಿ ಧ್ರುವವೆಂಬ ಸುಳಿಯು ಇದ್ದರೆ ಆ ಕುದುರೆಯು ಅಲ್ಪಾಯುಸ್ಸುಳ್ಳದ್ದಾಗಿ ಅನರ್ಥವಂ ಉಂಟುಮಾಡುವದು ; ಯಾವ ಅಶ್ವದ ಮಸ್ತಕದಲ್ಲಿರುವ ಧ್ರುವಗಳೆಂಬ ಸುಳಿಗಳು ವಿಷಮಗಳಾಗಿರುವವೋ ಆ ಅಶ್ವವು ಎಂಟುವರ್ಷ ಜೀವಿಸುವದು, ಸ್ವಾಮಿಗೆ ಧನನಾಶವಾಗುವದು ; ಅಶ್ವಗಳ ಮಸ್ತಕ್ಯಗಳೆಂಬ ಸುಳಿಗಳು ವಿನ್ಯಸ್ತವೆಂಬ ಸುಳಿಯು ಆಕಾರವಂ ವಹಿಸಿ ಕಿವಿಗಳ ಮಧ್ಯದಲ್ಲಿರುವದಾದರೆ ಆ ಕುದುರೆಯು ಅಲ್ಪಾಯುಸ್ಸುಳ್ಳದ್ದಾಗಿ ಸೌಖ್ಯವಂ ಧನವಂಕೂಡಾ ಅಪಹರಿಸುವದು ; ಯಾವ ಕುದುರೆಗೆ ಮಸ್ತಕ್ಯಗಳೆಂಬ ಸುಳಿಗಳು ಶುಕ್ತಿ ಎಂಬ ಸುಳಿಯ ಆಕಾರಕ್ಕೆ ಸಮಾನಂಗಳಾಗಿ ಸ್ಥಾನವಂ ಬಿಟ್ಟು ಕೇಶಗಳ ಅಂತ್ಯಭಾಗವಂ ಆಶ್ರಯಿಸಿ ಇರುವವೋ ? ಆ ಅಶ್ವವು ಸುಖವಂ ಅಪೇಕ್ಷಿಸುವ ಜನರಿಂದ ತ್ಯಜಿಸಲ್ಪಡತಕ್ಕದ್ದು ; ಯಾವ ಕುದುರೆಗಳಿಗೆ ಮಸ್ತಕ್ಯಗಳೆಂಬ ಸುಳಿಗಳು ಪ್ರದಕ್ಷಿಣಾಕಾರಗಳಾಗಿ ಸಮಪ್ರದೇಶದಲ್ಲಿ ಇರುವವೋ ಆ ಅಶ್ವಗಳು ಸ್ವಾಮಿಗೆ ಧನ ಸಮೃದ್ಧಿಯಂ ವಂಶ ವೃದ್ಧಿಯಂ ಕೂಡಾ ಉಂಟುಮಾಡುವವು ; ಅಶ್ವದ ಎದೆಯೊಳ್ ದಕ್ಷಿ

ಕಂಠಭಾಗದಲ್ಲಿ ಆವರ್ತವೆಂಬ ಸುಳಿಯಾದರೂ ಶುಕ್ತಿ ಎಂಬ ಸುಳಿಯಾದರೂ ಇದ್ದರೆ ಆ ಅಶ್ವವು ಪ್ರಶಸ್ತವಾಗಿ ಧನಧಾನ್ಯವಂ ಉಂಟುಮಾಡುವದು ; ಅಶ್ವಗಳ ಉಭಯ ಪಾರ್ಶ್ವಗಳಲ್ಲಿಯೂ ಸುಳಿಗಳು ಸ್ವಸ್ಥಾನಗಳಲ್ಲಿದ್ದರೆ ಆ ಸುಳಿಗಳು ಪ್ರಶಸ್ತಗಳೆನಿಸಿಕೊಳ್ಳುವವು ; ಅಶ್ವಗಳ ಕಿಬ್ಬೊಟ್ಟೆಯ ಉಭಯಪಾರ್ಶ್ವಗಳಲ್ಲಿಯೂ ಇರುವ ಧ್ರುವವೆಂಬ ಸುಳಿಗಳು ಎರಡೂ ಒಂದೇ ಓಳಿಯಲ್ಲಿ ಕೂಡಿರುವವಾದರೆ ಆ ಅಶ್ವವು ಅಲ್ಪಾಯುಸ್ಸುಳ್ಳದ್ದಾಗಿ ಶುಭಾರ್ಥಿಗಳಾದವರಿಂ ತ್ಯಜಿಸಲ್ಪಡತಕ್ಕದ್ದು ; ಯಾವ ಅಶ್ವಕ್ಕೆ ಧ್ರುವಸುಳಿಯು ರೋಮಯುಕ್ತವಾಗಿರುವದೋ ? ಆ ಅಶ್ವವು ಅಲ್ಪಾಯುಸ್ಸುಳ್ಳದ್ದಾದ್ದರಿಂ ಶುಭಕರವಲ್ಲ ; ಈ ಪರಿಯಾಗಿ ಸ್ವಸ್ಥಾನಗಳಲ್ಲಿಯೂ ಸ್ಥಾನವಂಬಿಟ್ಟು ಹೊರಬ್ಬಾಗಿಯೂ ಇರುವ ಧ್ರುವಗಳೆಂಬ ಹತ್ತು ಸುಳಿಗಳು ನಿರೂಪಿಸಲ್ಪಟ್ಟವು ; ಮತ್ತು ಮುಖಾದಿ ಸ್ಥಾನಗಳಲ್ಲಿ ಧ್ರುವ ಸುಳಿಯು ಇಲ್ಲದಿದ್ದರೆ ಆ ಫಲವಂ ಹೇಳುವೆನು :— ಮೇಲಣ ತುಟಿಯ ಸಮೀಪದಲ್ಲಿ ಸುಳಿ ಇಲ್ಲದ ಅಶ್ವವು ತನ್ನ ಸ್ವಾಮಿಯಂ ಕೊಲ್ಲುವದು ; ಲಲಾಟದಲ್ಲಿ ಉಚಿತವಾದ ಸುಳಿ ಇಲ್ಲದ ಅಶ್ವವು ಸ್ವಾಮಿಗೆ ಮಹತ್ತಾದ ದೋಷವಂ ಉಂಟುಮಾಡುವುದು ; ಮಸ್ತಕ್ಯವೆಂಬ ಸುಳಿಯಿಂದ ರಹಿತವಾದ ಕುದುರೆಯು ಸ್ವಾಮಿಗೆ ಶಿರೋರೋಗವಂ ಉಂಟುಮಾಡುವದು ; ಈ ಅಶ್ವವು ಪುಂಪಕೀ ಎಂದು ಹೇಳಲ್ಪಡುವದು, ಹಿರಳಿನಲ್ಲಿ ಸುಳಿಯುಳ್ಳ ಕುದುರೆಯೊಳ್ ಯಾವ ದೋಷಗಳುಂಟೋ ಆ ದೋಷಗಳು ಶೃಂಗವುಳ್ಳ ಕುದುರೆಯಲ್ಲಿಯೂ ಹೇಳಲ್ಪಡುವದು ; ಹಿರಳಿನ ಮುಂಭಾಗದೊಳ್ ಸುಳಿಯುಳ್ಳ ಅಶ್ವದಲ್ಲಿ ಯಾವ ದೋಷಗಳಿರುವವೋ ಆ ದೋಷಗಳು ಆಸನಸ್ಥಾನದಲ್ಲಿ ಸುಳಿಯುಳ್ಳ ಅಶ್ವಗಳಲ್ಲಿಯೂ ಹೇಳಲ್ಪಡುವವು, ಹೃದಯದಲ್ಲಿ ಸುಳಿಯುಳ್ಳ ಅಶ್ವದಲ್ಲಿ ಯಾವ ದೋಷಂಗಳುಂಟೋ ಆ ದೋಷಂಗಳು ಮಸ್ತಕದಲ್ಲಿ ಸುಳಿ ಇಲ್ಲದೇ ಇರುವ ಅಶ್ವಂಗಳಲ್ಲಿಯೂ ಉಂಟಾಗುವವು ; ವಕ್ಷಸ್ಥಲದಲ್ಲಿ ಉಚಿತವಾದ ಸುಳಿ ಇಲ್ಲದೇ ಇರುವ ಅಶ್ವವು ತನ್ನ ಸ್ವಾಮಿಯ ಪುತ್ರರಂ ಕೊಲ್ಲುವುದು ; ಪಾರ್ಶ್ವಗಳಲ್ಲಿ ಪುಟ್ಟುವ ಆವರ್ತಗಳಿಂದ ರಹಿತವಾದ ಅಶ್ವವು ಉದರರೋಗವೃದ್ಧಿಯಂ ಉಂಟುಮಾಡುವುದು ; ಕಿಬ್ಬೊಟ್ಟೆಯ ಉಭಯ ಪಾರ್ಶ್ವಗಳಲ್ಲಿಯೂ ಇರತಕ್ಕ

ಧ್ಯವವೆಂಬ ಸುಳಿಗಳಿಂದ ರಹಿತವಾದ ಅಶ್ವವು ತನ್ನ ಸ್ವಾಮಿಗೆ ನಾಶವಂ ಉಂಟುಮಾಡುವದು ; ಈ ರೀತಿ ದಶಧ್ರುವಗಳಿಂದ ರಹಿತಗಳಾದ ಅಶ್ವಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಫಲವು ಹೇಳಲ್ಪಟ್ಟಿತು ; ಇನ್ನು ಅಶುಭಕರಗಳಾದ ಅಶ್ವಗಳಿಂದುಂಟಾಗುವ ಫಲವು ಹೇಳಲ್ಪಡುವುದು :—ಅಶ್ವದ ಮೇಲಣ ತುಟಿಯಲ್ಲಿ ಪುಟ್ಟಿದ ಸುಳಿಯು ಸ್ವಾಮಿಗೆ ಮಾತೃಹಾನಿಯಂ ಉಂಟುಮಾಡುವುದು, ಮುಖಕ್ಕೆ ಮೇಲೆ ದಕ್ಷಿಣ ಭಾಗದಲ್ಲಿ ರುವ ಸುಳಿಯು ಸ್ವಾಮಿಗೆ ಮಿತ್ರನಾಶಕರವಾಗುವುದು ; ಅಶ್ವಗಳ ಅಧರೋಷ್ಟಗಳಲ್ಲಿ ಗಲ್ಲದಲ್ಲಿ ಮುಖದಲ್ಲಿ ನಾಸಿಕದಲ್ಲಿ ಕಪೋಲಗಳಲ್ಲಿ ಸುಳಿಗಳಿದ್ದರೆ ಆ ಅಶ್ವವು ಸ್ವಾಮಿಗೆ ನಾಶವಂ ಉಂಟುಮಾಡುವುದು ; ನಾಸಿಕಾಗ್ರಪ್ರದೇಶದಲ್ಲಿ ಹುಟ್ಟಿರುವ ಎರಡು ಸುಳಿಗಳು ಜೀವನವಂ ಅಪಹರಿಸುವವು ; ಕಣ್ಣೀರು ಬೀಳುವ ಸ್ಥಾನಗಳಲ್ಲಿ ಹುಟ್ಟಿರುವ ಎರಡು ಸುಳಿಗಳು ತನ್ನ ಸ್ವಾಮಿಯ ಕಣ್ಣುಗಳಿಂದ ದುಃಖಾಶ್ರುವವಂ ಬೀಳಿಸುವವು. ಕಣ್ಣೀರುಬೀಳುವ ಮಾರ್ಗಗಳಲ್ಲಿ ಪುಟ್ಟಿರುವಸುಳಿಗಳೆರಡುನೇತ್ರರೋಗವಂ ಉಂಟುಮಾಡುವವು, ಭ್ರೂಮಧ್ಯದಲ್ಲಿರುವ ಸುಳಿಗಳೆರಡು ಶತ್ರುವೃದ್ಧಿಕರಗಳಾಗುವವು, ಕಪೋಲಮೂಲದಲ್ಲಿಯೂ, ಕಪೋಲಗಳಲ್ಲಿಯೂ ಇರುವ ಎರಡು ಸುಳಿಗಳು ಹೆಕ್ಕತ್ತಿನಲ್ಲಿರುವ ಯೆರಡು ಸುಳಿಗಳೂ ಕೂಡ ಸ್ವಾಮಿಗೆ ರೋಗಪ್ರದಗಳಾಗುವವು, ಕೇಸರಗಳಲ್ಲಿ ಕಕ್ಷಪ್ರದೇಶಗಳಲ್ಲಿ ಮಧ್ಯದಲ್ಲಿ ಕಪೋಲಗಳಲ್ಲಿ ಹೆಗಲಿನಲ್ಲಿಯೂ ಸಹಾ ಇರುವ ಎರಡು ಸುಳಿಗಳು ಮತ್ತೂ ಮೂಗುಗಳ ಪಾರ್ಶ್ವದ ಹಳ್ಳಗಳಲ್ಲಿಯೂ ಕಿವಿಗಳ ಕೊನೆಯಲ್ಲಿಯೂ ಪುಟ್ಟಿರುವ ಎರಡು ಸುಳಿಗಳು ಸ್ವಾಮಿಗೆ ಅರ್ಥಹಾನಿಕರಗಳಾಗುವವು, ಕಂಠದಲ್ಲಿರುವ ಎರಡು ಸುಳಿಗಳು ಯುದ್ಧದಲ್ಲಿ ಸ್ವಾಮಿನಾಶವನ್ನುಂಟುಮಾಡುವವು, ಕಂಠದಲ್ಲಿ ಒಂದೇ ಸುಳಿ ಇದ್ದರೆ ಶಿಡಿಲಿನಿಂದ ಭಯ ಉಂಟಾಗುವದು, ಕಂಠಮೂಲ ಪ್ರದೇಶದಲ್ಲಿರುವ ಎರಡು ಸುಳಿಗಳು ಸ್ವಾಮಿಗೆ ಅಲ್ಪಾಯುಸ್ಸಂ ಕೊಡುವವು, ಬೆನ್ನಿನಲ್ಲಿ ಎರಡು ಸುಳಿಗಳಿದ್ದರೆ ಆ ಕುದುರೆಯು ಸ್ವಾಮಿಗೆ ಸಂಹಾರಕರವಾದ್ದು, ಹಿರಳಿನಲ್ಲಿರುವ ಒಂದು ಸುಳಿಯು ಸರ್ವವನ್ನಾಶಮಾಡುವದು, ಆದ್ದರಿಂದ ಈ ಅಶ್ವವಂ ತ್ಯಜಿಸಿ ಶಾಂತಿಯಂ ಮಾಡಬೇಕು. ಹಿರಳಿನ ಸಮೀಪದಲ್ಲಿ ಸುಳಿಯುಳ್ಳ ಅಶ್ವಕ್ಕೆ ಸ್ವಾಮಿಯಾದವನು ಯುದ್ಧದಲ್ಲಿ ಕಾಗೆಗಳಿಂ

ದ ಭಕ್ಷಿಸಲ್ಪಡುವನು. ಆಸನಸ್ಥಾನದಲ್ಲಿ ಸುಳಿಯುಳ್ಳ ಕುದುರೆಯು ತನ್ನ ಸ್ವಾಮಿಯಂ ಶೂಲದಿಂ ಕೊಲ್ಲಿಸುವದು; ಭುಜಗಳ ಮಧ್ಯದಲ್ಲಿ ಎಡದಕಡೆಯೊಳಿರುವ ಸುಳಿಗಳೆರಡು ಯುದ್ಧದಲ್ಲಿ ತನ್ನ ಸ್ವಾಮಿಯಂ ಕೊಲ್ಲುವವು; ಭುಜಾಗ್ರದಲ್ಲಿರುವ ಸುಳಿಯು ಶತ್ರುಸಂಹಾರಕವಾದ್ದು; ಪೃಷ್ಠದೊಳಿರುವ ಸುಳಿಯು ಪರಾಜಯವಂ ಕೊಡುವದು; ಮಂಡಿಯ ಸಮೀಪದಲ್ಲಿ ಮೇಲಣಭಾಗದೊಳಿರುವ ಸುಳಿಗಳೆರಡು ಅರ್ಥವಂ ಅಪಹರಿಸುವದು; ಮಂಡಿಯಲ್ಲಿರುವ ಸುಳಿಗಳೆರಡು ಸ್ವಾಮಿಗೆ ನಾಶವಂ ಕೊಡುವದು, ಜಂಘಾಪ್ರದೇಶದಲ್ಲಿರುವ ಸುಳಿಗಳೆರಡು ಸ್ವಾಮಿಗೆ ಬಂಧನವಂ ಕೊಡುವದು, ಕಣ್ಣುಗಳ ಕುಣಿಕೆಗಳಲ್ಲಿಯೂ ಕಡೆಗಣ್ಣುಗಳಲ್ಲಿಯೂ ಇರುವ ಸುಳಿಗಳೆರಡು ಸ್ವಾಮಿಯಂ ಸಂಹರಿಸುವದು, ಹಿಮ್ಮಡಿಗಳಲ್ಲಿರುವ ಸುಳಿಗಳೆರಡು ಸ್ವಾಮಿಗೆ ನಾಶಕರಗಳಾಗುವವು, ರೋಮಾಂತಗಳಲ್ಲಿರುವ ಸುಳಿಗಳೆರಡು ಸ್ವಾಮಿಯಂ ಸಂಹರಿಸುವವು, ಪಾರ್ಶ್ವಗಳಲ್ಲಿಯೂ ಶಿರಸ್ಸಿನಲ್ಲಿಯೂ ಪುಟ್ಟಿರುವ ಸುಳಿಗಳೆರಡು ಕ್ಲೇಶವನ್ನುಂಟುಮಾಡುವವು, ಎದೆಯಲ್ಲಿ ಸುಳಿಯುಳ್ಳ ಕುದುರೆಯು ಸ್ವಾಮಿಯಂ ಯಮಪಟ್ಟಣವನ್ನೈದಿಸುವದು, ಗಂಡಸ್ಥಳದಲ್ಲಿಯೂ ಪಾರ್ಶ್ವದಲ್ಲಿಯೂ ಪುಟ್ಟಿರುವ ಎರಡು ಸುಳಿಗಳು ಸ್ವಾಮಿಯಂ ನಾಶಗೊಳಿಸುವವು, ಹಿರಳಿನಲ್ಲಿಯೂ ಬೆನ್ನಿನಲ್ಲಿಯೂ ಎರಡು ಸುಳಿಗಳಿದ್ದರೆ ವಂಶಸಹಿತವಾಗಿ ತನ್ನ ಸ್ವಾಮಿಯ ಸಂಹರಿಸುವವು, ತುಟಿಗಳಲ್ಲಿ ನಾಭಿಸ್ಥಾನದಲ್ಲಿ ಮೂತ್ರಕೋಶದಲ್ಲಿ ಗುದಸ್ಥಾನದಲ್ಲಿ ಪುಟ್ಟಿರುವ ಸುಳಿಗಳೆರಡು ರೋಗಪ್ರದಗಳಾಗುವವು, ವೃಷಣದಲ್ಲಿ ಪುಟ್ಟಿದ ಸುಳಿಗಳೆರಡು ತನ್ನ ಸ್ವಾಮಿಯ ಪುತ್ರರಿಗೆ ಅಲ್ಪಾಯುಸ್ಸಂ ಕೊಡುವವು, ಗಡ್ಡದಲ್ಲಿ ಪುಟ್ಟಿರುವ ಸುಳಿಗಳೆರಡು ಸ್ವಾಮಿಗೆ ದ್ರೋಹವನ್ನೆಣಿಸುವವು, ಬಾಲದ ಬುಡದಲ್ಲಿರುವ ಸುಳಿಗಳೆರಡು ಸ್ವಾಮಿಗೆ ಮೂಲನಾಶವಂ ಮಾಡುವದು, ರೋಮಗಳಲ್ಲಿ ಪುಟ್ಟಿರುವ ಸುಳಿಗಳು ಶಿರಸ್ಸಿನಲ್ಲಿ ಪುಟ್ಟಿರುವ ಸುಳಿಗಳು ಸ್ಥಾನಭ್ರಂಶವಂ ಮಾಡುವವು, ಪೃಷ್ಠದಂಡದಲ್ಲಿರುವ ಸುಳಿಯು ಸ್ವಾಮಿಗೆ ಶತ್ರುಗಳಿಂದ ಪರಾಜಯವಂ ಉಂಟುಮಾಡುವದು, ಶಿಶ್ನಸ್ಥಾನದಲ್ಲಿ ಗುದಸ್ಥಾನದಲ್ಲಿ ಸಹಾ ಪುಟ್ಟಿರುವ ಸುಳಿಗಳು ಸ್ವಾಮಿಗೆ ಉದರರೋಗವನ್ನೀವುದು, ಅಂಡುಗಳಲ್ಲಿ ವೃಷಣಗಳಲ್ಲಿ ಪುಟ್ಟಿರುವ ಸುಳಿಗಳೆರಡು ಸ್ವಾಮಿದ್ರೋ

ಹಕರಂಗಳಾಗುವವು, ಕಪೋಲಮೂಲಂಗಳಲ್ಲಿರುವ ಸುಳಿಗಳೆರಡು ಮುರವಲ್ಲಿ ರುವ ಸುಳಿಗಳೆರಡು ಮುಖಪ್ರದಂಗಳಾಗುವವು;

ಇನ್ನುಮೇಲೆ ಶುಭಕರಂಗಳಾದ ಆವರ್ತ ಸ್ಥಾನಂಗಳು ನಿರೂಪಿಸಲ್ಪಡುವವು : — ಕಟವಾಯಿಗಳಲ್ಲಿ ಪುಟ್ಟಿರುವ ಆವರ್ತಗಳೆಂಬ ಸುಳಿಗಳೆರಡು ಸ್ವಾಮಿಗೆ ಜಯುವೃದ್ಧಿಯಂ ಮಾಡುವವು, ಪ್ರದಕ್ಷಿಣಾಕಾರವಾಗಿ ಜೊತೆಯಾಗಿ ಲಲಾಟದಲ್ಲಿ ಪುಟ್ಟಿರುವ ಆವರ್ತಂಗಳೆರಡು ಶುಭಕರಂಗಳಾಗುವವು, ಪ್ರದಕ್ಷಿಣಾಕಾರವಾಗಿ ಲಲಾಟದಲ್ಲಿ ಮೂರುಸುಳಿಗಳುಳ್ಳ ಅಶ್ವದ ಸ್ವಾಮಿಯು ಆಹಿತಾಗ್ನಿಯಾಗಿ ಶತ್ರುಗಳನ್ನಿಗ್ರಹಿಸುವನು, ಲಲಾಟದಲ್ಲಿ ಪುಟ್ಟಿರುವ ಮೂರುಸುಳಿಗಳುಳ್ಳ ಪಙ್ಕ್ತಿಯು ಊರ್ಧ್ವಮುಖವಾಗಿ ಹೋಗಿದ್ದರೆ ಆ ಪಙ್ಕ್ತಿಯು ನಿಶ್ರೇಣೀ ಎಂಬ ಹೆಸರುಳ್ಳದ್ದು ಇದರಿಂದೊಡಗೂಡಿದ ಕುದುರೆಯ ಒಡೆಯನು ಶತ್ರುವಂ ಜೈಸುವನು,ಯಾವ ಅಶ್ವಕ್ಕೆ ಲಲಾಟದಲ್ಲಿ ನಾಲ್ಕು ದಿಕ್ಕುಗಳಲ್ಲಿ ವ್ಯಾಪಿಸಿಕೊಂಡಿರುವ ಪ್ರದಕ್ಷಿಣಾಕಾರಗಳಾದ ಸುಳಿಗಳಿರುವವೋ? ಆ ಅಶ್ವವು ಚತುರಂತವೆಂಬ ನಾಮ ಉಳ್ಳದ್ದಾಗಿ ಸ್ವಾಮಿಗೆ ಶತ್ರುನಾಶವಂ ಮಾಡಿ ಐಶ್ವರ್ಯವೃದ್ಧಿಯಂ ಹೊಂದಿಸುವದು, ಪುಷ್ಪಗಳ ಮೊಗ್ಗಿನ ಆಕಾರ ಉಳ್ಳವಾಗಿ ಕಡೆಗಣ್ಣಿನ ಪ್ರದೇಶದಲ್ಲಿ ಪುಟ್ಟಿರುವ ಸುಳಿಗಳೆರಡು ಜಯಪ್ರದಗಳಾಗುವವು, ಪ್ರದಕ್ಷಿಣಾಕಾರಗಳಾಗಿ ಪ್ರಮಾಣಯುಕ್ತಗಳಾಗಿ ಕಣ್ಣು ಕುಣಿಕೆಗಳಲ್ಲಿ ಪುಟ್ಟಿರುವ ಸುಳಿಯು ಶುಭಪ್ರದವಾಗುವದು ಕರ್ಣಮೂಲವಲ್ಲಿ ಪುಟ್ಟಿರುವ ಸುಳಿಗಳೆರಡು ವೃಷಭವೆಂಬ ನಾಮಧೇಯ ಉಳ್ಳವೆಂದು ತಿಳಿಯುತಕ್ಕವು, ಇವೆರಡು ಸ್ವಾಮಿಗೆ ಜಯುವಂ, ಧನವಂ, ಭೂಷಣವಂ, ಕೂಡ ಕೊಡುವವು, ಗೋಮಾಳದಲ್ಲಿ ಇರುವ ಸುಳಿಯು ದೇವಮಣಿಯೆನಿಸಿಕೊಂಡು ಸ್ವಾಮಿಗೆ ಶುಭವಂ ಕೊಡುವದು, ಆ ದೇವಮಣಿ ಎಂಬ ಸುಳಿಯು ಸ್ವಾಮಿಯ ಶರೀರದಲ್ಲಿ ಪೂರ್ವದಿಂದಿರುವ ಅಶುಭಗಳಂ ಪರಿಹರಿಸಿ ಜಯುವಂ ಧನವಂ ಕೂಡ ಕೊಡುವದು, ಯಾವ ಅಶ್ವಗಳಿಗೆ ಚಕ್ರಾಕಾರವಾಗಿ ಸುಳಿಗಳು ಕಂಠನಾಳವನ್ನಾಶ್ರಯಿಸಿರುವವೋ ಆ ಅಶ್ವವು ಚಕ್ರಿ ಎಂಬ ನಾಮ ಉಳ್ಳದ್ದಾಗಿ ಶತ್ರುಕ್ಷಯಕರವಾಗುವದು ಕಂಠದಲ್ಲಿರುವ ರೋಚಮಾನವೆಂಬ ಸುಳಿಯು ಸ್ವಾಮಿಗೆ ಜಯುವಂ, ಮಿತ್ರರಂ, ಧನವಂ ಕೊಡುವದು, ಯಾವ ಅಶ್ವ

ಕ್ಕೆ ಶುಕ್ತಿಗಳೆಂಬ ಎರಡುಸುಳಿಗಳು ವಿಸ್ತಾರವಾಗಿ ಕಂಠದಲ್ಲಿರುವವೋ, ಅವ ರಸ್ವಾಮಿಯು ಶೀಘ್ರವಾಗಿ ಶತ್ರುವಂಜಯಿಸಿ ಭೂಪತಿಯಾಗುವನು. ಕೇಶಾಂತ್ಯದಲ್ಲಿ ದಕ್ಷಿಣಭಾಗದೋಳ್ ಪುಟ್ಟಿರುವಶುಕ್ತಿಯೆಂಬಸುಳಿಯು ಮಾನಪ್ರದವಾಗುವದು, ವಾಮಭಾಗದಲ್ಲಿ ವಿಸ್ತಾರವಾಗಿರುವ ಶುಕ್ತಿಯೆಂಬ ಸುಳಿಯು ಶುಭಾರೋಗ್ಯಂಗಳಂ ಕೊಡುವದು, ಅಶ್ವಗಳಿಗೆವಕ್ಷಸ್ಸಿನೊಳ್ ನಾಲ್ಕುದಿಕ್ಕುಗಳಲ್ಲಿ ನಾಲ್ಕುಸುಳಿಗಳಿದ್ದರೆ ಆ ಅಶ್ವಗಳು ತನ್ನಸ್ವಾಮಿಯಶತ್ರುಗಳಂ ಯುದ್ಧದಲ್ಲಿ ಜಯಿಸುವದಾಗಿ ಸಂಪತ್ಕರಗಳಾಗುವವು; ಯಾವಅಶ್ವಕ್ಕೆ ಪ್ರದಕ್ಷಿಣಾಕಾರವಾಗಿ ನಾಲ್ಕುಸುಳಿಗಳುವಕ್ಷಸ್ಸಿನಲ್ಲಿರುವವೋ, ರೋಚಕನಾಯೆಂಬ ಸುಳಿಯುಕಂಠದಲ್ಲಿರುವದೋ,ಆ ಅಶ್ವವುಶ್ರೀವೃಕ್ಷವೆನಿಸಿಕೊಂಬುದು; ಈಕುದುರೆಯುತನ್ನ ಸ್ವಾಮಿಗೆ ಇಷ್ಟಾರ್ಥಪ್ರದವಾಗುವದು, ಯಾವಅಶ್ವಕ್ಕೆವಕ್ಷಸ್ಥಳದಲ್ಲಿ ಶುಕ್ತಿಗಳೆಂಬ ಊರ್ಧ್ವಮುಖಗಳಾಗಿರುವ ಸುಳಿಗಳಿರುವವೋ ಆ ಅಶ್ವದಿಂಅರಸುಗಳು ಯುದ್ಧದಲ್ಲಿ ಶತ್ರುಗಳಂಜಯಿಸುವರು; ಯಾವಅಶ್ವಕ್ಕೆ ಭುಜಸ್ಥಾನದಲ್ಲಿ ಎರಡುಸುಳಿಗಳುಪುಟ್ಟಿರುವವೊ ಆ ಅಶ್ವವು ಅಂಗದೀ ಎನಿಸಿಕೊಂಡು ಸ್ವಾಮಿಗೆ ಭೂಷಣಪ್ರದವಾಗುವದು, ಮತ್ತಾಯಾವಅಶ್ವಕ್ಕೆ ಕಿಬ್ಬಹೊಟ್ಟೆಯ ಮೇಲುಭಾಗದಲ್ಲಿ ಎರಡು ಸುಳಿಗಳಿರುವವೋ ಆ ಅಶ್ವವು ಮೇಖಲೀ ಎಂದು ತಿಳಿಯತಕ್ಕದ್ದು;ಈ ಅಶ್ವವುಸ್ವಾಮಿಗೆ ಧನಧಾನ್ಯವೃದ್ಧಿಯಂ ಉಂಟುಮಾಡುವದು. ಅಶ್ವಗಳಿಗೆವಕ್ಷಸ್ಸಿನಲ್ಲಿಯೂ ಲಲಾಟಸ್ಥಾನದಲ್ಲಿಯೂ ಬಿಲ್ವವೃಕ್ಷವು, ಸ್ವಸ್ತಿಕವು, ಕಮಲವು, ಧ್ವಜವು, ಕವಚವು, ಗದೆಯು, ಶಂಖವು, ಚಕ್ರವು, ಖಡ್ಗವು, ಧನುವು, ನಂದ್ಯಾವರ್ತವು, ಅರ್ಧಚಂದ್ರಾಕೃತಿಯು, ಪೂರ್ಣಚಂದ್ರಾಕೃತಿಯುಳ್ಳಸುಳಿಯು, ಉನ್ನತವಾದಪತಾಕವು, ವಜ್ರವು, ಮತ್ಸ್ಯವು, ಅಂಕುಶವು, ವ್ಯಜನವು, ಹೂಜೆಯು, ಇವುಗಳಿಗೆಸಮಾನವಾದ ಸುಳಿಗಳಿದ್ದರೆ ಅವುಶುಭಫಲಪ್ರದಂಗಳಾಗುವವು; ಈರೀತಿಯಲ್ಲಿ ಅಶ್ವಗಳ ಶರೀರದಲ್ಲಿರುವ ಸುಳಿಗಳಲಕ್ಷಣವು, ಫಲಗಳೂಹೇಳಲ್ಪಟ್ಟವು; ಇನ್ನು ಅಶ್ವಗಳ ಮಯಸ್ಸಂ ತಿಳಿಯುವದಕ್ಕೆ ಮುಖ್ಯಲಕ್ಷಣವಾದದಂತಗಳ ಉತ್ಪತ್ತಿಕ್ರಮವಂ ಪೇಳುವೆನು, ಕುದುರೆಯಮರಿಗಳು ಶುಭ್ರಗಳಾವ ಆರುಪಲ್ಲುಗಳಿಂದೊಡಗೂಡಿಪುಟ್ಟುವವು, ಆ ಅಶ್ವಶಿಶುವಿಗೆ ಕ್ರಮವಾಗಿ ಆ ಆರುಪಲ್ಲು

ಗಳೇಳುಣಿಗೆಂಪಾದರೆ ಎರಡುವರುಷವೆಂದು ತಿಳಿಯತಕ್ಕದು. ಈ ಆರುಹ ಲ್ಲುಗಳು ಬೀಳುವಕಾಲದಲ್ಲಿ ಮೂರುವರುಷವೆಂದು, ಕೆಲವುಹುಟ್ಟಿಕೆಲವು ಹುಟ್ಟದೆಯಿರುವಕಾಲದಲ್ಲಿ ನಾಲ್ಕುವರುಷವೆಂದು, ಆರು ಹಲ್ಲುಗಳೂ ಸಮ ಗ್ರವಾಗಿ ಹುಟ್ಟಿದ್ದರೆ ಐದುವರುಷವೆಂದು ತಿಳಿಯತಕ್ಕದ್ದು; ಈಕ್ರಮವಾಗಿ ಮೂರುಮೂರುವರುಷಕ್ಕೆ ಒಂದೊಂದುಚಿಹ್ನೆಯು ಹುಟ್ಟುವದು; ಕಾಳಿಕಾ, ಹರಿಣೀ, ಶುಕ್ಲಾ, ಕಾಚಾ, ಮಾಕ್ಷಿಕೀ,ಶಂಖಾ,ಉಲೂಖಲಾ, ಚಲನ, ಅವಪಾತ ಎಂಬ ಈಚಿಹ್ನೆಗಳು ಆರನೇಯುವರುಷದಿಂದ ಮೂವತ್ತೆರಡು ವರುಷಪರ್ಯಂ ತವು ಮೂರುಮೂರುವರುಷಕ್ಕೆ ಒಂದೊಂದಾಗಿದಂತೆಗಳಲ್ಲಿ ಕಾಣಲ್ಪಡುವ ದು, ಈಚಿಹ್ನೆಗಳಲ್ಲಿ ಆರನೇವರುಷದಿಂದ ಎಂಟುವರುಷದವರೆಗು ಕಾಳಿಕಾ ಎಂಬ ಚಿಹ್ನೆಯುಕಪ್ಪಾಗಿಅಡ್ಡವಾಗಿ,ರೇಖಾಕಾರವಾಗಿರುವದು; ಒಂಭತ್ತನೇವ ರುಷದಿಂದ ಹನ್ನೊಂದುವರುಷದವರಿಗೂ ಹರಿಣೀಯೆಂಬ ಚಿಹ್ನೆಯುಅಡ್ಡವಾ ಗಿ ಯವಾಕಾರವಾಗಿ ಹೊಂಬಣ್ಣವಾಗಿರುವದು; ಹನ್ನೆರಡುವರುಷದಿಂದ ಹದಿ ನಾಲ್ಕುವರುಷದವರಿವಿಗೂ, ಶುಕ್ಲಾಯೆಂಬ ಚಿಹ್ನೆಯು ಹಸುವಿನಹಾಲಿನಂತೆವ ರ್ಣಉಳ್ಳದ್ದಾಗಿ, ಯವಾರ್ಧಪ್ರಮಾಣ ಉಳ್ಳದ್ದಾಗಿಯಿರುವದು, ಹದಿನೈದನೇ ವರುಷದಿಂದ ಹದಿನೇಳನೇವರುಷದವರಿವಿಗೂಕಾಚಾಯೆಂಬ ಚಿಹ್ನೆಯುಗಾಜಿ ನಂತೆ ನೀಲವರ್ಣಉಳ್ಳದ್ದಾಗಿ ಹಾರಕದಅಕ್ಕಿಯ ಆಕಾರಉಳ್ಳದಾಗಿ ಇರು ವದು, ಹದಿನೆಂಟನೇವರುಷದಿಂದ ಇಪ್ಪತ್ತುವರುಷದವರಿಗೂ ಮಾಕ್ಷಿಕೀಯೆಂ ಬ ಚಿಹ್ನೆಯುನೊಣದಂತೆ ಕಪ್ಪಾಗಿ ಹಾರಕದಅಕ್ಕಿಯ ಆಕಾರವಂಪಡದಿ ರುವದು, ಇಪ್ಪತ್ತೊಂದನೇವರುಷದಿಂದ ಇಪ್ಪತ್ತುಮೂರನೇ ವರುಷದವರಿ ಗೆ ಶಂಖವೆಂಬ ಚಿಹ್ನೆಯುಶಂಖದಂತೆ ಶುಭ್ರವಾಗಿಹಾರಕದಅಕ್ಕಿಯ ಆಕೃ ತಿಯಂ ಪಡದಿರುವದು, ಇಪ್ಪತ್ನಾಲ್ಕನೇ ವರುಷದಿಂದ ಇಪ್ಪತ್ತಾರುವ ರುಷದವರಿಗೂ ಉಲೂಖಲವೆಂಬ ಚಿಹ್ನೆಯು ದಂತೆಗಳು ಬೀಳುವದಕ್ಕೆ ಸೂಚಕವಾಗಿ ಹಲ್ಲುಗಳ ಮಧ್ಯದಲ್ಲಿ ರಂಧ್ರರೂಪದಿಂ ಕಾಣುವದು, ಇ ಪ್ಪತ್ತೇಳನೇ ವರುಷದಿಂದ ಇಪ್ಪತ್ತೊಂಭತ್ತು ವರುಷದವರಿಗೂ ಚಲನ ವೆಂಬ ಚಿಹ್ನೆಉಂಟಾಗಿಹಲ್ಲುಗಳು ಅಲ್ಲಾಡುವವು, ಮೂವ್ವತ್ತನೇವರುಷ ದಿಂದ ಮೂವ್ವತ್ತೆರಡುವರುಷದವರಿಗೂ ಅವಪಾತವೆಂಬ ಚಿಹ್ನೆಉಂಟಾಗಿ

ಹಲ್ಲುಗಳು ಬಿದ್ದುಹೋಗುವವು, ಈರೀತಿಯಲ್ಲಿ ಮೂವತ್ತೆರಡುವರ್ಷಂಗಳೇ ಅಶ್ವಗಳಿಗೆಪರಮಾಯುಸ್ಸೆಂದುತಿಳಿಯತಕ್ಕದ್ದು, ಯಾವಅಶ್ವಗಳಿಗೆ ಕಿವಿಯ ಕೊನೆಯ ಭಾಗವು ಪೀಡಿಸಲ್ಪಟ್ಟರೆ ಚಂದ್ರದಂತೆ ಕೆಂಪಾದರಕ್ತವು ಶೀಘ್ರದಿಂಕಾಣುವದೋ ಆಕುದುರೆಗಳು ಬಹುಕಾಲ ಜೀವಿಸುತ್ತ ಚಿರಜೀವಿಗಳೆನಿಸಿಕೊಳ್ಳುವವು;ಇನ್ನುಮೇಲೆ ಕುದುರೆಗಳಆಯುಸ್ಸಂಅರಿವ್ರದಂಪೇಳುವೆನು, ಮನುಷ್ಯರ ಹಸ್ತಗಳಲ್ಲಿರುವರೇಖೆಗಳು ಅವರವರಆಯುಸ್ಸನ್ನಿಂತುಸೂಚಿಸುವವ್ರೋ ಆರೀತಿಯಾಗಿ ಕುದುರೆಗಳಮುಖದಲ್ಲಿರುವರೇಖೆಗಳು ಆಯಾಯಕುದುರೆಗಳಆಯುಸ್ಸಂಸೂಚಿಸುವವ್ರ,ಯಾವಅಶ್ವಕ್ಕೆ ಮುಸುಡಿಯಮಧ್ಯದಲ್ಲಿಊರ್ಧ್ವಮುಖವಾಗಿರೇಖೆಯುಹುಟ್ಟಿರುವದೋಆಅಶ್ವವುಬಾಲ್ಯದಲ್ಲೇಬಂದುವರುಷದ ಒಳಗೆ ಮುಖರೋಗದಿಂಮರಣವಂಹೊಂದುವದು, ಅಂಗುಳಪ್ರಮಾಣವಾಗಿಅಂಥಾರೇಖೆಗಳೆರಡುಮುಸುಡಿಯಲ್ಲಿಕಾಣಲ್ಪಟ್ಟರೆಆಅಶ್ವವುಜಿಹ್ವಾಸ್ತಂಭವೆಂಬರೋಗದಿಂದ ಎರಡನೇವರುಷದಲ್ಲಿಮೃತವಾಗುವದು, ಅಂಥಾರೇಖೆಗಳೆರಡು ಮುಸುಡಿಯಲ್ಲಿ ಅಡ್ಡವಾಗಿರುವದಾದರೆ ಆಅಶ್ವವುಘನುರ್ಗ್ರಹಣರೋಗದಿಂ ಪೀಡಿತವಾಗಿ ಮೂರನೇವರುಷದಲ್ಲಿ ಮೃತಿಯನ್ನೈದುವದು, ಅಂಥಾರೇಖೆಗಳೆರಡು ಅಶ್ವದಮುಸುಡಿಯಲ್ಲಿ ಚನ್ನಾಗಿಬಗ್ಗಿಕೊಂಡಿದ್ದರೆ ಆಅಶ್ವವುಗ್ರಹವೆಂಬ ಭಯಂಕರವಾದ ರೋಗದಿಂ ನಾಲ್ಕನೇವರುಷದಲ್ಲಿ ಮೃತವಾಗುವದು, ಯಾವಅಶ್ವಕ್ಕೆ ಊರ್ಧ್ವಮುಖವಾಗಿ ಬೊಗ್ಗಿರುವಕೊನೆಯುಳ್ಳ ರೇಖೆಯು ಮುಸುಡಿಯೊಳ್ ವಾಮಭಾಗದಲ್ಲಿ ಕಾಣಿಸುವುದೊ ಆ ಅಶ್ವವಂ ಮೃಗಜಂಭವೆಂಬರೋಗವು ಐದನೇವರುಷದಲ್ಲಿ ಕೊಲ್ಲುವದು, ಯಾವಅಶ್ವದ ಮುಸುಡಿಯಲ್ಲಿ ಅಂಗುಳದ್ವಯಪರಿಮಿತವಾದ ಊರ್ಧ್ವಮುಖವಾದ ರೇಖೆಯು ಇರುವದೋ ಆ ಅಶ್ವವು ಆರನೇವರುಷದಲ್ಲಿ ನಾನಾವಿಧರೋಗದಿಂನಾಶವನ್ನೈದುವವೂ, ಯಾವ ಅಶ್ವದ ಮುಸುಡಿಯಲ್ಲಿ ಅರ್ಧಾಂಗುಳವಿಸ್ತಾರವಾದ ರೇಖೆಯುಮಧ್ಯಭಾಗದಲ್ಲಿ ಉನ್ನತವಾಗಿರುವದೋ ಆ ಅಶ್ವವನ್ನು ಏಳನೇವರುಷದಲ್ಲಿ ಭಯಂಕರವಾದ ಘುಸೀಯೆಂಬರೋಗವುಕೊಲ್ಲುವದು, ಯಾವಅಶ್ವದಮುಸುಡಿಯಲ್ಲಿ ಅಂಗುಳತ್ರಯಪರಿಮಿತವಾದ ರೇಖೆಯು ಹುಟ್ಟಿರುವದೋ ಆ ಅಶ್ವವು ಎಂಟನೇ

ವರುಷದಲ್ಲಿ ಜ್ವರದಿಂಪೀಡಿತವಾಗಿ ಮೃತವಾಗುವದು, ಯಾವಅಶ್ವದಮು ಸುಡಿಯಲ್ಲಿ ರೇಖೆಯುಋಜುವಾಗಿ ಮಧ್ಯಭಾಗದಲ್ಲಿ ಸ್ಥೂಲವಾಗಿ ಒಂದು ಕಾಣುವದೋ ಆಕುದುರೆಯು ಒಂಭತ್ತನೇವರುಷದಲ್ಲಿಯೂ ಎರಡು ರೇಖೆಯುಳ್ಳಕುದುರೆಯು ಹತ್ತನೇವರುಷದಲ್ಲಿಯೂ ಮೃತವಾಗುವದು, ಯಾವಅಶ್ವದ ಮುಸುಡಿಯ ಮಧ್ಯದೊಳ್ ಎರಡು ಅಂಗುಲ ವಿಸ್ತಾರವುಳ್ಳ ಊರ್ಧ್ವಮುಖವಾದರೇಖೆ ಇರುವದೋ ಆ ಅಶ್ವವು ಹನ್ನೆರಡನೇ ವರುಷದಲ್ಲಿ ರೂಕ್ಷಾವರ್ತವೆಂಬ ರೋಗದಿಂ ನಾಶವಂ ಪೈದುವದು, ಯಾವಅಶ್ವದ ಮುಸುಡಿಯಮೇಲುಗಡೆಯಲ್ಲಿ ದಪ್ಪವಾಗಿ ಉದ್ದವಾದರೇಖೆ ಇರುವದೋ ಆ ಅಶ್ವವು ಹದಿಮೂರನೇವರುಷದಲ್ಲಿ ಶ್ವಾಸರೋಗದಿಂಮೃತಿಯನ್ನೈದುವದು, ಯಾವಅಶ್ವದಮುಸುಡಿಯಲ್ಲಿ ಅಡ್ಡವಾಗಿಯು ಊರ್ಧ್ವವಾಗಿಯು ಕಾಕಪಾದವಂತೆ ಎರಡು ರೇಖೆಗಳಿರುವವೋ ಆ ಅಶ್ವವುರೋಗದಿಂಹದಿನಾಲ್ಕನೇ ವರುಷದಲ್ಲಿ ಮೃತವಾಗುವದು, ಯಾವಅಶ್ವದ ಮುಸುಡಿಯಲ್ಲಿ ಎರಡು ರೇಖೆಗಳಿರುವವೋ ಆಕುದುರೆಯು ಹದಿನೈದನೇ ವರುಷದಲ್ಲಿ ಮಾರ್ಗದಲ್ಲಿ ಸಂಚರಿಸುತ ಭಯಪೀಡಿತವಾಗಿ ಮೃತಿಯನ್ನೈದುವದು, ಶುಭ್ರವರ್ಣವುಳ್ಳ ಅಶ್ವಕ್ಕೆ ಒಂದುರೇಖೆ ಕಾಣಲ್ಪಡುತ್ತಿದ್ದರೆ ಆ ಅಶ್ವವುಹದಿನಾರನೇ ವರುಷದಲ್ಲಿ ವಾತರೋಗದಿಂ ಮೃತವಾಗುವದು, ಕೃಷ್ಣವರ್ಣಉಳ್ಳ ಅಶ್ವಕ್ಕೆ ಮುಸುಡಿಗಿಂತಲೂಸ್ವಲ್ಪಮೇಲುಗಡೆಯಲ್ಲಿ ರೇಖೆ ಇದ್ದರೆ ಆಕುದುರೆಯು ಹದಿನೇಳನೇ ವರುಷದಲ್ಲಿ ಮೃತಿಯನ್ನೈದುವದು, ಅಶ್ವದಮುಸುಡಿಯಲ್ಲಿ ಯೂಪಸ್ತಂಭದಂತೆಯೂ ಪತಾಕಾಶೋಭಿತವಾದ ವೃಕ್ಷದಂತೆಯೂ ಒಂದುರೇಖೆಯಿದ್ದರೆ ಆ ಅಶ್ವವು ಹದಿನೆಂಟನೇವರುಷದಲ್ಲಿ ಜಲದಲ್ಲಿಮುಳುಗಿ ಮೃತಿಯನ್ನೈದುವದು, ಯಾವಕುದುರೆಗೆ ಮುಸುಡಿಯಮಧ್ಯದಲ್ಲಿ ಕಪಿಲವರ್ಣವುಳ್ಳ ರೇಖೆಯುಕಾಣಲ್ಪಡುವದೋ ಆ ಅಶ್ವವುಹತ್ತೊಂಭತ್ತನೇವರುಷದಲ್ಲಿ ವಿಷದಿಂಮೃತವಾಗುವದು; ಇನ್ನುಮೇಲೆ ಆ ಅಶ್ವಗಳಪೂರ್ಣಾಯುಲಕ್ಷಣಗಳಂಪೇಳುವೆನು, ಯಾವಅಶ್ವದಮುಸುಡಿಯು ಹೋಮಸಾಧನವಾದ ಸ್ರುಕ್ಕಿನಂತಿರುವ ರೇಖೆಯಿಂದಲೂ, ಸ್ವಸ್ತಿಕದಿಂದಲೂ, ನಂದ್ಯಾವರ್ತದಿಂದಲೂ, ವರ್ಧಮಾನವೆಂಬ ರೇಖೆಯಿಂದಲೂ, ಬಿಲ್ವವೃಕ್ಷದಂತಿರುವ ರೇಖೆ

ಯಿಂದಲೂ ಕೂಡಿರುವದೋ ಆ ಅಶ್ವವು ಮುವ್ವತ್ತುವರುಷ ಜೀವಿಸುವ ದಾಗಿ ಕ್ರಿಮಿಕೋಷ್ಟವೆಂಬ ರೋಗದಿಂ ಮೃತಿಯನ್ನೈದುವದು, ಯಾವಅಶ್ವದ ಮುಸುಡಿಯಲ್ಲಿ ಚಕ್ರಚಿಸ್ಹೆಯಾದರೂ, ವಜ್ರಚಿಸ್ಹೆಯಾದರೂ ಕಾಣಲ್ಪಡುವ ದೋ ಆ ಅಶ್ವವು ಮುವ್ವತ್ತೊಂದನೇ ವರುಷದಲ್ಲಿ ಮೃತಿಯನ್ನೈದುವದು, ಯಾವ ಅಶ್ವದ ಮುಸುಡಿಯಲ್ಲಿ ಅರ್ಧ ಚಂದ್ರನಿಗೆ ಸಮಾನವಾದ ಚಿಸ್ಹೆಯು, ಸೂರ್ಯನಿಗೆ ಸಮಾನವಾದ ಚಿಸ್ಹೆಯು ಇರುವದೋ ಆ ಅಶ್ವವು ಮುವ್ವತ್ತೆರಡನೇ ವರುಷದಲ್ಲಿ ಮೃತಿಯನ್ನೈದುವದು, ಇನ್ನು ಅಶ್ವಗಳ ಚೇಷ್ಟೆಗಳಿಂದ ಸ್ವಾಮಿಗೆ ಉಂಟಾಗುವ ಶುಭಾಶುಭ ಫಲಂಗಳಂ ಪೇಳುವೆನು :— ಅಶ್ವವು ರಾತ್ರಿಯಲ್ಲಿ ಮಲಗಿದ್ದು ಎದ್ದು ಊರ್ಧ್ವಮುಖವಾಗಿ ನೋಡಿ ಧ್ವನಿಯಂಗೈದು ಗೊರಸುಗಳಿಂದ ಭೂಮಿಯಂ ಬಗೆದರೆ ಆ ಅಶ್ವವು ಸ್ವಾಮಿಗೆ ಜಯವನ್ನು ಉಂಟುಮಾಡುವದು. ಯಾವ ಕುದುರೆಯು ಮಲಗಿದ್ದು ಎದ್ದು ಬಂದಾವರ್ತಿ ಮೂತ್ರವನ್ನಾಗಲೀ ಪುರೀಷವನ್ನಾಗಲೀ ಕಣ್ಣುಗಳಲ್ಲಿ ಬಾಷ್ಪಜಲವನ್ನಾಗಲೀ ಬಿಡುವದೋ ಆ ಅಶ್ವವು ಸ್ವಾಮಿಗೆ ಐಶ್ವರ್ಯವನ್ನುಂಟುಮಾಡುವದು. ಯಾವ ಕುದುರೆಯು ರಾತ್ರಿಯ ಕೊನೆಯಲ್ಲಿ ಅಕಾರಣವಾಗಿ ಧ್ವನಿಯಂ ಮಾಡುವದೋ ಆ ಕುದುರೆಯು ಪರರಾಯರುಂಡು ಬರುವದೆಂದು ಸೂಚಿಸುವದು. ಕುದುರೆಯಪುಚ್ಛವು ರೋಮಾಂಚಯುಕ್ತವಾಗಿದ್ದಲ್ಲಿ ಆ ಅಶ್ವದ ಒಡೆಯಂಗೆ ಗ್ರಾಮಾಂತ್ರದ ಪ್ರಯಾಣಉಂಟಾಗುವದು, ಯಾವಕುದುರೆಯ ಪುಚ್ಛದಲ್ಲಿ ರಾತ್ರಿಯ ಕೊನೆಯೊಳ್ ಅಗ್ನಿಕಣಗಳಿರುವಂತೆ ಕಾಣುವದೋ ಆಕುದುರೆಯುಪ್ರಯಾಣವಂತೆರಳುವ ಒಡೆಯಂಗೆ ನಾಶವಂಕೊಡುವದು, ಕುದುರೆಯು ಎಡದಪಾದದಿಂದ ಭೂಮಿಯಂ ಒಗೆಯುತ್ತ ದೀನವಾದಮನಸ್ಸುಳ್ಳದ್ದಾಗಿ ಧ್ವನಿಮಾಡುವದೋ ಆ ಕುದುರೆಯು ಒಡೆಯಂಗೆ ಪರಾಜಯುವನ್ನುಂಟುಮಾಡುವದು, ಯಾವಕುದುರೆಯು ಮೂತ್ರಪುರೀಷಗಳನ್ನು ಎಂದಿನಂತೆ ಬಿಡದೆ ತಡೆದು ತಡೆದು ಬಿಡುತ್ತ ದೀನವಾದಮನಸ್ಸುಳ್ಳದ್ದಾಗಿ ಕಣ್ಣುಗಳಲ್ಲಿಜಲಧಾರೆಯಂ ಬಿಡುವದೋ ಅದು ಅರಸಿಗೆ ಅಪಜಯವಂಕೊಡುವದು, ಯಾವಕುದುರೆಯ ಧ್ವನಿಯು ದುಃಖಪಡುವ ಜನರಧ್ವನಿಯಂತೆ ದೀರ್ಘವಾಗಿ ದೀನಭಾವದಿಂದೊಡಗೂಡಿರುವದೋ ಆ ಕುದುರೆಯುಒಡೆ

ಯಂಗೆ ಅಶುಭವಂಕೊಡುವದು, ಯಾವಕುದುರೆಯು ಉಚಿತವಾದ ಗ್ರಾಸವು ಎದುರಿಗೆ ಇದ್ದಾಗ್ಯೂ, ಆ ಗ್ರಾಸದಲ್ಲಿ ಆಸಕ್ತಿಯಿಲ್ಲದೆ ಮುಖದಿಂದ ಧೂಳಿಗಳನ್ನಾದರೂ, ಅಯೋಗ್ಯವಾದ ಬಾಡಿದ ತೃಣಕಾಷ್ಟಗಳನ್ನಾದರೂ ಗ್ರಹಿಸುತ ಧ್ವನಿಯಂಗೈವುದೋ ಆಕುದುರೆಯು ತನ್ನ ಒಡೆಯಂಗೆ ಭಯುವನ್ನುಂಟುಮಾಡುವದು; ಎಲೈ ಸುಗಂಧಮಹಾರಾಯನೇ! ಇನ್ನುಮೇಲೆ ಈ ಕುದುರೆಗಳು ಯಾವದೇಶದಲ್ಲಿ ಪುಟ್ಟಿ ಯಾವಲಕ್ಷಣಂಗಳಂ ಪಡದಿರುವವೋ ಆಯಾಯದೇಶದ ಭೇದಂಗಳಂ ಆಯಾಯದೇಶಂಗಳಲ್ಲಿ ಪುಟ್ಟಿದಕುದುರೆಗಳ ಲಕ್ಷಣಂಗಳಂಕೂಡ ಪೇಳುವೆನು. ಸಾವಧಾನದಿಂ ಕೇಳುವನಾಗು, ಕಾಂಭೋಜ ಬಾಹ್ಲಿಕ ವನಾಯುಜ ಆರಷ್ಟ ಗಾಂಧಾರ ಬಾಂಷೇಯ ಸಿಂಧು ತೈತಿಲ ಪಾಟಲೀಪುತ್ರ ಮೋಚಕ ಉಪಮೋಚಕ ಕುಲಜ ಉಪಕುಲಜ ತ್ರಿಗರ್ತ ಅರ್ಜುನ ಸಾವಿತ್ರ ಯೋಧೇಯ ಯಾವಂಶಿಯವನ ಹ್ರಸ್ವಯವನ ಭಾವವಿಷಮ ಕಂದರ ವಸ್ತ್ರರ್ಣಕ ಅವಂತಿ ಔರಸ ಕಾಶ್ಮೀರ ಸಕಾನಕ ಪರ್ವತ ದಕ್ಷಿಣಮದ್ರ ಉತ್ತರಮದ್ರ ನಾದೇಯ ದ್ವೀಪ್ಯ ಕೇಕಯ ಅಪರಾಂತ ವಸಂತಕ ಸೌರ ಗರದ ಸೈಂಧಕ ಕ್ಷುದ್ರಕ ಆವರ್ತಕ ಕಳಿಂಗ ಮೌಕುಲ ಐರಾವತ ವನವಾಸಿ ತ್ರಿಲಿಂಗ ಕ್ರಂಧನ ಸುರಾಷ್ಟ್ರ ಉಪಾವೃತ್ತ ಸಾಲ್ವ ಕುರುಪಾಂಚಾಲ ವಾಘಲ ಆಭೀರ ಈಪೆಸರುಗಳುಳ್ಳ ದೇಶಗಳಲ್ಲಿ ಜನಿಸಿದ ಅಶ್ವಗಳಕುಲಗಳು ಐವತ್ತುನಾಲ್ಕುಪ್ರಕಾರಗಳಾಗಿರುವವು:— ಇವುಗಳಲ್ಲಿ ಕಾಂಭೋಜದೇಶದ ಕುದುರೆಗಳು ಮಹಾ ಬಲವು ವೇಗವು ವಿಶಾಲವಾದಹಣೆಯು ಜಘನವು ಕತ್ತು ಎದೆಯು ಉದ್ದವಾದಕಂಠವು ಮುಖವು ಕಿರಿದಾದಅಂಡಗಳು ಮೇಢ್ರವು ಆಸನವು ಚನ್ನಾಗಿದೀರ್ಘಗಳಾದ ಕಾಲುಗಳು ಘಟ್ಟಿಯಾನಗೊರಸುಗಳು ವೈಡೂರ್ಯದಂತಿರುವನೇತ್ರಗಳು ಶ್ವೇತವರ್ಣವು ಕೆಂಪುವರ್ಣವು ಕಪ್ಪುವರ್ಣವಿಲ್ಲದೇಇರೋಣವು ಮಿಶ್ರವರ್ಣವಿಲ್ಲದೇಇರೋಣವು ಹ್ರಸ್ವವಾದಬಾಲವು ಮೃದುಗಳಾದರೋಮಂಗಳು ಕಿರಿದಾದಬೆನ್ನು ಇನ್ನುಮನೋಹರವಾದ ಸರ್ವಾಂಗಗಳುಳ್ಳವಾಗಿ ಸರ್ವಲಕ್ಷಣಗಳಿಂದೊಡಗೂಡಿ ಸ್ವಾಮಿಯ ಮನೋನುಗುಣ್ಯವಾಗಿ ಸ್ವಾಧೀನದಲ್ಲಿರುವವನಾಗಿ ಮತ್ತುವರ್ತುಳವಾದ ಮೊಣಕಾಲು ತೊಡೆಗಳುಳ್ಳ

ವಾಗಿ ಕೃಶವಾದ ಬಾಲವು ಪೊಳೆಗಳಂತೆನಿಂತಿರುವ ಕಿವಿಗಳುಳ್ಳವಾಗಿ ದಪ್ಪವಾದಹೊಟ್ಟೆಯು ಬಿಳಿಗುಣವು ಉಳ್ಳವಾಗಿ ಮತ್ತೊಂದುಕುದುರೆಯುನ್ನಾಗಲಿ ಅಥವಾಹೆಣ್ಣುಕುದುರೆಯುನ್ನಾಗಲೀ ಕಂಡು ಹುಂಕಾರವಂಮಾಡುತ ಸುಖದಿಂಸಂಚಾರವಂಮಾಡುತ, ಸರ್ವದಾರಕ್ಷಕನಿಗೆ ಹಿತವನ್ನೆಅಪೇಕ್ಷಿಸುವ ಈಕುದುರೆಗಳು ಕಾಂಭೋಜದೇಶದಲ್ಲಿ ಹುಟ್ಟಿದ್ದೆಂದುಪ್ರಸಿದ್ಧಗಳಾಗಿರುವವು. ಬಾಹ್ಲೀಕದೇಶದಲ್ಲಿ ಪುಟ್ಟಿದ ಕುದುರೆಗಳು ಕಾಂಭೋಜದೇಶದ ಕುದುರೆಗಳಿಗೆ ಸಮಾನವಾದ ಅಂಗಪ್ರತ್ಯಂಗ ಸೌಷ್ಟವವು ವರ್ಣವು ಆಕೃತಿಯುಉಳ್ಳವಾಗಿ ದೀರ್ಘಗಳಾದಸಾದಗಳು ವಿಸ್ತಾರವಾದದೀರ್ಘವಾದಬೆನ್ನು ಶೌರ್ಯವು ಸ್ವಭಾವವು ವಿಶಾಲಗಳಾದನೇತ್ರಗಳು ದೀರ್ಘವಾದಕಂಠವು ಮುಖವು ಜೇನುತುಪ್ಪದಂತಿರುವವರ್ಣವು ಧೈನ್ಯವಿಲ್ಲದೇಸರ್ವದಾ ಕೋಪಉಳ್ಳಸ್ವಭಾವವು ದಂತಗಳಂಕಡಿಯೋಣವು ಉಳ್ಳವಾಗಿ ಕಾಂಭೋಜದೇಶದಕುದುರೆಗಳಿಗೆ ಸ್ವಲ್ಪಪ್ರಸ್ವವಾದಸ್ಥೌಲ್ಯವು ನಿಂಟವು ಉಳ್ಳವಾಗಿ, ಮಹಾಸಂಕಟದಲ್ಲಾದರೂ ಕೆಳಗೆಬಿದ್ದ ಒಡೆಯನಂಬಿಟ್ಟುಹೋಗದಯಿರುವ ಈಕುದುರೆಗಳು ಬಾಹ್ಲೀಕದೇಶದಲ್ಲಿ ಪುಟ್ಟಿದಕುದುರೆಗಳೆಂದು ಪ್ರಸಿದ್ಧಗಳಾಗಿರುವವು, ಶರೀರಲಾಘವವು ಅತಿಚಂಡವಾದವೇಗವು ಚಪಲಸ್ವಭಾವವು ಧೈನ್ಯವಿಲ್ಲದೇ ಇರೋಣವು ದೀರ್ಘವಾದ ದುಂಡಾದಸರ್ವಾವಯವಂಗಳು ಏಕರೂಪಂಗಳಾದ ಶೋಭನಂಗಳಾದನೇತ್ರಂಗಳು ಹ್ರಸ್ವಂಗಳಾದ ಅಂಡಮೇಢ್ರಂಗಳು ಗೂಟದಂತೆನಿಂತಿರುವ ಕಿವಿಗಳುಳ್ಳದ್ದಾಗಿ ಕಾಂಭೋಜದೇಶದಕುದುರೆಗಳಿಗೆಮಧ್ಯಮಪ್ರಮಾಣಉಳ್ಳದ್ದಾಗಿ ಶರೀರಪೂರ್ವಾರ್ಧದಲ್ಲಿ ಉನ್ನತಂಗಳಾಗಿಬೊಗ್ಗಿದಹೆಗಲುಗಳು ಅಧಿಕವಾದಕಾಯುಬಲವು ದೃಢವಾದಗೊರಸುಗಳಸಮೀಪದಹಿಮ್ಮಡಿಗಳು ಸ್ಥೂಲವಾದ ಪಾದಗಳು ವಯೋನುರೂಪವಾದ ನಾನಾ ವರ್ಣ ವಿಶೇಷಗಳು ಅಂಡದ ಸಮೀಪದಲ್ಲಿ ವಿಸ್ತಾರವು ದೀರ್ಘವಾದ ಶರೀರವು ಮೇಘದಂತೆ ಗಂಭೀರವಾದ ಧ್ವನಿಯುಳ್ಳ ಕುದುರೆಗಳು ವನಾಯುಜ ದೇಶದಲ್ಲಿ ಪುಟ್ಟಿದವೆಂದು ತಿಳಿಯತಕ್ಕದ್ದು, ಹ್ರಸ್ವವಾದ ಬೆನ್ನು ಶೋಭನವಾದ ಮುಖವು ಸೂಕ್ಷ್ಮವಾದ ಬಾಲವು ಮಂಗಳಕರವಾದ ನೇತ್ರಗಳು ಉನ್ನತವಾಗಿ ಸ್ಥೂಲವಾದ ಪೂರ್ವಕಾಯುವು ಮೃದುವಾದ ಸಣ್ಣಪಾದ ರೋಮಗಳು ಶಿಲುವಾದ ಹ್ರಸ್ವವಾದ

ಗೂಟವಂತೆ ನಿಂತಿರುವ ಕಿವಿಗಳು ದೃಢಗಳಾದ ಹರಡುಗಳೊಡಗೂಡಿದ ಪಾದಗಳು ವಿಶೇಷವಾಗಿ ಕೆಂಪುಗೂಡಿದ ನಾನಾವರ್ಣವು ಮತ್ತೂ ಹಸರುಕೂಡಿದ ನಾನಾವರ್ಣವು ಅಧಿಕವಾದ ವೇಗವು ಅತ್ಯಂತ ಪರಾಕ್ರಮ ಉಳ್ಳವಾಗಿ ಮುಗ್ಗರಿಸುವದು ಮೊದಲಾದ ದುರ್ಗುಣಂಗಳಿಂದ ರಹಿತಂಗಳಾದ ಅಶ್ವಂಗಳು ಆರಟ್ಟ ದೇಶೋತ್ಪನ್ನಂಗಳೆಂದು ಹೇಳಲ್ಪಡುವದು. ಕರೀಕೋಳಿಗಳಂತೆಯೂ ಕೃಷ್ಣ ಸಾರಂಗಗಳಂತೆಯೂಶ್ಯಾಮ ಧೂಮ್ರ ಮೊದಲಾದ ಚಿತ್ರವರ್ಣ ಉಳ್ಳದ್ದಾಗಿ ಸಮವಾಗಿ ತುಂಬಿದ ಅಂಗಗಳು ದೃಢವಾಗಿ ವಿಷಮವಾದ ಶರೀರದ ಉತ್ತರಾರ್ಧವು ತುಂಡಾಗಿ ಉನ್ನತಂಗಳಾದ ಅವಯುವಗಳುಳ್ಳ ಶರೀರದ ಪೂರ್ವಾರ್ಧವು ಚಂಡಸ್ವಭಾವವು ಮಂಡಲಾಕಾರವಾದ ದಪ್ಪವಾದ ಹೆಕ್ಕತ್ತಿನ ಕೇಸರಂಗಳು ಉಳ್ಳವಾಗಿ ಸ್ವಲ್ಪ ಕೃಶವಾದ ದೀರ್ಘವಾದ ಮುಖವುಳ್ಳ ಅಶ್ವಂಗಳು ಗಾಂಧಾರ ದೇಶೋತ್ಪನ್ನಂಗಳೆಂದು ತಿಳಿಯತಕ್ಕದ್ದು, ಮಂಡಲಾಕಾರವಾದ ಹೆಗಲು ಚಿನ್ನು ಸ್ವೇದಾದಿಗಳಲ್ಲಿ ಸುಗಂಧವು ಹುಲ್ಲೆ ಕರುವಿನಂತೆ ಅತಿ ಚಪಲಕೆಗಳಾದ ಜಂಘೆಗಳು ಸ್ವಲ್ಪ ಕೃಶಂಗಳಾದ ಅವಯುವಗಳು ಅತ್ಯಂತ ಪರಾಕ್ರಮವು ಕಾಯಬಲವು ವೇಗವು ಮೃದುವಾಗಿ ನುಣುಪಾದ ರೋಮಂಗಳು ಸ್ಥೂಲಂಗಳಾದ ನೇತ್ರಂಗಳು ದೃಢಗಳಾದ ಪಾದಹರಡುಗಳುಳ್ಳವಾಗಿ ಕ್ರಮವಾಗಿ ತುಂಬಿಕೊಂಡಿರುವ ಅಂಗಗಳುಳ್ಳ ಕುದುರೆಗಳು ಚಾಂಪೇಯದೇಶೋತ್ಪನ್ನವೆನಿಸಿಕೊಂಬುವವು, ಸ್ಥಿರವಾದ ಪಾದಗಳು ವಿಸ್ತಾರ ವುಳ್ಳ ನಿತಂಬಗಳು ದೀರ್ಘವಾದ ಕಂಠವು ಮುಖವು ಸ್ಥೂಲಗಳಾದ ನೇತ್ರಗಳು ಸೂಕ್ಷ್ಮಗಳಾದ ಮೃದುಗಳಾದ ಹೆಕ್ಕತ್ತಿನ ಕೇಸರಂಗಳು ಗೂಟದಂತೆ ನಿಂತಿರುವ ಕಿವಿಗಳು ಅತಿ ದೀರ್ಘವಾಗಿ ದಪ್ಪವಾದ ದೇಹವು ಅಧಿಕವಾದ ಶ್ವಾಸಗಳು ಮೃದುವಾಗಿ ವಿಸ್ತಾರವಾದ ಕಟವಾಯಿ ತುಟಿಗಳು ಲಂಬಂಗಳಾದ ಅಂಡಗಳು ಮೇಢ್ರವುಉಳ್ಳ ಅಶ್ವವು ಸಿಂಧುದೇಶದಲ್ಲಿಪುಟ್ಟಿದ್ದೆನಿಸಿಕೊಳ್ಳುವವು, ಸ್ಥೂಲವಾದ ಕಂಠವು, ದವಡೆಯು ಬಾಲವು ಹೆಕ್ಕತ್ತಿನ ಕೇಸರಂಗಳು ಮೇಢ್ರವು ಅಂಡಗಳು ವಿಸ್ತಾರಗಳಾದ ನೇತ್ರಗಳು ಮೇಲಕ್ಕಾಗಿಬೊಗ್ಗಿದ ಕಂಠವು ಅತ್ಯಂತ ಲಾಘವವು ದೃಢಗಳಾದ ಪಾದಗಳು ಹರಡುಗಳು ವಿಸ್ತಾರವಾದ ಹಣೆಯು ಎದೆಯು ಕಟಿಪಶ್ಚಾದ್ಭಾಗವು ಉಳ್ಳದ್ದಾಗಿ ಅತ್ಯಂತ ಕಾಯಬಲ ವೇಗಯುಕ್ತಂಗಳಾಗಿ ವಿಶೇಷವಾದ ಛಾ

ರವಿಂದಲು ಬಹುದೂರ ಮಾರ್ಗ ಸಂಚಾರದಿಂದಲು ಸ್ವಲ್ಪವಾದರೂ ಶ್ರಮವಂ
ಹೊಂದದೆ ಶಕ್ತಿಸಾಹಸಾನ್ವಿತಂಗಳಾಗಿರುವ ಕುದುರೆಗಳು ತೃತೀಯದೇ
ಶೋತ್ಪನ್ನಗಳು; ಶೋಭನವಾದ ಅಂಗ ಪ್ರತ್ಯಂಗ ಸೌಷ್ಠವವು, ದುಷ್ಟವಾ
ದ ವ್ಯಾಪಾರವು, ಶ್ಯಾಮವರ್ಣವು, ವಿಸ್ತಾರವಾದಹಣೆಯು, ಗೋಟಿಯಂತೆ ಬಲಿ
ಸದಿರುವತೀಸಿಗಳು, ವ್ಯಕ್ತವಾದಮುಖವು,ವಿಸ್ತಾರಗಳಾದಜಘನಗಳು,ದೀರ್ಘ
ವಾದ ವಿಸ್ತಾರವಾದ ಕಂಠವು, ಗುಪ್ತಗಳಾದಘುಟಸಂಧಿಗಳು, ಉನ್ನತಂಗ
ಳಾದ ಭುಜಶಿರಸ್ಸುಗಳು, ವಿಸ್ತಾರವಾದಬೆನ್ನು, ಬಟುವಾದ ಮೊಣಕಾಲುಗ
ಳು, ಹ್ರಸ್ವಗಳಾದ ಹರಡುಗಳು, ಬಾಲವು, ಸೂಕ್ಷ್ಮವಾದ ಮಧ್ಯಪ್ರದೇಶ
ವು, ಆಕಾಂಕ್ಷೆ ಸರಿಯಾದ ಹೊಟ್ಟೆಯು, ಅತ್ಯಂತರೋಮಗಳು ತುಂಬಿಕೊಂ
ಡಿರುವ ಅವಯವಗಳು, ಅನೇಕವರ್ಣಗಳಾದ ಸರಗಳು ಉಳ್ಳವಾಗಿ ಅತಿ
ಸಾಧುಗಳಾಗಿ ಸರ್ವದಾವಂಪ್ರೀತಿಯುಳ್ಳ ವಿಚಿತ್ರಗಳಾದ ಅಶ್ವಗಳು ಪಾಟ
ಲೀ ಪುತ್ರದೇಶದಲ್ಲಿ ಹುಟ್ಟಿದ್ದಂದವುದು; ಮೃದುವಾದಬೆನ್ನು, ಚಪಲವು
ದೃಢವು ಅಲ್ಲದೆ ಮಧ್ಯಮವಾದಸ್ವಭಾವವು, ಮಧ್ಯಮವಾದಪರಾಕ್ರ
ಮವು, ಬಲವು, ವೇಗವುವುಳ್ಳ ಕುದುರೆಗಳು ಮೋಚಕದೇಶದಲ್ಲಿ ಜನಿಸಿದ್ದಂ
ದವುದು; ಥಪ್ಪವಾದಬಾಲವು, ಹೆಕ್ಕತ್ತಿನಕೇಸರಂಗಳು ಮೃದುವಾದಅಂಗ
ಗಳು, ದುರ್ಬಲವಾದಗೊರಸುಗಳು, ಕ್ರಶವಾದದೇಹವು, ಶೋಭನವಾದಪ
ರಡುಗಳು,ಉನ್ನತವಾಗಿರುವಶಿರಸ್ಸು, ಕಂಠಗಳು, ಕಿರಿದಾದಮುಖವುಳ್ಳದ್ದಾಗಿ
ಹ್ರಸ್ವಾಂಗಳಾಗಿ, ಮುಖದಲ್ಲಿ ಲಕ್ಷಣರಹಿತಂಗಳಾಗಿ, ಸತ್ವದಲ್ಲಿ ವೈರೂಪ್ಯ
ವಂಪಡೆದಿರುವ ಕುದುರೆಗಳು ಉಪಮೋಚಕದೇಶದೊಳ್ ಜನಿಸಿದ್ದಂದವು
ದು; ದೀರ್ಘವಾದ ಬೆನ್ನು, ಕತ್ತು, ಹ್ರಸ್ವವಾದ ಮೇಢ್ರವು, ಅಂಡಗಳು, ವ
ರ್ತುಳವಾದ ವಿಸ್ತಾರವಾದಮುಖವು, ಶೋಭನವಾದ ಹರಡುಗಳು, ದೀರ್ಘ
ವಾದ ಬಾಲವು, ಕೇಸರಗಳು, ಸೂಕ್ಷ್ಮವಾದರೋಮವು,ಚರ್ಮವು, ಕಿರಿದಾದ
ಮುಖವು ಉಳ್ಳಕುದುರೆಗಳು ಕಾಂಬೋಜದೇಶೋತ್ಪನ್ನಕುದುರೆಗಳು; ಕ್ರಶವಾ
ದಕತ್ತು, ತೊಡೆಗಳು, ಹರಡುಗಳು, ಹೆಕ್ಕತ್ತಿನಲ್ಲಿ ದೀರ್ಘವಾದಕೇಸರಂ
ಗಳು, ಸ್ವಲ್ಪವಿಸ್ತಾರವುಳ್ಳ ಶರೀರವು,ಸ್ವಲ್ಪಬಲವು, ಸಾಮಾನ್ಯವಾದವುಳ್ಳವಾಗಿ
ಗಿಡ್ಡವಾದಶರೀರವುಳ್ಳವಾಗಿ ಮೊದಲುಹೇಳಿದಕಾಂಬೋಜದೇಶದಕುದುರೆಗಳಗಸವಾ

ನಗಳಾದಚಿಹ್ನೆಗಳುಳ್ಳವಾಗಿ,ಕಠಿನಸ್ವಭಾವಗಳಾದಕುದುರೆಗಳುಬಾಹ್ಲಿಕದೇಶದಲ್ಲಿ ಪುಟ್ಟಿದೆಂದರಿವುದು;ವ್ಯಾಯಾಮವಾದಸ್ವಭಾವವು,ಹ್ರಸ್ವವಾದಕತ್ತು,ವಿಸ್ತಾರವಾದಯದೆಯು, ಹೆಕ್ಕತ್ತಿನಲ್ಲಿ ವಕ್ರಗಳಾದಕೇಸರಂಗಳು, ಮೊಲದರೋಮಂಗಳಂತಿರುವ ರೋಮಂಗಳು, ಕ್ರೋಧವುಳ್ಳಸ್ವಭಾವವು, ಬಲವು ಉಳ್ಳವಾಗಿಮೊಲದ ಕೋರೆದಾಡೆಯಂತೆ ಕೋರೆದಂತಗಳುಳ್ಳವಾಗಿ, ಭೂಮಿಯಲ್ಲಿ ದೃಢವಾಗಿಗೊರಸುಗಳನ್ನಿರಿಸುವಕುದುರೆಗಳುತ್ರಿಗರ್ತ ದೇಶೋತ್ಪನ್ನಗಳೆಂದರಿವುದು;ವಿಸ್ತಾರವಾದಯುದೆಯು,ಕತ್ತು,ದೃಢವಾದ ಕೇಸರಂಗಳು, ನೇತ್ರಂಗಳು, ಶೋಭನವಾದಮುಖವು, ಹರಡಂಗಳು, ಉದ್ದವಾಗಿ ಜೋಲುವಅಂಡಗಳು, ಕೃಷ್ಣವರ್ಣವನ್ನನುಸರಿಸಿದ ನಾನಾವರ್ಣಂಗಳು, ಕ್ರೂರವಾದಸ್ವಭಾವವು, ಅಧಿಕವಾದಬಲವು ಉಳ್ಳಕುದುರೆಗಳು ಅರ್ಜುನದೇಶೋತ್ಪನ್ನಂಗಳು;ಹ್ರಸ್ವವಾದಬೆನ್ನು, ವಿಸ್ತಾರವಾದಜಘನವು, ದೃಢವಾದಶರೀರವು, ರೋಷವು, ವಕ್ರವಾದಮುಖವು,ದೀರ್ಘವಾದಹೆಗಲಿನಕೇಸರಂಗಳು, ಮೃದುವಾದಅಂಗವು, ಶೋಭನವಾದ ನೇತ್ರಂಗಳು, ಧನ್ಯವಾದಪಾದಗಳು, ವಿಸ್ತಾರವಾದಯದೆಯು, ಬಾಲತ್ವವುಳ್ಳವಾಗಿ ಸ್ವೇದಾದಿಗಳಲ್ಲಿ ಸುಗಂಧವುಳ್ಳ ಕುದುರೆಗಳು ಸಾವಿತ್ರೀದೇಶದಲ್ಲಿ ಜನಿಸಿದ್ದೆಂದರಿವುದು; ಹ್ರಸ್ವವಾದ ಕರ್ಣಗಳು, ಓಷ್ಟಗಳು ಉಳ್ಳವಾಗಿ, ಪರಾಕ್ರಮವು, ಬಲವು, ವರ್ತುಳವಾದ ವಿಸ್ತಾರವಾದ ಉನ್ನತವಾದಕತ್ತು, ಗುಂಡಾಗಿರುವಬೆನ್ನು, ತೊಡೆಗಳು ಗೊರಸುಗಳು ಮುಖವು ಸ್ವಲ್ಪಪಿಂಗಳವರ್ಣವು, ಸೂಕ್ಷ್ಮವಾದಚರ್ಮವು, ರೋಮಗಳು ಉಳ್ಳವಾಗಿ ಅಂಗಪ್ರತ್ಯಂಗಗಳೊಳ್ ವಿಶದವಾಗಿಕಾಣುತ, ಮಾರ್ಗವನ್ನಡೆಯುವದರಲ್ಲಿಯು ಭಾರವಂವಹಿಸುವವಲ್ಲಿಯೂ ಅತಿವೇಗ ಶಕ್ತಿಯುಕ್ತಂಗಳಾದ ಅಶ್ವಗಳು ಯೋಧೇಯದೇಶದಲ್ಲಿ ಜನಿಸಿದ್ದೆಂದರಿವುದು; ಯಾವಂತೀದೇಶದಲ್ಲಿ ಪುಟ್ಟಿದ ಕುದುರೆಗಳೂ ಇದೇಲಕ್ಷಣಗಳಿಂಕೂಡಿರುವವು; ಶೋಭನವಾದ ಹಣೆಯು, ನೇತ್ರಂಗಳು, ಅಂಗಗಳು, ಕೃಶವಾದಬೆನ್ನು, ವಿಸ್ತಾರವಾದ ವರ್ತುಳವಾದಮುಖವು, ಸೂಕ್ಷ್ಮವಾದಚರ್ಮವು, ರೋಮವು, ಗೂಟದಂತಿರುವ ಕಿವಿಗಳು, ಶೀಘ್ರವಾದನಡೆಗಳು, ಶೋಭನವಾದಜಘನವು, ಯದೆಯು, ತುಂಬಿಕೊಂಡಿರುವ ಶರೀರವು, ಒಳ್ಳೆಬುದ್ಧಿಯು, ವಿಚಿತ್ರವಾದವರ್ಣಗಳು, ಮು

ನೋಹರಗಳಾದ ಬಲಯುಕ್ತಗಳಾದ ಗೊರಸುಗಳುಳ್ಳವಾಗಿ, ದೃಢಚಿತ್ತ ಉಳ್ಳ ಕುದುರೆಗಳು ಯವನದೇಶೋತ್ಪನ್ನಂಗಳು; ಬಲವು, ಮನೋಹರವಾದವರ್ಣವು, ಗೊರಸುಗಳು, ಶೋಭನವಾದ ರೋಮಗಳು, ಕೇಸರಗಳು, ಬಾಲದ ಕೂದಲುಗಳು, ಬಳ್ಳಬುದ್ಧಿಯು, ಕ್ರಿಯಾಶಕ್ತಿಯು, ಕಠಿನವಾದಸ್ವಭಾವವೂ ಉಳ್ಳದ್ದಾಗಿ, ಪುಷ್ಟಿತುಂಬಿಕೊಂಡು ಸ್ವಭಾವ ದೀರ್ಘಕಸ್ತ್ರನ್ಗಳಾಗಿ ಕುದುರೆಗಳು ಪ್ರಸ್ಥಾಯವನ ದೇಶೋತ್ಪನ್ನಂಗಳೆಂದರಿವುದು, ಅಧಿಕವಾದಬಲವು, ವೇಗವು, ಧಷ್ಟವಾದ ಅಂಗಗಳು, ಭಾರವಂ ವಹಿಸೋಣವು, ಮಾರ್ಗನಡೆಯುವದರಲ್ಲಿ ಕ್ಲೇಶವಂ ಸಹಿಸೋಣವು, ವಿಸ್ತಾರವಾದ ಯದೆಯು, ಹೊಟ್ಟೆಯು, ದೃಢವಾದ ಬುದ್ಧಿಯು, ಚಿತ್ರವರ್ಣವು, ಧಷ್ಟವಾದ ದೃಢವಾದಜಘನವು, ಪಾದಂಗಳು, ಗೊರಸುಗಳು ಉಳ್ಳವಾಗಿ ಕತ್ತೆಗಳಂತೆ ತೋರುವ ಅಶ್ವಂಗಳು ಭಾರ ದೇಶೋದ್ಭವಂಗಳು; ಸೂಕ್ಷ್ಮವಾದ ಕೇಶಂಗಳು, ಕೃಶವಾದಹೊಟ್ಟೆಯು, ವರ್ತುಳವಾದ ಮಧ್ಯಪ್ರದೇಶವು, ವಿಸ್ತಾರವಾದಯದೆಯು ಶೀಘ್ರವಾದನಡೆಯು ಉಳ್ಳವಾಗಿ ಹೊಂಬಣ್ಣವಾಗಲೀ ಶ್ವೇತವರ್ಣವಾಗಲೀ ಉಳ್ಳ ಬಳ್ಳರೋಮಂಗಳಿಂದ ಯುಕ್ತಂಗಳಾದ ಅಶ್ವಗಳು ವಿಷಮದೇಶದಲ್ಲಿ ಜನಿಸಿಪವೆಂದರಿವುದು, ಚನ್ನಾಗಿ ಪುಷ್ಟಿತುಂಬಿಕೊಂಡು ದೃಢವಾಗಿಪಾದಗಳು, ಶೋಭನಂಗಳಾದಗೊರಸುಗಳು, ಸ್ಥೂಲವಾದಚರ್ಮವು, ರೋಮಗಳು ಕೇಸರಗಳೂಉಳ್ಳ, ಬಳ್ಳಸ್ವಭಾವಗಳಿಂ ಯುಕ್ತವಾದ ಕುದುರೆಗಳು ಕಂದರದೇಶದೊಳ್ಪುಟ್ಟಿದ್ದೆಂದರಿವುದು; ಧನುಸ್ಸಿನಂತೆ ಬಗ್ಗಿರುವಕತ್ತು, ಪ್ರಸ್ತಂಗಳಾದ ಅಂಗಗಳು, ಗೊರಸುಗಳು, ಶರೀರದಉತ್ತರಾರ್ಧಕ್ಕೆ ಸಮಾನವಾದ ಅಂಗಗಳು, ಪೂರ್ವಾರ್ಧದಲ್ಲಿ ಘಟ್ಟಿಯಾದ ಅಂಗಗಳು, ಕೃಶವಾದಹೊಟ್ಟೆಯು ಉಳ್ಳವಾಗಿ, ಮಿಗಿಲಾದಅಂಗಗಳಲ್ಲಿ ಪುಷ್ಟಿತುಂಬಿಕೊಂಡು ಬಳ್ಳಸ್ವಭಾವ ಉಳ್ಳ ಕುದುರೆಗಳು ವಶ್ಮಂತದೇಶದೊಳ್ಪುಟ್ಟಿದ್ದೆಂದರಿವುದು; ಸ್ಥೂಲವಾದಅವಯುವಗಳು, ಘಟ್ಟಿಯಾದ ಗೊರಸುಗಳು, ಕೆಂಪುವರ್ಣವು, ಬಲವು, ವರ್ತುಳವಾದ ಮಧ್ಯಪ್ರದೇಶವು, ವಿಸ್ತಾರವಾದಯದೆಯು ಉಳ್ಳವಾಗಿ, ಪುಷ್ಟಿತುಂಬಿಕೊಂಡಿರುವಅಶ್ವಗಳು ಅವಂತೀದೇಶೋತ್ಪನ್ನಂಗಳು; ಸೂಕ್ಷ್ಮವಾದ ರೋಮಗಳು, ಧಷ್ಟವಾದಜಘನವು, ಎದೆಯು, ಘಟ್ಟಿಯಾದಪಾದಗಳು

ಪುಷ್ಟವಾದಮೊಣಕಾಲುಗಳು, ಪರಾಕ್ರಮವು ಉಳ್ಳವಾಗಿ ಶ್ವೇತವರ್ಣವನ್ನು ಸೇರಿದ ಚಿತ್ರವರ್ಣವುಳ್ಳ ಕುದುರೆಗಳು ಪಾರಸದೇಶದೊಳ್ ಪುಟ್ಟಿದ್ದೆಂದರಿವುದು; ಚನ್ನಾಗಿತುಂಬಿದ ಶರೀರವು, ಪುಷ್ಟವಾಗಿ ವಿಸ್ತಾರವಾದಹಣೆಯು, ಅಧಿಕವಾದ ಪರಾಕ್ರಮವು, ನೆಟ್ಟನೆನಿಂತಿರುವ ಕರ್ಣಂಗಳು, ಶೋಭನವಾದ ರೋಮವು, ಸೂಕ್ಷ್ಮವಾದಚರ್ಮವು, ಉಷ್ಟ್ರದಂತೆವಿಸ್ತಾರವಾದಮುಖವು ದೃಢವಾದ ಅಂಗಗಳು, ಪಾದಗಳು, ಶೌರ್ಯವಾದ ಸ್ವಭಾವವು, ಕೆಂಪುವರ್ಣದಿಂಮಿಶ್ರವಾದ ಚಿತ್ರವರ್ಣವುವುಳ್ಳವಾಗಿ, ಮನಸ್ವಿಗಳಾದ ಕುದುರೆಗಳು ಕಾಶ್ಮೀರದೇಶಸಂಜಾತಂಗಳು, ಜಲತೃಣಂಗಳಿಂದ ಸಂಪೂರ್ಣವಾದ ಸಕಾ ಎಂಬ ಮಹಾನದಿಯತೀರಗಳು, ಸಕಾನಕಗಳೆನಿಸಿಕೊಳ್ಳುವವು, ಪೂರ್ವಕಾಯಲ್ಲಿ ಅತ್ಯುನ್ನತವಾಗಿ, ಪಶ್ಚಾರ್ಧಕಾಯದಲ್ಲಿ ಸ್ವಲ್ಪಉನ್ನತವಾಗಿ, ಸ್ವಲ್ಪವಿಸ್ತಾರಉಳ್ಳಕತ್ತು, ದೀರ್ಘಗಳಾದ ಕೇಸರಗಳು, ಸ್ವಲ್ಪವರ್ತುಳವಾದ ಮುಖವು, ದೀರ್ಘಗಳಾದತಿಮಯುವಂಗಳು, ಉದ್ದವಾದ ಪಾದಂಗಳು, ಕೊಟ್ಟೆಯು, ತುಂಬಿದಶರೀರವುಉಳ್ಳವಾಗಿ ಮತ್ತೊಂದುಕುದುರೆಯನ್ನಾಗಲೀ, ಹೆಣ್ಣು ಕುದುರೆಯನ್ನಾಗಲಿ ಕಂಡು ಗಂಭೀರವಾಗಿ ಧ್ವನಿಗೈವ ಕುದುರೆಗಳು ಸಕಾನಕ ದೇಶದೊಳ್ ಪುಟ್ಟಿದ್ದು;ಶೋಭನವಾದ ಕಂಠವು, ವಿಸ್ತಾರವಾದ ಜಘನವು, ವಕ್ಷಸ್ಥಲವು, ಗಳಿತವಾದ ಬೆನ್ನು, ಶರೀರವು, ದೀರ್ಘವಾದ ಬಾಲವು ಕೇಸರಗಳು, ಅಧಿಕವಾದ ವೇಗವು, ಬಲವು,ಧೈರ್ಯವು, ದೃಢವಾದಪಾದಗಳು, ಉಳ್ಳವಾಗಿ ಸಕಲಕಾರ್ಯಂಗಳಲ್ಲಿಯೂ ಮುಂದುವರಿದು ಪೋಗುವ ಅಶ್ವಂಗಳು ಪರ್ವತದೇಶದೊಳ್ಪುಟ್ಟಿದವೆಂದರಿವುದು; ದೀರ್ಘವಾದ ಬಾಲಗಳು ಕೇಸರಂಗಳು, ವಿಸ್ತಾರವಾದ ಕಿವಿಯು,ಅತ್ಯಂತವೇಗವು, ದುಷ್ಟವಾದಸ್ವಭಾವವು, ವ್ಯಾಪಾರವು, ದೃಢವಾದ ಪಾದಗಳು ಗೊರಸುಗಳು, ಜೇನುತುಪ್ಪದಂತೆ ವರ್ಣವು ಹಸುರುವರ್ಣದಿಂ ಕೂಡಿದ ಚಿತ್ರವರ್ಣವಾದರೂ ಉಳ್ಳವಾಗಿ ಸಕಲಕಾರ್ಯಗಳಲ್ಲಿಯೂ ಸಮರ್ಥನಾದ ಸಾಲಿಯಿಂದಲು ಸ್ವಾಧೀನಂಗಳನ್ನಾಗಿ ಮಾಡಲತಕ್ಕಗಳಾದ ಕುದುರೆಗಳು ದಕ್ಷಿಣಸಮುದ್ರೋತ್ತರಸಮುದ್ರಗಳೆಂಬ ದೇಶಂಗಳಲ್ಲಿ ಜನಿಸಿದವೆಂದರಿವುದು; ಚಿತ್ತಸ್ಥಾ ಎಂಬ ನದಿಯು, ಸರಸ್ವತೀ ಎಂಬ ನದಿಯು ಇವುಗಳ ತೀರಂಗಳೊಳಿರುವ ದೇಶಂಗಳು ನಾದೇಯಂಗಳೆನಿಸಿ

ಕೊಳ್ಳುವವು, ಇರಾವತೀ ಎಂಬ ನದಿಯು, ವಿಪಾಶಾ ಎಂಬ ನದಿಯು, ಶತದ್ರೂ ಎಂಬ ನದಿಯು ಇವುಗಳ ಮಧ್ಯದಲ್ಲಿರುವ ದ್ವೀಪಗಳೂ ಕೂಡ ನಾದೇಯಂಗಳೆನಿಸಿಕೊಳ್ಳುವವು; ನದೀತೀರದಲ್ಲಿ ಪುಟ್ಟಿದ ಕುದುರೆಗಳು ನಾದೇಯಂಗಳೆಂಬದಾಗಿಯೂ, ದ್ವೀಪಂಗಳಲ್ಲಿ ಪುಟ್ಟಿದ ಕುದುರೆಗಳು ದ್ವೀಪ್ಯಂಗಳೆಂಬದಾಗಿಯೂ ಹೇಳಲ್ಪಡುವವು; ಈ ಕುದುರೆಗಳು ಶುಭಕರಂಗಳಾದ ಲಕ್ಷಣಂಗಳಿಂದಲು, ದೀರ್ಘವಾದ ಕತ್ತಿನಿಂದಲೂ ಯುಕ್ತವಾದ ಮುಖ ಉಳ್ಳದ್ದಾಗಿ, ಶೋಭನವಾದ ಬಾಲಗಳು, ಜಘನಪ್ರದೇಶಂಗಳು, ಮಂಗಳಕರವಾದ ರೆಪ್ಪೆಗಳುಉಳ್ಳವಾಗಿ ವಿಸ್ತಾರವಾದ ಮುಖವು, ಮೂಗುಗಳು, ದೀರ್ಘವಾದ ಕಂಠವು, ಧಪ್ಪವಾದ ಶ್ವಾಸವು,ಅತಿದೀರ್ಘಂಗಳಾದ ಬಾಹುಗಳು, ಕೇಸರಗಳು,ದೃಢವಾದ ಮಂಗಳಕರವಾದ ಪಾದಗಳು ಪುಷ್ಟವಾಗಿ ಮೈತುಂಬಿಕೊಂಡಿರುವ ಕುದುರೆಗಳು ಕೇಕಯದೇಶದೊಳ್ಪುಟ್ಟಿದ್ದೆಂದರಿವುದು; ವಿಶಾಲವಾದ ಭುಜಶಿರಸ್ಸುಗಳು, ಅಧಿಕವಾದ ಬಲವು, ಚಟುವಾದಕಂಠವು,ಹುಬ್ಬುಗಳಮಧ್ಯಪ್ರದೇಶವು, ತೊಡೆಗಳು, ಹೊಟ್ಟೆಯು, ಸ್ಥೂಲಗಳಾದ ಅಂಡಗಳು,ಜೋಲುವ ಕಿವಿಗಳು, ಅಂಡಗಳ ಸಮೀಪದಲ್ಲಿ ವಿಸ್ತಾರ ಉಳ್ಳವಾಗಿ ಸ್ಥಿರಸ್ವಭಾವದಿಂದೊಡಗೂಡಿದ ಕುದುರೆಗಳು ಅಪರಾಂತದೇಶದಲ್ಲಿ ಪುಟ್ಟಿದವೆಂದರಿವುದು;ದೀರ್ಘವಾದಕತ್ತು, ಮುಖವು, ಹುಲಿಯ ಹೊಟ್ಟೆಯಂತೆ ಸ್ವಲ್ಪವಾದ ಹೊಟ್ಟೆಯು, ಬೆನ್ನು, ಕಿವಿಗಳು, ಮೇಢ್ರವು, ದೃಢವಾದ ಪಾದಂಗಳು,ವಿಸ್ತಾರವಾದ ವಕ್ಷಸ್ಸು,ಜಘನಪ್ರದೇಶವು ಉಳ್ಳವಾಗಿ ಕ್ರೂರಸ್ವಭಾವಗಳಾದ ಪರಾಕ್ರಮಶಾಲಿಗಳಾದ ಅಶ್ವಗಳು ವಸಂತಕದೇಶದಲ್ಲಿ ಜನಿಸಿದವೆಂದರಿವುದು; ಸ್ವಲ್ಪವಾದ ಬೆನ್ನು, ದೃಢವಾದ ಶರೀರವು, ಅತಿ ಶೀಘ್ರವಾದ ನಡೆಯುಳ್ಳ ನಾಲ್ಕು ಪಾದಂಗಳಿಂದ ನರ್ತನವಂ ಮಾಡುವಂತಿರುವ, ಸಮವಾಗಿ ತುಂಬಿರುವ ಶರೀರಉಳ್ಳವಾಗಿ ಪ್ರಹಾರದಿಂದತಿ ಶೀಘ್ರಗಮನವಂ ಹೊಂದುತ ಮದಿಕಿ ಕ್ಷಮಾಯುಕ್ತಂಗಳಾದ ಅಶ್ವಗಳು ಸೌವೀರದೇಶದೊಳ್ಪುಟ್ಟಿದವೆಂದರಿವುದು; ಹ್ರಸ್ವವಾದಪಕ್ಕಡೆಗಳು, ಹುಬ್ಬುಗಳ ಮಧ್ಯವು, ವಿಸ್ತಾರವಾದ ಹೊಟ್ಟೆ, ಶಿರಸ್ಸು, ಕಂಠಪ್ರದೇಶವು, ದೃಢವಾದ ಪಾದಗಳು, ಹ್ರಸ್ವವಾದನೇತ್ರಗಳು, ಬೆನ್ನು,ಪಾದಗಳುಉಳ್ಳವಾಗಿ ಮಂದಬುದ್ಧಿಗಳಾದ ಅಶ್ವಗಳು ದರದದೇಶದಲ್ಲಿ ಜನಿಸಿದವೆಂದರಿವುದು; ಸ್ಥೂಲವಾದ ಪಾದಗ

ಳು, ರೋಮಗಳು, ಚರ್ಮವು. ದೀರ್ಘವಾದ ವಿಸ್ತಾರವಾದ ದೇಹವು, ಅಧಿಕ
ವಾದ ಬಲವು, ವೇಗವು, ಸ್ಥೂಲವಾದ ಹೊಟ್ಟೆಯು, ಮೊಣಕಾಲುಗಳು, ಉನ್ನತ
ವಾಗಿರುವ ಕುದುರೆಗಳು ಸೈಂಧವದೇಶದಲ್ಲಿ ಪುಟ್ಟಿದ್ದೆಂದರಿವುದು; ವಿಸ್ತಾರವಾ
ದ ಪಚ್ಛಡಗಳು, ಆಸನವು ಪೂರ್ವಾರ್ಧದಲ್ಲಿ ವಿಸ್ತಾರವು, ದೃಷ್ಟಿಪ್ರಿಯವಾದ
ದೇಹಕಾಂತಿಯು, ಲಂಬವಾದ ತುಟಿಯು, ಕಿವಿಗಳೂ, ಹ್ರಸ್ವವಾದಕಂಠವು, ಉ
ಳ್ಳವಾಗಿ ಅತಿ ರೋಷದಿಂದ ಕೆಂಪೇರಿದ ಕಂಗಳುಳ್ಳ ಕುದುರೆಗಳು ಮಾಳವವೆಂ
ಬ ಕ್ಷುದ್ರದೇಶದಲ್ಲಿ ಜನಿಸಿ ಕ್ಷುದ್ರಕಗಳೆನಿಸಿಕೊಳ್ಳುವವು; ದೀರ್ಘಗಳಾ
ದಕರ್ಣಗಳು, ಗಂಭೀರವಾದಧ್ವನಿಯು, ವಿಸ್ತಾರವಾದಶರೀರವು, ಕೋಮಲ
ವಾದಕಂಠಪ್ರದೇಶವು, ವಿಸ್ತಾರವಾದಪಚ್ಛಡಗಳು, ಯದೆಯು, ಸ್ವಲ್ಪ
ಬೊಗ್ಗಿರುವಮುಖವು, ದೃಢವಾದಉಭಯಪಾರ್ಶ್ವಗಳು, ದೀರ್ಘಗಳಾದ
ಕೇಶಗಳು, ಮಧ್ಯಮಶರೀರಬಲವು ವುಳ್ಳವಾಗಿ ಕಠಿನಪ್ರಕೃತಿ ಯಿಲ್ಲದೇ ಇ
ರುವಕುದುರೆಗಳು ದಕ್ಷಿಣದೇಶದಲ್ಲಿ ಪುಟ್ಟಿ ಆವರ್ತಗಳೆಂದು ಪ್ರಸಿದ್ಧಿಯಂ
ಪಡೆದಿರುವವು, ಸ್ಥೂಲಗಳಾದಪಾದಗಳು, ದೀರ್ಘಗಳಾದ ಕರ್ಣಗಳು,
ದೃಢವಾದಗೊರಸುಗಳು, ದೀರ್ಘವಾಗಿ ಮಂಡಲಾಕಾರವಾದಕಂಠವು, ಸ್ವಲ್ಪ
ಬೊಗ್ಗಿರುವಮುಖವು, ಲಂಬವಾದಅಂಡಗಳು, ಮೇಢ್ರವು, ಸ್ವಲ್ಪಬಲವು,
ವುಳ್ಳಕುದುರೆಗಳು, ಕಳಿಂಗದೇಶದೊಳ್ ಜನಿಸಿದ್ದೆಂದರಿವುದು; ಸ್ಥೂಲವಾ
ದರೋಮಗಳು, ದುರ್ಬುದ್ಧಿಯು, ಕೋಪಸ್ವಭಾವವು, ಹ್ರಸ್ವವಾದಬೆನ್ನು,
ಅಂಗಗಳು, ಜಘನಗಳು, ದಪ್ಪವಾದ ಹರಡುಗಳು, ಮೊಣಕಾಲುಗಳು, ಮಂ
ದವಾದಬುದ್ಧಿಯು, ಸ್ವಲ್ಪವಾದಬಲವು, ವಿಸ್ತಾರವಾದಆಸನವು, ಉಳ್ಳವಾ
ಗಿ ಅಧೈರ್ಯದಿಂದ ಉತ್ಸಾಹರಹಿತಂಗಳಾದ ಕುದುರೆಗಳು ಮೌಕುಲ
ದೇಶದಲ್ಲಿ ಪುಟ್ಟಿದ್ದೆಂದರಿವುದು; ಸ್ಥೂಲವಾದ ರೋಮಗಳು ಅಸ್ಥಿಗಳು ಬಾ
ಲವು, ಸ್ವಲ್ಪಬಲವು, ಶುಭ್ರವರ್ಣವನ್ನನುಸರಿಸಿದನಾನಾಬಣ್ಣವು, ವಿಷಮಗ
ಳಾದ ಅಂಗಗಳು, ದೃಢವಾದಗೊರಸುಗಳು, ಸ್ಥೂಲವಾದ ಚರ್ಮವು ವುಳ್ಳ
ಕುದುರೆಗಳು ಐರಾವತದೇಶದಲ್ಲಿ ಪುಟ್ಟಿದಐರಾವತ ಕುಲದಲ್ಲಿ ಜನಿಸಿದ್ದೆಂದ
ರಿವುದು, ಕಿರಿದಾದಬೆನ್ನು, ತೊಡೆಗಳು, ಕಟಿಪುರೋಭಾಗವು, ಪೂರ್ವಕಾಯ
ದೊಳ್ ಘಟ್ಟಿಯಾದ ಅಂಗಂಗಳು, ಮಧ್ಯಮವಾದ ಬಲವು, ಹಿಂಭಾಗದಲ್ಲಿ

ವಿಕಾರವು, ಪುಷ್ಟವಾದ ಕಾಲುಗಳು, ಸ್ಪಷ್ಟವಾದ ... ಉತ್ಕೃಷ್ಟವಾಗಿ ಕ್ಷಮೆಯೂ
ಕ್ತಂಗಳಾದ ಮೃದುಸ್ವಭಾವದ ಉತ್ಕೃಷ್ಟ ಕುದುರೆಗಳು ಪಶ್ಚಿಮದೇಶದಲ್ಲಿ ಜನನವಾಸ
ಕಗಳೆನಿಸಿಕೊಳ್ಳುವವು, ಕ್ರೋಧಸ್ವಭಾವವು ಕಾಡು ಹಂದಿಯಂತೆಧ್ವನಿಯು,
ಹಿಂಭಾಗದಲ್ಲಿ ತುಂಬಿರುವ ಅಂಗಂಗಳು, ವಿಸ್ತಾರವಾದ ಎದೆಯು ದಪ್ಪವಾದ
ಹೆಕ್ಕತ್ತು, ದೃಢವಾದ ಹರಡುಗಳುಳ್ಳ ಕುದುರೆಗಳು ತ್ರಿಲಿಂಗದೇಶದ ಕುದುರೆ
ಗಳೆಂದು ತಿಳಿಯಬೇಕು; ಮುಂಭಾಗದಲ್ಲಿ ಉನ್ನತಗಳಾದ ಅವಯವಗಳು,
ಹಿಂಭಾಗದಲ್ಲಿ ವಿಕಾರವು, ಉದ್ದವಾದ ಕಿವಿಯು, ತುಟಿಗಳು, ಕಟಿಪ್ರದೇಶಭಾ
ಗವು, ಹೀನವಾದ ವರ್ಣವು, ಸ್ವಲ್ಪವಾದ ಪರಾಕ್ರಮವು, ದಪ್ಪವಾದ ಹೊಟ್ಟೆಯು,
ಹರಡುಗಳು, ಬಾಲಗಳು ಉತ್ಕೃಷ್ಟವಾಗಿರುವ ಅಶ್ವಗಳು ಕ್ರಥನದೇಶದಲ್ಲಿ ಪುಟ್ಟಿ
ದ್ದುವೆಂದರಿವುದು; ಮುಂಭಾಗದಲ್ಲಿ ನೋಡುವವರ್ಕೆ ಮನೋಹರಗಳಾಗಿ ಸ್ಥೂಲವಾ
ದ ತೊಡೆಗಳು, ಅವಯವಗಳು, ಪಾದಗಳು, ದೃಢವಾದ ರೋಮಗಳು, ಹರಡು
ಗಳು ಉತ್ಕೃಷ್ಟವಾಗಿ ಸ್ಥೂಲವಾದ ಮೊಣಕಾಲುಗಳು, ಹಿಂಭಾಗದಲ್ಲಿ ವಿಕಾರವು,
ಶುಭಗಳಾದ ಪಾದಗಳು ಉಳ್ಳ ಕುದುರೆಗಳು ಸುರಾಷ್ಟ್ರದೇಶದಲ್ಲಿ ಜನಿಸಿ
ದ್ದುವೆಂದರಿವುದು; ಮಂದಸ್ವಭಾವಗಳಾಗಿ ಸ್ಥೂಲವಾದ ಬಾಲವು, ಹೊಟ್ಟೆಯು
ಜೋಲುವ ಕಿವಿಗಳು, ಹೆಕ್ಕತ್ತು, ಕಟಿಪಾರ್ಶ್ವ, ಅಂಡಗಳು, ಮೇಢ್ರವು, ಗಿಡ್ಡ
ಗಿ ವಿಸ್ತಾರವಾದ ಬೆನ್ನು, ದೃಢವಾದ ತೊಡೆಗಳು, ಪಿಂಗಳವರ್ಣವಾದ ನೇ
ತ್ರಗಳು, ಉಳ್ಳ ಅಶ್ವಂಗಳು ಉಪಾವೃತ್ತದೇಶಂಗಳಲ್ಲಿ ಪುಟ್ಟಿದ್ದುವೆಂದರಿವುದು,
ಸ್ಥಿರಗಳಾದ ಅವಯವಗಳು, ಹ್ರಸ್ವವಾದ ಹೊಟ್ಟೆಯು, ಒಟುವಾಗಿ ವಿಸ್ತಾರವಾ
ದ ಕಂಠವು, ದೀರ್ಘಗಳಾದ ಕಿವಿಗಳು, ವಿಸ್ತಾರವಾದ ಎದೆಯು, ವಿಕಾರಯು
ಕ್ತವಾದ ಹಿಂಭಾಗವು, ತೀಕ್ಷ್ಣಸ್ವಭಾವವು, ಕೃಶವಾದ ಬಾಲವು, ಕೇಸರಗ
ಳು ಸಿಲುವಾದ ಚರ್ಮವು ಮಧ್ಯಮವಾದ ಬುದ್ಧಿಯು ಉಳ್ಳ ಕುದುರೆಗಳು
ಸಾಲ್ವದೇಶದೊಳ್ಪುಟ್ಟಿದವು; ಪೂರ್ವಾರ್ಧದೊಳ್ ಬಾಗಿರುವ ಅಂಗಗಳು,
ಹಿಂಭಾಗದಲ್ಲಿ ಹ್ರಸ್ವವಾದ ಅಂಗಗಳು, ಸ್ವಲ್ಪವಾದ ಬುದ್ಧಿಯು ವುಳ್ಳವಾಗಿ
ಬೆನ್ನಿನಲ್ಲಿಯೂ ಹೆಗಲಿನಲ್ಲಿಯೂ ಭಾರವಂ ವಹಿಸೋಣದರಿಂ ಅತ್ಯಂತ ಶ್ರ
ಮವಂ ಹೊಂದುವ ಅಶ್ವಗಳು ಕುರುಕ್ಷೇತ್ರದಲ್ಲಿ ಪುಟ್ಟಿದವು, ದೀರ್ಘವಾದ
ಮುಖವು, ಧಪ್ಪವಾದ ಅಂಗಗಳು, ಹೊಟ್ಟೆಯು, ತಗ್ಗಾಗಿ ವಿಸ್ತಾರವಾಗಿರುವ

ಬೆನ್ನು, ಮೃದುವಾದ ಶರೀರವು, ಸ್ವಲ್ಪವಾದ ಪರಾಕ್ರಮವು ಚೆನ್ನಾಗಿರುವ ಹಿಂಗಾಲುಗಳು, ಹೆಚ್ಚು ಕಡಮೆಯಾಗಿ ನೃಥಗಳಿಲ್ಲದೇ ಇರುವ ಮುಂಗಾಲುಗಳುಳ್ಳ ಅಶ್ವಗಳು ಪಾಂಚಾಲದೇಶದೊಳ್ ಪುಟ್ಟಿದ್ದೆಂದರಿವುದು; ಸ್ಥೂಲಗಳಾದ ಸರ್ವಾವಯಂಗಳು,ದೀರ್ಘವಾದ ಪೃಷ್ಠವು, ಸೂಕ್ಷ್ಮವಾದ ಉದರವು, ಜೋಲುತಲಿರುವ ಕಟಿವಾಯಿ, ಕಿವಿಗಳು, ಉದರವು, ಪ್ರಸ್ತದವಾದಮುಖವು, ಕಂಠವು, ಮಾಂಸ ತುಂಬಿರುವ ಶರೀರವು, ವ್ಯಕ್ತವಾಗಿ ಕಾಣುವ ಅವಯವದ ರೀತಿಯು ಅತಿ ದೃಢವಾಗಿ ಸ್ವಲ್ಪವಾದ ತೇಜಸ್ಸು, ವೇಗವುಳ್ಳ ಅಶ್ವಗಳು ವಾಭಲದೇಶೋತ್ಪನ್ನಗಳು;ಊರ್ಧ್ವಮುಖಗಳಾದ ಕರ್ಣಗಳು, ಸೂಕ್ಷ್ಮವಾದ ಮುಖವು, ವುಳ್ಳವಾಗಿ ವೇಗಯುಕ್ತಗಳಾದ ನಿರಂತರದಲ್ಲಿಯೂ ಉತ್ಸಾಹವಂ ಹೊಂದಿ ವಿಕಾರಯುಕ್ತಂಗಳಾದ ಆಕಾರಂಗಳುಳ್ಳವಾಗಿ ನಿಗ್ರಹಿಸಲಶಕ್ಯಂಗಳಾದ ಅಶ್ವಂಗಳು ಆಭೀರದೇಶದೊಳ್ ಉದ್ಭವಿಸಿದ್ದೆಂದರಿವುದು; ಇವುಗಳಲ್ಲಿ ಸೌರಾಷ್ಟ್ರದೇಶದಲ್ಲಿಯೂ ಸಾಲ್ವದೇಶದಲ್ಲಿಯೂ ಕುರುಕ್ಷೇತ್ರದಲ್ಲಿಯೂ ವಾಭಲದೇಶದಲ್ಲಿಯೂ ಪುಟ್ಟಿದ ಕುದುರೆಗಳು ವೇಸರಂಗಳೆಂಬದಾಗಿ ಪ್ರಸಿದ್ಧಿಯಂ ಪಡೆದಿರುವವು; ಈ ರೀತಿಯಾಗಿ ದೇಶವಿಭಾಗ ಕ್ರಮದಿಂದ ಅಶ್ವಲಕ್ಷಣಂಗಳು ನಿರೂಪಿಸಲ್ಪಟ್ಟವು; ಇನ್ನೂ ಕುದುರೆಗಳಲ್ಲಿ ಉತ್ತಮಗಳೆಂದು ಸೂಚಿಸುವ ಮುಖ್ಯಗಳಾದ ಮುವ್ವತ್ತೆರಡು ಲಕ್ಷಣಗಳಂ ಪೇಳುವೆನು, ಅಶ್ವಗಳ ಅಂಗಗಳಲ್ಲಿ ನಾಲ್ಕು ದೀರ್ಘವಾಗಿಯು ನಾಲ್ಕು ಉನ್ನತವಾಗಿಯೂ ನಾಲ್ಕು ಕೆಂಪಾಗಿಯೂ ನಾಲ್ಕು ಸೂಕ್ಷ್ಮವಾಗಿಯೂ ನಾಲ್ಕು ಹ್ರಸ್ವವಾಗಿಯೂ ನಾಲ್ಕು ವಕ್ರವಾಗಿಯೂ ನಾಲ್ಕು ಸ್ಥೂಲವಾಗಿಯೂ ನಾಲ್ಕು ಹಳ್ಳವಾಗಿಯೂ ಇರಲು ಅದು ಉತ್ತಮಾಶ್ವವೆಂದು ಪೇಳಲ್ಪಡುವವು; ಆ ಲಕ್ಷಣಂಗಳುಯಾವ್ಯಾವೆಂದರೆ:—ಮುಖವು, ಮುಂಗಾಲುಗಳು, ಕೇಶಂಗಳೂ, ಹೆಕ್ಕತ್ತೂ ಕೂಡಾ ನಾಲ್ಕು ದೀರ್ಘಗಳಾಗಿರಬೇಕು, ತುಟಿಗಳು,ನಾಲಿಗೆಯು, ಗಂಡಸ್ಥಲಗಳು, ಮೇಢ್ರವೂಸಹಾ ನಾಲ್ಕು ರಕ್ತವರ್ಣಂಗಳಾಗಿರಬೇಕು. ಮುಸುಡಿಯು, ಕಂಠವು, ಮಂಡಿಯು, ಪಾರ್ಶ್ವಗಳೂ ಕೂಡಾ ನಾಲ್ಕು ವಕ್ರಗಳಾಗಿರಬೇಕು. ಗುದಸ್ಥಾನವು, ಕಟಿಪಶ್ಚಾದ್ಭಾಗವು. ದಂತಗಳು, ನೇತ್ರದ್ವಯವೂ ಕೂಡಾ ನಾಲ್ಕು ವಿಸ್ತಾರವಾಗಿರಬೇಕು. ಕಂಕಳಗಳು, ಹೊಟ್ಟೆ, ನಡು

ವು, ದವಡೆಯೂ ಕೂಡಾ ನಾಲ್ಕು ತಗ್ಗಾಗಿ ಇರಬೇಕು. ಚರ್ಮವು, ತುಟಿಗಳು, ಕೇಶಗಳು, ಜಂಘೆಗಳೂ ಕೂಡಾ ನಾಲ್ಕು ಸೂಕ್ಷ್ಮವಾಗಿರಬೇಕು. ಕರ್ಣಮಧ್ಯವು, ಪುಚ್ಛವು, ಕರ್ಣದ್ವಯವು, ಪೃಷ್ಠಭಾಗವೂ ಕೂಡಾ ಹ್ರಸ್ವವಾಗಿರಬೇಕು. ಈ ರೀತಿಯಿಂದ ಮುವ್ವತ್ತೆರಡು ಲಕ್ಷಣಗಳುಳ್ಳ ಅಶ್ವಗಳು ಶುಭಪ್ರದಂಗಳು, ಇಂತು ವಿಸ್ತಾರವಾಗಿ ಪೇಳಲ್ಪಟ್ಟ ಶುಭಾಶುಭ ಸೂಚಕಂಗಳಾದ ಸುಳಿಗಳಿಂದಲೂ ಆಯಾಯ ದೇಶಂಗಳಲ್ಲಿ ಪುಟ್ಟಿದ ಕುದುರೆಗಳಲ್ಲಿರುವ ಅಂಗವಿಭಾಗಂಗಳಿಂದಲೂ, ಬುದ್ಧಿವಂತರಾದವರಿಂದ ಪರೀಕ್ಷೆಯಂ ಮಾಡಲ್ಪಟ್ಟು ಉತ್ತಮ ಮಧ್ಯಮ ಅಧಮಾಶ್ವಂಗಳಂ ತಿಳಿಯತಕ್ಕದ್ದೆಂದು ಉಪಾಧ್ಯಾಯನಾದ ವಿದ್ಯಾಸಾಗರನು ಶಿಷ್ಯನಾದ ಸುಗಂಧಮುಖಾರಾಯಂಗೆ ಅಶ್ವಗಳ ಲಕ್ಷಣಗಳಂ,ಜಾತಿಭೇದಂಗಳಂ, ದೇಶವಿಭಾಗಂಗಳಂ,ಶುಭಾಶುಭಂಗಳಾದ ಸುಳಿಗಳಂ, ಅವುಗಳ ಫಲಂಗಳಂ, ಗತಿಭೇದಂಗಳಂ, ಕೂಡೆ ವಿಸ್ತಾರವಾಗಿ ನಿರೂಪಿಸಿದನೆಂಬಲ್ಲಿಗೆ, * * * *

ಗದ್ಯ || ಕುಂಡಲಿಶಯ ಖಂಡ ಪರಶು ಪುಂಡರೀಕ ಭವಾಖಂಡಲ ಪ್ರಮುಖನಿಖಿಲ ಸುರವರ ಪರಿಭವ ಪರಿಣತ ಪ್ರಚಂಡ ಬಲ ಚಂಡಮುಂಡ ಖಂಡನ ನಿಪುಣ ಕೋದಂಡ ಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷವೀಕ್ಷಣ ಪ್ರವರ್ಧಮಾನಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲ ಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸ ಕವಿತಾ ನಿಸ್ಸಹಾಯ ನಿರ್ಮಾಣ ಧೌರೇಯ ಘಟಿಕಾ ಶತಗ್ರಂಥ ದಿನದಿನ ಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನ ಸೂತ್ರ ಸುಚರಿತ್ರ ಚಾಮರಾಜ ಮಹಾರಾಜ ಪುತ್ರ ನರಪತಿ ಬಿರುದ ಮಹಿಶೂರ ಪುರವರಾಧೀಶ ಶ್ರೀ ಕೃಷ್ಣರಾಜಒಡೆಯರವರಿಂದರಸಿಕಜನಾನಂದಕರಮಾಗಿ ವಿರಚಿತಮಾದ ಸೌಗಂಧಿಕಾ ಪರಿಣಯಮೆಂಬ ಈ ನವೀನಕೃತಿಯೊಳ್ ಅಶ್ವಲಕ್ಷಣ ವರ್ಣನಾ ಕ್ರಮಮೆಂಬ ಹದಿನಾರನೇ ಆಶ್ವಾಸ ನಿರೂಪಣಕ್ಕೆ ಮಂಗಳಮಹಾ. ಶ್ರೀ * * *

ಪಟ್ಟಕ್ಕೆ ಯೋಗ್ಯವಾದ ಅಶ್ವವು.

ಶುಭ್ರವರ್ಣವಾಗಿ ಸಿಂಹದಂತೆ ನಡೆ ಉಳ್ಳದ್ದಾಗಿ ಮುಖವು, ಮುಂ

ಗಾಲುಗಳು, ಕೇಶಗಳು, ಹೆಕ್ಕತ್ತೂ ಕೂಡಾ ದೀರ್ಘವಾಗಿ,ಮೂಗು, ಶಿರಸ್ಸು ಲಲಾಟವು, ಗೊರಸುಗಳು ಸಹಾ ಉನ್ನತಂಗಳಾಗಿ, ತುಟಿಗಳು, ನಾಲಿಗೆಯು, ಗಂಡಸ್ಥಳಂಗಳು ಮೇಢ್ರವು, ಕೂಡಾ ರಕ್ತವರ್ಣಂಗಳಾಗಿಯೂ, ಮುಸುಡಿಯು, ಕಂಠವು, ಮಂಡಿಯು, ಪಾರ್ಶ್ವಗಳು ಕೂಡಾವಕ್ರಂಗಳಾಗಿಯೂ,ಗುದಸ್ಥಾನವು, ಕಟಿಪಶ್ಚಾದ್ಭಾಗವು, ದಂತಂಗಳು, ನೇತ್ರಂಗಳೂ ಕೂಡಾ ವಿಸ್ತಾರವಾಗಿಯೂ, ಕಂಕಳು, ಹೊಟ್ಟೆ,ನಡುವು,ದವಡೆಗಳೂಕೂಡಾ ತಗ್ಗಾಗಿಯೂ, ಚರ್ಮವು, ತುಟಿಗಳು, ಕೇಶಗಳು, ಜಂಘೆಗಳು ಸಹಾಸೂಕ್ಷ್ಮವಾಗಿಯೂ,ಪುಚ್ಛವು, ಕರ್ಣಮಧ್ಯವು, ಕರ್ಣದ್ವಯವು, ಪೃಷ್ಠಭಾಗ ಸಹಾ ಹ್ರಸ್ವವಾಗಿಯೂ ಇರಬೇಕು; ಮತ್ತೂ ಮಸ್ತಕದಲ್ಲಿ ಎರಡು ಸುಳಿಗಳು ಸಹಾವಾಗಿ ಪ್ರದಕ್ಷಿಣಾಕಾರವಾಗಿಯು ಇವು ಮೊದಲಾದ ದಶಧ್ರುವಂಗಳುಳ್ಳ ಲಕ್ಷಣಯುಕ್ತವಾದ ಕುದುರೆಯು ತನ್ನ ಒಡೆಯನಿಗೆ ಅಧಿಕವಾದ ಶ್ರೇಯಸ್ಸಂ ಸಂಪತ್ತಂ ಸುಖವಂ ಸಹಾ ಕೊಟ್ಟು ನಿರಂತರವಲ್ಲೂ ಪೂಜಾಯೋಗ್ಯವಾದ ಪಟ್ಟದ ಕುದುರೆ ಎನಿಸಿಕೊಳ್ಳುವದು.

### ಪಟ್ಟಕ್ಕೆ ಅಯೋಗ್ಯವಾದ ಅಶ್ವವು.

ಶರೀರವು ಶುಭ್ರವರ್ಣವಾಗಿ ನಾಲ್ಕು ಕಾಲುಗಳು ಮಾತ್ರ ಕಪ್ಪಾಗಿ ಮತ್ತೂ ಸರ್ವಾವಯವಂಗಳೂ ಒಂದು ಬಣ್ಣವಾಗಿ ಮುಖದಲ್ಲಾದರೂ ಬಾಲ್ದದಲ್ಲಿ ಆದರೂ ಪ್ರತ್ಯೇಕವರ್ಣ ಉಳ್ಳದ್ದಾಗಿ ದಕ್ಷಿಣಭಾಗದಲ್ಲಿ ಅಪ್ರದಕ್ಷಿಣವಾಗಿ ವಾಮಭಾಗದಲ್ಲಿ ಪ್ರದಕ್ಷಿಣವಾಗಿ ರೋಮಗಳಲ್ಲಿ ಇಬ್ಭಾಗವಾಗಿರುವ ಸುಳಿಯು ಕಂಠಮೂಲಪ್ರದೇಶದಲ್ಲಿ ಎರಡು ಸುಳಿಗಳು ಮತ್ತೂ ಬೆನ್ನಿನಲ್ಲಿ ಎರಡು ಸುಳಿಗಳಿದ್ದರೂ ಹಿರಳಿನಲ್ಲಿ ಒಂದು ಸುಳಿ ಇದ್ದರೂ ಬಾಲಮೂಲದಲ್ಲಿ ಎರಡು ಸುಳಿಗಳಿದ್ದರೂ ಇವು ಮೊದಲಾದ ಅನೇಕ ದುರ್ಗುಣಂಗಳಿಂಯುಕ್ತವಾಗಿ ದಶಧ್ರುವಗಳಿಂ ರಹಿತವಾಗಿ ಇರುವ ಅಶ್ವವು ಪೂಜೆಗೆ ಅಯೋಗ್ಯವಾಗಿ ತನ್ನ ಒಡೆಯಂಗೆ ದುಃಖವಂ ಬೀರುವ ನೀಚಾಶ್ವವೆನಿಸಿಕೊಳ್ಳುವದು.

ಹದಿನಾರನೇ ಅಧ್ಯಾಯ ಸಂಪೂರ್ಣಂ.

ಶ್ರೀರಸ್ತು.

## ಪದಿನೇಳನೇ ಅಧ್ಯಾಯ ಪ್ರಾರಂಭ.



ಅನಂತರದಲ್ಲಿ ಸುಗಂಧಮಹಾರಾಜೇಂದ್ರನು ವಿದ್ಯಾಗುರುವಾದ ವಿದ್ಯಾಸಾಗರನಿಂದ ನಿರೂಪಿಸಲ್ಪಟ್ಟ ಅಶ್ವಲಕ್ಷಣಂಗಳಂ ಕೇಳಿ ಸಂತೋಷಪಟ್ಟು ಎಲೈ ಗುರುವಾದ ವಿದ್ಯಾಸಾಗರನೇ! ಈಗ ನೀನು ಪೇಳಿದ ರೀತಿಯೊಳ್ ಮನುಷ್ಯಲೋಕದಲ್ಲಿ ಸಕಲದೇಶಂಗಳೊಳಿರುವ ಅಶ್ವಗಳ ಲಕ್ಷಣಂಗಳಂ ಎಲ್ಲವಂ ಪೇಳಿದಂತಾಯಿತು. ಈ ಶಾಸ್ತ್ರದೊಳ್ ಕಳಿಂಗ ರಾಜಪುತ್ರಿಯು ಪಣವಾಗಿ ಪೇಳಿದ ಕುದುರೆಯ ಲಕ್ಷಣವಿರುವಂತೆ ಕಾಣಲಿಲ್ಲ, ಅದೆಂತೆಂದರೆ:–ರೆಕ್ಕೆಗಳಿಂದ ಕೂಡಿ ರಾವುತನ ಮನಸ್ಸೇ ಕಡಿವಾಣವಾಗಿ ವಾಯುವೇಗ ಮನೋವೇಗವುಳ್ಳ ವಿಜಾತೀಯವಾದ ಕುದುರೆಯಂ ಕೇಳಿರುವಳು. ಅಂತಿರುವ ಅಶ್ವದ ರೀತಿ ಮಾತ್ರ ತಿಳಿಯಪಡಲಿಲ್ಲವೆಂದು ನುಡಿಯಲಾಗ ವಿದ್ಯಾಸಾಗರನು ರಾಜೇಂದ್ರನಂ ಕುರಿತು ಎಲೈ ಪ್ರಭುವೇ! ನೀನು ಅಪ್ಪಣೆಯನಿತ್ತ ರೀತಿಯಿಂ ಕೂಡಿರುವ ಅಶ್ವವು ಮನುಷ್ಯಲೋಕದೊಳ್ ಜನಿಸಲರಿಯದು, ದೇವಲೋಕದೊಳ್ ಅಮರಾವತಿಯಲ್ಲಿ ಉಚ್ಚೈಶ್ರವಸ್ಸೆಂಬ ಅಶ್ವರತ್ನವು ನೀನು ಪೇಳಿದ ಲಕ್ಷಣದಿಂದ ಯುಕ್ತವಾಗಿರುವದೆಂದು ಪುರಾಣಂಗಳಲ್ಲಿ ಪೇಳಿರುವದೆಂದು ನುಡಿಯಲಾಮಾತಿಗೆ ಸುಗಂಧರಾಜೇಂದ್ರನು ಆಲೋಚನೆಯಂಗೈಯ್ಯುತ್ತಿರಲು; ಆ ಸಮಯದೊಳ್ ಮಂತ್ರಿಯಾದ ಸುಮತಿಯು ಎದ್ದು ಕೈಮುಗಿದು ಎಲೈ ಸುಗಂಧಮಹಾರಾಜೇಂದ್ರನೇ! ಯಕ್ಷನಂ ಕರೆದು ವಿಚಾರಿಸಿದಡೆ ಪಕ್ಷಂಗಳುಳ್ಳ ಕುದುರೆಯ ಪರಿಯು ತಕ್ಷಣದಲ್ಲೇ ತಿಳಿಯುವವರಲ್ಲಿ ಸಂದೇಹವಿಲ್ಲವೆಂದು ಬಿನ್ನೈಸಲು, ಆಕ್ಷಣವಲ್ಲೇ ಸುಗಂಧರಾಜೇಂದ್ರನು ಆ ಮಾತಂ ಕೇಳಿ ಆನಂದಭರಿತನಾಗಿ ಯಕ್ಷಾಧಿಪತಿಯಾದ ಛಾಯಾಗುಪ್ತನಂ ನೆನೆಯಲು ಆಕ್ಷಣದಲ್ಲಿಯೇ ಛಾಯಾಗುಪ್ತನು ಬಂದು ರಾಜೇಂದ್ರಂಗೆ ಪ್ರಣಾಮವಂ ಮಾಡಿ ಜೀಯ್ಯ! ನನ್ನನ್ನೆನದ ಕಾರ್ಯವೇನು ಶೀಘ್ರದಿಂ ಅಪ್ಪಣೆಯಂ ಕೊಡಬೇಕೆಂದು ಬಿನ್ನವಿಸಲಾಗ ರಾಜೇಂದ್ರನು ಯಕ್ಷನನ್ನೋಡಿ ಎಲೈ ಕಾರ್ಯಸಾಧಕನಾದ ಯಕ್ಷನೇ! ಕೇಳು, ಅತಿ ಶುಭ್ರವಾಗಿ

ಸರ್ವಲಕ್ಷಣ ಸಂಪನ್ನವಾಗಿ ವಾಯುವೇಗ ಮನೋವೇಗ ಉಳ್ಳ ರಾವುತನ ಏರಾಟಗಳಗೆ ಮನೋನುಸಾರವಾಗಿ ರೆಕ್ಕೆಗಳಿಂಮೊಡಗೂಡಿ ವಿಜಾತೀಯವಾಗಿರುವ ಅಶ್ವರತ್ನವು ಯಾವಲೋಕದಲ್ಲಿರುವದೋ? ಅದಂ ತ್ರಿಲೋಕಗಾಮಿಯಾದ ನಿನಿಗೆ ತಿಳಿದು ಇದ್ದರೆ ಹೇಳೆನಲು, ಆ ಮಾತಿಗೆ ಯಕ್ಷನು ಒಂದು ನಿಮಿಷ ಧ್ಯಾನಿಸಿ, ಎಲೈ ದೇವೀಕಟಾಕ್ಷಕ್ಕೆ ಪೂರ್ಣಪಾತ್ರನಾದ ಭೂಮೀಂದ್ರನೇ! ಈಗ ಸ್ವಾಮಿಯುವರು ಅಪ್ಪಣೆಯನ್ನಿತ್ತ ಪರಿಯಿಂದೊಪ್ಪಿದ ಅಶ್ವರತ್ನವು ಪೂರ್ವದಲ್ಲಿ ಸ್ವರ್ಗಲೋಕದೊಳ್ ಅಮರಾವತಿಯಲ್ಲಿತ್ತು, ಅದು ಸ್ವಲ್ಪಕಾಲದಿಂದ ಬಂದಾನೊಂದು ಕಾರಣದಿಂದ ಭೂಲೋಕದಲ್ಲಿ ದ್ವೀಪಾಂತರಗಳಲ್ಲಿರುವದು, ಈಗ ದೇವಲೋಕದಲ್ಲಿಲ್ಲವೆಂದು ಯಕ್ಷರು ಪರಸ್ಪರ ಮಾತನಾಡಿಕೊಳ್ಳುತ್ತಿರುವದಂ ಕೇಳಿರುವೆನೆಂದು ಬಿನ್ನವಿಸಲು; ಆಗ ಸುಗಂಧರಾಜೇಂದ್ರನು ಎಲೈ ಯಕ್ಷನೇ! ಈ ದುರ್ಘಟವಾದ ಕಾರ್ಯವು ನಿನ್ನಿಂದ ನೆರವೇರಬೇಕಲ್ಲದೆ ಮತ್ತೊಬ್ಬರಿಂ ಸಾಧ್ಯವಾಗುವದಿಲ್ಲವಾದ್ದರಿಂ ನೀನು ಸಪ್ತದ್ವೀಪಂಗಳಂ ಪೊಕ್ಕು, ಈ ಅಶ್ವರತ್ನವೆಲ್ಲಿರುವದೋ? ಅದಂ ರಕ್ಷಿಸುವರ್ಯಾರೋ? ಚನ್ನಾಗಿ ಪರಿಶೋಧಿಸಿ ಬರುವನಾಗೆಂದು ಅಪ್ಪಣೆಯಂ ಕೊಟ್ಟು ಕಳುಹಿಸಿ, ತಾನು ಸರಸಕಥಾಶ್ರವಣವಂ ಚತುರಂಗ ಮೊದಲಾದ ಕ್ರೀಡಾವಲೋಕನವಂ ಮಾಡುತ ಸಾಯಂಕಾಲದೊಳ್ ಸ್ನಾನಾಹ್ನಿಕಗಳನ್ನೆರವೇರಿಸಿ ಭೋಜನವಂಗೈದು ಸುಖನಿದ್ರೆಯಂಗೈದು ಮರುದಿನ ಪ್ರಾತಃಕಾಲದೊಳ್ ಎದ್ದು ಮಜ್ಜನಂಗೈದು ಆಹ್ನಿಕಗಳನ್ನೆರವೇರಿಸಿ ಭೋಜನಂಗೈದು ತಾಂಬೂಲವಂ ಸವಿಯುತ ಸುಮತಿಯ ಕರವಂ ಪಿಡಿದು ಬಿಜಾರದ ಹಜಾರದೊಳ್ ಶತಪಥವಂಗೈಯುತ್ತಿರಲಾಗ ಯಕ್ಷನು ಬಂದು ಕೈಮುಗಿಯಲು, ಸುಗಂಧರಾಜನು ಎಲೈ ಯಕ್ಷನೇ! ನಿನಗೆ ನಿಯಮಿಸಿದ ಕಾರ್ಯವಂ ಕಂಡು ಬಂದಿದ್ದಲ್ಲಿ ವಿಶದವಾಗಿ ಪೇಳೆನಲು, ಅದಂ ಕೇಳಿ ಯಕ್ಷನು, ಎಲೈ ಪ್ರಭುವೇ ಕೇಳು? ಭೂಲೋಕದೊಳ್ ಜಂಬೂದ್ವೀಪದ ವಿಸ್ತಾರವಂ ಪೇಳುವೆನು, ಆದಿಯಲ್ಲಿ ಶ್ರೀಮನ್ನಾರಾಯಣನ ನಾಭೀಕಮಲದೊಳ್ ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನು ಅವತರಿಸಿದನು, ಇವನಿಗೆ ಸ್ವಾಯಂಭುವ ಮನುವು ಮಾನಸಪುತ್ರನಾಗಿ ಜನಿಸಿದನು, ಈಸ್ವಾಯಂಭುವಿಗೆ

ಪ್ರಿಯವ್ರತರಾಯ ಉತ್ತಾನಪಾದರಾಯರೆಂಬ ಈರ್ವರು ಪುತ್ರರು ಪುಟ್ಟಿದರು, ಇವರೊಳ್ ಉತ್ತಾನಪಾದರಾಯಂಗೆ ಧ್ರುವರಾಯನೆಂಬ ಪುತ್ರನು ಪುಟ್ಟಿ ಧ್ರುವಮಂಡಲಾಧಿಪತ್ಯವಂ ಮಾಡುತಲಿರುವನು. ಪ್ರಿಯವ್ರತರಾಯಂಗೆ ಅಗ್ನೀಧ್ರ, ಅಗ್ನಿಬಾಹು, ವಪುಷ್ಮಂತ, ದ್ಯುತಿಮಂತ, ಭವ್ಯ, ಸವನ, ಜ್ಯೋತಿಷ್ಮಂತ, ಸತ್ಯ, ಕವಿ, ಮಹಾವೀರರೆಂಬ ಹತ್ತುಮಂದಿ ಪುತ್ರರುಂಟಾದರು, ಇವರೊಳ್ ಕವಿ, ಸತ್ಯ, ಮಹಾವೀರ ಈ ಮೂವರು ವಿರಕ್ತರಾಗಿ ತಪಸ್ಸಂ ಮಾಡಬೇಕೆಂದು ಆಶ್ರಮವನ್ನೈದಿದರು ಉಳಿದ ಏಳುಮಂದಿ ಪುತ್ರರಿಗೆ ಆ ಪ್ರಿಯವ್ರತರಾಯನು ಸಪ್ತದ್ವೀಪಂಗಳಂ ಹಂಚಿದ ಪರಿ ಹ್ಯಾಗೆಂದರೆ.—ಜ್ಯೇಷ್ಠಪುತ್ರನಾದ ಅಗ್ನೀಧ್ರರಾಯಂಗೆ ಲಕ್ಷಯೋಜನವಿಸ್ತಾರವಾದ ಲವಣಸಮುದ್ರದಿಂ ಪರಿವೃತವಾದ ಜಂಬೂದ್ವೀಪಾಧಿಪತ್ಯವಂ ಕೊಟ್ಟನು. ಎರಡನೇ ಮಗನಾದ ಅಗ್ನಿಬಾಹುವಿಗೆ ಎರಡು ಲಕ್ಷ ಯೋಜನ ವಿಸ್ತಾರವಾದ ಇಕ್ಷುಸಮುದ್ರದಿಂ ಪರಿವೃತವಾದ ಇದೇ ವಿಸ್ತಾರವುಳ್ಳ ಪ್ಲಕ್ಷದ್ವೀಪವಂ ರಕ್ಷಿಸುವಂತೆ ನಿಯಮಿಸಿದನು. ಮೂರನೇ ಮಗನಾದ ವಪುಷ್ಮಂತಗೆ ನಾಲ್ಕು ಲಕ್ಷಯೋಜನ ವಿಸ್ತೀರ್ಣವಾದ ಸುರಾಸಮುದ್ರದಿಂ ವೇಷ್ಟಿತವಾದ ಇದೇ ವಿಸ್ತಾರವುಳ್ಳ ಶಾಲ್ಮಲೀ ದ್ವೀಪಾಧಿಪತ್ಯವಂ ಕೊಟ್ಟನು. ನಾಲ್ಕನೇ ಮಗನಾದ ಜ್ಯೋತಿಷ್ಮಂತನಿಗೆ ಎಂಟುಲಕ್ಷ ಯೋಜನ ವಿಸ್ತೀರ್ಣವಾದ ಘೃತಸಾಗರದಿಂ ಸುತ್ತುವರಿದ ಇದೇ ವಿಸ್ತಾರ ಉಳ್ಳ ಕುಶದ್ವೀಪಾಧಿಪತ್ಯವಂ ಕೊಟ್ಟನು. ಐದನೇ ಪುತ್ರನಾದ ದ್ಯುತಿಮಂತನಿಗೆ ಹದಿನಾರು ಲಕ್ಷ ಯೋಜನ ವಿಸ್ತೀರ್ಣವಾದ ದಧಿಸಮುದ್ರದಿಂದಾವೃತವಾದ ಇದೇ ವಿಸ್ತಾರ ಉಳ್ಳ ಕ್ರೌಂಚದ್ವೀಪಾಧಿಪತ್ಯವನ್ನಿತ್ತನು. ಆರನೇ ಮಗನಾದ ಭವ್ಯರಾಯಂಗೆ ಮುವ್ವತ್ತೆರಡುಲಕ್ಷ ಯೋಜನ ವಿಸ್ತಾರ ಉಳ್ಳ ಕ್ಷೀರಸಾಗರದಿಂದೊಡಗೂಡಿ ಇದೇ ಪ್ರಮಾಣ ಉಳ್ಳ ಶಾಕದ್ವೀಪಾಧಿಪತ್ಯವನ್ನಿತ್ತನು. ಏಳನೇ ಪುತ್ರನಾದ ಸವನರಾಯಂಗೆ ಅರವತ್ತುನಾಲ್ಕು ಲಕ್ಷ ಯೋಜನ ವಿಸ್ತಾರವಾದ ಜಲಾರ್ಣವದಿಂ ಒಪ್ಪಿ ಇದೇ ವಿಸ್ತಾರವಾದ ಪುಷ್ಕರದ್ವೀಪಾಧಿಪತ್ಯವಂ ಕೊಟ್ಟನು. ಈ ಪರಿಯಿಂದ ಹಂಚಿರುವ ದ್ವೀಪಂಗಳೊಳ್ ಶ್ರೇಷ್ಠವಾದ ಜಂಬೂದ್ವೀಪವನ್ನಾಳುವ ಅಗ್ನೀಧ್ರರಾಯನಿಗೆ ಒಂಭತ್ತುಮಂದಿ ಮಕ್ಕಳು ಉದಯಿಸಿದರು. ಇವರಿಗೆ

ಈ ಜಂಬೂದ್ವೀಪವನ್ನೀ ಒಂಭತ್ತು ಭಾಗವಂ ಮಾಡಿ ಒಂದೊಂದುಭಾಗವಂ ಒಬ್ಬೊಬ್ಬರಿಗೆ ಆಗುವಂತೆ ನಿಯಮಿಸಿದನು. ಈ ಒಂಭತ್ತು ಖಂಡಿಯು ಹೆಸರುಗಳನ್ನೀ ಪಡದ ಭೂಖಂಡಗಳು, ನಾಭಿವರ್ಷ. ಕಿಂಪುರುಷವರ್ಷ, ಹರಿವರ್ಷ, ಇಳಾವೃತವರ್ಷ, ರಮ್ಯಕವರ್ಷ, ಹಿರಣ್ಮಯವರ್ಷ, ಕುರುವರ್ಷ, ಭದ್ರಾಶ್ವವರ್ಷ, ಕೇತುಮಾಲವರ್ಷವೆಂಬ ಹೆಸರುಗಳಿಂದೊಪ್ಪಿರುವವು, ಇವರೊಳ್ ಮೊದಲಖಂಡವನ್ನಾಳ್ವ ನಾಭಿರಾಜಂಗೆ ವೃಷಭರಾಯನುದಯಿಸಿದನು, ಅವಂಗೆ ಭರತನೆಂಬ ಕುಮಾರನುಂಟಾದನು, ಆ ಭರತನ ಆಧಿಪತ್ಯಪ್ರಸಿದ್ಧಿಯಿಂದ ಈ ನಾಭಿಖಂಡವೇ ಭರತಖಂಡವೆನಿಸಿತು, ಈ ಭರತಖಂಡವೇ ಕರ್ಮಭೂಮಿಎನಿಸುವದು, ಇದರಲ್ಲಿಯೇ ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರ, ಮೊದಲಾದವರು ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಂ ಸಾಧಿಸುವರಾಗಿರುವರು. ಮಿಕ್ಕಾದ ಖಂಡಗಳು ಇಲ್ಲಿ ಮಾಡಿದ ಪುಣ್ಯಕ್ಕೆ ಫಲರೂಪವಾದ ಭೋಗವಂ ಅನುಭವಿಸುವುದಕ್ಕೆ ಯೋಗ್ಯವಾದ ಸ್ಥಲಂಗಳು ಈ ಭರತಖಂಡದಲ್ಲಿ ಮಹೇಂದ್ರ, ಮಲಯ, ಶುಕ್ತಿಮಂತ, ಋಕ್ಷ, ಸಹ್ಯ, ವಿಂಧ್ಯ, ಪಾರಿಯಾತ್ರಗಳೆಂಬ ಸಪ್ತಕುಲಾಚಲಂಗಳಿರುವವು, ಇಂತಲ್ಲದೆ ಗಂಗಾ, ಯಮುನಾ, ಸರಸ್ವತೀ, ನರ್ಮದಾ, ಸುರಸಾ, ಋಷಿ, ಕುಲ್ಯಾ, ಗೋದಾವರೀ, ಕೃಷ್ಣವೇಣೀ, ತುಂಗಭದ್ರಾ, ಕಾವೇರೀ, ಭೀಮರಥೀ, ಫಲ್ಗುನೀ, ಗಂಡಕೀ, ಗೋಮತೀ, ಕಪಿಲಾ, ನೇತ್ರಾವತೀ, ಮಲಾಪಹಾರಿಣೀ, ರೇಣುಕಾ, ಕೃತಮಾಲಾ, ತಾಮ್ರಪರ್ಣೀ, ವಾರುಣೀ, ವ್ಯಾಪಿನೀ, ತಾಪಿನೀ, ಸ್ವರ್ಣವತಿ, ವಕ್ರಕಾ, ಪೂರ್ಣಿಮಾ, ವೇಗವತೀ, ವಿಶೋಕಾ, ಕೌಶಿಕೀ, ಚಿತ್ರಾವತೀ, ಕಾಶ್ಯಪೀ, ಕರತೋಯಾ, ಪುಣ್ಯದಾ, ಕಾಮದಾ, ಪಾಪಘ್ನೀ, ಪಿನಾಕಿನೀಮೊದಲಾದ ಐನೂರು ನದಿಗಳು ಪರಮಪಾವನಂಗಳಾಗಿ ಪ್ರವಹಿಸುತ್ತಿರುವವು, ಇಂತು ಮಹಾಪವಿತ್ರವಾದ ಭರತಖಂಡಕ್ಕೆ ನರನಾರಾಯಣ ದೇವರೀರ್ವರೂ ಅಭಿಮಾನದೇವತೆಗಳಾಗಿರುವವು, ಈ ನವಖಂಡಗಳುಳ್ಳ ಜಂಬೂದ್ವೀಪವು ಲಕ್ಷಯೋಜನ ಪೂರ್ವಪಶ್ಚಿಮ ಲಕ್ಷಯೋಜನ ದಕ್ಷಿಣೋತ್ತರವಾಗಿರುವದು, ಇವರೊಳ್ ಭರತಖಂಡವು ಒಂಭತ್ತು ಸಾವಿರ ಯೋಜನ ವಿಸ್ತಾರವಾಗಿರುವದು, ಇವರಲ್ಲಿ ಹಿಮವಂತವೆಂಬ ಮರ್ಯಾದಾ ಪರ್ವತವು ಎರಡುಸಾವಿರ ಯೋಜನ ವಿ

ಸ್ತಾರ ಉಳ್ಳದ್ದಾಗಿರುವದು, ಮಿಕ್ಕಾದ ಖಂಡಗಳು ಇದೇ ವಿಸ್ತಾರದಿಂವ ಇರುವವು. ಭರತಖಂಡದೊಳ್ ಹಿಮವಂತಪರ್ವತವಿರುವಂತೆ ಕಿಂಪುರುಷಖಂಡದಲ್ಲಿ ಹೇಮಕೂಟಪರ್ವತವು, ಹರಿಖಂಡದಲ್ಲಿ ನಿಷಧಪರ್ವತವು, ರಮಣಖಂಡದಲ್ಲಿ ನೀಲಪರ್ವತವು, ಹಿರಣ್ಮಯಖಂಡದಲ್ಲಿ ಶ್ವೇತಪರ್ವತವು, ಭದ್ರಾಶ್ವಖಂಡದಲ್ಲಿ ಗಂಧಮಾದನ ಪರ್ವತವು, ಕೇತುಮಾಲಖಂಡದಲ್ಲಿ ಮಾಲ್ಯವಂತ ಪರ್ವತವು, ಮರ್ಯಾದಾಪರ್ವತಂಗಳಾಗಿರುವವು, ಈ ಖಂಡಗಳ ಮಧ್ಯದೊಳ್ ಅಷ್ಟದಳಪದ್ಮದಲ್ಲಿ ಕರ್ಣಿಕೆ ವಿರಾಜಿಸಿದಂತೆ ಇಳಾವೃತಖಂಡವು ಮೇರುಪರ್ವತವನ್ನೊಳಕೊಂಡು ಮೂವತ್ತುನಾಲ್ಕು ಯೋಜನಗಳಿಂದ ವಿಸ್ತೀರ್ಣವಾಗಿರುವದು, ಅದರೊಳ್ ಬ್ರಹ್ಮಾಂಡಕಟಾಹವಂ ಭೇದಿಸಿಕೊಂಡು ಬರುವ ದೇವಗಂಗೆಯು ಮೇರುಪರ್ವತದ ಶಿಖರದೊಳ್ ಬಿದ್ದು ನಾಲ್ಕು ಭಾಗವಾಗಿ ನಾಲ್ಕು ಹೆಸರುಗಳಂ ಧರಿಸಿರುವಳು, ಅದರೊಳ್ ಸೀತಾ ಎಂಬ ನದಿಯು ಒಂದು ಪಾರ್ಶ್ವದಲ್ಲಿರುವ ಕುರಂಗ, ಕುರರ, ವೈಕಂಕ, ಕುಸುಂಭ, ತ್ರಿಕೂಟಿಗಳೆಂಬ ಕೇಸರಪರ್ವತಗಳಂ ದಾಂಟಿ ಭದ್ರಾಸ್ವಖಂಡದಿಂದ ಸಮುದ್ರಗಾಮಿನಿಯಾಗುವದು. ಅಳಕನಂದಾ ಎಂಬ ನದಿಯು ಮತ್ತೊಂದುಕಡೆಯೊಳಿರುವ ಪತಂಗ, ಶಿಖರ, ಉತ್ಸಂಗ, ನಿಷಧ, ಶಿತಿವಾಸಕವೆಂಬ ಕೇಸರಪರ್ವತಂಗಳಂ ದಾಂಟಿ ಭರತಖಂಡವನ್ನೈದಿ ಬಂಗಾಳಾ ದೇಶದೊಳ್ ಸಮುದ್ರಗಾಮಿನಿಯಾಗುವದು. ಚಕ್ಷುವೆಂಬ ಹೆಸರುಳ್ಳ ನದಿಯು ಕಪಿಲ, ಶಂಖ, ವೈಢೂರ್ಯ, ಚಾರುಧೀ, ಹಂಸವೆಂಬ ಕೇಸರಪರ್ವತಂಗಳಂ ದಾಂಟಿ ಕೇತುಮಾಲಖಂಡದಿಂದ ಸಾಗರವಂ ಹೊಂದುವದು. ಭದ್ರಾ ಎಂಬ ನದಿಯು ವೃಷನಿರ, ನಾಗ, ಕಾಲಂಜರ, ನಾರದವೆಂಬ ಕೇಸರಪರ್ವತಂಗಳಂ ದಾಂಟಿ ಕುರುವರ್ಷದಿಂದ ಸಮುದ್ರಗಾಮಿನಿಯಾಗುವದು. ಇಂತು ನಾಲ್ಕು ಕಡೆಯೊಳ್ ಗಂಗಾಪ್ರವಾಹಂಗಳಿಂದ ರಮಣೀಯವಾದ ಇಳಾವೃತಖಂಡದೊಳಿರುವ ಮೇರುವು ಹದಿನಾರುಸಾವಿರ ಯೋಜನ ಭೂಮಿಯು ಒಳಗೂ ಎಂಭತ್ತುನಾಲ್ಕು ಸಾವಿರ ಯೋಜನ ಭೂಮಿಯಮೇಲೆಯೂ ಕಾಣಿಸುತ ಅಂತೂ ಲಕ್ಷ ಯೋಜನ ಔನ್ನತ್ಯವಂ ತಾಳಿರುವದು. ಈ ಪರ್ವತದ ಉಪರಿಭಾಗವು ಮುವ್ವತ್ತೆರಡು ಸಾವಿರ ಯೋಜನ ವಿಸ್ತೀ

ರ್ಣವಾಗಿರುವದು, ಇಂತಿರುವ ಪರ್ವತಕ್ಕೆ ಉಪಷ್ಟಂಭಕ ಪರ್ವತಂಗಳಾದ ನಾಲ್ಕು ಪರ್ವತಂಗಳು ಹತ್ತು ಸಾವಿರ ಯೋಜನದ ಔನ್ನತ್ಯದಿಂ ಹತ್ತು ಸಾವಿರ ಯೋಜನದ ಆಗಲದಿಂ ಒಪ್ಪಿರುವವು, ಅದರೊಳ್ ಮಂದರಪರ್ವತದ ಮೇಲೆ ರಸಾಲವೃಕ್ಷವು ಪಯೋಹ್ರದವೆಂಬ ಮಡುವು ನಂದನವೆಂಬ ವನವೂ ಕೂಡಾ ಇರುವವು ಮೇರುಮಂದರವೆಂಬ ಪರ್ವತದ ಮೇಲೆ ಜಂಬೂವೃಕ್ಷ, ಮಧುಹ್ರದ, ಚೈತ್ರರಥವೆಂಬ ವನ ಸಹಾ ಇರುವದು. ಈ ಜಂಬೂವೃಕ್ಷದ ಫಲಂಗಳ ರಸವೇ ಪ್ರವಾಹವಾಗಿ ಜಂಬೂ ನದಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವದು, ಈ ನದಿಯ ಸುತ್ತಲೂ ಒಳಗೂ ಇರುವ ಮರಳೆಲ್ಲವೂ ಸಾವಿರ ಬಣ್ಣದ ಸುವರ್ಣವಾಗಿರುವವು, ಈ ಜಂಬೂವೃಕ್ಷದ ದೆಸೆಯಿಂದಲೇ ಈ ದ್ವೀಪವು ಜಂಬೂದ್ವೀಪವೆನಿಸಿತು. ಮತ್ತೊಂದು ಕಡೆಯೊಳ್ ಇರುವ ಸುಪಾರ್ಶ್ವವೆಂಬ ಪರ್ವತದ ಮೇಲೆ ಕದಂಬವೆಂಬ ವೃಕ್ಷವು ಇಕ್ಷುಸರಸ್ಸೆಂಬ ಮಡುವು ವೈಭ್ರಾಜವೆಂಬ ವನವೂ ಇರುವವು, ಮತ್ತೊಂದು ಕಡೆಯೊಳಿರುವ ಕುಮುದವೆಂಬ ಪರ್ವತದ ಮೇಲೆ ಆಲದ ಮರವು ಅಮೃತದ ಮಡುವು ಸರ್ವತೋಭದ್ರವೆಂಬ ವನವೂ ಸಹಾ ಇರುವದು, ಇವು ಹೊರ್ತು ಮೇರುಪರ್ವತಕ್ಕೆ ನಾಲ್ಕು ದಿಕ್ಕಿನಲ್ಲಿಯೂ ಸುತ್ತುವರಿದು ಎರಡೆರಡು ಪರ್ವತಗಳಿರುವವು; ಅವು ಯಾವವೆಂದರೆ—ಒಂದು ಕಡೆಯಲ್ಲಿ ಜಠರ ದೇವಕೂಟವೆಂಬ ಪರ್ವತಗಳು, ಮತ್ತೊಂದು ಕಡೆಯೊಳ್ ಪವನ ಪಾರಿಯಾತ್ರವೆಂಬ ಪರ್ವತಗಳು, ಮತ್ತೊಂದು ಪಾರ್ಶ್ವದಲ್ಲಿ ಕೈಲಾಸ ಕರವೀರವೆಂಬ ಪರ್ವತಗಳು, ಮತ್ತೊಂದುಭಾಗದೊಳ್ ಶೃಂಗವಂತ ಮಕರವಂತವೆಂಬ ಪರ್ವತಗಳು ಸಹಾ ಇರುವವು, ಇಂತು ಮಣಿಸುವರ್ಣ ಪರ್ವತಂಗಳಿಂದಲೂ, ಮಹಾ ನದಿಗಳಿಂದಲೂ, ಮಧುರರಸಗಳುಳ್ಳ ಮಡುವುಗಳಿಂದಲೂ, ಸರ್ವಕಾಲಗಳಲ್ಲಿಯೂ, ಬೇಕಾದ ಪುಷ್ಪಂಗಳಿಂದಲೂ ಫಲಂಗಳಿಂದಲೂ, ತುಂಬಿದ ಉದ್ಯಾನಂಗಳಿಂದಲೂ, ಸರ್ವ ದೇವತೆಗಳಿಗೂ ವಿಹಾರಸ್ಥಾನವಾದ ಇಳಾವೃತಖಂಡದೊಳ್ ಒಂದು ಭಾಗದಲ್ಲಿ ವಜ್ರಪುರಿ ಎಂಬ ಪಟ್ಟಣವಿರುವದು. ಆ ಪಟ್ಟಣಕ್ಕೆ ಜಲದಿಂದಲೂ, ಅಗ್ನಿಯಿಂದಲೂ ಸರ್ಪಗಳಿಂದಲೂ ಸಿಂಹಗಳಿಂದಲೂ ಅನೇಕ ವಿಧಂಗಳಾದ ಮೃಗಗಳುಳ್ಳ

ರಾಕ್ಷಸರುಗಳಿಂದಲೂ, ಐದು ಸುತ್ತಿನ ಆವರಣಗಳಂ ಮಾಡಿ, ಅದರೊಳಗೆ ವಜ್ರದ ಜಗತಿಗಳ ಮೇಲೆ ಪದ್ಮರಾಗದ ಕಂಭಗಳನ್ನಿಲ್ಲಿಸಿ, ಪಚ್ಚೆಯ ಬೋದಿಗೆಗಳಂ ಮಡಗಿ, ವೈಡೂರ್ಯದ ತೊಲೆಗಳನ್ನೆತ್ತಿ, ನೀಲದ ಗವಾಕ್ಷಗಳಂ ಮಡಗಿ, ಪವಳದ ಲೋವೆಗಳಂ ಬಿಗಿದು, ಮುತ್ತಿನ ಮೇಲುಕಟ್ಟುಗಳಂ ಕಟ್ಟಿರುವ ಏಳು ಅಂತಸ್ತಿನ ಉಪ್ಪರಿಗೆಗಳನ್ನುಂಟುಮಾಡಿ, ಆ ಮನೆಯೊಳ್ ಮಹಾ ಮಾಯಾವಿಯಾದ ಜಂಝಾಮಾರುತನೆಂಬೋರ್ವ ರಾಕ್ಷಸನಿರುವನು. ಆವನು ತನ್ನ ಪರಿವಾರವಾಗಿರುವ ಹತ್ತಾರುಲಕ್ಷ ಘೋರ ರಾಕ್ಷಸರಿಂದಲೂ, ಮಂತ್ರಿಯಾದ ವಜ್ರದಂಷ್ಟ್ರನಿಂದಲೂಕೂಡಿ, ಲೋಕದೊಳ್ ಸಕಲ ಜಂತುಗಳಂ ಸಂಹಾರವಂ ಮಾಡುತ್ತ, ಋಷಿಗಳಂ ಮನಬಂದಂತೆ ಕಾಡಿಸುತಲಿರುವನು, ಅವನಮನೆಯಲ್ಲಿ ಓರ್ವ ರಾಜಪುತ್ರಿಯು ಇರುವಳು, ಅವಳ ಸೌಂದರ್ಯವಂ ನಾನು ಎಷ್ಟೆಂದು ಪೇಳಲಿ! ಚಂದ್ರನೋ, ಕಮಲವೋ, ಕನ್ನಡಿಯೋ, ಎಂಬ ಸಂದೇಹಕ್ಕೆ ಆಸ್ಪದವಾದ ಮೊಗದಿಂ ಕನ್ನೈದಿಲಿನ ಎಸಳ್ಗಳೋ, ಎಳೇ ಮೀನುಗಳೋ, ಮನ್ಮಥನ ಬಾಣಗಳೋ, ಎಂಬ ಸಂಶಯವಂ ಪುಟ್ಟಿಸುವ ಕಣ್ಣುಗಳಿಂ ಕನಕ ಕಳಶಂಗಳೋ, ಬಿಲ್ವ ಫಲಂಗಳೋ, ತಾವರೆಯ ಮೊಗ್ಗುಗಳೋ, ಎಂದು ಭ್ರಮೆಗೊಳಿಸುವ ಕುಚಂಗಳಿಂದೊಪ್ಪಿ ಸರ್ವಾಂಗಗಳಲ್ಲಿಯೂ, ಲಾವಣ್ಯವಂ ಧರಿಸಿರುವಳಾದರೂ, ಆ ರಾಕ್ಷಸನ ಭಯದಿಂದ ಬೆದರಿ ಮಲಿನವಸ್ತ್ರವನ್ನುಟ್ಟು, ಆಭರಣವಂ ಬಿಟ್ಟು, ಕಾರ್ಮುಗಿಲೊಳಿರುವ ಎಳೆ ಮಿಂಚಿನಂತೆ ಮಹಾರಣ್ಯದೊಳಿರುವ ಮಲ್ಲಿಗೆಯ ಬಳ್ಳಿಯಂತೆ ಬಳಲಿದ ಶರೀರದಿಂದೊಪ್ಪಿರುವಳು. ಇಂತಿರ್ಪ ಕಾಂತೆಯಂ ಯಾವ ದೇಶದಿಂದ ಅಪಹರಿಸಿಕೊಂಡು ಬಂದಿರುವನೋ; ತಿಳಿಯದು, ಇನ್ನೂ ಮನೆಗಳಲ್ಲಿ ಅವನ ಸ್ವಜಾತಿ ಕಾಂತೆಯರು ಬಹುಜನಗಳಿರುವರು, ಇಂತಲ್ಲದೆ ಸ್ವಾಮಿಯವರು ಅಪ್ಪಣೆಯಂ ಕೊಟ್ಟ ಪರಿಯಿಂದಲೂ, ನಾನು ದೇವಲೋಕದೊಳ್ ನೋಡಿರುವ ರೀತಿ ಯಿಂದಲೂ, ಸರ್ವಲಕ್ಷಣ ಸಂಪನ್ನವಾದ ಒಂದು ಅಶ್ವರತ್ನವು ಈ ಜಂಝಾ ಮಾರುತನಿಂ ಪಾಲಿತವಾಗಿ, ಅವನ ಮಂದಿರದೊಳಿರುವದು. ಅವನು ಹತ್ತುದಿನ ಮನೆಯೊಳಿದ್ದರೆ ಇಪ್ಪತ್ತು ದಿನ ಆಹಾರಕ್ಕೋಸುಗ ಮಂತ್ರಿಸಹಿತನಾಗಿ ದೇಶ ಸಂಚಾರಕ್ಕೆ ಹೋಗುವನು. ನಾನು ಈಪರಿ ವೃತ್ತಾಂತಗಳ

ನ್ನೆಲ್ಲವಂ ತಿಳಿದು ಬಂದಿರುವೆನೆಂದು ಬಿನ್ನವಿಸಲು; ಸುಗಂಧರಾಜೇಂದ್ರನು ಆ ಮಾತಂ ಕೇಳಿ, ಧನಾರ್ಜನನಂ ಮಾಡಬೇಕೆಂದು ಮೂಲಿಕೆಯಂ ತೆಗೆವರೆ ಅಲ್ಲಿಯೇ ನಿಕ್ಷೇಪವು ಸಿಕ್ಕಿದಂತೆ ಪಣಕ್ಕೋಸುಗ ಅಶ್ವರತ್ನವಂ ಹುಡುಕಲು ಅಲ್ಲಿಯೇ ಸ್ತ್ರೀ ರತ್ನವು ಸಿಕ್ಕಿತು. ಇಂತಿರುವ ನಮ್ಮ ಪುಣ್ಯಕ್ಕೆ ಎಣೆಯಾವುದೆಂದು ತನ್ನೊಳ್ತಾನೇ ಆನಂದಭರಿತನಾಗಿ, ಸುಮತಿಯ ಮುಖವಂ ನೋಡಿ ಎಲೈ ಮಂತ್ರಿಯೇ! ನಾನು ದೇವೀಕಟಾಕ್ಷದಿಂ ಪಡದಿರುವ ದಿವ್ಯಾಸ್ತ್ರಗಳಿಗೆ ಪರೀಕ್ಷಾ ಕಾಲ ಒದಗಿತೆಂದು ನುಡಿದು ಆಗಲೇ ವೀರಸೇನನಂ ಕರಿಸಿ ಸೇನೆಯಂ ರಕ್ಷಿಸುವದರಲ್ಲಿ ಜಾಗರೂಕನಾಗಿರು, ನಾನು ಕಾರ್ಯಗೌರವದಿಂ ಪೋಗಿ ಶೀಘ್ರದಿಂ ಬರುವೆನೆಂದು ಅಪ್ಪಣೆಯಂ ಕೊಟ್ಟು, ಸುಮತಿಯೊಡಗೂಡಿ ಯಕ್ಷಾಧಿಪನಾದ ಛಾಯಾಗುಪ್ತನ ಭುಜಸ್ಕಂಧವಂ ಏರಿ ಇಳಾವೃತಖಂಡವಂ ಕುರಿತು ತೆರಳಿ ವಿಲಾಸದಿಂ ಅಂತರಿಕ್ಷದೊಳ್ಬರುತ ಮಾರ್ಗದೊಳ್ ಅಲ್ಲಲ್ಲಿರುವ ರಮಣೀಯಂಗಳಾದ ವನಂಗಳಂ ನಾನಾ ಜಾತಿ ಮೃಗಂಗಳಂ ನೋಡುತ್ತ ಆಯಾಯ ಭೂಮಿಗಳಲ್ಲಿರುವ ವಿಚಿತ್ರ ವಸ್ತುಗಳಂ ಸುಮತಿಗೆ ತೋರಿ ವರ್ಣಿಸುತ ಇಳಾವೃತ ಖಂಡದ ಸಮೀಪದ ಪ್ರದೇಶವಂ ಸೇರಿ ಅಲ್ಲಿರುವ ಸುವರ್ಣ ಕದಳೀ ವನಾಂತರದೊಳ್ ಇಳಿದು, ಅಲ್ಲಿ ರಮಣೀಯಮಾದ ಚಂದ್ರ ಸರೋವರದೊಳ್ ಹಸ್ತ ಪಾದಗಳಂ ತೊಳೆದು ಮುಖ ಮಜ್ಜನಂಗೈದು ತೃಷ್ಣಾ ಪರಿಹಾರಾರ್ಥವಾಗಿ ಅಮೃತದಂತಿರುವ ಜಲಪಾನವಂಗೈದು ಆ ವನದೊಳಿರುವ ತರುಗಳ ಸಾಲುಗಳ ಮಧ್ಯದೊಳ್ ಮೆಲ್ಲನೆ ಸಂಚರಿಸುತ ಛಾಯಾಗುಪ್ತನಂ ಕರದು ಎಲೈ ಯಕ್ಷನೇ! ನೀನು ಬೇಗನೆ ಪೋಗಿ ಎದುರಾಗಿ ಕಾಣುವ ವಜ್ರಪುರಿಯೊಳ್ಮುಖ್ಯನಾದ ರಾಕ್ಷಸನು ಇರುವನೋ ಸಂಚಾರಾರ್ಥವಾಗಿ ಪೋಗಿರುವನೋ ನೋಡಿ ಬಾರೆಂದು ಅಪ್ಪಣೆಯಂ ಕೊಟ್ಟು ಹಾಗೇ ಮಂತ್ರಿಯಂ ಕುರಿತು ಎಲೈ ಸುಮತಿಯೇ! ನಾನು ಕಳಿಂಗರಾಜಪುತ್ರಿಯ ಮೇಲಣ ಪ್ರೇಮಾತಿಶಯಕ್ಕೋಸುಗ ಈ ಪಣವಂ ತಂದು ಕೊಡುವೆನೆಂದು ಸಭಾ ಮಧ್ಯದೊಳ್ ಪ್ರತಿಜ್ಞೆಯಂ ಮಾಡಿ ಬಂದೆವು, ಈಗ ಪರ್ಯಾಲೋಚನೆಯಂ ಮಾಡುವಲ್ಲಿ ಈ ಕಾರ್ಯವು ಅಮಾನುಷಕಾರ್ಯವಾಗಿ ತೋರುತಲಿದೆ, ಇಂತಿರುವಲ್ಲಿ ಮನುಷ್ಯಜನ್ಮವಂ ತಾಳಿರುವ ನಮ್ಮಿಂದ ಹ್ಯಾಗೆ ಸಾ

ಧ್ಯವಾಗುವದೆಂದು ನುಡಿದು ಖಿನ್ನನಾಗಿರಲು, ಅದಂ ನೋಡಿ ಸುಮತಿಯು ಕ್ಷಣಮಾತ್ರ ಆಲೋಚನೆಯಂಗೈದು ಎಲೈ ಭೂಮೀಂದ್ರನೇ! ಸಕಲಭುವನಭಾರವಂ ಪೊತ್ತಿರುವ ಆದಿಶೇಷನು ತನ್ನ ಶಿರೋರತ್ನಭಾರದಿಂ ಆಯಾಸಗೊಂಡಂತೆ ಸ್ವಾಮಿಯುವರು ಅಪ್ಪಣೆಯಂ ಕೊಡುವದಾಗಿ ತೋರುತ್ತೆ. ಶ್ರೀ ದೇವೀ ಪ್ರಸಾದ ಪಾತ್ರನಾಗಿ ಸಕಲ ದಿವ್ಯಾಸ್ತ್ರಂಗಳಂ ಸಂಪಾದಿಸಿ ಪ್ರೇಮಾತಿಶಯವಂ ಪಡೆದ ನಿನಿಗೆ ಅಸಾಧ್ಯವಾದ ಕಾರ್ಯವ್ಯಾವದಿರುವದು; ಆದರೂ ನಿನ್ನಲ್ಲಿರುವ ಮಹಾಸಾಮರ್ಥ್ಯವೂ, ಪ್ರಭಾವವೂ, ಕೂಡ ನಿನಿಗೆ ಕಾಣುವದಿಲ್ಲ, ಬೂದಿ ಮುಚ್ಚಿದ ಕೆಂಡದಂತೆ ಗೂಢವಾಗಿದ್ದು, ಕಾರ್ಯಕಾಲದೋಳ್ ತಾನೇ ವ್ಯಕ್ತವಾಗುವದು. ನಿನಿಗೆ ಸಕಲ ಇಷ್ಟವೂ ಕರಗತವಾಗಿ ಇಂದ್ರನು ಶಚೀದೇವಿಯ ಪಾಣಿಗ್ರಹಣವಂ ಮಾಡಿದಂತೆ ನೀನು ಸಂತೋಷದಿಂ ಸೌಗಂಧಿಕಾದೇವಿಯ ಪಾಣಿಗ್ರಹಣವಂ ಮಾಡಿ ಭೂಮೀಂದ್ರನೆಂದು ಲೋಕದೋಳ್ ಪ್ರಖ್ಯಾತಿಯಂ ಪಡೆಯುವನಾಗುವೆ ಎಂದು ಎನ್ನ ಬುದ್ಧಿಗೆ ನಿಶ್ಚಯವಾಗಿ ತೋರುತಲಿದೆ. ಇಂತಲ್ಲದೆ ನನ್ನ ಬಲದ ಭುಜವು ಚಲಿಸುತಲಿದೆ. ದಕ್ಷಿಣನಯನದ ರೆಪ್ಪೆಯು ಹಾರುತಲಿದೆ. ಇದರ ಫಲಗಳು ಶೀಘ್ರದಿಂ ಕೈ ಕೂಡುವದೆಂದು ಅರಿಕೆ ಮಾಡಲು, ಸುಗಂಧರಾಜನು ಮಿತ್ರನಾದ ಸುಮತಿಯ ವಾಕ್ಯಚಾತುರ್ಯದಿಂ ಅತ್ಯಂತ ಸಂತೋಷಭರಿತನಾಗಿರಲಾಗ; ಛಾಯಾಗುಪ್ತನು ಬಂದು ಪ್ರಣಾಮವಂ ಮಾಡಿ ಎಲೈ ರಾಜೇಂದ್ರನಾದ ಸುಗಂಧರಾಜನೇ! ವಜ್ರಪುರಿಯೋಳ್ಮುಖ್ಯನಾದ ಜಂಝಾಮಾರುತನು ಈ ದಿನ ಆಹಾರಾರ್ಥವಾಗಿ ಸಂಚಾರಕ್ಕೆ ಪೋಗಿರುವನು. ಇನ್ನೂ ಇಪ್ಪತ್ತು ದಿವಸದ ವರಿವಿಗೂ ಬರುವದಿಲ್ಲವೆಂದು ಅಲ್ಲಿ ಕಾವಲಾಗಿರುವ ರಾಕ್ಷಸರ ತಂಡಗಳು ಕಂಡಕಂಡ ಬಳಿಗಳಲ್ಲಿ ಗುಂಪು ಗುಂಪಾಗಿ ಪೇಳುತ್ತಲಿರುವರು, ಆ ಮಾತಂ ಕೇಳಿ ನಂಬಿಕೆ ಸಾಲದೆ ಆ ರಾಕ್ಷಸನ ಮಂದಿರದೋಳ್ ಉದ್ಯಾನವನಂಗಳಲ್ಲಿಯೂ, ಕ್ರೀಡಾ ಸರೋವರಂಗಳಲ್ಲಿಯೂ, ಪಾಕಶಾಲೆ ಮೊದಲಾದ ಸಕಲ ಸ್ಥಲಂಗಳಲ್ಲಿಯೂ, ಪೋಗಿ ನೋಡಿ ಆ ಕಾವಲುಗಾರರ ಮಾತುಗಳು ನಿಶ್ಚಯವೆಂದೆಣಿಸಿ ಬಿನ್ನವಿಸಲು ಬಂದೆನೆಂದು ನುಡಿಯಲು; ಸುಗಂಧರಾಜೇಂದ್ರನು ಛಾಯಾಗುಪ್ತನ ಮಾತಂ ಲಾಲಿಸಿ, ಮಂತ್ರಿಯ ಮೊಗವಂ ನೋಡಲು, ಸುಮತಿಯು ಎಲೈ ರಾಜಪಾ

ರ್ತಾಂಡನೇ! ಈಗ ಆ ರಾಕ್ಷಸನು ಇಲ್ಲದೇ ಇರುವದು ಬಹಳಉತ್ತಮವು, ಯಾಕೆಂದರೆ ರಾಕ್ಷಸರು ಮಹಾ ಕಪಟರು ನಮ್ಮ ಮೇಲಿನ ದ್ವೇಷಕ್ಕೆ ಆ ತರುಣಿಯಂ ಸಂಹರಿಸುವನೋ ಇಲ್ಲದಿರೆ ಅಶ್ವವಂ ಎಲ್ಲಾದರೂ ಗುಹಾಂತರಗಳಲ್ಲಿ ಇರಿಸುವನೋ ಏನು ಮಾಡುವನೋ ತಿಳಿಯಕೂಡದು, ಆದರೂ ಚಿಂತೆಯಿಲ್ಲ ಹುಡುಕುವಾ ಎಂದರೆ ಬಹಳ ಸಾವಕಾಶವಾಗುವದು. ಆದ್ದರಿಂದ ಈಗಲೇ ಅವನ ಮಂದಿರಕ್ಕೆ ಹೋಗಿ ಆ ರಾಜಪುತ್ರಿಯಂ ಕಂಡು ಅವಳ ವೃತ್ತಾಂತವಂ ಅಶ್ವದ ಪರಿಯಂ ಸಹಾ ತಿಳಿದು ಹಾಗೇ ಆ ರಾಕ್ಷಸನ ಮಾಯೋಪಾಯಂಗಳಂ ಅವನ ಪರಾಕ್ರಮವಂ ಕೂಡಾ ವಿಚಾರಿಸಿ ಅನಂತರ ಅವಕ್ಕೆ ತಕ್ಕ ಉಪಾಯವಂ ಆಲೋಚಿಸಬೇಕೆಂದು ಬಿನ್ನವಿಸಲಾಗ; ರಾಜೇಂದ್ರನು ಸುಮತಿಯಂ ಸಂತವಿಟ್ಟು ಯಕ್ಷನಂ ಕುರಿತು ನೀನು ಜಂಘಾಮಾರುತನಂಬಿ ರಾಕ್ಷಸನು ಬರುವವನನ್ನೋಡುತ್ತ ಇಲ್ಲಿಯೇ ಕಾದಿರು ಎಂದು ನಿಯಮಿಸಿ ಮಂತ್ರಿ ಸಮೇತನಾಗಿ ತೆರಳಿ, ಕಪ್ಪುರವೀಳ್ಯವಂ ಸವಿಯುತ್ತ ಅಲ್ಲಲ್ಲಿ ಸಾಲುಸಾಲಾಗಿರುವ ತೋಪುಗಳ ಉಪರಿ ಭಾಗದೊಳ್ ಕುಳಿತು ಮೃದುವಾಗಿ ನುಡಿವ ಗಿಣಿಗಳ ಧ್ವನಿಗಳಂ ಕಿವಿಗಿಂಪಾಗಿ ಕೇಳುತ ವನ ಮಧ್ಯದೊಳ್ ಮರಿ ಹುಲ್ಲೆಗಳ ಹಾರ್ಯಾಟವನ್ನೋಡುತ್ತ ಎಳೆ ಬಿಸಲಿನೊಳ್ ರತ್ನಮಯವಾದ ಹಾವಿಗೆಯಂ ಮೆಟ್ಟಿ ಬರುತ ಕೆಲವು ದೂರದ ಮೇಲೆ ಅಗಾಧವಾಗಿ ಕಾಣಿಸುವ ವಜ್ರಪುರಿಯ ಜಲಾವರಣವಂ ಕಂಡು ಸುಮತಿಯಂ ಕುರಿತು ಇದೇನೆಂದು ಕೇಳಲು, ಆ ಮಂತ್ರಿಯು ಎಲೈ ದಾನವಾಂತಕನೇ! ಕೇಳು, ಇದು ವಜ್ರಪುರಿಯ ಮೊದಲಾವರಣವು, ಇದು ಜಲಮಯವಾಗಿ ನಾನಾವಿಧಂಗಳಾದ ನಕ್ರಗಳಂ ಅನೇಕಂಗಳಾದ ತಿಮಿತಿಮಿಂಗಿಲಗಳಂ ವಿಜಾತೀಯಂಗಳಾದ ಮತ್ಸ್ಯಂಗಳಂ ಇಂತಲ್ಲದೆ ಶುಷ್ಕಂಗಳಾದ ಮುನಿಗಳ ಶರೀರಂಗಳಂ ಮತ್ತೂ ಜಂತುಗಳ ರಕ್ತ ಪ್ರವಾಹದಿಂ ಸಹಾ ಕೂಡಿ ಅತಿ ಘೋರವಾಗಿ ವೈತರಣಿಯೋ ಎಂಬಂತೆ ನೋಡುವದಕ್ಕೆ ಅಶಕ್ಯವಾಗಿಇಧೆ, ಎಂದು ಯಕ್ಷನು ಬಿನ್ನವಿಸಿದ್ದನಲ್ಲವೇ ಇದೇ ಆವರಣವೆಂದು ಪೇಳಲು; ರಾಜೇಂದ್ರನು ಆ ನುಡಿಯಂ ಲಾಲಿಸುತ ಆ ಆವರಣದ ಸಮೀಪಕ್ಕೆ ಬಂದು ಸುಮತಿಯಂ ಕುರಿತು ಎಲೈ ಮಂತ್ರಿಯೇ! ಅಗಾಧವಾಗಿರುವ ಈ ಆವರಣವಂ ದಾಟುವದು ಅತಿ

ದುರ್ಘಟವಾಗಿಧೆ, ಎಂದು ಪೇಳಲು ಆ ಮಾತಿಗೆ ಸುಮತಿಯು ಎಲೈ ರಾಜ ಕುಲತಿಲಕನೇ! ಕೇಳು, ಪೂರ್ವದಲ್ಲಿ ದಾಶರಥಿಯುಮನುಷ್ಯಾವತಾರವಂ ತಾಳಿ ದ್ದರೂ ಲವಣ ಸಮುದ್ರವಂ ತನ್ನ ಬಾಣದಿಂದ ಶೋಷಣಂ ಗೈಸಿ ಖ್ಯಾತಿ ಯಂ ಪಡದ ಪರಿಯು ಗ್ರಂಥವು ನಿಮಗೆ ವಿದಿತವಾಗಿರುವಲ್ಲಿ ನಾನು ಬಿನ್ನವಿ ಸತಕ್ಕದ್ದೇನಿದೆ, ಎಂದು ನುಡಿಯಲು; ಆ ಮಾತಿಗೆ ರಾಜೇಂದ್ರನು ನಿದ್ರೆಯಂ ತಿಳಿದು ಎಚ್ಚತ್ತವನಂತೆ ತನ್ನ ಪೆಗಲೊಳ್ ಧರಿಸಿರುವ ಬತ್ತಳಿಕೆಯಲ್ಲಿ ಒಂ ದು ಅಮೋಘವಾದ ಬಾಣವಂ ತೆಗದು ಅದಕ್ಕೆ ಶೋಷಣಾಸ್ತ್ರಮಂತ್ರವಂ ಅಭಿಮಂತ್ರಿಸುವದಕ್ಕೆ ಉದ್ಯೋಗಿಸಿ ಮಂತ್ರ ದೇವತೆಯಂ ಧ್ಯಾನಿಸಿ ಎಲೈ ದೇವತೆಯೇ! ಆವರಣಾಂತರಗತವಾದ ಜಲವಂ ನಿಶ್ಶೇಷವಂ ಮಾಡು ಎಂದು ನಿಯಮಿಸಿ ಅಭಿಮಂತ್ರಿಸಿದ ಬಾಣವಂ ಆಕರ್ಣಾಂತವಾಗಿ ಸೆಳದು ಪ್ರಯೋ ಗವಂ ಮಾಡಲು, ಆ ಅಸ್ತ್ರದಿಂದ ಪುಟ್ಟಿದ ಪ್ರಚಂಡ ವಾಯುವಿನ ರಭಸಕೆ ಪರ್ವತಂಗಳೆಲ್ಲವೂ, ಚಲಿಸಿ ಈ ಜಲಾವರಣದಲ್ಲಿ ಬಿಂದು ಮಾತ್ರ ಉದಕವಿ ಲ್ಲದಂತೆ ಶೋಷಿಸಿ ಮತ್ತೂ ಅದರ ದೆಶೆಯಿಂದ ಪರಿಪರಿಯಾಗಿ ಪುಟ್ಟಿದ ಸುಂ ಟರ ಘಾಳಿಯು ಆ ಆವರಣ ದ್ವಾರ ರಕ್ಷಕರಾದ ದೈತ್ಯಸಮೂಹವಂ ನ ಭೋಮಂಡಲ ಪರಿಯಂತ ಅಡರಿಸಿ ಅಸುವಂ ಸೆಳದು ಅವರ ಶರೀರ ಸಮೂ ಹವಂ ದಿಕ್ಕು ದಿಕ್ಕುಗಳೊಳ್ ಬಿಸುಟು ಪ್ರಪಂಚವೆಲ್ಲವಂ ಅಲ್ಲಾಡಿಸುತ್ತಿ ರಲು; ಅದಂ ಕಂಡು ಸುಗಂಧರಾಜೇಂದ್ರನು ಆ ಅಸ್ತ್ರವಂ ಉಪಸಂಹಾರವಂ ಗೈದು ಬಳಿಕ ಪಾತಾಳದಂತೆ ಅತಿ ಭಯಂಕರವಾದ ಆ ಆವರಣವನ್ನೋಡಿ, ಪರ್ವತಾಸ್ತ್ರವಂ ಪ್ರಯೋಗಿಸಿ ಆ ಜಲಾವರಣದ ಗುರುತು ಕೂಡಾ ತಿಳಿ ಯದ ಹಾಗೆ ಮಾಡಿ ಅಲ್ಲಿಂದ ಹೊರಟು ಸ್ವಲ್ಪ ದೂರದೊಳ್ ಎರಡನೇ ಆ ವರಣವಾದ ಆಗ್ನ್ಯಾವರಣದಲ್ಲಿ ದಾವಾಗ್ನಿ ಜ್ವಾಲೆಗಳು ಅಂತರಿಕ್ಷವನ್ನಡರಿ ಉದಕದಿಂ ಕೂಡಿದ ಮೇಘಮಂಡಲವಂ ಶೋಷಿಸುವಂತೆ ಕಾಣಿಸುತ್ತಿರುವ ದನ್ನೋಡಿ ಅಚ್ಚರಿಗೊಂಡು ಇದಕ್ಕೆ ಪ್ರತೀಕಾರವು ವಾರುಣಾಸ್ತ್ರದಿಂ ಆ ಗುವದೆಂದು ಮನದೊಳ್ ನಿಶ್ಚೈಸಿ ಮೂಡಿಗೆ ಇಂದ ಮತ್ತೊಂದು ಬಾಣವಂ ತೆಗದು ಆ ಬಾಣಕ್ಕೆ ವಾರುಣಾಸ್ತ್ರ ಮಂತ್ರದಿಂದ ಅಭಿಮಂತ್ರಿಸಿ ಅದಂ ಪ್ರ ಯೋಗಿಸಲಾಗ ಪ್ರಳಯಕಾಲದ ಮೇಘಗಳೋ ಎಂಬಂತೆ ತಕ್ಷಣದಲ್ಲೇ ಕೆ

ಲವು ಮೇಘಗಳು ಉದಯಿಸಿ ಗಜ ಶುಂಡಾದಂಡಗಳಂತೆ ಉದಕಧಾರೆಗಳಂ ಅವಿಚ್ಛಿನ್ನವಾಗಿ ಕರೆಯಲಾಕ್ಷಣದಲ್ಲೇ ಆ ಅಗ್ನಿಜ್ವಾಲೆಗಳೆಲ್ಲ ನದಿಯೊಳ್ ಕೊಳ್ಳಿಯನ್ನಿಕ್ಕಿದಂತೆ ಶಾಂತವಾಗಲು, ಆ ಸಮಯದೊಳ್ ಆ ವಾರುಣಾಸ್ತ್ರದಿಂ ಪುಟ್ಟಿದ ಸಿಡಿಲುಗಳ ಘಾತದಿಂ ಆ ಆವರಣದ ಬಾಗಿಲಲ್ಲಿ ಕಾದಿರ್ದ ರಾಕ್ಷಸಭಟರುಗಳು ಭಸ್ಮೀಭೂತರಾಗಲು, ಮತ್ತೂ ಸುತ್ತ ಮುತ್ತಲೂಂ ಉದಕ ಪ್ರವಾಹಗಳಿಂದ ಭೂಮಿಯಲ್ಲವೂ ಕರಗುವಂತೆಯೂ, ಸಿಡಿಲುಗಳಿಂದ ಪರ್ವತಗಳೆಲ್ಲವೂ ಒಡೆದು ಹೋಗುವಂತೆಯೂ ತೋರಲು, ಆ ಅಸ್ತ್ರವಂ ಉಪಸಂಹಾರವಂ ಮಾಡಿ ಮುಂದೆ ಬರುತ ಮೂರನೇ ಆವರಣದಲ್ಲಿರುವ ಮಹಾ ಸರ್ಪಂಗಳ ವಿಷಜ್ವಾಲೆಗಳಿಂದ ಸುತ್ತ ಮುತ್ತಲೂ ಬರುವ ಮೃಗಪಕ್ಷಿಗಳೆಲ್ಲವೂ, ನಷ್ಟಂಗಳಾಗಿ ಅದರ ಶರೀರಗಳು ಪರ್ವತಗಳಂತೆ ರಾಶಿರಾಶಿಯಾಗಿ ಬಿದ್ದಿರುವದಂ ನೋಡಿ ಅತಿ ಕುಪಿತನಾಗಿ ಗಾರುಡಾಸ್ತ್ರವಂ ಅಭಿಮಂತ್ರಿಸಿ ಪ್ರಯೋಗಿಸಲು, ಆ ಕ್ಷಣದಲ್ಲಿಯೇ ಅನೇಕ ಕೋಟಿ ಗರುಡರು ಆವಿರ್ಭವಿಸಿ ಸಕಲ ಸರ್ಪಗಳಂ ಹಿಡಿದು ಸೀಳಿ ದಿಕ್ಕು ದಿಕ್ಕುಗಳೊಳ್ ಬಿಸುಟು ತಮ್ಮ ಪಕ್ಷಘಾತದಿಂದ ಅಲ್ಲಿದ್ದ ರಾಕ್ಷಸಭಟರಂ ಸಂಹರಿಸಲಾಕ್ಷಣದೊಳ್ ಸುಗಂಧರಾಜೇಂದ್ರನು ಆ ಅಸ್ತ್ರವಂ ಉಪಸಂಹಾರವಂಗೈದು ಅಲ್ಲಿಂದ ತೆರಳಿ ಬರುತ ಮುಂದುಗಡೆಯೊಳ್ ಸಿಂಹ ವೃಂದಗಳಿಂದ ಪರಿವೃತವಾದ ನಾಲ್ಕನೇ ಆವರಣವಂ ಕಂಡು ಶರಭಾಸ್ತ್ರವಂ ಪ್ರಯೋಗಿಸಲು, ಲಕ್ಷಾಂತರ ಶರಭಂಗಳು ಒಂದೇ ಕಾಲದಲ್ಲಿ ಜನಿಸಿ ಅಲ್ಲಿದ್ದ ಮಹಾ ಸಿಂಹಗಳೆಲ್ಲವಂ ಸೀಳಿ ನಿಶ್ಶೇಷವಂ ಮಾಡಿ ಅಲ್ಲಿದ್ದ ರಾಕ್ಷಸರಂ ಸಂಹರಿಸಿ ಆಹಾರ ಸಾಲದೆ ಅರ್ಭಟಿಸುವದಂ ಕಂಡು ರಾಜೇಂದ್ರನು ಆ ಅಸ್ತ್ರವಂ ಉಪಸಂಹಾರವಂ ಮಾಡಿ ಅಲ್ಲಿಂದ ಮುಂದೆ ಅಡಿಯಿಟ್ಟು ಬರುತ್ತಿರಲು; ಐದನೇ ಆವರಣವಂ ಕಾದಿರುವ ರಾಕ್ಷಸರ ಸಮೂಹಂಗಳು ಅಸಾಧ್ಯಂಗಳಾದ ನಾಲ್ಕು ಆವರಣಂಗಳಂ ದಾಂಟಿ ಬರುತ್ತಿರುವ ರಾಜನಂ ಕಂಡು ಅಚ್ಚರಿಯಿಂದಲೂ, ಕೋಪದಿಂದಲೂ ತಮ್ಮ ತಮ್ಮ ಆಯುಧಂಗಳಂ ಸವರಿಕೊಂಡು ಮೇಲ್ವರಿದು ಬರುತ್ತಿರಲು, ಅದಂ ಕಂಡು ರಾಜೇಂದ್ರನು ಸುಮತಿಯೊಡಗೂಡಿ ಧನುವಂ ಸಜ್ಜುಗೊಳಿಸಿ ಟೇಂಕಾರ ಶಬ್ದ ಮಾತ್ರ

ದಿಂದಲೇ ಶತ್ರುಗಳ ಎದೆ ಗುಂಡಿಗೆಗಳಂ ತಲ್ಲಣಗೊಳಿಸುತ್ತ ತೀಕ್ಷ್ಣಂಗಳಾದ ಬಾಣಗಳಂ ಎಡೆಬಿಡದೆ ಬೀರುತ್ತ ಆ ರಾಕ್ಷಸರಸ್ಸುಗಳು ಗಗನವಂ ತುಂಬುವಂತೆ ಚಂಡಾಡುತಲಿರಲಾಗ; ಆ ರಾಕ್ಷಸರಿಗೆ ಬೆಂಬಲವಾಗಿ ಬಂದ ರಾಕ್ಷಸರು ಕಾರ್ಮುಗಿಲಂತೆ ಕವಿದಿರುವದಂ ಕಂಡು ಸುಮತಿಯು ರಾಜೇಂದ್ರನಂ ಕುರಿತು, ಎಲೈ ರಾಕ್ಷಸಾಂತಕನೇ! ಈಗ ರಾಕ್ಷಸರ ಗುಂಪುಗಳು ಎಣಿಸಕೂಡದಂತೆ ಬರುತಲಿವೆ. ಇವರೊಡನೆ ಆಯಾಸಪಡಲ್ಯಾಕೆ ಮೋಹನಾಸ್ತ್ರವಂ ಪ್ರಯೋಗಿಸಿ ವಿನೋದವನ್ನೋಡಬಹುದೆಂದು ಬಿನ್ನವಿಸಲಾಗ; ಸುಗಂಧರಾಜೇಂದ್ರನು ಅಮೋಘವಾದ ಬಂದು ಬಾಣವಂ ಬತ್ತಳಿಕೆಯಿಂದ ತೆಗದು ಗಂಧರ್ವಾಸ್ತ್ರ ಮಂತ್ರದಿಂ ಅಭಿಮಂತ್ರಿಸಿ ಪ್ರಯೋಗಿಸಿ ವಿನೋದವಂ ನೋಡುತ್ತಿರಲಾಗ; ಆ ಅಸ್ತ್ರವು ಬಬ್ಬೊಬ್ಬ ರಾಕ್ಷಸನಿಗೆ ಬಬ್ಬೊಬ್ಬ ಸುಗಂಧರಾಜೇಂದ್ರನು ಎದುರಿಗೆ ನಿಂತು ಯುದ್ಧವಂ ಮಾಡುವಂತೆ ಆ ರಾಕ್ಷಸರಿಗೆ ಕಾಣಿಸಿ ಅವರಂ ಅಂಧಕಾರದೊಳ್ ಕಣ್ಣು ಬಿಟ್ಟು ನೋಡುವಂತೆ ಬೆಪ್ಪು ಮಾಡಿಸಲು, ಸುಗಂಧರಾಜೇಂದ್ರನು ಅವರಂ ನೋಡಿ ನಗುತ ಅಸ್ತ್ರದ ಪ್ರಭಾವಕ್ಕೆ ಆಶ್ಚರ್ಯಪಡುತ ದಾರಿಗೆ ಅಡ್ಡವಾಗಿರುವ ಕೆಲವು ರಾಕ್ಷಸರಂ ಸಂಹರಿಸಿ ಮಾರ್ಗವಂ ಮಾಡಿ, ಮಿಕ್ಕಾದವರಂ ಯಾವಾಗಲಾದರೂ ಸಂಹರಿಸುವಾ ಎಂದು ಆ ಗಂಧರ್ವಾಸ್ತ್ರವಂ ಉಪಸಂಹಾರವಂ ಮಾಡದೆ ಅಲ್ಲಿಯೇ ನಿಲ್ಲಿಸಿ ಅಲ್ಲಿಂದ ಮುಂದಕ್ಕೆ ನಡದು ಬಂದು ಆ ರಾಕ್ಷಸಾಧಿಪನ ಮನೆಯ ಸುತ್ತಲೂ ಆಕಾಶವಂ ಸೋಂಕುವಂತೆ ಮಾಯಾ ಸಾಮರ್ಥ್ಯದಿಂ ಮಾಡಿರುವ ಗೋಡೆಯಂ ಕಂಡು ಎತ್ತಲೂ ಬಾಗಿಲಂ ಕಾಣದೆ ತಿರಿತಿರಿಗಿ ನೋಡಿ ಮಂತ್ರಿಯಂ ಕುರಿತು ಎಲೈ ಸುಮತಿಯೇ! ಇದೇನು ಚೋದ್ಯವು, ಈ ಆವರಣಕ್ಕೆ ಬಾಗಿಲೇ ಕಾಣಿಸುವದಿಲ್ಲವೆಂದು ನುಡಿಯಲಾ ಮಾತಿಗೆ ಸುಮತಿಯು ಎಲೈ ಪ್ರತಾಪಶಾಲಿಯಾದ ನರೇಂದ್ರನೇ! ಇದು ರಾಕ್ಷಸನ ಕಪಟ ಕೃತ್ಯವಾಗಿ ತೋರುವದು. ಆ ಪರಿ ಹ್ಯಾಗೆಂದರೆ:— ಈ ಗೋಡೆಯು ಅಡ್ಡವಾಗಿದ್ದರೂ ಒಳಗಿರುವ ಉದ್ಯಾನವನಂಗಳು ಸರಸ್ಸುಗಳು, ಮಂದಿರಗಳು, ಮೊದಲಾದ್ದೆಲ್ಲವೂ ಕಾಣುತಲಿರುವವು. ಒಳಗೆ ಪೋಗುವಾ ಎಂದರೆ ಪೋಗಲೀಸದೆ ಗೋಡೆಯಂತೆ ಅ

ಡ್ಡ ಮೂಗಿತಡೆಯುವದುಆದ್ದರಿಂದಆರಾಕ್ಷಸನು ಈನುಇಲ್ಲದಾಗಮುತ್ಯಾರಾದರು ಬಂದು ಸ್ತ್ರೀರತ್ನವಂ ಅಶ್ವರತ್ನವಂ ಕೂಡಾ ಅಪಹರಿಶ್ಯಾರೆಂದು ಈ ವಿಚಿತ್ರವಾದ ಕೋಟೆಯಂ ಮಾಡಿರುವನು. ಇದು ವಜ್ರವು ಮೊದಲಾದ ನಿರ್ಮಲ ಮಣಿಗಳಿಂದ ನಿರ್ಮಿತವಾಗಿರುವಲ್ಲಿ, ನಿನ್ನ ಬಾಣಪ್ರಯೋಗದಿಂದ ಛಿನ್ನವಾಗುವದಲ್ಲದೆ ನಿಲ್ಲಲಾರದು ಪರಾಂಬರಿಸಬಹುದೆಂದು, ಬಿನ್ನವಿಸಲಾ ಮಾತಂ ಕೇಳಿ, ರಾಜೇಂದ್ರನು ಸಾಧಾರಣವಾದ ಬಂದು ಬಾಣವಂ ತೆಗದು ಪ್ರಯೋಗಿಸಲು, ಆ ಬಾಣವು ಆ ವಿಚಿತ್ರವಾದ ಗೋಡೆಗೆ ತಗಲಿ ಖಣಖಣಾ ಎಂದು ಶಬ್ದವಂ ಮಾಡಲು ಅದಂ ಕೇಳಿ ಇದೇನು ಬಾಣಂಗಳಿಗೆ ಅಶಕ್ಯವಾಗಿರುವಂತೆ ಕಾಣುತಲಿಧೆ. ಎಂದು ನುಡಿವ ರಾಜೇಂದ್ರನಂ ಕುರಿತು ಮಂತ್ರಿಯು ಎಲೈ ಸ್ವಾಮಿಯೇ! ಶ್ರೀ ದೇವಿಯ ಕಟಾಕ್ಷದಿಂದ ಯಾವ ಕಾರ್ಯವು ನಿನಿಗೆ ಆಶಕ್ಯವಾಗಿರುವದು, ಈಗ ಈ ಮಾತಂ ಕೇಳಿ ನನಿಗೆಅಚ್ಚರಿಯಾಗುತಲಿಧೆ. ಎಂದು ವಿಜ್ಞಾಪನೆಯಂಗೈಯಲು; ಆಗ ರಾಜೇಂದ್ರನು ಮಂತ್ರಿಯು ಪೇಳಿದ ಧೈರ್ಯದ ಮಾತುಗಳ ಜಾತಿಯಂ ತಿಳಿದು ಎಲೈ ಮಿತ್ರನೇ! ನಾನು ಚತುರ್ದಂತ ಯುಕ್ತವಾದ ಆನೆಯಂ ತರುವ ಪ್ಲಕ್ಷದ್ವೀಪದೊಳ್ ಉಗ್ರಬಾಹುವೆಂಬ ರಾಕ್ಷಸನೊಡನೆ ಕಾಳಗವಂ ಕಾದುವ ಕಾಲದಲ್ಲಿ ಅವನು ಮಾಡಿದ ನಾನಾವಿಧಂಗಳಾದ ಮಾಯಾ ವಿದ್ಯಗಳಂ ನೋಡಿರುವೆನು, ಅದಂ ನೀನು ಕಂಡು ಇರುವೆಯಷ್ಟೆ. ಈ ಜಂಝೂಮಾರುತನ ಮಾಯೆಯು ರಾಕ್ಷಸರ ಬಳಗಾಗಿ ಬಲವತ್ತರವಾಗಿ ಕಾಣುತಲಿಧೆ, ಆದರೇನಾಯಿತು. ನಮ್ಮ ಛಾಯಾಗುಪ್ತನ ಉಪರಿಭಾಗದೊಳ್ ಬಂದು ಈ ಪುರವ ಪ್ರವೇಶಿಶಿದಂತೆ ನಾವು ಪೋಗಬಹುದು ಅದು ಈಗಿನ ಕಾರ್ಯವಲ್ಲ, ನಾನು ಬಂದಮೇಲೆ ಶತ್ರುವಂ ಅವನ ಪುರವಂ ಅವನ ಪರಿವಾರವೆಲ್ಲವಂ ನಾಶವಂಗೈಸಿದಲ್ಲದೆ ಪ್ರಕೃತಕಾರ್ಯ ಮಾತ್ರವಂ ಮಾಡಿಕೊಂಡು ಪೋಗುವದು ರಾಜರುಗಳ ಪರಾಕ್ರಮದ ಲಕ್ಷಣವಲ್ಲವೆಂದು ತಿಳಿದು ಈ ಹಿಂದಿನ ಐದುವಿಧಂಗಳಾದ ಜಲಾವರಣವಂ ಅಗ್ನ್ಯಾವರಣವಂ ಸರ್ಪಾವರಣವಂ ಸಿಂಹಾವರಣವಂ ರಾಕ್ಷಸನಾವರಣವಂ ಕೂಡಾ ಇಲ್ಲದಂತೆ ಮಾಡಿ ಬಂದಿರುವೆನು. ಅವುಗಳಂತೆ ಈ ದುರ್ಭೇದ ಮಾದ ವಜ್ರಾವರಣವಂ ಕೂಡಾ ಜಗನ್ಮಾತೆಯಾದ ಶ್ರೀ ದೇವಿಯ ಪರಿಪೂ

ರ್ಣಕಟಾಕ್ಷದಿಂದ ಪುಡಿ ಪುಡಿಯಾಗಿ ಮಾಡುವೆನು ನೋಡುವನಾಗು. ಮಿತ್ರನೇ ನೀನು ಪ್ರಾಕೃತ ಜನರಂತೆ ಭಯಗೊಳ್ಳಬ್ಯಾಡವೆಂದು ಧೈರ್ಯವಂ ಪೇಳಿ, ತನ್ನ ಕೈಯೊಳಿರ್ದ ಬಿಲ್ಲು ಬತ್ತಳಿಕೆಗಳಂ ಮಂತ್ರಿಯಾದ ಸುಮತಿಯ ಕೈಯೊಳ್ ಕೊಟ್ಟು, ಎಲೈ ಮಿತ್ರನೇ! ನೀನು ಇಲ್ಲಿಯೇ ಇದ್ದುಕೊಂಡು ಈಗ ನಡೆಯುವ ಆಶ್ಚರ್ಯಕರವಾದ ಈ ವಿನೋದವಂ ನೋಡೆಂದು ಪೇಳಿ ಮುಹೂರ್ತಮಾತ್ರ ದೇವಿಯ ಧ್ಯಾನವಂಗೈದು ಅಷ್ಟಸಿದ್ಧಿಗಳೊಳ್ ಮುಖ್ಯವಾದ ಅಣಿಮಾ ಎಂಬ ಸಿದ್ಧಿಯಂ ನೆನೆದು ಆಕ್ಷಣದಲ್ಲಿಯೇ ಅಣುರೂಪನಾಗಿ ಸಕಲ ಸೂಕ್ಷ್ಮಪದಾರ್ಥಂಗಳಂ ಭೇದಿಸಿ ಒಳಪೋಗುವ ಸಾಮರ್ಥ್ಯವಂ ಧರಿಸಿ ಆ ವಜ್ರಪುರಿಯ ಮಾಯಾನಿರ್ಮಿತವಾದ ಮತ್ತೊಬ್ಬರಿಂದ ಭೇದಿಸಲಶಕ್ಯವಾದ ವಜ್ರಾವರಣದ ರೇಣುಗಳಂ ಭೇದಿಸಿ, ಒಳಕ್ಕೆ ಮಹಿಮಾ ಎಂಬ ಸಿದ್ಧಿಯಂ ಸ್ಮರಿಸಿದ ಮಾತ್ರದಿಂದಲೇ ಒಳಒಳಗೆ ಬೆಳೆದು ಬರುವ ವಜ್ರಕ್ಕಿಂತಲೂ ಕಠಿಣವಾದ ತನ್ನ ವಜ್ರಶರೀರದಿಂದ ವಜ್ರದಾವರಣವೆಲ್ಲವೂ ಒಡೆದು ಪುಡಿಪುಡಿಯಾಗುವ ಕಾಲದೊಳ್ ಕೋಟಿ ಶಿಡಿಲುಗಳು ಒಂದೇಕಾಲದೊಳ್ ಎರಗಿದಂತೆ ಘೋರವಾದ ಶಬ್ದ ಉಂಟಾಗಿ ಅದರಿಂ ಭೂಮಿಯಲ್ಲವೂ ಅಲ್ಲಾಡಿ ಪರ್ವತಂಗಳೆಲ್ಲವೂ ಗಡಗಡನೆ ನಡುಗಿ ಗುಹೆಗಳೊಳ್ ಪ್ರತಿಧ್ವನಿಗಳುಂಟಾಗಲು, ಆಗ ಸುಮತಿಯು ಈ ಧ್ವನಿಯಂ ಕೇಳಿ ಪುಡಿಯಾಗುತ್ತಿರುವ ವಜ್ರದ ಗೋಡೆಯಂ ನೋಡಿ ಭೀತನಾಗಿ, ಇದೇನು ಉತ್ಪಾತವೋ ಎಂದು ಚಿಂತಿಸಿ ತನ್ನ ಮನದೊಳ್ ಮಹಾರಾಜನಾದ ಸುಗಂಧರಾಜೇಂದ್ರನು ನನಿಗೆ ತಿಳಿಯದಂತೆ ತಿರಸ್ಕರಿಣೀ ಎಂಬ ವಿದ್ಯೆಯಂ ಮಾಡಿದನೋ? ಅಥವಾ ನನಿಗೆ ಅದೃಶ್ಯವಾಗಿ ಈ ಪುರದೊಳಗಿರುವ ರಾಕ್ಷಸರೊಡನೆ ಘೋರ ಯುದ್ಧವಂ ಮಾಡುವನೋ? ಜಯಪರಾಜಯಂಗಳು ಎಂತಿರುವದೋ ಇದನ್ನಾನು ಹ್ಯಾಗೆ ತಿಳಿಯಬೇಕು, ಇದರ ಪರಿಯಂ ಛಾಯಾಗುಪ್ತನಂ ಕರೆದು ಕೇಳುವಾ ಎಂದರೆ ಅವನು ರಾಜಾಜ್ಞಾನುಸಾರವಾಗಿ ಜಂಝಾಮಾರುತನು ಬರುವ ಮಾರ್ಗದೊಳ್ಕಾದಿರುವನು. ಇಂತಲ್ಲದೆ ರಾಯನ ಯೋಗಕ್ಷೇಮಂಗಳಂ ತಿಳಿದು ಹಿತವಂ ಬಯಸುತ್ತಿರುವದೇ ಮಂತ್ರಿಗೆ ಲಕ್ಷಣವು, ಈಗ ನಾನು ಏನು ಹಿತವಂ ಮಾಡುವೆನು, ದೇವಾಂಶ ಪುರುಷನಾದವಂಗೆ ನನ್ನ ಸಹಾಯವೆಷ್ಟೆಂ

ದು ಧೈರ್ಯವಂ ಭಯವಂಗೊಂಡು ದೇವಿಯಂಧ್ಯಾನಿಸುತ್ತಿರಲು; ಆಗ ರಾಜೇಂದ್ರನು ಮೊದಲಿನಂತೆ ಮನುಷ್ಯನಾಗಿ ಮೇಘಮಂಡಲದಿಂ ಬರುವ ಪೂರ್ಣಚಂದ್ರನಂತೆ ಎದುರಾಗಿ ಬರಲು; ಸುಮತಿಯು ಆ ರಾಯನಂ ಕಂಡು ಅತಿ ಸಂತೋಷವಂಗೊಂಡು ಸಾಷ್ಟಾಂಗವೆರಗಿ ಸ್ವಾಮಿಯೇ! ನೀನು ದೇವಾಂಶಪುರುಷನೆಂದರಿತಿರುವೆನು. ಈಗ ನಿನ್ನ ಮಹಿಮೆಯಂ ಕಂಡು ತ್ರಿಮೂರ್ತಿಗಳೊಳ್ ಒಂದು ಮೂರ್ತಿಯೋ? ಅಲ್ಲದೆ ತ್ರಿಲೋಕಾಧಿಪತಿಯಾದದೇವೇಂದ್ರನೋ? ಅವತಾರವಂಮಾಡಿನಿನ್ನರೂಪದಿಂದಿರುವನೆಂದುತಿಳಿದಿರುವೆನುಎಂದುನುಡಿಯಲು; ರಾಜೇಂದ್ರನು ಮಿತ್ರನಾದ ಸುಮತಿಯಂ ಕರೆದುಕೊಂಡುಬಂದು ಬಿದ್ದಿರುವ ಆವರಣವಂ ತೋರಿ ಜಂಬೂಮಾರುತನ ಮಂದಿರದ ಪುರೋಭಾಗದೊಳ್ ನೂರು ಬಣ್ಣದ ಸುವರ್ಣದ ಭೂಮಿಯಂ ಅಲ್ಲಿರುವ ಮೊಲ್ಲೆ, ಮಲ್ಲಿಗೆ, ಸುರಗಿ, ಸುರಹೊನ್ನೆ, ಸಂಪಿಗೆ, ದವನ ಮೊದಲಾದ ಚೆನ್ನದ ಲತೆಗಳಂ ಕಂಡು ಚೌಕವಾದ ವಜ್ರದ ದಿಂಡುಗಳಂ ಪಚ್ಚೆಯ ಹಾಸುಕಲ್ಲುಗಳಂ ಕುರುವಿಂದದ ಜಗತಿಗಳಿಂದ ಕಟ್ಟೆ ಚೆನ್ನದ ಗಾರೆಯಂ ಮಾಡಿ ವಿಶ್ವಕರ್ಮನಿಂದ ನಿರ್ಮಿತವಾಗಿ ನಿರ್ಮಲೋದಕದಿಂದ ಪೂರ್ಣವಾಗಿ ಸುವರ್ಣಪಕ್ಷಗಳುಳ್ಳ ರಾಜಹಂಸೆಗಳಂ ಸುವರ್ಣ ಕಮಲಗಳಲ್ಲಿರುವ ಮಕರಂದವಂ ಸವಿದು ಸರಸವಾದ ಗಾನವಂ ಮಾಡುತ್ತಿರುವ ತುಂಬಿಗಳಂ ಕೂಡಿ ಭೂಮಿ ಎಂಬ ಕಾಂತೆಯ ಹೃದಯದಲ್ಲಿರುವ ರತ್ನದ ಪದಕವೋ ಎಂಬಂತೆ ಗಗನ ಲಕ್ಷ್ಮಿಯು ತನ್ನ ಸೌಂದರ್ಯವನ್ನೋಡುವದಕ್ಕೆ ಮಡಗಿದ ಕನ್ನಡಿಯೋ ಎಂಬಂತೆ ಕಾಣುತಲಿರುವ ಅಮೃತಸರಸ್ಸಂ ಕಂಡು, ಆ ಕೊಳದ ಸೋಪಾನದೊಳ್ ಕುಳಿತು ಮಂದಮಾರುತದ ಸೋಂಕಿನಿಂ ಸೊಂಪುಗೊಂಡು ಸುಮತಿಯೊಡನೆ ಆ ಸರಸ್ಸಿನ ಮಧುರವಾದ ಜಲಪಾನವಂಗೈದು ಮಾನಸ ಸರೋವರವೇ ಇಲ್ಲಿ ಬಂದಿರುವದೆಂದು ಮನಸಿನೊಳ್ ಸಂತೋಷಪಡುತ್ತಿರಲಾಸಮಯದೊಳ್ ಈ ಸರಸ್ಸಿನ ಪುರೋಭಾಗದಲ್ಲಿ ನವರತ್ನಕಲಶಂಗಳಿಂದ ವಿಚಿತ್ರಂಗಳಾದಧ್ವಜಪತಾಕಂಗಳಿಂದ ದೇದೀಪ್ಯಮಾನವಾದ ಮಂದಿರದ ಉಪರಿಭಾಗದೊಳ್ ನಿಂದು ನೋಡುತಲಿರುವ ಕುಸುಮಲತೆಯು ಪಟ್ಟಣದ ಆವರಣಗಳಲ್ಲಿ ಒಡೆದು ಪುಡಿಯಾಗಿರುವ ವಜ್ರದ ಗೋಡೆಯಂ, ಚಿತ್ರದ ಬೊಂಬೆಗಳಂತೆ ನಿಂತಿರುವ ರಾಕ್ಷಸರ

ಗುಂಪುಗಳಂ, ಇದುವಲ್ಲದೇ ಸಿಂಹಗಳ ಆರ್ಭಟಿಗಳು ನಿಂತಿರುವದಂ,ಮತ್ತೂ ಸರ್ಪಾವರಣದಲ್ಲಿ ಪುಟ್ಟಿದ ವಿಷಜ್ವಾಲೆಗಳು ಇವಿನು ಕತ್ತಲೆಯಾಗಿರುವದಿಲ್ಲದೆ ಪ್ರಕಾಶವಮಾನವಾಗಿರುವುದಂ, ಇಂತಲ್ಲದೆ ಅಗ್ನ್ಯಾವರಣದೊಳ್ ಗಗನವಂ ಸೋಂಕುವ ಜ್ವಾಲೆಗಳಡಗಿ ಶಾಂತವಾಗಿರುವದಂ, ಮತ್ತೂ ಜಲಾವರಣದೊಳ್ತೆರೆಗಳು ಮೊರೆಯುವ ರಭಸವಂ ಬಿಟ್ಟು ನಿದ್ರೆಯಂ ಮಾಡುವುದೋ ಎಂಬಂತೆ ನಿಶ್ಶಬ್ದಮಾಗಿರುವುದಂ, ಇದು ವಲ್ಲದೆ ರಾಕ್ಷಸರಶರೀರದದುರ್ಗಂಧವೆಲ್ಲವೂ ಪೋಗಿ ಸುಗಂಧಯುಕ್ತವಾಗಿ ತಂಫಾಳಿ ಬೀಸುವುದಂ ಕಂಡು ತನ್ನ ಮನದೊಳ್ ಇದೇನು ವಿಚಿತ್ರವು? ಈಪರಿಯಾಗಿ ನಡೆದಿರುವದು ನನಗೆ ಸಂಪತ್ತಿಗೆ ಕಾರಣವೋ? ಇಲ್ಲದೇ ವಿಪತ್ತಿಗೆ ಸೂಚನೆಯೋ? ಎಂದು ಆಲೋಚಿಸುತ ಮುತ್ತಿನ ಮಲಕಿನ ಜಾಲಂಧರದ ಗವಾಕ್ಷದೊಳ್ ಮೆಲ್ಲಮೆಲ್ಲನೆ ನೋಡುತ ತನ್ನ ಶಯ್ಯಾಗೃಹದ ಮುಂದೆ ಕ್ರೀಡಾಸರಸ್ಸಿನಲ್ಲಿಕುಳಿತಿರ್ಪ ಈರ್ವ ಪುರುಷರಂ ಕಂಡು ದುರ್ಘಟವಾಗಿರುವ ಈ ಕೊಳಕ್ಕೆ ಮನುಷ್ಯರು ಬರುವದಕ್ಕೆ ಸಮರ್ಥರಲ್ಲವಾದ್ದರಿಂ ದೇವತೆಗಳೇ ಈ ರೂಪದಿಂ ಬಂದಿರುವರೋ? ಇಲ್ಲದೆ ರಾಕ್ಷಸರು ಮಾಯೆಯಿಂದಮಾನುಷವೇಷವಂ ಧರಿಸಿರುವರೋ? ತಿಳಿಯಕೂಡದೆಂದು ತನ್ನ ಕೆಳದಿಯರ ಕೂಡ ಪೇಳುತ, ಅಲ್ಲಿಂದ ಸ್ವಲ್ಪ ಉನ್ನತವಾದ ಮತ್ತೊಂದು ಅಂತಸ್ತಿನ ಬಿಸಲುಮಚ್ಚಿನೊಳ್ನಿಂತು ಚನ್ನಾಗಿ ನೋಡಿ ಸಖಿಯಂ ಕುರಿತು, ಎಲೈ ಸಖಿಯೇ! ಕೇಳು ಇವರುಗಳಂ ದೇವತೆಗಳೆಂದು ಪೇಳುವಾ ಎಂದರೆ ಭೂಮಿಯೊಳ್ಕುಳಿತಿರುವದರಿಂದ ದೇವತೆಗಳೆಂದು ಪೇಳಕೂಡದು, ರಾಕ್ಷಸರ ಮಾಯೆ ಎಂದು ಪೇಳುವಾ ಎಂದರೆ ಈ ಜಂಝಾ ಮಾರುತನ ಮುಂದೆ ಮತ್ತೋರ್ವ ರಾಕ್ಷಸನ ಮಾಯೆಯು ನಡೆಯಲಾರದು. ಈಗ ಈ ಪುರುಷರೊಳ್ಓರ್ವನಂ ನೋಡಿದರೆ ಕರ್ಣಪರ್ಯಂತಗಳಾಗಿ ತಾವರೆಯ ಎಸಳಿನಂತೆ ವಿಸ್ತಾರಗಳಾಗಿರುವ ನೇತ್ರಂಗಳಂ, ಚಿತ್ರದೊಳ್ ಬರೆದಂತೆನೀಳವಾದ ಪುರ್ಬುಗಳಂ, ಉನ್ನತವಾದ ನಾಸಾಗ್ರವಂ, ಅರಳಿದ ಕಮಲದೊಳ್ ಮರಿದುಂಬಿಗಳ ಗರಿಗಳಂಟಿರ್ದಂತೆ ಹೊಸದಾಗಿ ಬರುವ ಎಳೆ ಮೀಸೆಗಳಂ, ಪೋಣಿಸಿದ ಆಣಿಮುತ್ತುಗಳಂತೆ ಬಿತ್ತರದ ಪಲ್ವರಸೆಗಳಂ, ಜಾನುಪರ್ಯಂತವಾಗಿ ಗಜ ಸುಂಡ ದಂಡದಂತೆ ಇರುವ ಬಾಹು

ಗಳಂ,ವಿಶಾಲವಾದ ವಕ್ಷಸ್ಥಲವಂ, ಪಲ್ಲವದಂತಿರುವ ಪಾದಂಗಳಂ, ತಾಂಬೂಲವಂ ಧರಿಸಿರುವ ಪರಿಯಂ ನೋಡುವ ನೇತ್ರಂಗಳಿಗೆ ಏನೋ ಒಂದು ಬಗೆಯಾದ ಆನಂದವಂ ಪುಟ್ಟಿಸುವ ತೇಜೋವಿಶೇಷವಂ, ಇಂತಲ್ಲದೆ ಪೆಗಲೋಳ್ ಧರಿಸಿರುವ ಬಿಲ್ಲು ಬತ್ತಳಿಕೆಗಳಂ, ಹಸ್ತದೋಳ್ಪಿಡಿದಿರುವ ಚಂದ್ರಹಾಸವಂ ಸಹಾ ನೋಡಿ ಯೋಚಿಸಿದರೆ ದೇವಾಂಶದಿಂದ ಮನುಷ್ಯಲೋಕದೋಳ್ ಪುಟ್ಟಿದ ಧೀರನಾದ ಕ್ಷತ್ರಿಯ ಕುಮಾರನಂತೆ ತೋರುತಲಿಧೆ, ಅವನ ಸಮೀಪದೋಳ್ ಆತನ ಮನೋನುಸಾರವಾಗಿ ಉಪಚಾರವಂ ಮಾಡುತ್ತ ಭಯದಿಂದೆದ್ದು ಕೈ ಕಟ್ಟಿಕೊಂಡು ಮಾತುಗಳನ್ನಾಡುತ್ತಿರುವವಂ ನೋಡಿದರೆ, ಆ ರಾಜಕುಮಾರನಿಗೆ ಮಂತ್ರಿಯೋ? ಮಿತ್ರನೋ? ಎಂದು ತೋರುತಲಿಧೆ, ಈ ಮಹಾ ಪುರುಷನು ಏನು ನಿಮಿತ್ತವಾಗಿ ಇಂತಿರ್ಪ ಸಾಹಸವಂ ಮಾಡಿ ಈ ಸ್ಥಳವಂ ಕುರಿತು ಬಂದನೋ ತಿಳಿಯಕೂಡದು. ಈ ಪುರದ ಆವರಣಂಗಳಂ ಈತನೇ ಈ ಪರಿಯಾಗಿ ಮಾಡಿದ್ದರೆ ಘೋರನಾದ ಜಂಝಾಮಾರುತನು ಬಂದರೂ ಆವನೊಡನೆ ಯುದ್ಧವಂ ಮಾಡಿ ಸಂಹಾರವಂ ಮಾಡುವದರಲ್ಲಿ ಸಂದೇಹವಿಲ್ಲವೆಂದು ನುಡಿಯುತ್ತ, ತನಿಗೆ ಅನುರೂಪವಾದ ಸೌಂದರ್ಯವಂ ನೋಡಿ ಅಚ್ಚರಿಪಡುತ್ತ, ಮೋಹವಂಗೊಂಡು ಪರಾಕ್ರಮಶಾಲಿಯಾಗಿ ಮನೋಹರನಾಗಿರುವ ಈ ಪುರುಷನಿಗೆ ಕಾಂತೆಯಾದರೆ ನನ್ನ ಚಿಂತೆಯಲ್ಲವೂ ಪೋಗುವದು, ಎಂದು ಮನದೋಳ್ ನಿಶ್ಚೈಸಿ, ಮೈಯಲ್ಲ ಪುಳಕಂಗೊಂಡು ನಸುಬೆಮರಿ ಮನ ಕರಗಿ ಬಳಲಿ ಕೆಲವು ಶೃಂಗಾರಭಾವಗಳೆಲ್ಲ ತೋರಿ ಮನ್ಮಥನ ಬಾಣಗಳಿಗೆ ಗುರಿಯಾಗಲು; ಈ ಸುಕುಮಾರಾಂಗನಾದ ರಾಜಕುಮಾರನಂ ಪತಿಯಾಗಿ ನಾನು ವರಿಸಿದೆನು,ದೈವವೇನುಮಾಡುವದೋ?ತಿಳಿಯೆನು ಎಂದು ನಿಟ್ಟುಸುರಂ ಬಿಡುತ, ಇನ್ನು ಈ ಪುರುಷನೊಡನೆ ಮಾತನಾಡಲು ತಡವಾದರೆ ತಡೆಯಲಾರೆನೆಂದು ಉಕ್ಕಿ ಬರುವ ಮಮತೆಯಿಂದ ಲಜ್ಜೆಯಿಲ್ಲದೆ ಕೆಳದಿಯರೊಡನೆ ಈ ಪರಿಯಿಂದ ಮಾತನಾಡುತ್ತ ಕಾರ್ಮುಗಿಲಲ್ಲಿ ಪೊಳೆವ ಮಿಂಚಿನಂತೆ ಮೆರೆಯುವ ಕುಸುಮಲತೆಯ ಮಾತುಗಳಂ ಕೇಳಿ, ಇದೇನು ಈ ಭೂಮಿಯ ಗಿಣಿಗಳು ಮಾನಿನಿಯರು ಮಾತನಾಡಿದಂತೆ ನುಡಿಯುತಲಿವೆ ಎಂದು ತಲೆಯೆತ್ತಿ ಎದುರಾಗಿ ನೋಡಲಾಗ, ಮಣಿಮಂದಿರದ ಮೇಲು

ಮುಚ್ಚಿನೊಳ್ ನಿಂತಿರುವ ಕುಸುಮಲತೆಯು ವೇಗದೊಳಿರುವ ತಿಲಕವೆಂಬ ಭಲ್ಯವು ಸುಗಂಧರಾಜೇಂದ್ರನ ಹೃದಯುವಂ ಭೇದಿಸಲು, ಆ ಸಮಯದೊಳ್ ಮನ್ಮಥನು ತನ್ನ ಮನಸ್ಸಿನೊಳ್ ಈ ಸುಗಂಧರಾಜೇಂದ್ರನು ಶ್ರೀ ದೇವಿಯು ಪ್ರಸಾದವಂ ಪಡೆದು ತೀಕ್ಷ್ಣಂಗಳಾದ ಸಕಲಾಯುಧಂಗಳಿಂದ ಲೋಕದೊಳ್ ಎಲ್ಲರಂ ಜಯಿಸುವನು, ಇವನಂ ನಾನು ದೇವೀಕಟಾಕ್ಷದಿಂದಲೇ ಮೃದುಗಳಾದ ಪುಷ್ಪ ಬಾಣಗಳಿಂದ ತಲ್ಲಣಿಸುವಂತೆ ಮಾಡುವಾ ಎಂದು ಅಟ್ಟಹಾಸವಂ ಮಾಡಿ, ಅಷ್ಟರೊಳ್ ಯೋಚಿಸಿ ಎದುರಾಗಿ ಪೋಗಿ ಬಾಣಗಳಂ ಪ್ರಯೋಗಿಸಿದರೆ ನನ್ನ ಪುಷ್ಪಂಗಳಿಗೂ ವರ್ಣದಿಂದಲೂ, ವಾಸನೆಯಿಂದಲೂ ಅಧಿಕವಾದ ತನ್ನ ಶರೀರದ ಸೌಂದರ್ಯದಿಂದಲೇ ನನ್ನಂ ಜಯಿಸುವನೋ? ಎಂದು ತಿಳಿದು ಎದುರಾಗಿ ಪೋಗದೇ ಮನಸ್ಸಿನೊಳಗೆ ಇರ್ದು ಕಳವಳಗೊಳಿಸಿದನೋ? ಎಂಬಂತೆ ವಿಸ್ಮಯಂಗೊಂಡು ರಾಜೇಂದ್ರನು ನಿಮಿಷಮಾತ್ರ ಮೂರ್ಛಿತನಾಗಲು; ಆ ಕಾಲದೊಳ್ ಸುಮತಿಯು ಇದೇನು ಕಾರಣವಿಲ್ಲದ ಮೂರ್ಛೆ, ಎಂದು ಇದು ರಾಕ್ಷಸರ ಮಾಯೆಯೋ ಇಲ್ಲದೆಈ ಸರೋವರದ ಉದಕವು ವಿಷದಿಂ ಕೂಡಿರುವದೋ? ಅಲ್ಲದೆ ಈ ಭೂಮಿಯು ಮನುಷ್ಯ ಸಂಚಾರಕ್ಕೆ ಯೋಗ್ಯವಾಗದೆ ಶಾಪಯುಕ್ತವಾಗಿರುವದೋ ಎಂದು ಸಂಶಯಂಗೊಂಡುಭ್ರಮಿಶಿ ನಾಲ್ಕು ದಿಕ್ಕುಗಳನ್ನೋಡಿ, ಬಳಿಕ ಇದು ಈ ಕಾಂತೆಯುರಂ ಕಂಡ ಕಾರಣದಿಂ ಬಂದ ವ್ಯಾಮೋಹವೆಂದು ತಿಳಿದು ಕಮಲದಳದಿಂದ ಜಲವಂ ತಂದು ನೇತ್ರಂಗಳಂ ಹೃದಯಪ್ರದೇಶಂಗಳಂ ಕೂಡಾ ನೆನೆಸಿ, ಬೇಗದಿಂ ಪೋಗಿ ಸಮೀಪದಲ್ಲಿರುವ ತಳಿರುಗಳಂ ಪುಷ್ಪಂಗಳಂ ಕೂಡಾ ತಂದು ಹಾಸಿಗೆಯುಂ ರಚಿಸಿ, ತಾವರೆಯ ದಂಟುಗಳಿಂದ ತಲೆ ದಿಂಬು ಮಾಡಿ,ಆದರೊಳ್ ಕುಸುಮ ಸುಕುಮಾರಾಂಗನಾದ ಸುಗಂಧರಾಜೇಂದ್ರನಂ ಮಲಗಿಸಿ, ಕರ್ಪೂರದ ಎಳು ಸುಳಿಯ ಬಾಳೆಯ ದಳಂಗಳೆಂಬ ಬೀಸಣಿಗೆಯಿಂದಬೀಸುತ ಮದನ ತಾಪದಿಂ ಬಾಡಿರುವ ಪುಷ್ಪಂಗಳಂ ತೆಗದು ಬದಲು ಮಾಡುತ ಬಾರಿ ಬಾರಿಗು ಕರ್ಪೂರ ಜಲವಂ ಮೇಲೆ ತಳಿಯುತಲಿರುವ ಸಮಯದೊಳ್, ಸುಗಂಧರಾಜೇಂದ್ರನು ಮೆಲ್ಲನೆ ನಿದ್ರೆಯಿಂದ ಎಚ್ಚರಗೊಂಡಂತೆ ಕಣ್ಣುಗಳಂ ತೆರೆದು ನೋಡಿ ಎದುರಾದ ವಸ್ತುಗಳೆಲ್ಲವಂ ಕಾಂತೆಯಂತೆ ತಿಳಿದು,

ಎಲೈ ಬಾಲೆಯೇ! ಈಗ ವಿಸಾರಿ ಬರುವ ಮದನಜ್ವರವಂ ಸೈರಿಸಲಾರೆನು. ನಿನ್ನ ಮುಖ ಪೂರ್ಣ ಚಂದ್ರೋದಯದೊಡನೆ ಅಧರ ಸುಧೆಯು ಅನುಪಾನವಂ ಗೈಸಿ ಸೇವೆಯಂ ಮಾಡಿಸಿ ನಿನ್ನ ಕುಚಂಗಳೆಂಬ ಮಾವಿನ ಫಲಂಗಳಂ ಕೊಟ್ಟು ಸಂತಾಪವಂ ಪರಿಹರಿಸಿ ನನ್ನ ಇಚ್ಛಾನುಸಾರವಾಗಿ ಪಥ್ಯವಂ ಕೊಟ್ಟು ಈ ಮದನಜ್ವರವಂ ಪೋಗಲಾಡಿಸಿ ರಕ್ಷಿಸಬೇಕೆಂದು ಮನಬಂದಂತೆ ಮಾತನಾಡುತ್ತಿರಲಾಗ; ಸುಮತಿಯು ಆ ವಿರಹಚೇಷ್ಟೆಯಂ ಕಂಡು ಸ್ತ್ರೀಯರುಗಳೊಳ್ ಮಹಿಮೆ ಇಂತಿರುವದೇ ಎಂದು ನುಡಿಯುತ ಎಲೈ ಸ್ವಾಮಿಯೆ! ಇಲ್ಲಿ ಕಾಂತೆ ಎಲ್ಲಿರುವಳು, ಇದು ಇಳಾವೃತಖಂಡದೊಳ್ ವಜ್ರಪುರಿಯು, ಇದು ಅಮೃತಸರೋವರವು, ನಾನು ಸುಮತಿಯು ಎಂದು ಬಿನ್ನವಿಸಲು; ಸುಗಂಧರಾಜೇಂದ್ರನು ಆ ಮಾತುಗಳಂ ಸ್ವಪ್ನದೊಳ್ ಕೇಳಿದಂತೆ ಕೇಳಿ ಎಚ್ಚರುಗೊಂಡು ಬಳಲಿಕೆ ಯೊಡಗೂಡಿದ ನಿಟ್ಟುಸುರಂ ಬಿಟ್ಟು ಸುಮತಿಗೆ ತಿಳಿಯದಂತೆ ಲಜ್ಜಾಪರಾಙ್ಮುಖನಾಗಿರಲಾಗ ಸುಮತಿಯು ಆ ಭಾವವಂ ತಿಳಿದು ಎಲೈ ಸುಕುಮಾರಾಂಗನೇ! ಈಗ ಬಿಸಲೇರಿಬರುವದು, ರತ್ನಶಿಲೆಗಳಿಂನಿರ್ಮಿತವಾದ ಈ ಸರೋವರದೊಳ್ ತಾಪವು ಅಧಿಕವಾಗಿ ತೋರುವದಾದ್ದರಿಂ ಎದುರಾಗಿ ಚಂದ್ರಕಾಂತ.ಶಿಲೆಗಳಿಂ ನಿರ್ಮಿತವಾದ ಈ ಮಂದಿರದ ಕೈಸಾಲೆಯೊಳ್ ವಿಶ್ರಮಂಗೊಳ್ಳುವಾ ಎಂದು ಪೇಳಿ ಹಸ್ತಲಾಗವನ್ನಿತ್ತು ಮೆಲ್ಲನೆ ಪಾವಟಿಗೆಗಳನ್ನೇರಿಸಿ ಕೈಸಾಲೆಯ ಸಮೀಪವಂ ಕುರಿತು ಬರುತಿರುವಷ್ಟರೊಳ್, ಮಂದಿರದ ಮೇಲಂತಸ್ತಿನೊಳ್ ನಿಂತಿರ್ದ ಕುಸುಮಲತೆಯು ಈ ಪುರುಷನೇ ತನ್ನ ಮಂದಿರಕ್ಕೆ ಬರುವನು, ಇದೇನು ನನ್ನ ಸುಕೃತವೆಂದು ತನ್ನ ಸಖಿಯರಂ ಕರೆದು ನೀವು ಬೇಗದಿಂ ಪೋಗಿ ಬಾಗಿಲೊಳ್ ಬರುತಲಿರುವ ರಾಜಕುಮಾರಂಗೆ ಉಪಚಾರಂಗಳಂ ಮಾಡಿ, ಮಧುರಮಾತುಗಳಿಂದ ಕುಶಲವಂ ಕೇಳಿ ಮಂದಿರದ ಒಳಹಜಾರಕ್ಕೆ ಬರುವಂತೆ ಮಾಡಿರಿ ಎಂದು ಪೇಳಲು; ಆಕೆಳದಿಯರು ಆ ಮಾತಂ ಕೇಳಿ ಮಂದಿರದ ಬಾಗಿಲೊಳ್ ಬಂದು ಕಾದಿರ್ದು ಬಹುಕಾಲದಿಂದ ಪರಿಚಿತರಾಗಿರುವ ನಾರಿಯರಂತೆ ನಿರ್ಭಯರಾಗಿ ತಂಪಾಗಿರುವ ಪನ್ನೀರುಗಳಿಂದ ಪಾದಂಗಳಂ ತೊಳೆದು ವಸ್ತ್ರಗಳಿಂದ ಒರಸಿ ಆರತಿಯನ್ನೆತ್ತಿ ದೃಷ್ಟಿಯಂ ತೆಗೆದು ಇಲ್ಲಿ ಬಿಸಲಿನ ಶಕೆ ತೋರುವದು,

ಮಂದಿರದ ಒಳಹಜಾರಕ್ಕೆ ದಯಮಾಡಬೇಕೆಂದು ಉಪಚಾರೋಕ್ತಿಗಳಂ ಪೇಳಲು,ಆಗ ಸುಗಂಧರಾಜೇಂದ್ರನು ಕೆಳದಿಯರೇ ಇಷ್ಟು ಜಾಣೆಯರಾಗಿರುವಾಗ ಇವರ ಒಡತಿಯು ಎಷ್ಟು ಚತುರೆಯೋ? ಅವಳಂ ಬ್ಯಾಗ ನೋಡಬೇಕೆಂದು ಉತ್ಸಾಹವಂಗೊಂಡು ಆ ಮಂದಿರವಂ ಪೊಕ್ಕು ಅಲ್ಲಿ ಮಡಗಿರ್ದ ಮಣಿಪೀಠದೊಳ್ ಕುಳಿತು, ಎಲೈ ನಾರಿಯರಾ!ನೀವ್ಯಾರು,ಈದಾನವನಮಂದಿರದೊಳಿರುವುದಕ್ಕೆ ಕಾರಣವೇನೆಂದು ಕೇಳಲಾ ಕೆಳದಿಯರು ಸ್ವಾಮಿಯೇ! ನೀವು ಕೇಳುವ ಕುಶಲಪ್ರಶ್ನೆಗೆ ಉತ್ತರವಂ ಬಿನ್ನವಿಸುವ ಯೋಗ್ಯತೆಯು ನಮಗೆ ಸಾಲದು, ನಮ್ಮ ಅರಸಿ ಬ್ಯಾರೆ ಇರುವಳೆಂದು ವಿಜ್ಞಾಪನೆಯಂಗೈಯಲು; ಆಗ ರಾಜೇಂದ್ರನು ನಿಮ್ಮ ಅರಸಿಯಂನಾವುನೋಡಬಹುದೇ?ಎಂದು ಕೇಳಲಾಸಖಿಯರು ರಾಜೇಂದ್ರನೇ! ನಮ್ಮ ರಾಣಿಯು ರಾಕ್ಷಸನಭಯದಿಂದ ಅಡಿಯಿಡುವುದಕ್ಕೆ ಭಯಪಡುವಳು, ಅದುಕಾರಣ ಸ್ವಾಮಿಯೇ ಕರುಣೆಯನ್ನಿಟ್ಟು ಉಪ್ಪರಿಗೆಯೊಳಿರುವ ಕಾಂತೆಯಂ ಕಟಾಕ್ಷಿಸಬಹುದೆಂದು ಅರಿಕೆ ಮಾಡಲಾಗ ರಾಜೇಂದ್ರನು ಆನಂದದಿಂ ಹಾವಿಗೆಯಂ ಮೆಟ್ಟಿ ಮೆಟ್ಟಿಗೆಗಳನ್ನೇರಿ ಬರುವಾಗ, ಕುಸುಮಲತೆಯು ಹಾವಿಗೆಯ ಧ್ವನಿಯಂ ಕೇಳಿ ಮನಸ್ಸಿನೊಳ್ ಸಂತೋಷವು ಹೆಚ್ಚಿ ರಾಜಕುಮಾರನನ್ನೇ ಇಲ್ಲಿಗೆ ಈ ಸಖಿಯರು ಕರೆತರುವರು, ಇವರ ಸಾಮರ್ಥ್ಯವೆಷ್ಟೆಂದು ಅಚ್ಚರಿಗೊಂಡು, ಆ ಮಹಾಪುರುಷನೇ ಇಲ್ಲಿಗೆ ಬರುವಾಗ ನಾನು ಎದುರ್ಗೊಳ್ಳುವದು ಉಚಿತವೆಂದು ಶಯ್ಯಾಗೃಹದಿಂ ತೆರಳಿ ಕಂದರ್ಪಸುಂದರನಾದ ರಾಜೇಂದ್ರನಸೌಂದರ್ಯವಂ ನೋಡಿ ಮೂರ್ಛೆಯಂಗೊಂಡು ಬಿದ್ದಳೋ? ಎಂಬಂತೆ ಪಾದಂಗಳೊಳ್ ಬಿದ್ದು ಕಂಬನಿಗಳಿಂದಲೇ ಪಾದಂಗಳಂ ತೊಳೆಯುವಳೋ?ಎಂಬಂತಿರಲು; ರಾಜೇಂದ್ರನು ಆ ಕಾಂತೆಯಂ ಕರಗಳಿಂದೆತ್ತಿ ತತ್ತರಂಗೊಳ್ಳಬ್ಯಾಡವೆಂದು ಸಂತೈಸಿ ಕರವಂ ಪಿಡಿದು ಅವಳೊಡನೆ ಶಯ್ಯಾಗೃಹದ ಮಣಿಮಂಚದೊಳ್ಕುಳಿತು ಪ್ರೇಮಾತಿಶಯದಿಂ ಕುಶಲಪ್ರಶ್ನವಂ ಮಾಡುತ, ಎಲೈ ಬಾಲೆಯೆ! ಈ ಮಲಿನವಸ್ತ್ರವಂ ಧರಿಸಿ ಆಭರಣಂಗಳಂ ಧರಿಸದೆ ಮುಡಿಯಾಗಿ ಕಟ್ಟಿರುವ ಕೇಶಭಾರವಂ ಬಾಚಿ ಬೈತಲೆಯಂ ತಿದ್ದದೆ ಬಳಲಿರುವುದಕ್ಕೆ ಕಾರಣವೇನು, ನೀನು ಮನುಷ್ಯದೇಶದೊಳ್ಹುಟ್ಟಿದಂತೆ ಕಾಣಿಸುವೆ, ನೀನ್ಯಾರು?ನಿನ್ನಹೆಸರೇನು?

ನಿನ್ನ ತಾಯಿತಂದೆಗಳ್ಯಾರು? ನೀನು ಇಲ್ಲಿಗೆ ಬರುವದಕ್ಕೆ ಕಾರಣವೇನು? ಎಲ್ಲ ವಂ ವಿಸ್ತಾರವಾಗಿ ಪೇಳಬೇಕೆನಲು; ಕುಸುಮಲತೆಯು ಆ ರಾಜಕುಮಾರನ ಮಾತುಗಳಂ ಕೇಳಿ ಲಜ್ಜೆಯಿಂ ತಲೆವಾಗಿ ಮೆಲ್ಲ ಮೆಲ್ಲನೆ ಆ ಮನೋಹರಾಂಗನಂ ನೋಡಿ ನೋಡದಂತಿರುವ ಪರಿಯಿಂದ ವಾರೆ ನೋಟದಿಂ ನೋಡುತ ಎನ್ನ ಮನೋಭಿರಾಮನೇ! ಕೇಳು, ನಾನು ಹುಟ್ಟಿ ಬೆಳದ ಕಥೆಯಂ ಎಷ್ಟೆಂದು ಪೇಳಲಿ, ಆದರೂ ಕೊಂಚವಾಗಿ ಬಿನ್ನವಿಸುವೆನು-ಲಾಲಿಸು,

ಈ ಜಂಬೂದ್ವೀಪದಲ್ಲಿರುವ ಐವತ್ತಾರು ದೇಶಂಗಳೊಳ್ ಅತಿರಮಣೀಯವಾದ ಆ ರಟ್ಟದೇಶವೆಂದಿರುವದು, ಆದೇಶವಂ ಕುಸುಮಧ್ವಜರಾಯನೆಂಬ ಅರಸು ಕುಲಕ್ರಮದಿಂದ ಪಾಲಿಸುವನು. ಆ ರಾಯಂಗೆ ಅನಂಗಲೇಖೆ ಎಂದು ರಾಣಿಯು ಇರುವಳು, ಆ ಅರಸಿಯ ಉದರದೋಳ್ ಜನಿಸಿದ ನನ್ನಂ ಜನಗಳು ಕುಸುಮಲತೆ ಎಂದು ಕರೆಯುವರು. ನನ್ನ ತಂದೆಯು ಧರ್ಮದಿಂ ಪ್ರಜಾ ರಕ್ಷಣೆಯಂ ಮಾಡುತ್ತಿರಲು; ಒಂದಾನೊಂದು ದಿನ ನಾನು ಋತುಸ್ನಾನವಂಗೈದು ಸೆಜ್ಜೆಯ ಮೇಲುಭಾಗದೋಳ್ ಎಳೆ ಬಿಸಲಿನಲ್ಲಿ ಕುರುಳುಗಳನ್ನಾರಿಸುತ ಅನೇಕ ಸಖಿಯರೊಡಗೂಡಿ ನಿಂತಿರಲಾಗ ಈ ಮಾಯಾವಿಯಾದ ಜಂಝಾಮಾರುತನೆಂಬ ರಾಕ್ಷಸನು ಉಪರಿಭಾಗದೋಳ್ ಸಂಚಾರ ಮಾಡುತ ಬಂದು ಕಪೋತವಂ ಕಂಡು ಅಡರುವ ಗಿಡಗನ ಅಂದದಿಂದ ಆಕಾಶದಿಂ ಧುಮುಕಿ ಎನ್ನನ್ನೂ ಈ ಕೆಳದಿಯರನ್ನೂ ಕೂಡಾ ಎತ್ತಿಕೊಂಡು ಬಂದು ಈ ಮಂದಿರದೊಳು ಇರಿಸಿದನೆಂದು ಪೇಳಲು; ಅದಂ ಕೇಳಿ ರಾಜಶಿಖಾಮಣಿಯು ತಲೆದೂಗಿ ಕಮಲದಂತಿರುವ ಮುಖದೊಳು ಕಾಂತಿಯು ಕಂದಿ ಖಿನ್ನನಾಗಲು, ಕುಸುಮಲತೆಯು ರಾಜೇಂದ್ರನೇ! ನಾನು ಪರಿಶುದ್ಧಳಹುದೋ ಅಲ್ಲವೋ ಎಂಬ ಸಂಶಯದಿಂ ಕಮಲದಂತಿರುವ ನಿನ್ನ ಮುಖವು ಬಾಡಿದಂತೆ ಕಾಣುತಲಿದೆ, ಇದರ ಪರಿಯಂ ವಿಸ್ತಾರವಾಗಿ ಪೇಳುವೆನು. ಈ ರಾಕ್ಷಸನು ಬಲಾತ್ಕಾರದಿಂ ನನ್ನಂ ಸ್ವಾಧೀನಳಂ ಮಾಡಿಕೊಳ್ಳಬೇಕೆಂದು ಉದ್ಯೋಗಿಸಿದನು, ಆಗ ನಾನು ಆ ರಾಕ್ಷಸನೊಡನೆ ಎಲೈ ರಾಕ್ಷಸನೇ! ಕೇಳು ಎನಗೆ ಸಂವತ್ಸರಪರ್ಯಂತವು ಒಂದು ವ್ರತವು ಮಾಡಬೇಕಾದುದು ಉಂಟು, ಅದು ಸಂಪೂರ್ಣವಾದ ಬಳಿಕ ನಿನಿಗೆ ವಶಳಾಗುವೆನು. ಅದನ್ನಡೆಯಿಸದೆ ಬಲಾತ್ಕಾರವಂ ಮಾ

ಡಿದೆಯಾದರೆ ಪ್ರಾಣಂಗಳನ್ನೀ ಕೊಡುವೆನು ಈ ವ್ರತಕ್ಕೆ ನೀನುಗ ಆರುತಿಂಗಳಂ ವಿಳಂಬಿಸಬೇಕೆಂದು ಪೇಳಲೂ, ಆ ರಕ್ಕಸನು ಆ ಮಾತಂ ಕೇಳಿ ಮರುಳಾಗಿ, ಹಾಗೇ ಆಗಲಿ ನನ್ನ ಮಂದಿರದಲ್ಲಿ ಬೇಕಾದ ವಸ್ತುಗಳಂ ತಂದು ಮಡಗಿರುವೆನು. ನೀನು ವ್ರತವಂ ಯಥಾಶಾಸ್ತ್ರವಾಗಿ ಮಾಡೆಂದು ನುಡಿದು, ದೂರದೂರವಾಗಿರುತ ತನ್ನ ಮನದೊಳ್ ಆರು ಮಾಸಂಗಳು ಎಂದಿಗಾಗುವದೋ? ಎಂದು ಚಿಂತಿಸುತಲಿರಲು; ಆವನ ಮನೋಗತವಂ ತಿಳಿದು, ಆತನ ಮಂತ್ರಿಯಾದ ವಜ್ರದಂಷ್ಟ್ರನು ತನ್ನ ಧೊರೆಯೊಡನೆ ಎಲೈ ರಾಕ್ಷಸರಾಯನೇ! ಕೇಳು, ನಿನ್ನ ಕರಗತಳಾಗಿರುವ ಈ ಬಾಲೆಯು ಎಲ್ಲಿ ಪೋಗುವಳು, ಲೋಕದೊಳ್ ಕಪಿತ್ವವು, ವನಿತೆಯು, ತಾನಾಗಿ ಒಲಿಗರೆ ಸರಸವಾಗಿರುವದು, ಅದರಿಂದ ಈ ಕನ್ನೆಯ ಮನೋನುಸಾರವಾಗಿ ಆರುತಿಂಗಳು ವ್ರತ ಸಂಪೂರ್ಣವಾಗಿ ನಡಸುವದು ಉಚಿತವೆಂದು ಪೇಳಲು; ಆ ಮಾತಂ ಕೇಳಿ ಆ ರಾಕ್ಷಸನು ನನ್ನಂ ನಿರ್ಬಂಧಪಡಿಸದೆ ದಿನದಿನದೊಳ್ ಸಖಿಯರ ಮುಖದಿಂದ ನನ್ನಂ ವಿಚಾರಿಸುತ ವ್ರತದಿನಂಗಳನ್ನೆಣಿಸುತಲಿರುವನು. ನಾನು ತ್ರಿಕಾಲದಲ್ಲೂ ಗೌರೀದೇವಿಯ ಆರಾಧನೆಯಂ ಮಾಡುತ ಕಾಲವಂ ಕಳೆಯುತ ವ್ರತವು ಸಾಂಗವಾದನಂತರ ದೇವಿಯು ಪ್ರಸಾದವಂ ದಯೆಮಾಡದಿರ್ದರೆ ದೇಹವಂ ತ್ಯಜಿಸಬೇಕೆಂದು ಇದ್ದೆನು, ಈಗಲಾ ದೇವಿಯ ಪ್ರಸಾದದಿಂದಲೂ, ನನ್ನ ಪೂರ್ವ ಪುಣ್ಯಾತಿಶಯದಿಂದಲೂ, ನನ್ನ ತಾಯಿತಂದೆಗಳ ತಪಃ ಪ್ರಭಾವದಿಂದಲೂ, ದೈವಗತಿಯಿಂದಲೂ ಬಂದ ನಿನ್ನಂ ಕಂಡು ಮತ್ತೂ ನಿನ್ನ ಸಾಹಸವನ್ನೋಡಿ ಎನ್ನ ಕ್ಲೇಶವಂ ಪರಿಹರಿಸುವುದಕ್ಕೆ ಸಮರ್ಥನೆಂದರಿತು, ನಿನ್ನನ್ನೇ ಪತಿಯಾಗಿ ವರಿಸಿರುವೆನು. ಎಂದು ನುಡಿದು ಮುತ್ತಿನಸರಂಗಳಂತೆ ಕಂಬನಿಗಳಂ ಬಿಡುತ ಗದ್ಗದಸ್ವರದಿಂ ನಿನ್ನ ಮರೆಯಂ ಹೊಕ್ಕಿರುವನನ್ನಂ ಎಂತು ಮಾಡಿದರೂ ಆ ಕೀರ್ತಿ ನಿನ್ನದೇ ಎಂದು ನಿಟ್ಟುಸುರಂ ಬಿಡಲು, ಆ ಸುಗಂಧರಾಜೇಂದ್ರನು ಆ ಬಾಲೆಯನ್ನೋಡಿ, ಶಿವಶಿವಾ ನಿನ್ನೊಳಗೆ ಈ ಸಂಶಯವಂಗೊಂಡು ನನ್ನ ಮುಖಕಾಂತಿಯು ಕಂದಲಿಲ್ಲಾ ಇಂತು ಸುಕುಮಾರಾಂಗಿಯಾದ ನಿನ್ನಂ ಆ ದುಷ್ಟ ರಾಕ್ಷಸನು ಎತ್ತಿಕೊಂಡು ಪೋಗುವಂತೆ ಮಾಡಬಹುದೇ! ದೈವವೆಂದು ನನ್ನ ಮನದೊಳ್ ಚಿಂತಿಸಿದೆನು. ನಿನ್ನ ಮಲಿನಪ

ಸ್ತ್ರೀವಾ ಬಳಲಿರುವ ಶರೀರವಂ, ಕಟ್ಟಿರುವ ಕೇಶಭಾರವಂ ಸಹಾ ನೋಡಲು, ನನಗೆ ನೀನು ಪೇಳುವ ಸಂಶಯವು ಪುಟ್ಟಲಾರದೆಂದು ನುಡಿದು ಅವಳ ಕೈಪಿಡಿದು ತನ್ನಂಕದೊಳು ಕುಳ್ಳಿರಿಸಿ ಕುರುಳುಗಳನ್ನೇ ಸರಿಸುತ ಎಲೈ ಪ್ರಾಣವಲ್ಲಭೆಯೇ! ಕೇಳು. ನಿನಗೆ ಅಪರಾಧವಂ ಮಾಡಿದ ಆ ರಾಕ್ಷಸನಂ ಭೂತಂಗಳಿಗೆ ಆಹುತಿಯಂ ಕೊಡುವೆನೆಂದು ಅಭಯವನ್ನೀಯಲು, ಕುಸುಮಲತೆಯು ಇಂದಿನವರಿಗೆ ನನ್ನ ಮನಸ್ತಾಪವೆಲ್ಲವೂ ತೀರಿತೆಂದು ಅತಿ ಸಂತೋಷವಂ ಪಟ್ಟು ನಿನ್ನೊಡನೆ ಇನ್ನೊಂದು ಬಿನ್ನಪವಂ ಮಾಡುವೆನು, ಚಿತ್ತದೊಳ್ ಬ್ಯಾಸರಂಗೊಳ್ಳಲಾಗದು. ಈ ಕ್ರೂರನಾದ ಜಂಝಾಮಾರುತನ ನಗರಿಯಂ ಕುರಿತು ನೀವು ದಯೆಮಾಡುವುದಕ್ಕೆ ನಿಮಿತ್ತವೇನೆಂದು ನುಡಿದು ಮತ್ತೆ ಯಾವ ದೇಶಂಗಳು ನಿಮ್ಮಿಂದ ಪಾಲಿತಂಗಳಾಗಿರುವವು ಇದಂ ಪೇಳಬೇಕೆಂದು ಬೇಡಲು, ಆ ಮಾತಂ ಕೇಳಿ ರಾಜೇಂದ್ರನು ಪೇಳಲುಜ್ಜುಗಿಸಲಪ್ಪರೊಳ್ ಕುಸುಮಲತೆಯು ಸಮೀಪದೊಳ್ ಇರ್ದ ಕುಶಲೆಯಾದ ಓರ್ವ ಸಖಿಯು ಎಲೈ ಅರಸಿಯೇ! ಕೇಳು, ಈ ಮಹಾ ರಾಜೇಂದ್ರನು ಈ ನಗರಿಯಂ ಕುರಿತು ಬಂದಿರುವ ಪರಿಯಂ ವಿಸ್ತಾರವಾಗಿ ಪೇಳುವೆನು. ಭರತಖಂಡದೊಳ್ ಕುಲಪರ್ವತವಾದ ಸಹ್ಯ ಗಿರಿಗೆ ಕಿರೀಟರೂಪವಾದ ಕರ್ನಾಟದೇಶವನ್ನಾಳುವ ಸುಚರಿತ್ರ ಮಹಾರಾಯನಂ ನೀನು ಕೇಳಿರುವೆಯಷ್ಟೆ? ಆರಾಯನ ಧರ್ಮಪತ್ನಿಯಾದ ಗುಣವತೀ ದೇವಿಯ ಗರ್ಭದಲ್ಲಿ ಶ್ರೀ ದೇವಿಯ ವರಪ್ರಸಾದಬಂದ ಅವತರಿಸಿದ ಈ ಮಹಾರಾಯನು ಸಕಲ ವಿದ್ಯಂಗಳಂ ಕಲಿತು ಹತ್ತಾರುಲಕ್ಷ ಸಂಖ್ಯೆಯುಳ್ಳ ಅಕ್ಷೋಹಿಣೀ ಸೇನಾ ಸಮೇತನಾಗಿ ಬಂದು ಮಹಾರಾಷ್ಟ್ರಾದಿ ದೇಶಂಗಳಂ ಜೈಸಿಕೊಂಡು ಬರುವಾಗ ಕಳಿಂಗದೇಶದೊಳ್ ನಮ್ಮ ವಿಜಯವರ್ಮರಾಯನ ಕುಮಾರಿಯಾದ ಸೌಗಂಧಿಕಾದೇವಿಯು ವಿವಾಹಾರ್ಥವಾಗಿ ಸ್ವಯಂವರವಂ ಸಾರಿದರಂತೆ, ಆಗ ಅಲ್ಲಿ ಸಕಲ ದೇಶದ ಅರಸುಗಳು ಕೂಡಿರುವಾಗ ಸೌಗಂಧಿಕಾದೇವಿಯು ಎಂಟು ಪಣಂಗಳಂ ಕುರಿತು ಆ ಪಣಂಗಳಂ ತಂದಿತ್ತ ರಾಜಕುಮಾರನಂ ವರಿಸುವೆನೆಂದು ಪ್ರತಿಜ್ಞೆಯಂ ಮಾಡಿರುವಳಂತೆ, ಇದಂ ಕೇಳಿ ಸಕಲ ಭೂಪಾಲರು ಅಶಕ್ಯವೆಂದು ಪೇಳುತ್ತಿರುವಲ್ಲಿ ಈ ಸತ್ಯಪರಾಕ್ರಮನು ನಾನು ಎಂಟು ಪಣಂಗಳಂ ನೆರವೇರಿಸುವೆನೆಂ

ದು ಆ ರಾಜ ಸಭೆಯೊಳ್ ಘೋಷಣಂಗೈದು ವಪ್ರದಂತಿರುವ ಅಸಾಧ್ಯವಾದ ಒಂದು ಆಯುಧ ವಿಶೇಷವಂ ಅಲ್ಲೇ ಒಂದು ಪಣವಾಗಿ ಎತ್ತಿ ತನ್ನ ಭುಜಬಲವಂ ತೋರಿ, ಇದಲ್ಲದೆ ಚತುರ್ದಂತವಾದ ಬಿಳಿಯ ಆನೆಯಂ ತಂದಿತ್ತು, ಮತ್ತು ರೆಕ್ಕೆಗಳುಳ್ಳ ಕುದುರೆಯಂ ತರುವೆನೆಂದು ಈ ನಗರವಂ ಕುರಿತು ಬಂದಿರುವನಂತೆ, ಇಂತಹ ಪ್ರಭಾವ ಉಳ್ಳ ಲೋಕೈಕ ವೀರಂಗೆ ಯಾವ ಪಣವು ಅಶಕ್ಯವಾಗುವದು. ನಮ್ಮ ಸೌಗಂಧಿಕಾದೇವಿಗೆ ಈತನೇ ಪತಿಯಾಗುವನು ಸಂದೇಹವಿಲ್ಲ. ಅದು ಕಾರಣ ನಮಗೆ ಬಹು ಸಮೀಪ ಬಂಧುವಾಗಿರುವಾಗ ವಿಚಾರವಂಗೈಯುವದೇನು? ಈ ವೃತ್ತಾಂತವೆಲ್ಲವಂ ಈ ಮಹಾರಾಜನ ಮಂತ್ರಿಯಾದ ಸುಮತಿಯಿಂ ತಿಳಿದು ಬಂದಿರುವೆನು. ನಿನ್ನ ಪುಣ್ಯವು ಈಗ ಶರಗಿ ನೀಂ ಕಟ್ಟಿದ ಭಂಗಾರದಂತೆ ಫಲಿಸಿತು ಎಂದು ನುಡಿಯಲು, ಸುಗಂಧರಾಜ ಭೂಪಾಲನು ಮಹಾ ಪ್ರೌಢೆಯಾದ ಆ ಕೆಳದಿಯ ಮಾತಂ ಕೇಳಿ, ಎಲೈ ಸಖಿಯೇ! ಕಳಿಂಗರಾಜಪುತ್ರಿಗೂ ಈ ಕುಸುಮಲತೆಗೂ ಎಂತು ಸಂಬಂಧವೆಂದು ಕೇಳಲು, ಆ ಸಖಿಯು ಎಲೈ ಸ್ವಾಮಿಯೆ! ಈ ಈರ್ವ ಅರಸಿಯರ ತಾಯಿಗಳಾದ ಸುಲೋಚನಾದೇವಿಯು ಅನಂಗಲೇಖೆಯು ಅಕ್ಕತಂಗಿಯರು, ಈ ನೆಂಟತನವು ಸಿಸಿಗೋಲಸಂಗವೇ ಪಾಡಿದಂತೆ ಘಟನೆಯಾಗಿರುವದು, ಇನ್ನು ಮಾತುಗಳಂ ಸಾಕುಮಾಡಿ ವೇಗದಿಂ ಮಂಗಳಸ್ನಾನಕ್ಕೆ ಚಿತ್ತೈಸಬೇಕೆಂದು ವಿಜ್ಞಾಪನೆಯಂಗೈಯಲು, ಅಲ್ಲಿರುವ ಸಖಿಯರೆಲ್ಲರೂ ಕೂಡಿ ಕುಸುಮಲತಾದೇವಿ ಸುಗಂಧರಾಜೇಂದ್ರರೀರ್ವರಿಗೂ ಅಕ್ಷತೆಯನ್ನಿಟ್ಟು ಎಣ್ಣೆಯನ್ನೊತ್ತಿ ಪನ್ನೀರಿನಿಂ ಜಳಕವಂ ಮಾಡಿಸಿ ವಸ್ತ್ರಾಭರಣಂಗಳಿಂದ ಈರ್ವರಂ ಅಲಂಕರಿಸಿ, ಆ ಬಳಿಕ ಶಾಸ್ತ್ರೋಕ್ತವಾಗಿ ಗಂಧರ್ವವಿವಾಹವಂಗೈದು ಸತಿಪತಿಗಳೀರ್ವರಿಗೂ ಮಧುರಾನ್ನಂಗಳಂ ಒಂದೇ ಎಡೆಯೊಳ್ ಭೋಜನಂಗೈಯಿಸಿ ಶಯ್ಯಾಗೃಹವಂ ಅಲಂಕರಿಸಿ ಭೋಗಯೋಗ್ಯಂಗಳಾದ ಗಂಧ, ಪುಷ್ಪ, ತಾಂಬೂಲಗಳನ್ನಿರಿಸಿ ರಾಜೇಂದ್ರನೊಡನೆ ಎಲೈ ಸ್ವಾಮಿಯೇ! ಇದು ಶುಭಸಮಯವೆಂದು ಬಿನ್ನವಿಸಲಾಗ, ಸುಗಂಧರಾಜೇಂದ್ರನು ಭೋಗಲೋಲಾಸಕ್ತನಾಗಿ ಸುಮತಿಯಂ ಕರೆದು ಎಲೈ ಸುಮತಿಯೇ! ಯಕ್ಷನು ಯಾವಾಗ ಬಂದು ಏನು ಹೇಳುವನೋ? ಅದಂ ತಿಳಿಯಲೋಸುಗ ಜಾಗರೂಕನಾಗಿರೆಂದು

ಹೇಳಿ ಕಳುಹಿ; ತಾನು ಶಯ್ಯಾಗೃಹವಂ ಸೇರಿ ಮಣಿಮಂಟಪದೊಳ್ ಕುಳಿತು ಕುಸುಮಲತೆಯು ಒಪ್ಪಿಸುವ ಕಪ್ಪುರವೀಳ್ಯವಂ ಸವಿಯುತ ಆವಳಂ ಮಾತು ಮಾತಿಗೆ ಆನಂದಪಡಿಸುತ್ತ ತನ್ನ ಸಾಮ್ರಾಜ್ಯಕ್ಕೆ ಪಟ್ಟವಂ ಕಟ್ಟಿದ ಮೊದಲು ವಿಚಾರಣೆಯಂತೆ ದಿನಕ್ರಮವಾಗಿ ವಿಲಾಸಂಗಳು ಅಧಿಕವಾಗಿ ಸುಖದಿಂದಿರ್ದ; ಒಂದಾನೊಂದು ದಿನ ಮಂದಿರವಂ ನೋಡಬೇಕೆಂದು ಆನಂದದಿಂದ ಸತಿಪತಿಗಳಿರ್ವರೂ ತೆರಳಿ ಕೆಲವು ಹಜಾರಂಗಳಂ ಕೆಲವು ಚಂದ್ರಶಾಲೆಗಳಂ ಕೂಡಾ ನೋಡುತ, ಹಾಗೇ ಮೆಲ್ಲನೆ ಬರುತ ಬೀಗಮುದ್ರೆಗಳಂ ಮಾಡಿರುವ ಸಾಲು ಮನೆಗಳಂ ಕಂಡು ಇದೇನೆಂದು ಕೇಳಿದ ರಾಜೇಂದ್ರನಂ ಕುರಿತು ನಾರೀಶಿರೋಮಣಿಯಾದ ಕುಸುಮಲತೆಯು ಎಲೈ ಪ್ರಾಣನಾಥನೇ! ಕೇಳು, ಈ ಗೃಹಂಗಳೊಳ್ ನಾನಾದ್ವೀಪಾಂತರಂಗಳ ಪದಾರ್ಥಂಗಳಂ ನವರತ್ನರಾಶಿಗಳು ಮೊದಲಾದ್ದಂ ಸಹಾ ಮಡಗಿರುವನು; ಅದಂತಿರಲಿ, ಈಗ ನಿನಗೆ ಬೇಕಾದ ಅಶ್ವರತ್ನವು ಅದೋ ಆ ಮನೆಯೊಳ್ ಕಟ್ಟಿರುವದು. ಎಂದು ನುಡಿದು ಆ ಮನೆಯ ಮುಂಭಾಗದೊಳ್ ರಾಜೇಂದ್ರನಾದ ಸುಗಂಧರಾಜನೊಡನೆ ವಿಲಾಸದಿಂ ಬಂದು ನಿಂತು ನಿಟ್ಟುಸುರಂ ಬಿಡುತ ಎಲೈ ಸ್ವಾಮಿಯೇ! ಈ ದುಷ್ಟ ರಾಕ್ಷಸನು ಒಂದೊಂದು ಮಾಡಿದನೇ? ನನ್ನಂ ತಂದಂತೆ ನಮ್ಮ ದೇಶದಿಂದ ಈ ಅಶ್ವವಂ ಕೂಡ ಅಪಹರಿಸಿ ತಂದನೆಂದು ನುಡಿಯಲು, ಸುಗಂಧರಾಜೇಂದ್ರನು ಆ ಮಾತಂ ಕೇಳಿ ಇಂತಿರ್ಪ ಅಶ್ವವು ನಿಮ್ಮ ದೇಶಕ್ಕೆ ಯಾವ ಪರಿಯಿಂದ ಬಂತೆಂದು ಕೇಳಲು, ಆ ಚಂದ್ರಮುಖಿಯು ಎಲೈ ಸ್ವಾಮಿಯೇ! ಚಿತ್ತವಿಟ್ಟು ಲಾಲಿಸಬೇಕು. ನಮ್ಮ ತಂದೆಯಾದ ಕುಸುಮಧ್ವಜರಾಯನು ಒಂದು ದಿನ ವಿನೋದಾರ್ಥವಾಗಿ ಬೇಂಟೆಯನ್ನಾಡುವದಕ್ಕೆ ಪೋಗಿ ಅಲ್ಲಿದ್ದ ಸಿಂಹಶಾರ್ದೂಲಂಗಳಂ ಸಂಹರಿಸಿ, ಬಹು ದೂರ ಸಂಚಾರವಂ ಮಾಡಿ, ಸಾಯಂಕಾಲವಾಗಲು, ಒಬ್ಬಾನೊಬ್ಬ ಜಾಬಾಲಿ ಋಷಿ ಇರುವ ಆಶ್ರಮವಂ ಕಂಡು ಅಲ್ಲಿಗೆ ಪೋಗಲು; ಆ ಋಷಿಯು ಅರಸಾದ ನಮ್ಮ ತಂದೆಗೆ ಮಧುಪರ್ಕಾದಿಗಳಂ ಕೊಟ್ಟು ಸಂತೃಪ್ತಿಸಿ ಕುಶಲವಂ ಕೇಳುತ್ತಿರುವ ಕಾಲದೊಳ್ ಆ ಆಶ್ರಮದೊಳ್ ಸರ್ವ ಲಕ್ಷಣ ಸಂಪನ್ನವಾದ ಅನೇಕಾಭರಣಗಳಿಂದ ಅಲಂಕೃತವಾದ ವಿಜಾತೀಯವಾಗಿ ರೆಕ್ಕೆಗಳಂ ಕೂಡಿರುವ ಒಂದು ಕುದುರೆ

ಯು ಸಂಚರಿಸುತ್ತಿರಲು, ನಮ್ಮ ತಂದೆಯು ಅದಂ ಕಂಡು ಆ ಋಷಿಯೊಡನೆ ಎಲೈ ಮಹಾತ್ಮನೇ! ಈ ಲೋಕಾತೀತವಾದ ಅಶ್ವರತ್ನವು ಎಲ್ಲಿಯದು? ಏನುಕಾರಣದಿಂದ ಇಲ್ಲಿಗೆ ಬಂದಿರುವದು? ಇದರಿಂದ ತಮಗೆ ಆಗುವ ಕಾರ್ಯವೇನೆಂದು ಬಿನ್ನವಿಸಲು; ಆ ಜಾಬಾಲಿ ಮುನಿಯು ಆ ಮಾತಂ ಕೇಳಿ ರಾಯನು ಮಹಾ ಧರ್ಮಪರನೆಂದರಿತು, ದಯೆಯಿಂದ ಎಲೈ ಅರಸೇ! ಕೇಳು, ಈ ಅಶ್ವವು ಅಮಾನುಷವಾದುದು, ಈಗ ಈ ಭೂಲೋಕದೊಳ್ ಬಂದು ವಿಹಾರವಂ ಮಾಡುತಲಿಧೆ ಇದರ ವೃತ್ತಾಂತವು ದೇವರಹಸ್ಯವಾದಕಾರಣ ವಿಸ್ತಾರವಾಗಿ ನಿರೂಪಿಸಕೂಡದು ಈ ಕುದುರೆಯೊಳ್ ನಿನಗೆ ಆಸಕ್ತಿ ಇದ್ದರೆ ಇದಂ ನಿನ್ನ ಮನೆಯೊಳ್ ಇರಿಸಿ ಪೂಜಿಸಿಕೊಂಡಿದ್ದಲ್ಲಿ ಕೆಲವು ಕಾಲ ಕಳೆದ ಬಳಿಕ ಇದರ ದೆಸೆಯಿಂದ ನಿನಗೆ ಶುಭ ಉಂಟಾಗುವದೆಂದು ಆಶೀರ್ವಾದವಂ ಮಾಡಿ, ಅಶ್ವರತ್ನವಂ ದಯಪಾಲಿಸಲು; ರಾಯನು ಆ ಋಷಿಗೆ ದಂಡಪ್ರಣಾಮವಂಮಾಡಿ, ಈಉತ್ತಮಾಶ್ವವಂಗೊಂಡು ತನ್ನ ಅರಮನೆಗೆ ಬಂದು ನಿತ್ಯದಲ್ಲೂ ಪೂಜಿಸುತ ಇದಕ್ಕೆ ವಿಜಯರತ್ನವೆಂದು ಹೆಸರನ್ನಿಟ್ಟು ಅತಿ ಸಂತೋಷದಿಂದಿರಲು; ಈ ಕ್ರೂರ ರಾಕ್ಷಸನು ಈ ಅಶ್ವವೃತ್ತಾಂತವಂ ಎಲ್ಲಿಯೋ ಕೇಳಿ ಅದಂ ಅಪಹರಿಸಬೇಕೆಂದು ನಿಶ್ಚೈಸಿ, ಒಬ್ಬರಿಗೂ ತಿಳಿಯದಂತೆ ಮಾಯಾ ವಿದ್ಯೆಯಿಂದ ಅಲ್ಲಲ್ಲಿ ತಿರುಗುತಲಿದ್ದು ಒಂದಾನೊಂದು ಸಮಯವನ್ನೋಡಿ, ಆ ಅಶ್ವವಂ ಅಪಹರಿಸಿಕೊಂಡು ಹೋಗುವ ಸಮಯದೊಳ್ ಅನಾಯಾಸವಾಗಿ ಸಿಕ್ಕಿರುವ ಉತ್ತಮ ಪದಾರ್ಥವಂ ಯಾತಕ್ಕೆ ಬಿಡಬೇಕೆಂದು ಬಿಸಿಲುಮಚ್ಚಿನೊಳ್ ವಿಲಾಸದಿಂ ಕುರುಳುಗಳನ್ನಾರಿಸಿಕೊಂಡು ನಿಂತಿರ್ದ ನನ್ನಂ ಇಲ್ಲಿಗೆ ಅಪಹರಿಸಿಕೊಂಡು ಬಂದನು, ಆದರೆ ಒಂದು ಉಪಕಾರವಂ ಮಾಡಿದನು ಎನ್ನಬಹುದು. ನನಗೆ ಪರಮಾಪ್ತರಾದ ಕೆಲವು ಕೆಳದಿಯರಂ ನನ್ನ ಸಂಗಡಲೇ ಅಪಹರಿಸಿಕೊಂಡು ಬಂದದ್ದರಿಂದ ಇಂದಿನವರಿಗೂ ಜೀವಿಸಿಕೊಂಡು ಇರುವೆನು, ಈಗಮಹಾನುಭಾವನಾದ ಆ ಜಾಬಾಲಿ ಮಹಾ ಮುನಿಯ ವಾಕ್ಯವು ಸಫಲವಾಯಿತೆಂದು ಹೇಳಿ, ಈ ಅಶ್ವರತ್ನವು ನಿಮಗೆ ಪಟ್ಟದ ಕುದುರೆಯಾಗುವದಕ್ಕೆ ಯೋಗ್ಯವಾಗಿಧೆ ಎಂದು ನುಡಿಯಲು; ಸುಗಂಧಮಹಾರಾಜೇಂದ್ರನು ಆ ಕುಸುಮಲತೆಯ ಮಾತಂ ಕೇಳಿ ಹರ್ಷಿತನಾಗಿ ರತಿಯಂ

ತಿರುವ ಸತಿಯುಂ ಬಿಗಿದಪ್ಪಿ ಅಡಿಗಡಿಗೆ ಮುದ್ದಿಸುತ ಕೆಲವು ಹೊತ್ತು ಶೃಂಗಾರವನಂಗಳೊಳ್, ಕೆಲವು ಹೊತ್ತು ಸರೋವರಂಗಳೊಳ್, ಕೆಲವು ಹೊತ್ತು ಚಂದ್ರಶಾಲಾದಿ ಉತ್ತಮ ಮಂದಿರಂಗಳೊಳ್, ಉಪರತಿಸಮರತಿಗಳಿಂದಲೂ, ಚಾಶೀತಿಬಂಧವಿಶೇಷಂಗಳಿಂದಲೂ, ಬೆರದು ಮದನ ವೈಭವದಿಂದ ಮೈಮರೆತು ಒಂದೊಂದು ದಿನವಂ ಒಂದೊಂದು ಕ್ಷಣದಂತೆ ಕಳೆಯುತ ಸುಖದಿಂದಿರುತ್ತಿರ್ದನೆಂಬಲ್ಲಿಗೆ;

ಕುಂತಲಿಕಯ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖ ನಿಖಿಲಸುರನರ ಪರಿಷನ್ನಮಿತ ಪ್ರಚಂಡಬಲ ಚಂಡಮುಂಡಖಂಡನ ನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷವೀಕ್ಷಣ ಸಂವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲ ಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸ ಕವಿತಾ ನಿಸ್ಸಹಾಯ ನಿರ್ಮಾಣ ಧೌರೇಯ ಷಟ್ಶಿಕಾ ಶತಗ್ರಂಥ ದಿನದಿನ ಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನಸೂತ್ರ ಸುಚರಿತ್ರ ಚಾಮರಾಜ ಮಹಾ ರಾಜ ಪುತ್ರ ನರಪತಿ ಬಿರುದ ಮಹಿಶೂರ ಪುರವರಾಧೀಶ ಶ್ರೀ ಕೃಷ್ಣರಾಜಒಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾ ಪರಿಣಯವೆಂಬ ಈ ನವೀನಕೃತಿಯೊಳ್ ಸುಗಂಧರಾಜೇಂದ್ರನು ಅಶ್ವಪಣವಂ ಸಾಧಿಸುವೆನೆಂದು ತೆರಳಿ ಇಳಾವೃತ ಖಂಡದೊಳ್ ವಜ್ರಪುರಿಯಂ ಪೊಕ್ಕು ಕುಸುಮಲತೆಯಿಂದ ಅಶ್ವದವೃತ್ತಾಂತವೆಲ್ಲಮಂ ತಿಳಿದು ಅವಳೊಡಗೂಡಿ ಅಲ್ಲಿಯೇ ಸುಖದಿಂದಿರ್ದನೆಂಬ ಹದಿನೇಳನೇ ಆಶ್ವಾಸ ನಿರೂಪಣಕ್ಕೆ ಮಂಗಳಮಹಾ ಶ್ರೀ ಶ್ರೀ ಶ್ರೀ

ಹದಿನೇಳನೇ ಅಧ್ಯಾಯ ಸಂಪೂರ್ಣಂ,



ಶ್ರೀ

ಶುಭಮಸ್ತು.

# ಹದಿನೆಂಟನೇ ಅಧ್ಯಾಯ ಪ್ರಾರಂಭ.



ಅನಂತರದಲ್ಲಿ ಕೆಲವು ದಿನ ಕಳೆದ ಬಳಿಕ ಜಂಝಾಮಾರುತನೆಂಬ ರಾಕ್ಷಸನು ಘೋರಾರಣ್ಯದೊಳ್ ಅನೇಕಂಗಳಾದಸಿಂಹ, ಶಾರ್ದೂಲ, ಶರಭ, ಗಜ, ವರಾಹ, ಭಲ್ಲೂಕ, ಶಶ, ಮೊದಲಾದ ಮೃಗಂಗಳಂ ಜಲಜಂತುಗಳಾದ ಕೂರ್ಮ, ಮಕರ, ಮತ್ಸ್ಯ, ತಿಮಿತಿಮಿಂಗಿಲಂಗಳಂ ಅನೇಕ ಮನುಷ್ಯ ಶರೀರಂಗಳಂ ಕೂಡ ಸಂಗ್ರಹಿಸಿಕೊಂಡು ತನ್ನ ಆಲಯವಾದ ವಜ್ರಪುರಿಯಂ ಕುರಿತು ವೇಗದಿಂ ಬರುತ್ತಿರಲು; ಛಾಯಾಗುಪ್ತನು ಅವನಂ ಕಂಡು ಬೇಗ ಬಂದು ಸುಮತಿಯ ಮುಖದಿಂದ ಸಖೀ ಜನಕ್ಕೆ ತಿಳುಹಿಸಿ ರಾಜೇಂದ್ರಂಗೆ ಬಿನ್ನವಿಸುವಂತೆ ಮಾಡಲು, ಸುಗಂಧರಾಜೇಂದ್ರನು ಅದಂ ಕೇಳಿ ರಾಕ್ಷಸನು ಬರುವ ಪರಿಯಂ ನೋಡುವಾ ಎಂದು ಮಂದಿರದ ಉಪರಿಭಾಗವನ್ನೇರಿ ಕುಸುಮಲತೆಯೊಡಗೂಡಿ ನೋಡುತ ಭಯಂಕರವಾಗಿ ದೂರದೊಳ್ ಬರುತ್ತಿರುವ ರಾಕ್ಷಸ ಸೇನೆಯಂ ಕಂಡು ಬಿರುಘಾಳಿ ತಗಲಿ ಅಲ್ಲಾಡುವ ಲತೆಯಂತೆ ನಡುಗುತಲಿರುವ ಕುಸುಮಲತೆಯಂ ನೋಡಿ ಎಲೈ ಬಾಲೆಯೇ! ಈಗ ಕಕ್ಕಸವಾಗಿ ಬರುವ ಈ ರಕ್ಕಸನಂ ಬಲದಿಂದ ಬೊಗ್ಗಿಸಿ ದಕ್ಕಿಸಿಕೊಳ್ಳುವೆನು ನೀನು ತತ್ತರಂಗೊಳ್ಳಬ್ಯಾಡವೆಂದು ಚಿತ್ತರದ ಪ್ರತಿಮೆಯಂತಿರುವ ಬಿತ್ತರಿಯಂ ಅಕ್ಕರಿಯಿಂದ ಸಕ್ಕರೆಯಂತೆ ಸವಿಯಾದ ನುಡಿಗಳಂ ಪೇಳಿ ಧೈರ್ಯಗೊಳಿಸುತ ನೋಡುತಲಿರುವ ಸಮಯದೊಳ್ ಎದುರಾಗಿ ಬರುವ ಜಂಝಾಮಾರುತನು ಸುಂಟರಘಾಳಿಯಿಂದೆದ್ದ ಕೆಂಧೂಳಿನ ಸುಳಿಗಳಂತೆ ಎಸದು ಗುಂಪಾಗಿ ಕೆಂಪುವರ್ಣಗಳುಳ್ಳ ಗುಂಗುರುಕೂದಲುಗಳಿಂ,ಸಂಜೆಕಾರ್ಮುಗಿಲಂತೆ ಬಪ್ಪಿ ಇರುವ ಗಂಟು ಪುಬ್ಬುಗಳಿಂ, ಪರ್ವತದಂತಿರುವ ಶಿರಸ್ಸಿನಿಂ,ಗುಹಾಂತರಂಗಳಂತೆ ಕಾಣಿಸುವ ಅರಳಿದ ಮೂಗಿನ ಹೊಳ್ಳೆಗಳಿಂ, ಗಂಡಭೇರುಂಡ

ಪಕ್ಷಿಗಳಂತಿರುವ ಕಿವಿಗಳಿಂ, ಗುಂಡಾಗಿ ಅಗ್ನಿಕುಂಡವಂತಿರುವ ಕಣ್ಣು ಗುಡ್ಡೆಗಳಿಂ, ಕಾಲ ಸರ್ಪದಂತೆ ಹೊಂದಿರುವ ಅತಿ ಭಯಂಕರಗಳಾಗಿ ಕುಣಿಯುವ ಮೀಸೆಗಳಿಂ, ಜೋಲುತ ನದಿಯ ದಡಗಳಂತಿರುವ ತುಟಿಗಳಿಂ, ಅಗಾಧವಾದ ಪಾತಾಳಕುಹರದಂತಿರುವ ವದನದಿಂ, ಕೋಡುಗಲ್ಲಿನ ಚಂದದಂತಿರುವ ಕ್ರೂರ ದಾಡೆಗಳಿಂ, ಗಿರಿ ಶಿಖರಗಳಂತಿರುವ ಭುಜಸ್ಕಂಧಂಗಳಿಂ, ತಾಳ ವೃಕ್ಷಗಳಂತೆ ನೀಳವಾಗಿರುವ ತೋಳುಗಳಿಂ, ಕೂದಲುಗಳಿಂ ಕೂಡಿ, ಘೋರಾರಣ್ಯದಂತೆ ಕಾಣುವ ವಕ್ಷಸ್ಥಳದಿಂ, ಹೆಮ್ಮರಂಗಳಂತೆ ತೋರ್ಪ ಕಾಲುಗಳಿಂ ಕೂಡಿ, ಕರ್ಣಂಗಳೊಳ್ ಸ್ವರ್ಣಕುಂಡಲಂಗಳಂತೆ ಧರಿಸಿ, ಕಂಠದೊಳ್ ನರಶಿರೋ ಮಾಲೆಗಳಂ ಹಾಕಿ, ಕುಲಾಲಚಕ್ರದಂತೆ ಒಪ್ಪುವ ಬೆಳ್ಳಿಯ ಗಗ್ಗರಂಗಳಂ ಕಾಲುಗಳೊಳಳವಡಿಸಿ, ಭಂಡಿಗಳಂತೆ ಕಾಣುವ ಕಡಗಗಳಂ ಕೈಗಳೊಳಲಂಕರಿಸಿ, ಒಂದೊಂದು ತುತ್ತಿಗೆ ಅನೇಕ ಪ್ರಾಣಿಗಳಂ ಕಬಳಿಸಿ ಅಗಿಯುತ, ಜಲಜಂತುಗಳಂ ಪುಡಿ ಸಕ್ಕರೆಯಂತೆ ಮುಕ್ಕುತ, ಅನೇಕ ಗಜಗಳಿಂ, ಸಾವಿರ ಸಿಂಹಗಳಿಂ, ಐನೂರು ಶರಭಂಗಳಂ, ಸಾಲಾಗಿ ಪೋಣಿಸಿರುವ ಮಹಾ ಶೂಲಾಯುಧವಂ ಪಿಡಿದು, ಅನೇಕ ಜಾತಿಯಗಳಾದ ಕಳೇಬರಗಳಂ ಹೆಗಲೊಳ್ಪೊತ್ತು, ಉಡಿಧಾರದಲ್ಲಿ ಅನೇಕ ಸರ್ಪಗಳಂ, ಶಾರ್ದೂಲಂಗಳಂ ಸಿಕ್ಕಿಸಿಕೊಂಡು, ಸಿಡಿಲಿನಂತೆ ಬೊಬ್ಬಿರಿದು ಕೂಗುವ ಧ್ವನಿಗಳಿಂ ದಿಕ್ಕು ದಿಕ್ಕುಗಳಂ ತಲ್ಲಣಂಗೊಳಿಸುತ, ನಾನಾ ಜಾತಿಯಂಗಳಾದ ಮುಖಂಗಳುಳ್ಳ ರಾಕ್ಷಸರ ತಂಡತಂಡಗಳಿಂ ಕೂಡಿ, ಅಡಿಗಡಿಗೆ ಆರ್ಭಟಿಸುತ ನೇತ್ರಂಗಳಿಂ ಕಿಡಿಗಳಂ ಉದರಿಸುತ, ಮೂರನೇ ಸಮುದ್ರದ ಸೊಬಗಂ ಹೀರಿ ತಾರುಮಾರಾಗಿ ನಡೆಯುತ ಮದಾಂಧನಾಗಿ ಬರುತ್ತಿರಲು; ಆಗ ಸುಗಂಧರಾಜೇಂದ್ರನು ಕುಸುಮಲತೆಯಂ ಕುರಿತು ಎಲೈ ಪ್ರಿಯಳೇ! ಜಂಝಾಮಾರುತನ ಸೌಂದರ್ಯವಂ ಕಂಡೆಯಾ ಎಂದು ಪೇಳಿ, ನಸುನಗುತ ಉತ್ಸಾಹದಿಂ ಮೆರೆಯುವ ರಾಜೇಂದ್ರನಂ ಕಂಡು, ಕುಸುಮಲತೆಯು ಮೃದುವಾದ ನುಡಿಗಳಿಂದ ಎಲೈ ಸುಕುಮಾರಶರೀರನೇ! ಕೇಳು, ನೀನು ಮಹಾ ಪ್ರತಾಪಶಾಲಿಯೆಂದು ತಿಳಿದಿರುವೆನು; ಆದರೂ ಒಂದು ಮಾತಂ ಪೇಳುವೆನು; ಎನ್ನೊಡೆಯನೇ! ನೀನು ನನಗೋಸುಗ ಆ ದಿಂಡ ರಾಕ್ಷಸ

ನಂ ಕಾಣಿಸಿಕೊಂಡು ಏನೆಂದು ನೀ ಕಾಲಗವಂ ಮಾಡಿ ಕಷ್ಟಪಡಲ್ಯಾಕೆ?
ಏನಾಗುವದೆಂದು ಚಿಂತಿಸುವೆಯೋ? ನನ್ನಂಥಾವರು ನಿನ್ನ ಪಾದಪದ್ಮಂಗಳೊಳ
ಗೆ ಆಸಕ್ತರಾಗಿ ಬಿದ್ದಿರುವರು, ನಿನ್ನ ಸುಂದರವಾದ ಶರೀರವಂ ಬಳಲಿಸ
ಬ್ಯಾಡ, ಮತ್ತು ನೀನು ಎಲ್ಲಾದರೂ ಮರೆಯಾಗಿ ಸುಖದಿಂದಿರುವನಾಗು,
ನಿನ್ನ ಹಣೆಯಲ್ಲಿ ಬರೆದಿರುವ ಲಿಪಿಯು ಎಂತಿರುವದೋ ಅದರಂತೆ ಆಗುವ
ದೆಂದು ಕಂಬನಿದುಂಬಿ ಗದ್ಗದಸ್ವರದಂತೆ ನುಡಿಯುತ್ತ ಬೆದರಿ ಕನಕಪುತ್ಥಳಿ
ಯಂತೆ ಮೈಮರೆದು ನಿಂತಿರಲು; ಸುಗಂಧರಾಜೇಂದ್ರನು ಎಲೈ ಪ್ರಾಣಪ್ರಿ
ಯಳೇ! ಈಗ ಬಹುಪರಿಯಿಂದ ಹಂಬಲಿಸಲ್ಯಾಕೆ, ಕಂಬನಿದುಂಬದಿರು
ಕಾಮಿನೀಮಣಿಯೇ! ಗಡಗಡನೆ ನಡುಗದಿರು, ತಡಮಾಡದೆ ದೃಢನಾದ ಈ
ರಕ್ಕಸನಂ ಕಾಗೆ ಹದ್ದು ಭೂತಂಗಳಿಗೆ ಬಲಿಯನಿಕ್ಕುವೆನು ನೀನು ಬೆದರ
ದಿರು, ನನ್ನಾಣೆ ಮದಿರಾಕ್ಷಿಯೇ! ಎಂದು ನುಡಿದು ಕರಗಿನಿಂದಾಬಾಲೆಯ
ಕಣ್ಣೀರ್ಗಳಂ ಒರಸಿ ಮೈಮರೆಸಿ ಎಚ್ಚರಿಸಿ ಧೈರ್ಯದಿಂ ನೋಡೆನುತ ನುಡಿದು
ತಾನು ಪನ್ನೀರಿನಿಂದ ಹಸ್ತಪಾದಂಗಳಂ ತೊಳೆದು ಶುದ್ಧೋದಕದಿಂದ ಆಚ
ಮನವಂ ಮಾಡಿ ತನ್ನ ಇಷ್ಟದೇವತೆಯಂ ಧ್ಯಾನಿಸಿ, ಕೈಯೊಳಿರುವ ಬಿಲ್ಲಿಗೆ
ನಾರಿಯಂ ಬಿಗಿದು ಅಮೋಘವಾದ ಒಂದು ಬಾಣವಂ ತನ್ನ ಬಲದ ಹಸ್ತ
ದೊಳ್ಪಿಡಿದು ಲೀಲೆಯಿಂ ತಿರಿಗಿಸುತ ಸುಮತಿಯಂ ಕುರಿತು ಎಲೈ ಮಂತ್ರಿ
ಯೇ! ಎನ್ನ ಅರಸಿಯ ರಕ್ಷಣಾರ್ಥವಾಗಿ ನೀನು ಕಾದಿರು, ನಾನು ಯಕ್ಷನ
ನ್ನೇರಿ ಕಕ್ಷೆಗಳಂ ಮೀರಿಬರುವ ವಿಪಕ್ಷನಾದ ರಾಕ್ಷಸನಂ ಶಿಕ್ಷಿಸಿ, ಶೀಘ್ರದಿಂ
ಜಯಲಕ್ಷ್ಮಿಯಿಂದೊಡಗೂಡಿ ಬರುವೆನು, ಎಂದು ಅಪ್ಪಣೆಯಂ ಕೊಟ್ಟು
ದೂರದೊಳ್ ಬರುತ್ತಿರುವ ರಾಕ್ಷಸ ಸೇನೆಯಂ ನೋಡುತ್ತ ನಿಂತಿರುವ
ಸಮಯದೊಳ್ ಜಂಝಾಮಾರುತನೆಂಬ ರಾಕ್ಷಸನು ಅನೇಕ ಕೋಟಿ
ರಾಕ್ಷಸರ ಸೇನೆಗಳಿಂದ ಪರಿವೃತನಾಗಿ ಬರುವಾಗ ಮಾರ್ಗದೊಳ್ ಅತಿ
ದೀನಸ್ವರಗಳಿಂದ ವಿಕಾರವಾಗಿ ಕೂಗುತ ದಾರಿಯನ್ನಡ್ಡಗಟ್ಟಿ ಎದುರಾಗಿ
ನಿಂತಿರುವ ನರಿಗಳ ತಂಡತಂಡಗಳಂ, ಮೇಲೆಬೀಳುವದಕ್ಕೆ ಬರುವಶಗಳಂ
ಸಹ ನೋಡುತ್ತಾ ಮತ್ತು ಗಗನಮಾರ್ಗದೊಳ್ ಸಂಚರಿಸುವ ಹದ್ದುಗಳು
ತನ್ನ ಶೂಲಾಗ್ರಕ್ಕೆ ಬಂದು ಎರಗುವದಂ, ಇದಲ್ಲದೆ ಕಾಗೆಗಳು ತಾನು ಧರಿಸಿರು

ವ ಕಿರೀಟದೊಳ್ ಅಳವಡಿಸಿದ ಮಣಿಗಳಮೇಲೆಬಿದ್ದು ಬಡಿಯುವದಂ ಕಂ ಡು, ಇದೇನು ವಿಪರೀತವ್ರೋ? ಎಂದೆಂದಿಗೂ ಇಲ್ಲದ ಅವಶಕುನಗಳು ಇಂ ದೇನುಕಾರಣ ಸಂಭವಿಸಿತು, ವಿಪತ್ತುಗಳಿಗೆ ಸೂಚಕವಾಗಿ ಕಾಣುವದು, ಎಂ ದು ನುಡಿದು ಈ ಅವಶಕುನಗಳ ಫಲವು ನನ್ನಶತ್ರುಗಳಿಗೆ ಆದರೆ ಕುಲದೇವ ತೆಯಾದ ನಿಕುಂಬಿಳಾದೇವಿಗೆ ಅನೇಕ ನರಬಲಿಗಳಂಕೊಟ್ಟು ಅನೇಕಸುರಾ ಭಾಂಡಂಗಳಂ ಸಮರ್ಪಿಸುವೆನೆಂದು ಪ್ರಾರ್ಥಿಸುತ್ತಿರುವ ರಾಕ್ಷಸಾಧಿಪತಿಯ ಮನೋಭಾವಂಗಳಂತಿಳಿದು ಮಂತ್ರಿಯಾದ ವಜ್ರದಂಷ್ಟ್ರನು ಎಲೈ ಭೂಪ ತಿಯೇ! ಕೇಳು, ನಾನು ಸೇನಾಮುಖವಂ ಕುರಿತು ತೆರಳುವಾಗ ಮುಂಭಾಗ ದೊಳ್ ನಡೆಯುತ್ತಲಿರುವ ಬಿರುದುಗಳಾದ ಧ್ವಜಪತಾಕಂಗಳು ಮುರಿದು ಆ ದರಮೇಲಣ ಕಲಶಂಗಳು ನೆಲದಲ್ಲಿಬಿದ್ದು ಉರುಳಿದವು. ಇಂತುಮಲ್ಲದೆ ಮಾ ರ್ಗಾವರ್ತಿಗಳಾದ ಚಾರರು ಓಡಿಬಂದು ಜಲಾವರಣವಘೋಷವು ಅಗ್ನ್ಯಾವರ ಣದ ಕಾಂತಿಯು ಅಡಗಿರುವದೆಂದು ಎಂದು ಪೇಳಿದ ನುಡಿಗಳಂ ನಾನು ನಿನ್ನಡಿ ಗಳಿಗೆ ಬಿನ್ನವಿಸಬೇಕೆಂದು ಬರುವಷ್ಟರೊಳ್ ಇಲ್ಲಿ ನಡೆಯುವ ಅವಶಕು ನಂಗಳನ್ನೋಡಲು, ಈಗ ನಮಗೆ ವಿಸ್ತಾರ ಬಂದು ಮಹಾ ವಿಪತ್ತು ಬರುವಂ ತೆ ತೋರುತಲಿದೆ. ಇದಕ್ಕೋಸುಗ ಬೇಗನೆ ಚಾರರಂಕಳುಹಿ ವಜ್ರಪುರಿಯ ವೃತ್ತಾಂತವಂ ತಿಳಿದು ಬಳಿಕ ತೆರಳುವದು ನನ್ನಬುದ್ಧಿಗೆ ಉತ್ತಮವೆಂದು ತೋರುತ್ತಿರುವುದೆಂದು ಬಿನ್ನೈಸಲು ಆ ಮಾತಂಕೇಳಿ, ಜಂಝಾಮಾರುತನು ಎಲೈ ವಜ್ರದಂಷ್ಟ್ರನೇ! ಕೇಳು ನಮ್ಮರಾಕ್ಷಸಕುಲಕ್ಕೆ ಅವಶಕುನವೇ ಶಕು ನವು ಎನ್ನಭುಜಬಲ ಪರಾಕ್ರಮಂಗಳಿಗೆ ಈ ಅವಶಕುನಗಳಿಂದ ಯೇನಾಗು ವದು. ಇಂದ್ರಾದಿ ದಿಕ್ಪಾಲಕರು ನಮಗೆ ಲಕ್ಷ್ಯವಿಲ್ಲಾ ಮತ್ತು ನಾರಾಯಣ ನನ್ನಲ್ಲಾಡಿಸುವೆನು, ಈಶ್ವರನನ್ನೀಸಾರಿ ತೀರಿಸುವೆನು. ಬ್ರಹ್ಮನಂ ಬ್ರಹ್ಮಾಂ ಡದಿಂದಾಚೆಗೆ ಓಡಿಸುವೆನು, ಸುರರ ಪ್ರಾಣಂಗಳಂ ಸೂರೆಗೊಳಿಸುವೆನು ಎಂದು ನುಡಿಯುತ ತನ್ನ ಹಸ್ತದಿಂ ಬಾರಿಬಾರಿಗೂ ಸುರಾಭಾಂಡಗಳಂ ಎತ್ತಿಕುಡಿಯು ತ ಭುಜಗಳಂ ತಟ್ಟುತ್ತ ಮತ್ತೂ ಮಂತ್ರಿಯುಂಕುರಿತು ಎಲೈ ವಜ್ರದಂಷ್ಟ್ರ ನೇ! ಕೇಳು, ಈ ಸರಗಸ ನಾವ್ರುತರುವ ಮಾಂಸಗಳ ವಾಸನೆಗೆ ಎದುರಾಗಿ ಬರುವವು. ಹದ್ದುಗಳಂ [illegible] ದಲ್ಲಿ ಚಾಚಿಟ್ಟಿರುವ ಹೆಣಗಳಂಕಿತ್ತು ತಿನ್ನು

ಪ್ರುದಕ್ಕೆ ಎರಗುವವು. ಕಾಗೆಗಳು ನನ್ನಕಿರೀಟದಲ್ಲಿರುವ ರತ್ನಂಗಳಂ ಮೊಂಸೆಯಿಂಡಗಳೆಂದು ಭ್ರಮಿಸಿ ಕೀಳುವವಕ್ಕೆ ಬರುವದಲ್ಲದೆ ಅಪಶಕುನವಲ್ಲವೆಂದು ನುಡಿಯಲು; ಆ ಕಾಲದೊಳ್ ಮಂತ್ರಿಯಾದ ವಜ್ರದಂಷ್ಟ್ರನು ಮನದೊಳ್ ಯೋಚಿಸಿದನು ಈ ರಾಕ್ಷಸಾಧಿಪತಿಯು ಅಪಶಕುನಂಗಳಂ ಲಕ್ಷ್ಯಸದೆ ಮತ್ತೂ ಹಿತವಾದ ನನ್ನಮಾತುಗಳಂಕೇಳದೆ ದೇವತೆಗಳಂ ಪರಿಪರಿಯಾಗಿ ಬಾಯಿಗೆ ಬಂದಂತೆ ಬೊಗಳುತ ಅಹಂಕಾರದಿಂದಿರುವನು. ಆದ್ದರಿಂದಇವನಿಗೆ ಮೃತಿಕಾಲವು ಸಮೀಪಿಸಿರುವುದಾಗಿತೋರುತ್ತಲಿದೆ, ಇಂತಪ್ಪ ಸಾಮರ್ಥ್ಯ ಉಳ್ಳವಂಗೆ ಎಂತು ವಿಪತ್ತು ಸಂಭವಿಸುವುದೆಂದು ಯೋಚಿಸಿದರೆ ಈತನು ಬಲಾತ್ಕಾರದಿಂತಂದಿರುವ ಕುಸುಮಲತೆಯಮೂಲಕವಾಗಿಯೇ ವಿಪತ್ತು ಉಂಟಾಗುವದು. ಆದ್ದರಿಂ ಈಗ ನಮ್ಮ ಕುಲದೇವತೆಯಾದ ನಿಕುಂಬಿಳಾದೇವಿಯ ಕಟಾಕ್ಷದಿಂದಲೇ ಕ್ಷೇಮವಾಗಬೇಕಲ್ಲದೆ ಮತ್ತೊಂದು ಸಾಧನವಿಲ್ಲವೆಂದು ಚಿಂತಿಸುತ ಸಂಗಡಬರುತ್ತಿರಲು, ಜಂಝಾಮಾರುತನು ತನ್ನ ಬಲಸಮೇತನಾಗಿ ಸುರೆಯು ತಲೆಗೇರಿ ಮನಬಂದಂತೆ ಕೂಗುತ ಬಂದು ಜಲಾವರಣದ ಸಮೀಪದೊಳ್ ನಿಂತು ಅಲ್ಲಿ ಸತ್ತುಬಿದ್ದಿರುವ ರಾಕ್ಷಸರ ಸಮೂಹವಂ ಆ ಆವರಣದೊಳ್ ಬಿಂದುಮಾತ್ರ ಜಲವಿಲ್ಲದೆ ಇರುವುದಂಕೂಡ ನೋಡಿ ವಜ್ರದಂಷ್ಟ್ರನಂಕುರಿತು, ಎಲೈ ಬುದ್ಧಿಶಾಲಿಯಾದ ಮಂತ್ರಿಯೇ! ನೀನು ಪೇಳಿದಂತೆ ಅನರ್ಥವಾಗಿಯೇ ಇರುವುದು. ಆದ್ದರಿಂ ಈರ್ವರ್ಚಾರರಂಕಳುಹಿ ಪಟ್ಟಣದೊಳ್ ಏನಾಗಿರುವುದೋ ಆ ಸಮಾಚಾರವಂ ತರಿಸುವದೆಂದು ನುಡಿಯಲು, ಆ ಮಂತ್ರಿಯು ಉಲೂಕಶಂಕರೆಂಬ ಈರ್ವಚಾರರಂ ಕರೆದು-ನೀವು ಪಟ್ಟಣವಂಪೊಕ್ಕು ಅಲ್ಲಿಯ ಸಮಾಚಾರವೆಲ್ಲವಂ ವಿಸ್ತಾರವಾಗಿ ತಿಳಿದುಬಂದು ಪೇಳುವದೆಂದು ಕಟ್ಟುಮಾಡಿ ಕಳುಹಲು, ಅವರು ತಮ್ಮಗಳ ಹೆಸರುಗಳಿಗೆ ಸರಿಯಾದ ಪಕ್ಷಿಗಳರೂಪವಂತಾಳಿ ಪಟ್ಟಣವಂಪ್ರವೇಶಿಸಿ ಅಲ್ಲಲ್ಲಿ ನೋಡುತ್ತಿರಲು; ಛಾಯಾಗುಪ್ತನು ಅದಂತಿಳಿದು ಸುಗಂಧರಾಜೇಂದ್ರಂಗೆ ಬಿನ್ನವಿಸಲು, ಅದಂಕೇಳಿ, ರಾಜೇಂದ್ರನು ಅವರಂ ನೀನೇಪಿಡಿದು ತರುವುದೆಂದಾಜ್ಞಾಪಿಸಲು ಛಾಯಾಗುಪ್ತನು ಅವರ ನೆರಳಲ್ಲಿಯೇಪೋಗಿ ಈರ್ವರಂ ಎರಡುಕೈಗಳಿಂದ ಪಿಡಿದುಕೊಂಡುಬರಲು, ಪಕ್ಷಿರೂಪದಿಂತಿರುವ ಆ ದೂತರು ಯಕ್ಷನ

ಹಿಡಿತವಂ ಸೈರಿಸಲಾರದೆ ಎಂದಿನಂತೆ ರಾಕ್ಷಸನಾಗಲು, ಯಕ್ಷನು ಆ ಕ್ಷುದ್ರರಾಕ್ಷಸಚಾರರಂ ರಾಜೇಂದ್ರನಬಳಿಗೆ ಕರೆತರಲು, ರಾಜೇಂದ್ರನು ಅವರುಗಳನ್ನೋಡಿ ಎಲೈ ದುಷ್ಟರಾದ ದಾನವರುಗಳಿರಾ! ಕೇಳಿ ನಿಮಗೆ ಅರಸಾದ ಜಂಘೂವಮಾರುತನೊಡನೆ, ಕರ್ನಾಟಕ ದೇಶಾಧಿಪತಿಯಾದ ಸುಗಂಧರಾಜೇಂದ್ರನೆಂಬ ಅರಸು ಯುದ್ಧಾರ್ಥವಾಗಿ ಬಂದಿರುವನು. ನಿನ್ನಂ ಸಂಹರಿಸುವನೆಂದು ಹೇಳುವುದು ಅಲ್ಲದೆ ದೂತಕಾರ್ಯಕ್ಕೆ ಬಂದವರಂ ಸಂಹರಿಸಲು ಯುಕ್ತವಲ್ಲವೆಂದು ಶಾಸ್ತ್ರವಿರುವದರಿಂದ ನಿಮ್ಮಂ ಸಂಹರಿಸುವುದಿಲ್ಲವೆಂದು ನುಡಿದು ಎಲೈ ಛಾಯಾಗುಪ್ತನೇ! ಇವರುಗಳ ಮೂಗುಗಳಂ ಕುಯಿದು ಕಳುಹುವನಾಗೆಂದು ಆಜ್ಞಾಪಿಸಲು ಛಾಯಾಗುಪ್ತನು ಅದೇಮೇರೆಗೆ ಅವರ ಮೂಗುಗಳಂ ಕುಯಿದು ಮರಳಿ ಕಳುಹಿಸಲು ಅವರೀರ್ವರೂ ಪ್ರಾಣಮಾತ್ರವುಳಿಯಿತೇ ಎಂದು ಗಡಗಡನೆ ನಡುಗುತ ಓಡಿಬರುವುದಕ್ಕೆ ಕಾಲುಬಾರದೆ ನಿಂತಿರುಗಿ ಭಯದಿಂನೋಡುತ್ತಾ ತಮ್ಮ ಸೇನೆಯಿರುವ ಬಳಿಗೆಬಂದು ಎಲ್ಲರನ್ನೋಡಿ ಅಳುತ್ತಾ ಅರಸಾದ ಜಂಘೂವಮಾರುತನ ಬಳಿಯಲ್ಲಿಗೆ ಸಾಷ್ಟಾಂಗ ನಮಸ್ಕಾರವಂಮಾಡಿ ಎದ್ದುನಿಂತು ಗದ್ಗದಸ್ವರದಿಂ ಸುಗಂಧರಾಜೇಂದ್ರನು ಹೇಳಿದ ಮಾತುಗಳಂ ಹೇಳಿದಡೆ ಇವನೇನುಮಾಡುವನೋ ಎಂದು ಭಯದಿಂ ಕೊಂಚಕೊಂಚವಾಗಿ ಹೇಳಲು ಆಗ ಜಂಘೂವಮಾರುತನು ಈ ದೂತರುಗಳ ಮೂಗು ಕುಯಿದು ಇರುವದಂನೋಡಿ ಅವರು ಹೇಳಿದ ಮಾತುಗಳಂಕೇಳಿ ಕೋಪೋದ್ದೀಪಿತನಾಗಿ ಕಣ್ಣುಗಳಿಂದ ಕಿಡಿಗಳಂ ಉದುರಿಸುತ್ತ ಕಟಕಟನೆ ದಲ್ಲುಗಳಂ ಕಡಿಯುತ್ತ ಕೆಂಪುಮೀಸೆಗಳಂ ತಿರುಗಿಸುತ್ತಾ ಕಾಲಾಗ್ನಿಯಂತೆ ಉರಿಯುತ್ತ ಕ್ರೋಧವೇ ಮೂರ್ತಿಭವಿಸಿಬಂದಂತೆ ತೋರುತ್ತ ಎಲೈ ಉಲೂಕಕಂಕರುಗಳಿರಾ! ಆ ನರಾಧಮನು ನಿಮಗೆ ಈ ತೆರೆಯಾಗಿ ಮೂಗುಗಳಂಕುಯಿದು ಅವಮಾನವಂ ಮಾಡಿದನೇ? ಅವನ ತಲೆಯನ್ನೇ ಕುಯಿದು ನಿಮಗೆ ತಿಹಾರವಾಗಿ ಕೊಡುವೆನೆಂದುಹೇಳಿ ಆಭರಣಗಳಿಂದಲೂ ಹಲವು ಸ್ತೋತ್ರವಾದ ಮಾತುಗಳಿಂದಲೂ ಅವರಂ ಸಂತೋಷಗೊಳಿಸಿ ಮಂತ್ರಿಯನ್ನೋಡಿ ಮನುಷ್ಯರಲ್ಲಿ ಇಂಥಾ ಸಾಹಸವಂತರುಂಟೇ? ಎಂದುನುಡಿಯುತ್ತ [illegible] ಳಂ ಧ್ಯಾನಬಲದಿಂದಹೇಗೆಮಾಡಿರುವನೋ ಎಂದುನುಡಿಯಲು, ಆ ಮಾತಿಗೆ

ಸುವ ನನ್ನನು ಎಚ್ಚ ರಾಕ್ಷಸೇಶ್ವರನೋಳ್ [illegible] ಜಲಾವರಣವಂ ಶೋಷಣಂಗೈಸಿ ಅಗ್ನ್ಯಾವರಣವಂ ವಾರುಣಾಸ್ತ್ರದಿಂ ಅಡಗಿಸಿ ಸರ್ಪಾವರಣವಂ ಗಾರುಡಾಸ್ತ್ರದಿಂ ನಾಶಗೊಳಿಸಿ ಸಿಂಹಾವರಣವಂ ಶರಭಾಸ್ತ್ರದಿಂದ ಸಂಹಾರವಂಮಾಡಿ ಬಳಿಕ ರಾಕ್ಷಸಾವರಣವಂ ಸ್ತಂಭನಾಸ್ತ್ರದಿಂ ಸ್ತಬ್ಧವನ್ನಾಗಿ ಮಾಡಿರುವನಂತೆ ಕಾಣುತ್ತೆ. ಈ ಸ್ತಂಭನಾಸ್ತ್ರಕ್ಕೆ ಪ್ರತೀಕಾರವಾದ ಅಸ್ತ್ರವಿದ್ದರೆ ಪ್ರಯೋಗಿಸಿ ರಾಕ್ಷಸರು ಎಬ್ಬಿಸಬಹುದೆಂದು ವಿಜ್ಞಾಪನೆಯಂಗೈಯಲು, ಆಗ ಜಂಝಾಮಾರುತನು ತನ್ನ ಪೆಗಲೊಳಿರ್ದ ಧನುಸ್ಸಂತೆಗೆದು ಬಾಣಮಂ ಸಂಧಾನವಂಗೈದು ಪ್ರಜ್ಞಾಸ್ತ್ರವಂ ಅಭಿಮಂತ್ರಿಸಿ ಬಿಡಲು, ಆ ರಾಕ್ಷಸರೆಲ್ಲರೂ ನಿದ್ರೆಯಿಂತಿಳಿದು ಎದ್ದಂತೆ ಎಚ್ಚೆತ್ತು ಸುತ್ತಲೂ ಬಿದ್ದಿರುವ ತಮ್ಮತಮ್ಮ ಆಯುಧಂಗಳಂ ಎತ್ತಿಕೊಂಡು, ಎಲಾ ಮನುಷ್ಯಮಾತ್ರದವನು ಕಪಟ ಕೃತ್ಯಗಳಿಂದಬಂದು ನಮ್ಮ ಎಲ್ಲರಂ ಈ ಪರಿಯಾಗಿ ಮೋಸದಿಂದ ಜಯಿಸಿ ನಮಗೆ ಅರಸಾದ ರಾಕ್ಷಸೇಶ್ವರನಿಲ್ಲದೆಯಿರುವ ಸಮಯದೊಳ್ ಅವನನೆಯು ಪ್ರೇಕ್ಷ್ಯ ಏನೇನುಮಾಡಿರುವನೋ ತಿಳಿಯಲಿಲ್ಲ ನಾವು ಕಾವಲಾಗಿದ್ದದ್ದು ವ್ಯರ್ಥವಾಯಿತೆಂದು ಎಲ್ಲರೂ ಗುಂಪಾಗಿ ಬ್ರಹ್ಮಾಂಡವು ಒಡೆಯುವಂತೆ ಆರ್ಭಟಿಸುತ್ತ ಬರುತ್ತಿರಲು ಆ ಶಬ್ದವಂಕೇಳಿ ಸುಗಂಧಕಾಜೇಂದ್ರನು ಇದೇನು ಸಮುದ್ರನ ಮೇರೆತಪ್ಪಿ ಘೋಷಿಸುತ ಬರುತ್ತಿರುವದೋ ಎಂಬಂತೆ ಬರಿಬರುವ ರಾಕ್ಷಸಸೇನೆಯನ್ನೋಡಿ ಯಕ್ಷಸಮೇತ ಕುಳಿತು ನಾನಾವಿಧ ಬಾಣಂಗಳಿಂದ ಆ ರಾಕ್ಷಸಬಲಗಳಂ ಸಂಹರಿಸಲು ಬೆಂಕಿಯು ಸೋಂಕಿದ ಹುದ್ದಿಸರಾಶಿಯಂತೆ ನಿಮಿಷದೊಳ್ ಪಡಿದ ರಾಕ್ಷಸರಂ ಕಂಡು ಜಂಝಾಮಾರುತನು ತನ್ನ ನಿಮಿಷದೊಳ್ [illegible] ವ್ಯಗಾವಲು ರಾಕ್ಷಸರಂ ಕಳುಹಿಸಲು ಅವರು ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳ ರೂಪವಂ ಬೇರೆ ಬೇರೆಧರಿಸಿ ಏಕವಾಗಿನುತ್ತು ವರಿದು ಕವಿದುಕೊಂಡಿರುವ ಅಂಧಕಾರಂಗಳು ಸೂರ್ಯನನಂ ಕವಿದಂತೆ ಸುಗಂಧರಾಜೇಂದ್ರನಂ ಕವಿದು ಜಯಿಸುವವೆಂದು ಬರುತ್ತಿರಲು ಸುಗಂಧರಾಜೇಂದ್ರನು ಈ ವಿಚಿತ್ರವಾದ ರೂಪಗಳಂಕಂಡು, ಇವರೆಲ್ಲರೂ ರಾಕ್ಷಸರೆಂದು ತಿಳಿದು ಒಂದೊಂದು ಜಾತಿಗೆ ಒಂದೊಂದು ಪರಿಯಾದ ಬಾಣಂಗಳಂ ಪ್ರಯೋಗಿಸಲು, ಆ ರಾಕ್ಷಸರು ಎ

ದುರಾಗಿಬ್ಬರುವ ಈ ಬಾಣಂಗಳಂ ಪಿಡಿದು ಮುರಿಯುವರು. ಕೆಲಬರು ತಪ್ಪಿಸಿ ಕೊಳ್ಳುವರು ಕೆಲಂಬರು ಅವುಗಳಿಂದಲೇ ಬದಲಾಗಿ ಯಕ್ಷನನ್ನೋಯಿಸುವರು ಕೆಲಬರು. ಆ ಬಾಣಂಗಳಂ ನುಂಗುವರು ಕೆಲಂಬರು, ಇಂತು ಎದುರು ಬೀಳಲು ಸುಗಂಧರಾಜೇಂದ್ರನು ಮಹಾಕೋಪಗೊಂಡು ಈ ಬಾಣಂಗಳಿಂದ ಇವರು ತಗ್ಗುವರಲ್ಲವೆಂದು ತಿಳಿದು ಅಕ್ಷಯಬತ್ತಳಿಕೆಯಿಂದ ಅನೇಕಬಾಣಂಗಳಂ ತೆಗೆದು ಮರಳು ಚೆಲ್ಲಿದಂತೆ ಮಳೆಗರೆದಂತೆ ಎಡೆಬಿಡದೆ ಘೋರೆಂದು ಬಾಣಂಗಳಂ ಬೀರಲಾಬಾಣಂಗಳು ಬಂದಕ್ಕೆ ನೂರಾಗಿ ನೂರಕ್ಕೆ ಸಾವಿರವಾಗಿ ಸಾವಿರಕ್ಕೆ ಲಕ್ಷವಾಗಿ ಲಕ್ಷಕ್ಕೆ ಕೋಟಿಯಾಗಿ ಕೋಟಿಗೆ ಅರ್ಬುದವಾಗಿ ಅರ್ಬುದಕ್ಕೆ ಅನಂತಾನಂತಗಳಾಗಿ ಆ ರಾಕ್ಷಸರ ಸೇನೆಗಳೆಲ್ಲವಂ ನಿಮಿಷದೊಳ್ ರೂಪುರಹಿತವಮಾಗಿಮಾಡಿ ಬಳಿಕ ಸಕಲ ಲೋಕಂಗಳಲ್ಲಿಯೂ ಸರ್ವಜನಗಳಿಂದಲೂ ಸಮಸ್ತಪ್ರಕಾರಗಳಿಂದ ಅತ್ಯಂತ ಶ್ಲಾಘನೀಯವಾದ ತನ್ನ ಪರಾಕ್ರಮವಿಶೇಷದಿಂದ ತಾನೇ ವಿಸ್ಮಯವಿಶಿಷ್ಟನಾಗಿ ಮತ್ತೂ ನಿರ್ಭಯವಾಗಿ ಎದುರಾಗಿ ಬಂದುನಿಂತು ಯುದ್ಧವಂ ಮಾಡುವರಿಲ್ಲದಿದ್ದರಿಂದ ಧನುವಂ ಪೂರಿ ಅದರಕೊನೆಯೊಳ್ ಗಲ್ಲವನ್ನಿಟ್ಟು ಇನ್ನೂ ಬಂದವರೆಲ್ಲರುಬರಲೀ ನೋಡುವಾಯೆಂದು ಕಾಳಗಕ್ಕೆ ಕಾಲ್ಕೆರೆಯುತ ನಿಂತಿರಲು,ಆಗಜಂಘಾಮಾರುತನು ತನ್ನಮಂತ್ರಿಯಾದ ವಜ್ರದಂಷ್ಟ್ರನನ್ನೋಡಿ ಎಲೈ ಮಂತ್ರಿಯೇ! ಮನುಷ್ಯರೆಂದರೇನು? ಬಲಿಷ್ಠರಾದ ರಾಕ್ಷಸರಂ ಕ್ಷಣಮಾತ್ರದಲ್ಲಿ ಸಂಹರಿಸಿ ಸುಮ್ಮನೆ ನಿಂತಿರುವದೆಂದರೇನು?ಈ ಅಚ್ಚರಿಯನ್ನೋಡಿದೆಯಾ?ಬ್ರಹ್ಮನು ಮನುಷ್ಯರಂ ನಮಗೆ ಆಹಾರವಾಗಿ ನಿರ್ಮಿಸಿರುವಾಗ ಈಗ ಈ ಮಾನವನು ರಾಕ್ಷಸರನ್ನೇ ಸಂಹರಿಸುವನು. ಇದೇನು ದುಷ್ಕಾಲವೆಂದು ಪೇಳಲಾಗ ವಜ್ರದಂಷ್ಟ್ರನು ತಮ್ಮ ಅರಸಿನ ಮಾತಂಕೇಳಿ, ಎಲೈ ರಾಕ್ಷಸಾಧಿಪತಿಯೇ! ಕೇಳು, ಮನುಷ್ಯರು ಈ ಅಶಕ್ಯವಾದ ಸ್ಥಳಂಗಳಿಗೆ ಬರುವದೆಂದರೇನು ರಾಕ್ಷಸರಂ ಸಂಹರಿಸುವುದೆಂದರೇನು? ಈತನು ಕೇವಲ ಮನುಷ್ಯಮಾತ್ರನಾಗಿ ತೋರ್ಪುದಿಲ್ಲ. ಪೂರ್ವದೊಳ್ನಾನೊಂದುಮಾತಂ ಕೇಳಿದ್ದೆನು, ಅದೇನೆಂದರೆ, ದೂರ್ವಾಸಮುನಿಯ ಶಾಪದಿಂದ ಇಂದ್ರನೇ ಭೂಲೋಕದಲ್ಲಿ ಪುಟ್ಟಿರುವನಂತೆ, ಇಂತಲ್ಲದೆ ಪ್ಲಕ್ಷದ್ವೀಪಾಧಿಪತಿಯಾದ ಉಗ್ರಬಾಹುವಂ ಓರ್ವನು

ನೃಪನು ಬಂದು ಯುದ್ಧದೊಳ್ ಸಂಹರಿಸಿದವನಂತೆ ಈ ವರ್ತಮಾನವೆಲ್ಲವಂ ನೀನು ಕೇಳಿಯೇ ಇರುವೆ, ಈಗಲೂ ಈ ಮನುಷ್ಯನು ಆತನೇ ಆಗಿರಬಹುದೆಂದು ನನ್ನಮನಸ್ಸಿಗೆ ತೋರುತಲಿದೆ, ಆ ಉಗ್ರಬಾಹುವು ಯುದ್ಧವಮಾಡುವಕಾಲದೊಳ್ ನೋಡಿಬಂದ ಒಬ್ಬ ಚಾರನು ನಮ್ಮ ಸೇನೆಯೊಳಿರುವನು ಅವನಂ ಕರೆಯಿಸಿವಿಚಾರಿಸಬೇಕೆಂದು ವಿಜ್ಞಾಪನೆಯಂಗೈಯಲು, ಆ ಕ್ಷಣದಲ್ಲಿಯೇ ಜಂಝಾಮಾರುತನು ಉಗ್ರಬಾಹುವಿನ ಯುದ್ಧವಂ ಕಂಡು ಬಂದುತಮ್ಮ ಸೇನೆಯೊಳ್ ಸೇರಿದ್ದ ಶಾರ್ದೂಲಮುಖನೆಂಬ ಚಾರನಂ ಕರೆದುಕೇಳಲು ಆ ಚಾರನು ಎಲೈ ರಾಕ್ಷಸರಾಯನೇ! ಈ ರಾಜಪುತ್ರನೇ ಪ್ಲಕ್ಷದ್ವೀಪಕ್ಕೆ ಬಂದು ಉಗ್ರಬಾಹುವನ್ನಿಗ್ರಹಿಸಿದನು ನಾನು ಕಂಡು ಇರುವೆನೂ ಎಂದುನುಡಿಯಲು ಆ ಮಾತ್ರಂ ಕೇಳಿ ವಜ್ರದಂಷ್ಟ್ರನು ಎಲೈ ಪ್ರಭುವೇ! ಈಗ ಈ ರಾಜಕುಮಾರನೊಡನೆ ಯುದ್ಧವಂ ಮಾಡುವದು ಯುಕ್ತವಾಗಿ ತೋರುವದಿಲ್ಲ. ಆ ಉಗ್ರಬಾಹುವು ನಮ್ಮ ಸೈನ್ಯಕ್ಕೆ ನೂರುಮಡಿಯಾದ ಸೇನೆಯಿಂದೊಡಗೂಡಿ ನಿನಗಿಂತಲೂ ಸಾವಿರಮಡಿ ಹೆಚ್ಚಾದ ಬಾಹುಬಲವುಳ್ಳವನು. ಐರಾವತವನ್ನೇ ಸ್ವಾಧೀನವಂಮಾಡಿಕೊಂಡು ತನ್ನ ಮನೆಯೊಳಿರಿಸಿಕೊಂಡಿದ್ದನು ಅಂಥಾವನನ್ನೇ ಸಂಹರಿಸಿರುವಲ್ಲಿ ನಿನ್ನಂ ಲಕ್ಷ್ಯಕ್ಕೆತರುವನಾಗಿ ತೋರಲಿಲ್ಲ ಇಂತಲ್ಲದೆ ಯಾರಿಗೂ ಪ್ರವೇಶಕ್ಕೆ ಅಶಕ್ಯವಾದ ವಜ್ರಪುರಿಯಂ ಇದರ ಆವರಣಂಗಳಂಸಹಾಸಾಧಿಸಿದವನಿಗೆ ಇನ್ನ್ಯಾವದು ಅಶಕ್ಯವಾಗಿರುವದು ಆದ್ದರಿಂದ ಈ ರಾಜಕುಮಾರನು ಬಂದಿರುವ ಕಾರ್ಯವಂ ವಿಚಾರಿಸಿ ಅವನ ಮನವಿದ್ದಂತೆ ನಡೆದುಕೊಂಡರೆ ನಮಿಗೆ ಕ್ಷೇಮವಾಗುವದು ಇಲ್ಲದಿದ್ದಡೆ ಏನಾಗುವದೋ ನಾನು ಅರಿಯನೆಂದು ನುಡಿದು, ಸಮೀಪಕ್ಕೆಬಂದು ನನ್ನಂ ಕಳುಹಿಸಿದರೆ ಅವನೊಡನೆ ಮಾತನಾಡಿ ಸಂಧಿಯಂಮಾಡಿಕೊಂಡು ಬರುವೆನೂ ಎಂದು ಪೇಳಲಾಮಾತಂಕೇಳಿ ಜಂಝಾಮಾರುತನು ಉರಿಯುವ ಬೆಂಕಿಗೆ ತುಪ್ಪವಂ ಸುರಿದಂತೆ ಆನೆಯಂ ಪಿಡಿದಿರುವ ಸಿಂಹದಂತೆ ಹಸಿದು ಮಲಗಿರುವ ಹುಲಿಯಂ ತಲೆದೆಶಿಯೊಳ್ ನಿಂತು ಒದ್ದಂತೆ ಹರಿಯುವ ಹಾವಂ ಕೋಲಿನಿಂಬಡಿದು ಬಾಲವಂ ಕೈಯಿಂದ ಪಿಡಿದಂತೆ ಕೋಪವಂತಾಳಿ ಕಣ್ಣುಗಳಿಂದ ಉದುರುವ ಕಿಡಿಗಳಿಂದ ಲೋಕವನ್ನೇ ಸುಡುವನೋ ಎಂಬಂತೆ ತೋರುತ ಮತ್ತೂ ಎಲೈ ರಾಕ್ಷ

ಸಂಘಮನೇ! ಕೇಳು ಆ ಉಗ್ರಬಾಹುವು ನನ್ನ ಪರಾಕ್ರಮಕ್ಕೆ [illegible] ನಿಲ್ಲಲಾರದೆ ಪಾತಾಳ ಲೋಕವನ್ನು [illegible] ನೋಷ್ಟೆ ಪ್ರಸಿದ್ಧಿಯನ್ನು [illegible] ವಾಡುತಿದ್ದನು. ಅವನು [illegible] ಗಾಗಿ ಅಧರ [illegible] ಸಮರ್ಥನಾಗುವನೇ? ಆ ದುರ್ಬಲನಂ ಸಂಹರಿಸಿದ ಮಾತ್ರದಿಂದಲೇ ಈ ನರಾಧಮನು ಬಹು ಪರಾಕ್ರಮವುಳ್ಳವನಾಗುವನೇ? ಈ ದುಷ್ಟನನ್ನೀಗಲೇ ಸಂಹರಿಸಿ ಬಳಿಕ ನಿನ್ನ ತಲೆಯಂ ಕತ್ತರಿಸುವೆನು ಮತ್ತು ನೀನು ಈ ನರಾಧಮನ ಮರೆಯೊಕ್ಕು ಪ್ರಾಣವಂ ಉಳಿಸಿಕೊಂಡು ಬದುಕಬೇಕೆಂಬ ಭಾವವು ನಿನ್ನ ಮನನಿಂದಲೇ ತೋರುತಲಿದೆ ಈ [illegible] ನೇ ತೀರ್ಮಾನಿಸಿದಂತೆ ತೋರುತಲಿದೆ, ನಮ್ಮ ರಾಕ್ಷಸಜನರು [illegible] ಷ್ಟೆಂದು ಹೇಳುತ ನೀನು ಅನೇಕದಿವಸಗಳಿಂದ ನನ್ನಲ್ಲಿದ್ದ [illegible] ನಿನ್ನಂ ಸಂಹರಿಸದೆ ಪ್ರಾಣಮಾತ್ರವಂ ಬಿಟ್ಟಿರುವೆನು, ಇನ್ನು ಮಾತ್ರ ಕೇಳುವದಕ್ಕೆ ದುಸ್ಸಹಂಗಳಾದ ಈ ಪರಿಯ ಕುಚೋದ್ಯಂಗಳಾದ ಮಾತುಗಳಂ ಪೇಳುವ ನಿನ್ನ ನೆತ್ತಿಯೊಳ್ ನಾಲಿಗೆಯಂ ತೆಗೆಯುವದರಲ್ಲಿ ಅಂತರವಿಲ್ಲವೆಂದು ನುಡಿಯಲು ಆ ಮಾತಂ ಕೇಳಿ ಮಂತ್ರಿಯಾದ ವಜ್ರದಂಷ್ಟ್ರನು ಅತ್ಯಂತ ಕುಪಿತನಾದ ಆ ಜಂಝಾಮಾರುತನಂ ನೋಡಿ ತನ್ನ ಮನದೊಳ್ ಇವನಿಗೆ ಮರಣಕಾಲ ಸಂನಿಹಿತವಾಯಿತೆಂದು ತಿಳಿದು ಒಂದು ಮುಹೂರ್ತಮಾತ್ರ ಸುಮ್ಮನೆಯಿದ್ದು ಬಳಿಕ ತನ್ನ ಮನದೊಳ್ ಇಂತೆಂದು ಯೋಚಿಸಿದನು, ಅದೇನೆಂದರೆ ಈ ದುರಾತ್ಮನು ವಿವೇಕವಿಲ್ಲದೆ ತನ್ನಬಲವಂ ಶತ್ರುಬಲವಂ ಕೂಡ ವಿಚಾರಿಸದೆ ನಾನು ಹೇಳಿದ ಹಿತವಾದಮಾತುಗಳಂ ಅತ್ಯಂತವಿರುದ್ಧಂಗಳಾಗಿ ತಿಳಿದನು. ಆದರೆ ಈ ವರಿಗೂ ಇವನಿಂದ ಜೀವಿಸಿದೆನು. ಈತನು ಎಂದಿಗಾದರೂ ಒಂದು ದಿವಸ ನನ್ನಂ ಸಂಹರಿಸದೇಬಿಡುವನಲ್ಲ. ಆದ್ದರಿಂದ ಇವನಿಂ ಮರಣವನ್ನೈದುವದಕ್ಕಿಂತಲೂ ಆ ಮಹಾಪುರುಷನ ಎದುರಾಗಿಹೋಗಿ ಹಿಮ್ಮೆಟ್ಟದೆ ಕಾಳಗವಂ ಕಾಯ್ದು ಸಂಹೃತನಾದರೆ ನನ್ನ ಸದ್ಗತಿಗೆ ಸಂಶಯವಿಲ್ಲವೆಂದರಿತು ಜಂಝಾಮಾರುತನ ಎದುರಾಗಿ ನಿಂತು ಸಾಷ್ಟಾಂಗ ನಮಸ್ಕಾರವಂ ಮಾಡಿ ಎಲೈ ರಾಕ್ಷಸಪ್ರಭುವೇ! ನನ್ನಲ್ಲಿ ನೀನು ಇಷ್ಟು ಕೋಪವಂ ಮಾಡುವದು ಯು

ಕ್ತವಲ್ಲ ಈಗ ನಿನ್ನ ಅಪ್ಪಣೆಯಾದರೆ ಸಕಲ ಸಾಹಸವಂ ಮಾಡಿ ಆ ಸರಾಧಮನಂ ಸಂಹರಿಸುವೆನೆಂದು ಪೇಳಲು; ಜಂಝಾಮಾರುತನು ಆ ಮಾತಂ ಕೇಳಿ ಸಕಲ ಸೇನೆಯುಂ ಸಂಗಡ ಕರೆದುಕೊಂಡು ಹೋಗೆಂದು ನುಡಿದು ಬಹುಮಾನವಂ ಮಾಡಿ, ಎಲೈ ಮಂತ್ರಿಶ್ರೇಷ್ಠನಾದ ವಜ್ರದಂಷ್ಟ್ರನೇ! ಕೇಳು ನಾನು ನುಡಿದ ಬಿರುನುಡಿಗಳಿಗೆ ನೀನು ಮನದೊಳ್ ಸಂತಾಪಮಂಗೊಳ್ಳಬ್ಯಾಡ, ನಿನಗೆ ಯುದ್ಧದೊಳ್ ಆಸಕ್ತಿ ಬರಬೇಕೆಂದು ಆಗ್ರಹವಂ ಮಾಡಿದೆನಲ್ಲದೆ ನಿಜವಾಗಿ ಕೋಪವಂ ಮಾಡಲಿಲ್ಲವೆಂದು ಪೇಳಿ ತನ್ನ ಕೈಗಳೊಳಿರ್ದ ಕಡೆಗಗಳಂ ಕೊಟ್ಟು ಕಳುಹಿಸಲು; ಆಗ ಮಂತ್ರಿಯಾದ ವಜ್ರದಂಷ್ಟ್ರನು ಆ ಒಡವೆಗಳಂ, ಸಂಕೋಲೆಗಳನ್ನಾಗಿ ತಿಳಿದು ಆ ರಾಕ್ಷಸೇಶ್ವರನು ಪೇಳಿದ ಮಾತುಗಳಂ ಕಿವಿಗಳಿಗೆ ಶೂಲಗಳಂತೆ ಎಣಿಸಿ ಮನಸ್ಸಿನೊಳ್ ಪ್ರಾಣಸಂಶಯವಂ ಮುಖದೊಳ್ ಸಂತೋಷವಂ ನಟಿಸುತಾ, ಇಂತಲ್ಲದೆ ಕೈಯೊಳ್ ಧನುವಂ, ಹೆಗಲೊಳ್ ಬತ್ತಳಿಕೆಯಂ ಶರೀರದೊಳ್ ವಜ್ರ ಕವಚವಂ ಕೂಡ ಧರಿಸಿ ಸಾವಿರ ಕುದುರೆಗಳಂ ಕಟ್ಟಿರುವ ರಥವನ್ನೇರಿ ರಾಕ್ಷಸ ಸೇನೆಯಿಂದೊಡಗೂಡಿ ಉಪಪರ್ವತಂಗಳಿಂ ಕೂಡಿದ ಮಂದರಪರ್ವತವೇ ಆಕಾಶದೊಳ್ ಹಾರಿಬರುವಂತೆ ತೋರುತ ತೆರಳಿಬರುತ್ತಿರಲು, ಅತ್ತಲಾ ಸುಗಂಧರಾಜೇಂದ್ರನು ವಜ್ರದಂಷ್ಟ್ರನು ಯುದ್ಧಕ್ಕೋಸುಗ ಬರುವದಂ ಧನುವನ್ನೆತ್ತಿ ಪರರಿಂದ ಭೇದಿಸಲಶಕ್ಯಮಾದ ವಜ್ರಕವಚವಂ ತೊಟ್ಟು ಯಕ್ಷರಂಕುರಿತು ಸಮಯಮರಿತು ನಡೆಯಬೇಕೆಂದು ನಿರೂಪಿಸಿ ವಿಲಾಸದಿಂ ಅವನಹೆಗಲೊಳ್ ಕುಳಿತು ಬರುವಷ್ಟರೊಳ್ ಮಳೆಗರೆದಂತೆ ಬಾಣಂಗಳಂ ಬೀರುತ; ಗುಡುಗಿನಂತೆ ಧ್ವನಿಗೈಯುತ, ಮಿಂಚಿನಂತೆ ಆಯುಧವಂ ಝಳಪಿಸುತ ಕಾಲಮೇಘವೋ? ಎಂಬಂತೆ ತೋರುತ ಬರುವ ರಾಕ್ಷಸ ಸೇನೆಯಂ ಕಂಡು ಕರಲಾಘವದಿಂದ ಕಾಲಾಗ್ನಿಯ ಕಿಡಿಗಳೋ ಎಂಬಂತೆ ಬಾಣಂಗಳಂ ಬೀರುತ ಅದೃಶ್ಯರಾಗಿ ಬಂದು ಶಸ್ತ್ರಂಗಳಂ ಪ್ರಯೋಗಿಸುವ ರಾಕ್ಷಸರಂ ಹುಡುಕಿ ಅವರೆಲ್ಲರಂ ಕ್ಷಣದೊಳ್ ಸಂಹರಿಸಿ ರಣಮಧ್ಯದೊಳ್ ಸೂರ್ಯನಂತೆ ಮೆರೆಯುತ್ತಿರಲಾಗ ವಜ್ರದಂಷ್ಟ್ರನು ಆ ಸುಗಂಧರಾಜೇಂದ್ರನಂ ಕಂಡು, ಕೋಪಗೊಂಡು ಅಟ್ಟಹಾಸದಿಂದ ಬಂದು ಪಟ್ಟಸಾಯುಧವಂ ಬೀಸಲು, ಆ ಪಟ್ಟಸವು

ಸುಗಂಧರಾಜೇಂದ್ರನ ಒಂದು ಬಾಣಪ್ರಯೋಗದಿಂದಲೇ ಕಟ್ಟಿಗೆಯಂತೆ ನಟ್ಟ
ನಡುವೆ ಫಟ್ಟೆಂದು ಮುರಿದು ಬೀಳಲು, ಆ ವಜ್ರದಂಷ್ಟ್ರನು ಅದಂನೋಡಿ
ಮತ್ತೊಂದು ಗತ್ತು ತೋರಿಸುವಾ ಎಂದು ಗದಾಯುಧವಂತೆಗೆದು ಬೊಬ್ಬಿರಿ
ದು ಈ ಸುಗಂಧರಾಜನ ಕೊಬ್ಬನ್ನೀಗಲೇ ಮುರಿಯುವೆನೆಂದು ಪ್ರಯೋಗಿಸ
ಲಾಗದೆಯು ಸುಗಂಧರಾಜೇಂದ್ರನಂ ನೋಂಕುವುದಕ್ಕೆ ಸಾಮರ್ಥ್ಯಸಾಲದೆ
ಛಾಯಾಗುಪ್ತನ ಶಿರವನ್ನಪ್ಪಳಿಸಲು, ಆಗ ಯಕ್ಷನು ಆ ಪೆಟ್ಟಿನಿಂದ ಗಗನ
ದೊಳ್ ಘುರ್ರೆಂದು ತಿರಿಗಿ ತಿಳುಹುತಪ್ಪಿ ಬೀಳುವನಾಗಿ ದೇವಜಾತಿಯವನಾದ
ಕಾರಣ ಮತ್ತೂ ಜ್ಞಾನವಂಗೊಂಡು ಗಗನದಲ್ಲಿಯೇ ನಿಂತಿರಲು, ಆ ಸುಗಂ
ಧರಾಜೇಂದ್ರನು ಅತಿಕೋಪಗೊಂಡು ಈ ವಜ್ರದಂಷ್ಟ್ರನು ಬಹುಬಲಶಾಲಿ
ಯಾಗಿ ತೋರುವನು. ಸಾಧಾರಣ ಬಾಣಂಗಳಿಂದ ಬೀಳುವನಲ್ಲವೆಂದರಿತು
ಅಷ್ಟಘಂಟಾ ಎಂಬ ಒಂದು ಶಕ್ತಿಯಂತೆಗೆದು ವಜ್ರದಂಷ್ಟ್ರನಮೇಲೆ ಪ್ರ
ಯೋಗಿಸಲು, ಅಮೋಘವಾದ ಆ ಶಕ್ತಿಯು ವಜ್ರದಂಷ್ಟ್ರನ ಎದೆಯೊಳ್ತೂ
ಡಿ ಬೆನ್ನಿನೊಳ್ ಹೊರಟು ಮತ್ತು ಮೊದಲಿನಂತೆ ಸುಗಂಧರಾಜೇಂದ್ರನ ಕ
ರಕಮಲವಂನೈದಲು, ಆಗ ಆ ರಾಕ್ಷಸಮಂತ್ರಿಯು "ಹೋ" ಎಂದು ಕೂಗು
ತ ರಥದಿಂಬಿದ್ದು ಭೂಮಿಯಂ ಕಚ್ಚಲು, ಆ ಧ್ವನಿಯು ಈ ಜಂಝಾಮಾರು
ತನ ಭಾಗ್ಯಲಕ್ಷ್ಮಿಯು ನಾನುಪೋಗುವೆನೆಂದು ಕೂಗಿದಂತಾಗಲು, ಜಂಝಾಮಾ
ರುತನು ಆ ಧ್ವನಿಯಂಕೇಳಿ ಪ್ರಲಾಪಿಸುತ ಎಲೈ ಪರಮಮಿತ್ರನೇ! ಬಹು
ಕಾಲದಿಂ ನಿನ್ನ ಮಾತುಗಳಂಕೇಳಿ, ಕಾರ್ಯಂಗಳಂ ಕೈಗೊಳ್ಳುತ ಸುಖದಿಂದಿ
ರುತ್ತಿದ್ದೆನು. ಈಗ ನೀನುಪೇಳಿದ ಹಿತವಾದ ಮಾತುಗಳಂ ಕೇಳದೆ ನನಗಿಂತ
ಬಲಿಷ್ಠನಾದ ನಿನ್ನನ್ನು ರಣಭೂಮಿಗೆ ಬಲಿಯಾಗಿಕೊಟ್ಟೆನು. ಇನ್ನು ನಾನು ಕೆ
ಟ್ಟೆನೆಂದು ದಂಬಲಿಸಿ ಈ ರಾಜಪುತ್ರನು ಎಷ್ಟು ಬಲಶಾಲಿಯೋ? ರಾಕ್ಷಸ ಕು
ಲವೆಲ್ಲವಂ ನಿರ್ಮೂಲವಂಮಾಡುವದಕ್ಕೆ ಪುಟ್ಟಿರುವ ಮಹಾ ವಿಷ್ಣುವೋ?
ಅಲ್ಲದೆ ಷಣ್ಮುಖನೋ? ವಜ್ರದಂಷ್ಟ್ರನು ಪೇಳಿದಂತೆ ದೇವೇಂದ್ರನೋ? ಎಂ
ದು ಪೇಳುತ್ತ ಅವನನ್ನೇ ನೆನೆದು ಭ್ರಾಂತಿಯಿಂದ ಬಾರೈ ವಜ್ರದಂಷ್ಟ್ರನೇ
ಎಂದು ಕರೆಯುತ್ತ ಮುಹೂರ್ತಮಾತ್ರ ಸುಮ್ಮನಿದ್ದು ಚಿಂತಿಸುತ್ತ ಬಳಿಕ
ಇನ್ನು ಈ ಪಟ್ಟಣದಿಂದೇನು? ಮತ್ತೂ ಮಂತ್ರಿಯುಹತನಾಗಿ ಬಲವೆಲ್ಲಪ್ರಾ

ನಿರ್ಮೂಲವಾಗಿ ಕುಸುಮಲತೆಯೂ ಅಶ್ವರತ್ನವೂಕೂಡ ಆ ರಾಜಪುತ್ರನ ವಶಂ ಗಳಾದ ಬಳಿಕ ನಾನು ಬದುಕಿ ಫಲವೇನು? ಈ ರಾಜಕುಮಾರನೊಡನೆ ಯುದ್ಧಮಂಮಾಡಿ ಜಯಿಸುವದು ಒಂದು, ಅಥವಾ ಆತನಿಂದ ಹತನಾಗಿ ವೀರಸ್ವರ್ಗವಂ ಪಡೆಯುವದು ಒಂದು. ಇದಲ್ಲದೆ ಎಲ್ಲಿಗಾದರು ಪೋಗಿ ಜೀವಿಸುವಾ ಎಂದರೆ ರಾಕ್ಷಸಕುಲಕ್ಕೆಲ್ಲ ನಾನೇ ಅಪಕೀರ್ತಿಯನ್ನುಂಟು ಮಾಡಿದಂತಾಗುವದು. ಆದ್ದರಿಂದ ಈಗ ಯುದ್ಧವಂಮಾಡುವದೇ ಯುಕ್ತವೆಂದು ನಿಶ್ಚೈಸಿ, ಬಳಿಕ ಸಕಲಾಯುಧಂಗಳಂ ಪಿಡಿದು ವೃತ್ರಾಸುರನಂತೆ ಭೂಮಿಯಿಂದಾಕಾಶಕ್ಕೆ ಏಕವಾದ ಶರೀರವುಳ್ಳವನಾಗಿ ಲೋಕಂಗಳೆಲ್ಲವಂ ನುಂಗುವುದಕ್ಕೆ ಬರುವನಂತೆ ಭಯಂಕರನಾಗಿ ಉಳಿದ ಬಲದಿಂಕೂಡಿ ಬ್ರಹ್ಮಾಂಡವೇ ಒಡೆಯುವಂತೆ ಆರ್ಭಟಿಸುತ್ತ ಬರುತ್ತಿರಲು, ಸುಗಂಧರಾಜೇಂದ್ರನು ನಸುನಗುತ್ತ ಈ ರಕ್ಕಸನು ಮಹಾ ಬಲವಂತನಾಗಿ ತೋರುವನು. ಇವನೊಡನೆ ಸೆಣಸುವದು ಸಾಧಾರಣವಲ್ಲವೆಂದರಿತು ಎದುರಾಗಿ ಬರುವ ಆ ರಾಕ್ಷಸನಮೇಲೆ ಕಾಣಿಸಿಕೊಂಡು ಅರ್ಧಚಂದ್ರಬಾಣಂಗಳಿಂದವನ ಕಿರೀಟವಂ ಕೈಯೊಳಿರ್ದ ಶೂಲವಂ ಮೈಯೊಳಿರ್ದ ಕವಚವಂಕೂಡ ಕತ್ತರಿಸಿ ಕೆಡಹಲು, ಆ ಕುಸುಮಲತೆಯು ಚಂದ್ರಶಾಲೆಯನ್ನೇರಿ ಏನಾಗುವದೋ? ಎಂದು ಸಂದೇಹಪಡುತ್ತ ಸುಗಂಧರಾಜೇಂದ್ರನ ಕರಲಾಘವವನ್ನೋಡಿದರೆ ಈ ರಾಕ್ಷಸನು ಈಗಲೇ ಮರಣವನ್ನೈದುವಂತೆ ಕಾಣುತ್ತಲಿದೆ. ಎಂದು ಮನದೊಳ್ ಸಂತೋಷಪಡುತ್ತ ನಿಂದಿರಲಾಗ ಜಂಝಾಮಾರುತನು ಬಹು ಕ್ರೋಧವಂತಾಳಿ ಅತಿತೀಕ್ಷ್ಣವಾದ ಒಂದು ಶೂಲವಂ ರಾಜಕುಮಾರನಮೇಲೆ ಪ್ರಯೋಗಿಸಲು ಸುಗಂಧರಾಜೇಂದ್ರನು ಅದಂ ಐದು ಬಾಣಂಗಳಿಂದ ಕಡಿದು ಎರಡು ಅರ್ಧಚಂದ್ರಬಾಣದಿಂದವನ ಬಾಹುಗಳಂ ಛೇದಿಸಲು, ಬಳಿಕ ಮೊದಲಿನಂತೆ ಬಾಹುಗಳುಂಟಾಗಲು ಅದನ್ನೋಡಿ ರಾಜೇಂದ್ರನು ಆಶ್ಚರಿಯಿಂ ನಿಂದಿರಲು, ಆಗ ಜಂಝಾಮಾರುತನು ಎಲೈ ನರಾಧಮನೇ! ನೀನು ಉಗ್ರಬಾಹುವಂ ಹೊಡೆದು ವಜ್ರದಂಷ್ಟ್ರನಂ ಪಕ್ಕಲಿಕ್ಕಿದೆನೆಂದು ಅಹಂಕಾರಗೊಂಡಿರುವ, ನಾನು ಸಾಧಾರಣನಲ್ಲ, ಜಂಝಾಮಾರುತನೆಂದು ತಿಳಿದು ಎಚ್ಚರದಿಂದಿರು ಎಂದುನುಡಿಯುತ್ತ ನಾನಾವಿಧಂಗಳಾದ ಆಯುಧಂಗಳಂ ಪ್ರಳಯಕಾಲಮೇಘದಂತೆ ವರ್ಷಿಸುತ್ತಿರಲು, ಅದನ್ನೋಡಿ ಶೂರಾ

ಗ್ರಗಣ್ಯನಾದ ಸುಗಂಧರಾಜೇಂದ್ರನು ಪರಿಘಗಳಂ ಮುರಿದು ಪಟ್ಟಿಸವಂ ಕುಟ್ಟಿ ಬಿಸುಟು ಶೂಲಗಳಂ ಶೀಳಿ ತೋಮರಂಗಳಂ ತುತ್ತುಮುರಿಮಾಡಿ ಕತ್ತಿಗಳಂ ಕತ್ತರಿಸಿ ತಾನು ಘಾಯವ ಪಡೆಯದೆ ಎಂದಿನಂತೆ ನಿಂದಿರಲು, ಆಗ ರಾಕ್ಷಸನು ರಾಜಕುಮಾರನಂ ಎಂದಿನಂತೆನೋಡಿ ಈ ಶಸ್ತ್ರಸಂಬಂಧವಾದ ಯುದ್ಧದಿಂ ಜೈಸಕೂಡದು, ಮಾಯಾಯುದ್ಧದೋಳ್ ಮೋಸಗೊಳಿಸಬೇಕೆಂದು ಯೋಚಿಸಿ ಆ ಕ್ಷಣದಲ್ಲಿಯೇ ಅದೃಶ್ಯನಾಗಿ ಅಂತರಿಕ್ಷದೋಳ್ನಿಂತು ಮೇಘದ ರೂಪವಂ ತಾಳಿ, ಸಿಡಿಲು ಮಳೆಯಂ ಕರೆಯಲಾಗ ರಾಜೇಂದ್ರನು ರಾಕ್ಷಸನಂ ಎದುರಿಗೆ ಕಾಣದೆ ವರ್ಷಿಸುವ ಬೆಂಕಿಯಂ ಮಾತ್ರ ಕಂಡು ಇದೇನುಮಾಯೆ ಎಂದರಿತು ಬಳಿಕ ಅವನಂತೆ ತಾನೂ ಬಂದು ಮಾಯೆಯಂ ತಾಳಿ ಪ್ರಳಯಕಾಲದ ಘಾಳಿಯಂತಾಗಿ ಮಾಯೆಯಿಂ ಮಾಡಿರುವ ಮೇಘಗಳೆಲ್ಲವಂ ನಾಶಗೊಳಿಸಲು ಆ ಕ್ಷಣದಲ್ಲಿಯೇ ರಾಕ್ಷಸನು ಸಿಂಹಾಕೃತಿಯಂತಾಳಿ ಮಂದರಪರ್ವತದಂತೆ ಬೆಳೆದು ಘುಡಿಘುಡಿಸುತ ಬಂದು ನಖಾಗ್ರಗಳಿಂದ ಛಾಯಾಗುಪ್ತನಂ ಪ್ರಹರಿಸಲುದ್ಯುಕ್ತನಾಗಲಾಗ ರಾಜೇಂದ್ರನು ಅದಂ ಕಂಡು ಆ ಕ್ಷಣದಲ್ಲಿಯೇ ಶರಭರೂಪವಂತಾಳಿ ಆ ಸಿಂಹದ ಶರೀರವನೆಲ್ಲವಂ ಖಂಡಖಂಡವಾಗಿ ಸೀಳಲು ಅಷ್ಟರೋಳ್ ರಾಕ್ಷಸನು ಸಮವಾಗಿ ಕಾಳಗವಂ ಮಾಡಬೇಕೆಂದು ತಾನು ಶರಭರೂಪನಾಗಿ ಕಣಿಸಿ ಕಾಳಗವಂ ಮಾಡುತ್ತಿರಲಾಗ ಪರ್ವತದೊಡನೆ ಪರ್ವತವು ತಾಗಿದಂತೆಯೂ, ದಾವಾಗ್ನಿಯೊಡನೆ ಬಡಬಾಗ್ನಿಯು ಕೂಡಿದಂತೆಯೂ, ಅತಿ ಘೋರವಾದ ಯುದ್ಧವು ದೇವದಾನವರಿಗೆ ಅಚ್ಚರಿಯನ್ನುಂಟುಮಾಡಲಾಗ ಸುಗಂಧರಾಜೇಂದ್ರನು ಘೇರುಂಡಪಕ್ಷಿಯ ರೂಪವಂತಾಳಿ ಈ ಶರಭನಂ ನುಂಗುವಂತೆ ಬರುತ್ತಿರಲು, ಆವನ್ನೋಡಿ ಜಂಝಾಮಾರುತನು ಭಯಪಟ್ಟು ಇನ್ನು ಮಾಯಾಯುದ್ಧವಂ ಇವನೊಂದಿಗೆ ಮಾಡಕೂಡದೆಂದು ಮೊದಲಿನಂತೆ ನಿಜರೂಪವಂಗೊಂಡು ಅನೇಕಾಯುಧಂಗಳಂ ಬೀರಲು, ರಾಜೇಂದ್ರನು ತನ್ನ ಮನದೋಳ್ ನಾನು ಯಾವ ಅಸ್ತ್ರಂಗಳಂ ಪ್ರಯೋಗಿಸಿದರೂ ಅದಕ್ಕೆ ಪ್ರತೀಕಾರವಾದ ಅಸ್ತ್ರಂಗಳಂ ಈ ರಾಕ್ಷಸನು ಪ್ರಯೋಗಿಸುವನು. ಆದ್ದರಿಂ ಎಷ್ಟು ದಿವಸಕ್ಕೆ ಈ ರಾಕ್ಷಸನು ಸಂಹೃತನಾಗುವನೋ? ತಿಳಿಯದೆಂದು ಚಿಂತಿಸುತ್ತಿರಲಾಗ ಕುಸುಮಸಂತತಿಯು ಉಪ್ಪರಿಗೆಯ ಮೇಲುಪ್ಪರಿಗೆಯಲ್ಲಿ ನಿಂತು ಇದಿ

ಲ್ಲವಂ ನೋಡುತ್ತಿರಲು, ಆಕಾಶದೊಳ್ ಚಂದ್ರಹಾಸವೆಂಬ ಶಬ್ದವಂ ಮೂ
ರುಸಾರಿ ನುಡಿದಂತೆ ಕೇಳಿ, ಬಳಿಕ ಅವರ ಅಭಿಪ್ರಾಯವಂ ತಿಳಿದು ಸಂತೋಷಾ
ತನಾಗಿ ತನ್ನ ಕುಲದೇವತೆಯಾದ ಶ್ರೀದೇವಿಯಂ ಧ್ಯಾನಿಸಿ ಬಳಿಕ ಹಸ್ತದೊ
ಳ್ ಚಂದ್ರಹಾಸವಂ ಪಿಡಿದು ಆ ರಾಕ್ಷಸನ ಸನ್ನಿಕಟಕ್ಕೋಡಿ ಬರಲು, ಆಗ ಆ
ರಾಕ್ಷಸನು ಬಂದು ಉತ್ತಮವಾದ ಖಡ್ಗವಂ ಪಿಡಿದು ಸುಗಂಧರಾಜೇಂದ್ರನ ಎ
ದುರಾಗಲು, ಇವರೀರ್ವರೂ ಒಬ್ಬರಿಗೊಬ್ಬರು ಚಿತ್ರವಾಗಿ ಕತ್ತಿಗಳಂ ಬೀಸು
ತ ಮೊನೆಗಳಂ ತೋರಿಸುತ ಪಟುಗಳಂ ತಪ್ಪಿಸಿಕೊಳ್ಳುತ್ತ ಕಾಳಗವಂ ಕಾದುವ
ವೃತ್ರಾಸುರ ದೇವೇಂದ್ರರಂತೆ ಕಾಣಿಸುತ ಪರಸ್ಪರ ಖಡ್ಗವಿನ್ಯಾಸಗಳಂ ವಿಚಿ
ತ್ರವಾಗಿ ತೋರಿಸುತ್ತ ಹಿಮ್ಮೆಟ್ಟುವ ಹೆಜ್ಜೆಗಳಿಂ ಸರಿಸರಿದು ಬರುತ್ತ ಸವ್ಯಾಪಸ
ವ್ಯಾದಿಗತಿಭೇದಗಳಂ ತೋರುತ ಅಹಂಕಾರದಿಂ ಪರಿಪರಿಯಾದ ವೀರವಾದ
ಮಾತುಗಳಂ ನಾಡುತ ಇಂತು ಕೆಲವು ಹೊತ್ತು ಕಾಳಗವಂ ಕಾದುತ್ತಿರಲು; ಬ
ಳಿಕ ಅವರೊಳ್ ಸುಗಂಧರಾಜೇಂದ್ರನು ಭೂಲೋಕದೊಳ್ ಧರ್ಮಸಂ
ಸ್ಥಾಪನವಂ ಮಾಡಲೋಸುಗ ಶ್ರೀರಾಮಕೃಷ್ಣಾದಿಗಳಂತೆ ಅವತಾರವಂ
ಗೊಂಡಿರುವನಾದ್ದರಿಂ ಕ್ಷಣಮಾತ್ರದೊಳ್ ಸಕಲ ಲೋಕಕಂಟಕನಾದ
ಜಂಝಾಮಾರುತನೆಂಬ ರಕ್ಕಸನಂ ಕಲ್ಪಾಂತಮಿಂಚಿನಂತೆ ಹೊಳೆಯುತ್ತಿರು
ವ ಚಂದ್ರಹಾಸದಿಂದ ಸಂಹರಿಸಲು, ಆ ಸಮಯದೊಳ್ ಈ ಯುದ್ಧವ
ನ್ನೋಡಲೋಸುಗ ಮೇರುಪರ್ವತದ ಬದಿಯನ್ನೈದಿರುವ ದೇವತೆಗಳೆಲ್ಲ
ರೂ ಸುಗಂಧರಾಜೇಂದ್ರನ ಮೇಲೆ ಪುಷ್ಪವೃಷ್ಟಿಯಂ ಕರೆದು ದುಂದುಭಿ ಮೊದ
ಲಾದ ತಮ್ಮ ವಾದ್ಯಂಗಳಂ ವಿಲಾಸದಿಂ ಮೊಳಗಿಸಲು, ಆಗ ಸುಗಂಧರಾಜೇಂ
ದ್ರನು ಕಳಂಕವಿಲ್ಲದ ಚಂದ್ರನಂತೆ ಕಾಣಿಸುತ ಮತ್ತೂ ಹತಶೇಷರಾದ ರಾ
ಕ್ಷಸರೊಳ್ ಎದುರುಬಿದ್ದವರಂ ಅಲ್ಲಲ್ಲಿಯೇ ಕೊಂದು ಮರೆಹೊಕ್ಕವರಂ
ಉಳಿಸಿ ತಾನು ಕೃತಕೃತ್ಯನಾಗಿ ಛಾಯಾಗುಪ್ತಸಮೇತ ವಿಲಾಸದಿಂ ನಿಂತಿರ
ಲು, ಬಳಿಕ ಜಂಝಾಮಾರುತನು ಘೋರವಾದ ರಾಕ್ಷಸಶರೀರವಂ ಬಿಟ್ಟು ಅ
ತ್ಯಂತ ಕಾಂತಿಯುಕ್ತವಾದ ದಿವ್ಯವಿಮಾನವನ್ನೇರಿ ಬಂದು ಎಲೈ ವೀರಾಧಿವೀ
ರನಾದ ಸುಗಂಧರಾಜೇಂದ್ರನೇ! ಕೇಳು, ನಿನ್ನ ಹಸ್ತದೊಳಿರುವ ಚಂದ್ರಹಾ
ಸದ ಮಹಿಮೆಯಿಂದ ನನ್ನ ಶಾಪವು ಪರಿಹಾರವನ್ನೈದಿತು. ನಾನು ಸುಕೃತವ

ತನಾದೆನು,ಎಂದು ಆಕಾಶದೊಳ್ನಿಂತು ನಮಸ್ಕರಿಸಲು. ಸುಗಂಧರಾಜೇಂದ್ರನು ಇಂತು ನುಡಿಯುವ ವಿದ್ಯಾಧರನನ್ನೀಕ್ಷಿಸಿ ವಿಸ್ಮಯಂಗೊಂಡು ಅವನಂ ಕುರಿತು ಎಲೈ ವಿದ್ಯಾಧರನೇ! ಈ ಪರಿ ಮನೋಹರನಾದ ನಿನಗೆ ಅತಿಘೋರವಾದ ಈ ರಾಕ್ಷಸ ರೂಪವು ಯಾವಕಾರಣದಿಂ ಪ್ರಾಪ್ತವಾದುದೆಂದು ಕೇಳಲು, ಆಗ ಆ ವಿದ್ಯಾಧರನು ಎಲೈ ಮಹಾಮಹಿಮನೇ! ಕೇಳು, ಹಿಮವಂತಪರ್ವತದ ಉಪರಿಭಾಗದೊಳ್ ಒಂದಾನೊಂದು ವಿಚಿತ್ರವಾದ ಚಿತ್ರವನವಿರುವದು. ಆ ವನವಲ್ಲಿ ಮನೋಹರವಾದ ದಿವ್ಯೋದಕದಿಂ ಪೂರಿತವಾಗಿರುವ ಒಂದು ಸರೋವರದೊಳ್ ಹೈಮವತಿ ಮೊದಲಾದ ವಿದ್ಯಾಧರ ಸ್ತ್ರೀಯರುಗಳಿಂದಯುಕ್ತನಾಗಿ ಜಲಕ್ರೀಡೆಯನ್ನಾಡುವಾಗ ಕೃಶಾಂಗನಾದ ಜಟಾಧಾರಿಯಾದ ಒಬ್ಬ ತಪಸ್ವಿಯು ಬರಲು, ಅವನಂ ಕಂಡು ನಾನು ಅತನ ಮಹಿಮೆಯಂ ತಿಳಿಯದೆ ನಾನಾವಿಧವಾಗಿ ಹಾಸ್ಯವಂ ಮಾಡುತ ಕ್ರೀಡೆಯಂ ಬಿಡದೆ ಅಹಂಕಾರದಿಂದಿರಲು, ಆ ತಪಸ್ವಿಯು ಬಹುಕೋಪದಿಂದ ನಿನಗೆ ಘೋರವಾದ ರಾಕ್ಷಸರೂಪವು ಸಂಭವಿಸಲೆಂದು ನನಗೆ ಶಾಪವಂ ಕೊಡಲಾ ಶಾಪದಿಂ ನಾನು ಕಳೆಗುಂದಿ ಮನನೊಂದು ಕ್ರೀಡೆಯಂ ಬಿಟ್ಟು ಆ ಋಷಿಯ ಪಾದಂಗಳಂ ಘಟ್ಟಿಯಾಗಿ ಪಿಡಿದು ಬೇಡಿಕೊಳ್ಳಲು, ಆ ಋಷಿಯು ಈ ಬುದ್ಧಿಯು ಮೊದಲ್ಯಾಕೆ ಇರಲಿಲ್ಲವೆಂದು ನುಡಿದು ಬಳಿಕ ನನ್ನ ಪರಿತಾಪವನ್ನೀಕ್ಷಿಸಿ ಕರುಣದಿಂ ಭೂಲೋಕದಲ್ಲಿ ಕರ್ನಾಟದೇಶದೊಳ್ ಸುಗಂಧರಾಜೇಂದ್ರನೆಂಬ ಅರಸು ಉದಯಿಸಿ ದೇವಿಯು ಪ್ರಸಾದಲಬ್ಧವಾದ ಚಂದ್ರಹಾಸದಿಂ ನಿನ್ನಂ ಸಂಹರಿಸಲಾಗ ನೀನು ಈ ಶಾಪದಿಂ ಮುಕ್ತನಾಗಿ ಎಂದಿನಂತೆ ವಿದ್ಯಾಧರನಾಗುವೆ ಎಂದು ವಿಶಾಪವಂಕೊಟ್ಟು ತೆರಳಿದನು. ನನಗೆ ಆಕ್ಷಣದಲ್ಲಿಯೇ ಘೋರವಾದ ರಾಕ್ಷಸರೂಪು ಉಂಟಾಗಲು, ಆಗ ನನ್ನ ಹೆಂಡರು ನನ್ನನ್ನೀಕ್ಷಿಸಿ ಓಡಿಪೋದರು. ನಾನು ಈ ಇಳಾವೃತಖಂಡವಂ ಸೇರಿ ಈ ಪುರವನ್ನಿರ್ಮಿಸಿಕೊಂಡು ಇಲ್ಲಿಯೇ ಇರುತಿರ್ದೆನು. ಈಗ ನಿನ್ನಿಂದ ಕೃತಾರ್ಥನಾದೆನೆಂದು ನುಡಿದು ಕ್ಷುತ್ತೃಷ್ಣೆಗಳಂ ಪರಿಹರಿಸುವ ತನಗೆ ಪ್ರಾಣಪ್ರದಕವಾಗಿರ್ದ ತೃಪ್ತಿಕರಣಿಯೆಂಬ ಮೂಲಿಕಾವಿಶೇಷವಂ ಇಂತಲ್ಲದೆ ಬೇಕಾದ ಕಾಲದೊಳ್ ಮನೋನುಗುಣ್ಯವಾಗಿ ಇಷ್ಟಂಗಳಾದ ರಾಗಂಗಳಂ ಪಾಡುವ ಮಣಿಮಯವಾದ ಒಂದು ವೀಣೆಯುಂ ಸಮರ್ಪಿ

ಶಿವ [illegible] ಒಂದು ಬೆಸ್ನದಿ [illegible] ಸ್ತುತ ಮಹಾಮಹಿಮನಾದ [illegible] ಕೌಶುಪ್ರಪಂಚ [illegible] ಯುಕ್ತಿಯಿಂ ರಾಜರುಗಳು ಕಾಣಬಾರದೆಂದು ಶಾಸ್ತ್ರವಿರುವದ್ದರಿಂದ [illegible] ಒಪ್ಪಿಸಿದೆನು. ಇದಲ್ಲದೆ ಈ ವಜ್ರಪುರಿಯೊಳ್ ಕುಸುಮಲತೆಯೆಂಬ ರಾಜಪುತ್ರಿಯಂ ವಿಚಿತ್ರವಾದ ಅಶ್ವರತ್ನವಂ ಕಾಣಿಕೆ ಸಿಸಿಗೋಸುಗ ಸಂರಕ್ಷಿಸಿಕೊಂಡಿದ್ದೇನು. ಈಗಳಾ ಸ್ತ್ರೀರತ್ನವಂ ಅಶ್ವರತ್ನವಂ ಮತ್ತು ನವರತ್ನ ಮೊದಲಾದ ರಾಶಿಗಳೆಲ್ಲವಂ ಒಪ್ಪಿಸಿಕೊಳ್ಳಬೇಕೆಂದು ಬಿನ್ನವಿಸಿ ಅವನ ಅನುಜ್ಞೆಯಂ ಪಡೆದು ಅಲ್ಲಿಂದತನ್ನ ವಿದ್ಯಾಧರಪುರವಂ ಕುರಿತು ತೆರಳಲು; ಆ ಸಮಯದೊಳ್ ಸಂಹೃತನಾದ ಜಂಝಾಮಾರುತನ ಕಳೇಬರವು ವಜ್ರಪಾತದಿಂದುರುಳ್ದ ಗಿರಿ ಶಿಖರದಂತೆ ಅತಿ ನೀಳವಾಗಿಯು ಅಸ್ವಸ್ಥತನಾಗಿಯು ಬಿದ್ದಿರಲು, ಆ ಕಾಲದೊಳ್ ಆ ರಕ್ಕಸನ ಪತ್ನಿಯರಾದ ವಜ್ರಲತಾ, ಕಂಕಾಳಿ, ಸುಮಾಲೆ, ದುರ್ಮುಖಿ, ಮೊದಲಾದ ನೂರುಮಂದಿ ಕಾಂತೆಯರು ತಮ್ಮತಮ್ಮ ಅಂತಃಪುರವಂಬಿಟ್ಟು ಕುಸುಮಲತೆಯೆಂಬ ಮೃತ್ಯುವೇ ಈ ಪುರವಂಪೊಕ್ಕು ನಮ್ಮ ರಾಕ್ಷಸಕುಲ ಸಂಹಾರಕ್ಕೆ ಕಾರಣವಾದಳೆಂದು ಸುಡಿಯುತ ಕುಸುಮಲತೆಯ ಮಂದಿರದ ಮುಂದುಗಡೆಯೊಳ್ ಬರುತ ನಾನಾಪರಿದುಃಖಪಡುತ ನಿರ್ಜೀವವಾದ ತಮ್ಮ ಪ್ರಾಣವಲ್ಲಭನಾದ ಜಂಝಾಮಾರುತನ ಕಳೇಬರವಂ ಕಂಡು ಹಾ ಪ್ರಿಯನೇ! ಹಾ ನನ್ನ ಒಡೆಯನೇ! ಹಾ ಕುಸುಮ ಸುಕುಮಾರಾಂಗನೇ! ಹಾ ಪ್ರಾಣವಲ್ಲಭನೇ! ನಮ್ಮಂತೊಲಗಿ ಎಲ್ಲಿ ಪೋಗಿರುವೆ? ಎಲೈ ಪ್ರಾಣಕಾಂತನೇ! ನಿನ್ನ ಪ್ರಾಣಸಖಿಯರಾದ ನಮ್ಮನ್ನೇಡವೆ ಏನು ಕಾರಣ ಈ ಪರಿಯಾಗಿ ಪವಳಿಶಿರುವೆ ಎಲೈ ನವಮನ್ಮಥನೇ! ನಿನಗೆ ನಿದ್ರೆಯೋ ನಮ್ಮ ಮೇಲೆ ಕೋಪವೋ ಯಾವದೊಂತಿಳಿಯದಿರುವ ಅಬಲೆಯರಾದ ನಮ್ಮಂ ಏನುಕಾರಣ ಘಾಸಿಪಡಿಸುತ್ತಲಿದ್ದೀಯೋ. ಹಾ ಕಾಂತನೇ! ಹಾ ಪ್ರಾಣವಲ್ಲಭನೇ! ಅಯ್ಯೋ ಶಿವನೇ ನಮಗೆ ಈ ಪರಿಪುಂಟಾಗಬಹುದೆ? ನಿನಗೆ ನಾವು ಏನು ಅಪಕಾರವಂ ಮಾಡಿದೆವು, ಎಂದು ಪರಿಪರಿಯಾಗಿ ಹಂಬಲಿಸುತ್ತಿರಲು, ಮತ್ತಂ ಅವರೊಳ್ ವಜ್ರಲತೆಯು ಆ ಜಂಝಾಮಾರುತನ ಕಳೇಬರವಂ ಪಿಡಿದು ತಬ್ಬಿಕೊಂಡು ಅವನ ಮುಖವಂ ತನ್ನ ಮುಖದೊಳಿಟ್ಟು

ಚಿಂತಿಸುತ್ತ ಎಲೈ ಪ್ರಾಣದರಸನೇ! ನನ್ನ ತೊಡೆಯ ಮೇಲೆ ಒರಗುವ ಸುಕುಮಾರನಾದ ನಿನ್ನ ಮಂಡೆಯು ಈಗ ಈ ಕಠಿಣವಾದ ಕಲ್ಲು ಗುಂಡು ತಲೆದಿಂಬು ಮಾಡಿ ಒರಗಬಹುದೇ? ಅತ್ಯಂತ ಮೃದುವಾದ ಹಂಸತೂಲಿಕಾತಲ್ಪದ ಮೇಲೆ ಪವಳಿಸುವ ಶರೀರವು ಈ ಕಠಿಣವಾದ ಭೂಮಿಯೊಳ್ ಮಲಗಹುದೇ? ಹಾ ಪ್ರಾಣದೊಡೆಯನೆ ದಿವ್ಯವಾದ ಸುಗಂಧವಂ ತಂದು ನನ್ನ ಮನದಣಿಸ ತೆ ತೊಡೆಯುತ್ತಿರ್ದ ಈ ದೇಹಕ್ಕೆ ಈ ಭೂಮಿಯು ಧೂಳುಗಳು ಲೇಪವಾಗಬಹುವೇ? ಹಾ ಪ್ರಾಣಪ್ರಿಯನೇ ನೀನು ಸ್ರಕ್ಚಂದನಾದಿಗಳಿಂದೊಡಗೂಡಿ ಎನ್ನೊಡನೆ ಅನೇಕವಿಧ ಉಪರತಿ ಸಮರತಿಗಳಿಂ ಬೆರೆದು ಆಯಾಸದಿಂದುಂಟಾದ ಬೆವರುಗಳಿಂ ಕೂಡಿದ ಈ ದೇಹವು ಈ ಶತ್ರುವಿನ ಬಾಣಪ್ರಹರದಿಂದ ರಕ್ತಮಾಂಸಕರ್ದಮಂಗಳಿಂದು ನಾನೆಂತು ಸೈರಿಸಲೀ? ಎಲೈ ಪ್ರಾಣವಲ್ಲಭನೇ! ತೂಗುಮಂಚದೊಳ್ ಕುಳಿತು ನಾನು ಒಪ್ಪಿಸುವ ಕಪ್ಪುರವೀಳ್ಯವಂ ಸವಿಯುವ ಪಲ್ಲುಗಳಿಂದ ಈಗ ಕಲ್ಲು ಮುಳ್ಳುಗಳಿಂ ಕೂಡಿರುವ ನೆಲವಂ ನೀನು ಕಚ್ಚಬಹುದೇ? ಎಲೈ ಸುಂದರಾಂಗನೇ! ಹಾ ಮನೋಭಿರಾಮನೇ! ನೀನು ಮಲಗಿರುವ ಸಮಯದೊಳ್ ನಾನು ಬರುವಾಗ ನೂಪುರಾಭರಣಂಗಳ ಶಬ್ದದಿಂದಲೇ ನೀನು ನಿದ್ರೆಯಿಂ ತಿಳಿದೆದ್ದು ನನ್ನೊಡನೆ ಕ್ರೀಡಿಸುವ ಪ್ರೇಮಕಾಂತನಾದ ನೀನು ಏಕಾಂತವಂ ಬಿಟ್ಟು ಲೋಕಾಂತರವಂ ಪೊಂದಬಹುದೇ? ಎಲೈ ಪ್ರಾಣದೊಡೆಯನೇ! ಏಂ ಕಾರಣ ಕಣ್ದೆರೆದುನೋಡದೆ ಮೌನವಂತಾಳಿಯಿದ್ದೀಯೋ? ನಿನ್ನನ್ನೇ ಪ್ರಾಣವಲ್ಲಭನೆಂದು ನಂಬಿರುವ ನನ್ನಲ್ಲಿ ಇಷ್ಟು ಕೋಪವಂ ಮಾಡಬಹುದೇ? ನಾನು ನಿನಗೆ ವಂಚನೆಯಂ ಸ್ವಲ್ಪವಾದರೂ ಮಾಡಿದವಳಲ್ಲ, ಇದಕ್ಕೆ ಸಾಕ್ಷಿಗಳು ಆಕಾಶವಾಣಿ, ಭೂದೇವಿ, ದಿಕ್ಪತಿಗಳು, ಚಂದ್ರಸೂರ್ಯರು ಮೊದಲಾದವರಿರುವರು. ಮತ್ತೂ ನನ್ನ ಮನದ ನಿಶ್ಚಯವಂ ನಿನ್ನ ಹೃದಯವೇ ಬಲ್ಲುದು, ಎಲೈ ಮೋಹನಾಂಗನೇ ತಿಳಿದೂ ತಿಳಿಯದವನಂತೆ ನನ್ನಂ ಈ ಪರಿಯೊಳ್ ಹಂಬಲಿಸುವಂತೆ ಮಾಡುವುದು ನಿನಗೆ ಧರ್ಮವೇ? ಎಲೈ ಚನ್ನಿಗನೇ! ನನಗೆ ನೀನು ರತಿಕಾಲದಲ್ಲಿ ನಿನ್ನಂ ಕ್ಷಣಮಾತ್ರವೂ ಬಿಟ್ಟಿರುವದಿಲ್ಲವೆಂದು ನನ್ನ ತಲೆಯಂ ಮುಟ್ಟಿ ಕೊಟ್ಟ ಭಾಷೆಯಂ ಮರತೆಯಾ? ನೀನು ಮರೆಯುವವನಲ್ಲ, ನನ್ನ ವಿಧಿಯೇ ನಿನಗೆ ವ

ರಮೆಯಂಕೊಟ್ಟೆತ್ತೋ? ನಾನು ಜನ್ಮಾಂತರದೊಳ್ ಯಾವ ದಂಪತಿಗಳಂ ಅಗಲಿಸಿದ್ದೆನೋ? ಆ ಪಾಪವೇ ಈ ರೂಪವಾಗಿ ಫಲಿಸಿತೊ? ಹಾ ದೈವವೇ! ಎನಗೆ ಈ ಗತಿಯುಂಟಾಗಬಹುದೇ? ಹಾ ಪ್ರಾಣರಮಣನೇ! ನೀನು ಮರಣವಂ ಸೈದಿದವನಂತೆ ಕರುಣವಿಲ್ಲದೆ ಧರೆಯೊಳ್ ನಿಪ್ರಿಯೆಂಬ ಸತಿಯೊಡಗೂಡಿ ರಮಿಸಿ ಪರವಶನಾಗಿ ಎನ್ನೊಳ್ ಮುನಿಸಂ ತಾಳಬಹುದೇ? ಎಲೈ ಸರಸನೇ! ಎನ್ನೊಡನೆ ವಿಲಾಸದಿಂದಾಡುತ್ತ ಕುಚಗಳಂ ಪಿಡಿದು ಆಲಿಂಗನವಂ ಮಾಡುವ ಕಾಲದೊಳ್ ಇದೆನ್ನಿಂದ ರಕ್ಷಿಸು ಕುಚವಂ ಪಿಡಿಯುವದಿಲ್ಲವೆಂದು ಭಾಷೆಯಂಕೊಟ್ಟಿರುವಂ ಮರೆತು ನಾನೋಡುವಂತೆ ಭೂಮಿ ಎಂಬ ಕಾಂತೆಯಂ ತಬ್ಬಿ ಆಲಿಂಗನವಂ ಮಾಡಬಹುದೇ? ನೀನು ಕೊಟ್ಟ ಭಾಷೆ ಏನಾಯಿತು. ನನ್ನ ಮರೆಮಾಡಿ ಮಲಗಿರುವೆನೆಂದಿರುವೆಯೋ? ಏನೋ ನೋಡು, ನಾನಿಲ್ಲಿಯೇ ಇರುವೆನು, ದೇವಲೋಕದ ಕುದುರೆಯಂ ತರುವಾಗ ಈ ಕುಸುಮಲತೆ ಬಿಂಬವಾಗಿರುವಂತೆಂದು ಇವಳೊಡನಾಡುವೆನೆಂದು ಬರಿ ಭ್ರಮೆಗೊಂಡು ಆಕೆಯ ಸ್ನೇಹಕ್ಕೆ ಕೊಂಡು ಅವಳಿದಿರಿನಿಂದ ಯಮನದೇಶವಂ ಪ್ರವೇಶಿಸಬಹುದೇ? ಹಾ ಕಾಂತ, ಹಾ ರಮಣ, ಹಾ ಮಹಾಬಲ ಹಾ ರಾಕ್ಷಸೇಶ್ವರನೇ' ಎಂದು ಬಹುವಿಧದೊಳ್ ಬಿದ್ದು ಹೊರಳಿ ಮೂರ್ಛೆಯಂಗೊಂಡು ಸುಡುತಬರುವ ಕಾಡ್ಗಿಚ್ಚಿನೊಳ್ ಬಳಲಿ ಬಾಡಿದ ಎಳೇ ಬಳ್ಳಿಯಂತೆ ಬಿದ್ದಿರುವ ವಜ್ರಲತೆಯಂ ಕಂಡು ಕುಂಭಿನೀ ಎಂಬೋರ್ವ ಸಖಿಯು ಎಲೈ ವಜ್ರಲತೆಯೇ! ನಿನ್ನ ಹಣೆಯೊಳ್ ಬ್ರಹ್ಮನು ಹೀಗೆ ಬರೆಯಬಹುದೇ? ನಿನ್ನ ತುರುಬಿನೊಳಿರುವ ಪುಷ್ಪಮಾಲೆಗಳು ಕೆದರಿ ಧೂಳುಗಳಲ್ಲಿ ಬಿದ್ದುರುಳುವಂತೆ ಮಾಡಿತೇ ದೈವ? ನಿನ್ನೆ ದಿವಸ ನೀನು ಅಲಂಕಾರಮಂ ಗೈಕೊಳ್ಳುವಾಗ ಆಗಬಾರದ ಅಪಶಕುನಗಳಂ ಕಂಡೆನು, ಅದು ಈಗಲೇ ಫಲಿಸಬಹುದೇ? ಆ ರತ್ನದ ನಿಲುಗನ್ನಡಿಗಳನ್ನಿನ್ನಾರು ನೋಡುವರು, ನಿನ್ನ ಮೋಹದ ಗಿಳಿಗಳನ್ನಿನ್ನಾರು ಸಾಕುವರು, ನಿನ್ನ ಕೈಯ್ಯಾರ ಬೆಳಸಿದ ಮಲ್ಲಿಗೆ ಬಳ್ಳಿಯ ಮೊಗ್ಗುಗಳನ್ನಿನ್ನಾರು ಕುಯ್ದು ಮುಡಿಯುವರು, ವಜ್ರಲತೆಯೇ ಎಂದು ನನ್ನನು ಇನ್ನಾರು ಕರೆಯುವರು? ಅಲಂಕಾರವಂ ಮಾಡುವ ಜಾಣ್ಮೆಯನ್ನಿನ್ನಾರಲ್ಲಿ ತೋರಿಸಲಿ, ಇನ್ನಾರನಂ ಬಿಕ್ಕಿಂದು ಕೇಳಲಿ, ಇಂತಾ

ದ ಬಳಿಕ ಎಂತು ಕಾಲನಂ ಕಳೆಯುವೆ, ಈಗ ಈ ಪರಿಯಾದ ನಿನ್ನನೋಡು ವಂತೆ ನನ್ನ ಹಣೆಯೊಳ್ ಬರೆದುದೇ ದೈವವೆಂದು ಪಲವುಪರಿಯಿಂ ಹಂಬಲಿಸು ತ ವಜ್ರಲತೆಯುಂ ಪಿಡಿದೆತ್ತಿ ಎದೆ ಕಣ್ಣುಗಳಿಗೆ ನೀರುತಟ್ಟಲು, ಆಗ ವಜ್ರಲ ತೆಯು ಕಣ್ದೆರೆದು ಕನಸುಕಂಡಂತೆ ತೋರಿ ಉನ್ಮಾದವಸ್ಥೆಯಿಂ ಇದೇನಿದು ಭಯವು ನಾವು ಇಲ್ಲಿಕೆ ಬಂದೆವು ವಜ್ರಪುರಿಗೆ ಪತಿಯಾದ ರಾಕ್ಷಸೇಶ್ವರ ನು ಮೃತನಾದಂತೆ ಕಂಡೆನು, ಇದೇನು ಸ್ವಪ್ನವೋ? ಚಿತ್ತಭ್ರಮೆಯೋ? ಅಲ್ಲದಿರೆ ಯಥಾರ್ಥವೋ? ಮನುಷ್ಯಂ ಹೆದರುವಂತೆ ಮಾಡುವನು ಯಮ ನ ಪಟ್ಟಣವಂ ಸೇರುವನುಂಟೇ? ಎಂದು ಬಾಯ್ಬಳಿಗೆ ಮಂಚದಮರುಳಾಗಿ ಅಷ್ಟರೊಳ್ ಎಚ್ಚೆತ್ತು ಎದುರಾಗಿ ಬಿದ್ದಿರುವ ರಾಕ್ಷಸೇಶ್ವರನನ್ನೋಡಿ ಬೆಟ್ಟದಮೇಲಿನಿಂ ಉರಿಗೆ ಬೀಳುವಂತೆ ಎದೆಗುಂದಿ ಹಾ ಕಾಂತ! ನಿನ್ನ ಪಾಣಿಗ್ರ ಹಣವಂ ಮಾಡುವಾಗ ಗಣಿತಜ್ಞರು ಘಟಿತಾರ್ಥಂಗಳೆಲ್ಲವೂ ಚೆನ್ನಾಗಿರುವು ದೆಂದು ಪೇಳಿದ ಮಾತುಗಳು ಏನಾದವು, ನಿನಗೆ ಸ್ಥಿರಸೌಮಂಗಲ್ಯವೆಂದು ಆಶೀ ರ್ವಾದವಂ ಮಾಡಿದ ಬ್ರಹ್ಮರಾಕ್ಷಸರುಗಳ ಮಾತುಗಳೇನಾದುವು, ನನ್ನ ಮುಖ ರೂಪರೇಖೆಗಳನ್ನೋಡಿ ಚೆನ್ನಾಗಿ ಬಾಳುವೇ ಎಂದು ನುಡಿದ ಸಾಮುದ್ರಿಕವಂ ಪೇಳಿದ ಶೌಷ್ಕಲಿಕನ ಬಾಯಿ ಬೆಂದುಹೋಗಲೀ, ಎಂದು ನಿಂದಿಸುತ್ತಿರುವಾಗ ದುರ್ಮುಖಿ ಎಂಬ ರಾಕ್ಷಸಿಯು ವಜ್ರಲತೆಯ ಮಗ ಳಾದ ತುಂದೋದರಿಯುಂ ಕರೆತಂದು ಎದುರಾಗಿ ನಿಲ್ಲಿಸಲಾಗ ವಜ್ರಲತೆಯು ಆ ಮಗಳನ್ನೋಡಿ ಈ ಸುಂದರಾಂಗಿಗೆ ಮದುವೆಯುಂ ಮಾಡಬೇಕೆಂದು ಸಕಲ ಸಂಭಾರಗಳಂ ಸ್ವಯಂಪೂರ್ಣ ತ್ರಿವತ್ಸನಂ ತಳಿಯಳಿಗೆ ಕೊಡುವೆ ನೆಂದು ಪೇಳಿ, ಬಂದವರನ್ನು ರೋದಿಸದೆ ನನ್ನೆಲ್ಲರಂ ಅನಾಥರಂ ಮಾಡಿ ಸ್ವ ಷ್ಯಮಾತ್ರಪದವೆಂದು ಮಡಿದು ಹೋದುದಕ್ಕೆ ಎಷ್ಟೆಂದು ಅಳಲೀ, ಎಂದು ಹಂಬಲಿಸುತ್ತ ಆ ಮಗಳಂ ಕುರಿತು ನಿನ್ನ ತಂದೆಯನ್ನೋಡೆಂದು ಪೇಳಿ ಮತ್ತೂ ಎಲ್ಲರೂ ಒಟ್ಟಾಗಿ ಘೋರೆಂದು ಕಾಲ್ಗೆಗಳಂತೆ ಕಣ್ಣೀರುಗಳಂ ಸುರಿಸುತ್ತ ಆಭರಣಂಗಳನ್ನೀಡಾಡುತ್ತ ಪ್ರಲಾಪನಂಗೆಯ್ಯುತ್ತಿರಲು ಮಹಾ ಘೋಷ ವಂಕೇಳಿ, ಕುಲವೃದ್ಧಳಾದ ಅಜಾಮುಖೀ ಎಂಬುವಳು ಬಂದು ಎಲ್ಲರಂ ಚಿರೆದೇವಾರನ್ನಾಗಿ ಸಮಾಧಾನಗೊಳಿಸುತ್ತ ವಜ್ರಲತೆಯಂ ಕುರಿತು ಎಲೈ ನೀನೀ

ಸಮುಸುದೇಳೊಳಿಂತು ಗದ್ದಲವಂ ಮಾಡಬಹುದೇ? ಅನಾಥರಾದ ನಮ್ಮಂ ದುಷ್ಟರಾಕ್ಷಸ ಸ್ತ್ರೀಯರಿಂದು ತಾಟಕಿಯಂತೆ ಈ ಶತ್ರುರಾಯನು ವಿನಾಶಮಾಡು ವನೋ? ಇಲ್ಲದಿದ್ದರೆ ಶೂರ್ಪಣಖಿಯಂತೆ ಅಂಗವಿಕಾರವಂ ಮಾಡುವನೋ? ಈ ಪತಿವ್ರತಾ ಸ್ತ್ರೀಯಂತಿರುವ ತುಂದೋದರಿ ಎಂಬ ಕನ್ನೆಯನ್ನಪಹರಿಸು ವನೋ? ಹೋಗ ರಾಕ್ಷಸೇಶ್ವರನೇ ಈ ಕನ್ನಿಕೆಯೆಂದು ದುಃಖಿತನ್ನಾಗಿರೆ ನಿನ್ನ ಪತಿಯು ಮನಸ್ಸಿನಲ್ಲಿದ್ದಂತೆ ದುರ್ಧರ್ಷನಿಗೆ ಈ ಕನ್ನಿಕೆಯಂ ಕೊಟ್ಟು ಜಂಘಾಮಾರುತನ ದೌಹಿತ್ರನಂ ಪಡೆವನ್ನಾದರೂ ವೃದ್ಧಿಮಾಡುವಾ ಎಂದು ನುಡಿದು ಮತ್ತೂ ಕಾಡುತ್ತಿರುವ ಮನಕ್ಕೆಗೆ ಕಳವಳಪಟ್ಟು ಫಲವೇನು? ವಿಳಾಪದಿಂದ ಕೈಹಿಡಿದು ಎನಕ್ಕುಕ್ಕುತ್ತಿರಲು ಎಲ್ಲರೂ ಕೂಡಿ ಮಾತಾತಿ ಬೇಗ ಪಾತಾಳವಂ ಪೊಕ್ಕು ದುರ್ಧರ್ಷನನ್ನಾದರೂ ಇಲ್ಲಿಗೆ ಕರೆಸಿದರೆ ಆವ ನು ಬಂದು ರಣದೊಳಗೆ ನಿತ್ಯ ಬಿದ್ದಿರುವ ತನಗೆ ಮಾವನಾದ ಜಂಘಾಮಾ ರುತನನ್ನೋಡಿ ಕೋಪಗೊಂಡು ಈ ಶತ್ರುರಾಯನೊಡನೆ ಕಾದಿ ಜಯಿಸ ಬಲ್ಲನು, ಆವನಬಲವಂ ನಾನು ಬಲ್ಲೆನೆಂದು ಹೇಳಿ ವಜ್ರಮತಿ ಮೊದಲಾದ ರಾಕ್ಷಸಪತ್ನಿಯರೆಲ್ಲರಂ ಮತ್ತೂ ಆ ಜಂಘಾಮಾರುತನ ಪುತ್ರಿಯಾದ ತುಂದೋದರಿ ಎಂಬ ಕನ್ಯಾರತ್ನವಂ ಸಹಾ ಕರದುಕೊಂಡು ಪಾತಾಳ ಲೋಕವಂಕುರಿತು ತೆರಳಲು, ಇತ್ತಲಾ ಸುಗಂಧರಾಜೇಂದ್ರನು ಶ್ರೀದೇವಿ ಯ ಕಟಾಕ್ಷದ ಮಹಿಮೆಯಂ ಬಣ್ಣಿಸುತ್ತ ಕುಸುಮಲತೆ ಇರುವ ಮಂದಿರಕ್ಕೆ ಬರುತ್ತಿರಲು; ಆ ಚಂದ್ರಮುಖಿಯು ಸುಗಂಧರಾಜೇಂದ್ರನು ಮಾಡಿದ ಸಾಹಸವನ್ನೋಡುತಲಿದ್ದು ಈ ರಾಜಪುತ್ರನು ಮನುಷ್ಯಮಾತ್ರದವನಲ್ಲ, ದಿಕ್ಪಾಲಕರಲ್ಲಿ ಯಾರೋ ಒಬ್ಬನೆಂದು ಆಶ್ಚರ್ಯಮಂ ಸಂತೋಷಪಡುತ ಆ ರಾಜೇಂದ್ರಂಗೆ ಎದುರಾಗಿ ಬಂದು ದೇಹವು ಎಷ್ಟು ಬಳಲಿತೋ? ಎಂದು ನುಡಿಯುತ ಪನ್ನೀರಿನಿಂ ಪಾದಂಗಳಂ ತೊಳೆದು ಕೆಂಪು ರತ್ನಗಳಿಂದ ಸಿಂಹಾಳಿ ಯಂತೆಗೆದು ಹಿಡಿಹಿಡಿಯಾಗಿ ನಾಲ್ಕು ಕಡೆಯೊಳ್ ಚೆಲ್ಲುತ್ತ ಆ ಬಳಿಕ ರತ್ನ ದತೊಟ್ಟಿಲೊಳ್ ಮುತ್ತಿನ ಆರತಿಯನ್ನೆತ್ತಿ ಹಾಗೇ ಆಲಿಂಗನವಂಗೈದು ಹಸ್ತ ಲಾಗದು ಕರೆತಂದು ಪರ್ಯಂಕದೊಳ್ ಕುಳ್ಳಿರಿಸಿ ಪರಿಪರಿಯ ಉಪಚಾರವಂ ಗೈಯುತ್ತಿರುತ್ತಿರಲು, ಸುಮತಿಯು ಬಂದು ಸಾಷ್ಟಾಂಗಪ್ರಣಾಮವನಂತಾ

ಡಿ, ಕೈಮುಗಿದು ನಿಂತು ಎಲೈ ಭೂಲೋಕ ದೇವೇಂದ್ರನೇ! ಈ ಖಂಡದೊಳಿರ್ಪ ಬ್ರಹ್ಮ ಋಷಿಗಳೆಲ್ಲರೂ ಇನ್ನುಮೇಲೆ ತಮ್ಮತಮ್ಮ ಆಶ್ರಮಂಗಳಿಗೆ ಮೆಲ್ಲಮೆಲ್ಲನೆಬಂದು ಮೊದಲಿನಂತೆ ಯಜ್ಞಾದಿ ಸತ್ಕರ್ಮಂಗಳಂಮಾಡಿ ದೇವತೆಗಳಂ ಸಂತೋಷಗೊಳಿಸುವರು. ಇಂತು ಧರ್ಮಸ್ಥಾಪನೆಯಂಗೈಯುವ ನಿನ್ನಂ ನಾರಾಯಣನೋ. ಶಂಕರನೋ, ದೇವೇಂದ್ರನೋ ಅವತಾರವಂ ಗೈದಿರುವನೆಂದು ತಿಳಿದಿರುವೆನು. ಮತ್ತೂ ನಿನಗೆ ಯಾವಕಾರ್ಯವು ಅಸಾಧ್ಯವೆಂದು ಪೇಳಲಿ. ಇನ್ನು ತಡಮಾಡಲ್ಯಾಕೆ? ಬೇಕಾದವಸ್ತುಗಳಂ ತೆಗೆದುಕೊಂಡು ತೆರಳಬಹುದೆಂದು ಬಿನ್ನವಿಸಲಾಮಾತಂ ಕೇಳ್ದು, ಸುಗಂಧರಾಜೇಂದ್ರನು ನಾಳೆ ಉದಯದೊಳ್ ಪಯಣವಂ ಮಾಡುವಾ ಎಂದು ಅಪ್ಪಣೆಯನ್ನಿತ್ತು ಬಳಿಕ ಸ್ನಾನಭೋಜನಾದಿಗಳಂ ನೆರವೇರಿಸಿ ಕುಸುಮಲತೆಯೊಡಗೂಡಿ ಸರಸ ಸಲ್ಲಾಪದೊಡನೆ ಮನ್ಮಥವಿಹಾರವಂಗೈಯುತ್ತ ಸುಖದಿಂದಾರಾತ್ರಿಯಂ ಕಳೆದು ಸೂರ್ಯೋದಯವಾದನಂತರ ಸ್ನಾನಾಹ್ನಿಕಗಳನ್ನೆರವೇರಿಸಿ ಸುಮತಿಯೊಡಗೂಡಿ ಸುಭೋಜನವಂಗೈದು, ಆ ಇಳಾವೃತಖಂಡದ ಆಗ್ನೀಧ್ರರಾಯನ ವಂಶಸ್ಥರಾದ ಅರಸುಗಳು ಒಪ್ಪಿಸುವ ಕೈಗಾಣಿಕೆಯಂ ಸ್ವೀಕರಿಸುತ್ತ ಅವರಂಕುರಿತು ಎಲೈ ರಾಯರುಗಳಿರಾ! ಮೊದಲಿನಂತೆ ನೀವುಗಳು ಈ ಇಳಾವೃತಖಂಡದ ಆಧಿಪತ್ಯವಂಮಾಡುತ ಸುಖದಿಂದಿರುವರಾಗಿ ಎಂದು ನಿಯಮಿಸಿ ಬಳಿಕ ಸುಮತಿಯಂಕುರಿತು ಈ ಮಂದಿರದೊಳ್ ಇರುವ ಅಮೂಲ್ಯರತ್ನರಾಶಿಗಳಂ ವಿಚಿತ್ರವಸ್ತ್ರಂಗಳಂ ಸಹಾ ತೆಗೆದುಕೊಂಡು ಮತ್ತೂ ಕುಸುಮಲತೆಯು ಕೆಳದಿಯರೊಡಗೂಡಿ ಕಾಮರೂಪನಾದ ಯಕ್ಷನಮೇಲೆ ಕುಳಿತು, ತೆರಳುವನಾಗೆಂದು ನುಡಿದು ಕುಸುಮಲತೆಯೊಡಗೂಡಿ ಅಲ್ಲಿಂದ ಹೊರಟು ಅಶ್ವದ ಸಮೀಪಕ್ಕೆಬಂದು ಅದಂ ನೋಡಿ ಕಳಿಂಗರಾಜಪುತ್ರಿಯು ಪೇಳಿದ ಲಕ್ಷಣಂಗಳೆಲ್ಲವು ಇದರೊಳ್ ಇರುವುದೆಂದು, ಮತ್ತೂ ನಾನು ಈಗ ಕೃತಕೃತ್ಯನಾದೆನೆಂದು ನುಡಿಯುತ ಆ ಅಶ್ವಕ್ಕೆ ಪ್ರಣಾಮವಂಗೈದು ಅಶ್ವನೀದೇವತಾಕವಾದ ಸೂಕ್ತಂಗಳಿಂದ ಸ್ತುತಿಸುತ್ತ ತನ್ನ ಹಸ್ತದಿಂದಾಅಶ್ವರತ್ನವಂ ತಟ್ಟಲು, ಆಗ ರಾಯನ ಹಸ್ತಸ್ಪರ್ಶದಿಂದಾಅಶ್ವವು ದೇವೇಂದ್ರನೇ ಇವನೆಂದುತಿಳಿದು ಆನಂದದಿಂ ಹೇಷಾ

ರವಮಾಡುತ್ತ ರಾಜೇಂದ್ರನ ವಶವಾಗಲು, ಆಗ ರಾಜೇಂದ್ರನು ಕುಸುಮಲತೆಯೊಡಗೂಡಿ ಆ ಅಶ್ವದಮೇಲೆ ಕುಳಿತು ವಜ್ರ[illegible]ಂತೆರಳಿ ಆಕಾಶದೊಳ್ ಬರುತ ಅನೇಕ ಪರ್ವತಂಗಳಂ ಅಲ್ಲಲ್ಲಿರುವ ದೇವಜಾತಿ ಸ್ತ್ರೀ ಪುರುಷರಂ ಮತ್ತೂ ವಿಚಿತ್ರವಸ್ತುಗಳಂ ಕುಸುಮಲತೆಗೆ ತೋರಿಸುತ ನಾನಾದೇಶಂಗಳಂ ದಾಂಟಿ ವೇಗದಿಂ ಕಳಿಂಗಪಟ್ಟಣದ ಸಮೀಪದಲ್ಲಿರುವ ತನ್ನ ಕಟಕವಂ ಸೇರಿ ತನಗೆ ಮುಖ್ಯವಾದ ಪಚ್ಚೆಯ ಗುಡಾರದ ಬಳಪಾರ್ಶ್ವದೊಳ್ ಇಳಿದು ಕುಸುಮಲತೆಯುಂ ಅವಳ ಕೆಳದಿಯರುಂ ಕೂಡ ಒಳಗುಡಾರಕ್ಕೆ ಕಳುಹಿ ತಾನು ಓಲಗದ ಪಟಮಂದಿರಕ್ಕೆ ಬಂದು ರತ್ನಪೀಠದೊಳ್ ಕುಳಿತು ಅಲ್ಲಿ ಕಾದಿರ್ದ ವೀರಸೇನ ಮೊದಲಾದ ಸೇನಾಪತಿಗಳಂ ಕರೆದು ಕುಶಲವಂ ಕೇಳಿ, ಬಳಿಕ ಸಾಭಿಪ್ರಾಯನಾಗಿ ಸುಮತಿಯಂ ನೋಡಲು, ಆಗಲಾಮಂತ್ರಿಯು ರಾಜೇಂದ್ರನ ಪ್ರಭಾವನಂ ಸಾಹಸವಂ ಮತ್ತೂ ಧೈರ್ಯ ಮೊದಲಾದ ಗುಣಂಗಳೆಲ್ಲವಂ ವಿಸ್ತಾರವಾಗಿ ಹೇಳುತ ಅಶ್ವರತ್ನ ಮೊದಲಾದ್ದರ ಸಮಾಚಾರಂಗಳೆಲ್ಲವಂ ತಿಳುಹಿಸಲು, ಅವಂ ಕೇಳಿ ಅಧಿಕಾರಿಜನಂಗಳೆಲ್ಲರೂ ಸಂತೋಷಪಡುತ ಕೈಗಾಣಿಕೆಗಳಂ ಒಪ್ಪಿಸುತಲಿರುವ ಸಮಯದೊಳ್ ರಾಜಾಜ್ಞೆಯಿಂದ ಕೆಲವರು ಭಟರು ಸಾವಿರಾರು ಫಿರಂಗಿಗಳಂ ಹಾರಿಸಲು, ಆ ಶಬ್ದವಂ ಕೇಳಿದ ಕಳಿಂಗಪುರದ ಜನಂಗಳೆಲ್ಲ ನಮ್ಮ ಸುಗಂಧಮಹಾರಾಜೇಂದ್ರನು ಅಶ್ವಪಣವಂ ಸಾಧಿಸಿಕೊಂಡು ಬಂದಿರುವನೆಂದು ನಿಶ್ಚೈಸಲಾಗ ಆರಟ್ಟದೇಶಾಧಿಪತಿ ಕುಸುಮಧ್ವಜರಾಯ ಮೊದಲಾದ ಅರಸುಗಳು ಕಳಿಂಗ ದೇಶಾಧಿಪತಿಯಾದ ವಿಜಯವರ್ಮರಾಯನಂ ಮುಂದುಮಾಡಿಕೊಂಡು ಅಶ್ವರತ್ನವಂ ನೋಡಬೇಕೆಂದು ಬಂದು ಅಲ್ಲಿಯೇ ಸುಗಂಧರಾಜೇಂದ್ರನ ದರ್ಶನವಂ ಗೈದು ತಾವು ಅವನಿಂ ಸನ್ಮಾನವಂ ಪಡೆದು ಲೋಕಾಭಿರಾಮವಾದ ಮಾತುಗಳನ್ನಾಡುತ ಎಲೈ ರಾಜೇಂದ್ರನೇ! ತಾವು ತಂದಿರುವ ದಿವ್ಯಾಶ್ವವಂ ನೋಡಬೇಕೆಂದು ಬಂದಿರುವೆವೆಂದು ನುಡಿಯಲಾಗ ರಾಜೇಂದ್ರನು ದೇಶಾಧಿಪತಿಗಳ ಎದುರಾಗಿ ಅಶ್ವರತ್ನವಂ ತರಿಸಿ ನಿಲ್ಲಿಸಲು, ಅದನ್ನೋಡಿ ಆ ಅರಸುಗಳೆಲ್ಲರೂ ಅಚ್ಚಗೊಂಡಿರಲು ಆ ಸಮಯದೊಳ್ ಆರಟ್ಟದೇಶಾಧಿಪತಿಯಾದ ಕುಸುಮಧ್ವಜರಾಯನು ಅಶ್ವರತ್ನವನ್ನೋಡಿ ಈ ಅಶ್ವವು ತನ್ನ ಸಮೀಪದೊಳಿದ್ದದೆಂದ್ದರಿ

ತೆ ಬಳಿಕ ತನ್ನ ಮಗಳಂ ನೆನೆದು ಕಂಬನಿಯಂ ತುಂಬಲು ಸುಗಂಧರಾಜೇಂ ದ್ರನು ಅದಂ ಕಂಡು ಸುಮತಿಯು ಮುಖವನ್ನೀಕ್ಷಿಸಿ ಸಂಜ್ಞೆಯಂ ಮಾಡಲು, ಆಗಲಾ ಸುಮತಿಯು ಎಲೈ ಕುಸುಮಧ್ವಜರಾಯನೇ! ಈಗ ಎಲ್ಲರೂ ಸಂ ತೋಷವಂ ಪಡುವರು. ನೀನು ಮಾತ್ರ ಚಿಂತೆಯಂ ಗೊಂಡಿರುವುದಕ್ಕೆ ಕಾರಣ ವೇನೆಂದು ಕೇಳೆ ಆ ರಾಯನು ಎಲೈ ಸುಮತಿಯೇ! ಒಬ್ಬ ರಾಕ್ಷಸನು ಈ ಅಶ್ವದೊಂದೊಡಗೂಡಿ ನನ್ನ ಮಗಳಾದ ಕುಸುಮಲತೆಯಂ ಅಪಹರಿಸಿಕೊಂಡು ಪೋದನು. ಅದೇ ಅಶ್ವವು ಈ ಮಹಾರಾಜೇಂದ್ರಂಗೆ ವಶವಾಗಿರುವುದರಿಂದ ಸಂತೋಷಪಡುವೆನು ನನ್ನ ಮಗಳಾದ ಕುಸುಮಲತೆಯು ಮಾತ್ರ ಏನಾದಳೋ? ಎಂದು ಚಿಂತಿಸುವೆನಲ್ಲದೆ ಮತ್ತೇನು ನಿಮಿತ್ತವೂ ಇಲ್ಲವೆಂದು ಹೇಳಲು, ಸುಮತಿಯು ಅಲೆಂಕೇಳ್, ನಿಮ್ಮ ಪುತ್ರಿಯಾದ ಕುಸುಮಲತಾದೇವಿಯು ನಮ್ಮ ಸುಗಂಧರಾಜೇಂದ್ರಂಗೆ ಅರ್ಧಾಂಗಿಯಾಗಿರುವಳೆಂದು ನುಡಿದು ಸಮಾ ಧಾನಗೊಳಿಸಿ, ರಾಜೇಂದ್ರನ ಸಂಜ್ಞಾರೂಪವಾದ ಆಜ್ಞೆಯಿಂದ ಆ ರಟ್ಟಪತಿ ಯಂ ಅಂತಃಪುರದವರ ಗುಡಾರಕ್ಕೆ ಕರೆದುಕೊಂಡು ಪೋಗಲಾಗ ಕುಸುಮ ಧ್ವಜರಾಯನು ತನ್ನ ಮಗಳನ್ನೀಕ್ಷಿಸಿ ಆಗಲೇ ಪುಟ್ಟಿಬಂದಳೋ ಎಂಬಂತೆ ತಿಳಿದು ಸಂತೋಷವಂ ಮಬ್ಬಿ ಅಡ್ಡಬೀಳುತಲಿರುವ ತನ್ನ ಮಗಳಂ ಕುರಿತು ಎಲೈ ಮಗಳೇ! ನೀನು ದೀರ್ಘಸುಮಂಗಲಿಯಾಗಿ ಸುಪುತ್ರವತಿಯಾಗೆಂದು ಹರಸಿ ಸುಗಂಧಮಹಾರಾಜೇಂದ್ರನ ಪ್ರಭಾವವಂ ತನ್ನ ಪುಣ್ಯವಂ ಕೂಡ ಬಾರಿಬಾರಿಗು ಇವ್ರು, ಇಂದಿನಿಂದ ಈ ಚಿಂತೆಯಂ ಬಿಟ್ಟು ಅತ್ಯಂತ ಸಂತೋಷದಿಂದಿರಬೇಕೆಂದು ಹೇಳುತ ರಾಜೇಂದ್ರನೊಡನೆ ಭೋಜನವಂಗೈದು ಆ ದಿನದಲ್ಲಿಯೇ ಸುಖ ದಿಂದಿರಲು, ಆ ಮಾರನೇದಿನ ಕರ್ನಾಟಕಮಂಡಲೇಶ್ವರನು ಸಕಲ ವಿಭವದಿಂ ದೊಡಗೂಡಿ ಅಲಂಕರಿಸಿರುವ ಅಶ್ವರತ್ನವನ್ನೇರಿ ಕಳಿಂಗಪುರವಂ ಪ್ರವೇಶಿಸಿ ರಾಜಬೀದಿಯೊಳ್ ಕುದುರೆಯಂ ಕುಣಿಸುತ ನೋಡುವರ ಕಣ್ಣುಗಳು ಮನಂಗಳು ಕೂಡಾ ದಣಿವಂತೆ ಸಂತೋಷಗೊಳಿಸುತ ಬರುತ್ತಿರಲು, ಕಳಿಂ ಗರಾಯನು ಆ ಸಮಾಚಾರವಂ ತಿಳಿದು ಎದುರ್ಗೊಂಡು ಬಂದು ಮರ್ಯಾದೆ ಯಿಂದ ಕರೆತಂದು ಸೌಗಂಧಿಕಾದೇವಿ ಇರುವ ಸಭಾಮಂಟಪದ ಮುಂಭಾಗ ದೊಳ್ ಕುಳ್ಳಿರಿಸಿ ಪರಿಪರಿ ಉಪಚಾರಂಗಳಂ ಮಾಡುತ್ತಿರಲು; ಆಗ ರಾಜ್ಞಾ

ಜ್ಞೆಯಿಂದ ಸುಮತಿಯು ಚಿತ್ರಲೇಖೆಯುಂಕರೆದು ನಿನ್ನ ದೇವಿಯು ಹೇಳಿದಂ ತೆ ನಮ್ಮ ರಾಜೇಂದ್ರನು ಅಶ್ವರತ್ನವಂ ತಂದಿರುವನು. ಇದು ನೀವುಮಾಡುವ ನೋಂಪಿಗೆ ಯೋಗ್ಯವಹುದೋ? ಅಲ್ಲವೋ? ಪರೀಕ್ಷಿಸಬೇಕೆಂದು ಸೌಗಂಧಿ ಕಾದೇವಿಗೆ ಬಿನ್ನಹಿಸೆಂದು ಹೇಳಲಾಚಿತ್ರಲೇಖೆಯು ಅಶ್ವರತ್ನವನ್ನೋಡಿ ಅತ್ಯಾನಂದಭರಿತಳಾಗಿ ರಾಜಪುತ್ರಿಯ ಸಮೀಪವನ್ನೈದಿ ಮಹಾರಾಜೇಂದ್ರನು ಸುಮತಿಯ ಮುಖದಿಂದ ಅಪ್ಪಣೆಯಿತ್ತ ಮಾತುಗಳಂ ಬಿನ್ನವಿಸಲು, ಸೌ ಗಂಧಿಕಾ ದೇವಿಯು ಆ ಮಾತುಗಳಂ ಕೇಳಿ, ತಲೆಯಂಗಿಕೊಂಡು ಪ್ರಾಣವಂಕೇ ಳುವದಕ್ಕೆ ನಾವು ಯೋಗ್ಯಳೇ ಹೊರತು ಪರೀಕ್ಷೆಯಂಮಾಡುವದಕ್ಕೆ ಸಮ ರ್ಥಳಲ್ಲವೆಂದು ವಿನಯೋಕ್ತಿಗಳಂ ಪೇಳುತ ಅಶ್ವರತ್ನವನ್ನೋಡಿ ಆನಂದಪ ಡುತ ಅನೇಕಾಭರಣಂಗಳಂ ವಿಚಿತ್ರವಸ್ತ್ರಂಗಳಂ ತಾನಾಗಿ ಕಟ್ಟಿರುವ ವಿಚಿ ತ್ರಪುಷ್ಪಮಾಲಿಕೆಗಳಂ ಕಪ್ಪುರವೀಳ್ಯ ಮುಂತಾದ ಶುಭವಸ್ತುಗಳಂ ಚಿತ್ರಲೇ ಖೆಯ ಹಸ್ತದಿಂದ ಕೈಗಾಣಿಕೆಯಂತೆ ಸಮರ್ಪಿಸಿ ಪ್ರಣಾಮವಂಗೈದೆನು ನನ್ನಿಂದ ಬಹು ಶ್ರಮವಾಯಿತು ಈ ಅಪರಾಧವಂ ಕ್ಷಮಿಸಬೇಕೆಂದು ರಾಜೇಂ ದ್ರನು ಕೇಳುವಂತೆ ತನ್ನ ಸಖಿಗೆ ಅಪ್ಪಣೆಯನ್ನಿತ್ತು ಕಳುಹಿಸಲಾಚಿತ್ರಲೇಖೆ ಯು ದೇವಿಯ ಆಜ್ಞಾನುಸಾರವಾಗಿ ರಾಜೇಂದ್ರಂಗೆ ಕೈಗಾಣಿಕೆಯಂ ಒಪ್ಪಿ ಸಿ ದೇವಿಯು ಪೇಳಿದ ಮಾತುಗಳಂ ವಿನಯದಿಂ ವಿಸ್ತಾರವಾಗಿ ಬಿನ್ನವಿಸಲಾ ಗ ರಾಜೇಂದ್ರನು ಅಶ್ವರತ್ನ ಬಳಿಕ ಚಿತ್ರಲೇಖೆಯು ರಾಜೇಂದ್ರನ ಆಜ್ಞಾ ನುಸಾರವಾಗಿ ವಿಚಿತ್ರವಾದ ಆ ಅಶ್ವರತ್ನವಂ ತನ್ನ ಒಡತಿಯಾದ ಸೌಗಂಧಿ ಕಾದೇವಿಯ ಸಮೀಪವನ್ನೈದಿಸಲಾಗ ಸೌಗಂಧಿಕಾದೇವಿಯು ತಾನುಮಾ ಡುವ ನೋಂಪಿಗೆ ಯೋಗ್ಯವಾದ ಅಶ್ವರತ್ನವನ್ನೋಡಿ ಸುಗಂಧಮಹಾರಾಜೇಂ ದ್ರನ ಪರಾಕ್ರಮವಂ ಬಾರಿಬಾರಿಗು ಬಣ್ಣಿಸುತನಿಮ್ಮ ದೇವಿಯು ಸಮೀಪ ಕ್ಕೆ ತೆಗದುಕೊಂಡು ಪೋಗೆಂದು ನಿರೂಪಿಸಿ ಕಳುಹಲು, ಚಿತ್ರಲೇಖಾಮಾ ಲತೀ ಮೊದಲಾದ ಸಖಿಯರಿಂದೊಡಗೂಡಿ ಅಶ್ವರತ್ನವಂ ತನ್ನ ಅಂತಃಪುರದ ಉಪವನದೊಳ್ಕಟ್ಟಿಸಿ ಅತ್ಯಂತ ಭಕ್ತಿಯುಕ್ತಳಾಗಿ ಪೂಜಿಸುತ್ತಿರಲು; ಇತ್ತ ಲಾ ಸುಗಂಧರಾಜೇಂದ್ರನು ಸಂತೋಷಭರಿತನಾಗಿ ಕಳಿಂಗಪತಿಯ ಅರಮನೆ ಯಿಂದ ಹೊರಟುಬರುತ ಕುಸುಮಧ್ವಜರಾಜನ ಬಿಡಿದಿಯನ್ನೈದಿ ತನ್ನ ಕಟ

ಕದಿಂ ಕಸುಮಲತೆಯಂಕರೆಸಿ ಅವಳೊಡನೆ ಲೀಲಾವಿಲಾಸದಿಂ ಸುಖದಿಂದಿರುತ್ತಿರ್ದ ನೆಂಬಲ್ಲಿಗೆ * * *

ಗದ್ಯ॥ ಕುಂಡಲಿಶಯಖಂಡಪರಶುಪುರಂದರೀಕ್ಷಭವಾಖಂಡಲಪ್ರಮುಖನಿಖಿಲಸುರವರಪರಿಷ್ಟುತ ಪರಿಣತಪ್ರಚಂಡಬಲಚಂಡಮುಂಡಮಾರ್ತಾಂಡನಿಪುಣಕೋದಂಡಕಾಂಡಮಂಡಲಾಗ್ರಧರ ಭುಜಾದಂಡಪರಿಮಂಡಿತ ಚಾಮುಂಡಿ ಕಟಾಕ್ಷವೀಕ್ಷಣಪ್ರವರ್ತಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪಸಕಲಕಲಾಸಾಮ್ರಾಜ್ಯಸರ್ವಂಕಷ ಚತುರ್ವಿಧಸರಸ ಕವಿತಾನಿಸ್ಸಹಾಯನಿರ್ಮಾಣಧೌರೇಯಘಟಿಕಾಶತಗ್ರಂಥದಿನದಿನಪ್ರಬಂಧನಿಬಂಧನಧುರ [illegible] ತ್ರೇಯಸಗೋತ್ರಾಶ್ವಲಾಯನಸೂತ್ರಸುಚರಿತ್ರ ಚಾಮರ [illegible] ಪುತ್ರನರಪತಿಬಿರುದಮಹೀಶೂರಪುರವರಾಧೀಶ ಶ್ರೀ ಕೃಷ್ಣರಾಜಒಡೆಯರವರಿಂ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನವೀನಕೃತಿಯೊಳ್ ಸುಗಂಧರಾಜೇಂದ್ರನು ಅಶ್ವಪಣವಂ ಸಾಧಿಸಿದ ನೆಂಬ ಹದಿನೆಂಟನೇ ಆಶ್ವಾಸ ನಿರೂಪಣಕ್ಕೆ ಮಂಗಳಮಹಾ ಶ್ರೀ * *

ಹದಿನೆಂಟನೇ ಅಧ್ಯಾಯ ಸಂಪೂರ್ಣ.



# ಷಟ್ತ್ರಿಂಶತ್ತಮ ಆಶ್ವಾಸ.

## ಚಿಂತಾಮಣಿ ಕಥಾಪ್ರಾರಂಭ.

---

ಅನಂತರದಲ್ಲಿ ಸುಗಂಧರಾಜೇಂದ್ರನು ವಿಜಾತೀಯಮಾದ ಅಶ್ವರತ್ನ ಮಂ ಸೌಗಂಧಿಕಾದೇವಿಯು ವರಮಹಾಲಕ್ಷ್ಮೀವ್ರತಕ್ಕೋಸುಗವಾಗಿ ತಂದಿತ್ತ ಲೋಕದೊಳ್ ಪ್ರಖ್ಯಾತಿಯಂ ಪಡೆದ ಆರಟ್ಟದೇಶಾಧಿಪತಿಯಾದ ಕುಸುಮಧ್ವಜರಾಯನ ಸನ್ನಿಧಿಯೊಳ್ ಕಾಣಿಕೆಯೊಡನೆ ಸಮರ್ಪಿಸಿ ಪ್ರಯಾಣಂ ಗೈದು ಆ ಮರುದಿನ ಉದಯದೊಳೆದ್ದು ದರ್ಪಣಮೊದಲಾದ ಶುಭ್ರವಸ್ತುಗಳ ದರ್ಶನವಂಗೈದು ಬಳಿಕ ಮುಖಮಜ್ಜನವಂಗೈಯುತ್ತ ಸುಮತಿ ವೀರಸೇನ ಮೊದಲಾದ ಸಾಮಾಜಿಕರಿಂದೊಡಗೂಡಿ ಚಾರಪರ್ಣನು ಬಿನ್ನವಿಸುವ ದೇಶ ದೇಶದ ವೃತ್ತಾಂತಂಗಳೆಲ್ಲಮಂ ಲಾಲಿಸುತ್ತ ಅಲ್ಲಲ್ಲಿಯ ಅರಸುಗಳು ಬಿನ್ನವಿ ಸುವ ಲೇಖನಂಗಳಂ ರಾಯಸದವರಿಂ ಓದಿಸಿ ಕೇಳುತ್ತ ಪ್ರತ್ಯುತ್ತರಂಗಳಂ ಅವುಗಳಿಗೆ ನಿರೂಪಿಸುತ್ತ ಅಲ್ಲಿಂದ ಚಿತ್ರಿತ ಮಜ್ಜನಮಂದಿರಮಂ ಪ್ರವೇಶಿಸಿ ಪನ್ನೀರಿನಿಂದ ಜಳಕನಂ ಮಾಡಿ ಸಾಂಗವಾಗಿ ಆಹ್ನಿಕಮಂ ನೆರವೇರಿಸಿ ಫಣೆ ಯೊಳ್ ಕಸ್ತೂರಿ ತಿಲಕವನ್ನಿಟ್ಟು ಆರಟ್ಟದೇಶಾಧಿಪತಿ ಮೊದಲಾದ ರಾಯರು ಗಳೊಡಗೂಡಿ ಭೋಜನವಂಗೈದು ವಿಚಿತ್ರವಸ್ತ್ರಾಭರಣಂಗಳಿಂದ ಅಲಂ ಕೃತನಾಗಿ ಕರ್ಪೂರವೀಳ್ಯವಂ ಸವಿಯುತ್ತ ಬಾಗಿಲಲ್ಲಿ ತಂದು ನಿಲ್ಲಿಸಿರುವ ಗಜ ರಥವಂ ಕುಸುಮಧ್ವಜರಾಯನೊಡಗೂಡಿ ಏರಿ ರಾಜಬೀದಿಯೊಳ್ ಎಂದಿ ನಂತೆ ಬರುವಾಗ ಇಂದ್ರನೂ ಉಪೇಂದ್ರನೂ ಕೂಡಿ ಕುಳಿತಿರುವ ರಥದ ಕೆಲಬ ಲದೊಳ್ ಅಶ್ವಿನೀದೇವತೆಗಳು ಬರುವಂತೆ ಸುಮತಿ ವೀರಸೇನರೀರ್ವರು ಉತ್ತಮಾಶ್ವಗಳನ್ನೇರಿ ರಾಜೇಂದ್ರನ ರಥದ ಎಡಬಲದೊಳ್ ಬರುತ್ತಿರಲು;

ಈಸಮಾಚಾರವಂ ಕೇಳಿ ಕಳಿಂಗಭೂಪತಿಯು ತ್ವರೆಯಿಂದ ಎದಿರ್ಗೊಂಡು ಬಂದು ನಿಜಮಂದಿರದ ಸಮೀಪದೊಳ್ ಗಜರಥವಿಂ ಇಳಿದ ಕರ್ನಾಟನರಪತಿ

ಯಂ ಕೈಪಿಡಿದು ಸ್ವಯಂವರಸಭಾಮಂಟಪಕ್ಕೆ ಕರೆತಂದು ಸುಧರ್ಮಸಭೆಯೊಳ್ ಇಂದ್ರನಂತೆ ಸುಗಂಧರಾಜೇಂದ್ರನಂ ಸ್ವಯಂವರಸಭೆಯಲ್ಲಿರುವ ಸುವರ್ಣ ಸಿಂಹಾಸನದೊಳ್ ಕುಳ್ಳಿರಿಸಿ ತಾನು ಕುಸುಮಧ್ವಜರಾಯನೊಡಗೂಡಿ ಒಂದೇಪೀಠದಲ್ಲಿ ಕುಳಿತು ಕುಶಲಗಳಂಕೇಳುತ ಎಲೈಮಿತ್ರನೇ! ನಿನ್ನಕುಮಾರಿಯಾದ ಕುಸುಮಲತೆಯಂ ಈ ಸುಕುಮಾರನಾದ ಸುಗಂಧರಾಜೇಂದ್ರನು ಸೆರೆಯಂಬಿಡಿಸಿ ತಂದನೆಂದು ಕೇಳಿ ಎನ್ನಮನಸ್ಸಿಗೆ ಆನಂದಮಾಯಿತು, ಈರ್ವಪುತ್ರಿಯರಂ ಒಂದೇಕಾಲದೊಳ್ ಈ ಸುಗಂಧರಾಜೇಂದ್ರಂಗೆ ವಿವಾಹವಂಗೈಸಿ ನಾವೀರ್ವರೂ ನೇತ್ರಾನಂದವಂಪಡೆಯುವಾ ಎಂದು ಪೇಳಲಾಮಾತಂಕೇಳಿ ಆರಟ್ಟಭೂಪತಿಯಾದ ಕುಸುಮಧ್ವಜನು ಎಲೈ ವಿಜಯವರ್ಮನೇ !ಕೇಳು, ನಿನ್ನಪುತ್ರಿಯಾದ ಸೌಗಂಧಿಕಾದೇವಿಯು ಪುಣ್ಯಪ್ರಭಾವದಿಂದಲೂ ಆ ಪುತ್ರಿಯು ಅಪೇಕ್ಷಿಸಿದ ಪಣದ ದೆಶೆಯಿಂದಲೂ ಈ ಮಹಾನುಭಾವನ ಪರಾಕ್ರಮದಿಂದಲೂ ನನ್ನ ಮಗಳಂ ನಾನು ಕಾಣುವಂತಾಯಿತು. ನನ್ನ ಪುತ್ರಿಯು ನಿನಗೆ ಪುತ್ರಿಯೇಸರಿ, ಮತ್ತು ದೇಹಸಂಬಂಧದಲ್ಲಿ ನನ್ನ ಪತ್ನಿಗೆ ನಿನ್ನ ಧರ್ಮ ಪತ್ನಿಯಾದ ಸುಲೋಚನಾದೇವಿಯು ಒಡಹುಟ್ಟಿದವಳಾದ್ದರಿಂದ ಈ ಕನ್ಯಾರತ್ನಂಗಳಂ ನೀನೇ ಧಾರೆಯನ್ನೆರೆಯಬಹುದೆಂದುಮಾತನಾಡುತ್ತ ತಮ್ಮೊಳ್ತಾವೇ ಸಂತೋಷವಂಪಡುತ್ತಿರಲು;

ಆಸಮಯದೊಳ್ಉತ್ತರಭಾಗದಲ್ಲಿಕಟ್ಟಿರುವ ಕಾಂಡಪಟದಮರೆಯೊಳ್ವಿಚಿತ್ರವಾದ ಪೀಠದಲ್ಲಿ ಕುಳಿತಿರುವ ಸೌಗಂಧಿಕಾದೇವಿಯು ಪಣತ್ರಯವಂಸಾಧಿಸಿದ ಸುಗಂಧರಾಜೇಂದ್ರನಂ ಸಖಿಯ ಮುಖದಿಂದ ನಾನಾವಿಧಉಪಚಾರಂಗಳಿಂದ ಪೂಜಿಸಿ ಮತ್ತೂ ಆತನ ಶೌರ್ಯಧೈರ್ಯಪರಾಕ್ರಮಸಾಹಸಸತ್ವಂಗಳಂಮನದಂದು ಹರ್ಷಪರವಶಳಾಗಿ ಲಜ್ಜಾಭಯಭರಿತಳಾಗಿ ಸರ್ವಾವಯವ ಸುಂದರನನ್ನೋಡುವೆನೆಂಬ ಕುತೂಹಲದಿಂ ಕಾಂಡಪಟದ ಜಾಲಂಧರದಲ್ಲಿ ಎದುರಾಗಿ ಮುಕುಂದನಂತೆ ಮೆರೆವಸುಂದರಾಂಗನಾದ ಸುಗಂಧರಾಜೇಂದ್ರನಂ ತನ್ನಮನದಣಿವಂತೆ ನೋಡಿ ಮೈಮರೆದು ಮನಕರಗಿ ಕಂಗೆಟ್ಟು ಮತ್ತೂ ಮಿಕ್ಕಾದಪಣಂಗಳೂ ಈತನಿಂದಲೇ ಸಾಧ್ಯಂಗಳಾಗಬೇಕೆಂದು ಇಷ್ಟದೇವತಾ ಪ್ರಾರ್ಥನೆಯಂಮಾಡುತ ನಿಂತುಕೊಂಡಿರುವತನ್ನಂ ಪಾರ್ಶ್ವ

ದೊಳಿಟ್ಟಿರುವ ಕನ್ನಡಿಯೊಳ್ಕಂಡು ವಿಸ್ಮಿತನಾಗಿ ಯುವೆ ಯಿಕ್ಕದೆನೋ ಡುತ್ತಿರುವ ಸುಕುಮಾರನ ಮನೋಭಾವವಂತಿಳಿದು ಸಮೀಪದಲ್ಲಿರುವ ಸಖಿಯು ಮುಖವಂನೋಡಿ ಕನ್ನಡಿಯಮುಸುಕಂ ಮರೆಮಾಡುವಂತೆಸನ್ನೆ ಯುಂಮಾಡಿ ದಿವ್ಯ ಸುಗಂಧಪುಷ್ಪಮಾಲಿಕೆಗಳಂ ಕಪ್ಪುರವೀಳ್ಯಮಂಸಹಾ ಒಪ್ಪಿ ಸಿ ವ್ಯಕ್ತವಾಗಿ ಸುಗಂಧರಾಜೇಂದ್ರಂಗೆ ತಿಳಿಯುವಂತೆ ನಿಮಿತ್ತಮಾತ್ರಕ್ಕೆ ಸಖಿಯುಂಕುರಿತು ಅಸಾಧ್ಯವಾದ ಈ ಅಶ್ವರತ್ನವಂಸಾಧಿಸಿ ತಂದು ದಯಪಾಲಿ ಸಿದ್ದಲ್ಲದೆ ನನ್ನತಂಗಿಯಾದ ಕುಸುಲತೆಯ ಶರೆಯುಂಬಿಡಿಸಿ ಕರೆತಂದದ್ದು ಕೋ ಟಿಪಣಂಗಳಂಸಾಧಿಸಿ ದಯಮಾಡಿದಂತಾಯಿತು. ಆದರೂ ನಾನು ಬಾಲ್ಯ ಬುದ್ಧಿಯಿಂದ ವಿಮರ್ಶೆಯುಂಮಾಡದೆ ಕೆಲವು ಪಣಗಂಕುರಿತು ಅವೆಲ್ಲವಂ ತಂದವ ನನ್ನೀವರಿಸುವೆನೆಂದು ಮೊದಲು ಪ್ರತಿಜ್ಞೆಯಂಮಾಡಿರುವೆನಾದಕಾ ರಣ ಈಗ ನಿತ್ಯಗೌರಿಯ ವ್ರತದೊಳ್ ಚಿನ್ನದ ಬಾಗಿನಗಳಂ ಕೊಡಬೇಕಾ ಗಿರುವದ್ದರಿಂದ ದಿನದಿನದೊಳ್ ಹನ್ನೆರಡು ಭಾರ ಭಂಗಾರವಂ ಮತ್ತು ಬೇಡಿದ ಭೂಷಣಂಗಳಂ ಕೂಡ ಕೊಡುವ ಒಂದು ರತ್ನವಂ ತಂದು ದಯ ಪಾಲಿಸಬೇಕೆಂದು ನುಡಿದು ಮತ್ತು ನಮ್ಮ ತಂದೆಯಾದ ವಿಜಯವರ್ಮರಾ ಯನು ಈ ವ್ರತಕ್ಕೋಸುಗ ಬೇಕಾದಷ್ಟು ದ್ರವ್ಯವಂ ಕೊಡುವನು, ಆ ದರೂ ಪತಿ ಸಂಪಾದಿಸಿದ ದ್ರವ್ಯದಿಂದಲೇ ಈ ವ್ರತವಂಮಾಡಬೇಕೆಂಬ ನಿಯ ಮವಿರುವದ್ದರಿಂದ ನನ್ನಲ್ಲಿ ಕರುಣೆಯನ್ನಿಟ್ಟು ಈ ಪಣವಂ ನೆರವೇರಿಸಬೇ ಕೆಂದು ಪ್ರಾರ್ಥಿಸುವ ನನ್ನ ಅಭಿಪ್ರಾಯವಂ ಮಹಾರಾಜೇಂದ್ರಂಗೆ ತಿಳುಹಿಸ ಬೇಕೆಂದು ಮೃದುಮಧುರವಾಗಿ ನುಡಿಯುತ್ತಲಿರುವ ಸೌಗಂಧಿಕಾದೇವಿಯ ಮಧುರವಾದ ಮಾತುಗಳಂ ಕೇಳಿ ಸುಗಂಧರಾಜೇಂದ್ರನು ಮನದೊಳ್ ಶ್ರೋತ್ರೇಂದ್ರಿಯಂಗಳು ಸಾರ್ಥಕಗಳಾದವು ಮಿಗಿಲಾದ ಇಂದ್ರಿಯಂಗ ಳು ಸಫಲಗಳಾಗುವದಕ್ಕೆ ಜಗನ್ಮಾತೆಯಾದ ಶ್ರೀಚಾಮುಂಡಿಕಾದೇವಿಯ ಕಟಾಕ್ಷಒಂದಲ್ಲದೆ ಮತ್ತೊಂದು ಸಾಧನಾಂತರವಿಲ್ಲವೆಂದು ನಿಶ್ಚೈಸಿ ಬಳಿಕ ಸೌಗಂಧಿಕಾದೇವಿಯು ಸಖಿಯಂ ಕುರಿತು ನಿಮ್ಮ ಅರಸಿಯಿಂದ ಪ್ರಾರ್ಥಿತವಾದ ರತ್ನವು ಸ್ವರ್ಗ ಮರ್ತ್ಯ ಪಾತಾಳಂಗಳಲ್ಲಿ ಎಲ್ಲಿದ್ದರೂ ಸಾಧಿಸಿ ತಂದು ಕೊಡುವೆನು ಸಂಶಯಂಗೊಳ್ಳಬ್ಯಾಡವೆಂದುಪೇಳಿ ಪೊರಮ

ಚಲುಬ್ಧ್ಯಕ್ತನಾಗಿ ಕನ್ನಡಿಯಲ್ಲಿ ಕಂಡ ಕನ್ನೆಯರೂಪಿನಂತೆ ಪರಿಣಮಿಸಿರುವ ಅಂತಃಕರಣಕ್ಕೆ ಏನೂ ತೋರದಿರಲು. ಬುದ್ಧಿಶಾಲಿಯಾದ ಸುಗಂಧರಾಜೇಂದ್ರನು ವಿವೇಕವೆಂಬ ಸಾಧನದಿಂದ ಮನೋವಿಕಾರವಂ ತೊಳೆದು ಮುಂದೆ ಬಹು ಕಾರ್ಯವಿರುವದೆಂದು ಅಲ್ಲಿಂದ ಹೊರವಟ್ಟು ತಾನಿರುವ ಬಿಡಾರಕ್ಕೆ ಬಂದು ಮಣಿಮಂಚದೊಳ್ಕುಳಿತು ಬಾಲೆಯಮಣಿಯಾದ ಸೌಗಂಧಿಕಾದೇವಿಯು ಬೇಡಿದಮಣಿಯು ಮೊದಲು ಸಾಧಿಸಿಕೊಂಡುಬಂದ ಪಣದಂತೆ ಸಾಧ್ಯವಾಗುವದು ಅಶಕ್ಯವೆಂದು ಚಿಂತಿಸುತ್ತಮಾರಗಾಣದೆ ಚಿತ್ರಾರ್ಪಿತನಂತೆ ಮೌನದಿಂದಿರುವರಾಜೇಂದ್ರನಂನೋಡಿ ಸುಮತಿಯು ವಿದ್ಯಾಸಾಗರನು ತಮ್ಮೊಳ್ ತಾವು ಮಾತನಾಡುತ ರಾಜೇಂದ್ರನ ಮನಸ್ಸು ಎಂದಿನಂತೆ ಕಾಣುವದಿಲ್ಲ ಇಂದು ಜಗನ್ಮೋಹಿನಿಯಾದ ಸೌಗಂಧಿಕಾದೇವಿಯು ದುರ್ಲಭವಾದ ವಸ್ತು ಒಂದು ಪಣವಂಕೇಳಿರುವಂತೆ ಕಾಣುತ್ತಲಿದೆ ಪ್ರಶ್ನೆಯಂಮಾಡಿ ತಿಳಿಯುವಾ ಎಂದು ಈರ್ವರೂ ರಾಜೇಂದ್ರನಿದ್ದೆಡೆಗೆ ಬಂದು ಎಲೈ ರಾಜೇಂದ್ರನೆ ! ನೀನು ಚಿಂತಿಸುವದಕ್ಕೆ ಕಾರಣವೇನು ನಿನಗೆ ಅಸಾಧ್ಯವಾದ ಕಾರ್ಯವು ಮೂರುಲೋಕದಲ್ಲಿಯು ಇಲ್ಲ, ಅಥವಾ ಇದ್ದಾಗ್ಯೂ ಅದಂ ಸಾಧಿಸಿ ಕೊಡುವದಕ್ಕೆ ಜಗದೀಶ್ವರಿಯು ಬದ್ಧಕಂಕಣಳಾಗಿರುವಳು, ಅದಂ ನೀನು ಮರತೆಯಾ ಇದುಮಲ್ಲದೆ ಲೋಕಪಾಲಕರೆಲ್ಲರೂ ನಿನಗೆ ಅಂಜಿ ನಡೆಯುವರು, ವಿಜಯಲಕ್ಷ್ಮಿಯು ನಿನ್ನ ಖಡ್ಗಾಗ್ರದಲ್ಲಿ ಸ್ಥಿರವಾಗಿ ನೆಲಸಿಹಳು ಇಷ್ಟು ಸಾಧನವಿರುವಲ್ಲಿ ವೃಥಾ ಚಿಂತಿಸುವದ್ಯಾಕೆ ಚಿತ್ತದಲ್ಲಿರುವ ಅರ್ಥವಂ ಎಮ್ಮೊಡನೆ ಹೇಳಬೇಕೆನಲು, ಈ ವಾಕ್ಯವಂಕೇಳಿ ರಾಜೇಂದ್ರನು ಸಂಭ್ರಮಯುಕ್ತನಾಗಿ ಗುರುವಾದ ವಿದ್ಯಾಸಾಗರನಿಗಭಿನಂದಿಸಿ ಕುಳ್ಳಿರವೇಕೆಂದು ನುಡಿದು ಪೀಠವನ್ನಿತ್ತು ಸುಮತಿಯಂ ಕರವಿಡಿದು ಕುಳ್ಳಿರಿಸಿ ತಾನು ಸೌಗಂಧಿಕಾದೇವಿಯ ಮನೆಗೆ ಹೋಗಿದ್ದಪರಿಯಂ ಅಲ್ಲಿ ನಡೆದವೃತ್ತಾಂತವಂ ಮತ್ತು ಅವಳು ಕೇಳಿದ ಮಣಿಪ್ರಭಾವವಂ ಸವಿಸ್ತಾರವಾಗಿ ಪೇಳಿ ಮೊದಲು ತಂದಿತ್ತ ಪಣಂಗಳು ಚೈತನ್ಯರೂಪದಿಂ ವ್ಯಕ್ತವಾಗಿರುವದಾದಕಾರಣ ನೆಲೆಯುತ್ತಿಳಿದು ಸಾಹಸವಂಮಾಡಿಸಾಧಿಸಿ ತಂದಿತ್ತೆನು, ಈಗಲಾದರೂ ಮೊದಲು ಹೇಳಿದ ಗುಣಂಗ

ಳಿಂದ ಯುಕ್ತವಾದ ನಾರಿಯು ದುರ್ಲಭವು ಅಥವಾ ಲಂಭಿಸ್ಪವೇನು. ಇನ್ನಿತರ ಪ್ರಾಣಿಗಳಿಗೆ ದೊರಕುವದು ದುರ್ಲಭವು. ಅಥವಾ ದೊರಕಿದರೂ ಪ್ರತಿದಿನವನಾಹರಿಸುವದು ಶಕ್ತ್ಯ ದುರ್ಲಭವು ಇಂತಿರುವಲ್ಲಿ ರಾಜಕನ್ಯೆಯು ಆಪೇಕ್ಷಿಸಿದ ಮಣಿಯು ಗೊತ್ತಾಗುವದೆಂತು, ದೊರಕುವದೆಂತು, ಎಂದು ಚಿಂತಿಸುವೆನಲ್ಲದೆ ಮತ್ತೊಂದಿಲ್ಲವೆಂದು ಹೇಳಲಾಮಾತ್ರಂ ಕೇಳಿ ಸುಮತಿಯು ಬಂದೂ ತೋರದೆ ಚಿಂತಿಸುತ್ತಿರಲು, ಆಗ ವಿದ್ಯಾಸಾಗರನು ರಾಜಕುಮಾರನಂ ಕುರಿತು ಎಲೈ ಕ್ಷತ್ರಿಯೋತ್ತಮನೇ! ಕೇಳು ಇಷ್ಟು ಚಿಂತಿಸುವದ್ಯಾಕೆ ಪ್ರಪಂಚದಲ್ಲಿರುವ ನವರತ್ನಂಗಳ ಉತ್ಪತ್ತಿಯಂ ಅದರಲ್ಲಿರುವಭೇದಂಗಳಂ ತನ್ನಿಷ್ಟಗುಣಂಗಳೆಲ್ಲವಂ ವಿಸ್ತಾರವಾಗಿ ಹೇಳುವೆನು, ಅವಂ ಸಾವಧಾನವಾಗಿ ಕೇಳು ನಾನು ನಿರೂಪಿಸುವ ರತ್ನಂಗಳೊಳ್ ಸೌಗಂಧಿಕಾದೇವಿಯು ಕೇಳಿದ ರತ್ನವು ಯಾವದೋ ಅದಂ ನಿಶ್ಚೈಸಿ ಎಲ್ಲಿರುವುದೋ ತಿಳಿದು ಸರ್ವ ಸಾಹಸನಂಮಾಡಿ ತಂದೀಯ ಬಹುದೆನಲಾಮಾತಿಗೆ ರಾಜೇಂದ್ರನು ಬಹಂಬಟ್ಟು ಗುರುವಂ ಕುರಿತು ರತ್ನೋತ್ಪತ್ತಿಯಂ ವಿಸ್ತಾರವಾಗಿ ಹೇಳಬೇಕೆಂದು ಪ್ರಶ್ನೆಯಂಮಾಡಲು;

ಆಗ ಗುರುವಾದ ವಿದ್ಯಾಸಾಗರನು ಸುಗಂಧರಾಜೇಂದ್ರನಂ ಕುರಿತು ಎಲೈ ಅತಿಕುಲಾರಣ್ಯಮಹಾನಲನೆ! ಕೇಳು ಪೂರ್ವದಲ್ಲಿ ಮಹಾಬಲಶಾಲಿಯಾದ ವಲಾಸುರನೆಂಬ ಬ್ರಹ್ಮ ದಾನವೇಂದ್ರನು ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರುಲೋಕಂಗಳಂ ಜಯಿಸಿ ಇಂದ್ರಾದ್ಯಷ್ಟ ದಿಕ್ಪಾಲಕರನ್ನೂ ರಾಜ್ಯಮನನ್ನೈದಿಸಿ ಅಮರಾವತಿಯಂಸಾಧಿಸಿ ಅಲ್ಲಿಯೆ ತ್ರೈಲೋಕ್ಯಾಧಿಪತ್ಯವಂ ಮಾಡುತ ಸುಖದಿಂದಿರುತ್ತಿರಲು, ಆಗಲಾ ದಾನವೇಂದ್ರನಿಂದ ಪರಾಜಿತರಾಗಿ ಮುಂದರಪರ್ವತವಂ ಸೇರಿರುವ ಇಂದ್ರಾದಿಲೋಕಪಾಲಕರೆಲ್ಲರು ದಾನವೇಂದ್ರನು ತನ್ನ ಕುಲವೃದ್ಧಿಯಂ ಮಾಡುವದಕ್ಕೆ ಉದ್ಯುಕ್ತನಾಗಿರುವ ಸಮಾಚಾರವಂ ಚಾರಮುಖದಿಂ ತಿಳಿದು ಚಿಂತಾಯುಕ್ತರಾಗಿ ತಮ್ಮ ಕುಲಗುರುಗಳಾದ ಬೃಹಸ್ಪತ್ಯಾಚಾರ್ಯರಂ ಭಕ್ತಿಯಿಂ ಸ್ಮರಿಸಿ ಬಳಿಕ ಆ ಕ್ಷಣದಲ್ಲಿಯೆ ತೇಜಸ್ಸಮೂಹವೆಲ್ಲ ಬಂದಾಗಿ ಮೂರ್ತಿಗೊಳಿಸಿ ಬಂದಂತೆ ಎದುರಾಗಿ ಬಂದುನಿಂತಿರುವ ತಮ್ಮ ಕುಲಗುರುಗಳಾದ ಬೃಹಸ್ಪತ್ಯಾಚಾರ್ಯರಂ

ಕಂಡು ಪರಮಹರ್ಷಪರವಶರಾಗಿ ಭಕ್ತಿಯಿಂದ ಸಾಷ್ಟಾಂಗ ಪ್ರಣಾಮಮಂ ಮಾಡಿ ನಾನಾವಿಧ ಸ್ತೋತ್ರಂಗಳಿಂ ಗೈಯ್ಯುತ್ತ ಕೈಗಳಂ ಕಟ್ಟಿಕೊಂಡು ಎದುರಾಗಿ ವಿನಯದಿಂ ನಿಂತಿರಲಾಗ ಬೃಹಸ್ಪತ್ಯಾಚಾರ್ಯನು ಪರಿವಾರಸಮೇತನಾದ ಶಚೀಪತಿಯುಂ ಮತ್ತು ದಿಕ್ಪಾಲಕರೆಲ್ಲರನ್ನೋಡಿ ಅತ್ಯಂತ ಕಠಿಣಂಗಳಾದ ವಿಪತ್ಪರಂಪರೆಗಳಲ್ಲಿ ಸಿಲುಕಿ ಬ್ಯಾಸರದಿಂ ನಿರ್ವಹಿಸಲಾರದೆ ನನ್ನಂ ಸ್ಮರಿಸಿರುವರೆಂದು ಮನದೊಳ್ ನಿಶ್ಚೈಸಿ, ವೃತ್ರಾರಿಯಾದ ದೇವೇಂದ್ರನಂ ಕುರಿತು ಕುಶಲಪ್ರಶ್ನೆಯಂ ಮಾಡಿ ಅವನ ಮುಖದಿಂದ ವಲಾಸುರನ ವೃತ್ತಾಂತಂಗಳೆಲ್ಲವಂ ತಿಳಿದು ಮನದೊಳ್ ಆಲೋಚನೆಯಂಗೈದು ತಾನು ನಿಶ್ಚೈಸಿರುವ ಪಾಯಂ ಪ್ರಿಯಶಿಷ್ಯನಾದ ಪಾಕಶಾಸನನಿಗೆ ತಿಳುಹಿಸಿ, ಸಕಲ ದೇವತಾಸೈನ್ಯಸಮೇತನಾಗಿ ದಾನವಾಧಿಪತಿಯಾದ ವಲಾಸುರನಂ ಜಯಿಸಲೋಸುಗ ಅತ್ಯಂತ ವೇಗದಿಂ ಪೊರಮಡುವುದೆಂದು ಅಪ್ಪಣೆಯಂ ಕೊಡಲಾಗ ಜಂಭಾರಿಯು ಹರ್ಷಪರವಶನಾಗಿ ಕೃತಕೃತ್ಯನಾದೆನೆಂದು ಉಬ್ಬಿ ಆಕ್ಷಣದಲ್ಲಿಯೆ ಯುದ್ಧಸನ್ನದ್ಧನಾಗಿ ಸಕಲ ಪರಿವಾರದಿಂದೊಡಗೂಡಿ ತನ್ನ ದಿವ್ಯರಥದೊಳ್ ಉನ್ನತಸ್ಥಾನದಲ್ಲಿ ಆಚಾರ್ಯನಂ ಕುಳ್ಳಿರಿಸಿಕೊಂಡು ಅಮರಾವತಿಗೆ ಅಭಿಮುಖನಾಗಿ ಬರುತ್ತ ಸಮೀಪವನ್ನೈದಿ ಕೋಲಾಹಲ ಧ್ವನಿಯಂ ಮಾಡಲು;

ಆಗಲಾವಲಾಸುರನು ಆಧ್ವನಿಯಂ ಕೇಳಿ ವಿಸ್ಮಿತನಾಗಿ ವಿಮರ್ಶೆಯಂ ಮಾಡಿ ತಿಳಿದು ಫಲಭ್ರಾಂತಿಯಿಂದ ಪತಂಗವು ದಾವಾಗ್ನಿಯೊಳ್ ಬೀಳುವಂತೆ ಶಚೀಪತಿಯು ಎಂದಿನಂತೆ ತನ್ನ ರಾಜ್ಯಸಿರಿಯಂ ಪಡೆಯುವೆನೆಂದು ದುರಾಶೆಯಿಂದ ತನ್ನ ಸಮ್ಮುಖಕ್ಕೆ ಬಂದಿರುವನಂತೆ ಕಾಣುತಲಿಧೆ, ಆದ್ದರಿಂದ ಅವನ ಅಹಂಕಾರವಂ ನೆಗ್ಗೊತ್ತಿ ಮುಂದೆ ಎಂದಿಗೂ ಈ ಅಮರಾವತಿಯಂ ಕನಸಿನಲ್ಲಿಯೂ ನೆನೆಯದಂತೆ ಮಾಡುವೆನೆಂದು ಕನಲಿ ಕಾತರಿಸಿ ಕೈದುಗಳಂ ಪಿಡಿದು ಕರಿರಥವನ್ನೇರಿ ಕಾಳರಾತ್ರಿಯಂತೆ ತೋರುತ್ತ ನಿಜ ಪರಿವಾರದಿಂದೊಡಗೂಡಿ ಪುರದಿಂ ಪೊರಮಟ್ಟು ಪುರಂದರನ ಸೈನ್ಯವಂ ಕಂಡು ಕದಳೀವನವಂ ಕಂಡ ಮದ್ದಾನೆಯಂತೆ ಘುಡಿಘುಡಿಸುತ್ತ ಕಾರ್ಮುಕವಂ ಸೆಳೆದು ಬಾಣಂಗಳಂ ಬೀರುತ್ತ ಕಾಲಮೃತ್ಯುವಿನಂತೆ ಬರುತ್ತಿರಲು,

ಇಂದ್ರನು ಶತ್ರುವಂ ಕಂಡು ತ್ರಸ್ತಹೃದಯನಾಗಿ ಆಚಾರ್ಯನ ಆಜ್ಞೆಯಂ ಮೀರಲಾರದೆ ಸ್ವಲ್ಪಯುದ್ಧವಂ ಮಾಡುತ ಪೂರ್ವದೊಳ್ ಈ ವಲಾಸುರನ ಬಾಣಪ್ರಹಾರದಿಂದುಂಟಾದ ಘಾಯವನ್ನೇ ಅರಸುತ ಬರುವ ಬಾಣ ಪರಂಪರೆಯಉರವಣೆಯುಂ ಸಹಿಸಲಾರದೆ ಇನ್ನು ಎಂದಿಗೂ ಅಮರಾವತಿಯು ಅಭಿಮುಖರಾಗುವದಿಲ್ಲವೆಂದು ಕೂಗುತ ಹಿಮ್ಮೆಟ್ಟುತಲಿರುವ ತನ್ನ ಸೈನ್ಯವಂ ಕಂಡು ತಾನೂ ಅವರೊಡನೆ ಓಡಿ ಪೋಗಬೇಕೆಂದು ಚಿಂತಿಸುತ್ತಿರಲೂ;

ಆಗ ಸುರಾಚಾರ್ಯನು ಶಚೀಪತಿಯುಂ ಕುರಿತು ಈ ವಲಾಸುರನು ಪೂರ್ವದಲ್ಲಿ ಉಮಾರಮಣನಂ ಕುರಿತು ಘೋರತಪವಂ ಮಾಡಿ ಅಭಿಮುಖನಂ ಮಾಡಿಕೊಂಡು ಸಮಸ್ತ ಭೋಗ ಭಾಗ್ಯವಂ ಬಹುಕಾಲ ಅನುಭವಿಸಿ ಯಶಸ್ಸಂ ಪಡೆಯಲೋಸುಗ ಚರಾಚರಪ್ರಾಣಿಗಳಿಂದ ಸಂಹಾರವಿಲ್ಲದಂತೆ ಒಂದುವರವಂ, ಮತ್ತೊಮನದೊಳ್ ದಧೀಚಿ, ಸೂರ್ಯ, ಇಂದ್ರ ಮೊದಲಾದವರಿಂದ ಉತ್ಪನ್ನವಾದ ರತ್ನಂಗಳು ವಿರಳವಾಗಿರುವುದಂ ತಿಳಿದು ಅದಂ ಸಮೃದ್ಧಿಯುಂಮಾಡಿ ಲೋಕೋಪಕಾರವಂ ಮಾಡಬೇಕೆಂದು ಯೋಚಿಸಿ ಧರ್ಮ ಬುದ್ಧಿಯಿಂದ ತನ್ನ ಶರೀರದಲ್ಲಿರುವ ಧಾತುಗಳೇ ನವರತ್ನಗಳಾಗುವಂತೆ ಮತ್ತೊಂದುವರವಂ ಪಡೆದಿರುವನಾದ ಕಾರಣ ಯುದ್ಧದೊಳ್ ಈತನು ಜಯಿಸಲಶಕ್ಯನು ಆದ್ದರಿಂದ ಮೊದಲು ನಾನು ಹೇಳಿದ ಉಪಾಯವೇಸರಿಯೆಂದು ಎನ್ನಲಾಗ ಸಂಕ್ರಂದನನು ಮಹಾ ಪ್ರಸಾದವೆಂದು ಗುರುವಾಕ್ಯವಂ ಮನದಂದು ವ್ಯಾಜಾರ್ಥವಾಗಿ ಚಾಪವಂ ಸಜ್ಜುಗೊಳಿಸಿ ದಿವ್ಯಾಸ್ತ್ರವಂ ಹೂಡಿ ಆದೈತ್ಯನಿಗಭಿಮುಖವಾಗಿ ಎಲೈ ದುರಾತ್ಮನೆ ! ಒಂದುಕ್ಷಣವೆನ್ನೊಡನೆ ಶಣಿಸಿ ಕೈಗುಣವನ್ನೋಡೆನುತ ನುಡಿದು ಶೆಳದುಬಿಡಲು, ಆಗ ವಲಾಸುರನು ನಸುನಗುತ ಪ್ರತ್ಯಸ್ತ್ರದಿಂದದಂ ಖಂಡಿಸಿ, ಮತ್ತು ಎಲೋ ಸುರಾಧಮನೆ ! ನೀನು ಗೌತಮಾಶ್ರಮದಲ್ಲಿ ಮಾಡಿದ ಸಾಹಸವಂ ಕೇಳಿ ಬಲ್ಲೆನು, ಸಮರಾಂಗಣದ ಗೊಡವೆ ನಿನಿಗ್ಯಾಕೆ ಋಷ್ಯಾಶ್ರಮಂಗಳು ಇನ್ನೂ ಬಹಳವಾಗಿರುವವು ಅಲ್ಲಿಗೆ ಪೋಗುಪೋಗೆಂದು ನುಡಿದು ಬಳಿಕ ದಿವ್ಯಾಸ್ತ್ರದಿಂದೀರ್ವರು

ಸಮನಾಗಿ ಮೂರು ಝಾಮ ಅದ್ಭುತವಾದ ಯುದ್ಧಮಂಮಾಡುತ್ತ ಅಷ್ಟಕ್ಕೆ ಶಸ್ತ್ರಾಸ್ತ್ರಂಗಳಂ ಪ್ರಯೋಗಿಸಿದ್ದರಿಂ ಬತ್ತಳಿಕೆ ಬರಿದಾಗಲು, ಆಗ ಸುರಾಚಾರ್ಯನಾದ ಬೃಹಸ್ಪತಿಯು ಅಸುರಾಂತಕನಾದ ಇಂದ್ರನಂ ಕುರಿತು ಸಂಜ್ಞೆಯಂ ಮಾಡಲು ದೇವೇಂದ್ರನು ಧನುವನ್ನಿಳುಹಿ ಬಲಾಸುರನಂಕುರಿತು ಎಲೈ ದಾನವೇಂದ್ರನೆ ! ಕೇಳು, ನಿನ್ನ ಸಾಹಸಕ್ಕೆ ಮೆಚ್ಚಿದೆನು ನಿನಗೆ ಬೇಕಾದವರವಂಬೇಡು ಕೊಡುವೆನೂ ಎನಲಾಮಾತಂ ಕೇಳಿ ಗರ್ವಿತನಾದ ಬಲಾಸುರನು ನಸುನಗುತ ಎಲೈ ಇಂದ್ರನೆ ! ತಿರುಕ ಹಾರುವರು ಕೊಡುವ ಹಳಸಿದ ಹವಿಸ್ಸನಿಂ ಜೀವಿಸುತ ಶುಷ್ಕವೈಭವಮು ಳ್ಳವನಿಗಾತ ಸಿಗವಾಗಮುಸ್ತುತಿಗೆ ಉಬ್ಬುವ ದುರ್ಭಾಗ್ಯನಾದ ನೀನು ಕೊಡುವ ವರವ್ಯಾವುದು, ನಾನು ಬೇಡುವುದೇನು, ಅದಂತಿರಲಿ ನೀನು ಬೇಕಾದ ವರವಂ ಬೇಡು ನಾನು ಕೊಡುವೆನು ಎಂದು ಹೇಳಲಾಗ ಪುರಂದರನು ಎಲೈ ದೈತ್ಯಶ್ರೇಷ್ಠನೆ ! ಕೇಳು, ನಿಮ್ಮ ಕುಲದಲ್ಲಿ ಪುಟ್ಟಿದ ದೈತ್ಯರು ಇದುವರಿಗೂ ಬಬ್ಬರಿಗೂ ವರದಾನವಂ ಮಾಡಿರುವವನು ಅಲ್ಲನೆಂಬುದು ಪ್ರಸಿದ್ಧವು, ಇಂತಿರುವಲ್ಲಿ ಈಗ ನೀನು ಒರಿದೇ ದುರಭಿಮಾನದಿಂದ ವರವಂಕೊಡುವೆನೆಂದು ಪೇಳಿ ಕಡೆಗೆ ವರವಂಕೊಡುವುದಕ್ಕೆ ಅಶಕ್ತನಾಗಿ ಲೋಕದೋಳ್ ಅಪಕೀರ್ತಿಯಂ ಪಡೆಯುವೆ, ಈ ದುರಹಂಕಾರವು ನಿನಿಗ್ಯಾಕೆ? ಕ್ಷುದ್ರನದಿಯು ಸಮುದ್ರವಂ ಪೂರ್ಣವಂ ಮಾಡುವೆನೆಂದು ಓಡಿಬಂದಂತೆ ಬರಿದೇ ಸಾಹಸವಂ ಪೇಳಿ ಅಪಹಾಸ್ಯಕ್ಕೆ ಗುರಿಯಾಗಬೇಡವೆಂದು ಪೇಳುವ ಕುಹಕದ ಮಾತಂ ಕೇಳಿ ವಲಾಸುರನು ತನ್ನ ಕುಲಕ್ಕೆ ಸ್ವಭಾವಸಿದ್ಧವಾದ ದುರಹಂಕಾರದಿಂ ಮಂದಮತಿಯಾಗಿ ತನಗೆ ಮುಂದೆ ಬರುವ ಹಾನಿವೃದ್ಧಿಗಳನ್ನರಿಯದೆ, ಮದಾಂಧನಾಗಿ ದಾಯಾದಿಗಳಾದ ದೇವತೆಗಳಿಗೆ ದೈತ್ಯಶ್ರೇಷ್ಠನಾದ ನಾನು ಕೇಳಿದವರವನ್ನಿತ್ತು ಲೋಕದೋಳ್ ಖ್ಯಾತಿಯಂ ಪಡೆಯುವುದು ಉತ್ತಮೋತ್ತಮವೆಂದು ಮನದೋಳ್ ನಿಶ್ಚೈಸಿ ಸುರಪತಿಯಾದ ದೇವೇಂದ್ರನಂ ಕುರಿತು, ಎಲೈ ಸಹಸ್ರಾಕ್ಷನೆ ! ನಾನು ಬೇಡಿದ ವರವಂ ತ್ರಿಕರಣಕ ತ್ರಿವಾಚಕಮಾಗಿ ತ್ರಿನೇತ್ರನೆ ಅಡಿದಾವರೆಯಾಣೆಗೂ ಶೀಘ್ರದಿಂ ಕೊಡುವೆನು ಎನಲಾಗ, ಅಮರೇಂದ್ರನು ನಿಜಾ

ಸ್ಥಾನವಾದ ಅಮರಾವತಿಯ ಭಾಗ್ಯವಂ ಪಡೆವೆನೆಂದು ಉತ್ಸಾಹದಿಂ ತನ್ನ ರಥದಿಂದಿಳಿದು ದೈತ್ಯೇಂದ್ರನ ಅಭಿಮುಖನಾಗಿ ಬಂದು ಅವನಂ ಕುರಿತು ಎಲೈ ತ್ರಿಲೋಕವೀರನೇ ! ಕೇಳು, ನಾನು ಒಂದು ಮಹಾಕ್ರತುವಂ ಮಾಡಲು ಉದ್ಯೋಗಿಸಿರುವೆನು ಅದಕ್ಕೆ ನೀನು ಪಶುವಾಗುವುದೇ ನನಗೆ ನೀನು ಕೊಡುವ ವರವಲ್ಲದೆ ಮತ್ತೊಂದು ವರವು ಪ್ರಕೃತಕ್ಕೆ ಉಪಯುಕ್ತವಾಗಲರಿಯದು, ನೀನು ಮೊದಲು ಮಾಡಿದ ಪ್ರತಿಜ್ಞೆಯು ನಿಜವಾದಡೆ ಪಶುವಾಗುವುದಕ್ಕೆ ಉದ್ಯುಕ್ತನಾಗು ಇಲ್ಲದಿದ್ದರೆ ಪೂರ್ವದಲ್ಲಿ ನಾನು ಹೇಳಿದ ಮಾತಿಗೆ ಗುರಿಯಾಗಿ ಲೋಕದಲ್ಲಿ ಅಪಹಾಸ್ಯಕ್ಕೆ ಪಾತ್ರನಾಗುವೆ ಎಂದು ಹೇಳಿದ ಮಾತಂ ಕೇಳಿ ಸತ್ಯಸಂಧನಾದ ವಲಾಸುರನು ಎಲೈ ಶಚೀಪತಿಯೆ ! ಕೇಳು, ದೈತ್ಯಶ್ರೇಷ್ಠನಾದ ವಲಾಸುರನು ಕೊಟ್ಟ ವರವು ಎಂದಿಗೂ ತಪ್ಪಲಾರದು, ಒಂದು ಕಾಲದಲ್ಲಿ ಮಾರ್ತಾಂಡನು ಪಶ್ಚಿಮ ದಿಕ್ಕಿನಲ್ಲಾದರೂ ಉದಯಿಸುವನು, ಮತ್ತು ಮಹಾಮೇರುವಾದರೂ ಅಲ್ಲಾಡುವದು. ಯಜ್ಞೇಶ್ವರನು ಶೈತ್ಯವಂ ತಾಳುವನು. ಶಿಲೆಗಳಲ್ಲಿ ಕಮಲಗಳು ಉದ್ಭವಿಸ್ಯಾವು, ನಾನು ಕೊಟ್ಟ ವರವು ಎಂದೆಂದಿಗೂ ಚಲಿಸದೆ ಸ್ಥಿರವಾಗಿರುವದರಲ್ಲಿ ಸಂದೇಹವ್ಯಾತಕೆಂದು ನುಡಿದು ಆಕ್ಷಣದಲ್ಲಿಯೇ ರಥದಿಂದ ಧುಮುಕಿ ತನ್ನ ಪುತ್ರ ಮಿತ್ರ ಕಳತ್ರ ಬಂಧುಗಳಂ ತ್ಯಜಿಸಿ ಅಮರಾವತಿಯ ಭೋಗ ಸಂಪತ್ತಿನಲ್ಲಾಸಕ್ತಿಯುಂ ಬಿಟ್ಟು ಪಶುವಾದೆನು ಶೀಘ್ರದಿಂ ಕ್ರತುವಂ ನೆರವೇರಿಸುವನಾಗು, ನನ್ನ ಯಶಸ್ಸು ಸೂರ್ಯ ಚಂದ್ರರಿರುವವರಿಗೂ ಲೋಕಪ್ರಖ್ಯಾತವಾಗಿರಲಿ ಎಂದು ಹೇಳಿ ಇಂದ್ರನ ಸ್ವಾಧೀನವಾಗಲೂ; ಆಗದೇವೇಂದ್ರನು ವಲಾಸುರನ ಸತ್ಯಕ್ಕೆ ಮೆಚ್ಚಿ ಕಟಕಟಾ; ಇಂಥಾ ದುರ್ಘಟವಾದ ವರವಂ ನಾನು ಕೇಳಲು ಅದಂ ಅಂಗೀಕರಿಸಿದನಲ್ಲಾ ಎಂದು ಸಂತೋಷಪಡುತ ಅವನಂ ಕುರಿತು ಎಲೈ ದಾನವೇಂದ್ರನೇ! ಕೇಳು ಜಗದೊಳ್ ನಿನ್ನಂಥಾ ಸತ್ಯಸಂಧನಾದ ದೈತ್ಯೇಶ್ವರನನ್ನೆಲ್ಲಿಯೂ ಕಾಣಲಿಲ್ಲ, ಮತ್ತೂ ನಿನಗೆ ಯಶೋವೃದ್ಧಿಯೂ ಶ್ರೇಯಸ್ಸೂ ಉಂಟಾಯಿತು ಎಂದು ಹೇಳಿ ನಸುನಗುತ ಅವನಂ ಸಂಗ್ರಹಿಸಿಕೊಂಡು ಮಂದರಾದ್ರಿಯಂ ಕುರಿತು ಬಂದು ಈ ಅಸುರನು ಅನ್ಯೋಪಾ

ಯಂಗಳಿಂದ ಸಂಹರಿಸಲಶಕ್ಯನಾಗಿರುವನೆಂದು ಗುರುವಾದ ಬೃಹಸ್ಪತಿಯೊಡನೆ ಆಲೋಚಿಸಿ ಒಂದುಮಹಾಕ್ರತುವಂ ಪ್ರಾರಂಭಿಸಿ ತದಂಗವಾಗಿ ದೈತ್ಯೇಶ್ವರನಾದ ವಲಾಸುರನೆಂಬ ಪಶುವಂ ವಿಶಸನವಂ ಮಾಡಲು,ಆಕ್ಷಣದಲ್ಲಿಯೇ ಮಹಾದೇವನಾದ ಪಶುಪತೀಶ್ವರನ ವರಪ್ರಸಾದದಿಂದ ಆ ಅಸುರನ ಶರೀರದೊಳಿರುವ ಸಪ್ತಧಾತುಗಳು ಅವಯವಂಗಳೂ ಕೂಡ ರತ್ನಗಳ ಉತ್ಪತ್ತಿಗೆ ಬೀಜವಾಯುದು, ಎಲೈ ಸ್ವಾಮಿಯೇ! ಆ ವಲಾಸುರನ ದೇಹದಿಂದ ಉತ್ಪನ್ನಗಳಾದ ನವರತ್ನಂಗಳು ಆ ಅಸುರನಶರೀರವು ಕೂಡ ಯಜ್ಞಾರ್ಥವಾಗಿ ವಿನಿಯೋಗವಾದಕಾರಣ ಲೋಕತ್ರಯದಲ್ಲೂ ಪವಿತ್ರಕರವಾಗಿ ಮತ್ತೂ ಕ್ಷತ್ರಿಯೋತ್ತಮನಾದ ಸಿಸ್ಸಂದ ಭೂಮಂಡಲಾಧಿಪತಿಗಳಿಗೂ ದೇವದಾನವರುಗಳಿಗೂ ಪುಣ್ಯವಂತರಾದ ಪುರುಷರುಗಳಿಗೂ ಕೂಡಾ ಧಾರಣಾಯೋಗ್ಯವಾಗಿ ಪ್ರಸಿದ್ಧಿಯಂ ಪಡೆದವು, ಎಲೈ ಸುಗಂಧರಾಜೇಂದ್ರನೇ! ಮತ್ತೂ ಹೇಳುವೆನು ಕೇಳು, ಪೂರ್ವದೊಳ್ ದಧೀಚಿ ಮಹಾಮುನಿಯು ಅಸ್ಥಿಯು ದೇವತೆಗಳಿಂದ ಪ್ರಾರ್ಥಿತವಾಗಿ ಮಹಾ ವಜ್ರಾಯುಧೋತ್ಪತ್ತಿಗೆ ಕಾರಣವೆಂತಾಯಿತೂ? ಅದೇರೀತಿಯೊಳ್ ಈ ದೈತ್ಯೇಶ್ವರನಾದ ವಲಾಸುರನ ಅಸ್ಥಿಗಳು ವಜ್ರವೆಂಬರತ್ನಕ್ಕೆ ಆಕರವಾಯಿತು, ಆ ಅಸುರನದಂತಪಙ್ತಿಗಳೇ ಮುತ್ತುಗಳೆಂಬ ರತ್ನಕ್ಕೆ ಕಾರಣವಾಗಿ ಪ್ರಸಿದ್ಧಿಯಂಪಡೆಯಿತು, ಆತನಶರೀರವೊಳಿರುವ ರಕ್ತದ್ವೆಶಿಯಿಂದ ಮಾಣಿಕ್ಯವೆಂಬ ಕೆಂಪುರತ್ನವುಪುಟ್ಟಿತು, ಆದಾನವನ ರೋಮಂಗಳೇ ವೈಢೂರ್ಯವೆಂಬರತ್ನಕ್ಕೆ ನಿಮಿತ್ತವಾಯಿತು,ಆ ದೈತ್ಯನ ನೇತ್ರಂಗಳೇ ನೀಲವೆಂಬ ರತ್ನಕ್ಕೆ ನಿದಾನವಾದುದು, ಆ ರಕ್ಕಸನಶರೀರದೊಳ್ಪುಟ್ಟಿದ ಕೊಬ್ಬಿ ಪಚ್ಚೆ ಎಂಬ ರತ್ನಕ್ಕೆ ಆಧಾರವಾಯಿತು, ಆ ಅಸುರನಮಾಂಸವೇ ಹವಳವೆಂಬ ರತ್ನಕ್ಕೆ ಆದಿಕಾರಣವಾದುದು, ಆತನ ಶ್ಲೇಷ್ಮವೇ ಪುಷ್ಯರಾಗವೆಂಬರತ್ನಕ್ಕೆ ಆಕರವಾಯಿತು, ಆತನ ಮೇದಸ್ಸೇ ಗೋಮೇಧಿಕವೆಂಬರತ್ನಕ್ಕೆ ಕಾರಣವಾಯಿತು,ಇಂತಿರ್ಪ ಕಾರಣಗಳಿಂದ ಉತ್ಪನ್ನವಾದರತ್ನಂಗಳೆಲ್ಲಾ ಜಾತಿಭೇದಂಗಳಂ ವಿವರಿಸುವೆನುಕೇಳು, ಈ ನವರತ್ನಂಗಳಲ್ಲಿ ವಜ್ರಮೌಕ್ತಿಕ ಇವು ಎರಡು ರತ್ನವೂ ಬ್ರಹ್ಮಜಾತಿ ಎಂದರಿವುದು, ಕೆಂಪು ಹವಳ ಪುಷ್ಯರಾಗ ಈ ಮೂರು ರತ್ನಂಗಳು ಕ್ಷತ್ರಿ

ಯಜಾತಿಯೆಂದರಿವುದು, ಗೋಮೇಧಿಕ ವೈಡೂರ್ಯ ಈ ಎರಡು ವೈಶ್ಯಜಾತಿ ಯೆಂದರಿವುದು,ಪಚ್ಚೆ ನೀಲ ಈ ಎರಡು ರತ್ನಂಗಳೂ ಶೂದ್ರಜಾತಿಯೆಂದರಿವುದು, ಇಂತಿರ್ಪ ರತ್ನಗಳಂ ಪರೀಕ್ಷೆಯಂ ಮಾಡತಕ್ಕ ಪುರುಷನು ಮಾಣಿಕ್ಯ ಮೊದಲಾದ ರತ್ನಂಗಳಂವಾರಕ್ರಮದಿಂದ ಪರೀಕ್ಷೆಯಂ ಮಾಡಬೇಕು,ಅದೆಂತೆನೆ-ಭಾನುವಾರದಲ್ಲಿ ಗೋಮೇಧಿಕವಂ ಮಾಣಿಕ್ಯವಂ ಪರೀಕ್ಷಿಸಬೇಕು, ಚಂದ್ರವಾರದಲ್ಲಿ ಮುತ್ತುಗಳಂ ವೈಡೂರ್ಯಂಗಳಂ ಪರೀಕ್ಷಿಸಬೇಕು,ಮಂಗಳವಾರದಲ್ಲಿ ಪವಳವಂ ಬುಧವಾರದಲ್ಲಿ ಪಚ್ಚೆಯುಂ ಗುರುವಾರದಲ್ಲಿ ಪುಷ್ಯರಾಗವಂ ಶುಕ್ರವಾರದಲ್ಲಿ ವಜ್ರವಂ ಶನಿವಾರದಲ್ಲಿ ನೀಲವಂ ಸಹಾ ಪರೀಕ್ಷಿಸಬೇಕು, ಮತ್ತೂ ಪರೀಕ್ಷೆಯಂ ಮಾಡುವ ಪುರುಷನು ದ್ರವ್ಯದಲ್ಲಿ ಅತ್ಯಂತ ಅಪೇಕ್ಷೆ ಇಲ್ಲದವನಾಗಿ ಪಾಪದಲ್ಲಿ ಭೀತಿ ಉಳ್ಳವನಾಗಿ ಧರ್ಮದಲ್ಲಿ ಆಸಕ್ತಿ ಉಳ್ಳವನಾಗಿ ಮಾಣಿಕ್ಯ ಮೊದಲಾದ ರತ್ನಕ್ರಮದಿಂ ಯಾವಯಾವ ರತ್ನಗಳಿಗೆ ಯಾವಯಾವ ಪುಷ್ಪಂಗಳು ಪೇಳಿರುವವೋ ಆಪುಷ್ಪಮಾಲೆಯುಂ ಕಂಠದೊಳ್ ಧರಿಸಿ ಆಯಾಯ ರತ್ನಂಗಳಂ ಪರೀಕ್ಷಿಸಬೇಕು,ಯಾವರತ್ನಕ್ಕೆ ಯಾವ ಪುಷ್ಪವೆಂದಡೆ-ಮಾಣಿಕ್ಯ ರತ್ನಕ್ಕೆ ಕಮಲಪುಷ್ಪ,ಮುತ್ತುಗಳಿಗೆ ಜಾಜಿ ಹುವ್ವು.ಪವಳಕ್ಕೆ ನೈದಿಲು ಹುವ್ವು,ಪಚ್ಚೆಗೆ ರಸಬಾಳೆಹುವ್ವು,ಪುಷ್ಯರಾಗಕ್ಕೆ ಮಲ್ಲಿಗೇ ಹುವ್ವು,ವಜ್ರಕ್ಕೆ ನೂರುದಳದ ಪದ್ಮವು,ನೀಲಕ್ಕೆ ರಾಜದಂಟಿನ ತೆನೆ, ಗೋಮೇಧಿಕಕ್ಕೆ ಕೆಂಪುನೈದಿಲು ಹುವ್ವು, ವೈಡೂರ್ಯ ರತ್ನಕ್ಕೆ ಬಿಳೀ ಕುಂಬಳದಹುವ್ವು, ಮತ್ತೂ ಮಹಾರಾಜೇಂದ್ರನೇ! ಕೇಳು, ಶುದ್ಧವಾದ ಸ್ಥಳದಲ್ಲಿ ಬಿಳಿಯ ವಸ್ತ್ರವಂ ಹಾಸಿಮಾಣಿಕ್ಯ ಮೊದಲಾದ ರತ್ನಂಗಳಂ ಮಂಡಲಾಕಾರವಾಗಿ ಮಧ್ಯದಲ್ಲಿ ಮಧ್ಯದೊಳ್ ಮಾಣಿಕ್ಯವಂ ಇರಿಸಿ ಮುತ್ತು ಮೊದಲಾದುದಂ ಕ್ರಮದಿಂದ ಪೂರ್ವಾದಿಯಾಗಿ ದಿಕ್ಕುದಿಕ್ಕುಗಳಲ್ಲಿರಿಸಿ ಅಲ್ಲಲ್ಲಿಯೇ ಆಯಾಯಪುಷ್ಪಂಗಳಿಂದ ಆದಿತ್ಯ ಮೊದಲಾದ ನವಗ್ರಹಂಗಳಂ ಪೂಜಿಸಬೇಕು, ಅದೆಂತೆನೇ-ಮಾಣಿಕ್ಯದಲ್ಲಿ ಸೂರ್ಯನಂ, ಮುತ್ತಿನಲ್ಲಿ ಚಂದ್ರನಂ, ಪವಳದಲ್ಲಿ ಅಂಗಾರಕನಂ, ಪಚ್ಚೆಯಲ್ಲಿ ಬುಧನ , ಪುಷ್ಯರಾಗದಲ್ಲಿ ಬೃಹಸ್ಪತಿಯಂ,ವಜ್ರದಲ್ಲಿ ಶುಕ್ರನಂ,ನೀಲದಲ್ಲಿ ಶನಿಯಂ,ಗೋಮೇಧಿಕದಲ್ಲಿ ರಾಹುವಂ,ವೈಡೂರ್ಯದಲ್ಲಿ ಕೇತುವಂ,ಈ ಕ್ರಮದಿಂದ ರತ್ನಂಗಳಲ್ಲಿ ಧ್ಯಾನ

ವಂ ಮಾಡಿ ಆಯಾಯುಕ್ತಪ್ರಶ್ನಗಳಿಂದ ಪೂಜಿಸಿ ರತ್ನಗಳಂ ಪರೀಕ್ಷಿಸಬೇಕು, ಮತ್ತು ಆ ವಲಾಸುರನ ಸತ್ವಗುಣವು ಮುತ್ತುಗಳಲ್ಲಿಯೂ ಸ್ಫಟಿಕಜಾತಿಗಳಲ್ಲಿಯೂ ಅಧಿಕವಾಗಿ ಇರುವದು. ಇನ್ನು ಹವಳ ಗೋಮೇಧಿಕ ಈ ಮೂರರಲ್ಲಿ ಆ ವಲಾಸುರನ ರಜೋಗುಣವು ಅಧಿಕವಾಗಿರುವುದು, ಶುದ್ಧಕಪ್ಪಾಗಿಯೂ ಸಾಧಾರಣವಾಗಿಯೂ ಇರುವ ನೀಲದ ಜಾತಿಯಲ್ಲಿ ಆ ವಲಾಸುರನ ತಮೋಗುಣವು ಅಧಿಕವಾಗಿರುವುದು, ವಜ್ರ ವೈಡೂರ್ಯ ಪುಷ್ಯರಾಗಗಳಲ್ಲಿ ಅವನ ರಜೋಗುಣವೇ ಇರುವುದು. ಪಚ್ಚೆಯಲ್ಲಿ ಆತನ ಸತ್ವರಜಸ್ತಮೋಗುಣಂಗಳು ಮೂರು ಇರುವುವು. ಇಂತಲ್ಲದೆ ವಜ್ರ ಮೊದಲಾದ ರತ್ನಂಗಳ ಉತ್ಪತ್ತಿ ಸ್ಥಳಂಗಳು ಆ ರತ್ನಂಗಳಲ್ಲಿರುವ ಗುಣದೋಷಂಗಳು ಅದರಿಂದಾಗುವ ಫಲಾಫಲಂಗಳು ಎಂತೆಂದರೆ- ಲೋಕದೊಳ್ ವಜ್ರವು ಸಮಸ್ತರತ್ನಂಗಳಂ ಭೇದಿಸುವುದು, ಮಿಕ್ಕಾದರತ್ನಂಗಳು ವಜ್ರವಂ ಭೇದಿಸಲಾರವು, ವಜ್ರವಂ ವಜ್ರವೇ ಭೇದಿಸುವುದು. ಆದ್ದರಿಂ ಸಮಸ್ತರತ್ನಂಗಳಿಗೂ ವಜ್ರವೇ ಶ್ರೇಷ್ಠವೆಂದರಿಯಬೇಕು. ಮತ್ತು ದಧೀಚಿ ಋಷಿಯ ಅಸ್ಥಿಯೂ ವಲಾಸುರನ ಅಸ್ಥಿಯೂ ಎಲ್ಲೆಲ್ಲಿ ಬಿದ್ದಿರುವವೋ ಆಯಾಯ ಸ್ಥಳಂಗಳಲ್ಲಿ ವಜ್ರವು ಹುಟ್ಟುವುದು, ಅದು ಯಾವಯಾವ ದೇಶದಲ್ಲಿ ಯಾವಯಾವ ವರ್ಣಂಗಳಂ ಪುಟ್ಟುವುದೆಂದರೆ.-ಕೋಸಲದೇಶದಲ್ಲಿ ಪುಟ್ಟುವ ವಜ್ರವು ಬಾಗೇಹುವ್ವಿನ ವರ್ಣದಿಂದಿರುವುದು, ಕಳಿಂಗದೇಶದಲ್ಲಿ ಹುಟ್ಟುವ ವಜ್ರವು ಹಳದೀ ವರ್ಣದಿಂದಿರುವುದು, ಮತಂಗದೇಶದಲ್ಲಿ ಹುಟ್ಟುವ ವಜ್ರವು ಮಲ್ಲಿಗೆಯ ವರ್ಣದಿಂದಿರುವುದು, ಹಿಮವತ್ಪರ್ವತದಲ್ಲಿ ಹುಟ್ಟುವ ವಜ್ರವು ಶುದ್ಧ ಬಿಳುಪಾಗಿರುವುದು, ಮಹಾರಾಷ್ಟ್ರ ದೇಶದಲ್ಲಿ ಹುಟ್ಟುವ ವಜ್ರವು ಕೆಂಪುವರ್ಣವಾಗಿರುವುದು, ಸೌವೀರದೇಶದಲ್ಲಿ ಹುಟ್ಟುವ ವಜ್ರವು ಕಪ್ಪಾಗಿರುವುದು, ಪುಂಡ್ರದೇಶದಲ್ಲಿ ಹುಟ್ಟುವ ವಜ್ರವು ಕನ್ನೈದಿಲು ಹುವ್ವಿನ ವರ್ಣದಿಂದಿರುವದು, ಹಿಮವತ್ಪರ್ವತ ಸಮೀಪ ಪ್ರದೇಶದಲ್ಲಿ ಹುಟ್ಟುವ ವಜ್ರವು ಕಪಿಲವರ್ಣದಿಂದಿರುವದು, ಮತ್ತೂ ದೇವತಾಭೇದಂಗಳಿಂದ ವಜ್ರಂಗಳಿಗೆ ಭೇದವುಂಟಾದುದು, ಅದೆಂತೆನೇ ಬಾಗೇಹುವ್ವಿನ ವರ್ಣದಿಂ ಬಿಳೇಕೆಂಪಿನ ವರ್ಣದಿಂ ಕೂಡಿಒಪ್ಪಿರುವ ವಜ್ರಂಗಳಿಗೆ ವಿಷ್ಣುವು ದೇವತೆಯೂ, ಅರುಣಾಭೆಯಾಗಿ ಬಿಳುಪಾಗಿ

ರುನ ವಜ್ರಗಳಿಗೆ ಇಂದ್ರನು ದೇವತೆಯೂ. ಕೊಂಬಿನ ವರ್ಣವಾಗಿಯೂ ನೈದಿಲು ಹುವ್ವಿನ ವರ್ಣವಾಗಿರುವ ವಜ್ರಗಳಿಗೆ ಯಮನು ದೇವತೆಯೂ, ಯಲಗದಹುವ್ವಿನವರ್ಣದಿಂ ಮುತ್ತುಗದ ಹುವ್ವಿನವರ್ಣದಿಂ ಒಪ್ಪಿರುವ ವಜ್ರಗಳಿಗೆ ವಾಯುವು ದೇವತೆಯು, ಕೆಂಜಿಗೆ ಹುವ್ವಿನ ವರ್ಣವಾಗಿರುವ ವಜ್ರಗಳಿಗೆ ವರುಣನು ದೇವತೆಯು, ಜಲವರ್ಣವಾಗಿರುವ ವಜ್ರಗಳಿಗೆ ಚಂದ್ರನು ದೇವತೆಯು, ಸೂರೀಪುಟದಹುಳುವಿನ ವರ್ಣವಾಗಿರುವ ವಜ್ರಗಳಿಗೆ ಸೂರ್ಯನು ದೇವತೆಯೂ, ಬೆಂಕಿಯ ಕೆಂಡದ ವರ್ಣವಾಗಿರುವ ವಜ್ರಗಳಿಗೆ ಅಗ್ನಿಯು ದೇವತೆಯು, ಮತ್ತೂ ಬಿಳುಪಾಗಿರುವ ವಜ್ರಗಳು ಬ್ರಹ್ಮಜಾತಿಯು. ಮೊಲದ ಕಣ್ಣಿನ ವರ್ಣದಂತಿರುವ ವಜ್ರಗಳುಕ್ಷತ್ರಿಯ ಜಾತಿಯು, ಬಾಳೇ ಎಲೆ ವರ್ಣದಂತಿರುವ ವಜ್ರಗಳು ವೈಶ್ಯಜಾತಿಯು, ಕತ್ತಿಯವರ್ಣವಾಗಿರುವ ವಜ್ರಗಳು ಶೂದ್ರಜಾತಿಯು, ಮತ್ತೂ ಬ್ರಹ್ಮಜಾತಿಯ ವಜ್ರಗಳನ್ನೇ ಬ್ರಾಹ್ಮಣನುಧರಿಸಬೇಕು, ಕ್ಷತ್ರಿಯಜಾತಿಯವಜ್ರಗಳಂ ಕ್ಷತ್ರಿಯನೇಧರಿಸಬೇಕು, ವೈಶ್ಯಜಾತಿಯ ವಜ್ರಗಳಂ ವೈಶ್ಯನೇ ಧರಿಸಬೇಕು, ಶೂದ್ರಜಾತಿಯ ವಜ್ರಗಳಂ ಶೂದ್ರನೇ ಧರಿಸಬೇಕು, ಬ್ರಾಹ್ಮಣನು ಈನಾಲ್ಕು ಜಾತಿಯ ವಜ್ರಗಳಂ ಧರಿಸ ಬಹುದೂ, ಮತ್ತೂ ಸೂರ್ಯಪುಟದ ಹುಳುವಿನ ವರ್ಣ ಉಳ್ಳ ಸೂರ್ಯದೇವತಾಕವಾದ ವಜ್ರಕ್ಕೆ ಬೆಲೆಯಿಲ್ಲ, ಅಂಥಾವಜ್ರವಂ ಧರಿಸಿದ ಅರಸಿಗೆ ಅತ್ಯಂತ ಐಶ್ವರ್ಯವು ಆರೋಗ್ಯವು ವಿಜಯವೂ ಉಂಟಾಗುವದು, ಇಂಥಾ ವಜ್ರಂಗಳಂ ಕೆತ್ತಿದಆಭರಣವಂ ಧರಿಸಿ ರಣಾಂಗಣಕ್ಕೆತೆರಳುವ ಅರಸಿಗೆ ಆಯುಧಂಗಳಿಂದ ಘಾಯವಾಗಿಸಲಾರದು, ಶತ್ರುಗಳಂಜಯಿಸುವನು, ಸ್ವಲ್ಪ ದೇಶವಂ ಆಳುವ ಅರಸು ಈ ಸೂರೀಪುಟದ ಹುಳುವಿನವರ್ಣದಿಂದಿರುವ ವಜ್ರವಂಧರಿಸಿದರೆ ಮಂಡಲಾಧಿಪತಿಯಾಗುವನು, ಈರತ್ನವಂ ಧರಿಸಿದ ಪುರುಷನ ಸಮೀಪಕ್ಕೆ ದಾರಿದ್ರ್ಯವು ಸರ್ಪವು ಅಗ್ನಿಯು ಪಿಶಾಚವು ರಾಕ್ಷಸರು ಮೃತ್ಯುವು ಸಹಾ ಶೇರಲಾರದು, ಮತ್ತೂ ವಜ್ರಗಳ ಉತ್ಪತ್ತಿಗೆ ಯುಗಭೇದದಿಂದ ಸ್ಥಳಗಳು ಭೇದಿಸಿರುವವು, ಕೃತಯುಗದಲ್ಲಿಯೂ ಕಲಿಯುಗದಲ್ಲಿಯೂ ಕೋಸಲದೇಶದಲ್ಲಿ ಪುಟ್ಟುವವು, ತ್ರೇತಾಯುಗದಲ್ಲಿ ಹಿಮವತ್ಪರ್ವತದಲ್ಲಿಯೂ ಮತಂಗಪರ್ವತದಲ್ಲಿಯೂ ಪುಟ್ಟುವವು, ದ್ವಾಪರಯುಗ

ಪಲ್ಲವಪ್ರಾಂತ್ಯದೇಶದಲ್ಲಿಯೂ ಮಹಾರಾಷ್ಟ್ರದಲ್ಲಿಯೂ ಪುಟ್ಟುವದು, ಎಲೈ ರಾಜೇಂದ್ರನೇ ! ಕೇಳು, ವಜ್ರಗಳಲ್ಲಿ ಐದು ಗುಣಂಗಳು ಐದು ದೋಷಂಗಳೂ ಇರುವವು, ಇದಲ್ಲದೇ ಹೊಳಪು ನಾಲ್ಕು ಪರಿಯಾಗಿರುವದು, ಗುಣಂಗಳು ಯಾವಯಾವವೆಂದರೆ- ಆರು ಮೂಲೆಯಾಗಿಯೂ ಲಘುವಾಗಿಯೂ, ಮೂಲೆಗಳುಯಸಳಾಗಿಯೂ, ಕೊನೆಗಳು ಮೊನೆಯಾಗಿಯೂ ನಿರ್ಮಲವಾಗಿಯೂ ಸಹಾ ಇರುವದೇ ಐದು ಗುಣಂಗಳೆನಿಸುವವು. ಐದು ದೋಷಂಗಳು ಯಾವವೆಂದರೆ-ಮಲವು ಬಿಂದುವು ರೇಖೆಯೂ ಯವೆ ಕಾಕಪಾದವು ಇವು ಐದು ದೋಷಂಗಳು. ಹೊಳಪು ನಾಲ್ಕು ಯಾವವೆಂದರೆ-ಬಿಳಪು ಕೆಂಪು, ಹಳದಿ, ಕಪ್ಪು, ಇವು ನಾಲ್ಕು ಹೊಳಪುಗಳೂ. ಮತ್ತು ಮಲವು ಯಾವದೆಂದರೆ- ವಜ್ರದಲ್ಲಿ ಹಳ್ಳ ಬೀಳುವದೇ ಮಲವೆನಿಸಿ ಕೊಂಬುವದು, ವಜ್ರಗಳಿಗೆ ಮಧ್ಯದಲ್ಲಿ ಹಳ್ಳಬಿದ್ದಿರಲು ಅದರಿಂ ಅಗ್ನಿ ಭಯ ಉಂಟಾಗುವದು' ಮೂಲೆಗಳಲ್ಲಿ ಹಳ್ಳಬಿದ್ದಿರಲು ವ್ಯಾಧಿ ಭಯ ಉಂಟಾಗುವದು, ಬಿಂದು ದೋಷವ್ಯಾವದೆಂದರೆ,_ವಜ್ರದಲ್ಲಿ ಬಟುವಾಗಿ ಕೆಂಪಾಗಿ ನೊಳೆಯಂತಿರುವದೇ ಬಿಂದುವು, ಆಬಿಂದುವು ಸುಳಿಯಂತಿದ್ದರೆ ಆವರ್ತವೆನಿಸಿಕೊಂಬುವದು, ಬಿಂದುವಿನಿಂ ಪುಟ್ಟಿದ ಕೆಂಪುರೇಖೆಯು ಪ್ರದಕ್ಷಿಣವಾಗಿದ್ದರೆ ಪರಿವರ್ತವೆನಿಸಿ ಕೊಂಬುವದು, ಬಿಂದುವು ಆಯುಸ್ಸಂ,ಧನವಂ ಕೂಡನಾಶಮಾಡುವದು, ಆವರ್ತವು ಭಯವನ್ನುಂಟು ಮಾಡುವದು, ಪರಿವರ್ತವು ವ್ಯಾಧಿಯನ್ನುಂಟು ಮಾಡುವದು, ಯವೆಗೆ ಲಕ್ಷಣ ವೇನೆಂದರೆ,-ರಕ್ತವರ್ಣವಾಗಿಯು ಶ್ವೇತವರ್ಣವಾಗಿಯೂ ಪೀತವರ್ಣವಾಗಿಯೂ. ಇರುವದೇ ಯವೆಯೂ. ಇದರಲ್ಲಿ ರಕ್ತವರ್ಣವಾಗಿರುವ ಯವೆಯು ಕುದುರೆಗಳಂ ನಾಶ ಗೊಳಿಸುವದು, ಶ್ವೇತವರ್ಣವಾಗಿರುವ ಯವೆಯು ಆಯುಸ್ಸಂ ಧನವಂ ಕೂಡ ಕೆಡಿಸುವದು, ಪೀತವರ್ಣವಾಗಿರುವ ಯವೆಯು ವಂಶವಂ ವ್ಯತ್ಯಾಸಮಾಡುವದು,ರೇಖಾದೋಷವೆಂತಿರುವದೆಂದರೆ-ಯಾವವಜ್ರಕ್ಕೆ ರೇಖೆಯು ಬಲಮುಖವಾಗಿರುವದೋ ಆ ವಜ್ರವು ಉತ್ತಮವು,ರೇಖೆಯು ಎಡಮುಖವಾಗಿದ್ದರೆ ಭಯವನ್ನುಂಟುಮಾಡುವದು, ಮತ್ತೂ ವಜ್ರದಲ್ಲಿ ಬಿರುದಂತಿರುವರೇಖೆಯು ಛೇದವೆಂಬಪೆಸರಂ ಪಡೆದು ಬಂಧುಹಾನಿಯನ್ನುಂಟು ಮಾಡುವದು, ಯಾವವಜ್ರಕ್ಕೆ ಕಾಗೆಯಹೆಜ್ಜೆಯಂತೆ

ರೇಖೆಇರುವದೋ ಆರೇಖೆಯು ಕಾಕಪಾದ ವೆನಿಸಿಕೊಂಬುವ್ರುದು, ಅದರಿಂ ಧನಧಾನ್ಯ ನಾಶವಾಗುವದು, ಮತ್ತು ಭಯ ಉಂಟಾಗುವದು, ಇದಲ್ಲದೆ ವಜ್ರಕ್ಕೆ ಸಾಧಾರಣ ಲಕ್ಷಣವೆಂತಿರುವದೆಂದರೆ-ಮೊನೆಮುರಿದಿರುವದು, ಅತ್ರ ಗುಸವುವಾಗಿರುವದು,ಮೂಲೆಗಳು ಕಿರಿದಾಗಿರುವದು, ನಾಲ್ಕು ಮೂಲೆಯಾಗಿ ರುವದು, ಹೊಳಪು ಇಲ್ಲದೇ ಇರುವದು, ಇಂತಿರ್ಪ ವಜ್ರದಿಂದ ಗುಣವ್ರೂ ಇಲ್ಲದೋಷವೂ ಇಲ್ಲ, ಮತ್ತು ವಜ್ರದಲ್ಲಿ ಒಡೆದಂತೆ ಕಾಣಿಸುವದುತ್ರಾಸ ವು ಇಂತಿರ್ಪ ವಜ್ರವಂ ಧರಿಸಿದವಂಗೆ ಮಹಾಭಯವುಉಂಟಾಗುವದು,ಮತ್ತು ವಜ್ರಗಳಲ್ಲಿ ಸ್ತ್ರೀಜಾತಿ ಪುರುಷಜಾತಿ ನಪುಂಸಕಜಾತಿಗಳೆಂದು ಮೂರು ಜಾತಿಗಳಿರುವವು, ಅದೆಂತೆನೆ-ವಜ್ರಗಳಲ್ಲಿ ದುಂಡಾಗಿಯೂ, ಶಿಲುವಾಗಿಯೂ ಚನ್ನಾಗಿ ಹೊಳಪಾಗಿಯೂ, ದೊಡ್ಡದಾಗಿಯೂ, ಬಿಂದು ರೇಖೆ ಮೊದಲಾದ ದೋಷಗಳಿಲ್ಲದೇಇರುವದೇ ಪುರುಷಜಾತಿಯು, ದುಂಡಾಗಿ, ಶಿಲುವಾಗಿ, ಹೊಳಪಾಗಿಯೂ, ದೊಡ್ಡದಾಗಿ ಬಿಂದುರೇಖೆ ಈ ಎರಡೂ ಇರುವ ವಜ್ರವು ಸ್ತ್ರೀಜಾತಿಯು, ನೀಟವಾಗಿ ಮೂರು ಮೂಲೆಯಾಗಿರುವ ವಜ್ರವು ನಪುಂಸಕಜಾತಿಯು, ಈ ಮೂರುಜಾತಿಯ ವಜ್ರಗಳಲ್ಲಿ ಪುರು ಷಜಾತಿವಜ್ರವು ಪುರುಷರಿಗೆಯೋಗ್ಯ, ಸ್ತ್ರೀಜಾತಿಯ ವಜ್ರವುಸ್ತ್ರೀರು ಗಳಿಗೆ ಯೋಗ್ಯವು,ನಪುಂಸಕ ಜಾತಿಯವಜ್ರವು, ನಪುಂಸಕರಿಗೆ ಯೋಗ್ಯವು ಪುರುಷಜಾತಿಯ ವಜ್ರವು ಈಮೂವರು ಧರಿಸಬಹುದು,ಸ್ತ್ರೀಜಾತಿವಜ್ರ ವಂ ನಪುಂಸಕವಜ್ರವಂ ಸ್ತ್ರೀನಪುಂಸಕರೇ ಧರಿಸಬೇಕು, ಮಿಕ್ಕಾದವರು ಧರಿಸಕೂಡದು,

ಇನ್ನು ಮುತ್ತುಗಳು ಪುಟ್ಟುವಸ್ಥಳಂಗಳಂ ಅದರಲಕ್ಷಣಂ ಗಳಂ ವಿಸ್ತರಿಸುವೆನು, ಅದೆಂತೆನೆ- ಮುತ್ತುಗಳಲ್ಲಿ ಜಲಜವೆಂದು ಸ್ಥಲಜವೆಂದು ಎರಡುಪರಿಯು, ಅದರೊಳ್ ಸ್ಥಲಜವ್ಯಾವದೆಂದರೆ-ಶಂಖದಲ್ಲಿಯೂ, ಮೀನಿನ ತಲೆಯಲ್ಲಿಯೂ ಮೇಘದಲ್ಲಿಯೂ, ಉತ್ತಮಸ್ತ್ರೀರುಗಳಕಿವಿಗಳಲ್ಲಿಯೂ ಬಿದರಿನಲ್ಲಿಯೂ, ಕಾಡುಹಂದಿಯ ಕೋರೆಗಳಲ್ಲಿಯೂ ಹಾವಿನತಲೆಯ ಲ್ಲಿಯೂ, ಆನೆಯಕೊಂಬಿನಲ್ಲಿಯೂ ಕೊಕ್ಕರೆಯಕಿವಿಯಲ್ಲಿಯೂ, ಕಬ್ಬಿನ ಗಿಣ್ಣಿನಲ್ಲಿಯೂ, ಭತ್ತದದಂಟಿನಲ್ಲಿಯೂ, ಕಪ್ಪೆಯಚಿಪ್ಪಿನ

ಲ್ಲಿಯೂ, ಸಿಂಹದಭುಜದಲ್ಲಿಯೂ, ಇಂತು ಹದಿಮೂರು ಕಡೆಯಲ್ಲಿ ಹುಟ್ಟುವ ಮುತ್ತುಗಳು ಸ್ಥಳಜವೆನಿಸಿಕೊಳ್ಳುವವು, ಈಮುತ್ತುಗಳ ವರ್ಣಂಗಳಂ ಪೇಳುವೆನು, ಅದೆಂತೆನೆ, ಶಂಖದಲ್ಲಿ ಹುಟ್ಟಿದಮುತ್ತುಗಳು ಬಿಳುಪಾಗಿ ಕಪ್ರೋತಪಕ್ಷಿಯ ಮೊಟ್ಟೆಯಂತೆ ಇರುವದು, ಇದು ಉತ್ತಮ. ಮೀನಿನತಲೆಯಲ್ಲಿ ಹುಟ್ಟುವಮುತ್ತುಗಳು ಪಾದರಿಹೂವಿನವರ್ಣದಂತಿರುವದು, ಮೇಘದಲ್ಲಿ ಹುಟ್ಟುವ ಮುತ್ತುಗಳು ಸೂರ್ಯನ ಪ್ರಭೆಯಿಂದ ಒಪ್ಪಿರುವದು, ಉತ್ತಮಸ್ತ್ರೀಯರುಗಳ ಕಿವಿಗಳಲ್ಲಿಯೂ, ಕೊಕ್ಕರೆಯ ಕಿವಿಗಳಲ್ಲಿಯೂ ಸಿಂಹದಭುಜದಲ್ಲಿಯೂ ಹುಟ್ಟುವಮುತ್ತುಗಳು ದುರ್ಲಭಂಗಳು, ಬಿದರಿನಲ್ಲಿ ಹುಟ್ಟಿದ ಮುತ್ತು ಅನೇಕಲಿಸವರ್ಣದಿಂದಿರುವದು, ಇದು ಶ್ರೇಷ್ಠ, ಹಂದಿಯ ಕೋರೇದಾಡೆಯೊಳ್ ಹುಟ್ಟಿದ ಮುತ್ತು ಕೆಂಪಾಗಿರುವದು, ಹಾವಿನತಲೆಯೊಳ್ ಹುಟ್ಟಿದ ಮುತ್ತು ನೀಲವರ್ಣವಾಗಿರುವದು ಆನೆಯ ಕೊಂಬಿನೊಳ್ ಹುಟ್ಟುವ ಮುತ್ತು ಹಳದೀ ವರ್ಣವಾಗಿರುವದು. ಕಬ್ಬಿನಗಿಣ್ಣಿನಲ್ಲಿಯೂ ಭತ್ತದದಂಟಿನಲ್ಲಿಯೂ ಇರುವಮುತ್ತುಗಳು ಅರಿಸಿನ ವರ್ಣವಾಗಿರುವದು ಕಪ್ಪೆಚಿಪ್ಪಿನಲ್ಲಿ ಹುಟ್ಟುವಮುತ್ತು ಚಂದ್ರನ ಕಾಂತಿಯಂತಿರುವದು ಕಪ್ಪೆಚಿಪ್ಪಿನಲ್ಲಿಯೂ ಶಂಖದಲ್ಲಿಯೂ ಹುಟ್ಟಿದ ಮುತ್ತುಗಳು ಬಹಳವಾದ್ದರಿಂದಲೂ ಗುಣಗಳು ಹೆಚ್ಚಾಗಿರುವದ್ದರಿಂದಲೂ ಉತ್ತಮಂಗಳೆನಿಸಿಕೊಳ್ಳುವವು, ಇಂತಲ್ಲದೆ ಈ ಮುತ್ತುಗಳಿಗೆ ದೇವತೆಗಳಂ ಪೇಳುವೆನು. ನೀಲವರ್ಣವಾಗಿರುವ ಮುತ್ತುಗಳಿಗೆ ವಿಷ್ಣುವು ಅಧಿದೇವತೆಯು, ಹಳದಿಯ ವರ್ಣವಾಗಿರುವ ಮುತ್ತುಗಳಿಗೆ ಇಂದ್ರನು ಅಧಿದೇವತೆಯು, ಮೇಘವರ್ಣವಾಗಿರುವ ಮುತ್ತುಗಳಿಗೆ ಯಮನು ಅಧಿದೇವತೆಯು, ಕೆಂಪುವರ್ಣವಾಗಿರುವ ಮುತ್ತುಗಳಿಗೆ ವಾಯುವು ಅಧಿದೇವತೆಯು, ಬಿಳುಪಾಗಿರುವಮುತ್ತುಗಳಿಗೆ ವರುಣನು ಅಧಿದೇವತೆಯೂ ಪಾದರೀಹುವ್ವಿನ ವರ್ಣದಿಂದಿರುವ ಮುತ್ತುಗಳಿಗೆ ಅಗ್ನಿಯು ಅಧಿದೇವತೆಯೂ ಈ ರೀತಿಯಲ್ಲಿ ವರ್ಣಭೇದಂಗ ದೇವತೆಗಳು ಭಿನ್ನಂಗಳಾಗಿರುವರೂ, ಆರುಲಕ್ಷಣಂಗಳಿಂದ ಕೂಡಿರುವ ಮುತ್ತುಗಳು ಉತ್ತಮಂಗಳು, ಆರುಲಕ್ಷಣಗಳ್ಯಾವವೆಂದರೆ ಶುಭ್ರವರ್ಣವು ಬಟುವು ನಿರಾಳವು ಭಾರವು ನುಣುಪು ಹೊಳಪು ಇಲ್ಲದೇ ಇರುವನು ಈ

ಆರು ಲಕ್ಷಣಂಗಳಿಂ ಯುಕ್ತವಾಗಿರುವ ಮುತ್ತುಗಳಂ ಯಾರು ಧರಿಸುವರೋ ಅವರಿಗೆ ಆಯುಸ್ಸು ಐಶ್ವರ್ಯವು ಅಧಿಕವಾಗಿ ಉಂಟಾಗುವದು ದಾರಿದ್ರ್ಯವು ತೊಲಗುವದು, ಮೇಘದೊಳ್ ಪುಟ್ಟಿದಮುತ್ತುಗಳು ಸರ್ವೋತ್ತಮವು, ಇದು ದೇವತೆಗಳಿಗೂ ಕೂಡ ದೊರಕಲಸಾಧ್ಯವು, ಆನೆಯ ಕೊಂಬಿನಲ್ಲಿಯೂ ಪರ್ವತದಲ್ಲಿಯೂ ಉಂಟಾಗುವ ಮುತ್ತು ತಪಸ್ಸಿನಿಂದಲ್ಲದೇ ದೊರಕದು. ಕಲಿಯುಗದೊಳ್ ಕಪ್ಪೆಚಿಪ್ಪಿನಲ್ಲಿ ಉಂಟಾಗುವ ಮುತ್ತುಗಳು ಬಹಳವಾಗಿದೊರಿಯುವದು, ಮೇಘದಲ್ಲಿ ಉಂಟಾಗುವ ಮುತ್ತುಗಳು ಕೋಳಿಯ ಮೊಟ್ಟೆಯಷ್ಟು ಧಪ್ಪವಾಗಿ ಅದರಂತೆ ಆಕೃತಿವುಳ್ಳದ್ದಾಗಿ ಭಾರವಾಗಿ ಹೆಚ್ಚು ಕಡಮೆಯಿಲ್ಲದೇ ಸೂರ್ಯಪ್ರಭೆಯಂತೆ ಹೊಳೆಯುತ್ತಿರುವದು, ಇದು ದೇವತಾಯೋಗ್ಯವು, ಮನುಷ್ಯರು ಧರಿಸಕೂಡದು. ಹಾವಿನತಲೆಯಲ್ಲಿ ಹುಟ್ಟುವಮುತ್ತುಗಳು ಬಟುವಾಗಿರುವವು ಪುಣ್ಯಹೀನರಿಗೆ ದೊರೆಯತಕ್ಕದ್ದಲ್ಲಾ. ಕಾಡುಹಂದಿಯಕೋರೆದಾಡೆಗಳಲ್ಲಿ ಪುಟ್ಟುವ ಮುತ್ತುಗಳುಅಂಕೋಲೇಬಿತ್ತದಷ್ಟು ಧಪ್ಪವಾಗಿರುವದು, ತಪಸ್ಸಿನಿಂದಲ್ಲದೇ ಸುಮ್ಮನೆ ದೊರೆಯದು. ಮೀನಿನಲ್ಲಿಹುಟ್ಟುವಮುತ್ತುಗಳು ಗುಲಗಂಜಿಯಷ್ಟು ಧಪ್ಪವಾಗಿಯು ಹೆಚ್ಚುಕಡಮೆ ಇಲ್ಲದೇ ಲಘುವಾಗಿ ಪಾದರೀಹುವ್ವಿನವರ್ಣವಾಗಿ ಬಟುವಾಗಿರುವದು. ಬಿದರಿನಲ್ಲಿ ಪುಟ್ಟುವಮುತ್ತುಗಳು ಮುತ್ತಿನಚಿಪ್ಪಿನವರ್ಣವಾಗಿಯೂ, ಮಂಜಾಡಿಮಣಿಯಷ್ಟು ಧಪ್ಪವಾಗಿಯೂ ಇರುವದು, ಆಮುತ್ತುಗಳು ಅನೇಕ ಪುಣ್ಯವಂತರಿಗಲ್ಲದೇ ಸಾಮಾನ್ಯರಿಗೆ ದೊರೆಯದು. ಅಥವಾ ತಪಸ್ಸಿಂ ದೊರತರೂ ದಕ್ಕುವದಿಲ್ಲಾ, ದಕ್ಕಬೇಕಾದರೆವೇದಮಂತ್ರಗಳಿಂದ ರಕ್ಷಿಸಬೇಕು. ಶಂಖದಿಂ ಹುಟ್ಟಿದಮುತ್ತುಗಳು ವಿಷ್ಣುವಿನವರ್ಣವಾಗಿರುವದು. ಪಾರಿವಾಳದ ಹಕ್ಕಿಯ ಮೊಟ್ಟೆಯಷ್ಟು ಧಪ್ಪವಾಗಿರುವದು, ಇದು ಸಮಸ್ತ ದೋಷವಂಪರಿಹರಿಸಿ ಕ್ಷೇಮವನ್ನುಂಟುಮಾಡುವದು. ಇನ್ನು ಜಲಜವಾದ ಮುತ್ತುಗಳ ಲಕ್ಷಣವಂ ಪೇಳುವೆನು ಅದೆಂತೆನೆ-ಸಮುದ್ರದಲ್ಲಿ ಮುತ್ತುಗಳು ಎಂಟು ಕಡೆಯೊಳ್ ಹುಟ್ಟುವವು, ಆಸ್ಥಳಗಳು ಯಾವ್ಯಾವದೇಶಕ್ಕೆ ಸೇರಿದ್ದೆಂದರೆ-ಸಿಂಹಳ ಸಾರಲೀಕ ಸೌರಾಷ್ಟ್ರ ತಾಮ್ರಪರ್ಣೀ ಪಾರಶೀಕ ಕೌಬೇರ ಪಾಂಡ್ಯ ವಾಟಕವೆಂಬ ಈಎಂಟು ದೇಶಂಗಳಿಗೆ ಶೇರಿರುವ

ಸಮುದ್ರದಲ್ಲಿ ಹುಟ್ಟುವವು, ಆಮುತ್ತುಗಳು ಸ್ವಾತಿ ... ಸೂ
ರ್ಯನು ಸ್ವಾತೀನಕ್ಷತ್ರಕ್ಕೆ ಬಂದು ಇರುತ್ತಿರಲಾಗಿ ... ವ
ಮಳೆಯುಹನಿಗಳು ಮುತ್ತಿನಚಿಪ್ಪಿನಲ್ಲಿ ಬೀಳಲು ಆವೇ ನಿರ್ಮಲವಾದಮುತ್ತು
ಗಳಾಗುವವು, ಒಪ್ಪವಿದ್ದಂತೆ ಮುತ್ತುಗಳಿಗೆ ಕ್ರಯಹೆಚ್ಚುವದು, ರುಕ್ಮಿಣೀದೇ
ವಿಯುಮುಖದಿಂದಮುಕ್ತಂಗಳಾದಕಾರಣ ಮುತ್ತುಗಳಿಗೆ ಮುಕ್ತಾಮಣಿಗ
ಳೆಂಬಹೆಸರುಂಟಾಯಿತು, ಇಂಥಾ ಮುತ್ತುಗಳಿಗೆ ಪ್ರಬಲವಾದದೋಷಂಗಳು
ನಾಲ್ಕು ಮಧ್ಯಮವಾದ ದೋಷಂಗಳು ಐದು ಅವು ಯಾವಾವೆಂದರೆ ಚಿಪ್ಪಿ
ನಪೊರಪಾಗಿಯೂ ಕರಡು ಆಗಿಯು ಮೀನಿನ ಹೊಟ್ಟೆಯ ವರ್ಣವಾಗಿಯು
ಬಹು ಕೆಂಪಾಗಿಯು ಇರುವದು ನಾಲ್ಕು ಪ್ರಬಲದೋಷಂಗಳು, ಮೂರು
ಅಂತರವಾಗಿಯು ಚಪ್ಪಟೆಯೂಗಿಯು ಬಾಯಿನೀಳವಾಗಿಯು ಅಳ್ಳೆಹತ್ತ
ನಾಗಿಯು ನೀಟವಾಗಿಯು ಇರುವ ಐದು ದೋಷಂಗಳು ಮಧ್ಯಮವು, ಈ
ಒಂಭತ್ತು ದೋಷಂಗಳೂ ಬಿಡತಕ್ಕದ್ದು. ಇದಲ್ಲದೇ ಮುತ್ತುಗಳಲ್ಲಿ ಒಂ
ಭತ್ತು ಗುಣಂಗಳಿರುವವೂ ಅವುಯಾವವೆಂದರೆ—ಮಧುವರ್ಣ ಹಳದಿ
ವರ್ಣ ಬಿಳುಪುವರ್ಣ ಈಮೂರುವರ್ಣದಮುತ್ತುಗಳು ಮತ್ತುಮ
ನೋಹರವಾಗಿ ಬಿಳಪಾಗಿ ಭಾರವಾಗಿ ನುಣುಪಾಗಿ ಕೆಳೆಯಾಗಿ ನಿರಾಳ
ವಾಗಿ ಸೂತ್ರವಾಗಿ ಜಲವರ್ಣವಾಗಿ ಬಟುವಾಗಿರುವ ಈ ಒಂಭತ್ತು ಗುಣಂ
ಗಳಿಂದ ಯುಕ್ತವಾದ ಮುತ್ತುಗಳು ಉತ್ತಮಂಗಳು. ಇಂತುಅಲ್ಲದೆ ಬಿಳು
ಪಾಗಿ ನಿರಾಳವಾಗಿ ಬೆವರುವಂತೆ ಕಾಣಿಸುವದಾಗಿ ಶೀತಳವಾಗಿ ಇರುವಮು
ತ್ತುಗಳಂ ಧರಿಸಿದವರಿಗೆ ಸಂತೋಷ ಉಂಟಾಗುವದು. ನೀರಸವಾಗಿ ಕಾಡಿಗೆ
ಯಂತೆ ಕಪ್ಪಾಗಿ ತಾಮ್ರವರ್ಣವಾಗಿ ಕಲ್ಲುಪ್ಪಿನವರ್ಣವಾಗಿ ಭಿನ್ನವಾಗಿ
ವಿಕಾರರಾಗಿ ಗಂಟು ಗಂಟಾಗಿರುವ ಮುತ್ತುಗಳಂ ಸರ್ವದಾಮುಟ್ಟಕೂಡದು,
ಶಂಖದಲ್ಲಿ ಮೀನಿನಲ್ಲಿ ಬಿದರಿನಲ್ಲಿ ಆನೆಯಲ್ಲಿ ಹಂದಿಯಲ್ಲಿ ಹಾವಿನಲ್ಲಿ
ಮೇಘದಲ್ಲಿ ಸಹಾ ಹುಟ್ಟಿದ ಮುತ್ತುಗಳಿಗೆ ವೆಜ್ಜಗಳಂ ಹಾಕಬಾರದು.
ಇಂತು ಪೇಳಿದ ಮುತ್ತುಗಳಲ್ಲಿರುವ ಗುಣದೋಷಂಗಳಂ ತಿಳಿದು ದೋಷ
ವುಳ್ಳಮುತ್ತುಗಳಂ ಬಿಟ್ಟು ಗುಣವುಳ್ಳಮುತ್ತುಗಳಂ ಧರಿಸಿದವರಿಗೆ ಪುತ್ರ
ಪೌತ್ರ ಸಂಪತ್ತು ವಿದ್ಯಾ ಆಯುಸ್ಸು ಕೀರ್ತಿ ಐಶ್ವರ್ಯ ಮೊದಲಾದ್ದು ಉಂ

ಟಾಗುವದು. ಮತ್ತು ಶುದ್ಧವಾದ ಸ್ಥಳದಲ್ಲಿ ಬೆಳ್ಳಿಯ ಬಟ್ಟಲಿನೊಳ್ ಮುತ್ತು ಗಳಂ ಇರಿಸಿ ಮೂಳಿಗೇ ಮೇಲೆ ಮಡಗಲು ಆಗಲೆ ಮಳಬಂದರೆ ಆಮುತ್ತುಗ ಳನ್ನು ನಾಗರತ್ನವೆಂದು ತಿಳಿಯುವದು.

ಇನ್ನು ರತ್ನದ ಉತ್ಪತ್ತಿಸ್ಥಳವಂ ಅದರಗುಣಂಗಳಂ ದೋಷಂಗ ಳಂ ಸಹಾ ಪೇಳುವೆನು – ಕೆಂಪುರತ್ನಂಗಳು ನಾಲ್ಕು ಸ್ಥಳಂಗಳಲ್ಲಿ ಪುಟ್ಟುವದು, ಅದು ಯಾವವೆಂದರೆ –ಸಿಂಹಳದೇಶದಲ್ಲಿರುವ ಅರ್ಕಪುರದಲ್ಲಿ ಯೂ ಕಾಲಪುರದಲ್ಲಿಯೂ, ತುಂಬುರಪುರದಲ್ಲೂ, ಕಿಪ್ಪಲದಲ್ಲಿಯೂ ಪುಟ್ಟುವದು, ಈ ಸ್ಥಳಗಳಲ್ಲಿ ಯಾವ ಕಾಲದಲ್ಲಿ ಯಾವ ಸ್ಥಳದಲ್ಲಿ ಪುಟ್ಟುವುದೆಂದರೆ – ಕೃತಯುಗದಲ್ಲಿ ಅರ್ಕಪುರದಲ್ಲಿಯೂ, ತ್ರೇತಾಯುಗ ದಲ್ಲಿ ಕಾಲಪುರದಲ್ಲಿಯೂ ದ್ವಾಪರದಲ್ಲಿ ತುಂಬುರಪುರದಲ್ಲಿಯೂ, ಕಲಿ ಯುಗದಲ್ಲಿ ಕಿಪ್ಪಲದಲ್ಲಿಯೂ ಸಹಾ ಅಧಿಕವಾಗಿ ಪುಟ್ಟುವದು, ಇವುಗಳವ ರ್ಣವೆಂತಿರುವದೆಂದರೆ –ಕೃತಯುಗದಲ್ಲಿ ಪುಟ್ಟಿದರತ್ನವು ಪದ್ಮವರ್ಣವಾಗಿರು ವದು,ತ್ರೇತಾಯುಗದಲ್ಲಿ ಪುಟ್ಟಿದರತ್ನವು ಅಬಲದಹುವ್ವಿನವರ್ಣವಾಗಿರುವದು, ದ್ವಾಪರ ಯುಗದಲ್ಲಿ ಪುಟ್ಟಿದರತ್ನವು ಮಿಂಚಿನ ಹುಳುವಿನ ಕಾಂತಿ ಯಂತಿರುವದು, ಕಲಿಯುಗದಲ್ಲಿ ಪುಟ್ಟಿದರತ್ನವು ನಕ್ಷತ್ರದಂತೆ ಹೊಳೆಯು ತಲಿರುವದು, ಇವುಗಳೊಳ್ ಉತ್ತಮವಾವವೆಂದರೆ-ಉರಿಯುವದೀಪದಂ ತೆಯು, ದಾಳಿಂಬದ ಬೀಜದಂತೆಯು, ಸೂರ್ಯನಂತೆಯೂ, ದಾಳಿಂಬದಹುವ್ವಿ ನಂತೆಯೂ, ಸೂರೀಪುಟದ ಹುಳುವಿನಂತೆಯೂ, ಇಂತೂ ಕಾಂತಿಯಾಗಿ ರುವ ರತ್ನವು ಉತ್ತಮವು. ಮತ್ತೂ ರತ್ನಗಳಲ್ಲಿ ನಾಲ್ಕುಜಾತಿಇರುವದು, ಅದೆಂತೆನೆ- ಜಾತರಂಗವೆಂಬ ರತ್ನವು ಬ್ರಾಹ್ಮಣ ಜಾತಿಯು, ಕುರುವಿಂದ ವೆಂಬ ರತ್ನವು ಕ್ಷತ್ರಿಯ ಜಾತಿಯು, ಸೌಗಂಧಿಕವೆಂಬ ರತ್ನವು ವೈಶ್ಯ ಜಾತಿಯು, ಗವಾಂಗವೆಂಬರತ್ನವು ಅನಿಲಗಂಧೀ ಎಂಬ ರತ್ನವು ಶೂದ್ರಜಾ ತಿಯು, ಇದರಲ್ಲಿ ಜಾತರಂಗವೆಂಬ ಬ್ರಹ್ಮಜಾತಿಯ ರತ್ನಕ್ಕೆ ಹೊಳಪು ಹತ್ತು ಪರಿಯಾಗಿರುವದು. ಕುರುವಿಂದವೆಂಬ ಕ್ಷತ್ರಿಯ ಜಾತಿರತ್ನಕ್ಕೆ ಹೊಳ ಪು ಎಂಟು ಪರಿಯಾಗಿರುವದು. ಸೌಗಂಧಿಕವೆಂಬ ವೈಶ್ಯಜಾತಿರತ್ನಕ್ಕೆ ಹೊಳಪು ಆರು ಪರಿಯಾಗಿರುವದು, ಗವಾಂಗವೆಂಬ ಅನಿಲಗಂಧೀ ಎಂಬ

ಶೂದ್ರಜಾತಿಯ ರತ್ನಗಳಿಗೆ ಹೊಳಪು ನಾಲ್ಕು ಪರಿಯಾಗಿರುವದು, ಜಾತರಂಗವೆಂಬ ಬ್ರಹ್ಮಜಾತಿಯ ರತ್ನಕ್ಕೆ ಹತ್ತು ಪರಿಯಾದ ಹೊಳಪು, ಯಾವ್ಯಾವೆಂದರೆ—ಪದ್ಮದಂತೆ ಕೆಂಪಿನ ಅಬಲದ ಹುವ್ವಿನಂತೆ ಮಿಂಚಿನ ಹುಳುವಿನಂತೆ ಅಗ್ನಿಯಂತೆ ಕೋಗಿಲೆಯ ಕಣ್ಣುಗುಡ್ಡೆಗಳಂತೆ ಉರಿಯುವ ದೀಪದಂತೆ ದಾಳಿಂಬದ ಬೀಜದಂತೆ ಈ ಹುವ್ವಿನಂತೆ ಸೂರ್ಯನಂತೆ ಸೂರೀಪುಟದ ಹುಳುವಿನಂತೆ ಇಂತು ಹತ್ತು ಪರಿಯಾಗಿರುವ ರತ್ನವು ಜಾತರಂಗವೆಂದರಿವುದು. ಕ್ಷತ್ರಿಯ ಜಾತಿಯ ಕುರುವಿಂದವೆಂಬ ರತ್ನಕ್ಕೆ ಎಂಟುಪರಿಯಾದ ಹೊಳಪು ಯಾವವೆಂದರೆ-ಲೋಧ್ರದಹುವ್ವಿನಂತೆ ಮುತ್ತುಗದಹುವ್ವಿನಂತೆ ಕೆಂಪುದಾಸವಾಣದ ಹುವ್ವಿನಂತೆ ಗುಲಗಂಜಿಯಂತೆ ಮೊಲದ ರಕ್ತದಂತೆ ಕುಂಕುಮದಂತೆ ಸೋರುಗಾದ ಕಬ್ಬಿಣದಂತೆ ಮಂಜಾಡಿಯ ಮಣಿಯಂತೆ ಇಂತು ಇರುವ ರತ್ನವು ಕ್ಷತ್ರಿಯ ಜಾತಿ ಎಂದು ತಿಳಿಯತಕ್ಕದ್ದು. ಅಶೋಕದ ಚಿಗುರಿನಂತೆ ಅರಗಿನ ರಸದಂತೆ ಕೋಗಿಲೆಯ ಕಣ್ಣಿನಂತೆ ಪುಳ್ಳಿಯಲಗದ ಹುವ್ವಿನಂತೆ ಹೆಮ್ಮರದ ಹುವ್ವಿನಂತೆ ಕಾದಕಬ್ಬಿಣದಂತೆ ಈ ಆರುಪರಿಯಾದ ಹೊಳಪುಳ್ಳ ರತ್ನವು ಸೌಗಂಧಿಕವೆಂಬ ವೈಶ್ಯಜಾತಿಯ ರತ್ನವು, ಕುಸುಂಬೆಹುವ್ವಿನಂತೆ ತೊಂಡೇ ಹಣ್ಣಿನಂತೆ ಹೊಳಪುಳ್ಳ ರತ್ನವು ಕೆಂಪಿನ ತ್ಯಾರಣದ ಹುವ್ವಿನಂತೆ ಶುದ್ಧ ರಕ್ತದಂತೆ ಹೊಳಪುಳ್ಳ ರತ್ನವು ಕ್ರಮವಾಗಿ ಗವಾಂಗವೆಂಬ ಅನಿಲಗಂಧಿ ಎಂಬ ಶೂದ್ರಜಾತಿಯ ರತ್ನಗಳೆಂದು ತಿಳಿಯಬೇಕು. ಈ ನಾಲ್ಕು ಜಾತಿಯ ರತ್ನಗಳಲ್ಲಿ ಉತ್ತಮ ಮಧ್ಯಮ ಅಧಮವೆಂದು ಮೂರು ಪರಿಯುಂಟು, ಅವು ಯಾವವೆಂದರೆ-ಊರ್ಧ್ವ ಕಾಂತಿಯಾಗಿರುವದು ಉತ್ತಮವು, ಪಾರ್ಶ್ವ ಕಾಂತಿಯಾಗಿರುವದು ಮಧ್ಯಮವು, ಅಧೋಮುಖ ಕಾಂತಿಯಾಗಿರುವದು ಅಧಮವು, ಇಂತಲ್ಲದೆ ಎಂಟು ಪರಿಯಾದ ದೋಷಂಗಳಿರುವವು, ಅದೆಂತೆನೆ-ಒಂದು ರತ್ನದಲ್ಲಿ ಎರಡು ಪರಿಯಾದ ಕಾಂತಿಯಿದ್ದರೆ ದ್ವಿಚ್ಛಾಯವೆಂಬ ದೋಷವು ಇದರಿಂ ಅಪಜಯ ಉಂಟಾಗುವದು, ಎರಡು ಪಾಲಿನಂತೆ ಕಾಣುವ ಕೆಂಪು ಭಿನ್ನವೆಂಬ ದೋಷ ಉಳ್ಳದ್ದು ಇದರಿಂ ಶಸ್ತ್ರಭಯವು,ಕೆಂಪಿನ ಗರ್ಭದಲ್ಲಿ ಮಳಲಿನಂತೆ ಕಾಣುವದು ಕರ್ಕರವೆಂಬ ದೋಷವು ಇದರಿಂ ಪಶುಗಳಿಗೂ ಬಂಧುಗಳಿಗೂ ಹಾನಿ ಉಂಟಾಗುವದು, ಕೆಂಪಿನಲ್ಲಿ ಹಾಲುಕೆನೆಯಂತೆ

ಕಾಣುವದು ಅದು [illegible]ಪಟಲವೆಂಬ ದೋಷವು ಇದರಿಂ ಅಶುಭ ಉಂಟಾಗುವದು. ಕೆಂಪಿನ [illegible] ತುಷ್ಟಾರ ಬಿಂದುವಿನಂತೆ ಕಾಣುವದು ಕೋಮಲವೆಂಬ ದೋಷವು ಇದರಿಯಿಂ [illegible] ಶಕ್ತಿಕ್ಷಯವೆಂಬ ಭಯವು ಈ ಮೂರಂ ಕಡಿಸ [illegible] ಕೆಂಪಿನಲ್ಲಿ ಕೋಮಳವು ಇಲ್ಲದಿದ್ದರೆ ಅದೇ ಜಡವೆಂಬ ದೋಷವು ಅದರಿಂ [illegible] ಅಪವಾದವು ಉಂಟಾಗುವದು. ಕೆಂಪಿನಲ್ಲಿ ಹೊಗೆಯಂತೆ ಕಾಣುವದೇ ಧೂಮ್ರವೆಂಬ ದೋಷವು, ಇದರಿಂ ಭಯ ಉಂಟಾಗುವದು. ಇಂತು ಎಂಟು ದೋಷಂಗಳುಳ್ಳ ರತ್ನಂಗಳಂ ಜೊತೆಗೆ ತೆಗೆಯಬಾರದು ಅಥವಾ ಸುಮ್ಮನೆ ದೂರದಿಂದರೂ ಮುಟ್ಟಬಾರದು. ಉತ್ತಮವಾದ ಕೆಂಪು ಎಂತಿರುವದೆಂದರೆ-ನುಣುಪಾಗಿ ಕಾಂತಿಯುಕ್ತವಾಗಿ ಭಾರವಾಗಿ ನಿಷ್ಕಳಂಕವಾಗಿ ಅತಿ ಕೆಂಪಾಗಿ ದೊಡ್ಡದಾಗಿ ಬಟುವಾಗಿ ಸಮನಾಗಿ ಇಂತು ಲಕ್ಷಣಯುಕ್ತವಾದ ರತ್ನವು ಸರ್ವೋತ್ತಮವು, ಇಂತಿರುವ ರತ್ನವಂ ವರ್ಸಕ್ರಮದಿಂ ಧರಿಸಲು ಅಪರಿಮಿತವಾದ ಗೋದಾನ ಹಿರಣ್ಯದಾನ ಭೂದಾನ ವಿದ್ಯಾದಾನ ಅನ್ನದಾನ ಕನ್ಯಾದಾನ ಮತ್ತು ನೂರು ಅಶ್ವಮೇಧದಿಂದುಂಟಾದ ಫಲವು ಬರುವದು, ಮೊದಲು ಹೇಳಿದ ಜಾತರಂಗವೆಂಬ ಬ್ರಹ್ಮಜಾತಿಯ ರತ್ನವಂ ಬ್ರಾಹ್ಮಣನು ಧರಿಸಿದರೆ ಬ್ರಹ್ಮತೇಜಸ್ಸು ಹೆಚ್ಚುವದು, ಕುರುವಿದವೆಂಬ ಕ್ಷತ್ರಿಯಜಾತಿ ರತ್ನವಂ ಕ್ಷತ್ರಿಯೋತ್ತಮನು ಧರಿಸಲು ಸಾರ್ವಭೌಮನಾಗುವನು, ಸೌಗಂಧಿಕವೆಂಬ ವೈಶ್ಯಜಾತಿಯ ರತ್ನವಂ ವೈಶ್ಯನು ಧರಿಸಲು ಧನಾಢ್ಯನಾಗುವನು, ಗವಾಂಗವೆಂಬ ಅನಿಲ ಗಂಧೀ ಎಂಬ ಶೂದ್ರಜಾತಿಯ ರತ್ನಂಗಳಂ ಶೂದ್ರನು ಧರಿಸಿದರೆ ಗೋವು ಧಾನ್ಯಸಮೃದ್ಧಿಯಾಗುವದು. ಉತ್ತಮವಾದ ರತ್ನಗಳಿಗೆ ಒಂದಾನೊಂದು ಕಾರಣದಿಂದ ಮಾಲಿನ್ಯ ಉಂಟಾದರೆ ಆಮಾಲಿನ್ಯವಂ ಪರಿಹರಿಸುವದಕ್ಕೆ ಕಂಚಿನಪಾತ್ರೆಯಲ್ಲಿ ದಾಳಿಂಬೇ ಹಣ್ಣಿನ ರಸವಂ ಹಿಂಡಿ ಏಳುದಿನ ಆರತ್ನವಂ ನೆನೆಯಹಾಕಲು ಮಾಲಿನ್ಯವು ಪೋಗಿ ಕಾಂತಿಹೆಚ್ಚುವದು. ಮತ್ತೂ ಹಾವಿನತಲೆಯಲ್ಲಿ ಹುಟ್ಟುವ ರತ್ನವು ತುಂಬೆಯವರ್ಣವಾಗಿಯು ನವಿಲಿನ ಕೊರಳಿನ ವರ್ಣವಾಗಿಯೂ ದೀಪದಂತೆಯು ಪ್ರಕಾಶಿಸುತ್ತಿರುವದೂ, ಆರತ್ನವಂ ನಿತ್ಯದಲ್ಲೂ ಧರಿಸುವ ಅರಸಿಗೆ ವಿಷದಭಯವು ಶತ್ರುಗಳ ಭಯವೂ ಉಂಟಾಗೆ

ಲರಿಸಾಗಿ, ಈಐಕ್ಷ್ಯಪ್ರಭಾವದಿಂದಲೇ ದಿನದಿನಗಲೂ ರಾಜ್ಯಾಭಿವೃದ್ಧಿ ಯಾಗಿ ಕಾಲಕಾಲಗಳ್ಲ್ಲಿ ಮಳೆಯಾಗುತ್ತ ದೇಶಂಗಳಲ್ಲಿ ಫಲಗಳು ಪೈರುಗಳು ಸಮೃದ್ಧಿಯಾಗಿ ಉಂಟಾಗುವದು.

ಇನ್ನು ಪಚ್ಚೆಯ ಉತ್ಪತ್ತಿಯುಂ ಲಕ್ಷಣವಂ ಪೇಳುವೆನು ಅದೆಂತೆನೆ, ವಲಾಸುರನಶರೀರದಪಿತ್ತವುಎಲ್ಲಿಎಲ್ಲಿ ಬಿದ್ದುದೋ ಅಲ್ಲಲ್ಲಿ ಪಚ್ಚೆಯ ಗಣಿ ಹುಟ್ಟುವದು, ಇಂತಲ್ಲದೇಪರಮೇಶ್ವರನು ಮೋಹಿನಿಯಂ ಬೆನ್ನಟ್ಟಿ ಪೋಗುವ ಸಮಯದೋಳ್ ಬಿದ್ದ ಶುಕ್ಲವಂ ಗರುಡನು ಭಕ್ಷಿಸಿದನು, ಅನಂತರ ಆಗರುಡನು ಆ ಶುಕ್ಲವಂಸಹಿಸಲಾರದೇ ಮ್ಲೇಛ್ಛದೇಶದಲ್ಲಿ ವಮನವಂ ಮಾಡಿದನು ಆದ್ದರಿಂದ ಆಸ್ಥಳವು ಪಚ್ಚೆಯು ಹುಟ್ಟುವದಕ್ಕೆ ಕಾರಣವಾಯಿತು, ಅಲ್ಲಿ ಹುಟ್ಟುವ ಪಚ್ಚೆಗೆ ಗಾರುತ್ಮಂತವೆಂದುಹೆಸರುಂಟಾಯಿತು. ಇಂತಲ್ಲದೇ ಅರುಣನು ಇದ್ದ ಮೊಟ್ಟೆಯಂ ವಿನತೆಯು ಗರುಡನಿಗೆ ಉಡಿಗೆಜ್ಜೆಯಾಗಿ ಕಟ್ಟಲು ಆ ಮಗನುಬಾಲಕ್ರೀಡೆಯನ್ನಾಡುವಲ್ಲಿ ಆ ಮೊಟ್ಟೆಯ ತುಂಡುಗಳು ಎಲ್ಲಲ್ಲಿ ಬಿದ್ದುದೋ ಆಸ್ಥಳಗಳೆಲ್ಲಾ ಪಚ್ಚೆಯ ಗಣಿಗಳಾದವು, ಆ ಗಣಿಗಳು ಸಮುದ್ರದಪ್ರಾಂತ್ಯದಲ್ಲಿಯೂ ದುರ್ಗಸ್ಥಳಗಳಲ್ಲಿಯೂ ಇರುವದೂ ಆಗಣಿಗಳೋಳ್ ಉಂಟಾದ ಪಚ್ಚೆಗಳಲ್ಲಿ ಗ್ರಾಹ್ಯವೆಂದು ಅಗ್ರಾಹ್ಯವೆಂದು ಎರಡುಬಗೆಯಾಗಿರುವದು ಅದರಲ್ಲಿ ಗ್ರಾಹ್ಯವೆಂತಿರುವದೆಂದರೆ–ಗಾಢವೆಂದು ಉಲ್ಲಸಿತವೆಂದುಪೇಶಲವೆಂದುಪಿತ್ತಕವೆಂದುಮುಗ್ಧವೆಂದುಪೃಥಕವೆಂದುಆರುಬಗೆಯಾಗಿರುವದು ಅದರೋಳ್ ಗಾಢವೆಂಬುದು ದೂರ್ವಾದಳದ ವರ್ಣವಾಗಿಯು, ಉಲ್ಲಸಿತವೆಂಬುದು ಮಿಂಚುಹುಳುವಿನ ಕಾಂತಿಯಾಗಿಯೂ ನಿಚ್ಚಳವಾಗಿಯು, ಪೇಶಲವೆಂಬುದುಭತ್ತದಗರಿಯ ವರ್ಣವಾಗಿಯೂ. ಪಿತ್ತಕವೆಂಬುದು ಗಿಣಿಯ ರಕ್ಕೆಯಂತೆಯೂ,-ಮುಗ್ಧವೆಂಬುದು ತುಳಸೀ ವರ್ಣವಾಗಿಯೂ ಇರುವದೂ, ಈ ಆರೂ ಉತ್ತಮವು. ದೋಷವೆಂತಿರುವುದೆಂದರೆ– ದೋಷಲೇಶಾಂಚಿತವೆಂದು ದುಷ್ಟವೆಂದು ದೋಷಮೂರ್ಛಿತವೆಂದು ದೋಷಲೇಶವೆಂದು ಮಂದದೋಷವೆಂದು ಐದು ಬಗೆಯಾಗಿರುವದು, ಅದರೋಳ್ ದೋಷ ಲೇಶಾಂಚಿತ ವೆಂಬುದು ನಿಂಬೆ ಎಲೆಯ ವರ್ಣವಾಗಿಯು ದುಷ್ಟವೆಂಬುದು

ಣಿಗಿಲೆ ಎಲೆಯ ವರ್ಣವಾಗಿಯು ದೋಷಕುಂಠಿತನೆಂಬುವು ಸಪ್ಪು ರಿಯ ವರ್ಣವಾಗಿಯೂ ದೋಷಭೇಶನೆಂಬುದು ಇಬ್ಬನಿಯಲ್ಲಿ ನೆನೆಯುವ ತಾವರೇಎಲೆಯ ವರ್ಣವಾಗಿಯು, ಮಂದದೋಷವೆಂಬುದು, ಹತ್ತೀದರ್ಭೆವರ್ಣ ವಾಗಿಯೂ ಇರುವದು, ಈ ದೋಷಗಳಿಂದ ಯುಕ್ತವಾದ ಪಚ್ಚೆಗಳ್ಳ ಧರಿಸಬಾರದು, ಮೇಲೆ ಹೇಳಿದ ಗುಣಗಳಿಂದ ಯುಕ್ತವಾದ ಪಚ್ಚೆಗಳಂ ಧರಿಸಿದರೆ ಸಮಸ್ತ ಶತ್ರುಗಳೂ ಪಾದಾಕ್ರಾಂತರಾಗಿರುವರು, ಮತ್ತೂ ರಥ ಗಜತುರುಗ ಮೊದಲಾದವಾಹನಗಳನಿತ್ತು ಸುಖವನ್ನುಂಟುಮಾಡುವವು.

ಇನ್ನು ನೀಲರತ್ನದ ಉತ್ಪತ್ತಿಯಂ ಲಕ್ಷಣವಂ ಸಹ ಹೇಳುವೆನು, ಅದೇಂತೆನೆ- ನೀಲರತ್ನವು ಹುಟ್ಟುವದಕ್ಕೆ ನಾಲ್ಕು ಕಾರಣಗಳುಂಟು ಅದು ಯಾವದೆಂದರೆ- ವಲಾಸುರನ ಕಣ್ಣುಗುಡ್ಡೆಯು, ಪರಮೇಶ್ವರನ ಕಂಠದಲ್ಲಿರುವ ವಿಷವು, ಸೂರ್ಯನ ಪತ್ನಿಯಾದ ಸಂಜ್ಞಾದೇವಿಯು ಒಂದಾನೊಂದು ಕಾರಣದಿಂದ ಅಶ್ವರೂಪದಿಂದಿರಲು ಸೂರ್ಯನು ಕಾಮೋದ್ರೇಕದಿಂ ಪತ್ನಿಯಾದ ಆಸಂಜ್ಞಾದೇವಿಯಂ ಅರಸಿಕೊಂಡು ಪೋಗಿ ತಾನೂ ಅಶ್ವರೂಪವಂ ಧರಿಸಿ ಅವಳಂ ಬೆನ್ನಟ್ಟಿ ಪೋಗುವಲ್ಲಿ ಸ್ರವಿಸಿದ ಶುಕ್ಲವು, ಇಂದ್ರನು ತ್ವಷ್ಟ್ರಬ್ರಹ್ಮನ ಮಗನಾದ ವಿಶ್ವರೂಪನ ವಧೆಯಂ ಮಾಡುತ್ತಲು ಅದರಿಂ ಪ್ರಾಪ್ತವಾದ ದೋಷದ ಪರಿಹಾರಕ್ಕೋಸುಗ ಅಶ್ವಮೇಧ ಮಾಡಲು ಆ ಅಶ್ವದ ಕಣ್ಣುಗಳ ಮಲವು ಈ ನಾಲ್ಕು ನೀಲರತ್ನಂಗಳುಪುಟ್ಟುವದಕ್ಕೆ ಕಾರಣವಾಯಿತೂ, ಈ ನಾಲ್ಕು ಕಾರಣದಿಂ ಪುಟ್ಟಿದ ರತ್ನಗಳಂ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕುಜಾತಿ ಕ್ರಮದಿಂ ನಾಲ್ಕು ವಿಧವಾಗಿ ಪುಟ್ಟಿತು, ಅದೆಂತಿರುವದೆಂದರೆ- ಬ್ರಹ್ಮಜಾತಿಯ ನೀಲವು ಸ್ವಲ್ಪಬಿಳುಪು ವರ್ಣವಾಗಿರುವದು ಕ್ಷತ್ರಿಯಜಾತಿಯ ನೀಲವು ಸ್ವಲ್ಪ ರಕ್ತವರ್ಣವಾಗಿರುವುದು ವೈಶ್ಯಜಾತಿಯ ನೀಲವು ಬಿಳಪು ಕಪ್ಪುಕೂಡಿರುವದು, ಶೂದ್ರಜಾತಿಯ ನೀಲವು ಬಹು ಕಪ್ಪುವರ್ಣದಿಂ ಕೂಡಿರುವದು, ಮತ್ತೂ ನೀಲದಲ್ಲಿ ಎರಡು ಪರಿಯು ಅದೆಂತೆಂದರೆ-ಲಘುವಾಗಿ ಗರ್ಭದಲ್ಲಿ ಬಿಳಪು ಕಾಣುವದೇ ಜಲನೀಲವೆಂಬುದು, ನೀಲಮಧ್ಯದಲ್ಲಿ ಕಪ್ಪುವರ್ಣಕಾಣು

ತಕ್ಕವಾಗಿರುವದೇ ಇಂದ್ರನೀಲವು ಸಿಂಹಳ ದ್ವೀಪದಲ್ಲಿ ಸಿಂಧೂನದಿ ವರುಣಾವತೀ ಗಂಗಾನದಿಯೂ, ಈ ಎರಡು ನದಿಯ ತಡಿಯಲ್ಲಿಯೂ, ಪದ್ಮಕಾನನದಲ್ಲಿಯೂ, ಉಂಟಾಗುವ ನೀಲಗಳಿಗೆ ಆರು ಪರಿಯಾದ ದೋಷಗಳುಂಟು, ಯಾವವೆಂದರೆ_ನೀಲದಲ್ಲಿ ಮೋಡದಂತೆ ಪಟಲವಿರಲು ಆ ನೀಲಕ್ಕೆ ಅಭ್ರಕವೆಂದು ಹೆಸರು, ಅದಂಧರಿಸಲು ಆಯುಸ್ಸು ಸಂಪತ್ತು ಈ ಎರಡೂ ನಾಶವಾಗುವದೂ. ನೀಲದಮಧ್ಯದಲ್ಲಿ ಮಳಲಂತೆ ಕಾಣಲು ಅದಕ್ಕೆ ಸಶರ್ಕರವೆಂಬ ಹೆಸರು, ಅದಂಧರಿಸಲು ಶರೀರದಲ್ಲಿ ಆಯಾಸವನ್ನುಂಟು ಮಾಡುವದು ಇಂತಲ್ಲದೇ ದೇಶತ್ಯಾಗವಂ ಮಾಡಿಸುವದು. ನೀಲದಮಧ್ಯದಲ್ಲಿ ಬಿರಿದಂತೆ ಕಾಣಲು ಅದಕ್ಕೆ ಬಿದುರಂ ಎಂಬ ಹೆಸರು, ಅದಂ ಧರಿಸಲು ಸರ್ಪಭಯ ಉಂಟಾಗುವದು, ಭಿನ್ನವಾಗಿರುವ ನೀಲಕ್ಕೆ ಭಿನ್ನವೆಂದು ಹೆಸರು, ಅದಂ ಧರಿಸಲು ಪತ್ನಿಗೆವ್ಯತ್ಯಾಸ. ಬರುವದು. ಗರ್ಭದಲ್ಲಿ ಮಣ್ಣು ಇರುವಂತೆ ಕಾಣುವನೀಲಕ್ಕೆ ಅಶ್ಮಗರ್ಭವೆಂದು ಹೆಸರು, ಅದಂಧರಿಸುವವನಿಗೆ ಅವಮಾನ ಉಂಟಾಗುವದು, ಚಿತ್ರವರ್ಣವಾಗಿರುವ ನೀಲಕ್ಕೆ ಚಿತ್ರವೆಂದು ಹೆಸರು, ಅದಂಧರಿಸಲು ಸರ್ವದಾದುಃಖವೇ ಉಂಟಾಗುವದು, ಈ ಆರು ವಿಧದೋಷಂಗಳು ಪ್ರಬಲವೆಂದು ತಿಳಿಯುವದು, ಮತ್ತೂ ಗುಣಂಗಳ್ಯಾವವೆಂದರೆ, - ಭಾರವಾಗಿರುವ ನೀಲವು ಕಾಂತಿಯಾಗಿಯೂ ಪಾರ್ಶ್ವದಲ್ಲಿ ಪ್ರಭೆ ಉಂಟಾಗಿಯೂ ತೃಣವಂ ಗ್ರಹಿಸುವದಾಗಿಯೂ ನಿಶ್ಚಳವಾಗಿಯೂ ಇರುವುವೇ ಐದು ಗುಣಂಗಳು. ನೀಲಕ್ಕೆ ಛಾಯೆಯು ಎಂಟು ಪರಿಯಾಗಿರುವದು, ಯಾವವೆಂದರೆ - ನೀಲಿರಸದಂತೆವರ್ಣವಾಗಿಯೂ, ವಿಷ್ಣುಕ್ರಾಂತಿಯ ಹುವ್ವಿನ ವರ್ಣವಾಗಿಯೂ, ಗಿರಿಕರ್ಣಿಕಾ ಹುವ್ವಿನ ವರ್ಣವಾಗಿಯೂ, ನೈದಿಲೆಯ ಹುವ್ವಿನವರ್ಣವಾಗಿಯೂ, ಅಗಸೇ ಹುವ್ವಿನವರ್ಣ ವಾಗಿಯೂ ಕರೀತ್ಯಾರಣದ ಹುವ್ವಿನ ವರ್ಣವಾಗಿಯೂ, ನೀರಂಜೀ ಹುವ್ವಿನ ವರ್ಣವಾಗಿಯೂ, ನವಿಲಿನ ಕೊರಳಿನವರ್ಣವಾಗಿಯೂ ಇರುವವೇ ಎಂಟುವಿಧ ಛಾಯೆಗಳು. ಮತ್ತೂ ನೀಲದಮಧ್ಯದಲ್ಲಿ ಕಾಮನಬಿಲ್ಲಿನಂತೆ ಛಾಯೆ ಕಾಣಲು ಅದು ಮಹಾನೀಲವೆನಿಸುವದು, ಇದಕ್ಕೆ ಬೆಲೆ ಇಲ್ಲದ್ದು ಕಾರಣ ಲೋಕದೊಳ್ ದುರ್ಲಭವು

ಉತ್ತಮವಾದ ನೀಲರತ್ನಕ್ಕೆ ಲಕ್ಷಣವೇನೆಂದರೆ—ನೀಲರತ್ನವಂ ಹಾಲಿನ ಬಟ್ಟಲಿನಲ್ಲಿ ಹಾಕಲು, ಹಾಲುಸಹಿತವಾಗಿ ನೀಲವರ್ಣವಾಗಿ ಕಾಣಲು ಅದು ಮಹಾನೀಲವೆನಿಸುವದು. ನೀಲಕ್ಕೆ ವರ್ಣ ಹೆಚ್ಚಾಗಬೇಕಾದರೆ ನೀಲೀಹೂವಿನ ರಸವು ದಾಳಿಂಬೆ ಹಣ್ಣಿನ ರಸವಂ ಸಹ ಸಮನಾಗಿ ಬೆರಸಿ ಕಂಚಿನ ಬಟ್ಟಲಲ್ಲಿ ಹಾಕಿ ಅದರಲ್ಲಿ ನೀಲವಂ ಹಾಕಲು ವರ್ಣಹೆಚ್ಚಾಗುವದು. ದೋಷಯುಕ್ತವಾದ ನೀಲವಂ ಬಿಟ್ಟು ಗುಣಯುಕ್ತವಾದ ನೀಲವಂ ಧರಿಸಲು, ಸರ್ವಸೌಭಾಗ್ಯವುಂಟುಮಾಡಿ ಸಂರಕ್ಷಿಸುವದು.* ಇನ್ನು ಗೋಮೇಧಿಕ ರತ್ನದ ಪರೀಕ್ಷೆಯುಂ ಲಕ್ಷಣಗಳಂ ಕೂಡೆ ಪೇಳುವೆನು, ಅದೆಂತೆನೆ—ಗೋಮೇಧಿಕರತ್ನವು ಗೋಮೂತ್ರದ ವರ್ಣಯುಕ್ತವಾಗಿ ಇರುವದರಿಂದ ಗೋಮೇಧಿಕವೆಂಬ ಹೆಸರುಂಟಾಯಿತು ಪೂರ್ವದಲ್ಲಿ ವಲಾಸುರನ ಮೇಧಸ್ಸು ಯಾವ ಯಾವ ಸ್ಥಳದಲ್ಲಿ ಬಿದ್ದುದೋ ಆಯಾಯ ಸ್ಥಳಗಳಲ್ಲಿ ಗೋಮೇಧಿಕ ಪುಟ್ಟುವದಕ್ಕೆ ಗಣಿಯಾಗಿರುವದು. ಆ ಗಣಿಯಲ್ಲಿ ಪುಟ್ಟಿದ ಗೋಮೇಧಿಕವು ಜೇನುತುಪ್ಪದ ವರ್ಣವಾಗಿಯೂ, ಗೋಮೂತ್ರದ ವರ್ಣವಾಗಿಯೂ, ಕಾಸಿತುಪ್ಪದ ವರ್ಣವಾಗಿಯೂ ಇದ್ದರೆ ಉತ್ತಮವಾದವು. ಮತ್ತು ನಿರ್ಮಲವಾಗಿಯೂ, ನುಣುಪಾಗಿಯೂ, ಸಮನಾಗಿಯೂ, ಭಾರವಾಗಿಯೂ, ಹುರುಪುಯಿಲ್ಲದೆಯೂ, ತಿಳುಪಾಗಿಯೂ, ಪ್ರಕಾಶವಾಗಿಯೂ, ಮನೋಹರವಾಗಿಯೂ ಇಂತು ಎಂಟು ಗುಣಂಗಳಂ ಯುಕ್ತವಾಗಿರುವ ಗೋಮೇಧಿಕವು ಉತ್ತಮೋತ್ತಮವೆಂದರಿವುದು. ಕಾಂತಿಯಿಲ್ಲದೆಯೂ, ಲಘುವಾಗಿ ನೀರಸವಾಗಿ ಅಳ್ಳೆಹತ್ತನಾಗಿ ಹೊಳಪುಳ್ಳದ್ದಾಗಿ ನಿಷ್ಪ್ರಭೆಯಾಗಿ ಊಷರಭೂಮಿಯ ವರ್ಣವುಳ್ಳದ್ದಾಗಿ ಇರುವ ಗೋಮೇಧಿಕವು ಕನಿಷ್ಠವೆಂದರಿವುದು, ಅಶುಭವನ್ನುಂಟುಮಾಡುವುದು. ದೋಷರಹಿತವಾಗಿ ಶುಭಲಕ್ಷಣದಿಂ ಕೂಡಿರ್ಪ ಗೋಮೇಧಿಕವಂ ಧರಿಸಲು ಶರೀರವಂ ಪರಿಶುದ್ಧವಂ ಮಾಡಿ ಪಾಪವಂ ಪರಿಹರಿಸುವದು. ಇಂತಿರ್ಪ ಗೋಮೇಧಿಕ ರತ್ನವಂ ಮೊದಲು ಹೇಳಿದ ಕ್ರಮದಿಂದ ನವರತ್ನದ ಲಕ್ಷಣಾದಿಯೊಳ್ ಪೇಳಿದಂತೆ ವರ್ಣಾನುಕ್ರಮವಾಗಿ ಆಯಾಯ ವರ್ಣದವರೇ ಧರಿಸತಕ್ಕದ್ದು.* ಇನ್ನು ಪುಷ್ಯರಾಗದ ಉತ್ಪತ್ತಿಯುಂ ಲಕ್ಷಣವಂ ಸಹ ವಿವರಿಸುವೆನು, ಅದೆಂತೆನೆ—ಶ್ರೀವ

ನಾರಾಯಣನು ಆದಿವರಾಹಾವತಾರವಂ ತಾಳಿ ಹಿರಣ್ಯಾಕ್ಷನೆಂಬ ದೈತ್ಯನಂ ಸಂಹರಿಸುವ ಕಾಲದಲ್ಲಿ ಕೋಪದಿಂ ಹುಂಕಾರವಂ ಮಾಡಲು, ಆಗ ನಾಸಿಕದಿಂದ ಕಫಗಳು ಎಲ್ಲೆಲ್ಲಿ ಬಿದ್ದವೋ, ಮತ್ತು ಬಲಾಸುರನ ಕಫಗಳು ಎಲ್ಲೆಲ್ಲಿ ಬಿದ್ದವೋ, ಅಲ್ಲಲ್ಲಿ ಪುಷ್ಯರಾಗದ ಗಣಿಗಳುಂಟಾದವು. ಈ ರತ್ನವು ಎಂತಿರುವುದೆಂದರೆ—ಸುವರ್ಣಛಾಯೆಯುಳ್ಳದಾಗಿ ಶಿರೋಭಾಗದಲ್ಲಿ ಬಟುವಾಗಿ ಬೆಂಕಿಯ ಕೆಂಡದಂತೆ ಕಾಂತಿಯುಕ್ತವಾಗಿ ಮನೋಹರವಾಗಿ ಕನ್ನಡಿಯಂತೆ ಸರಾಳವಾಗಿ ಅತಿ ಸುಣವಾಗಿ ಇಂತು ಲಕ್ಷಣಯುಕ್ತವಾಗಿರುವ ಪುಷ್ಯರಾಗವು ಉತ್ತಮವೆಂದು ತಿಳಿಯತಕ್ಕದ್ದು. ಪ್ರಭಾರಹಿತವಾಗಿಯೂ, ತೆರಿಯದಾಗಿಯೂ, ನೀರಸವಾಗಿಯೂ, ಅರಿಶಿನದ ವರ್ಣವಾಗಿಯೂ, ಶ್ಯಾಮವರ್ಣವಾಗಿಯೂ, ಕಪಿಲವರ್ಣವಾಗಿಯೂ, ಅರಿದ ಛಡೆ ವರ್ಣವಾಗಿಯೂ ಬಿಳುಪುವರ್ಣವಾಗಿಯೂ ನಾನಾವರ್ಣವಾಗಿಯೂ, ಇಂತಿಹ ಪುಷ್ಯರಾಗವು ದೋಷಯುಕ್ತವೆಂದರಿತು ಸಂಗ್ರಹಿಸಬಾರದು. ಪ್ರೋಕ್ತವಾದ ಶುಭಲಕ್ಷಣದಿಂದೊಡಗೂಡಿದ ಪುಷ್ಯರಾಗರತ್ನವಂ ಧರಿಸಿದವರು ಬೃಹಸ್ಪತಿಗೆ ಸಮಾನವಾದ ಬುದ್ಧಿಶಾಲಿಗಳಾಗುವರು. ಮತ್ತು ಈ ಪುಷ್ಯರಾಗ ರತ್ನವು ಉತ್ತಮವಾದ ಕಾರಣ ಬ್ರಹ್ಮದೇವನು ಪಾರಿಯಾತ್ರ ಪರ್ವತದ ಶೃಂಗಂಗಳಂ, ಮಂದರ ಪರ್ವತದ ಶೃಂಗಂಗಳಂ, ಇದೇ ಪರ್ವತದ ತಪ್ಪಲಂ, ಅಮರಾವತಿಯ ಪಟ್ಟಣವಂ, ಸುಧರ್ಮ ಸಭೆಯುಂ ಈ ನಾಲ್ಕು ಸ್ಥಳಂಗಳಂ ಪುಷ್ಯರಾಗದಿಂದಲೇ ನಿರ್ಮಿಸಿರುವನು. ಆದಕಾರಣ ಜಯವಂ ಅಪೇಕ್ಷಿಸುವ ಭೂಪತಿಗಳು ದೋಷರಹಿತವಾದ ಪುಷ್ಯರಾಗ ರತ್ನವಂ ಅವಶ್ಯವಾಗಿ ಧರಿಸಬೇಕು. ಅವರ ದೇಶದಿಂದ ಜಯಲಕ್ಷ್ಮಿಯು, ಭಾಗ್ಯಲಕ್ಷ್ಮಿಯಿಂದೊಡಗೂಡಿ ಸದಾ ಭೂಪತಿಗಳ ಗೃಹಗಳಲ್ಲಿ ವಿಹರಿಸುತ್ತಿರುವಳು.* ಇನ್ನು ವೈಡೂರ್ಯ ರತ್ನದ ಉತ್ಪತ್ತಿಯಂ ಅದರ ಲಕ್ಷಣಂಗಳಂ ವಿವರಿಸುವೆನು, ಅದೆಂತೆನಲು—ಯಜ್ಞಕ್ಕೆ ಸಾರ್ಥಕವಾದ ಬಲಾಸುರನ ಶರೀರದ ರೋಮಗಳು ಎಲ್ಲೆಲ್ಲಿ ಬಿದ್ದಿರುವುದೋ ಆ ಸ್ಥಳಗಳೆಲ್ಲವೂ ವೈಡೂರ್ಯದ ಗಣಿಗಳಾದವು. ಆಸ್ಥಳಗಳ್ಯಾವದೆಂದರೆ-ಇಳಾವೃತಖಂಡದಲ್ಲಿಯೂ, ಮೇರುಪರ್ವತದ ಪಶ್ಚಿಮಭಾಗದಲ್ಲಿಯೂ, ಅನೇಕ ಗಣಿಗಳಿರುವವು. ಮತ್ತು ಗೋರಕ್ಷದೇಶ, ಮಗಧ,

ಪಾರಶೀಕ, ಸಿಂಹಳ, ಮಲಯಾಚಲ, ತ್ರಿಕೂಟಪರ್ವತ, ಇನ್ನೂ ಕೆಲವು ದ್ವೀಪಾಂತರಗಳಲ್ಲಿಯೂ ವೈಢೂರ್ಯದ ಗಣಿಗಳಾಗುವವು. ಇಂತಲ್ಲದೆ ಅತಿ ಕಠಿಣವಾದ ಮೇಘಗರ್ಜನೆಯಿಂದ ಭೂಮಿಯು ಬಿರಿದು ವೈಢೂರ್ಯದ ಗಣಿಯು ಕಾಣಿಸುವದು. ಎಲೈ ರಾಜಚೂಡಾಮಣಿಯೆ! ವೈಢೂರ್ಯದಲ್ಲಿ ಉತ್ತಮವೆಂತಿರುವದೆಂದರೆ—ಬಿದಿರು ಎಲೆಯ ವರ್ಣವಾಗಿ ಚಿಕ್ಕನೆ ಕೆಂಜಿನ ವರ್ಣವಾಗಿ ನವಿಲಿನ ಕೊರಳಿನವರ್ಣವಾಗಿ ನುಣುಪಾಗಿ ಘನಾತ್ರವಾಗಿ, ನಿರ್ಮಲವಾಗಿ, ಭಾರವಾಗಿ ಇಂತು ಲಕ್ಷಣದಿಂದ ವೈಢೂರ್ಯವು ಉತ್ತಮವೆಂದು ತಿಳಿಯುವುದು. ಬ್ರಹ್ಮಜಾತಿ ವೈಢೂರ್ಯಕ್ಕೆ ಬಲದ ಪಾರ್ಶ್ವದಲ್ಲಿ ಕಾಂತಿ ವಿಶಾಲವಾಗಿರುವುದು. ಕ್ಷತ್ರಿಯ ಜಾತಿಯ ವೈಢೂರ್ಯಕ್ಕೆ ಎಡದ ಪಾರ್ಶ್ವದಲ್ಲಿ ಕಾಂತಿ ವಿಶಾಲವಾಗಿರುವುದು. ವೈಶ್ಯಜಾತಿಯ ವೈಢೂರ್ಯಕ್ಕೆ ಹಿಂಭಾಗದಲ್ಲಿ ಕಾಂತಿ ವಿಶಾಲವಾಗಿರುವುದು. ಶೂದ್ರಜಾತಿಯ ವೈಢೂರ್ಯಕ್ಕೆ ಮುಂಭಾಗದಲ್ಲಿ ಕಾಂತಿ ಹೆಚ್ಚಾಗಿರುವುದು. ಮತ್ತು ವೈಢೂರ್ಯದಲ್ಲಿ ಸಾಮಾನ್ಯಗುಣಂಗಳೆಂತಿರುವುದೆಂದರೆ—ಶ್ಯಾಮವರ್ಣವಾಗಿ, ಶುಭ್ರವಾಗಿ, ಸಮವಾಗಿ, ನಿರ್ಮಲವಾಗಿ, ಭಾರವಾಗಿ, ಪ್ರಕಾಶವಾಗಿ, ಗರ್ಭದಲ್ಲಿ ವ್ಯೋಮದ್ಯಾಡುನಂತೆ ಕಾಣುವ ಬಿಳುಪಾದ ಸೂತ್ರವುಳ್ಳದ್ದಾಗಿ ಈ ಲಕ್ಷಣಯುಕ್ತವಾಗಿರುವ ವೈಢೂರ್ಯವು ಉತ್ತಮವೆನಿಸಿಕೊಳ್ಳುವುದು. ಮತ್ತು ಹಸುರಾಗಿಯೂ, ಜಲವರ್ಣವಾಗಿಯೂ, ಲಘುವಾಗಿಯೂ, ತರಿಯಾಗಿಯೂ, ಗರ್ಭದೊಳಿರುವ ಸೂತ್ರವು ಅಡದೇಯಿರುವದಾಗಿಯೂ, ಅವಲಕ್ಕೀವರ್ಣವಾಗಿಯೂ, ಈ ಆರು ಅಪಗುಣಗಳಿಂ ಯುಕ್ತವಾದ ವೈಢೂರ್ಯವು ದೋಷಯುಕ್ತವು. ಮತ್ತು ವೈಢೂರ್ಯದೊಳ್ ಜೀವರತ್ನವೆಂಬ ಹೆಸರುಳ್ಳದ್ದು ಎಂತಿರುವದೆಂದರೆ—ಮುಂಗಾರು ಮುಗಿಲು ಪುಟ್ಟುವಕಾಲದೊಳ್ ವಿಡೂರ ಭೂಮಿ ಬಿರಿದು ಅದರೊಳ್ ಮಿಂಚಿನ ಹೊಳಪಿನಂತೆ ಕಾಂತಿಯಿಂದೊಡಗೂಡಿ ಹುಟ್ಟುವ ವೈಢೂರ್ಯವೇ ಜೀವರತ್ನವೆಂದರಿವುದು. ಮತ್ತು ಮುಂಗಾರಿನ ಮೇಘೋದಯವಾದ ಕಾಲದೊಳ್ ಸ್ಥಳಾಂತರದಲ್ಲಿ ಮೇಲೆ ಹೇಳಿರುವ ರೀತಿಯಲ್ಲಿ ಹುಟ್ಟುವ ವೈಢೂರ್ಯವು ಪೀತವರ್ಣದ ವೈಢೂರ್ಯವೆಂದರಿವುದು. ಮತ್ತು ವಿಶಿ

ಷ್ಟ ವೈಡೂರ್ಯಕ್ಕೆ ಹನ್ನೊಂದುಬಗೆ ದೋಷವು, ಹದಿಮೂರು ಬಗೆ
ಸೂತ್ರವೂ, ಐದುಬಗೆ ವರ್ಣವು, ಆರುವಿಧ ಗುಣಂಗಳು ಉಂಟು. ಅದೆಂ
ತೆಂದರೆ— ಪೀತವರ್ಣವಾಗಿ, ರಕ್ತವರ್ಣವಾಗಿ, ಶ್ವೇತವರ್ಣವಾಗಿ, ಶಾಮವ
ರ್ಣವಾಗಿ, ಜೇನುತುಪ್ಪದ ಬಿಂದುವಿನ ವರ್ಣವಾಗಿ, ಇಂತು ನಾಲ್ಕು ವರ್ಣ
ದಿಂದ ಬ್ರಾಹ್ಮಣಾದಿ ನಾಲ್ಕು ಜಾತಿಯೆಂದರಿವುದು. ಮತ್ತು ಮಧುವ
ರ್ಣವು ಸಂಕರಜಾತಿಯು ಹಳದೀವರ್ಣವಾಗಿರುವದು ಉತ್ತಮವು,
ಗೋಮೇಧವರ್ಣವಾಗಿರುವದು ಮಧ್ಯಮವು. ಶ್ವೇತವರ್ಣವಾಗಿರುವದು
ಅಧಮಾಧಮವೆಂದರಿವುದು. ಇಂತಲ್ಲದೇ ಸೂತ್ರಪರೀಕ್ಷೆಯಂ ಮಾಡುವ
ಪರಿಹ್ಯಾಗೆಂದರೆ— ವೈಡೂರ್ಯವಂ ಕಸವಿಮೇಲೆ ಇರಿಸಿದಮಾತ್ರದಿಂದ
ಲೇ ತನಗೆ ತಾನೇ ತಿರಿಗಿ ಸೂತ್ರವು ತನಗೆ ಅಭಿಮುಖವಾಗುವದೇ ಬ್ರಹ್ಮ
ಸೂತ್ರವೆಂಬುವುದು ವೈಡೂರ್ಯವು ಒಂದು, ಎರಡು, ಮೂರು,
ನಾಲ್ಕು, ಐದು, ಬಹುಸೂತ್ರಗಳಿಂದಲೂ ಕೂಡಿರುವದು. ಅವುಗಳಲ್ಲಿ ಎರ
ಡು, ಮೂರು, ಸೂತ್ರವುಳ್ಳ ಉತ್ತಮಂಗಳು. ನಾಲ್ಕು, ಐದು, ಬಹುಸೂ
ತ್ರಗಳಿರುವ ವೈಡೂರ್ಯಗಳು ಮಧ್ಯಮಂಗಳು ಅರ್ಧಸೂತ್ರವಾ
ಗಿಯೂ, ಪಾರ್ಶ್ವಸೂತ್ರವಾಗಿಯೂ, ತುಂಡುತುಂಡಾದ ಸೂತ್ರವುಳ್ಳದ್ದಾ
ಗಿಯೂ, ಗರ್ಭಸೂತ್ರವಾಗಿಯೂ, ಹೊಗೆಬಣ್ಣದ ಸೂತ್ರವಾಗಿಯೂ,
ಪೃಷ್ಟಸೂತ್ರವಾಗಿಯೂ, ಈ ಆರುಪರಿ ಸೂತ್ರವುಳ್ಳ ವೈಡೂರ್ಯಂಗಳು
ಅಧಮಂಗಳು ಮಲಿನವಾಗಿಯೂ, ಪ್ರಭೆಯಿಲ್ಲದೆಯೂ, ಲಘುವಾಗಿಯೂ
ಅವಲಕ್ಷಿವರ್ಣವಾಗಿಯೂ, ಚುಕ್ಕಿಚುಕ್ಕಿಯಾಗಿಯೂ, ಇಬ್ಬನಿಯಂತೆ
ಯೂ, ಗರ್ಭದೊಳ್ ಮರಳುಯಿರುವಂತೆ ಕಾಣಿಸುವುದಾಗಿಯೂ
ನಾನಾವರ್ಣವಾಗಿಯೂ, ಅಲ್ಲಾಡದೇಯಿರುವ ಸೂತ್ರವುಳ್ಳದ್ದಾಗಿಯೂ,
ನೀರಸವಾಗಿಯೂ, ತುರಿತುರಿಯಾಗಿಯೂ, ಈ ಹನ್ನೊಂದು ಬಗೆಯಾಗಿರು
ವ ವೈಡೂರ್ಯಗಳು ದೋಷಯುಕ್ತಂಗಳು, ಮತ್ತು ನಿರ್ಮಲವಾಗಿ
ಯೂ, ಭಾರವಾಗಿಯೂ, ಹಳದೀವರ್ಣವಾಗಿಯೂ, ನಯವಾಗಿಯೂ,
ಅಡ್ಡಲಾಗಿಯೂ, ಆಡುವ ಮೂರು ಸೂತ್ರಂಗಳುಳ್ಳದ್ದಾಗಿಯೂ, ಗರ್ಭ
ದೊಳ್ ಪ್ರಕಾಶಿಸುತಲಿರುವ ಸೂತ್ರವುಳ್ಳದ್ದಾಗಿಯೂ, ಸಣ್ಣದಾಗಿಯೂ,
ಇಂತು ಗುಣಯುಕ್ತವಾಗಿರುವ ವೈಡೂರ್ಯವು ಉತ್ತಮವು ಇದಂ

ಯಾರು ಧರಿಸುವರೋ ಅವರು ಸರ್ವತ್ರ ಪೂಜ್ಯರಾಗಿ ಭೂತಪ್ರೇತ ಪಿಶಾಚಗಳ ಭಯವಿಲ್ಲದೇ ಸುಖದಿಂದಿರುವರು * ಇನ್ನು ಹವಳದ ಉತ್ಪತ್ತಿಯುಂ ಅವರ ಲಕ್ಷಣವುಂ ಕೂಡ ವಿಸ್ತರಿಸುವೆನು ಅದೆಂತೆನೆ—ಪೂರ್ವದೊಳ್ ವಲಾಸುರನ ಮಾಂಸವು ಎಲ್ಲೆಲ್ಲಿ ಬಿದ್ದವೋ ಆಯಾಯ ಸ್ಥಳಗಳಲ್ಲಿ ಹವಳ ಹುಟ್ಟುವುದಕ್ಕೆ ಗಣಿಯಾದುವು. ಮತ್ತೂ ಮೊದಲು ಬ್ರಹ್ಮದೇವನು ರಜೋಗುಣಪ್ರಧಾನವಾದ ಶರೀರದಿಂದ ಪಿತೃದೇವತೆಗಳಂ ಸೃಜಿಸಿ, ಒಂದಾನೊಂದು ಕಾರಣದಿಂದ ಆ ಶರೀರವಂ ಬಿಡಲು, ಆ ಶರೀರದ ಸಂಬಂಧವಾದ ಮಲಗಳು ಎಲ್ಲೆಲ್ಲಿ ಬಿದ್ದವೋ ಅಲ್ಲಲ್ಲಿ ಹವಳಗಳು ಹುಟ್ಟುವದಕ್ಕೆ ಸ್ಥಳಂಗಳಾದವು. ಇಂತಲ್ಲದೇ ದೇವೇಂದ್ರನು ಲೋಕೋಪಕಾರಾರ್ಥವಾಗಿ ಪರ್ವತಗಳ ರೆಕ್ಕೆಗಳಂ ಛೇದಿಸಿದ ಕಾಲದೊಳ್ ಆ ರೆಕ್ಕೆಗಳ ರಕ್ತವು ಎಲ್ಲೆಲ್ಲಿ ಬಿದ್ದದೋ ಅಲ್ಲಲ್ಲಿ ಹವಳ ಹುಟ್ಟುವುದಕ್ಕೆ ಕಾರಣವಾಯಿತು. ಮತ್ತೂ ಅರುಣ ಹುಟ್ಟಿದ ಮೊಟ್ಟೆಯ ಚೂರುಗಳು ಎಲ್ಲೆಲ್ಲಿ ಬಿದ್ದವೋ ಅಲ್ಲಲ್ಲಿ ಹವಳ ಹುಟ್ಟುವದಕ್ಕೆ ಕಾರಣವಾಯಿತು ಮತ್ತೂ ಮಹಾವಿಷ್ಣುವಿನಿಂದ ಸಂಹೃತರಾದ ಮಧುಕೈಟಭರೆಂಬ ದೈತ್ಯರ ಮಾಂಸವು ಎಲ್ಲೆಲ್ಲಿ ಬಿದ್ದದೋ ಅಲ್ಲಲ್ಲಿ ಹವಳ ಹುಟ್ಟುವುದಕ್ಕೆ ಗಣಿಗಳಾದವು ಇಂತೂ ಈ ಸ್ಥಳಂಗಳಲ್ಲಿ ಉಂಟಾದ ಹವಳಂಗಳು ಮುತ್ತುಗದ ಹೂವಿನ ವರ್ಣವಾಗಿಯೂ, ಕಳತ ತೊಂಡೇ ಹಣ್ಣಿನವರ್ಣವಾಗಿಯೂ, ಕೆಂಪುದಾಸವಾಳದ ಹುವ್ವಿನ ವರ್ಣವಾಗಿಯೂ, ಗಿಳಿಯ ಕೊಕ್ಕಿನವರ್ಣವಾಗಿಯೂ, ಈ ನಾಲ್ಕು ಬಗೆ ವರ್ಣವುಳ್ಳ ಹವಳವು ಉತ್ತಮವು. ಮತ್ತೂ ಮಣ್ಣು ತಿಂದಿರುವುದು, ಬಾಯಿಮುಕ್ಕಾಗಿರುವುದು, ಹುಳುತ್ತಿರುವುದು, ಈ ಮೂರು ಬಗೆಯಾಗಿರುವ ಹವಳವು ಉತ್ತಮವಲ್ಲ; ಧರಿಸಲು ಯೋಗ್ಯವೂ ಅಲ್ಲ. ಮತ್ತೂ ಸೇತುವಿನ ಮಧ್ಯದಲ್ಲಿಯೂ, ಸಮುದ್ರದಮಧ್ಯದಲ್ಲಿಯೂ, ತೀರಗಳಲ್ಲಿಯೂ, ಕೂಡ ಹವಳದ ಬಳ್ಳಿಗಳುಂಟಾಗುವುವು ಆ ಬಳ್ಳಿಗಳು ಸಮುದ್ರದ ನೀರಿನ ಸ್ಪರ್ಶದಿಂದಲೂ, ತೆರೆಗಳು ಬಡಿಯುವದರಿಂದಲೂ, ಘಟ್ಟಿಯಾಗಿ ಕಲ್ಲಿನಂತಾಗುವುವು. ಅಂತಪ್ಪ ಬಳ್ಳಿಗಳು ರಕ್ತವರ್ಣವಾಗಿರಲು ಅದೇ ಹವಳವು, ಅಂಥಾ ಹವಳಗಳು ಕಳತ ತೊಂಡೇಹಣ್ಣಿನವರ್ಣವಾಗಿಯೂ, ಬಟುವಾಗಿಯೂ, ನೀಳವಾಗಿಯೂ, ವಾರೆ

ಕೋರೆ ಇಲ್ಲದೇ ಪೆಜ್ಜ ಉಳ್ಳದ್ದಾಗಿಯೂ, ನೆಯವಾಗಿಯೂ, ಹುಳುಕು ಇಲ್ಲದೇ ಇರುವದಾಗಿಯೂ, ದಪ್ಪವಾಗಿಯೂ, ಈ ಏಳುಪರಿಯಾದ ಗುಣಂಗಳಿಂ ಯುಕ್ತವಾದ ಹವಳವು ಉತ್ತಮವು, ಶುದ್ಧ ಬಿಳಪಾಗಿ, ಗೂದಿ ಯಂವರ್ಣವಾಗಿ, ಚೆಂಡಾಗಿ, ಬಟು ಇಲ್ಲದೇ ಇರುವಪಾಗಿ, ಹುಳುಕಾಗಿ, ಲಘುವಾಗಿ, ನೀರುಗಾದಯವರ್ಣವಾಗಿ, ಇಂತು ಏಳುಪರಿಯ ವರ್ಣವುಳ್ಳ ಹವಳವು ಅಧಮವೆಂದರಿವುದು. ಹವಳವು ಸ್ತ್ರೀರತ್ನವಾದ ಕಾರಣ ಉತ್ತಮ ಹವಳವಂ ಯಾವ ಸ್ತ್ರೀ ಧರಿಸುವಳೋ, ಆವಳು ದೀರ್ಘಾಯುಷ್ಯವುಳ್ಳ ಪುತ್ರನಂ ಪಡೆದು ಅರೋಗ ದೃಢಗಾತ್ರಳಾಗಿ ಸುಖದಿಂದಿರುವಳು. ಇಂತಲ್ಲದೇ ವಂಚಕರಾಗಿರುವರು ರತ್ನಗಳಂತೆ ಕೃತ್ರಿಮ ರತ್ನಂಗಳಂ ಮಾಡಿಕೊಂಡು, ಮೋಸವಂ ಮಾಡುವರು. ಅದೆಂತೆನೆ—ವಜ್ರದಿಂದ ವಜ್ರವ ಕುಯ್ಯಲು ಕೃತ್ರಿಮ ವಜ್ರವಾಗಿದ್ದಡೆ ಪುಡಿಯಾಗಿ ಹೋಗುವುದೂ, ಕೃತ್ರಿಮ ಮುತ್ತುಗಳಂ ಪರೀಕ್ಷಿಸಬೇಕಾದರೆ ಕಲ್ಲುಪ್ಪಿನಲ್ಲಿ ಕ್ರೋಳಿಯೊಳು ಅದರ ಕೃತ್ರಿಮವು ತಿಳಿಯುವುದು. ಕೆಂಪು ರತ್ನ ಮೊದಲಾದವುಗಳಂ ಪರೀಕ್ಷೆಯಂ ಮಾಡಬೇಕಾದರೆ ಸಾಣೆಯಂ ಹಿಡಿಸಿದರೆ ತಿಳಿಯುವುದು. ಅದೆಂತೆನೆ ಉತ್ತಮವಾದ ರತ್ನವಾದರೆ ಸಾಣೆಯಂ ಹಿಡಿಯಲು ಕಾಂತಿ ಹೆಚ್ಚುವುದೂ. ಕೃತ್ರಿಮವಾದರೆ ಕಾಂತಿನಷ್ಟವಾಗುವುದೂ, ಸಾಣೆಗೆ ಮೃದುವಾಗಿದ್ದರೆ ಕೃತ್ರಿಮವೆಂದರಿವುದು. ಇಂತಲ್ಲದೇ ರತ್ನಂಗಳಂ ಕೂಡಿಸಿ ಆಭರಣಂಗಳಂ ಮಾಡುವುದಕ್ಕೆ ಉತ್ತಮವು ಯಾವುದೆಂದರೆ--ವಜ್ರವು, ಮುತ್ತು, ಕೆಂಪು, ನೀಲ, ಪಚ್ಚೆ ಈ ಐದು ಉತ್ತಮರತ್ನಂಗಳು. ಈ ರತ್ನಂಗಳಂ ಸೇರಿಸಿ ಆಭರಣಂಗಳಂ ಮಾಡಿಸಬಹುದು. ಪುಷ್ಯರಾಗವಂ, ಗೋಮೇಧಿಕವಂ, ವೈಡೂರ್ಯವಂ, ಹವಳವಂ, ಇವುಗಳೊಡನೆ ಸ್ಫಟಿಕವಂ ಕೂಡೆ ಸೇರಿಸಿ ಈ ಐದು ರತ್ನಂಗಳಿಂದ ಆಭರಣವಂ ಮಾಡಿಸಬಹುದು. ಉಪರತ್ನಂಗಳೊಳ್ ಸೇರಿದ ಸ್ಫಟಿಕದ ಉತ್ಪತ್ತಿಯು ಎಂತೆಂದರೆ-ಹಿಮವತ್ಪರ್ವತದಲ್ಲಿಯೂ, ಸಿಂಹಳದ್ವೀಪದಲ್ಲಿಯೂ, ವಿಂಧ್ಯಪರ್ವತದಲ್ಲಿಯೂ, ಕಪಿಲಾನದೀ ತೀರದಲ್ಲಿಯೂ, ಈ ಸ್ಥಳಗಳಲ್ಲಿ ನಾನಾವರ್ಣವಾಗಿ ಸ್ಫಟಿಕವೆಂಬ ಉಪರತ್ನವು ಪುಟ್ಟುವುದು, ಹಿಮವತ್ಪರ್ವತದಲ್ಲಿ ಪುಟ್ಟುವ ಸ್ಫಟಿಕವು ಇಬ್ಬನಿನೀರಿನ ವರ್ಣವಾಗಿ ಸ್ವಚ್ಛವಾ

ಗಿರುತ್ತವೆ. ಇವರಲ್ಲಿ ಚಂದ್ರಕಾಂತವೆಂದು, ಸೂರ್ಯಕಾಂತವೆಂದು, ತಾರಾಕಾಂತವೆಂದು, ಮೂರು ವಿಧಯುಂಟು, ಅದೆಂತೆನೆ—ಸೂರ್ಯಕಿರಣಂಗಳ ಸಂಬಂಧದಿಂದ ಅಗ್ನಿ ಹುಟ್ಟುವುದೇ ಸೂರ್ಯಕಾಂತವು. ಪೂರ್ಣಚಂದ್ರನಕಿರಣಗಳ ಸಂಬಂಧದಿಂದ ನೀರುಹುಟ್ಟಾಗುವುದೇ ಚಂದ್ರಕಾಂತವು, ಇಂತಿವು ಸ್ಫಟಿಕವು ಕಲಿಯುಗದೋಳ್ ಮನುಷ್ಯರಿಗೆ ದೊರಕಲರಿಯದು, ಸ್ವಚ್ಛವಾಗಿಯೂ, ಸುಖವಾಗಿಯೂ, ಭಾರವಾಗಿಯೂ, ತಾಪವಿಲ್ಲದ್ದಾಗಿಯೂ, ಅತಿ ಶೀತವಾಗಿಯೂ, ಇರುವದೇ ತಾರಾಕಾಂತವು, ಮತ್ತೂ ನವರತ್ನಗಳಿಗೆ ಬೆಲೆಯುಂಕಟ್ಟುವುದಕ್ಕೆ ಸಂಕೇತವೆಂತೆಂದರೆ—ವಜ್ರಕ್ಕೆ ಮಂಜಾಡಿಯು, ಪಚ್ಚೆಗೆ ರತ್ತಿಯೂ, ಹವಳಕ್ಕೆ ಕಾಳಿನವು, ಮುತ್ತಿಂಗೆ ಕಾಂತಿಯು, ವೈಡೂರ್ಯಕ್ಕೆ ಸೂತ್ರವು, ನೀಲಕ್ಕೆ ವರ್ಣವು, ಕೆಂಪಿಗೆ ಘನವು, ಪುಷ್ಯರಾಗಕ್ಕೆ ಶುದ್ಧತ್ವವು, ಗೋಮೇಧಿಕಕ್ಕೆ ಮಂಜುಮೆಯು, ಇಂತು ನವರತ್ನಗಳಿಗೆ ಈ ಕ್ರಮದಿಂದ ಕ್ರಯಮಂ ಕಟ್ಟಬೇಕು, ಕ್ರಯಮಂ ಕಟ್ಟುವಲ್ಲಿ ಮುಸುಕಿನಲ್ಲಿ ಬೆಟ್ಟುಗಳಿಂದ ಲೆಕ್ಕದ ಸಂಕೇತವೆಂತೆಂದರೆ—ದಕ್ಷಿಣಕೈಯ ಕಿರಿಬೆರಳು ಮುಟ್ಟಲು ಒಂದು, ಅನಾಮಿಕದ ಬೆರಳುಮುಟ್ಟಲು ಎರಡು, ಮಧ್ಯದ ಬೆರಳುಮುಟ್ಟಲು ಮೂರು, ತರ್ಜನಿಯಂ ಮುಟ್ಟಲು ನಾಲ್ಕು, ಹೆಬ್ಬೆಟ್ಟಂಮುಟ್ಟಲು ಐದು, ಹೆಬ್ಬೆಟ್ಟು ಮುಟ್ಟಿ ಕಿರಿಬೆಟ್ಟು ಮುಟ್ಟಿದರೆ ಆರು, ಹೆಬ್ಬೆಟ್ಟು ಮುಟ್ಟಿ ಅನಾಮಿಕವಂ ಮುಟ್ಟಲು ಏಳು, ಇದೇಮೇರೆಗೆ ಮಧ್ಯದಬೆರಳು ಮುಟ್ಟಿದರೆ ಎಂಟು, ಈ ಮೇರೆಗೆ ತರ್ಜನಿಯಂ ಮುಟ್ಟಿದರೆ ಒಂಭತ್ತು, ಅಂಗೈ ಜಿಗಟಿದರೆ ಹತ್ತು, ಅಂಗೈಜಿಗಟಿ ಕಿರಿಬೆರಳು ಮುಟ್ಟಿದರೆ ಹನ್ನೊಂದು, ಅಂಗೈಜಿಗಟಿ ಅನಾಮಿಕವಂ ಮುಟ್ಟಿದರೆ ಹನ್ನೆರಡು, ಈ ಮೇರೆ ಮಧ್ಯದ ಬೆರಳು ಮುಟ್ಟಿದರೆ ಹದಿಮೂರು, ಈ ಮೇರೆ ತರ್ಜನಿಯಂ ಮುಟ್ಟಿದರೆ ಹದಿನಾಲ್ಕು, ಇದೇಮೇರೆ ಹೆಬ್ಬೆಟ್ಟು ಮುಟ್ಟಿದರೆ ಹದಿನೈದು, ಅಂಗೈಜಿಗಟಿ ಕಿರಿಬೆಟ್ಟು ಹೆಬ್ಬೆಟ್ಟು ಜೋಡಿಸಿ ಹಿಡಿದರೆ ಹದಿನಾರು, ಅಂಗೈಜಿಗಟಿ ಅನಾಮಿಕ ಹೆಬ್ಬೆಟ್ಟುಗಳಂ ಜೋಡಿಸಿ ಹಿಡಿದರೆ ಹದಿನೇಳು, ಅಂಗೈಜಿಗಟಿ ಮಧ್ಯದಬೆಟ್ಟು ಹೆಬ್ಬೆಟ್ಟುಗಳಂ ಜೋಡಿಸಿ ಹಿಡಿದರೆ ಹದಿನೆಂಟು, ಅಂಗೈಜಿಗಟಿ ತರ್ಜನೀ ಹೆಬ್ಬೆಟ್ಟು

ಗಳಂ ಜೋಡಿಸಿ ಹಿಡಿದರೆ ಹತ್ತೊಂಭತ್ತು, ಅಂಗೈ ಎರಡಾವರ್ತಿ ಜಗಟಿದರೆ ಇಪ್ಪತ್ತು, ಮೂರಾವರ್ತಿ ಜಗಟಿದರೆ ಮೂವ್ವತ್ತು, ನಾಲ್ಕಾವರ್ತಿ ಜಗಟಿದರೆ ನಾಲ್ವತ್ತು, ಐದಾವರ್ತಿ ಜಗಟಿದರೆ ಐವತ್ತು, ಆರಾವರ್ತಿ ಜಗಟಿದರೆ ಅರವತ್ತು, ಏಳಾವರ್ತಿ ಜಗಟಿದರೆ ಎಪ್ಪತ್ತು, ಎಂಟಾವೃತ್ತಿ ಜಗಟಿದರೆ ಎಂಭತ್ತು, ಒಂಭತ್ತಾವರ್ತಿ ಜಗಟಿದರೆ ತೊಂಭತ್ತು, ಮುಂಗೈ ಜಗಟಿದರೆ ನೂರು, ಮುಂಗೈ ಎರಡಾವರ್ತಿ ಜಗಟಿದರೆ ಇನ್ನೂರು, ಮುಂಗೈ ಮೂರಾವರ್ತಿ ಜಗಟಿದರೆ ಮುನ್ನೂರು, ನಾಲ್ಕಾವರ್ತಿ ಜಗಟಿದರೆ ನಾನೂರು, ಐದಾವರ್ತಿಜಗಟಿದರೆ ಐನೂರು, ಆರಾವರ್ತಿ ಜಗಟಿದರೆ ಆರ್ನೂರು, ಏಳಾವರ್ತಿ ಜಗಟಿದರೆ ಏಳುನೂರು, ಎಂಟಾವರ್ತಿ ಜಗಟಿದರೆ ಎಂಟುನೂರು, ಒಂಭತ್ತಾವರ್ತಿ ಜಗಟಿದರೆ ಒಂಭೈನೂರು, ಕಣಕೈವಳಭಾಗ ಜಗಟಿದರೆ ಸಾವಿರ, ಇದೇಮೇರೆ ಅದೇಸ್ಥಳದಲ್ಲಿ ಒಂಭತ್ತಾವರ್ತಿ ಜಗಟಿದರೆ ಒಂಭತ್ತು ಸಾವಿರ ಕಣಕೈಮೇಲುಭಾಗ ಜಗಟಿದರೆ ಹತ್ತು ಸಾವಿರ, ಇದೇ ಮೇರೆಗೆ ಅದೇ ಸ್ಥಳದಲ್ಲಿ ಒಂಭತ್ತಾವರ್ತಿ ಜಗಟಿದರೆ ತೊಂಭತ್ತು ಸಾವಿರ, ಹೆಬ್ಬೆಟ್ಟಿನ ಸಂಧಿನಲ್ಲಿ ಜಗಟಿದರೆ ಎರಡು ಲಕ್ಷ, ಇದೇಮೇರೆಗೆ ಒಂಭತ್ತಾವರ್ತಿ ಜಗಟಿದರೆ ಒಂಭತ್ತು ಲಕ್ಷ, ತರ್ಜನೀ ಬೆಟ್ಟಿನಸಂಧಿಯಲ್ಲಿ ಜಗಟಿದರೆ ಹತ್ತುಲಕ್ಷ, ಅಲ್ಲಿಯೇ ಒಂಭತ್ತಾವರ್ತಿ ಜಗಟಿದರೆ ತೊಂಭತ್ತು ಲಕ್ಷ. ಮಧ್ಯದ ಬೆರಳಸಂಧಿಯಲ್ಲಿ ಜಗಟಿದರೆ ಒಂದು ಕೋಟಿ, ಇದೇ ಮೇರೆಗೆ ಸಂಕೇತದಿಂದ ಲೆಕ್ಕವು ಎಷ್ಟು ಬೇಕಾದರೂ ಆಗುವದು. ಕೇಳೈ ಮಹಾರಾಜೇಂದ್ರನೇ, ಪ್ರಪಂಚದಲ್ಲಿರುವ ನವರತ್ನಂಗಳಿಗೆ ಕಾರಣ, ಅದರ ಉತ್ಪತ್ತಿಕ್ರಮ, ಅದರ ಲಕ್ಷಣ, ಅದರಿಂದಾಗುವ ಫಲಾಫಲಗಂಳು, ಅದರಕ್ರಯ, ನಿರ್ಣಯ ಮೊದಲಾದ್ದೆಲ್ಲವಂ ನಿನಗೆ ಹೇಳಿದೆನು, ಇದರೊಳ್ ಕಳಿಂಗ ರಾಜಪುತ್ರಿಯು ಪಣವಾಗಿ ಪ್ರಾರ್ಥಿಸಿದ ರತ್ನವು ಯಾವದೋ ಅದಂ ಹುಡುಕಿತಂದು ಕೊಟ್ಟು ಪಣವಂ ನೆರವೇರಿಸಬಹುದೆಂದು ನುಡಿಯಲು ಸುಗಂಧರಾಜೇಂದ್ರನು ಅದಂ ಕೇಳಿ, ಎಲೈ ಗುರುವರ್ಯನೇ ನೀನು ಹೇಳಿದ ರತ್ನಂಗಳಲ್ಲಿ ಸೌಗಂಧಿಕಾದೇವಿಯು ಪಣವಾಗಿ ಪ್ರಾರ್ಥನೆಯಂಗೈದ ರತ್ನವು ಗೊತ್ತಾಗಲಿಲ್ಲವೆನಲು, ವಿದ್ಯಾಸಾಗರನು ಎಲೈ ರಾಜೇಂದ್ರನೆ!

ಪ್ರತಿದಿನವೂ ಹನ್ನೆರಡು ಭಾರ ಬಂಗಾರವಂ ಕೊಡುವ ರತ್ನವು ದೇವಲೋಕದಲ್ಲಿರುವವಲ್ಲದೆ ಮತ್ತೆಲ್ಲಿಯೂ ಇರಲಾರದೆಂದು ನುಡಿಯಲ್ಕೆ

ವಿನೋದಸಂಚಾರಾರ್ಥವಾಗಿ ಪೋಗಿದ್ದ ಯಕ್ಷನಾಸಮಯದೋಳ್ ಚಿಂತಿಸುತಲಿರ್ದ ರಾಜೇಂದ್ರನ ಸನ್ನಿಧಿಗೆ ಬಂದು, ಅಂಜಲಿಯಂ ಮಾಡಿ ನಿಲ್ಲಲು, ರಾಜೇಂದ್ರನು ಸುಮತಿಯೊಡನೆ ಇಂತಿರ್ಪ ರತ್ನವು ನಮಗೆ ಎಂತು ದೊರಕುವುದೆಂದು ಹೇಳುತ್ತಿರಲು, ಯಕ್ಷನು ಆ ಮಾತಂ ಕೇಳಿ, ಎಲೈ ರಾಜೇಂದ್ರನೇ! ನೀನು ಅಪ್ಪಣೆಯನಿತ್ತ ಗುಣದಿಂದೊಡಗೂಡಿರುವ ರತ್ನವು ಚಿಂತಾಮಣಿ ಎಂದು ಪ್ರಸಿದ್ಧವಾಗಿ ತ್ರಿಲೋಕಾಧಿಪತ್ಯವಂ ಮಾಡುತಲಿರ್ಪ ಇಂದ್ರನ ಬಳಿಯಲ್ಲಿ ಇದ್ದುದಂ ಅದಂ ನಾನು ನೋಡಿದ್ದೆನು. ಈಗ ಇಂದ್ರನು ಅಮರಾವತಿಯಂ ಬಿಟ್ಟು ಅದೃಶ್ಯನಾಗಿರುವನಾದಕಾರಣ ಅವನ ವಸ್ತುಗಳೆಲ್ಲವೂ ಭೂಮಿಯಂ ಹೊಂದಿರುವದೆಂದು ವರ್ತಮಾನವಂ ಕೇಳಿರುವೆನು. ಅದಕ್ಕೆ ದೃಷ್ಟಾಂತವಾಗಿ ಒಂದೆರಡು ವಸ್ತುಗಳು ನಮಗೆ ಸಿಕ್ಕಿರುವದ್ದರಿಂದ ನಾನು ಕೇಳಿದ ಸಮಾಚಾರವು ನಿಶ್ಚಯವಾಗಿ ತೋರುತಲಿದೆ. ಈಗ ಈ ರತ್ನವು ಎಲ್ಲಿರುವದೋ ನೋಡಬೇಕೆಂದು ಬಿನ್ನವಿಸಲಾ ರಾಜೇಂದ್ರನು ಅದಂ ಕೇಳಿ, ಎಲೈ ಯಕ್ಷನೇ! ಆ ರತ್ನವು ಪಂಚಾಶತ್ಕೋಟಿ ಯೋಜನ ವಿಸ್ತೀರ್ಣವಾದ ಭೂಮಂಡಲದೊಳು ಚೆನ್ನಾಗಿ ಹುಡುಕಿ ನೋಡಿ ಗೊತ್ತುಮಾಡಿಕೊಂಡು ಬರುವದಲ್ಲದೇ ಆ ರತ್ನದ ಲಕ್ಷಣವಂ ನೀನೇ ಬಲ್ಲೆಯಾದಕಾರಣ ಅದಂ ಗೊತ್ತುಮಾಡುವುದಕ್ಕೆ ನೀನೇ ಯೋಗ್ಯನು ವೇಗದಿಂ ಪೋಗಿ ಅದು ಇರುವಸ್ಥಲವಂ ಗೊತ್ತುಮಾಡಿಕೊಂಡು ಬರುವುದೆಂದು ಅಪ್ಪಣೆಯನ್ನೀಯಲು;

ಯಕ್ಷನು ಆಕ್ಷಣದಲ್ಲಿಯೇ ಹೊರಟು ಭೂಮಂಡಲವೆಲ್ಲವಂ ಹುಡುಕಿ ನೋಡಿ ಮಣಿಯಂ ಎಲ್ಲಿಯೂ ಕಾಣದೇ ಹಿಂತಿರುಗಿ ಬಂದು, ರಾಜೇಂದ್ರಂಗೆ ವಂದನೆಯಂ ಮಾಡಿ ಮಹಾರಾಜೇಂದ್ರನೇ! ನಿನ್ನ ಅಪ್ಪಣೆಯಾದಂತೆ ಭೂಮಂಡಲವೆಲ್ಲವಂ ಹುಡುಕಿನೋಡಿ ಎಲ್ಲಿಯೂ ಮಣಿಯಂ ಕಾಣದೆ ಹಿಂತಿರುಗಿ ಬಂದೆನು ಮತ್ತೂ ಆ ಮಣಿಯು ಸ್ವರ್ಗಲೋಕದಲ್ಲಿಯೂ, ಭೂಲೋಕದಲ್ಲಿಯೂ ಕೂಡಾ ಇರುವಂತೆ ಕಾಣುವುದಿಲ್ಲ. ಪಾತಾಳಲೋಕದಲ್ಲಿ ಇರುವಂತೆ ನನಗೆ ತೋರುತಲಿದೆ, ಆದ್ದರಿಂ ನಿನಗೆ

ಅಸಾಧ್ಯವಾದ ಕಾರ್ಯಂಗಳು ಲೋಕತ್ರಯಂಗಳಲ್ಲಿಯೂ ಇಲ್ಲ, ತಡ ಮಾಡದೆ ತೆರಳಬಹುದೆಂದು ವಿಜ್ಞಾಪನೆಯಂ ಮಾಡಲಾಮಾತಿಗೆ ರಾಜೇಂದ್ರನು ಸಂತೋಷಭರಿತನಾಗಿ, ಯಕ್ಷನಂ ಕುರಿತು ನಾಳೆ ಉದಯದೊಳ್ ರತ್ನವಂ ಸಾಧಿಸಲೋಸುಗ ತೆರಳುವೆನೆಂದು ಅಪ್ಪಣೆಯನ್ನಿತ್ತು, ಸುಮತಿಯಂ ನೋಡಿ, ಎಲೈ ಮಿತ್ರನೇ, ನೀನು ನನ್ನೊಡನೆ ಎರಡು ಪಟ್ಟಣಗಳಲ್ಲಿಯೂ, ಅಧಿಕವಾಗಿ ಆಯಾಸಪಟ್ಟಿರುವೆಯಾದರಿಂ ಇಲ್ಲಿಯೇ ಕಟಕವಂ ರಕ್ಷಿಸಿಕೊಂಡು ಇರುವನಾಗು. ನಾನು ಪಾತಾಳವಂ ಪೊಕ್ಕು ರತ್ನವಂ ಹುಡುಕಿ ನೋಡಿ ಅದ್ವರೆ ಸಾಧಿಸಿಕೊಂಡು ಬರುವೆನೆಂದು, ನುಡಿಯಲಾಮಾತಂ ಕೇಳಿ, ಎಲೈ ಮಹೀವಲ್ಲಭನೆ! ಬಾಲ್ಯ ಮೊದಲುಗೊಂಡು ಒಂದು ನಿಮಿಷವಾದರೂ ನಿನ್ನ ಸನ್ನಿಧಿಯಂಬಿಟ್ಟು ಇದ್ದವನಲ್ಲ ಮತ್ತು ಇಲ್ಲಿ ನಾನು ಪರಮಸೌಖ್ಯದಿಂದಿರುವುದು ನಿನ್ನೊಡನೆ ಶ್ರಮಪಡುತಲಿರುವುದಕ್ಕೆ ಸಮನಾಗಲಾರದು. ಆದ್ದರಿಂ ನಿನ್ನ ಚರಣಸನ್ನಿಧಿಯಲ್ಲೇ ಇರುವಂತೆ ಅಪ್ಪಣೆಯಂ ದಯಪಾಲಿಸಬೇಕೆಂದು ನುಡಿಯಲಾ ಮಂತ್ರಿಯಮಾತಂಕೇಳಿ, ರಾಜೇಂದ್ರನು ಎಲೈ ಸುಮತಿಯೇ! ನಾನು ನಿನ್ನಂ ಬಿಟ್ಟು ತೆರಳುವುದು ಯುಕ್ತವಾಗಿ ತೋರುವುದಿಲ್ಲ. ಆದ್ದರಿಂ ನಾವೀರ್ವರೂ ಕೂಡ ಪ್ರಯಾಣವಂ ಮಾಡುವಾ, ಎಂದು ನಿಶ್ಚೈಸಿ ಆ ರಾತ್ರಿಯೊಳ್ ಮೃಷ್ಟಾನ್ನ ಭೋಜನಂಗೈದು, ಸಂತೋಷದಿಂ ಸುಖನಿದ್ರೆಯಂ ಮಾಡಿ ಮಾರನೇ ದಿನ ಸೂರ್ಯೋದಯವಾಗಲು, ರಾಜೇಂದ್ರನು ಮಂತ್ರಿಯೊಡಗೂಡಿ ಸ್ನಾನ ಭೋಜನಾದಿಗಳನ್ನೆರವೇರಿಸಿ, ಅನರ್ಘ್ಯ ರತ್ನಾಭರಣಮಕುಟಂಗಳಿಂದಲಂಕೃತನಾಗಿ ಧನುರ್ಬಾಣಂಗಳಂಗೊಂಡು ಶೂರಪದ್ಮಾದಿಗಳಂ ಸಂಹರಿಸಲೋಸುಗ ಷಣ್ಮುಖನು ತೆರಳಿದಂತೆ ಸುಮತಿಯೊಡಗೂಡಿ ಹೊರಟು ಯಕ್ಷನಂಸೇರಲಾ ಛಾಯಾಗುಪ್ತನು ಪಕ್ಷಿರಾಜನಂತೆ ಗಗನದೊಳ್ ನಡೆಯುತ ನದೀನದಂಗಳಂ ವನಪರ್ವತಂಗಳಂ ತೋರಿಸುತ, ಮತ್ತೂ ಅಲ್ಲಲ್ಲಿ ಕಾಣುತಲಿರುವ ಪಟ್ಟಣಗಳ ವಿವರಗಳಂ ರಾಜಮಂತ್ರಿಗಳಿಗೆ ಅಲ್ಲಲ್ಲಿಯೇ ತಿಳುಹಿಸುತ, ಬಹುದೂರಬಂದು ಗಂಗಾನದಿಯಂ ಕಂಡು, ಇದೇ ಭಾಗೀರಥೀನದಿ ಎಂದು ಬಿನ್ನೈಸಲು ಅದಂ ಕೇಳಿ, ರಾಜೇಂದ್ರನು ಜಗತ್ಪಾವನೆಯಾದ ಭಾಗೀರಥಿಯಲ್ಲಿ

ಸ್ನಾನಪಾನಂಮಾಡದೆ ಅತಿಕ್ರಮಿಸಿ ಪೋಗುವುದು ಉಚಿತವಲ್ಲವೆಂದು ಸುಮಿತ್ರನೊಡಗೂಡಿ ಆ ನದೀತೀರದಲ್ಲಿ ಯಕ್ಷನಿಂದಿಳಿದು ಸ್ನಾನಾಹ್ನಿಕಗಳಂ ನೆರವೇರಿಸಿ ಮೊದಲಿನಂತೆ ಈರ್ವರೂ ಯಕ್ಷನನ್ನೇರಿ ಉತ್ತರಾಭಿಮುಖವಾಗಿ, ಪೊರಟು ಹಿಮವಂತನಂ ದಾಂಟಿ ಪೋಗುತ್ತ ಸ್ವಲ್ಪದೂರದೊಳ್ ಬ್ರಹ್ಮಾಂಡವೇ ಒಡೆದು ಪೋಗುವಂತೆ ಮಾಡುತಲಿರುವ ರಾಕ್ಷಸಸೇನೆಯ ಕೋಲಾಹಲ ಧ್ವನಿಯಂ ಕೇಳಿ, ಇಲ್ಲಿ ಏನೋ ಒಂದು ವಿಶೇಷವಿರುವುದು, ವಿಚಾರಿಸದಲ್ಲದೇ ಮುಂದಕ್ಕೆ ಪೋಗಬಾರದೆಂದು ಮನದೊಳ್ ನಿಶ್ಚಯಿಸಿ, ಯಕ್ಷನಂ ಕುರಿತು ಗಗನದೊಳ್ ಅಡರೂ ಎನಲಾ ಯಕ್ಷನು ರಾಜೇಂದ್ರನ ಆಜ್ಞಾನುಸಾರವಾಗಿ ಗಗನಮಂ ಸ್ಥೈದಲು, ಆಗ ರಾಜೇಂದ್ರನು ದಿಕ್ಕುದಿಕ್ಕುಗಳಂ ನೋಡುತ ಉತ್ತರದಿಕ್ಕಿನಲ್ಲಿ ಅನೇಕ ಸಹಸ್ರ ರಾಕ್ಷಸರು ಸರ್ವಾಯುಧಂಗಳಂಧರಿಸಿ, ಅಟ್ಟಹಾಸಮಂ ಮಾಡುತ ಕೋಟೆಯಂತೆ ಸುತ್ತುವರಿದು ಮುಂದಕ್ಕೆ ಒತ್ತೊತ್ತಿ ಪೋಗಿ, ಅಗ್ನಿಜ್ವಾಲೆಯಂ ಕಂಡು, ಹಿಮ್ಮೆಟ್ಟಿ ಬರುವ ಆನೆಗಳಂತೆ ವಿಮುಖರಾಗಿ ಮೊದಲು ನಿಂತಲ್ಲಿಯೇ ನಿಂತು ಎಂದಿನಂತೆ ಕೂಗುತಲಿರುವುದಂ, ಮತ್ತು ರಾಕ್ಷಸರ ಮಧ್ಯದಲ್ಲಿ ತೇಜಸ್ಸುಗಳೆಲ್ಲ ಒಟ್ಟುಗೂಡಿ ಮೂರ್ತೀಭವಿಸಿ ಮೆರೆಯುತ್ತಿರುವುದಂ, ಸಹ ಕಂಡು, ಅದರ ನಿಧಾನವಂ ತಿಳಿಯದೆ ಒಂದು ಕ್ಷಣ ಆಲೋಚನೆಯಂ ಮಾಡಿ, ಯಾವನೋ ಒಬ್ಬ ಮಹಾಪುರುಷನು ಇಲ್ಲಿ ತಪವಂ ಗೈಯುತ್ತಲಿರುವನು, ಅದಕ್ಕೆ ವಿಘ್ನವಂ ಮಾಡುವುದು ರಾಕ್ಷಸರ ಸ್ವಭಾವವಾದುದರಿಂದ ಇಷ್ಟು ಪ್ರಯತ್ನವಾಗಿ ಕಾಣುತಲಿದೆ ದುಷ್ಟರಂ ನಿಗ್ರಹಿಸಿ ಶಿಷ್ಟರಾದವರಂ ರಕ್ಷಿಸಿ ಧರ್ಮವಂ ಸ್ಥಾಪಿಸುವುದು ಕ್ಷತ್ರಿಯರಿಗೆ ಧರ್ಮವಾದ ಕಾರಣ, ಈಗ ಈ ರಾಕ್ಷಸರಂ ನಿಗ್ರಹಿಸುವದೇ ಯುಕ್ತವೆಂದು ನಿಶ್ಚಯಿಸಿ, ಮಂತ್ರಿಯೊಡನೆ ತನ್ನ ಅಭಿಪ್ರಾಯವಂ ಪೇಳಲಾಮಂತ್ರಿಯು ಎಲೈ ರಾಜೇಂದ್ರನೇ! ದುಷ್ಟರಂ ನಿಗ್ರಹಿಸಿ ಶಿಷ್ಟಪರಿಪಾಲನೆಯಂ ನೀನು ಮಾಡಿದರೆ, ಈಗನಾವು ಪ್ರವರ್ತಿಸಿರುವ ಕಾರ್ಯವು ಅನಾಯಾಸದಿಂದಲೇ ಸಾಧ್ಯವಾಗುವದರಲ್ಲಿ ಸಂದೇಹಮಿಲ್ಲ. ಆದುಕಾರಣ ಈ ದುರಾತ್ಮರಂ ಶೀಘ್ರದಿಂ ಸಂಹರಿಸುವುದೇ ಯುಕ್ತವೆಂದು ವಿಜ್ಞಾಪನೆಯಂ ಮಾಡಲು; ಅದಂ ಕೇಳಿ, ರಾಜೇಂದ್ರನು ಯಕ್ಷನಂ ಕುರಿತು,

ಎತ್ತಿ ಛಾಯೋಗುಪ್ತನೆ! ಭೂಮಿಯೊಳ್ ಈ ದೈತ್ಯರು ಇರುವ ಬಳಿಗೆ ಸ್ವಲ್ಪ ದೂರದೊಳ್ ಉನ್ನತರಾಗಿರುವ ಒಂದು ಸ್ಥಳದಲ್ಲಿ ಈ ದೈತ್ಯರಿಗೆ ಅಭಿಮುಖವಾಗಿ ಇಳಿಯುವದೆಂದೆನಲು, ಅದೇಪರಿಯಾಗಿ ಯಕ್ಷನು ಆಕ್ಷಣದಲ್ಲಿಯೇ ಭೂಮಿಗೆ ಇಳಿದು, ರಾಜಮಂತ್ರಿಗಳಂ ಉನ್ನತವಾದ ಪ್ರದೇಶದೊಳ್ ನಿಲ್ಲಿಸಿ, ಅವರ ಆಜ್ಞೆಯಿಂದ ತಾನು ಅವರ ಹಿಂಭಾಗದೊಳ್ ನಿಲ್ಲಲು.

ಆಗ ಸುಗಂಧ ರಾಜೇಂದ್ರನು ಧನುವಂ ಪಿಡಿದು, ಟಂಕಾರವಂ ಮಾಡುತ ಗಿರಿಗಳೆದರುವಂತೆ ಸಿಂಹನಾದವ ಮಾಡಲು, ಆ ಧ್ವನಿಯಂ ಕೇಳಿ, ಎದೆ ಒಡೆದು ಗಡಗಡನೆ ನಡುಗಿ ಕಂಗೆಟ್ಟು, ಆಯುಧಂಗಳಂ ಬಿಸುಟು ದಿಕ್ಕುದಿಕ್ಕುಗಳನ್ನೋಡಿ, ಸಮೀಪದೊಳ್ ನಿಂತಿರುವ ಸುಂದರಾಕಾರನಾದ ಸುಗಂಧರಾಜೇಂದ್ರನಂ ನೋಡಿ, ದೈತ್ಯರೆಲ್ಲರೂ ಒಂದಾಗಿ ಇದೇನು ಆಶ್ಚರಿಯು, ನರಿಯು ಬಂದು ಭೇರುಂಡಗಳ ತಂಡಗಳಂ ಬೆದರಿಸುವಂತೆ ಈ ಮನುಷ್ಯಮಾತ್ರದವನು ನಮಿಗೆ ಎದುರಾಗಿ ಸಿಂಹನಾದವಂ ಮಾಡುವುದು ವಿಪರೀತಕಾಲವಾಗಿ ಕಾಣುವುದು. ಅವರೂ ಸಮರ್ಥನೆ ಇರಬಾರದೆಂದು ಎಲ್ಲರೂ ಆಲೋಚಿಸಿ, ನಾಲ್ಕು ಜನ ರಾಕ್ಷಸರಂ ಪರೀಕ್ಷೆಗೋಸುಗ ಸುಗಂಧರಾಜೇಂದ್ರನಿದ್ದೆಡೆಗೆ ಕಳುಹಲು, ಆಗ ರಾಜೇಂದ್ರನು ಆಯುಧಗಳಂ ಪಿಡಿದು, ಎದುರಾಗಿ ಬರುವ ರಾಕ್ಷಸರಂ ಕಂಡು ನಾಲ್ಕು ಬಾಣಂಗಳಿಂದ ಅವರಂ ಸಂಹರಿಸಲು, ಅದಂ ಕಂಡು ಮಿಕ್ಕಾದ ರಾಕ್ಷಸರು ಈ ಮಾನವನಂ ಸಾಮಾನ್ಯನೆಂದೆಣಿಸಕೂಡದು, ಯಾತಕ್ಕೆ ಬಂದಿರುವನೆಂದು, ಅವರೇನಾಯಿತು ನೋಡುವಾ, ಎಂದು, ಇವನಂ ಸಂಹರಿಸುವೆವೆನುತ ಬಾಣವರ್ಷಂಗಳಂ ಕರೆಯುತ್ತ ಸುತ್ತಲೂ ಒತ್ತೊತ್ತಿ ಬರುತ್ತಿರಲು, ರಾಜೇಂದ್ರನು ಅವರಂ ಬಾಣಂಗಳಿಂದ ಕತ್ತರಿಸಿಬಿಡಲು, ಅದಂ ಕಂಡು ದೈತ್ಯ ಸೇನಾಧಿಪರಾದ ಮಹಾರಥಿಕರೆಲ್ಲರೂ ಕೋಪಗೊಂಡು ಬಿಲ್ಲುಗಳಂ ಪಿಡಿದು, ಬಾಣಂಗಳಂ ಮಳೆಗರೆವಂತೆ ಕರೆಯುತ್ತ ಮಿತಿಮೀರಿ ಬರುತ್ತಿರಲು, ಆಗ ಮಹಾಶೂರನಾದ ಸುಗಂಧರಾಜೇಂದ್ರನು ಅವರ ಸಾರಥಿಗಳಂ ಸಂಹರಿಸಿ ನಿರಾಯುಧರಂ ಮಾಡಿ ನಿಲ್ಲಿಸಲು ಅವರೆಲ್ಲರೂ ಬೆಂಕಿಯಂತಾಗಿ ಉರವಣಿಸಿ ಮೇಲೆ ಬೀಳುತ್ತಿರಲು:

ಆಗ ರಾಜೇಂದ್ರನು ಶರಗಳಿಂದವರ ಶಿರಗಳಂ ತರಿದು, ನರಿ ನಾಯಿಗಳಿಗೆ ಆಹಾರವನ್ನಾಗಿ ಮಾಡಲು, ಆಗ ದೂರದೊಳ್ ತನ್ನ ಸೇನೆಯಿಂದೊಡಗೂಡಿ ನೋಡುತ್ತ ನಿಂತಿರ್ದ ಕಪಾಲಕೇತುವೆಂಬ ರಾಕ್ಷಸ ಸೇನಾಧಿಪನು ಇವರೆಲ್ಲರು ಮಡಿದು ಬಿದ್ದುದಂ ಕಂಡು, ಕೋಪಗೊಂಡು ರಾಜೇಂದ್ರನೆದುರಾಗಿ ಬಂದು ನಿಂದು, ಎಲೋ ನರಾಧಮನೇ! ಈ ಹುಡುಗರಂ ಹೊಡೆದು ಗೆದ್ದೆನೆಂದು ಗರ್ವಮಂ ಮಾಡಬೇಡ, ನಮ್ಮೊಡನೆ ಕಾಳಗಮಂ ಮಾಡಿ ಬದುಕುವರು ಮೂರು ಲೋಕದಲ್ಲಿಯೂ ಇಲ್ಲ, ನಿನ್ನ ಆಕಾರವನ್ನೋಡಿದರೆ ಕೊಲ್ಲುವುದಕ್ಕೆ ಕೈ ಬಾರದು, ಈವರಿಗೆ ನೀನು ಮಾಡಿದ ದುರ್ಜನತೆಗಳಂ ಸಹಿಸಿ ನಿನ್ನಂ ಪ್ರಾಣದಿಂದ ಬಿಡುವೆನು, ಬ್ಯಾಗಪೋಗಿ ಎಲ್ಲಾದರೂ ಬದುಕು ಎಂದು, ನುಡಿವುದಾವಮಾತಂ ಕೇಳಿ, ರಾಜೇಂದ್ರನು ಕೋಪವನಂತಾಳಿ, ಎಲೋ ಖೂಳ ರಾಕ್ಷಸನೇ, ಬಾಯಿಗೆ ಬಂದಂತೆ ಬೊಗಳಬೇಡ, ಎನುತ್ತ ಮೂರು ಬಾಣಂಗಳಿಂದವನ ಸಾರಥಿಯ ಶಿರವಂ ಕತ್ತರಿಸಿ, ಮತ್ತೆರಡು ಬಾಣಂಗಳಿಂದ ರಥವಂ ರೇಣುಗಳಂತೆ ಮಾಡಿ, ಮತ್ತೊಂದು ಬಾಣವಂ ಬಿರುಸಾಗಿ ಬಿಡಲು, ಆ ಬಾಣವು ಆ ಕಪಾಲಕೇತುವಿನ ತಲೆಯಂ ಹಾರಿಸಿ ನೆಲಕ್ಕೆ ಕೆಡಹಲು, ಬಳಿಕ ರಾಜೇಂದ್ರನು ಅವನ ಸೇನೆಯನೆಲ್ಲವಂ ಬಾಣಂಗಳಿಂದ ಕಾಣದಂತೆ ಮಾಡಿ, ನಗುತ್ತ ನಿಂತಿರಲು, ಅದಂ ಕಂಡು; ಕರಾಳನ, ರೌದ್ರಾಸ್ಯನು, ರಕ್ತಮುಖನೂ, ದುಸ್ಸಹನೂ, ಈ ನಾಲ್ಕು ಮಂದಿ ಮಹಾರಾಕ್ಷಸರು ಸಕಲಾಯುಧಂಗಳಂ ಧರಿಸಿ, ಅಭೇದ್ಯಕವಚಂಗಳಂ ತೊಟ್ಟು, ಇವನ [illegible] ಗೆಡಿಸುವೆನೆನುತ್ತ ಮುಗಿಲು ಮುಟ್ಟುವ ರಥಗಳನ್ನೇರಿ, ತಮ್ಮ ತಮ್ಮ ಸೇನೆಯಿಂದೊಡಗೂಡಿ ಬಂದು ಬಂದೇ ಕಾಲದೊಳ್ ಸಕಲಾಯುಧಂಗಳಂ ರಾಜೇಂದ್ರನ ಮೇಲೆ ಪ್ರಯೋಗಿಸಲು, ಆಗ ರಾಜೇಂದ್ರನು ಶಸ್ತ್ರಾಸ್ತ್ರಗಳಿಂದ ಸ್ವಲ್ಪ ಘಾಯವಡೆದು, ಕಣ್ಣುಕೆಂಪೇರಿ, ಕೋಪವು ಇಮ್ಮಡಿಯಾಗಿ ಇವರು ಸಾಧಾರಣರಲ್ಲವೆಂದರಿತು, ಸುಮತಿಯು ಕೈಯೊಳಿರ್ದ ಚಂದ್ರಹಾಸವಂಗೊಂಡು ಬಾಳೆಯವನಕ್ಕೆ ನುಗ್ಗಿದ ಆನೆಯಂತೆ ನಿಮಿಷಾರ್ಧದೊಳ್ ಅವರೆಲ್ಲರಂ ತುಂಡುತುಂಡಾಗಿ ತರಿದು ಕೆಡಹಿ ಹೊಸತಾಗಿ ಬಂದು ರಕ್ತದ ಸಮುದ್ರವಂ ನಿರ್ಮಿಸಿದನೋ ಎಂಬಂತೆ ಆಗಲು, ಆಗ

ಹತಶೇಷರಾದ ರಾಕ್ಷಸರು ತಮ್ಮ ತಮ್ಮ ಆಯುಧಗಳಂ ಬಿಸುಟು ದಿಕ್ಕು ದಿಕ್ಕುಗಳಿಗೆ ಓಡುತ, ಎಲ್ಲೆಲ್ಲಿ ನೋಡಿದರೂ ಅಲ್ಲಲ್ಲಿ ಸುಗಂಧರಾಜೇಂದ್ರನಂತೆ ಕಂಡು ಭಯಂಗೊಂಡು ಓಡಿಪೋಗುತ್ತಿರಲು, ಆ ಕಾಲದಲ್ಲಿ ಹಿಂದೆ ನಿಂತಿರ್ದ ಸುಮತಿಯೂ, ಯಕ್ಷನೂ, ಈರ್ವರೂ ರಾಜಕಂಠೀರವನ ಪರಾಕ್ರಮಮಂ ನೋಡಿ ಸಂತೋಷದ ಭಾರವಂ ತಾಳದೆ, ಭಾರಿಭಾರಿಗೂ ಭೂವಲ್ಲಭನಾದ ಸುಗಂಧರಾಜೇಂದ್ರನಂ ಕೊಂಡಾಡುತ್ತಿರಲಾಗ ರಾಜೇಂದ್ರನು ಸುಮತಿಸಹಿತ ಹಸ್ತಲಾಘವದಿಂದ ರಣಭೂಮಿಯಂ ಬಿಟ್ಟು ಬರುತ್ತ, ಅಲ್ಲಿ ಶಾಂತಮಾನಸನಾಗಿ ತಪವಂ ಗೈಯುತಲಿರುವ ಮಹಾಪುರುಷನಂ ಕಂಡು, ಈತನಿಗೋಸುಗವಲ್ಲವೇ, ನಾವು ಈ ದುಷ್ಟದಾನವರಂ ಸಂಹರಿಸಿದುದು ಅದ್ದರಿಂದ ಈ ಮಹಾಪುರುಷನು ಬಹಿರ್ಮುಖನಾಗುವ ವರೆಗೂ ಇಲ್ಲಿಯೇ ಕಾದಿರ್ದು ಈತನ ಅನುಗ್ರಹವಂ ಪಡೆದು ಚಿಂತಾಮಣಿಯ ವೃತ್ತಾಂತಮಂ ತಿಳಿದು, ಮತ್ತು ಈತನು ಇಲ್ಲಿ ಇರುವದಕ್ಕೆ ಕಾರಣಮಂ, ಈತನು ಧ್ಯಾನವಂ ಮಾಡುವ ಪರಿಯಂ, ರಾಕ್ಷಸರು ಬಂದು ಬಾಧಿಸುವುದಕ್ಕೆ ನಿಮಿತ್ತವಂ ಸಹ ತಿಳಿದು ಈ ಮಹಾಪುರುಷನ ಆಜ್ಞೆಯಿಂದಲೇ ಇಲ್ಲಿಂದ ತೆರಳುವದುಯುಕ್ತವೆಂದು ಸುಮತಿಯಂ ಕುರಿತು, ಹೇಳಲಾಮಂತ್ರಿಯು ಎಲೈ ರಾಜೇಂದ್ರನೇ! ತಾವು ಅಪ್ಪಣೆಯಂ ಕೊಟ್ಟದ್ದು ಕೇಳಿ ಪರಮಸಂತೋಷವಾಯಿತು, ಮತ್ತು ತಾವು ಹೇಳಿದ ಪರಿಯಾಗಿ ಮಾಡುವುದೇ ಸರ್ವೋತ್ತಮವೆಂದು ಬಿನ್ನೈಸಲು, ಅದಂ ಕೇಳಿ ರಾಜೇಂದ್ರನು ಅವನೊಡಗೂಡಿ ಆ ವನದೋಳ್ ಸಂಚರಿಸುತ ಯಕ್ಷನು ತಂದಿತ್ತ ಮಧುರವಾದ ಫಲಂಗಳಂ ಸವಿಯುತ್ತ, ಆ ಮಹಾಪುರುಷನ ಸಮೀಪದಲ್ಲಿಯೇ ಸುಖದಿಂದಿರುತಿರ್ದನೆಂಬಲ್ಲಿಗೆ * * * *

ಕುಂಡಲಿಶಯನಖಂಡಪವನ ಪುಂಡರೀಕಧವಾಖಂಡಲಪ್ರಮುಖನಿಖಿಲ ಸುರವರಪರಿಭವ ಪರಿಣತಪ್ರಚಂಡಬಲಚಂಡಮುಂಡಖಂಡನಸನಿಪುಣ ಕೋದಂಡ ಕಾಂಡಮಂಡಲಾಗ್ರಧರಭುಜಾದಂಡಪರಿಮಂಡಿತ ಚಾಮುಂಡಿಕಾಕಟಾಕ್ಷವೀಕ್ಷಣಪ್ರವರ್ಧಮಾನಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾಸಾಮ್ರಾಜ್ಯಸರ್ವಂಕಷಚತುರ್ವಿಧ ನವರಸಕವಿತಾಸಿಸ್ನ ಹಾಯುನಿರ್ವಾಣಧೌರೇಯಘಟಿಕಾಶತಗ್ರಂಥದಿನದಿನ ಪ್ರಬಂಧನಿಬಂಧ

ಸಭಾಪುರಂದರ ತ್ರಿಭುವನ ಪವಿತ್ರಾತ್ರೇಯಗೋತ್ರ, ಆಶ್ವಲಾಯನಸೂತ್ರ, ಸುಚರಿತ್ರ, ಚಾಮರಾಜಮಹಾರಾಜಪುತ್ರ, ಪರಪತಿಬಿರುದಮಹೀಶೋರಸ್ತ್ರ ರಣಾಗ್ರಣಿ ಶ್ರೀ ಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ಈ ನವೀನಕೃತಿಯೊಳ್ ಸುಗಂಧರಾಜೇಂದ್ರನು ದಿನದಿನದೊಳ್ ಹನ್ನೆರಡು ಭಾರ ಬಂಗಾರಮಂ ಕೊಡುವ ಒಂದು ರತ್ನವಂ ತರುವೆನೆಂದು ಪಣಮಂ ಒಪ್ಪಿ ಬಿಡಾರವಂ ಸೇರಿ ವಿದ್ಯಾಸಾಗರನ ಮುಖದಿಂದ ನವರತ್ನ ಪರೀಕ್ಷಾಲಕ್ಷಣಮಂ ಕೇಳಿದ್ದು, ಕನಕಕೇತು ಮೊದಲಾದರಾಕ್ಷಸರಂ ಸಂಹರಿಸಿದ್ದು, ಎನಿಪ ವಿಷಯಮಂ ಬಣ್ಣಿಸುವ ಹತ್ತೊಂಭತ್ತನೆ ಆಶ್ವಾಸ ನಿರೂಪಣ ಶ್ರೀ ಮಂಗಳಮಹಾ ✱ ✱ ✱ ✱

ಹತ್ತೊಂಭತ್ತನೆ ಆಶ್ವಾಸ ಸಂಪೂರ್ಣಂ.

———:o:———

## ಇಪ್ಪತ್ತನೆಯ ಆಶ್ವಾಸ ಪ್ರಾರಂಭಂ.

ಪಿಂತಾನುಸಂಧಾನಂ.

ಶ್ರೀ ಚಾಮುಂಡಿಕಾಂಬಾಯೈನಮಃ,

ಅನಂತರದಲ್ಲಿ ಕೆಲವು ದಿನದ ಮೇಲೆ ವಸಿಷ್ಠಪುತ್ರನಾದ ಪುರುಷಮೃಗನು ಸುಗಂಧರಾಜೇಂದ್ರನು ಮಾಡಿದ ಸಾಹಸಮಂ, ರಾಕ್ಷಸರು ಮಾಡುತ್ತಿರ್ದ ದುಷ್ಕಾರ್ಯಮಂ ಸಹ ತನ್ನ ಮನದೊಳ್ ತಿಳಿದು, ಈ ಮಹಾಪುರುಷನಂ ನೋಡಬೇಕೆಂಬ ಕುತೂಹಲದಿಂ ತಾನು ಮಾಡುತ್ತಿರ್ದ ಶಿವಾರಾಧನೆಯುಂ ಪೂರ್ತಿಯುಂ ಮಾಡಿ, ಪ್ರಸಾದಮಂ ಕೈಕೊಂಡು ಬಹಿರ್ಮುಖನಾಗಿ ಅಲ್ಲಿ ಸಂಚರಿಸುತ್ತಿರ್ದ ರಾಜಕುಮಾರನಂ ಕಂಡು, ಈತನು ಮಾಡಿದ ಸಾಹಸವಂ ನೋಡಿದರೆ, ಮನುಷ್ಯಮಾತ್ರನಿಂದ ಮಾಡಲುಶಕ್ಯವಲ್ಲ. ಆದ್ದರಿಂ ಸಾಧಾರಣನೆಂದೆಣಿಸಕೂಡದು. ಈತನು ಕುಮಾರಸ್ವಾಮಿಯೋ, ಪುರಂದರನೋ, ಮಹಾವಿಷ್ಣುವೋ, ಪರಶಿವನೋ, ಮತ್ತು ಆರು ಮುಖವಿಲ್ಲದಿರುವದ್ದರಿಂ ಷಣ್ಮುಖನಲ್ಲ; ಸಾವಿರ ಕಣ್ಣು

ಯುಳ್ಳದ್ದರಿಂ ಇಂದ್ರನೆಂದೆನ್ನಕೂಡದು, ನಾಲ್ಕು ಭುಜಂಗಳಿಲ್ಲದ್ದರಿಂ ವಿಷ್ಣುವೆಂದೆಣಿಸಕೂಡದು, ಮೂರು ಕಣ್ಣುಗಳು ಇಲ್ಲದ್ದರಿಂ ಈಶ್ವರನೆಂದರಿಯಲಾಗದು, ಈ ಪರಿ ಸಾಹಸಮಂ ಮಾಡುವದಕ್ಕೆ ದಿಕ್ಪತಿಗಳು ಕೂಡ ಶಕ್ತರಲ್ಲ, ಆದ್ದರಿಂದೀತನು ಪರಮೇಶ್ವರನ ಸಂಪೂರ್ಣಪ್ರಸಾದದಿಂ ಮಹಾವಂಶೋತ್ಪನ್ನನಾದ ಕ್ಷತ್ರಿಯನಾಗಿ ತೋರುತ್ತಿಹನೆಂದು ಸಂತೋಷದಿಂ ನೋಡುತ್ತಿರಲಾಗ ಸುಗಂಧರಾಜೇಂದ್ರನು ಪುರುಷಮೃಗನು ಬಹಿರ್ಮುಖನಾದನೆಂದರಿತು ಸವಿನಯವನ್ನೈದಿ ನಮಸ್ಕೃತಿಯಂ ಮಾಡಿ ಕೈಗಳಂ ಮುಗಿದು ಕುಳ್ಳಿರಲು, ಆಗ ಮಹಾತೇಜಸ್ವಿಯಾದ ಪುರುಷಮೃಗನು ಭಕ್ತಿ, ವಿನಯ, ಗಾಂಭೀರ್ಯ, ಸ್ಥೈರ್ಯ, ಶೌರ್ಯಮೊದಲಾದ ಗುಣಂಗಳಿಂದಲಂಕೃತನಾದ ರಾಜೇಂದ್ರನಂ ಕುರಿತು ಅವನ ವೃತ್ತಾಂತವೆಲ್ಲವಂ ಕೇಳಲುಪಕ್ರಮಿಸಿ, ಎಲೈ ರಾಜಕುಲತಿಲಕನೇ! ನೀನು ಯಾರು? ನಿನ್ನ ದೇಶವ್ಯಾವುದು? ಇಲ್ಲಿಗೆ ಬಂದಕಾರಣವೇನು? ಮತ್ತು ದಿಕ್ಪತಿಗಳಂ ಧಿಕ್ಕರಿಸುವ ಈ ದೈತ್ಯರೊಡನೆ ಯುದ್ಧಮಂಮಾಡಿ ಎಲ್ಲರಂ ಸಂಹರಿಸಿ ಶ್ರಮಪಡುವದಕ್ಕೆ ಕಾರಣವೇನು? ಇದನೆಲ್ಲವಂ ವಿಸ್ತಾರವಾಗಿ ಹೇಳೆಂದು ಅಪ್ಪಣೆಯಂ ಕೊಡಲಾ ರಾಜೇಂದ್ರನು ಆ ಮಹಾಪುರುಷನಂ ಕುರಿತು, ಎಲೈ ಮಹಾನುಭಾವನೇ! ಕರ್ನಾಟಕ ದೇಶದಲ್ಲಿ ರತ್ನಪುರವೆಂಬ ಪಟ್ಟಣವಿರುವುದು, ಆ ಪುರವನ್ನಾಳುವ ಸುಚರಿತ್ರ ಮಹಾರಾಯನ ಕುಮಾರನಾದ ನನ್ನಂ ಸುಗಂಧರಾಜನೆನ್ನುವರು, ಮತ್ತು ಕಳಿಂಗಾಧಿಪತಿಯು ತನ್ನ ಮಗಳ ಸ್ವಯಂವರ ಮಹೋತ್ಸವಕ್ಕೋಸುಗ ಸಕಲ ಭೂಪಾಲಕರಂ ಕರೆಸಿ ಇದ್ದನು, ಅವರಂತೆ ನಾನೂ ಪೋಗಿರ್ದೆನು, ಅಲ್ಲಿ ಅನೇಕ ರಾಜಕುಮಾರರುಗಳಿಂದ ಅಲಂಕೃತವಾದ ಸ್ವಯಂವರ ಸಭಾಮಧ್ಯದಲ್ಲಿ, ಸಕಲ ಲೋಕಂಗಳಲ್ಲಿರುವ ಸ್ತ್ರೀರುಗಳ ಸೌಂದರ್ಯವನೆಲ್ಲವಂ ಒಟ್ಟುಗೂಡಿಸಿ ಒಂದೇ ಸ್ತ್ರೀಯಾಗಿ ನಿರ್ಮಿಸಿದಂತೆ ಶೋಭಿಸುತ್ತ, ಸಕಲ ರಾಜಕುಮಾರರುಗಳೆಂಬ ಮೀನುಗಳಂ ತನ್ನ ಕಡೆಗಣ್ಣುನೋಟಗಳೆಂಬ ಬಲೆಗಳಂ ಬೀರಿ ಸೆಳೆಯುತ್ತ, ರತಿಯಂತೆ ಕಾಣುತ್ತಲಿರುವ ಆ ಕಳಿಂಗರಾಜಪುತ್ರಿಯು ಬಂದು ನಿಂದು, ತನ್ನ ಸಖೀಮುಖದಿಂ ಮದ್ರೇಶಮೊದಲಾದ

ಎಂಟು ಪಣಂಗಳಂ ಪೇಳಿ, ಅದಂ ತಂದಿತ್ತ ಭೂಪತಿಗೀ ತನಗೆಪತಿಯುಂ ಮಿಗಿಲಾದವರೆಲ್ಲರೂ ತಂದೆಗೆ ಸಮಾನರೆಂದು ಪ್ರತಿಜ್ಞೆಯಂ ಮಾಡಲಾಗ ಎಲ್ಲರೂ ಸುಮ್ಮನೆಯಿರ್ದುದಂ ಕಂಡು, ನಾನು ಕ್ಷತ್ರಿಯ ಕುಲಕ್ಕೆ ಅಪಕೀರ್ತಿಬರಬಾರದೆಂದು ಪಣಂಗಳಂ ಸಾಧಿಸಿ ತಂದೀವೆನೆಂದು ಶಪಥವಂ ಮಾಡಿ ಇದುವರಿಗೆ ವಜ್ರಪಣ, ಗಜಪಣ, ಅಶ್ವಪಣವೆಂಬ ಮೂರು ಪಣವಂ ಸಾಧಿಸಿತಂದಿತ್ತು, ನಾಲ್ಕನೇ ಪಣವಾದ ದಿನದಿನದೊಳ್ ಹನ್ನೆರಡುಘಾರಘಂಗಾರವನ್ನೀವ ರತ್ನವಂ ಸಕಲ ಭೂಮಂಡಲವಂ ಹುಡುಕಿ, ಎಲ್ಲಿಯೂ ಕಾಣದೆ ಪಾತಾಳವಂ ಪೊಕ್ಕು ನೋಡುವಾಮೆಂದು ಮಂತ್ರಿಸೂನ ಸುಮತಿಯೊಡಗೂಡಿ ಯಕ್ಷಸನ್ನೇರಿಬರುವಾಗ ಈ ದುಷ್ಟದಾನವರೆಲ್ಲ ಒಟ್ಟುಗೂಡಿ ನಿಮ್ಮ ತಪೋವಿಘ್ನವಂ ಮಾಡಲೋಸುಗ ಸುತ್ತಲೂ ಮುತ್ತಿ ಪರಿಪರಿಯಾಗಿ ಮುಖಭಾಷೆಗಳನ್ನಿಡುತ್ತ ಆರ್ಭಟಿಸುವವಂ ಕಂಡು, ನಿಮ್ಮ ತಪೋವಿಘ್ನವಾಗಬಾರದೆಂದು ಇವರೊಡನೆ ಯುದ್ಧವಂ ಮಾಡಿ, ಅವರೆಲ್ಲರಂ ಸಂಹರಿಸಿ, ಬಳಿಕ ನಿಮ್ಮ ಪಾದದರ್ಶನವಂ ಗೈದು, ಮುಂದಕ್ಕೆ ತೆರಳುವಾಎಂದು ಇಲ್ಲಿಗೆ ಸಂಚರಿಸುತಲಿರ್ದ್ದ ನೀವು ಬಹಿರ್ಮುಖರಾದುದಂ ತಿಳಿದು ಬಂದೆನೆಂದು ವಿಜ್ಞಾಪನೆಯಂಗೈದು, ಮತ್ತೂ ಅವರಂ ಕುರಿತು, ತಾವು ಯಾರು, ತಮ್ಮ ಆಕೃತಿಯು ಎರಡು ಬಗೆಯಾಗಿರುವುದಕ್ಕೆ ಕಾರಣವೇನು? ಏನು ನಿಮಿತ್ತ ಇಲ್ಲಿ ವಾಸವಂ ಮಾಡುವಿರಿ? ಈ ದೈತ್ಯರು ನಿಮ್ಮ ತಪಸ್ಸಿಗೆ ವಿಘ್ನವಂ ಮಾಡಲೋಸುಗ ಇಷ್ಟು ಪ್ರಯತ್ನವಂ ಮಾಡುವುದಕ್ಕೆ ಕಾರಣವೇನು? ಇದೆಲ್ಲವಂ ವಿಸ್ತಾರವಾಗಿ ವಿವರಿಸಬೇಕೆಂದು ವಿಜ್ಞಾಪಿಸಲಾಗ ಪುರುಷಮೃಗನು, ಎಲೈ ರಾಜೇಂದ್ರನೇ! ಕೇಳು ನಾನು ಒಂದಾನೊಂದು ಕಾರಣದಿಂದ ಎರಡು ಪರಿಯಾಗಿ ಪುಟ್ಟಿದೆನು, ಮತ್ತು ಇಲ್ಲಿಗೆ ಸ್ವಲ್ಪ ದೂರದಲ್ಲಿರುವ ಹಿಮವತ್ಪರ್ವತದಲ್ಲಿ ಪರಶಿವನು ನಿತ್ಯವಲ್ಲಿಯೂ ಪ್ರದೋಷಕಾಲದಲ್ಲಿ ನರ್ತನವಂ ಮಾಡುವನು, ಅದಂ ನೋಡಲೋಸುಗ ಇಲ್ಲಿರುವೆನು, ಇಲ್ಲಿಗೆ ದೈತ್ಯರು ಬಂದು ಬಾಧಿಸುವುದಕ್ಕೆ ಕಾರಣವೇನೆಂದರೆ,--ರತ್ನಗಳಿಗೆ ಮೂಲಕಾರಣನಾದ ವಲಾಸುರನು ಪರಶಿವನ ಪ್ರಸಾದದಿಂದ ಕೊಬ್ಬಿ, ಮೂರುಲೋಕಂಗಳಂ ಜೈಸಿ, ಅಮರಾವತಿಯಂ ಆಕ್ರಮಿಸಿ ಆಳುತ್ತಿರಲು, ಪುರಂದರನು ಗುರುವಾದ

ಬೃಹಸ್ಪತ್ಯಾಚಾರ್ಯರ ಉಪದೇಶ ಬಲದಿಂದಾ ವಲಾಸುರನಂ ಉಪಾಯದಿಂ ಸಂಹರಿಸಲು, ಅವನ್ನೋಡಿ ಅವನ ಪುತ್ರನಾದ ದುರ್ಧರ್ಷನು ಚತುರ್ಮುಖನಂ ಕುರಿತು ತಪವಂ ಮಾಡಿ, ಮನುಷ್ಯರಂ ಲೆಕ್ಕಿಸದೇ ದೇವದಾನವರಿಂದ ಅವಧ್ಯನಾಗಬೇಕೆಂದು ವರವಂ ಪಡೆದು, ಅಲ್ಲಲ್ಲಿ ಅಡಗಿರುವ ರಾಕ್ಷಸರಂ ಜೊತೆಗೊಳಿಸಿ, ನಿಮ್ಮಂ ರಕ್ಷಿಪೆನೆಂದು ಅಭಯವನ್ನಿತ್ತು ಎಲ್ಲರೂ ಒಂದಾಗಿ ಸಮಯವಂ ನಿರೀಕ್ಷಿಸುತಲಿರ್ದು ಪುರಂದರನಿಗೆ ದುರ್ವಾಸನಿಂದ ಬಂದ ಶಾಪವಂ ತಿಳಿದು, ಬಲಿ ಬಾಣ ಮೊದಲಾದವರುಂ [illegible]ರಾವತಿಯುಂ ಆಕ್ರಮಿಸುವುದಕ್ಕೆ ಪೋಗುವ ಸಮಯದೊಳ್ ತನ್ನ [illegible]ಯಂ ಒಡಗೊಂಡು ಮುತ್ತಿಗೆಯಂ ಹಾಕಲು, ಇವರೊಡನೆ ಪುರಂದರನು ಬಹುದಿನ ಯುದ್ಧವಂ ಮಾಡಿ, ಪೋರಗಾಣದೆ ಮಹರ್ಷಿಯ ಶಾಪವಂ ನೆನೆದು, ಶಚಿಯೊಡಗೂಡಿ ಅಂತರ್ಧಾನನಾಗಲೂ, ಆಕ್ಷಣವೇ ಅವನ ವಸ್ತುಗಳೆಲ್ಲ ಅದೃಶ್ಯಂಗಳಾಗಲೂ, ಆಗ ದುರ್ಧರ್ಷನು ಇಂದ್ರನಂ ಅವನ ವಸ್ತುಗಳಂ ಕಾಣದೇ ಅಲ್ಲಿರ್ದ ದೇವತೆಗಳಂ ಪಿಡಿದು, ಇಂದ್ರನ ವಸ್ತುಗಳಂ ತೋರಿಸಿ ಎಂದು ನಿರ್ಬಂಧವಂ ಮಾಡಲು, ಆಗ ದೇವತೆಗಳೆಲ್ಲರೂ ಆ ದಾನವನ ಉಪದ್ರವವಂ ಸಹಿಸಲಾರದೇ ಚಿಂತಾಮಣಿರತ್ನವು ಸುರಾಚಾರ್ಯನ ಬಳಿಯಲ್ಲಿರುವುದು ಒಂದು ಬಲ್ಲೆವು, ಮಿಕ್ಕಾದ ವಸ್ತುಗಳು ಏನಾದವೋ ನಮಗೆ ತಿಳಿಯದು ಎಂದು ನುಡಿಯಲು, ಅದಂ ಕೇಳಿ, ದುರ್ಧರ್ಷನು ಮೊದಲು ಗೊತ್ತಾದ ಮಣಿಯಂ ಸಾಧಿಸಿಕೊಂಡು ನಮ್ಮ ಸ್ವಾಧೀನವಸ್ತ್ವದಿ, ಬಳಿಕ ಮಿಗಿಲಾದ ವಸ್ತುಗಳೆಲ್ಲಿರುವವೋ ಅರಸಿ ಸಾಧಿಸಿ, ಶತ್ರುವಾದ ಪುರಂದರನಂ ಗೊತ್ತುಮಾಡಿ ಸೆರೆಯಲ್ಲಿರಿಸುವ ಎಂದು ನಿಶ್ಚೈಸಿ, ಬೃಹಸ್ಪತಿ ಇರುವ ಬಳಿಗೆ ದಂಡೆತ್ತಿ ಬರುತ್ತಿರಲೂ.

ಆ ವಾರ್ತೆಯಂ ಕೇಳಿದ ಸುರಾಚಾರ್ಯನು ದುರಾತ್ಮನಾದ ದುರ್ಧರ್ಷನು ಮಣಿನಿಮಿತ್ತವಾಗಿ ಬರುವಂತೆ ತೋರುವದು ಬರಿದೇ ಅವನೊಡನೆ ಹೋರಾಡಿ ಫಲವೇನು, ಕೊಡದಿದ್ದರೆ ಬಿಟ್ಟು ಪೋಗುವನಲ್ಲ. ಅದು ಕಾರಣ ಈ ಮಣಿಯಂ ರಕ್ಷಿಸಲೋಸುಗ ವರುಣನಿದ್ದೆಡೆಗೆ ಪೋಗಿ ಮಣಿಯಂ ಅವನ ವಶವಂ ಮಾಡಿ, ತಾನು ಸತ್ಯಲೋಕವಂ ಕುರಿತು

ತೆರಳಲೂ, ಆ ವೃತ್ತಾಂತವಂ ಕೇಳಿ, ದುರ್ಧರ್ಷ ಮೊದಲಾದವರು ಸುರಾಚಾರ್ಯನು ಮಣಿಯಂ ಮರೆಮಾಡಬೇಕೆಂದು ಪೋಗಿರುವಂತೆ ತೋರುತಲಿಧೆ ಎಂದು ನಿಶ್ಚೈಸಿ, ಅಲ್ಲಿಂದ ಹೊರಟು ವರುಣನಿರುವ ಬಳಿಗೆ ಬಂದು ಮುತ್ತಿಗೆಯಂ ಹಾಕಿ, ಚಾರರಂ ಕಳುಹಿ ಕಾಳಗವಂ ಕಾದುವೆಯೋ, ಸುಮ್ಮನೆ ಮಣಿಯಂ ಕೊಡುವೆಯೋ ಎಂದು ಕೇಳಿಸಲಾಗ ವರುಣನು ಕೋಪಗೊಂಡು, ಹಾಗೆ ಇವರೊಡನೆ ಯುದ್ಧವಂಮಾಡುವುದುಯುಕ್ತವಲ್ಲವೆಂದು ತಿಳಿದು, ವಾಯುವಿನ ಕೈಯಲ್ಲಿಮಣಿಯಂಕೊಟ್ಟು ಮಣಿಯು ನನ್ನಲ್ಲಿಲ್ಲ ವಾಯುವಿನ ಬಳಿಯಲ್ಲಿರುವುದೆಂದು ಪೇಳಲೂ, ಈ ಪರಿಯಾಗಿ ಆ ಮಣಿಯು ದಿಕ್ಪಾಲಕರೆಲ್ಲರಂ ಹೊಂದಿ ಕಡೆಗೆ ನೈಋತ್ಯನ ವಶದಲ್ಲಿರಲೂ, ದುರ್ಧರ್ಷನು ಈ ವೃತ್ತಾಂತವೆಲ್ಲವಂ ಚಾರಮುಖದಿಂ ತಿಳಿದು ಕ್ರಮವಾಗಿ ದಿಕ್ಪತಿಗಳೆಲ್ಲರಂ ಜಯಿಸಿ, ನೈಋತ್ಯನ ಪಟ್ಟಣಕ್ಕೆಬಂದು ಮುತ್ತಿಗೆಯಂಹಾಕಿ, ಮಣಿಯಂಕೊಟ್ಟರೆ ಉತ್ತಮವು ಇಲ್ಲದಿದ್ದರೆ ಸ್ವಜಾತೀಯನಾದವರಂ ಬಿಡುವುದಿಲ್ಲ ರಣದೋಳ್ ಮಣ್ಣು ಪಾಲು ಮಾಡುವೆವೆಂದು ಆರ್ಭಟಿಸಲಾಗ ನೈಋತ್ಯನು ವರುಣ ಮೊದಲಾದ ದಿಕ್ಪತಿಗಳಂ ಲೀಲೆಯಿಂ ಜೈಸಿ ಬಂದಿರುವ ದುರ್ಧರ್ಷ ಮೊದಲಾದವರೊಡನೆ ಯುದ್ಧವಂ ಮಾಡಿ ನಾನೆಂತು ಜೈಸುವೆನು, ಯುದ್ಧವಂ ಮಾಡದಿದ್ದರೆ ಮಣಿಯಂ ಕೊಟ್ಟಲ್ಲದೆ ತೀರದು, ಅದುಕಾರಣ ಮುಂದೇನು ಮಾಡುವೆನೆಂದು ಆಲೋಚಿಸಿ, ಅವರಂ ಕರತಂದು ಸಂತೋಷ ಪಡಿಸಿ ಕಳುಹಬೇಕೆಂದು ನಿಶ್ಚೈಸಿ, ಸಕಲ ಸಾಮಗ್ರಿಗಳಂ ಸನ್ನೆಹಿಸಿಕೊಂಡು ಪರಿವಾರದೊಡನೆ ಎದುಗೊಂಡು ಪೋಗಿ, ಪರಿಪರಿ ವಸ್ತುಗಳಂ ಕಾಣಿಕೆಯಾಗಿ ಕೊಟ್ಟು, ಸ್ವಜನದಲ್ಲಿ ಇಷ್ಟು ಕೋಪವಂ ಮಾಡುವುದಕ್ಕೆ ಕಾರಣವೇನು, ನಿಮ್ಮ ಮನಸ್ಸಿನಂತೆ ಆಗುವುದರಲ್ಲಿ ಸಂಶಯವೇನೆಂದು ದುರ್ಧರ್ಷನ ಒಡಂಬಡಿಸಿ ತನ್ನ ಮಂದಿರಕ್ಕೆ ಕರತಂದು ಔತನವಂ ಮಾಡಿ ಉಡುಗೆತೊಡಿಗೆಗಳಂ ಕೊಟ್ಟು, ಬಳಿಕ ಈ ದುರ್ಧರ್ಷನಂ ಕುರಿತು ಬಂದ ಕಾರಣವೇನೆಂದು ಕೇಳಲು, ಆಗ ದುರ್ಧರ್ಷನು ಚಿಂತಾಮಣಿಯ ವೃತ್ತಾಂತವಂ ತಿಳುಹಲು, ಅದಂಕೇಳಿ ನಿಋತಿಯು ಆಹಹಾ! ಪ್ರಮಾದವಾಯಿತೂ, ಇಂದಿನಿಸ ತಾವು ಮುಂದಾಗಿಬಂದಿದ್ದರೆ ಮಣಿಯು

ಸಿದ್ಧಿ ಸ್ವಾಧೀನವಾಗುವವರಲ್ಲಿ ಸಂದೇಹವಿದವಿಲ್ಲ, ಈಗಲಾದರೋ ನನಗೆ ವಾರುಣೀ ಎಂಬ ಓರ್ವ ಮಗಳು ಉಂಟು, ಆ ತರುಣಿಯು ಈ ಚಿಂತಾಮಣಿಯಂ ಕಂಡು ತನಗೆ ಬೇಕೆಂದು ಅದಂಗೊಂಡು ತನ್ನ ಮುಡಿಯೊಳ್ ಅಲಂಕರಿಸಿಕೊಂಡು ವಿಹಾರಾರ್ಥವಾಗಿ ಸಖಿಯರೊಡಗೂಡಿ ಪಾತಾಳವಂ ಸ್ವೈದಲೂ, ಅಲ್ಲಿ ಮಹಾಶೇಷನ ಮಂತ್ರಿಯಾದ ಮಹಾನಾಗನೆಂಬ ನಾಗೋತ್ತಮನ ಪುತ್ರಿಯಾದ ಸೌಂದರ್ಯವೆಂಬ ಸಮುದ್ರವದೊಳ್ ಚತುರ್ಮುಖನು ಒಂದು ಭಾಗವಂ ಸಂಗ್ರಹಿಸಿ, ಸಕಲ ಲೋಕಂಗಳಲ್ಲಿರುವ ಸ್ತ್ರೀಯರುಗಳಂ ನಿರ್ಮಾಣವಂಗೈದನು. ಉಳಿದ ಮೂರು ಭಾಗವು ಒಂದಾಗಿ ಸ್ತ್ರೀರೂಪವಂ ತಾಳಿ ಬಂದಿರುವಂತೆ ತೋರುತ್ತಲಿರುವ ಮಾಲಿನೀಯೆಂಬೋರ್ವ ಕನ್ಯೆಯು ಇರುವಳು, ಅವಳಿಗೂ, ನನ್ನ ಪುತ್ರಿಯಾದ ವಾರುಣಿಗೂ ಪರಮ ಸ್ನೇಹವಿರುವ ಕಾರಣ ಇರ್ವರೂ ಒಂದಾಗಿ ಆಡುತ್ತಿರುವಾಗ ಆ ಮಾಲಿನಿಯು, ಮಣಿಯಂ ಕಂಡು, ನನ್ನ ಮಗಳಂ, ಈ ಮಣಿಯಂ ತನಗೆ ಕೊಡು ಎಂದು ಕೇಳಿ, ಹಾಗೆ ಅವಳು ಕೊಡುವಳಲ್ಲವೆಂದು ನಿಶ್ಚೈಸಿ, ವಂಚಿಸಿ ಅಪಹರಿಸಲೂ, ಆಗ ನನ್ನ ಮಗಳಾದ ವಾರುಣಿಯು ಅದಂ ಅರಿಯದೇ ಎಂದಿನಂತೆ ಮನೆಗೆ ಬಂದು ಶಿರದಲ್ಲಿರ್ದ ಮಣಿಯಂ ನೋಡಿ ಕಾಣದೆ, ಎನ್ನ ಸಂಗಡೆ ಹೇಳುವುದಕ್ಕೆ ಭಯಗೊಂಡು ಮಾರನೇ ದಿನ ಆ ಮಾಲಿನಿಯ ಮಂದಿರಕ್ಕೆ ಪೋಗಿ ಮಣಿಯ ವೃತ್ತಾಂತವಂ ತಿಳುಹಲೂ, ಮಾಲಿನಿಯು ಅದಂ ಕೇಳಿ, ತಾನು ಮಣಿಯಂ ಕಾಣೆನೆಂದು ನುಡಿದು ನಿಷ್ಠುರವಾದ ಮಾತುಗಳನ್ನಾಡಿ ಕಳುಹಲಾ ವಾರುಣಿಯು ಅಲ್ಲಿಂದ ಬಂದು ಪ್ರಾಯೋಪವೇಶವಂ ಮಾಡುವೆನೆಂದು ರಾಕ್ಷಸಕುಲಕ್ಕೆಲ್ಲ ಮುಖ್ಯೋಪಾಸ್ಯ ದೇವತೆಯಾದ ಮಹಾಕಾಳಿಯ ದೇವಾಲಯದೊಳ್ ಮಲಗಿರುವಳು, ಇದಕ್ಕೆ ನಾನೇನುಮಾಡುವೆನು, ನಾಗಲೋಕವಂ ಪೊಕ್ಕು ಅಲ್ಲಿರುವ ಮಹಾ ಸರ್ಪಂಗಳಂ ನಿಗ್ರಹಿಸಿ ಮಣಿಯಂ ತಂದು ಕೊಡುವ ಸಾಹಸ ಕಾರ್ಯವು ನನ್ನಿಂದ ಸಾಧ್ಯವಾಗುವದಲ್ಲವಾದ್ದರಿಂದ ಎಲೈ ಮಧ್ಯಮನೇ ! ಲೋಕೈಕವೀರನಾದ ನಿನಗೆ ಎದುರಾಗಿ ಪ್ರತಿಭಟಿಸಿ ಬರುವವರು ಮೂರು ಲೋಕಂಗಳಲ್ಲಿಯೂ, ಕಾಣುವುದಿಲ್ಲ. ಆದುಕಾರಣ ನೀನು ಪಾತಾಳ ಲೋಕವಂ ಪೊಕ್ಕು

ಅಲ್ಲಿರುವ ಮಹಾಸರ್ಪಂಗಳಂ ನಿಗ್ರಹಿಸಿ, ಆ ಮಣಿಯಂ ಎನಗೆ ತಂದಿತ್ತರೆ ನನ್ನ ಮಗಳು ಬದುಕುವಳು, ಅವಳಂ ಆ ರತ್ನವಂ ಕೂಡೆ ನಿನಗೆ ಕೊಡುವೆನೆಂದು ಹೇಳಿ ಮನ ಒಪ್ಪುವಂತೆ ಉಪಚಾರವಂ ಮಾಡಲು, ಆ ಮಾತಂ ಕೇಳಿ ದುರ್ಧರ್ಷನು ನಿಮಿತ್ತಿಯು ಹೇಳಿದ್ದೆಲ್ಲವೂ ನಿಜವೆಂದು ತಿಳಿದು, ಹಾಗೇ ಆಗಲಿ ಎಂದು ಒಡಂಬಟ್ಟು, ಪಾತಾಳಲೋಕಕ್ಕೆ ಪೋಗುವೆನೆಂದು ಹೇಳಲು, ಬಳಿಕ ನೈಋತ್ಯನು ತನ್ನ ಮಾತು ಸಟೆಯಾಗಬಾರದೆಂದು ಚಿಂತಾಮಣಿಯಂ ತೆಗೆದುಕೊಂಡು ಮತ್ತೊಂದು ಮಾರ್ಗದಿಂ ಬೇಗನೆ ಪಾತಾಳಲೋಕವಂ ಪೊಕ್ಕು ಮಹಾಶೇಷನಂ ಕಂಡು ಸ್ವರ್ಗಾಧಿಪತಿಯಾದ ಪುರಂದರನಿಗೆ ದೂರ್ವಾಸ ಮುನಿಯಿಂದ ಬಂದ ಶಾಪವಂ, ದೈತ್ಯದಾನವರೆಲ್ಲರೂ ಅಮರಾವತೀಪಟ್ಟಣವನ್ನಾಕ್ರಮಿಸಿರುವ ವೃತ್ತಾಂತವಂ, ಮತ್ತು ಇಂದ್ರನು ಅದೃಶ್ಯನಾಗಿರುವುದಂ ಕೂಡೆ ತಿಳುಹಿಸಿ, ಬಳಿಕ ಪುರಂದರನು ಬರುವವರಿಗೂ ದೇವಯೋಗ್ಯವಾದ ಈ ಚಿಂತಾಮಣಿಯಂ ನೀನು ರಕ್ಷಿಸಿಕೊಂಡಿರಬೇಕೆಂದು ಮಹಾಶೇಷನಮುಂದೆ ಇಡಲು, ಆಗಲಾ ಮಹಾಶೇಷನು ಅವನ್ನೋಡಿ, ಈ ನೈಋತ್ಯನು ಏನೋ ಒಂದು ಕಾರಣದಿಂದ ಈ ಮಣಿಯಂ ಇಲ್ಲಿಗೆ ತಂದಿರುವನೆಂದರಿತು ದೇವತೆಗಳ ಒಡವೆ ನಮಿಗ್ಯಾಕೆ ಇದಂ ರಕ್ಷಿಸುವುದಕ್ಕೆ ನೀನೇ ಬಾಧ್ಯನೆಂದು ಹೇಳಿ ಅವನಿಗೆ ಸನ್ಮಾನವಂ ಮಾಡಿ, ಆ ಮಣಿಯಂ ಕೂಡಾಕೊಟ್ಟು ಕಳುಹಲು, ಆ ಸಮಯದಲ್ಲಿ ಆ ಮಹಾಶೇಷನ ಮಂತ್ರಿಯಾದ ಮಹಾ ನಾಗನೆಂಬುವನು ಆ ಚಿಂತಾಮಣಿಯಂ ಕಂಡು ತನ್ನ ಮಗಳಾದ ಮಾಲಿನಿಗೆ ಯೋಗ್ಯವಾಗಿರುವುದೆಂದು ಮನದೊಳ್ ಯೋಚಿಸಿ, ಅಲ್ಲಿಂದ ಎದ್ದು ನೈಋತ್ಯನ ಸಂಗಡಲೇ ಬಂದು ಮತ್ತೊಮ್ಮೆ ಮಣಿಯ ವೃತ್ತಾಂತವಂ ಕೇಳಿ, ಈ ಮಣಿಯು ತನ್ನಲ್ಲಿ ಇರಲಿ, ನಾನು ಇಂದ್ರನು ಬರುವವರಿಗೂ ಸಂರಕ್ಷಿಸಿಕೊಂಡಿರುವೆನೆಂದು ಒಡಂಬಡಿಸಲಾಗ ನೈಋತ್ಯನು ಹ್ಯಾಗಾದರೂ ಆಗಲೀ ಎಂದು ಆ ಚಿಂತಾಮಣಿಯಂ ಆ ಮಹಾನಾಗನ ಕರದೊಳಿಟ್ಟು ಎಂದಿನಂತೆ ತನ್ನ ಮನೆಗೆ ತೆರಳಲು, ಆ ಬಳಿಕ ಆ ಮಹಾನಾಗನು ಆ ಚಿಂತಾಮಣಿಯಂ ತೆಗೆದುಕೊಂಡು ಅತಿ ಸಂಭ್ರಮದಿಂ ಮನೆಗೆ ಬಂದು ತನ್ನ ಮಗಳಾದ ಮಾಲಿನಿಯಂ ಕರೆದು ಎತ್ತಿ, ಮಾಲಿ

ನಿಯೋ! ಇದು ಕೋ, ಚಿಂತಾಮಣಿಯುಂ ತಂದಿರುವೆನೆಂದು ಪೇಳೆ, ಆವಳ
ಕರದೊಳಿಡಲಾಮಾಲಿನಿಯು ಅತಿ ಸಂಭ್ರಮದಿಂದಾಮಣಿಯುಂ ಕೊಂಡು
ಪೂಜಿಸುತ್ತಿರಲು, ಇತ್ತಲಾ ದುರ್ಧರ್ಷನು ಸಮಸ್ತ ಸೇನಾ ಸಮೇತ
ನಾಗಿ ನಾಗಲೋಕವಂ ಪೊಕ್ಕು ಅಟ್ಟಹಾಸವಂ ಮಾಡಲು ಅಲ್ಲಿದ್ದ ನಾ
ಗರೆಲ್ಲರೂ ಗಡಗಡನೆ ನಡುಗಿ, ಏನೋ ಮಹತ್ತಾದ ವಿಪತ್ತು ಬಂದಿರುವ
ದೆಂದು ತಿಳಿದು ಒಟ್ಟುಗೂಡಿ ಮಹಾಶೇಷನ ಬಳಿಗೆ ಪೋಗಿ ದೈತ್ಯರು
ಬಂದಿರುವ ವೃತ್ತಾಂತವಂ ಪೇಳಲು, ಅದಂ ಕೇಳಿ, ಆ ಮಹಾಶೇಷನು
ಕಾರ್ಕೋಟಕನೆಂಬ ನಾಗನಂ ಕರದು ದೈತ್ಯರು ಇಲ್ಲಿಗೆ ಬರುವುದಕ್ಕೆ
ಕಾರಣವೇನು, ಅದು ತಿಳಿದು ಬಾರೆಂದು ಕಳುಹಲು, ಆ ಕಾರ್ಕೋಟ
ಕನು ಬಂದು ದುರ್ಧರ್ಷನಂ ಕಂಡು ಅವನು ಬಂದಿರುವ ವೃತ್ತಾಂತ
ವೆಲ್ಲವಂ ವಿಶದವಾಗಿ ತಿಳಿದು, ಅಲ್ಲಿಂದ ಹೊರಟು ಮಹಾಶೇಷನ ಸಮೀಪ
ವನೈದಿ ಕೈಮುಗಿದು ಎಲೈ ಮಹಾರಾಜನೇ! ಮೊದಲು ನೈಋತ್ಯನು
ತಂದಿದ್ದ ಮಣಿಯು ಮಹಾನಾಗನ ಬಳಿಯಲ್ಲಿ ಇದೆಯಂತೆ, ಅದಂ ಕೊ
ಟ್ಟರೆ ಸುಮ್ಮನೇ ಹೋಗುವೆನು, ಇಲ್ಲದಿದ್ದರೆ ಈಗ ಈ ನಾಗಲೋಕವು
ಸುಟ್ಟು ಭಸ್ಮವಂ ಮಾಡುವೆನೆಂದು ದುರ್ಧರ್ಷನು ನುಡಿದನೆಂದು ವಿ
ಜ್ಞಾಪನೆಯಂ ಮಾಡಲು, ಅದಂ ಕೇಳಿ ಆ ಶೇಷನು ಅತ್ಯಂತ ಆಗ್ರಹ
ದಿಂದ ತನ್ನ ಮಂತ್ರಿಯಾದ ಮಹಾನಾಗನಂ ಕರದು ಎಲಾ ಮಂದಮ
ತಿಯೇ ನೀನಿಂತು ಮಾಡುವುದು ಉಚಿತವೇ, ನಾನು ನಿರಾಕರಣೆಯಂ
ಮಾಡಿದ ಕಾರ್ಯವಂ ನೀನೆಂತು ಸಂಗ್ರಹಿಸಿದೆ ಎನಲಾ ಮಹಾನಾಗನು
ಎದ್ದು ನಿಂತು ಕೈಮುಗಿದು ಗಡಗಡನೆ ನಡುಗುತ ಮಗಳ ಮೇಲಣ ಮ
ಮತೆಯಿಂದ ಆ ಕಾರ್ಯವಂ ಮಾಡಿದೆನು, ನನ್ನ ಅಪರಾಧವಂ ಕ್ಷಮಿಸಿ,
ಮುಂದೆ ನೀನೆಂತು ಅಪ್ಪಣೆಯಂ ಕೊಡುವೆಯೋ ಅದೇ ಮೇರೆಗೆ ನಡೆ
ಯುವೆನೆಂದು ಕಂಬನಿಗಳಂ ತುಂಬುತ ನಿಂತಿರಲು, ಆಗ ನಾಗಶ್ರೇಷ್ಠರೆ
ಲ್ಲರೂ ಕೂಡಿ ಹಿಂದೆ ಮಾಡಿದ ಅಕಾರ್ಯಕ್ಕೆ ಈಗ ಆಡಿ ಫಲವೇನು, ಈ
ಗ ಬಂದಿರುವ ವಿಪತ್ತುಗಳಂ ಕಳೆದುಳಿಯಬೇಕು, ತಡಮಾಡಕೂಡದೆಂ
ದು ನುಡಿಯುವ ತನ್ನ ಪರಿವಾರವಂ ನೋಡಿ ಮಹಾಶೇಷನು ತನ್ನ ಮಂತ್ರಿ
ಗಳಂ ಕುರಿತು ನಮ್ಮ ಮಹಾನಾಗನು ಯಾರೂ ಅರಿಯದಂತೆ ಮಾಡಿದ

ಕಾರ್ಯವು ಅನರ್ಥಕ್ಕೆ ಆಕರವಾಯಿತು, ಅದೆಂತೆನೆ—ಈಗ ದಂಡೆತ್ತಿ ಬಂದಿರುವ ದುರ್ಧರ್ಷನಿಗೆ ಮಣಿಯುತ್ತಿದ್ದರೆ ಮುಂದಕ್ಕೆ ನಾವಾಗಿ ದೇವತೆಗಳೊಡನೆ ದ್ವೇಷವಂ ಸಂಪಾದಿಸುವಂತಾಗುವುದು, ಮಣಿಯಂ ಕೊಡದಿದ್ದರೆ ಆ ದಾನವನು ನಾಗಲೋಕವಂ ಕ್ಷೋಭೆಪಡಿಸಿ ಮಣಿಯಂ ಕೊಂಡು ಹೋಗುವನು, ಆದುಕಾರಣ ಇದಕ್ಕೆ ಒಂದು ಉಪಾಯ ಉಂಟು, ಅದೆಂತೆಂದರೆ—ಲೋಕದಲ್ಲಿ ಚರಾಚರಪ್ರಾಣಿಗಳೇ ಮೊದಲಾಗಿ ಪುರುಷೋತ್ತಮನವರಿವಿಗೂ ಯಾವ ದೇವನ ಆಜ್ಞೆಯಂ ಉಲ್ಲಂಘಿಸಿ ನಡೆಯುವುದಕ್ಕೆ ಸಮರ್ಥರಲ್ಲವೋ; ಅಂಥಾ ಪರಾತ್ಪರನಾದ ಪಶುಪತಿಯು ತಾನಾದರೂ ಒಂದುವೇಳೆ ಭಕ್ತರವಶವಾದಾನು, ತನ್ನ ಉಪಾಸನೆಯಂ ಮಾಡುವರಂ ಪರಾಧೀನರಂ ಮಾಡನು, ಅದೆಂತೆನೆ—ಪೂರ್ವದಲ್ಲಿ ಶಿವೋಪಾಸಕರೇ ಸಮುದ್ರವಂ ಪಾನವಂ ಗೈದು ಭೂಮ್ಯಾಕಾಶಗಳಂ ತಲೆಕೆಳಗಾಗಿ ಮಾಡುವುದಕ್ಕೂ ಸಮರ್ಥರಾದರು, ಇವ್ವರಿಂದ ಅವರಲ್ಲಿ ಮುಖ್ಯಭಕ್ತನಾದ ಪುರುಷಮೃಗನು ಹಿಮವತ್ಪರ್ವತದ ಸಮೀಪದಲ್ಲಿ ಆಶ್ರಮವಂ ಮಾಡಿಕೊಂಡಿರುವನು, ಅವನಂ ಹಿಡಿದು ತಂದುಕೊಟ್ಟರೆ ಈ ಮಹಾನಾಗನ ಕನ್ಯೆಯಾದ ಪದ್ಮಿನಿ ಎಂಬ ಸ್ತ್ರೀಯಂ ಚಿಂತಾಮಣಿರತ್ನಸಹಿತವಾಗಿ ಕೊಡುವೆವು ಎಂದು ಆ ದೈತ್ಯನಂ ಒಡಂಬಡಿಸಿದರೆ ದುರಹಂಕಾರಿಯಾದ ದುರ್ಧರ್ಷನು ತನ್ನ ಕೊಬ್ಬಿನಿಂದ ಇದು ಅಲ್ಪಕಾರ್ಯವೆಂದು ಒಡಂಬಟ್ಟು ಪುರುಷಮೃಗನಂ ವಶವಂ ಮಾಡಿಕೊಂಡು ಬರುವುದಕ್ಕೆ ಹೋಗಿ ಹಿಡಿಯುವುದಕ್ಕೆ ಯತ್ನವಂ ಮಾಡಿ ಅವನ ತಪೋಜ್ವಾಲೆಯಿಂದ ದಹಿಸಿ ಹೋಗುವನು, ಅಲ್ಲದಿದ್ದರೆ ಪರಾಜಯನು ಗೈವನು, ಆದುಕಾರಣ ಈ ದುರ್ಧರ್ಷನಂ ಈಗ ನಾವು ಯೋಚಿಸಿರುವ ಮೇರೆಗೆ ಒಡಂಬಡಿಸಿ ಕಳುಹುವುದು ಉತ್ತಮವೆಂದು ಅಪ್ಪಣೆಯನ್ನೀಯಲು, ಆ ಮಾತಂ ಕೇಳಿ ಮಂತ್ರಿಗಳೆಲ್ಲರೂ ಚೆನ್ನಾಗಿದೆ ಎಂದು ಎಲ್ಲರೂ ಒಂದಾಗಿ ಈ ಮಹಾನಾಗನಂ ಮುಂದು ಮಾಡಿಕೊಂಡು ಅನರ್ಘ್ಯಗಳಾದ ವಸ್ತ್ರಾಭರಣಗಳಂ ತೆಗೆಯಿಸಿಕೊಂಡು ದುರ್ಧರ್ಷನಿರುವ ಬಳಿಗೆ ಬಂದು ತಂದ ವಸ್ತುಗಳಂ ಕಾಣಿಕೆಯಾಗಿ ಕೊಟ್ಟು ಮಹಾಶೇಷನು ಹೇಳಿದ ಮಾತುಗಳಂ ವಿಸ್ತಾರವಾಗಿ ತಿಳುಹಿಸಲು, ಅದಂ ಕೇಳಿ ಆ ದುರ್ಧರ್ಷನು ಸಂ

ತೋಷಚಿತ್ತನಾಗಿ ನೀವು ಹೇಳಿದಂತಾಗಲೀ, ಪುರುಷಮೃಗನಂ ಮೂರು ದಿನದಲ್ಲಿ ತಂದೀವೆನೆಂದು ಪ್ರತಿಜ್ಞೆಯಂ ಮಾಡಿ, ಬಂದಿರುವ ನಾಗಶ್ರೇಷ್ಠರಿಂದ ಅಪ್ಪಣೆಯಂ ತೆಗೆದುಕೊಂಡು ಭೂಲೋಕವನ್ನೈದಿ, ನಾನಿರುವ ಬಳಿಗೆ ಬಂದು ಸರ್ವಸಾಹಸವಂ ಮಾಡಿ ನೋಡಿ ಬಂದು ಯತ್ನವೂ ಸಾಗದೆ ನನ್ನ ಸಮೀಪಕ್ಕೆ ಬರುವುದಕ್ಕೆ ಸಾಮರ್ಥ್ಯವಿಲ್ಲದೇ ಪಾತಾಳವಂ ಪ್ರವೇಶಿಸುವುದಕ್ಕೆ ಮಾರ್ಗವಿಲ್ಲದೇ, ಸಮಯವನ್ನೋಡಿ ಕಾರ್ಯವಂ ಮಾಡುವೆವೆಂದು ನಿಶ್ಚಯಿಸಿ, ಎನಗೆ ಸ್ವರ್ಗವು ಸ್ವಾಧೀನವಾಗಿರುವುದು, ಭೂಮಿಯಲ್ಲಿಯೂ ತಾನಿರುವುದಕ್ಕೆ ಒಂದು ಯೋಗ್ಯವಾದ ಸ್ಥಳವಂ ಮಾಡಬೇಕೆಂದು ಸಕಲ ಭೂಮಂಡಲವಲ್ಲಿಯೂ ಹುಡುಕಿ ನೋಡಿ, ಇಕ್ಷು ಸುರಾ ಸಮುದ್ರಗಳ ಮಧ್ಯದಲ್ಲಿರುವ, ನಾಲ್ಕು ಲಕ್ಷ ಯೋಜನ ವಿಸ್ತೀರ್ಣವಾದ ಶಾಲ್ಮಲಿ ದ್ವೀಪವಂ ಕಂಡು ಅದರ ಮಧ್ಯದಲ್ಲಿ ಧ್ವಜಸ್ತಂಭದಂತೆ ಕಾಣುವ ಸಾವಿರದ ನೂರು ಯೋಜನ ಉದ್ದವಾಗಿರುವ, ಅನೇಕವಾದ ಕೊಂಬೆಗಳಿಂ ಕೂಡಿ ಎರಡು ಸಾವಿರದ ಇನ್ನೂರು ಯೋಜನ ವಿಸ್ತಾರವಾಗಿಯೂ, ಗರುತ್ಮಂತನಿಗೆ ವಾಸಯೋಗ್ಯವಾಗಿರುವ ಬೂರುಗದ ಮರವಂ ನೋಡಿ ಅಲ್ಲಿ ವಿಚಾರಿಸಲು, ಆ ದ್ವೀಪಾಧಿಪತಿಯಾದ ವಪುಷ್ಮಂತನೆಂಬುವನೆಂದು, ಮತ್ತು ಆತನಿಗೆ, ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾನಸ, ಸುಪ್ರಭಾ ಎಂಬ ಏಳು ಮಂದಿ ಮಕ್ಕಳಿರುವುದಂ, ಆ ಮಕ್ಕಳಿಗೆ ಆ ದ್ವೀಪವಂ ಏಳು ಖಂಡವಂ ಮಾಡಿ, ಒಬ್ಬೊಬ್ಬರಿಗೆ ಒಂದೊಂದು ಖಂಡದ ಆಧಿಪತ್ಯವನ್ನಿತ್ತು, ಆ ಖಂಡಗಳಿಗೆ ಅವರವರ ಹೆಸರನ್ನಿಟ್ಟು ಇರುವುದಂ ತಿಳಿದು, ಕುಮುದ, ಉತ್ತರ, ಬಲಾಹಕ, ದ್ರೋಣ, ಕಂಕ, ಮಹಿಷ, ಕಕುದ್ಮಂತವೆಂಬ ಏಳು ಪರ್ವತಂಗಳು ಏಳು ಖಂಡಗಳಿಗೆ ಮರ್ಯಾದಾಪರ್ವತಗಳೆಂದು ನಿಶ್ಚಯಿಸಿ, ಆ ಏಳು ಖಂಡಗಳಲ್ಲಿಯೂ, ಪ್ರತ್ಯೇಕ ಪ್ರತ್ಯೇಕವಾಗಿ ಪ್ರವಹಿಸುವ, ಸುರಸಾ, ಅಮೃತಾ, ಚಂದ್ರಾ, ತೃಷ್ಣಾ, ಶುಕ್ರಾ, ವಿಮೋಚನೀ, ನಿವೃತ್ತಾ ಎಂಬ ಏಳು ನದಿಗಳನ್ನೋಡಿ, ಮತ್ತು ಆ ಖಂಡದಲ್ಲಿರುವ ಶ್ರುತಿಧರ, ವೀರ್ಯಧರ, ವಸುಂಧರ, ಇಧ್ಮಧರರೆಂಬ ನಾಲ್ಕು ವರ್ಣದವರು ಯಥಾಯೋಗ್ಯವಾಗಿ ಚಂದ್ರನ ಉಪಾಸನೆಯಂ ಮಾಡುವುದಂ ತಿಳಿದು,

ಮತ್ತು ಈ ದ್ವೀಪವಂ ನಾಲ್ಕು ಲಕ್ಷಯೋಜನ ವಿಸ್ತೀರ್ಣವಾದ ಸುರಾಸಮುದ್ರವು ಸುತ್ತುವರದಿರುವವಂನೋಡಿ ಸಂತೋಷದಿಂ ಕೂಡಿದವನಾಗಿ, ತಮ್ಮ ರಾಕ್ಷಸಜನವು ಇನ್ನೆಷ್ಟು ಕೂಡಿದರೂ ವಾಸವಂ ಮಾಡುವುದಕ್ಕೆ ಈ ದ್ವೀಪವು ವಿಶಾಲವಾಗಿರುವುದೆಂದು ನಿಶ್ಚೈಸಿ, ಮಯಾಸುರನಂ ಕರೆಯಿಸಿ ಸಾವಿರಯೋಜನ ಅಗಲವಾದ ಪಟ್ಟಣವಂ ಆ ಸುರಾಸಮುದ್ರದ ತೀರದಲ್ಲಿ ನಿರ್ಮಾಣವಂಗೈಸಿ, ಅಲ್ಲಿಯೇ ಪಾತಾಳಲೋಕಕ್ಕೆ ಪೋಗುವುದಕ್ಕೆ ಮಾರ್ಗವಂ ನಿರ್ಮಾಣವಂಮಾಡಿಸಿ, ಆ ಪಟ್ಟಣಕ್ಕೆ ಉಗ್ರಪುರವೆಂದು ಹೆಸರಿಟ್ಟು, ಆ ಪಟ್ಟಣದಲ್ಲಿ ಸಪರಿವಾರನಾಗಿರುತ್ತಾ, ಮತ್ತು ಆ ದ್ವೀಪದಲ್ಲಿರುವ ಸಕಲರಾಜರುಗಳಂ ಜಯಿಸಿ ಸ್ವಾಧೀನವಂಮಾಡಿಕೊಂಡು ಸುತ್ತಲೂ ಇರುವ ಋಷಿಗಳು, ದೇವತೆಗಳು, ಗಂಧರ್ವರು, ಮೊದಲಾದವರಂ ಪೀಡಿಸುತ್ತಾ, ಮಹಾನಾಗನ ಮಗಳಾದ ಮಾಲಿನಿಯುಂ, ಚಿಂತಾಮಣಿಯುಂಕೂಡ ಚಿಂತಿಸುತ್ತಾ, ಕಾರ್ಯಾಂತರವು ತೋರದೇ ಸ್ವಲ್ಪಕಾಲಸ್ವರ್ಗದಲ್ಲಿಯೂ, ಸ್ವಲ್ಪಕಾಲ ತನ್ನ ಉಗ್ರಪುರಿಯಲ್ಲಿಯೂ ವಾಸವಂಮಾಡುತ್ತ ನಿಂತಲ್ಲಿ ನಿಲ್ಲದೇ ಹುಚ್ಚನಂತೆ ತಿರುಗುತ್ತಾ ದಿನ ದಿನದಲ್ಲಿಯೂ ನಮ್ಮ ತಪಸ್ಸಿಗೆ ವಿಘ್ನವಂಮಾಡುತ್ತಾ, ಮತ್ತೂ ಪ್ರತಿದಿನವು ತನ್ನ ರಾಕ್ಷಸಸೈನ್ಯವು ನಮ್ಮ ತಪಸ್ಸಿಗೂ, ಶಿವಾರಾಧನೆಗೂ ಕೂಡ ವಿಘ್ನವಂಮಾಡುತ್ತಲಿದ್ದರೆ, ಒಂದುಕಾಲದಲ್ಲಾದರೂ ಬ್ಯಾಸರಂಗೊಂಡು ತಾನು ಹೇಳಿದಂತೆ ತನ್ನ ಸಂಗಡ ಬರುವೆನು, ಆಗ ಚಿಂತಾಮಣಿಯು, ಮಾಲಿನಿಯೂ ಸಹಾ ತನ್ನ ಸ್ವಾಧೀನವಾಗುವುದೆಂದು ದುರಾಲೋಚನೆಯಂಮಾಡಿ, ನಿತ್ಯದಲ್ಲಿಯೂ ವಿಘ್ನವಂಮಾಡಿಸುತ್ತಲಿರುವನೂ. ಅವರನೆಲ್ಲರಂ ಮಹಾಸಮರ್ಥನಾದ ನೀನು ಸಂಹಾರವಂಮಾಡಲು, ಅವರೆಲ್ಲರೂ ನಾಶವಂಪೈದಿದರು, ಇನ್ನು ಉಳಿದಿರುವ ದುಷ್ಟರಾದ ದಾನವರಂ ಪರಶಿವನು ನಿನ್ನ ಮುಖದಿಂದಲೇ ಸಂಹಾರವಂ ಮಾಡಿಸ್ಯಾನು ಸಂಶಯವಿಲ್ಲ, ಎಲೈ ರಾಜಕುಮಾರನೇ! ನೀನು ಮಾಡಿದ ಪರಾಕ್ರಮಕ್ಕೆ ವಿರಕ್ತನಾದ ನಾನು ಏನು ಉಪಕಾರವಂಮಾಡುವೆನು, ನಿರಂತರವೂ ನೀನು ಮಾಡುವ ಕಾರ್ಯಗಳು ಕೈಗೂಡಿಬರುತ ಸುಖಿಯಾಗಿರುವಂತೆ ಆಶೀರ್ವಾದವಂಮಾಡುವೆನು ಇದೇ ನಮ್ಮ ವೃತ್ತಾಂತವೆಂದು ಹೇಳಿ, ಮೌನ

ದಿಂವಿರಲು. ಆಗ ಸುಗಂಧರಾಜೇಂದ್ರನು ಸುಮತಿಯು ಮೊಗವಂ ನೋಡಿ, ಮೊದಲು ನಾವು ಯೋಚಿಸಿದಂತೆ ಈ ದುಷ್ಟರಾಕ್ಷಸರಂ ನಿಗ್ರಹಿಸಿ ಈ ಮಹಾಪುರುಷನ ತಪಸ್ಸಿಗೆ ವಿಘ್ನವು ಬಾರದಂತೆ ಮಾಡಿದ್ದರಿಂದ ನಮಗೆ ಇಷ್ಟಾರ್ಥವಾದ ಚಿಂತಾಮಣಿಯು ಇರುವಬಳಿಯು ಗೊತ್ತಾಯಿತು, ಆ ರತ್ನವಂ ಈ ಮಹಾ ಪುರುಷನ ಅನುಗ್ರಹದಿಂದಲೇ ಗೆದ್ದು ತರುವೆನು ಎಂದು ನುಡಿದು, ತನ್ನ ಮನದೊಳ್ ಈ ಪುರುಷಮೃಗನು ಫಲಪುಷ್ಪಂಗಳಿಂದ ಮನೋಹರವಾದ ಮಾವು ಮೊದಲಾದ ವೃಕ್ಷಂಗಳಂಬಿಟ್ಟು ಈ ಬಿಲ್ವವೃಕ್ಷದ ನೆರಳಲ್ಲಿ ಇರುವುದಕ್ಕೆ ಏನು ಕಾರಣವೋ ತಿಳಿಯಲಿಲ್ಲ ಇದಂ ಆ ಮಹಾಪುರುಷನಿಂದಲೇ ತಿಳಿಯಬೇಕೆಂದು ನಿಶ್ಚೈಸಿ ಮಾತ್ರ ಆ ಋಷಿಗೆ ಪ್ರಣಾಮಮಂ ಮಾಡಿ ಆತನಂ ಕುರಿತು ಎಲೈ ಮಹಾನುಭಾವನೇ! ಈ ಅರಣ್ಯದಲ್ಲಿ, ಚಿಗುರಿಂದಲೂ, ಫಲಪುಷ್ಪಗಳಿಂದಲೂ, ಕೂಗುವ ಕೋಗಿಲೆಗಳಿಂದಲೂ, ಮಾತನಾಡುವ ಗಿಳಿಗಳಿಂದಲೂ, ಕೂಡಿರುವ ರಮಣೀಯವಾದ ಮಾವು ಮೊದಲಾದ ವೃಕ್ಷಗಳಂಬಿಟ್ಟು ಈ ಬಿಲ್ವವೃಕ್ಷವಂ ಆಶ್ರಯಿಸಿರುವುದಕ್ಕೆ ಕಾರಣವೇನು, ಅದಂ ಅಪ್ಪಣೆಯಂಕೊಡಬೇಕೆಂದು ಪ್ರಾರ್ಥನೆಯಂಮಾಡಲಾ ಪುರುಷಮೃಗನು ನಸುನಗುತ ಈತನು ಪಾರ್ವತೀಪತಿಗೆ ಪರಮಭಕ್ತನಾದ ಕಾರಣ ಶಿವರಹಸ್ಯಂಗಳಂ ಉಪದೇಶಮಂ ಮಾಡಬಹುದೆಂದು ಯೋಚಿಸಿ ಎಲೈ ರಾಜಕುಮಾರನೇ! ಕೇಳು, ಶ್ರವಣಮಾತ್ರದಿಂ ತಾಪತ್ರಯಗಳಂ ಸಂಹರಿಸಿ, ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳಂ ಹೋಗಲಾಡಿಸುವ ಸಚ್ಚಿದಾನಂದರೂಪನಾದ ಬಿಲ್ವವೃಕ್ಷದ ಉತ್ಪತ್ತಿಯಂ ಇದರ ಮಾಹಾತ್ಮ್ಯವಂ, ಷಣ್ಮುಖನ ಮುಖದಿಂದ ನಾನು ಕೇಳಿದಂತೆ ನಿನಗೆ ಉಪದೇಶವಂ ಮಾಡುವೆನು ಸಾವಧಾನಮನದಿಂ ಕೇಳುವನಾಗು. ಅದೆಂತೆನೆ—

ಪರಬ್ರಹ್ಮಪದವಾಚ್ಯನಾದ ಪರಶಿವನಿಗೆ ಆದಿಕಲ್ಪಾರಂಭಕ್ಕೆ ಮೊದಲುಭಾಗದಲ್ಲಿ ಜಗತ್ಸೃಷ್ಟಿಯಂಮಾಡಿ ಕ್ರೀಡಿಸಬೇಕೆಂಬ ಇಚ್ಛೆ ಉಂಟಾಗಿ, ಲೋಕಸೃಷ್ಟಿಯು ಅಪೂರ್ವವಾದ ಕಾರಣ, ವಿಹಾರಕ್ಕೆ ಯೋಗ್ಯವಾದ ಲೋಕಗಳ ಸೃಷ್ಟಿಯಂ ಎಂತೆಂ

ಮಾಡಬೇಕೆಂದು ಯೋಚಿಸುತ್ತಿರಲಾಗ, ಆ ಇಚ್ಛಾಮಾತ್ರದಿಂದ ತನ್ನಲ್ಲಿ ಪ್ರುಟ್ಟಿದಶ್ವಾಸವು ಹೋಗುತಲಿರುವದಂ, ಅವರ ಮಧ್ಯದಲ್ಲಿ ಸ್ವಲ್ಪ ಅವಕಾಶ ನಿರುವದಂ ಸಹಾ ಕಂಡು, ಶ್ವಾಸಕಾರ್ಯವು ಮೂರು ಬಗೆಯೆಂದು ನಿಶ್ಚೈಸಿ, ತ್ರಿವಿಧವಾಗಿರುವ ಶ್ವಾಸಕ್ಕೆ ಕಾರ್ಯಭೇದದಿಂದ ರೇಚಕ, ಪೂರಕ, ಕುಂಭಕವೆಂದು, ಮೂರು ಪರಿಭಾಷೆಯ ಹೆಸರುಗಳಂ ಬಾಯಿದುದಂ ಮನಸ್ಸಿಗೆ ತಂದು ವಿಮರ್ಶೆಯಂ ಮಾಡುವಲ್ಲಿ ರೇಚಕ, ಪೂರಕ, ಕುಂಭಕಗಳೇ ಕ್ರಮವಾಗಿ, ಋಗ್ಯಜುಸ್ಸಾಮಗಳಾಗಿ ಪರಿಣಮಿಸಿರುವದಂ ತಿಳಿದು, ಅವರ ಅರ್ಥವಿಚಾರವಂ ಮಾಡಿ ಈ ಮೂರು ವೇದಗಳೂ, ವಸ್ತು ಸ್ವರೂಪವಂ, ಸ್ವರೂಪಜ್ಞಾನಕ್ಕೆ ಸಾಧನಂಗಳಂ, ಅದರ ಪ್ರಕಾಶಂಗಳಂ, ಹೇಳುತ್ತಿರುವವಾದಕಾರಣ ವೇದವೆಂಬ ಹೆಸರನ್ನಿಟ್ಟು, ಪೂರ್ವಾಪರವಿಮರ್ಶೆಯಂ ಮಾಡಿ ಮೊದಲು ನಾನು ಜಗತ್ಸೃಷ್ಟಿಯಂ ಗೈದು ಕ್ರೀಡಿಸುವೆನೆಂದು ಮಾಡಿದ್ದ ಇಚ್ಛೆಗೆ ಈಗ ಮೂರು ವೇದಂಗಳೇ ವಿರುದ್ಧವಾದವು, ಅದೆಂತೆಂದರೆ,—ವಿಹಾರಕ್ಕೆ ಯೋಗ್ಯವಾಗಿರುವಂತೆ ಜಗತ್ಸೃಷ್ಟಿಯಂ ಮಾಡಿ, ಜಗತ್ತಿಗೆ ಕಾರಣನಾದ ನನ್ನಂ ಈ ಜಗತ್ತು ಅರಿಯುವಂತೆಯು, ಜಗತ್ತಿಗೆ ನಾನು ಭಿನ್ನನೆಂಬುದಂ ಜಗತ್ತು ಅರಿಯುದಂತೆಯು, ಪ್ರಪಂಚಸೃಷ್ಟಿಯಂ ಮಾಡಬೇಕೆಂದು ಇದ್ದ ಇಚ್ಛೆಗೆ ಈ ವೇದಂಗಳು ವಿರುದ್ಧವಾದ ವಸ್ತುಜ್ಞಾನವಂ, ತತ್ಸಾಧನಂಗಳಂ ಪ್ರಕಾಶವಂ ಮಾಡಿ, ಹೇಳುವದರಿಂದ ನಮ್ಮ ಇಚ್ಛೆಗೆ ನಮ್ಮಲ್ಲಿ ಹುಟ್ಟಿದ ಈ ವೇದಂಗಳೇ ವಿರುದ್ಧಗಳಾದವು, ಆದರೂ ಆಗಲೀ, ಜಗತ್ಸೃಷ್ಟಿಯಂ ಮಾಡಿ, ಆ ಬಳಿಕ ಅದಕ್ಕೆ ತಕ್ಕ ಉಪಾಯವಂ ಮಾಡಬಹುದು, ಈ ಜಗತ್ಸೃಷ್ಟಿಯಂ ಮಾಡುವಲ್ಲಿ ಮುಖ್ಯವಾದ ಸಾಧನಂಗಳಂ ಶ್ವಾಸಕ್ರಮದಂತೆ ನಿರ್ಮಿಸಿ, ಆ ಬಳಿಕ ಆ ಸಾಧನಂಗಳಿಗೆ ಉಪಯೋಗವಾದ ಸಾಧನಂಗಳಂ ಉಂಟುಮಾಡುವಲ್ಲಿ ತನಗೆ ತಾನೇ ಪೂರ್ವ ವಿರೋಧವಂ ಪರಿಹರಿಸುವದು, ಅದುಕಾರಣ ಇನ್ನು ಜಗತ್ಸೃಷ್ಟಿಯಂ ಮಾಡುವುದಕ್ಕೆ ಬಾಧಕವಿಲ್ಲ, ಆದರೂ ಸೃಷ್ಟಿಕ್ರಮವಂ ಪ್ರಕೃತಿಯು ತಿಳಿಯದಂತೆ ಮಾಡಬೇಕೆಂದು ನಿಶ್ಚೈಸಿ, ಪ್ರಕೃತಿಯಂ ಬಿಟ್ಟು ಭಿನ್ನನಾಗಿ ಮೊದಲು ಯೋಚಿಸಿದಂತೆ ಸೃಷ್ಟಿಯಂ ಮಾಡಲುದ್ಯೋಗಿಸಲಾಗ ಆ ಬ್ರಹ್ಮವು

ಬುದ್ಧಿಯಿಂದ ಕೂಡಿದ ಐದು ಕೋಶಗಳಾಗಿ ಪರಿಣಮಿಸಿತ್ತೀ ಜೊತೆಗೆ, ಅಧಿಕವಾಗಿ ಇಚ್ಛೆಗೆ ಅನುಸಾರವಾಗಿ ಜಗತ್ಸೃಷ್ಟಿಯಾಗದೇ ಇರಲು, ಆದಂನೋಡಿ ಪ್ರಕೃತಿಸಹಾಯವಿಲ್ಲದೆ ವಿಚಿತ್ರವಾದ ಸೃಷ್ಟಿಯಂ ಮಾಡಕೂಡದೆಂದು ನಿಶ್ಚೈಸಿ, ಪ್ರಕೃತಿಯ ಸಹಾಯವಂ ಮಾಡಿಕೊಂಡು ಮುಂದಣಕಾರ್ಯಮಂ ನಡೆಸಬೇಕೆಂದಿರುವಾಗ, ಮೂಲಪ್ರಕೃತಿಯು ಪುರುಷನಿಯೋಗದಿಂದ ಕಂಗೆಟ್ಟು ಕಾತರಿಸಿ, ತನ್ನ ಎದುರಿಗೆ ವೃಕ್ಷರೂಪದಿಂದಿರುವ ತೇಜಸ್ಸಂ ಕಂಡು ಇದೇನು ತೇಜೋವಿಶೇಷ ಒಂದಲ್ಲದೆ ಇನ್ನೇನು ವಿಶೇಷವಂ ಕಾಣದೆ ಆಶ್ಚರ್ಯಗೊಂಡು ಚಿಂತಿಸುತ್ತಿರುವ ಸಮಯದಲ್ಲಿ ಅಂತರಪ್ರೇರಕವಾದ ಪರಮಾತ್ಮನು ತಾನು ಯೋಚಿಸಿರುವ ಕಾರ್ಯಕ್ಕೆ ಉಪಯೋಗಿಸುವಂತೆ ಆ ಪ್ರಕೃತಿಗೆ ಪ್ರೇರಣೆಯಂ ಮಾಡಲು, ಆಗ ಪ್ರಕೃತಿಯು ಪರಬ್ರಹ್ಮನ ಪ್ರೇರಣೆಯಿಂದ ಮುಂದೆ ನಿಂತಿರುವ ತೇಜಸ್ಸಂ ವಿಮರ್ಶೆಯಂ ಮಾಡಿ, ಆ ವೃಕ್ಷದ ಬುಡವು ಪರಬ್ರಹ್ಮನೆಂದು, ಕೊಂಬೆಗಳೈದು ಪಂಚಾಕ್ಷರಗಳೆಂದು ನಿಶ್ಚೈಸಿ, ಎಂದಿನಂತೆ ಪುರುಷನಂ ಸೇರುವದಕ್ಕೆ ಉಪಾಯವು ದೊರಕದು, ಆದರೂ ಅದಕ್ಕೆ ತಕ್ಕ ಸಾಧನವು ನನ್ನಲ್ಲೇ ಇರುವುದೆಂದು ಯೋಚಿಸಿ, ತಾನೇ ಇಚ್ಛಾಜ್ಞಾನಕ್ರಿಯಾಶಕ್ತಿ ರೂಪವೆಂದರಿತು, ತನ್ನಲ್ಲಿರುವ ಈ ಮೂರು ಸಾಧನದಿಂದಲೇ ಬ್ರಹ್ಮನಂ ವರಿಸಿಕೊಳ್ಳಬಹುದೆಂದು ನಿಶ್ಚೈಸಿ, ತನ್ನ ಮೂರು ವಿಧಶಕ್ತಿಯೇ ಪ್ರಕೃತಿ, ಪಂಚಮಾಕ್ಷರೀ, ಬಿಂದುತ್ರಯವೆಂಬ ತೊಟ್ಟುಗಳಿಂ ಕೂಡಿ, ತೇಜೋಮಯವಾದ ವೃಕ್ಷವಂ ಅನೇಕ ದಳಗಳಿಂದ ನಿಬಿಡವಾಗಿ ಅಲಂಕರಿಸಲು, ಅದನ್ನೋಡಿ ಪರಬ್ರಹ್ಮನು ಆಶ್ಚರ್ಯಗೊಂಡು ಸೃಷ್ಟಿಕಾಲದಲ್ಲಿ ತನ್ನ ಅಪೇಕ್ಷೆಗಿಂತಲೂ ಪ್ರಕೃತಿಯ ಕಾರ್ಯವು ಅಧಿಕವೆಂದು ನಿಶ್ಚೈಸಿ, ಮುಂದೆ ಸೃಷ್ಟಿಯು ನಾವೀರ್ವರೂ ಒಂದಾದುದಲ್ಲದೇ ಆಗಲಾರದೆಂದು ಪ್ರಕೃತಿಯೊಡಗೂಡಿ ಮತ್ತೂ ಆ ಪ್ರಕೃತಿಯಂ ಕುರಿತು ಎನ್ನ ಹೃದಯವಂ ತಿಳಿದು ಮೂರು ಪರಿಯಾದ ನೀನು ಮೂರು ದಳರೂಪವಾಗಿ ನನ್ನನ್ನಲಂಕರಿಸಿದೆಯಾದಕಾರಣ ನಾನು ಸಂತುಷ್ಟನಾದೆನು, ಅದರಿಂ ಮೊದಲು ನಾನು ನಿಶ್ಚೈಸಿದ್ದಂತೆ ಜಗತ್ತಿಗೆ ಪೃಥಕು ಸಾಧನಂಗಳಂ ನೀನೇ ಪುಟ್ಟಿಸಿದೆ, ಅದೆಂತೆಂದರೆ —ನಿನ್ನ ಪರಿಣಾಮವು

ಮೂರು ದಳದ ಆಕಾರವಾಗಿಯೇ ಇರುವುದರಿಂದ ಮುಖ್ಯವಾದ ಸಾಧನಂಗಳಂ ಮೂರುಮೂರಾಗಿಯೇ ಸೃಷ್ಟಿಸಿದಂತಾಯಿತು, ಅದುಯಾವವೆಂದರೆ ಋಗ್ಯಜುಸ್ಸಾಮಗಳೆಂಬ ಮೂರು ವೇದಗಳು, ಸತ್ವ, ರಜ, ಸ್ತಮಗಳೆಂಬ ಮೂರು ಗುಣಗಳು. ಬ್ರಹ್ಮ, ವಿಷ್ಣು, ರುದ್ರರೆಂಬ ಮೂರು ಮೂರ್ತಿಗಳು. ಲಕ್ಷ್ಮೀ, ಪಾರ್ವತೀ, ಸರಸ್ವತೀಯೆಂಬ ಮೂರು ಪ್ರಕೃತಿಗಳು. ಸತ್ಯಲೋಕ, ವೈಕುಂಠ, ಕೈಲಾಸಗಳೆಂಬ ಮೂರು ಸ್ಥಾನಗಳು ಭೂಲೋಕ, ಭುವರ್ಲೋಕ, ಸುವರ್ಲೋಕವೆಂಬ ಮೂರು ಲೋಕಗಳು. ಸೃಷ್ಟಿ, ಸ್ಥಿತಿ, ಸಂಹಾರಗಳೆಂಬ ಮೂರು ಕಾರ್ಯಗಳು. ಸ್ತ್ರೀ, ಪುರುಷ, ನಪುಂಸಕರೆಂಬ ಮೂರು ಜಾತಿಗಳು. ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳು. ಜಾಗ್ರತ್ಸ್ವಪ್ನ, ಸುಷುಪ್ತಿಗಳೆಂಬ ಮೂರು ಅವಸ್ಥೆಗಳು. ಆಧ್ಯಾತ್ಮಿಕ, ಆಧಿಭೌತಿಕ, ಆದಿದೈವಿಕವೆಂಬ ಮೂರುತಾಪಗಳು. ದೇವ, ಋಷಿ, ಪಿತೃ, ಋಣಗಳೆಂಬ ಮೂರು ಋಣಗಳು. ಉಪಾದಾನ, ನಿಮಿತ್ತ, ಸಹಕಾರಿಯೆಂಬ ಮೂರು ಕಾರಣಗಳು. ಭೂತಭವಿಷ್ಯದ್ವರ್ತಮಾನವೆಂಬ ಮೂರು ಕಾಲಗಳು. ಪುತ್ರೇಷಣ, ವಿತ್ತೇಷಣ, ದಾರೇಷಣಗಳೆಂಬ ಮೂರು ಈಷಣಗಳು, ಆಣವಕ, ಕಾರ್ಮಿಕ, ಮಾಯಿಕವೆಂಬ ಮೂರು ಮಲಗಳು. ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರು ಅಗ್ನಿಗಳು. ಇಡಾ, ಪಿಂಗಳಾ, ಸುಷುಮ್ನಾಯೆಂಬ ಮೂರು ನಾಡಿಗಳು. ಉಚ್ಚ, ನೀಚ, ಮಧ್ಯಮಗಳೆಂಬ ಮೂರು ಸ್ವರಗಳು. ಊರ್ಧ್ವಗಮನ, ಅಧೋಗಮನ, ತಿರ್ಯಗ್ಗಮನವೆಂಬ ಮೂರು ಗಮನಗಳು. ಸೂರ್ಯಮಂಡಲ, ಚಂದ್ರಮಂಡಲ, ಅಗ್ನಿಮಂಡಲಗಳೆಂಬ ಮೂರು ಮಂಡಲಗಳು. ಅಕಾರ, ಉಕಾರ, ಮಕಾರಗಳೆಂಬ ಮೂರು ಅಕ್ಷರಗಳು. ಮನಸ್ಸು, ಬುದ್ಧಿ, ಚಿತ್ತವೆಂಬ ಮೂರು ಪುರುಗಳು. ಧೂಮ, ಅರ್ಚಿ, ಸ್ವರ್ಗಗಳೆಂಬ ಮೂರು ಮಾರ್ಗಗಳು. ನಿದ್ರೆ ಆಹಾರ, ಮೈಥುನಗಳೆಂಬ ಮೂರು ವ್ಯಾಪಾರಗಳು. ವಾತ, ಪಿತ್ತ ಶ್ಲೇಷ್ಮಗಳೆಂಬ ಮೂರು ದೋಷಂಗಳು. ಪ್ರಾತಃ, ಮಧ್ಯಾಹ್ನ, ಸಾಯಾಹ್ನಗಳೆಂಬ ಮೂರು ಸವನಗಳು. ನ್ಯೂನ, ಅಧಿಕ, ಸಮವೆಂಬ

ಮೂರು ಪರ್ಯಾಯವೆಗಳು. ಇವುಗಳೇ ಮೊದಲಾದ ಪ್ರಪಂಚಸೃಷ್ಟಿಗೆ ಮುಖ್ಯವಾದ ಸಾಧನವು; ನೀನೇ ಆದಬಳಿಕ ಈ ಸಾಧನೋಪಾಯಂಗಳಿಗೆ ಅಂಗೋಪಾಂಗಗಳಂ ನೀನೇ ಮಾಡಬೇಕಾಯಿತು. ಈ ರೀತಿಯಲ್ಲಿ ಜಗತ್ಸೃಷ್ಟಿಯಾದನಂತರ, ಜಗತ್ತಿಗೆ ವೇದಂಗಳು ಇನ್ನಿಷ್ಟು ಹಿತೋಪದೇಶವಂ ಮಾಡಿದರೂ ನನ್ನ ಸ್ವರೂಪಜ್ಞಾನ ಉಂಟಾಗಲಾರದು, ಅದು ಕಾರಣ ಜಗತ್ತು ನಮಗ ವಿಹಾರಕ್ಕೆ ಯೋಗ್ಯವಾಗುವವರಲ್ಲಿ ಸಂಶಯವಿಲ್ಲವೆಂದು ಅಪ್ಪಣೆಯಂ ಕೊಟ್ಟು ಮತ್ತೂ ಪ್ರಕೃತಿಯಂ ಕುರಿತ್ತ, ಪರಶಿವನು ಎಲೈ ಪ್ರಕೃತಿಯೇ! ನಾವೀರ್ವರೂ ವೃಕ್ಷರೂಪವಂ ಧರಿಸಿದುದು ಜಗತ್ಸೃಷ್ಟಿಗೆ ಕಾರಣವಾಯಿತು, ಅದರಿಂದ ಈ ವೃಕ್ಷರೂಪವು ಲೋಕಕ್ಕೆ ಉಪಕಾರವಾಗಿ ಹೀಗೇಯಿರಲಿ ಎಂದು ಅಪ್ಪಣೆಯಂ ಕೊಡಲೂ. ಆಗ ಪ್ರಕೃತಿಯು ನನ್ನಿಂದ ಆವೃತವಾದ ಪ್ರಪಂಚಕ್ಕೆ ಸ್ವರೂಪಜ್ಞಾನ ಉಂಟಾಗುವ ಉಪಾಯವು ಯಾವುದೆಂದು ವಿಜ್ಞಾಪನೆಯಂ ಮಾಡಲಾಗ ಪರಾತ್ಪರನಾದ ಪರಮೇಶ್ವರನು ಪ್ರಕೃತಿಯಂ ಕುರಿತು ನಾವೀರ್ವರೂ ಈ ವೃಕ್ಷರೂಪದಿಂದಿರ್ದು ಪ್ರಪಂಚಸೃಷ್ಟಿಯಂ ಮಾಡಿದವು, ಅದುಕಾರಣ ಈ ವೃಕ್ಷವು ಉಭಯಾತ್ಮಕವೆಂದೆನಿಸಿತು ಯಾರು ಧ್ಯಾನಿಸುವರೋ, ಸ್ಮರಿಸುವರೋ, ದರ್ಶನವಂ ಮಾಡುವರೋ, ಸ್ಪರ್ಶವಂ ಗೈವರೋ, ಪೂಜೆಯಂ ಮಾಡುವರೋ, ಅವರಿಗೆ ನನ್ನ ಸಂಬಂಧವಾದ ಹೃದಯಗ್ರಂಥಿಯು ಭೇದಿಸಿ ಸ್ವರೂಪಜ್ಞಾನ ಉಂಟಾಗಲೀ, ಹೃದಯ ಗ್ರಂಥಿಯಂ ಭೇದಿಸುವವರಿಂದ ಈ ವೃಕ್ಷಕ್ಕೆ ಬಿಲ್ವವೆಂದು ಹೆಸರು ಲೋಕದಲ್ಲಿ ಪ್ರಸಿದ್ಧವಾಗಲೀ, ಇವರ ನಾಮಸ್ಮರಣೆಯಿಂದಲೇ, ಪಾಪತ್ರಯ, ತಾಪತ್ರಯ, ಶರೀರತ್ರಯಂಗಳೂ ನಿವೃತ್ತವಾಗಿ ಮೋಕ್ಷವುಂಟಾಗಲೀ, ನನ್ನ ಸಂಬಂಧವಾದ ಈ ಬಿಲ್ವವೃಕ್ಷವಂ, ತನ್ನ ಭೂಮಿಯಲ್ಲಿ ತಾನೇ ಗಿಡವಂ ಬೆಳಯಿಸಿ, ನನ್ನ ಸಂಬಂಧವಾದ ಪತ್ರದಿಂದ, ಲಿಂಗಸ್ವರೂಪನಾದ ನನ್ನಂ ಒಂದು ದಳದಿಂದ ಪೂಜೆಯಂ ಮಾಡಿದಮಾತ್ರದಿಂದಲೇ ತ್ರೈಲೋಕ್ಯಾಸಂಪದವನ್ನಿತ್ತು ಕೊನೆಗೆ ನನ್ನ ಸಾಯುಜ್ಯವಂ ಕೊಡುವೆನು, ಇಂತಪ್ಪ ಬಿಲ್ವದಚಕ್ಕೆಯಲ್ಲಿ ಗಂಧವಂ ತೆಗದು ಯಾರು ಸಮರ್ಪಣೆಯಂ ಮಾಡು

ವರೋ? ಮತ್ತೂ ಈ ಗಂಧದಿಂದಲೇ ಯಾರು ಅಭಿಷೇಕವಂ ಮಾಡುವರೋ? ಅವರಿಗೆ ಸಕಲ ಪ್ರಪಂಚದಲ್ಲಿರುವ ಸುಗಂಧ ದ್ರವ್ಯವೆಲ್ಲವಂ ಸಮರ್ಪಿಸಿದರೆ ಯಾವ ಫಲ ಉಂಟಾಗುವದೋ, ಮತ್ತು ಗೋಕ್ಷೀರ ಮೊದಲಾದ ಪಂಚಾಮೃತದಿಂದ ಅಭಿಷೇಕವಂ ಗೈದವಂಗೆ ಯಾವ ಫಲ ಉಂಟಾಗುವದೋ ತಾದೃಶವಾದ ಫಲವು ಸಕೃನ್ಮಾತ್ರ ಬಿಲ್ವಗಂಧಾಭಿಷೇಕದಿಂದ ಉಂಟಾಗುವದು, ಮತ್ತೂ ಎಳದಾಗಿರುವ ಬಿಲ್ವಫಲಂಗಳಂ ಸಂಗ್ರಹಿಸಿ ಒಣಗಿಸಿ ಜಪಮಾಲಿಕೆಯಂ ಮಾಡಿ ಪಂಚಾಕ್ಷರ ಮೊದಲಾದ ಮಹಾಮಂತ್ರಂಗಳಂ ಒಂದಾವರ್ತಿ ಜಪವಂ ಮಾಡಲು ನವರತ್ನಮಾಲಿಕೆಗಳಿಂದ ಕೋಟಿಭಾರಿ ಜಪವಂ ಮಾಡಿದರೆ ಯಾವ ಫಲ ಉಂಟಾಗುವದೋ ಆ ಫಲ ಉಂಟಾಗಲೀ, ಮತ್ತೂ ಬಿಲ್ವವೃಕ್ಷದ ಅಡಿಭಾಗದಲ್ಲಿ ಗಂಗಾದಿ ಸಮಸ್ತ ಪಾವನವಾದ ತೀರ್ಥಂಗಳು ನಿರಂತರವೂ ವಾಸವಂ ಮಾಡುವದರಿಂದ, ಈ ವೃಕ್ಷದ ಮೂಲಮೃತ್ತಿಕೆಯಂ ಯಾರು ಅಂಗಗಳಲ್ಲಿಯೂ, ಶಿರಸ್ಸಿನಲ್ಲಿಯೂ, ಹಣೆಯಲ್ಲಿಯೂ ಧರಿಸುವರೋ ಆ ಮಹಾತ್ಮರಿಗೆ ಅನೇಕಕಾಲ ಗಂಗಾದಿ ತೀರ್ಥಸ್ನಾನವಂ ಮಾಡಿದ ಫಲ ಉಂಟಾಗುವದು, ಮತ್ತು ಶ್ರೀಮಹಾವಿಷ್ಣು, ಚತುರ್ಮುಖಾದಿ ಸಮಸ್ತ ದೇವತೆಗಳ ಮಧ್ಯದಲ್ಲಿ ಸಂಧ್ಯಾತಾಂಡವಮೂರ್ತಿಯಾದ ಎನ್ನಂ ಸೇವೆಯಂ ಮಾಡಿದವರಿಗೆ ಯಾವ ಫಲವೋ, ಅಂತಪ್ಪ ಫಲವು ಈ ಬಿಲ್ವವೃಕ್ಷದ ದರ್ಶನಮಾತ್ರದಿಂದ ಉಂಟಾಗಲೀ, ಮತ್ತೂ ಪಂಚಾಕ್ಷರೀ ಮಹಾಮಂತ್ರವಂ ಹತ್ತುಸಾವಿರ ಭಾರಿ ಜಪವಂ ಮಾಡಿದವರಿಗೆ ಯಾವ ಫಲವೋ ಅಂತಪ್ಪ ಫಲವು ಈ ಬಿಲ್ವವೃಕ್ಷದ ಸ್ಮರಣಮಾತ್ರದಿಂದಲೇ ಉಂಟಾಗಲೀ, ಇಂತಪ್ಪ ಮಹಿಮೆಯುಳ್ಳ ಮಹಾಪಾವನವಾದ ಬಿಲ್ವವೃಕ್ಷವಂ ಲೋಕಾನುಗ್ರಹಾರ್ಥವಾಗಿ ಪತಿತರಾದ ಜನರಂ ಪಾವನವಂ ಮಾಡಲೋಸುಗ ಪ್ರಪಂಚದಲ್ಲಿ ಸರ್ವಪ್ರದೇಶದಲ್ಲಿಯೂ ವೃಕ್ಷರೂಪವಾಗಿರಲಿ' ಎಂದು ವರವಂ ಕೊಟ್ಟ ರುಮೆನಾಪಕರಣ ಈ ಬಿಲ್ವವೃಕ್ಷವಂ ಪಂಚಾಶತ್ಕೋಟಿ ವಿಸ್ತೀರ್ಣವಾದ ಭೂಲೋಕದಲ್ಲಿರುವ ಜ್ಞಾನಿಗಳು, ಅಜ್ಞಾನಿಗಳು, ಆಚಾರವಂತರು, ಅನಾಚಾರವಂತರು, ಮತ್ತೂ ಸ್ತ್ರೀಯರು ಮೊದಲಾದ ಜನಂಗಳು ಈ ಬಿಲ್ವವೃಕ್ಷವನ್ನು, ಗಂಧ, ಪುಷ್ಪ, ಧೂಪ

ದೀಪ, ನೈವೇದ್ಯ, ತಾಂಬೂಲಗಳಿಂದ ನಿತ್ಯವಲ್ಲಿಯೂ ತಪ್ಪದೇ ಒಂದು ವರ್ಷ ಭಕ್ತಿ ಪುರಸ್ಸರವಾಗಿ ಪೂಜಿಸಲು, ಆ ವೃಕ್ಷವು ಅವರ ಮನ ದಲ್ಲಿ ನೆನೆದ ಫಲಂಗಳೆಲ್ಲವಂ ಕೊಟ್ಟು, ಮತ್ತು ಉತ್ತಮವಾದ ಸಂತಾ ನವಂ ಕೊಡುವದು, ಮತ್ತು ಈ ಬಿಲ್ವವೃಕ್ಷದ ಛಾಯೆಯೊಳ್ ತನ್ನ ಶಕ್ತ್ಯನುಸಾರವಾಗಿ ದೀಪಾರಾಧನೆಯಂ ಗೋವಿನ ತುಪ್ಪದಿಂದ ಪ್ರತಿ ದಿನವಲ್ಲಿಯೂ ಮಾಡಿದವಂಗೆ ತತ್ವಜ್ಞಾನದಿಂ ಮೋಕ್ಷಜ್ಞಾನ ಉಂಟಾಗು ವದರಲ್ಲಿ ಸಂದೇಹವಿಲ್ಲ, ಮತ್ತು ಈ ಬಿಲ್ವವೃಕ್ಷವಂ ನಿತ್ಯದಲ್ಲಿಯೂ ಸ್ನಾನಾದಿ ಕರ್ಮಗಳಿಂದ ಪರಿಶುದ್ಧರಾಗಿ, ಸಾವಿರಭಾರಿಯಾಗಲೀ, ಅಥವಾ ನೂರೆಂಟಾವರ್ತಿಯಾದರೂ, ಇಲ್ಲದಿರೆ ಮೂವತ್ತೆರಡಾಗಲೀ, ಇಪ್ಪತ್ತೆಂ ಟಾಗಲೀ, ಹನ್ನೆರಡಾಗಲೀ, ಅಥವಾ ಮೂರು ಭಾರಿಯಾದರೂ ನಿರ್ಮಲಚಿ ತ್ತನಾಗಿ, ಭಕ್ತಿಪುರಸ್ಸರವಾಗಿ ಪ್ರದಕ್ಷಿಣ ನಮಸ್ಕಾರವಂ ಮಾಡಲು ಮೂರು ವಿಧವಾದ ಪಾಪವು ತೊಲಗುವವು, ಇನ್ನು ಈ ಬಿಲ್ವವೃಕ್ಷದ ಕೊನೆಯಂ ಜೋಗ್ಗಿಸಿ ನೋಯದಂತೆ ದಳವನ್ನೆತ್ತಿ ಈ ಬಿಲ್ವವೃಕ್ಷವಂ ಈ ದಳದಿಂದ ಪೂಜೆಯಂ ಮಾಡಲು ಕೋಟಿಲಿಂಗಾರ್ಚನಾಫಲವು ಉಂ ಟಾಗುವುದು. ಮತ್ತು, ಈ ಬಿಲ್ವವೃಕ್ಷದ ಸಾನ್ನಿಧ್ಯದಲ್ಲಿ, ನನ್ನಲ್ಲಿ ಭಕ್ತಿಯುಳ್ಳ ಒಬ್ಬ ಬ್ರಾಹ್ಮಣನಿಗೆ ಮೃಷ್ಟಾನ್ನ ಭೋಜನವಂ ಮಾಡಿ ಸಿದವಂಗೆ, ಅನೇಕ ಕೋಟಿ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನವಂ ಮಾಡಿಸಿದ ಫಲ ಉಂಟಾಗಿ, ಅನಂತಕೋಟಿ ಜನ್ಮಾಂತರಗಳಲ್ಲಿಯೂ, ದಾರಿದ್ರ್ಯವು ಸಂಭವಿಸಲಾರದು, ಮತ್ತು ಲಿಂಗರೂಪವಂ ತಾಳಿರುವ ನನ್ನಂ ಕೋಮಲವಾದ ಒಂದು ಬಿಲ್ವದಳದಿಂ, ಅಥವಾ ಎರಡು ದಳಗ ಳಿಂದಲಾದರೂ ಯಾರು ಪೂಜೆಯಂ ಮಾಡುವರೋ, ಅವರಿಗೆ ಸಕಲ ಮನಸಾಭೀಷ್ಟ ಉಂಟಾಗುವುದು, ಇನ್ನು ಲಿಂಗರೂಪನಾದ ನನ್ನಂ ನಿತ್ಯವಲ್ಲಿಯೂ ನೇಮವನ್ನಾಚರಿಸಿ ಬಿಲ್ವದಳದಿಂದ ಯಾರು ಪೂಜಿ ಪರೋ ಅವರಿಗೆ ನನ್ನ ಸಾಕ್ಷಾತ್ಕಾರ ಉಂಟಾಗುವದರಲ್ಲಿ ಸಂದೇಹವಿಲ್ಲ, ಯಾವನೊಬ್ಬನು ಬಿಲ್ವವೃಕ್ಷದ ಸಮೀಪದಲ್ಲಿ ಕುಳಿತು ಭಕ್ತಿಯಿಂದ ಮೃತ್ಯುಂಜಯಮಂತ್ರ ಜಪವಂ ಮಾಡುವನೋ, ಆತನಿಗೆ ಮೃತ್ಯು ಭಯ ಉಂಟಾಗಲಾರದು, ಈ ಬಿಲ್ವವೃಕ್ಷದ ಮೂಲದಲ್ಲಿ ಅಖಂಡವಾದ

ಬಿಲ್ವದಳವನ್ನು, ಗೋಕ್ಷೀರದಲ್ಲಿ ನೆನಸಿ ಪಂಚಾಕ್ಷರದಿಂದ ಹೋಮವಂ ಮಾಡುವನೋ, ಅವನು ಲಕ್ಷಗೋವಿಗೆ ಅಧಿಪತಿಯಾಗಿ ಪುಟ್ಟುವನು. ಈ ಪರಿಯಾಗಿ ಹಸುವಿನತುಪ್ಪದಲ್ಲಿ ನೆನಸಿ ಹೋಮವಂ ಮಾಡಲು, ಅವನಿಗೆ ಅಪೇಕ್ಷಿಸಿದ ಸಂಪತ್ತುಗಳು ಉಂಟಾಗುವುದು, ಮತ್ತೂ ಪಾತ್ರಃಕಾಲದಲ್ಲಿ ಶುಚಿರ್ಭೂತನಾಗಿ ಕೋಮಲವಾದ ಬಿಲ್ವದಳದಿಂದ, ಸುವರ್ಣ, ರಜತ, ಸ್ಫಟಿಕ, ಪಾರ್ಥಿವಮೊದಲಾದ ಅನೇಕ ರೂಪವಾದ ಲಿಂಗಗಳ ಪೂಜೆಯಂ ಭಕ್ತಿಯಿಂದ ನಿಯಮವಾಗಿ ಯಾರು ಮಾಡುವರೋ, ಅವರು ನನ್ನಂತೆ ರುದ್ರರೂಪವಂತಾಳುವರು, ಇಂತೂ ಮಧ್ಯಾಹ್ನದಲ್ಲಿ ಪೂಜೆಯಂ ಮಾಡಿದವರಿಗೆ ಸಮಸ್ತ ದೇವತೆಗಳಿಂದಲೂ ಅಪಮೃತಿ ಉಂಟಾಗುವುದು, ಇಂತೂ ಪ್ರದೋಷದಲ್ಲಿ ಯಾರು ಪೂಜೆಯಂ ಮಾಡುವರೋ, ಅವರಿಗೆ ಅಜ್ಞಾನವೆಂಬ ಹೃದಯಗ್ರಂಥಿಯು ಛೇದಿಸಿ, ಎನ್ನ ಸಾಯುಜ್ಯಪದವಿ ಉಂಟಾಗುವುದು, ನನಗೆ ಮೂರು ಲೋಕಂಗಳಲ್ಲಿರುವ ಪುಷ್ಪಂಗಳಂ ತಂದು ಪೂಜಿಸಿದರೂ ಆ ಬಿಲ್ವಪತ್ರೆಯಿಂದ ಪೂಜೆಯಂ ಮಾಡಿದಷ್ಟು ಸಂತೋಷ ಪುಟ್ಟಲಾರದು, ಮತ್ತೂ ಬಿಲ್ವಪತ್ರವಂ ಸಂಪಾದಿಸಿ ಎಷ್ಟು ದಿವಸ ಇರಿಸಿದ್ದರೂ ಆ ಪಾವನವಾದ ಬಿಲ್ವದಳಗಳಿಗೆ ಸ್ಪರ್ಶದೋಷಗಳು, ಮಡಿ ಮೈಲಿಗೆಗಳು, ಹಳೆದು ಹೊಸದೆಂಬ ತಾರತಮ್ಯವು ಇರಲರಿಯದು. ಇದು ಯಾತಕ್ಕೆಂದರೆ, ನಿತ್ಯನೇಮವಾಗಿ ಬಿಲ್ವದಳಗಳಿಂದ ನನ್ನಂ ಪೂಜಿಸುವರ್ಗೆ ಒಂದಾನೊಂದು ಸಮಯ ವಿಶೇಷದೋಳ್ ದೊರೆಯದಿರೆ ಮೊದಲು ಸಂಪಾದಿಸಿ ಇರಿಸಿದ್ದ ಬಿಲ್ವದಳಗಳಲ್ಲಿ ಹಿಂದೆ ಹೇಳಿದಂತೆ ದೋಷವಿಲ್ಲವೆಂದು ನಿಶ್ಚೈಸಿ, ಆ ದಳಗಳಿಂದಲೇ ನನ್ನ ಪೂಜೆಯಂ ನೆರವೇರಿಸಿದವರಿಗೆ ಸಕಲ ಇಷ್ಟಾರ್ಥಗಳೂ ಸಿದ್ಧಿಸಿ, ನನ್ನ ಸಾಯುಜ್ಯ ಉಂಟಾಗುವವರಲ್ಲಿ ಸಂದೇಹಮಿಲ್ಲ, ಇಂತಲ್ಲದೇ ಬಿಲ್ವದಳಗಳು ದೊರೆಯದಿದ್ದರೆ ಬಿಲ್ವಪತ್ರದ ಚೂರ್ಣವನ್ನಾದರೂ ಸಂಗ್ರಹಿಸಿ ಮಡಗಿದ್ದು ಎನ್ನ ಪೂಜೆಯಂ ನೆರವೇರಿಸಬೇಕು. ಚಿನ್ನ ಬೆಳ್ಳಿಗಳಿಗೆ ಪರ್ಯುಷಿತದೋಷ ಹ್ಯಾಗಿಲ್ಲವೋ, ಈ ಬಿಲ್ವದಳಂಗಳಿಗೂ, ಹಳದೆಂಬ ದೋಷವಿಲ್ಲ, ಮತ್ತೂ ಬಿಲ್ವಪತ್ರವನ್ನು ಒಣಗಿಸಿ ಮಡಗಿದ್ದರೂ ಸರಿ. ಈ ವೃಕ್ಷ ಸಮೀಪದಲ್ಲಿ ಒಣಗಿ ಬಿದ್ದಿರುವವಾದರೂ ಸರಿ, ನನಗೆ ಧರಿಸಿದ

ನಿರ್ಮಾಲ್ಯವಾದಾಗ್ಯೂ ಶುದ್ಧೋದಕದಿಂದ ತೊಳೆದು ದಳಗಳು ಚೂರ್ಣವಾಗುವವರಿವಿಗೂ ನನ್ನ ಪೂಜೆಯನ್ನು ನಿತ್ಯದಲ್ಲಿಯೂ ಮಾಡಬಹುದು. ನನ್ನ ಶಿವಪೂಜೆಯನ್ನು ನಿಯಮದಿಂದ ಮಾಡುವಂಥಾ ಜನರು ಬಿಲ್ವದಳದಿಂದಲಾಗಲೀ ಅಥವಾ ಒಣಗಿದ ದಳದಿಂದಲಾಗಲೀ, ಒಣಗಿದ ಪತ್ರದ ಚೂರ್ಣದಿಂದಲಾಗಲೀ, ಅದುವಿಲ್ಲದಿರೆ ಬಿಲ್ವಕೊರಡಿನ ಗಂಧದಿಂದಲಾದರೂ ನನ್ನಂ ಪೂಜಿಸಬೇಕಾದ್ದಲ್ಲದೆ ಬಿಲ್ವಸಂಬಂಧವಿಲ್ಲದೇ ಪೂಜಿಸಲಾಗದು. ಇದಂ ತಿಳಿದು ಬಿಲ್ವದಲ್ಲಿ ಅನಾದರಣೆಯಂ ಮಾಡಿ ಪೂಜಿಸಿದರೆ ಪಂಚ ಮಹಾಪಾತಕಂಗಳು ಸಂಭವಿಸುವುವು, ಇದಂ ತಿಳಿಯದೆ ಪೂಜಿಸಿ, ಆ ಬಳಿಕ ಈ ಶಾಸ್ತ್ರ ಮರ್ಯಾದೆಯಂ ತಿಳಿದು ಪಶ್ಚಾತ್ತಾಪವಂಪಟ್ಟು, ಬಿಲ್ವವೃಕ್ಷದ ಸಮೀಪದಲ್ಲಿ ಕುಳಿತು ಒಂದು ಲಕ್ಷಾವರ್ತಿ ನನ್ನ ನಾಮವಂ ಜಪಿಸಲು ಅವನಿಗೆ ಸರ್ವಪಾಪವು ತೊಲಗಿಪೋಗಿ ನನ್ನ ಸಾಯುಜ್ಯ ಉಂಟಾಗುವುದು, ಮತ್ತೂ ಬಿಲ್ವವೃಕ್ಷದ ಸಮೀಪದಲ್ಲಿ ಯಾವಾತನು ಶರೀರವಂ ಬಿಡುವನೋ, ಅವನಿಗೆ ನಿರಂತರವೂ ನನ್ನ ಲೋಕದಲ್ಲಿ ವಾಸವುಂಟಾಗುವುದು. ಕೃಷ್ಣಾಷ್ಟಮೀ, ಸೋಮವಾರ, ಮಹಾಪ್ರದೋಷ, ಈ ಮೂರು ದಿನಗಳಲ್ಲಿ ಯಾರು ಬಿಲ್ವಪತ್ರಗಳಿಂದ ನನ್ನಂ ಪೂಜಿಸುವರೋ, ಅವರಿಗೆ ಪಂಚಮಹಾಪಾತಕಂಗಳು ಉಂಟಾಗಲರಿಯದು, ಮತ್ತೂ ಬಿಲ್ವಪತ್ರಗಳಂ ಸಂಗ್ರಹಿಸುವಲ್ಲಿ ಆ ಮುಳ್ಳುಗಳಿಂದ ಶರೀರವು ಘಾಯವಾದ ಮಾತ್ರಕ್ಕೆ ಸಮಸ್ತ ಪಾಪವು ತೊಲಗಿ ಉತ್ತಮವಾದ ಗತಿಯಂ ಪಡೆಯುವನು, ಇನ್ನೂ ಬಿಲ್ವವೃಕ್ಷದ ಸಮೀಪದಲ್ಲಿ ಪಿತೃಗಳಉದ್ದೇಶವಾಗಿ ಅನ್ನದಾನವಂ ಮಾಡಲು, ಅವನ ಪಿತೃಗಳು ನೂರು ವರ್ಷ ತೃಪ್ತರಾಗಿ ಅನ್ನಾಪೇಕ್ಷೆಯಿಲ್ಲದೆ ಇರುವರು, ಮತ್ತೂ ಕಾಶೀ, ರಾಮೇಶ್ವರ, ಶ್ರೀಶೈಲ, ಚಿದಂಬರ, ಈ ಕ್ಷೇತ್ರಗಳಲ್ಲಿಯೂ ಪುರಾಣಪ್ರಸಿದ್ಧಂಗಳಾದ ಸ್ಥಳಂಗಳಲ್ಲಿಯೂ, ಬಿಲ್ವಪತ್ರದಿಂದ ನನ್ನಂ ಪೂಜಿಸಿದವರಿಗೆ ಸಮಸ್ತ ಪಾಪಗಳು ತೊಲಗಿ ಅನೇಕಕಲ್ಪ ಶಿವಲೋಕ ಉಂಟಾಗುವುದು, ಮತ್ತೂ ಬಿಲ್ವವೃಕ್ಷದ ಸಮೀಪದಲ್ಲಿ ಉತ್ತಮವಾದ ವರವಂ ನೋಡಿ, ಕನ್ಯಾದಾನವಂ ಮಾಡಿದವನಿಗೆ ಕೋಟಿ ಕನ್ಯಾದಾನ ಫಲ ಉಂಟಾಗುವುದು, ಈ ಪರಿಯಾಗಿ ಬಿಲ್ವವೃಕ್ಷದ ಸಮೀಪದಲ್ಲಿ ಸತ್ಪಾ

ಕ್ರದಲ್ಲಿ ಗೋದಾನ, ಭೂದಾನ, ಹಿರಣ್ಯದಾನ ಮೊದಲಾದ ದಾನಂಗಳಂ ಮಾಡಲು ಕೋಟಿಗುಣ ಅಧಿಕವಾಗಿ ಫಲ ಉಂಟಾಗುವುದು, ಮತ್ತೂ ಮೂರು ಗುಣವಾಗಿಯೂ, ಮೂರು ನೇತ್ರವಾಗಿಯೂ, ಮೂರು ಆಯುಧವಾಗಿ ಪರಿಣಮಿಸಿರುವ ಮೂರು ದಳಗಳಿಂದ ಕೂಡಿದ ಬಿಲ್ವಪತ್ರವಂ ಪರಾತ್ಪರನಾದ ನನಗೆ ಯಾರು ಸಮರ್ಪಿಸುವರೋ, ಅವರಿಗೆ ಮೂರು ಜನ್ಮದ ಪಾಪವು ನಾಶವಾಗುವುದು, ಇಂತಪ್ಪ ಬಿಲ್ವಪತ್ರವಂ ಕಲುಷ ಇಲ್ಲದೇ ಕೋಮಲವಾಗಿರುವುದಂ ನೋಡಿ ಸಂಗ್ರಹಿಸಿ ನನಗೆ ಸಮರ್ಪಿಸಲು ಕೋಟಿಯಜ್ಞವಂ ಮಾಡಿದಫಲವು ಲಭಿಸುವುದು, ಮತ್ತೂ ಇಂಥಾ ಬಿಲ್ವಪತ್ರವಂ ಲಿಂಗರೂಪನಾದ ನನಗೆ ಅರ್ಪಿಸಲು ಕೋಟಿಗಜದಾನವಂ, ನೂರು ಅಶ್ವಮೇಧಯಾಗವಂ, ಕೋಟಿಕನ್ಯಾದಾನವಂ ಕೂಡೆಮಾಡಿದ ಫಲ ಉಂಟಾಗುವುದು, ಮತ್ತೂ ಒಂದು ಬಿಲ್ವಪತ್ರೆಯಿಂದ ನನ್ನನ್ನಾರಾಧನೆಯಂ ಮಾಡಿದರೆ ಸಹಸ್ರಕಪಿಲಾ ಗೋದಾನವಂ ಮಾಡಿದ ಫಲವು ಉಂಟಾಗುವುದು, ಅನೇಕ ಅಶ್ವತ್ಥವೃಕ್ಷಸ್ಥಾಪನೆಯಂ ಮಾಡಿದಪುಣ್ಯವು, ಸಹಸ್ರ ಉಪವನವಂ ಮಾಡಿದಫಲವು ಸಹಾ ಬರುವುವು, ಮತ್ತೂ ಬಿಲ್ವಪತ್ರವಂ ಸದಾಶಿವನಾದ ನನಗೆ ಅರ್ಚನೆಯಂ ಮಾಡಲು ಸಹಸ್ರಾವರ್ತಿ ವೇದಪಾರಾಯಣವಂ ಮಾಡಿದಫಲವು, ಸಹಸ್ರಬ್ರಾಹ್ಮಣರಿಗೆ ಭೋಜನವಂ ಮಾಡಿಸಿದ ಫಲವು ಲಭಿಸುವುದು, ಮತ್ತೂ ಬಿಲ್ವಪತ್ರವಂ ಪಶುಪತಿಯಾದ ನನಗೆ ಸಮರ್ಪಿಸಲು ಸಹಸ್ರ ಸಾಲಿಗ್ರಾಮದಾನವಂ ಮಾಡಿದ ಪುಣ್ಯವು, ಕೋಟಿತಟಾಕ ಪ್ರತಿಷ್ಠೆಯಂ ಮಾಡಿದ ಫಲವು, ಕೋಟಿಯಜ್ಞವಂ ಮಾಡಿಸಿದ ಧರ್ಮವು ಲಭಿಸುವುದು. ಮತ್ತೂ ಮಹೇಶ್ವರನಾದ ನನಗೆ ಕೋಮಲವಾದ ಬಿಲ್ವದಳಗಳಿಂದ ಯಾರು ಅರ್ಚನೆಯಂ ಮಾಡುವರೋ ಅವರು ಸಮಸ್ತ ಪಾಪಗಳಿಂದ ಬಿಡಲ್ಪಡುವರು, ಮತ್ತೂ ಶೂಲಪಾಣಿಯಾಗಿ ಪಾರ್ವತೀಪತಿಯಾದ ನನ್ನಂ ಬಿಲ್ವದಳಗಳಿಂದ ಯಾರು ಅರ್ಚಿಸುವರೋ ಅವರ ಸಮಸ್ತ ದೋಷವಂ ಪರಿಹರಿಸಿ ಸದ್ಗತಿಯಂ ಕೊಡುವೆನು. ಚಂದ್ರಶೇಖರನಾದ ನನ್ನಂ ಭಕ್ತಿಯಿಂದ ಶುಚಿರ್ಭೂತರಾಗಿ ಬಿಲ್ವದಳಗಳಿಂದ ಯಾರು ಪೂಜೆಯಂ ಮಾಡುವರೋ ಅವರಿಗೆ ಸುಪುತ್ರರಂ ಕೊಟ್ಟು ಮಹದೈಶ್ವರ್ಯ

ವನ್ನುಂಟುಮಾಡಿ ಇಹದಲ್ಲಿ ಸಕಲ ಸೌಖ್ಯಂಗಳಂ ಪರದಲ್ಲಿ ಸನ್ನಿಸಾಯುಜ್ಯವಂ ಕೊಡುವೆನು. ಇನ್ನೂ ವಿಶೇಷವಾಗಿ ಹೇಳುವೆನು, ಬಿಲ್ವವೃಕ್ಷಸಮೀಪದಲ್ಲಿ ಸತ್ಕರ್ಮಂಗಳಂ ಏನು ಮಾಡಿದರೂ ಅದು ಅನಂತವಾಗುವುದರಲ್ಲಿ ಸಂದೇಹವಿಲ್ಲವೆಂದು ಸಾಕ್ಷಾತ್ಪರಶಿವನು ಮೂಲಪ್ರಕೃತಿಯಾದ ಪಾರ್ವತೀದೇವಿಗೆ ನಿರೂಪಿಸಿದರ್ಥವಂ ಪರಶಿವನ ಪುತ್ರನಾದ ಷಣ್ಮುಖನು ನನಗೆ ಉಪದೇಶವಂ ಮಾಡಿದವರಿಯಂ ನಿನಗೋಸುಗ ನಾನು ಪ್ರೀತಿಯಿಂ ಈ ಬಿಲ್ವವೃಕ್ಷದ ಮಹಾತ್ಮ್ಯವಂ ಸ್ವಲ್ಪದರಲ್ಲಿ ವಿಶೇಷಾರ್ಥವು ತಿಳಿಯುವಂತೆ ಉಪದೇಶವಂ ಮಾಡಿದೆನು. ಈ ಬಿಲ್ವವೃಕ್ಷಮಹಾತ್ಮ್ಯವಂ ಯಾರು ಕೇಳುವರೋ, ಯಾರು ಬರದು ಓದುವರೋ, ಅವರಿಗೆ ಕಷ್ಟವು ಎಂದಿಗೂಯಿಲ್ಲದೆ ಸದ್ಗತಿ ಉಂಟಾಗುವುದು ಎಲೈ ರಾಜಶಿಖಾಮಣಿಯೇ! ನೀನು ಮಾಡಿದ ನಿರ್ವ್ಯಾಜೋಪಕಾರವಂ ನಿನ್ನ ಭಕ್ತಿಯಂ ಕೂಡ ನೋಡಿ ನನಗೆ ಬಹು ಸಂತೋಷವಾಯಿತು, ನನ್ನಿಂದೆ ಆಗತಕ್ಕ ಕಾರ್ಯವು ಇನ್ನೇನಾದರೂ ಇದ್ದರೆ ಹೇಳುವನಾಗೆಂದು ಅಪ್ಪಣೆಯಂ ಕೊಡಲೂ. ಆ ಬಳಿಕ ಸುಗಂಧರಾಜೇಂದ್ರನು ಪುರುಷಮೃಗನಂ ಕುರಿತು ಪರಶಿವನಿಗೆ ಪರಮಭಕ್ತನಾದ ಮಹಾನುಭಾವನೇ ನೋಡುವ ಜನರಿಗೆ ಸರ್ವ ಪಾಪವಂ ಪರಿಹರಿಸಿ ಶುಭವಂ ಉಂಟುಮಾಡುತ, ನಿನ್ನ ಅಂಗಗಳಲ್ಲಿ ಪ್ರಕಾಶಿಸುತ್ತಿರುವ ಭಸ್ಮದ ಉತ್ಪತ್ತಿಯಂ, ಅದರ ಧಾರಣಕ್ರಮವಂ, ಕೂಡ ಕೇಳಬೇಕೆಂಬ ಅಪೇಕ್ಷೆ ಬಹಳವಾಗಿ ಇರುವುದು ಅದಂ ಅಪ್ಪಣೆಯಂ ಕೊಡಬೇಕೆಂದು ಬಂದನೆಯಂ ಮಾಡಲು, ಆಗ ಶಿವತತ್ವವಂ ಚನ್ನಾಗಿ ತಿಳಿದಿರುವ ಪುರುಷಮೃಗನು ಸುಗಂಧಮಹಾರಾಜನಂ ಕುರಿತು ಎಲೈ ರಾಜಕುಲೋತ್ತಮನೇ! ನೀನು ಮಾಡಿದ ಪ್ರಶ್ನೆಯು ಅತ್ಯಂತ ರಹಸ್ಯವಾದದ್ದು, ಸಾಧಾರಣ ಜನರಿಗೆ ತಿಳುಹಿಸಲಾಗದು, ಮತ್ತೂ ನೀನು ಸರ್ವೋತ್ತಮನಾದಕಾರಣ ನಿನಗೆ ಉಪದೇಶವಂ ಮಾಡುವೆನು, ಸಾವಧಾನದಿಂದೆ ಕೇಳುವನಾಗು, ಕಲ್ಪ ಮುಗಿಯುವ ಸಮಯದೋಳ್ ಪರಮೇಶ್ವರನು ಸಕಲ ಪ್ರಪಂಚಸಂಹಾರದಲ್ಲಿ ಉದ್ಯುಕ್ತನಾದ ಪಾತ್ರದಿಂದ ಸಮಸ್ತ ಚರಾಚರ ಪ್ರಪಂಚಗಳು ಮೊದಲು ಹ್ಯಾಗೆ ಸೃಷ್ಟಿಸಲ್ಪಟ್ಟವೋ ಅದೇಕ್ರಮದಿಂದ ಪಂಚಮಹಾ

ಭೂತಂಗಳೆಲ್ಲಾ ಲೀನಂಗಳಾಗುವುವು, ಆ ಪಂಚಮಹಾಭೂತಂಗಳು ಜಗತ್ಕಾರಣವಾದ ಮಾಯೆಯೆಂಬ ಚಿತಿಯಲ್ಲಿ ಕೂಡಲು ಅದಂ ಸದಾಶಿವನು ತನ್ನ ಹಣೆಯೊಳಿರುವ ನೇತ್ರಾಗ್ನಿಯಿಂದ ಭಸ್ಮವಂ ಮಾಡಿ ಬಳಿಕ ಆ ಮಹಾಶ್ಮಶಾನದೊಳ್ ಸಚ್ಚಿದಾನಂದ ಸ್ವರೂಪನಾಗಿ ಆನಂದ ತಾಂಡವವಂ ಮಾಡುತ್ತಿರಲು, ಆಗ ಪಿಪೀಲಿಕಾದಿ ಬ್ರಹ್ಮಪರಿಯಂತವಾದ ಚರಾಚರಾತ್ಮಕ ಪ್ರಪಂಚವೆಲ್ಲವೂ ಭಸ್ಮವಾಗಲು, ಆ ಭಸ್ಮವು ಪರಮೇಶ್ವರನ ಪಾದಗಳ ತುಳಿತದಿಂದ ಮೇಲೆ ಎದ್ದು ಆಶ್ರಯಕ್ಕೆ ಯೋಗ್ಯವಾದ ಮತ್ತೊಂದು ವಸ್ತುವಿಲ್ಲದೇ ಇರುವದರಿಂದ, ಮತ್ತೆ ಆ ಪರಶಿವನ ಶರೀರವಂ ವ್ಯಾಪಿಸಿ ಅಲ್ಲಿಯೇ ಲೀನವಾಗಲು, ಇದಂ ಅರಿಯದೇ ಇರುವ ಪಾಮರ ಜನಂಗಳು ಪರಮಪಾವನನಾದ ಪರಮೇಶ್ವರನಂ ಸಾಧಾರಣವಾದ ಶ್ಮಶಾನವಾಸೀ ಎಂದು, ಕೇವಲ ಚಿತಾಭಸ್ಮಧಾರೀ ಎಂದು ನುಡಿಯುವರು. ಅದಂತಿರಲಿ, ಪೂರ್ವೋಕ್ತವಾದ ಆ ಮಹಾಶ್ಮಶಾನದೊಳ್ ನರ್ತನವಂ ಮಾಡುತ್ತಿರ್ಪ ಚಿದಾನಂದಸ್ವರೂಪನಾದ ಪರಮಶಿವನಿಗೆ ಜೀವರಾಶಿಗಳಲ್ಲಿ ದಯೆಯುಂಟಾಗಿ ಯಥಾಪ್ರಕಾರವಾಗಿ ಜಗತ್ಸೃಷ್ಟಿಯಂ ಮಾಡಬೇಕೆಂಬ ಇಚ್ಛೆ ಉಂಟಾಗಲಾಪುರುಷನ ಶರೀರದೊಳ್ ಲೀನವಾಗಿದ್ದ ಭಸ್ಮವೇ ಮೊದಲು ಶರೀರದಿಂದ ಹೊರಗೆ ಬರುವುದಕ್ಕೆ ಉದ್ಯೋಗಿಸಿದ ಅರ್ಥವಂ ಪರಮೇಶ್ವರನು ತಿಳಿದು ಪಂಚಮಹಾ ಭೂತಂಗಳಿಗೆ ಭಸ್ಮವೇ ಕಾರಣವೆಂದು ನಿಶ್ಚಯಿಸಿ ಭಸ್ಮಾಂಶವಾದ ಪೃಥ್ವೀ ಮೊದಲಾದ ಮಹಾಭೂತಂಗಳಿಗೆ ಪ್ರಕೃತಿಯನ್ನೇ ಆಲಯವಾಗಿ ಮಾಡಿ, ಬಳಿಕ ಸಕಲ ಪ್ರಪಂಚವಂ ತಾಯಿತಂದೆಗಳಿಗಿಂತಲೂ ಅಧಿಕವಾಗಿ ಸಂರಕ್ಷಣೆಯಂ ಮಾಡುವುದಕ್ಕೆ ಕರ್ಮಬದ್ಧರಾಗಿರುವ ಜೀವರಾಶಿಗಳಲ್ಲಿ ಯಾರು ಸಮರ್ಥರಾಗಿರುವರೆಂದು ಅರಸಿ ನೋಡಿ ಬಳಿಕ, ಗೋ, ವೃಷಭ, ಇವು ಎರಡೇ ಎಂದು ಮನದೊಳ್ ತಿಳಿದು ಇನ್ನುಮೇಲೆ ಸೃಷ್ಟಿಯಂ ಮಾಡಬಹುದೆಂದು ಉದ್ಯೋಗಿಸಲಪ್ಪರೊಳ್ ಪರಮಶಿವನ ಮನೋನುಗುಣವಾಗಿ ಸದ್ಯೋಜಾತನ ಮುಖದೊಳ್ ಭಸ್ಮಸಂಬಂಧಿಯಾದ ಪೃಥ್ವ್ಯಂಶದಿಂದ ಅಧಿಕವಾದ ಕಪಿಲವರ್ಣವಾದ ನಂದಾಮುಂಬ ಧೇನುವು ಆವಿರ್ಭವಿಸಿತು. ವಾಮದೇವಮುಖದಲ್ಲಿ ಭಸ್ಮಾಂಶ

ವಾದ ಜಲಾಂಶಪ್ರಧಾನವಾದ ಪ್ರಕೃತಿಯೇ ಭದ್ರಾಯೆಂಬಧೇನುರೂಪದಿಂದ ಕೃಷ್ಣವರ್ಣವಾಗಿ ಉದ್ಭವಿಸಿತು. ಹಾಗೇ ಅಘೋರಮುಖದಲ್ಲಿ ಭಸ್ಮಾತ್ಮಕವಾದ ಪ್ರಕೃತಿಯೇ ತೇಜೋಂಶ ಮುಖ್ಯವಾಗಿ ಸುರಭೀಯೆಂಬಧೇನುರೂಪದಿಂದ ಶುಭ್ರವರ್ಣವಾಗಿ ಜನಿಸಿತು. ತತ್ಪುರುಷಮುಖದಲ್ಲಿ ಭಸ್ಮರೂಪವಾದ ಪ್ರಕೃತಿಯೇ ವಾಯ್ವಂಶಗಳಿಂದಧಿಕವಾಗಿ ಸುಶೀಲಾಯೆಂಬಧೇನು ರೂಪದಿಂದ ಧೂಮ್ರವರ್ಣದಿಂ ಪುಟ್ಟಿತು. ಈಶಾನಮುಖದಲ್ಲಿ ಭಸ್ಮಸಂಬಂಧಿಯಾದ ಪ್ರಕೃತಿಯೇ ಆಕಾಶಾಂಶಗಳಿಂದ ಅಧಿಕವಾಗಿ ಸುಮನಾಯೆಂಬಧೇನು ರೂಪದಿಂದ ರಕ್ತವರ್ಣವಾಗಿ ಉದ್ಭವಿಸಿತು, ಇಂತೂ ಪಂಚಮಹಾಭೂತಂಗಳು ಪ್ರಕೃತಿಯನ್ನಾಶ್ರಯಿಸಿ ಗೋವಿನರೂಪದಿಂದ ಸದಾಶಿವನಂ ಸೇವಿಸುತ್ತಿರುವುವು, ಗೋವುಗಳು ಭಸ್ಮಾಂಶಗಳಾದಕಾರಣ ಗೋವಿನ ಶರೀರದೊಳಿರುವ ರೋಮಗಳೆಲ್ಲವು ಸಮಸ್ತ ದೇವತೆಗಳಿಗೂ ಆವಾಸಯೋಗ್ಯಂಗಳಾಗಿ ಆ ರೋಮಕೂಪಂಗಳಲ್ಲಿ ಗಂಗಾದಿ ಸಮಸ್ತ ತೀರ್ಥಂಗಳು ನಿರಂತರವೂ ವಾಸವಂ ಮಾಡುತಲಿರುವುವು, ಅದುಕಾರಣ, ಗೋಮೂತ್ರ, ಗೋಮಯಮೊದಲಾದವುಗಳೆಲ್ಲವೂ, ಪರಮಪವಿತ್ರವಾಗಿ ಸಮಸ್ತ ಪ್ರಪಂಚದ ಪಾಪಗಳೆಲ್ಲವಂ ಪರಿಹರಿಸಿ ಪರಿಶುದ್ಧವಂ ಮಾಡುವುದಕ್ಕೆ ಯೋಗ್ಯಂಗಳಾದವು, ಗೋವುಗಳಲ್ಲಿ ಭಸ್ಮವು ಯಾವಾಗಲೂ ಸಂಬಂಧಿಸಿಕೊಂಡಿರುವದ್ದರಿಂದ ಭಸ್ಮಕ್ಕೆ ಗೋಮಯವೇ ಕಾರಣವಾಯಿತು, ಈ ಗೋಮಯಕ್ಕೆ ಸ್ಥಾನವಾದ ಗೋವುಗಳು ಆದಿಯಲ್ಲಿ ಪರಮೇಶ್ವರನ ಐದು ಮುಖಂಗಳಿಂದ ಹುಟ್ಟಿದವಾದಕಾರಣ ಆ ಭಸ್ಮವು ಗೋವುಗಳ ಉತ್ಪತ್ತಿಕ್ರಮದಿಂದ ಐದುಬಗೆಯಾಯಿತು, ಅದೆಂತೆನೆ—ವಿಭೂತಿಯೆಂದು, ಭಸ್ಮವೆಂದು, ಕ್ಷಾರವೆಂದು, ರಕ್ಷೆಯೆಂದು, ಭಸಿತವೆಂದು ಐದು ಪರಿಯಾದ ಹೆಸರುಗಳಿಗೆ ಅನುಗುಣವಾಗಿರುವುದು, ಆ ಭಸ್ಮಗಳ ಹೆಸರುಗಳಿಗೆ ಅನುಗುಣವಾದ ಕಾರ್ಯಂಗಳೇನೆಂದರೆ—ಐಶ್ವರ್ಯವನ್ನುಂಟುಮಾಡುವವಾದಕಾರಣ ವಿಭೂತಿಯೆಂದು, ತೇಜಸ್ಸನ್ನುಂಟುಮಾಡುವವಾದಕಾರಣ ಭಸಿತವೆಂದು, ಸಮಸ್ತಪಾಪಂಗಳಂ ಪರಿಹರಿಸುವುದರಿಂದ ಭಸ್ಮವೆಂದು, ಸರ್ವವಿಪತ್ತುಗಳಂ ಪರಿಹಸುವುದರಿಂದ ಕ್ಷಾರವೆಂದು, ಭೂತಪ್ರೇತ

ಪಿಶಾಚಾದಿಗ್ರಹಗಳಿಂದಲೂ, ಚೋರವ್ಯಾಘ್ರಸರ್ಪಗಳು ಮೊದಲಾದವು ಗಳಿಂದಲೂ, ಉಂಟಾಗುವ ಭಯವಂ ತೊಲಗಿಸಿ ರಕ್ಷಿಸುವುದರಿಂ ರಕ್ಷೆಯೆಂದು ಹೆಸರುಂಟಾಯಿತು. ಈ ಅರ್ಥವು, ಬ್ರಹ್ಮಾದಿ ಸಮಸ್ತ ಪ್ರಾಣಿಗಳಿಗೂ ತಿಳಿಯುತ್ತೋಸುಗ, ಜಗದ್ರಕ್ಷಣಾರ್ಥವಾಗಿ ದೀಕ್ಷೆಯಂ ಕೈಗೊಂಡಿರುವ ಪರಶಿವನು, ಸದ್ಯೋಜಾತವೆಂಬ ಪೂರ್ವಮುಖದೊಳ್ ನಂದೆಯೆಂಬ ಗೋಸಂಬಂಧವಾದ ವಿಭೂತಿಯಂ, ವಾಮದೇವವೆಂಬ ದಕ್ಷಿಣಮುಖದಲ್ಲಿ ಭದ್ರೆಯೆಂಬ ಗೋಸಂಬಂಧವಾದ ಭಸಿತವಂ, ಅಘೋರವೆಂಬ ಪಶ್ಚಿಮ ಮುಖದೊಳ್ ಸುರಭಿಯೆಂಬ ಗೋಸಂಬಂಧವಾದ ಭಸ್ಮವಂ, ತತ್ಪುರುಷವೆಂಬ ಉತ್ತರಮುಖದೊಳ್ ಸುಶೀಲೆಯೆಂಬ ಗೋಸಂಬಂಧವಾದ ಕ್ಷಾರವಂ, ಈಶಾನವೆಂಬ ಊರ್ಧ್ವಮುಖದೊಳ್ ಸುಮನೆಯೆಂಬ ಗೋಸಂಬಂಧವಾದ ರಕ್ಷೆಯಂ ಈ ಪರಿಯಾಗಿ ಐದು ಬಗೆಯಾದ ಭಸ್ಮವಂ ನಿರಂತರವಲ್ಲೂ ಧರಿಸಿ ಜಗದ್ರಕ್ಷಣೆಯಂ ಮಾಡುತ್ತಿರುವರಾದಕಾರಣ, ಬ್ರಹ್ಮಾದಿದೇವತೆಗಳೂ ಪರಮೇಶ್ವರನಿಗೆ ಭಸ್ಮದಲ್ಲಿರುವ ಅಭಿಮಾನವಂ ತಿಳಿದು ತಾವೂ ಭಸ್ಮವಂ ಧರಿಸಿ ಶುದ್ಧರಾಗಿ, ಆ ಪರಮೇಶ್ವರನಕಟಾಕ್ಷಕ್ಕೆ ಪಾತ್ರರಾಗಿ ನಿಜಪದವಿಯಂ ಪಡೆದು, ಭಸ್ಮಧಾರಣೆಯೊಳ್ ಆಸಕ್ತಿ ಉಳ್ಳವರಾಗಿ ಇರುವರು. ಅದುಕಾರಣ ಭಸ್ಮವಂ ಸದಾ ಧರಿಸೆ, ಆತನೇ ಸಾಕ್ಷಾತ್ ರುದ್ರನಂತೆ ಭೂಮಿಯಲ್ಲಿ ನಿಷ್ಕಂಟಕನಾಗಿ ಚರಿಸುತ್ತ ದೇವತೆಗಳಿಂದಲು ಜಯಿಸಲಶಕ್ಯನಾಗುವನು, ಮತ್ತೂ ವಿಭೂತಿಯಂ ಧರಿಸುವುದಕ್ಕೆ ಕಾಲನಿಯಮವಂ ವಿವರಿಸುವೆನು, ಸಾವಧಾನದಿಂ ಆಲಿಸುವನಾಗು, ಭಸ್ಮವಂ ಧರಿಸುವುದಕ್ಕೆ ಕಾಲನಿಯಮಗಳು ಯಾವುವೆಂದರೆ—ನಿತ್ಯಕರ್ಮವಂ ಮಾಡುವಲ್ಲಿ ವಿಭೂತಿಯಂ ಧರಿಸಬೇಕು, ನೈಮಿತ್ತಿಕ ಸಮಯದೊಳ್ ಭಸಿತವಾಗಲಿ ಅಥವಾ ರಕ್ಷೆಯಾಗಲೀ ಧರಿಸಬಹುದು, ಪ್ರಾಯಶ್ಚಿತ್ತಕರ್ಮಂಗಳಲ್ಲಿ ಭಸ್ಮವಂ ಧರಿಸಬೇಕು, ಮೋಕ್ಷಾರ್ಥವಾಗಿ ಬ್ರಹ್ಮವಿಚಾರವಂ ಮಾಡುವಲ್ಲಿ ಕ್ಷಾರವಂ ಧರಿಸಬೇಕು, ಇಂತಿವು ವಿಭೂತ್ಯಾದಿಗಳಂ ಮಾಡಲೋಸುಗ ಪೂರ್ವೋಕ್ತ ಕ್ರಮವಾಗಿರುವ ಗೋವಿನ ಗೋಮಯವಂ ಸಂಗ್ರಹಿಸಿ ಆಯಾಯ ಕ್ರಮವಾಗಿ ಆಯಾಯ ಭಸ್ಮವಂ ಮಾಡಬೇಕು, ಭಸ್ಮ

ವಂ ಮಾಡುವುದಕ್ಕೆ ದೇಶಕಾಲವಂ ವಿವರಿಸುವೆನು, ಅದೆಂತೆನೆ—ಪರ್ವತಾಗ್ರ, ನದೀತೀರ, ಬಿಲ್ವವೃಕ್ಷದಬಳಿಯೂ, ಶಿವಾಲಯವೂ ಪ್ರಶಸ್ತವು; ಅಥವಾ ಸ್ವಗೃಹವು, ದೇವತಾಸನ್ನಿಧಿಯು, ಈ ಸ್ಥಳಗಳು ದೇಶವೆನಿಸುವುವು. ಕಾಲವ್ಯಾವದೆಂದರೆ—ಆಶ್ವೀಜ, ಕಾರ್ತೀಕ, ವೈಶಾಖ, ಶ್ರಾವಣ, ಈ ಮಾಸಗಳು ಪ್ರಶಸ್ತವು. ಅಷ್ಟಮಿ, ಏಕಾದಶೀ, ಚತುರ್ದಶೀ, ತೃತೀಯಾ, ಪೂರ್ಣಿಮಾ, ಈ ದಿನಗಳಲ್ಲಿ, ಮತ್ತು ಶ್ರವಣನಕ್ಷತ್ರದಿಂ ಕೂಡಿದ ಭಾನುವಾರ, ರೋಹಿಣೀನಕ್ಷತ್ರಯುಕ್ತವಾದ ಸ್ಥಿರವಾರ, ಈ ವಾರಗಳಲ್ಲಿ ವಿಭೂತಿಯಂ ಮಾಡಬಹುದು, ಇಂತಿವು ಮಾಸದಿನಕಂಗಳು ಕಾಲವೆನಿಸುವುವು. ಇಂತೂ ಪ್ರಶಸ್ತವಾದ ದೇಶಕಾಲಗಳಲ್ಲಿ ಭಸ್ಮವಂ ಮಾಡುವುದಕ್ಕೆ ನಾಲ್ಕುವಿಧ ಕಲ್ಪ ಉಂಟು, ಅದು ಹ್ಯಾಗಂದರೆ—ಕಲ್ಪವೆಂದು, ಅನುಕಲ್ಪವೆಂದು, ಉಪಕಲ್ಪವೆಂದು, ಅಕಲ್ಪವೆಂದು ಇಂತು ನಾಲ್ಕುವಿಧದಲ್ಲಿ ಪ್ರಥಮಕಲ್ಪದಿಂದ ಉಂಟಾದ ಭಸ್ಮವು ಉತ್ತಮೋತ್ತಮವು, ಅದಿಲ್ಲದಿರೆ ಎರಡನೆಯ ಅನುಕಲ್ಪದಿಂ ಪುಟ್ಟಿದ ಭಸ್ಮವು ಉತ್ತಮವೆಂದೆನಿಸುವುದು. ಮೂರನೇ ಉಪಕಲ್ಪದಿಂದುಂಟಾದ ಭಸ್ಮವು ಮಧ್ಯಮವು. ನಾಲ್ಕನೇ ಅಕಲ್ಪದಿಂದುಂಟಾದ ಭಸ್ಮವು ಅಧಮವೆಂದೆನಿಸುವುದು. ಇಂತೂ ಕಥಿತೋಕ್ತಪ್ರಕಾರವಾಗಿ ಭಸ್ಮವಂ ಮಾಡುವ ಪುರುಷನು, ಹಿಂದೆ ಹೇಳಿದ ಮುಖ್ಯ ದಿನಕ್ಕೆ ಪೂರ್ವರಾತ್ರಿಯೋ ತನ್ನ ಇಚ್ಛಾನುಗುಣವಾದ ಧೇನುವಂ ಸಂಗ್ರಹಿಸಿ ಶುಚಿಯಾದಸ್ಥಳದಲ್ಲಿ ಕಟ್ಟಿ ವಿಧಾನೋಕ್ತವಾಗಿ ಪೂಜೆಯಂ ಮಾಡಿ ನಮಸ್ಕಾರವಂಗೈದು ಸ್ತೋತ್ರವಂ ಮಾಡಿ ಪ್ರಾರ್ಥನೆಯಂ ಮಾಡುವ ಪರಿ ಹ್ಯಾಗೆಂದರೆ—ಜಗತ್ತಿಗೆ ಧೇನುವೇ ತಾಯಿಗಳು, ವೃಷಭಂಗಳೇ ತಂದೆಗಳು. ಮತ್ತು ನಾನು ಕೊಡುವ ಮುಷ್ಟಿಗ್ರಾಸವಂ ನೀನು ಸ್ವೀಕರಿಸಿ ತಾಯಿಯೋಪಾದಿಯಲ್ಲಿ ಸಂರಕ್ಷಿಸಬೇಕು. ಶ್ಲೋ॥ ಗಾವೋ ಮೇ ಮಾತರಸ್ಸರ್ವಾಃ । ಪಿತರಶ್ಚಾಪಿಗೋವೃಷಾಃ ॥ ಗ್ರಾಸಮುಷ್ಟಿಂ ಮಯಾದತ್ತಂ । ಪ್ರತಿಗೃಹ್ಣೀತಮಾತರಃ ॥ ಎಂಬ ಮಂತ್ರದಿಂದ ಪ್ರಾರ್ಥನೆಯಂ ಮಾಡಿ, ಅಡಿಗಡಿಗೆ ಗ್ರಾಸಗಳಂ ಕೊಡುತ್ತ, ಬಳಿಕ ಧೂಪ ದೀಪಾದಿಗಳಿಂದ ಪೂಜೆಯಂ ಗೈದು ಅದರ ಸಮೀಪದಲ್ಲಿಯೇ

ಜಾಗರಣೆಯಂ ಮಾಡುತ್ತ, ಶುಚಿರ್ಭೂತನಾಗಿ, ಅವರ ಗೋಮಯ ಮಂ ಭೂಮಿಗೆ ಬೀಳಲೀಸದೆ ಸದ್ಯೋಜಾತಮಂತ್ರದಿಂದ ಎರಡು ಹಸ್ತದೊಳ್ ಆ ಗೋಮಯವಂ ತೆಗೆದುಕೊಂಡು, ವಾಮದೇವ ಮಂತ್ರದಿಂ ಶೋಧನೆಯಂ ಗೈದು, ಅಘೋರಮಂತ್ರದಿಂ ನಿರ್ಮಲವಾದ ಶುದ್ಧೋದಕವಂ ಬೆರಸಿ, ತತ್ಪುರುಷಮಂತ್ರದಿಂ ಕಲಸಿ, ಈಶಾನಮಂತ್ರದಿಂ ಉಂಡೆಗಳಂ ಮಾಡಿ, ಶುಚಿಯಾಗಿದ್ದ ಸ್ಥಳದಲ್ಲಿ ಒಣಗಿಸಿ, ಹಿಂದೆ ಹೇಳಿರುವ ಬಳಿಯಲ್ಲಿ ಭೂಮಿಯಂ ಗೋಮಯದಿಂ ಸಾರಿಸಿ, ಅಲ್ಲಿ ಅಗ್ನಿ ಪ್ರತಿಷ್ಠಾಪನೆಯಂ ಮಾಡಿ, ಮುಖಾಂತ ಅಗ್ನಿಸಂಧಾನವಂ ಮಾಡಿ, ಪಂಚಬ್ರಹ್ಮಮಂತ್ರದಿಂದ ಪಂಚವಿಂಶತಿ ಆಜ್ಯಾಹುತಿಗಳಂ ಮಾಡಿ ಆ ಬಳಿಕ ಆ ಅಗ್ನಿಯಲ್ಲಿ ಒಣಗಿಸಿ ಮಡಗಿರುವ ಮಂತ್ರಪೂತವಾದ ಗ್ರಾಸದಿಂ ಪುಟ್ಟದ ಗೋಮಯದ ಉಂಡೆಗಳಂ ಕ್ರಮದಿಂದಿರಿಸಿ, ಪರಶಿವನಂ ಧ್ಯಾನಿಸಿ, ರುದ್ರಸೂಕ್ತದಿಂದ ಆಜ್ಯಾಹುತಿಯಂ ಮಾಡಿ ಅಲ್ಲಿಯೇ ಕಾವಿವರ್ಣ ಭಸ್ಮವಾದ ಬಳಿಕ, ಆ ಭಸ್ಮವಂ ಶಿವಸ್ಮರಣೆಯಂ ಮಾಡುತ್ತ ತೆಗೆದು ವಿಭ್ಯಕ್ತವಾಗಿ ಪಂಚಗವ್ಯವಂ ಬೆರಸಿ ಆ ಭಸ್ಮವಂ ಒಂದು ಕಲಶದಲ್ಲಿ ತುಂಬಿ ಆ ಕಲಶದಲ್ಲಿ ಪರಮೇಶ್ವರನಂ ಆವಾಹನೆಯಂ ಗೈದು ಷೋಡಶೋಪಚಾರಂಗಳಿಂದ ಪೂಜೆಯಂ ಮಾಡಿ, ಶ್ರೀಸೂಕ್ತದಿಂದಲೂ, ರುದ್ರಸೂಕ್ತದಿಂದಲೂ ಕಲಶವಂ ಮುಟ್ಟಿ ಅಭಿಮಂತ್ರಿಸಿ, ಸೂರ್ಯಸೂಕ್ತವಂ ಜಪಿಸುತ್ತ ಕಲಶದಿಂ ಆ ಭಸ್ಮವಂ ಎತ್ತಿ ಉಂಡೆಗಳಂ ಮಾಡಿ ಆ ಉಂಡೆಗಳಲ್ಲಿ ಶಕ್ತಿಯ ಪಂಚಾಕ್ಷರದಿಂದ ಆವಾಹನೆಯಂ ಗೈದು, ದುರ್ಗಾಸೂಕ್ತದಿಂದ ಮೊದಲಿನಂತೆ ಷೋಡಶೋಪಚಾರಪೂಜೆಯಂ ಗೈದು ಉತ್ತಮವಾದ ಪರಿಶುದ್ಧಪಾತ್ರದಲ್ಲಿ ಧಾರಣಾರ್ಥವಾಗಿ ಇರಿಸಿಕೊಂಡು ಸದಾ ಭಸ್ಮಧಾರಣೆಯಂ ಮಾಡುವುದು, ಈ ರೀತಿಯಲ್ಲಿ ಮಾಡಿದ ಭಸ್ಮಧಾರಣ ಮಾತ್ರದಿಂದಲೇ ಪಾತಕವೆಲ್ಲವೂ ತೊಲಗಿ ಪರಿಶುದ್ಧನಾಗಿ ಇಹದಲ್ಲಿ ಸಮಸ್ತ ಭೋಗಂಗಳಂ ಅನುಭವಿಸಿ ಕಡೆಗೆ ಶಿವಸಾಯುಜ್ಯವನ್ನೈದುವನು. ಈಗ ಹೇಳಿದ ಪರಿಯು ಮೊದಲಿನ ಕಲ್ಪವೆಂದರಿವುದು, ಎರಡನೆಯ ಅನುಕಲ್ಪವಂ ಮಾಡುವ ಪರಿಯೆಂತೆಂದರೆ- ಅರಣ್ಯದಲ್ಲಿ ಶುಷ್ಕವಾಗಿರುವ ಕಾಡುಬೆರಣಿಯಂ ತಾನೇ ತಂದು ಮೊದಲನೇ ಕಲ್ಪಕ್ಕೆ ಹೇಳಿರುವಂತೆ ಕ್ರಮವಾಗಿ

ಸ್ನಾನಂಮಾಡಲು ಅದೇ ಅನುಕಲ್ಪವೆನಿಸುವುದು. ಮೂರನೆಯದಾದ ಉಪಕಲ್ಪದಕ್ರಮವೆಂತೆಂದರೆ—ಶುಚಿಯಾದ ಹೋಮಾಗ್ನಿ, ಪಾಕಾಗ್ನಿಮೊದಲಾದ ಅಗ್ನಿಗಳಲ್ಲಿ ಉಂಟಾದ ಭಸ್ಮವಂ ತಾನೇತಂದು ವಸ್ತ್ರದಲ್ಲಿ ಶೋಧನೆಯಂಮಾಡಿ, ಗೋಮೂತ್ರದಲ್ಲಿಕಲಸಿ ಮೊದಲಿನಂತೆ ಉಂಡೆಗಳಂಮಾಡಿ, ಪೂರ್ವೋಕ್ತಪ್ರಕಾರ ಭಸ್ಮವಂ ಮಾಡಲು, ಉಪಕಲ್ಪವೆನಿಸಿಕೊಳ್ಳುವುದು. ಈ ಮೂರುವಿಧ ಭಸ್ಮದಲ್ಲಿ ಯಾವದಾದರೂ ಪರರುಮಾಡಿ ತಂದಿತ್ತರೆ ಅದು ಅಕಲ್ಪವೆನಿಸಿಕೊಂಬುದು, ಈ ನಾಲ್ಕುವಿಧ ಭಸ್ಮದಲ್ಲಿ ಯಾವದಾದರೂ ಒಂದುಬಗೆಯಲ್ಲಿ ಮೂರು ಕಾಲದಲ್ಲಾಗಲೀ, ಅಥವಾ ಒಂದು ಕಾಲದಲ್ಲಾಗಲೀ ಭಸ್ಮಸ್ನಾನವಂ ಮಾಡಲು, ಅದು ಆಗ್ನೇಯ ಸ್ನಾನವೆನಿಸಿಕೊಂಬುದು. ಇದರಿಂದ ಭುಕ್ತಿಮುಕ್ತಿಗಳೆರಡೂ ಉಂಟಾಗುವುದು, ಆ ಸ್ನಾನವಂ ಮಾಡುವಪರಿ ಹ್ಯಾಗೆಂದರೆ—ಶುದ್ಧೋದಕದಿಂದ ಹಸ್ತಪಾದಂಗಳಂ ತೊಳೆದು ಯಥಾಯೋಗ್ಯವಾಗಿ ಆಚಮನವಂಗೈದು ಭಸ್ಮವಂ ಕರದಲ್ಲಿರಿಸಿ ಕೊಂಡು ಪಂಚಾಕ್ಷರೀ ಮಂತ್ರವಂ ಎಂಟುಬಾರಿ ಮನದಲ್ಲಿ ಜಪಿಸಿ, ಶಿರಸ್ಸಿನೊಳ್ ಈಶಾನಮಂತ್ರದಿಂದಲೂ, ಮುಖದಲ್ಲಿ ತತ್ಪುರುಷ ಮಂತ್ರದಿಂದಲೂ, ಹೃದಯದಲ್ಲಿ ಅಘೋರಮಂತ್ರದಿಂದಲೂ, ಗುಹ್ಯದೇಶದಲ್ಲಿ ವಾಮದೇವ ಮಂತ್ರದಿಂದಲೂ, ಪಾದಂಗಳಲ್ಲಿ ಸದ್ಯೋಜಾತಮಂತ್ರದಿಂದಲೂ, ಸರ್ವಾಂಗಗಳಲ್ಲಿಯೂ, ಪ್ರಣವಮಂತ್ರದಿಂದ ಮೊದಲು ಮಂತ್ರಿಸಿರುವ ಭಸ್ಮದಿಂದ ಲೇಪನವಂ ಮಾಡುವುದು, ಈ ರೀತಿಯಲ್ಲಿ ಮಾಡುವುದೇ ಉತ್ತಮವಾದ ಆಗ್ನೇಯ ಸ್ನಾನವೆಂಬುವುದು. ಜಲಸ್ನಾನವು ಬಾಹ್ಯವಾದ ಮಾಲಿನ್ಯವ ಮಾತ್ರ ಪರಿಹರಿಸಿ ಶುದ್ಧಿಯಂ ಮಾಡುವುದು, ಈ ಆಗ್ನೇಯಸ್ನಾನವು ಬಾಹ್ಯಾಭ್ಯಂತರ ವೆರಡನ್ನೂ ಶುದ್ಧಿಯಂ ಮಾಡಿ ಪರದಲ್ಲಿ ಮುಕ್ತಿಯಂ ಕೊಡುವುದು. ಈ ಸ್ನಾನವು ಮೋಕ್ಷದಲ್ಲಿ ಅಪೇಕ್ಷೆಯುಳ್ಳ ಯತಿಗಳಿಗೆ ಅತ್ಯಾವಶ್ಯಕವು, ಈ ಸ್ನಾನವಂ ಯಾರು ನಿತ್ಯದಲ್ಲಿಯೂ ಆಚರಿಸುವರೋ ಅವರಿಗೆ ಸಮಸ್ತ ಸುಖವುಂಟಾಗಿ ಪರದಲ್ಲಿ ಸದ್ಗತಿಯೂ ಉಂಟಾಗುವುದು, ಈ ಸ್ನಾನವು ಪುಣ್ಯವಿಶೇಷದಲ್ಲಿ ಲಭಿಸಲು ಗಂಗಾಸ್ನಾನಕ್ಕಿಂತಲೂ ಅತಿಶಯವು,

ಆದಕಾರಣ ಮಹಾವಿಷ್ಣುಮೊದಲಾದ ದೇವತೆಗಳು ನಾರದ ಮೊದಲಾದ ದೇವರ್ಷಿಗಳು ವಸಿಷ್ಠ ಮೊದಲಾದ ಬ್ರಹ್ಮರ್ಷಿಗಳು ಸನಕಾದಿ ಯೋಗಿಗಳು ಬಾಣ ಮೊದಲಾದ ದಾನವರು, ರಾವಣ ಮೊದಲಾದ ರಾಕ್ಷಸರು, ಕುಬೇರ ಮೊದಲಾದ ಯಕ್ಷರು, ಮತ್ತು ಗರುಡ, ಗಂಧರ್ವರು ಕಿನ್ನರರು, ಕಿಂಪುರುಷರು, ಮರುತ್ತುಗಳು, ಪಿತೃಗಣಂಗಳು, ಸರ್ಪ ಭೂತಗಳು, ಸಹಾ ನಿತ್ಯದಲ್ಲೂ ಸರ್ವಪ್ರಯತ್ನದಿಂದ ಭಸ್ಮಸ್ನಾನವಂ ಮಾಡುತ್ತಲಿರುವರು. ಇಂತಪ್ಪ ಆಗ್ನೇಯಸ್ನಾನಕ್ಕೆ ಲಕ್ಷಾರ್ಧ ಸಹಸ್ರವಂ ಮಾಡಿದವರಾದರೂ ಸಂಕಲ್ಪವಂ ಮಾಡಿದಮಾತ್ರದಿಂದಲೇ, ಅಗ್ನಿಯು ಒಂದು ಕಿಡಿಯಿಂದ ಪರ್ವತದಂತಿರ್ದ ಹತ್ತಿಯರಾಶಿಯು ಎಂತು ನಿಶ್ಶೇಷವಾಗಿ ದಹಿಸಿಹೋಗುವದೋ ಆ ರೀತಿಯಲ್ಲಿ ನೂರುಬಗೆಯಾದ ಪಾಪವು ತೊಲಗಿ ಪರಿಶುದ್ಧರಾಗುವರು, ಇಂತಪ್ಪ ಆಗ್ನೇಯಸ್ನಾನದಲ್ಲಿ ಯಾರು ಭಕ್ತಿಹೀನರಾಗಿ ಸ್ನಾನವಂ ಗೈಯುತ್ತಿಲ್ಲವೋ ಅವರು ಜನ್ಮಶತದಲ್ಲೂ ಸದ್ಗತಿಯಂ ಪಡೆಯಲರಿಯರು. ಶಿವಭಕ್ತನಾಗಿ ಭಸ್ಮವಂ ಧರಿಸದಿರಲು ಅವನೇ ಮಹಾಪಾಪಿಯೆಂದರಿವುದು. ಭಸ್ಮವಂ ಧರಿಸುವ ಸ್ಥಾನಭೇದವಂ, ಅದರ ಪ್ರಕಾರವಂ ಕೂಡ ವಿವರಿಸಿ ಹೇಳುವೆನು ಅದೆಂತೆನೆ—ಮೊದಲು ಬಿಳಿಭಸ್ಮದಿಂ ಶರೀರಕ್ಕೆ ಲೇಪನವಂ ಮಾಡಿ ಅನಂತರ ತ್ರಿಪುಂಡ್ರವಂ ಧರಿಸುವುದು ಮುಖ್ಯವು ಅಥವಾ ಬಿಳಿಭಸ್ಮವಂ ಲೇಪನವಂ ಮಾಡದಿದ್ದರೂ ತ್ರಿಪುಂಡ್ರವಂ ಧರಿಸಬಹುದು, ತ್ರಿಪುಂಡ್ರವಂ ಧರಿಸುವುದಕ್ಕೆ ಭಸ್ಮದಲ್ಲಿ ಸ್ವಚ್ಛವಾದ ಜಲವಂ ಮಿಶ್ರವಂ ಮಾಡಿ ಮುಪ್ಪತ್ತೆರಡು ಸ್ಥಾನದಲ್ಲಿ ಧರಿಸಬೇಕು. ಆ ಸ್ಥಾನಗಳು ಯಾವುವೆಂದರೆ—ಶಿರಸ್ಸು, ಹಣೆ, ಎರಡು ಕಿವಿಗಳು, ಎರಡು ನೇತ್ರಗಳು, ಮೂಗು, ಮುಖ ಕತ್ತು, ಭುಜಗಳು, ತೋಳುಗಳು, ಮೊಣಕೈಗಳು, ಮುಂಗೈಗಳು, ಹೃದಯ, ನಾಭಿ, ಗುಹ್ಯ, ತೊಡೆಗಳು, ಮೊಣಕಾಲುಗಳು, ಮುಂಗಾಲುಗಳು, ಕಣಕಾಲುಗಳು, ಮುಂಗಾಲುಗಳು, ಬೆನ್ನು ಕಿಬ್ಬಿಗಳು, ಈ ಸ್ಥಾನಗಳಲ್ಲಿ ತಪ್ಪದೆ ಧರಿಸುವದು ಶೈವದೀಕ್ಷೆಯುಳ್ಳವರಿಗೆ ಅತ್ಯಾವಶ್ಯಕವು, ಮತ್ತು ನಾನಾಪ್ರಕಾರವಾದ ಹದಿನೈದು ಸ್ಥಾನವುಂಟು, ಅದೆಂತೆಂದರೆ—ಶಿರಸ್ಸು, ಕಣ್ಣು, ಎರಡುಕಿವಿಗಳು, ಕೊರಳು, ಭುಜಗಳೆರಡು

ಶಾಖೆ: ಹೃದಯವು, ಬೆನ್ನು, ಎರಡುತೋಳ್ಗಳು, ಹೆಕ್ಕತ್ತು, ಎರಡುಮುಂ
ಗೈಗಳು ಈ ಸ್ಥಾನಗಳಲ್ಲಿ ನಿತ್ಯದಲ್ಲಿಯೂ ತ್ರಿಪುಂಡ್ರವಂ ಧರಿಸಬೇಕು.
ಈ ತ್ರಿಪುಂಡ್ರವಂ ಧರಿಸುವಾಗ ಭಸ್ಮವಂ ಎಡದ ಕೈಯ್ಯಲ್ಲಿರಿಸಿ ಬಲ
ದಕೈಯ್ಯಿಂದ ಮುಚ್ಚಿ ಎಂಟಾವರ್ತಿ ಪಂಚಾಕ್ಷರಿಯಂ ಜಪಿಸಿ, ಪಂಚಾ
ಕ್ಷರಿಯಿಂದಲೇ ಶುದ್ಧೋದಕವಂ ಬೆರಸಿ ಕಲಸಿ, ಹೆಬ್ಬೆಟ್ಟು, ಕಿರಿಬೆಟ್ಟು ಬಿ
ಟ್ಟು ಉಳಿದ ಮೂರು ಬೆರಳುಗಳಿಂದ ಆ ಭಸ್ಮವಂ ತೆಗದುಕೊಂಡು ಮೂ
ಲಮಂತ್ರವಂ ಜಪಿಸುತ್ತ ಮೊದಲು ಹೇಳಿದ ಸ್ಥಾನಂಗಳಲ್ಲಿ ಧರಿಸುವುದು,
ಮತ್ತೊಂದು ಪಕ್ಷಾಂತರವಿರುವದು ಅದೆಂತೆನೆ—ಮಧ್ಯಮ, ಅನಾಮಿಕ,
ತರ್ಜನಿಗಳಲ್ಲಿ ಅನುಲೋಮ ವಿಲೋಮವಾಗಿ ಧರಿಸುವುದು ಉಂಟು,
ಎಂತಾದರೂ ತ್ರಿಪುಂಡ್ರವಂ ಧರಿಸುವನೇ ರುದ್ರಸ್ವರೂಪನಾಗುವನು
ಮತ್ತು ತ್ರಿಪುಂಡ್ರವಂ ಧರಿಸುವ ಪ್ರಮಾಣವೆಂತೆಂದರೆ—ಕರುಬೆರಳು
ಉದ್ದ ಧರಿಸಬೇಕು, ಅಥವಾ ಹಣೆಯುದ್ದವಾದರೂ ಧರಿಸಬೇಕು, ನೇತ್ರಾಂ
ಗಳ ಸಮವಾದರೂ ಧರಿಸಬಹುದು, ಈ ರೀತಿಯಂ ತಿಳಿದು ಧರಿಸುವವನು
ರುದ್ರನಿಗೆ ಸಮಾನನಾಗುವನು. ತ್ರಿಪುಂಡ್ರವಂ ಗೃಹಸ್ಥನು ಮೂರು
ಕಾಲಗಳಲ್ಲಿಯೂ ಧರಿಸಬಹುದು. ಸ್ತ್ರೀಯರು, ಯತಿಗಳುಸಹ ಮೂರು
ಕಾಲಗಳಲ್ಲಿಯೂ, ಜಲಮಿಶ್ರವಿಲ್ಲದೇ ಧರಸಬಹುದು; ವಾನಪ್ರಸ್ಥನು,
ಕನ್ಯೆಯು, ದೀಕ್ಷಾಹೀನನು ಈ ಮೂವರೂ ಮಧ್ಯಾಹ್ನದವರಿಗೂ ಜಲ
ಮಿಶ್ರವಾದ ತ್ರಿಪುಂಡ್ರವಂ ಧರಸಬಹುದು, ಬಳಿಕ ಜಲವಿಲ್ಲದೇ ಧರಿಸ
ಬೇಕು, ಇಂತಲ್ಲದೆ ಬ್ರಾಹ್ಮಣನು ಆರು ಅಂಗುಲ ಪ್ರಮಾಣ ತ್ರಿಪುಂ
ಡ್ರವಂ ಧರಿಸಬೇಕು. ಕ್ಷತ್ರಿಯನು ನಾಲ್ಕು ಅಂಗುಲ ಪ್ರಮಾಣತ್ರಿ
ಪುಂಡ್ರವಂ ಧರಿಸಬೇಕು. ವೈಶ್ಯನು ಎರಡು ಅಂಗುಲ ಪ್ರಮಾಣ ತ್ರಿ
ಪುಂಡ್ರವಂ ಧರಿಸಬೇಕು, ಶೂದ್ರ ಮೊದಲಾದವರು ಒಂದು ಅಂಗುಲಪ್ರ
ಮಾಣ ತ್ರಿಪುಂಡ್ರವಂ ಧರಿಸಬೇಕು. ಈ ರೀತಿಯಲ್ಲಿ ತಮ್ಮ ತಮ್ಮ
ಮರ್ಯಾದೆಯಂ ಮೀರದೆ ಧರಿಸಲು ಪ್ರಚಂಡ ಸೂರ್ಯನಿಂದ ಮಹತ್ತಾದ
ಅಂಧಕಾರವೆಂತು ತೊಲಗುವದೋ, ಅದೇ ಪರಿಯಾಗಿ ಮಹಾ ಪಾತಕ
ಸಮೂಹವೆಲ್ಲವೂ ತೊಲಗಿಸಿ ಶಿವಲೋಕವನ್ನೈದಿಸುವದು. ಮತ್ತೂ
ತ್ರಿಪುಂಡ್ರಲಕ್ಷಣವೆಂತಿರಬೇಕೆಂದರೆ ರೇಖೆ ವಕ್ರವಿಲ್ಲದೆ ನ್ಯಾರವಾಗಿಯೂ,

ಬಿಳುಪಾಗಿಯೂ, ಒಂದೇ ಸಮವಾಗಿಯೂ, ನುಣುಪಾಗಿಯೂ, ದಟ್ಟವಾಗಿಯೂ, ಪ್ರಮಾಣಕ್ಕೆ ಸರಿಯಾಗಿಯೂ, ಇಂತು ಆರು ಲಕ್ಷಣಯುಕ್ತವಾಗಿ ಧರಿಸಲು, ಸಮಸ್ತ ಶುಭವನ್ನುಂಟುಮಾಡಿ ಸದ್ಗತಿಯನ್ನುಂಟುಮಾಡುವುದು. ಈ ರೀತಿಯಲ್ಲಿ ಒಂದುವೇಳೆ ಎಲ್ಲಾವರೂ ಧರಿಸಿದವನಂ ರುದ್ರನಂ ಮಾಡುವದಾವಕಾರಣ ಋಷಿಸ್ತೋಮಹರ್ಷಿಗಳು, ಮಹಾವಿಷ್ಣು ಮೊದಲಾದ ದೇವತೆಗಳೂ ಸಹಾರನಿರಂತರದಲ್ಲಿಯೂ ತ್ರಿಪುಂಡ್ರವಂ, ರುದ್ರಾಕ್ಷಂಗಳಂ ಧರಿಸಿ, ಲಿಂಗರೂಪನಾದ ಪರಶಿವನಂ ಪೂಜಿಸುತ್ತಿರುವರು. ಈ ಅರ್ಥವು ವೇದಂಗಳಲ್ಲಿ, ಉಪನಿಷತ್ತುಗಳಲ್ಲಿ, ಸ್ಮೃತಿಗಳಲ್ಲಿ, ಇತಿಹಾಸಂಗಳಲ್ಲಿ, ಪುರಾಣಂಗಳಲ್ಲಿ, ಸಮಸ್ತ ಶೈವಾಗಮಕಲ್ಪಗಳಲ್ಲಿ ಕೂಡಾಭಸ್ಮರುದ್ರಾಕ್ಷಂಗಳಂಧರಿಸಿ ಶಿವಾರಾಧನೆಯಂಮಾಡಬೇಕೆಂದು ಘೋಷಿಸುತ್ತಿರುವುದು, ಆದಕಾರಣ ಚಾರ್ವಾಕನಾಗಲೀ, ದುರಾಚಾರಪರನಾಗಲೀ, ಮರ್ಯಾದೆಯನ್ನತಿಕ್ರಮಿಸಿದವನಾಗಲೀ, ನಿರಂತರ ರುದ್ರಾಕ್ಷ ತ್ರಿಪುಂಡ್ರಂ ಧರಿಸಲು, ಅವನೂ ಕೂಡಾ ಸದ್ಗತಿಯಂ ಪಡೆಯುವನು. ಇಂತಪ್ಪ ರುದ್ರಾಕ್ಷಭಸ್ಮಂಗಳಂ ಧಾರಣೆಯಂಮಾಡದೇ ಭಕ್ತಿಹೀನನಾಗಿರುವಾತನು ಎಷ್ಟು ಯಜ್ಞಗಳಂಮಾಡಿದರೂ, ಎಷ್ಟು ತಟಾಕ, ಸರೋವರಗಳಂ ಕಟ್ಟಿಸಿದರೂ ನಷ್ಟವಾಗಿ ಪೋಗುವುದು. ಸಮಸ್ತ ಇಷ್ಟಾರ್ಥವನ್ನಿತ್ತು ಪುಷ್ಟನಂಮಾಡಿ, ಜನನಮರಣವೆಂಬ ಕಷ್ಟವಂ ಬಿಡಿಸುವ ಇನ್ನು ಕೆಲವು ಭಸ್ಮಗಳ ವಿವರವಂ ಪೇಳ್ವೆನು, ಅದೆಂತೆನೆ—ಶಿವರಾತ್ರಿಮೊದಲಾದ ಮಹಾಪುಣ್ಯದಿವಸಂಗಳಲ್ಲಿ ಒಣಗಿದ ಗೋಮಯವಲ್ಲಿ ಯಥೋಚಿತವಾಗಿ ಮಾಡಿದಭಸ್ಮವು ಸರ್ವೋತ್ತಮವು. ಶ್ರೌತಾಗ್ನಿಭಸ್ಮವು ಅದಕ್ಕಿಂತ ಉತ್ತಮವು, ಇಂತಲ್ಲದೇ ಸ್ಮಾರ್ತಾಗ್ನಿಭಸ್ಮವು ಉತ್ತಮವು, ಅದೂಯಿಲ್ಲದಿರೆ ಯಜ್ಞವಂ ಮಾಡಿದಭಸ್ಮವು ಉತ್ತಮವು, ಅದಿಲ್ಲದಿದ್ದರೆ ತಂತ್ರದಿಂದಮಾಡಿದ ಶಿವಾಲಯದಲ್ಲಿರುವಭಸ್ಮವು ಉತ್ತಮವು, ಅದಿಲ್ಲದೆಯಿದ್ದರೆ ಉಪಾಕರ್ಮದ ಹೋಮದ ಭಸ್ಮವು ಉತ್ತಮವು, ಅದಿಲ್ಲದಿದ್ದರೆ ವಿರಜಾಹೋಮದಿಂದುಂಟಾದ ಭಸ್ಮವು ಉತ್ತಮವು, ಅದಲ್ಲದೇಯಿದ್ದರೆ ಕಾಡುಕಿಚ್ಚಿನಿಂದುಂಟಾದ ಭಸ್ಮವು ಆಗಹುದು. ಇಂತು ಈ ಭಸ್ಮಗಳಲ್ಲಿ ಯಾವದು ದೊರೆಯುವದೋ ಅದಂ

ಮೊದಲು ಹೇಳಿದ ಸ್ಥಾನಗಳಲ್ಲಿ ಅದೇ ಕ್ರಮವಾಗಿ ಧರಿಸಲು, ಪೂರ್ವದಲ್ಲಿ ಹೇಳಿದಫಲವೇ ಉಂಟಾಗುವುದು. ಆದ್ದರಿಂ ಜಗದೀಶ್ವರಿಯ ಕಟಾಕ್ಷಕ್ಕೆ ಪಾತ್ರನಾದ ನಿನಗೆ ನಾನು ಈಗ ಉಪದೇಶವಂ ಮಾಡಿರುವ ಕ್ರಮದಿಂದ ಭಸ್ಮರುದ್ರಾಕ್ಷಗಳಂ ಧರಿಸಲು ನಿನ್ನ ಮನೋಭೀಷ್ಟವೆಲ್ಲವೂ ಅನಾಯಾಸವಾಗಿ ಕೈಸೇರುವುದು, ಮತ್ತೂ ನೀನು ಉದ್ಯೋಗಿಸಿರುವ ಕಾರ್ಯವು ಶೀಘ್ರದಲ್ಲಿ ಆಗುವದೆಂದು ನಿರೂಪಿಸಲು. ಆಗ ಆ ಸುಗಂಧಮಹಾರಾಜೇಂದ್ರನು ಪುಣ್ಯಕರವಾದ ವಿಭೂತಿಯ ಮಹಾತ್ಮ್ಯವಂ ಕೇಳಿ ತನ್ನೊಳ್ಳಾನು. ಅಚ್ಚರಿಗೊಂಡು ಆಕ್ಷಣವಲ್ಲಿಯೇ ಶಿವಭಕ್ತಿ ಉಂಟಾಗಿ ಈ ಮಹಾಪುರುಷನು ಎನಗೆ ಭಸ್ಮರುದ್ರಾಕ್ಷಿಯ ಧಾರಣೆಯಂ ಮಾಡಿಸಬೇಕೆಂದು ಉಪದೇಶವಂಮಾಡಿರುವನು, ಅದರೊಳ್ ಭಸ್ಮದ ಮಹಾತ್ಮ್ಯವು ತಿಳಿದಂತಾಯಿತು, ಇನ್ನು ರುದ್ರಾಕ್ಷಮಹಾತ್ಮ್ಯವಂ ತಿಳಿಯಬೇಕೆಂದು ಮನದೊಳ್ನಿಶ್ಚೈಸಿ, ಪುರುಷಮೃಗನಿಗೆ ಸಾಷ್ಟಾಂಗ ನಮಸ್ಕಾರವಂ ಗೈದು ಅವನಂ ಕುರಿತು ಎಲೈ, ಮಹಾನುಭಾವನೇ! ನಿನ್ನ ಕೃಪೆಯಿಂದ ಭಸ್ಮಮಹಾತ್ಮ್ಯವಂ ತಿಳಿದೆನು, ರುದ್ರಾಕ್ಷಿಯ ಉತ್ಪತ್ತಿಯಂ, ಅದರ ಧಾರಣಾಕ್ರಮವಂ, ಅದರ ಮಹಿಮೆಯಂ, ಅದರ ವಿನಿಯೋಗವಂ, ಅದರಿಂದಾಗುವ ಫಲಾಫಲಂಗಳೆಲ್ಲವಂ ವಿಸ್ತಾರವಾಗಿ ನಿರೂಪಿಸಬೇಕೆಂದು ವಿಜ್ಞಾಪನೆಯಂಮಾಡಲು, ಆಗ ಕರುಣಾಶಾಲಿಯಾದ ಪುರುಷಮೃಗನು ರಾಜಕುಮಾರನಂ ಕುರಿತು ಎಲೈ, ರಾಜಕುಲತಿಲಕನೇ! ಕೇಳು ನೀನು ಮಾಡಿದ ಪ್ರಶ್ನೆಯು ಬಹುರಹಸ್ಯವಾದುದು, ಆದರೂ ನೀನು ಪರಶಿವನಲ್ಲಿ ಅತ್ಯಂತ ಭಕ್ತಿಯುಕ್ತನಾದಕಾರಣ ನಿನಗೆ ಉಪದೇಶವಂ ಮಾಡುವೆನು, ಅದೆಂತೆನೆ—ಪೂರ್ವದಲ್ಲಿ ತ್ರಿಪುರರೆಂಬ ಮಹಾದೈತ್ಯರು ಚತುರ್ಮುಖನ ವರದಿಂದ ಕೊಬ್ಬಿ ಮೂರುಲೋಕಂಗಳಂ ಬಾಧಿಸುತ್ತಿರಲು, ಅವರ ಉಪಟಳವಂ ಸಹಿಸಲಾರದೇ ಪುರಂದರ ಮೊದಲಾದ ದೇವತೆಗಳೆಲ್ಲರೂ ಒಂದಾಗಿ ಸಮಸ್ತ ಲೋಕಂಗಳಿಗೂ ಪಿತಾಮಹನಾದ ಚತುರ್ಮುಖನಿರುವ ಸತ್ಯಲೋಕವಂ ಕುರಿತು ಪೋಗಿ ಆ ಬ್ರಹ್ಮದೇವನಂ ಕಂಡು ಸಾಷ್ಟಾಂಗವಾಗಿ ಪ್ರಣಾಮವಂ ಮಾಡಿ ಅವನಂ ಕುರಿತು ಎಲೈ ಭಾರತೀಪತಿಯೇ! ತ್ರಿಪುರರೆಂಬ ದೈತ್ಯರ ಉಪದ್ರವವಂ ಸಹಿಸಲಾರೆವು ಎಂದು

ಮೊರೆಯಿಡಲಾಗ ಕರುಣಾಶಾಲಿಯಾದ ಚತುರ್ಮುಖನು ದೇವತೆಗಳ ಕಾರ್ಪಣ್ಯವಂ ಕಂಡು ಮನಸ್ಸಿನಿಂದು ದಯಾರ್ದ್ರ ಹೃದಯನಾಗಿ ವಿಪತ್ತಿಯಂ ಮಾಡಿ ಮುಂದಾಗುವ ಕಾರ್ಯಸಂಗತಿಯಂ ತಿಳಿದು ದೇವತೆಗಳಂ ಕುರಿತು ಬೆದರಬೇಡಿರಿ ಎಂದು ಅಭಯವನ್ನಿತ್ತು ಅವರನ್ನೊಡಗೊಂಡು ವೈಕುಂಠವನ್ನೈದಿ ಪರಮಾತ್ಮನಾದ ಪದ್ಮನಾಭನಂ ಕಂಡು ಪ್ರಣಾಮವಂ ಗೈದು ಕಂಗೆಟ್ಟು ಕೈಗಳಂ ಕಟ್ಟಿಕೊಂಡು ಕಣ್ಣೀರುಗಳಂ ಕರೆಯುತ್ತ ನಿಂತಿರಲು, ಆಗ ಮಹಾವಿಷ್ಣುವು ಬ್ರಹ್ಮಮೊದಲಾದ ದೇವತೆಗಳಂ ಕಂಡು ಆದರದಿಂದ ಅವರಂ ಕರೆದು ಸಂತೈಸಿ ನೀವು ಬಂದಿರುವ ಪರಿಯೇನೆಂದು ಪ್ರಶ್ನೆಯಂ ಮಾಡಲು ಆಗ ಚತುರ್ಮುಖನು ವೈಕುಂಠೇಶನಂ ಕುರಿತು ಇಂದ್ರಾದಿ ದೇವತೆಗಳ ಕಷ್ಟವಂ ವಿಸ್ತಾರವಾಗಿ ತಿಳುಹಿ ಸರ್ವಪ್ರಕಾರದಿಂದಲೂ ತ್ರಿಪುರರೆಂಬ ದಾನವರಂ ಸಂಹರಿಸಿ ಪುರಂದರಾದಿಗಳಂ ರಕ್ಷಿಸಬೇಕೆಂದು ವಿಜ್ಞಾಪನೆಯಂ ಮಾಡಲು, ಅದಂ ಕೇಳಿ ಮಹಾವಿಷ್ಣುವು, ನಾನು ಮಹಾದೇವಭಕ್ತರಾದ ಆ ತ್ರಿಪುರರೆಂಬ ರಾಕ್ಷಸರಂ ನಿಗ್ರಹಿಸುವೆನೆಂದು ಮನದೊಳ್ ಆಲೋಚನೆಯಂ ಮಾಡಿದ ಮಾತ್ರದಿಂದಲೇ ಅವರಿಗೆ ಮಹತ್ತಾದ ಆಪತ್ತು ಬರುವದರಲ್ಲಿ ಸಂದೇಹವಿಲ್ಲವೆಂದು ನಿಶ್ಚೈಸಿ, ಚತುರ್ಮುಖ ಮೊದಲಾದ ದೇವತೆಗಳಂ ಕುರಿತು ಎಲೈ ದೇವತೆಗಳಿರಾ! ಮೊದಲು ಶಿವನಿಗೆ ಅಪರಾಧವಂ ಮಾಡಿದ ದಕ್ಷಬ್ರಹ್ಮನ ಯಜ್ಞಶಾಲೆಯ ಪ್ರವೇಶಮಾತ್ರದಿಂದ ಉಂಟಾದ ಶಿವನ ಕೋಪದಿಂ ಜಡೆಯಿಂ ಪುಟ್ಟಿದ ವೀರಭದ್ರನ ಕೈಗಳಿಗೆ ಶಿಕ್ಕಿ ಆತನು ಮಾಡಿದ ಘೋರಶಿಕ್ಷೆಯಂ ಅನುಭವಿಸಿ, ಅದೂ ಸಾಲದೇ ಅಸುರರ ವಶವಾಗಿ ಬಹುಕಾಲ ಸಂಕಟಗಳಂ ಅನುಭವಿಸಿ ಸಹಿಸಲಾರದೆ ವ್ಯಸನಪಡುವ ದೇವತೆಗಳಂ ನೋಡಿ ಪರಮಕರುಣಾಸಿಂಧುವಾದ ಪರಶಿವನು ಕೊನೆಗೆ ತಾನೇ ದಯಾವುಳ್ಳವನಾಗಿ ಷಣ್ಮುಖನ ಮುಖದಿಂದ ದೈತ್ಯರೆಲ್ಲರಂ ನಿಗ್ರಹಿಸಿ ನಿಮ್ಮೆಲ್ಲರು ರಕ್ಷಿಸಿದ ಅರ್ಥವಂ ನೀವು ಮರೆತು ಇರುವಿರಿ, ಮತ್ತೂ ಶಿವಾಪರಾಧವಂ ಮಾಡಿದವರು ಬದುಕುವುದುಂಟೇ ಎಂದಿಗೆ ಸದಾಶಿವನ ಕರುಣಬರುವದೋ ಅಂದಿಗಲ್ಲದೇ ಈ ಕಷ್ಟಪರಿಹಾರವಾಗಲಾರದು. ಅದುವರಿಗೂ ಆದ ಕಷ್ಟವಂ ಅನುಭವಿಸುತ್ತ ಸುಮ್ಮನೆ

ಇರುವದೇ ಲೇಸೆಂದು ಅಪ್ಪಣೆಯಂ ಕೊಡಲೂ, ಅದಂ ಕೇಳಿ ಬ್ರಹ್ಮಾದಿ ದೇವತೆಗಳೆಲ್ಲರೂ ಗಡಗಡನೆ ನಡುಗಿ ಶೋಕಪರವಶರಾಗಿ ಒಂದುಕ್ಷಣವೂ ಸಹಿಸುವುದಕ್ಕೆ ಅಶಕ್ಯವಾದ ಈ ದೈತ್ಯರ ಉರುಪಣೆಯಂ ಅನೇಕ ಕಾಲ ಅನುಭವಿಸಿ ಈಗ ನಿರ್ವಹಿಸಲಾರದೆ ತಾಯಿಸಮೀಪಕ್ಕೆ ಮಕ್ಕಳು ಬಂದು ತಂದು ದುಃಖವಂ ಪರಿಹರಿಸಿಕೊಳ್ಳುವಂತೆ ನಿಮ್ಮಸಮೀಪವನ್ನೈದಿರುವೆವು, ನೀವು ಉಪೇಕ್ಷೆಯಂ ಮಾಡಿದರೆ ನಾವೆಲ್ಲರೂ ಗತ್ಯಂತರವಿಲ್ಲದೇ ಪ್ರಾಯೋಪವೇಶವಂ ಮಾಡುವೆವಲ್ಲದೆ ನಿಮ್ಮಂ ಹೊರತು ಮತ್ತೊಂದು ಗತಿಯಂ ಕಾಣೆವೆಂದು ಈ ಪರಿಯಾಗಿ ನಾನಾವಿಧವಾದ ಸ್ತೋತ್ರೋಕ್ತಿಗಳಿಂದ ಮನಮರುಗುವಂತೆ ಮಾಡಿ, ಅನೇಕಂಗಳಾದ ಉಪನಿಷದ್ವಾಕ್ಯಗಳಿಂದ ಸ್ತೋತ್ರವಂ ಮಾಡುತ್ತಿರಲಾಗ ನಾರಾಯಣನು ತನ್ನ ಪಾದಾರವಿಂದಗಳೊಳ್ ದೃಢವಾಗಿ ಶರಣಾಗತರಾದ ಬ್ರಹ್ಮಾದಿ ದೇವತೆಗಳೆಲ್ಲರಂ ಕಂಡು ಅನಾಥರಂ ರಕ್ಷಿಸುವೆನೆಂಬ ಬಿರುದಂ ನಿರ್ವಹಿಸಲೋಸುಗ ತನ್ನ ಪಾದ ಕಮಲಂಗಳೊಳ್ ಬಿದ್ದು ಶರಣಾಗತರಾಗಿರುವ ಬ್ರಹ್ಮಾದಿದೇವತೆಗಳಂ ಎತ್ತಿ ಅಭಯವನ್ನಿತ್ತು, ಈ ತ್ರಿಪುರರಂ ಸಂಹರಿಸುವುದು ಎನಗೆ ಸ್ವಲ್ಪಕಾರ್ಯವು, ಆದರೊಂದುಂಟು ಪೇಳುವೆನು ಕೇಳಿ, ಪರಾತ್ಪರನಾದ ಪರಮೇಶ್ವರನಿಗೆ ಮಹಾಪರಾಧವಂ ಮಾಡಿ ಅವನ ಭಕ್ತರಮರೆಯಂ ಬೀಳಲು, ಅವರು ಅದಂ ನಿರ್ವಹಿಸುವರು, ಅದಕ್ಕೆ ಶಿವನು ಒಪ್ಪುವನು, ಇದರೊಳ್ ಸಂದೇಹವಿಲ್ಲ, ಹಾಗೆ ಶಿವಭಕ್ತರಿಗೆ ದ್ರೋಹವಂಮಾಡಿ ದಕ್ಕಿಸಿಕೊಳ್ಳುವುದಕ್ಕೆ ಸಾಕ್ಷಾತ್‌ಶಿವನ ಮರೆಯಂ ಹೋಗುವೆನೆಂದು ಹೋಗಲು, ಆಗಲೂ ಆ ಶಿವನು ಅದಂ ಒಡಂಬಡುವನಲ್ಲ, ಅಥವಾ ಒಪ್ಪಿದರೂ ಅದಂ ನಿರ್ವಹಿಸಲಾರನು, ಅದೆಂತೆನೆ—ಕಾಶೀಕ್ಷೇತ್ರದೊಳ್ ಪರಮಭಕ್ತನಾದ ದೂರ್ವಾಸಋಷಿಯು ಕೊಟ್ಟ ಶಾಪವಂ ಒಪ್ಪಿಕೊಂಡನಲ್ಲವೇ ಮರಳಿ ಆ ಋಷಿಯಂ ಏನೂ ಮಾಡಲಿಲ್ಲವಾದಕಾರಣ ತನ್ನ ಭಕ್ತರು ಏನುಮಾಡಿದರೂ ಅದಂಸಹಿಸುವನು, ಅದರಿಂದ ಪರಮದಯಾನಿಧಿಯಾದ ಭಕ್ತವತ್ಸಲನಾದ ಪಾರ್ವತೀಪತಿಯಾದ ಪರಮೇಶ್ವರನ ಅಭಿಮತವಿಲ್ಲದೇ ಎಲ್ಲಕಾಲಂಗಳಲ್ಲಿಯೂ, ಅನನ್ಯಮನಸ್ಕರಾಗಿ, ಪಾಶುಪತವ್ರತವಲ್ಲಿಯೇ ಪರಾಯಣರಪ್ಪ ಮತ್ತೂ ಬಹುಪರಾಕ್ರಮಶಾಲಿ

ಗಳಾದ ಈ ತ್ರಿಪುರರೆಂಬ ಮಹಾದೈತ್ಯರಂ ನಾನು ಸಂಹರಿಸುವೆನೆಂದು ಯಾರೂ ಮನಸಿನಲ್ಲಿ ಕೂಡಾ ಯೋಚಿಸಬಾರದೆಂದು ಹೇಳಿ ಸಂತೃಪ್ತಿತ ಬ್ರಹ್ಮಾದಿ ದೇವತೆಗಳೊಡಗೂಡಿ ಕೈಲಾಸಕ್ಕೆ ಪೋಗಿ, ಬಾಗಿಲಲ್ಲಿ ನಿಂದಿರುವ ನಂದೀಶ್ವರನಂ ಕುರಿತು ತಾವು ಬಂದಿರುವ ಪರಿಯಂ ಪರಮೇಶ್ವರನಿಗೆ ತಿಳುಹಿಸಬೇಕೆಂದು ನುಡಿಯಲಾನಂದಿಯು ಶಿವನಿದ್ದೆಡೆಗೆ ಪೋಗಿ ಮನವಿಯಂ ಮಾಡಿ ವಿಷ್ಣುವೇ ಮೊದಲಾದ ದೇವತೆಗಳು ಬಂದಿರುವರೆಂದು ಬಿನ್ನವಿಸಲು, ಅದಂ ಕೇಳಿ ಪರಮೇಶ್ವರನು ಇಲ್ಲಿಗೆ ಕರೆತರುವುದೆಂದು ಅಪ್ಪಣೆಯಂ ಕೊಡಲಾಕ್ಷಣದಲ್ಲಿಯೇ ನಂದಿಯು ಎಲ್ಲರಂ ಕರೆತಂದು ಪರಶಿವನ ಸನ್ನಿಧಿಯಲ್ಲಿ ಬಿಡಲು, ಆಗ ವಿಷ್ಣು ಮೊದಲಾದ ದೇವತೆಗಳೆಲ್ಲರೂ ಶತರುದ್ರೀಯ ಸೂಕ್ತದಿಂ ಸ್ತುತಿಯಂಗೈಯುತ್ತ ಅಡಿಗಡಿಗೆ ಪ್ರಣಾಮವಂ ಮಾಡುತ್ತಲಿರುವುದಂ ಕಂಡು ಕರುಣಾಶಾಲಿಯಾದ ಪರಶಿವನು ಕಟಾಕ್ಷದಿಂ ವೀಕ್ಷಿಸಿ, ವಿಷ್ಣು ಮೊದಲಾದ ದೇವತೆಗಳಂ ಕುರಿತು ನೀವೆಲ್ಲರೂ ಒಂದಾಗಿ ಬರುವುದಕ್ಕೆ ಕಾರಣವೇನೆಂದು ಕೇಳಲಾಗ ಪುರುಷೋತ್ತಮನಾದ ನಾರಾಯಣನು ಮತ್ತೆ ಪರಮೇಶ್ವರನಿಗೆ ಅಭಿವಂದಿಸಿ ಎಲೈ ಮಹಾದೇವನೇ! ತ್ರಿಪುರರೆಂಬ ಸುಳಿಘಾಳಿಯಲ್ಲಿ ದೇವತೆಗಳೆಂಬ ತೃಣಗಳು ಸಿಕ್ಕಿ ಬಳಲಿ ಪೆಂಡಾಗಿರುವ ಅಭಿಪ್ರಾಯವಂ ವಿಸ್ತಾರವಾಗಿ ತಿಳುಹಿ, ಮತ್ತೂ ಅಡಿಗಡಿಗೆ ಸ್ತುತಿಯಂ ಮಾಡುತ ಪುಕ್ಕಳಾದ ನಮ್ಮ ಅಪರಾಧಗಳು ಏನಿದ್ದರೂ ಮನಸಿಕ್ಕೆ ತಾರದೆ ಉದ್ಧಾರವಂ ಮಾಡಲೋಸುಗ ತ್ರಿಪುರರೆಂಬ ದೈತ್ಯರಂ ನಿಗ್ರಹಿಸಿ ನಮ್ಮ ಪದವಿಯಂ ನಾವೇ ಅನುಭವಿಸುವಂತೆ ಕರುಣಿಸಬೇಕೆಂದು ವಿಜ್ಞಾಪನೆಯಂ ಮಾಡಲು, ಅದಂ ಕೇಳಿ ಭಕ್ತಪರಾಧೀನನಾದ ಮೃತ್ಯುಂಜಯನು ಖಿನ್ನಮನಸನಾಗಿ ಮೊರೆಯಿಡುವ ವಿಷ್ಣು ಮೊದಲಾದ ದೇವತೆಗಳಂ ಕುರಿತು ಕೇಳಿರೈ ದೇವತೆಗಳಿರಾ! ಭಕ್ತರು ಮಾಡುವ ಪ್ರಯತ್ನವು ಎನ್ನಮೇಲೆ ಸಾಗುವವಲ್ಲದೆ ನಾನು ಮಾಡುವ ಪ್ರಯತ್ನವು ಅವರ ಮೇಲೆ ಎಳ್ಳನಿತು ಸಾಗಲಾರದು, ಇಂತಿರುವಲ್ಲಿ ಮಿಗಿಲಾದವರಮಾಡೇನು? ವ್ಯರ್ಥವಾಗಿ ಯಾಕೆ ಮೊರೆಯಿಡುವಿರಿ, ಮತ್ತೂ ಅವರಿಗೆ ಬೇಕಾದ ವರವನ್ನಿತ್ತು ಎನ್ನಲ್ಲಿ ಭಕ್ತಿಯುಳ್ಳಂತು ಮಾಡಿದ ಈ ಚಾತುರ್ಯವಂ ಕೇಳಿರಿ,

ಎಂದು ಹೇಳಲಾಗ ದೇವತೆಗಳೆಲ್ಲರೂ ಒಂದಾಗಿ ಆಲೋಚನೆಯಂ ಮಾಡಿ ಮೊದಲು ಮಹಾವಿಷ್ಣುವು ಪರಮೇಶ್ವರನು ಸನ್ಮತನಾದರೆ, ಕ್ಷಣಾರ್ಧದಲ್ಲಿ ತ್ರಿಪುರರಂ ಸಂಹರಿಸುವನೆಂದು [illegible]ವ್ಯಕ್ತಿರೂಪನಾದ ಕಾರಣ ಅವಕ್ಕೆ ತಕ್ಕ ಉಪಾಯವಂ [illegible] ಅವರ ಸಂಗತಿಯನ್ನು ತಿಳಿಸಿ ಸಖ್ಯವಂ ಮಾಡಿ, [illegible]ವಂ ಸಿದ್ಧಪಡಿಸಿ ತಾವು ಮಾಡುವ ಉಪಾಯವಂ ಬ್ರಹ್ಮ[illegible] ತಿಳಿಸಿ, ಅವನ ಮುಖದಿಂ ಲಕ್ಷ್ಮೀಪತಿಗೆ ಶ್ರುತಪಡಿಸಿ, ಮತ್ತು ಅನಂತರ [illegible]ರಂ ಕುರಿತು ಎಲೈ ಬ್ರಹ್ಮ ವಿಷ್ಣುಗಳಿರಾ! ನೀವಿರ್ವರೂ ಒಂದಾಗಿ ನಮ್ಮ ಅಭಿಪ್ರಾಯವೇ ನಿಮ್ಮ ಅಭಿಮತವೆಂದು ನಮ್ಮ ಒಡೆಯನಾದ ಗೌರೀರಮಣನಿಗೆ ತಿಳುಹಿ, ಸರ್ವೋಪಾಯದಿಂದಲೂ ಒಡಂಬಡಿಸುವದಲ್ಲದೇ ನಿಸ್ತರಿಸಲಾರೆವೆಂದು ಮೊರೆಯಿಡುವ ದೇವತೆಗಳ ಸಿದ್ಧಾಂತವಂ ನಿರಾಕರಿಸಲಾರದೇ ತಂದೆಮಕ್ಕಳಿರ್ವರೂ ಒಂದಾಗಿ, ಜಗದಾಧಾರನಾದ, ಪಶುಪತಿಯಾದ ಪರಮೇಶ್ವರನಿಗೆ ಮರಳಿ ಸಾಷ್ಟಾಂಗ ಪ್ರಣಾಮವಂ ಮಾಡಿ ಪರಿಪರಿಯಾದ ಸ್ತೋತ್ರವಂ ಮಾಡಿ ಎಲೈ ಪಾರ್ವತೀಪತಿಯಾದ ಪರಮೇಶ್ವರನೇ! ಇನ್ನು ಉಪೇಕ್ಷೆಯಂ ಮಾಡಿದರೆ ಸಹಿಸಲಾರೆವು ಸರ್ವಪ್ರಕಾರದಿಂದಲೂ ತ್ರಿಪುರರೆಂಬ ದೈತ್ಯರಂ ಸಂಹರಿಸಿ ನಮ್ಮಂ ಉದ್ಧರಿಸಬೇಕೆಂದು ಮೊರೆಯಿಡುತಲಿರುವ ವಿಷ್ಣು ಮೊದಲಾದ ದೇವತೆಗಳಂ ನೋಡಿ ದಯಾಪೂರ್ಣಹೃದಯನಾದ ಪರಮೇಶ್ವರನು, ಅವರಂ ಕುರಿತು ಎಲೈ ವಿಷ್ಣುಮೊದಲಾದ ದೇವತೆಗಳಿರಾ! ಬರಿದೆ ನನ್ನಂ ಯಾತಕ್ಕೆ ಪೀಡಿಸುವಿರಿ, ನನ್ನ ಯತ್ನವು ಭಕ್ತರ ಮೇಲೆ ನಡೆಯುವದಿಲ್ಲವೆಂದು ಖಂಡಿತವಾಗಿ ಹೇಳಲಾದಾತಂ ಕೇಳಿ, ಶ್ರೀಮಹಾವಿಷ್ಣುವು ಮತ್ತು ಪರಮೇಶ್ವರನಂ ಕುರಿತು ಎಲೈ ಪಾರ್ವತೀಪತಿಯಾದ ಪರಮೇಶ್ವರನೇ! ಈ ತ್ರಿಪುರರೆಂಬ ದೈತ್ಯರಿಗೋಸುಗ ಸಮಸ್ತ ದೇವತೆಗಳಂ ಉಪೇಕ್ಷಿಸುವುದುಚಿತವೇ? ಮತ್ತು ನೀನು ನಿಮಿತ್ತಮಾತ್ರ ಸಮ್ಮತಿಸಿದರೆ ನಾವು ಮಾಡಿರುವ ಸಾಧನದಿಂದಲೇ ಈ ತ್ರಿಪುರರೆಂಬ ದೈತ್ಯರು ನಿಶ್ಶೇಷವಾಗಿ ಹತರಾಗುವರು ಸಂದೇಹವಿಲ್ಲವೆಂದು ನುಡಿಯಲು, ಅದಂ ಕೇಳಿ ಪರಮಾತ್ಮನಾದ ಪರಶಿವನು ನಸುನಗುತ ಆವೇನು ಸಾಧನವಂ ಮಾಡಿರುವಿರಿ, ಎಂದು ವಿಷ್ಣು ಮೊದಲಾದವರಂ ಕುರಿತು ಕೇಳೆ

ರದು, ಈ ಅಭಿಪ್ರಾಯವಂ ವಿಷ್ಣು ಬ್ರಹ್ಮ ಮೊದಲಾದ ದೇವತೆಗಳ್ಗೆ ತಿಳಿಯಿಸಿ, ಆಬಳಿಕ ಅವಕ್ಕೆ ತಕ್ಕ ಉಪಾಯವಂ ಮಾಡುವೆನೆಂದು ಮನದೋಳ್ ನಿಶ್ಚೈಸಿ ಆ ಮೂರು ಪುರವ ನೇತ್ರದಿಂದ ನೋಡುವುದಕ್ಕೆ ಉಪಕ್ರಮಿಸಿ, ಕೆಲವು ಕಾಲನೋಡಿದರೆ ಜಗತ್ಸಂಹಾರಕಾಲದಲ್ಲಿ ಬ್ರಹ್ಮಾಂಡವಂ ಭಸ್ಮವಂ ಮಾಡುವ ನೇತ್ರದ ನೋಟವು ಆ ಮೂರು ಪುರದ ಪ್ರಾಕಾರದ ಹೊರಬಾಗಿಲಲ್ಲಿರುವ ತೃಣಗಳನ್ನು ಕೂಡಾ ದಹಿಸದೇ ಇರಲು, ಆಗ ಇಂದ್ರಾದಿದೇವತೆಗಳೆಲ್ಲರೂ ಆಶ್ಚರ್ಯಗೊಂಡು ಪರಮೇಶ್ವರನ ಶಕ್ತಿಪ್ರಭಾವವಂ ಕೊಂಡಾಡುತ್ತ, ಮುಂದೇನು ಗತಿಯೆಂದು ಬಾಯಿಬಾಯಿ ಬಿಡುತ್ತಿರುವುದಂ ಕಂಡು ಕರುಣಾಶಾಲಿಯಾದ ಪರಮೇಶ್ವರನು ಸರ್ವಪ್ರಕಾರದಿಂದಲೂ, ಆರ್ತರಾದ ಈ ಇಂದ್ರಾದಿ ದೇವತೆಗಳಂ ರಕ್ಷಿಸಬೇಕೆಂದು ಮನದೋಳ್ ನಿಶ್ಚೈಸಿ, ತ್ರಿಪುರರೆಂಬ ದೈತ್ಯರಂ ಸಂಹರಿಸಬೇಕೆಂಬ ಕೋಪವುಂಟಾಗಿ ಲಕ್ಷ್ಮೀಪತಿಯಾದ ಶ್ರೀ ಮಹಾವಿಷ್ಣುವಂ ಕುರಿತು, ಕೇಳೈ ಪುರುಷೋತ್ತಮನೇ! ಈ ತ್ರಿಪುರರೆಂಬ ದೈತ್ಯರಂ ಸಂಹರಿಸಲೋಸುಗ ನೀವು ಮಾಡಿದ ಸಾಧನಂಗಳೇನಾದವು, ಮತ್ತು ನಾನು ಮಾಡಿದ ಪ್ರಯತ್ನವೇನಾಯಿತು, ನೋಡಿದೆಯಾ, ಮುಂದೆ ಏನುಮಾಡಬೇಕೆನಲು, ಆಗ ಮಹಾವಿಷ್ಣುವು ಹಿಂದೆಮುಂದೆ ತೋರದೇ ಸುಮ್ಮನೇ ಇರಲು, ಆಗ ಪರಶಿವನು ತನ್ನ ಮನದೋಳ್ ದೇವತೆಗಳೆಲ್ಲರೂ ಅತ್ಯಂತ ಪ್ರಯತ್ನವಂ ಮಾಡಿ ಏನೂ ಸಾಗದೇ ಮುಖದೋಳ್ ಕಳೆಗುಂದಿ ನಿರ್ವಿಣ್ಣರಾಗಿ ಇರುವುದಂ ಕಂಡು ಕೃಪೆಯಿಂದ ಮುಂದಣ ಸಂಗತಿಯಂ ನಿಶ್ಚೈಸಿ ಬಾಣರೂಪನಾಗಿರುವ ನಾರಾಯಣನಂ ಕುರಿತು ನೀನು ಪ್ರೀತಿಗಿ ತ್ರಿಪುರವಂ ಹೊಕ್ಕು ನಿನ್ನ ಸಕಲ ಮಾಯೆಯಿಂದ ಆ ದೈತ್ಯರಿಗೆ ನನ್ನಲ್ಲಿರುವ ಭಕ್ತಿಯು ಅವರ ಪತ್ನಿಯರ ಪಾತಿವ್ರತ್ಯವಂ ಕೂಡಾ ಕೆಡಿಸಿದಲ್ಲದೇ ನೇತ್ರದಿಂದುಂಟಾದ ಅಗ್ನಿಯು ಅವರಂ ಏನೂ ಮಾಡಲಾರದು, ಅದುಕಾರಣ ಈಗಲೇ ನೀನು ತೆರಳುವನಾಗು, ನಾನು ಅದುವರೆಗೂ ಈ ಮೂರು ಪುರವಂ ಮೂರು ನೇತ್ರಂಗಳಂ ನೋಡುತ್ತಿರುವೆನೆಂದು ಹೇಳಿ ಕಳುಹಲು, ಆಗ ವಿಷ್ಣುವು ಯೋಗಿನೀ ವೇಷವಂ ಧರಿಸಿ ತನ್ನ ಮಾಯೆಯಂತೆ ಮಾಡಿಕೊಂಡು ಆರನ್ನರೂ ಆತ್ರಿಪುರವಂ

ಪ್ರೋಕ್ತ ನಾನಾವಿಧ ಉಪಾಯದಿಂದ ಆ ದೈತ್ಯರ ಸನ್ಮಾರ್ಗವಂ ಕೆಡಿಸುವುದಕ್ಕೆ ದಿವ್ಯ ಸಹಸ್ರವರ್ಷ ಅವಕಾಶವಾಗಲು, ಆ ಸಮಯದಲ್ಲಿ ಸರ್ವದೇವೋತ್ತಮನಾದ ಪರಮೇಶ್ವರನು ತ್ರಿಲೋಕ ಕಂಟಕರಾದ ಆ ತ್ರಿಪುರದೈತ್ಯರಂ ಸಂಹರಿಸಿ ದೇವತೆಗಳೇ ಮೊದಲಾದ ಪ್ರಾಣಿಗಳಂ ರಕ್ಷಿಸುವೆನೆಂದು ಮೂರು ಪುರಗಳಂ ರೆಪ್ಪೆಗಳು ಮುಚ್ಚದೇ ಮೂರು ಕಣ್ಣುಗಳಿಂದಲೂ ದಿವ್ಯಸಹಸ್ರ ವರ್ಷ ನಿರೀಕ್ಷಿಸುತ್ತಿರಲು, ಆ ವೀಕ್ಷಣದಿಂದುಂಟಾದ ಕಣ್ಣೀರುಗಳು ಬಿಂದುಬಿಂದುಗಳಾಗಿ ಬೀಳಲು, ಆ ಬಿಂದುಗಳಲ್ಲಿ ಕೆಲವು ಆ ಮೂರು ಪುರಗಳಂ ಭಸ್ಮವಂ ಮಾಡುವೆನೆಂಬ ರೌದ್ರರಸದಿಂಕೂಡಿ ಬೀಳಲು, ಆಗ ದೇವತೆಗಳೇ ಮೊದಲಾದ ಚರಾಚರಪ್ರಾಣಿಗಳಿಗೆ ಸೌಖ್ಯವನ್ನುಂಟು ಮಾಡುವುದಕ್ಕೋಸುಗ ಮೂರು ಪುರಗಳಂ ದಹಿಸುವುದಕ್ಕೆ ಕಾರಣವಾಯಿತು, ಮತ್ತೆ ಕೆಲವು ಬಿಂದುಗಳು ಮೂರು ಲೋಕಗಳಂ ರಕ್ಷಿಸುವೆನೆಂಬ ಕರುಣಾರಸದಿಂದ ಕೂಡಿ ಭೂಮಿಯಲ್ಲಿ ಬಿದ್ದು ಸಮಸ್ತ ಪ್ರಾಣಿಗಳ ದುರ್ಲಕ್ಷಣ, ದೌರ್ಭಾಗ್ಯ, ದುಷ್ಕರ್ಮ, ದುಃಖಾಚಾರಂಗಳಂ ಪರಿಹರಿಸಿ ಸದ್ಗತಿಯಂ ಕೊಡುವೆವೆಂದು ಮೂವತ್ತೆಂಟು ಬಗೆಯಾಗಿ, ಮೂವತ್ತೆಂಟು ಮಹಾರುದ್ರಾಕ್ಷಿಯ ವೃಕ್ಷಗಳಾಗಿ ಪುಟ್ಟಿದವು, ಆ ವೃಕ್ಷಂಗಳು ಶಿವನಂತೆ ಸರ್ವದೇವತೆಗಳಿಂದ ವಂದನೀಯವಾಗಿ ಇರುವುವು. ಇಂತಪ್ಪ ರುದ್ರಾಕ್ಷ ವೃಕ್ಷವಲ್ಲಿ ಉಂಟಾದ ಫಲವಂ ಯಾರು ಅಂಗಗಳಲ್ಲಿ ಧರಿಸುವರೋ ಅವರು ಸರ್ವಭೂತಂಗಳಿಂದಲೂ ಜೈಸುವುದಕ್ಕೆ ಅಶಕ್ಯರಾಗಿ, ನಮಸ್ಕಾರಯೋಗ್ಯರಾಗಿ ಭೂಮಿಯಲ್ಲಿ ರುದ್ರನಂತೆ ಸಂಚರಿಸುತ್ತಿರುವರು; ಮತ್ತೂ ರುದ್ರಾಕ್ಷ ವೃಕ್ಷಂಗಳು ಮೂವತ್ತೆಂಟು ಬಗೆಯುಂತಾದುದೆಂದರೆ:— ಸೂರ್ಯನೇತ್ರದಿಂದ ಪುಟ್ಟಿದ ಬಿಂದುಗಳಲ್ಲಿ ಹನ್ನೆರಡು ಬಿಂದುಗಳು ಹನ್ನೆರಡು ಜಾತಿಯಾಗಿ ರಜೋಗುಣದಿಂ ಕೂಡಿದ ಕಪಿಲವರ್ಣವಾಗಿ ಪುಟ್ಟಿದವು, ಚಂದ್ರನೇತ್ರದಿಂ ಪುಟ್ಟಿದ ಹದಿನಾರು ಬಿಂದುಗಳು ಹದಿನಾರು ಜಾತಿಯಾಗಿ ಸತ್ವಗುಣದಿಂದ ಕೂಡಿ ಶ್ವೇತವರ್ಣವಾಗಿ ಪುಟ್ಟಿದವು, ಅಗ್ನಿನೇತ್ರದಿಂ ಪುಟ್ಟಿದ ಹತ್ತು ಬಿಂದುಗಳು ಹತ್ತು ಜಾತಿಯಾಗಿ ತಮೋಗುಣಯುಕ್ತವಾಗಿ ಕೃಷ್ಣವರ್ಣವಾಗಿ ಪುಟ್ಟಿದವು, ಈ ವೃಕ್ಷಂ

ಗಳಲ್ಲಿ ಪುಟ್ಟಿದ. ಸ್ಥೂಲವಾಗಿರುವ ರುದ್ರಾಕ್ಷಗಳ ಧಾರಣದಿಂದ ಪಾತಕಗಳು ಉಂಟಾಗುವುದು, ನೆಲ್ಲಿಯ ಫಲದ ಗಾತ್ರವಾಗಿರುವ ರುದ್ರಾಕ್ಷವು ಉತ್ತಮವು, ಎಲಚಿಯಹಣ್ಣಿನಂತೆ ದಪ್ಪವಾಗಿರುವುವು, ಮಧ್ಯಮವು, ಕಡಲೇ ದಪ್ಪವಿರುವವು ಅಧಮವು, ಇಂತಲ್ಲದೇ ರುದ್ರಾಕ್ಷಂಗಳು ಈಶ್ವರಾಜ್ಞೆಯಿಂದ ವರ್ಣಕ್ರಮದಿಂದ ಕ್ರಮವಾಗಿ ಬ್ರಹ್ಮ ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಗಳಾದವು. ಆಯಾಯ ಜಾತಿಗಳು ಆಯಾಯ ಜಾತಿಯ ರುದ್ರಾಕ್ಷಂಗಳಂ ಧರಿಸಲು ಶುಭವನ್ನುಂಟು ಮಾಡುವುವು, ಅದೆಂತೆಂದರೆ-ಶ್ವೇತವರ್ಣವಾದ ರುದ್ರಾಕ್ಷವು ಬ್ರಾಹ್ಮಣನಿಗೆ, ರಕ್ತವರ್ಣವಾದ ರುದ್ರಾಕ್ಷವು ಕ್ಷತ್ರಿಯರಿಗೆ, ಪೀತವರ್ಣವಾದ ರುದ್ರಾಕ್ಷವು ವೈಶ್ಯರಿಗೆ, ಕೃಷ್ಣವರ್ಣವಾದ ರುದ್ರಾಕ್ಷವು ಶೂದ್ರನಿಗೆ, ಈ ಪರಿಯಿಂ ಧರಿಸಲು ಯೋಗ್ಯವು, ರುದ್ರಾಕ್ಷಗಳಲ್ಲಿ ತಾವು ವರ್ಣವಾಗಿ ರಸವತ್ತಾಗಿಯೂ. ದೃಢವಾಗಿಯೂ, ದಪ್ಪವಾಗಿಯೂ, ಬಹಳ ಮುಳ್ಳುಗಳು ಉಳ್ಳದ್ದಾಗಿಯೂ, ಮತ್ತೊಬ್ಬರು ಧಾರಣೆಯಂ ಮಾಡದೆ ಹೊಸದಾಗಿರುವ ರುದ್ರಾಕ್ಷಗಳು ಶುಭವನ್ನುಂಟು ಮಾಡುವವು, ಹುಳುಕಾಗಿ ಭಿನ್ನವಾಗಿ ಸಣ್ಣನಾಗಿ, ಮುಳ್ಳುಗಳು ಇಲ್ಲದೇ ಜಳ್ಳಾಗಿ, ಎರಡು ನಾಭಿ ಉಳ್ಳದ್ದಾಗಿ ಉದ್ದವಾಗಿರುವ ರುದ್ರಾಕ್ಷಂಗಳು ಪ್ರಶಸ್ತಗಳಲ್ಲ. ಒಂದು ನಾಭಿ ಉಳ್ಳದ್ದಾಗಿ ಪುಟ್ಟಿದ ರುದ್ರಾಕ್ಷವು ಸರ್ವೋತ್ತಮವು. ಮನುಷ್ಯರು ಮಾಡಿದ ನಾಭಿ ಉಳ್ಳ ರುದ್ರಾಕ್ಷವು ಮಧ್ಯಮವು, ರಸವತ್ತಾಗಿ ದೃಢವಾಗಿ ಪಕ್ವವಾಗಿ ಅಪರಂಜಿಯ ಒರೆಗೆ ಸರಿಯಾಗಿರುವ ಜರೆ ಉಳ್ಳದ್ದಾಗಿ ಸಮವಾಗಿರುವ ರುದ್ರಾಕ್ಷಂಗಳಂ ಬಿಳಿಯ ಪಟ್ಟುದಾರದಲ್ಲಿ ಪೋಣಿಸಿ ಮಧ್ಯದಲ್ಲಿ ಗಂಟುಗಳಂ ಹಾಕಿ ಯಾರು ಧರಿಸುವರೋ ಅವರು ಶಿವಸ್ವರೂಪರಾಗುವರು ರುದ್ರನ ನೇತ್ರದಿಂ ಪುಟ್ಟಿದುದಾವ ಕಾರಣ ರುದ್ರಾಕ್ಷವೆಂಬ ಹೆಸರುಂಟಾಯಿತು ಈ ರುದ್ರಾಕ್ಷದ ಕೆಳಗಿನಭಾಗದಲ್ಲಿ ಬ್ರಹ್ಮನು, ನಾಳದಲ್ಲಿ ನಾರಾಯಣನು, ಅಗ್ರಭಾಗದಲ್ಲಿ ಶಿವನು. ಕೇಸರಗಳಲ್ಲಿ ಸಮಸ್ತ ದೇವತೆಗಳು ಕೂಡಿ ವಾಸವಂ ಮಾಡುವುದರಿಂದ ರುದ್ರಾಕ್ಷವು ಮೋಕ್ಷಪ್ರದವಾಯಿತು. ಇಂತಪ್ಪ ರುದ್ರಾಕ್ಷವಂ ನಿರಂತರವು ಧರಿಸಬೇಕಾದರೆ, ಕಂಠದಲ್ಲಿ ಮೂವತ್ತೆರಡು

ಎರಡುಮಣಿಕಟ್ಟಿನಲ್ಲಿಯೂ ಹನ್ನೆರಡು ಹನ್ನೆರಡು. ಎರಡು ತೋಳುಗಳಲ್ಲಿ ಹದಿನಾರು ಹದಿನಾರು, ಎರಡು ಕಿವಿಗಳಲ್ಲಿ ಆರು ಆರು, ಕಂಠಸ್ಥಾನದಲ್ಲಿ ಒಂದು ಅಂತೂ ನೂರೊಂದು ರುದ್ರಾಕ್ಷಿಗಳಂ ಸರ್ವದಾ ಧರಿಸಬೇಕು. ಪ್ರೋಕ್ಷಾವಿಶೇಷಕಾಲಂಗಳಲ್ಲಿ ಒಂದು ಮುಖ ಮೊದಲುಗೊಂಡು ಹದಿನಾಲ್ಕು ಮುಖದ ರುದ್ರಾಕ್ಷಿಯವರೆಗೆ ಧರಿಸಬೇಕಾದರೆ ಸ್ಥಳಗಳ್ಯಾವ್ಯಾವೆಂದರೆ—ಶಿಖೆಯಲ್ಲಿ ಏಕಮುಖದ ಒಂದು ರುದ್ರಾಕ್ಷಿಯಂ ಶಿರಸ್ಸಿನಲ್ಲಿ ಎರಡು ಮುಖ, ಮೂರು ಮುಖ, ಹನ್ನೆರಡು ಮುಖಗಳುಳ್ಳ ಈ ಮೂರು ರುದ್ರಾಕ್ಷಿಗಳಂ ಧರಿಸಬೇಕು. ನಡುತಲೆಯಲ್ಲಿ ಇಪ್ಪತ್ತೊಂದು ಮುಖವುಳ್ಳ ಮುವ್ವತ್ತಾರು ರುದ್ರಾಕ್ಷಿಗಳಂ ಕಿವಿಗಳಲ್ಲಿ ಹತ್ತು ಮುಖ, ಏಳು ಮುಖ, ಐದುಮುಖಗಳುಳ್ಳ ಆರಾರುರುದ್ರಾಕ್ಷಿಗಳಂ ಕಂಠದಲ್ಲಿ ಎಂಟು ಮುಖ, ಆರು ಮುಖವುಳ್ಳ ಮುವ್ವತ್ತೆರಡು ರುದ್ರಾಕ್ಷಿಗಳಂ, ವಕ್ಷಸ್ಥಲದಲ್ಲಿ ನಾಲ್ಕು ಮುಖವುಳ್ಳ ಐವತ್ತು ರುದ್ರಾಕ್ಷಿಗಳಂ, ತೋಳುಗಳಲ್ಲಿ ಹದಿಮೂರು ಮುಖವುಳ್ಳ ಹದಿನಾರು ಹದಿನಾರು ರುದ್ರಾಕ್ಷಿಗಳಂ, ಮಣಿಕಟ್ಟಿನಲ್ಲಿ ಒಂಭತ್ತು ಮುಖವುಳ್ಳ ಹನ್ನೆರಡು ಹನ್ನೆರಡು ರುದ್ರಾಕ್ಷಿಗಳಂ ಯಜ್ಞೋಪವೀತಸ್ಥಾನಕ್ಕೆ ಹದಿನಾಲ್ಕು ಮುಖವುಳ್ಳ ನೂರೆಂಟು ರುದ್ರಾಕ್ಷಿಗಳಂ, ಈ ಪರಿಯಾಗಿ ಧರಿಸಬೇಕು. ಒಂದು ಮುಖ ಮೊದಲಾಗಿ ಹದಿನಾಲ್ಕು ಮುಖದವರೆಗೆ ರುದ್ರಾಕ್ಷಿಗಳು ದೊರಕದೆಹೋದಲ್ಲಿ ಎಷ್ಟು ಮುಖದ ರುದ್ರಾಕ್ಷಿಗಳು ದೊರಕುವವೋ ಆ ರುದ್ರಾಕ್ಷಿಗಳಂ ಮೇಲೆ ಹೇಳಿರುವ ಸ್ಥಾನಗಳಲ್ಲಿ ಆಯಾಯ ಕ್ರಮವಾಗಿ ಧರಿಸಬೇಕು. ಮೇಲೆ ಹೇಳಿದ ಸಂಖ್ಯೆಗೆ ಸರಿಯಾಗಿ ದೊರೆಯದೇ ಇದ್ದರೆ ದೊರಕಿದಷ್ಟದರೂ ಹೇಳಿರುವ ಸ್ಥಾನಗಳಲ್ಲಿ ಧರಿಸಬೇಕು, ಇಂತುಮಲ್ಲದೇ ಏಕಮುಖದ ರುದ್ರಾಕ್ಷವು ಪರತತ್ವ ಸ್ವರೂಪವು ಆದ್ದರಿಂದ ಜಿತೇಂದ್ರಿಯನಾಗಿ ಈ ರುದ್ರಾಕ್ಷಿಯಂ ಧರಿಸಿದವನು ಪರತತ್ವದಲ್ಲಿಯೇ ಲೀನನಾಗುವನು, ಎರಡು ಮುಖದ ರುದ್ರಾಕ್ಷಿಯು ಅರ್ಧನಾರೀಶ್ವರ ಸ್ವರೂಪವು, ಇದಂ ಧಾರಣೆಯಂ ಮಾಡಿದರೆ ಅರ್ಧನಾರೀಶ್ವರನು ಪ್ರಸನ್ನನಾಗುವನು, ಮೂರು ಮುಖದ ರುದ್ರಾಕ್ಷಿಯು ಅಗ್ನೀಶ್ವರ ಸ್ವರೂಪವು ಇದಂ ಧರಿಸಿದರೆ ಸ್ತ್ರೀಹತ್ಯಾ ಪಾಪವಂ ಪರಿಹರಿಸುವುದು, ನಾಲ್ಕುಮುಖದ ರುದ್ರಾ

ಕ್ಷಿಯು ಬ್ರಹ್ಮಸ್ವರೂಪವಾದಕಾರಣ ಮನುಷ್ಯಹತ್ಯಾದೋಷವಂ ಪರಿಹರಿಸುವುದು, ಐದು ಮುಖದ ರುದ್ರಾಕ್ಷಿಯು ಕಾಲಾಗ್ನಿ ರುದ್ರಾತ್ಮಕಸ್ವರೂಪವಾದಕಾರಣ ಅಗಮ್ಯಾಗಮನ ಅಭಕ್ಷ್ಯಭಕ್ಷಣಮೊದಲಾದ ಪಾಪನಾಶವಂ ಮಾಡುವುದು, ಆರು ಮುಖದ ರುದ್ರಾಕ್ಷಿಯು ಷಣ್ಮುಖಸ್ವರೂಪವಾದಕಾರಣ ಅದರ ಧಾರಣಾ ಮಾತ್ರದಿಂದಲೇ ಬ್ರಹ್ಮಹತ್ಯಾದಿ ಸಕಲ ಮಹಾಪಾತಕಂಗಳು ಪರಿಹಾರವಾಗುವುವು, ಏಳು ಮುಖದ ರುದ್ರಾಕ್ಷವು ಏಳು ಹೆಡೆಯ ಸರ್ಪಾತ್ಮಕವಾದಕಾರಣ ಸ್ವರ್ಣಸ್ತೇಯಾದಿ ಪಾತಕವಂ ಪರಿಹರಿಸುವುದು, ಎಂಟು ಮುಖದ ರುದ್ರಾಕ್ಷಿಯು ವಿಘ್ನೇಶ್ವರಸ್ವರೂಪವಾದಕಾರಣ ಅದರ ಧಾರಣದಿಂದ ಸರ್ವವಿಘ್ನವೂ ನಾಶವಾಗುವುದು, ಒಂಭತ್ತು ಮುಖದ ರುದ್ರಾಕ್ಷವು ಭೈರವಸ್ವರೂಪವಾದಕಾರಣ ಇದಂ ಧರಿಸಲು ಭ್ರೂಣಹತ್ಯಾದೋಷವು ಪರಿಹಾರವಾಗುವುದು. ಹತ್ತು ಮುಖದ ರುದ್ರಾಕ್ಷವು ಸಾಕ್ಷಾಜ್ಜನಾರ್ದನಸ್ವರೂಪವು, ಇದಂ ಧರಿಸಲು ಸಮಸ್ತಪಾಪವು ಪರಿಹಾರವಾಗುವುದು, ಹನ್ನೊಂದು ಮುಖದ ರುದ್ರಾಕ್ಷವು ಏಕಾದಶರುದ್ರಾತ್ಮಕವಾದ್ದರಿಂದ ಇದಂ ಧರಿಸಲು ಕರುವಿನಿಂ ಕೂಡಿದ ಕೋಟಿ ಗೋವುಗಳ ದಾನದಿಂದುಂಟಾದ ಫಲಬರುವುದು, ಹನ್ನೆರಡು ಮುಖದ ರುದ್ರಾಕ್ಷವು ದ್ವಾದಶಾದಿತ್ಯಾತ್ಮಕವಾದ್ದರಿಂದ ಇದಂ ಧರಿಸಲು ಸಮಸ್ತಸ್ವಾರ್ಥಕಾರ್ಯಪ್ರವರ್ತಕ ಶಿವಸ್ವರೂಪವನ್ನುಂಟುಮಾಡುವುದು, ಹದಿಮೂರು ಮುಖದ ರುದ್ರಾಕ್ಷವು ಶಿವಾತ್ಮಕವಾದದ್ದು ಇದಂ ಧರಿಸಲು ಪಿತೃ, ಭ್ರಾತೃ, ಸುಹೃತ್ಪುತ್ರಬಂಧುಗಳೊಡಗೂಡಿ ತನ್ನ ಅನೇಕ ಪಾಪಂಗಳಂ ಮತ್ತೂ ದಾರಿದ್ರ್ಯವಂ ಕೂಡ ಹೋಗಲಾಡಿಸಿಕೊಳ್ಳುವನು. ಹದಿನಾಲ್ಕು ಮುಖದ ರುದ್ರಾಕ್ಷವು ಸದಾಶಿವಾತ್ಮಕವಾದಕಾರಣ ಇದು ದೊರಕುವುದು ದುರ್ಲಭವು ಅಥವಾ ದೊರತರೆ ಅದರ ಧಾರಣಾ ಮಾತ್ರದಿಂದಲೇ ಮಹಾಪಾತಕಂಗಳು ಮುಟ್ಟಲಂಜಿ ದೂರಂಗಳಾಗಿ ಹೋಗುವುವು, ಮತ್ತೂ ಇದಂ ಧರಿಸಲು ಸಮಸ್ತ ದೇವತೆಗಳಿಂ ವಂದ್ಯನಾಗಿ ಇರುವಲ್ಲಿ, ಸಕಲ ಭೋಗಂಗಳು ಅನುಭವಿಸಿ ಪರದಲ್ಲಿ ಮೋಕ್ಷವಂ ಪಡೆಯುವನು, ಮತ್ತೂ ಸರ್ವಕಾಲದಲ್ಲಿಯೂ ರುದ್ರಾಕ್ಷ ಧಾರಣಾ ಮಾತ್ರದಿಂದ ಬ್ರಹ್ಮಹತ್ಯೆಯು, ಮದ್ಯ

ಪಾನವು, ಸ್ವರ್ಣಸ್ತೇಯವು, ಗುರುತಲ್ಪಗಮನ, ಮಾತಾಪಿತೃವಧೆ, ಭ್ರಾತೃಹತ್ಯೆ, ಭ್ರೂಣಹತ್ಯಾ ಮೊದಲಾದ ದೋಷಂಗಳು ಭಸ್ಮವಾಗಿ ಪೋಗುವುವು, ಮತ್ತೂ ರುದ್ರಾಕ್ಷಿಯ ದರ್ಶನ, ಸ್ಪರ್ಶನ, ಸ್ಮರಣೆ ಪ್ರಾಜನ ಧಾರಣಾದಿಗಳು ಯಥಾಕಥಂಚಿತ್ ಸಂಭವಿಸಿದರೆ ಅವರಿಂದ ಸಮಸ್ತ ಪಾಪಂಗಳು ಪೋಗಿ ಮುಕ್ತನಾಗುವನು, ಮತ್ತೂ ರುದ್ರಾಕ್ಷ ಧಾರಣದ ಲಕ್ಷ್ಯದಿಂದ ಕೋಟಿ ಗೋದಾನವು, ಹತ್ತು ಸಾವಿರ ಅಶ್ವಮೇಧ, ಲಕ್ಷ ಕನ್ಯಾದಾನ, ಅನೇಕ ಭೂದಾನ, ಮೊದಲಾದ್ದು ಮಾಡಿದ ಫಲವು ಏನು ಉಂಟೋ ಆ ಫಲವು ಅನಾಯಾಸದಿಂದಲೇ ಉಂಟಾಗುವುದು, ಮತ್ತೂ ಬ್ರಾಹ್ಮಣ ಮೊದಲಾಗಿ ಚಂಡಾಲನವರಿಗೂ ರುದ್ರಾಕ್ಷಧಾರಣ ವಂ ಮಾಡಬಹುದು, ಎಂಥಾವರಿಗೂ ಕೂಡ ಸದ್ಗತಿಯಂ ಉಂಟು ಮಾಡುವುದು, ಅಥವಾ ಮರಣಕಾಲದಲ್ಲಿ ಯಾವನಾದರೂ ರುದ್ರಾಕ್ಷಿಯಂ ಧರಿಸಿದ್ದರೂ ರುದ್ರಾಕ್ಷವಂ ತೊಳೆದ ಉದಕವಂ ರುದ್ರನ ಸ್ಮರಣೆಯಂ ಮಾಡುತ ಪಾನವಂ ಗೈದನೋ ಅವನು ಸಕಲ ಪಾಪಂಗಳಂ ಪೋಗಲಾಡಿಸಿಕೊಂಡು ರುದ್ರಲೋಕವನ್ನೈದುವನು, ಮತ್ತೂ ಭಸ್ಮದಿಂ ಲಿಪ್ತವಾದ ಶರೀರ ಯುಕ್ತನಾಗಿ ಫಣಯೊಳ್ ತ್ರಿಪುಂಡ್ರವಂ ಧರಿಸಿ ಕಂಠದೊಳ್ ರುದ್ರಾಕ್ಷಮಾಲೆಯುಂ ಅಳವಡಿಸಿ ಭೂಮಿಯೊಳ್ ಸಂಚರಿಸುವನೇ ರುದ್ರಸ್ವರೂಪನಾಗಿ ಶೋಭಿಸುವನು, ಶುಭಾ ಶುಭ ಮೊದಲಾದ ನಿತ್ಯ ನೈಮಿತ್ತಿಕ ಕರ್ಮಗಳಂ ಮಾಡುವ ಕಾಲದೊಳ್ ಭಸ್ಮ ರುದ್ರಾಕ್ಷಗಳಂ ಧರಿಸಿದ್ದರೆ ಆ ಕರ್ಮಗಳು ಒಂದೊಂದೇ ಅನಂತಗಳಾಗುವುವು, ಭಸ್ಮರುದ್ರಾಕ್ಷಗಳ ಧಾರಣೆಯಂ ಮಾಡದೆ ಕರ್ಮಾಚರಣೆಯಂ ಮಾಡಿದರೆ ಅದು ನಿಷ್ಫಲವಾಗುವುದು, ಇಂಥಾ ಮಹಿಮೆಯುಳ್ಳ ರುದ್ರಾಕ್ಷಿಗಳಿಂದ ಜಪಮಾಲೆಯಂ ಮಾಡುವ ಕ್ರಮವೆಂತೆಂದರೆ—ಅಷ್ಟೋತ್ತರ ಶತ ರುದ್ರಾಕ್ಷಗಳನ್ನಾಗಲೀ, ಐವತ್ತು ರುದ್ರಾಕ್ಷಗಳನ್ನಾಗಲಿ, ಇಪ್ಪತ್ತೈದು ರುದ್ರಾಕ್ಷಗಳನ್ನಾಗಲೀ, ಇಪ್ಪತ್ತು ರುದ್ರಾಕ್ಷಗಳನ್ನಾಗಲೀ, ಹದಿನಾರು ರುದ್ರಾಕ್ಷಗಳನ್ನಾಗಲೀ, ಚಿನ್ನ ಬೆಳ್ಳಿ ತಾಮ್ರಸಲಿಗೆಯಿಂದಲಾದರೂ, ಅಥವಾ ಬಿಳಿಯ ಪಟ್ಟೆಯ ದಾರದಿಂದಲಾದರೂ ಪೋಣಿಸಿ ಮೇರುವಿನಂತೆ ಒಂದು ರುದ್ರಾಕ್ಷಿಯಂ ಹೆಚ್ಚು ಮಾಡಿ ಆ ಮಾಲಿಕೆಯಿಂದ ಪರರಿಗೆ ತ್ರಿ

ಯುವಂತೆ ಜಪವಂ ಮಾಡಬೇಕು, ಆ ಮಾಲೆಯಂ ನಡುಬೆರಳಿನ ಮೇಲೆ ಇರಿಸಿ ತರ್ಜನೀ ಹೆಬ್ಬೆಟ್ಟುಗಳಿಂದ ಆ ಮೇರು ಸ್ಥಾನವಾದ ರುದ್ರಾಕ್ಷಿಯಂ ದಾಟದೆ ಮೇರು ರೂಪವಾದ ರುದ್ರಾಕ್ಷಿಯು ಪ್ರದಕ್ಷಿಣವಂ ಮಾಡುತ ಜಪಸಂಖ್ಯೆಯಂ ಮಾಡಬೇಕು, ಅನಾಮಿಕದ ಬೆರಳ ಮೇಲೆ ಮಾಲೆಯನ್ನಿರಿಸಿ ಹೆಬ್ಬೆಟ್ಟು ಮಧ್ಯಮ ಬೆರಳುಗಳಿಂದ ಮಾನಸಿಕ ಜಪಸಂಖ್ಯೆಯಂ ಮಾಡಬೇಕು, ಮಾಲೆಯಂ ಕನಿಷ್ಠ ಬೆರಳಿನ ಮೇಲೆ ಇರಿಸಿ, ಅಂಗುಷ್ಠಾನಾಮಿಕಗಳಿಂದ ಮಾಡುವ ಜಪದ ಸಂಖ್ಯೆಯಂ ಸ್ಫುಟವಾಗಿ ಮಾಡಬೇಕು, ಕಾಮ್ಯವಾಗಿ ಮಾಡುವ ಜಪದಲ್ಲಿ ಮೇರುವಂ ಅಧೋಮುಖವಾಗಿ ಮಾಡಿ, ಮೋಕ್ಷಾರ್ಥವಾಗಿ ಮಾಡುವ ಜಪದಲ್ಲಿ ಮೇರುವಂ ಊರ್ಧ್ವಮುಖವಾಗಿ ಮಾಡಿ ಮಾಲೆಯಂ ಯೆಳೆಯಬೇಕು, ಇಂತೀ ಕ್ರಮದಿಂದ ಭಸ್ಮರುದ್ರಾಕ್ಷಿಗಳಂ ಧರಿಸಿ ಪಂಚಾಕ್ಷರಿಯಂ ಜಪಿಸುವ ಪುರುಷನೇ ಸದಾಶಿವನು, ಆ ಮಹಾನುಭಾವನ ದರ್ಶನ, ಸ್ಪರ್ಶನ, ಸಂಭಾಷಣ ಪ್ರಯೋಜನಂಗಳಂ ಯಾರು ಮಾಡುವರೋ ಅವರಿಗೆ ಇಹದೊಳ್ ಸೌಖ್ಯವು, ಪರದೊಳ್ ಶಿವಸಾಯುಜ್ಯವು ಕೂಡ ಉಂಟಾಗುವುದರಲ್ಲಿ ಸಂಶಯವಿಲ್ಲ. ಕೇಳೈ ಮಹಾನುಭಾವನೇ! ಈ ಪರಮರಹಸ್ಯಂಗಳಂ, ಪರದೇವತೆಗೆ ಪರಮಭಕ್ತನಾದ ನಿನಗೆ ನಾನು ವಿಶ್ವಾಸದಿಂ ಉಪದೇಶವಂ ಮಾಡಿದೆನು. ಇನ್ನೇನು ರಹಸ್ಯವಂ ಕೇಳಬೇಕೆಂದು ನಿನಗೆ ಅಪೇಕ್ಷೆಯಿದ್ದರೆ ಅದಂ ಕೇಳುವದೆಂದೆನಲು, ಆಗ ಸುಗಂಧಮಹಾರಾಜೇಂದ್ರನು ಹರ್ಷಪರವಶನಾಗಿ ಋಷಿಯಾದ ಪುರುಷಮೃಗನಂ ಕುರಿತು ಎಲೈ ಮಹಾನುಭಾವನೇ! ಬಿಲ್ವ, ಭಸ್ಮ, ರುದ್ರಾಕ್ಷಿಗಳ ಮಹಿಮೆಯಂ ಕೇಳಿದುದರಿಂದ ಮನದ ಸಂಶಯಗಳೆಲ್ಲ ನಿಶ್ಶೇಷವಾಗಿ ಪೋದವು, ಅಪೂರ್ವವಾದ ಒಂದು ಜ್ಞಾನ ಉದಯಿಸಿದಂತಾಯಿತು, ಆ ಜ್ಞಾನದಿಂದ ಪರಾತ್ಪರನಾದ ಪರಶಿವನ ಪಾದಪಲ್ಲವದೊಳ್ ಲೋಕಾತಿಶಯಿಯಾದ ಭಕ್ತಿಯು ದೃಢವಾಯಿತು, ಅದುಕಾರಣ ಮೊದಲು ಭಸ್ಮರುದ್ರಾಕ್ಷಗಳಂ ಧರಿಸಿ ಪಂಚಾಕ್ಷರಿಯಂ ಜಪಿಸುವ ಪುರುಷನು ಸಾಕ್ಷಾಚ್ಛಿವನೇ ಆಗುವನೆಂದು ಎನ್ನ ಮೇಲಣ ಕೃಪೆಯಿಂದ ಉಪದೇಶವಂ ಮಾಡಿದಿರಿ, ಆದ್ದರಿಂ ಪಂಚಾಕ್ಷರೀ ಮಂತ್ರದ ಉತ್ಪತ್ತಿಯಂ, ಅದರ ಮಾಹಾತ್ಮ್ಯವಂ, ಅದಂ ಜಪಿ

ಸುವ ಕ್ರಮವುಂ, ಜಪಸಿದ್ಧಿಯಾಗುವ ರೀತಿಯುಂ, ಆ ಮಂತ್ರದಿಂ ಪೇಳಲ್ಪಡುವ ದೇವತೆಯುಂ, ಆ ದೇವತಾಮಹಿಮೆಯುಂ, ಇವೆಲ್ಲವಂ ಎನ್ನಲ್ಲಿ ದಯವಿಟ್ಟು ವಿಸ್ತಾರವಾಗಿ ಅನುಗ್ರಹಿಸಬೇಕೆಂದು ಭಯಭಕ್ತಿಗಳಿಂದ ಕೇಳಲು, ಪುರುಷಮೃಗನು ರಾಜಕುಮಾರನ ಚಿತ್ತಪರಿಪಾಕವನ್ನರಿದು ಸಂತೋಷಯುಕ್ತನಾಗಿ ರಾಜಕುಮಾರನು ಉಪದೇಶವಂ ಮಾಡಬೇಕೆಂದು ಪ್ರಾರ್ಥಿಸಿದ ಪಂಚಾಕ್ಷರೀ ಮಂತ್ರೋತ್ಪತ್ತಿ ಮೊದಲಾದ್ದೆಲ್ಲವಂ ಉಪದೇಶಿಸಲುಪಕ್ರಮಿಸಿ ಕೇಳೈ ರಾಜಕುಲಶಿರೋಮಣಿಯೇ! ಕಲ್ಪಾಂತದೊಳ್ ಜಗದಾಧಾರನಾದ ಪರಮೇಶ್ವರನು ಪ್ರಪಂಚಸೃಷ್ಟಿಯುಂ ಮಾಡಲೋಸುಗ ಪ್ರಕೃತಿಯಿಂದೊಡಗೂಡಿ, ವಿಷ್ಣು ಮೊದಲಾಗಿ ಸಮಸ್ತ ಪ್ರಪಂಚವಂ ನಿರ್ಮಿಸಿ, ಕೆಲವು ಕಾಲಾನಂತರದೊಳ್ ಅವರವರ ಯೋಗ್ಯತಾನುಗುಣವಾಗಿ ಅಧಿಕಾರವನ್ನಿತ್ತು ನಿಮ್ಮ ನಿಮ್ಮ ಅಧಿಕಾರವಂ ವ್ಯತ್ಯಾಸ ಬಾರದಂತೆ ನೀವು ನಿರ್ವಹಿಸಿಕೊಂಡು ಇರುವದೆಂದಾಜ್ಞಾಪಿಸಿ, ತಾನುಯಿರುವುದಕ್ಕೆ ಕೈಲಾಸವೆಂಬ ಒಂದು ಸ್ಥಾನವಂ ನಿರ್ಮಿಸಿ, ಅಲ್ಲಿ ಪ್ರಕೃತಿಸ್ವರೂಪಳಾದ ಪಾರ್ವತೀದೇವಿಯೊಡಗೂಡಿ ವಿಹರಿಸುತ್ತಿರುವ ಸಮಯದೊಳ್, ಜಗದ್ವ್ಯಾಪಾರಪ್ರವರ್ತಕರಾದ ವಿಷ್ಣು ಬ್ರಹ್ಮ ಮೊದಲಾದ ದೇವತೆಗಳಲ್ಲಿ ಮಹಿಮೆಯು, ಬ್ರಾಹ್ಮರಲ್ಲಿ ಬ್ರಹ್ಮತೇಜಸ್ಸು, ಕ್ಷತ್ರಿಯರಲ್ಲಿ ಪರಾಕ್ರಮವು ಇವೇ ಮೊದಲಾದ ಸಾಧನಂಗಳು ಆಯಾಯ ಜನಗಳಲ್ಲಿ ವೃದ್ಧಿಯೈದದೇ ಇರುವನ್ನರಿದು ಎಲ್ಲ ದೇವತೆಗಳೂ ಒಂದಾಗಿ ಮಹಾವಿಷ್ಣುವಿರುವ ಬಳಿಗೆ ಬಂದು ಆಲೋಚನೆಯುಂ ಮಾಡಿ ನಮ್ಮ ನಮ್ಮ ಪದವಿಗಳಿಗೆ ಅನುಗುಣವಾದ ಪ್ರಭಾವವು ಉಂಟಾಗುವುದಕ್ಕೆ ಏನೋ ಒಂದು ವಿಶೇಷ ಸಾಧನವಿರುವುದು, ಅದು ನಮಗೆ ಅಗೋಚರವಾಗಿರುವುದರಿಂದ ನಾವು ಇಷ್ಟು ಅಯೋಗ್ಯರಾಗಿರುವೆವು, ಅದಂ ನಾವು ಅರಿತು ನಮ್ಮ ನಮ್ಮ ಯೋಗ್ಯತಾನುಗುಣವಾಗಿ ಮಾಹಾತ್ಮ್ಯವಂ ಪಡೆಯಬೇಕಾದರೆ ಕೈಲಾಸವಾಸಿಯಾದ ಪಶುಪತಿಗೆ ಶರಣಾಗತರಾಗದಿದ್ದರೆ ನಮ್ಮ ನಮ್ಮ ಕಾರ್ಯಗಳು ಸಿದ್ಧಿಸಲರಿಯದೆಂದು ನಿಶ್ಚಯಿಸಿ ಹೊರಮಟ್ಟು ಕೈಲಾಸದ ಸಮೀಪವನ್ನೈತಲು, ಆಗ ಮಹಾಕಾಳನು ಬಾಗಿಲೊಳ್ಕಾದಿರುವ ವಿಷ್ಣು ಮೊದಲಾದ

ದೇವತೆಗಳಂ, ವಸಿಷ್ಠಾದಿ ಋಷಿಗಳಂ, ಸನಕಾದಿ ಯೋಗಿಗಳಂ, ನಾರದಾದಿದೇವಋಷಿಗಳೆಂ ಕೂಡ ಕಂಡು ಅವರಂ ಕುರಿತು ಕುಶಲಪ್ರಶ್ನೆಯಂ ಮಾಡಿ ಬಂದಿರುವ ಕಾರ್ಯವಂ ತಿಳಿದು ದೇವದೇವನಾದ ಉಮಾಪತಿಗೆ ತಿಳುಹಿಸುವೆನೆಂದು ಒಳಪೊಕ್ಕು ಪರಮೇಶ್ವರನ ಸನ್ನಿಧಿಯೊಳ್ ವಿಜ್ಞಾಪಿಸುವುದಕ್ಕೆ ಸಮಯವಿಲ್ಲದೆ ಅಲ್ಲಿಯೇ ಮೌನದಿಂ ನಿಂದಿರಲು ವಿಷ್ಣು ಮೊದಲಾದ ದೇವತೆಗಳು ಬಹಿದ್ವಾರದಲ್ಲಿಯೇ ಬಹುಕಾಲ ಸಂತಿಷ್ಠ ಮಹಾಕಾಳರು ಬಾರದೆ ಇರುವವನ್ನೋಡಿ ಇದು ಏನೋ ಒಂದು ವಿಶೇಷವಿರುವದೆಂದರಿತು ಬಳಿಕ ಪರಮದಯಾಳುವಾದ ಪರಮೇಶ್ವರನಂ ಶ್ರುತಿಶಿರಸ್ಸುಗಳಿಂದ ಸ್ತುತಿಯುಗೈದು ಧ್ಯಾನಿಸುತ್ತಿರಲು, ಆಗ ಕರುಣಾಸಿಂಧುವಾದ ಗಂಗಾಧರನು ಆ ದೇವತೆಗಳ ಸ್ತುತಿಗಳಂ ಕೇಳಿ ಉಮಾಸಮೇತನಾಗಿ ವೃಷಭವನ್ನೇರಿ ಬಂದು ಪ್ರತ್ಯಕ್ಷನಾಗಲು, ಆಗ ದೇವತೆಗಳೆಲ್ಲರೂ ಕೈಗಳನ್ನೆತ್ತಿ ದಂಡಪ್ರಣಾಮವಂ ಮಾಡಿ ಬದ್ಧಾಂಜಲಿಪುಟರಾಗಿ ನಿಂದಿರಲು, ಆಗ ಪರಮೇಶ್ವರನು ಆ ದೇವತೆಗಳಂ ನೋಡಿ ಅವರ ಅಭಿಪ್ರಾಯವಂ ತಿಳಿದು ಕುಶಲ ಪ್ರಶ್ನೆಯಂ ಮಾಡಲು, ಬಳಿಕ ವಿಷ್ಣು ಮೊದಲಾದ ದೇವತೆಗಳೆಲ್ಲರೂ ಬಟ್ಟು ಗತಿ ನಮ್ಮ ನಮ್ಮ ಅಧಿಕಾರಂಗಳಂ ನಾವುಗಳು ನಿರ್ವಹಿಸಿಕೊಳ್ಳುವುದಕ್ಕೆ ಶಕ್ತರಲ್ಲ ಅದೇನು ಕಾರಣವೋ ನಾವು ಅರಿಯೆವು ಜಗತ್ಕಾರಣನಾದ ನೀನೇ ಬಲ್ಲವನು ಆದ್ದರಿಂ ನಾವೆಲ್ಲ ನಿನ್ನ ಚರಣಸನ್ನಿಧಿಗೆ ಬಂದಿರುವೆವು ಮುಂದೆ ನಿಮ್ಮ ಆಜ್ಞಾನುಸಾರವಾಗಿ ನಡೆವೆವು ಎಂದು ವಿಜ್ಞಾಪಿಸಿ ನಿರ್ವಿಣ್ಣರಾಗಿ ನಿಂದಿರಲವನ್ನೋಡಿ ಪಾರ್ವತೀಪತಿಯು ದೇವತೆಗಳಂ ಕುರಿತು ಕೇಳಿರೈ ದೇವತೆಗಳಿರಾ! ಲೋಕದಲ್ಲಿರುವ ಸಕಲ ಪ್ರಾಣಿಗಳೂ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಪ್ರಭಾವವಂ ಪಡೆದು ಪ್ರಖ್ಯಾತರಾಗಿ ಸ್ವಕಾರ್ಯಂಗಳಂ ಸಾಧಿಸಿ ಎನಗೆ ಪ್ರೀತಿಪಾತ್ರರಾಗಿ ಸಾಧಿಸಿದಕಾರ್ಯ ನಿವೇದನವಂ ಮಾಡಿಕೊಂಡು ಕಡೆಗೆ ಎನ್ನ ಸಾಯುಜ್ಯವಂ ಪಡೆಯುವುದಕ್ಕೆ ಒಂದು ಸುಲಭವಾದ ಸಾಧನವಿರುವುದು ಅದಂ ಲೋಕೋಪಕಾರಾರ್ಥವಾಗಿಯು, ನಿಮ್ಮ ಮೇಲಣ ಪ್ರೀತಿಯಿಂದಲೂ ಉಪದೇಶವಂ ಮಾಡುವೆನು ಸಾವಧಾನವಾಗಿ ಕೇಳಿರೆಂದು ಪೇಳಿ ಶಿವಪುರುಷನಿಗೆ ಪಂಚಪ್ರಾಣಂಗಳಂತೆ

ವೇದಮಧ್ಯದೊಳ್ ಪಂಚಾಕ್ಷರವೆಂಬ ಒಂದು ಮಹಾಮಂತ್ರವಿರುವುದು, ಅದಂ ತಿಳಿದು ಯಾರು ಉಪಾಸನೆಯಂ ಮಾಡುವರೋ ಅವರಿಗೆ ಸ್ವಾಧೀನನಾಗುವೆನು, ಮತ್ತು ಮೂರು ಲೋಕದಲ್ಲಿಯೂ ಅವರಿಗೆ ಅಸಾಧ್ಯಕಾರ್ಯವಿಲ್ಲ, ಮತ್ತು ಸಪ್ತ ಕೋಟಿ ಮಹಾ ಮಂತ್ರಗಳಿಗೆ ಶಿರಸ್ಥಾನವಾದ ಈ ಪಂಚಾಕ್ಷರವಂ ತಿಳಿದು ನೀವೆಲ್ಲರೂ ಆ ಮಹಾಮಂತ್ರದ ಜಪಶೀಲರಾಗಿದ್ದರೆ ನಿಮ್ಮ ನಿಮ್ಮ ಪದವಿಯಂ ಪರಾಪೇಕ್ಷೆಯಿಲ್ಲದೇ ನೀವೇ ನಿರ್ವಹಿಸಿಕೊಂಡಿರುವಿರಿ, ಆಗ ನಿಮ್ಮಂ ಯಾರು ಭಜಿಸುವರೋ ಅವರಿಗೆ ಇಷ್ಟಾರ್ಥವಂ ಕೊಡುವ ಯೋಗ್ಯತೆ ನಿಮಗೆ ಉಂಟಾಗುವುದೆಂದು ನಿರೂಪಿಸಿ ಅಂತರ್ಧಾನನಾಗಲು, ಆಗ ವಿಷ್ಣು ಮೊದಲಾದ ದೇವತೆಗಳು ಪ್ರಸನ್ನನಾದ ಪರಮೇಶ್ವರನು ಅಂತರ್ಧಾನವಂ ನೈದುದನ್ನೀಕ್ಷಿ ಶೋಕಪರವಶರಾಗಿ ಕೈಲಾಸಗಿರಿಗೆ ವಂದನೆಯಂ ಮಾಡಿ ಅಲ್ಲಿಂದ ಪೊರಮಟ್ಟು ವೈಕುಂಠಕ್ಕೆ ಬಂದು ಆಲೋಚನೆಯಂ ಮಾಡಿ ಪರಾತ್ಪರನಾದ ಪರಮೇಶ್ವರನು ಮೂರು ವೇದಂಗಳ ಮಧ್ಯದೊಳ್ ಪಂಚಾಕ್ಷರವೆಂಬ ಮಹಾಮಂತ್ರವಿರುವುದು, ಅದಂ ತಿಳಿದು ನೀವು ಪುರಶ್ಚರಣೆಯಂ ಮಾಡಿದರೆ ಕೃತಕೃತ್ಯರಾಗುವಿರೀ ಎಂದು ಉಪದೇಶವಂ ಮಾಡಿದನಲ್ಲದೇ ಈ ಅಪಾರವಾಗಿರುವ ವೇದಂಗಳಲ್ಲಿ ಪಂಚಾಕ್ಷರವೆಂಬ ಮಹಾ ಮಂತ್ರವು ನಮಗೆ ಹ್ಯಾಗೆ ತಿಳಿಯುವುದೆಂದು ದೇವತೆಗಳೆಲ್ಲರು ಚಿಂತಿಸುತ್ತಿರಲಾಗ ಜಗದ್ರಕ್ಷಕನಾದ ಶ್ರೀಮಹಾವಿಷ್ಣುವು ಬ್ರಹ್ಮಾದಿ ದೇವತೆಗಳಂ ಕುರಿತು ಅದಕ್ಕೆ ನಾನು ಒಂದು ಉಪಾಯವಂ ಮಾಡುವೆನು ಅದರಿಂ ತಿಳಿಯುಬಹುದೆಂದು ಒಡಂಬಡಿಸಲಾಗ ಅವರೆಲ್ಲರು ಸಮ್ಮತಿಯಿಂದ ಸತ್ಯವೆಂಬ ಮೊಳೆಯಂ, ಧರ್ಮವೆಂಬ ದಂಡವಂ, ಭಕ್ತಿಶ್ರದ್ಧೆಗಳೆಂಬ ತಕ್ಕಡಿಯಂ ಮಾಡಿ, ಋಗ್ವೇದ ಮೊದಲಾದ ಮೂರು ವೇದಂಗಳಂ ಬ್ಯಾರೆ ಬ್ಯಾರೆ ತೂಗುವಾಗ ಯಜುರ್ವೇದವು ತೂಕದೊಳ್ ಅಧಿಕವಾಗಲದಂ ಕಂಡು ಮತ್ತು ಋಕ್ಸಾಮಗಳೆಂಬ ಎರಡು ವೇದಂಗಳಂ ಒಂದು ಕಡೆಯೊಳಿಟ್ಟು, ಯಜುರ್ವೇದವಂ ಮತ್ತೊಂದು ಕಡೆಯೊಳಿರಿಸಿ ತೂಗಲಾಗಲೂ ಯಜುರ್ವೇದವೇ ತೂಕದೊಳ್ ಅಧಿಕವಾಗಲು. ಅದನ್ನೋಡಿ ಶಿವನಿಂದುಪದಿಷ್ಟಮಾದ ಪಂಚಾಕ್ಷರಿಯು ಯಜುರ್ವೇದದಲ್ಲಿಯೇ ಇರಬೇ

ಕೆಂದು ನಿಶ್ಚೈಸಿ, ಆ ಯಜುರ್ವೇದದಲ್ಲಿ ಕಾಂಡಗಳಂ ಪ್ರತ್ಯೇಕ ಪ್ರತ್ಯೇಕವಾಗಿ ತೂಗುವಲ್ಲಿ ನಾಲ್ಕನೇ ಕಾಂಡದ ತೂಕವು ಅಧಿಕವಾಗಲು, ಆ ನಾಲ್ಕನೇ ಕಾಂಡಮಾತ್ರವಂ ಒಂದು ಕಡೆಯೊಳರಿಸಿ ಮಿಗಿಲಾದ ಸಮಗ್ರ ಯಜುರ್ವೇದವಂ ಮತ್ತೊಂದು ಕಡೆಯೊಳರಿಸಿ ತೂಗಲು ಆಗಲೂ ನಾಲ್ಕನೇ ಕಾಂಡವೇ ಅಧಿಕವಾಗಲು, ಆ ಕಾಂಡದೊಳಿರುವ ಪನ್ನಗಳಂ ಪ್ರತ್ಯೇಕವಾಗಿ ತೂಗುವಲ್ಲಿ ರುದ್ರಸೂಕ್ತವೆಂಬ ಪನ್ನವು ತೂಕದೋಳ್ ಹೆಚ್ಚಾಗಲು ಬಳಿಕ ಆ ಪನ್ನದೋಳ್ ಇರುವ ಹನಸುಗಳಂ ಬ್ಯಾರೆ ಬ್ಯಾರೆ ತೂಗಲು ಅದರೋಳ್ ಹದಿನೇಳನೇ ಹನಸಿನ ತೂಕವು ಹೆಚ್ಚಾಗಲು, ಆ ಹನಸಿನೊಳಿರುವ ಅಕ್ಷರಂಗಳಂ ಬ್ಯಾರೆ ಬ್ಯಾರೆ ತೂಗಿ ನೋಡಲು, ಆ ಹನಸಿನೋಳ್ ಕೊನೇ ಭಾಗದಲ್ಲಿ ಹತ್ತು ಅಕ್ಷರಂಗಳ ತೂಕವು ಅಧಿಕವಾಗಿರಲು, ಆ ಹತ್ತು ಅಕ್ಷರಂಗಳಂ ಎರಡು ಪಾಲು ಮಾಡಿ, ಐದು ಐದು ಅಕ್ಷರವಾಗಿ ತೂಗಲು ಆಗ ಮೊದಲು ಭಾಗದ ಐದು ಅಕ್ಷರಂಗಳ ತೂಕವು ಹೆಚ್ಚಾಗಲದನ್ನೋಡಿ ಕೊನೆಗೂ ಪರೀಕ್ಷಿಸಬೇಕೆಂದು, ಈ ಐದು ಅಕ್ಷರಂಗಳಂ ಹೊರ್ತು ಉಳಿದ ಸಮಸ್ತ ಯಜುರ್ವೇದವಂ, ಋಗ್ಸಾಮ ವೇದಂಗಳಂ ಒಂದು ಕಡೆಯೊಳರಿಸಿ, ಐದು ಅಕ್ಷರಂಗಳಂ ಮತ್ತೊಂದು ಕಡೆಯೊಳರಿಸಿ ತೂಕವಂ ಮಾಡಲು, ಆಗಲೂ ಈ ಪಂಚಾಕ್ಷರದ ತೂಕವೇ ಅತ್ಯಂತ ಅಧಿಕವಾಗಲು, ಆಗ ವಿಷ್ಣು ಮೊದಲಾದ ದೇವತೆಗಳೆಲ್ಲರೂ ಅದನ್ನೋಡಿ-ಆಶ್ಚರ್ಯಭರಿತರಾಗಿ ಈ ಪಂಚಾಕ್ಷರವೇ ಪರಬ್ರಹ್ಮವವಾಚ್ಯನಾದ ಪರಮೇಶ್ವರನಿಂದ ಉಪದಿಷ್ಟವಾದ ಪಂಚಾಕ್ಷರವೆಂಬ ಮಹಾಮಂತ್ರವೆಂದು ನಿಶ್ಚೈಸಿ, ಈ ಮಹಾಮಂತ್ರವು ಆತನಿಂದಲೇ ಪ್ರಕಾಶಿತವಾದಕಾರಣ ಈ ಮಂತ್ರಕ್ಕೆ ಆತನೇ ಋಷಿಯಾಗಬೇಕೆಂದು ನಿಶ್ಚೈಸಿ, ಬಳಿಕ ತಾರತಮ್ಯಾನುಗುಣವಾಗಿ ಒಬ್ಬರಿಗೆ ಒಬ್ಬರು ಉಪದೇಶವಂ ಮಾಡುತ್ತ ಈರೀತಿಯಲ್ಲಿ ಸರ್ವರೂ ಈ ಮಹಾ ಮಂತ್ರವಂ ಪಡದು ಜಪಶೀಲರಾಗಿ ತಮ್ಮ ತಮ್ಮ ಪದವಿಗೆ ಅನುಗುಣವಾದ ಪ್ರಭಾವವಂ ಪಡೆದರು, ಅದ್ದರಿಂ ಅಂದು ಮೊದಲ್ಗೊಂಡು ವಿಷ್ಣುಮೊದಲಾದ ದೇವತೆಗಳು, ವಸಿಷ್ಠಾದಿ ಬ್ರಹ್ಮಋಷಿ

ಗಳು, ನಾರದಾದಿದೇವಋಷಿಗಳು, ಸನಕಾದಿಯೋಗಿಗಳು, ಬಲಿಮೊದ ಲಾದದಾನವರು, ರಾವಣಮೊದಲಾದ ರಾಕ್ಷಸರು, ಚಿತ್ರರಥಮೊದಲಾದ ಗಂಧರ್ವರು, ಕಿನ್ನರರೂ, ಕಿಂಪುರುಷರು, ವಿದ್ಯಾಧರರು, ಗರುಡರು, ಪನ್ನಗರು ಸಿದ್ಧರು, ಸಾಧ್ಯರು, ಉತ್ತಮರಾದ ಮನುಷ್ಯರು ಮೊದ ಲಾದವರು ನಿತ್ಯದಲ್ಲಿಯೂ ಪಂಚಾಕ್ಷರಿಯ ಜಪವಂ ಮಾಡುತ್ತಲಿರುವರು ಇಂತಪ್ಪ ಪಂಚಾಕ್ಷರವೆಂಬ ಮಹಾ ಮಂತ್ರವಂ ಉಪದೇಶವಂ ಮಾಡು ವ ಗುರುವು ಎಂತಿರಬೇಕೆಂದರೆ, ಒಳ್ಳೇವಂಶದಲ್ಲಿ ಪುಟ್ಟಿದವನಾಗಿ, ಶಿವ ಭಕ್ತಿ ಉಳ್ಳವನಾಗಿ, ತ್ರಿಕರಣಶುದ್ಧಿ ಉಳ್ಳವನಾಗಿ, ಪಂಚಾಕ್ಷರಜಪಶೀಲ ನಾಗಿ, ಶೈವಶಾಸ್ತ್ರವಲ್ಲಿ ನಿಪುಣನಾಗಿ, ಧರ್ಮದಲ್ಲಿ ಆಸಕ್ತಿ ಉಳ್ಳವನಾಗಿ, ಡಂಭವಿಲ್ಲದೇ ಇರುವನಾಗಿ, ಪಾಪಭೀತನಾಗಿ ಅಂಗಹೀನನಲ್ಲದವನಾಗಿ, ಜಪಸಿದ್ಧಿಯುಳ್ಳವನಾಗಿ, ಗೃಹಸ್ಥಾಶ್ರಮದಲ್ಲಿರುವನಾಗಿ, ಅರೋಗಿ ಯಾಗಿ, ಅತ್ಯಾಶೆ ಇಲ್ಲದೆ ಇರುವನಾಗಿ, ಅಲ್ಪಸಂತೋಷಿಯಾಗಿ, ಸುಮು ಖನಾಗಿ, ಸ್ಥಿರಚಿತ್ತನಾಗಿ, ಇಂತು ಇರುವ ಗುರುವಿನಲ್ಲಿ ಇಷ್ಟದೇವತಾ ಭಕ್ತಿಯಿಂದ ಪಂಚಾಕ್ಷರೀ ಉಪದೇಶವಂ ಪಡೆಯಲು, ಇಹದಲ್ಲಿ ಸಮಸ್ತ ಭೋಗಯುಕ್ತನಾಗಿ ಪರದಲ್ಲಿ ಶಿವಸಾಯುಜ್ಯವಂ ಪಡೆಯುವನು, ಮಿಗಿ ಲಾದ ಇಷ್ಟಾರ್ಥಂಗಳೆಲ್ಲಾ ತನಗೆ ತಾನೆ ಆಗುವುದು. ಇಂತಪ್ಪ ಪಂಚಾ ಕ್ಷರವು ಕ್ಷಿಪ್ರವಲ್ಲಿ ಸಿದ್ಧಿಯಾಗಬೇಕಾದರೆ ಗುರುಭಕ್ತಿಯಿಂದಲು, ಜಪದ ಕ್ರಮದಿಂದಲೂ ಆಗಬೇಕೂ ಗುರುಭಕ್ತಿಯಂದರೆ, ತನ್ನ ಇಷ್ಟದೇವತೆ ಯಲ್ಲಿ ಎಂತು ಭಕ್ತಿಯಿರುವುದೋ, ಅಂತು ಭಕ್ತಿಯಂ ಮಾಡುವುದೇ ಗುರುಭಕ್ತಿಯು ಜಪದ, ಕ್ರಮವೆಂತೆಂದರೆ, ಅಕ್ಷರಲಕ್ಷ ಸಂಖ್ಯೆಯಿಂದ ಜಪವಂ ಮಾಡಿ, ಅದರ ದಶಾಂಶಹೋಮವಂ, ಅದರ ದಶಾಂಶ ತರ್ಪಣ ವಂ, ಅದರ ದಶಾಂಶ ಬ್ರಾಹ್ಮಣ ಭೋಜನವಂ, ಇಂತೂ ಏಕಾಗ್ರಚಿ ತ್ತನಾಗಿ ಭಕ್ತಿಯಿಂದ ಮಾಡುವುದೇ ಜಪಕ್ರಮವು, ಮತ್ತೂ ಜಪವಂ ಮಾಡುವಲ್ಲಿ ಪಂಚಾಕ್ಷರ ಮಹಾ ಮಂತ್ರವಾಚ್ಯನಾದ ಪರಮೇಶ್ವರನ ಪಾದಾರವಿಂದವಲ್ಲಿ ಚಿತ್ತವನ್ನಿರಿಸಿ ಚಂಚಲಚಿತ್ತನಾಗದೇ ಜಪವಂ ಮಾಡಬೇಕು, ಮತ್ತೂ ಪಂಚಾಕ್ಷರಿಗಳಿಗೆ ವ್ಯತ್ಯಾಸಬಾರದಂತೆ ಜಪಿಸ ಬೇಕು, ಮಂತ್ರಾಭಿಮಾನಿ ದೇವತೆಯು, ವಿಹಾರಾಸಕ್ತವಾಗಿಯು

ಸ್ನಾನ ಭೋಜನ ನಿದ್ರಾಸಕ್ತನಾಗಿಯೂ ಉಪೇಕ್ಷೆಯಿಂ ಮತ್ತೊಂದು ಕಾರ್ಯದಲ್ಲಿ ಪ್ರವೃತ್ತಿಸಿ ಇರುವಲ್ಲಿಯೂ. ಈ ಮೂರು ಕಾಲಗಳಂ ತಿಳಿದು ಆ ಕಾಲವಂ ಬಿಟ್ಟು, ಸ್ವಕಾರ್ಯದಲ್ಲೇ ಆಸಕ್ತನಾಗಿಯೂ, ಪ್ರಸನ್ನನಾಗಿಯೂ, ಜಾಗರೂಕನಾಗಿಯೂ, ಸ್ವಕೀಯನಾದ ಮಂತ್ರದಲ್ಲಿ ಅಭಿಮಾನ ಉಳ್ಳದ್ದಾಗಿಯೂ, ಮತ್ತೂ ವರದಾನವಂ ಮಾಡುವೆನೆಂದಿರುವ ಕಾಲವಂ ತಿಳಿದು ಪುರಶ್ಚರಣೆಯಂ ಮಾಡಲು, ಉಕ್ತಸಂಖ್ಯೆಯಿಲ್ಲದಿದ್ದರೂ ಕ್ಷಿಪ್ರದಲ್ಲಿ ಮಂತ್ರಾಭಿಮಾನದೇವತೆಯು ಪ್ರಸನ್ನನಾಗುವುದು, ಮತ್ತೂ ಪಂಚಾಕ್ಷರವಂ ಪಡೆಯಬೇಕೆಂಬ ಇಚ್ಛೆಯುಂಟಾದ ಮಾತ್ರದಿಂದಲೇ ದುರದೃಷ್ಟಗಳೆಲ್ಲವೂ ದೂರವಾಗುವುವು, ಸದ್ಗುರುವಂ ಅರಸಿ ಕಂಡು ವಂದನೆಯಂ ಮಾಡಿದ ಮಾತ್ರದಿಂದಲೇ ಮಹಾಫಲಂಗಳಿಗೆ ಸೂಚನೆ ಉಂಟಾಗುವುದು. ಆ ಗುರುವು ಉಪೇಕ್ಷೆಯಂ ಮಾಡದೇ ಅನುಗ್ರಹಿಸಿ ದಕ್ಷಣವೇ ಅಶುಭಗಳೆಲ್ಲವೂ ತೊಲಗಿ ತೇಜೋವಿಶೇಷ ಉಂಟಾಗುವುದು, ಅಂತಪ್ಪ ಗುರು ಶುಶ್ರೂಷೆಯಂ ಮಾಡುತ್ತಿರುವಲ್ಲಿ ಪೂರ್ವದ ಪಾಪಂಗಳೆಲ್ಲ ನಿಶ್ಶೇಷವಾಗುವುವು, ಶುಶ್ರೂಷಪ್ರಭಾವದಿಂದ ಗುರುವಿಗೆ ಶಿಷ್ಯನಲ್ಲಿ ಕರುಣ ಉಂಟಾದ ಮಾತ್ರದಿಂದಲೇ ಮುಂದೆ ಬರುವ ಪಾಪಂಗಳೆಲ್ಲ ಅದೃಶ್ಯವಾಗುವುವು, ಮತ್ತೂ ಪಂಚಾಕ್ಷರವೆಂಬ ಮಹಾಮಂತ್ರದ ಉಪದೇಶ ಮಾತ್ರದಿಂದಲೇ, ಮುಕ್ತಿ ಎಂಬ ಸ್ತ್ರೀಯ ಪಾಣಿಗ್ರಹಣವು ಸಂಭವಿಸುವುದು, ಗುರುವಿನಿಂದ ಉಪದಿಷ್ಟವಾದ ಮಾರ್ಗದಿಂದ ಪಂಚಾಕ್ಷರವೆಂಬ ಮಹಾಮಂತ್ರ ಜಪ ಪರಾಯಣನಾಗಿರಲೂ ಮುಕ್ತಿ ಎಂಬ ಸ್ತ್ರೀಯು ಅಂಗಸಂಗದಿಂದ ಉಂಟಾಗುವ ಆನಂದಾನುಭವವಂ ನಿರ್ಭಯನಾಗಿ ಅನುಭವಿಸುತ್ತ ಬೃಹಜ್ಜಾಬಾಲ, ಶ್ವೇತಾಶ್ವತರ, ಕೈವಲ್ಯ, ಅಥರ್ವಶಿರಸ್ಸು ಅಥರ್ವಶಿಖೆಗಳೇ ಮೊದಲಾದ ವೇದಶಿರಸ್ಸುಗಳು ಪ್ರತಿಜ್ಞಾ ಪೂರ್ವಕವಾಗಿ ಸಾರುತ್ತಿರುವುವೂ, ಮತ್ತೂ ಶಿವಪಂಚಾಕ್ಷರ ಒಂದು ಹೊರತು ಮಿಗಿಲಾದ ಸಪ್ತಕೋಟಿ ಮಹಾ ಮಂತ್ರಂಗಳಂ ಜಪಿಸುವುದಕ್ಕೆ ಕಾಲ ದೇಶ, ಪಾತ್ರ, ಅವಸ್ಥೆ, ಕ್ರಮ, ನೇಮ, ಶುಚಿಗಳೆಂಬ ಮರ್ಯಾದೆಗಳು ಉಂಟು, ಈ ಮರ್ಯಾದೆಯಂ ಮೀರಿ ಮಾಡಿದ ಜಪವು ನಿಷ್ಫಲ

ವಾಗುವುದು, ಶಿವಪಂಚಾಕ್ಷರಮಂತ್ರವು ಸರ್ವಕಾಲದಲ್ಲಿಯೂ ಮನಬಂದಂತೆ ತನ್ನ ಅನುಕೂಲಕ್ಕೆ ಅನುಗುಣವಾಗಿ ಮಾಡಿದರೂ ಉತ್ತಮವಾದ ಫಲವುಂಟಾಗುವುದರಲ್ಲಿ ಸಂದೇಹವಿಲ್ಲ, ಅದುಕಾರಣ ಪ್ರಾತಃಕಾಲದಲ್ಲಿ ಎದ್ದು ಪಂಚಾಕ್ಷರಿಯಂ ಸ್ಮರಿಸಿದ ಮಾತ್ರದಿಂದಲೇ ಸಮಸ್ತ ದೇವತಾದರ್ಶನವಂ ಮಾಡಿದಫಲ ಉಂಟಾಗುವುದು, ಹಾಗೆ ಸ್ನಾನ ಕಾಲದಲ್ಲಿ ಸ್ಮರಿಸಲು ಗಂಗಾದಿತೀರ್ಥಂಗಳಲ್ಲಿ ಸ್ನಾನವಂಮಾಡಿದ ಫಲಉಂಟಾಗುವುದು, ವಿಭೂತಿಧಾರಣಕಾಲದಲ್ಲಿ ಸ್ಮರಿಸಲು ಸಮಸ್ತಪಾಪಂಗಳಂ ಪರಿಹರಿಸಿ ಸಮಸ್ತ ದೇವತೆಗಳಿಂದ ಪೂಜ್ಯನಂ ಮಾಡುವುದು, ಹಾಗೆ ರುದ್ರಾಕ್ಷಧಾರಣಕಾಲದಲ್ಲಿ ಜಪಿಸಿದ ಮಾತ್ರದಿಂದ ಸಮಸ್ತ ಶುಭಗಳನ್ನಿತ್ತು ರುದ್ರಸಾರೂಪ್ಯವನ್ನುಂಟುಮಾಡುವುದು, ಸಂಧ್ಯಾವಂದನೆಯಂ ಮಾಡುವಲ್ಲಿ ಸ್ಮರಿಸಲು ಕಾಲಾತೀತವಾದ ದೋಷವಂ ಪರಿಹರಿಸಿ, ಅನೇಕ ಜನ್ಮಕಾಲಕಾಲದಲ್ಲಿ ಮಾಡಿದ ಫಲವನ್ನುಂಟುಮಾಡುವುದು, ಗಾಯತ್ರೀ ಮೊದಲಾದ ಮಹಾಮಂತ್ರಂಗಳಂ ಜಪಿಸುವಾಗ ಸ್ಮರಿಸಲು, ಆ ಮಂತ್ರಗಳಿಗೆ ಶಾಪಮೊದಲಾದ ದೋಷಂಗಳಂ ಪರಿಹರಿಸಿ ಯಥೋಕ್ತವಾದ ಮಂತ್ರಾನುಷ್ಠಾನವಂ ಮಾಡಿದವನಿಗೆ ಯಾವ ಫಲ ಉಂಟಾಗುವುದೋ ಆ ಫಲವನ್ನುಂಟುಮಾಡುವುದು, ದೇವತಾರಾಧನವಂ ಮಾಡುವಕಾಲದಲ್ಲಿ ಜಪಿಸಲು ತಾನು ಪೂಜಿಸುವ ಬಿಂಬದಲ್ಲಿ ತನ್ನ ಇಷ್ಟದೇವತೆಯು ನೆಲಸಿ ಬೇಕಾದ ಇಷ್ಟಾರ್ಥವಂ ಬೇಡಿದಂತೆ ಕೊಡುವುದು, ಭೋಜನವಂ ಮಾಡುವಕಾಲದಲ್ಲಿ ಜಪಿಸಲು ಭೋಜನವಂ ಮಾಡುವ ಕವಳಗಳಿಂದಲೇ ದೇವತೆಗಳಿಗೆಲ್ಲ ಹವಿರ್ಭಾಗವನ್ನಿತ್ತ ಫಲ ಉಂಟಾಗುವುದು. ಶ್ರೋತ್ರಿಯಬ್ರಾಹ್ಮಣನಿಗೆ ಭೋಜನವಂ ಮಾಡಿಸುವ ಕಾಲದಲ್ಲಿ ಪಂಚಾಕ್ಷರವಂ ಸ್ಮರಿಸಲು ಕೋಟಿ ಬ್ರಾಹ್ಮರಿಗೆ ಭೋಜನವಂ ಮಾಡಿಸಿದ ಫಲವು ಪ್ರಾಪ್ತವಾಗುವುದು. ಪಿತೃದಿವಸಂಗಳಲ್ಲಿ ಸ್ಮರಿಸಲು, ಪಿತೃಗಳು ಅಮೃತಪ್ರಾಶನವಂ ಮಾಡಿದವರಂತೆ ತೃಪ್ತರಾಗುವರು. ಸಂಚಾರವಂ ಮಾಡುವಲ್ಲಿ ಸ್ಮರಿಸಲು ಸಮಸ್ತ ಭೂಮಿ ಪ್ರದಕ್ಷಿಣೆಯಂ ಮಾಡಿದಫಲ ಉಂಟಾಗುವುದು. ಶಯನಕಾಲದಲ್ಲಿ ಸ್ಮರಿಸಲು, ಸಮಸ್ತ ವಿಪತ್ತುಗಳಂ ಪರಿಹರಿಸಿ ಎಷ್ಟು ಹೊತ್ತು ನಿದ್ರೆಯಂ ಮಾಡುವನೋ, ಅಷ್ಟು ಹೊ

ತ್ತು ಈಶ್ವರಾರಾಧನೆಯಂ ಮಾಡಿದ ಫಲ ಉಂಟಾಗುವುದು. ಆದುಕಾರಣ ಈ ರಹಸ್ಯವಂ ತಿಳಿದು ನಿರಂತರದಲ್ಲಿಯೂ, ಯಾರು ಜಪಿಸುವರೋ ಅವರು ಕೃತಕೃತ್ಯರೆಂದು ತಿಳಿಯುವುದು ಮತ್ತೂ ಮಂತ್ರಗಳು ವೈದಿಕಂಗಳೆಂದು, ಅವೈದಿಕಂಗಳೆಂದು ಎರಡು ಪರಿಯಾಗಿರುವುವು ಅದೆಂತೆನೆ—ವೇದೋಕ್ತಂಗಳೆಲ್ಲ ವೈದಿಕಮಂತ್ರಂಗಳೆನಿಸಿಕೊಂಬುವುವು. ಸ್ಮೃತಿ, ಆಗಮ, ಇತಿಹಾಸ, ಪುರಾಣ, ಇವುಗಳಲ್ಲಿ ಹೇಳಲ್ಪಡುವ ಮಂತ್ರಂಗಳೆಲ್ಲ ಅವೈದಿಕಗಳೆನಿಸಿಕೊಂಬುವುವು. ಇಂತಲ್ಲದೆ ಈ ಎರಡು ವಿಧಂಗಳಲ್ಲಿಯೂ, ಅನುದ್ಧೃತವೆಂದು, ಉದ್ಧೃತವೆಂದು ಎರಡು ಪರಿ ಉಂಟು, ಹ್ಯಾಗೆಂದರೆ—ಗ್ರಂಥಮಧ್ಯದೋಳ್ ಮಂತ್ರಾರಂಭ ಮೊದಲುಗೊಂಡು ಕೊನೆವರಿಗೂ ಪಙ್ತಿಯಾಗಿ ಹೇಳುವದೇ ಅನುದ್ಧೃತಮಂತ್ರವು, ಅಕ್ಷರ ಅಕ್ಷರವಾಗಿ ಬ್ಯಾರೆ ಬ್ಯಾರೆ ಹೇಳುವುದೇ ಉದ್ಧೃತಮಂತ್ರವೆಂದು ತಿಳಿಯುವುದು. ಅನುದ್ಧೃತಮಂತ್ರಗಳಿಗೆ ಸೂತಕದೋಷವಿಲ್ಲ. ಉದ್ಧೃತಮಂತ್ರಗಳಿಗೆ ಎರಡು ಸೂತಕಗಳ ದೋಷಂಗಳು ಉಂಟೆಂದು ತಿಳಿಯಬೇಕು, ಉದ್ಧೃತಮಂತ್ರವಂ ಜಪಿಸುವಲ್ಲಿ ಮಂತ್ರಕ್ಕೆ ಪ್ರಾಣಪ್ರತಿಷ್ಠೆಯಂ ಮಾಡಿ ಜಪಿಸಬೇಕು, ಮತ್ತೂ ಮಂತ್ರಂಗಳನೆಲ್ಲವಂ ಪುರಶ್ಚರಣೆಯಂಮಾಡಬೇಕಾದರೆ ಸ್ಥಲಂಗಳು ಯಾವ್ಯಾವೆಂದರೆ—ಪುಣ್ಯಕ್ಷೇತ್ರಂಗಳು, ಪರ್ವತಾಗ್ರಂಗಳು, ಪುಣ್ಯಾರಣ್ಯಂಗಳು, ಬಿಲ್ವವೃಕ್ಷದ ಸಮೀಪಪ್ರದೇಶಂಗಳು, ಶಿವಾಲಯಂಗಳು, ಈ ಸ್ಥಳಂಗಳೆಲ್ಲ ಪ್ರಶಸ್ತಂಗಳು. ಮತ್ತೂ ಅಗ್ನಿಹೋತ್ರಗೃಹಂಗಳಲ್ಲಿ, ಗೋವುಗಳಂ ಕಟ್ಟುವ ಸ್ಥಳಗಳಲ್ಲಿ, ಮನೆಯೊಳ್ ದೇವತಾರ್ಚನೆಮಾಡುವಸ್ಥಳದಲ್ಲಿ, ಇಂತೀ ಸ್ಥಳಂಗಳಲ್ಲಿ ಪುರಶ್ಚರಣೆಯಂ ಮಾಡಬಹುದು, ಪುರಶ್ಚರಣೆಯಂ ಪೂರ್ವಾಭಿಮುಖವಾಗಿ ಮಾಡಿದರೆ ವಶ್ಯಪ್ರದವು, ದಕ್ಷಿಣಾಭಿಮುಖವಾಗಿ ಮಾಡಲು ಮಾರಣ ಯೋಗ್ಯವಾಗುವುದು, ಪಶ್ಚಿಮಮುಖವಾಗಿಮಾಡೆ ಧನಪ್ರಾಪ್ತಿ ಆಗುವುದು, ಉತ್ತರಾಭಿಮುಖವಾಗಿ ಮಾಡೆ ಶಾಂತಿಕರವಾಗುವುದು, ಸ್ಪುಟವಾಗಿ ಜಪಿಸುವುದಕ್ಕಿಂತಲು ಮೆಲ್ಲನೆ ಜಪವಂ ಮಾಡುವುದು ಶತಗುಣಾಧಿಕವು, ಅದಕ್ಕಿಂತಲೂ ಮನದಲ್ಲಿಯೇ ಜಪವಂ ಮಾಡೆ ಸಹಸ್ರಗುಣಾಧಿಕವು, ಮತ್ತೂ

ಎಂಥೆತ್ತು ಆಸನಂಗಳೊಳ್ ಸಾಧಾರಣವಾದ ಪದ್ಮಾಸನದೊಳಾಗಲೀ, ಸ್ವಸ್ತಿಕಾಸನದೊಳಾಗಲೀ, ಅರ್ಧಾಸನದೊಳಾಗಲೀ, ಸುಖಾಸನದಲ್ಲಾಗಲೀ ಕುಳಿತು ಪುರಶ್ಚರಣೆಯುಂ ಮಾಡಬೇಕು. ಮತ್ತೂ ಆಸ್ತರಣಾಸನಂಗಳ ವಿವರಗಳಂ ಪೇಳ್ವೆನು—ದರ್ಭಾಸನದೊಳ್ ಕುಳಿತು ಜಪವಂ ಮಾಡಲು ಶರೀರಶುದ್ಧಿ ಉಂಟಾಗುವುದು, ವಸ್ತ್ರಾಸನದೊಳ್ ಐಶ್ವರ್ಯ ಪ್ರಾಪ್ತಿಯಾಗುವುದು. ಕಂಬಳಾಸನವು ಇಷ್ಟಸಿದ್ಧಿಯನ್ನುಂಟುಮಾಡುವುದು. ರತ್ನಕಂಬಳಿಯು ಸಮಸ್ತೇಷ್ಟಾರ್ಥಂಗಳಂ ಕೊಡುವುದು, ಕೃಷ್ಣಾಜಿನದಿಂದ ಜ್ಞಾನ ಉಂಟಾಗುವುದು, ವ್ಯಾಘ್ರಾಜಿನದಿಂದ ಮೋಕ್ಷ ಉಂಟಾಗುವುದು, ಪತ್ರಾಸನದಿಂದ ಆರೋಗ್ಯ ಉಂಟಾಗುವುದು, ಇಂತೀ ಆಸನಂಗಳಲ್ಲಿ ಯಾವುದು ಅವಶ್ಯಕವ್ಯೋ ಅದಂ ಸಂಪಾದಿಸಿ ಜಪವಂ ಮಾಡುವುದು ಉತ್ತಮವು, ವಶ್ಯಮಂತ್ರವಂ ಜಪಿಸಬೇಕಾದರೆ ರಕ್ತವಸ್ತ್ರವು ಉತ್ತಮವು, ಮೋಕ್ಷಾರ್ಥವಾಗಿ ಜಪಿಸಬೇಕಾದರೆ ಶ್ವೇತವಸ್ತ್ರವು ಉತ್ತಮವು, ಮಾರಣಾರ್ಥವಾಗಿ ಜಪಿಸಬೇಕಾದರೆ ನೀಲವಸ್ತ್ರವು ಉತ್ತಮವು, ಕಾಷ್ಟಗಳ ಮೇಲೆ ಕುಳಿತು ಜಪಿಸಲು ನಾನಾವಿಧರೋಗಂಗಳುಂಟಾಗುವುವು, ಪಾಷಾಣದಮೇಲೆ ಕುಳಿತು ಜಪಿಸಲು ನಾನಾವಿಧ ದುಃಖ ಉಂಟಾಗುವುದು, ಭೂಮಿಯೊಳ್ ಕುಳಿತು ಜಪಿಸಲು, ಸರ್ವಥಾ ಮಂತ್ರಸಿದ್ಧಿ ಆಗಲಾರದು. ಮತ್ತೂ ಜಪವಂ ಮಾಡುವ ಸಂಖ್ಯೆಯು ಎಂತೆಂದಡೆ—ಜಪವಂ ಮಾಡುವಾಗ ಬೆರಳುಗಳಿಂದ ಎಣಿಸಿದರೆ ಎಷ್ಟು ಮಾಡಿದರೆ ಅಷ್ಟೇ ಫಲ ಉಂಟು, ಬೆರಳುಗಳ ರೇಖೆಗಳಿಂದ ಎಣಿಸಲು ಎಂಟು ಗುಣಾಧಿಕವು, ಪುತ್ರಜೀವಮಣಿಗಳಿಂದ ಜಪಮಾಲೆಯಂ ಮಾಡಿ ಎಣಿಸೆ ಹತ್ತು ಗುಣಾಧಿಕವು, ಇದೇ ಮೇರೆಗೆ ಶಂಖಮಣಿಗಳಿಂದ ಜಪಮಾಲೆಯಂ ಮಾಡಿ ಎಣಿಸೆ ಶತಗುಣಾಧಿಕವು, ಹವಳಗಳಿಂದ ಜಪಮಾಲೆಯುಂ ಮಾಡಿ ಎಣಿಸೆ ಸಹಸ್ರ ಗುಣಾಧಿಕವು, ಸ್ಫಟಿಕಮಣಿಗಳಿಂದ ಜಪಮಾಲೆಯಂ ಮಾಡಿ ಎಣಿಸಲು ದಶಸಹಸ್ರ ಗುಣಾಧಿಕವು, ಮುತ್ತುಗಳಿಂದ ಎಣಿಸೆ ಲಕ್ಷಗುಣಾಧಿಕವು, ನೆಲ್ಲಿಬೀಜದಿಂದ ಜಪಮಾಲೆಯಂ ಮಾಡಿ ಎಣಿಸೆ ಎರಡು ಲಕ್ಷಗುಣಾಧಿಕವು, ತಾವರೆಮಣಿಗಳಿಂದ ಜಪಮಾಲೆಯುಂಮಾಡಿ ಎಣಿಸೆಹತ್ತು ಲಕ್ಷಗುಣಾಧಿಕವು, ಸು

ವರ್ಣದಗುಂಡುಗಳಿಂದ ಜಪಮಾಲೆಯಂ ಮಾಡಿ ಎಣಿಸೆ ಕೋಟಿಗುಣಾಧಿಕವು, ದರ್ಭೆಯಿಂದ ಉಕ್ತಪ್ರಕಾರ ಗಂಟುಗಳಂ ಹಾಕಿ ಜಪಮಾಲೆಯಂ ಮಾಡಿಎಣಿಸೆ ಹತ್ತು ಕೋಟಿ ಗುಣಾಧಿಕವು, ರುದ್ರಾಕ್ಷಗಳಿಂದ ಜಪಮಾಲೆಯಂಮಾಡಿ ಎಣಿಸಲು ಇಷ್ಟಪುಷ್ಟಫಲವೆಂದು ತಿಳಿಯುಕೂಡದು, ಪ್ರದಕ್ಷಿಣೆ ನಮಸ್ಕಾರಂಗಳಂ ಮಾಡಬೇಕಾದರೆ ಎಣಿಸುತ್ತಲೇ ಮಾಡಬೇಕು, ಅಲ್ಲದಿರೆ ರಾಕ್ಷಸರ ಪಾಲಾಗುವುದು, ಆದ್ದರಿಂ ತಿಳಿದಂಥಾವರು ಸಂಖ್ಯಾಪೂರ್ವಕವಾಗಿಯೇ ಮಾಡುವರು, ಮತ್ತೂ ಈ ರುದ್ರಾಕ್ಷ ಮಾಲೆಯಿಂದ ಜಪವಂ ಮಾಡುವಾಗ ಮೋಕ್ಷಾರ್ಥಿಯಾದವನು ಹೆಬ್ಬೆರಳಿನಿಂದ ಮೇಲಕ್ಕೆ ಸೆಳೆಯಬೇಕು, ಶತ್ರುನಾಶಾರ್ಥವಾಗಿ ಜಪವಂ ಮಾಡಬೇಕಾದರೆ ತರ್ಜನೀಬೆರಳಿನಿಂದ ಸೆಳೆಯಬೇಕು, ಧನಾರ್ಥವಾಗಿ ಜಪವಂ ಮಾಡಬೇಕಾದರೆ ಮಧ್ಯಮ ಬೆರಳಿನಿಂದ ಸೆಳೆಯಬೇಕು, ರೋಗಾದ್ಯುಪದ್ರವಶಾಂತ್ಯರ್ಥವಾಗಿ ಮಾಡಬೇಕಾದರೆ ಪವಿತ್ರದಬೆರಳಿನಿಂದ ಸೆಳೆಯಬೇಕು, ರಕ್ಷಾರ್ಥವಾಗಿ ಜಪವಂ ಮಾಡಬೇಕಾದರೆ ಕಿರುಬೆರಳಿನಿಂದ ಸೆಳೆಯಬೇಕು, ಸಾಧಾರಣವಾಗಿ ಜಪವಂ ಮಾಡಬೇಕಾದರೆ-ಹೆಬ್ಬೆರಳಿನಿಂದಲೂ, ಮಧ್ಯಮಬೆರಳಿನಿಂದಲೂ, ಸೆಳೆಯಬೇಕು, ಮತ್ತೂ ಜಪಮಾಲೆಯ ಸಂಖ್ಯೆಯಂ ಹೇಳುವೆನು ಅದೆಂತೆನೆ-ಮೋಕ್ಷಾರ್ಥವಾಗಿ ಮಾಡಬೇಕಾದರೆ ತನಗೆ ಬೇಕಾದಮಣಿಗಳಲ್ಲಿ ಇಪ್ಪತ್ತೈದುಮಣಿಗಳಿಂದ ಜಪಮಾಲೆಯಂ ಮಾಡಿ ಜಪಿಸಬೇಕು, ಶುಭಾರ್ಥವಾಗಿ ಮಾಡುವವನು ಇಪ್ಪತ್ತೇಳು ಮಣಿಯುಳ್ಳ ಜಪಸರದಿಂದ ಜಪವಂ ಮಾಡಬೇಕು, ಧನಾರ್ಥಿಯು ಮುವ್ವತ್ತು ಮಣಿಗಳಿಂದ ಜಪವಂ ಮಾಡಬೇಕು, ಮಾರಣಕರ್ಮವಂ ಮಾಡುವವನು ಹದಿನೈದು ಮಣಿಗಳಿಂದ ಜಪವಂ ಮಾಡಬೇಕು, ಅಂತು ಜಪಮಾಲೆಗಳಲ್ಲಿ ಹೆಚ್ಚಾಗಿ ಒಂದು ಮಣಿಯಂ ಮೇರುಸ್ಥಾನದಲ್ಲಿರಿಸಿ ಜಪವಂ ಮಾಡುವಲ್ಲಿ ಆ ಮೇರುವಂ ಪ್ರದಕ್ಷಿಣವಾಗಿ ಮಾಡಬೇಕು, ಇಂತಪ್ಪ ಜಪಮಾಲೆಯಂ ಎಡಗೈಯಿಂದ ಮುಟ್ಟಲಾಗದು, ಮತ್ತು ಜಪಮಾಲೆಯಂ ತೋಳುಗಳಲ್ಲಾಗಲೀ, ಶಿರಸ್ಸಿನಲ್ಲಾಗಲೀ, ಕಂಠದಲ್ಲಾಗಲೀ, ಧರಿಸಲಾಗದು, ಜಪಕಾಲದಲ್ಲಿ ಜಪವಂ ಮಾಡಿ ಶುದ್ಧವಾದ ಯಜ್ಞೋಪವೀತದಲ್ಲಿ ಕಟ್ಟಬಹುದು, ಮತ್ತೂ ಜಪಕಾಲದಲ್ಲಿ ಜಪಮಾಲೆಯು ನೆಲಕ್ಕೆ ಬೀಳ

ಳಾ ಜಪವು ನಿಷ್ಫಲವು, ಮೇರುಪ್ರದಕ್ಷಿಣವಂ ಮಾಡುತ ಆ ಮೇರುವಂ ಉಲ್ಲಂಘಿಸದೆ ಜಪವಂ ಮಾಡಬೇಕು. ಮತ್ತೂ ಜಪಮಾಲೆಗಳ ಫಲಗಳಂ ಪೇಳುವೆನು ಅದೆಂತೆನೆ—ಸ್ಫಟಿಕಮಣಿಯಿಂ ನಿರ್ಮಿತವಾದ ಜಪಮಾಲೆಯಿಂ ಜಪಿಸಲು ರಾಜ್ಯಾಧಿಪತ್ಯ ಉಂಟಾಗುವುದು, ಪುತ್ರಜೀವೀಮಣಿಯಿಂದ ಐಶ್ವರ್ಯಾಭಿವೃದ್ಧಿ ಉಂಟಾಗುವುದು, ದರ್ಭೆಗಳ ಗಂಟನಿಂದ ಪುತ್ರಸಂಪತ್ತು ಉಂಟಾಗುವುದು, ರುದ್ರಾಕ್ಷಮಾಲೆಯು ಸಮಸ್ತ ಇಷ್ಟಾರ್ಥವಂ ಈವುದು, ಹವಳದ ಮಾಲೆಯಿಂದ ಸರ್ವವೂ ವಶ್ಯವಾಗುವುದು, ಕೆಂಪುರತ್ನದ ಜಪಮಾಲೆಯು ಸ್ತ್ರೀವಶ್ಯವಂ ಮಾಡುವುದು, ಮುತ್ತಿನ ಜಪಮಾಲೆಯು ವಿದ್ಯೆಯಂ ಕೊಡುವುದು, ಪಚ್ಚೆ, ನೀಲದ ಮಣಿಗಳಿಂದ ಶತ್ರುನಾಶ ಉಂಟಾಗುವುದು, ಸುವರ್ಣ ಜಪಮಾಲೆಯು ಸಮಸ್ತ ಸಂಪತ್ತಂಕೊಡುವುದು, ರಜತಮಣಿಯು ಅಪೇಕ್ಷಿಸಿದಸ್ತ್ರೀಯಂ ಘಟನೆಯಂ ಮಾಡುವುದು, ಪಾದರಸದ ಜಪಮಾಲೆಯು ಸಮಸ್ತ ಇಷ್ಟಾರ್ಥಂಗಳಂ ಕೊಡುವುದು, ಇಂತು ರಹಸ್ಯವಾಗಿರುವ ಶಿವತತ್ವವಂ ತಿಳಿದು ನಿರಂತರವಲ್ಲಿಯೂ ಲಿಂಗರೂಪನಾದ ಪರಮೇಶ್ವರನಂ ನಾವು ಪೂಜೆಯಂ ಮಾಡುತಲಿರುವೆವು, ಆದ್ದರಿಂ ಈ ದುಷ್ಟರಾದ ರಾಕ್ಷಸರ ಪ್ರಯತ್ನವು ಲೇಶವಾದರೂ ನನ್ನ ಮೇಲೆ ನಡಿಯಲಿಲ್ಲವೆಂದು ನಿರೂಪಿಸಿ, ಮತ್ತೂ ಸುಗಂಧರಾಜನಂಕುರಿತು ಎಲೈ ರಾಜೇಂದ್ರನೇ! ಈಗ ಸಂಧ್ಯಾಕಾಲಪ್ರಾಪ್ತವಾದುದರಿಂ ಸದಾಶಿವನು ಸಂಧ್ಯಾನಾಟ್ಯವಂಮಾಡುವ ಸಮಯವಾದುಧರಿಂ ಅವನ ದರ್ಶನಾರ್ಥವಾಗಿ ನಾನು ಪೋಗಿ ಶೀಘ್ರದಿಂ ಬರುವೆನು, ನೀನು ಮಂತ್ರಿ ಸಮೇತನಾಗಿ ಸಾಯಂ ಸಂಧ್ಯೆಯನ್ನೆರವೇರಿಸಿಕೊಂಡು ಈ ನನ್ನ ಆಶ್ರಮದಲ್ಲಿಯೇ ಸುಖದಿಂದಿರೆಂದು ಅಪ್ಪಣೆಯನ್ನಿತ್ತು ತಾನು ಪರಮೇಶ್ವರನ ದರ್ಶನಾರ್ಥವಾಗಿ ಹಿಮವತ್ಪರ್ವತದ ಪ್ರಾಂತ್ಯಕ್ಕೆ ತೆರಳಲು. ಆಗ ಸುಗಂಧರಾಜೇಂದ್ರನು ಮಂತ್ರಿ ಸಮೇತನಾಗಿ ಸಂಧ್ಯಾದಿ ಕರ್ಮಗಳನ್ನೆರವೇರಿಸಿ, ಪುರುಷಮೃಗನ ಆಗಮನವಂ ನಿರೀಕ್ಷಿಸುತ ಇರುತಿರ್ದನೆಂಬಲ್ಲಿಗೆ * * * *

ಗದ್ಯ—ಕುಂಡಲಿಶಯಖಂಡಪರಶುಪುಂಡರೀಕಭವಾಖುಂಡಲಪ್ರಮುಖನಿಖಿಲಸುರವರಪರಿಭವಪರಿಣತಪ್ರಚಂಡಬಲ

ಚಂಡಮುಂಡಖಂಡನನಿಪುಣಕೋದಂಡಕಾಂಡಮಂಡಲಾಗ್ರಧರಭುಜಾದಂಡಪರಿಮಂಡಿತಚಾಮುಂಡಿಕಾಕಟಾಕ್ಷವೀಕ್ಷಣಪ್ರವರ್ಧಮಾನ ಭೂಮಂಡಲಾಧಿಪತ್ಯಸತ್ಯಪ್ರತಾಪಸಕಲಭಾಷಾಸಾಮ್ರಾಜ್ಯಸರ್ವಂಕಷ ಚತುರ್ವಿಧ ಸರಸಕವಿತಾನಿಸ್ಸಹಾಯ ನಿರ್ಮಾಣಧೌರೇಯಘಟಿಕಾಶತಗ್ರಂಥವಿವಿಧ ಪ್ರಬಂಧನಿಬಂಧನಧುರಂಧರತ್ರಿಭುವನಪವಿತ್ರಾತ್ರೇಯಸಗೋತ್ರಾಶ್ವಲಾಯನಸೂತ್ರಸುಚರಿತ್ರಚಾಮರಾಜಮಹಾರಾಜ ಪುತ್ರಸರಪತಿಬಿರುದಮಹಿಶೂರಪುರವರಾಧೀಶ ಶ್ರೀಕೃಷ್ಣರಾಜ ಒಡೆಯರವರಿಂದರಸಿಕಜನಾನಂದಕರಮಾಗಿವಿರಚಿತಮಾದಸೌಗಂಧಿಕಾಪರಿಣಯಮೆಂಬ ಈನವೀನಕೃತಿಯೊಳ್ ಸುಗಂಧರಾಜೇಂದ್ರಂಗೆ ಪುರುಷಮೃಗನು ಬಿಲ್ವ, ವಿಭೂತಿ, ರುದ್ರಾಕ್ಷ, ಪಂಚಾಕ್ಷರೀ ಮಹಾಮಂತ್ರ ಮಾಹಾತ್ಮ್ಯಗಳು ಮೊದಲಾದ್ದಂ ಉಪದೇಶಮಂ ಮಾಡಿದ್ದಂ ಬಣ್ಣಿಸಿರುವ ಇಪ್ಪತ್ತನೇ ಆಶ್ವಾಸನಿರೂಪಣಕ್ಕೆ ಮಂಗಳಮಹಾ * * *

ಇಪ್ಪತ್ತನೇಯ ಆಶ್ವಾಸ ಸಂಪೂರ್ಣವು



## ಇಪ್ಪತ್ತೊಂದನೇಯ ಆಶ್ವಾಸಪ್ರಾರಂಭವು

ಶ್ರೀರಸ್ತು.

ಶ್ರೀಚಾಮುಂಡಿಕಾಂಬಾಯೈನಮಃ.

ಅನಂತರದಲ್ಲಿ——ಸುಗಂಧರಾಜೇಂದ್ರನು ಸೂರ್ಯೋದಯವಾಗಲು ಗಂಗಾನದಿಯೊಳ್ ಸ್ನಾನವಂಮಾಡಿ ಸಂಧ್ಯಾವಂದನೆ ಮೊದಲಾದ ಆಹ್ನಿಕಗಳಂ ನೆರವೇರಿಸಿಕೊಂಡು ಎಂದಿನಂತೆ ಪುರುಷಮೃಗನ ಆಶ್ರಮವಂ ಕುರಿತು ಬರುತ ಬಿಲ್ವವೃಕ್ಷದ ಬಳಿಯಲ್ಲಿ ಎಂದಿನಂತೆ ಕುಳಿತಿರುವ ಪುರುಷಮೃಗನಂ ಕಂಡು ಸಾಷ್ಟಾಂಗನಮಸ್ಕಾರವಂ ಮಾಡಿ ಪುರೋಭಾಗದೊಳ್ ಕುಳಿತಿರಲು, ಪುರುಷ

ಮೃಗನು ಆ ರಾಜೇಂದ್ರನಂ ಕಂಡು ಎಲೈ ರಾಜಕುಲತಿಲಕನೇ! ಇನ್ನೇನು ಕೇಳಲಪೇಕ್ಷಿಸುತಲಿದ್ದೀಯೆ ಎನಲು, ಅದಂ ಕೇಳಿ ಸುಗಂಧರಾಜೇಂದ್ರನು ಪುರುಷಮೃಗನಿಂ ಉಪದೇಶಿಸಲ್ಪಟ್ಟ ಪಂಚಾಕ್ಷರೀ ಮಾಹಾತ್ಮ್ಯ ಮೊದಲಾದ್ದಂ ಕೇಳಿ ಆಶ್ಚರ್ಯಭರಿತನಾಗಿ, ಲೋಕದೊಳ್ ಪರಾತ್ಪರನಾದ ಪರಮೇಶ್ವರನಿಗಿಂತಲು, ಉತ್ಕೃಷ್ಟವಾದ ದೇವತೆಯಿಲ್ಲ. ಮತ್ತೂ ಶಿವನಲ್ಲಿ ಭಕ್ತಿ ಉಳ್ಳವರಿಗಿಂತಲೂ ಅಧಿಕವಾದ ಜನರೂ ಇಲ್ಲ ಅದುಕಾರಣ ಇಹಪರದಲ್ಲಿಯೂ ಕೂಡ ಅಪೇಕ್ಷೆಯುಳ್ಳವರು ಶಿವಭಕ್ತಿಯನ್ನೇ ಮಾಡಬೇಕು. ಈ ಮಹಾತ್ಮನ ದೆಸೆಯಿಂದ ಶಿವಾರಾಧಕರ ಪ್ರಭಾವವಂ, ಅದಕ್ಕೆ ಉಪಯೋಗಿಗಳಾದ ಸಾಧನಂಗಳಂ, ಅವರ ಮಹಿಮೆಯಂ ಕೂಡ ಸಾಂಗವಾಗಿ ತಿಳಿದಂತಾಯಿತು, ಈಗ ಈಶ್ವರಾರಾಧನಕ್ರಮವಂ, ಮತ್ತೂ ಈಶ್ವರಾರಾಧಕರ ಕ್ರಮವಂ ಕೂಡ ಈತನ ಮುಖದಿಂದಲೇ ತಿಳಿಯಬೇಕೆಂದು ಮನದೊಳ್ ನಿಶ್ಚೈಸಿ ವಂದನೆಯಂ ಮಾಡಿ, ಶಿವಾರಾಧನೆಯಂ ಮಾಡುವ ಮಹಾಪುರುಷರು ಯಾವ ರೂಪದಿಂದಿರುವರೋ, ಅವರುಗಳ ವಿವರವಂ, ಮತ್ತೂ ವಿಶೇಷವಾಗಿ ಶಿವಪೂಜೆಯಂ ಮಾಡುವ ಪರಿಯಂ ಕೂಡ ವಿಸ್ತಾರವಾಗಿ ಉಪದೇಶಿಸಬೇಕೆಂದು ವಿಜ್ಞಾಪನೆಯಂ ಗೈಯ್ಯಲು, ಆಗ ಪುರುಷಮೃಗನು ಸುಗಂಧರಾಜೇಂದ್ರನಂ ಕುರಿತು ಎಲೈ ಭೂವಲ್ಲಭನೇ! ಮೊದಲು ಲಿಂಗಕ್ರಮವಂ ಪೇಳುವೆನು ಕೇಳು ಮಹಾ ವಿಷ್ಣುವು ನಿರಂತರದಲ್ಲಿಯೂ ಇಂದ್ರನೀಲ ರತ್ನದಿಂ ನಿರ್ಮಿತವಾದ ಲಿಂಗವಂ, ಇಂದ್ರನು ಮಾಣಿಕ್ಯದಿಂ ನಿರ್ಮಿತವಾದ ಲಿಂಗವಂ, ಅಗ್ನಿಯು ಕಾಲ್ಯನ್ನದಿಂ ನಿರ್ಮಿತವಾದ ಲಿಂಗವಂ, ಯಮನು ನರ್ಮದಾ ಲಿಂಗವಂ, ನಿಋುತಿಯು ಸೈಕತಲಿಂಗವಂ, ವರುಣನು ಸ್ಫಟಿಕಲಿಂಗವಂ, ವಾಯುವು ಹಿತ್ತಾಳೇಲಿಂಗವಂ, ಕುಬೇರನು ಸುವರ್ಣಲಿಂಗವಂ, ಸೂರ್ಯನು ತಾಮ್ರದಲಿಂಗವಂ, ಚಂದ್ರನು ಮುತ್ತಿನಲಿಂಗವಂ, ವಿಶ್ವೇದೇವರುಗಳು ರಜತಲಿಂಗವಂ, ಅಷ್ಟವಸುಗಳು ಕಂಚಿನಲಿಂಗವಂ, ಅಶ್ವಿನೀದೇವತೆಗಳು ಪಾರ್ಥಿವಲಿಂಗವಂ, ಸಪ್ತಮಾತೃಕೆಗಳು ಪಂಚಲೋಹದ ಲಿಂಗವಂ, ದೈತ್ಯರು ಉಕ್ಕಿನಲಿಂಗವಂ, ರಾಕ್ಷಸರು ಕಬ್ಬಿಣದ ಲಿಂಗವಂ ನಿತ್ಯ ಪಿಶಾಚಂಗಳು ಸೀಸದಲಿಂಗವಂ, ಗುಹ್ಯಕರು ಮೊದಲಾದವರು

ಮೂರು ಲೋಹದ ಲಿಂಗಮಂ, ಸುಪರ್ಣ ಮೊದಲಾದ ಗರುಡರು ಪಚ್ಚೆಯಲಿಂಗಮಂ, ಆದಿಶೇಷ ಮೊದಲಾದ ನಾಗಶ್ರೇಷ್ಠರು ಹವಳದಲಿಂಗಮಂ ಪೂಜಿಸುವರು, ಇಂತೀಕ್ರಮದಲ್ಲಿ ದೇವತೆಗಳೆಲ್ಲರೂ ಪರಮೇಶ್ವರನನ್ನಾರಾಧಿಸುತ ತಮತಮಗೆ ಯೋಗ್ಯಂಗಳಾದ ಪದವಿಗಳಂ ಪಡೆದು ಸಮಸ್ತಭೋಗಂಗಳನ್ನನುಭವಿಸಿಕೊಂಡು ಸುಖದಿಂದಿರುವರು. ಮತ್ತೂ ಶಿವಭಕ್ತಿಯುಂಟಾದವರು ಪೂಜೆಯಂ ಮಾಡುವುದಕ್ಕೆ ಲಿಂಗಗಳ ವಿಶೇಷವಂ ಪೇಳುವೆನು—ಸುವರ್ಣಲಿಂಗವಂ ಪೂಜಿಸಿದರೆ ಸೌಭಾಗ್ಯವನ್ನಿತ್ತು ಪರದಲ್ಲಿ ಸತ್ಯಲೋಕಪ್ರಾಪ್ತಿಯನ್ನುಂಟು ಮಾಡುವುದು, ಯಶಸ್ಕರವಾದ ರಜತ ಲಿಂಗವು ಪಿತೃಲೋಕ ಪ್ರಾಪ್ತಿಯನ್ನುಂಟು ಮಾಡುವುದು ತಾಮ್ರದಲಿಂಗವು ಪುಷ್ಟಿಕರವು, ಹಿತ್ತಾಳೆಲಿಂಗವು ತುಷ್ಟಿಯಂ ಮಾಡುವುದು, ಕಂಚಿನಲಿಂಗವು ಕೀರ್ತಿಯಂ ಹೆಚ್ಚಿಸುವುದು, ಕಬ್ಬಿಣದಲಿಂಗವು ಶತ್ರುಕ್ಷಯಕರವು, ಸೀಸದಲಿಂಗವು ಆಯುರಭಿವೃದ್ಧಿ ಸಂಪಾದಕವು, ಸೈಕತಲಿಂಗವು ಪ್ರಭಾವವನ್ನುಂಟು ಮಾಡುವುದು, ಪಾಷಾಣಲಿಂಗವು ಪುಣ್ಯಪ್ರದವು, ಕಾಶ್ಮೀರ ಶಿಲಾಲಿಂಗವು ಐಶ್ವರ್ಯಪ್ರದವು, ಮರಕತಲಿಂಗವು, ದುಃಖಶಾಂತಿಕರವು, ಸ್ಫಟಿಕಲಿಂಗವು ಅಖಂಡ ಭೂಮಂಡಲಾಧಿಪತ್ಯವನ್ನುಂಟು ಮಾಡುವುದು, ಇಂದ್ರನೀಲಲಿಂಗವು ಸೌಖ್ಯಪ್ರದವು, ಮುತ್ತಿನಲಿಂಗವು ಶ್ರೇಯಃಪ್ರದವು, ಪಾದರಸಲಿಂಗವು ಸಕಲೇಷ್ಟಾರ್ಥಂಗಳನ್ನೀವುದು, ಕಸ್ತೂರಿ ನಿರ್ಮಿತಲಿಂಗವು ಸಕಲ ಸುಗಂಧವಂ ಕೊಡುವುದು, ಶ್ರೀಗಂಧಲಿಂಗವು ಜ್ವರನಾಶವಂ ಮಾಡುವುದು, ಕರ್ಪೂರದ ಲಿಂಗವು ಸರ್ವರೋಗಶಾಂತಿಕರವು, ಗೋರೋಚನದ ಲಿಂಗವು ದಿವ್ಯರೂಪವಂ ಕೊಡುವುದು, ಕುಂಕುಮದ ಹುವ್ವಿನಲಿಂಗವು ಕಾಂತಿಯನ್ನುಂಟುಮಾಡುವುದು, ಶ್ವೇತಾಗರುಗಂಧಲಿಂಗವು ವಿಶೇಷಬುದ್ಧಿಪ್ರದವು, ಕೃಷ್ಣಾಗರುಗಂಧಲಿಂಗವು ಧಾರಣಾಶಕ್ತಿಯನ್ನುಂಟು ಮಾಡುವುದು, ಫಲಲಿಂಗವು ಸರ್ವರಲ್ಲಿಯೂ ಪ್ರೀತಿಯನ್ನುಂಟುಮಾಡುವುದು, ಪುಷ್ಪಲಿಂಗವು ಪುಷ್ಪವೃದ್ಧಿಯಂ ಮಾಡುವುದು, ಕಬ್ಬಿನಲ್ಲಿ ಮಾಡಿದಲಿಂಗವು ಶತ್ರುಗಳಂ ಓಡಿಸುವುದು, ದೂರ್ವಾಂಕುರದ ಲಿಂಗವು ಅಪ

ಮೃತ್ಯುಭಯವಂ ಪರಿಹರಿಸುವುದು, ಬಿದರುಕಳಲೆಯಿಂದ ಮಾಡಿದಲಿಂಗವು ವಂಶಾಭಿವೃದ್ಧಿಯನ್ನುಂಟು ಮಾಡುವುದು, ಗೋಮಯ ಲಿಂಗವು ಸರ್ವರೋಗಂಗಳಂ ಪರಿಹರಿಸುವುದು, ಭಸ್ಮದಲಿಂಗವು ಮೋಕ್ಷಪ್ರದವು, ಅರಿಶಿನದ ಕೊನೆಯಲ್ಲಿ ಮಾಡಿದಲಿಂಗವು ಸರ್ವರಲ್ಲಿಯೂ ಪ್ರೀತಿಯನ್ನುಂಟುಮಾಡುವುದು, ನವನೀತಲಿಂಗವು ಕೀರ್ತಿಪ್ರದವು, ಮೊಸರಿನಲ್ಲಿಮಾಡಿದಲಿಂಗವು ಐಶ್ವರ್ಯವನ್ನಿತ್ತು ಸುಖವನ್ನುಂಟುಮಾಡುವುದು, ಸಕ್ಕರೆಯಲ್ಲಿ ಮಾಡಿದಲಿಂಗವು ಪುತ್ರಪ್ರದವು, ಉಪ್ಪಿನಲಿಂಗವು ಸಕಲಲೋಕವಶ್ಯಕರವು, ಅರಶಿನದಪುಡಿಯಲ್ಲಿ ಮಾಡಿದಲಿಂಗವು ಸ್ತಂಭನಕರವು, ನೆಲ್ಲುಹೊಟ್ಟಿನಲ್ಲಿ ಮಾಡಿದಲಿಂಗವು ಮಾರಣಕರವು, ಅಕ್ಕೀಹಿಟ್ಟಿನಲ್ಲಿ ಮಾಡಿದ ಲಿಂಗವು ವಿದ್ಯಾಪ್ರದವು, ಯವೆಯಹಿಟ್ಟಿನಲ್ಲಿ ಮಾಡಿದಲಿಂಗವು ವಂಶವೃದ್ಧಿಯಂ ಮಾಡುವುದು, ಗೋಧೀಹಿಟ್ಟಿನಲಿಂಗವು ಗೋವುಗಳಂ ಹೆಚ್ಚಿಸುವುದು, ಹೆಸರುಹಿಟ್ಟಿನಲಿಂಗವು ಸಂತೋಷವನ್ನುಂಟು ಮಾಡುವುದು, ಉದ್ದಿನಹಿಟ್ಟಿನಲಿಂಗವು ಇಷ್ಟಸಿದ್ಧಿಯಂ ಕೊಡುವುದು, ಕಡಲೆಹಿಟ್ಟಿನಲಿಂಗವು ಶರೀರ ಶುದ್ಧಿಯನ್ನುಂಟು ಮಾಡುವುದು, ಎಳ್ಳುಪುಡಿಯಲ್ಲಿ ಮಾಡಿದಲಿಂಗವು ಗ್ರಾಮಾಧಿಪತ್ಯವನ್ನುಂಟು ಮಾಡುವುದು, ನೀವಾರದಹಿಟ್ಟಿನಲಿಂಗವು, ಸರ್ವಾರಿಷ್ಟಂಗಳಂ ಪರಿಹರಿಸುವುದು, ಶಾಲ್ಯನ್ನದಲಿಂಗವು ಅನ್ನವೃದ್ಧಿಯನ್ನುಂಟು ಮಾಡುವುದು, ಮತ್ತೂ ವಸಂತಕಾಲದಲ್ಲಿ ಹಿಪ್ಪೇಹೂವಿನ ಲಿಂಗವಂ ಮಾಡಿ ಪೂಜಿಸಲು, ದಂಪತಿಗಳಿಗೆ ಪರಸ್ಪರ ಅನುರಾಗವು ಅಭಿವೃದ್ಧಿಯಾಗುವುದು, ಗ್ರೀಷ್ಮಋತುವಿನಲ್ಲಿ ಮಲ್ಲಿಗೇ ಹೂವಿನಲಿಂಗವಂ ಮಾಡಿ ಪೂಜಿಸಲು ಕೃಷಿಯು ವೃದ್ಧಿಯಾಗುವುದು, ವರ್ಷಋತುವಿನಲ್ಲಿ ನಾನಾಜಾತಿ ಪುಷ್ಪಂಗಳಿಂದ ಲಿಂಗವಂ ಮಾಡಿ ಪೂಜಿಸಲು ಸುಖಾಭಿವೃದ್ಧಿಯಾಗುವುದು, ಶರದೃತುವಿನಲ್ಲಿ ಕನ್ನೈದಿಲೇಪುಷ್ಪದಲಿಂಗವಂ ಪೂಜಿಸಲು ಸರ್ವಸಿದ್ಧಿಯಾಗುವುದು, ಹೇಮಂತ ಋತುವಿನಲ್ಲಿ ಜಾಜೀಪುಷ್ಪದಲಿಂಗವಂ ಪೂಜಿಸಲು ಶಿವಲೋಕಪ್ರಾಪ್ತಿಯಾಗುವುದು, ಶಿಶಿರಋತುವಿನಲ್ಲಿ ಸಂಪಿಗೇಹೂವಿನ ಲಿಂಗವಂ ಪೂಜಿಸಲು ಸಮಸ್ತ ಪಾಪಪರಿಹರವಾಗುವುದು, ಮತ್ತೂ ಲಿಂಗನಿರ್ಣಯವಂ ಪೇಳುವೆನು—ಪಾಷಾಣಲಿಂಗಕ್ಕಿಂತಲು ಸ್ಫಟಿಕಲಿಂಗವು ಉತ್ತ

ಮವು, ಅದಕ್ಕಿಂತಲೂ ಮಾಣಿಕ್ಯಲಿಂಗವು, ಅದಕ್ಕಿಂತಲೂ ಕಾಶ್ಮೀರ ಶಿಲಾಲಿಂಗವು, ಅದಕ್ಕಿಂತಲೂ ಪುಷ್ಯರಾಗಲಿಂಗವು, ಅದಕ್ಕಿಂತಲು ಇಂದ್ರನೀಲಲಿಂಗವು, ಅದಕ್ಕಿಂತಲು ಗೋಮೇಧಿಕಲಿಂಗವು, ಅದಕ್ಕಿಂತಲು ವೈಡೂರ್ಯಲಿಂಗವು, ಅದಕ್ಕಿಂತಲು ಪಚ್ಚೆಲಿಂಗವು, ಅದಕ್ಕಿಂತಲು ಮುತ್ತಿನಲಿಂಗವು, ಅದಕ್ಕಿಂತಲು ರಜತಲಿಂಗವು, ಅದಕ್ಕಿಂತಲು ಸುವರ್ಣಲಿಂಗವು, ಅದಕ್ಕಿಂತ ವಜ್ರದಲಿಂಗವು, ಅದಕ್ಕಿಂತ ರಸಲಿಂಗವು, ಅದಕ್ಕಿಂತ ಶಿವನಾಭವು, ಅದಕ್ಕಿಂತಪಾರ್ಥಿವಲಿಂಗವು, ಈ ಪರಿಯೊಳ್ ಒಂದಕ್ಕಿಂತಲೂ ಒಂದು ಉತ್ತಮವು, ಅದುಕಾರಣ ಪೂರ್ವೋಕ್ತಂಗಳಾದ ಲಿಂಗಗಳಲ್ಲಿ ಯಾವದಾನೊಂದು ಲಿಂಗವಂ ಪಾರ್ಥಿವಲಿಂಗವನ್ನಾಗಿ ಭಾವಿಸಿ ಪೂಜೆಯಂ ಮಾಡಲು ಕ್ಷಿಪ್ರವಾಗಿ ಸಿದ್ಧಿಯಾಗುವುದು, ಪೂರ್ವೀಕರು ಬಹುಮಂದಿ ಪಾರ್ಥಿವ ಪೂಜೆಯಂ ಮಾಡಿ ಸಿದ್ಧಿಯಂ ಪಡದಿರುವರು, ಅದೆಂತೆನೆ—ಕೃತಯುಗದವರು ಮಾಣಿಕ್ಯಲಿಂಗದಲ್ಲಿ ಪಾರ್ಥಿವ ಪೂಜೆಯಂ ಮಾಡಿ ಕೃತಾರ್ಥರಾಗಿರುವರು. ತ್ರೇತಾಯುಗದಲ್ಲಿ ಸುವರ್ಣಲಿಂಗವಂ ಪೂಜಿಸಿ ಸಿದ್ಧಿಯಂ ಪಡದಿರುವರು. ದ್ವಾಪರಯುಗದೊಳ್ ರಸದಲಿಂಗವಂ ಪೂಜಿಸಿ ಕೃತಾರ್ಥರಾಗಿರುವರು. ಕಲಿಯುಗದಲ್ಲಿ ಪಾರ್ಥಿವಲಿಂಗವಂ ಪೂಜೆಯಂ ಮಾಡಿ ಇಷ್ಟಾರ್ಥ ಸಿದ್ಧಿಯಂ ಪಡೆಯಬೇಕು. ಅದೇನುಕಾರಣವೆಂದರೆ—ಅಷ್ಟಮೂರ್ತಿಗಳಲ್ಲಿ ಮೊದಲುಮೂರ್ತಿಯು ಪಾರ್ಥಿವಮೂರ್ತಿಯಾದಕಾರಣ ಪಾರ್ಥಿವಲಿಂಗವು ಉತ್ತಮೋತ್ತಮವು. ಮತ್ತೂ ವೇದಪ್ರತಿಪಾದ್ಯವಾದ ದೇವತೆಗಳಲ್ಲಿ ಮಹೇಶ್ವರನು ಎಂತು ಶ್ರೇಷ್ಠನೋ! ಅಂತು ಪೂರ್ವೋಕ್ತ ಲಿಂಗಗಳಲ್ಲಿ ಪಾರ್ಥಿವಲಿಂಗವು ಶ್ರೇಷ್ಠವು. ಇಂತಪ್ಪ ಪಾರ್ಥಿವ ಲಿಂಗಕ್ಕೆ ಪಂಚಸೂತ್ರವಿರಬೇಕೆಂಬ ನಿಯಮವಿಲ್ಲ, ಪಾರ್ಥಿವಲಿಂಗವಂ ರತ್ನಗಳಿಂದಲು, ಸುವರ್ಣದಿಂದಲು, ರಸದಿಂದಲು, ಸ್ಫಟಿಕದಿಂದಲು. ಮತ್ತೂ ಪೂರ್ವೋಕ್ತವಾದ ದ್ರವ್ಯಂಗಳಿಂದಲು, ಮಾಡಿ ಅರ್ಚಿಸಬಹುದು, ಪಾರ್ಥಿವಲಿಂಗವಂ ತತ್ಕಾಲದಲ್ಲಿ ಅಖಂಡವಾಗಿ ಮಾಡಬೇಕಲ್ಲದೇ ಎರಡು ತುಂಡುಗಳಿಂದ ಮಾಡಕೂಡದು, ಇದೇ ಪಾರ್ಥಿವ ಲಿಂಗನಿರ್ಣಯವು ಪೂಜಾಕ್ರಮವೆಂತೆಂದರೆ—ಮೊದಲು ಸ್ನಾನವಂ ಮಾಡಿ ಶುಚಿಯಾಗಿ

ನಿತ್ಯಕರ್ಮಗಳಂ ನೆರವೇರಿಸಿ ಪೂಜಾದ್ರವ್ಯವಂ ಸಂಗ್ರಹಿಸಿಕೊಂಡು ಶುಚಿಯಾದ ಸ್ಥಳದಲ್ಲಿ ಗೋಮಯದಿಂದ ಶುದ್ಧಿಯಂ ಮಾಡಿ ಪೂಜಾರಂಭವಂ ಮಾಡಬೇಕು, ಅದೆಂತೆಂದರೆ—ಪಂಚೋಪಚಾರ ಪೂಜೆ ಎಂದು ಷೋಡಶೋಪಚಾರಪೂಜೆ ಎಂದು, ಅಷ್ಟೋಪಚಾರ ಪೂಜೆ ಎಂದು, ದ್ವಾತ್ರಿಂಶದುಪಚಾರ ಪೂಜೆ ಎಂದು, ಇಂತು ನಾಲ್ಕು ಪರಿಯಾಗಿ ಪೂಜೆ ಉಂಟು, ಅವೆಂತೆಂದರೆ-ಗಂಧ,ಪುಷ್ಪ, ಧೂಪ, ದೀಪ, ನೈವೇದ್ಯ, ಇವು ಐದು ಪಂಚೋಪಚಾರ ಪೂಜೆ ಎನಿಸಿಕೊಂಬುದು, ತಾಂಬೂಲ, ಪ್ರದಕ್ಷಿಣ, ನಮಸ್ಕಾರ ಇವು ಮೂರು ಕೂಡಿದರೆ ಅಷ್ಟೋಪಚಾರ ಪೂಜೆ ಎನಿಸಿಕೊಂಬುದು. ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ, ಉಪವೀತ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಪ್ರದಕ್ಷಿಣ, ನಮಸ್ಕಾರ, ವಿಸರ್ಜನ, ಈ ಹದಿನಾರು ಷೋಡಶೋಪಚಾರ ಪೂಜೆ ಎನಿಸಿಕೊಂಬುದು. ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ, ಉಪವೀತ, ಭೂಷಣ, ಗಂಧ, ತಿಲಾಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ, ಮುಖವಾಸ, ತಾಂಬೂಲ, ನೀರಾಜನ, ದರ್ಪಣ, ಪ್ರದಕ್ಷಿಣ, ನಮಸ್ಕಾರ, ಸ್ತೋತ್ರ, ಪುರಾಣಶ್ರವಣ, ಛತ್ರ, ಚಾಮರ, ವ್ಯಜನ, ಶಯ್ಯಾಸನ, ಸಂಗೀತ, ನೃತ್ಯ, ವಾದ್ಯ, ವಾಹನ, ಆತ್ಮಾರೋಪಣ, ಇವು ದ್ವಾತ್ರಿಂಶದುಪಚಾರಂಗಳೆನಿಸಿಕೊಂಬುವುವು. ಈ ಉಪಚಾರಂಗಳಿಗೆ ಫಲವಂ ಪೇಳ್ವೆನು-ಪರಮೇಶ್ವರನ ಲಿಂಗದೊಳಾವಾಹನೆಯಂ ಮಾಡಿದ ಮಾತ್ರದಿಂದಲೇ ಯಜ್ಞವಂ ಮಾಡಿದ ಫಲ ಉಂಟಾಗುವುದು, ಉತ್ತಮವಾದ ಪೀಠವಂ ಸಮರ್ಪಿಸಲು ಇಂದ್ರಪದಪ್ರಾಪ್ತಿಯಾಗುವುದು, ಪಾದ್ಯವಂ ಕೊಡಲು ಮೂರು ವಿಧವಾದ ಪಾಪಂಗಳು ಪರಿಹಾರವಾಗುವುದು, ಅರ್ಘ್ಯದಿಂದ ಧನಾಢ್ಯನಾಗುವನು, ಆಚಮನದಿಂ ಸಾಮ್ರಾಜ್ಯವಂ ಪಡೆಯುವನು, ಸ್ನಾನದಿಂ ರೋಗಗಳು ಪರಿಹಾರವಾಗಿ ದೃಢಾಂಗನಾಗುವನು, ವಸ್ತ್ರದಿಂ ಆಯುರಭಿವೃದ್ಧಿಯಾಗುವುದು, ಉಪವೀತದಿಂ ಬ್ರಹ್ಮಜ್ಞಾನ ಪ್ರಾಪ್ತವಾಗುವುದು, ಆಭರಣದಿಂ ಗಣಾಧಿಪತಿಯಾಗುವನು, ಗಂಧದಿಂ ಅಪ್ಸರಸ್ತ್ರೀಪ್ರಾಪ್ತಿಯಾಗುವುದು, ಅಕ್ಷತೆಯಿಂದ ಕುಬೇರನಾಗುವನು, ನಾನಾವಿಧಪು

ಷ್ಟಂಗಳಿಂದಸ್ವರ್ಗಪ್ರಾಪ್ತಿಯಾಗುವದು, ಧೂಪದಿಂದ ಪ್ರತಿಬಂಧಕನಿವೃತ್ತಿಯಾಗುವದು, ದೀಪದಿಂ ಮೃತ್ಯುನಾಶವಾಗುವದು, ನೈವೇದ್ಯದಿಂದ ಸಕಲಾಭೀಷ್ಟಂಗಳು ಉಂಟಾಗುವುವು, ಮುಖವಸ್ತ್ರದಿಂದ ಕೀರ್ತಿವಂತನಾಗುವನು, ತಾಂಬೂಲದಿಂದ ಪುತ್ರವಂತನಾಗುವನು, ಉತ್ತರ ನೀರಾಜನದಿಂದ ಶುದ್ಧಾಂತಃಕರಣನಾಗುವನು, ದರ್ಪಣದಿಂದ ತೇಜಸ್ವಿಯಾಗುವನು, ಪ್ರದಕ್ಷಿಣದಿಂದ ಹೆಜ್ಜೆ ಹೆಜ್ಜೆಗೆ ಅಶ್ವಮೇಧ ಫಲ ಉಂಟಾಗುವದು, ನಮಸ್ಕಾರದಿಂ ಶರೀರದೊಳಿರುವ ರೋಮಂಗಳ ಸಂಖ್ಯೆ ಎಷ್ಟಿರುವದೋ ಅಷ್ಟು ಕಲ್ಪ ಶಿವಲೋಕದೊಳ್ ವಾಸ ಉಂಟಾಗುವದು, ಸ್ತೋತ್ರದಿಂ ಶಿವಸಾರೂಪ್ಯ ಉಂಟಾಗುವದು, ಗಾನದಿಂ ವಿದ್ಯಾಸಿದ್ಧಿಯಾಗುವದು, ಪುರಾಣ ಶ್ರವಣದಿಂ ಲೋಕದೊಳ್ ಗುರುತ್ವ ಪ್ರಾಪ್ತಿಯಾಗುವದು, ಛತ್ರದಿಂ ಸಾಕ್ಷಾನ್ನಂದೀಶ್ವರ ಸಮಾನನಾಗುವನು, ಚಾಮರದಿಂ ಷಣ್ಮುಖಸಮಾನನಾಗುವನು, ವ್ಯಜನದಿಂ ವಾಯುವಿಗೆ ಸಮಾನನಾಗುವನು, ಶಯ್ಯೆಯಿಂದ ಪುನರಾವೃತ್ತಿ ರಹಿತವಾದ ಪದವಿಯಂ ಪಡೆಯುವನು, ನರ್ತನದಿಂ ಸಮಸ್ತ ಯಜ್ಞವಂ ಮಾಡಿದ ಫಲ ಉಂಟಾಗುವದು, ವಾದ್ಯದಿಂ ಶಿವಸಾಕ್ಷಾತ್ಕಾರವಾಗುವದು, ಆತ್ಮಾರೋಪಣದಿಂ ಶಿವಸಾಯುಜ್ಯ ಉಂಟಾಗುವದು, ಈ ಮುವ್ವತ್ತೆರಡು ಉಪಚಾರಂಗಳಿಂದ ನಿತ್ಯದಲ್ಲಿಯೂ ಪಾರ್ಥಿವೇಶ್ವರನಂ ಯಾರು ಪೂಜಿಸುವರೋ ಅವರು ಇಹದೊಳ್ ಸಮಸ್ತ ಭೋಗಂಗಳಂ ಅನುಭವಿಸಿ ಪರದೊಳ್ ಶಿವಸಾಯುಜ್ಯವಂ ಪಡೆಯುವರು, ಮತ್ತೂ ವಿಶೇಷೋಪಚಾರಂಗಳಂ ಮಾಡಬೇಕೆಂಬ ಇಚ್ಛೆ ಉಂಟಾದರೆ ಆ ಉಪಚಾರಂಗಳೆಲ್ಲವಂ ಮೂಲ ಮಂತ್ರದಿಂದಲೇ ಸಮರ್ಪಣೆಯಂ ಮಾಡಬಹುದು, ಪರಮೇಶ್ವರನ ಪ್ರತಿಮೆಗಳಲ್ಲಿ ಅನೇಕ ಕೋಟಿಕಾಲ ಪೂಜೆಯಂ ಮಾಡಿದರೆ ಯಾವ ಫಲ ಉಂಟಾಯಾವದೋ ಆ ಫಲ ಒಂದುಪಾರ್ಥಿವೇಶ್ವರನ ಪೂಜೆಯಿಂದ ಲಭಿಸುವದು. ಕಲಿಯುಗದಲ್ಲಿ ಪಾರ್ಥಿವೇಶ್ವರನಿಗಿಂತ ಅಧಿಕವಾದ ಲಿಂಗವು ಸರ್ವಥಾ ಇಲ್ಲವು, ಮತ್ತೂ ಸಮಯ ಭೇದದಿಂದ ಪೂಜೆಯಂ ಮಾಡಬೇಕಾದರೆ ಮಾನಸಪೂಜಾ ಕ್ರಮವಂ ಹೇಳ್ವೆನು ಅದೆಂತೆನೆ—ಅಂತರ್ಯಾಮಿಯಾದ ಪರಶಿವನಂ ಜ್ಞಾನಲಿಂಗವನ್ನಾಗಿರುವಂತೆಯು, ಹೃದಯಕಮಲ

ವಂ ಪೀಠವಾಗಿಯು, ಮನೋಭಾವವೆಂಬ ಪುಷ್ಪದಿಂದೆ ಅಲಂಕೃತನ ನ್ನಾಗಿಯು, ಶಿರಸ್ಸಿನಲ್ಲಿರುವ ಸಹಸ್ರದಳಕಮಲದ ಮಕರಂದದಿಂದ ಅಭಿ ಷಿಕ್ತನನ್ನಾಗಿಯು, ಅಂತರಾಕಾಶವೆಂಬ ವಸ್ತ್ರದಿಂದಲಂಕರಿಸಲ್ಪಟ್ಟವ ನನ್ನಾಗಿಯು, ಇಂತಪ್ಪ ಜ್ಞಾನಲಿಂಗವಂ ಹೃದಯಕಮಲದಲ್ಲಿ ಧ್ಯಾನಿಸಿ, ಬಳಿಕ ಸುಜ್ಞಾನವೆಂಬ ದೀಪವಂ ಹಚ್ಚಿಸಿ, ಕ್ಷಮೆ ಎಂಬ ಜಲದಿಂದ ಅಭಿಷೇಕವಂ ಮಾಡಿ, ವಿವೇಕವೆಂಬ ವಸ್ತ್ರದಿಂದಳವಡಿಸಿ, ಸತ್ಯವೆಂಬ ಆಭರಣವಂ ಸಮರ್ಪಿಸಿ, ವೈರಾಗ್ಯವೆಂಬ ಹೂಮಾಲೆಯಿಂ ಪೂಜಿಸಿ, ಶಮದಮಗಳೆಂಬ ಗಂಧ ಧಾರಣೆಯಂ ಮಾಡಿ, ನಿರಹಂಕಾರವೆಂಬ ಅಕ್ಷ ತೆಯಂ ತಳಿದು, ಭಕ್ತಿ ಎಂಬ ಧೂಪವನ್ನಿತ್ತು, ಜ್ಞಾನವೆಂಬ ದೀಪವ ನ್ನೆತ್ತಿ, ಆನಂದಾಮೃತವೆಂಬ ನೈವೇದ್ಯವಂ ಸಮರ್ಪಿಸಿ, ಮೌನವೆಂಬ ಶುದ್ಧೋದಕವನ್ನಿತ್ತು, ವಿಷಯಂಗಳೆಂಬ ತಾಂಬೂಲವಂ ಸಮರ್ಪಿಸಿ, ಬುದ್ಧಿಪ್ರಕಾಶವೆಂಬ ನೀರಾಜನವನ್ನೆತ್ತಿ, ವೇದೈಕವೇದ್ಯನೆಂಬ ಮಂ ತ್ರಪುಷ್ಪವಂ ಸಮರ್ಪಿಸಿ, ವಿಷಯಭ್ರಾಂತಿ ಇಲ್ಲದೇ ಇರುವವೆಂಬುವದಂ ಪ್ರದಕ್ಷಿಣೆಯಾಗಿ ಕಲ್ಪಿಸಿ, ಮತ್ತೂ ಸೋಽಹಮೆಂಬ ಭಾವ ಬುದ್ಧಿಯಂ ನಮಸ್ಕಾರವಾಗಿ ಸಮರ್ಪಿಸುವದೇ ಮಾನಸ ಪೂಜೆಯು. ಇಂತಪ್ಪ ಮಾನಸ ಪೂಜೆಯಂ ಭಾವಶುದ್ಧಿಯಿಂ ಮಾಡಿದವಂಗೆ ಅನೇಕ ಕಾಲ ಬಾಹ್ಯ ಪೂಜೆಯಂ ಮಾಡಿದ ಫಲವು ಕ್ಷಣಾರ್ಧದೊಳ್ ಪ್ರಾಪ್ತವಾಗು ವದು. ಮತ್ತೂ ಮೂರ್ತಿ ಪೂಜೆಗಿಂತಲೂ ಸ್ತೋತ್ರವು ಕೋಟಿಗುಣ ಅಧಿಕವು, ಅವಕ್ಕಿಂತಲೂ ಜಪವು ಕೋಟಿಗುಣ ಅಧಿಕವು, ಅದಕ್ಕಿಂ ತಲೂ ಧ್ಯಾನವು ಕೋಟಿಗುಣ ಅಧಿಕವು, ಅದಕ್ಕಿಂತಲೂ ಮನೋಲ ಯವು ಕೋಟಿಗುಣ ಅಧಿಕವು, ಈ ಅರ್ಥವಂ ತಿಳಿದು ಯಾರು ಆಚರ ಣೆಯಂ ಮಾಡುವರೋ ಅವರೇ ಕೃತಕೃತ್ಯರೆಂದು ತಿಳಿವದು. ನಮಸ್ಕಾರ ಲಕ್ಷಣವೆಂತೆಂದರೆ—ನಮಸ್ಕಾರವು ನಾಲ್ಕು ಪರಿಯಾಗಿರುವದು. ಶಿರ ಸ್ಸು. ಹಸ್ತಗಳೆರಡು, ಕರ್ಣಗಳೆರಡು, ಚುಬುಕ ಒಂದು, ಬಾಹುಗ ಳೆರಡು, ಈ ಎಂಟನ್ನು ಭೂಮಿಯಂ ಮುಟ್ಟಿಸಿ ನಮಸ್ಕಾರವಂ ಮಾಡುವ ದೇ ಸಾಷ್ಟಾಂಗವೆನಿಸಿಕೊಂಬುದು. ಶಿರಸ್ಸು, ಹಸ್ತಗಳೆರಡು, ಮೊಣ ಕಾಲುಗಳೆರಡು, ಈ ಐದಂ ಭೂಮಿಯಂ ಮುಟ್ಟಿಸಿ ನಮಸ್ಕಾರವಂ

ಮಾಡುವದೇ ಸ್ತ್ರೀಯರು ಮಾಳ್ಪ ನಮಸ್ಕಾರವು, ಕೈಗಳೆರಡಂ ಕೂಡಿಸಿ ಶಿರಸ್ಸಿನಮೇಲಿಟ್ಟು ಎರಗುವದೇ ಅಂಗದ್ವಯ ನಮಸ್ಕಾರವು, ಕೇವಲ ಶಿರಸ್ಸು ಮಾತ್ರ ಬಾಗಲು ಏಕಾಂಗ ನಮಸ್ಕಾರವೆಂದರಿವುದು. ಇಂತೆಲ್ಲದೇ ಶೈವವ್ರತಗಳ್ಯಾವವೆಂದರೆ—ಉಮಾಮಹೇಶ್ವರವ್ರತವು, ನಂದಿವ್ರತವು, ಭೀಮೇಶ್ವರವ್ರತವು, ಶೂಲವ್ರತವು, ಸ್ಕಂದವ್ರತವು, ಕೇದಾರೇಶ್ವರವ್ರತವು, ಮಹಾಪಾತಾಳವ್ರತವು, ಇವುಗಳೇ ಮೊದಲಾದ ಶೈವವ್ರತಂಗಳಲ್ಲಿ ವ್ರತಾಂಗವಾಗಿ ಈಶ್ವರಾರಾಧನೆಯಂ ಮಾಡಲು ಅದು ಲಕ್ಷಗುಣಾಧಿಕವಾಗುವದು. ಮತ್ತು ಶೈವ ಮಹಾವ್ರತಗಳ್ಯಾವ್ಯಾವೆಂದರೆ—ಶ್ರಾವಣಸೋಮವಾರ, ಕಾರ್ತಿಕಸೋಮವಾರ, ಅಮಾಸೋಮವಾರ, ನಿತ್ಯಸೋಮವಾರ, ಪಕ್ಷಪ್ರದೋಷ, ಶನಿವಾರಕೂಡಿದಪ್ರದೋಷ, ಆರ್ದ್ರಾನಕ್ಷತ್ರ, ಕೃಷ್ಣಾಷ್ಟಮಿ, ಮಾಸಶಿವರಾತ್ರಿ, ಮಹಾಶಿವರಾತ್ರಿ, ಈ ಹತ್ತು ಶೈವಮಹಾವ್ರತಂಗಳು, ಇವುಗಳೊಳ್ ಒಂದು ಮಹಾವ್ರತಂಗಳನ್ನಾದರೂ ಯಾರು ಮಾಡುವರೋ ಅವರಿಗೆ ಪುನರ್ಜನ್ಮವಿಲ್ಲವು. ಈ ಹತ್ತು ವ್ರತಂಗಳಂ ಬಿಡದೇ ಆಚರಣೆಯಂ ಮಾಡಿದವರ್ಗೆ ಫಲವಂ ಹೇಳುವದಕ್ಕೆ ಪರಮೇಶ್ವರನಲ್ಲದೆ ಮತ್ತೊಬ್ಬರಿಂದ ಅಶಕ್ಯವು, ಮತ್ತು ಒಂದು ತಿಂಗಳಲ್ಲಿಯೇ ಈ ಹತ್ತು ಶೈವ ವ್ರತಂಗಳು ಬರುವದುಂಟು. ಯಾವವೆಂದರೆ—ಸೋಮವಾರ ನಾಲ್ಕು, ಪ್ರದೋಷವೆರಡು, ಕೃಷ್ಣಾಷ್ಟಮಿ ಒಂದು, ಕೃಷ್ಣೈಕಾದಶೀ ಒಂದು, ಆರ್ದ್ರಾನಕ್ಷತ್ರ ಒಂದು, ಮಾಸ ಶಿವರಾತ್ರಿ ಒಂದು, ಈ ಹತ್ತು ವ್ರತಗಳೂ ತಿಂಗಳು ತಿಂಗಳಿಗೂ ಬರುವವು, ಈ ವ್ರತಂಗಳಂ ಮಾಡುವಲ್ಲಿ ಅಮಾಸೋಮವಾರವು, ಮಾಸಶಿವರಾತ್ರಿಯು, ಈ ಎರಡು ದಿವಸಂಗಳಲ್ಲಿಯೂ ನಿರಾಹಾರವಂ ಮಾಡಬೇಕು, ಮಿಕ್ಕ ಶೈವವ್ರತಂಗಳಲ್ಲಿ ನಕ್ತ ಭೋಜನವಂ ಮಾಡಬೇಕು, ನಕ್ತಭೋಜನವಂತೆಂದರೆ—ಪ್ರದೋಷ ಕಾಲದೊಳ್ ಈಶ್ವರಾರಾಧನೆಯಂ ಮಾಡಿ ಪೂರ್ವರಾತ್ರಿಯೊಳ್ ಭೋಜನವಂ ಮಾಡುವುದೇ ನಕ್ತಭೋಜನವು, ಅದೇನುಕಾರಣ ನಕ್ತಭೋಜನವಂ ಮಾಡಬೇಕೆಂದರೆ—ಉದಯವಾದ ಹನ್ನೆರಡು ಘಳಿಗೆಯೊಳಗೆ ಮಾಡುವ ಭೋಜನದಿಂದ ದೇವತೆಗಳಿಗೆ ತೃಪ್ತಿಯಾಗುವುದು, ಮಧ್ಯಾಹ್ನದಲ್ಲಿ

ಮಾಡುವ ಭೋಜನದಿಂದ ಋಷಿಗಳಿಗೆ ತೃಪ್ತಿ ಉಂಟಾಗುವುದು; ಅಪರಾಹ್ಣದಲ್ಲಿ ಮಾಡುವ ಭೋಜನದಿಂದ ಪಿತೃಗಳಿಗೆ ತೃಪ್ತಿಯಾಗುವುದು. ಸಾಯಂಕಾಲದೊಳ್ ಮಾಡುವ ಭೋಜನದಿಂದ ಗುಹ್ಯಕರು ಮೊದಲಾದ ದೇವಗಣಂಗಳಿಗೆ ಪ್ರೀತಿಯಾಗುವುದು, ಅದುಕಾರಣ ಈ ಸಮಯಗಳೆಲ್ಲವಂ ವರ್ಜಿಸಿ, ಶಿವಪ್ರೀತಿಕರವಾದ ಪೂರ್ವರಾತ್ರಿಯೊಳ್ ಭೋಜನವಂ ಮಾಡಬೇಕು, ಇದಂ ತಿಳಿದು ನಿತ್ಯದಲ್ಲಿಯೂ ಯಾರು ಆಚರಣೆಯಂ ಮಾಡುತಲಿರುವರೋ ಅವರು ಪಾಶುಪತ ವ್ರತ ಪರಾಯಣರಾಗಿ ಶಿವನಿಗೆ ಪರಮ ಪ್ರೀತಿವಿಷಯರಾದ ಭಕ್ತರು. ಅವರು ಯಾರ್ಯಾರೆಂದರೆ—ವ್ಯಾಸ, ವಿಶ್ವಾಮಿತ್ರ, ಮಾರ್ಕಂಡೇಯ, ದಧೀಚಿ, ವಿಷ್ಣು, ಶ್ರೀರಾಮ, ವೀರಭದ್ರ, ದೇವೇಜ, ಷಣ್ಮುಖ, ಮಹಾಕಾಳ, ನಂದೀಶ್ವರ, ಭೃಂಗಿರಿಟಿ, ಇಂದ್ರ, ಬ್ರಹ್ಮ, ದೇವಶಕ್ತಿ, ವಾಮದೇವ, ಕಪಿಲ, ಅಗಸ್ತ್ಯ, ಗೌತಮ, ಅತ್ರಿ, ಶೌನಕ, ಕಣಾದ, ವಸಿಷ್ಠ, ರುರು, ವಾಲ್ಮೀಕಿ, ಭರದ್ವಾಜ, ಬಾಣ, ರಾವಣ ಮೊದಲಾದವರೆಲ್ಲರೂ ಪಾಶುಪತವ್ರತನಿಷ್ಠರಾಗಿ, ಪಾಶುಪತವ್ರತಂಗಳಲ್ಲಿ ಲೇಶವೂ ವ್ಯತ್ಯಾಸ ಬಾರದಂತೆ ಆಚರಣೆಯಂ ಮಾಡುತಲಿರುವರು. ಎಲೈ ಸುಗಂಧಮಹಾರಾಜನೇ! ಇನ್ನು ಏನು ರಹಸ್ಯಂಗಳಂ ಕೇಳಬೇಕೆಂದು ಅಪೇಕ್ಷೆ ಇರ್ಪುದೋ ಅದೆಲ್ಲವಂ ಕೇಳಬಹುದೆಂದು ಪುರುಷಮೃಗನು ಅಪ್ಪಣೆಯಂ ಕೊಡಲು, ಅದಂ ಕೇಳಿ ಸುಗಂಧಮಹಾರಾಜೇಂದ್ರನು ಎಲೈ ಮಹಾನುಭಾವನೇ! ನನ್ನ ಮನದಲ್ಲಿದ್ದ ಸಂಶಯವೆಂಬ ಅಂಧಕಾರವೆಲ್ಲವೂ ನಿನ್ನ ಉಪದೇಶವೆಂಬ ಸೂರ್ಯೋದಯದಿಂದ ನಿಶ್ಶೇಷವಾಗಿ ಪೋದುದು, ಮತ್ತೂ ಆ ಶ್ರೀಮಹಾದೇವನು, ದೇವತೆಗಳಿಗೂ, ಋಷಿಗಳಿಗೂ, ಮನುಷ್ಯರಿಗೂ, ಪ್ರತ್ಯಕ್ಷವಾಗಿ ನೆಲಸಿ ಸ್ವಯಂವ್ಯಕ್ತನಾಗಿ ಆವಿರ್ಭವಿಸಿರುವ ಸ್ಥಲವಿಶೇಷಂಗಳಂ ತಿಳಿಯಬೇಕೆಂಬ ಅಭಿಲಾಷೆ ಇರುವುದರಿಂದ ಆಸ್ಥಲಂಗಳಂ ವಿಸ್ತಾರವಾಗಿ ನಿರೂಪಿಸಬೇಕೆಂದು ವಿಜ್ಞಾಪನೆಯಂ ಗೈಯಲಾಗ ಪುರುಷಮೃಗನು ಆರಾಜೇಂದ್ರನ ಭಕ್ತಿಯನ್ನು ನೋಡಿ ಸಂತೋಷಭರಿತನಾಗಿ ಎಲೈ ಭೂವಲ್ಲಭನೇ! ಕೇಳು, ಅಪ್ರಾಕೃತ ಲೋಕದೊಳಿರುವ ಶಿವಕ್ಷೇತ್ರಂಗಳಂ ಹೇಳುವೆನು,

ಕೈಲಾಸದಲ್ಲಿ ಪರಶಿವನೆಂದು, ಸೂರ್ಯಬಿಂಬದಲ್ಲಿ ಸದಾಶಿವನೆಂದು, ವೈಕುಂಠದಲ್ಲಿ ನಾರಾಯಣೇಶ್ವರನೆಂದು, ಪಾತಾಳದಲ್ಲಿ ಹಾಟಕೇಶ್ವರನು ಸೂರ್ಯಜ್ಯೋತಿಯಲ್ಲಿ ಸಿದ್ಧೇಶನೆಂದು. ಇದುವಲ್ಲದೆ ಭೂಲೋಕದೋಳ್ ನೂರೆಂಟು ಶಿವಕ್ಷೇತ್ರಂಗಳಿರುವವು, ಕೈವಲ್ಯಪರ್ವತದಲ್ಲಿ ಶ್ರೀಕಂಠನೆಂದು, ಹಿಮವತ್ಪರ್ವತದಲ್ಲಿ ಕೇದಾರೇಶ್ವರನೆಂದು, ಕಾಶಿಯಲ್ಲಿ ವಿಶ್ವನಾಥನೆಂದು, ಶ್ರೀಶೈಲದಲ್ಲಿ ಮಲ್ಲಿಕಾರ್ಜುನನೆಂದು, ಪ್ರಯಾಗದಲ್ಲಿ ನೀಲಕಂಠನೆಂದು, ಗಯೆಯಲ್ಲಿ ರುದ್ರಮಹಾತ್ಮ ಎಂದು, ಕಾಲಂಜರಪರ್ವತದಲ್ಲಿ ನೀಲಕಂಠೇಶ್ವರನೆಂದು, ದಾಕ್ಷಾರಾಮದಲ್ಲಿ ಭೀಮೇಶ್ವರನೆಂದು, ಗೌರೀಮಾಯೂರದಲ್ಲಿ ಅಂಬಿಕೇಶ್ವರನೆಂದು, ಬ್ರಹ್ಮಾವರ್ತದಲ್ಲಿ ದೇವಲಿಂಗನೆಂದು, ಪ್ರಭಾಸಕ್ಷೇತ್ರದಲ್ಲಿ ಶಶಿಭೂಷಣನೆಂದು, ಶ್ವೇತಹಸ್ತಿಪುರದಲ್ಲಿ ವೃಷಭಧ್ವಜನೆಂದು, ಸೋಮನಾಥ ಕ್ಷೇತ್ರದಲ್ಲಿ ಸೋಮೇಶ್ವರನೆಂದು, ಗೋಕರ್ಣದಲ್ಲಿ ಗೋಕರ್ಣೇಶ್ವರನೆಂದು, ಶ್ರೀರೂಪಕ್ಷೇತ್ರದಲ್ಲಿ ತ್ಯಾಗರಾಜನೆಂದು, ವೇದಪುರದಲ್ಲಿ ವೇದೇಶ್ವರನೆಂದು, ಭೀಮಾರಾಮಕ್ಷೇತ್ರದಲ್ಲಿ ಭೀಮೇಶ್ವರನೆಂದು, ಮಂಥನದಲ್ಲಿ ಕಾಳಿಕೇಶ್ವರನೆಂದು, ಮಧುರೆಯಲ್ಲಿ ಚೊಕ್ಕನಾಥನೆಂದು, ಮಾನಸಾಖ್ಯ ಕ್ಷೇತ್ರದಲ್ಲಿ ಮಾಧವೇಶ್ವರನೆಂದು, ಶ್ರೀವಾಂಛಿಕಾಕ್ಷೇತ್ರದಲ್ಲಿ ಚಂಪಕೇಶ್ವರನೆಂದು, ಪಂಚವಟಿಯಲ್ಲಿ ವಟೇಶ್ವರನೆಂದು, ಗಜಾರಣ್ಯದಲ್ಲಿ ವೈದ್ಯನಾಥನೆಂದು, ತೀರ್ಥಾದ್ರಿಯಲ್ಲಿ ತೀರ್ಥಕೇಶ್ವರನೆಂದು, ಲೇಪಾಕ್ಷಿಯಲ್ಲಿ ಪಾಪನಾಶನನೆಂದು, ಕಣ್ವಕ್ಷೇತ್ರದಲ್ಲಿ ಕಣ್ವೇಶ್ವರನೆಂದು, ಮಧ್ಯಾರ್ಜುನದಲ್ಲಿ ಮಧ್ಯಾರ್ಜುನೇಶ್ವರನೆಂದು, ಹರಿಹರದಲ್ಲಿ ಶಂಕರ ನಾರಾಯಣನೆಂದು, ವಿರಿಂಚಿಪುರದಲ್ಲಿ ಮಾರ್ಗೇಶ್ವರನೆಂದು, ಪಂಚನದದಲ್ಲಿ ಗಿರೀಶ್ವರನೆಂದು, ಹಂಪೆಯಲ್ಲಿ ವಿರೂಪಾಕ್ಷನೆಂದು, ತ್ರಿಮಕುಟದಲ್ಲಿ ಅಗಸ್ತ್ಯೇಶ್ವರನೆಂದು, ಸೋಮಾದ್ರಿಯಲ್ಲಿ ಮಲ್ಲಿಕಾರ್ಜುನನೆಂದು, ಮಹಾಬಲಕ್ಷೇತ್ರದಲ್ಲಿ ಮಹಾಬಲೇಶ್ವರನೆಂದು, ಅರ್ಕಪುರಿಯಲ್ಲಿ ಅರ್ಕೇಶ್ವರನೆಂದು, ವೇದಾರಣ್ಯದಲ್ಲಿ ವೇದಾರಣ್ಯೇಶ್ವರನೆಂದು, ಸೋಮಪುರಿಯಲ್ಲಿ ತ್ರಿಮೂರ್ತ್ಯಾತ್ಮಕಸೋಮನೆಂದು, ಸುಬ್ರಹ್ಮಣ್ಯದಲ್ಲಿ ಅಂಪೇಶ್ವರನೆಂದು, ಅವಂತಿಯಲ್ಲಿ ರಾಮಲಿಂಗೇಶನೆಂದು, ಕಾಶ್ಮೀರದಲ್ಲಿ ವಿಜಯೇ

ಶ್ವರನೆಂದು, ಮಹಾನಂದೀಪುರದಲ್ಲಿ ಮಹಾನಂದೀಶ್ವರನೆಂದು, ಕಹಿದ್ರಿರೀಕ್ಷೇತ್ರದಲ್ಲಿ ಗಂಗಾಧರೇಶ್ವರನೆಂದು, ದಕ್ಷಿಣ ವೃಷಾದ್ರಿಚಲದಲ್ಲಿ ಚಾಮರಾಜೇಶ್ವರನೆಂದು, ನಂದಿಗಿರಿಯಲ್ಲಿ ನಂದೀಶ್ವರನೆಂದು. ಗರಳಪುರಕ್ಷೇತ್ರದಲ್ಲಿ ಶ್ರೀನಂಜುಂಡೇಶ್ವರನೆಂದು, ಬಧಿರಾಚಲದಲ್ಲಿ ಚೂಡೇಶ್ವರನೆಂದು ಸೀತಾನಾಥಪುರದಲ್ಲಿ ಸೀತಾನಾಥೇಶ್ವರನೆಂದು, ಏಕಾಂತರಾಮಕ್ಷೇತ್ರದಲ್ಲಿ ರಾಮಲಿಂಗೇಶನೆಂದು, ಶತಶೃಂಗಗಿರಿಯಲ್ಲಿ, ಅಧಿಪೇಶ್ವರನೆಂದು ಪಾಪನಾಶಾಚಲದಲ್ಲಿ ಸೋಮೇಶ್ವರನೆಂದು, ನಲ್ಲೂರು ಕ್ಷೇತ್ರದಲ್ಲಿ ವಿಮಲೇಶ್ವರನೆಂದು, ಕನ್ಯಾಕುಮಾರದಲ್ಲಿ ತ್ರಿಭಂಗೀಶ್ವರನೆಂದು, ಶ್ರೀನಾಗಕ್ಷೇತ್ರದಲ್ಲಿ ಕುಂಡಲೀಶ್ವರನೆಂದು, ಮತ್ಸ್ಯತೀರ್ಥದಲ್ಲಿ ತೀರ್ಥೇಶ್ವರನೆಂದು, ಉತ್ಸಂಗಪುರದಲ್ಲಿ ರಾಘವೇಶ್ವರನೆಂದು, ಪ್ರಸನ್ನಪುರದಲ್ಲಿ ಮಾರ್ಗಸಹಾಯೇಶ್ವರನೆಂದು, ತ್ರಿಕೂಟಾದ್ರಿಯಲ್ಲಿ ತಾಂಡವೇಶ್ವರನೆಂದು, ಗಂಡಕಿಯಲ್ಲಿ ಶಿವನಾಭನೆಂದು, ಧರ್ಮಪುರಿಯಲ್ಲಿ ಧರ್ಮಲಿಂಗೇಶ್ವರನೆಂದು, ಶ್ರೀಪತಿಕ್ಷೇತ್ರದಲ್ಲಿ ಶ್ರೀಪತೀಶ್ವರನೆಂದು, ಮಾಣೀಗ್ರಾಮದಲ್ಲಿ ವಿರಿಂಚೇಶ್ವರನೆಂದು, ಕನ್ಯಾಕುಬ್ಜದಲ್ಲಿ ಕಳಾನಾಥನೆಂದು ಜಗನ್ನಾಥದಲ್ಲಿ ಮಾರ್ಕಂಡೇಶ್ವರನೆಂದು, ನೇಪಾಳದಲ್ಲಿ ಕುಬೇಶ್ವರನೆಂದು, ತ್ರಿರಾಮಕ್ಷೇತ್ರದಲ್ಲಿ ವ್ಯಾಪೇಶ್ವರನೆಂದು, ನರ್ಮದೆಯಲ್ಲಿ ಸ್ವಯಂಭುಲಿಂಗನೆಂದು, ಸ್ವರ್ಣಾವಳಿಯಲ್ಲಿ ಕಳಿಂಗೇಶ್ವರನೆಂದು ಧರ್ಮಸ್ಥಳದಲ್ಲಿ ಮಂಜುನಾಥೇಶ್ವರನೆಂದು, ಪುಂಡರೀಕಪುರದಲ್ಲಿ ಜೈಮಿನೀಶ್ವರನೆಂದು, ಅಯೋಧ್ಯೆಯಲ್ಲಿ ಮಧುರಾಧೀಶನೆಂದು ನಿರ್ಮಲಾಖ್ಯಪುರಿಯಲ್ಲಿ ಪನ್ನಗೇಶ್ವರನೆಂದು ಸಿದ್ಧವಟಯಲ್ಲಿ ಸಿದ್ಧೇಶ್ವರನೆಂದು, ಶ್ರೀಕೂರ್ಮದಲ್ಲಿ ತ್ರಿಪುರಾಂತಕನೆಂದು ಮಣಿಕುಂಡಲತೀರ್ಥದಲ್ಲಿ ಮಣಿ ಮುಕ್ತಾನದೀಶನೆಂದು, ವಟಾಟವಿಯಲ್ಲಿ ಕೃತ್ತಿವಾಸೇಶ್ವರನೆಂದು, ತ್ರಿವೇಣಿಯಲ್ಲಿ ಸಂಗಮೇಶ್ವರನೆಂದು, ಸಿತಕ್ಷೇತ್ರದಲ್ಲಿ ಮಲ್ಲೀಶ್ವರನೆಂದು, ಇಂದ್ರಕೀಲದಲ್ಲಿ ಅರ್ಜುನೇಶ್ವರನೆಂದು, ಶೇಷಾಚಲದಲ್ಲಿ ಕಪಿಲೇಶನೆಂದು, ಪುಷ್ಪಗಿರಿಯಲ್ಲಿ ಪುಷ್ಪಗಿರೀಶನೆಂದು, ಚಿತ್ರಕೂಟದಲ್ಲಿ ಭುವನಾಧೀಶನೆಂದು, ಉಜ್ಜಯಿನಿಯಲ್ಲಿ ಮಹಾಕಾಳೇಶ್ವರನೆಂದು, ಮಂಗಳಪುರಿಯಲ್ಲಿ ಸಂಗಮನಾಥೇಶನೆಂದು ಜ್ವಾಲಾಮುಖಿಯಲ್ಲಿ ಶೂಲಟಂಕೇಶ್ವರನೆಂದು, ವಹ್ನಿಪುಷ್ಕರಣಿಯಲ್ಲಿ

ರಾಮೇಶ್ವರನೆಂದು, ತಂಜಾಪುರಿಯಲ್ಲಿ ಬೃಹತೀಶ್ವರನೆಂದು, ಲಂಕಾದ್ವೀಪದಲ್ಲಿ ಮತ್ಸ್ಯೇಶ್ವರನೆಂದು, ಗಂಧಮಾದನದಲ್ಲಿ ಕೂರ್ಮೇಶ್ವರನೆಂದು, ವಿಂಧ್ಯಾಚಲದಲ್ಲಿ ವರಾಹೇಶನೆಂದು, ಅಹೋಬಲದಲ್ಲಿ ನೃಸಿಂಹೇಶನೆಂದು, ಕುರುಕ್ಷೇತ್ರದಲ್ಲಿ ವಾಮನೇಶ್ವರನೆಂದು, ಕಪಿಲತೀರ್ಥದಲ್ಲಿ ಭೃಗುರಾಮೇಶನೆಂದು, ರಾಮಸೇತುವಿನಲ್ಲಿ ರಾಮೇಶ್ವರನೆಂದು, ಸಾಕೇತಪುರದಲ್ಲಿ ಬಲರಾಮೇಶನೆಂದು, ವಾರಣಾವತಿಯಲ್ಲಿ ಬೌದ್ಧೇಶನೆಂದು, ಶ್ವೇತಕ್ಷೇತ್ರದಲ್ಲಿ ಕಲ್ಕೀಶನೆಂದು, ಮಹೇಂದ್ರಾಚಲದಲ್ಲಿ ಕೃಷ್ಣೇಶನೆಂದು, ಕಾಂಚೀಪುರದಲ್ಲಿ ಪೃಥ್ವೀಲಿಂಗಾತ್ಮಕವಾದ ಏಕಾಂಬರೇಶ್ವರನೆಂದು, ಜಂಬುಕೇಶ್ವರದಲ್ಲಿ ಅಬ್ಲಿಂಗಾತ್ಮಕವಾದ ಜಂಬುಕೇಶ್ವರನೆಂದು ಅರುಣಾಚಲದಲ್ಲಿ ತೇಜೋಲಿಂಗಾತ್ಮಕವಾದ ಅರುಣಾಚಲೇಶ್ವರನೆಂದು, ಕಾಳಹಸ್ತಿಯಲ್ಲಿ ವಾಯುಲಿಂಗಾತ್ಮಕವಾದ ಕಾಳಹಸ್ತೀಶ್ವರನೆಂದು ಚಿದಂಬರದಲ್ಲಿ ಆಕಾಶಲಿಂಗಾತ್ಮಕವಾದ ಚಿದಂಬರೇಶ್ವರನೆಂದು, ಛಾಯಾವನದಲ್ಲಿ ಛಾಯಾವನೇಶ್ವರನೆಂದು, ಹಿರಣ್ಯಗರ್ಭಕ್ಷೇತ್ರದಲ್ಲಿ ಮಹಾದೇವೇಶ್ವರನೆಂದು, ಆಮ್ರಾತಕಕ್ಷೇತ್ರದಲ್ಲಿ ಸೂಕ್ಷ್ಮೇಶ್ವರನೆಂದು, ಪ್ರಸಿದ್ಧವಾಗಿ ಈ ನೂರೆಂಟು, ಶಿವಕ್ಷೇತ್ರಂಗಳಿರುವುವು, ಆ ಪರಮಪಾವನನಾದ ಪರಶಿವನ ಅಪಾರ ಮಹಿಮೆಯಂ ಸಹಸ್ರಫಣಾಯುಕ್ತನಾದ ಆದಿಶೇಷನೂ ಕೂಡ ಬಣ್ಣಿಸಲಾರನು, ಆ ಮಹಾಪುರುಷನಿಂದಲೂ ಬಣ್ಣಿಸಲಶಕ್ಯವಾದ ಮಹಿಮೆಯಂ ನಾನು ಬಣ್ಣಿಸಲು ಶಕ್ತನಲ್ಲವೆಂದು ಹೇಳಲದಂ ಕೇಳಿ ಸುಗಂಧರಾಜೇಂದ್ರನು ಪರಮಸಂತೋಷನಾಗಿ ಸಾಷ್ಟಾಂಗಪ್ರಣಾಮವಂಗೈದು ಈ ಮಹಾಪುರುಷನ ಅನುಗ್ರಹದಿಂದ ಅತಿರಹಸ್ಯವಾದ ಶಿವತತ್ವರಹಸ್ಯವಂ ತಿಳಿದು ಕೃತಾರ್ಥನಾದೆನೆಂದು ಈ ಸತ್ಕಥಾಶ್ರವಣದಿಂದ ಲೋಕಾತಿಶಯವಾದ ಭಕ್ತಿಯು ಪರಶಿವನಲ್ಲಿ ಉಂಟಾದುದು, ಮತ್ತೂ ಈ ಮಹರ್ಷಿಯ ಉಪದೇಶಕ್ರಮದಿಂದ ನಿತ್ಯದಲ್ಲಿಯೂ ಪಾರ್ಥಿವೇಶ್ವರಾರಾಧನೆಯಂ ಬಿಡದೆ ಮಾಡುವದೇ ಯೋಗ್ಯವಾದ ಕಾರ್ಯವೆಂದು ತಿಳಿದು, ಪ್ರಕೃತದಲ್ಲಿ ತಾನು ಬಂದಿರುವ ಕಾರ್ಯವು ಈ ಮಹಾತ್ಮನಿಂದಲೇ ಆಗಬೇಕಾದ್ದರಿಂದ ಈ ಅಭಿಪ್ರಾಯವಂ ಇವಂಗೆ ವಿಜ್ಞಾಪಿಸಿದರೆ ಈ ಮಹಾಪುರುಷನು ನನ್ನ ಮೇಲೆ ದಯವಿಟ್ಟು ನೆರವೆ

ತಿಸಿ ಕೊಡುವಂತೆ ಕಾಣುತಲಿಧೆ, ಒಂದು ವ್ಯಾಳೆ ತಾನು ಪಾತಾಳ ಲೋಕಕ್ಕೆ ಬರುವುದಿಲ್ಲವೆಂದರೆ ನಾನು ಮಾಡತಕ್ಕದ್ದೇನೆಂದು ಆಲೋಚನೆಯಂ ಮಾಡಿ ಒಂದೂ ತೋರದೇ ವರದೇವತೆಯ ಕೃಪೆ ಇದ್ದಂತೆ ಆಗಲೀ ವಿಜ್ಞಾಪನೆಯಂ ಮಾಡಿನೋಡುವೆನೆಂದು ನಿಶ್ಚೈಸಿ ಸಾಷ್ಟಾಂಗ ಪ್ರಣಾಮವಂ ಮಾಡಿ ಬದ್ಧಾಂಜಲಿ ಪುಟನಾಗಿ ಏನೋ ಒಂದು ಸಂಶಯವಿರುವನಂತೆ ನಿಂವಿರಲೂ, ಆಗ ಪುರುಷಮೃಗನು ರಾಜಕುಮಾರನ ಮೊಗವನ್ನೋಡಿ ಈತನ ಮನಸ್ಸಂಶಯಗಳೆಲ್ಲಾ ತೊಲಗುವಂತೆ ಪರಮರಹಸ್ಯಂಗಳನೆಲ್ಲ ಸಾಂಗವಾಗಿ ಉಪದೇಶವಂ ಮಾಡಿದರೂ ಇನ್ನೂ ಸ್ವಲ್ಪ ಕಳ್ಮಷವಿರುವಂತೆ ತೋರುತಲಿಧೆ ಅದಂ ತಿಳಿದು ಪರಿಹರಿಸಬೇಕೆಂದು ಮನದೊಳಾಲೋಚಿಸಿ ರಾಜಕುಮಾರನ ವೃತ್ತಾಂತವೆಲ್ಲವಂ ದರ್ಪಣದಲ್ಲಿ ಕಂಡ ಪ್ರತಿಬಿಂಬದಂತೆ ವ್ಯಕ್ತವಾಗಿ ತಿಳಿದು ಮುಂದಾಗತಕ್ಕ ಕಾರ್ಯವಂ ಮನದೊಳಾಲೋಚಿಸಿ ಪ್ರಕೃತಾನುಸಾರವಾಗಿ ನಡೆಯಬೇಕೆಂದು ರಾಜಕುಮಾರನಂ ಕುರಿತು ಎಲೈ ಸುಗಂಧರಾಜೇಂದ್ರನೇ! ನಿನ್ನ ಮುಖ ಕಮಲವನ್ನೋಡಿದರೆ ಬಾಡಿರುವಂತೆ ತೋರುತಲಿಧೆ ಅದೇನು ಕಾರಣ ಸಂಶಯವಂ ಬಿಟ್ಟು ಹೇಳುವನಾಗೆಂದು ಅಪ್ಪಣೆಯಂ ಕೊಡಲಾಗ ರಾಜಕುಮಾರನು ಲಜ್ಜಾಭಯಗಳಿಂ ಯುಕ್ತನಾಗಿ ಎಲೈ ಮಹಾನುಭಾವನೇ! ನಿನಗೆ ತಿಳಿಯದಿರುವ ವೃತ್ತಾಂತವ್ಯಾವುದು, ಸಮಸ್ತವೂ ವಿದಿತವಾಗಿಯೇ ಇರುವುದು, ಮತ್ತೂ ನಾನು ಬಂದಿರುವ ಕಾರ್ಯವಂ ಮೊದಲೇ ತಿಳುಹಿಸಿರುವೆನು, ಈಗ ಪಾತಾಳದಲ್ಲಿ ಮಹಾಶೇಷನ ಮಂತ್ರಿಯಾದ ಮಹಾನಾಗನಮಗಳಾದ ಮಾಲಿನಿಯ ಬಳಿಯಲ್ಲಿ ಚಿಂತಾಮಣಿ ಇರುವದೆಂದು ಮೊದಲು ತಾವು ದುರ್ಧರ್ಷನ ವೃತ್ತಾಂತವಂ ಹೇಳುವಾಗ ಅಪ್ಪಣೆಯನ್ನಿತ್ತುದರಿಂದ ನಿಮ್ಮ ಅನುಗ್ರಹದಿಂದ ಚಿಂತಾಮಣಿಯು ನನಗೆ ಪ್ರಾಪ್ತವಾಗಲಾರದೇ ಎಂದು ನಿಶ್ಚೈಸಿ ವ್ಯರ್ಥವಾಗಿ ಆಯಾಸ ಪಟ್ಟುದರಿಂ ಫಲವೇನೆಂದು ನಿಮ್ಮ ಉಪದೇಶದಿಂದಲೇ ಸಮಸ್ತ ಸಂಶಯಗಳಂ ಪರಿಹರಿಸಿಕೊಂಡು ತಂದೆ ಆಜ್ಞಾನುಸಾರವಾಗಿ ನಡೆಯುವೆನೆಂದು ನಿಶ್ಚೈಸಿ ಕುರಿತು ಬಂದ ಕಾರ್ಯವಂ ತ್ಯಜಿಸಿ ತಮ್ಮ ಅನುಗ್ರಹವನ್ನೇ ಅಪೇಕ್ಷಿಸಿಕೊಂಡಿರುವೆನು. ವಿಜ್ಞಾಪನೆಯಂ ಮಾ

ಡಿ ಮೌನದಿಂದಿರಲು ಆ ಪುರುಷಾಮೃಗನು ರಾಜಕುಮಾರನು ಹೇಳಿದ ನುಡಿಗಳಂ ಕೇಳಿ ಮುಂದೆ ನಡೆಯುವ ಕಾರ್ಯವಂ ತಿಳಿದವನಾದ ಕಾರಣ ರಾಜಕುಮಾರಂಗೆ ಸಹಾಯವಂ ಮಾಡಬೇಕೆಂದು ನಿಶ್ಚೈಸಿ ಎಲೈ ಸುಗಂಧರಾಯನೇ! ನಿನಗೆ ಪರದೇವತಾನುಗ್ರಹವು ಪರಿಪೂರ್ಣವಾಗಿರುವದರಿಂದ ನೀನು ಯತ್ನವಂ ಮಾಡಿದ ಕಾರ್ಯಂಗಳಿಗೆ ವಿಘ್ನವು ಎಂದಿಗೂ ಬರಲಾರದು, ಆದರೂ ನೀನೇ ಪಾತಾಳವಂ ಪೊಕ್ಕು ಚಿಂತಾಮಣಿಯಂ ಬಲಾತ್ಕಾರದಿಂ ತರುವುದಕ್ಕೆ ಶಕ್ತನೇ ಸರಿ, ಆದರೂ ಅದು ಉಚಿತವಲ್ಲ ಏನು ಕಾರಣವೆಂದರೆ, ಮೊದಲು ದುರ್ಧರ್ಷನು ಪಾತಾಳಕ್ಕೆ ಪೋಗಿರ್ದಸಮಯದಲ್ಲಿ ಅವನ ಮೋಸಗೊಳಿಸಲೋಸುಗ ಮಹಾ ನಾಗರೆಲ್ಲರೂ ಒಂದಾಗಿ ಪುರುಷಮೃಗನಂ ಯಾರು ಕರತರುವರೋ ಅವರಿಗೆ ಮಾಲಿನಿ ಎಂಬ ಕನ್ಯಾರತ್ನವನ್ನೂ, ಸಮಸ್ತ ಇಷ್ಟಾರ್ಥಪ್ರದವಾದ ಚಿಂತಾಮಣಿಯಂ ಸಹಾ ಕೊಡುವೆವೂ ಎಂದು ಪ್ರತಿಜ್ಞೆಯಂ ಮಾಡಿರುವೆವೂ ಎಂದು ಆ ದುರ್ಧರ್ಷನಂ ಒಡಂಬಡಿಸಿ ಕಳುಹಿಸಿದ್ದರಿಂದ ಈಗ ನಾನು ಬಾರದೆ ನೀನು ಮಾತ್ರ ಪೋದಲ್ಲಿ ಆ ನಾಗಶ್ರೇಷ್ಟರು ಚಿಂತಾಮಣಿರತ್ನವಂ ಕೊಡುವರಲ್ಲ ಬಲಾತ್ಕಾರವಂ ಮಾಡುವುದು ನಿನಗೆ ಧರ್ಮವಲ್ಲ ನಾನು ಬರುವೆನೆಂದರೆ ನಿತ್ಯದಲ್ಲಿಯೂ ಪ್ರದೋಷಕಾಲದಲ್ಲಿ ಪರಮೇಶ್ವರನದರ್ಶನವಿಲ್ಲದೇ ಜೀವಿಸುವನಲ್ಲ ಇಷ್ಟು ಅಸಂಗತವಿರುವಲ್ಲಿ ಆ ಮಣಿಯು ನಿನಗೆ ಎಂತು ವಶವಾಗುವದು, ಎಂದು ನುಡಿಯಲು ಆ ಮಾತಂ ಕೇಳಿ ಸುಗಂಧರಾಜೇಂದ್ರನು ಸಮಯದಲ್ಲಿ ಬಾಯಿ ಮರತರೆ ಕಾರ್ಯ ಕೆಡುವದೆಂದು ಮನದಿ ನಿಶ್ಚೈಸಿ ಮಧುರವಾದ ಮಾತುಗಳಿಂದ ಪುರುಷಮೃಗನಂ ಕುರಿತು ಎಲೈ ಮಹಾ ಮಹಿಮನೇ ಶಿಷ್ಯನಾದ ನನ್ನಲ್ಲಿ ಪರಮ ವಾತ್ಸಲ್ಯದಿಂದ ಒಂದು ದಿನ ಪ್ರಾತಃಕಾಲದಲ್ಲಿ ಹೊರಟು ಅಂಜನ ಪರ್ವತದ ಕೆಳಭಾಗದಲ್ಲಿರುವ ಪಾತಾಳ ಮಾರ್ಗವಂ ಪ್ರವೇಶಿಸಿ ನಾಗಶ್ರೇಷ್ಟರ ಸಭೆಯಂ ಪೊಕ್ಕು ನನ್ನಂ ಸಂತೋಷಪಡಿಸಿ ತಾವು ಎಂದಿನಂತೆ ಪ್ರದೋಷಕಾಲಕ್ಕೆ ಯಿಲ್ಲಿಗೆ ಬರಬಹುದೆಂದು ಎನ್ನ ಮನಸ್ಸಿಗೆ ತೋರುತಲಿದೆ ತಮ್ಮ ಅಂತಃಕರಣಕ್ಕೆ ಎಂತುತೋರುವದೋ ಅಂತು ಮಾಡಬಹುದೆಂದು ವಿಜ್ಞಾಪನೆಯಂ ಗೈಯ್ಯಲು, ಅದಂ ಕೇಳಿ

ಪುರುಷಮೃಗನು ನಸುನಗುತ ಹಾಗೇ ಆಗಲೀಯೆಂದು ಒಡಂಬಟ್ಟು
ಆದಿನ ಅಲ್ಲಿಯೇ ಇದ್ದು ಮಾರನೇದಿನ ಉದಯಕಾಲದೊಳ್ ಸ್ನಾನಮೊ
ದಲಾಗಿ ಈಶ್ವರಾರಾಧನೆಯಂ ನೆರವೇರಿಸಿ ಸುಗಂಧಮಹಾರಾಯನಂ
ಕರದು ಪಾತಾಳವಂ ಪ್ರವೇಶಿಸುವದಕ್ಕೆ ಮಾರ್ಗವೆಲ್ಲಿರುವುದೆಂದು ನಗು
ತ ಕೇಳಲು, ಅದಂ ಕೇಳಿ ಸುಗಂಧರಾಜೇಂದ್ರನು ಮೊದಲಿನಂತೆ ವಿಜ್ಞಾ
ಪನೆಯಂ ಮಾಡಲು, ಆಗ ಪುರುಷಮೃಗನು ಮಂದಹಾಸದಿಂ ಕೂಡಿ
ಕೈಯೊಳಿರ್ದ ದರ್ಭೆಪವಿತ್ರವಂ ತೆಗದು ತನ್ನ ಮುಂದುಗಡೆಯೊಳ್
ಭೂಮಿಯಂ ಮುಟ್ಟಿಸಲು ಆಕ್ಷಣವೇ ಆದಿಶೇಷನಿರುವ ಸಭೆಗೆ ನಿಷ್ಕಂಟ
ಕವಾಗಿ ವಿಶಾಲವಾದ ಮಾರ್ಗವಾಗಲು ಅದಂ ಕಂಡು ಸುಗಂಧರಾಜನು
ಅಚ್ಚರಿಗೊಂಡು ಪರಮೇಶ್ವರನ ಪ್ರಭಾವವನ್ನಾದರೂ ಒಂದುವೇಳೆ ಒಂ
ಣಿಸಬಹುದು ತಪೋನಿಧಿಗಳಾದ ಶಿವಾರಾಧಕರ ಮಹಿಮೆಯಂ ಎಣಿಸುವ
ದಕ್ಕೆ ಬ್ರಹ್ಮಮೊದಲಾದವರಿಂದಲೂ ಅಶಕ್ಯವೆಂದು ಮನದೊಳಾಲೋಚಿ
ಸುತ ಚಿತ್ರದಲ್ಲಿ ಬರದ ಪ್ರತಿಮೆಯಂತೆ ಸ್ತಬ್ಧನಾಗಿರಲು, ಆಗ ಪುರುಷ
ಮೃಗನು ಕಾಲವು ಸುಮ್ಮನೇ ಕಳಯುವದೆಂದು ತ್ವರೆಯಿಂ ರಾಜಕುಮಾ
ರನಂ ಸಂಗಡಲೇ ಬರುವಂತೆ ಪೇಳಿ ಪಾತಾಳವಂ ಪ್ರವೇಶಿಸಿ, ಮುಹೂ
ರ್ತಮಾತ್ರದೊಳ್ ಆದಿಶೇಷನ ಸಭೆಗೆ ಬಂದುನಿಲ್ಲಲು, ಅಲ್ಲಿದ್ದ ನಾಗಶ್ರೇ
ಷ್ಠರಾದ ಆದಿಶೇಷಮೊದಲಾದವರೆಲ್ಲರೂ ಆ ಪುರುಷಮೃಗನಂ ಕಂಡು ಭ
ಯಭಕ್ತಿಯುಕ್ತರಾಗಿ ಎದ್ದು ವಂದನೆಯಂ ಮಾಡಿ ಉಚಿತವಾದ ಪೀಠವನ್ನಿ
ತ್ತು ಕುಶಲಪ್ರಶ್ನೆಯಂ ಮಾಡಿ ಮತ್ತೂ ಪುರುಷಮೃಗನಂ ಕುರಿತು
ಸಂಗಡ ಬಂದಿರುವ ರಾಜಕುಮಾರರ್ಯಾರೆಂದು ಕೇಳಲಾಗ ಪುರುಷಮೃ
ಗನು ಈ ಮಹಾಪುರುಷರ ವೃತ್ತಾಂತವಂ ಸಾವಧಾನದಿಂ ಪೇಳುವೆನು
ಶೀಘ್ರದಿಂ ರಾಜೋಪಚಾರವಂ ಮಾಡುವದೆಂದು ಅಪ್ಪಣೆಯಂ ಕೊಡ
ಲಾಕ್ಷಣದೊಳ್ ನಾಗಶ್ರೇಷ್ಠರು ಉತ್ತಮವಾದ ಪೀಠಂಗಳನ್ನಿತ್ತು ಪ
ರಿಪರಿ ಉಪಚಾರಂಗಳಂ ಮಾಡಲಾಗ ಸುಮತಿಯು ಸುಗಂಧರಾಜೇಂದ್ರ
ನ ಆಜ್ಞೆಯಿಂದ ಕುಳಿತು ಅಲ್ಲಿರುವ ವಿಚಿತ್ರಂಗಳಂ ನೋಡಿ ಸಂತೋಷಪ
ಡುತ್ತಿರಲು, ಆಕಾಲದೊಳ್ ನಾಗಶ್ರೇಷ್ಠರೆಲ್ಲರೂ ಮೂರುಲೋಕದ ಸಾ
ಮ್ರಾಜ್ಯವೆಲ್ಲವೂ ಮೂರ್ತೀಭವಿಸಿ ಬಂದು ಮಣಿಪೀಠದಲ್ಲಿ ಕುಳಿತಿರುವ

ದೋ ಎಂಬಂತೆ ಶೋಭಿಸುತ್ತಿರುವ ರಾಜಕುಮಾರನಂ ಭಾರಿಭಾರಿಗೂ ಮನದಣಿವಂತೆ ನೋಡುತ್ತಿರಲಾಗ ಮಹಾಶೇಷನಮಂತ್ರಿಯಾದ ಮಹಾ ನಾಗನೆಂಬುವನು ಪುರುಷಮೃಗನೊಡನೆ ಬಂದಿರುವ ರಾಜಕುಮಾರನಂ ನೋಡಿ ಈತನೆ ರತ್ನಾರ್ಥವಾಗಿ ಬಂದಿರುವನಾದರೆ ದುರಾತ್ಮನಾದ ದೈತ್ಯನ ಸಂಗತಿಯು ತಪ್ಪಿ ಈ ಮಹಾಪುರುಷನೆ ಪಾಣಿಗ್ರಹಣವು ನನ್ನ ಮಗಳಾದ ಮಾಲಿನಿಗೆ ಉಂಟಾಗುವುದು ಆದ್ದರಿಂದ ನನ್ನ ಪುಣ್ಯ ಗಳಿಗೆ ಎಣೆ ಇಲ್ಲದಂತಾಗುವುದು, ಇದು ಈಶ್ವರಾನುಗ್ರಹದಿಂದ ಸಂಘ ಟನವಾಗಬೇಕೆಂದು ಮನದೋಳ್ ಯೋಚಿಸುತ್ತಿರುವ ಸಮಯದಲ್ಲಿ ಮಹಾಶೇಷನು ಪುರುಷಮೃಗನಂ ಕುರಿತು ಎಲೈ ತಪೋನಿಧಿಯೇ! ನೀನು ಶಿವಸನ್ನಿಧಿಯಂ ಬಿಟ್ಟು ಕ್ಷಣಮಾತ್ರ ಮತ್ತೊಂದು ಕಡೆಯಲ್ಲಿ ನಿಲ್ಲುವನಲ್ಲ ಇಲ್ಲಿಗೆನಗೆ ದಯಮಾಡಿದ್ದು ಏನು ಕಾರಣವೋ ಆ ಪರಿಯಂ ಅಪ್ಪಣೆಯಂ ಕೊಡಬೇಕೆಂದು ಹೇಳಲಾಮಾತಂ ಕೇಳಿ ಪುರುಷಮೃ ಗನು ರಾಜಕುಮಾರನಂ ತೋರಿ ಸಂಕ್ಷೇಪದಿಂದ ರಾಜಕುಮಾರನ ವೃತ್ತಾಂತವೆಲ್ಲವಂ ತಿಳುಹಿ ಈತನು ಸಾಮಾನ್ಯನೆಂದು ತಿಳಿಯದಿರು, ನಿನ್ನ ಪ್ರತಿಜ್ಞಾಪೂರಣಾರ್ಥವಾಗಿ, ನನ್ನಂ ದಿವಾ ರಾತ್ರಿಯಲ್ಲಿಯೂ ಕ್ಷಣ ಬಿಡದೆ ಪೀಡಿಸುತಲಿರ್ದ ಆ ದುಷ್ಟನಾದ ದುರ್ಧರ್ಷನ ಪರಿವಾರ ವೆಲ್ಲವಂ ಮಾರ್ಗದೋಳ್ ಕಂಡು ಯುದ್ಧದೋಳ್ ಕ್ಷಣಾರ್ಧದಲ್ಲಿ ನಿಶ್ಶೇ ಷವಂ ಮಾಡಿ ಏನೂ ಅರಿಯದವನಂತೆ ನಾಕು ಇರುವ ಬಿಲ್ವವೃಕ್ಷದ ಸಮೀಪದಲ್ಲಿ ಸಂಚರಿಸುತ್ತಿರಲು, ಅವನ್ನೋಡಿ ಸಾಧುಗಳಿಗೆ ಬಂದವಿ ಪತ್ತಂ ಪರಿಹರಿಸುವ ಮಹಾಪುರುಷನು ಇವನ್ಯಾರೋ ನೋಡುವೆನೆಂ ದು ನಾನು ಮಾಡುವ ಶಿವಾರಾಧನೆಯಂ ನೆರವೇರಿಸಿ ಬಹಿರ್ಮುಖನಾಗಿ ನೋಡುತ್ತಿರುವ ಸಮಯದಲ್ಲಿ ಈ ರಾಜಕುಮಾರನು ನನ್ನ ಸಮೀ ಪಕ್ಕೆ ಬಂದು ವಂದನೆಯಂ ಮಾಡಿ ನಿಂದಿರಲೂ, ಆಗ ಈ ಮಹಾನು ಭಾವನ ತೇಜಸ್ಸಂನೋಡಿ ನಡೆದ ಕಾರ್ಯಂಗಳೆಲ್ಲವೂ ಈತನಿಂದಲೇ ಆದು ದೆಂದು ನಿಶ್ಚಯಿಸಿ ಬಳಿಕ ಕುಶಲ ಪ್ರಶ್ನೆಯಂ ಮಾಡಿ ಈತನಿಂದಲೇ ಸಕಲ ವೃತ್ತಾಂತವಂ ಕೇಳಿ ಮತ್ತೂ ಈ ರಾಜಶ್ರೇಷ್ಠನಿಗೆ ಚಿಂತಾಮಣಿ ರತ್ನವು ಬೇಕಾಗಿರುವುದಂ ತಿಳಿದು, ನೀವು ದುರ್ಧರ್ಷನಿಗೋಸುಗ

ಮಾಡಿರುವ ಪ್ರತಿಜ್ಞೆಯುಂ ವಿಮರ್ಶೆಯುಂ ಮಾಡಿ ಈ ಮಣಿಗೋಸುಗ ಸುಗಂಧಮಹಾರಾಜನೊಡನೆ ನಾನು ಬಂದಿರುವೆನು, ಆದ್ದರಿಂ ನಿಂಮ ಪ್ರತಿಜ್ಞೆಯು ಸಫಲವಾಗಲೋಸುಗ ತಡಮಾಡದೆ ಈತನಿಗೆ ಚಿಂತಾಮಣಿ ರತ್ನವಂ ಕೊಡುವುದುಚಿತವು, ಏನುಕಾರಣವೆಂದರೆ—ನೆನ್ನನ್ನು ಯಾರು ಪಾತಾಳಕ್ಕೆ ಕರೆತರುವರೋ ಅವರಿಗೆ ಮಣಿಯುಂ ಮಾಲಿಸಿಯುಂ ಕೂಡ ಕೊಡುವೆವೆಂದು ನೀವು ಪ್ರತಿಜ್ಞೆಯುಂ ಮಾಡಿರುವುದರಿಂದ ಅದಂ ವಿಾರಲಾಗದೆಂದು ನಿರೂಪಿಸಿದ ನುಡಿಯಂ ಕೇಳಿ ನಾಗೋತ್ತಮರೆಲ್ಲರೂ ಸಂಶಯಪಡುತ್ತ ಮೊದಲು ಪುರುಷಮೃಗನಂ ಕರೆತರುವುದೆಂದು ನಾವು ಮಾಡಿದ ಪ್ರತಿಜ್ಞೆಯು ಅನರ್ಥಕ್ಕೆ ಕಾರಣವಾಯಿತು, ಅದೆಂತೆನೆ—ಈಗ ಬಂದಿರುವ ರಾಜಕುಮಾರನು ನಾವು ಮಾಡಿದ ಪ್ರತಿಜ್ಞೆಯಂತೆ ಪುರುಷಮೃಗನಂ ಕರೆತಂದಿರುವನು. ಆದ್ದರಿಂ ಮಣಿಯಂ ಕೊಡಬೇಕಾಯಿತು, ಅಥವಾ ಕೊಟ್ಟರೆ ಆ ದುಷ್ಟನಾದ ದುರ್ಧರ್ಷನು ಈ ವಾರ್ತೆಯಂ ಕೇಳಿ ಆ ಕ್ಷಣವೇ ಬಂದು ನಾಗಲೋಕವಂ ಭಸ್ಮವಂ ಮಾಡುವನು, ಇಂತು ಅನರ್ಥಗಳು ಈ ಮಹಾನಾಗನ ದೆಸೆಯಿಂದುಂಟಾದುದೆಂದು ಒಬ್ಬರೊಬ್ಬರು ಮಾತನಾಡಿಕೊಳ್ಳುತ್ತಿರಲು, ಅದಂ ಕೇಳಿ ಮಹಾಶೇಷನೂ ಕೂಡ ಸಂದೇಹಪಡುತ್ತಿರಲಾಗ ಪುರುಷಮೃಗನು ಇವರು ಅಶಕ್ತಪ್ರಾಣಿಗಳು, ಇಂತಲ್ಲದೆ ಕಾರ್ಯಾಕಾರ್ಯಗಳಂ ತಿಳಿಯದೆ ಹೇಚಾಡುವರು ಎಂದು ಮನದೊಳ್ನಿಶ್ಚೈಸಿ ಇವರಿಗೆ ಯಥಾರ್ಥವಂ ತಿಳುಹಿಸಿದಲ್ಲದೆ ಧೈರ್ಯ ಉಂಟಾಗಲರಿಯದೆಂದು ಮರಳಿ ಮಹಾಶೇಷನಂ ಕುರಿತು ಸುಗಂಧರಾಜೇಂದ್ರನ ವೃತ್ತಾಂತವೆಲ್ಲವಂ ತಿಳುಹಿ, ಈತನಿಂದಲೇ ಆ ದುರ್ಧರ್ಷನು ಲೋಕಾಂತರವಂ ಸೈದುವವರಲ್ಲಿ ಸಂದೇಹವಿಲ್ಲ, ಇನ್ನು ಕಾಲವಿಳಂಬವಂ ಮಾಡದೆ ಚಿಂತಾಮಣಿಯಂ ರಾಜಕುಮಾರಂಗೆಕೊಟ್ಟು ಸಂತವಿಟ್ಟು ಕಳುಹುವುದೆಂದು ಪೇಳಿ ಬಳಿಕ ರಾಜಕುಮಾರನಂ ಕುರಿತು ಪೇಳತಕ್ಕ ಹಿತೋಕ್ತಿಗಳೆಲ್ಲವಂ ಪೇಳಿ ಆ ಸುಗಂಧರಾಜಕುಮಾರನಂ ಮಹಾಶೇಷನಂ ಕೂಡ ಒಡಂಬಡಿಸಿ, ತಾನು ಪ್ರದೋಷ ಸಮಯವಾಯಿತು ಪೋಗಿಬರುವೆನೆಂದು ಉರ್ವರ ಸಮ್ಮತಿಯಿಂದ ಎಂದಿನಂತೆ ತಾನಿರುವ ಬಳಿಗೆ ತೆರಳಿ ಬರಲೂ,

ಆ ಬಳಿಕ ಆದಿಶೇಷನು ಋಷಿಯ ವಾಕ್ಯವು ಎಂದಿಗೂ ಅನ್ಯಥಾ ಆಗಲಾರದು ಎಂದು ನಿಶ್ಚೈಸಿ ಸಭೆಯಲ್ಲಿರುವರೆಲ್ಲರಿಗೂ ಧೈರ್ಯ ಉಂಟಾಗುವಂತೆ ಅಭಯವನ್ನಿತ್ತು, ಎಲ್ಲರ ಸಮ್ಮತಿಯಿಂದ ಸುಗಂಧರಾಜಕುಮಾರನಂ ಕುರಿತು ಎಲೈ ಕರ್ನಾಟ ಭೂಪತಿಯೇ! ನಿನ್ನ ಪ್ರಭಾವವಂ ಪುರುಷಮೃಗನ ಮುಖದಿಂದ ಕೇಳಿ ಸಂತೋಷಭರಿತನಾದೆನು, ಈಗ ನಿನಗೆ ಚಿಂತಾಮಣಿರತ್ನಮಾತ್ರ ಅಪೇಕ್ಷೆ ಇರುವದೋ ಅಥವಾ ಮಹಾನಾಗನ ಮಗಳಾದ ಮಾಲಿನಿಯಲ್ಲಿಯೂ ಅಪೇಕ್ಷೆ ಇರುವದೋ ಎಂದು ನುಡಿಯಲಾಗ ರಾಜೇಂದ್ರನು ಮಹಾಶೇಷನಂ ಕುರಿತು ಎಲೈ ಮಹಾಶೇಷನೇ! ನಾನು ಸ್ತ್ರೀಯಲ್ಲಿ ಅಪೇಕ್ಷೆಯಿಂದ ಬಂದವನಲ್ಲ ಪ್ರತಿಜ್ಞಾ ಪೂರಣವಂ ಮಾಡಲೋಸುಗ ಚಿಂತಾಮಣಿಯಂ ತಂದೀವೆನೆಂದು ಬಂದಿರುವೆನಾದಕಾರಣ ರತ್ನವಂ ಅಪೇಕ್ಷಿಸಿರುವೆನೆಂದು ಹೇಳಲಾಗ ಮಹಾಶೇಷನು ಸುಗಂಧರಾಜಕುಮಾರನ ಗಂಭೀರವಾದ ನುಡಿಗಳಂ ಕೇಳಿ ಸಂತೋಷಭರಿತನಾಗಿ, ಮಹಾನಾಗನಂ ಕರದು ಎಲೈ ಮಂತ್ರಿಯೇ! ಚಿಂತಾಮಣಿರತ್ನವಂ ತೆಗದುಕೊಂಡು ಬಾರೆಂದು ನಿರೂಪಿಸಲಾ ಮಹಾನಾಗನು ಆ ಕ್ಷಣದಲ್ಲಿಯೇ ಎದ್ದು ಸಭಾದ್ವಾರಕ್ಕೆ ಬರಲು, ಇತ್ತಲಾ ಪಾತಾಳದಲ್ಲಿರುವ ನಾಗಕನ್ಯೆಯರು ಕೆಲಂಬರು ಸುಗಂಧರಾಜೇಂದ್ರನು ಬಂದಿರುವವಂ ಕಂಡು, ಕೆಲಂಬರು ಅವರ ಮುಖದಿಂದ ಕೇಳಿ ಪರಮಾಶ್ಚರ್ಯಗೊಂಡು ಆತನಂ ನೋಡುವೆವೆಂದು ಕುತೂಹಲದಿಂ ಬಂದು ಆಸ್ಥಾನದ ಹೊರಭಾಗದಲ್ಲಿ ಗುಂಪುಗುಂಪಾಗಿ ನಿಂತು ರಾಜಕುಮಾರನ ರೂಪುಲಾವಣ್ಯ ಸೌಕುಮಾರ್ಯ ಸ್ಥೈರ್ಯ, ಧೈರ್ಯ, ಪರಾಕ್ರಮ, ಗಾಂಭೀರ್ಯ, ಮೊದಲಾದ ಗುಣಂಗಳಂ ಅಲ್ಲಿರುವ ಜನಂಗಳಿಂದ ಕೇಳುತ, ಮೇಘೋದಯವಂ ಅಪೇಕ್ಷಿಸಿ ಕಾದಿರುವ ಚಾತಕಪಕ್ಷಿಗಳಂತೆ ಕಾದಿರಲು, ಮತ್ತೆ ಕೆಲವರು ಮಾಲಿನಿಯ ಸಖಿಯರು ಆಸ್ಥಾನದಲ್ಲಿ ನಡದ ವೃತ್ತಾಂತವಂ ತಿಳಿದು ತಮ್ಮ ಒಡತಿಯ ಸಮೀಪವಂನೈದಿ ಸಭೆಯಲ್ಲಿ ನಡದ ವೃತ್ತಾಂತವಂ, ಮತ್ತು ರಾಜಕುಮಾರನ ಸೌಂದರ್ಯ ಮೊದಲಾದ ಗುಣಗಳಂ ವಿಸ್ತಾರವಾಗಿ ಹೇಳುತ್ತಿರುವ ಸಮಯದಲ್ಲಿ. ಮಹಾನಾಗನು ಮಹಾಶೇಷನ ಅಪ್ಪಣೇ

ಪೋದೆಗೆ ತನ್ನ ಮಗಳಾದ ಮಾಲಿನಿಯು ಬಳಿಗೆ ಬಂದು, ರಾಜಕುಮಾರನು ಬಂದಿರುವ ವೃತ್ತಾಂತಮಂ ವಿಸ್ತಾರವಾಗಿ ತಿಳುಹಿ ಚಿಂತಾಮಣಿಯಂ ಕೊಡುವುದೆಂದು ಕೇಳಲಾ ಮಾಲಿನಿಯು ಮೊದಲು ತನ್ನ ಸಖಿಯರು ಪೇಳಿದ ಸಮಾಚಾರಗಳೆಲ್ಲ ನಿಶ್ಚಯವೆಂದು ಹರ್ಷಪರವಶಳಾಗಿ ಇಂತಪ್ಪ ಮಹಾಪುರುಷನು ಎಂತು ದೊರಕುವನು, ಚಿಂತಾಮಣಿಯು ನನ್ನ ಬಳಿಯಲ್ಲಿದ್ದುದರಿಂದಲು ಮತ್ತೂ ನನ್ನ ಪೂರ್ವ ಪುಣ್ಯಪ್ರಭಾವದಿಂದಲು, ಇಂದ್ರ ಮೊದಲಾದ ದಿಕ್ಪಾಲಕರಿಗಿಂತಲು ಸಮರ್ಥನಾದ ಈ ಮಹಾ ರಾಜಕುಮಾರನು ಇಲ್ಲಿಗೆ ಬಂದಿರುವನು, ಸಾಧಾರಣವಾಗಿ ಬರತಕ್ಕವನಲ್ಲ, ಈ ಸಮಯದಲ್ಲಿ ರತ್ನವಂ ಸುಮ್ಮನೆ ಕೊಟ್ಟರೆ ಕಾರ್ಯ ಮಿಂಚಿಪೋಗುವುದು, ಮುಂದೆ ಈ ರಾಜಕುಮಾರನಂ ನಾನು ಅಪೇಕ್ಷಿಸಿದರೆ ಸ್ವಾಧೀನನಾಗುವ ರೀತಿ ತೋರುವದಿಲ್ಲ, ಈಗಲೇ ಈ ರಾಜಕುಮಾರನಂ ಉಪಾಯದಿಂ ಪಾಣಿಗ್ರಹಣವಂ ಮಾಡುವುದು ಉಚಿತವೆಂದು ನಿಶ್ಚಯಿಸಿ ಮಹಾನಾಗನಂ ಕುರಿತು ಎಲೈ ತಂದೆಯೇ! ಕೇಳು ನೀವು ಎಲ್ಲರೂ ಕೂಡಿ ಮೊದಲು ಪ್ರತಿಜ್ಞೆಯಂ ಮಾಡಿದ ಪರಿ ಏನು, ಈಗ ರತ್ನಮಾತ್ರವಂ ಕೇಳುವದೇನು ಲೋಕದೋಳ್ ಪ್ರತಿಜ್ಞೆಯಂ ಮಾಡಲೇಬಾರದು, ಅಥವಾ ಮಾಡಿದರೂ ಮೀರಿ ನಡೆಯಲಾಗದು, ಹೀಗಿರುವಲ್ಲಿ ನಾನು ರತ್ನ ಮಾತ್ರವಂ ಕೊಟ್ಟರೆ ನಿಮಗೆಲ್ಲರಿಗೂ ಅಪಕೀರ್ತಿ ಬರುವದಿಲ್ಲವೇ ಎನಲು, ಅದಂ ಕೇಳಿ ಮಹಾನಾಗನು ಎಲೈ ಮಾಲಿನಿಯೇ! ಆ ರಾಜಕುಮಾರನು ರತ್ನವಂ ಬಂದೇ ಅಪೇಕ್ಷಿಸಿರುವನಲ್ಲದೇ ನಾವು ಪ್ರತಿಜ್ಞೆಯಂ ಮಾಡಿದಂತೆ ನಡೆಯುವನಾಗಿ ತೋರುವದಿಲ್ಲ, ಇದಲ್ಲದೇ ಈ ದೇವತಾರತ್ನವು ಆ ದುಷ್ಟನಾದ ದುರ್ಧರ್ಷನ ಸ್ವಾಧೀನವಾಗಬಾರದೆಂದು ಅವನಿಗೆ ಮೋಸವಂ ಮಾಡಲೋಸುಗ ಪುರುಷಮೃಗನಂ ಕರತರುವದೆಂದು ಪ್ರತಿಜ್ಞೆಯಂ ಮಾಡಿದೆವಲ್ಲದೇ ನಿನಗೋಸುಗ ಪ್ರತಿಜ್ಞೆಯಂ ಮಾಡಲಿಲ್ಲ, ಆದ್ದರಿಂ ರತ್ನವಂ ಕೊಡಬೇಕೆಂದು ಮಹಾಶೇಷ ಮೊದಲಾಗಿ ನಾವೆಲ್ಲರೂ ನಿಶ್ಚಯಿಸಿ ನಾನು ಬಂದಿರುವೆನೆಂದು ನುಡಿಯಲು, ಆಗ ಮಾಲಿನಿಯು ಕಂಬನಿಗಳಂ ತುಂಬುತ ಎಲೈ ತಂದೆಯೇ! ನಿಮ್ಮಂ ಸತ್ಯಸಂಧರೆನ್ನಬಹುದು, ಬಂದು

ವ್ಯಾಳಿಯಲ್ಲಿ ಆ ದುರ್ಧರ್ಷನೇ ಪುರುಷಮೃಗನೆನ್ನೊಡಗೊಂಡು ಬಂದಿದ್ದರೆ ರತ್ನದ ಜತೆ ನನ್ನಂ ಕೂಡ ಕೊಡಬೇಕಾಗುವದೋ ಇಲ್ಲವೋ ನೀವೆ ತಿಳಿದುನೋಡಿ ಮುಂದಿನ ಕಾರ್ಯವಂ ನೆರವೇರಿಸುವುದೆಂದು ಹೇಳಿ ನಿಮ್ಮಿಂದ ಆಗದಿದ್ದರೆ ಸರ್ವಪ್ರಯತ್ನದಿಂದಲು ನಾನಿರುವ ಬಳಿಗೆ ರಾಜಕುಮಾರನು ಬರುವಂತೆ ಯತ್ನವಂಗೈವಲ್ಲಿ ಈ ರತ್ನವಂ ಕೊಟ್ಟು ರಾಜಕುಮಾರನಂ ಸಂತೋಷಪಡಿಸಿ ಕಳುಹುವೆನೆಂದು ಹೇಳಲಾ ಮಹಾನಾಗನು ತನ್ನ ಮಗಳ ಅಭಿಪ್ರಾಯವಂ ತಿಳಿದು ಮನಮರುಗಿ ಅಲ್ಲಿಂದ ಹಿಂತಿರಿಗಿ, ಮಹಾಶೇಷನಿರುವ ಸಭೆಯನ್ನೈದಿ ಆದಿಶೇಷನಿಗೆ ತನ್ನ ಮಗಳ ಅಭಿಪ್ರಾಯವಂ ತಿಳುಹಿ ಸರ್ವಪ್ರಯತ್ನದಿಂದಲೂ ಸುಗಂಧರಾಜಕುಮಾರನಂ ತನ್ನ ಮನೆಗೆ ಬರುವಂತೆ ಮಾಡಬೇಕು ಇಲ್ಲದಿದ್ದರೆ ಪ್ರಮಾದ ಬರುವುದೆಂದು ಪರಿಪರಿಯಾಗಿ ವಿಜ್ಞಾಪನೆಯಂ ಮಾಡಲಾಗ ಮಹಾಶೇಷ ಮೊದಲಾದವರು ಮಹಾನಾಗನ ದೈನ್ಯೋಕ್ತಿಗಳಂ ಕೇಳಿ ವಿಚಾರಲಾರದೆ ಎಲ್ಲರೂ ಒಂದಾಗಿ ಸುಗಂಧಮಹಾರಾಜನಂ ಕುರಿತು ಎಲೈ ವೀರನೆ! ನೀನು ಅಪೇಕ್ಷಿಸಿರುವ ಚಿಂತಾಮಣಿಯು ಈ ಮಹಾನಾಗನೆಂಬ ನನ್ನ ಮುಖ್ಯ ಮಂತ್ರಿಯು ಮಗಳಾದ ಮಾಲಿನಿಯ ಬಳಿಯಲ್ಲಿರುವದು, ಆ ತರುಣಿಯು ತಾನೇ ನಿನಗೆ ಒಪ್ಪಿಸುವೆನೆಂದು ಸಂಕಲ್ಪವಂ ಮಾಡಿರುವಳಂತೆ ಅದುಕಾರಣ ನಮ್ಮ ಮೇಲಣ ದಯೆಯಿಂದ ಆ ಮಾಲಿನಿಯ ಮಂದಿರವಂ ನಿನ್ನ ಪಾದವಿನ್ಯಾಸಗಳಿಂದ ಪಾವನವಂ ಮಾಡಿ ಪೂಜೆಯಂ ಕೈಕೊಂಡು ಚಿಂತಾಮಣಿಯಂ ಸ್ವಾಧೀನ ಪಡಿಸಿಕೊಂಡು ಎಂದಿನಂತೆ ಈ ಸಭೆಯನ್ನೈದಿ ಸರ್ವರಂ ಸಂತೋಷಪಡಿಸಿ ನಿಜಸ್ಥಾನವಂ ಕುರಿತು ತೆರಳುವದು ಯುಕ್ತವಾಗಿ ತೋರುತಲಿದೆ ಆದ್ದರಿಂ ಚಿತ್ತಕ್ಕೆ ಎಂತು ಸಮುಚಿತವೋ ಆ ಪರಿಯಾಗಿ ನಡೆಸಬಹುದು, ಎಂದು ಹೇಳಲಾ ಮಾತಿಗೆ ಸುಗಂಧರಾಜೇಂದ್ರನು ಸುಮತಿಯಂ ಕುರಿತು ಎಲೈ ಮಂತ್ರಿಯೆ! ಈಗ ನಾಗರೆಲ್ಲರೂ ಒಂದಾಗಿ ಮಹಾನಾಗನ ಮಗಳಾದ ಮಾಲಿನಿಯ ಮಂದಿರಕ್ಕೆ ಪೋಗಬೇಕೆಂದು ಹೇಳುವುದಂ ನೋಡಿದರೆ ಮೊದಲು ದುರ್ಧರ್ಷನಂ ಅವಲಾಪಿಸಿದಂತೆ ಮೋಸವಂ ಮಾಡಲೋಸುಗವೋ, ಅಥವಾ ಇನ್ನೇನಾದರೂ ವಂಚನೆಯಿಂದ ವಂಚಿಸಲೋಸುಗವೋ, ಇಲ್ಲ

ನ ಮಾಲಿನಿ ಎಂಬ ತರುಣಿಯ ಸೌಂದರ್ಯವಂ ನೋಡಿ ಮೋಹಿತನಾಗಿ ಒಂದೂ ತೋರದೆ ಪರಾಧೀನನಾಗಿ ಮಣಿಯಂ ಹೊಡೆದ ತಾಮಾಡಿದಂತೆ ಕೇಳಿಕೊಂಡು ಇವನೆಂದು "ಬ್ರೋಚಿಸಿಯಂಗ್ಯವಿರಾಗನೋ" ಎಂದು ಬಗೆಬಗೆಯಾಗಿ ಸಂಶಯಂಗೊಂಡು ಹೇಳುತ ತನ್ನ ಪ್ರಭಾವವು ಇವನಿಗೆ ತಿಳಿಯದೇ ಇವ್ವರೂ ನನ್ನ ಸಹಾಯಾರ್ಥವಾಗಿ ಬಂದಿದ್ದ ಪುರುಷಶ್ರೇಷ್ಠನ ಪ್ರಭಾವವಂ ಚೆನ್ನಾಗಿ ಬಲ್ಲರು, ಅಲ್ಲದಾತಣ ಆ ಮಹಾತ್ಮರು ಇವನ ಆಜ್ಞೆಯಂ ಮೀರಿ ನಡೆಯುವುದಕ್ಕೆ ಅವರು ಶಕ್ತರಲ್ಲವೆಂದು ನಿಶ್ಚೈಸಿ, ಮತ್ತು ಮಂತ್ರಿಯಾದ ಸುಮತಿಯಂ ಕುರಿತು ಎಲೈ ಬುದ್ಧಿಸಂಪನ್ನ ಸುಮತಿಯೆ! ಎಂತಾದರಾಗಲಿ; ಈ ಮಹಾಶೇಷ ಮೊದಲಾದ ನಾಗಶ್ರೇಷ್ಠರು ಹೇಳಿದ ಹಾಗೆ ಮಹಾನಾಗನ ಮಗಳಾದ ಮಾಲಿನಿ ಇರುವ ಬಳಿಗೆ ಹೋಗಿ ನೋಡುವಾ ಎಂದು ನುಡಿದು, ಮರಳಿ ಮಹಾಶೇಷನಂ ಕುರಿತು ಎಲೈ ನಾಗಾಧಿಪತಿಯೆ! ನೀನು ಹೇಳಿದ ಹಾಗೆ ಮಹಾನಾಗನ ಮಗಳಾದ ಮಾಲಿನಿಯ ಮಂದಿರಕ್ಕೆ ಹೋಗಿ ಬರುವೆನೆಂದು ನುಡಿಯಲದಂ ಕೇಳಿ ಮಹಾಶೇಷನು ತನ್ನ ಮಂತ್ರಿಗಳೆಲ್ಲರಂ ಕರೆದು ಸಕಲ ವೈಭವದಿಂದ ಈ ಸುಗಂಧರಾಜಕುಮಾರನಂ ಮಹಾನಾಗನ ಮಗಳಾದ ಮಾಲಿನಿಯ ಮಂದಿರಕ್ಕೆ ಕರೆದುಕೊಂಡು ಹೋಗಿರೆಂದು ಅಪ್ಪಣೆಯಂ ಕೊಡಲು, ಆ ಕ್ಷಣದಲ್ಲಿಯೇ ಅವರೆಲ್ಲರೂ ಮಹಾರಾಜ ವೈಭವದಿಂದ ಸುಗಂಧ ರಾಜನನ್ನೊಡಗೊಂಡು ರಾಜವೀಧಿಯೊಳ್ ಬರುತ್ತಿರಲು, ಆ ಕಾಲದೊಳ್ ಈ ರಾಜಕುಮಾರನಂ ನೋಡಬೇಕೆಂದು ಕಾದಿದ್ದ ನಾಗಕನ್ನೆಯರೆಲ್ಲರೂ ಕಂಡು ಇವನ ಸೌಂದರ್ಯಕ್ಕೆ ಮೋಹಿತರಾಗಿ ಒಂದೂ ತೋರದೆ ಚಿತ್ರದಲ್ಲಿ ಬರೆದ ಪ್ರತಿಮೆಗಳಂತೆ ಚಲಿಸದೇ ನಿಶ್ಚಲರಾಗಿ ಎರಡು ಕಡೆಯಲ್ಲೂ ನಿಂದಿರಲಾಗ ಸುಗಂಧರಾಜೇಂದ್ರನ ಸೌಂದರ್ಯವೆಂಬ ಪ್ರವಾಹವು ಉಬ್ಬಿ ಮೀರಿ ಬಾರದಂತೆ ನಾಗಕನ್ಯೆಯರ ಸಾಲುಗಳೆರಡೂ ತೀರಗಳಂತೆ ತೋರುತ್ತಿರಲು, ಆ ಸಮಯದಲ್ಲಿ ರಾಜಕುಮಾರನು ತನ್ನ ಮಂದಿರವಂ ಕುರಿತು ಬರುವ ವಾರ್ತೆಯಂ ಕೇಳಿ ಮಾಲಿನಿಯು ಕುತೂಹಲದಿಂದ ಸಖಿಯರೊಡಗೂಡಿ ಸಜ್ಜೆಯಂ ಸೇರಿ ನೋಡು

ತ್ತಿರುವ ಸಮಯದೊಳ್ ನಕ್ಷತ್ರಮಂಡಲ ಮಧ್ಯದಲ್ಲಿ ಪ್ರಕಾಶಿಸುವ ಚಂದ್ರನಂತೆ ರಾಜಕುಮಾರನು ಬರುತ್ತಿರಲು, ಅದಂ ಕಂಡು ಮಾಲಿನಿಯು ದರಿದ್ರನಿಗೆ ನಿಧಿಗಳು ಸಿಕ್ಕಿದಂತೆ ಹರ್ಷವಂ ತಾಳಿ ರಾಜಕುಮಾರನ ಸೌಂದರ್ಯವೆಂಬ ಬಾಣಂಗಳಿಂದ ಘಾಯ ಪಡೆದು ಮೈಮರೆದು ಎಚ್ಚತ್ತು ಇನ್ನೊಮ್ಮೆ ನೋಡುವೆನೆಂಬ ಕುತೂಹಲದಿಂದ ಮತ್ತೆ ಎಚ್ಚತ್ತು ನೋಡಿ ತನ್ನ ಮನೆಗೆ ಬರುವನೆಂದು ತಿಳಿದು ಸಡಗರದಿಂದಮಳ ಸ್ತ್ರೀಕನ್ಯ. ರಾಜಕುಮಾರನ ಸಂಗಡ ಬರುವ ನಾಗಶ್ರೇಷ್ಠರಿಗೆ ಉಪಚಾರವಂ ಮಾಡುವಂತೆ ಸಖಿಜನರಿಗೆ ನಿಯಮಿಸಿ ತಾನಿರುವ ಅಂತಃಪುರದಲ್ಲಿ ಪ್ರತ್ಯೇಕವಾಗಿ ರಾಜಕುಮಾರಂಗೆ ಉಪಚಾರವಂ ಮಾಡಲೋಸುಗ ಯೋಗ್ಯವಾದ ಪದಾರ್ಥಂಗಳಂ ಸನ್ನಹಿಸುತ್ತಿರಲು;

ಅಷ್ಟರೊಳ್ ಸುಗಂಧ ಮಹಾರಾಜೇಂದ್ರನು ಪರಿವಾರ ಸಮೇತನಾಗಿ ಮಹಾನಾಗನ ಅಂತಃಪುರವಂ ಕುರಿತು ಬರುತ್ತಿರಲು, ಆ ಸಮಯದಲ್ಲಿ ಹಜಾರದಬಾಗಿಲೊಳ್ ನಾಗಕನ್ಯೆಯರು ರಾಜಕುಮಾರನೊಡನೆ ಬಂದ ಜನಂಗಳಿಗೆ ಪರಿಪರಿ ಉಪಚಾರಂಗಳಂ ಮಾಡುತ್ತಿರಲು, ಮತ್ತೆ ಕೆಲವರು ಮಾಲಿನಿಯ ಪ್ರಾಣಸಖಿಯರು ಸುಗಂಧ ರಾಜೇಂದ್ರಂಗೆ ಹಸ್ತಾಲಾಗವಂಸಿತ್ತು ವಿವಿಧೋಪಚಾರಂಗಳಿಂದ ಸಂತೋಷ ಪಡಿಸುತ್ತ ಅಂತಃಪುರವಂ ಪ್ರವೇಶಿಸಿ ರತ್ನಪೀಠದಲ್ಲಿ ಕುಳ್ಳಿರಿಸಲಾಗ ಮಾಲಿನಿಯು ತನಗೆ ಸಮಾನ ರೂಪವತಿಯುರಾದ ಸಾವಿರಾರು ಮಂದಿ ಸಖೀಜನಂಗಳಂದೊಡಗೂಡಿ ಲಾವಣ್ಯ ಸಮುದ್ರವೇ ಸ್ತ್ರೀರೂಪುಗೊಂಡು ಬಂದಿರುವಂತೆ ತೋರುತ ಮೆಲ್ಲಮೆಲ್ಲನೆ ಅಡಿಗಳನ್ನಿಡುತ ಭಯಭಕ್ತಿಯಿಂ ಬಂದು ಸುಗಂಧಮಹಾರಾಜಂಗೆ ವಂದನೆಯಂ ಮಾಡಿ ಆ ರಾಜೇಂದ್ರನಂ ಪತಿಯನ್ನಾಗಿ ಭಾವಿಸಿ ವಿವಿಧೋಪಚಾರಗಳಿಂದ ಪೂಜೆಯಂ ಮಾಡಿ ಮನದಣಿವಂತೆ ನೋಡಲಾಕ್ಷಣದಲ್ಲಿಯೇ ಆ ಮಾಲಿನಿಯು ಮನಸಿಗರಾಗಿ ಮದನತಾಪದಿಂ ಶರೀರವು ಬೆಂಕಿಯಂತಾಗಿ ಬೆವರೇರಿ ಮೀರಿ ಬರುವ ಮೂರ್ಛೆಯಂ ಲಜ್ಜೆ ಎಂಬ ಶೈತ್ಯೋಪಚಾರದಿಂದ ಉಪಶಾಂತಿಯಂ ಹೊಂದಿಸಿ ಮುಗ್ಧೆಯಂತೆ ಮುಂದೋರದೆ ಬಳಿಕ ಕ್ಷಣ್ಣೊಳ್ ತಾನೆ ಎಚ್ಚತ್ತು ತೆರೆಯದ

ಗಿದ ಸಮುದ್ರವಂತೆ ತನ್ನ ಅಭಿಪ್ರಾಯಮಂ ತೋರ್ಪಡಿಸದೆ ಗಂಭೀರ ವಾಗಿ ಸುಮ್ಮನೆ ನಿಂತು ಕಾಲು ಬೆರಳಿನಿಂದ ನೆಲವಂ ಬರೆಯುತ್ತ ತಲೆ ವಾಗಿ ಸರ್ವಸ್ವವಂ ಸೂರೆಗೊಟ್ಟು ನಿರ್ವಿಣ್ಣಳಾಗಿರುವಂತೆ ತೋರುತ ದೈನ್ಯವಿಂ ರಾಜೇಂದ್ರನ ಎದುರಿಗೆ ನಿಂತಿರಲು, ಇಂತು ನಿಂತಿರುವ ಮಾಲಿನಿಯಂ ನೋಡಿ ಮಹಾರಾಜನು ಮುಮುಕ್ಷೆಯಿಂದ ಮನದೊಳ್ ಮೊದಲು ಯೋಚಿಸಿದ ಮಾತುಗಳನೆಲ್ಲ ಮರೆತು ಮಾಲಿನಿಯ ಸೌಂದರ್ಯ ವೆಂಬ ಮಹಾಪಾಶಕ್ಕೆ ಸಿಲುಕಿ ಮೋಹವು ಹೆಚ್ಚಿ ಮುಂದೋರದೆ ಅನ್ಯರೊಳ್ ಎತ್ತರಿಸು ಈ ಮಾಲಿನಿ ಎಂಬ ಮಾನಿನಿಯು ಮೊಗದ ನೋಟಗಂ ನೋಡಿದರೆ ಮಹಾದೇವನಾದರೂ ಮೋಸ ಹೋಗುವನು ನನ್ನ ಪಾಡೇನೆಂದು ಮನದೊಳಾಲೋಚಿಸಿ ಎಂತಾದರಾಗಲಿ ಇವಳ ಮನೋನುಗುಣವಾಗಿ ನಡೆಯುವೆನೆಂದರೆ ಮೊದಲು ನಾನು ಮಾಡಿರುವ ಪ್ರತಿಜ್ಞೆಗೆ ಭಂಗ ಉಂಟಾಗಿ ಅಪಕೀರ್ತಿಯು ಎನ್ನಂ ಸುತ್ತದೆ ಬಿಡದು ಎಂದು ಚಿಂತಿಸುತ ಮತ್ತೆ ಮಾನವೇಂದ್ರರ ಮಂಡಲಿಯಲ್ಲಿ ಪ್ರಶಸ್ತ ವಾದ ಕೀರ್ತಿಯಂ ಸಂಪಾದಿಸುವುದು ಉಚಿತವಲ್ಲದೆ ಈಗ ಮನ ಸೋಲು ವುದು ಸರ್ವಥಾ ಅನುಚಿತವೆಂದು ಮನೋನಿಗ್ರಹವಂ ಮಾಡಿ ಮಾಲಿ ನಿಯ ಸೌಂದರ್ಯವೆಂಬ ಸಮುದ್ರದೊಳೋಲಾಡುತ್ತಿರುವ ದೃಷ್ಟಿಗಳಂ ಬಲಾತ್ಕಾರದಿಂದ ಹಿಂತಿರಿಗಿಸಿ ಮಾಲಿನಿಯ ಸಮೀಪದಲ್ಲಿ ನಿಂದಿರುವ ಓಷ್ಟವಟಿಯಂ ಕರದು ಎಲೈ ತರುಣಿಯೇ! ನಾವು ಬಂದು ಬಹಳ ಹೊತ್ತಾಯಿತು ಮುಂದೆ ಕಾರ್ಯಗೌರವವು ಅಧಿಕವಾಗಿರುವುದು ಅದು ಕಾರಣ ಮಾಲಿನಿಯಂ ಕೇಳಿ ಮಣಿಯಂ ಬೇಗದಿಂ ತಂದು ಕೊಡೆನಲು, ಆ ಮಾತಂ ಕೇಳಿದ ಮಾಲಿನಿಯು ಹೃದಯದೊಳ್ ಛಲ್ಲೆ ಮೂಡಿದಂತಾಗಿ ಅದುವರಿಗೆ ಈ ರಾಜಕುಮಾರನು ತನ್ನಲ್ಲಿ ಅನುರಕ್ತನಾಗಿರುವನು ಎಂಬ ಭ್ರಾಂತಿಗೊಂಡಿರ್ದು ಈಗ ಅವನ ಹೃದಯಮಂ ತಿಳಿದು ವ್ಯಾಮೋ ಹದ ಮೂರ್ಛೆಯಿಂ ತಾಳ ಬಿರುಘಾಳಿಗೆ ಮುರಿದು ಬೀಳುವ ಬಾಳೆಯ ಮರದಂತೆ ನೆಲದಲ್ಲಿ ಬೀಳಲು, ಆ ಕ್ಷಣದಲ್ಲಿಯೇ ವಿಚಕ್ಷಣೆಯಾದ ಕನು ಲಾಕ್ಷಿಯು ಮಾಲಿನಿಯಂ ಸುತ್ತುವರಿದು ಕೈಹಿಡಿದೆತ್ತಿ ಸೌಗಂಧಮಹಾ ರಾಯನ ಚರಣಕಮಲಗಳಮೇಲೆ ನಮಸ್ಕಾರವಂ ಮಾಡಿಸುವ ನೆವ

ದಿಂದ ಮುಳುಗಿಸಿ ನಮ್ಮ ಅರಸಿಯು ಪ್ರಾಣದಾನವಂ ಮಾಡಬೇಕೆಂದು ನುಡಿಯುತ್ತ ಕಂಬನಿಗಳಂ ತುಂಬುತ್ತ ಕಳವಳಿಸುತ್ತ ಕರಗಳಂ ಮುಗಿಯುತ್ತ ರಾಜೇಂದ್ರನ ಅಂತಃಕರಣದಲ್ಲಿ ಕರುಣ ಉಂಟಾಗುವಂತೆ ಸುತ್ತು ವರಿದು ನಿಂದಿರಲು, ಆ ಕಾಲದೊಳ್ ಆ ಮಾಲಿನಿಯು ವಿರಹಾಗ್ನಿ ಜ್ವಾಲೆಯಿಂದ, ಅವಳು ಧರಿಸಿರುವ ಜೀವರತ್ನದ ಆಭರಣಂಗಳೆಲ್ಲ ಅರಳುಗಳಂ ತಾಮುವಂ, ಮುಕ್ತಾಭರಣಂಗಳೆಲ್ಲ ಕರಗಿ ನೀರಾದುವಂ, ಸರೋವರದಿಂದ ತೆಗೆದು ಬಿರುಬಿಸಿಲಿನೊಳ್ ಬಿಸುಟ ತಾವರೆ ಬಳ್ಳಿಗಳಂತೆ ಬಾಡಿ ಬಸವಳಿದು ವಿವರ್ಣವಾಗಿರುವ ತನುಲತೆಯುಂ, ಕಡೆಗಣ್ಣುಗಳಿಂದ ಕಾಲುವೆಗಳಂತೆ ಹರಿಯುವ ಕಣ್ಣೀರುಗಳಂ ಸಹಾ ನೋಡಿ ರಾಜೇಂದ್ರನ ಮನಮರುಗಿ ಅವಳ ಸಖಿಯರಂ ಕುರಿತು ಶೀತೋಪಚಾರವಂ ಮಾಡಿರೆಂದು ನುಡಿಯಲಾಸಖಿಯರೆಲ್ಲರೂ ಆ ಕ್ಷಣದಲ್ಲಿಯೇ ಪರಿಪರಿ ಶೀತೋಪಚಾರವಂ ಮಾಡಲಾಮಾಲಿನಿಗೆ ಈ ಉಪಚಾರಂಗಳೆಲ್ಲವೂ ಮತ್ತೂ ವಿರಹಾತಿಶಯಕ್ಕೆ ಸಾಧನಂಗಳಾದವೇ ಹೊರತು ತಾಪವಂ ಪರಿಹರಿಸದಿರಲು, ಅದಂ ನೋಡಿ ಚತುರೆಯಾದ ಓರ್ವ ತರುಣಿಯು ಸುಗಂಧರಾಜಕುಮಾರನಂ ಕುರಿತು ಎಲೈ ಮಹಾ ರಾಜಕುಲತಿಲಕನೇ! ಸಕಲ ಕಳಾಭಿಜ್ಞನಾದ ಮಹಾರಾಜನಿಗೆ ದೂತಿಯಾದ ನಾನು ವಿಜ್ಞಾಪನೆಯಂ ಮಾಡುವುದಕ್ಕೆ ಯೋಗ್ಯಳಲ್ಲ ಆದರೂ ಬಿನ್ನೈಸುವೆನು ಅದೆಂತೆನೆ—ನಮ್ಮ ಒಡೆತಿಯಾದ ಈಮಾಲಿನಿಯು ಮನಸ್ಸು ನಿನ್ನಲ್ಲಿ ಮಮತೆಯಿಂದ ಸೇರಿ ಹಿಂತಿರುಗದೆ ಸ್ಥಿರವಾಗಿ ನಿಂತಿರುವುದು ಇಂತಿರುವಲ್ಲಿ ಈ ಬರೀ ಉಪಚಾರಂಗಳಿಂದ ಫಲವೇನೂ ತೋರಲಿಲ್ಲ ಆದ್ದರಿಂ ನೀನು ಕೈ ಪಿಡಿವೆನೆಂದು ಭರವಸೆಯಂ ನಿತ್ತರೆ ಮನ್ಮಥನ ಬಾಣಂಗಳಿಂದ ಘಾತವು ಪಡೆದು ಮೂರ್ಛೆಗೊಂಡು ಮಲಗಿರುವ ಈ ಮಾಲಿನಿಯು ನಿನ್ನ ಚರಣಸೇವೆಗೆ ಯೋಗ್ಯಳಾಗುವಳು, ಇಲ್ಲದಿರೆ ಎಂತಾಗುವಳೋ ನಮಗೆ ತೋರಲಿಲ್ಲ, ಇಂತಿರುವಲ್ಲಿ ಸುಲಭವಾಗಿ ಪ್ರಾಣದಾನವಂ ಮಾಡಿ ಫಲವಂ ಸಂಪಾದಿಸುವುದಕ್ಕೆ ಇದೇ ನಿನಗೆ ಸಮಯವೆಂದು ವಿಜ್ಞಾಪನೆಯಂಗೈದು ಮತ್ತೂ ನಾವೆಲ್ಲರೂ ನಮ್ಮ ಒಡತಿಯಾದ ಮಾಲಿನಿಯು ಯಾವ ಪರಿಯಾಗಿರುವಳೋ ಅದೇ ಪರಿಯಾಗಿ

ಇರುವೆವಲ್ಲದೇ ಚಿಂತಾಮಣಿಯಂ ನಾವು ಕಂಡು ಕೇಳಿದವರಲ್ಲ, ಮಹಾನಾಗಸಮಗಳಾದ ಈ ಮಾಲಿನಿಯು ನಿನ್ನ ಸ್ವಾಧೀನಳಾದಡೆ ಚಿಂತಾಮಣಿ ರತ್ನವು ಎಲ್ಲಿ ಪೋಗುವುದು, ನೀನು ಪರಿಪರಿಯಾಗಿ ಯೋಚನೆಯಂ ಮಾಡದೇ ಮಾಲತೀಕುಸುಮದಂತೆ ಸುಕುಮಾರಾಂಗಿಯಾದ ಈ ಮಾಲಿನಿಯಂ ಘಾಶಪಡಿಸದೆ ಈ ತರುಣಿಯ ಯೌವನವಂ ಸಫಲವಂ ಮಾಡಿ ಸ್ತ್ರೀರತ್ನ ಸಹಿತವಾಗಿ ಚಿಂತಾಮಣಿ ಎಂಬ ರತ್ನವಂ ಸಂಗ್ರಹಿಸುವುದು ಉಚಿತವಾಗಿ ತೋರುವುದು ಇನ್ನು ಮೇಲೆ ನಿನ್ನ ಮನ ಬಂದಂತೆ ಮಾಡಬಹುದು ಭಾರಿಭಾರಿಗೂ ವಿಜ್ಞಾಪನೆಯಂ ಮಾಡುವುದಕ್ಕೆ ನಾನು ಶಕ್ತಳಲ್ಲ ಆದ್ದರಿಂ ಸರ್ವಪ್ರಕಾರದಲ್ಲೂ ನಿನ್ನ ಕಾರ್ಯವಂ ಕೈಕೊಳ್ಳುವುದು ಉತ್ತಮವೆಂದು ಬಿನ್ನವಿಸಲು.

ಆ ಮಾತಂ ಕೇಳಿ ಸುಗಂಧರಾಜೇಂದ್ರನು ಮಾಲಿನಿಯ ಲೋಕಾತಿಶಯವಾದ ಸೌಂದರ್ಯವಂ ನೋಡಿ ಸಹಿಸಲಾರದೆ ಮಾರಸಶರಂಗಳಿಗೆ ಗುರಿಯಾದ ಅಂತರಂಗ ಉಳ್ಳವನಾಗಿ ಮುಂದೇನು ಮಾಡುವೆನೆಂದು ಆಲೋಚಿಸಿ ಮೊದಲು ನಾನು ಮಾಡಿದ ಆಲೋಚನೆಯು ಇದರಿಂದ ನೆಡೆಯಲಾರದೆಂದು ನಿಶ್ಚೈಸಿ ಆ ಬಳಿಕ ಬಾಗೀಕುಸುಮಕ್ಕಿಂತಲೂ ಅತಿಶಯವಾಗಿ ಮೃದುವಾಗಿರುವ ಮಾಲಿನಿಯ ಅಂಗಸಂಗವು ಇಲ್ಲದಿದ್ದರೆ ತನ್ನ ಚಿತ್ತವು ಸಹಿಸಲಾರದೆಂದು ನಿಶ್ಚೈಸಿ ಬಳಿಕ ತನ್ನ ಪಾದಪದ್ಮಗಳ ಮೇಲೆ ಮಿಂಚುಗಳೇ ಗುಂಪಾಗಿ ಕನ್ಯಾರೂಪವಂ ತಾಳಿದಂತೆ ಮಲಗಿರುವ ಮಾಲಿನಿಯಂ ತನ್ನ ಕರಕಮಲಗಳಿಂದೆತ್ತಿ ಅಂಕದೊಳ್ ಕುಳ್ಳಿರಿಸಿ ಮೈಮರೆದಿ ಕುರುಳುಗಳಂ ನೇವರಿಸಿ ಮುದ್ದಾಡಿ ಗಲ್ಲವಂ ಚುಂಬಿಸಿ ಎಲೈ ಪ್ರಾಣಪ್ರಿಯಳೇ! ನಿನ್ನ ಮನೋದಾರ್ಢ್ಯವಂ ನೋಡಬೇಕೆಂದು ನಾನು ಈ ಪರಿಯಲ್ಲಿ ಘಾಶಿಗೊಳಿಸಿದೆನಲ್ಲದೇ ನಿನ್ನ ಮೇಲೆ ಪ್ರೀತಿ ಇಲ್ಲದೇ ಇಂತು ಮಾಡಿದವನಲ್ಲ, ಹರಹರಾ ಶಿವನಾಣೆ ಎಲೈ ಚಿತ್ತವಲ್ಲಭೆಯೆ! ಧೈರ್ಯಸನ್ನಾಶ್ರಯಿಸಿ ಅರಳಿದ ಕಮಲದಂತಿರುವ ನೇತ್ರಂಗಳಂ ತೆರದು ನೋಡಿ ಎನ್ನ ದೇಹದೊಳ್ಪುಟ್ಟಿದ ಮದನಜ್ವರದ ತಾಪಕ್ಕೆ ಅನುರೂಪವಾದ ಶಾಂತಿಕರವಾದ ಅಧರಾಮೃತವೆಂಬ ಔಷಧಿಯಂ ಕೊಟ್ಟು ಸಂತೈಸಬೇಕಲ್ಲದೇ ಇಂತು ಮುನಿಸಂತಾಳುವುದು ಉಚಿತ

ಡಗೂಡಿ ವಿಹಾರವಂ ಮಾಡಬೇಕೆಂಬ ಕುತೂಹಲದಿಂದಲೂ, ಸಖಿಯರ ಮುಖದಿಂ ಸಕಲಾಭರಣಂಗಳಂ ವಿಚಿತ್ರವಸ್ತ್ರಂಗಳಂ ಸಹಾ ತರಿಸಿ ರಾಜೇಂದ್ರನೊಡಗೂಡಿ ಪರಿಮಳಭರಿತವಾದ ಸುಖೋಷ್ಣವಾದ ಪನ್ನೀರಿನಿಂ ಮಂಗಳಸ್ನಾನವಂಗೈದು ದಿವ್ಯದುಕೂಲಂಗಳನ್ನುಟ್ಟು ಅಮೋಘಗಳಾದ ರತ್ನಾಭರಣಂಗಳಂ ತೊಟ್ಟು, ಮೃಗಮದತಿಲಕವಂ ಹಣೆಯೊಳಿಟ್ಟು ರತಿಮನ್ಮಥರಂತೆ ಶೋಭಿಸುತ ರತ್ನಂಗಳಿಂ ನಿರ್ಮಿತವಾದ ಹಜಾರವನ್ನೈದಿ ಅದರ ಮಧ್ಯದಲ್ಲಿ ಒಂದೇ ವಜ್ರದ ಹಲಗೆಯಿಂ ನಿರ್ಮಿಸಿರುವ ಪೀಠದೊಳ್ಕುಳಿತು ರೋಹಿಣೀ ಚಂದ್ರರಂತೆ ಪ್ರಕಾಶಿಸುತ್ತಿರಲು, ಆಗ ಮಾಲಿನಿಯು ತನ್ನ ಪ್ರಾಣಸಖಿಯಾದ ಮಿತ್ರವಿಂದೆಯಂ ಕರೆದು ಎಲೈ ಸಖಿಯೆ! ನಮ್ಮ ತಾಯಿ ತಂದೆಗಳಿಗೆ ಈ ವೃತ್ತಾಂತವೆಲ್ಲವಂ ಉಪಾಯಾಂತರದಿಂದ ತಿಳುಹಿ ಅವರ ಅನುಮತಿಯಿಂದಲೇ ಪುರೋಹಿತನಂ ಬೇಗದಿಂ ಕರೆತರುವಳಾಗೆಂದು ಹೇಳಿಕಳುಹಲೂ, ಆಗ ಮಿತ್ರವಿಂದೆಯು ಸಂತೋಷದಿಂದ ಅಲ್ಲಿಂದ ತೆರಳಿ ಬರುತ್ತಿರಲು,

ಇತ್ತಲಾ ಮಹಾನಾಗನು ತನ್ನ ಮನೆಗೆ ಬಂದಿರುವ ನಾಗೋತ್ತಮರಿಗೆಲ್ಲರಿಗೂ ಯಥಾಯೋಗ್ಯವಾಗಿ ಮರ್ಯಾದೆಯಂ ಮಾಡಿ, ಇಲ್ಲಿ ನಡೆದ ವೃತ್ತಾಂತವೆಲ್ಲವಂ ಮಹಾಶೇಷಂಗೆ ತಿಳುಹುವದೆಂದು ಅಪ್ಪಣೆಯನ್ನಿತ್ತು ಕಳುಹಿ ಬಳಿಕ ಮನದೊಳ್ ಈ ಸುಗಂಧರಾಜೇಂದ್ರನು ಮಾಲಿನಿಯಲ್ಲಿ ಮಮತೆಯಂ ಮಾಡುವನೋ? ಇಲ್ಲದಿರೆ ಉಪೇಕ್ಷಿಸುವನೋ? ಅಥವಾ ಮರಳಿ ಬರುವೆನೆಂದು ಮೋಸವಂ ಮಾಡಿ ಮುಣಿಯಂಕೊಂಡು ಪೋಗುವನೋ? ಮತ್ತೂ ನಾಗಶ್ರೇಷ್ಠರೆಲ್ಲರೂ ಹಾಸ್ಯವಂ ಮಾಡುವಂತೆ ಆಗುವುದೋ? ದೈವಸಂಕಲ್ಪವೆಂತಿರುವುದೋ ನಾನು ಕಾಣೆನೆಂದು ಚಿಂತಿಸುತ್ತಿರಲಾಗ ಮಿತ್ರವಿಂದೆಯು ಮುಂದೆ ಬಂದು ನಿಂದು ವಂದನೆಯಂ ಮಾಡಿ ಮಾಲಿನಿಯ ವೃತ್ತಾಂತವೆಲ್ಲವಂ ವಿಸ್ತಾರವಾಗಿ ತಿಳುಹಿ ಬಳಿಕ ಕುಲಪುರೋಹಿತನಂ ಕಳುಹಬೇಕೆಂದು ನುಡಿಯಲಾ ಮಹಾನಾಗನು ಇದೆಲ್ಲವಂ ಕೇಳಿ ಅತ್ಯಂತ ಸಂತೋಷದಿಂ ಕೃತಕೃತ್ಯನಾದೆನೆಂದು ಭಾರಿಭಾರಿಗೂ ಹೇಳುತ ಮಿತ್ರವಿಂದೆಗೆ ಕುರುವಿಂದರತ್ನಮಯವಾದ ಒಂದು ತೊಡಿಗೆ ಒಡವೆಗಳಂ ಉಚಿತವಾಗಿ ಕೊಟ್ಟು ಕುಲಪುರೋಹಿತನಂ ಕರೆಸಿ ತಾನು

ಧರಿಸಿರುವ ಜೀವರತ್ನದ ಕಂಕಣಂಗಳಂ ಅವಸೆ ಕೈಗಳೊಳ್ ಅಳವಡಿಸಿ ಮಿತ್ರವಿಂದೆಯೊಡನೆ ಪೋಗಿ ಬರುವದೆಂದು ಹೇಳಿಕಳುಹಿಸಲೂ, ಆಗಲಾ ಪುರೋಹಿತನು ಪರಸ್ಪರವಾಗಿ ಪೇಳಿದ ಮಾತುಗಳೇ ನಿಜವಾಯಿತೆಂದು ಕಂಕಣಗಳಂ ನೋಡುತ್ತ ಸಂತೋಷದಿಂದ ಮಾಲಿನಿಯು ಸುಗಂಧರಾಜೇಂದ್ರನು ಈರ್ವರೂ ಇರುವ ಹಜಾರಕ್ಕೆ ಮಿತ್ರವಿಂದೆಯೊಡಗೂಡಿ ಬರುತಿರಲೂ, ಆಗ ಮಾಲಿನಿಯು ದೂರದೊಳ್ ಬರುವ ಪುರೋಹಿತನಂ ಕಂಡು ಸುಗಂಧರಾಜನೊಡಗೂಡಿ ಪೀಠದಿಂದಿಳಿದು ಬಂದು ಪ್ರಣಾಮವಂಗೈದು ಹಾಗೇ ಮಿತ್ರವಿಂದೆಯ ಮೊಗಮಂ ನೋಡಲೂ, ಆಗ ಮಿತ್ರವಿಂದೆಯು ಮಾಲಿನಿಯ ಅಭಿಪ್ರಾಯಮಂ ತಿಳಿದು ಉಚಿತವಾದ ಮಣಿಪೀಠದಲ್ಲಿ ಪುರೋಹಿತನಂ ಕುಳ್ಳಿರಿಸಿ, ಮಾಲಿನಿ ಸುಗಂಧರಾಯರ ಅನುರಾಗವಂ, ಅದರಿಂದುಂಟಾದ ವೃತ್ತಾಂತವೆಲ್ಲವಂ ವಿಸ್ತಾರವಾಗಿ ತಿಳುಹಲೂ, ಆಗ ಸುಗಂಧರಾಜೇಂದ್ರನು ಆ ಪುರೋಹಿತನ ಸಮ್ಮತಿಯಿಂದ ವಿರಹವೆಂಬ ಅಗ್ನಿಯೆ ಸಾಕ್ಷಿಯಾಗಿ, ಪಂಚಭೂತಂಗಳೆಂಬ ಸಭೆಯ ಜನರ ಸಮ್ಮತಿಯಿಂದ, ಯಾವಾಗಲೂ ಒಬ್ಬರೊಬ್ಬರಿಗೆ ಪ್ರೀತಿ ಹೆಚ್ಚಾಗಿ ಬಾಳುವೆವೆಂಬ ಮಂತ್ರವಂ ಪೇಳುತ್ತ ಪಾಣಿಗ್ರಹಣವಂ ಮಾಡಿ, ಪರಸ್ಪರ ಒಬ್ಬರ ಮನೋರಥವಂ ಒಬ್ಬರು ಪೂರಣೆಯಂ ಮಾಡುವದೆಂಬ ಕಂಕಣಂಗಳಂ ಈರ್ವರೂ ಕಟ್ಟಿ ಸಂತೋಷಗೂಡಿ ಅನರ್ಘ್ಯ ವಸ್ತ್ರಾಭರಣಂಗಳಿಂದ ಪುರೋಹಿತನಂ ಪೂಜಿಸಿ ಮನೆಗೆ ಕಳುಹಿ ಸತಿಪತಿಗಳೀರ್ವರೂ ಮೈಯ್ಯುಬ್ಬಿ ಆನಂದಭರಿತರಾಗಿ, ಬಳಿಕ ಸುವರ್ಣಲಿಂಗೇಶ್ವರನ ಆಲಯಮಂ ಕುರಿತು ತೆರಳಿ, ಅಲ್ಲಿ ಸರ್ವಸಿದ್ಧಿ ಪ್ರದನಾದ ಸ್ವರ್ಣಲಿಂಗೇಶ್ವರನ ದರ್ಶನವಂಗೈದು ತೀರ್ಥಪ್ರಸಾದವಂ ಸ್ವೀಕರಿಸಿ ದೇವತಾಭಿವಂದನವಂ ಮಾಡಿ ಬರುವ ಕಾಲದೊಳ್ ಮಾಲಿನಿಯು ಸುಗಂಧರಾಜೇಂದ್ರನಂ ಕುರಿತು ಎಲೈ ಷೋಡಶಕಳಾ ಪೂರ್ಣನಾದ ಚಂದ್ರನೇ! ಈ ಸಮ್ಮ ಪಾತಾಳಲೋಕದಲ್ಲಿ ಅಪೂರ್ವವಾಗಿ ಸಂಗ್ರಹಿಸಿ ಮಡಗಿರುವ ಅಮೃತಕಳಶಂಗಳಿರುವವು ಅದಂ ಸ್ವೀಕರಿಸಿ ಎನ್ನ ಮನೋಭೀಷ್ಟವಂ ನೆರವೇರಿಸಬೇಕೆಂದು ಪೇಳಲೂ, ಆಗ ಸುಗಂಧರಾಜೇಂದ್ರನು ಮಾಲಿನಿಯ ಸಂತೋಷಾರ್ಥವಾಗಿ ಅಮೃತ ಪಾನವಂಗೈದು

ಎಲೈ ಪ್ರಾಣಪ್ರಿಯಳೆ! ನೀನು ತೃಷ್ಣಾಪರಿಹಾರವಾಗಿ ಅಮೃತವಂ ಪಾನವಂ ಮಾಡೆಂದು ಪೇಳಲಾಮಾತಿಗೆ ಮಾಲಿನಿಯು ಮಹಾಪ್ರಸಾದ ದವೆಂದು ರಾಜೇಂದ್ರನು ಅಮೃತಪಾನವಂ ಮಾಡಿ ಮಿಕ್ಕಿರುವ ಶೇಷಾಮೃತವಂ ಪಾನವಂಗೈದ ಬಳಿಕ ರಾಜೇಂದ್ರನು ಉಷಾದೇವಿಯು ಕರವಂ ಪಿಡಿದು ಬರುವ ಅನಿರುದ್ಧನೋ ಎಂಬಂತೆ ಮಾಲಿನಿಯು ಕರವಂ ಪಿಡಿದು ಭೋಜನಶಾಲೆಯಂ ಪೊಕ್ಕು ಷಡ್ರಸೋಪೇತವಾದ ಅಣಿಮುತ್ತಿನ ರಾಶಿಯಂತೆ ಎಡೆಯೊಳ್ ಬಡಿಸಿರುವ ಅನ್ನವಂ ಭುಂಜಿಸಿ ಪರಿಪರಿ ಭಕ್ಷ್ಯಂಗಳಂ ಸ್ವೀಕರಿಸಿ, ದಾಹೋಪಶಮನಾರ್ಥವಾಗಿ ಪುಷ್ಪಗಳಿಂದಲು ಫಲಗಳಿಂದಲೂ, ತೆಗದ ರಸಗಳಿಗೆ ಕ್ಷೀರ, ಸಕ್ಕರೆ ಯಾಲಕ್ಕಿ ಮೊದಲಾದ ಪರಿಮಳ ದ್ರವ್ಯಗಳಂ ಬೆರಸಿ ಪಾನಕವಂಗೈದಿರ್ದ ಸುಸ್ವಾದ ರಸಗಳಂ ಆಕಂಠಪೂರ್ತಿಯಾಗಿ ಪಾನವಂಗೈದು ಬಳಿಕ ಸತಿಪತಿಗಳೀರ್ವರೂ ಕರ್ಪೂರವೀಳ್ಯವಂ ಸವಿಯುತ್ತ ರತ್ಯಾಸಕ್ತರಾಗಿ ಕ್ರೀಡಾಮಂದಿರವನ್ನೈದಿ, ಅನೇಕ ಜೇವರತ್ನಗಳಿಂ ನಿರ್ಮಿಸಿದ ಮಂಚವನ್ನೇರಿ ಸರಸ ಸಲ್ಲಾಪಂಗಳಂ ಗೈಯ್ಯುತ ಸ್ವಲ್ಪಕಾಲವಂ ಕಳದು ಬಳಿಕ ಮದನ ಬಾಣದಿಂ ಪೀಡಿತರಾಗಿ ಬಾಹುಗಳಿಂದ ಪರಸ್ಪರ ಗಾಢಾಲಿಂಗನವಂಗೈದು ಅಮೃತದಂತಿರ್ದ ಅಧರಪಾನವಂ ಮಾಡಿ ಉಕ್ಕಿಬರುವ ಅನುರಾಗದಿಂ ನೊಕ್ಕಿ ಸುರತಕ್ರೀಡಾಸಕ್ತರಾಗಿ, ಪರಿಪರಿ ಬಂಧಂಗಳಿಂ, ನಖಕ್ಷತ ದಂತಕ್ಷತಗಳಿಂ ಸೀತ್ಕಾರಂಗಳಂ ಮಾಡುತ ಆನಂದ ಪರವಶರಾಗಿ ರಾತ್ರಿಯಂ ನಿಮಿಷದಂತೆ ಕಳೆಯುತ ದಿನದಿನದೊಳ್ ರಾತ್ರಿ ಹಗಲುಗಳ ವಿಭಾಗವಂ, ಮತ್ತೂ ಸ್ತ್ರೀಪುರುಷರೆಂಬ ಭೇದವಂ ಕೂಡ ತಿಳಿಯದೆ, ಆನಂದಮಯ ಸಮುದ್ರದೊಳ್ ಪಾರವಂ ಕಾಣದೆ ಬಹುಕಾಲ ಸುಖದಿಂದಿರುತ್ತಿರಲು,

ಬಳಿಕ ಒಂದಾನೊಂದು ದಿನದೊಳ್ ಯಕ್ಷನು ರಾಜೇಂದ್ರನಂ ಬಹುಕಾಲದಿಂದ ಕಾಣದೆ ಪುರುಷಮೃಗನ ಸಾಮೀಪ್ಯವಂ ಕುರಿತು ಬಂದು ಎಲೈ ಮಹಾನುಭಾವನೆ! ನಮ್ಮ ರಾಜೇಂದ್ರನು ಪಾತಾಳ ಲೋಕವಂಕುರಿತು ತೆರಳಿ ಬಹುದಿನಂಗಳಾದವು, ಇದುವರೆವಿಗು ಅವನ ಆಗಮನವಂ ಕಾಣಲಿಲ್ಲವೆಂದು ಬಿನ್ನವಿಸಲಾಗ ಮಹಾತ್ಮನಾದ

ಪುರುಷಮೃಗನು ಜ್ಞಾನದೃಷ್ಟಿಯಿಂದಚನ್ನಾಗಿ ಪರಿಭಾವಿಸಿ ನಾಗಲೋಕದೊಳ್ ನಡೆಯುವ ರಾಜೇಂದ್ರನ ಚರ್ಯಗಳಂ ತಿಳಿದು ಮುಗುಳುನಗೆಯಿಂದ ಒಂದಾನೊಂದು ಮಾತನಾಡಲುಪಕ್ರಮಿಸಿ ಎಲೈ ಯಕ್ಷನೆ! ನಿಮ್ಮ ರಾಜೇಂದ್ರನು ನಾಗಲೋಕದೊಳ್ ಇರುವ ಮಹಾನಾಗನ ಮಗಳಾದ ಮಾಲಿನಿಯ ಮೋಹಪಾಶಂಗಳಿಗೆ ಸಿಲುಕಿ ಭೂಲೋಕದೊಳ್ ಮುಂದೆ ನಡೆಯತಕ್ಕ ಕಾರ್ಯಗಳಂ ಮರತಿರುವನು, ಆದ್ದರಿಂ ನೀನು ಸುಮತಿಯೊಡಗೂಡಿ ಮುಂದಾಗತಕ್ಕ ಕಾರ್ಯಗಳು ಎಂತು ನಡೆಯತಕ್ಕದ್ದೋ ಅದಂ ರಾಜೇಂದ್ರಂಗೆ ತಿಳುಹೆಂದು ಅಪ್ಪಣೆಯನ್ನೀಯಲಾ ಯಕ್ಷನು ಆ ಮಾತಂ ಕೇಳಿ ಅಂಜಲಿಯಂ ಮಾಡಿ, ಪಾತಾಳ ಲೋಕಕ್ಕೆ ಪೋಗಿ ಅಲ್ಲಿ ಆದಿಶೇಷನ ಬಳಿಯಲ್ಲಿದ್ದ ಸುಮತಿಯಂ ಕಂಡು ಪುರುಷಮೃಗನು ಅಪ್ಪಣೆಯಿತ್ತ ಮಾತುಗಳಂ ಪೇಳಿ ಬಳಿಕ ಇರ್ವರೂ ಆಲೋಚಿಸುತ್ತಿರಲು,

ಅತ್ತಲಾ ಪುರುಷಮೃಗನ ಆಶ್ರಮದೊಳ್ ಪುರುಷಮೃಗನಂ ವಶ್ಯನಂ ಮಾಡಿಕೊಳ್ಳಬೇಕೆಂದಿರ್ದ ದುರ್ಧರ್ಷನ ಸೇನೆಯೊಳ್ ಸುಗಂಧರಾಜೇಂದ್ರನಿಂ ಹತರಾದವರಲ್ಲದೆ ಉಳಿದು ಓಡಿಪೋಗಿರ್ದ ರಾಕ್ಷಸದೂತರು ತಮ್ಮ ಒಡೆಯನಾದ ದುರ್ಧರ್ಷನಿಗೆ ವಾಸಯೋಗ್ಯವಾದ ಶಾಲ್ಮಲಿ ದ್ವೀಪವನ್ನೈದಿ ಅಲ್ಲಿ ಅಂತಃಪುರದೊಳ್ವಿಹರಿಸುತ್ತಿರುವ ದುರ್ಧರ್ಷನಿಗೆ ತಾವು ಬಂದಿರುವ ರಹಸ್ಯವಾದ ವೃತ್ತಾಂತವಂ ಸ್ವಲ್ಪಮಾಗಿ ಪೇಳಿಕಳುಹಲು, ಆಗ ದುರ್ಧರ್ಷನು ಆ ಸಮಾಚಾರವಂ ಕೇಳಿ, ಆಚಾರರಂ ಅಲ್ಲಿಗೇ ಕರಿಸಿ ನೀವು ಬಂದಪರಿಯಂ ವಿವರವಾಗಿ ಪೇಳಿರೆಂದು ನುಡಿಯಲು, ಆಗಲಾಚಾರರು ಕೈಗಳಂ ಮುಗಿದು ಎಲೈ ದಾನವೇಂದ್ರನೆ! ಹಿಮವತ್ಪರ್ವತದ ಪ್ರಾಂತ್ಯದೊಳ್ ತಪವಂಗೈಯ್ಯುತಲಿರ್ದ ಪುರುಷಮೃಗನಂ ವಶವಂ ಮಾಡಿಕೊಳ್ಳಲೋಸುಗ ನೀನು ಮೊದಲು ಕಳುಹಿಸಿರ್ದ ದಾನವರ ಸೈನ್ಯವು ಆ ಪುರುಷಮೃಗನ ತಪೋವಿಘ್ನವಂ ಮಾಡುತ್ತಿರಲದಂ ಕಂಡು ಓರ್ವ ನೃಪೋತ್ತಮನು ಕೋಪಗೊಂಡು ನಿಮಿಷದೊಳ್ ನಮ್ಮ ದಾನವರ ತಂಡಗಳಂ ತುಂಡು ತುಂಡಾಗಿ ಖಂಡಿಸಿ ಲೋಕದೊಳ್ ದಾನವರೆಂಬ ಹೆಸರಿಲ್ಲದಂತೆ ಮಾಡಿ ಆ ಪುರುಷಮೃಗನಿಗೆ

ಸಂತೋಷವನ್ನುಂಟುಮಾಡಿ ಅವನೊಡಗೂಡಿ ಆ ಕ್ಷಣದಲ್ಲಿಯೇ ಪಾತಾಳಕ್ಕೆ ಪೋಗುವುದಕ್ಕೆ ಮಾರ್ಗವಂ ಗೈದು ಮಂತ್ರಿವರ್ ಸಖನೊಡಗೂಡಿ ಮೂರು ಮಂದಿಯೂ ಪಾತಾಳಲೋಕವಂ ಕುರಿತು ತೆರಳಿದರು, ಇವನೆಲ್ಲವಂ ಕಂಡು ಘುರುಗೆಂದು ನಿನ್ನೊಡನೆ ವಿಜ್ಞಾಪನೆಯಂ ಗೈಯಲ್ಕವೆಂದು ಪ್ರಾಣದಿಂದುಳಿದ ನಾವು ನಿನ್ನ ಸಮೀಪವಂ ಕುರಿತು ಬಂದೆವೆಂದು ನುಡಿಯಲಾ ದುರ್ಧರ್ಷನು ಕರ್ಣಕಠೋರವಾದ ಆ ದೂತರ ಮಾತುಗಳಂ ಕೇಳಿ ರೋಷವಂತಾಳಿ ಕಣ್ಣುಗಳು ಕೆಂಪೇರಿ ಕಿಡಿಗಳಂ ಸುರಿಸುತ್ತಿರಲು, ಆ ಕಾಲದೊಳ್ ಅತ್ಯಂತ ಮುದುಕಿಯಾದ ಅಜಾಮುಖಿಯೆಂಬೊರ್ವ ರಾಕ್ಷಸಿಯು ದುರ್ಧರ್ಷನ ಸಮೀಪವನೈದಿ ಅಲ್ಲಿ ಆ ದಾನವದೂತರು ಪೇಳ್ವ ವೃತ್ತಾಂತವೆಲ್ಲವಂ ವಿಸ್ತಾರವಾಗಿ ಕೇಳಿ ಬಳಿಕ ದುರ್ಧರ್ಷನಂ ಕುರಿತು ಎಲೈ ಮಗುವೇ ಕೇಳು ಈ ದಾನವರೆಲ್ಲರಂ ಸಂಹರಿಸಿದ ರಾಜಕುಮಾರನಾದ ಸುಗಂಧರಾಜನೆಂಬವನೆ ಪೂರ್ವದೊಳ್ ನಿನ್ನ ಪಟ್ಟದರಸಿಯಾದ ತುಂದೋದರಿಯ ತಂದೆಯಾದ ಜಂಝಾಮಾರುತನು, ಅವನ ಸೈನ್ಯವೆಲ್ಲವಂ ಸಹಾ ಸಂಹರಿಸಿದನಾದ್ದರಿಂ ಇವನು ನಮ್ಮ ದಾನವ ವಂಶಕ್ಕೆ ದಾವಾನಲನಾಗಿರುವನು, ಇವನಂ ಪ್ರಾಣದೊಡನೆ ಬಿಡುವುದು ಅತ್ಯಂತ ಶೂರನಾದ ನಿನಗೆ ಎಷ್ಟುಮಾತ್ರವೂ ಉಚಿತವಲ್ಲವೆಂದು, ಮತ್ತೂ ಸರ್ವ ಸಾಹಸವಂ ಮಾಡಿ ಅವನ ಸಂಹಾರವಂ ಮಾಡಬೇಕೆಂದು ನುಡಿಯಲದಂ ಕೇಳಿ ದುರ್ಧರ್ಷನು ಇಮ್ಮಡಿಯಾಗಿ ಕೋಪಗೊಂಡು ಅಲ್ಲಿಂದ ಹೊರಟು ಆಸ್ಥಾನ ಮಂಟಪವನ್ನೈದಿ ಮಂತ್ರಿ ಸೇನಾಪತಿಗಳಂ ಕರಿಸಿ ಸಮಸ್ತ ಸೈನ್ಯವೂ ಸನ್ನದ್ಧವಾಗಿರಲೀ ಎಂದು ಅಪ್ಪಣೆಯನಿತ್ತು ಆ ರಾತ್ರಿಯಂ ಕಳೆದು ಉದಯದೊಳೆದ್ದು ಮಂತ್ರಿ ಸೇನಾಪತಿಗಳಂ ಕುರಿತು ಆಲೋಚನೆಯಂ ಮಾಡಿ ಬುದ್ಧಿಶಾಲಿಗಳಾದ ಈರ್ವರ್ ದಾನವದೂತರಂ ಕರೆದು ಎಲೈ ಚಾರರುಗಳಿರಾ! ಪಾತಾಳಲೋಕವಂ ಪೊಕ್ಕು ಮಹಾಶೇಷನಿರುವ ಬಳಿಗೆ ಪೋಗಿ ಅವನಂ ಕುರಿತು, ಮೊದಲು ಪುರುಷಮೃಗನಂ ಕರತಂದರೆ ಮಾಲಿನಿಯುಂ ಮಣಿಯುಂ ಕೂಡೆ ಕೊಡುವೆವೆಂದು ನಮಗೆ ಮಾತು ಕೊಟ್ಟಿರ್ದು ಈಗ ನೀವು ಆ ಮಾತಿಗೆ ತಪ್ಪಿ ನಡೆಯುವಂತೆ ತೋರುತಲಿದೆ ಆದ್ದರಿಂ ಮೊದಲು ನೀವು

ಹೇಳಿದ ಪರಿಯಾಗಿ ನಡೆದಲ್ಲಿ ನಿಮಗೆ ಕ್ಷೇಮವಾಗುವದು, ಇಲ್ಲದಿರೆ ಸೇನಾಸಮೇತರಾಗಿ ಯುದ್ಧಸನ್ನದ್ಧರಾಗಿರುವದು ಎಂದು ಹೇಳಿ ಬೇಗಬರುವದೆಂದು ಅಪ್ಪಣೆಯಂ ಕೊಟ್ಟು ಕಳುಹಿಸಿ. ತಾನು ಸಕಲ ಸೇನಾಪರಿವೃತನಾಗಿ ನಾಗಲೋಕವಂ ಸುಟ್ಟು ಬಿಡುವೆನೆಂದು ಶಾಲ್ಮಲಿ ದ್ವೀಪದಲ್ಲಿರುವ ಪಾತಾಳ ಮಾರ್ಗದಿಂ ತೆರಳಿ ಬರುತ್ತಿರಲು. ಇತ್ತಲಾ ದೂತರು ಅತಿವೇಗದಿಂ ಪಾತಾಳಲೋಕವಂ ಪ್ರವೇಶಿಸಿ ಮಹಾಶೇಷನಿರುವ ಸಭೆಯಂ ಪೊಕ್ಕು ತಮ್ಮ ಒಡೆಯನಾದ ದುರ್ಧರ್ಷನ ಅಪ್ಪಣೆಯಾದಂತೆ ಮಹಾಶೇಷನೊಡನೆ ಹೇಳಿ ಮತ್ತೂ ನಮ್ಮ ದಾನವೇಂದ್ರನು ಯುದ್ಧಾರ್ಥವಾಗಿ ಶೀಘ್ರದಿಂ ಬರುವನು ನೀವೆಲ್ಲರೂ ಸನ್ನದ್ಧರಾಗಿರುವದೆಂದು ನುಡಿದು ತಾವು ಬಂದಂತೆ ಹಿಂತಿರಿಗಿ ಪೋಗುತ್ತಿರಲು, ಅದಂ ಕೇಳಿ ಮಹಾಶೇಷನು ತನ್ನ ಮಂತ್ರಿಯಾದ ಮಹಾನಾಗನಂ ಕರದು ಎಲೈ ನಾಗಾಧಮನೆ! ನೀನು ಒಬ್ಬ ಮಾಡಿದ ಅಕಾರ್ಯದಿಂದ ನಾಗಲೋಕವೆಲ್ಲವೂ ದಾನವರ ಬಾಣಾಗ್ನಿಯಿಂದ ದಹಿಸಿ ಪೋಗುವಂತಾಯಿತು ನೀನು ಬಹು ಕಾಲದಿಂದ ನನ್ನ ಸಮೀಪದಲ್ಲಿ ಅಮಾತ್ಯಪದವಿಯಂ ಮಾಡಿಕೊಂಡು ನನ್ನ ಮನವಿದ್ದಂತೆ ನಡೆಯುತ ಒಂದು ಅಪರಾಧವನ್ನಾದರೂ ಮಾಡದೆ ಈಪರಿಗೆ ಇರುತಲಿದ್ದು ಈಗ ಇಂಥಾ ದುಷ್ಕಾರ್ಯವಂ ಮಾಡಿದುದರಿಂದ ಈ ಅಪರಾಧವಂ ಸಹಿಸಿ ನಿನ್ನಂ ಪ್ರಾಣದೊರಸೆ ಬಿಟ್ಟಿರುವೆನು, ಇನ್ನು ನನಗೆ ಮೊಗವಂ ತೋರದೆ ಮನಬಂದಂತೆ ಪೋಗೆಂದು ಕೋಪಗೊಳ್ಳಲಾ ಮಹಾನಾಗನು ಆದಿಶೇಷನಿಗೆ ಪ್ರಣಾಮವಂಗೈದು ಇದೇನು ಮಹಾಕಾರ್ಯವೆಂದು ನನ್ನ ಮೇಲೆ ಇಂತು ಕೋಪಗೊಳ್ಳುವೆ, ಮಹಾನುಭಾವನಾದ ಪುರುಷಮೃಗನು ನುಡಿದನುಡಿಗಳಂ ಮನಕ್ಕೆ ತರಬೇಕು, ಇಂತಲ್ಲದೇ ಈಗಲೇ ನಾನು ಪೋಗಿ ಸುಗಂಧ ಮಹಾರಾಯನೊಡನೆ ಈ ವೃತ್ತಾಂತವೆಲ್ಲವಂ ಹೇಳಿದೊಡೆ ಆ ರಾಜೇಂದ್ರನು ನಿಮಿಷದೊಳ್ ಸಕಲ ಸೇನಾಪರಿವೃತನಾದ ದುಷ್ಟನಾದ ಆ ದುರ್ಧರ್ಷನಂ ಯುದ್ಧದೊಳ್ ಸಂಹಾರವಂಗೈಯ್ಯುವದರಲ್ಲಿ ಸಂದೇಹವಿಲ್ಲವೆಂದು, ಮತ್ತೂ ಅನುಜ್ಞೆಯಾದೊಡೆ ಈ ಕ್ಷಣವೇ ತೆರಳಿಪೋಗುವೆನೆಂದು ನುಡಿಯಲಾ ಮಹಾಶೇಷನು ಆ ನುಡಿಗಳಂ ಕೇಳಿ ಹಾಗೆ ಆಗಲೀ ಎಂದು ನುಡಿಯಲಾಗ ಮಹಾನಾ

ಗನು ಆ ಕ್ಷಣದಲ್ಲಿಯೇ ಅಲ್ಲಿಂದ ತೆರಳಿ. ತನ್ನ ಮಂದಿರವನ್ನೈದಿ ತನ್ನ ಪತ್ನಿಯೊಡನೆ ಈ ವೃತ್ತಾಂತವಂ ತಿಳುಹಿ ಮಿತ್ರವಿಂದೆಯುಂ ಕರತರುವದೆಂದು ನುಡಿಯಲಾಪತ್ನಿಯು ಮಗಳಾದ ಮಾಲಿನಿಯು ಮಂದಿರವನ್ನೈದಿ ಅಲ್ಲಿರುವ ಮಿತ್ರವಿಂದೆಯುಂ ಕರತರಲು, ಆಗ ಮಹಾನಾಗನು ಆ ಮಿತ್ರವಿಂದೆಯುಂ ಸಮೀಪಕ್ಕೆ ಕರದು ಮಹಾಶೇಷನ ಸಭೆಯಲ್ಲಿ ನಡದ ವೃತ್ತಾಂತವೆಲ್ಲವಂ ಪೇಳಿ ಮತ್ತು ಈ ವೃತ್ತಾಂತವಂ ಸುಗಂಧರಾಜಕುಮಾರಂಗೆ ಸಮಯವರಿತು ತಿಳುಹಿ ಸರ್ವಪ್ರಕಾರದಿಂದಲೂ ಆ ರಾಜಕುಮಾರನು ಅಂತಃಪುರದಿಂದ ತೆರಳಿ ಹಜಾರವನ್ನೈದುವಂತೆ ಮಾಡು ವಳಾಗೆಂದು ನಿರೂಪಿಸಿ ಕಳುಹಿ, ತಾನು ಮುತ್ತಿನ ಹಜಾರದೊಳ್ ಶತಪಥವಂ ನಡೆಯುವನೆಪದಿಂದ ಓರ್ವನೇ ಸಂಚರಿಸುತ್ತಿರಲು, ಇತ್ತಲಾ ಮಿತ್ರವಿಂದೆಯು ರತ್ನಪರ್ಯಂಕದೊಳ್ ಸುಗಂಧರಾಜನೊಡನೆ ವಿಹರಿಸುತಲಿರುವ ಮಾಲಿನಿಯುಂ ತನ್ನ ಚಮತ್ಕಾರ ಸಂಜ್ಞೆಗಳಿಂದ ಮಂಚದಿಂದಿಳಿದು ಬರುವಂತೆಮಾಡಿ ತಾನು ಆ ಕ್ರೀಡಾಮಂದಿರದ ಬಾಗಿಲೊಳ್ ನಿಂತು ಮಾಲಿನಿಯೊಡನೆ ಮಹಾಶೇಷನ ಸಭೆಯಲ್ಲಿ ನಡೆದ ವೃತ್ತಾಂತವಂ ಮೆಲ್ಲನೆ ಪೇಳುವ ಸಮಯದಲ್ಲಿ ಸುಗಂಧರಾಜೇಂದ್ರನು ಮರ್ಧನರ್ಷನೆಂಬ ಶಬ್ದವಂ ಕೇಳಿ ಅದೇನದೇನೆಂದು ವೇಗದಿಂದ ಮಂಚದಿಂದಿಳಿದು ಬಂದು ಮಾಲಿನಿಯೊಡನೆ ಮಾತನಾಡುತಲಿರುವ ಮಿತ್ರವಿಂದೆಯ ಮುಖದಿಂ ಸಕಲ ವೃತ್ತಾಂತವಂ ತಿಳಿದು, ಮಹಾನಾಗನು ತನ್ನ ಮಗಳಾದ ಮಾಲಿನಿಯುಂ ನನ್ನ ವಶವಂ ಮಾಡಿದ್ದರಿಂದ ಮಹಾಶೇಷನ ಸಭೆಯಲ್ಲಿ ಆತಂಗೆ ಇಂತು ಅಪಮಾನ ಉಂಟಾಯಿತೆಂದು ವ್ಯಸನಪಡುತ ಅಲ್ಲಿಂದ ತೆರಳಿ ಹಜಾರವಂ ಪೊಕ್ಕು ಸುಮತಿಯೊಡಗೂಡಿ ಸಮಸ್ತಾಯುಧಗಳಂ ಧರಿಸಿ ಬರುತ್ತಿರಲಾಗ ಏನೋ ಒಂದು ಪರಿಯಾಗಿ ಯೋಚನೆ ಗೂಡಿ ವಾರೆನೋಟದಿಂ ನೋಡುತ ರತ್ನದ ಪ್ರತಿಮೆಯಂತೆ ನಿಂದಿರುವ ಮಾಲಿನಿಯುಂನೋಡಿ ವಿನಯೋಕ್ತಿಗಳಿಂದ ಒಡಂಬಡಿಸುತ ಈಗ ಕುರಿತು ಪೋಗುವ ಕಾರ್ಯವಂ ಶೀಘ್ರದಿಂ ನಿರ್ವಹಿಸಿ ಹಿಂತಿರಿಗಿ ಬರುವೆನೆಂದು ಸಮಾಧಾನವಂ ಗೈದು. ಅಲ್ಲಿಂದ ಬರುತ ಬಾಗಿಲೊಳ್ ನಸುನಗುತ ನಿಂದಿರುವ ಸುಮತಿ ಯಂಕೊಂಡು ಕರವಂಪಿಡಿದು ಈರ್ವರೂ ತೆರಳಿ ಬರುತ ಮುತ್ತಿನ ಹಜಾರ

ದೊಳ್ ನಿಂದಿರುವ ಮಹಾನಾಗನಂ ಕಂಡು ಸಾಷ್ಟಾಂಗ ನಮಸ್ಕಾರವಂ ಮಾಡಲು, ಅಷ್ಟರೊಳ್ ಮಹಾನಾಗನು ರಾಜೇಂದ್ರನ ಕರಗಳಂ ಪಿಡಿದೆತ್ತಿ ಆಶೀರ್ವಾದವಂ ಮಾಡಿ, ಸಕಲ ವೃತ್ತಾಂತವೂ ಸರ್ವಜ್ಞನಾದ ನಿನಗೆ ತಿಳಿದೇ ಇರುವಲ್ಲಿ ನಾನು ವಿಶೇಷ ಪೇಳುವದೇನೆಂದು ನುಡಿದು ಆ ರಾಜಮಂತ್ರಿಗಳೊಡಗೂಡಿ ಸಭೆಯನೈದಲಾಗ ಅಲ್ಲಿ ಮಹಾಶೇಷನು ಸೂರ್ಯನಂತೆ ಪೊಳೆಯುತ್ತ ಬರುವ ರಾಜಕುಮಾರನಂ ಕಂಡು ಸಂತೋಷಗೊಂಡು ಸಮೀಪದಲ್ಲಿ ಆ ರಾಜಮಂತ್ರಿಗಳಂ ಕುಳ್ಳಿರಿಸಿ ಬಳಿಕ ಮಹಾನಾಗನಂ ಕುರಿತು ಎಲೈ ಮಂತ್ರಿಶ್ರೇಷ್ಠನೆ! ಮೊದಲು ನಾನು ಕೋಪವಂ ಮಾಡಿದೆನೆಂದು ಮನದೊಳ್ ಮರುಗಲಾಗದು. ರಾಜೇಂದ್ರಂಗೆ ಈ ವೃತ್ತಾಂತವಂ ತಿಳುಹಿ ಕರತರಲೋಸುಗ ನುಡಿದೆನಲ್ಲದೆ ಕೋಪದಿಂ ನುಡಿದವನಲ್ಲವೆಂದು ಸಮಾಧಾನವಂಗೈದು ಬಳಿಕ ರಾಜೇಂದ್ರಂಗೆ ಪರಿಪರಿಯಾಗಿ ಉಪಚಾರವಂ ಪೇಳುತ್ತಿರುವ ಸಮಯದೊಳ್ ಘೋರವಾದ ಒಂದಾನೊಂದು ಶಬ್ದಮುಂಟಾಗಲು, ಆ ಧ್ವನಿಯಂ ಕೇಳಿ ಸಭೆಯಲ್ಲಿರುವರೆಲ್ಲರೂ ಭಯಗೊಂಡು ಗಡಗಡನೆ ನಡುಗಿ ಯಾವದೂ ತೋರದೆ ಸುಮ್ಮನೆ ನಿಂದಿರಲು, ಆಗ ರಾಜೇಂದ್ರನು ಅಲ್ಲಿರುವರ ಅಭಿಪ್ರಾಯಗಳೆಲ್ಲವಂ ತಿಳಿದು ಅವರೆಲ್ಲರಂ ಕುರಿತು ಎಲೈ ನಾಗಶ್ರೇಷ್ಠರುಗಳಿರಾ! ದುಷ್ಟನಾದ ದುರ್ಧರ್ಷನೆಂಬ ಈ ದಾನವಾಧಮನಿಗೆ ನೀವು ಇಂತು ಭಯಪಡಲ್ಯಾಕೆ ಧೈರ್ಯದಿಂದಿರುವರಾಗಿ ಮತ್ತೂ ನಾನು ಈಕ್ಷಣದಲ್ಲಿಯೇ ಆ ದುರ್ಧರ್ಷನೆಂಬ ದುಷ್ಟದಾನವನಂ ಚತುರಂಗಬಲದಿಂ ಕೂಡಿರುವ ಅವನ ಪರಿವಾರವೆಲ್ಲವಂ ಕೂಡ ಯುದ್ಧದೊಳ್ ಸಂಹರಿಸಿ ನಿಮಗೆ ಕ್ಷೇಮವನ್ನುಂಟುಮಾಡುವೆನು ಎಷ್ಟು ಮಾತ್ರವೂ ಸಂದೇಹಗೊಳಬ್ಯಾಡಿರೀ ಎಂದು ನುಡಿದು ಮಂತ್ರಿಯೊಡಗೂಡಿ ಮಹಾಶೇಷನಿಗೆ ಸಾಷ್ಟಾಂಗ ಪ್ರಣಾಮವಂಗೈದು. ಸಭೆಯಿಂದ ಹೊರಟು ಛಾಯಾಗುಪ್ತನಂ ನೆನೆಯಲು ಆ ಕ್ಷಣದಲ್ಲಿಯೇ ಬಂದ ಛಾಯಾಗುಪ್ತನೆಂಬ ತುರಗನಂ ಸುಮತಿಯೊಡಗೂಡಿ ಏರಿ ಅಂತರಿಕ್ಷದೊಳ್ ಬರುತ್ತ, ಮಾರ್ಗದೊಳ್ ಉರವಣಿಸುತ್ತ ಬರುವ ರಾಕ್ಷಸ ಸೇನೆಯಂ ಕಂಡು ಇಲ್ಲಿ ಬಹು ಚಮತ್ಕಾರವಾದ ಅಮಾನುಷಕಾರ್ಯವಂ ಮಾಡಬೇಕೆಂದು ಯೋಚಿಸಿ

ಯಕ್ಷನಿಂ ತಿಳಿದು ಸುಮತಿಯೊಡನೆ ಆಲೋಚನೆಯಂ ಮಾಡಿ ಅವನಂ
ಕುರಿತು ಎಲೈ ಮಂತ್ರಿಯೆ! ಕೆಲರು ರಾಕ್ಷಸರು ವಂಚನೆಯಿಂದ ನಾಗ
ಲೋಕವಂ ಪೊಕ್ಕು ಅಲ್ಲಿರುವ ನಾಗೋತ್ತಮರನೆಲ್ಲ ಬಾಧಿಸುವರಾದ್ದ
ರಿಂ ನೀನು ನಾಗಲೋಕಕ್ಕೆ ಬಾಧೆ ಬಾರದಂತೆ ಜಾಗರೂಕನಾಗಿ ಸಂರ
ಕ್ಷಿಸುತಲಿರೆಂದು ಕಟ್ಟು ಮಾಡಿ ಯಕ್ಷನಂ ಕರದು ಎಲೈ ಛಾಯಾಗು
ಪ್ತನೆ! ಸುಮತಿಯಂ ನಾಗಲೋಕಸಂರಕ್ಷಣಾರ್ಥವಾಗಿ ಮಹಾಶೇಷನ
ಸಮೀಪವನ್ನೈದಿ ಶೀಘ್ರದಿಂ ಬರುವುದೆಂದು ಅಪ್ಪಣೆಯನ್ನಿತ್ತು ಕಳು
ಹಿಸಿ, ತಾನು ಎದುರಾಗಿ ಬರುವ ರಾಕ್ಷಸರ ಮೇಲೆ ಕಾಣಿಸಿಕೊಂಡು
ಕರಲಾಘವದಿಂದ ಬಾಣದಮಳೆಗರೆಯುತ ರಾಕ್ಷಸರೆಲ್ಲರಂ ಕ್ಷಣದೊಳ್
ತುಂಡುತುಂಡಾಗಿ ಖಂಡಿಸುತ್ತಿರುವ ಸುಂಗಧರಾಜೇಂದ್ರನಂ ನೋಡಿ
ದುರ್ಧರ್ಷನು ಗಗನವಂ ತುಡುಕುತಲಿರುವ ಉಕ್ಕಿನ ರಥದೊಳ್ ಅಂಜ
ನಪರ್ವತದಂತೆ ಕುಳಿತು ಪರಮಾಗ್ರಹದಿಂದ ಪರಿಘವಂ ಪಿಡಿದು ಪಕ್ಷಿರಾ
ಜನಂತೆ ಗಗನದೊಳ್ ಹಾರಿಬರುತ್ತಿರಲು, ಅವಂ ಕಂಡು ರಾಜೇಂ
ದ್ರನು ಒಂದು ದಿವ್ಯಾಸ್ತ್ರವಂ ತೆಗದು ಎದುರಾಗಿ ಬರುವ ದಾನವನ
ಕೈಯ್ಯಲ್ಲಿರುವ ಪರಿಘಾಯುಧವಂ ಕತ್ತರಿಸಿ ಕೆಡಹಿ ಪರಿಪರಿಯಾದ ಶರ
ಗಳಿಂದ ಅವನ ಶರೀರವೆಲ್ಲವಂ ಜಾಲಂಧರದಂತೆ ಮಾಡಿ ನಗುತ ನಿಂದಿ
ರಲೂ, ಆಗ ದುರ್ಧರ್ಷನು ರಾಜೇಂದ್ರನಂ ನೋಡಿ ಒಂದು ಮುಹೂ
ರ್ತದೊಳ್ ಒರ್ವನೇ ದಾನವ ಸೈನ್ಯವೆಲ್ಲವಂ ಸಂಹರಿಸಿ ತಾನು ಲೇಶವೂ
ಘಾಯವಿಲ್ಲದೇ ನಗುತ ನಿಂದಿರುವವರಿಂ ಕೋಪವು, ಭಯವು, ಸಂದೇ
ಹವೂ ಕೂಡ ಉಂಟಾಗಿ ಯೋಚನೆಯಂಗೈಯುತ ಇವನಂ ಈಗಲೇ
ಸಂಹರಿಸಿದಲ್ಲದೇ ಕ್ಷೇಮವಾಗಲರಿಯದೆಂದು ಕಠೋರವಾದ ಧನುವಂ
ಗೊಂಡು ದಿವ್ಯಾಸ್ತ್ರಗಳಂ ಪ್ರಯೋಗಿಸುತ್ತಿರಲೂ, ಅದಂ ನೋಡಿ
ರಾಜೇಂದ್ರನು ಪ್ರತ್ಯಸ್ತ್ರಗಳಿಂದ ಆ ಅಸ್ತ್ರಗಳೆಲ್ಲವಂ ಛೇದಿಸಿ ಎಂದಿ
ನಂತೆ ಸುಮ್ಮನೆ ನಿಂದಿರಲಾ ರಾಜೇಂದ್ರನಂ ದುರ್ಧರ್ಷನು ಮತ್ತೂ
ನೋಡಿ ಇವನ್ಯಾರೋ ಮಹಾಸಾಹಸವುಳ್ಳ ಶೂರನು, ಇವನಂ ಪ್ರತ್ಯಕ್ಷ
ವಾದ ಯುದ್ಧದಲ್ಲಿ ಪರಾಜಯವಂ ಮಾಡಲಾಗದು ಮಾಯೆಯಿಂ
ಮೋಸಗೊಳಿಸಿ ಕೊಲ್ಲಬೇಕಲ್ಲದೇ ಸಮವಾಗಿ ಋಜುವಾದ ಯುದ್ಧವಂ

ಮಾಡಬಾರದೂ ಎಂದು ಮನದೋಳ್ ನಿಶ್ಚೈಸಿ ಯುದ್ಧರಂಗಮಂ ಬಿಟ್ಟು ಮಾಯೆಯಿಂದ ಮರೆಯಾಗಲೂ, ಆಗ ರಾಜೇಂದ್ರನು ಎದುರಾಗಿ ನಿಂತಿರ್ದ ದುರ್ಧರ್ಷನಂ ಕಾಣದೆ ಸುತ್ತಲೂ ನೋಡುತ್ತಿರಲಾಗ ದುರ್ಧರ್ಷನು ತನ್ನ ಮಾಯೆಯಿಂದ ಮಹಾಂಧಕಾರಮಂ ನಿರ್ಮಿಸಲು ಅದಂ ನೋಡಿ ಸುಗಂಧರಾಜೇಂದ್ರನು ಇದೇನು ಅದ್ಭುತವೆಂದು ಮನದೋಳ್ ಆಲೋಚಿಸುತ್ತಿರುವಷ್ಟರೋಳ್ ಮಾಯಾಸಂಬಂಧವಾದ ಬೆಳದಿಂಗಳಂತಿರ್ಪ ಅದೊಂದು ಪರಿಯಾದ ಬೆಳಕುತೋರಲು, ಅದಂ ನೋಡಿ ರಾಜೇಂದ್ರನು ಅತ್ಯಾಶ್ಚರ್ಯಗೊಂಡು ಸ್ತಬ್ಧನಾಗಿ ಹಿಂದೆ ಮುಂದೆ ತೋರದೆ ಮೂಢನಂತೆ ಸುಮ್ಮನೇ ನಿಂತಿರಲಾಗ ಆ ರಾಜೇಂದ್ರನ ಮಂತ್ರಿಯಾದ ಸುಮತಿಯು ಅತ್ಯಂತ ರೋದನವಂ ಗೈಯ್ಯುತ್ತಂತೆಯೂ, ಮತ್ತೂ, ಎಲೈ ಸುಗಂಧಮಹಾರಾಜನೆ! ನಿನ್ನ ಪರಮಮಿತ್ರನಾದ ನನ್ನಂ ಶತ್ರುಗಳು ಸಂಹಾರವಂ ಮಾಡುತಲಿಪ್ಪರೂ ನೀನು ನೋಡುತ ಸುಮ್ಮನೇ ನಿಂತಿರುವದುಚಿತವೇ? ಹಾ ಎಂದು ಹಂಬಲಿಸುತ ಘಟ್ಟಿಯಾಗಿ ಕೂಗುತ್ತಿರುವದಂ ರಾಜೇಂದ್ರನು ಕೇಳಿಸುತ್ತಲೂ ನೋಡುತ ಎಲ್ಲಿಯೂ ಕಾಣದೇ ಕಣ್ಕತ್ತಲೆಯಾದಂತೆ ತೋರಿ ಮುಂದೋರದೆ ಮಾಯೆಗೊಳಗಾಗಿ ಸುಮತಿ ಯನ್ನೆನ ನೆನದು ಹಾ ಮಿತ್ರನೆ! ಎಂದು ಹಂಬಲಿಸುತ್ತಿರುವಸಮಯದೋಳ್ ಆ ಸುಮತಿಯ ಶರೀರವುಎರಡು ತುಂಡಾಗಿ ಆ ಸುಗಂಧರಾಜಭೂವಲ್ಲಭನ ಎದುರಿಗೆ ಬೀಳಲು, ಅದಂ ಕಂಡು ೞ ರಾಜಶಿರೋಮಣಿಯು ಕಳವಳಗೊಂಡು ಕಡುನೊಂದು ಖಡ್ಗವಂ ಬಿಸುಟು ಕಂಬನಿಗಳಂ ಕರೆಯುತ್ತ ಕಾಡುಕಲ್ಲುಗಳಾದರೂ ಕರಗಿ ಪೋಗುವಂತೆ ಕಠೋರವಾದ ಧ್ವನಿಯಿಂಕೂಗುತ್ತ ಆ ಸುಮತಿಯ ಮಾಯಾಶಿರವಂ ಕರಗಳಂದೆತ್ತಿ ಪಿಡಿದು ಕಪೋಲದೋಳ್ ಕೈಮುಡಗಿ ರೋದನವಂ ಮಾಡುತ ಮತ್ತೂ ಆ ಸುಮತಿಯುಂ ಕುರಿತು ಎಲೈ ಪರಮಮಿತ್ರನೆ! ನಾವೀರ್ವರೂ ಬಾಲ್ಯದಿಂದ ಒಂದೇ ಕಡೆಯೋಳ್ ಇದ್ದುದಲ್ಲದೇ ನೀನುಮಾಡಿದ ಕಾರ್ಯಂಗಳಂ ನಿನ್ನ ಗುಣಗಳಂ ನಾನೆಂತು ಬಣ್ಣಿಸಲೀ ಎಂದು ಹಂಬಲಿಸುತಲಿರುವ ಸಮಯದೋಳ್ ದುಷ್ಟನಾದ ದುರ್ಧರ್ಷನು ಆಕಾಶದೋಳ್ನಿಂತು ಇದೆಲ್ಲವಂ ನೋಡಿ ಈಗ ಈರಾಯನು ನಿರಾಯುಧನಾಗಿ ನನ್ನ ಮಾಯೆ

ಗೆ ಸಿಲುಕಿ ಈ ಮಾಯಾಶಿರವಂ ನಿಶ್ಚಯವಾದ ತನ್ನ ಮಂತ್ರಿಯ ಶಿರವೆಂದರಿತು ಅದಂ ಪಿಡಿದು ಮೂಢನಂತೆ ಮೋಹವಶನಾಗಿರುವನು, ಈಗ ಇವನಂ ಸಂಹರಿಸಬೇಕೆಂದು ಆ ರಾಜೇಂದ್ರನ ಹಿಂಭಾಗದೊಳ್ ಬರುತ್ತಿರಲಷ್ಟರಲ್ಲಿ ಅತ್ತಲಾ ಭಾಯಾಗುಪ್ತನು ಸುಮತಿಯಂ ಮಹಾಕೀಷನ ಸಮೀಪವನ್ನೈದಿಸಿ ಅಲ್ಲಿಂದ ತೆರಳಿ ಬರುತ್ತ ಮಾರ್ಗದಲ್ಲಿ ಮಹಾಭಯಂಕರವಾದ ರಣಭೂಮಿಯೊಳ್ ಅನೇಕ ರಾಕ್ಷಸರು ಸಂಹೃತರಾಗಿ ಬಿದ್ದಿರುವುದಂ, ದೂರದೊಳ್ ಸುಗಂಧರಾಜೇಂದ್ರನ ರೋದನ ಧ್ವನಿಯಂ ಕೇಳಿ ಭಯಗೊಂಡು ಬಹುವೇಗದಿಂ ರಾಜೇಂದ್ರನ ಸಮೀಪವನ್ನೈದುತ್ತಿರುವ ಸಮಯದೊಳ್ ಖಡ್ಗಖೇಟಗಳಂ ಪಿಡಿದು ಹೊಂಚಿಬರುವ ಹುಲಿಯಂತೆ ಸದ್ದುಮಾಡದೆ ಮೋಸದಿಂ ಬರುವ ದುರ್ಧರ್ಷನಂ ಕಂಡು ಹಾ ಮೋಸಬರುವದೆಂದು ರಾಜೇಂದ್ರನ ಸಮೀಪವನ್ನೈದಿ ಸುಮತಿಯು ಮಾಯಾಶಿರವಂ ನೋಡಿ ಇದೆಲ್ಲವೂ ರಾಕ್ಷಸನ ಮಾಯೆ ಎಂದು ನಿಶ್ಚೈಸಿ, ರಾಜೇಂದ್ರನಂ ಕುರಿತು ಎಲೈ ಮಹಾನುಭಾವನೆ! ಈ ದುರಾತ್ಮನಾದ ದುರ್ಧರ್ಷನ ಮಾಯೆಯಿಂದ ನಿರ್ಮಿತವಾದ ಈ ಸುಮತಿಯ ಶಿರವಂ ಕೈಗಳಿಂದೆತ್ತಿ ನಿರರ್ಥಕವಾಗಿ ಶೋಕಪಡುವುದುಚಿತವಲ್ಲ. ಖಡ್ಗಖೇಟಗಳಂ ಪಿಡಿದು ದುರ್ಧರ್ಷನು ನಿನ್ನಂ ಸಂಹರಿಸಲೋಸುಗ ಬರುತ್ತಿರುವನು, ಆದ್ದರಿಂ ಈ ಮಾಯಾಶಿರವಂ ಬಿಸುಟು ಬೇಗನೆ ಆಯುಧಗಳಂಗೊಂಡು ಈ ದುರಾತ್ಮನಾದ ದುರ್ಧರ್ಷನಂ ಸಂಹರಿಸೆಂದು ನುಡಿಯಲು, ಅದಂ ಕೇಳಿ ರಾಜೇಂದ್ರನು ಮೊಗವೆತ್ತಿ ನೋಡಿ ಯಕ್ಷನಂ ಕಂಡು ಸಂತೋಷಗೊಂಡು ಎಚ್ಚರಿತು ಕೈಯಲ್ಲಿರುವ ಶಿರವಂ ಬಿಸುಟು ಧನುರ್ಬಾಣ ಮೊದಲಾದ ಆಯುಧಂಗಳಂ ಪಿಡಿದು ಹಿಂತಿರುಗಿ ಮೀರಿ ಬರುವ ದಾನವನಂ ನೋಡಿ ಬಾಣಗಳಂ ಬೀರುತ್ತ ಬರುತ್ತಿರಲಾ ದುರ್ಧರ್ಷನು ರಾಜೇಂದ್ರನ ಶರಗಳಿಂ ಪೀಡಿತನಾಗಿ ಇನ್ನೇನು ಮಾಡಲೀ ಎಂದು ಉಪಾಯವಂ ಚಿಂತಿಸುತ ಸುಮ್ಮನೆ ನಿಂದಿರಲಾಗ ರಾಜೇಂದ್ರನು ಸಮೀಪದಲ್ಲಿರುವ ಸರೋವರವನ್ನೈದಿ ಶುಚಿರ್ಭೂತನಾಗಿ ಮಾಯಾಪರಿಹಾರಕವಾದ ಮಂತ್ರವಂ ಜಪಿಸಿ ದುರ್ಧರ್ಷನ ಮಾಯೆಯಂ ಪರಿಹರಿಸಿ, ಥಳಯಿಸುವ ಸೂರ್ಯನಂತೆ ಹೊಳೆಯುತ್ತ, ಈ ದಾನವನು ಮಾಡಿದ

ಮಾಯೆಂಗೆ ನೂರು ಮಡಿ ಹೆಚ್ಚಾಗಿ ಮೋಸವಂ ಮಾಡಬೇಕೆಂದು ಯೋಚಿಸಿ ಯಕ್ಷನಂ ಕರದು ಎಲೈ ಛಾಯಾಗುಪ್ತನೆ! ನೀನು ದುರ್ಧರ್ಷನ ವೇಷವಂ ತಾಳಿ ಅವನ ಪುರವಂ ಪೊಕ್ಕು ಅಲ್ಲಿರುವರೆಲ್ಲರಂ ಮನಬಂದಂತೆ ಮಾಡುವನಾಗು, ನಾನು ಮಾಯೆಯಿಂದ ಆ ದುರ್ಧರ್ಷನಂ ವಂಚಿಸಿ ಅಂತರ್ಧಾನವನ್ನೈದಿ ನೀನು ಮಾಡುವ ಚಮತ್ಕಾರಗಳಂ ನೋಡುತಲಿರುವೆನೆಂದು ನುಡಿದು ಅಂತರ್ಧಾನನಾಗಲು, ಆಗ ಯಕ್ಷನು ಅಲ್ಲಿಂದ ಹೊರಟು ಸೂಕ್ಷ್ಮರೂಪದಿಂ ದುರ್ಧರ್ಷನ ಪುರವಂ ಪ್ರವೇಶಿಸಿ ಅವನಂತೆ ರೂಪಗೊಂಡು ಕೈಯ್ಯೊಳ್ ಶೂಲವಂ ಪಿಡಿದು ಅವನ ಅರಮನೆಯ ಬಾಗಿಲಲ್ಲಿ ಕಾದಿರುವ ಮಂತ್ರಿ ಮೊದಲಾದವರಂ ಕುರಿತು ನಾನು ಸುಗಂಧರಾಜನೊಡನೆ ಬಹಳ ಯುದ್ಧವಂ ಮಾಡಿ ಅವನಂ ಪಲಾಯನವನ್ನೈದಿಸಿ ಅತ್ಯಂತ ಶ್ರಾಂತನಾಗಿರುವೆನು ಆದ್ದರಿಂ ಅಂತಃಪುರದೊಳ್ ಶ್ರಮಪರಿಹಾರವಗೈಕೊಳ್ಳುತ ಸುಖದಿಂದಿರುತಲಿರುವೆನು, ನೀವು ಜಾಗರೂಕರಾಗಿ ಪಟ್ಟಣವಂ ರಕ್ಷಿಸಿಕೊಂಡಿರುವರಾಗಿ ಎಂದು ಕಟ್ಟು ಮಾಡಿ ಬಳಿಕ ದುರ್ಧರ್ಷನ ಅಂತಃಪುರವಂ ಪ್ರವೇಶಿಸಿ ಅವನ ಪತ್ನಿಯೊಡಗೂಡಿ ಸುಖದಿಂದಿರುತ್ತಿರಲೂ,

ಇತ್ತಲಾ ದುರ್ಧರ್ಷನು ರಾಜೇಂದ್ರನಂ ರಣಾಂಗಣದೊಳ್ ಕಾಣದೆ ಅಲ್ಲಲ್ಲಿ ಹುಡುಕಿ ನೋಡಿ ಎಲ್ಲಿಯೂ ಇಲ್ಲದೇ ಇರಲೂ, ದುರ್ಧರ್ಷನು ತನ್ನ ಮನದೊಳ್ ನನ್ನ ಮಾಯಾವಿದ್ಯೆಯಿಂ ಭಯಗೊಂಡು ಆ ನರಾಧಮನು ಎಲ್ಲಿಯೋ ಓಡಿಪೋದನೆಂದು ಅಲ್ಲಿಂದ ತೆರಳಿ ಸಂತೋಷದಿಂ ತನ್ನ ಪುರವಂ ಪೊಕ್ಕು ಅಲ್ಲಿ ಕಾದಿರುವರಂ ಕರೆಯಲು, ಅವರೆಲ್ಲರೂ ಅಚ್ಚರಿಗೊಂಡು ದಾನವೇಂದ್ರನಾದ ದುರ್ಧರ್ಷನು ಅಂತಃಪುರದಲ್ಲಿರುವನು, ಅವನಂತೆ ರೂಪುಗೊಂಡು ಬಂದಿರ್ಪ ಈ ದುಷ್ಟದಾನವನ್ಯಾರೆಂದು ಸಂದೇಹಪಡುತ ಕರದರೂ ಬಾರದೆ ಉಪೇಕ್ಷೆಯಿಂದಿರಲು, ಆಗ ದುರ್ಧರ್ಷನು ತನ್ನ ಕೈಯ್ಯಲ್ಲಿರುವ ಗದಾಯುಧದಿಂದವರನೆಲ್ಲರಂ ಸಂಹರಿಸುವೆನೆಂದು ಕೋಪಗೊಂಡು ಕೆಲವರಂ ಸಂಹರಿಸಲೂ, ಹತಶೇಷರಾದವರು ಓಡಿಬಂದು ಈ ವೃತ್ತಾಂತವೆಲ್ಲವಂ ಮಂತ್ರಿಗಳಿಗೆ ಪೇಳಲೂ, ಅವರೆಲ್ಲರೂ ಸೇನೆಯಿಂದೊಡಗೂಡಿ ಯುದ್ಧಸನ್ನದ್ಧರಾಗಿ

ಇದೇನಚ್ಚರಿಯು, ದುರ್ಧರ್ಷನ ಭಯದಿಂದೋಡಿಪೋದ ರಾಜಕುಮಾ ರನೇ ಮಾಯೆಯಿಂದ ಆತನ ವೇಷವಂ ಧರಿಸಿ ಬಂದಿರುವವರಲ್ಲಿ ಸಂದೇ ಹವಿಲ್ಲವೆಂದು ನಿಶ್ಚೈಸಿ ಬಂದು ಆ ದುರ್ಧರ್ಷನ ಮೇಲೆ ಆಯುಧಗಳಂ ಪ್ರಯೋಗಿಸುತ್ತಿರಲೂ, ಆಗ ದುರ್ಧರ್ಷನು ಇದೇನು ಕಾಲವಿಪರೀತವು ನನ್ನ ಮಂತ್ರಿಗಳೇ ನನ್ನ ಮೇಲೆ ಯುದ್ಧಕ್ಕೆ ಬರುವದುಂಟೆ? ಮತ್ತೂ ನಾನು ಮೊದಲು ಈ ಪುರವಂಕಾದಿರುವ ದಾನವರಂ ಸಂಹರಿಸಬಹುದೇ? ಸ್ವಯೂಧ ಕಲಹವು ನಾಶವಂ ಮಾಡದೇ ಬಿಡದೆಂದು ಯೋಚಿಸಿ, ಬಾಣ ಬಿಲ್ಲುಗಳಂ ಬಿಸುಟು ಸುಮ್ಮನೇ ನಿಂದಿರಲೂ, ಇದಂ ಕಂಡು ಮಂತ್ರಿ ಗಳು ಸಂದೇಹಪಡುತ ಶೀಘ್ರದಿಂ ಅಂತಃಪುರದಲ್ಲಿರುವ ದುರ್ಧರ್ಷನಿಗೆ ಈ ವೃತ್ತಾಂತವಂ ತಿಳುಹಲೂ, ಅದಂ ಕೇಳಿ ದುರ್ಧರ್ಷರೂಪದ ಯಕ್ಷ ನು ಅಲ್ಲಿಂದ ಹೊರಟು ತನ್ನ ಮನದೋಳ್ ಹಾಸ್ಯವಂ ಮಾಡುತ ಮಂತ್ರಿ ಗಳ ಬದಿಯನ್ನೈದಿ ನಿರಾಯುಧನಾಗಿ ನಿಂದಿರುವ ದುರ್ಧರ್ಷನಂನೋಡಿ ನ ಗುತ ಮಂತ್ರಿಗಳಂಕುರಿತು ಇದೇನಾಶ್ಚರ್ಯವು, ಕಪಟದಿಂ ನನ್ನ ರೂಪವ ಧರಿಸಿ ಬಂದಿರುವ ಈ ದುರಾತ್ಮನಂ ಪಿಡಿದು ಮಹಾಪಾಶಗಳಿಂದ ಬಿಗಿದು ಕಾರಾಗೃಹದೋಳ್ ಇರಿಸುವದೆಂದು ನುಡಿಯಲಾ ಯಥಾರ್ಥ ದುರ್ಧ ರ್ಷನು ತನ್ನಂತೆ ನಿಂದಿರುವ ರಾಕ್ಷಸನಂ ನೋಡಿ ನಮ್ಮ ದಾನವ ಸಮೂ ಹದಲ್ಲಿ ಯಾವನೋ ಒಬ್ಬ ಬಲಶಾಲಿಯಾಗಿ ಬುದ್ಧಿಶಾಲಿಯಾದವನು ನಾ ನಿಲ್ಲದ ಸಮಯದಲ್ಲಿ ಬಹು ರೂಪವತಿಯರಾದ ನನ್ನ ಸತಿಯರಂ ನೋಡಿ ಬಹು ದಿವಸದಿಂದ ಸಮಯವಂ ನಿರೀಕ್ಷಿಸುತ್ತಿರ್ದು ಈಗ ಆ ನರಾಧಮ ನಾದ ರಾಜೇಂದ್ರನಿಂದ ನಾನುಪರಾಜಿತನಾಗಿ ಪೋದನೆಂದು ನಿಶ್ಚೈಸಿ ನನ್ನ ರೂಪದಿಂದ ಅಂತಃಪುರವಂ ಪೊಕ್ಕು ಸತಿಯರ ವ್ರತಭಂಗವಂ ಮಾಡಿ, ನನ್ನ ಮಂತ್ರಿಗಳನೆಲ್ಲ ತನ್ನ ವಶವಂ ಮಾಡಿಕೊಂಡಿರುವಂತೆ ತೋರುತಲಿದೆ, ಇವರೊಡನೆ ಯುದ್ಧವಂ ಮಾಡುವೆನೆಂದರೆ ಇವರು ಸೋಲುವರಲ್ಲ, ಸುಮ್ಮನೆ ಇರುವೆನೆಂದರೆ ಮಾನವಲ್ಲ, ಏನಾದರೂ ಒಂದು ಉಪಾಯದಿಂದ ಇದರ ವಿವರವಂ ತಿಳಿಯಬೇಕು, ಇಂತುಮಲ್ಲದೇ ಆ ರಾಜಕುಮಾರನು ನಾನು ಮಾಡಿದ ಮಾಯವಂ ತಿಳಿದು ಪ್ರತಿಮಾಯೆ ಯಿಂದ ನಾನು ಅರಿಯದಂತೆ ಪುರವಂ ಪೊಕ್ಕು ನನ್ನ ರೂಪದಿಂ ಬಂದಿರು

ವನೋ? ಅಂತಿರ್ದಡೆ ಇವನೊಡನೆ ಯುದ್ಧವಂ ಮಾಡಿ ಜೈಸಕೂಡದು, ಏನು ಉಪಾಯವಂ ಮಾಡುವೆನೆಂದು ಒಂದೂ ತೋರದೆ ಪರ್ವತದಂತೆ ಚಲಿಸದೆ ಸುಮ್ಮನೆ ನಿಂದಿರಲು, ಇವನ ಮಂತ್ರಿ ಮೊದಲಾದವರು ಇವನೇ ನಮ್ಮ ದಾನವನೋ ಅಥವಾ ಅವನೇ ನಮ್ಮ ದುರ್ಧರ್ಷನೋ, ಹೀಗೋ? ಹಾಗೋ? ಎಂದು ಸಂದೇಹ ಪಡುತ ಒಬ್ಬರನ್ನೊಬ್ಬರು ನೋಡುತ ಭಯಗೊಂಡು ನಿಂದಿರಲದರೊಳೋರ್ವ ಮಂತ್ರಿಯು ಧೈರ್ಯವಂ ಮಾಡಿ ಶೀಘ್ರದಿಂ ಪುರವಂ ಪೊಕ್ಕು ದುರ್ಧರ್ಷನ ಸತಿಯರಂ ಕರತಂದು ಆ ಈರ್ವ ದುರ್ಧರ್ಷರಂ ತೋರಿಸಲು, ಆಗ ಆ ಸ್ತ್ರೀಯರುಗಳು ಇವರಿಗಿಂತಲೂ ಇಮ್ಮಡಿಯಾಗಿ ಸಂದೇಹ ಪಡುತ ನೋಡುತ್ತ ಒಂದೂ ನಿಶ್ಚಯವಾಗಿ ತಿಳಿಯದೇ ಮನದೊಳ್ ಕಳವಳಪಡುತಲಿರುವ ಸಮಯದೊಳ್ ಸುಗಂಧರಾಜೇಂದ್ರನು ಅದೃಶ್ಯನಾಗಿ ಗಗನದೊಳ್ನಿಂತು ಈ ಚಮತ್ಕಾರಗಳನೆಲ್ಲವಂ ನೋಡುತ ಸಂತೋಷದಿಂ ನಗುತಲಿರಲಾಗ ಮಂತ್ರಿ ಮೊದಲಾದವರೆಲ್ಲರೂ ಮೊದಲು ಬಂದು ಅಂತಃಪುರದಲ್ಲಿದ್ದವನೇ ದಾನವೇಂದ್ರನಾದ ದುರ್ಧರ್ಷನಹುದೆಂದು ನಿಶ್ಚಯವಾಗಿ ತಿಳಿದು ತಮ್ಮ ಸೈನ್ಯವೆಲ್ಲವಂ ಕರದು ಈ ಮಹಾ ಕಪಟಿಯಾದ ದುಷ್ಟನಂ ಸಂಹಾರವಂ ಮಾಡಿರೆಂದು ಪೇಳಿ ಅವರೊಡಗೂಡಿ ತಾವೂ ಸಮಸ್ತ ಶಸ್ತ್ರಾಸ್ತ್ರಗಳಂ ಪ್ರಯೋಗಿಸುತ್ತಿರಲಾಗ ಯಥಾರ್ಥ ದುರ್ಧರ್ಷನು ತಾನು ಸುಮ್ಮನಿರ್ದಡೆ ಇವರೆಲ್ಲರೂ ಕೂಡಿ ಸಂಹಾರವಂ ಮಾಡದೇ ಬಿಡರೂ ಎಂದು ನಿಶ್ಚಯವಾಗಿ ತಿಳಿದು ಅತ್ಯಂತ ಕೋಪಗೊಂಡು ಕುಲಾಲಚಕ್ರದಂತೆ ಕಣ್ಣುಗಳಂ ಘರ್ರನೆ ತಿರಿಗಿಸುತ್ತ ಗದಾಯುಧವಂ ಕೊಂಡು ಅಲ್ಲಿರುವ ಮಂತ್ರಿ ಮೊದಲಾದವರೆಲ್ಲರಂ ನಿಮಿಷದೊಳ್ ಯಮಪುರಿಗನ್ನೈದಿಸಿ, ತನ್ನ ವೇಷವಂ ತಾಳಿರ್ದ ಯಕ್ಷನಂ ಗದೆಯಿಂದ ಬಡಿಯುವೆನೆಂದು ಆರ್ಭಟಿಸಿ ಬಳಿಕ ತನ್ನ ಸತಿಯರಂ ನೋಡಿ ಇಮ್ಮಡಿಕೋಪದಿಂದೊಡಗೂಡಿ, ಈಗಲೇ ಈ ಕಪಟವೇಷವಂ ತಾಳಿರುವ ರಾಜೇಂದ್ರನಂ ಸಂಹರಿಸುವೆನು, ಇಲ್ಲದಿರೆ ಇವನ ಬಾಣಂಗಳಿಂದ ಪ್ರಾಣಂಗಳನ್ನಾದರೂ ಬಿಡುವೆನೆಂದು ಉರವಣಿಸಿ ಬರುತಿರಲಾಗ ಕಪಟವೇಷದ ಯಕ್ಷನು ಭಯಗೊಂಡು ಅವನ ಎದುರಿಗೆ ನಿಲ್ಲಲಾರದೆ ತಲ್ಲಣಿಸಿ

ವೇಗದಿಂದ ಅದೃಶ್ಯನಾಗಲು, ಆಗ ದುರ್ಧರ್ಷನು ಸಂಹೃತರಾಗಿ ಬಿದ್ದಿರುವ ತನ್ನ ಮಂತ್ರಿಗಳು ಮೊದಲಾದವರಂ ನೋಡಿ ಸಂಕಟಪಡುತ ಸುಗಂಧರಾಜೇಂದ್ರನೆಂಬ ನರಾಧಮನು ಇಂತು ಮೋಸವಂ ಮಾಡಿದನು, ಇನ್ನು ನಾನೋರ್ವನೇ ಬದುಕಿ ಫಲವೇನು? ಇನ್ನು ಮೇಲೆ ಆ ನರಾಧಮನಂ ಸಂಹರಿಸಿದಲ್ಲದೆ ನಾನು ನನ್ನ ಪುರವಂ ಪ್ರವೇಶಿಸುವದಿಲ್ಲವೆಂದು ಪ್ರತಿಜ್ಞೆಯಂ ಮಾಡಿ ಅಲ್ಲಿಂದ ಹೊರಟು ಅತ್ಯಂತ ಘೋರವಾದ ರಣಭೂಮಿಯುಂ ಕುರಿತು ಬಂದು ಆರ್ಭಟಿಸಲು, ಆ ಕಾಲದೊಳ್ ಸುಗಂಧರಾಜೇಂದ್ರನು ಆ ದುರ್ಧರ್ಷನ ದೃಷ್ಟಿಗೋಚರನಾಗಿ ಯಕ್ಷನನ್ನೇರಿ ಕಾಲಮೇಘವು ಮಳೆಗರದಂತೆ ಶರಪರಂಪರೆಗಳಂ ವರ್ಷಿಸುತ್ತ ಅವನಂ ಬಾಧಿಸುತ್ತಿರಲಾಗ ಆ ದಾನವನು ಸಮಸ್ತ ಶಸ್ತ್ರಾಸ್ತ್ರಂಗಳಂ ಪ್ರಯೋಗಿಸಿ ಅವೆಲ್ಲವು ನಿರರ್ಥಕವಾಗಿ ಪೋಗಲವಂ ನೋಡಿ ತನ್ನ ಪ್ರಾಣದಂತೆ ಮಡಗಿರ್ದ ಒಂದು ಮಹಾಶಕ್ತ್ಯಾಯುಧವಂ ರಾಜೇಂದ್ರನ ಮೇಲೆ ಪ್ರಯೋಗಿಸಲಾಶಕ್ತಿಯು ಪ್ರಳಯಕಾಲಾಗ್ನಿಯಂತೆ ಕಿಡಿಗಳಂ ಉಗುಳುತ ಬರುತಿರಲವಂನೋಡಿ ರಾಜೇಂದ್ರನು ಪ್ರಮಾದ ಬರುವುದೆಂದು ನಿಶ್ಚೈಸಿ ಸಾವಿರಾರು ಅರ್ಧಚಂದ್ರ ಬಾಣಂಗಳಿಂದದಂ ಛೇದಿಸಿ ಇವನಲ್ಲಿ ಇಂತಿರ್ಪ ಆಯುಧಂಗಳೆಷ್ಟಿರುವವೋ ತಿಳಿಯಕೂಡದಾದ್ದರಿಂ ಇವನಂ ಈಗಲೇ ಸಂಹರಿಸಬೇಕೆಂದು ನಿಶ್ಚೈಸಿ, ದಿವ್ಯವಾದ ಚಂದ್ರಾಯುಧವಂ ಒರೆಯಿಂದ ತೆಗದು ಯಕ್ಷನಿಂದಿಳಿದು ಲಾಘವದಿಂದೆ ಲಂಘಿಸಿ ದುರಾತ್ಮನಾದ ದುರ್ಧರ್ಷನ ಶಿರವಂ ಕತ್ತರಿಸಿ ಕೆಡಹಲಾಗ ತುಂದೋದರಿ ಮೊದಲಾದ ದುರ್ಧರ್ಷನ ಪತ್ನಿ ಸಮೂಹಂಗಳು ಪೋಡೋಡಿ ಬಂದು ಬಿದ್ದಿರುವ ತಮ್ಮ ಪತಿಯ ಶರೀರವಂ ನೋಡಿ ಹಾ ಎಂದು ಹಂಬಲಿಸುತ್ತಿರಲು, ಅದಂನೋಡಿ ರಾಜೇಂದ್ರನು ನಗುತ ಯಕ್ಷನನ್ನೇರಿ ಶಾಲ್ಮಲಿ ದ್ವೀಪವಂ ಪ್ರವೇಶಿಸಿ, ಅಲ್ಲಿರುವ ಬಗೆಬಗೆಯಾದ ವಸ್ತುಗಳೊಳ್ ತನ್ನ ಮನಕ್ಕೆ ಬೇಕಾದಂತೆ ಅನರ್ಘ್ಯಂಗಳಾದ ರತ್ನ ಮೊದಲಾದ ವಸ್ತುಗಳಂ ಯಕ್ಷನಿಂದ ತೆಗಿಸಿಕೊಂಡು ಅಲ್ಲಲ್ಲಿರುವ ಪ್ರಾರ್ಚೀನರಾದ ರಾಜರುಗಳಂ ಕರಸಿ ಎಲೈ ರಾಯರುಗಳಿರಾ! ನಿಮಗೆ ಕಂಟಕನಾದ ದುರ್ಧರ್ಷನು ನನ್ನ ಶಸ್ತ್ರದಿಂ ಹತನಾದನು, ಇನ್ನು ಮೇಲೆ ನಿಮ್ಮ ನಿಮ್ಮ

ದೇಶಂಗಳಂ ನೀವು ಸುಖದಿಂದಾಳುತ ಧರ್ಮದಿಂದಿರುವುದೆಂದು ಕಟ್ಟು ಮಾಡಿ ಅವರು ಒಪ್ಪಿಸಿದ ಕೈ ಕಾಣಿಕೆಗಳಂ ಕೈಕೊಂಡು, ವಪುಷ್ಮಂತನೆಂಬ ಮಹಾರಾಯನ ವಂಶಸ್ಥನಾದ ರತ್ನಮಕುಟನೆಂಬ ರಾಯಂಗೆ ಉಗ್ರಪುರದ ಆಧಿಪತ್ಯವನಿತ್ತು ಮಿಕ್ಕಾದವರನೆಲ್ಲವರಂ ಮನ್ನಿಸಿ ಅಲ್ಲಲ್ಲಿ ತೆರಳ ಬರುತಿರಲಾಗ ತುಂದೋದರಿ ಮೊದಲಾದ ದುರ್ಧರ್ಷನ ಪತ್ನೀರು ರಾಜೇಂದ್ರನಂ ನೋಡಿ ಇವನು ನಮ್ಮನ್ನೂ ಕೂಡ ಸಂಹರಿಸುವನೂ ಎಂದು ಸಂದೇಹಪಡುತ ರಣಾಂಗಣವಂ ಬಿಟ್ಟು ಒಟ್ಟು ಗೂಡಿ ಓಡ್ಯೋಡಿ ಪೋಗುತಅಂಜನಪರ್ವತದ ಗುಹಾಂತರ ಮಾರ್ಗದಿಂದ ದಾನವರಿರುವ ಬಳಯನ್ನೈದಲೂ,

ಇತ್ತಲಾ ಸುಗಂಧಮಹಾರಾಯನು ಯಕ್ಷನನ್ನೇರಿ ಬರುತ ಶಾಲ್ಮಲಿ ದ್ವೀಪವಲ್ಲಿರುವ ವಿಚಿತ್ರಮಂ ನೋಡಿ ಅಚ್ಚರಿಗೊಳ್ಳುತ ನಾಗಲೋಕವಂ ಕುರಿತು ಬರುತ್ತಿರಲೂ, ಇತ್ತಲಾ ಪಾತಾಳ ಲೋಕವಲ್ಲಿರುವ ಮಹಾಶೇಷ ಮೊದಲಾದ ನಾಗಶ್ರೇಷ್ಠರೆಲ್ಲರೂ ದುರ್ಧರ್ಷನೊಡನೆ ಯುದ್ಧಮಂ ಮಾಡಲೋಸುಗ ಓರ್ವನೇ ಪೋಗಿರುವ ಸುಗಂಧರಾಜೇಂದ್ರನೆಂತಿರುವನೋ? ಜಯವಾಗುವದೋ? ಅಥವಾ ಮಾಯಾವಿಯಾದ ಆ ದುರ್ಧರ್ಷನ ಮೋಸಗಳಿಗೆ ಸಿಕ್ಕಿ ಪರಾಜಿತನಾಗುವನೋ? ಎಂದು ಪರಿಪರಿಯಾಗಿ ಚಿಂತಿಸುತ್ತಿರುವ ಸಮಯದೋಳ್ ಸುಮತಿಯು ನಸುನಗುತ ಮಹಾಶೇಷನ ಎದುರಿಗೆ ನಿಂತು ಎಲೈ ನಾಗೋತ್ತಮನೆ! ನಮ್ಮ ಸುಗಂಧಮಹಾರಾಜೇಂದ್ರನಿಗೆ ದೇವದಾನವ ಮನುಷ್ಯ ಮೊದಲಾದ ಸಮಸ್ತ ಪ್ರಾಣಿಗಳಿಂದಲೂ ಪರಾಜಯವೆಂದಿಗೂ ಆಗಲಾರದೆಂದು, ಮತ್ತೂ ನೀವು ನೋಡುತಲಿರುವಷ್ಟರಲ್ಲಿಯೇ ದುಷ್ಟನಾದ ದುರ್ಧರ್ಷನಂ ಸಂಹರಿಸಿ ಜಯಲಕ್ಷ್ಮಿಯಿಂದೊಡಗೂಡಿ ಯಕ್ಷನನ್ನೇರಿ ಸಂತೋಷದಿಂ ಬರುವನೂ ಎಂದು ನುಡಿಯುತ್ತಿರಲಾಸಮಯದೋಳ್ ಸುಗಂಧರಾಜೇಂದ್ರನು ಯಕ್ಷನೊಡಗೂಡಿ ಬರುವವಂ ಅಲ್ಲಲ್ಲಿ ಕಾದಿರುವ ನಾಗೋತ್ತಮರು ನೋಡಿ ಬೇಗದಿಂ ಮಹಾ ಶೇಷನ ಬಳಿಯನೈದಿ ಸುಗಂಧರಾಜೇಂದ್ರನು ಬಂದನೆಂದು ಸುದ್ದಿಯಂ ಪೇಳಲು, ಅದಂ ಕೇಳಿ ಮಹಾನಾಗನು ನಾಗೋತ್ತಮರಂ ಕುರಿತು ನೀವೆಲ್ಲರೂ ಸುಮತಿಯೊಡಗೂಡಿ ಆ ರಾಜಕುಮಾರನಂ

ಕರತರಮಪ್ಪುದೆಂದು ನಿರೂಪಿಸಲಾ ನಾಗೋತ್ತಮರೆಲ್ಲರೂ ಅದೇ ಪರಿಯಾಗಿ ರಾಜೇಂದ್ರನಂ ಮಹಾಶೇಷನ ಸಭೆಗೆ ಯ್ದಿಸಲಾ ಮಹಾಶೇಷನು ಅತ್ಯಂತ ಸಂತೋಷದಿಂ ಉಚಿತವಾದ ಪೀಠವನಿತ್ತು ಸವಿಾಪದಲ್ಲಿ ಕುಳ್ಳಿರಿಸಿಕೊಂಡು ಪರಿಪರಿ ಉಪಚಾರವಗೈಸುತ ದುರ್ಧರ್ಷನ ವೃತ್ತಾಂತವೇನಾಯಿತೆನಲು, ಅದಂ ಕೇಳಿ ರಾಜೇಂದ್ರನು ಯಕ್ಷನಂ ನೋಡಲಾ ಛಾಯಾಗುಪ್ತನು ಸಭೆಯಲ್ಲಿರುವರೆಲ್ಲರೂ ಕೇಳುವಂತೆ ದುರ್ಧರ್ಷನ ವೃತ್ತಾಂತವೆಲ್ಲವಂ ಆದಿಶೇಷನೊಡನೆ ಪೇಳಲೂ, ಅದಂಕೇಳಿ ಮಹಾಶೇಷನೊದಲಾದವರು ಹರ್ಷವಂ ಪೊಂದಿ ಮಂತ್ರಿಯಾದ ಮಹಾನಾಗನಂ ಕುರಿತು ನಿನ್ನ ಪೂರ್ವಪುಣ್ಯವೆಂತುಟೊ? ಎಂದು ಶ್ಲಾಘನೆಯಂ ಗೈದು ರಾಜೇಂದ್ರನಂ ಅನೇಕ ರತ್ನಾಭರಣಂಗಳಿಂದಲಂಕರಿಸಿ ಪರಿಪರಿ ರಾಜೋಪಚಾರಂಗಳಂ ಗೈದು ಮತ್ತೂ ಮಹಾನಾಗನಂ ಕುರಿತು ಎಲೈ ಮಂತ್ರಿಯೇ ಈ ಮಹಾರಾಜನಿಗೆ ಮಣಿಸಹಿತವಾಗಿ ಮಾಲಿನಿಯಂ ಕೊಟ್ಟು ಮನ್ನಿಸಿ ಕಳುಹುವದೆಂದು ಅಪ್ಪಣೆಯಂ ಕೊಡಲೂ, ಅದಂಕೇಳಿ ಮಂತ್ರಿ ಮಹಾನಾಗಮೊದಲಾದವರೆಲ್ಲರೂ ಆದಿಶೇಷನ ಆಜ್ಞಾನುಸಾರವಾಗಿ ಸುಗಂಧಮಹಾರಾಜೇಂದ್ರನಂ ಮಹಾರಾಜವೈಭವದಿಂದ ಮಾಲಿನಿ ಇರುವ ಮಂದಿರವನ್ನೈದಿಸಲೂ ಮಾಲಿನಿಯು ಈ ವೃತ್ತಾಂತವಂ ತಿಳಿದು ರಾಜೋಪಚಾರಂಗಳಿಗೆ ಬೇಕಾದ ವಸ್ತುಗಳಂ ಸನ್ನಹಿಸುವಂತೆ ದೂತಿಯರಿಗೆ ಕಟ್ಟುಮಾಡಿ ತಾನು ರತ್ನಮಯವಾದ ಕುಚಾಯಿಗಳಲ್ಲಿ ಪನ್ನೀರುಗಳಂ ತುಂಬಿಸಿ ನವರತ್ನದಾರತಿಗಳಂ ಮಿತ್ರವಿಂದೆ ಎಂಬ ಸಖಿಯ ಕರದೋಳ್ ತೆಗಿಸಿಕೊಂಡು ರಾಜೇಂದ್ರನ ಎದುರಾಗಿ ಬಂದು ಪ್ರಣಾಮವಗೈದು ಪನ್ನೀರುಗಳಿಂದ ಪಾದಂಗಳಂ ತೊಳದು ಆರತಿಯನ್ನೆತ್ತಿ ಹಸ್ತಲಾಗವನ್ನಿತ್ತು ತನ್ನ ಮಂದಿರವನ್ನೈದಿಸಿ ಪರಿಪರಿ ಉಪಚಾರವಗೈದು ಸಂಭ್ರಮದಿಂ ಕೂಡಿ ಅದೊಂದು ಬಗೆಯಾದ ನೋಟದಿಂ ನೋಡುತ್ತಿರಲಾಗ ರಾಜೇಂದ್ರನು ಅತ್ಯಂತ ಸಂತೋಷಭರಿತನಾಗಿ ಮಾಲಿನಿಯ ಕರವಂ ಪಿಡಿದು ಅವಳೊಡಗೂಡಿ ಭೋಗೋಪಯುಕ್ತಗಳಾದ ಪದಾರ್ಥಂಗಳಂಭುಂಜಿಸಿ ಕಪ್ಪುರವೀಳ್ಯವಂಸವಿದು ಮದನವಿಹಾರಂಗಳಗೈಯುತ್ತ ಸುಖದಿಂವಾರಾತ್ರಿಯಂ ಕಳೆದು, ಮರುದಿನ ಮಹಾನಾಗನಿಂದ ಆಜ್ಞೆಯಂಗೊಂಡು ಮಾಲಿನಿಯಂ

ಚಿಂತಾಮಣಿಯಂ ಕೊಡೆ ಸ್ವಾಧೀನವಗ್ಗೈಕೊಂಡು ಅತ್ಯಂತ ಸಂತೋಷಭರಿತನಾಗಿ ಅಲ್ಲಿಂದ ಹೊರಟು ಸುಮತಿ ಭಾರ್ಯರಾಗುಪ್ತರಿದ್ದೆಡೆಗೆ ಬಂದು ಅವರಿಂದಲೂ ಮಾಲಿನಿಯಿಂದಲೂ ಒಡಗೂಡಿ ಪಾತಾಳ ಲೋಕದಿಂ ತೆರಳಿ ಬರುತ, ಅಲ್ಲಲ್ಲಿರುವ ವಿಚಿತ್ರಂಗಳ ನೋಡುತ ಪುರುಷಮೃಗನ ತಪೋವನವನ್ನೈದಿ ಮಾಲಿನಿಯೊಡಗೂಡಿ ಆ ಋಷಿಗೆ ಸಾಷ್ಟಾಂಗ ನಮಸ್ಕಾರವಂ ಮಾಡಿ ಅವನಂ ಕುರಿತು ಎಲೈ ಮಹಾನುಭಾವನೆ! ನಿನ್ನ ದರ್ಶನದ ಮಹಿಮೆಯಿಂದ ನನ್ನ ಸಕಲಮನೋಭೀಷ್ಟಂಗಳೂ ಕೈಕೊಡಿ ಕೃತಾರ್ಥನಾದೆನು, ಮತ್ತೂ ನಾನು ಕಟಕವಂ ಬಿಟ್ಟು ಬಂದು ಬಹು ದಿನವಾಯಿತು, ನಿನ್ನ ಕಟಾಕ್ಷದಿಂದ ಚಿಂತಾಮಣಿಯಂ, ಮಾಲಿನಿಯುಂ ಕೂಡ ಪಡೆದು, ಆದಿಶೇಷನಿಂ ಬಹು ಮತಿಯಂ ಹೊಂದಿ ನಿನ್ನ ಚರಣ ದರ್ಶನಾರ್ಥವಾಗಿ ಬಂದೆನು, ಅಪ್ಪಣೆಯನ್ನಿತ್ತರೆ ಕಟಕವಂ ಕುರಿತು ಪೋಗಿ ಬರುವೆನು ಎಂದು ಬಿನ್ನವಿಸಲಾ ಪುರುಷಮೃಗನು ಎಲೈ ರಾಜಕುಲತಿಲಕನೆ! ನೀನು ದುರ್ಧರ್ಷ ಮೊದಲಾದ ದುಷ್ಟದಾನವರಂ ಸಂಹರಿಸಿ ಲೋಕಗಳಿಗೆಲ್ಲ ಕ್ಷೇಮವನ್ನುಂಟುಮಾಡಿ ಚಿಂತಾಮಣಿಯಂ ಸ್ವಾಧೀನವಂ ಮಾಡಿಕೊಂಡು ಬಂದುದಂ ನೋಡಿ ಎನಗೆ ಆನಂದವಾಯಿತು, ಮತ್ತೂ ನೀನು ಶೀಘ್ರದಿಂ ಕಟಕವನ್ನೈದಿ ಚಿಂತಾಮಣಿ ರತ್ನವಂ ಕಳಿಂಗರಾಜನಂದನೆಗೆ ಕೊಟ್ಟು, ಮತ್ತೂ ಆ ರಾಜಪುತ್ರಿಯು ಸ್ವಯಂವರದೋಳ್ ಅಪೇಕ್ಷಿಸಿದ ಮಿಕ್ಕಾದ ಪಣಂಗಳಂ ಕೂಡೆ ಪರಶಿವನ ಪಾದಕಟಾಕ್ಷದಿಂದ ಸುಲಭದಿಂ ಸಾಧಿಸಿ ತಂದಿತ್ತು, ಇಂದ್ರನು ಶಚೀದೇವಿಯ ಪಾಣಿಗ್ರಹಣವಂ ಮಾಡಿದಂತೆ ಆ ಸೌಗಂಧಿಕಾದೇವಿಯ ಪಾಣಿಗ್ರಹಣವಂ ಮಾಡಿ ಅವಳೊಡಗೂಡಿ ಭೂಮಂಡಲಾಧಿಪತ್ಯವಂ ಪಡೆದು ಸುಖ ಸಾಮ್ರಾಜ್ಯವಂ ಮೆರೆಯುವನಾಗೆಂದು ಹರಸಿ ಪೋಗಿ ಬಾರೆಂದು ಅಪ್ಪಣೆಯಂ ಕೊಡಲಾ ರಾಜೇಂದ್ರನು ಆ ಋಷಿಗೆ ಪ್ರದಕ್ಷಿಣ ನಮಸ್ಕಾರವಂ ಮಾಡಿ ಸುಮತಿ ಮಾಲಿನಿಯರೊಡಗೂಡಿ ಯಕ್ಷನನ್ನೇರಿ ಅಂತರಿಕ್ಷ ಮಾರ್ಗದೋಳ್ ಬರುತ ಅಲ್ಲಲ್ಲಿರುವ ವಿಚಿತ್ರಂಗಳಂ ನಾಗಕನ್ನೆಯಾದ ಮಾಲಿನಿಗೆ ತೋರುತ್ತ ಕಳಿಂಗ ನಗರದ ಸಮೀಪದೊಳಿರುವ ನಿಜಕಟಕವಂ ಸೇರಿ ಯಕ್ಷನಿಂದಿಳಿದು ಮಾಲಿನಿಯಂ ಒಳಗಣ

ಪಟಮಂದಿರಕ್ಕೆ ಸಖೀಜನ ಸಹಿತವಾಗಿ ಕಳುಹಿ ತಾನು ವಾಲಗದ ಗುಡಾರವಂ ಸಾರಿ ಮಣಿಮಯಮಾದ ತೂಗುಮಂಚದೋಳ್ ಕುಳಿತಿರುವ ಸಮಯದಲ್ಲಿ ವೀರಸೇನನು, ಶತ್ರುಜಯ, ರೌಪ್ಯಾಶ್ವ ಮೊದಲಾದ ಸೇನಾಪತಿಗಳೊಡಗೂಡಿ ಬಂದು ರಾಜೇಂದ್ರಂಗೆ ಸಾಷ್ಟಾಂಗ ಪ್ರಣಾಮವಗೈದು ಕೈಕಾಣಿಕೆಗಳಂ ಒಪ್ಪಿಸಿ ಸುಮತಿಯ ಸಂಜ್ಞೆಯಿಂದ ಸಾವಿರಾರು ಫಿರಂಗಿಗಳಂ ಹಾರಿಸಲಾಗ ಸಕಲ ಜನಂಗಳೂ ಸುಗಂಧ ಮಹಾರಾಜೇಂದ್ರನುಪಣವಂ ಸಾಧಿಸಿಕೊಂಡು ಬಂದನೆಂದು ಅತ್ಯಂತ ಸಂತೋಷದಿಂದಿರುತ್ತಿರಲು,

ಬಳಿಕ ರಾಜೇಂದ್ರನು ವೀರಸೇನ ಮೊದಲಾದವರ ಯೋಗಕ್ಷೇಮಂಗಳಂ ವಿಚಾರಿಸಿ ಸಮೀಪದೋಳ್ ಕುಳ್ಳಿರಿಪಿ ಸುಮತಿಯಂ ಕರದು ಚಿಂತಾಮಣಿ ರತ್ನವನಿತ್ತು, ಮತ್ತೂ ಸೌಗಂಧಿಕಾದೇವಿಗೆ ಪರಿಪರಿಯಾದ ಒಡವೆಗಳಂ ಕಳಿಂಗ ರಾಜನಿಗೆ ವಿಚಿತ್ರ ವಸ್ತ್ರಾಭರಣಂಗಳಂ ಕೂಡ ಸಜ್ಜುಗೊಳಿಸಿ ಕೊಟ್ಟು, ಮತ್ತೂ ಅವನಂಕುರಿತು ಕಳಿಂಗರಾಜನಂದನೆಗೆ ತನ್ನ ಕುಶಲವಂ ತಿಳುಹಿ ಈ ವಸ್ತುಗಳನೆಲ್ಲವನಿತ್ತು ನಾಳೀ ಉದಯದೋಳ್ ನಾನು ಬರುವೆನೆಂದು ವೀರಸೇನನೊಡಗೂಡಿ ಪೋಗಿ ಬರುವನಾಗೆಂದು ಅಪ್ಪಣೆಯಂ ಕೊಟ್ಟು ಕಳುಹಲು, ಅವರೀರ್ವರೂ ಪವಳದ ಪಲ್ಲಕ್ಕಿಯೋಳ್ ಚಿಂತಾಮಣಿ ರತ್ನವಂ ಇರಿಸಿಕೊಂಡು ಮಹಾರಾಜ ವೈಭವದಿಂದ ಕಳಿಂಗರಾಜಮಂದಿರವನ್ನೈದಿ ವಿಜಯವರ್ಮರಾಯನಂ ಕಂಡು ವಸ್ತ್ರಾಭರಣಂಗಳನಿತ್ತು, ಅವನೊಡಗೂಡಿ ಸೌಗಂಧಿಕಾದೇವಿಯ ಸಮೀಪವನ್ನೈದಿ ರಾಜೇಂದ್ರನ ಅಪ್ಪಣೆಯಾದಂತೆ ವಸ್ತ್ರಾಭರಣಂಗಳಂ ಚಿಂತಾಮಣಿ ರತ್ನವಂ ಕೂಡ ಒಪ್ಪಿಸಿ, ಈ ಚಿಂತಾಮಣಿ ನಿಮಿತ್ತವಾಗಿ ರಾಜೇಂದ್ರನು ಮಾಡಿದ ಸಾಹಸವಂ ವಿಸ್ತಾರವಾಗಿ ತಿಳುಹಿ, ಇದೇ ಹನ್ನೆರಡು ಭಾರ ಭಂಗಾರವಂಕೊಡುವಜೀವರತ್ನವೆಂದುಪೇಳಿ ನಾಳೆ ಉದಯದೋಳ್ ನಮ್ಮ ಒಡೆಯನಾದ ಸುಗಂಧ ಮಹಾರಾಜೇಂದ್ರನು ಇಲ್ಲಿಗೆ ಬಿಜಯಂಗೈವನೆಂದು ಬಿನ್ನವಿಸಲು,

ಬಳಿಕ ಸೌಗಂಧಿಕಾದೇವಿಯು ಚಿಂತಾಮಣಿರತ್ನವಂ ಕೈಕೊಂಡು ಶಿರದೊಳಿಟ್ಟು ಕಣ್ಣುಗಳಿಗೊತ್ತಿ ಸಂತೋಷ ಪಡುತ ಸುಮತಿ

ವೀರಸೇನರಿಗೆ ಉಪಚಾರೋಕ್ತಿಗಳಂ ಪೇಳಿ ಸುಗಂಧ ಮಹಾರಾಯಂ ಗೆ ವಸ್ತ್ರಾಭರಣಂಗಳಂ ಧರಿಸುವದೆಂದು ನುಡಿದು ಪರಿಪರಿ ಅಮೂಲ್ಯ ವಸ್ತ್ರಾಭರಣಂಗಳನಿತ್ತು. ಸುಮತಿ ವೀರಸೇನರಿಗೂ ಉಡುಗೆರೆಗಳಂ ಕೊಟ್ಟು ಕಳುಹುವುದೆಂದು ಚಿತ್ರಲೇಖೆಗೆ ಕಟ್ಟು ಮಾಡಲು, ಅವಳು ಅದೇ ಪರಿಯಾಗಿ ಉಡುಗೆರೆಗಳನಿತ್ತು ಕಳುಹಲಾ ಸುಮತಿ ವೀರಸೇನರು ಈರ್ವರೂ ಅಲ್ಲಿಂದ ತೆರಳಿ ರಾಜೇಂದ್ರನ ಸವಿಾಪವನೈದಿ ಸೌಗಂಧಿಕಾ ದೇವಿಯು ಒಪ್ಪಿಸಿದ ರತ್ನಾಭರಣಗಳೆಂದು ಮುಂದಿರಿಸಿ ಪ್ರಣಾಮವಗೈದು ಆತನ ಆಜ್ಞೆಯಿಂದ ತಮ್ಮ ತಮ್ಮ ಬಿಡಾರಂಗಳನೈದಲೂ, ಇತ್ತಲಾ ಸುಗಂಧರಾಜೇಂದ್ರನು ಸ್ನಾನಾಹ್ನಿಕಗಳಂ ನೆರವೇರಿಸಿ ಮಾಲಿನಿಯೊಡ ಗೂಡಿ ಮೃಷ್ಟಾನ್ನ ಭೋಜನಂಗೈದು ಕರ್ಪೂರವೀಳ್ಯವಂ ಮೆಲ್ಲುತ ಮದ ನ ವಿಹಾರಂಗಳಂಗೈಯ್ಯುತ ಸುಖದಿಂದಿರುತಿರ್ದನೆಂಬಲ್ಲಿಗೆ. * *

ಗದ್ಯ—ಕುಂಡಲಿಶಯ ಖಂಡಪರಶು ಪುಂಡರೀಕ ಭವಾ ಖಂಡಲ ಪ್ರಮುಖನಿಖಿಲಸುರವರಪರಿಭವಪರಿಣತಪ್ರಚಂಡಬಲಚಂಡ ಮುಂಡವಿ ಖಂಡನ ನಿಪುಣ ಕೋದಂಡ ಕಾಂಡಮಂಡಲಾಗ್ರ ಧರ ಭುಜಾದಂಡವ ರಿಮಂಡಿತ ಚಾಮುಂಡಿಕಾ ಕಟಾಕ್ಷವೀಕ್ಷಣಪ್ರವರ್ಧಮಾನ ಭೂಮಂಡ ಲಾಧಿಪತ್ಯ ಸತ್ಯಪ್ರತಾಪಸಕಲಭಾಷಾಸಾಮ್ರಾಜ್ಯಸರ್ವಂಕಷ ಚತುರ್ವಿ ಧನರಸಕವಿತಾನಿಸ್ಸಹಾಯನಿರ್ಮಾಣಧೌರೇಯಘಟಿಕಾಶತಗ್ರಂಥ ದಿನದಿನ ಪ್ರಬಂಧನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಗೋತ್ರಆಶ್ವ ಲಾಯನಸೂತ್ರಸುಚರಿತ್ರಚಾಮರಾಜ ಮಹಾರಾಜ ಪುತ್ರನರಪತಿಬಿರು ದಮಹೀಶೂರಪುರವರಾಧೀಶಶ್ರೀಕೃಷ್ಣರಾಜಮಹಾರಾಜಕಂಠೀರವರಿಂ ರಸಿಕಜನಾನಂದ ಕರವಾಗಿ ವಿರಚಿತವಾದ, ಸೌಗಂಧಿಕಾಪರಿಣಯ ವೆಂಬ ಈ ನವೀನ ಕೃತಿಯೊಳ್ ಪಾರ್ಥಿವಾದಿ ಲಿಂಗಪೂಜಾಕ್ರಮವಂ ಬಿಲ್ವರುದ್ರಾಕ್ಷಮಹಿಮೆಯುಂ, ವಿಭೂತಿ ಮಾಹಾತ್ಮ್ಯವಂ ಪಂಚಾಕ್ಷರೀ ಪರಿಯುಂ ಕೂಡ ಸುಗಂಧರಾಜೇಂದ್ರನು ಪುರುಷಮೃಗನಿಂ ಕೇಳಿ ಅವ ನೊಡಗೂಡಿ ಪಾತಾಳವಂಪ್ರವೇಶಿಸಿ ಆದಿಶೇಷನಂ ಕಂಡು ಮಾಲಿನಿಯುಂ ಪಡೆದು, ಧುರ್ಧರ್ಷನಂ ಸಂಹರಿಸಿ, ಹನ್ನೆರಡು ಭಾರಭಗಾರವಂನೀವ ಚಿಂತಾಮಣಿ ಎಂಬ ರತ್ನವತಂದು ಸೌಗಂಧಿಕಾದೇವಿಗೆ ಕೊಟ್ಟದ್ದು ಮೊ

ದಲಾದುವಂ ಒಣ್ಣಿಸಿರುವ ಇಪ್ಪತ್ತೊಂದನೇ ಆಶ್ವಾಸ ನಿರೂಪಣಕ್ಕೆ ಮಂಗಳಮಹಾ ||*|| ಚಿಂತಾಮಣಿ ಪಣಸ್ಸಮಾಪ್ತಃ.

ಇಪ್ಪತ್ತೊಂದನೇಯ ಆಶ್ವಾಸ ಸಂಪೂರ್ಣವು.

---

## ಇಪ್ಪತ್ತೆರಡನೇಯ ಆಶ್ವಾಸ ಪ್ರಾರಂಭಃ.

ಶ್ರೀರಸ್ತು.

ಶ್ರೀಚಾಮುಂಡಿಕಾಂಬಾಯೈನಮಃ.

ಪೂರ್ವದೋಳ್ ಅಮರಾವತೀ ಪುರದಲ್ಲಿ ಇಂದ್ರನ ಅಪ್ಪಣೆಯಾದಂತೆ ಅವನ ವಾಹನ ಮೊದಲಾದ ವಸ್ತುಗಳೆಲ್ಲ ಬೇರೆ ಬೇರೆಯಾಗಿ ಒಂದೊಂದು ದ್ವೀಪಂಗಳನ್ನೈದುತ್ತಿರಲು, ಅವರೊಳ್ ಕಲ್ಪವೃಕ್ಷವು ಅಲ್ಪ ಬುದ್ಧಿಯಿಂದ ಬಹುಕಾಲದಿಂದಿರ್ದ ನಂದನವನವಂ ಬಿಟ್ಟು ಪೋಗುವುದಕ್ಕೆ ಮನಬಾರದೆ ಮುಂದೆ ಏನೂ ತೋರದೆ ಸಾಧಾರಣವಾದ ಮರದಂತೆ ಸುಮ್ಮನೇ ನಿಂದಿರಲೂ, ಅಷ್ಟರೋಳ್ ಬಾಣ ಮೊದಲಾದ ದಾನವರು ಪುರಂದರನಂ ಕಾಣದೆ ಅಮರಾವತಿಯೊಳ್ ಬೀದಿಬೀದಿಗಳಲ್ಲಿರುವ ಮನೆಗಳಂ ಪೊಕ್ಕು ಸೂರೆಗೊಳ್ಳಿರೆಂದು ತಮ್ಮ ತಮ್ಮ ಭಟರಿಗೆ ಅಪ್ಪಣೆಯನೀಯಲು, ಆಗ ಸೇನಾಪತಿಗಳೆಲ್ಲ ಒಟ್ಟುಗೂಡಿ ಇಂದ್ರನು ಎಲ್ಲಿಯೋ ಓಡಿಹೋದನು ಅವನ ವಾಹನ ಮೊದಲಾದ ವಸ್ತುಗಳಂ ತೋರಿ ಎಂದು ದೇವತೆಗಳಂ ಹಿಡಿದು ಬಗೆಬಗೆಯಾಗಿ ಬಾಧೆಗೊಳಿಸುತ ಪುರಂದರ ಮೊದಲಾದವರ ಮಂದಿರಗಳಂ ನುಗ್ಗಿ ಹುಡುಕುತ ಎಲ್ಲಿಯೂ ಕಾಣದೆ ನಂದನ ವನವಂ ಪ್ರವೇಶಿಸಿ ಅಲ್ಲಿರುವ ಪಾರಿಜಾತ ತರುವಂ ಕಂಡು ಕೆಲವರು ಅಲ್ಲಿಯೇ ಕಾವಲು ನಿಂತು, ಮತ್ತೆ ಕೆಲವರು ತಮ್ಮ ಒಡೆಯರ ಬಳಿಗೆ ಬಂದು ಎಲೈ ದಾನವೇಂದ್ರರಾ! ಕೇಳಿ ನಂದನ ವನದೋಳ್ ಪಾರಿಜಾತ ಒಂದೇ ಇರುವದಲ್ಲದೇ ಎಲ್ಲಿ ಹುಡುಕಿದರೂ ಇನ್ನೊಂದು ವಸ್ತುವೂ ಕಾಣುವದಿಲ್ಲವೆಂದು ನುಡಿಯಲದಂ ಕೇಳಿ ಎಲಾ! ಇಂದ್ರನು ಮೋಸವಂ ಮಾಡಿ ಎಲ್ಲಿಗೋ ಓಡಿಹೋದನು, ನಮ್ಮ ಪುಣ್ಯದಿಂದಲೇ ಕಲ್ಪವೃಕ್ಷ ಒಂದು ಮಾತ್ರ ಸಿಕ್ಕಿರುವುದು, ಅದು ಕೂಡ ದಕ್ಕುವದು ಪ್ರಯಾಸವೇ ಸರಿ, ಆದರೂ ಸರ್ವಸಾಹಸದಿಂದ ಈ ಪಾರಿಜಾತ ವೃಕ್ಷವು ದೇವತೆಗಳಿಗೆ ಸ್ವಾಧೀನವಾಗಿ

ಪೋಗದಂತೆ ಕಾವಿರುವಂತೆ ಕಟ್ಟು ಮಾಡಿ, ಇಂತುಮಲ್ಲದೆ ಆ ವೃಕ್ಷವು ಏನು ಬೇಡಿದರವಂ ಕೊಡುವುದು ಅವರ ಸಮೀಪದೊಳಾದಿರುವ ರಾಕ್ಷಸರು ಸುಮ್ಮನೆ ಇರುವರಲ್ಲ ಆದ್ದರಿಂ ಮದಕರಂಗಳಾದ ಮದ್ಯಗಳಂ ಸೇವಿಸದೇ ಬಹು ಜಾಗರೂಕರಾಗಿರಬೇಕೆಂದು ಒಬ್ಬ ಒಬ್ಬ ಸೇನಾಪತಿಯು ಒಂದೊಂದು ರಘಾವ ಅಲ್ಲಿಯೇ ಕಾದಿರುತ್ತಿರಲು, ಆ ಪುರದೊಳ್ ಕೆಲರು ತುಂಟ ರಾಕ್ಷಸರು ನಂದನ ವನವಂ ಪ್ರವೇಶಿಸಿ ಎಲೈ ಪಾರಿಜಾತ ತರುವೆ! ನೀನು ಕೇಳಿದವರಿಗೆ ಬೇಕಾದ ವಸ್ತುಗಳಂ ಕೊಡುವೆಯಷ್ಟೆ ಆದ್ದರಿಂದೀಗ ನಮಗೆ ಪರಿಪರಿಯಾದ ಭಕ್ಷ್ಯಗಳಂ, ಮದ್ಯಮಾಂಸಗಳಂ ರೂಪವತಿಯರಾದ ತರುಣಿಯರಂ ಕೂಡ ಕೊಡೂ ಎನುತ ಕಾಲುಗಳಿಂ ದೂದೆಯುತ್ತ, ತಂಬುಲಗಳಂ ಉಗಿದು ಕೊಂಬೆಗಳಂ ಏರಿ ಇಂಬಾದ ಬಳಿಯಲ್ಲಿ ಕುಳಿತು, ಅಲ್ಲಿರುವ ಹಂಸೆಗಳಂ ಹಾರಿಸುತ, ಕೋಗಿಲೆಗಳಂ ತೂಗಿಸಿ, ಗಿಣಿಗಳಂ ಪಿಡಿಯುತ, ಕೊಸೆಗಳಂ ಮುರಿದು ಎಲೆಗಳಂ ಕಿತ್ತು, ಹುವ್ವುಗಳಂ ಪರಚಿ, ಕಾಯಿಗಳಂಕಚ್ಚಿ, ಚಿಗರುಗಳಂ ಚಿವುಟಿ, ಮೊಗರುಗಳಂ ಮುರಿದು, ಕಪಿಗಳ ಕೈಗೆ ಸಿಕ್ಕಿದ ಮಾಣಿಕ್ಯದಂತೆ ಬಗೆಬಗೆಯಾಗಿ ಭಂಗ ಪಡಿಸುತ್ತಿರಲು, ಕೆಲರು ದುಷ್ಟದಾನವರು ದೇವತಾ ಸ್ತ್ರೀರುಗಳಂ ಬಲಾತ್ಕಾರದಿಂದ ಮುಂದಲೆಯುಂ ಪಿಡಿದು ಎಳತಂದು ಮುತಿಯುಂ ಸಡಲಿಸಿ ಪಾರಿಜಾತ ಪುಷ್ಪಂಗಳಂ, ಚಿಗುರುಗಳಂ ಕುಯಿದು ಹಾಸಿಗೆಯುಂ ಮಾಡಿ ಈ ಮರದ ನೆರಳೊಳ್ ಕೇಳಿಯುಂ ಮಾಡುವುದಕ್ಕೆ ಇದೇ ಸಮಯವೆ ಚನ್ನಾಗಿರುವದೆಂದು ಬಗುಳುವ ನಾಯಿಗಳಂತೆ ಬಾಯಿಗೆ ಬಂದಂತೆ ದೇವತೆಗಳಂ ಬಯ್ಯುತ್ತಿರಲು, ಕೆಲವರು ದೇವತೆಗಳೆಲ್ಲ ನಮ್ಮ ಕೈಗೆ ಸಿಕ್ಕದೆ ತಮ್ಮ ತಮ್ಮ ವಸ್ತುಗಳಂ ಕೊಂಡು ಎಲ್ಲಿಯೋ ಓಡಿ ಪೋಗಿ ಅಡಗಿಕೊಂಡಿರುವರು, ಈ ಪಾರಿಜಾತ ತರುವು ಒಂದು ಮಾತ್ರ ಏನೋ ಒಂದು ಕಾರಣದಿಂದ ಇಲ್ಲಿ ನಿಂತಿರುವದು ಆದ್ದರಿಂ ಇಂದ್ರ ಮೊದಲಾದ ದೇವತೆಗಳಿಗೆ ಮಾಡತಕ್ಕ ಬಗೆಬಗೆಯಾದ ಬಾಧೆಗಳಂ ಈ ವೃಕ್ಷಕ್ಕೆ ಮಾಡಿ ಮನವಂ ದಣಿಸಬೇಕೆಂದು ನುಡಿಯುತ್ತಿರಲದಂ ಕೇಳಿ ಮತ್ತೆ ಕೆಲಂಬರು ರಾಕ್ಷಸರು ಈ ವೃಕ್ಷಕ್ಕೆ ಬಾಧೆಯುಂ ಮಾಡಿದರೆ ಫಲವೇನು, ಅವರವರ ತರುಣಿಯರಂ ಪಿಡಿದು ಪ್ರತಗೆಡಿಸಿದರೆ ಒಂದು

ಭಾರಿಗೆ ಒಪ್ಪಿಕೊಳ್ಳಬಹುದೆನುತ್ತಿರಲು, ಮತ್ತೆ ಕೆಲಂಬರು ಈ ನುಡಿಗಳಂ ಕೇಳಿ ಬೇಗವೆಂ ಬಂದು ಮಂದಿರಂಗಳಂ ನುಗ್ಗಿ ಮೂಲೆ ಮೂಲೆಗಳೊಳ್ ನಾಲು ನೆಲೆಯಾಗಿ ಅಡಗಿಕೊಂಡಿರುವ ತರುಣಿಯರಂ ಹಿಡಿತಂದು ಗುಂಪು ಕೂಡಿಸಿ, ಅವರವರ ಸೀರೆಗಳಂ ಸೂರೆಗೊಂಡು ನೋಡುವರು ನಗುವಂತೆ ಮಾನಮಂ ಕೆಡಿಸಿ ಕಾಡು ಪಡಿಸುತ್ತಿರಲೂ, ಆ ಸಮಯದೊಳ್ ಕಲ್ಪವೃಕ್ಷವು ಇವನೆಲ್ಲವಂ ಕಂಡು ಪುರಂದರನು ಪೋಗುವಾಗ ಪೇಳಿದ ಮಾತುಗಳಂ ನೆನದು, ನಾನು ರಾಜಾಜ್ಞೆಯಂ ಮೀರಿ ಇಲ್ಲಿಯೇ ನಿಂತುದರಿಂದ ಅದಕ್ಕೆ ಇದೇ ಫಲವಾಯಿತೆಂದು ಈಗಲಾದರೂ ಪೋಗುವೆನೆಂದರೆ, ಸುತ್ತಲೂ ಮುಕ್ಕು ಮುತ್ತುಗದ ಮರದಂತೆ ಮುತ್ತಿಕಾದಿರುವ ಮತ್ತರಾದ ದಾನವರು ನನ್ನಂ ಸುಮ್ಮನೇ ಬಿಡುವರೇ, ಸಾಹಸವಂ ಮಾಡುವೆನೆಂದರೆ ಇಂದ್ರಾದಿಗಳ ಸಾಮರ್ಥ್ಯವೇ ಇವರ ಮೇಲೆ ನಡೆಯಲಿಲ್ಲ, ಅಥವಾ ಇಲ್ಲೇ ಇರುವೆನೆಂದರೆ, ಇವರು ಮಾಡುವ ದುರಾಚಾರಂಗಳಂ, ನುಡಿಯುವ ದುರ್ಭಾಷೆಗಳಂ ಎಂತು ಸೈರಿಸಲಿ! ಹೋಗದೇ ಇರುವೆನೇ, ಪೂರ್ವದೊಳ್ ಇಂದ್ರನ ಅಪ್ಪಣೆಯಂ ಮೀರಿದುದಕ್ಕೆ ಫಲವಂ ಅನುಭವಿಸುವುದೆ ಸಾಕ್ಷಿಯು, ಇನ್ನು ಇಲ್ಲಿ ಇರಬಾರದೆಂದು ನಿಶ್ಚೈಸಿ, ಅಮರಾವತಿಯು ಈ ಪರಿ ಆಗಬಹುದೇ ಎಂದು ತಿಳಿದು ಪುರಂದರನು ಮೊದಲೇ ಎಲ್ಲಿಯೋ ಓಡಿಹೋದನು, ಅಮರೈಶ್ವರ್ಯವು ಈ ಪಾಡಾಗುವುದಂ ನೋಡುವುದಕ್ಕೆ ನಾನು ಗುರಿಯಾಗಬಹುದೇ ಏನು ಪಾಪವಂ ಮಾಡಿರುವೆನೋ ಯಾವ ಋಷಿಯ ದೂಷಣೆಗೈದೆನೋ? ಯಾವ ಮಹಾ ಪುರುಷನ ಮನವಂ ನೋಯಿಸಿದೆನೋ, ಶಿವಶಿವ! ಎನುತ ಇದೊಂದನೂ ಮಾಡುವಂತೆ ಮನಕ್ಕೆ ತೋರುವುದಿಲ್ಲ ಪುರಂದರನ ಮಾತಂ ಉಲ್ಲಂಘಿಸಿದ ಪಾಪದಿಂದಲೇ ಗಜಕ್ಕೆ ಸಿಕ್ಕಿದ ಕಬ್ಬಿನಂತೆ ಸೀಗೇಬೇಲಿಯೊಳ್ ಸಿಕ್ಕಿದ ಬಾಳೆಯಂತೆ, ನನ್ನ ಬಾಳು ಇಂತಾಯಿತೆಂದು ಚಿಂತೆಪಡುತ್ತ, ಮತ್ತೂ ನನ್ನೊಡನೆ ಹುಟ್ಟಿದ ಐರಾವತ ಮೊದಲಾದ ವಸ್ತುಗಳು ಮೊದಲೇ ಪೋಗುವುದಕ್ಕೆ ಏನು ಪುಣ್ಯವಂ ಮಾಡಿದ್ದವೋ, ಎಂದಿಗೂ ದೈತ್ಯರ ಗಂಧವಂ ಅರಿಯದ ಅಮರಾವತಿಯೂ, ಇಂದ್ರನ ಐಶ್ವರ್ಯವೂ ಕೂಡ ದುಷ್ಟದಾನವರ ಪಾಲಾಗಬಹುದೆ? ದೇವತೆಗಳ ತರುಣಿಯರು

ರಕ್ಕಸರ ಪಾಳಿಯುರಾಗುವನು ಉಚಿತವೇ, ನಂದನವನವು ನಾಯಿನರಿಗಳಿಗೆ ಆಲಯವಾಗಿ ನಾಶವಾಗಬಹುದೇ, ದೇವತೆಗಳಿಗೆ ದಿವ್ಯಪದಾರ್ಥಂಗಳಂ ಕೊಡುವ ಕಲ್ಪವೃಕ್ಷವೆಂದು ಲೋಕದಲ್ಲಿ ಪ್ರಸಿದ್ಧಿಯಂ ಪಡೆದಿರುವ ನಾನು ಈ ದುಷ್ಟದಾನವರ ಆನೆ ಕುದುರೆಗಳಂ ಕಟ್ಟುವುದಕ್ಕೆ ಯೋಗ್ಯವಾದ ಕಾಡುಮರವಾಗಬಹುದೇ ಇನ್ನು ಎಂತು ಪೋಗಲೀ, ಏನು ಮಾಡಲೀ, ಎಷ್ಟೆಂದು ಸೈರಿಸಲೀ, ಯಾರಿಗೆ ಪೇಳಲೀ, ಎಂದು ತನ್ನೊಳ್ತಾನೇ ಚಿಂತಿಸುತ್ತಲಿರಲಾಗ ಒಂದು ಯೋಚನೆ ತೋರಿ ಮನದೋಳ್ ಯೋಚಿಸುತಿರ್ದುದು, ಅದೆಂತೆನೆ—ಈ ದುಷ್ಟದಾನವರು ತಮಗೆ ಅತ್ಯಂತ ಪ್ರಿಯಂಗಳಾದ, ಮದನಕರಂಗಳಾದ, ಪರಿಪರಿಗಳಾದ ಮದ್ಯಂಗಳಂ ಭಾರಿಭಾರಿಗೂ ಕೊಡೂ ಎಂದು ಕೇಳುತ್ತಿರುವರು, ಮತ್ತೆ ಕೆಲಂಬರು ಅದಂ ಕೊಡಲೀಸರು ಆದ್ದರಿಂ ಅವರು ಇಲ್ಲದೇ ಇರುವ ಸಮಯವಂ ನೋಡಿ ಇವರಿಗೆಲ್ಲಾ ಅಧಿಕವಾಗಿ ಮದಕರಂಗಳಾಗಿರುವ ಬಗೆಬಗೆಯಾದ ಮದ್ಯಗಳಂ ಕೊಟ್ಟು ದಾನವರನೆಲ್ಲ ಮೋಹಗೊಳಿಸಿ ಬಳಿಕ ಈ ಸ್ಥಳವಂ ಬಿಟ್ಟು ಹೋಗಬೇಕಲ್ಲದೇ ಮತ್ತೊಂದು ಯೋಚನೆಯು ಈ ದಾನವರ ಮುಂದೆ ಸಾಗಲಾರದೆಂದು ಚಿಂತಿಸುತ್ತಿರುವ ಸಮಯದೋಳ್ ಆ ಕಲ್ಪವೃಕ್ಷವಂ ಕಾದಿರ್ದ ತುಂಟ ರಾಕ್ಷಸರು ತಮಗೆ ಅಧಿಪತಿಗಳಾದ ಬಲಿ ಬಾಣ ಮೊದಲಾದವರ ಮಾತುಗಳಂ ವಿಚಾರಿ ಪಾರಿಜಾತ ವೃಕ್ಷವಂ ಕುರಿತು ಎಲೈ ವೃಕ್ಷವೇ! ನಿನ್ನಲ್ಲಿ ಹುಟ್ಟುವ ಪುಷ್ಪಂಗಳಿಂದ ಕೆಲಂಬರು ತಮ್ಮ ತಮ್ಮ ಮನೋಭೀಷ್ಟಂಗಳಂ ಪಡದರೆಂದು ಕೇಳುತಲಿರುವೆವು, ಮತ್ತೂ ನೀನು ಬೇಡಿದವರಿಗೆ ಬೇಕಾದ ವಸ್ತುಗಳಂ ಕೊಡುವೆ ಎಂದು ಪ್ರಸಿದ್ಧಿಯಂ ಪಡೆದಿರುವೆ, ಆದ್ದರಿಂ ನಾವು ನಮಗೆ ಬೇಕಾದ ವಸ್ತುವಂ ಕೇಳುವೆವು ಅದಂ ಕೊಟ್ಟು ನಮ್ಮಂ ಮನ್ನಿಸಿದೆಯಾದರೆ ನಿನ್ನ ಸುಮ್ಮನೆ ಬಿಡುವೆವು, ಇಲ್ಲವಿದ್ದರೆ ಕೊಡಲಿಗಳಿಂದ ಕಡಿದು ಕೊಂಬೆಗಳಂ ಸವರಿ ನಿನ್ನ ಹೆಸರಿಲ್ಲದಂತೆ ಮಾಡುವೆವು, ಮತ್ತೂ ನಿನಗೆ ಅಧಿಪತಿಯಾದ ದೇವೇಂದ್ರನು ನಮ್ಮ ಭಯದಿಂದ ಎಲ್ಲಿಯೋ ಓಡಿ ಪೋಗಿ ಅಡಗಿಕೊಂಡಿರುವನು, ಇಂತಲ್ಲದೇ ದಿಕ್ಪಾಲಕರೆಲ್ಲರೂ ದಿಕ್ಕೆಟ್ಟು ಪೋಗಿರುವರು, ಮತ್ತೂ ನಾವು ಸಿದ್ಧ ಸಾಧ್ಯರ ಸದ್ದುಗಳನ್ನಡಗಿಸಿ

ದೇವತೆಗಳಂ ಪಾಡುಪಡಿಸಿ, ಗಂಧರ್ವರ ಗರ್ವವಂ ಮುರಿದು, ಯಕ್ಷರಂ ಲಕ್ಷ್ಯಕ್ಕೆ ತಾರದೆ ಶಿಕ್ಷಿಸಿ, ಕಿನ್ನರರಂ ಕಿವಿ ಮೂಗುಗಳಂ ಕೊಯಿದು, ಚಾರಣರಂ ಚುಚ್ಚಿ, ಕಿಂಪುರುಷರಂ ಕಂಪಗೊಳಿಸಿರುವೆವು ಇಂತಿರುವ ನಮಗೆ ಸರಿಯೇನು ಲಕ್ಷ್ಯವು? ಇದನೆಲ್ಲವಂ ತಿಳಿದು ನಾವು ಕೇಳಿದುದಂ ಕೊಡುವುದೆನಲು, ಇದಂ ಕೇಳಿ ಪಾರಿಜಾತವು ತನ್ನ ಮನದೊಳ್ ತಾನು ಯೋಚಿಸಿದ ಕಾರ್ಯವು ಕೈಗೂಡುವುದಕ್ಕೆ ಇದೇ ಸಮಯವೆಂದು ತಿಳಿದು ಆ ದಾನವರು ಕೇಳಿದಂತೆ ಬೇಕಾದ ವಸ್ತುಗಳಂ ಬಹಳವಾಗಿ ಕೊಡಲು ಅದಂ ನೋಡಿ ಆ ದಾನವರೆಲ್ಲರೂ ಒಂದಾಗಿ ಮದ್ಯಪಾನವನ್ಗೈದು ನಿಮಿಷ ಮಾತ್ರದೊಳ್ ವಿಷವೇರಿದಂತೆ ಮದವು ತಲೆಗೇರಿ ಮತಿಗೆಟ್ಟು, ಕಣ್ಣುಗಳು ಕಾಣದಂತೆ, ಕಿವಿಗಳು ಕೇಳದಂತೆ, ಮೂಕರಂತಾಗಲು, ಅವರೊಳ್ ಕೆಲವರು ಧಟ್ಟ ಧಟ್ಟಾಗಿ ಬೀಳುವರು, ಕೆಲವರು ಕೂಗಲು ಮಾತನಾಡುತ ಕಣ್ಣುಗಳಂ ಮುಚ್ಚಿ ಕೈಸನ್ನೆಗಳಂ ಮಾಡುವರು. ಕೆಲವರು ಆ ಕಲ್ಪತರುವಿನ ಕೊಂಬೆಗಳಂ ಹಿಡಿದು ಜೋಲುತ್ತ ಬಾಯಿಗೆ ಬಂದಂತೆ ಬೊಗಳುತ್ತಿರುವರು. ಮತ್ತೆ ಕೆಲವರು ಮರದ ತುದಿಗೇರಿ ತಲೆ ತಿರಿಗಿ, ತಲೆ ಕೆಳಗಾಗಿ ಬೀಳುವರು. ಇಂತು ಅಲ್ಲಿರುವ ದಾನವರೆಲ್ಲ ಒಂದೊಂದು ಪರಿಯಿಂದ ಹಿಂದು ಮುಂದರಿಯದೆ ಪ್ರಜ್ಞೆತಪ್ಪಿ ಇರುತ್ತಿರಲು, ಆಗಲಾ ಕಲ್ಪತರುವು ಇದನೆಲ್ಲವಂ ನೋಡಿ ಇಲ್ಲಿಂದ ಪೋಗುವುದಕ್ಕೆ ಇದೇ ಸಮಯವೆಂದು ತೆರಳಿ ಮೇಲಿರುವರು ತಿಳಿಯದಂತೆ ಜೋಲಾಡುವರು ನೋಡದಂತೆ ಬಿದ್ದವರು ಸದ್ದು ಕೇಳದಂತೆ, ನಡೆಯುವರು ತಡೆಯದಂತೆ, ಪುರದೊಳಿರುವರು ಅರಿಯದಂತೆ ಬರುತ್ತ, ಹಾ! ನಂದನವನದ ಪಾಡು ಇಂತಾದುದೇ ಎಂದು ತನ್ನೊಳ್ತಾನೆ ಚಿಂತಿಸುತ್ತ, ದೈವಗತಿಯಿಂದ ಈ ದುಷ್ಟ ದಾನವರ ಕೈಗಳಿಂದ ಬಿಡಿಸಿಕೊಂಡು ಬಂದುದೇ ಸಾಕು. ಇಲ್ಲಿಂದ ಇನ್ನೆಲ್ಲಿಗೆ ಪೋಗಲಿ? ಇಂದ್ರನು ಇನ್ನೆಲ್ಲಿ ಕಾಣಲಿ? ಎನುತ ತನ್ನೊಳ್ತಾನೆ ಯೋಚಿಸಿ, ಮೊದಲು ಭೂಲೋಕಕ್ಕೆ ಬರುವುದೆಂದು ಇಂದ್ರನು ಆಜ್ಞಾಪಿಸಿದ ಪರಿಯಂ ನೋಡಿದರೆ ತಾನು ಭೂಲೋಕದೊಳವತರಿಸುವುದಾಗಿ ಆಲೋಚಿಸಿರುವಂತೆ ತೋರುತಲಿದೆ. ಭೂಲೋಕದೊಳಾತನು ಯಾವ ದ್ವೀಪದೊಳ್ ಪುಟ್ಟಿರುವನೋ ತಿಳಿಯಲಿಲ್ಲ. ಶಾಕದ್ವೀ

ಪದೊಳಿರುವದೆಂದು ನನಗೆ ನಿಯಮಿಸಿರುವವರಿಂದ ಅಲ್ಲಿಯೇ ನಾನುಇರುತ್ತಿದ್ದರೆ ಒಂದಾನೊಂದು ಕಾಲದಲ್ಲಾದರೂ ಇಂದ್ರನದರ್ಶನವಾಗುವದರಲ್ಲಿ ಸಂದೇಹವಿಲ್ಲವೆಂದು ನಿಶ್ಚಯಿಸುವಾಗಿ ತಿಳಿದು ಭೂಲೋಕವಂ ಕುರಿತು ಬರಲುದ್ಯೋಗಿಸಿ, ಆ ದಾನವರು ಬೆಂಬತ್ತಿದು ಬರುವರೋ ಎಂದು ಭಯದಿಂದ ಸುತ್ತಲೂ ನೋಡುತ ಅವರವರ ಪರಾಕ್ರಮವಂ ಪರಿಭಾವಿಸಿ, ಎಲ್ಲಿಯೂ ಇಲ್ಲದ ಸಾಹಸವು ಇವರಿಗೆ ಎಲ್ಲಿಂದ ಬಂತು? ಅಥವಾ ಇವರಿಂದೇನು? ಆ ಮಹಾಪುರುಷನಾದ ದೂರ್ವಾಸನ ಶಾಪವೇ ಇವರೊಳೆಲ್ಲಕ್ಕು ಈ ಪರಿಯಾಗಿ ಬಾಧಿಸುವದೆನುತ ಬರುವ ಮಾರ್ಗದೊಳ್ದಾನವರ ದುರ್ನಡತೆಗಳಂ ಸಹಿಸಲಾರದೆ, ತನಗೆ ಪತಿಯಾದ ಪರಮೇಶ್ವರನಂ ಕುರಿತು ಮೊರೆಇಡುವಳೋ ಎಂಬಂತೆ ಘೋರೆಂದು ಹರಿಯುವ ದೇವಗಂಗೆಯ ಪ್ರವಾಹದಲ್ಲಿ ತೇಲಿಬರುವ ತಲೆ ಬುರುಡೆಗಳಿಂ, ಮಾಂಸ ಖಂಡಂಗಳಿಂ, ಎಲುವುಗಳಿಂ ಮತ್ತು ಆನೆ ಕುದುರೆಗಳ ತೊಳದ ಕಂಪುಗಳಿಂ, ಇನ್ನು ಬಗೆಬಗೆಗಳಾದ ದುರ್ಗಂಧಗಳಿಂ ಕೂಡಿರುವ ಉದಕವಂ ಕಂಡು ಅದಂ ಕುರಿತು ಎಲೈ ತಾಯೆ! ಪರಮೇಶ್ವರನ ಜಟೆಗಳಂ ಮನೆಯಂ ಮಾಡಿ, ಇಂದ್ರ ಮೊದಲಾದ ದೇವತೆಗಳಿಗೂ, ನಾರದ ಮೊದಲಾದ ದೇವಋಷಿಗಳಿಗೂ, ಕೂಡ ಸ್ನಾನ ಪಾನ ಯೋಗ್ಯವಾದ ಉದಕ ಉಳ್ಳವಳಾಗಿ, ಸ್ವರ್ಗ ಮರ್ತ್ಯ, ಪಾತಾಳಗಳೆಂಬ ಮೂರು ಲೋಕಂಗಳ ಪಾಪವಂ ಪರಿಹರಿಸುವ ಪ್ರವಾಹರೂಪವನಾಗಿರುವ ಶ್ರೀಮನ್ನಾರಾಯಣನ ಕರುಣಾರಸವೋ ಎಂಬಂತಿರುವ ನಿನಗೂ ಕೂಡ ಇಂತಿರುವ ಭಂಗಬರಬಹುದೇ ಎಂದು ಕಂಬನಿಯಂ ತುಂಬಿ ವಂದನೆಯಂ ಮಾಡಿ ವೇಗದಿಂ ಬರುತ್ತಿರಲಾಗ ಆ ಪಾರಿಜಾತ ತರುವು ಎಂತಿರ್ದುದೆಂದೊಡೆ, ಆ ದುಷ್ಟದನುಜರ ಭಯದಿಂದ ಆ ಸ್ಥಳವಂ ಬಿಟ್ಟು ಪೋಗುವ ಅಮರಾವತಿ ಪಟ್ಟಣವೋ ಎಂಬಂತೆಯೂ, ಇಂದ್ರನು ಈ ಪರಿಯಾದುದಂ ನೋಡಿ ತಾಳಲಾರದೆ ಆತನಂ ಲೋಕ ಲೋಕದೊಳೆಲ್ಲಕ್ಕು ಹುಡುಕಿ ಎಲ್ಲಿಯೂ ಕಾಣದೆ ಭೂಲೋಕದೊಳ್ನೋಡುವೆನೆಂದು ಇಳಿದು ಬರುತಲಿರುವ ವೈಜಯಂತವೆಂಬ ಉಪ್ಪರಿಗೆಯೋ ಎಂಬಂತೆಯೂ, ಮತ್ತು ದಾನವರ ದರ್ಪವಂ ತಾಳಲಾರದೆ ತನಗೆ ಸಖಿಯಾದ ಇಂದ್ರನ ಐಶ್ವರ್ಯಲಕ್ಷ್ಮಿಯು ಮೊದಲೇ

ಎಲ್ಲಿಯೋ ತೆರಳಿ ಪೋಗಿರುವಳು. ನಾನು ಇಲ್ಲಿ ಇನ್ನು ಮೇಲೆ ಇರಬಾ
ರದು. ಭೂಮಿಯಲ್ಲಿ ಎಲ್ಲಾದರೂ ಸಂದಸ ವಸವಂತಿರುವ ಒಂದು ವನವಂ
ಪೊಕ್ಕು ಕಾಲವಂ ಕಳೆಯುವಾ ಎಂದು ಪೋಗುವ ವನದೇವತೆಯೋ
ಎಂಬಂತೆಯೂ, ಮತ್ತೂ ಆ ದುಷ್ಟ ದಾನವರ ಸಮೂಹವು ದೇವತೆಗಳ
ತರುಣಿಯರಂ ಪರಿಪರಿಯಾಗಿ ಭಂಗ ಪಡಿಸುವದರಿಂದ ಆ ತರುಣಿಯರೆ
ಲ್ಲರೂ ಆ ಬಾಧೆಯಂ ತಾಳಲಾರದೆ ಒಂದೇ ಕಾಲದೋಳ್ ಭೋರೆಂದು
ಮೊರೆ ಇಡುವದರಿಂದಲೂ, ಇಂತಲ್ಲದೆ ದಾನವರೆಲ್ಲರೂ ಒಟ್ಟು ಕೂಡಿ ಕೋ
ಪದಿಂದ ಆಭಟಿಪನ್ನೈದುವದರಿಂದಲೂ ಕೂಡೆ ಬ್ರಹ್ಮಾಂಡ ಕಟಾ
ಹವು ಶಬ್ದಮಯವಾಗಿ ಘಟ್ಟೆಂದು ಒಡೆಯಲಾಗ ಬಹಿರಾವರಣವಾದ
ಅಗ್ನಿಯು ಭೂಲೋಕದೋಳ್ ಕಾಣುವ ಮಹಾ ಶೂರನಾದ ಸುಗಂಧ
ರಾಜೇಂದ್ರನ ಪ್ರತಾಪಾಗ್ನಿಯಂ ನೋಡಿ ಇದೇನಚ್ಚರಿಯು? ನನಗಿಂತ
ಅಧಿಕವಾಗಿ ಪ್ರಕಾಶವಾಗಿರುವುದು. ಅದಂ ನೋಡಬೇಕೆಂದು ಬರುವ ಆ
ಅಗ್ನಿಯೋ ಎಂಬಂತೆಯೂ, ಇಂತಲ್ಲದೆ ಚತುರ್ಮುಖನ ಪತ್ನಿಯಾದ
ಸರಸ್ವತಿಯು ಸತ್ಯಲೋಕದಿಂ ಹೊರಟು ಭೂಲೋಕವಂ ಕುರಿತು ಬಂ
ದು ಸಂಚರಿಸುತ್ತ, ಅಲ್ಲಿ ಸುಗಂಧರಾಜೇಂದ್ರನ ಮನೋಹರವಾದ ಮು
ಖಕಮಲವಂ ನೋಡಿ, ತನ್ನ ಪತಿಯಾದ ಬ್ರಹ್ಮನಿಗೆ ಕಮಲವು ಪೀಠ
ವಾಗಿರುವುದು. ಆ ಪರಿಯಾಗಿ ನಾನೂ ಒಂದು ಕಮಲಪೀಠವಂ ಆಶ್ರಯಿ
ಸಬೇಕೆಂಬ ಕುತೂಹಲದಿಂದಲೋ ಎಂಬಂತೆ ಸುಗಂಧರಾಜೇಂದ್ರನ
ಮುಖಕಮಲವನ್ನೈದಿ ಅಲ್ಲಿಯೇ ವಾಸಗೊಂಡಿರಲಾಗ, ಚತುರ್ಮುಖನು
ತನ್ನ ಪತ್ನಿಯಾದ ಸರಸ್ವತಿಯಂ ಕಾಣದೆ, ತನ್ನ ವಾಹನಂಗಳಾದ ರಾಜ
ಹಂಸಂಗಳಂ ಕರದು ಸರಸ್ವತಿಯು ಎಲ್ಲಿರುವಳೋ ಅದಂ ನೋಡಿ ಬರು
ವುದೆಂದು ಅಪ್ಪಣೆಯಂ ಕೊಡಲಾಗ, ಆ ಚತುರ್ಮುಖನ ಪತ್ನಿಯಾದ
ಸರಸ್ವತಿಯಂ ಎಲ್ಲೆಲ್ಲಿಯೂ ಹುಡುಕಿ ಭೂಲೋಕದೋಳ್ ಹುಡುಕ
ಲೋಸುಗ ಒಟ್ಟು ಗೂಡಿ ಬರುತಲಿರುವ ರಾಜಹಂಸಗಳ ತಂಡವೋ
ಎಂಬಂತೆಯೂ ಇಂದ್ರನ ಐಶ್ವರ್ಯವು ಇಂತಾದುದಂ, ಕ್ಷೀರಸಾಗರ
ದೊಳ್ ಸುಖನಿದ್ರೆಯುಗೈವ, ಕರುಣಾಶಾಲಿಯಾದ ಶ್ರೀಮನ್ನಾರಾಯ
ಣಂಗೆ ವಿಜ್ಞಾಪಿಸಿ ಆ ದುಷ್ಟ ದಾನವರ ಬಾಧೆಯಂ ಬಿಡಿಸೆಂದು ಅವನ

ಪಾಪಂಗಳಂ ಪ್ರೋಜಿಸಲೋಸುಗ. ನಾನಾ ಬಣ್ಣದ ಸಾವಿರಾರು ಸುವರ್ಣ ಕಮಲಂಗಳಂ ಕೊಂಡು ಬರುವ ದೇವಗಂಗೆಯೋ? ಎಂಬಂತೆಯೂ, ಮತ್ತು ತನ್ನಂ ನಾಶಗೊಳಿಸುವ ದಾನವರ ಬಾಧೆಯಂ ಸಹಿಸಲಾರದೆ ಸ್ವರ್ಗ ಮೊದಲಾದ ಲೋಕಂಗಳೊಳ್ ನಿಲ್ಲುವುದಕ್ಕೆ ಅವಕಾಶವಿಲ್ಲದೆ ಭೂಮಿಯೊಳ್ ಸುಗಂಧರಾಜೇಂದ್ರನ ಕೀರ್ತಿಯು ವ್ಯಾಪಿಸಿ ಪ್ರಕಾಶಿಸುತ್ತಿರುವನಂ ನೋಡಿ ಇವರೊಡನೆ ಸಖ್ಯವಂ ಮಾಡಿ ಸೌಖ್ಯದಿಂವಿರಬೇಕೆಂಬ ಅಭಿಲಾಷೆಯಿಂದ ಒಟ್ಟುಗೂಡಿ ಬರುವ ದಿಕ್ಪಾಲಕರ ಕೀರ್ತಿಮಂಡಲವೋ? ಎಂಬಂತೆಯೂ, ಏಕಕಾಲದೊಳುದಯಿಸಿರುವ ಸಾವಿರಾರು ಸೂರ್ಯಚಂದ್ರಮಂಡಲಗಳ ತಂಡವೋ ಎಂಬಂತೆಯೂ ಪ್ರಕಾಶಿಸುತಲಿರುವ, ವಿಚಿತ್ರಫಲ ಪುಷ್ಪಂಗಳಿಂದ ಪರಿವೃತವಾದ ಆ ಪಾರಿಜಾತತರುವು ಭೂಲೋಕವಲ್ಲಿರುವ ಶಾಕದ್ವೀಪವಂ ಕುರಿತು ಬರುತ್ತಿರಲು ಆ ದ್ವೀಪಂಗಳೊಳ್ ಇರುವ ಜನಂಗಳಲ್ಲಿ ಕೆಲವರು ಮೂರು ವೇದಂಗಳೇ ಮೂರು ಕೊಂಬೆಗಳಾಗಿ, ಉಪನಿಷತ್ತುಗಳೇ ಬಹಳವಾದ ಕವಲುಕೊನೆಗಳಾಗಿ, ಒಂದೊಂದು ಕೊನೆಗೆ ಒಂದೊಂದು ಬಗೆಯಾದ ಮತಗಳೇ ಅನೇಕ ವಿಧವಾದ ಪುಷ್ಪಂಗಳಾಗಿ, ಪುರುಷಾರ್ಥಂಗಳೇ ಫಲರೂಪಗಳಾಗಿ, ವೃಕ್ಷಾಕಾರವಂ ತಾಳಿದ ವೇದಪುರುಷನೋ? ಎಂಬಂತೆಯೂ, ಮತ್ತೆ ಕೆಲಂಬರು ಈ ವೃಕ್ಷದಿಂದುದುರಿದ ಬಿಂದುಪುಷ್ಪವುಆಕಾಶದಲ್ಲಿನಿಂತುಚಂದ್ರನೆನಿಸಿಕೊಂಬುದೋ? ಎಂದು ಹೇಳುವರು. ಇನ್ನು ಕೆಲವರು ಈ ತರುವಿನಿಂದುದುರಿದ ಮೊಗ್ಗುಗಳೇ ಗಗನದೊಳ್ಕಂತು ನಕ್ಷತ್ರಗಳೆನಿಸಿಕೊಂಡವೋ? ಮತ್ತು ಇವರ ಪುಷ್ಪಂಗಳಿಂದ ಮಕರಂದಗಳು ಸುರಿದು ಮಡುಹುಗಟ್ಟಿ ಅದೇ ಹಾಲುಗಡಲೆನಿಸಿಕೊಂಡುದೋ? ಇವರ ಹುವ್ವುಗಳ ಧೂಳುಗಳೇ ಭೂಮಿಯೊಳ್ ಬಿದ್ದು ರಾಶಿಯಾಗಿ ಕೈಲಾಸಪರ್ವತವೆನಿಸಿಕೊಂಡು ಪರಶಿವನಿಗೆ ವಾಸಯೋಗ್ಯವಾದುದೋ? ಎನ್ನುವರು. ಮತ್ತೆ ಕೆಲಂಬರು ಪರಬ್ರಹ್ಮವೇ ಬುಡವಾಗಿ, ಮೂಲಪ್ರಕೃತಿಯೇ ಮೂಲಶಾಖವಾಗಿ, ಮೂರು ಮೂರ್ತಿಗಳೇ ಮೂರು ಕೊಂಬೆಗಳಾಗಿ, ದಿಕ್ಪಾಲಕರೇ ಸಣ್ಣ ಕೊನೆಗಳಾಗಿ, ದೇವತೆಗಳೇ ಎಲೆಗಳಾಗಿ, ಮನುಗಳೇ ಚಿಗುರುಗಳಾಗಿ, ಋಷಿಗಳೇ ಪುಷ್ಪಗಳಾಗಿ, ಮೋಕ್ಷವೇ ಫಲರೂಪವಾಗಿ, ಬ್ರಹ್ಮಾಂ

ಡವೇ ವೃಕ್ಷರೂಪವಾಗಿ ಬರುವದೋ ಎನ್ನುವರು. ಇಂತು ಪಾರಿಜಾತವು ಬರುತ್ತಿರಲೂ,

ಅತ್ತಲಾ ನಂದನವನದೋಳ್ ಕೆಲಂಬರು ದಾನವರು ಎಚ್ಚರಗೊಂಡು ಪಾರಿಜಾತ ತರುವಂ ಕಾಣದೆ ಭಯಗೊಂಡು ಇನ್ನೇನು ಗತಿ ಎನುತ, ಅಧಿಪತಿಯಾದವರ ಮಾತು ಮೀರಿ ಮುಪ್ಪಾಪಂ ಹೇರಿ ತಾರುವಾರಾಗಿ ಬೀಳಲು. ಯಾರಿಗೂ ತಿಳಿಯುವಂತೆ ಪಾರಿಜಾತ ತರುವು ಮೋಸವಂ ಮಾಡಿ ಓಡಿ ಪೋದುದು. ಮತ್ತೂ ಬಲಿ ಮೊದಲಾದವರಿಗೆ ಏನು ಹೇಳಬೇಕು, ಹುಡುಗರೊಡಗೂಡಿ ಈ ಕೇಡಾಯಿತೆನುತ ತಮಗೆ ತಾವೆ ಬೈದುಕೊಳ್ಳುತ, ಗಡಗಡನೆ ನಡುಗುತ ಅಲ್ಲಲ್ಲಿ ಹುಡುಕುತ ಬರುತ್ತಿರಲೂ, ಮತ್ತೆ ಕೆಲವರು ಅಮರಾವತಿಯನೈದಿ ಬಲಿಬಾಣ ಮೊದಲಾದವರಿಗೆ ಪೇಳಲೂ. ಅವರೆಲ್ಲರೂ ಕೋಪಗೊಂಡು ಭಟರಂ ಕುರಿತು ಪಾರಿಜಾತವಂ ಪಿಡಿದು ತರುವುದೆಂದು ಕಟ್ಟು ಮಾಡಲಾ ಬಲಶಾಲಿಗಳಾದ ಭಟರು ಓಡ್ಯೋಡಿ ಬರುತ ದೂರದೋಳ್ ಬರುತಲಿರುವ ಪಾರಿಜಾತವಂ ಕಂಡು ಅಲ್ಲಲ್ಲಿ ಹಡುಕುವರಂ ತೂಗಿ ಕರೆಯುತ ಬೇಗದಿಂ ಬಂದು ಸುತ್ತು ವರಿವರದೆಂತೆನೆ-ದೀಪವು ಸುಡುವುದಂ ತಿಳಿಯದೆ ಅದರೋಳ್ ಬೀಳುವ ಹುಳುಗಳಂತೆಯು, ಸಿಂಹವಂ ಕಂಡು ಸುತ್ತಲೂ ನಿಂತು ಬೊಗುಳುವ ನಾಯಿಗಳಂತೆಯು, ಕೈಲಾಸ ಪರ್ವತವನೆತ್ತಲೋಸುಗ ಬರುವ ರಾವಣಾಸುರನ ತೋಳುಗಳಂತೆಯೂ, ಅಂಧಕಾರವು ಬ್ರಹ್ಮನಂ ಕುರಿತು ತಪವುಗೈದು ಅನೇಕ ಶರೀರಂಗಳಂ ತಾಳಿ ಪಾರಿಜಾತವೆನುವ ಸೂರ್ಯನಂ ಮುಸುಗಲೋಸುಗ ಬರುವದೋ ಎಂಬಂತೆಯು, ಪಾರಿಜಾತ ಪುಷ್ಪಂಗಳೆಂಬ ಚಂದ್ರಮಂಡಲಂಗಳಂ ಗ್ರಾಸಗೊಳಲೋಸುಗ ಬರುವ ರಾಹುಗಳೆಂಬಂತೆಯು ತುಡುಕಿ ಬಂದು ಆ ಪಾರಿಜಾತವಂ ರೋಷದಿಂ ಬಳಸಿ ಕೊಂಬೆಗಳಂ ಪಿಡಿದು ಸಳೆಯಲಾ ಪಾರಿಜಾತವು ಇನ್ನು ಸುಮ್ಮನಿರಬಾರದೆಂದು ವಾಯು ವೈನತೇಯರ ವೇಗವಂ ವಹಿಸಿ ಪಿಡಿದವರಂ ಕೊಂದು, ದಾನವರಿಗೆ ಧಕ್ಕದೆ, ಉಕ್ಕುವ ಕೋಪದಿಂ ರಕ್ಕಸರಂ ಅಲ್ಲಲ್ಲಿಯೇ ಸಿಕ್ಕಿಸುತ ಬಂದು, ಮುವ್ವತ್ತೆರಡು ಲಕ್ಷ ಯೋಜನ ವಿಸ್ತಾರವಾದ ಕ್ಷೀರಸಮುದ್ರದಿಂ ಸುತ್ತುವರಿದು, ಇದೇ ವಿಸ್ತಾ

ರವುಳ್ಳದ್ದಾಗಿ, ಭವ್ಯರಾಯನಿಂ ಪಾಲಿತವಾಗಿ, ಈತನ ತನಯರಾದ ಜ
ಲರ ಕುಮಾರ, ಸುಕುಮಾರ, ಮಣಿಚಕ, ಕುಸುಮೋದಕ, ಸುಮೋ
ದಕ, ಮಹಾದ್ರುಮರೆಂಬ ರಾಯರುಗಳ ಹೆಸರುಗಳುಳ್ಳ ಏಳು ಖಂಡಗ
ಳಿಂ, ಉದಯಗಿರಿ, ರೈವತಕ, ಶ್ಯಾಮ, ಅಸ್ತಗಿರಿ, ಅಂಬಿಕ, ರಮ್ಯ,
ಕೇಸರಿಗಳೆಂಬ ಸಪ್ತಕುಲಾಚಲಂಗಳಿಂ, ಸುಕುಮಾರೀ, ನಳಿನೀ, ರೇ
ಣುಕಾ, ಇಕ್ಷು, ಧೇನುಕಾ, ಗಭಸ್ತಿನೀ ಎಂಬ ಸಪ್ತಮಹಾನದಿಗಳಿಂ
ಪರಿವೃತವಾಗಿ, ಪರಮಪಾವನವಾದ ಶಾಕದ್ವೀಪವಂ ನೋಡಿ ಸಂತೋ
ಷಗೊಂಡು, ಅಲ್ಲಿ ಮೊಲ್ಲೆ, ಮಲ್ಲಿಗೆ, ಜಾಜಿ ಮೊದಲಾದ ಬಳ್ಳಿಗಳಿಂ, ಸುರಗಿ,
ಸುರಹೊನ್ನೆ, ಸಂಪಿಗೆ, ಮಾವು, ಮಾವಳ, ಮೊದಲಾದ ಮರಗಳಿಂ,
ಪರಿಪರಿ ಹೂವಿನ ಗಿಡಗಳಿಂ, ಅನೇಕ ಸರೋವರಗಳಿಂ, ಸಿಂಹ, ಶರಭ,
ಸಾಳ್ವ ಮೊದಲಾದ ಮೃಗಗಳಿಂ, ಶುಕ, ಪಿಕ, ಮಯೂರ ಮೊದಲಾದ
ಪಕ್ಷಿಗಳಿಂ ಪರಿವೃತವಾದ ಮನೋಹರವಾದ ವನದೊಳೊಂದು ಸ್ಥಳವಂ
ನೋಡಿ, ಆಕಾಶದಲ್ಲಿ ನಿಂತು ವೃಕ್ಷಕೊಡೆಹಿದಾನವರಂ ಕೆಡಹಲು, ಆ
ದಾನವರು, ಘಾಳಯಿಂ ಉದುರಿದ ತರಗೆಲೆಗಳಂತೆ ಭೂಮಿಯೊಳ್ ಬಿ
ದ್ದು ಮೂರ್ಛೆಗೊಳಲು, ಅದಂ ನೋಡಿ ಪಾರಿಜಾತವು ಇದೇ ಸಮ
ಯನೆಂದು ಮಂದರ ಪರ್ವತದಂತೆ ಭಾರವಂ ವಹಿಸಿ, ಪಾತಾಳದಲ್ಲಿರುವ
ರಾಕ್ಷಸರಿಗೆ ಈ ವರ್ತಮಾನವಂ ಪೇಳಲೋಸುಗ ಕಳುಹಿಸಿತೋ? ಎಂ
ಬಂತೆ ಪರ್ವತಾಕಾರವಾದ ದಾನವರ ರಾಸಿಯಂ ತುಳಿದು, ತಿರುಗಿ ಏಳ
ದಂತೆ ಬೇರುಗಳೆಂಬ ಪಾಶಗಳಿಂ ಬಿಗಿದು ರಸಾತಲವಂ ಸೇರಿಸಿ ಸಂತೋ
ಷದಿಂ ನಿಂದಿರಲೂ. ಈ ದಾನವರ ರಕ್ತಮಾಂಸ ಮೊದಲಾದ ಸಪ್ತಧಾತು
ಗಳಿಂದ ದೋಹದವಂ ಮಾಡಿದಂತಾಗಿ, ಅಲ್ಲಿರುವ ಮರಂಗಳೆಲ್ಲ ಆ ಪಾರಿ
ಜಾತದ ಪ್ರಭಾವದಿಂದ ಪರಿಪರಿಯಾದ ಫಲಂಗಳಿಂ, ವಿಚಿತ್ರಂಗಳಾದ ಪು
ಷ್ಪಂಗಳಿಂ ಕೂಡಿ ಭೂಮಿದೇವಿಯು ಸಂತೋಷದಿಂ ನಗುವಳೋ? ಎಂ
ಬಂತೆ ತೋರುತ್ತಿರಲೂ. ಆಗ ಪಾರಿಜಾತವು ಯಾರಿಂದಲೂ ಅಲ್ಲಾಡಿ
ಸಲಶಕ್ಯವಾಗಿ ಪಾತಾಳ ಪರ್ಯಂತ ಬೇರುಗಳಿಂ ವ್ಯಾಪಿಸಿ, ಶಾಕದ್ವೀಪದ
ಪುಣ್ಯವೇ ಈ ರೂಪದಿಂ ಬಂದಿರುವದೋ? ಎಂಬಂತೆಯು, ಸಕಲ ಲೋ
ಕಗಳ ತೇಜಸ್ಸುಗಳೆಲ್ಲ ಒಟ್ಟುಗೂಡಿ ವೃಕ್ಷಾಕಾರವಂ ತಾಳಿ ಬಂದು

ನಿಂದಮದೋ? ಎಂಬಂತೆಯು, ಲೋಕಂಗಳಂ ಬೆಳಗುತ್ತ, ವಾಸನೆಯಿಂದ ಪ್ರಪಂಚವೆಲ್ಲವಂ ಪರಿಮಳಗೊಳಿಸುತ್ತ, ಸಂತೋಷಪಡಿಸುತ್ತಿರಲು. ಪೂರ್ವದಲ್ಲಿ ಪುರಂದರ ಮೊದಲಾದ ಸುರರ ಸಮೂಹದಿಂದ ಪರಾಜಿತನಾಗಿ ಓಡಿಬಂದ ಲೋಹಿತಾಕ್ಷನೆಂಬೋಪ್ಪ ದನುಜನು ಹೇಮಕೂಟವೆಂಬ ಕುಲಪರ್ವತದ ಗುಹಾಂತರಾಳದೊಳ್ ಗೂಢವಾಗಿ ಹತ್ತು ಸಾವಿರ ವರ್ಷ ತಪವಂ ಮಾಡಿ ಕಮಲ ಸಂಭವನಂ ಸಂತೋಷಪಡಿಸಿ, ದೇವ ದಾನವ ಮನುಷ್ಯರಿಂದ ಪರಾಜಯವಿಲ್ಲದಂತೆ ವರವಂ ಪಡೆದು, ಸ್ಫುರೆದುರಟಿದ ಸರ್ಪದಂತೆ ದರ್ಪದಿಂ ಮೆರೆಯುತ್ತ, ಸ್ವರ್ಗವಂ ಸೂರೆಗೊಳುವೆನೆಂದು ಶಾಕದ್ವೀಪದೊಳ್ ಬರುತ್ತಲಿರುವಾಗ, ದಾರಿಯಲ್ಲಿ ಪಾರಿಜಾತ ಪುಷ್ಪಗಳ ಪರಿಮಳದಿಂ ಕೂಡಿ ಮೆಲ್ಲನೆ ಬೀಸುವ ಘಾಳಿಯಿಂದ ವಾಸನೆಯಂ ತಿಳಿದು ಇದೇನಚ್ಚರಿಯು? ಭೂಲೋಕದೊಳ್ ಏನೋ ವಿಚಿತ್ರವಿರುವದೆಂದು ಗಗನದಲ್ಲಿಯೇ ನಿಂತು ನೋಡುತ್ತಿರಲಾಗ ಮುಂದಣೊಳ್ ಪಾರಿಜಾತವೃಕ್ಷವು ಕಾಣಬರಲು, ಅದಂ ನೋಡಿ ಸಂತೋಷದಿಂ ಓಡೋಡಿ ಬರುತ್ತ ಆ ಪಾರಿಜಾತವೃಕ್ಷದ ಸಮೀಪವನೈದಲು ಅಲ್ಲಿ ಆ ವೃಕ್ಷದ ದೆಸೆಯಿಂದ ಹತಶೇಷರಾದ ಕೆಲರು ದಾನವರು ಲೋಹಿತಾಕ್ಷನಂ ಕಂಡು ಭಯಗೊಂಡು ಬೇಗದಿಂ ಬಂದು ಅವನ ಅಡಿಗಳಿಗೆರಗಿ ಆ ವೃಕ್ಷದ ವೃತ್ತಾಂತವೆಲ್ಲವಂ ವಿಸ್ತಾರವಾಗಿ ಹೇಳಲಾಗ ಆ ಲೋಹಿತಾಕ್ಷನೆಂಬ ದನುಜನು ಆ ರಾಕ್ಷಸರ ವಚನವಂ ಕೇಳಿ ಲಕ್ಷ್ಯವಿಲ್ಲದೇ ಈ ಕ್ಷಣದೊಳ್ ಈ ವೃಕ್ಷವಂ ಕೀಳುವೆನೆಂದು, ಮಂದರ ಪರ್ವತವಂ ಹಿಡಿದು ಹಾಲ್ಗಡಲಂ ಕಡೆಯುವ ವಾಲಿಯಂತೆ ಆ ಪಾರಿಜಾತ ವೃಕ್ಷವಂ ಹಿಡಿದು ಬಗೆಬಗೆಯಾಗಿ ಬಾಧಿಸುತ್ತ ಸೆಳೆದು ತಿರಿಗಿಸಿದರೂ ಅಲ್ಲಾಡದೇ ವಜ್ರಸ್ತಂಭದಂತೆ ನಿಂತಿರುವುದಂ ಕಂಡು, ತನ್ನ ಸಾಹಸವು, ಉಪಾಯವೂ, ಮಾಯೆಯೂ ಕೂಡ ನಡೆಯದೆ ಕೈನೊಂದು ಬಳಲಿ ಬಾಯಾರ್ದಿ ಬೆಸರೇರಿ ಕಂಗೆಟ್ಟು ಕಳೆಗುಂದಿ ಏನು ಮಾಡುವೆನೆಂದು ಚಿಂತಿಸುತ್ತ, ಮುಂದೋರದೆ ಈ ತುಂಟರಾದ ದಾನವ ಭಂಟರು ನಂಟರೆಂದಿವರ ಮಾತಂ ಕೇಳಿ ಮೋಸವಾಯಿತೆನುತ್ತ, ಈ ಪಾರಿಜಾತವೃಕ್ಷವು ನನಗೆ ಅಧೀನವಾಗಿರಬೇಕಾದರೆ ವಿನಯದಿಂದಿರಬೇಕಲ್ಲದೆ ಇದರೊಡನೆ ಹಾರ್ಯಾಡುವುದು ಯುಕ್ತವಲ್ಲ.

ಮತ್ತೂ ಮಹಾಮಹಿಮೆ ಉಳ್ಳದ್ದಾಗಿ ತೋರುತಲಿಹೆ, ಆದ್ದರಿಂ ಮತ್ತೊಬ್ಬರಿಗೆ ಅವಕಾಶವಿಲ್ಲದಂತೆ ಈ ಸ್ಥಳವಂ ಆಕ್ರಮಿಸಿ ಪಟ್ಟಣವಂ ಕಟ್ಟಿಕೊಂಡು ಉಪಾಯದಿಂ ಪ್ರೋತ್ಸಾಹಿಸುತ ಇವರಿಂದ ಬೇಕಾದ ವಸ್ತುಗಳಂ ಪಡೆದು ಸುಖದಿಂದಿರುವುದು ಯುಕ್ತವೆಂದು ಪರ್ಯಾಲೋಚನೆಯಂ ಮಾಡಿ ಆ ರಾಕ್ಷಸ ದೂತರಂ ಕುರಿತಿಂತೆಂದನು—ಎಲೈ ನಿಶಾಚರಾದ ಚರರುಗಳಿರಾ! ನೀವು ಮರೆಮಾಚಿ ಸೂಚಿಸಿದ ಸಮಾಚಾರದಿಂದಿಂತಾದುದೇ ಸಾಕು, ನೀವು ಅಚೆಗೆ ಪೋಗಿ, ಇನ್ನು ನನ್ನ ಲೋಚನಂಗಳಿಗೆ ಗೋಚರರಾದರೆ ನೀವು ನಿಶಾಚರರಾದರೂ ಬಿಡುವವನಲ್ಲ, ಭೂಚರರಿಗಿಂತ ಕಡೆಮಾಡುವೆನೆನಲಾ ದಾನವ ಭಟರು ಇವನ ಸಹವಾಸ ಸಾಕೆಂದು ಸಂದಿಗೊಂದಿಯಂ ಸೇರಿ ಕಾಲವಂ ಕಳೆಯುತ್ತಿರಲಾಗ ಲೋಹಿತಾಕ್ಷನು ವೇಗದಿಂ ಪೋಗಿ ತನಗೆ ಸೋದರಮಾವನಾದ ಮಯಾಸುರನಂ ಕರತಂದು, ಮನಸ್ಸಿಗೆ ಬಂದಂತೆ ವಿಚಿತ್ರವಾಗಿ ಚಿತ್ರವತೀ ಎಂಬ ಪಟ್ಟಣವಂ ರಚಿಸಿ, ಪಾರಿಜಾತ ತರುವಿರುವ ವನವಂ ತನ್ನ ಮನೆಗೆ ಉಪವನವಂ ಮಾಡಿ, ಆ ತರು ವಿರುವ ಬಳಿಗೆ ಘೂಳಿಯೂ ಸುಳಿಯದಂತೆ ಕಾದುಕೊಂಡು, ಅಲ್ಲಿಯೇ ಸುಖದಿಂದಿರುತ್ತಿರಲು.

ಒಂದಾನೊಂದು ದಿನ ಗಂಧರ್ವಾಧಿಪನಾದ ಚಿತ್ರವರ್ಮನ ಪುತ್ರಿಯಾದ ಮಂದಾರಮಾಲೆಯು ಬೆಳದಿಂಗಳಂ ನೋಡಿ ಈಗ ವನವಿಹಾರವಂ ಮಾಡಬೇಕೆಂದು ತಂದೆತಾಯಿಗಳು ಕಾಣದಂತೆ ತನ್ನ ಸಖಿಯಾದ ಕಲಹಂಸೆಯೊಡಗೂಡಿ ವಿನೋದದಿಂ ಸಂಚರಿಸುತ್ತ, ಪಾರಿಜಾತ ಪುಷ್ಪದ ವಾಸನೆಯಂ ತಿಳಿದು ಪರಮಸಂತೋಷದಿಂ ಬಂದು ಆ ಮರದ ಮೇಲೆ ಇಬ್ಬರೂ ಕುಳಿತು ಪರಿಮಳದಿಂ ಪರವಶರಾಗಿ ಅಲ್ಲಿಯೇ ಇರಬೇಕೆಂದು ಮಾತನಾಡುತಲಿರುವ ಸಮಯದೊಳ್ ಸೂರ್ಯೋದಯವಾಗಲು. ಆಗ ಲೋಹಿತಾಕ್ಷನು ಉಪವನವಂ ನೋಡಲೋಸುಗ ಬರುತಲಿರುವುದಂ ಮಂದಾರಮಾಲೆಯು, ಕಲಹಂಸೆಯೂ ಕಂಡು ಈ ದುಷ್ಟದಾನವನು ಇಲ್ಲಿರುವುದಂ ತಿಳಿಯಲಿಲ್ಲವಲ್ಲಾ, ಏನು ಮಾಡಬೇಕು, ಎಲ್ಲಿ ಪೋಗಬೇಕು ಎಂದು ಯೋಚಿಸುತ್ತಿರುವಷ್ಟರೊಳ್ ಕಲಹಂಸೆಯು ಮಂದಾರಮಾಲೆಯಂ ಕುರಿತು ಇಲ್ಲಿರುವುದಕ್ಕೆ ಒಂದು ಉಪಾಯವಂ ಹೇಳುವೆನು,

ಅದೆಂತೆಂದಡೆ.—ನಾವೀರ್ವರೂ ಎರಡು ಶುಕಂಗಳಾಗಿ ಗಿಣಿಯ ಗುಂಪಿನೊಳ್ ಸೇರಿ ಇರುವುದುಚಿತವಲ್ಲದೆ ಸಾವಕಾಶವಂ ಮಾಡುವುದಕ್ಕೆ ಸಮಯವಲ್ಲವೆಂದು ನುಡಿಯಲು. ಅಹುದಹುದೆಂದು ಮಂದಾರಮಾಲಿಯೂ, ಕಲಹಂಸೆಯೂ ಈರ್ವರೂ ಶೀಘ್ರದಿಂ ಶುಕಾಕಾರವಂ ತಾಳಿ ಅವುಗಳ ಗುಂಪಿನೊಳ್ ಸೇರಿ ಆ ಪಾರಿಜಾತ ಮರದೊಳ್ ಸಂಚರಿಸುತ ಫಲಂಗಳಂ ಸವಿಯುತ ಸುಖದಿಂದಿರುತ್ತಿರಲು.

ಅತ್ತಲಾ ಕಳಿಂಗದೇಶದೊಳ್ ಸುಗಂಧರಾಜೇಂದ್ರನು ನಾಲ್ಕನೇ ಪಣವಾದ ಚಿಂತಾಮಣಿರತ್ನವಂ ಗೆದ್ದು ತಂದಿತ್ತು ತನ್ನ ಬಿಡಾರವಂ ಪೊಕ್ಕು ಆ ರಾತ್ರಿಯೊಳ್ ಸುಖನಿದ್ರೆಯಂಗೈಯ್ಯುತ್ತಿರಲು,

ಆ ಕಾಲದೊಳ್ ರಾತ್ರಿ ಎಂಬ ಜಾರಿಣಿಯು, ಬೆಳ್ದಿಂಗಳೆನ್ನುವ ಬಿಳೀ ಸೀರೆಯನ್ನುಟ್ಟು, ನಕ್ಷತ್ರಂಗಳೆಂಬ ದುಂಡು ಮಲ್ಲಿಗೆಯ ಹೂವುಗಳಂ ಮುಡಿಯೊಳ್ ಮುಡಿದು, ಹಣೆಯೊಳ್ ಪೂರ್ಣಚಂದ್ರನೆನ್ನುವ ಬೊಟ್ಟನ್ನಿಟ್ಟು, ಆಕಾಶವೆನುವ ವಿಟಪುರುಷನೊಡಗೂಡಿ ಮನೆ ಬಂದಂತೆ ವಿಹಾರವಂ ಮಾಡುತಲಿರ್ದು, ಸೂರ್ಯೋದಯಕಾಲವೆನುವ ರಾಜಂಗೆ ಮಂದಮಾರುತನೆಂಬ ತಳವಾರನು, ನಾನು ಈ ಪರಿ ವಿಹಾರವಂ ಮಾಡುತಲಿರುವವಂ ಬಿನ್ನೈಸುವನೆನುವ ಭಯದಿಂದ ಆ ಜಾರೆಯು ಚಂದ್ರಗಾವಿಯ ಮೇಲು ಮುಸುಕಂ ಹೊದ್ದು ಮೊಗವಂ ತೋರದೆ ಮೆಲ್ಲನೆ ಹೆಜ್ಜೆಗಳಂ ಇಡುತ ಪೋಗುವಳೊ? ಎಂಬಂತೆ ರಾತ್ರಿಯು ಕಳೆದು ಕೆಂಪೇರಿ ಮೂಡಲು ಬಿಳುಪಾಗಿ ಬರುತ್ತಿರಲು, ಆ ಕಾಲದೊಳ್ ವಿರಹಿಗಳ ಸ್ತ್ರೀ ಜನಂಗಳಂ ಬಗೆಬಗೆಯಾಗಿ ಬಾಧಿಸಿ ತಾಪವಂ ಬಡಿಸಿದ ಪಾತಕದಿಂದಲೇ ಚಂದ್ರನು ಕಳೆಗುಂದಿ ಬಿಳಿಪೇರಿ ತನ್ನ ಮನದೊಳ್ ಬಂದು ಪಕ್ಷದಲ್ಲಿಯೇ ಕ್ಷಯಿಸಿ ಪೋಗುವನೆಂದರಿತು ಇನ್ನು ಸುಮ್ಮನಿರಬಾರದು, ಇದಕ್ಕೆ ಔಷಧಿಯು ಮಾಡಬೇಕೆಂದು ಯೋಚಿಸಿ, ಅದಕ್ಕೆ ಬೇಕಾದ ಮೂಲಿಕೆಗಳಂ ಹುಡುಕಲೋಸುಗ ಅಸ್ತಗಿರಿಯನ್ನೈದಿದನೋ? ಎಂಬಂತೆಯೂ, ಚಂದ್ರಶಾಲೆಯೊಳ್ ಸಂಚರಿಸುತಲಿರ್ದ ಸೌಗಂಧಿಕಾದೇವಿಯು ನಿಷ್ಕಳಂಕವಾದ ಮುಖಚಂದ್ರನಂ ನೋಡಿ, ಇದ್ದರೆ ಹೀಗೆ ಇರಬೇಕೆಂದು ವ್ಯಸನಗೊಂಡು ತಾನು ಚಕ್ರವಾಕಗಳ ಬಾಳು ಕೆಡಿ

ಸಿ, ಕಮಲಗಳೆಂಬ ಮನೆಗಳೊಳ್ ತುಂಬಿಗಳಂ ಸೆರೆಯನ್ನಿಟ್ಟು, ತಾವರೆಗೆ ಮುಖ್ಯ ಭಂಗವಂ ಮಾಡಿದ ಪಾಪವೇ ಕಳಂಕ ರೂಪವಾಗಿರುವುದು, ಸಾಧುಗಳಿಗೆ ಮಾಡಿದ ಅಪಕಾರಂಗಳು ಸುಮ್ಮನೇ ಬಿಡುವವೇ ಎಂದರಿತು, ಇದಕ್ಕೆ ಭೂಪ್ರದಕ್ಷಿಣೆಯಂ ಮಾಡಿ, ಸಮುದ್ರದೊಳ್ ಸ್ನಾನವಗೈದು ಈ ಪಾಪವಂ ಕಳೆದು ಕಳಂಕಿಲ್ಲದೇ ಬರುವೆನೆಂದು ಯೋಚಿಸಿ ಸಾಗರದೊಳ್ ಮುಳುಗಿದನೊ? ಎಂಬಂತೆಯೂ ಅಸ್ತನಾಗಲು. ಆ ಕಾಲದೊಳ್ ಪೂರ್ವದಿಗ್ಭಾಗವೆನುವ ಪರಶಿವನ ಮೂರನೇ ನೇತ್ರವೊ? ಎಂಬಂತೆ ಉದಯಪರ್ವತವೆನುವ ಆನೆಯ ಮುಖದಲ್ಲಿ ಕಟ್ಟಿರುವ ರತ್ನದ ಗುರಾಣಿಯೊ? ಎಂಬಂತೆ, ದುಷ್ಟರಾದ ದಾನವರ ಬಾಧೆಯಂ ಪರಿಹರಿಸಲೋಸುಗ ವಿಷ್ಣುವೇ ಕಳುಹಿಸಿದ ಚಕ್ರವೊ? ಎಂಬಂತೆಯೂ, ಕಾಲನೆಂಬ ಕಾಲಭೈರವನ ಕೈಯೊಳಿರುವ ತಾಂಬ್ರದ ಬಟ್ಟಲೋ? ಎಂಬಂತೆಯು, ಸಮುದ್ರನು ಬಡಬಾನಲನ ಜ್ವಾಲೆಯಂ ತಾಳಲಾರದೆ ಸುಗಂಧರಾಜೇಂದ್ರನ ಪ್ರತಾಪವೆಂಬ ಅಗ್ನಿಗೆ ದೂರು ಹೇಳಿಕೊಳ್ಳಲು, ಆ ಪ್ರತಾಪಾಗ್ನಿಯು ಬಡಬಾನಲನಂ ಹಿಡಿದು ಉಂಡೆಯಂ ಮಾಡಿ ಉದಯಪರ್ವತದ ಶಿಖರದೊಳ್ ಸೆರೆಯಂ ಇರಿಸಿತೊ? ಎಂಬಂತೆಯೂ, ಪೂರ್ವದಿಕ್ಕೆಂಬ ತರುಣಿಯು ಮುಂದಲೆಯೊಳಿಟ್ಟ ಚಂದ್ರದ ಬೊಟ್ಟಿನಂತೆಯೂ ತೋರುತ, ಸೂರ್ಯನು ಕತ್ತಲೆಯಂತೆ ನಿಸುಟು ಕಮಲಂಗಳಂ ಅರಳಿಸಿ, ತುಂಬಿಗಳ ಸೆರೆಗಳಂ ಬಿಡಿಸಿ, ಚಕ್ರವಾಕಗಳಂ ಜೊತೆಗೊಳಿಸಿ ಉದಯಿಸಿ ಬರುತ್ತಿರಲು. ಆ ಕಾಲದಲ್ಲಿ ಜಯಜಯ! ದನುಜಮತ್ತ ಮಾತಂಗ ಕಂಠೀರವ! ಜಯಜಯ ಸುಂದರ ತರುಪಲ್ಲವಾಧರೀ ನಿಕರ ಪಂಚಬಾಣ! ಜಯಜಯ ಅಘಟಿತ ಘಟನಾಚತುರ ಚಾತುರ್ಯ ಪಟಲ! ಜಯಜಯ ಸಪ್ತಸಾಗರಾಂತ ವಸುಂಧರಾವಲಯ ದಿನಕರಮಂಡಲಾಯಿತ ನಿಜಭುಜ ಪ್ರತಾಪ! ಜಯಜಯ ಸುಗಂಧರಾಜ ಮಹೀಮಹೇಂದ್ರನೆಂದು ಉದ್ಘೋಷಿಸುವ ವಂದಿ ಮಾಗಧರವಾಕ್ಯವಂ ಕೇಳಿ, ಸುಗಂಧರಾಜೇಂದ್ರನು ನಿದ್ರೆಯಂತಿಳಿದು ರತ್ನಮಂಚದಿಂದೆದ್ದು ಕರಗಳಂ ನೋಡಿ, ದರ್ಪಣದಲ್ಲಿ ದೇವಿಯ ದಿವ್ಯರೂಪವಂ ಕಂಡು ಪ್ರಣಾಮವಂ ಮಾಡಿ, ಫಲಗಳನ್ನೀಕ್ಷಿಸಿ, ಜೊತೆಯಾಗಿ ನಿಂದಿರುವ ದ್ವಿಜವರ್ಯರ ಆಶೀರ್ವ

ಚನವ ಕೈಕೊಂಡು, ಕಾಲೋಚಿತವಾದ ಸ್ನಾನ ಮೊದಲಾದ ನಿತ್ಯಕರ್ಮವಂ ನೆರವೇರಿಸಿ, ಸುಮತಿ ಮೊದಲಾದ ಹಿತಮಿತ್ರರೊಡಗೂಡಿ ಭೋಜನಗೈದು ಅವರೊಡನೆ ಸರಸ ಸಲ್ಲಾಪವಂ ಮಾಡುತ ಸರ್ವಾಭರಣ ಭೂಷಿತನಾಗಿ ಸಂತೋಷದಿಂ ಕುಳಿತಿರಲು.

ಇತ್ತಲಾ ಕಳಿಂಗಪತಿಯಾದ ವಿಜಯವರ್ಮನ ಪುತ್ರಿಯು ರಾಜಚೂಡಾಮಣಿಯಾದ ಸುಗಂಧರಾಜೇಂದ್ರನು ನಾಲ್ಕನೇ ಪಣವಾಗಿ ತಂದಿತ್ತ ಚಿಂತಾಮಣಿ ಎಂಬ ರತ್ನವಂ ನೋಡುತ, ಮತ್ತೂ ತನ್ನ ಮನದೊಳ್ ಈ ರತ್ನವಂ ಎಂತು ಸಾಧಿಸಿದನೋ? ಎಂದು ಭಾವಿಸುತಿರೆ, ಆಶ್ಚರ್ಯ ಪಡುತ ಕೈ ಎಂಬ ಕಮಲದೊಳ್ ಮುಖವೆಂಬ ಚಂದ್ರನನ್ನಿಟ್ಟು ಸುಮ್ಮನೆ ನಿಂತು ಯೋಚಿಸುತ್ತಿರಲು. ಆ ಕಾಲದೊಳ್ ಚಂದ್ರ ಕಮಲಗಳೆರಡೂ ಸೌಗಂಧಿಕಾದೇವಿಯ ಶರೀರವಂ ಸೇರಿ ಸ್ನೇಹವಂ ಬೆಳೆಸಿತ್ತೋ? ಎಂಬಂತೆ ನೋಡುವವರಿಗೆ ತೋರುತ್ತಿರಲು ಆ ಕಾಲದಲ್ಲಿ ಲೀಲಾ ಶುಕವು ಇಂತಿರುವ ಸೌಗಂಧಿಕಾದೇವಿಯಂ ನೋಡಿ ನಗುತ ಅವಳಂ ಕುರಿತು ಎಲೈ ಮೋಹನಾಂಗಿಯೇ! ಮೊದಲು ನಾನು ಈ ಪಣಗಳ ವಿಚಾರವಂ ಹೇಳಲಾಗ ನೀನು ಯಾರಿಂದಲೂ ಈ ಕಾರ್ಯವು ಆಗಲಾರದು, ಮತ್ತೂ ಆ ಚಿತ್ರದೊಳ್ ಬರೆದಿರುವ ಪುರುಷನಂತೆ ಇರುವ ಪುರುಷನು ಮೂರು ಲೋಕದಲ್ಲಿಯೂ ಇರುವನಾಗಿ ತೋರುವುದಿಲ್ಲ. ನನಗೆ ಮದುವೆ ಎಂತಾಗುವುದು ಎಂದು ಚಿಂತಿಸುತ್ತಿರ್ದೆಯಲ್ಲಾ, ಈಗಲಾದರೂ ನಿನ್ನ ಮನೋರಥವು ಕೈಗೂಡಿ ಬರುತಲಿದೆಯೋ ಎಂದು ನುಡಿಯಲಾ ನುಡಿಯಂ ಕೇಳಿ ಆ ಕಳಿಂಗರಾಜಪುತ್ರಿಯು ನಸುನಗುತ ನಾಚಿಕೆಗೊಂಡು ನಮಸ್ಕಾರವಂ ಮಾಡಿ ಸುಮ್ಮನೆ ನಿಂದಿರಲಾಗ ಲೀಲಾಶುಕವು ಮೈಯ್ಯೆಂಬ ಭಂಗಾರದ ಬಳ್ಳಿಯೊಳ್ ಬಾಹುಗಳೆಂಬ ಚಿನ್ನದ ಕವಲು ಬಳ್ಳಿಗಳಿಂದಲೂ, ಕುಚಗಳೆಂಬ ಕುಂದಣದ ದುಂಡಾದ ಫಲಂಗಳಿಂದಲೂ, ಮೊಗವೆಂಬ ಅರಳಿದ ಸುವರ್ಣ ಕಮಲದಿಂದಲೂ, ವಿಕಾಸವಂ ಪಡೆದಿರುವ ಕಣ್ಣುಗಳೆಂಬ ಎರಡು ಕನ್ನೈದಿಲು ಪುಷ್ಪಂಗಳಿಂದಲೂ, ಬಹಳವಾದ ಮುಗುಳುನಗೆಗಳೆಂಬ ಮಲ್ಲಿಗೆಯ ಹುವ್ವಗಳಿಂದಲೂ, ಹಲ್ಲುಗಳೆಂಬ ಮೊಲ್ಲೆಯ ಮೊಗ್ಗುಗಳಿಂದಲೂ, ಅಧರ ರಸವೆಂಬ ಮಕರಂ

ದ ವಾಸನೆಗೆ ಬರುತ್ತ, ನಾಸಿಕವೆಂಬ ಅರಳಿರುವ ಸಂಪಿಗೆಯು ಮೊಗ್ಗಂ ನೋಡಿ ದೂರದೊಳ್ನಿಂತಿರುವವೊ? ಎಂಬಂತೆ ತೋರುವ ನೋಟಗಳೆಂಬ ಮಿಂಚುಗಳಿಂದಲೂ ಯುಕ್ತವಾದ, ಮತ್ತು ಮನ್ಮಥನು ಮೂರು ಲೋಕದೊಳ್ ಶೂರನಾದ ಸುಗಂಧರಾಜೇಂದ್ರನಂ ಜೈಸಬೇಕೆಂದು ನಿಶ್ಚೈಸಿ, ಅಮೋಘಂಗಳಾದ, ರಾಜೇಂದ್ರನು ತಲ್ಲಣಗೊಳಿಸುವ ಬಾಣಂಗಳಾದ ಪುಷ್ಪಂಗಳಂ ಎಲ್ಲಿಲ್ಲಿಯೂ ಹುಡುಕುತ್ತ ಬಂದು ಸೌಗಂಧಿಕಾದೇವಿಯು ಶರೀರವೆಂಬ ಸುವರ್ಣಲತೆಯೊಳ್ ಅರಳಿರುವ ಮೊಗವೆಂಬ ಕಮಲವಂ, ಕಣ್ಣುಗಳೆಂಬ ಕನ್ನೈದಿಲೆಗಳಂ ನೋಡಿ ಇವುಗಳಿಂದಲೇ ಈ ರಾಜೇಂದ್ರನಂ ಜೈಸುವೆನೆಂದು ಬಂದು ಸಮಯವಂ ನೋಡಿ ತೊಡೆಯುವೆನೆಂದು ಅಲ್ಲಿಯೇ ಕಾದಿರುತ್ತ, ಒಂದಲ್ಲದೆ ಎರಡು ಬಿಲ್ಲುಗಳಿರಬೇಕೆಂದು ಇರಿಸಿರುವ ಬಿಲ್ಲುಗಳೋ? ಎಂಬಂತಿರುವ ಹುಬ್ಬುಗಳಿಂದಲೂ ಕೂಡಿ ಸುಗಂಧರಾಜೇಂದ್ರನೆನುವ ಪಾರಿಜಾತತರುವಂ ಸುತ್ತುವರಿಯಬೇಕೆಂಬ ಅಭಿಲಾಷೆಯಿಂದ ಸಿರಾಧಾರವಾಗಿ ಬಳುಕುತ್ತ ನಿಂದಿರುವ ವಿಚಿತ್ರ ಲತೆಯೋ? ಎಂಬಂತೆ ತೋರುವ ಆತರುಣಿಯಂ ನೋಡಿ, ಎಲೈ ಲತಾಂಗಿಯೆ! ನಾನು ಪೇಳಿದ ಮಾತಿಗೆ ಉತ್ತರವಂ ಕೊಡದೆ ಮಂದಹಾಸದಿಂ ಸುಮ್ಮನೆ ನಿಂದಿರುವ ಪರಿಯು ಇದೇನು ವಿಚಿತ್ರವೆಂದು ಬೆಸಗೊಳಲಾಗ, ಸೌಗಂಧಿಕಾದೇವಿಯು ಮತ್ತೂ ಕೈಮುಗಿದು ಎಲೈ ಭಾವಜ್ಞನಾದ ಲೀಲಾಶುಕವೆ! ನನ್ನ ಮನದೊಳಿರುವ ಭಾವವಂ ತಿಳಿದು ಒಂದನೂ ಕಾಣದಂತೆ ನೀನು ಕೇಳುವುದು ವಿಚಿತ್ರವಲ್ಲದೆ ನಾನು ಸುಮ್ಮನೆ ಇರುವುದು ಆಶ್ಚರ್ಯವಲ್ಲವೆನಲು. ಆಗ ಲೀಲಾಶುಕವು ನಲಿಯುತ್ತ ಸೌಗಂಧಿಕಾದೇವಿಯು ಮನದಲ್ಲಿರುವ ಭಾವವಂ ತಿಳಿದು ಹಾಗೇ ಆಗಲೀ ಎಂದು ಪೇಳಿ, ಚಿತ್ರಲೇಖೆಯಂ ಕರೆದು ಸುಗಂಧರಾಜೇಂದ್ರನಿರುವ ಬಿಡಾರಕ್ಕೆ ಪೋಗಬೇಕಾಗಿರುವುದರಿಂದ, ಗಂಧ, ಪುಷ್ಪ, ಫಲ, ತಾಂಬೂಲ, ದುಕೂಲಂಗಳಂ, ರತ್ನಾಭರಣಂಗಳಂ, ಕೂಡ ಕುಂದಣದ ತಟ್ಟೆಯೊಳಿರಿಸಿಕೊಂಡು ನೀನು ಬೇಗ ಬಂದೆಯಾದರೆ ನಾವೀರ್ವರೂ ರಾಜೇಂದ್ರನ ಸಮೀಪಕ್ಕೆ ಪೋಗಿ ದೇವಿಯು ಅಭಿಪ್ರಾಯವಂ ತಿಳುಹಿ ಬರಬಹುದೆಂದು ನುಡಿಯುಲಾಗ ಚಿತ್ರಲೇಖೆಯು ಲೀಲಾಶುಕವು ಪೇಳಿದಂತೆ ಎಲ್ಲ ಪದಾರ್ಥಂಗಳಂ

ಸನ್ನಹಿಸಿಕೊಂಡು ಬಂದು ನಿಂದು ಈಗ ಅಲ್ಲಿಗೆ ಪೋಗುವುದಕ್ಕೆ ಕಾರಣವೇನೆಂದು ಕೇಳಲಾ ಲೀಲಾಶುಕವು ಎಲೈ ಚತುರೆಯೆ! ಕೇಳು, ನಮ್ಮ ಸೌಗಂಧಿಕಾದೇವಿಯು ಪುಣ್ಯಕ ವ್ರತವಂ ಮಾಡುವುದಕ್ಕೆ ರಾಜಶಿರೋಮಣಿಯಾದ ಸುಗಂಧ ರಾಜೇಂದ್ರನಂ ಕುರಿತು ಪಾರಿಜಾತ ತರುವಂ ತರಬೇಕೆಂದು ಐದನೇ ಪಣವಂ ತಾನೇ ಪ್ರತ್ಯಕ್ಷವಾಗಿ ಪೇಳುವುದಕ್ಕೆ ಸಂಕೋಚಗೊಂಡು ಮಹಾರಾಜನಂ ಭಾರಿಭಾರಿಗೂ ತನ್ನ ಮನೆಗೆ ಬರುವುದೆಂದು ಪೇಳಿದರೆ ಆ ರಾಜೇಂದ್ರನು ಬ್ಯಾಸರಗೊಳ್ಳುವನೊ? ಏನೊ? ಎಂದು ಸಂದೇಹಗೊಳುತ್ತ, ಇಂತಲ್ಲದೇ ದ್ವೀಪಾಂತರಂಗಳಂ ಪೊಕ್ಕು ಅಲ್ಲಿರುವ ವಸ್ತುಗಳಿಗೆ ಕಾವಲಾದ ರಾಕ್ಷಸರಂ ಶಿಕ್ಷೆಯುಗೈದು ಕಾರ್ಯವಂ ಕೈಕೊಂಡು ಬಂದ ರಾಜೇಂದ್ರನಂ ಎಷ್ಟೆಂದು ಆಯಾಸಪಡಿಸಲೀ, ಪಣವಂ ಪೇಳದೆ ಪಾಣಿಗ್ರಹಣವಂ ಮಾಡಿದರೆ ಪ್ರತಿಜ್ಞಾಭಂಗವಾಗುವುದು. ಪೇಳಿದರೆ ಪರೀಕ್ಷೆಯಾಗಿ ತೋರುವುದು, ಸುಮ್ಮನಿದ್ದರೆ ಮನೋರಥ ಪೂರ್ತೈಸದು, ಏನು ಮಾಡುವೆನೆಂದು ಯೋಚಿಸುತ್ತಲಿರಲಾಗ ನಾನು ಆ ದೇವಿಯ ಅಭಿಪ್ರಾಯವಂ ತಿಳಿದು ಕಾರ್ಯವಂ ಕೈಗೂಡಿಸುವೆನೆಂದು ಪೇಳಿದನಾದ್ದರಿಂದ ನಿನ್ನೊಡನೆ ರಾಜೇಂದ್ರನಿರುವ ಮಂದಿರವಂ ಪೊಕ್ಕು ಐದನೇ ಪಣದ ವೃತ್ತಾಂತವಂ ತಿಳುಹಿಸಬೇಕೆಂದು ನಿಶ್ಚೈಸಿ ನಿನ್ನೊಡನೆ ಪೇಳಿದೆನೆಂದು ನುಡಿಯಲಾ ಚಿತ್ರಲೇಖೆಯು ಆ ಶುಕವಂ ಕೊಂಡಾಡಿ ನೀನು ಈ ಪರಿಯಾಗಿ ದೇವಿಯೊಳ್ ಪ್ರೀತಿಯಂ ಮಾಡುವ ಸರ್ವಜ್ಞನಾದ ನಿನಗೆ ನಾನು ಪೇಳುವುದೇನು? ಈಗಲೇ ತೆರಳಬಹುದೆಂದು ನುಡಿದು. ಲೀಲಾಶುಕವಿರುವ ರತ್ನಪಂಜರವಂ ಅಂದಳದೊಳಿರಿಸಿ ತಾನು ಅವರಲ್ಲಿಯೇ ಕುಳಿತು ಶುಕದೊಡನೆ ಮಾತನಾಡುತ್ತ, ಸಕಲಸನ್ನಾಹದಿಂದೊಡಗೂಡಿ ಸುಗಂಧರಾಜನಿರುವ ಬಿಡಾರದ ಬಳಿಗೆ ಬಂದು ತಾನು ಬಂದಿರುವುದಂ ರಾಜೇಂದ್ರಂಗೆ ತಿಳಿಸುವದೆಂದು ದೂತರಂ ಕಳುಹಲವರು ರಾಜೇಂದ್ರನ ಸನ್ನಿಧಾನವನ್ನೈದಿ ಬಿನ್ನವಿಸಲಾಗ ಸುಮತಿ ಮೊದಲಾದವರು ಆಸ್ಥಳವಂ ಬಿಟ್ಟು ತೆರಳುತ್ತಿರಲಾಗ ರಾಜೇಂದ್ರನು ಸುಮತಿಯಂ ಕರೆದು ಕೈ ಪಿಡಿದು ಕುಳ್ಳಿರಿಸಿಕೊಳ್ಳುತ್ತಿರಲಷ್ಟರೊಳ್ ಚಿತ್ರಲೇಖೆಯು ಬಂದು ಆಭರಣಮೊದಲಾದ ವಸ್ತುಗಳಂ ತುಂಬಿರುವ

ತಟ್ಟೆಗಳಂ ಮುಂದಿಟ್ಟು ಪ್ರಣಾಮಮಂಗೈದು ಲೀಲಾಶುಕವಿರುವ ರತ್ನಪಂಜರವಂ ಎದುರಿಗೆ ಮಡಗಲು, ಆಗ ಲೀಲಾಶುಕವು ಮಹಾರಾಜನಂ ನೋಡಿ ಜಯಜಯವೆಂದು ನುಡಿದು ಒಂದು ಪದ್ಯವಂ ಪೇಳ್ದುದದೆಂತೆನೆ-

ಮುಖಮಿವ ಸತತಂ ನೃಪತೇ ಹಿತಸುಮತೆ ಮಮಾಪಿ ಭವತು ವಿತರಮತೆ ॥ ಹೃದಯಂ ತಸ್ಯಾಸ್ತ್ವಾಸ್ತ್ವವ ಕರಯುಗಳಂ ಸುರಾಗ ಶೋಭಾಢ್ಯಂ॥ ಎಂದು ಪೇಳಿ ಸುಮ್ಮನಿರಲಾಗ ರಾಜೇಂದ್ರನು, ತನ್ನ ಮನದೋಳ್ ಆಪ್ತ ಮಂತ್ರಿಯಾದ ಸುಮತಿಯಿಂದೊಡಗೂಡಿರುವ ಬಹು ಕುಶಲನಾದ ಸಾರ್ವಭೌಮನಾದ ಸುಗಂಧರಾಜೇಂದ್ರನೆ ಕೆಂಪಾದ ಕಾಂತಿಯಿಂ ಶೋಭಿತವಾದ ತನ್ನ ಮುಖದಂತೆ, ನಿನ್ನಲ್ಲಿ ಅನುರಾಗದಿಂ ಕೂಡಿರುವ ಸೌಗಂಧಿಕಾದೇವಿಯ ಹೃದಯದಂತೆ, ನಿನ್ನ ಕರಕಮಲಂಗಳು ಪಾರಿಜಾತ ವೃಕ್ಷದ ಕಾಂತಿಯಿಂದ ಪರಿಶೋಭಿತವಾಗಲೀ ಎಂದು ಅರ್ಥಾಂತರವುಳ್ಳ ಆರ್ಯೆಯ ಅಭಿಪ್ರಾಯವಂ ತಿಳಿದು ಸಂತೋಷಗೊಂಡು ತಲೆದೂಗಿ ನೆಸುನಗುತ ಸುಮತಿಯ ಮೊಗವ ನೋಡಲಾ ಮಂತ್ರಿಯು ಶೀಘ್ರದಿಂದೆದ್ದು ಪಾಳಂಬದ ಬಿತ್ತದಂತೆ ಬಿತ್ತರವಾದ ಪದ್ಮರಾಗ ರತ್ನಂಗಳಂ ಬೊಗಸೆಗಳಲ್ಲಿ ತಂದು ಲೀಲಾಶುಕದ ಪಂಜರದೋಳ್ ಸುರಿಯಲಾ ಲೀಲಾಶುಕವು ಆ ರತ್ನಂಗಳಂ ನೋಡಿ ಇದು ದಾಳಂಬದ ಬಿತ್ತಂಗಳೆಂದು ಭ್ರಮೆಗೊಳದೆ ಪರೀಕ್ಷೆಗೋಸುಗ ಪದ್ಯವಂ ಪೇಳಿದುದಕೆ ಸಂತೋಷದಿಂ ರಾಜೇಂದ್ರನು ತನಗೆ ರತ್ನಾಭಿಷೇಕವಗೈಸಿದನೆಂದು ತಿಳಿದು, ಸುಮತಿಯಂ ಕುರಿತು ಎಲೈ ಚತುರನೆ! ಕೇಳು ಇವು ಜಾತರಂಗವೆಂಬ ರತ್ನಗಳು, ನಮ್ಮ ರಾಜೇಂದ್ರನು ಧರಿಸಲು ಯೋಗ್ಯವಾಗಿರವುವು, ನಾನು ಪಣ್ಗಳಂ ಸವಿದು ಪಂಜರದೋಳ್ ಕಾಲವಂ ಕಳೆವೆನೆಂದು ನುಡಿಯಲಾ ನುಡಿಗಳಂ ಕೇಳಿ ಸುಗಂಧರಾಜೇಂದ್ರನು ಪರಮ ಸಂತೋಷ ಭರಿತನಾಗಿ, ಲೀಲಾಶುಕವಂ ಪಿಡಿದು ಮುಂಗೈಯೊಳಿಟ್ಟು ಮುದ್ದಾಡಿ ನಿಮ್ಮರಸಿಯು ಪುಣ್ಯವೇ ಪುಣ್ಯವೆನಲು, ಆ ಲೀಲಾ ಶುಕವು ರಾಜೇಂದ್ರನಂ ಕುರಿತು ಎಲೈ ಮಹಾರಾಜಕುಲತಿಲಕನೆ! ನೀನು ಪೇಳಿದುದು ಸತ್ಯವೇ ಸರಿ, ಅದೆಂತೆಂದರೆ—ದೇವತೆಗಳಿಗೂ ಅಸಾಧ್ಯಂಗಳಾದ ವಸ್ತುಗಳಂ ತಂದುಕೊಡುವ ಮಹಾಸಾಹಸವಂತನಾಗಿಯು, ಕೋಟಿ ಮನ್ಮಥರಂತೆ

ಸೌಂದರ್ಯದಿಂ ಜಗವಂ ಮೋಹಗೊಳಿಸುವವನಾದ, ಚಕ್ರವರ್ತಿಯಾದ ನಿನಗೆ ನಮ್ಮ ಒಡತಿಯಾದ ಸೌಗಂಧಿಕಾದೇವಿಯು ಪಟ್ಟದರಾಣಿಯಾಗುವುದರಿಂದ ಈಕೆಯು ಪುಣ್ಯವೇ ಪುಣ್ಯವೆಂದು ನುಡಿದ ನುಡಿಗಳಂ ಕೇಳಿ, ಬಳಿಕ ರಾಜೇಂದ್ರನು ನಿಂದಿರುವ ಚಿತ್ರಲೇಖೆಯುಂ ನೋಡಿ ಕುಳ್ಳಿರೆಂದು ಕಟ್ಟು ಮಾಡಿ, ಆ ಲೀಲಾಶುಕವಂ ಕುರಿತಿಂತೆಂದನು— ಎಲೈ ಲೀಲಾಶುಕವೆ! ನಿನ್ನ ಮತಿಯುಂ ನೋಡಿದರೆ, ದಮಯಂತೀದೇವಿಯ ಸ್ವಯಂವರಕ್ಕೆ ಸಂಧಾನವಂ ಮಾಡಲೋಸುಗ ಸತ್ಯಲೋಕದಿಂ ಬಂದಿದ್ದ ರಾಜಹಂಸೆಯೋ ನೀನೆಂದು ನಿಶ್ಚೈಸಬಹುದೆನಲೂ, ಅದಂ ಕೇಳಿ ಲೀಲಾಶುಕವು ಎಲೈ ರಾಜೇಂದ್ರನೆ! ನಮ್ಮ ದೇವಿಯೇ ದಮಯಂತಿಯಾಗಿಯೂ, ನೀನೇ ನಳಚಕ್ರವರ್ತಿಯಾಗಿಯೂ ಇರಬೇಕೆಂದು ನಾನು ನಿಶ್ಚೈಸಬಹುದೆನಲಾ ವಾಕ್ಯವಂ ಲಾಲಿಸಿ ರಾಜೇಂದ್ರನಿಂತೆಂದನು, ಎಲೈ ಲೀಲಾಶುಕವೆ! ನೀನು ಹಂಸೆಯಾಗಿದ್ದಡೆ ಮನ್ಮಥನವಾಹನವಾದ ಶುಕವೆಂಬುವುದರಲ್ಲಿ ಸಂದೇಹವಿಲ್ಲವೆಂದು ನುಡಿಯಲಾ ಲೀಲಾಶುಕವು ಎಲೈ ಮಹಾರಾಜನೆ! ನಾನಿಂತಾಗಬೇಕಾದರೆ ನಮ್ಮ ದೇವಿಯೇ ರತಿಯಾಗಿ, ನೀನೇ ಮನ್ಮಥನಾಗಿಅವತಾರವಂ ಮಾಡಿರುವಿರೆಂದು ತಿಳಿಯುವೆನೆನಲಾ ಸುಗಂಧರಾಜೇಂದ್ರನು ಎಲೈ ಶುಕವೆ! ನಿಮ್ಮ ರಸಿಯು ದೇವಿಯುಂ ಕುರಿತು ತಪವಂ ಮಾಡಿ ಸಂತೋಷಪಡಿಸಿ ಆಕೆಯು ಕೈಯೊಳಿರ್ದ ನಿನ್ನಂ ವಶವಾಗಿರುವಂತೆ ಕೇಳಿಕೊಂಡಿರುವುದರಿಂದ ಆ ದೇವಿಯು ಕಟಾಕ್ಷದಿಂ ಲಬ್ಧವಾದ ಲೀಲಾಶುಕವೆಂದು ನಿನ್ನನರಿಯಬಹುದೆನಲು, ಅದಂ ಕೇಳಿ ಲೀಲಾಶುಕವು ಇಂತಾದಡೆ ವನದಲ್ಲಿರುವ ಫಲಂಗಳಂ ನವಿದು ಸಂಚರಿಸುವ ಒಂದು ಗಿಣಿಗೋಸುಗ ನಮ್ಮರಸಿಯು ಇಷ್ಟು ತಪವಂ ಮಾಡಿರುವಲ್ಲಿ ಮೂರು ಲೋಕಂಗಳಲ್ಲಿಯೂ ಶೂರನೆನಿಸಿಕೊಂಡು ಅಸಾಧ್ಯಂಗಳಾದ ಗಜಾಶ್ವರತ್ನ ಪಾರಿಜಾತ ಮೊದಲಾದ ವಣಂಗಳಂ ಸಾಧಿಸಿ ತಂದಿತ್ತು ಸಂತೋಷಪಡಿಸುವ ನಿನ್ನಂ ಪತಿಯಾಗಿ ವರಿಸುವುದಕ್ಕೆ ಎಷ್ಟು ಯುಗಂಗಳಿಂದ ನಮ್ಮ ಒಡತಿಯು ದೇವಿಯುಂ ಕುರಿತು ತಪವಂ ಮಾಡಿರುವಳೊ? ಎನಲೂ. ಇಂತು ಚಮತ್ಕಾರವಾಗಿ ನುಡಿವ ಲೀಲಾಶುಕದ ಮಾತುಗಳಂ ಕೇಳಿ ಸುಗಂಧರಾಜೇಂದ್ರನು ಸಂತೋಷಪಡುತ, ಕಳಿಂಗರಾ

ಜನ ಪುಣ್ಯಲಕ್ಷ್ಮಿಯೇ ರೂಪುಗೊಂಡು ಬಂದಂತಿರುವ ಸೌಗಂಧಿಕಾ ದೇವಿಗೆ ಈ ಲೀಲಾಶುಕವು ಎಂತು ದೊರಕಿದುದೊ? ಮತ್ತೂ ಈ ಶುಕವೇ ಈಸ್ವಯಂವರ ರಚನೆಯುಂ, ಪಣಗಳ ಚಮತ್ಕಾರಂಗಳಂ ಕೂಡ ಹೇಳಿರುವಂತೆ ತೋರುತಲಿಹೆ, ಮತ್ತೂ ಇದರ ಚಾತುರ್ಯವು, ವಿದ್ಯೆಯೂ, ಜ್ಞಾನವೂ, ಮಾತಿನೋಳ್ ಗಾಂಭೀರ್ಯವು ಯಾರಲ್ಲಿಯೂ ಇರಲಾರದೆಂದು ತಲೆದೂಗುತ್ತ, ಭಾರಿಭಾರಿಗೂ ಶ್ಲಾಘನೆಯುಂ ಮಾಡುತ್ತ, ಆ ಲೀಲಾಶುಕದ ಚಮತ್ಕಾರದ ಮಾತುಗಳಿಂದಲೇ ಅದು ಬಂದಿರುವ ಪರಿಯಂ ತಿಳಿದು, ಎಲೈ ಲೀಲಾಶುಕವೆ! ನೀನು ಬಂದ ಕಾರ್ಯವು ಮಾತಿನ ಚಮತ್ಕಾರದಿಂದಲೆ ತಿಳುಹಿಸಿದೆ, ಮತ್ತೂ ನಿಮ್ಮ ಅರಸಿಯ ಮನದಿಚ್ಛೆಂತೆ ಪಾರಿಜಾತವು ಹಸ್ತಗತವಾಗುವುದರಲ್ಲಿ ಸಂದೇಹವಿಲ್ಲವೆಂದು ಹೇಳಲಾ ಲೀಲಾಶುಕವು ಎಲೈ ರಾಜೇಂದ್ರನೆ! ಲೋಕದೊಳ್ ಬುದ್ಧಿವಂತರಾದವರು ಬಂದವನ ಮುಖವಂ ನೋಡಿ ಮನೋಭಾವವಂ ಊಹಿಸುವರು, ಮತ್ತೂ ನಡತೆಗಳಿಂದ ನೋಡಿ ತಿಳಿಯುವರು, ಚಮತ್ಕಾರದ ನುಡಿಗಳಿಂದ ನಿಶ್ಚೈಸುವರು, ಇಂತಿರುವಲ್ಲಿ ಸರ್ವಜ್ಞನಾದ ನಿನಗೆ ವಿಜ್ಞಾಪನೆಯುಂ ಮಾಡುವುದಕ್ಕೆ ನಾನು ಶಕ್ತನಲ್ಲ, ಅದೆಂತೆನೆ—ನಮ್ಮದೇವಿಯು ಅಲ್ಲಿ ನುಡಿದ ಮಾತುಗಳಂ ಕೇಳಿ ಕಲಿತು ನುಡಿವೆನಲ್ಲದೆ ಸ್ವತಂತ್ರವಾಗಿ ಹೇಳುವ ಸಾಮರ್ಥ್ಯವಿಲ್ಲವೆಂದು ನುಡಿದು ಪಣಂಗಳಾಗಿ ಬಂದ ವಸ್ತುಗಳೆಲ್ಲ ನಿನಗೆ ಉಪಯೋಗಿಸುವವಲ್ಲದೆ ಮತ್ತೊಂದಲ್ಲ, ಅವರಲ್ಲಿ ಈ ಐದನೇ ಪಣವಾದ ಪಾರಿಜಾತವು ವಿಶೇಷವಾಗಿರುವುದು, ಅದೆಂತೆಂದರೆ—ನಿನಗೆ ಶಾಶ್ವತವಾದ ಐಶ್ವರ್ಯವು, ಆಯುಷ್ಯವು, ಬಲವು, ಕಾಂತಿಯು ಇವು ಮೊದಲಾದ ಗುಣಂಗಳುಂಟಾಗುವಂತೆಯು, ತನಗೆ ಮಾಂಗಲ್ಯ ಉಂಟಾಗುವಂತೆಯು, ಪುಣ್ಯಕ ವ್ರತವಂ ಮಾಡಲೋಸುಗ ಈ ಪರಿಜಾತವಂ ಅಪೇಕ್ಷಿಸಿರುವಳಲ್ಲದೆ ಮತ್ತೊಂದಲ್ಲವೆಂದು ನುಡಿಯಲಾ ವಾಕ್ಯವಂ ಕೇಳಿ ರಾಜೇಂದ್ರನು ಸಂತೋಷವೆಂಬ ಸಮುದ್ರದೊಳ್ ಈಜಾಡುತ ಪಾರವಂ ಕಾಣದೆ ಶುಕವಂ ಕುರಿತು ಎಲೈ ಮಹಾಮತಿವಂತನೆ! ಕೇಳು, ಕಳಿಂಗರಾಜ ಪುತ್ರಿಯ ಪೂರ್ವ ಸುಕೃತವೇ ನಿನಗೆ ಶರೀರವಾಗಿಯು, ಆ ತರುಣಿಯ ಭೋಗಕ್ಷೇಮಗಳೇ ಎರಡು ರೆಕ್ಕೆಗಳಾಗಿಯು, ಅವಳ

ಅನುರಾಗವೇ ನಿನಗೆ ಮೊಗವಾಗಿಯೂ, ಆ ರಮಣಿಯ ಚಿತ್ತವೇ ನಿನಗೆ ನಾಲಿಗೆಯಾಗಿಯೂ, ಆ ಸುಕುಮಾರಾಂಗಿಯ ಸುಖವೇ ಪ್ರಾಣವಾಗಿಯೂ, ಆ ಕಮಲ ಲೋಚನೆಯ ನೋಟವೇ ಮೈ ಬಣ್ಣವಾಗಿಯೂ, ಆ ಹಂಸಗಮನೆಯ ಮನೋರಥವೇ ಪಾದಂಗಳಾಗಿಯೂ, ಈ ಪರಿಯಾಗಿ ಶುಕಾಕಾರವಂ ತಾಳಿರುವ ನೀನು ಆ ಮೋಹನಾಂಗಿಯ ಸ್ವಾಧೀನವಾಗಿರುವಲ್ಲಿ ಯಾವ ವಸ್ತುವೂ ದುರ್ಲಭವಾಗಲಾರದು, ಪಾರಿಜಾತ ತರುವು ಶೀಘ್ರದಿಂ ನಿನ್ನ ಕೈ ಸೇರುವುದೆಂದು ನಿಮ್ಮ ಅರಸಿಗೆ ತಿಳುಹಿ ಕುಶಲವಂ ಕೇಳಿದೆವೆಂದು ಪೇಳುವಂತೆ ನುಡಿದು, ಅನೇಕ ರತ್ನಾಭರಣಂಗಳಂ, ದಿವ್ಯದುಕೂಲಂಗಳಂ ಕಳಿಂಗರಾಜಪುತ್ರಿಗೆ ಕೊಡುವುದೆಂದು ಕೊಟ್ಟು, ಚಿತ್ರಲೇಖೆಗೆ ವಿಚಿತ್ರವಸ್ತ್ರಾಭರಣಂಗಳಂ ಕೊಟ್ಟು, ದ್ವೀಪಾಂತರದಿಂದ ತಂದಿರುವ ಮಧುರವಾದ ಫಲಗಳಂ ಶುಕಂಗಿತ್ತು ಮೈದಡವಿ ಮುದ್ದಿಟ್ಟು ಮನ್ನಿಸಿ, ರತ್ನಮಯವಾದ ಒಂದು ಪಂಜರವಂ ತರಿಸಿ, ಈ ಪಂಜರವು ಏನು ಪುಣ್ಯವಗೈದಿರ್ದುದೊ? ಎನುತ ಅದಂ ಶ್ಲಾಘಿಸುತ ಅದರಲ್ಲಿ ಆ ಲೀಲಾಶುಕವಂ ಕುಳ್ಳಿರಿಸಿ ಕಳುಹಲು. ಬಳಿಕ ಚಿತ್ರಲೇಖೆಯು ಶುಕದಿಂದೊಡಗೂಡಿ ಸೌಗಂಧಿಕಾದೇವಿ ಇರುವ ಅಂತಃಪುರವನ್ನೈದಿ ಆ ದೇವಿಯುಂ ಕುರಿತು ಲೀಲಾಶುಕದ ಚಮತ್ಕಾರಂಗಳಂ ಪೇಳಿ, ಸುಗಂಧರಾಜೇಂದ್ರನು ಕೊಟ್ಟ ವಸ್ತ್ರಾಭರಣಂಗಳಂ ಒಪ್ಪಿಸಲಾ ಸೌಗಂಧಿಕಾದೇವಿಯು ಲೀಲಾಶುಕದ ಸಲ್ಲಾಪದ ವಿಚಾರವಂ ಕೇಳಿ ಭಾರಿಭಾರಿಗೂ ಕೊಂಡಾಡುತ ಸುಖದಿಂದಿರುತ್ತಿರಲು.

ಇತ್ತಲಾ ಸುಗಂಧರಾಜೇಂದ್ರನು ಸೌಗಂಧಿಕಾದೇವಿಯು ಶುಕಮುಖದಿಂ ತಿಳುಹಿದ ಐದನೇ ಪಣವಾದ ಪಾರಿಜಾತವಂ ತಂದು ಕೊಡುವನೆಂದು ಒಪ್ಪಿಕೊಂಡು ತನಗೆ ಗುರುವಾದ ವಿದ್ಯಾಸಾಗರನಂ ಕರದು ನಮಿಸಿ, ಎಲೈ ಗುರುವರ್ಯನೇ! ವೃಕ್ಷಂಗಳೊಳ್ ಉತ್ತಮವಾದ ಪಾರಿಜಾತವೆಂತಿರುವದು. ಮಿಕ್ಕಾದ ವೃಕ್ಷಂಗಳಿಗೆ ಮಾಡುವ ದೋಹದ ವೆಂತು, ಇದನೆಲ್ಲವಂ ವಿಸ್ತಾರವಾಗಿ ಅಪ್ಪಣೆಯಂ ಕೊಡಿಸಬೇಕೆಂದು ನುಡಿಯಲಾ ರಾಜೇಂದ್ರನಂ ಕುರಿತು ವಿದ್ಯಾಸಾಗರನಿಂತೆಂದನು—ಎಲೈ! ಸುಗಂಧರಾಜ ಕುಮಾರನೆ! ಕೇಳು, ವೃಕ್ಷಂಗಳ ದೋಹದ ಕ್ರಮವಂ, ಆ ವೃ

ಕ್ಷಂಗಳಂ ವೃದ್ಧಿಯಂ ಹೊಂದಿಸುವ ಕ್ರಮವಂ, ಆ ವೃಕ್ಷಂಗಳಂ ಸಂ ರಕ್ಷಿಸುವುದಕ್ಕೆ ಆಧಾರವಾದ ವಾಪೀ ಕೂಪ ತಟಾಕ ನಿರ್ಮಾಣ ಕ್ರಮ ವಂ ವಿಸ್ತಾರವಾಗಿ ಪೇಳುವೆನು ಸಾವಧಾನದಿಂ ಲಾಲಿಸುವನಾಗು, ಅದೆಂ ತೆನೆ—ಇಳಿಯುವುದಕ್ಕೆ ಮಾರ್ಗವಿಲ್ಲದೆ ಹಗ್ಗವಂ ಕಟ್ಟಿ ನೀರು ಸೇದುವ ಭಾವಿಯು ಕೂಪವೆನಿಸಿಕೊಂಬುದು, ಒಂದು ಕಡೆಯೊಳಿಳಿವ ನೀರು ತುಂ ಬುವಂತೆ ಇದ್ದರೆ ಅದು ವಾಪೀ ಎನಿಸಿಕೊಂಬುದು, ಹತ್ತು ಕೂಪಗಳ ನಿರ್ಮಾಣದಿಂದುಂಟಾಗುವ ಪುಣ್ಯವು ಒಂದು ವಾಪೀ ನಿರ್ಮಾಣದಿಂದುಂ ಟಾಗುವುದು, ಹತ್ತು ವಾಪೀ ನಿರ್ಮಾಣದಿಂ ಲಭಿಸುವ ಪುಣ್ಯವು ಒಂದು ಅಶೋಷ್ಯವಾದ ನೀರುಳ್ಳ ಹ್ರದವಂ ತೋಡಿಸಲು ಲಭ್ಯವಾಗುವುದು, ಹತ್ತು ಹ್ರದಗಳಿಂದ ಲಭ್ಯವಾಗುವ ಪುಣ್ಯವು ಒಂದು ಪುತ್ರೋತ್ಪತ್ತಿ ಯಿಂದ ಪ್ರಾಪ್ತವಾಗುವುದು, ಹತ್ತು ಜನ ಪುತ್ರರಿಂ ಪಡೆಯುವ ಪು ಣ್ಯವಂ ಒಂದು ಮರವಂ ಹಾಕಿ ಸಲಹಲು ಪಡೆಯುವನು. ಇಂತು ಒಂದು ಮರದ ಸಂರಕ್ಷಣೆಯಿಂ ಅತಿಶಯವಾದ ಪುಣ್ಯವಂ ಪಡೆಯು ವಲ್ಲಿ, ಅನೇಕ ವೃಕ್ಷಂಗಳಿಂದ ಮನೋಹರವಾದ ಕ್ರೀಡಾವನವಂ ರಚಿಸಿ ಆ ವೃಕ್ಷಗಳಂ ವೃದ್ಧಿ ಮಾಡಿದವರಿಗೆ ಲಭ್ಯವಾಗುವ ಪುಣ್ಯವಂ ಪೇ ಳಲು ಯಾರು ತಾನೆ ಸಮರ್ಥರಾಗುವರು, ಮತ್ತು, ತನ್ನ ಮನೆಗೆ ಪ್ರಾ ಗ್ದಿಕ್ಕಿನಲ್ಲಿ ಆಲದ ಮರವಂ ಹಾಕಿ ಸಲಹಲು ಸಕಲ ಕಾಮ್ಯಫಲಂ ಗಳಂ ಕೊಡುವುದು, ದಕ್ಷಿಣಭಾಗದೋಳ್ ಅತ್ತಿಮರವು ಶುಭವಂ ಕೊ ಡುವುದು. ಪಶ್ಚಿಮದಲ್ಲಿ ಅರಳೀ ಮರವು ಸೌಖ್ಯಪ್ರದವಾಗುವುದು, ಉತ್ತರದಿಕ್ಕಿನೋಳ್ ಬಸರೀಮರವು ಅತಿ ಶುಭಕರವಾಗುವುದು. ಪ್ರಾ ಗ್ದಿಕ್ಕಿನೋಳ್ ಅರಳೀ ಮರವಂ, ದಕ್ಷಿಣ ದಿಕ್ಕಿನಲ್ಲಿ ಬಸರೀಯಮರ ವಂ, ಪಶ್ಚಿಮದಿಕ್ಕಿನಲ್ಲಿ ಆಲದಮರವಂ, ಉತ್ತರದಿಕ್ಕಿನಲ್ಲಿ ಅತ್ತೀಮ ರವಂ ಸಹಾ ಹಾಕಬಾರದು, ಶುಭಪ್ರದವಲ್ಲ, ದೇವ, ದಾನವ, ಗಂಧರ್ವ, ಕಿನ್ನರ, ಉರಗ, ರಾಕ್ಷಸ, ಮನುಷ್ಯ, ಪಶು, ಪಕ್ಷಿಗಳು, ಮೊದಲಾದ ಪ್ರಾಣಿಗಳಗೆ ಆಶ್ರಯಂಗಳಾಗಿರುವ ಇಂಥಾ ವೃಕ್ಷಂಗಳಿಂ ಮನೋಹರ ವಾದ ಕ್ರೀಡಾವನವಂ ಯಾವ ಪುರುಷನು ಹಾಕಿ ಸಲಹಿ ಫಲಿಸುವಂತೆ ಮಾಡುವನೊ? ಆ ಪುರುಷನಿಗೆ ಗೌರೀ ಸಮೇತನಾದ ಪರಮೇಶ್ವರನು

ಪ್ರಸನ್ನನಾಗಿ ಸಕಲ ಇಷ್ಟಾರ್ಥಂಗಳಂ ಈವನು. ಬಿಲ್ವ ವೃಕ್ಷಂಗಳಂ ಹಾಕಿ ಸಲಹುವನ ವಂಶದಲ್ಲಿ ಲಕ್ಷ್ಮೀದೇವಿಯು ನೆಲಸಿ ಪುತ್ರಪೌತ್ರ ಪಾರಂಪರ್ಯವಾಗಿ ಐಶ್ವರ್ಯವನಿತ್ತು ಸಲಹುವಳು, ಒಂದು ಅರಳೀ ಮರವಂ, ಒಂದು ಬೇವಿನಮರವಂ ಒಂದು ಆಲದ ಮರವಂ, ಹತ್ತು ಹುಣಸೇಮರಗಳಂ, ಮೂರು ಬ್ಯಾಲದ ಮರಗಳಂ, ಮೂರು ಬಿಲ್ವದಮರಗಳಂ, ಮೂರು ನೆಲ್ಲೀ ಮರಗಳಂ, ಒಂಭತ್ತು ಮಾವಿನ ಮರಗಳಂ, ಹಾಕಿ ಯಾವ ಪುರುಷನು ಸಲಹುವನೋ? ಆ ಪುರುಷನು ಅವಸಾನವಲ್ಲಿ ಸಮಸ್ತ ಪಾಪಂಗಳಿಂದ ಮುಕ್ತನಾಗಿ ಸದ್ಗತಿಯನೈದುವನು. ಸಂಸಾರಿಗಳ ಮನೆಯಮೇಲೆ ವೃಕ್ಷಂಗಳ ನೆರಳು ಬೀಳಬಾರದು, ಮತ್ತೂ ಚಿನ್ನದಿಂದ ಮಾಡಿದ ವೃಕ್ಷವನ್ನಾದರೂ ಮನೆಯ ಬಾಗಿಲಲ್ಲಿ ಹಾಕಬಾರದು, ಯಲಚೀಮರ, ಬಾಳೇಗಿಡ, ದಾಳಿಂಬದಗಿಡ, ಮಾದಳದಗಿಡ ಸಹಾ ಯಾವ ಮನೆಯಲ್ಲಿ ಹುಟ್ಟುವುದೋ? ಆ ಮನೆಯು ಅಭಿವೃದ್ಧಿಯಂ ಹೊಂದಲಾರದು, ಗೃಹಕ್ಕೆ ದಕ್ಷಿಣ ದಿಕ್ಕಿನಲ್ಲಿ ಉದ್ಯಾನವನವಂ ಮಾಡಿದರೆ ಕಲಹ, ದುಃಖವು ಸಹಾ ಉಂಟಾಗುವುದು, ಪಶ್ಚಿಮ ಪೂರ್ವ ಉತ್ತರ ದಿಕ್ಕುಗಳಲ್ಲಿ ಸಹಾ ಉದ್ಯಾನವಂ ಮಾಡಿದರೆ ಶುಭ ಉಂಟಾಗಿ ಪುತ್ರ ಪೌತ್ರಾಭಿ ವೃದ್ಧಿಯಂ ಹೊಂದುವರು, ಎಲೈ ರಾಜೇಂದ್ರನೆ! ಉಪವನ ನಿರ್ಮಾಣಕ್ಕೆ ಯೋಗ್ಯಂಗಳಾದ ಭೂಮಿಗಳಂ ಪೇಳುವೆನು— ವಿಷಕಲ್ಲು, ಹುತ್ತ, ಬಿಲಂಗಳಿಂದಲೂ, ಜೊಣಚುಕಲ್ಲುಗಳಿಂದಲೂ ಯುಕ್ತವಾದ ಭೂಮಿಯು, ಆಳವಾಗಿ ತೋಡಿದರೆ ನೀರು ಬರುವ ಭೂಮಿಯು, ವೃಕ್ಷಗಳಿಗೆ ವೃದ್ಧಿಯಂ ಕೊಡುವುದಿಲ್ಲ. ಇಂದ್ರನೀಲಮಣಿಯಂತೆ ಕಪ್ಪಾದ ಭೂಮಿಯು, ಗಿಣಿಗಳ ರೆಕ್ಕೆಗಳಂತೆ ಹಸರಾದ ತೃಣಂಗಳುಳ್ಳ ಭೂಮಿಯು, ಶಂಖದಂತೆ, ಮಲ್ಲಿಕಾ ಪುಷ್ಪದಂತೆ, ಪೂರ್ಣ ಚಂದ್ರಮಂಡಲದಂತೆ ಈ ಶುಭ್ರವಾದಭೂಮಿಯು, ತತ್ಕಾಲದಲ್ಲಿ ಪುಟವಂ ಹಾಕಿದ ಚಿನ್ನದಂತೆ ಹೊಂಬಣ್ಣವಾದ ಭೂಮಿಯು, ಕೆಂಡಸಂಪಿಗೆ ಹುಷ್ಪಿನ ವರ್ಣದ ಭೂಮಿಯು ಸಕಲ ವೃಕ್ಷ ಜಾತಿಗಳಿಗೂ ವೃದ್ಧಿಯಂ ಕೊಡುವುದು, ಹಳ್ಳಕೊಳ್ಳಗಳಿಲ್ಲದೆ ಸ್ವಲ್ಪವಾಗಿ ತೋಡಿದರೆ ನೀರು ಬರುವದಾಗಿ ಹಸುರಾದ ಗರಿಕೆಗಳುಳ್ಳ

ಭೂಮಿಯಲ್ಲಿ ಸಕಲಜಾತಿ ವೃಕ್ಷಗಳೂ ಚನ್ನಾಗಿ ಹೊರವಾಗಿ ಬೆಳೆಯು ವವು, ಜಲವಿಲ್ಲದೇ ಇರುವ ಭೂಮಿಯು, ಹೆಚ್ಚಾದ ನೀರುಳ್ಳ ಭೂಮಿ ಯು, ಸಮವಿಲ್ಲದ ಭೂಮಿಯು, ಇವುಗಳಲ್ಲಿ ವೃಕ್ಷಂಗಳು ಚನ್ನಾಗಿ ಬೆಳೆಯುವುದಿಲ್ಲ. ಹಲಸಿನಮರ, ಕಿತ್ತಳೇಮರ, ಕಿರಿಬಿದರು, ನಿಂಬೆ, ಹೆರಳೆ, ತಿಲಕವೃಕ್ಷ, ಆಲ, ಅತ್ತಿ, ಕಡಹ, ಖರ್ಜೂರ, ಅಡಿಕೆ, ಬಾಳೆ, ದ್ರಾಕ್ಷಿ, ಪನೇಮರ, ತೆಂಗಿನಮರ, ಮೊದಲಾದ ವೃಕ್ಷಂಗಳು, ಸ್ವಲ್ಪ ತೋಡಿದರೆ ನೀರುಬರುವ ಭೂಮಿಯಲ್ಲಿ ವೃದ್ಧಿ ಹೊಂದುವವು, ನುಗ್ಗೀ ಮರ, ಬಿಲ್ವವೃಕ್ಷ, ಎಳೆಲೆಬಾಳೆ, ಕರೀಲಕ್ಕೀ, ಅಶೋಕ, ಬನ್ನೀ ಮರ, ದೊಡ್ಡ ಬಿದರು, ಯಲಚೀ, ನಾಗಸಂಪಿಗೆ, ಚೇವು ಮೊದಲಾದ ವೃಕ್ಷಂಗಳು, ನೀರಿಲ್ಲದ ಭೂಮಿಯಲ್ಲಿ ವೃದ್ಧಿ ಹೊಂದುವವು. ಚಿಲ್ಲದಮ ರ, ಮಾವಿನಮರ, ಪ್ರಿಯಂಗು, ದಾಳಿಂಬೆ ಮೊದಲಾದ ವೃಕ್ಷಂಗಳು ಸಾಧಾರಣ ಭೂಮಿಯಲ್ಲಿ ವೃದ್ಧಿ ಹೊಂದುವವು. ಕೇವಲ ದೂಷಿತವಾದ ಭೂಮಿಯಲ್ಲಿ ವೃಕ್ಷಗಳು ಹುಟ್ಟಿದಾಗ್ಯೂ, ಆ ವೃಕ್ಷಂಗಳ ಕೆಳಗೆ ನಿಧಿ ಇದ್ದಾಗ್ಯೂ, ಭೂಪಾಲಕರ ಸತ್ಯದಿಂದಲೂ, ದೇವತಾಪ್ರಭಾವದಿಂದಲೂ, ಮನುಷ್ಯರು ಅತ್ಯಂತ ಪ್ರಯಾಸದಿಂದ ಮಾಡುವ ಸಂರಕ್ಷಣೆಯಿಂದ ವೃ ದ್ಧಿಯಂ ಹೊಂದುವವು, ವನಸ್ಪತಿ, ದ್ರುಮ, ಲತಾ, ಗುಲ್ಮಗಳೆಂದು ಇವುಗ ಳಲ್ಲಿ ನಾಲ್ಕು ಭೇದಂಗಳಿರುವವು. ಪುಷ್ಪಗಳಿಲ್ಲದೇ ಫಲಗಳಾಗುವ ಮರ ಗಳು ವನಸ್ಪತಿಗಳೆನಿಸಿಕೊಳ್ಳುವವು, ಪುಷ್ಪಂಗಳಾಗಿ ಫಲಂಗಳಾಗುವ ವೇ ದ್ರುಮಗಳೆನಿಸಿಕೊಳ್ಳುವವು, ಅನೇಕ ಬೇರುಗಳುಳ್ಳವಾಗಿ, ಶಾಖೋ ಪಶಾಖೆಗಳಿಂದ ಯುಕ್ತಂಗಳಾಗಿ ಬೆಳದರೆ ಗುಲ್ಮಗಳೆನಿಸಿಕೊಳ್ಳುವವು ಎಡೆಬಿಡದೆ ಗುಂಪಾಗಿ ಕವಲೊಡದು ಭೂಮಿಯೋಳ್ ಹಬ್ಬಿದರೆ ಲತೆಯೆ ನಿಸಿಕೊಳ್ಳುವುದು, ಈ ನಾಲ್ಕು ಜಾತಿಗಳಲ್ಲಿ ಕೆಲವು ಬೀಜಂಗಳಿಂದಲು, ಕೆಲವು ಕೊಂಬೆಗಳಿಂದಲೂ, ಕೆಲವು ಗೆಡ್ಡೆಗಳಿಂದಲೂ, ಮೂರು ಪರಿ ಯಾಗಿ ಉತ್ಪನ್ನವಾಗುವವು. ನೇರಳೆ, ಹಲಸು, ಸುರಹೊನ್ನೆ, ನಾಗ ಸಂಪಿಗೆ, ಹುಣಿಸೆ, ಬ್ಯಾಲ, ಬಿಲ್ವ, ಯಲಚಿ, ಕುಂಭಕಾರಿ, ಪ್ರಿಯಂ ಗು, ಸಂಪಿಗೆ, ಹಿಪ್ಪೆ, ಮಾವು ಮೊದಲಾದ ವೃಕ್ಷಜಾತಿಗಳು ಬೀಜಂಗ ಳಿಂದುಂಟಾಗುವವು, ವೀಳ್ಯದೆಲೆ, ಬಳ್ಳಿ, ಸಿಂಧುವಾರ, ತಗರ ಮೊದ

ಲಾದ ಲತಾ ವಿಶೇಷಂಗಳು ಕೊನೆಗಳಂ ನೆಡಲುಪುಟ್ಟುವವು, ಪಾದರಿ ದಾಳಿಂಬ, ಬಸರಿ, ಕಣಿಗಿಲೆ, ಆಲ, ಮರಮಲ್ಲಿಗೆ, ಅತ್ತಿ, ಸಣ್ಣಮಲ್ಲಿಗೆ ಮೊದಲಾದವು, ಬೀಜಂಗಳಂ ಬಿತ್ತಿದಾಗ್ಯೂ, ಕೊಂಬೆಗಳಂ ನೆಟ್ಟಾಗ್ಯೂ ಪುಟ್ಟುವವು, ಯಾಲಕ್ಕಿ, ತಾವರೆ, ನೈದಿಲೆ, ಮೊದಲಾದವು, ಬೀಜಂಗಳಿಂದಲು, ಗೆಡ್ಡೆಗಳಿಂದಲು, ಹುಟ್ಟುವವು, ಸಮವಾದ ನೆಲವಂ ಚೆನ್ನಾಗಿ ಅಗಿದು ಅವರಲ್ಲಿ ಎಳ್ಳಾಗಲೀ, ಉದ್ದಾಗಲೀ, ಬಿತ್ತಿ ಫಲವಾದ ಬಳಿಕ ಬೇರು ಸಹಿತವಾಗಿ ಆ ಗಿಡಗಳಂ ಕಿತ್ತು ಆ ಭೂಮಿಯಲ್ಲಿ ಯಾವ ಬೀಜಗಳಂ ಬಿತ್ತಿದಾಗ್ಯೂ ಅವು ಚೆನ್ನಾಗಿ ಬೆಳದು ವೃಕ್ಷಂಗಳಾಗಿ ಫಲಯುಕ್ತಂಗಳಾಗುವವು, ಬಿತ್ತುವ ಬೀಜಂಗಳು ಯಾವರೀತಿಯಿಂದ ಇರತಕ್ಕದ್ದೆಂದರೆ—ಆಯಾಯ ಫಲಂಗಳಾಗುವ ಋತುಗಳಲ್ಲಿ, ಮರಂಗಳಲ್ಲಿ ಪಕ್ವವಾಗಿ ಉದುರಿದ ಒಣಗಿದ ಫಲಂಗಳಂ ತೆಗದು ಬೀಜಂಗಳಂ ಸ್ವೀಕರಿಸಿ ಐದು ದಿವಸ ಪರ್ಯಂತವು ಆ ಬೀಜಂಗಳಂ ಹಾಲಿನಲ್ಲಿ ನೆನಸಿ, ವಾಯುವಿಳಂಗ ಸಹಿತವಾದ ತುಪ್ಪದಿಂದ ಧೂಪವಂ ಹಾಕಿ, ಎಳ್ಳು ಭಸ್ಮವಂ ಮಾಡಿ ತುಪ್ಪದಿಂ ಕಲಸಿ ಲೇಪವಂ ಮಾಡಿ ಆ ಬೀಜಂಗಳಂ ಹಸುವಿನ ಸಗಣಿಯಲ್ಲಿಟ್ಟು ಬಿತ್ತಲು ಜಾಗ್ರತೆಯಾಗಿ ಪುಟ್ಟುವವು. ಮೊದಲು ಹೇಳಿದಂತೆ ಬೀಜಗಳಂ ತೆಗದು ಹಾಲಿನಲ್ಲಿ ನೆನಸಿ, ಕೆಲವು ದಿನ ಹಸುವಿನ ಸಗಣಿಯಲ್ಲಿರಿಸಿದ್ದು, ಅದಂ ತೆಗದು ಒಣಗಿಸಿ, ಜೇನು ತುಪ್ಪದಿಂದ ವಾಯುವಿಳಂಗವಂ ಅರದು ಲೇಪವಂ ಮಾಡಿ ಬಿತ್ತಿದರೆ ಚೆನ್ನಾಗಿ ಬೆಳೆಯುವುವು, ನೇರಳೆ, ಹಲಸು, ಮಾವು, ಕಿತ್ತಳೆ, ಈ ಜಾತೀ ಬೀಜಗಳಂ ಹಾಲಿನಲ್ಲಿ ಕಲಸಿ, ತುಪ್ಪದಿಂವಾಯುವಿಳಂಗವಂ ಅರದು ಲೇಪವಂ ಮಾಡಿ ಹಸುವಿನ ಸಗಣಿಯಲ್ಲಿಟ್ಟು ಬಿತ್ತಬೇಕು, ಬಿತ್ತವಂ ಬಿತ್ತುವ ಸಮಯದಲ್ಲಿ ಸ್ನಾನವಂ ಮಾಡಿ ಮಡಿಯನ್ನುಟ್ಟು, ತನ್ನ ಇಷ್ಟದೇವತಾ ಪೂಜೆಯಂ ಮಾಡಿ, ಗುರುವಿಗೆ ನಮಸ್ಕಾರವಂ ಮಾಡಿ, ವೇದಶಾಸ್ತ್ರ ಸಂಪನ್ನರಾದ ಬ್ರಾಹ್ಮರಿಗೆ ಶಕ್ತ್ಯಾನುಸಾರವಾಗಿ ದ್ರವ್ಯವಂ ಕೊಟ್ಟು, ತಾನು ಮೊದಲು ಕೆಲವು ಬಿತ್ತಗಳಂ ಬಿತ್ತಿ ಅನಂತರ ಮಿಗಿಲಾದವರಿಂದ ಬಿತ್ತಿಸಬೇಕು, ಧಾನ್ಯಬಿತ್ತಗಳಂ ಹಾಲಿನಲ್ಲಿ ಮೂಡೆಯಂ ಕಟ್ಟಿ ಹಾಕಲು, ನೀರು ಬೆರಸಿ ನೆನಸಲು, ಮೊಳಕೆಗಳಾಗುವವು, ಆ ಮೇಲೆ ಆ ಬಿತ್ತಗಳಂ ಬಿತ್ತಿದರೆ

ಆ ಧಾನ್ಯಗಳು ಚೆನ್ನಾಗಿ ವೃದ್ಧಿ ಹೊಂದಿ ಫಲಿಸುವವು, ವೃಕ್ಷಗಳಂ ನೆಡುವಲ್ಲಿ, ಒಳ್ಳೆ ಲಗ್ನದಲ್ಲಿ, ಮೂಲ, ವಿಶಾಖ, ಶ್ರವಣ, ಅಶ್ವಿನಿ ಹಸ್ತ, ಈ ಐದು ನಕ್ಷತ್ರಂಗಳಲ್ಲಿ ಒಂದು ಮೊಳ ಉದ್ದವಾದ ಸಸಿಗಳಂ ಬೇರು ಸಹಿತವಾಗಿ ತೆಗದು ಆ ಗಿಡಗಳಿಗೆ ವಾಯುವಿಳಂಗ, ಲಾಮಂಚಗಳಂ ತುಪ್ಪ, ಜೇನುತುಪ್ಪಗಳಿಂದ ಅರದು ಲೇಪನಂ ಮಾಡಿ, ಅರ್ಧ ಧನುಸ್ಸಿನ ಪ್ರಮಾಣ ಹಳ್ಳವಂ ತೆಗದು ಅದರಲ್ಲಿ, ಹಸುವಿನ ಸಗಣಿ ಮರಳುಗಳಂ ತುಂಬಿ ಸಸಿಗಳಂ ನೆಡಲು ಚೆನ್ನಾಗಿ ವೃದ್ಧಿಯುಂ ಹೊಂದಿ ಫಲಿಸುವವು, ಬಾಳೇಗೆಡ್ಡೆಯುಂ, ಹಾಲೇಮರದ ಸಸಿಯುಂ ಕೂಡ ಹಸುವಿನ ಸಗಣಿಯುಂ ತುಂಬಿದ ಹಳ್ಳದಲ್ಲಿಯೇ ನೆಡಬೇಕು, ಫಲವೃಕ್ಷಗಳ ಬಿತ್ತಂಗಳಂ ಚೆನ್ನಾಗಿ ಕಳಿತ ಬಾಳೇ ಹಣ್ಣುಗಳಿಂದ ಬಾಳೇ ನಾರಿಗೆ ಲೇಪನಂ ಮಾಡಿ ಆ ಪಟ್ಟಗಳಲ್ಲಿರಿಸಿ ಮೇಲು ಕಡೆಯೊಳ್ ಬಾಳೇ ಪಟ್ಟಗಳನ್ನೇ ಮುಚ್ಚಿ ಸಗಣಿಯುಂ ತುಂಬಿರುವ ಹಳ್ಳಗಳೊಳರಿಸಿ ಮೇಲೆ ಮಣ್ಣು ಮುಚ್ಚಿ ಕೆಲವು ದಿನ ನೀರು ಬಿಡುತ್ತಿರಲು, ಕೆಂಪಾದ ಚಿಗುರುಗಳಂ ಕೂಡಿದ ಮೊಳಕೆಗಳು ಹುಟ್ಟುವವು, ಈ ಮೊಳಕೆಗಳು ಕಪ್ಪಾದ ಎಲೆಗಳಿಂದಲೂ, ತಾಳುಗಳಿಂದಲೂ ಕೂಡಿದ ಕೂಡಲೆ ಅವು ಬೇರು ಸಹಿತವಾಗಿ ಕಿತ್ತು ಹಳ್ಳಗಳೊಳ್ ನೆಟ್ಟರೆ ಶುಕ್ಲ ಪಕ್ಷದ ಚಂದ್ರನಂತೆ ಪ್ರತಿ ದಿನದಲ್ಲಿಯೂ ವೃದ್ಧಿಯನೈದಿ ಚೆನ್ನಾಗಿ ಫಲಿಸುವವು, ಬಿತ್ತಗಳಂ ಬಿತ್ತಬೇಕಾದರೆ—ಆಷಾಢ ಶ್ರಾವಣಂಗಳೊಳ್ ಬಿತ್ತಬೇಕು, ಗ್ರೀಷ್ಮಕಾಲವಂ ಬಿಟ್ಟು ಮಿಕ್ಕ ಕಾಲಂಗಳೊಳ್ ಬಳ್ಳಿಗಳಂ ನೆಡಬೇಕು, ಮಂಟಪಾಕಾರವಾಗಿಯೂ, ನಂದ್ಯಾವರ್ತಾಕಾರವಾಗಿಯೂ, ಸ್ವಸ್ತಿಕಾಕಾರವಾಗಿಯೂ, ಚತುರಶ್ರವಾಗಿಯೂ, ಸರ್ವತೋಭದ್ರಾಕಾರವಾಗಿಯೂ, ವನಂಗಳೊಳ್ ವೃಕ್ಷಂಗಳಂ ನಿರ್ಮಿಸಬೇಕು, ವೃಕ್ಷಂಗಳ ಶಾಖೆಗಳು ವಿಸ್ತಾರವಾಗುವವರಿಂದ ಅತ್ಯಂತ ಸಮೀಪವಾಗಿಯೂ, ಅತಿ ದೂರವಾಗಿಯೂ ವೃಕ್ಷಂಗಳಂ ನೆಡಬಾರದು, ಮುಳ್ಳು ಮುತ್ತುಗದ ಮರ, ಗಿರಿಕರ್ಣಿಕ, ತಿತ್ತಿರಿ ಎಂಬ ವೃಕ್ಷ, ಫಲವಾಗದಿರುವ ವೃಕ್ಷಂಗಳು, ಮತ್ತು ತಾರೆ, ನಿಲೀ, ಕಂಚುವಾಳ ಮರಗಳು ಭಯಂಕರಗಳಾದ್ದರಿಂದ ಅವಂ ಉದ್ಯಾನಂಗಳೊಳ್ ನೆಡಬಾರದು. ಫಲ ವೃಕ್ಷಂಗಳು, ಅಶೋಕೆ

ಸುರಹೊನ್ನೆ, ಬಾಗೆ, ಜೇವು, ಸಂಪಿಗೆ, ಈ ವೃಕ್ಷಂಗಳಂ ಉದ್ಯಾನಂಗಳೊಳ್ ಪ್ರಾರಂಭದಲ್ಲಿಯೇ ನೆಡಬೇಕು. ಗೇರು ಗಿಡಂಗಳಂ ನೆಡಲು ಉದ್ಯಾನವಂ ಮಾಡುವ ಪುರುಷರಿಗೆ ದೇಹದೊಳಿರುವ ರೋಗಂಗಳು ಹೋಗುವವು, ಉದ್ಯಾನದೊಳ್ ಪೂರ್ವಭಾಗದಲ್ಲಿ ಅರವುರ್ದ್ದವಿಂಬ ಮರವಂ, ದಕ್ಷಿಣದೊಳ್ ಪಾರಿಜಾತ ವೃಕ್ಷವಂ, ಪಶ್ಚಿಮದೊಳ್ ಪಿಪ್ಪಲೀಮರವಂ, ಉತ್ತರದೊಳ್ ಯಲಚಿ ಬತ್ಯಾಲದ ಮರಂಗಳಂ ಕ್ರಮವಾಗಿ ಹಾಕಬೇಕು. ಮಧ್ಯದೊಳ್ ಮಿಗಿಲಾದ ಮರಂಗಳಂ ಗುಂಪುಗುಂಪಾಗಿ ಒಂದೊಂದು ಭಾಗದಲ್ಲಿ ಒಂದೊಂದು ಜಾತಿಯಂ ವಿಂಗಡಿಸಿ, ಒಂದು ಮರದ ಎಲೆಗೆ ಮತ್ತೊಂದು ಮರದ ಎಲೆಯು ಸೋಂಕದಂತೆ ನೆಡಬೇಕು, ಹೊಸದಾಗಿ ನೆಟ್ಟ ಗಿಡಗಳಿಗೆ ಪ್ರಾತಃಕಾಲದಲ್ಲಿಯೂ, ಸಾಯಂಕಾಲದಲ್ಲಿಯು, ಕೂಡ ಜಲವಂ ಬಿಡುತ ಬಿಸಿಲು ಘಾಳಿ ಮಂಜುಗಳು ತಗಲದಂತೆ ಮರೆ ಮಾಡಬೇಕು, ಹೇಮಂತ ಋತುವಿನಲ್ಲಿ ದಿನ ಬಿಟ್ಟು ದಿನ ನೀರು ಹಾಕುತ್ತ ಬರಬೇಕು, ವಸಂತ ಗ್ರೀಷ್ಮ ಕಾಲಂಗಳಲ್ಲಿ ನಿತ್ಯದಲ್ಲಿಯೂ ನೀರು ಹಾಕುತ್ತ ಬರಬೇಕು, ವರ್ಷಾಕಾಲಶರತ್ಕಾಲಂಗಳಲ್ಲಿ ಮಳೆ ಇಲ್ಲದೆ ಬಾಡುವ ಕಾಲದೊಳ್ ಗಿಡಗಳ ಗುಳಿಯಲ್ಲಿ ತುಂಬಿದ ಜಲವು ಇಂಗಿ ಚನ್ನಾಗಿ ನೀರು ನಿಲ್ಲುವವರಿವಿಗೂ ನೀರು ಕಟ್ಟಬೇಕು, ಅತ್ಯಂತವಾಗಿ ಇಂಗಿದ ನೀರು ಮುಹೂರ್ತ ಮಾತ್ರ ನಿಂತರೆ ಆ ಗಿಡಕ್ಕೆ ನೀರು ಹೆಚ್ಚಾಯಿತೆಂದು ತಿಳಿದು ಸ್ವಲ್ಪ ಜಲವಂ ಬಿಡಬೇಕು, ಮರಗಳ ಸಮೀಪದಲ್ಲಿ ಪುಟ್ಟದ ಗಿಡಗಳಂ ತೃಣವಂ ಸಹಾ ಕಿತ್ತು ಆಗಾಗ್ಯೆ ಪಾತಿಯ ಶೋಧನೆಯಂ ಮಾಡುತ್ತಿದ್ದರೆ ಆ ಮರಗಳು ಚನ್ನಾಗಿ ವೃದ್ಧಿಯಂ ಹೊಂದುವುವು, ಮಂಜು, ಬಿರುಘಾಳಿ, ಹೊಗೆ, ಬೆಂಕಿ, ಉರಿ, ಬಿಸಿಲು ಇವುಗಳ ಸಂಬಂಧದಿಂದ ಮರಗಳು ಕೆಡುವುದರಿಂದ ಈ ಉಪದ್ರವಗಳು ಇಲ್ಲದಂತೆ ವೃಕ್ಷಗಳಂ ಸಲಹಬೇಕು, ವೃಕ್ಷಗಳ ಮಧ್ಯದೊಳ್ ಪುಷ್ಪಯುಕ್ತಂಗಳಾಗಿ ಫಲಿಸುವ ವೃಕ್ಷಂಗಳಂ ಹಾಕಿ ಅವುಗಳ ಸುತ್ತಲೂ ಹಳ್ಳಗಳಂ ತೆಗೆಯಬೇಕು, ಶಿಡಿಲಿನಿಂದ ಸುಟ್ಟ ಮರಗಳ ಭಸ್ಮವಂ ವೃಕ್ಷಂಗಳ ಮೇಲೆ ಚೆಲ್ಲಿದರೆ ಮಂಜಿನ ಬಾಧೆ ಉಂಟಾಗದು, ಅಗ್ನಿ ಸಂಬಂಧಿಂದ ದಹಿಸುವ ಮರಕ್ಕೆ ಶಿಡಿಲಿನಿಂದ ಸುಟ್ಟ ಮರದ ಭಸ್ಮವಂ ಚೆಲ್ಲಲು,

ಆ ಮರವು ಅಗ್ನಿಬಾಧೆಯಿಲ್ಲದೆ ಎಂಬಿಸಂತೆ ಚಿಗುರಿ ಫಲಯುಕ್ತವಾಗುವುದು, ಬಿಳಿಯ ಅಕ್ಕಿಯಲ್ಲಿ ಅನ್ನವಂ ಮಾಡಿಸಿ ಮೊಸರಿನಿಂದ ಕಲಸಿ ಪಶುವ ಸುತ್ತಲೂ ಚೆಲ್ಲಿದರೆ ದೃಷ್ಟಿದೋಷ ಉಂಟಾಗುವುದಿಲ್ಲ, ಮಿಡತೆ, ಇಲಿ, ಪಕ್ಷಿಗಳು, ಕಂಬಳಿ ಹುಳಗಳು ಮೊದಲಾದ ಜಂತುಗಳಿಂದ ವೃಕ್ಷಗಳಿಗೆ ಉಪದ್ರವ ತಟ್ಟಿದರೆ “ ಓಂಸ್ವಸ್ತಿ, ಕಿಷ್ಕಿಂಧಾ ಪಸ್ಥಿತ ಪ್ರಕಟಪರಾಕ್ರಮಾಂತಕೋತ್ತಾರ್ಕ ಮುಂಡಲೋಪಜೀವಿತ ಶ್ರೀ ಹನುಮಾನಾಜ್ಞಾಪಯತಿ, ಕ್ರಮಮಾಣ ಶರೀರ ಸಿವಹಸ್ರಮಾವರ್ತ ಯತಿ. ತಸ್ಯಮಾನರ ಸಿಂಹಸ್ಯ ಕ್ರಮಮಾಣಸ್ಯ ಸಾಗರಂ ಕಕ್ಷಾಂತರಗತೋವಾಯುಚೀವಮೂತ ಇವಗರ್ಜತಿ. ಓಂಘರ್ಷನಮುಃ ” ಎಂಬ ಈ ಮಂತ್ರವಂ ನೂರೆಂಟು ಭಾರಿ ವಿಧ್ಯುಕ್ತವಾಗಿ ಜಪಿಸಿ ಚೀಟಿಯಲ್ಲಿ ಬರದು ವನಪುಷ್ಪದಲ್ಲಿ ಹೂತಲು ಸಮಸ್ತ ದುಷ್ಟ ಜಂತುಗಳೆಲ್ಲ ನಾಶವಪ್ಪದುವವು, ಇಂತು ರಮಣೀಯವಾದ ಉದ್ಯಾನ ವನದಲ್ಲಿ ಒಂದೆಡೆಯೊಳ್ ಹವಳದಂತೆ ಕೆಂಪಾದ ಎಳೆತಳಿರ್ಗಳಿಂ ಎಡೆಬಿಡದೆ ಸುತ್ತುವರಿದು ಅಂತರ್ಗೃಹಂಗಳಿಂದ ರಮಣೀಯಂಗಳಾಗಿ ಅರಳಿದ ಪುಷ್ಪಂಗಳಿಂದ ಪೂರಮಾಡುವ ಪುಷ್ಪಂಗಳಿಂದೊಡಗೂಡಿದ ಮಂದ ಮಾರುತ ಸಂಚಾರದಿಂದುದರಿದ ಕುಸುಮಗಳಿಂದ ಮನೋಹರವಾಗಿ, ಮತ್ತು ಪುಷ್ಪಂಗಳ ಮನೋಹರ ಮಕರಂದರಸಾ ಸ್ವಾದನೆಯಂ ಮಾಡಿ, ಮದಿಸಿ ಸಂತೋಷದಿಂ ಝೇಂಕರಿಸುವ ತುಂಬಿಗಳ ತಂಡಗಳಿಂದೊಡಗೂಡಿ, ವಿಚಿತ್ರವಾದ ಲತಾಗೃಹಂಗಳಂ ರಚಿಸಬೇಕು, ಮತ್ತೊಂದೆಡೆಯೊಳ್ ಸ್ತ್ರೀಪುರುಷರೀರ್ವರೂ ಕುಳಿತು ಉಯ್ಯಾಲೆಯನ್ನಾಡುತ ಸುಖದಿಂದಿರುವುದಕ್ಕೆ ಯೋಗ್ಯವಾದ ಉಯ್ಯಾಲೆಗಳಂ ಎರಡು ಮರಕ್ಕೆ ಕೂಡಿಸಿ ಲತಾವಿಶೇಷಂಗಳಿಂದ ರಚಿಸಬೇಕು, ಮತ್ತೊಂದೆಡೆಯೊಳ್ ಚಿಗುರಿರುವ ಮರಂಗಳಿಂದಲೂ, ಫಲ ಭಾರವಂ ಸಹಿಸಲಾರದೆ ಬೊಗ್ಗಿರುವ ಬಳ್ಳಿಗಳಿಂದಲೂ, ಪುಷ್ಪಗಳಿಂ ಪೂರಮಾಡುವ ಮಕರಂದ ಪ್ರವಾಹಂಗಳಂ ಸೇವಿಸಲು ಬರುವ ತುಂಬಿಗಳಿಂ ರಮಣೀಯವಾದ ಲತಾಗೃಹ ವಿಶೇಷಂಗಳಿಂದಲೂ, ಅರೆದೊಪ್ಪಲುಗಳಿಂದಲೂ, ರಮಣೀಯವಾಗಿ ಸುಖದಿಂ ಕುಳಿತು ವಿಹರಿಸುವುದಕ್ಕೆ ಯೋಗ್ಯವಾದ ಗುಂಡು ಕಲ್ಲುಗಳಿಂದಲೂ, ನಾನಾರತ್ನ

ಖಚಿತ ಸೋಪಾನ ಪಙ್ಕ್ತಿಗಳಿಂದಲೂ, ವಿಚಿತ್ರವರ್ಣ ನಾನಾ ಧಾತುಗಳಿಂದಲೂ, ಭೂಷಿತವಾದ, ಮತ್ತೂ ಈವನದ ರಮಣೀಯತೆಯಂ ನೋಡಲೋಸುಗ ಭೂಮಿಯಂ ಸೀಳಿ ಮೇಲಕ್ಕೆ ಪೊರಮಟ್ಟಿರುವ ಆದಿಶೇಷನ ಫಣವೋ? ಎಂಬಂತೆ ತೋರುತ್ತಲಿರುವ ರಮಣೀಯತರವಾದ ಕ್ರೀಡಾಪರ್ವತವಂ ರಚಿಸಿ, ಅವರೊಳ್ ತಮ್ಮ ಕೇಕಾಧ್ವನಿಗಳಿಂದ ಸರ್ಪಂಗಳಂ ಬೆದರಿಸುತ್ತ, ನಾಟ್ಯದೊಳ್ ಅತ್ಯಂತ ಇಚ್ಛೆಯಿಂದೊಡಗೂಡಿ ದೀರ್ಘ ವಾದ ಗರಿಗಳುಳ್ಳ ನವಿಲುಗಳಂ ಸಲಹಬೇಕು. ಮತ್ತೊಂದೆಡೆಯೊಳ್ ಲತೆಗಳೆಂಬ ನಾರಿಯರು ಎಳೆತಳಿರುಗಳೆಂಬ ಕೌಸುಂಭ ವಸ್ತ್ರಗಳನ್ನುಟ್ಟು, ಪುಷ್ಪಗಳ ಮಕರಂದ ರಸಗಳಿಂದ ಕಲಸಿದ ಪರಾಗವೆಂಬ ದಿವ್ಯ ಗಂಧಲೇಪನವಂ ಮಾಡಿ, ತುಂಬಿಗಳೆಂಬ ಕಸ್ತೂರಿ ತಿಲಕಗಳನ್ನಿಟ್ಟು, ಬದಿಯಲ್ಲಿರುವ ತರುಗಳೆಂಬ ಪುರುಷರಂ ಆಲಿಂಗಿಸಲೆಣಿಸಿ, ಪುಷ್ಪಂಗಳೆಂಬ ಕಣ್ಣುಗಳಿಂದ ತಮ್ಮ ಸೌಂದರ್ಯವಂ ನೋಡುವುದಕ್ಕೆ ಯೋಗ್ಯವಾದ ಮಣಿದರ್ಪಣವೋ? ಎಂಬಂತೆ ಅತಿ ನಿರ್ಮಲವಾಗಿ ಹಂಸಪಕ್ಷಿಗಳಿಂದೊಡಗೂಡಿ, ದುಷ್ಟಜಲಜಂತುಗಳಿಂದ ರಹಿತವಾಗಿ, ಈ ಸರೋವರವೇ ಸಮಸ್ತ ಜನರ ತಾಪಂಗಳಂ ಶಾಂತಿ ಹೊಂದಿಸುವುದರಲ್ಲಿ ಸಮರ್ಥವೆಂದು ಹೊಗಳುವವೋ? ಎಂಬಂತೆ, ತೀರಂಗಳಲ್ಲಿರ್ಪ ವೃಕ್ಷಂಗಳೊಳ್ ಗುಂಪುಗುಂಪಾಗಿ ಕೂಗುವ ಪಕ್ಷಿಗಳಿಂದ ರಮಣೀಯವಾದ ಒಂದು ಸರೋವರವಂ ನಿರ್ಮಿಸಿ, ಅದರೊಳ್ ಒಂದೆಡೆಯಲ್ಲಿ ತರುಣಿಯರ ಮೊಗದಾವರೆಗಳಂ ನಗೆಗೊಳಿಸುವ ಪೊಗಂಗಳಂ, ಮತ್ತೊಂದೆಡೆಯೊಳ್ ಯೌವನವಂ ಪಡದು ಕಾಮಕಲಾಕಲಾಪಕುಶಲರಾದ ಕಾಮಿನಿಯರ ಕಣ್ಗಳ ಕಾಂತಿಯಂ ಕಳೆಗುಂದುವಂತೆ ಮಾಡಿ, ಕಂಗೊಳಿಸುವ ಕನ್ನೈದಿಲುಗಳಂ ಕಲ್ಪಿಸಬೇಕು. ಮತ್ತು ಉದ್ಯಾನವನವೇ ಕೊಳದೊಳಿರುವದೊ? ಎಂಬಂತೆ ಈ ವನದ ಪ್ರತಿಬಿಂಬವಂ ಧರಿಸಿ, ವಿಚಿತ್ರವಾಗಿ ಚಂದ್ರಕಿರಣಂಗಳಿಂದಲೇ ತುಂಬಿರುವುದೊ? ಎಂಬಂತೆ, ಅತಿಶೀತಳವಾದ ಜಲದಿಂದಲೂ, ಕ್ರೀಡಾರ್ಥವಾದ ಒಂದು ಸಣ್ಣ ನಾವೆಯಿಂದಲೂ ಕೂಡಿ, ಅತಿಗಂಭೀರವಾದ ಆ ಸರೋವರವು ಉದ್ಯಾನವಂ ರಚಿಸುವ ಪುಣ್ಯಪುರುಷರಿಗೆ ಸುಖಕ್ಕೆ ಕಾರಣವಾಗುವುದು. ಇಂಥಾ ಸರೋವರದಲ್ಲಿ, ಬಿಳಿ

ಯಂತೆಯೂ, ಸ್ಫಟಿಕದಂತೆಯೂ, ಅತಿ ಶುಭ್ರವಾಗಿ, ಅಥವಾ ಕನ್ನೈದಿಲು ಪುಷ್ಪದಂತೆ ನೀಲವರ್ಣ ಉಳ್ಳದ್ದಾಗಿ, ಮತ್ತೂ ಕೆಂಪು ವರ್ಣವಾದರೂ ಉಳ್ಳದ್ದಾಗಿ, ಸಾಸುವೆಗಳಂತೆ ಸಣ್ಣ ಮಚ್ಚೆಗಳಂ ಕೂಡಿ ಸಮವಾದ ದೇಹ ಉಳ್ಳ ಕೂರ್ಮವಂ ಬಿಟ್ಟು ಸಲಹಿದಡೆ, ಆ ವನದ ಸ್ವಾಮಿಯು ಸಮಸ್ತ ರಾಜರುಗಳಿಗೂ ಅಧಿಪತಿಯಾಗಿ ಸಾರ್ವಭೌಮನೆನಿಸಿಕೊಳ್ಳುವನು. ಕಪ್ಪು ವರ್ಣವು, ಸ್ಫುಟವಾದ ಮಚ್ಚೆಗಳು. ಹಾವಿನ ತಲೆಯಂತೆ ತಲೆಯು, ದಪ್ಪವಾದ ಕೊರಳು ಉಳ್ಳ ಆಮೆಯು ರಾಜ್ಯವೃದ್ಧಿಯಂ ಮಾಡುವುದು, ವೈಡೂರ್ಯದಂತೆ ಕಾಂತಿಯು, ದಪ್ಪವಾದ ಕೊರಳು ಉಳ್ಳದ್ದಾಗಿ ಇರುವ ಆಮೆಯನ್ನು ಶುಭಾರ್ಥವಾಗಿ ಉದ್ಯಾನದಲ್ಲಿರುವ ಕೊಳದಲ್ಲಾದರೂ, ನೀರು ತುಂಬಿದ ಗಡಿಗೆಗಳಲ್ಲಾದರೂ ಅವಶ್ಯವಾಗಿ ಇಟ್ಟು ಸಂರಕ್ಷಣೆಯಂ ಮಾಡಬೇಕು, ಬಿಳೀಭದ್ರಮುಸ್ತೆ ಗೆಡ್ಡೆಗಳಂ, ಲಾಮಂಚವಂ, ಶುಂಠಿಯಂ ಹಿರೇ ಬೀಜಂಗಳಂ, ಒಣಗಿದ ತಾಳೇ ಹೂವಿನ ಕಾಯಿಗಳಂ, ನೆಲ್ಲೀಕಾಯಿಗಳಂ ಸಹಾ ಚೂರ್ಣವಂ ಮಾಡಿ ಕೊಳಗಳಲ್ಲಿ ಹಾಕಲು ನೀರು ಕೆಟ್ಟು ಹೋಗಿ ಉಪ್ಪಾಗಿದ್ದರೂ, ಖಾರವಾಗಿದ್ದರೂ, ದುರ್ಗಂಧವಾಗಿದ್ದರೂ ಈ ದುರ್ಗುಣಂಗಳೆಲ್ಲ ಹೋಗಿ ನಿರ್ಮಲವಾಗಿ, ಮಧುರವಾಗಿ, ಸವಿಯುಳ್ಳ ಯೋಗ್ಯ ವಾಗುವುದು. ಮತ್ತೂ ಉದ್ಯಾನ ವನದಲ್ಲಿರುವ ವೃಕ್ಷಂಗಳಂ ಪೋಷಿಸುವುದಕ್ಕೆ ಮುಖ್ಯ ಸಾಧನಗಳಾದ ವಾಪೀ ಕೂಪಾದಿಗಳಂ ರಚಿಸುವುದಕ್ಕೆ ಯೋಗ್ಯಂಗಳಾದ ಭೂಮಿಗಳ ಲಕ್ಷಣಂಗಳಂ ಪೇಳುವೆನು—

ಕೇಳೈ ರಾಜೇಂದ್ರನೆ! ಯಾವ ಭೂಮಿಯಂ ತೋಡಲು ಎಂಟುದಿಕ್ಕಿನಲ್ಲಿಯೂ ನೀರುಬರುವಶಿಲೆಗಳು ಕಾಣುವವೋ? ಆ ಭೂಮಿಯೊಳ್ ಮೂರು ಅರೆ ಪುರುಷಪ್ರಮಾಣದಲ್ಲಿ ನೀರು ಇರುವುದು, ಈಭೂಮಿಯಲ್ಲಿ ಅರ್ಧ ಪುರುಷ ಪ್ರಮಾಣವಂ ತೋಡಿದರೆ ಬಿಳೀ ಕಪ್ಪೆಯು, ಹೊಂಬಣ್ಣವಾದ ಮಣ್ಣು ಇರುವುದು, ಅದರ ಕೆಳಗೆ ಘಟ್ಟಿಯಾದ ಕಲ್ಲುಕಾಣುವುದು, ಅದಂ ಉಳಿಗಳಂ ಭೇದಿಸಿ ತೆಗೆಯಲು ನೀರು ಕಾಣುವುದು, ನೇರಳೆ ಮರದ ಪೂರ್ವದಿಕ್ಕಿನಲ್ಲಿ ಹುತ್ತವಿದ್ದರೆ ಆ ಹುತ್ತಕ್ಕೆ ದಕ್ಷಿಣ ಭಾಗದೊಳ್ ಎರಡು ಪುರುಷ ಪ್ರಮಾಣದ ಕೆಳಗೆ ನೀರು ಇರುವುದು, ಈ ಜಲವು

ಸ್ವಾದುವಾಗಿರುವುದು, ಈ ಭೂಮಿಯಲ್ಲಿ ಅರ್ಧ ಪುರುಷ ಪ್ರಮಾಣದ ಕೆಳಗೆ ನೀರುಗಳಿರುವವು, ಅದರ ಕೆಳಗೆ ಪಾರಾವತ ಪಕ್ಷಿಯ ವರ್ಣದಿಂದಿರುವ ಕಲ್ಲುಗಳಿರುವವು, ಆ ಬಳಿಕ ಕಪ್ಪಾದ ವರ್ಣವುಳ್ಳ ನೀರು ಕಾಣುವುದು, ಹುತ್ತದ ಮೇಲೆ ಲಕ್ಕೀಗಿಡ ಬೆಳದಿದ್ದರೆ, ಅದಕ್ಕೆ ದಕ್ಷಿಣದೋಳ್ ಮೂರು ಮೊಳದ ಮಧ್ಯದಲ್ಲಿ ಎರಡೂ ಕಾಲು ಪುರುಷ ಪ್ರಮಾಣದೋಳ್ ಅಕ್ಷೋಭ್ಯವಾದ ಜಲವು ಇರುವುದು, ಈ ಭೂಮಿಯಲ್ಲಿ ಅರ್ಧ ಪುರುಷಪ್ರಮಾಣದ ಕೆಳಗೆ ಕೆಸಿತ್ರ್ಯಸಗಳು ಇರುವವು, ಅದರ ಕೆಳಗೆ ಕಪಿಲ ವರ್ಣವಾದ ಮಣ್ಣು ಕಾಣುವುದು, ಅದರ ಕೆಳಗೆ ಮರಳು, ಅದರ ಕೆಳಗೆ ಬೆಣಚುಕಲ್ಲುಗಳು, ಅದರ ಕೆಳಗೆ ನೀರು ಇರುವುದು. ಯಲಚೀ ಗಿಡಕ್ಕೆ ಪೂರ್ವದಿಕ್ಕಿನಲ್ಲಿ ಹುತ್ತವಿದ್ದರೆ ಆ ಹುತ್ತಕ್ಕೆ ಪಶ್ಚಿಮಭಾಗದಲ್ಲಿ ಮೂರು ಪುರುಷಪ್ರಮಾಣವಂ ತೋಡಲು ಜಲವಿರುವುದು, ಆ ಭೂಮಿಯಲ್ಲಿ ಅರ್ಧ ಪುರುಷಪ್ರಮಾಣದೋಳ್ ಬಿಳೀ ಹಲ್ಲೀ ಇರುವುದು ಮತ್ತೂ ಯಲಚೀಮರವು ಫಲಿಸಿದ್ದರೆ ಅದರ ಪಶ್ಚಿಮ ಭಾಗದೋಳ್ ಮೂರೂ ಕಾಲು ಪುರುಷಪ್ರಮಾಣದಲ್ಲಿ ಜಲವಿರುವುದು. ಈ ಭೂಮಿಯು ಒಂದು ಪುರುಷಪ್ರಮಾಣ ತೋಡಿದರೆ ನೀರುಹಾವು ಇರುವುದು. ಕಲ್ಲತ್ತೀ ಮರದ ಬುಡದಲ್ಲಿ ಹುತ್ತವಿದ್ದರೆ ಆ ಭೂಮಿಯೋಳ್ ಮೂರೂ ಕಾಲು ಪುರುಷಪ್ರಮಾಣದಲ್ಲಿ ನೀರು ಇರುವುದು, ಈ ಭೂಮಿಯೋಳ್ ಅರ್ಧ ಪುರುಷಪ್ರಮಾಣದ ಕೆಳಗೆ ಬಿಳುಪಾಗಿ ಹೊಂಬಣ್ಣವಾಗಿರುವ ಮಣ್ಣು ಇರುವುದು, ಅದರ ಕೆಳಗೆ ಅಜಗರದ ಬಣ್ಣವುಳ್ಳ ಕಲ್ಲು ಕಾಣುವುದು, ಅದರ ಕೆಳಗೆ ಬಿಳೀಬಣ್ಣದ ಇಲಿಯು ಇರುವುದು. ವಿಭೀತಕವೆಂಬ ವೃಕ್ಷದ ಬದಿಯಲ್ಲಿ ಹುತ್ತವಿದ್ದರೆ ಅದರ ದಕ್ಷಿಣ ಭಾಗದಲ್ಲಿ ಮೂರೂವರೆ ಪುರುಷಪ್ರಮಾಣದೋಳ್ ಜಲವಿರುವುದು, ಈ ಭೂಮಿಯೋಳ್ ಒಂದು ಪುರುಷಪ್ರಮಾಣದಲ್ಲಿ ಬಿಳುಪಾದ ಮಣ್ಣು, ಅದರ ಕೆಳಗೆ ಕೆಂಪು ಕಲ್ಲುಗಳು ಇರುವುದು, ಮತ್ತೂ ಪಶ್ಚಿಮ ದಿಕ್ಕಿನಿಂದ ನೀರು ಬರುತ್ತಿದ್ದರೆ ಮೂರು ವರುಷದ ಮೇಲೆ ಆ ನೀರು ಬತ್ತಿ ಹೋಗುವುದು, ಕಂಚುವಾಳದ ಮರಕ್ಕೆ ಈಶಾನ್ಯ ದಿಕ್ಕಿನಲ್ಲಿ ದರ್ಭೆಗಳಿಂದ ಸಹಿತವಾದ ಹುತ್ತವಿದ್ದರೆ ಆ ಹುತ್ತಕ್ಕ

ಮರಕ್ಕೆ ಮಧ್ಯೆ ಇರುವ ಭೂಮಿಯೊಳ್ ಐದೂವರೆ ಪುರುಷಪ್ರಮಾಣದಲ್ಲಿ ಜಲವಿರುವುದು, ಈ ಭೂಮಿಯೊಳ್ ಒಂದು ಪುರುಷಪ್ರಮಾಣದ ಕೆಳಗೆ ಸರ್ಪವಿರುವುದು, ಆ ಬಳಿಕ ಕೆಂಪಾದ ಮಣ್ಣು, ಆ ಬಳಿಕ ಕೆಂಪು ಸುರಜು ಕಲ್ಲುಗಳು ಇರುವವು ಸಕಲ ಜಾತಿ ವೃಕ್ಷಗಳ ಮೂಲದಲ್ಲಿಯೂ ತೋಡಿದರೆ ಕೆಳಗೆ ಕಪ್ಪೆಗಳಿದ್ದರೆ ನಾಲ್ಕೂವರೆ ಪುರುಷಪ್ರಮಾಣದಲ್ಲಿ ಜಲವಿರುವುದು, ಹಿಪ್ಪೇಮರಕ್ಕೆ ಉತ್ತರಭಾಗದಲ್ಲಿ ಹುತ್ತವಿದ್ದರೆ ಆ ಹುತ್ತಕ್ಕೆ ಸುತ್ತಲೂ ಐದು ಮೊಳವಂ ಬಿಟ್ಟು ತೋಡಲು ನಾಲ್ಕು ಪುರುಷಪ್ರಮಾಣದಲ್ಲಿ ಜಲವಿರುವುದು, ಆ ಭೂಮಿಯಲ್ಲಿ ಒಂದು ಪುರುಷ ಪ್ರಮಾಣದೊಳ್ ಸರ್ಪವಿರುವುದು, ಅದರ ಕೆಳಗೆ ಧೂಮ್ರವರ್ಣವಾದ ಮಣ್ಣಿರುವುದು, ಅದರ ಕೆಳಗೆ ಬ್ಯಾಲವ ಹಣ್ಣಿನವರ್ಣವಾದ ಮಣ್ಣಿರುವುದು, ಅನಂತರ ಪೂರ್ವದಿಕ್ಕಿನಲ್ಲಿ ಸ್ರವಿಸುತ್ತನೊರೆಗಳೊಡಗೂಡಿದ ಜಲವು ಬರುವುದು, ಕಡಹದ ಮರದ ಪಶ್ಚಿಮ ದಿಕ್ಕಿನಲ್ಲಿ ಹುತ್ತವಿದ್ದರೆ ಆ ಹುತ್ತದ ದಕ್ಷಿಣ ಭಾಗದೊಳ್ ಮೂರು ಮೊಳದ ಭೂಮಿಯ ಮಧ್ಯದಲ್ಲಿ ಐದು ಪುರುಷಪ್ರಮಾಣದಲ್ಲಿ ನೀರು ಇರುವುದು, ಪನೇಮರ, ತೆಂಗಿನಮರಗಳ ಬುಡದ ಹತ್ತಿರ ಹುತ್ತವಿದ್ದರೆ ಆ ಹುತ್ತಕ್ಕೆ ಸುತ್ತಲೂ ಆರು ಮೊಳದೊಳಗೆ ನಾಲ್ಕಾಳು ಉದ್ದದಲ್ಲಿ ನೀರು ಇರುವುದು, ಅಶ್ಮಾಂತಕವೆಂಬ ವೃಕ್ಷದ ಎಡದ ಭಾಗದೊಳ್ ಬುಲಚೀಮರವಾದರೂ, ಹುತ್ತವಾದರೂ ಇರಲು, ಆ ಹುತ್ತಮರಗಳ ಮಧ್ಯದೊಳ್ ಆರು ಮೊಳದಲ್ಲಿ ಮೂರು ಪುರುಷಪ್ರಮಾಣದೊಳ್ ನೀರು ಇರುವುದು, ಈ ಭೂಮಿಯಲ್ಲಿ ಒಂದಾಳುದ್ದದೊಳ್ ಆಮೆಯು ಇರುವುದು, ಅದರ ಕೆಳಗೆ ಹೊಗೆಬಣ್ಣದ ಕಲ್ಲುಗಳು, ಅದರ ಕೆಳಗೆ ಮರಗಳು ಇರುವುದು, ಆ ಭೂಮಿಯೊಳ್ ಆದಿಯಲ್ಲಿ ದಕ್ಷಿಣದಿಕ್ಕಿನಿಂದ ಶಿರೆ ಒಡೆದು ನೀರು ಬರುವುದು, ಅನಂತರ ಪೂರ್ವದಿಕ್ಕುಗಳಿಂದ ನೀರು ಬರುವುದು. ಮಾವು, ತಿಲಕವೃಕ್ಷ, ಅಂಕೋಲೆ, ಗೇರು, ಬಾಗೆ, ಸಂಪಿಗೆ, ಲಕ್ಕಿ, ಹಿಪ್ಪೆ, ಈ ಮರಗಳ ಮೂಲದಲ್ಲಿ ಹುತ್ತವಿದ್ದರೆ ಅದರ ಉತ್ತರ ಭಾಗದೊಳ್ ನಾಲ್ಕೂವರೆ ಪುರುಷಪ್ರಮಾಣದಲ್ಲಿ ನೀರು ಇರುವುದು, ಹುಲ್ಲಿಲ್ಲದ ಭೂಮಿಯಲ್ಲಿ ತೋಡಿದರೆ ಒಳಗೆ ಹುಲ್ಲುಗಳಿಂ

ಬೊಡಗೂಡಿದ ನೀರು ಬರುವ ಶಲಿಯು ಕಂಡರೆ, ಆ ಭೂಮಿಯಲ್ಲಿ ಧನವಿರುವದೆಂದರಿಯಬೇಕು, ಮುಳ್ಳುಗಳಿಲ್ಲದೇ ಇರತಕ್ಕ ಗಿಡಗಳು ಮುಳ್ಳುಗಳೊಡಗೂಡಿದ್ದಾಗ್ಯೂ ಮುಳ್ಳುಗಳೊಡಗೂಡಿರತಕ್ಕ ಗಿಡಗಳು ಮುಳ್ಳುಗಳಿಲ್ಲದೇ ಇದ್ದಾಗ್ಯೂ ಆ ಗಿಡಗಳ ಪಶ್ಚಿಮಭಾಗದಲ್ಲಿ ಮೂರುಮೊಳದೊಳಗೆ ಮೂರಾಳುದ್ದದಲ್ಲಿ ನೀರಿರುವುದು, ನೀರು ಬೀಳದೇ ಇದ್ದರೆ ಒಂಭತ್ತಾಳುದ್ದದಲ್ಲಿ ನಿಧಿ ಇರುವುದು, ಚನ್ನಾಗಿ ಬೆಳೆದ ಮರದಲ್ಲಿ ಒಂದು ಕೊಂಬೆಯು ನೆಲದ ಮೇಲೆ ಬಗ್ಗಿದರೂ, ಬಿಳುಪಾಗಿದ್ದರೂ, ಆ ಕೊಂಬೆಯ ಕೊನೆಯ ಭೂಮಿಯಲ್ಲಿ ಮೂರಾಳುದ್ದದೊಳಗೆ ನೀರು ಇರುವುದು, ನೀರಿಲ್ಲದ ಭೂಮಿಯಲ್ಲಿ ಖರ್ಜೂರದ ಗಿಡವು ಎರಡು ಕೊಂಬೆಗಳುಳ್ಳದ್ದಾದರೆ ಅದರ ಪಶ್ಚಿಮಭಾಗದೋಳ್ ಮೂರಾಳುದ್ದದಲ್ಲಿ ಜಲವಿರುವುದು, ಕರ್ಣಿಕಾರ ವೃಕ್ಷವು, ಬಿಳೀಪುಷ್ಪಂಗಳುಳ್ಳ ಮುತ್ತುಗದ ಮರವು ಇರುವ ಸ್ಥಳಕ್ಕೆ ದಕ್ಷಿಣದಿಕ್ಕಿನೋಳ್ ಮೂರು ಪುರುಷಪ್ರಮಾಣದಲ್ಲಿ ನೀರು ಇರುವುದು, ಯಾವ ಭೂಮಿಯಲ್ಲಿ ಶಖೆ ಹೊಗೆಗಳಿರುವವೋ? ಆ ಭೂಮಿಯಲ್ಲಿ ಎರಡಾಳುದ್ದದ ಕೆಳಗೆ ನೀರಿರುವುದು, ಯಾವ ಭೂಮಿಯಲ್ಲಿ ಹುಟ್ಟಿದ ಪೈರುಗಳು ಬಿಳುಪಾಗುವುದೋ? ಅಥವಾ ಬಣಗಿ ನಷ್ಟವಾಗುವುದೋ? ಆ ಭೂಮಿಯಲ್ಲಿ ಎರಡಾಳುದ್ದದಲ್ಲಿ ನೀರಿರುವುದು, ಯಲಚೀಮರ, ಲೋಹಿತವೆಂಬ ಮರವು ಎರಡೊಂದಾಗಿ ಕೂಡಿರ್ದರೆ ಆ ನೆಲದೋಳ್ ಹದಿನಾರು ಪುರುಷಪ್ರಮಾಣದಲ್ಲಿ ನೀರಿರುವುದು. ಮತ್ತೂ ಆ ಭೂಮಿಯೋಳ್ ಅರ್ಧ ಪುರುಷಪ್ರಮಾಣದಲ್ಲಿ ಚೇಳಿರುವುದು. ಬಳಿಕ ಹಿಟ್ಟುಕಲ್ಲು ಅಥವಾ ಬಿಳುಪು ಮಣ್ಣಾದರೂ ಇರುವುದು, ಯಾವ ಭೂಮಿಯಲ್ಲಿ ಗಂಟುಗಳುಳ್ಳ ಬನ್ನೀಮರವು ಹುಟ್ಟಿರುವುದಲ್ಲದೆ ಅಲ್ಲಿಯೇ ಹುತ್ತವೂ ಇದ್ದರೆ ಆ ಹುತ್ತಕ್ಕೆ ಪಶ್ಚಿಮದಿಕ್ಕಿನೋಳ್ ಐದು ಮೊಳ ಮೊದಲಾಗಿ ಐವತ್ತಾಳುದ್ದದೋಳ್ ನೀರಿರುವುದು, ಯಾವ ಭೂಮಿಯಲ್ಲಿ ತಾವರೆ, ಕಬ್ಬು ಲಾಮಂಚ, ದರ್ಭೆ, ಖರ್ಜೂರ, ನೇರಳೆ, ಮತ್ತಿ, ಸುರಹೊನ್ನೆ ಮೊದಲಾದ ವೃಕ್ಷಗಳು ಬಳ್ಳಿಗಳಿಂದಲೂ, ಗರಿಕೆಗಳಿಂದಲೂ ಯುಕ್ತವಾಗಿರುವವೋ? ಆ ಭೂಮಿಯಲ್ಲಿ ಮೂರು ಪುರುಷಪ್ರಮಾಣದೋಳ್ ನೀರಿರುವುದು, ಕಾಶಂಗಳೆಂಬ ತೃಣವಿಶೇಷಂಗಳಿಂದಲೂ, ದರ್ಭೆಗಳಿಂದಲೂ

ನೀಲವರ್ಣವಾದ ಮಣ್ಣಿನಿಂದಲೂ, ಮರಗಳಿಂದಲೂ ಕೂಡಿದ ಭೂಮಿ ಯಲ್ಲಿ ಸೀ ನೀರು ಇರುವುದು, ಮರಳು ಸಹಿತವಾದ ಕೆಂಪು ಭೂಮಿ ಯಲ್ಲಿ, ಒಗರಿನಿಂ ಕೂಡಿ ಕಪ್ಪಾದ ಮಣ್ಣಿದ್ದರೆ ಅಲ್ಲಿ ಕಷಾಯದಂತಿ ರುವ ಜಲವಿರುವುದು, ಕಪಿಲ ವರ್ಣದ ಭೂಮಿಯೋಳ್ ಚೌಳು ನೀರು ಬೀಳುವುದು, ಬಿಳುಪಾದ ಭೂಮಿಯಲ್ಲಿ ಉಪ್ಪು ನೀರು ಬೀಳುವುದು, ಛಿದ್ರವಾದ ಎಲೆಗಳುಳ್ಳ, ಮತ್ತೀ, ಗೋಣೀ, ಬಿಲ್ವ, ಬೇವು, ಅಗರು, ಷೋಪಲಾದ ಮರಗಳುಳ್ಳ ಭೂಮಿಯೋಳ್ ನೀರು ದೂರದೊಳಿರುವವು, ಭಸ್ಮ, ಕತ್ತೆ, ಮಂಟೆ ಇವುಗಳ ವರ್ಣದಿಂ ಕೂಡಿದ ಭೂಮಿಯೋಳ್ ನೀರಿರುವದಿಲ್ಲ ಇಂದ್ರನೀಲಮಣಿಯಂತೆಯೂ, ಇಂಗಲೀಕವಂತೆಯೂ, ಕಾಡಿಗೆಯಂತೆಯೂ, ಅರಿವಳದಂತೆಯೂ, ಪಾರಿವಾಳದ ಪಕ್ಷಿಯಂತೆಯೂ, ಜೇನುತುಪ್ಪದಂತೆಯೂ ಇರುವ ಶಿಲೆಗಳು ಭೂಮಿಯೊಳಿದ್ದರೆ ಆ ಶಿಲೆಗಳ ಕೆಳಗೆ ನೀರಿರುವವು, ಈ ಶಿಲೆಗಳಂ ಒಡೆಯುವದಕ್ಕೆ ಆಗದಿದ್ದರೆ ಮು ತ್ತುಗದ ಸೌದೆಗಳಿಂದಲೂ, ತಿಂದು ಕ ಕಾಷ್ಠಂಗಳಿಂದಲೂ, ಆ ಶಿಲೆಯಂ ಸುಟ್ಟು ಸುಣ್ಣದ ನೀರು ಬಿಡಲು ಆ ಶಿಲೆಯು ಪೊರೆಗಳಿಂ ಕೂಡಿ ಉಳಿ ಗಳಿಂ ಭೇದಿಸಲು ಯೋಗ್ಯವಾಗುವವು, ಮತ್ತೂ ಆ ಶಿಲೆಯಂ ಮೊದಲು ಹೇಳಿದಂತೆ ಸುಟ್ಟು ತಣ್ಣೀರಿನಿಂದ ಯಲಗದ ಭಸ್ಮವಂ ಕಲಸಿ ಹಾಲು ಮೊಸರುಗಳಿಂದ ಕೂಡಿಸಿ ಏಳು ಭಾರಿ ಚುಮುಕಿಸಲು ಆ ಶಿಲೆಯು ಪೊರೆ ಬಿಟ್ಟು ಒಡೆಯುವವು. ಮತ್ತೂ ಬಿಸಿಯಾದ ಗಂಜಿ, ಮದ್ಯ, ಬಿಳೀ ಹುರಳಿ ಕಟ್ಟು, ಯಲಚೀ ಹಣ್ಣುಗಳ ಸಹಾ ಕೂಡಿಸಿ ಏಳು ರಾತ್ರಿ ನೆನೆಸಿದರೆ ಆಲೆಯು ಒಡೆದು ಪೋಗುವವು. ಎಲೈ ಸುಗಂಧರಾಜ ಕುಮಾರನೆ! ಕೇಳು, ಕೊಳ, ಭಾವಿ, ಮೊದಲಾದುವಂ ತೋಡಿಸಬೇಕಾ ದರೆ, ಹಸ್ತ, ಮಘಾ, ಧನಿಷ್ಠಾ, ಅನೂರಾಧಾ, ಪುಷ್ಯ, ಉತ್ತರಾ, ಅಶ್ವಿನೀ, ರೋಹಿಣೀ, ಶತಭಿಷಕ್, ಈ ನಕ್ಷತ್ರಂಗಳಲ್ಲಿ ಪ್ರಾರಂಭವಂ ಮಾಡಿಸಬೇಕು, ಗ್ರಾಮಕ್ಕೆ ಆಗ್ನೇಯ, ಈಶಾನ, ವಾಯುವ್ಯ, ನೈಋ ತ್ಯ, ಈ ದಿಕ್ಕುಗಳಲ್ಲಿ ಭಾವಿಗಳಂ ತೋಡಿಸಬಾರದು, ಕಡೆಯ ನಾಲ್ಕು ದಿಕ್ಕುಗಳಲ್ಲಿ ತೋಡಿಸಬಹುದು. ಎಲೈ ರಾಜೇಂದ್ರನೆ! ಇನ್ನು ವೃಕ್ಷ ಗಳಂ ಸಂರಕ್ಷಿಸುವ ಕ್ರಮವಂ ಪೇಳುವೆನು ಕೇಳು—ಖರ್ಜೂರ, ಬಿಲ್ವ,

ಕಿತ್ತಳೆ. ಈ ವೃಕ್ಷಂಗಳ ಬೇರಿಗೆ ಬಿಳೀ ಸಾಸುವೆಯುಂ ಚೂರ್ಣವಂ ಮಾಡಿ ಹಾಕಿದರೆ ವೃದ್ಧಿ ಹೊಂದುವವು, ನಾನಾ ವಿಧಂಗಳಾದ ಹಿಂಡಿಗಳಿಂದಲೂ, ಹಿಟ್ಟಿನಿಂದಲೂ ಮಾವಿನ ಮರಂಗಳು ವೃದ್ಧಿ ಹೊಂದುವವು, ಐರಾವತವೆಂಬ ಮರವು ದೇವಗಣಿಗಿಲು ಮರವು ಸೆಲ್ಲುಗಳಂದ ಮಾಂಸವಂ ಬೆರಸಿ ಬೇರಿಗೆ ಹಾಕಲು ವೃದ್ಧಿಯುಂ ಹೊಂದುವವು, ಹಳೇ ಸೆಲ್ಲೀಗಿಡಗಳ ಬೇರಿಗೆ ಉಪ್ಪಿನ ಹಿಟ್ಟು ಹಾಕಲು ವೃದ್ಧಿಯುಂ ಹೊಂದುವವು, ಬಿಂಬುಕವೃಕ್ಷವು ಹಾಲು ನೀರು ಬೆರಸಿ ಹಾಕಿದರೆ ವೃದ್ಧಿ ಹೊಂದುವವು, ತೆಂಗಿನಮರವು ಅಕ್ಕಿಯ ತೌಡುಗಳಿಂದ ವೃದ್ಧಿಯುಂ ಹೊಂದುವವು, ಮಾವಿನಮರವು ಹುಲ್ಲಿ, ಹುಂಬಿ, ನರಿ, ನಾಯಿ, ಆನೆ ಮೊದಲಾದ್ದರ ಮಾಂಸವಂ ಹಾಲಿನಲ್ಲಿ ಬೇಯಿಸಿ, ನೀರಿನಿಂ ಬೆರಸಿ ಬೇರಿಗೆ ಹಾಕಲು ವೃದ್ಧಿಯುಂ ಹೊಂದುವದಲ್ಲದೆ ಚೆನ್ನಾಗಿ ಫಲಿಸುವವು, ತುಪ್ಪ, ಕುರಿಮಾಂಸ, ಹಂದೀಉಪ್ಪುಗಳಿಂದ ದಾಳಿಂಬದಗಿಡವು ವೃದ್ಧಿ ಹೊಂದುವವು, ಹುರಳೀಕಟ್ಟಿಗೆ ನೀರು ಬೆರಸಿ ಹಾಕಲು ಕಸರೀ ವೃಕ್ಷವು ವೃದ್ಧಿಯುಂ ಹೊಂದುವವು, ಸೆಲ್ಲೀ, ತಾರೆ, ಅಳಲೆ ಕಾಯಿಗಳಂ ಚೂರ್ಣವಂ ಮಾಡಿ ತುಪ್ಪದಿಂ ಕಲಸಿ ದಾಳಿಂಬದ ಗಿಡಗಳಿಗೆ ಲೇಪವನ್ನಿಟ್ಟು, ಆ ಚೂರ್ಣದಿಂದಲೇ ಧೂಪವಂ ಹಾಕಿದರೆ ಚೆನ್ನಾಗಿ ವೃದ್ಧಿಯುಂ ಹೊಂದುವದಲ್ಲದೆ ಈ ವೃಕ್ಷದಲ್ಲಿ ತಾಳೆ ಫಲದಂತೆ ದಪ್ಪವಾದ ಫಲ ಉಂಟಾಗುವವು, ಮೊಸರಿನ ಕೆನೆ, ಮದ್ಯ, ಯಾಲಕ್ಕೀ ಹಣ್ಣು, ಎಳ್ಳು, ಗೋಧಿ, ಕವ, ಉಗಳು ನೀರುಗಳಿಂದ, ತಾರೆ, ಕೇದಗೆ, ನಾಗಸಂಪಿಗೆ ಮರಗಳು ವೃದ್ಧಿಯುಂ ಹೊಂದುವವು. ಮತ್ತೂ ಪರಿಮಳ ಯುಕ್ತಂಗಳಾದ ಪುಷ್ಪಂಗಳಂ ಧರಿಸುವವು. ನವಣೆ, ಗುಲಗಂಜಿ, ಬೇವಿನಬೀಜ, ಹಿಪ್ಪಲಿ, ಬಜೆ, ಅರಶಿನ, ಎಳ್ಳು, ಸಾಸುವೆಗಳಂ ಸಮವಾಗಿ ಚೂರ್ಣವಂ ಮಾಡಿ ಕಲ್ಲತ್ತೀಮರದ ಹಾಲಿನಿಂದಲೂ, ತುಪ್ಪದಿಂದಲೂ ಕಲಸಿ, ವೃಕ್ಷಂಗಳ ಬೇರಿನಲ್ಲಿ ನೀರಿನ ಜೊತೆಯೊಳ್ ಹಾಕಲು ಐದು ದಿನದೊಳಗೆ ಆ ವೃಕ್ಷಂಗಳು ಬಿಗತು ಪುಷ್ಪಗಳಂ ಧರಿಸುವವು. ನೀರಿನಲ್ಲಿ ತೌಡು, ಹೊಟ್ಟು, ಕೋಳೀ ಹಿಕ್ಕೆಗಳಂ ಕೂಡೆ ಕವರಿ ಆ ನೀರಂ ದ್ರಾಕ್ಷೀಗಿಡದ ಬೇರಿಗೆ ಹಾಕಲು ವೃದ್ಧಿಯುಂ ಹೊಂದುವವು. ಬಜೆಯುಂ ಹುಡಿ ಮಾಡಿ

ನೀರಿನೊಡನೆ ಬೆರಸಿ ಹುಳಿಸಿನ ಮರಕ್ಕೆ ಹಾಕಲು ಆ ಮರವು ಬುಡದಿಂದ
ಕೊನೆವರಿವಿಗೂ ಫಲಿಸುವದು. ತುಪ್ಪ, ಬೆಲ್ಲ, ಜೇನು, ಹಾಲುಗಳಂ
ಬೆರಸಿ ಬಿಲ್ವ, ಬ್ಯಾಲದಮರಗಳ ಬೇರಿಗೆ ಹಾಕಿ ನೀರು ಬಿಡುತ್ತಿರಲು ಆ
ಮರಗಳು ಅಮೃತದಂತೆ ಸವಿಯಾದ ಫಲಂಗಳಂ ಧರಿಸುವವು. ಹೀರೇ
ಕಾಯಿನ ತಿರುಳುಗಳಂ ಪಕ್ವ ಮಾಂಸಂಗಳಂ ಕೂಡೆ ನೀರೊಡನೆ ಬೆರಸಿ
ಹಿಪ್ಪೇಮರದ ಬೇರಿಗೆ ಸುರಿಯೆ ಬಿಗತು ಪುಷ್ಪಂಗಳಂ ಧರಿಸುವದು.
ಯಲಚೀಮರದ ಬುಡದೊಳ್ ಶವಮಂ ಹೂಳಿ, ಎಳ್ಳು, ಅತಿಮಧುರ, ಜೇ
ನು ತುಪ್ಪಗಳಂ ಬೆರಸಿ ನೀರೊಡಗೂಡಿ ಬೇರಿನೊಳ್ ಬಿಡೆ ಸಕ್ಕರೆಯಂತೆ
ಸವಿಯಾದ ಫಲ ಉಂಟಾಗುವದು. ಆಡು, ಕುರಿ, ಹಂದಿ, ಇವುಗಳ, ಹಿಕ್ಕೆ
ಗಳಂ ವಾಯುವಿಳಂಗಮಂ ಕೂಡ ಕ್ರಮವಾಗಿ ಬೇರಿಗೆ ಹಾಕುತ್ತಿದ್ದರೆ ಮಾ
ದಳದಮರವು ಚೆನ್ನಾಗಿ ವೃದ್ಧಿಯಂ ಹೊಂದಿ ಫಲಮಂ ಹೊಂದುವದು. ಸಮ
ಸ್ತ ಲತೆ ಗಳಂ ಬಳ್ಳಿಗಳಂ ಎಲೆಗಳಂ ಬೇಳಿನ ಕೊಂಡಿಯಿಂ ಚುಚ್ಚಿ
ತುಪ್ಪದ ಧೂಪಮಂ ಕೊಟ್ಟು, ಇಲಿ, ಹಂದಿಗಳ ಮಾಂಸಗಳಂ ಬುಡಕ್ಕೆ
ಹಾಕಿ ನೀರು ಬಿಟ್ಟು ಬೆಳಸಲು ಥಪ್ಪವಾದ ಫಲಂಗಳಂ ಧರಿಸುವವು.
ಪರಿಮಳೋದಕದಿಂದಲೂ ಶ್ರಪದ ಜಲದಿಂದಲೂ, ನೆನಸಲ್ಪಟ್ಟ ಬೇರುಳ್ಳ
ತಾಳೇಗಿಡವು ವರ್ಷಾಕಾಲದಲ್ಲಿ ಬಿಗತು ಪುಷ್ಪಂಗಳಂ ಧರಿಸುವದು.
ಯಾವದಾದರೂ ಒಂದು ಪುಷ್ಪವಾಸನೆಯಿಂದ ಮಣ್ಣಿಗೆ ವಾಸನೆಯಂ
ಕಟ್ಟಿ ಆ ಮಣ್ಣಂ ವೃಕ್ಷಗಳ ಬುಡದಲ್ಲಿ ಹಾಕಿದರೆ ಆ ವೃಕ್ಷಂಗಳ ಪುಷ್ಪ
ಗಳು ಅತ್ಯಂತ ವಾಸನೆಯುಳ್ಳದ್ದಾಗುವವು. ಕೋಷ್ಠದ ಎಲೆಗಳಂ, ತುಂ
ಗೆ ಗಿಡಗಳಂ, ಆಮಂಚಮಂ, ತಗರವಂ, ಸಹಾ ಚೂರ್ಣವಂ ಮಾಡಿ
ನೀರೊಡನೆ ಬೆರಸಿ ಆ ನೀರಿನಿಂ ಪುಷ್ಪಂಗಳಂ ನೆನೆಸಲು ಒಂದು ತಿಂಗಳು
ವರಿವಿಗೂ ವಾಸನೆ ಇರುವದು. ತಾರೇ ಗಿಡಕ್ಕೆ ಗಜದಂತವಂ, ಹುರಳಿ
ಯಂ ಸಹ ಚೂರ್ಣವಂ ಮಾಡಿ ಬೇರಿಗೆ ಹಾಕಿದರೆ ಪ್ರತಿ ದಿವಸವು ಪು
ಷ್ಪಯುಕ್ತವಾಗಿ ಪ್ರಕಾಶಿಸುವದು. ಬಾಳೆ, ಶಫರಿ, ಮೊದಲಾದ ಗಿಡ
ಗಳು, ಹಂಪಿ, ಬೆಕ್ಕುಗಳ ಲದ್ದಿಯಂ ಸಮವಾಗಿ ತುಪ್ಪದಲ್ಲಿ ಕಲಸಿ ಲೇ
ಪವಂ ಮಾಡಿ, ಬೇರಿನಲ್ಲೂ ಹಾಕಿ ನೀರಂ ಬಿಟ್ಟರೆ ರೋಗಶೂನ್ಯಂಗಳಾಗಿ,
ಮನ್ಮಥ ಭೂಪಾಲನ ಶಾಸನದಂತೆ ಧ್ವನಿಯುಳ್ಳ ಕೋಗಿಲೆಗಳಂ ಭಕ್ಷಿಸ

ಲ್ಪಡುವ ಚಿಗರುಗಳುಳ್ಳವವಾಗುವವು. ಸೊಪ್ಪಿಯಾದ ಗಿಡಗಳಿಗೆ ತುಪ್ಪ ದ ಧೂಪನಂ ಹಾಕಿ, ಯವೆ ಎಂಬ ಧಾನ್ಯದ ಚೂರ್ಣವಂ ನೀರಿನಲ್ಲಿ ಬೆರಸಿ ಬೇರೊಳ್ ಸುರಿಯಲು,ಹಾಲು ನಿರುಪೆರಸಿ ಸುರಿಯಲು,ಶಪ್ಫೋದಕವಂ ಸುರಿಯಲು, ವಾಯುವಿಳಂಗ ಎಳ್ಳುಗಳಂ ಅರದು ಕಲ್ಕವಂ ಮಾಡಿ ಲೇಪವಂ ಮಾಡಲು ವೃದ್ಧಿಯಂ ಹೊಂದುವವು, ಅಂಕೋಲೆ ಬೀಜದ ಚೂರ್ಣವಂ ನೀರೊಡನೆ ಬೆರಸಿ ಕಾಯಿಸಿ ಜೇನುತುಪ್ಪವಂ ಬೆರಸಿ ವೃಕ್ಷಂಗಳ ಬೇರಿಗೆ ಬಿಡುತ, ಕಾಡುಹಂದಿ, ಹುಲ್ಲೆಗಳ ಮಾಂಸಗಳಂ ಬುಡದಲ್ಲಿ ಹಾಕಲು ವೃಕ್ಷಂಗಳು ರೋಗರಹಿತಂಗಳಾಗಿ, ಚಿಗರುಗಳಿಂದಲು, ಪುಷ್ಪಂಗಳಿಂದಲು ಯುಕ್ತಂಗಳಾಗುವವು. ಮನುಷ್ಯರಂತೆ ವೃಕ್ಷಂಗಳಿಗೂ ವಾತ ಪಿತ್ತ ಶ್ಲೇಷ್ಮ ಪ್ರಕೃತಿಗಳಂ ತಿಳಿದು ರೋಗಚಿಕಿತ್ಸೆಯಂ ಮಾಡಬೇಕು. ಸಣ್ಣನಾಗಿ, ಉದ್ದವಾಗಿ, ಭಾರವಿಲ್ಲದ್ದಾಗಿ, ನಿದ್ರೆಯಿಲ್ಲದೇ ಸ್ವಲ್ಪಚೈತನ್ಯವುಳ್ಳದ್ದಾಗಿ, ಪುಷ್ಪಫಲಂಗಳಂ ಧರಿಸದೇ ಯಿರುವ ವೃಕ್ಷಂಗಳು ವಾತಪ್ರಕೃತಿಗಳೆನಿಸುವವು. ಬಿಸಲಂ ಸಹಿಸಲಾರದೆ ಬಿಳುಪಾಗಿ, ಸಣ್ಣಕೊಂಬೆಗಳುಳ್ಳವಾಗಿ, ಮೃದುವಾಗಿ, ಅಕಾಲದಲ್ಲಿ ಪುಷ್ಪಫಲಂಗಳಂ ಧರಿಸುವ ವೃಕ್ಷಂಗಳು ಪಿತ್ತಪ್ರಕೃತಿಗಳೆನಿಸುವವು. ಮನೋಹರವಾದ ಕೊಂಬೆಗಳಿಂದಲೂ, ಎಲೆಗಳಿಂದಲೂ ಕೂಡಿ, ಪುಷ್ಪಂಗಳಂ ಧರಿಸುತ ಪರಿಪರಿಯಾದ ಬಳ್ಳಿಗಳಿಂದ ಸುತ್ತಲ್ಪಟ್ಟ ವೃಕ್ಷಂಗಳು ಶ್ಲೇಷ್ಮಪ್ರಕೃತಿಗಳೆನಿಸುವವು. ಖಾರ, ಒಗರು, ಕೈಪು, ಈರಸಗಳುಳ್ಳ ಉದಕಗಳಿಂದ ವಾತಜಾಡ್ಯ ಹೋಗುವದು. ಮಾಧುರ್ಯವಿಲ್ಲದ ನೀರಿನಿಂದ ಪಿತ್ತಜಾಡ್ಯ ಹೋಗುವದು. ಖಾರ, ಹುಳಿ, ಬಿಸಿನೀರುಗಳಿಂದ ಶ್ಲೇಷ್ಮಜಾಡ್ಯಹೋಗುವದು. ಬಿಸಲು, ಅಗ್ನಿ, ಮೊದಲಾದ ಉಪದ್ರವಂಗಳಿಲ್ಲದೆ ಎಲೆ ಪುಷ್ಪಗಳಂಕೂಡಿ ಒಣಗುವ ವೃಕ್ಷಂಗಳ ಬುಡದಲ್ಲಿ ಕ್ರಿಮಿಗಳಿರುವವು. ಆ ಹುಳುಗಳಂ ಶೋಧಿಸಿ ತೆಗದುಬಿಟ್ಟು, ಗೋಮೂತ್ರದಿಂದ ತುಪ್ಪ ವಾಯುವಿಳಂಗ ಸಾಸುವೆ ಎಳ್ಳು ಮಾಂಸಂಗಳಂ ನೀರಿನಲ್ಲಿಅರದು ಲೇಪನವಗೈದು, ಅವರಿಂದಲೇ ಧೂಪವಂಹಾಕಿ ನೀರುಬಿಡುತಿರ್ದರೆ ಆ ವೃಕ್ಷಂಗಳು ಚೆನ್ನಾಗಿ ಚಿಗತು ಪುಷ್ಪಯುಕ್ತಗಳಾಗಿ ಫಲಿಸುವವು. ಶವಜಲದಿಂದಲೂ, ನೀರಿನಿಂದಲೂ ಬೇರುಗಳಂ ನೆನೆಸಿ ತಾವರೇಗೆಡ್ಡೆಯಂ ಅರದು ಲೇಪವಂ

ಮಾಡಿದರೆ ಬೆಂಕಿಯಿಂದ ಸುಟ್ಟ ಗಿಡವೂ ಕೂಡ ಚಿಗರುವದು. ಘಾಳಿಯಿಂದ ಮುರಿದು ಬಿದ್ದ ಮರವಂ ನಿಲ್ಲಿಸಿ, ಬಸರೀ ಮರದ ಬೇರಿನಲ್ಲಿರುವ ಮಣ್ಣಂತಂದು ಪಾತ್ರಿಯಲ್ಲಿ ತುಂಬಿ, ಅತ್ತೀಮರದ ಪಟ್ಟೆಯುಂ, ಬಸರೀ ಮರದ ಪಟ್ಟೆಯುಂ, ತುಪ್ಪ, ಜೇನುತುಪ್ಪ, ಹಾಲು, ಗಿಗಲು, ಬೆರಸಿ ಲೇಪನಗೈದು ಹುಲ್ಲಿನಿಂ ಸುತ್ತಿ ಬೇರಿಗೆ ಹಾಕಿ ನೀರಂ ಬಿಡುತ್ತಿದ್ದರೆ ಆ ವೃಕ್ಷವು ಚಿಗತು ಪುಷ್ಪ ಫಲಂಗಳಂ ಧರಿಸುವದು. ಒಂದು ಭಾರಿ ಫಲವಂ ವಹಿಸಿ, ಅನಂತರ ಫಲವಾಗದೇ ಗೊಡ್ಡಾದ ಮರಕ್ಕೆ ಹಾಲಿನಿಂದ ಕುದಿಪ ತಿಲಗಳಂ ಹಾಕಲು ಮರಳಿ ಫಲವಾಗುವದು.

ಎಲೈ ರಾಜೇಂದ್ರನೆ! ಈ ವೃಕ್ಷಂಗಳಿಗೆ ವಿಚಿತ್ರವಂ ಮಾಡುವ ಪರಿಯಂ ಪೇಳುವೆನು. ಅದೆಂತೆನೆ-ಯವೆ ಎಂಬ ಧಾನ್ಯ, ಅರಿಸಿನ, ಎಳ್ಳು, ಮುತ್ತುಗದ ಬೀಜಂಗಳಂ ಪುಡಿಮಾಡಿ ಪಾತ್ರಿಯಲ್ಲಿ ಹಾಕಿ ಅದಂ ಸುತ್ತ ಹತ್ತಿಗಿಡವಂ ಹಾಕಿ ಈ ಚೂರ್ಣದಿಂ ಬೆರಸಿದ ನೀರಂ ಪ್ರತಿ ದಿನದಲ್ಲಿಯು ಹಾಕುತಲಿದ್ದರೆ ಹತ್ತೀಗಿಡದ ಹತ್ತಿಯು ಕೆಂಪಾಗುವದು. ಬೂರಗಮರ ಹುರುವಂ, ಅರಶಿನ, ನೀಲೀಬೀಜ, ತ್ರಿಫಲಂಗಳಂ ಚೂರ್ಣವಂ ಮಾಡಿ ಮಧ್ಯವೆರಸಿ ಹತ್ತೀಗಿಡಕ್ಕೆ ಲೇಪನಗೈದು ಬೇರಿಗೂ ಬಿಡುತ್ತಿರಲು, ಆ ಗಿಡದಲ್ಲಿ ಗಿಣಿಯ ರೆಕ್ಕೆಯಂತೆ ಹಸುರಾದ ಹತ್ತಿಯು ಬಿಡುವದು. ಮಂಜಿಷ್ಠ, ಎಳ್ಳು, ಅಮೃತಬಳ್ಳಿ ಎಲೆಗಳು, ಮಣಿಶಿಲೆ ಇವುಗಳಂ ಅರದು, ಆಡು ಹಸುಗಳ ಸಗಣಿಯುಂ ಕೂಡ ಹಾಲೊಳ್ ಬೆರಸಿ ಕಲ್ಕವಂ ಮಾಡಿ ಹತ್ತೀಗಿಡಕ್ಕೆ ಲೇಪನಂ ಮಾಡಲು ಕಪ್ಪಾದ ಹತ್ತಿಯು ಬಿಡುವದು. ಕಬ್ಬಿನ ಹಾಲಂ ಕುದಿಸಿ ಅದರೊಳ್ ವಿದಾರಿ ಎಂಬ ಗೆಡ್ಡೆಯುಂ ಅರದು ಗಿಡಗಳಿಗೆ ಲೇಪನಗೈದು ಬೇರಿಗೆ ಕಬ್ಬಿನ ಹಾಲಂ ಹಾಕಲು ಅಕಾಲದಲ್ಲಿ ಪುಷ್ಪವಾಗುವದು. ಯಷ್ಟಿಮಧುಕ, ಬಿಳೀಕೋಷ್ಟ, ಮಧುಪುಷ್ಪಂಗಳಂ ಅರದು, ಕಡುಬುಗಳಂತೆ ಮಾಡಿ ವೃಕ್ಷಂಗಳ ಬೇರಿಗೆ ಹಾಕಲು ಆ ವೃಕ್ಷಂಗಳು ವಾತವಿಲ್ಲದೆ ತಿರಳುಗಳಿಂದ ತುಂಬಿರುವ ಫಲಂಗಳಂ ಧರಿಸುವವು. ತತ್ಕಾಲದಲ್ಲಿ ಮೃತವಾದ ಆಡಿನ ಹಸೀ ಚರ್ಮವಂ ವೃಕ್ಷಂಗಳ ಕೊಂಬೆಗಳಿಗೆ ಸುತ್ತಿ ಕಟ್ಟಲು, ಆ ಮರದಲ್ಲಿ ಫಲಗಳು ಉದುರುವದಿಲ್ಲ, ಆನೆಗಳ ಮದೋದಕದಲ್ಲಿ ನೆನೆಸಿದ ಕೋಡಗದ ಮೂಳೆ

ಯಂ ವೃಕ್ಷಂಗಳ ಬೇರಿನಲ್ಲಿ ಗೂಟದಂತೆ ಬಡಿದರೆ ಆ ಮರಗಳಲ್ಲಿ ಹುಟ್ಟಿ
ದ ಕಾಯಿಗಳು ಒಂದು ವರುಷ ಪರ್ಯಂತವೂ ಮಾಗುವದಿಲ್ಲ. ಅದೇ ಮರ
ಗಳಂ ಉಳಿಗಳಿಂದ ಘಾಯವಂ ಮಾಡಿ, ವಾಯುವಿಳಂಗ, ಜೇನುತು
ಪ್ಪಗಳಂ ಹಾಲಿನಲ್ಲಿ ಅರದು ಆ ಘಾಯಕ್ಕೆ ಲೇಪನಗೈದು ಹಾಲು ನೀರು
ಬೆರಸಿ ಬೇರುಗಳಿಗೆ ಬಿಡುತ್ತ, ಕೊಂಬೆಗಳಲ್ಲಿ ಹುಲ್ಲಿನಿಂದ ಹಸೀ ಜಮ್ಮ
ವಂ ಸುತ್ತಿ ಕಟ್ಟಲು ಆ ಕಾಯಿಗಳು ಜಾಗ್ರತೆಯಿಂದ ಮಾಗುವವು ಮೀ
ನು, ಹಂದಿಗಳ ಮಾಂಸ, ವಪೆಗಳಲ್ಲಿ ಕೂಡ ಬಿತ್ತಗಳಂ ನೆನಸಿ ಆ ಮಾಂ
ಸ ವಪೆಗಳಿಂದಲೂ, ಕೋಷ್ಠದಿಂದಲೂ ಧೂಪವಂ ಹಾಕಿ ಬಿತ್ತಿದರೆ ತತ್
ಕ್ಷಣದಲ್ಲಿಯೇ ಗಿಡಗಳಾಗಿ ಫಲಿಸಿ ಸರ್ವರಿಗೂ ಆಶ್ಚರ್ಯವನ್ನುಂಟು ಮಾ
ಡುವವು, ಅಂಕೋಲೆ ತೈಲದಲ್ಲಿಯೂ, ಹಂದಿಯ ಮಾಂಸ ವಪೆಗಳಲ್ಲಿ
ಯೂ ಬೀಜಂಗಳಂ ನೆನಸಿ ಭೂಮಿಯೊಳ್ ಬಿತ್ತಿ ಆಣೆ ಕಲ್ಲು ನೀರಂ
ಹಾಕಲು ಆಗಲೇ ಹುಟ್ಟುವವು. ಮಾವು ಮೊದಲಾದ ಬೀಜಂಗಳಂ
ಮೀನುಗಳ ಮಾಂಸವಂ ಲೇಪಿಸಿ ಅದರಲ್ಲಿ ನೆನಸಿ, ಬಳಿಕ ನೀರಿನಲ್ಲಿ
ಅನಂತರ ಅಂಕೋಲೆ ತೈಲದಲ್ಲಿಯೂ, ಆ ಬಳಿಕ ಹಾಲಿನಲ್ಲಿಯೂ, ತು
ಪ್ಪದಲ್ಲಿಯೂ ಈ ರೀತಿಯಲ್ಲಿ ನೆನಸಿ ಆ ಬೀಜಂಗಳಂ ಬಿತ್ತಲು ಗುಲ್ಮದ
ಗಿಡವಾಗಿ ಹುಟ್ಟುವವು. ಅಂಕೋಲೆತೈಲದಲ್ಲಿ ಬೂದಿಯಂ ಕಲಸಿ ಒಣಗಿಸಿ
ತೆಂಗು ಮೊದಲಾದ ಫಲಂಗಳಿಗೆ ತೊಡೆಯಲು ಆ ಫಲಂಗಳು ಆರು ಪಳು
ಭಾಗವಾಗಿ ಒಡೆಯುವವು, ಇಪ್ಪತ್ತೊಂದುಭಾರಿ ಕೋಳಿ ರಕ್ತದಿಂದ
ದಾಳಿಂಬೇ ಬಿತ್ತಗಳಂ ನೆನೆಸಿಬಿತ್ತಲು ತತ್ ಕ್ಷಣದಲ್ಲಿಯೇ ಹುಟ್ಟಿ ಮರಗ
ಳಾಗಿ ಫಲಂಗಳಂ ಧರಿಸುವವು. ಯಾವ ವೃಕ್ಷಂಗಳ ಬೀಜಂಗಳನ್ನಾ
ದರೂ ಅಂಕೋಲೆ ತೈಲದಿಂದಲೂ, ಮತ್ಸ್ಯ ಹಂದಿಗಳ ಮಾಂಸದಿಂದ
ಲೂ, ಅದರ ವಪೆಗಳಿಂದಲೂ, ಕಪ್ಪೆ ಹುಳಿಗಳಿಂದಲೂ, ನೆನಸಿ ಬಿತ್ತಲೂ
ತತ್ ಕ್ಷಣದಲ್ಲಿಯೇ ಹುಟ್ಟಿ ಪುಷ್ಪ ಫಲಂಗಳಂ ಧರಿಸುವವು. ಹಂದಿ
ಯ ಮೂಳೆಯಂ ಮರದ ಕೊಂಬೆಗಳಲ್ಲಿ ಗೂಟದಂತೆ ಬಡಿಯಲು, ಆ
ಮರವು ನಾಶವಂ ಹೊಂದುವದು. ಹುರಳೀ ಕಟ್ಟಂ ಗಿಡಕ್ಕೆ ಹಾಕಿದರೆ
ಆ ಗಿಡಗಳು ಪುಷ್ಪಿಸುವದಿಲ್ಲ. ಮುತ್ತುಗದ ಬೀಜವಂ, ಮುತ್ತೀ ಬೀ
ಜವಂ ತಕ್ಕಾರಿ ಎಂಬ ಬೀಜವಂ ಚೂರ್ಣವಂ ಮಾಡಿ ನೀರಿನಲ್ಲಿ ಕದರಿ

ಮರಗಳ ಬೇರಿಗೆ ಹಾಕಿದರೂ, ಸೊಸಿಗಳಿಗೆ ಉಪ್ಪು ನೀರು ಹಾಕಿದರೂ, ಆ ಗಿಡಗಳು ಚೆನ್ನಾಗಿ ವೃದ್ಧಿಯಂ ಹೊಂದುವದಿಲ್ಲ. ಪುಷ್ಪಂಗಳಾಗುವ ಗೆಡ್ಡೆಗಳಂ ಮೂತ್ರದಲ್ಲಿ ನೆನಸಿ, ತುಪ್ಪವು, ಜೇನು ತುಪ್ಪವಂ ಲೇಪನಗೈದು, ಮತ್ತೂ ಯಾವ ಯಾವ ಬಣ್ಣವಂ ಹಾಕಿ ಬಿತ್ತುವನೋ? ಆಯಾಯ ವರ್ಣಗಳುಳ್ಳ ಪುಷ್ಪಂಗಳು ಆ ಗೆಡ್ಡೆಗಳಲ್ಲಿ ಉಂಟಾಗುವವು. ನೈದಿಲು ಬೀಜವಂ, ಎಮ್ಮೆ ಸಗಣಿ ಮೂತ್ರಗಳಲ್ಲಿ ಏಳು ದಿನ ಪರ್ಯಂತ ನೆನಸಿ ಒಣಗಿಸಿ ಬಿತ್ತಲು ಕಣಿಗಲೇ ಗಿಡವಾಗಿ ಹುಟ್ಟುವವು. ಮಂದಾರವೆಂಬ ವೃಕ್ಷವಲ್ಲಿ ರಂಧ್ರವಂ ಮಾಡಿ ಅದರಲ್ಲಿ ಕುಂಬಳದ ಬಳ್ಳಿಯಂ ನುಗ್ಗಿಸಿ ಸಗಣಿಯುಂ ಮಣ್ಣಂ ಕೂಡ ಕಲಸಿ ಮೆತ್ತಲು ಆ ಕುಂಬಳದ ಗಿಡದಲ್ಲಿ ಮಂದಾರ ಪುಷ್ಪಂಗಳು ಪುಟ್ಟುವವು. ಕುಂಬಳ, ಬದನೆ, ಪಡವಲ, ಮೊದಲಾದ ಬೀಜಂಗಳಂ ವಪೆಗಳಲ್ಲಿ ನೆನಸಿ ಒಳ್ಳೆ ಭೂಮಿಯಲ್ಲಿ ಬಿತ್ತಲು ದೊಡ್ಡ ಕಾಯಿಗಳಾಗುವವು. ಹರಳುಗಳಂ ಹಂದಿಗಳ ರಕ್ತ ವಪೆಗಳಲ್ಲಿಯೂ, ಅಂಕೋಲೆ ತೈಲದಲ್ಲಿಯೂ ನೆನಸಿ ಬಿತ್ತಲು ಅದರಲ್ಲಿ ಹಾಗಲಕಾಯಿ ಹುಟ್ಟುವವು. ಗುಳ್ಳದ ಬಿತ್ತವಂ ತುಪ್ಪದಲ್ಲಿಯೂ, ಜೇನು ತುಪ್ಪದಲ್ಲಿಯೂ ನೆನಸಿ ಒಣಗಿಸಿ, ಕುಂಬಳ ಕಾಯಲ್ಲಿ ರಂಧ್ರವಂ ಮಾಡಿ ಆ ರಂಧ್ರದಲ್ಲಿ ಆ ಗುಳ್ಳದ ಬೀಜವಂ ಹಾಕಿ ಸಗಣಿಯಂ ಮೆತ್ತಿ ಆ ಕುಂಬಳಕಾಯಿ ಮಾಗಲು ಬಳಿಕ ಅದರಲ್ಲಿರುವ ಗುಳ್ಳದ ಬೀಜವಂ ತೆಗದು ಬಿತ್ತಲು ಕಾಯಿಗಳು ದಪ್ಪವಾಗುವವು. ಬಾಳೇ ಗಿಡದ ಬೇರಿನಲ್ಲಿ ಕಬ್ಬಿಣದ ಸಲಾಕಿಯಂ ಅಡ್ಡಲಾಗಿ ಸಿಕ್ಕಿಸಿ ಕುದುರೆ ಕತ್ತೆಗಳ ಲದ್ದಿಯಂ ಬೇರಿಗೆ ಹಾಕಲು, ಆ ಗಿಡದಲ್ಲಿ ಆನೆಯ ಸೊಂಡಿಲಿನ ದಪ್ಪ ಫಲಗಳು ಬಿಡುವವು. ಹಂದಿಯ ವಪೆ, ರಕ್ತಗಳಿಂದಲು, ಅಂಕೋಲೆ ಬೀಜದ ಚೂರ್ಣದಿಂದಲೂ ಬೆರಸಿದ ನೀರಂ ಕಾಯಿಸಿ ಕುದಿಸಿ ಆ ನೀರಂ ಬಾಳೇ ಗಿಡಕ್ಕೆ ಹಾಕುತಿದ್ದರೆ ಅದರಲ್ಲಿ ದಾಳಿಂಬೆ ಹಣ್ಣುಗಳು ಬಿಡುವವು. ಮನುಷ್ಯರ ಮಾಂಸ ವಪೆಗಳಿಂದಲೂ, ಆನೆ ದಂತದ ಚೂರ್ಣದಿಂದಲೂ ಬೆರಸಿದ ನೀರಿನಿಂದ ವೃದ್ಧಿಯಂ ಹೊಂದಿದ ಬಾಳೇ ಗಿಡದಲ್ಲಿ ಮಾವಿನ ಕಾಯಿಗಳು ಹುಟ್ಟುವವು. ಎಳ್ಳು ಹಿಂಡಿಯಂ ಆಡಿನ ಹಾಲಂ ಅಂಕೋಲೆ ಬೀಜವಂ ಸಹಾ ಅರದು ಸರ್ಪ ಮಾಂಸದೊಡನೆ

ಬೆರಸಿ ಮಾವಿನ ಗಿಡವ ಬೇರಿಗೆ ಹಾಕಲು ಆ ಮರವು ದ್ರಾಕ್ಷಿಬಳ್ಳಿಗೆ ಸರಿಯಾಗಿ ಸರ್ವದಾ ಫಲಂಗಳಂಧರಿಸಿ ಸರ್ವರಿಗೂ ಅಚ್ಚರಿಯನ್ನುಂಟು ಮಾಡುವದು. ಆನೆ, ಮೊಲಗಳ ರಕ್ತದಲ್ಲಿ ನೆನಸಿದ ಮಾವಿನ ಬೀಜವಂ ಬಿತ್ತಿ ಹಾಲಿನಿಂ ಸಲಹಲು ಆ ಮಾವಿನ ಮರವು ಸರ್ವದಾ ಫಲಿಸುವದು. ವಾಯುವಿಳಂಗ, ಯವೆ, ಯಷ್ಟಿಮಧುಕ, ಬೆಲ್ಲ, ಹಾಲು, ಸಹಾ ಅರದು ಕಲ್ಕವಂ ಮಾಡಿ ವೃಕ್ಷವಂ ಕೆತ್ತಿ ಘಾಯವಂ ಮಾಡಿ ಆ ಘಾಯಕ್ಕೆ ಈ ಕಲ್ಕವಂ ಲೇಪಿಸಿ, ಮತ್ತೂ ಬೇರಿಗೆ ಹಾಲು ನೀರುಗಳಂ ಬೆರಸಿ ಸುರಿವರೆ ಆ ವೃಕ್ಷವು ಸ್ವಭಾವದಿಂದ ಖೈರೆಯಾದ ಹಣ್ಣು ಉಳ್ಳದ್ದಾದರೂ ಮಧುರವಾದ ಫಲಂಗಳಂ ಧರಿಸುವದು. ಅಂಕೋಲೆ ತೈಲದಲ್ಲಿಯೂ, ನರಮಾಂಸದಲ್ಲಿಯೂ ಕಲಸಿದ ಬೀಜವಂ, ಆಂಗ್ರೆಯೋಳ್ ಮೃತ್ತಿಗೆಯುನ್ನಿಟ್ಟು ಅದರಲ್ಲಿ ಆ ಬಿತ್ತವಂ ಬಿತ್ತಿ ನೀರಂ ಬಿಡಲು ಆಗಲೇ ಹುಟ್ಟುವದು. ಅಂಕೋಲೆ ತೈಲದಲ್ಲಿ ನೆನಸಿದ ನೈದಿಲುಗೆಡ್ಡೆಯಂ ಗಡಿಗೆಯಲ್ಲಿಟ್ಟು, ಆನೆಕಲ್ಲು ನೀರಂ, ಕೋಳೀಮೊಟ್ಟೆ ರಸವಂ ಸಹಾ ಚುಮುಕಿಸಲು ಆಗಲೇ ಪುಷ್ಟಿ ಪುಷ್ಪಗಳಾಗುವದು. ಭೂಮಿಯಲ್ಲಿ ಹಳ್ಳವಂ ತೋಡಿ ಶೋಧಿಸಿ, ಹಂದಿ ಹಸುಗಳ ಸಗಣಿಯಂ ಮೂಳೆಗಳಂ ಸಹಾ ತುಂಬಿ ಮರಳು ಸುರಿದು ಆ ಹಳ್ಳದಲ್ಲಿ ಯಾವ ಗೆಡ್ಡೆಗಳಂ ಹಾಕಿದರೂ, ಆ ಗೆಡ್ಡೆಗಳು ರಕ್ತದಂತೆ ಕೆಂಪಾಗುವವು. ಶವವಂ ಹೂಳಿದ ಹಳ್ಳದ ಮೇಲೆ ಇಟ್ಟಿಗೆಯಿಂದ ಜಗಲಿಯಂ ಕಟ್ಟಿ ಮರವಂ ಹಾಕಲು ಆ ಮರವು ಗಿಡ್ಡಾಗಿದ್ದಾಗ್ಯೂ ಸರ್ವದಾ ಪುಷ್ಪ ಫಲಂಗಳಂ ಧರಿಸುವವು. ಎಲೈ ರಾಜೇಂದ್ರನೆ! ಇನ್ನು ಮೇಲೆ ವನಸ್ಪತಿಗಳೆಂಬ ವೃಕ್ಷಗಳ ಫಲ ಪತ್ರ ಪುಷ್ಪಂಗಳ ವೃದ್ಧಿಕ್ರಮವಂ, ಧಾನ್ಯಗಳ ಉತ್ಪತ್ತಿ ಕ್ರಮವಂ ಕೂಡ ಹೇಳ್ವೆನು—ಯಾವ ದೇಶದಲ್ಲಿ ಆಲದ ಮರಗಳು ಹ್ಯಾರಳವಾಗಿರುವವೋ? ಆ ದೇಶದಲ್ಲಿ ಯವೆ ಎಂಬ ಧಾನ್ಯವು ಚನ್ನಾಗಿ ಬೆಳೆಯುವದು. ಯಾವ ಭೂಮಿಯಲ್ಲಿ ಅರಳೀ ಮರಗಳು ಹೆಚ್ಚಾಗಿರುವವೋ? ಆ ಭೂಮಿಯಲ್ಲಿ ಸಕಲ ಧಾನ್ಯಗಳೂ ಚನ್ನಾಗಿ ಬೆಳೆಯುವವು. ನೇರಳೆ ಮರಗಳು ಹೆಚ್ಚಾಗಿದ್ದರೆ ಎಳ್ಳು, ಉದ್ದುಗಳು ವೃದ್ಧಿಯಂ ಹೊಂದುವವು. ಬಾಗೆ ಮರಗಳಿಂದ ಪಶುಗಳ ಹಾಲುಗಳು ಅಧಿಕವಾಗುವವು. ಹಿಪ್ಪೆ ಮರಗಳಿದ್ದರೆ ಗೋಧಿಯು

ಚೆನ್ನಾಗಿ ಬೆಳೆಯುವದು. ಎಳೆಲೆ ಬಾಳೇ ಮರಗಳಿಂದ ಎಲ್ಲಾ ಧಾನ್ಯಂಗಳೂ ವೃದ್ಧಿಯಂ ಹೊಂದುವವು. ಹಸ್ತಿಕರ್ಣಂಗಳೆಂಬ ವೃಕ್ಷಂಗಳಿದ್ದರೆ ಆನೆಗಳು ವೃದ್ಧಿಯಂ ಹೊಂದುವವು. ಕಲ್ಲತ್ತೀ ಮರಗಳಿದ್ದರೆ ಕುದುರೆಗಳು ವೃದ್ಧಿಯಂ ಹೊಂದುವವು. ಬಾಳೇ ಮರದಿಂದ ಆಡುಗಳು ಮೊದಲಾದ ಪಶುಜಾತಿಗಳು ವೃದ್ಧಿಯಂ ಹೊಂದುವವು. ಮಾವಿನ ಮರಗಳಿಂದ ಜನಗಳಿಗೆ ಕ್ಷೇಮ ಉಂಟಾಗುವದು. ಗೇರು ಗಿಡಗಳಿಂದ ಭಯ ಉಂಟಾಗುವದು. ಗೋಣೀ ಮರಗಳಿಂದ ಆರೋಗ್ಯವು. ಕಗ್ಗಲಿ ಮರದಿಂದಲು, ಬನ್ನೀ ಮರದಿಂದಲು ದುರ್ಭಿಕ್ಷ ಉಂಟಾಗುವದು. ಮತ್ತೀ ಮರದಿಂದ ಮಳೆ ಹೆಚ್ಚಾಗಿ ಉಂಟಾವದು. ಬೇವಿನಮರದಿಂದಲು, ಭೂಮಿಯು ಸುಗಂಧ ಉಂಟಾಗುವದು. ಬ್ಯಾಲದ ಮರದಿಂದ ವಾಯುವು ಹೆಚ್ಚಾಗುವದು. ದೇವಗಣಿಗಿಲು ಗಿಡಗಳಿಂದ ಅನಾವೃಷ್ಟಿ ಉಂಟಾಗುವದು. ಇನ್ನು ಉಪವನಂಗಳಲ್ಲಿರುವ ವೃಕ್ಷವಿಶೇಷಂಗಳಿಗೆ, ಪುಷ್ಪಂಗಳು ಇಚ್ಛೆ ಬಂದಾಗ ಉಂಟಾಗುವಂತೆ ಮಾಡುವ ದೋಹದವಿಶೇಷಂಗಳಂ ಪೇಳುವೆನು—

ಎಲೈ ರಾಜೋತ್ತಮನೆ! ಫಲಭಾರದಿಂ ಬಾಗ್ಗಿದ ಲತೆಯಂತೆ ವಕ್ಷೋಜಭಾರದಿಂ ಬಳಕುವ ಶರೀರ ಉಳ್ಳ ಪದ್ಮಿನೀ ಜಾತಿ ಸ್ತ್ರೀರುಗಳಿಂದ ಪಾದತಾಡನವು ಮಾಡಲ್ಪಟ್ಟರೆ? ಅಶೋಕ ವೃಕ್ಷಂಗಳು ಪುಷ್ಪಯುಕ್ತಂಗಳಾಗುವವು. ಅವರೇ ತಾಂಬೂಲ ಚರ್ವಣವಂ ಮಾಡಿ ಉಗುಳಿದರೆ ವೃಕ್ಷಂಗಳು ಪುಷ್ಪಯುಕ್ತಂಗಳಾಗುವವು. ಗೋರಂಟೇ ವೃಕ್ಷವು ಸ್ತ್ರೀರುಗಳು ಆಲಿಂಗನವಗೈದರೆ? ಚಿಗರುಗಳಾಗಿ ಪುಷ್ಪಂಗಳಾಗುವವು. ತಿಲಕ ವೃಕ್ಷವಂ ಕನ್ನೈದಿಲುಗಳಿಗೆ ಸಮಾನವಾದ ಕಣ್ಣುಗಳುಳ್ಳ ಸ್ತ್ರೀರುಗಳಿಂದ ಚೆನ್ನಾಗಿ ನೋಡಲ್ಪಟ್ಟರೆ? ಪುಷ್ಪಯುಕ್ತಂಗಳಾಗುವದು. ಮಾವಿನ ಮರವು ಸ್ತ್ರೀರ ಹಸ್ತ ಸ್ಪರ್ಶದಿಂದ ಪುಷ್ಪಂಗಳಂ ಧರಿಸುವದು. ಸ್ತ್ರೀರುಗಳ ದರ್ಶನದಿಂದ ಸಂಪಿಗೇಮರವು ಪುಷ್ಪಿತವಾಗುವದು. ಸ್ತ್ರೀರುಗಳ ಮಾತುಗಳಂ ಕೇಳಿದರೆ? ಕರ್ಣಿಕಾರ ವೃಕ್ಷವು ಪುಷ್ಪಿತವಾಗುವದು. ಕಾಮಿನಿಯರ ಮುಖ ನಿಶ್ವಾಸದಿಂದ ಸಿಂಧುವಾರ

ವೃಕ್ಷವು ಪುಷ್ಪವಂ ಧರಿಸುವದು. ಸ್ತ್ರೀರುಗಳು ಸಂಗೀತವಂ ಪಾಡಿ ದರೆ ಶೀಬೀವೃಕ್ಷವು ಪುಷ್ಪವಂ ಧರಿಸುವದು. ಸ್ತ್ರೀರುಗಳ ನಗೆಯಿಂದ ನಮೇರು ಎಂಬ ವೃಕ್ಷವು ಪುಷ್ಪವಂ ಧರಿಸುವದು. ಪುರುಷರಿಗೂ ಸುಖಸಾಧನಂಗಳಾಗಿ ಯೌವನದಿಂದ ಗರ್ವಿತರಾದ ಸ್ತ್ರೀ ಜನಂಗಳಿಗೆ ವಿಲಾಸ ಯೋಗ್ಯವಾಗಿ ಝೇಂಕಾರವಂ ಮಾಡುವ ತುಂಬಿಗಳಹಿಂಡು ಗಳಿಂದ ತುಂಬಿರುವ ಕಮಲಂಗಳುಳ್ಳ ಮನೋಹರವಾದ ಕ್ರೀಡಾಯೋಗ್ಯವಾದ ಕೊಳ ಉಳ್ಳ ಕ್ರೀಡಾವನಂಗಳು ಯಾವ ಪುರುಷನ ಮಂದಿರದಲ್ಲಿರುವವೊ? ಆ ಪುರುಷನೇ ಭೂಪತಿ ಎನಿಸಿಕೊಳ್ಳುವನು. ಯಾವ ಪುರುಷನಿಗೆ ಇಂಥಾ ಕ್ರೀಡಾ ವನವಿರುವದಿಲ್ಲವೊ? ಆ ಪುರುಷನಿಗೆ ಯೌವನ ವಿದ್ದಾಗ್ಯೂ, ಶರೀರದಲ್ಲಿ ಸೌಂದರ್ಯವಿದ್ದಾಗ್ಯೂ, ಮಿಂಚಿನಂತೆ ಪೊಳೆಯುವ ಸ್ತ್ರೀರುಗಳಿದ್ದಾಗ್ಯೂ ಸಕಲ ಕಲಾಕುಶಲರಾದ ಸ್ನೇಹಿತರಿದ್ದಾಗ್ಯೂ, ಮನೋಹರವಾದ ವೀಣಾಧ್ವನಿ ಇದ್ದಾಗ್ಯೂ, ಅತ್ಯಂತ ಧನವಿದ್ದಾಗ್ಯೂ, ವ್ಯರ್ಥವೆಂದು ತಿಳಿಯಬೇಕು. ಇದು ಹೊರ್ತು ಮೋಹವಿಲ್ಲದೇ ಸಮಸ್ತ ಇಷ್ಟಾರ್ಥಂಗಳಂ ಕೊಡುವ ವೃಕ್ಷವು ಉಂಟು, ಅದ್ಯಾವದೆಂದರೆ—ಅಮರ ಲೋಕದಲ್ಲಿರುವ ನಂದನ ವನದಲ್ಲಿ (ಪಾರಿಜಾತ)ವೆಂಬ ವೃಕ್ಷವಿರುವದು. ಆ ಕಲ್ಪ ವೃಕ್ಷವು ಬಿಳುಪಾಗಿ ಮೂರು ಶಾಖೆಗಳಂ ಯುಕ್ತವಾಗಿ, ಬಹಳವಾದ ಕೊಂಬೆಗಳಿಂ ಪರಿವೃತವಾಗಿ, ಒಂದೊಂದು ಕೊನೆಯಲ್ಲಿ ಒಂದೊಂದು ಗರಿಯಾದ ಪುಷ್ಪಂಗಳು, ಕಮಲಂಗಳು, ಕೂಡ ಉಂಟಾಗಿ ಸಕಲ ಲೋಕಂಗಳಿಗೂ ಮನೋಹರವಾಗಿರುವದು. ಆ ಪುಷ್ಪವಂ ವೃದ್ಧರಾದವರು ಧರಿಸಿದರೆ ಹದಿನಾರು ವರ್ಷದ ಪ್ರಾಯದವರಾಗುವರು. ಮತ್ತು ಆ ಪುಷ್ಪಂಗಳು ಎಂದಿಗೂ ಬಾಡುವದಿಲ್ಲ. ಅದಂ ಧರಿಸಿ ಯಾವ ಪುಷ್ಪಂಗಳ ವಾಸನೆಯಂ ಅಪೇಕ್ಷಿಸಿದರೂ ಆಯಾ ಪುಷ್ಪಂಗಳ ವಾಸನೆ ಬರುವದು. ಇನ್ನೂ ಈ ಪುಷ್ಪಂಗಳಂ ಧರಿಸಿ ಹಿತವಾದ ಶೀತೋಷ್ಣಂಗಳಂ ಅಪೇಕ್ಷಿಸಿದರೆ ಉಂಟಾಗುವದು. ಅಮೃತವಂ ಬೇಡಿದರೂ ಕೊಡುವದು. ಇಂತಪ್ಪ ಪುಷ್ಪನಂ ಧರಿಸಿದವರಿಗೆ ಸಕಲ ಸೌಭಾಗ್ಯ ಉಂಟಾಗುವದು, ಸತ್ಸಂತಾನವೂ ಉಂಟಾಗುವದು. ಈ ಪುಷ್ಪವಂ ಮುಡಿದು ಶರೀರವು ಯಾವ ಬಣ್ಣವಾಗಬೇ

ಕೆಂದು ಅಪೇಕ್ಷಿಸಿದವರೂ ಆ ಬಣ್ಣವಾಗುವದಲ್ಲದೆ, ಶರೀರವು ಸ್ವಲ್ಪವಾಗಬೇಕೆಂದರೂ, ದೊಡ್ಡದಾಗಬೇಕೆಂದರೂ, ಆ ಕ್ಷಣದಲ್ಲಿಯೇ ಅಪೇಕ್ಷಿಸಿದಂತಾಗುವದು. ಮತ್ತೂ ಈ ಪುಷ್ಪವು ರಾತ್ರಿಯೊಳ್ ಸೂರ್ಯನಂತೆ ಅಂಧಕಾರವಂ ಪರಿಹರಿಸುವದಲ್ಲದೆ ಬೇಡಿದವರಿಗೆ ಬೇಕಾದುದೆಲ್ಲವಂ ಕೊಟ್ಟು ಸಂತೋಷ ಪಡಿಸುವದು. ಮತ್ತೂ ಇದು ಧರಿಸಿದವರನ ಕ್ಷುತ್ಪಿಪಾಸೆ, ಶ್ರಮ, ವಾರ್ಧಿಕ್ಯಗಳೂ ಕೂಡಾ ಅವರವರ ಇಚ್ಛಾನುಸಾರವಾಗಿ ನಡೆಯುವದು. ಇಂತಲ್ಲದೆ ಪರಿಪರಿಯಾದ ಗಂಧರ್ವ ಗಾನವಂ ಕೇಳಲಪೇಕ್ಷಿಸಿದರೆ ಆ ಕ್ಷಣದಲ್ಲಿಯೇ ಅಂಥಾ ಗಾನವು ಕಿವಿಗಿಂಪಾಗುವಂತೆ ಕೇಳುವದು. ಇಂತಲ್ಲದ ಈ ಪುಷ್ಪವು ಮತ್ತೊಂದು ಕಡೆಯೊಳ್ ಒಂದು ವರ್ಷ ಮಾತ್ರವಿರುವದು. ಬಳಿಕ ಎಂದಿನಂತೆ ಪಾರಿಜಾತವೃಕ್ಷವನ್ನೇ ಸೇರುವದು. ಇಂತಪ್ಪ ಪಾರಿಜಾತ ಪುಷ್ಪದಲ್ಲಿಯೇ ಇಂತು ಮಹಿಮೆ ಇರುವಾಗ ಆ ಪಾರಿಜಾತ ವೃಕ್ಷದ ಮಹಿಮೆಯಂ ಮನುಷ್ಯರು ಬಣ್ಣಿಸಲು ಸಮರ್ಥರಲ್ಲ. ಆದರೂ ನೀನು ಶ್ರೀದೇವಿಗೆ ಪರಮ ಭಕ್ತನಾದಕಾರಣ ಇಂಥಾ ಪಾರಿಜಾತ ವೃಕ್ಷವು ಶ್ರೀ ದೇವಿಯ ಕಟಾಕ್ಷದಿಂದಲೇ ಲಭ್ಯವಾಗಬೇಕೇ ಹೊರತು ಮನುಷ್ಯ ಯತ್ನವು ಸಾಗತಕ್ಕದ್ದಲ್ಲವೆಂದು ವಿಸ್ತಾರವಾಗಿ ನಿರೂಪಿಸಿದನೆಂಬಲ್ಲಿಗೆ. * * * * *

ಗದ್ಯ—ಕುಂಡಲಿಶಯನ ಖಂಡ ಪರಶುಪುಂಡರೀಕಭವಾಖಂಡಲಪ್ರಮುಖನಿಖಿಲ ಸುರವರಘನಪರಿಣತಪ್ರಚಂಡಬಲಕಂಡಮುಂಡಖಂಡನನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತಚಾಮುಂಡಿಕಾ ಕಟಾಕ್ಷವೀಕ್ಷಣಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸ ಕವಿತಾನಿಸ್ಸಹಾಯ ನಿರ್ಮಾಣ ಧೌರೇಯ ಘುಟಿಕಾಶತಗ್ರಂಥ ದಿನದಿನ ಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸಗೋತ್ರಾಶ್ವಲಾಯನಸೂತ್ರ ಸುಚರಿತ್ರ ಚಾಮರಾಜ ಮಹಾರಾಜ ಪುತ್ರನರಪತಿಬಿರುದ ಮಹಿಶೂರಪುರವರಾಧೀಶ ಶ್ರೀ ಕೃಷ್ಣರಾಜವಡೆಯರವರಿಂದರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ಈ

ನವೀನಕೃತಿಯೊಳ್ ಪಾರಿಜಾತಾವತರಣಂ, ಸಕಲ ವೃಕ್ಷದೋಹಳನಿರೂಪಣಂ ಮೊದಲಾದುವಂ ಬಣ್ಣಿಸಿರುವ ಇಪ್ಪತ್ತೆರಡನೇಆಶ್ವಾಸಕ್ಕೆ ಮಂಗಳಂ॥

ಇಪ್ಪತ್ತೆರಡನೇ ಆಶ್ವಾಸ ಸಂಪೂರ್ಣವು.

---

## ಇಪ್ಪತ್ತಮೂರನೇಯ ಆಶ್ವಾಸ ಪ್ರಾರಂಭಃ.

ಶ್ರೀರಸ್ತು.

ಶ್ರೀಚಾಮುಂಡಿಕಾಂಬಾಯೈನಮಃ

ಅನಂತರದಲ್ಲಿ ಸುಗಂಧಮಹಾರಾಜೇಂದ್ರನು ತನ್ನ ಗುರುವಾದ ವಿದ್ಯಾಸಾಗರನಿಂದ ಪಾರಿಜಾತ ವೃಕ್ಷದ ಲಕ್ಷಣವಂ ತಿಳಿದು, ಆ ಕ್ಷಣದಲ್ಲಿಯೇ ಕಾರ್ಯವಿಚಕ್ಷಣನಾದ ಯಕ್ಷನಂ ಕರದು ಎಲೈ ಯಕ್ಷನೆ! ಈ ಗುರುವರ್ಯನು ಹೇಳಿದಂತಿರುವ ಪಾರಿಜಾತ ತರುವು ಎಲ್ಲಿರುವದೊ? ಆ ಸ್ಥಳವಂ ತಿಳಿದು ತ್ವರೆಯಿಂದ ಈ ಪುರದಲ್ಲಿ ಹಿಂತಿರಿಗಿ ತೆರಳಿ ಬರುವದೆಂದು ನಿರೂಪಿಸಲು.

ಆ ಕ್ಷಣದಲ್ಲಿಯೇ ಯಕ್ಷಾಧಿಪನು ರಾಜೇಂದ್ರನು ನಿರೂಪಿಸಿದ ಕಾರ್ಯವಂ ನಿರ್ವಹಿಸುವೆನೆಂದು ಅವನ ಆಜ್ಞೆಯಂ ಶಿರದೊಳ್ ಧರಿಸಿ ಅಲ್ಲಿಂದ ತೆರಳಿ ಬರುತ್ತ ಜಂಬೂದ್ವೀಪದೊಳ್ ಅಲ್ಲಲ್ಲಿ ಹುಡುಕಿ ಆ ಪಾರಿಜಾತ ವೃಕ್ಷವಂ ಎಲ್ಲಿಯೂ ಕಾಣದೆ, ಹಾಗೇ ಪ್ಲಕ್ಷ ದ್ವೀಪವಂ ಪೊಕ್ಕು ನಾಲ್ಕು ದಿಕ್ಕಿನಲ್ಲಿಯೂ ನೋಡಿ ಅಲ್ಲಿಯೂ ಕಾಣದೆ, ಬಳಿಕ ಶಾಲ್ಮಲಿ ದ್ವೀಪವಂ ಪೊಕ್ಕು ಅಲ್ಲಿಯೂ ಕಾಣದೇ ಅನಂತರ ಬಹು ದೂರ ಸಂಚಾರದಿಂ ಬ್ಯಾಸರಗೊಂಡು-ಸ್ವಲ್ಪ ಹೊತ್ತು ಮಾರ್ಗದೊಳ್ ಶ್ರಮವಂ ಪರಿಹರಿಸಿಕೊಂಡು, ಅಲ್ಲಿಂದ ತೆರಳಿ ಕುಶ ಕ್ರೌಂಚಗಳೆಂಬ ಎರಡ-

ದ್ವೀಪಗಳಲ್ಲಿಯೂ, ಮತ್ತೂ ಉಪದ್ವೀಪಂಗಳಲ್ಲಿಯೂ ಕೂಡ ಹುಡಿಕಿ ಅಲ್ಲಿಯೂ ಕಾಣದೆ ಬಳಿಕ ಮೂವತ್ತೆರಡು ಲಕ್ಷ ಯೋಜನ ವಿಸ್ತಾರ ಉಳ್ಳ, ಮಣಿಮಯಂಗಳಾದ ಅನೇಕ ಪರ್ವತಂಗಳಿಂದಲೂ, ಪರಿಪರಿಯಾದ ನದೀನದಂಗಳಿಂದಲೂ, ಭೂಮಿದೇವಿಗೆ ರತ್ನ ತಾಟಂಕಗಳಂತೆ ಅಲ್ಲಲ್ಲಿ ಹೊಳೆಯುವ ಪಟ್ಟಣಂಗಳಿಂದಲೂ, ಬಗೆಬಗೆಯಾದ ಫಲ ಪುಷ್ಪಂಗಳಿಂ ಭರಿತವಾದ ಅನೇಕ ವನಪಙ್ತಿಗಳಿಂದಲೂ, ವಿರಾಜಿತವಾದ ಶಾಕ ದ್ವೀಪವಂ ನೋಡಿ ಹರ್ಷದಿಂ ಕೂಡಿ ಪಾರಿಜಾತ ವೃಕ್ಷವು ಇಲ್ಲಿ ಇರುವ ದಾಗಿ ತೋರುತಲಿಧೆ ಏನು ಕಾರಣವೆಂದರೆ—ಆಯಾಯ ಋತುಗಳಲ್ಲಿ ಆಗತಕ್ಕ ಪುಷ್ಪಫಲಂಗಳೆಲ್ಲ ಈ ಅರಣ್ಯದೊಳಿರುವ ವೃಕ್ಷಂಗಳಲ್ಲಿದೋ ಹಳ ಮೊದಲಾದ ಕಾರಣಂಗಳು ಏನೂ ಇಲ್ಲದೆ ಉಂಟಾಗಿರುವವರಿಂದಲು, ಏನೋ ಒಂದು ವಿಜಾತೀಯವಾದ ಸುಗಂಧದೊಡನೆ ಕೂಡಿದ ಮಂದಮಾ ರುತವು ಸಂಚರಿಸುವದರಿಂದಲು, ಆ ಪಾರಿಜಾತ ತರುವು ಇಲ್ಲಿಯೇ ಇ ರಬಹುದೆಂದು ನಿಶ್ಚೈಸಿ ಹುಡುಕುತಲಿರಲೂ,

ಅತ್ತಲಾ ಶಾಕದ್ವೀಪದೊಳ್ ಲೋಹಿತಾಕ್ಷನೆಂಬ ರಾಕ್ಷಸನು ತನ್ನ ಬಾಹುಬಲದಿಂದ ಆ ದ್ವೀಪಕ್ಕೆ ಸೇರಿದ ಖಂಡಗಳೊಳ್ ಸುಖದಿಂದಿರುವ ಜನರೆಲ್ಲರಂ ಜೈಸಿ ದಿಗ್ವಿಜಯಮಕೈಕೊಂಡು ಬರುತಲಿರಲಾ ಕಾಲ ದೊಳ್ ಗಂಧರ್ವರ ಗಂಧವೇ ಇಲ್ಲದಂತಾಗಿ, ಯಕ್ಷರು ಎಲ್ಲಿಯೋ ಅಡ ಗಿ ಪೋಗಿ, ಕಿನ್ನರರು ಮೊಗವಂ ತೋರದೆ ಖಿನ್ನರಾಗಿ, ಕಿಂಪುರುಷರೆಂಬ ಹೆಸರಿಲ್ಲದೇ ಈ ಪರಿಯಾಗಿ ಎಲ್ಲರೂ ಎಲ್ಲೆಲ್ಲಿಯೋ ಓಡಿ ಪೋಗಿ, ತಮ್ಮ ತಮ್ಮ ಪ್ರಾಣಂಗಳಂ ಉಳಿಸಿಕೊಂಡು ಕಾಲವಂ ಕಳೆಯುತ್ತಿರಲಾಗ, ಮಹಾ ಶೂರರಾದ ಕೆಲರು ಮಹೀ ಪಾಲಕರು ಇವನೊಡನೆ ಯುದ್ಧ ವಂ ಮಾಡಿ ಮಡಿದು ಪೋಗಲು, ಮತ್ತೆ ಕೆಲರು ಪಾದಾಕ್ರಾಂತರಾ ಗಲು, ಆ ದೈತ್ಯನು ಇಂತು ಆ ದ್ವೀಪದಲ್ಲಿರುವರನೆಲ್ಲರಂ ಜೈಸಿ, ತಾನು ಅಲ್ಲಿರುವದಂ ಸರ್ವರಿಗೂ ತಿಳುಹಿಸಲೋಸುಗ ಒಂದು ಭಾರಿ ಆ ದ್ವೀಪವೆ ಲ್ಲವಂ ಸಂಚರಿಸಿ, ಹಿಂತಿರಿಗಿ ಎಂದಿನಂತೆ ಚಿತ್ರವತೀ ಎಂಬ ತನ್ನ ಪುರವ ನೈದಿ ಪಾರಿಜಾತ ವೃಕ್ಷವಂ ರಕ್ಷಿಸುತ, ಪರಶಿವನ ವರದಿಂ ಲಬ್ಧವಾದ ಮ ಹಾ ಶೂಲಾಯುಧವಂ ತನ್ನ ಮಂದಿರದೊಳ್ ರಹಸ್ಯವಾಗಿ ಯಾರೂ

ಅರಿಯದಂತೆ ಒಂದು ಬಳಿಯಲ್ಲಿ ಭೂಮಿಗೆ ಸೋಂಕದಂತೆ ಮಹಾ ಪಾಶಂಗಳಂ ಬಿಗಿದು ಇರಿಸಿ ತೂಗೆಯುಗ್ಗೈಯುತ್ತ, ಮನಬಂದಂತೆ ಕಲ್ಪವೃಕ್ಷದಿಂ ಬೇಕಾದ ಸಮಸ್ತ ವಸ್ತುಗಳಂ ವಿಸ್ತಾರವಾಗಿ ಪಡೆಯುತ್ತ ಸುಖದಿಂದಿರುತ್ತಿರುವವಂ ಛಾಯಾಗುಪ್ತನು ಕಂಡು ಆಶ್ಚರ್ಯವಗೊಳ್ಳುತ್ತಿರಲು,

ಇತ್ತಲಾ ಚಿತ್ರವರ್ಮನ ಪುತ್ರಿಯಾದ ಮಂದಾರ ಮಾಲೆಯು ಕಲಹಂಸೆ ಎಂಬ ಸಖಿಯೊಡಗೂಡಿ ಲೋಹಿತಾಕ್ಷನ ಮಂದಿರದ ಉಪವನದೊಳಿರುವ ಪಾರಿಜಾತ ತರುವಿನಲ್ಲಿ ಅರಳಿರುವ ಪುಷ್ಪಗಳ ಪರಿಮಳಗಳಂ ಲೋಕಾತಿಶಯವಾದ ವಿಚಿತ್ರ ಫಲಂಗಳ ಮಧುರವಾದ ರಸಂಗಳಂ ನೋಡಿ ಬಿಟ್ಟು ಪೋಗಲಾರದೆ, ಅಲ್ಲಿಯೇ ಈವರೆಗೂ ಶುಕರೂಪವಂ ತಾಳಿ ಗಿಳಿಗಳ ಗುಂಪಿನೊಳ್ಕೂಡಿ ಪರಿಪರಿಯಾಗಿ ಆಟಗಳಂ ಆಡುತ್ತ, ಸಾಧಾರಣ ಶುಕಗಳಂತೆ ಇರುತ್ತ, ಮನಬಂದಂತೆ ವಿಹಾರಂಗಳಂ ಮಾಡುತ್ತ, ಪೂರ್ವ ವೃತ್ತಾಂತಗಳೆಲ್ಲವಂ ಮರೆದು ಸುಖದಿಂದಿರುತ್ತಿರಲು, ಆ ದ್ವೀಪದೊಳ್ ಭೂದೇವಿಯ ಕುಚಕಲಶಂಗಳೆಂಬಂತೆ ತೋರುವ ಎರಡು ಶಿಖರಂಗಳಿಂ ರಮ್ಯವಾದ ರಮ್ಯಕವೆಂಬ ಪರ್ವತದ ಉಪರಿ ಭಾಗದೊಳ್ ಇರುವ ಮಣಿಗಳ ಕಾಂತಿಗಳೆಲ್ಲ ಒಟ್ಟುಗೂಡಿ ಕೋಟೆಯ ಆಕಾರವಂ ತಾಳಿರುವವೋ? ಎಂಬಂತಿರುವ ಕಾಂತಿಮತೀ ಎಂಬ ನಗರದಲ್ಲಿ ಈ ಮಂದಾರಮಾಲೆಯ ಮಾತೆಯಾದ ಮಂಜೂಷೆಯು, ಉದ್ಯಾನದೊಳ್ ಮಗಳಂ ಕಾಣದೆ ಮನದೊಳ್ ಸಂದೇಹ ಪಡುತ್ತ ಮಂದಿರಗಳಲ್ಲೆಲ್ಲ ಹುಡುಕಿ ನೋಡಿ ಎಲ್ಲಿಯೂ ಕಾಣದೆ ತನ್ನ ಪತಿಯಾದ ಚಿತ್ರವರ್ಮನಿರುವ ಬಳಿಗೆ ಬಂದು ಎಲೈ ಪ್ರಾಣವಲ್ಲಭನೆ! ನಮ್ಮಿರ್ವರ ಪೂರ್ವಪುಣ್ಯವೇ ರೂಪುಗೊಂಡು ಬಂದಂತೆಯು, ಮಹಾಲಕ್ಷ್ಮಿಯ ಪ್ರತಿಬಿಂಬವೋ? ಎಂಬಂತೆಯೂ, ಮನ್ಮಥನ ಸಮ್ಮೋಹನಾಸ್ತ್ರವೋ? ಎಂಬಂತೆಯೂ, ಚತುರ್ಮುಖನ ಶಕ್ತ್ಯೈಗಳ ಚಮತ್ಕಾರಂಗಳೆಲ್ಲ ಒಟ್ಟುಗೂಡಿ ಮೂರ್ತೀಭವಿಸಿದಂತೆಯೂ, ಕಾಂತಿಮತೀ ಪುರದಲ್ಲಿರುವ ಗಂಧರ್ವ ಕುಲದ ಜಯಲಕ್ಷ್ಮಿಯಂತೆಯೂ, ಮತ್ತೂ ನಮ್ಮಿರ್ವರ ಸಂತೋಷಕಲ್ಪಲತೆಯಂತೆಯೂ, ಹರ್ಷವನ್ನುಂಟುಮಾಡುವ ಸುಕುಮಾರಾಂಗಿಯಾದ ಕುಮಾರಿಯು ಕಾ

ಸದಿರು, ಪ್ರಪಂಚವೆಲ್ಲವಂ ಅರಸಿ ನೋಡಿ ನನ್ನ ಕನ್ನೆಯಂ ಅಪಹರಿಸಿ ಕೊಂಡು ಪೋಗಿರುವನ ಪಟ್ಟಣವಂ ಸುಟ್ಟು ಅವನಂ ಭೂಮಿಯಲ್ಲಿ ಪುಟ್ಟಲಿಲ್ಲವೆಂದೆನಿಸಿ ದಿನ ಮೂರರಲ್ಲಿ ಮಗಳಾದ ಮಂದಾರಮಾಲೆಯಂ ಕರತರುವೆನೆಂದು ನುಡಿದು, ಮತ್ತಾ ಆ ಮಂಜೂಷೆಯಂ ಕುರಿತು ನೀನು ಚಿಂತೆಯಂ ಬಿಡುವಳಾಗೆಂದು ನುಡಿದು ಅವಳ ಗಲ್ಲವಂ ಪಿಡಿದು ಪರಿಪರಿ ಉಪಚಾರೋಕ್ತಿಗಳಿಂದ ಸಮಾಧಾನಗೊಳಿಸಿ, ಬಳಿಕ ತಾನು-ತಡವಂ ಮಾಡದೆ ಖಡ್ಗ ಮೊದಲಾದ ಅನೇಕ ಆಯುಧಗಳಂ ಪಿಡಿದು ತೆರಳಿ ಅಲ್ಲಲ್ಲಿ ಹುಡುಕುತ್ತ, ಬರುತ್ತಿರಲು;

ಇತ್ತಲಾ ಮಂಜೂಷೆಯು ಮಗಳಾದ ಮಂದಾರಮಾಲೆಯಂ ಬಾರಿ ಬಾರಿಗು ನೆನೆದು ಅಲ್ಲಲ್ಲಿ ಹುಡುಕಿ ನೋಡುತ ಎಲ್ಲೆಲ್ಲಿಯೂ ಕಾಣದೆ ಆಹಾರವಂ ಬಿಟ್ಟು ಆಭರಣಂಗಳಂ ತೊಡದೆ, ಉಪಚಾರವಗೈಯಲೋಸುಗ ರತ್ನಮಯ ಪಾತ್ರೆಗಳೊಳ್ ಬೇಕಾದ ಪದಾರ್ಥಂಗಳನಿಟ್ಟುಕೊಂಡು ಪಿಡಿದು ನಿಂದಿರುವ ದೂತಿಯರಂ ಮೊಗವೆತ್ತಿ ನೋಡದೆ, ನಿಂತಲ್ಲಿ ನಿಲ್ಲದೆ ತಲ್ಲಣಿಸುತ, ಭುಜದಿಂ ಜಾರುತಲಿರುವ ಸರಿಗೆಯ ಶರಗಂ ಸಾವರಿಸದೆ, ಮುಖಕಮಲವು ಕಂದಿ ಕಾಂತಿಗುಂದಿ ಕಂಪವೆತ್ತಿ ಕಾಲು ನಡುಗುತ, ಕೆಲಬಲದೊಳ್ನಿಂತಿರುವ ಸಖಿಯರ ಕರವಂ ಪಿಡಿದು ಮೆಲ್ಲನೆ ಬಂದು ಮಂದಿರದ ಮುಂಭಾಗದೊಳ್ನಿಂದು ದಾರಿಯೊಳ್ ಬರುವವರಂ ನೋಡಿ ಮಗಳಾದ ಮಂದಾರ ಮಾಲೆಯಂ ಕಂಡಿರಾ ಎಂದು ಬಾರಿಬಾರಿಗೂ ದೀನಳಂತೆ ಕೇಳುತ, ತನ್ನ ನೋಡಿದವರಂ ತನ್ನಂತೆಯೇ ಮಾಡುತ, ಮಂದಾರ ಮಾಲೆಗೆ ಪ್ರಾಣ ಸಖಿಯಾದ ಕಲಹಂಸೆಯ ಮಂದಿರವನೈದಿ ಅಲ್ಲಿ ಕಲಹಂಸೆಯಂ ಕಾಣದೆ ಅಲ್ಲಿರುವ ತರುಣಿಯರಂ ಕೇಳಲು, ಅವರು ಮಂಜೂಷೆಯಂ ಕುರಿತು ಎಲೈ ಒಡತಿಯೆ! ನಮ್ಮ ಕಲಹಂಸೆಯು ನಿನ್ನೆ ಸಾಯಂಕಾಲದೊಳ್ ನಿನ್ನ ಮಗಳಾದ ಮಂದಾರಮಾಲೆಯ ಮಂದಿರವಂ ಕುರಿತು ಪೋಗಿ ಅಲ್ಲಿಯೇ ಇರುವಳಲ್ಲದೆ ಇಲ್ಲಿಗೆ ಬರಲಿಲ್ಲವೆಂದು ನುಡಿಯಲದಂ ಕೇಳಿ ಮಂಜೂಷೆಯು ಅಲ್ಲಿಂದ ಮರಳಿ ಬರುತ್ತ ಈ ಕಲಹಂಸೆಯು ಏನೋ ಒಂದು ವಿಚಿತ್ರವಂ ಮಾಡಿ ಮಗಳಂ ಎಲ್ಲಿಗೋ ಕರದೊಯ್ದಿರುವಳಾಗಿ ತೋರುತಲಿದೆ, ಅಂತಿರುವದೊಳಿರಲಾ

ದೋ! ಎಂದು ಸಂದೇಹ ಪಡುತ ಸಮೀಪದಲ್ಲಿರುವ ಉಪವನವಂ ಪ್ರವೇಶಿಸಿ, ಬಳ್ಳಿಗಳಂತೆ ಬಳುಕುತ ಅಡಿಗಡಿಗೆ ಎಡವುತ್ತ, ನಡೆಯುವುದಕ್ಕೆ ಪಾದಂಗಳೊಳ್ ಬಲಸಾಲದೆ ಅಲ್ಲಲ್ಲಿ ಕುಳಿತುಕೊಳ್ಳುತ ಮೆಲ್ಲಮೆಲ್ಲನೆ ಲತಾಮಂದಿರದ ಬಳಿಯನೈದಿ, ಅಲ್ಲಿ ಬಳ್ಳಿಗಳಲ್ಲಿ ತುದಿ ಮೊದಲಾಗಿ ಪುಷ್ಪಿಸಿರುವುದಂ ನೋಡಿ, ಅಗೋ! ಮಂದಾರಮಾಲೆಯು ಅಲ್ಲಿರುವಳೆಂದು ವೇಗದಿಂ ಬಂದು ಅರಳಿರುವ ಕುಸುಮಗಳಂ ನೋಡಿ ಉಸ್ಸೆಂದು ನಿಟ್ಟುಸಿರಂ ಬಾರಿಬಾರಿಗೂ ಬಿಡುತ್ತ, ಅಲ್ಲಿರುವ ಮುಂದೆ ನಡೆದು ಮಣಿಮಯವಾದ ಶೃಂಗಾರ ಮಂಟಪವಂ ಪೊಕ್ಕು ಅಲ್ಲಿರುವ ಕಿರುಮನೆಗಳೆಲ್ಲೆಲ್ಲ ಅರಸಿ ನೋಡಿ ಅಲ್ಲಿಯೂ ಕಾಣದೆ, ಅಲ್ಲಿಂದಾ ತೆರಳಿ ಬರುತ ಸಮೀಪದಲ್ಲಿ ಮಂದಾರ ಮಾಲೆಯು ತಾನೇ ಪಚ್ಚೆ ಪವಳದ ಗುಣಿಕಟ್ಟುಗಳಂ ಮಾಡಿ ಪಚ್ಚಕರ್ಪೂರದ ಪುಡಿಗಳಂ ಸುರಿದು ಅದರೊಳ್ ಪುಟ್ಟ ಗಿಡಗಳಂ ನೆಟ್ಟು, ಪನ್ನೀರುಗಳಂ ಬಿಡುತ್ತ, ಮಲ್ಲಿಗೆ ಜಾಜಿ ಮೊದಲಾದ ಬಳ್ಳಿಗಳಂ ಹಬ್ಬಿಸಿ ಸಾಕುತಲಿರ್ದಳು ಈಗ ಈ ಗಿಡಗಳೆಲ್ಲ ನೀರಿಲ್ಲದೆ ಮಾಧ್ಯಾಹ್ನದ ಬಿಸಿಲಿಗೆ ಬಾಡಿ ಬಸವಳಿದು ತಲೆ ಬಾಗಿ ಅಲ್ಲಲ್ಲಿಯೇ ಎಲೆಗಳು ಮುದುರಿಕೊಂಡಿರುವುದಂ ತರಗಿನಂತೆ ಶುಷ್ಕಂಗಳಾದ ಎಲೆಗಳಂ ಕೂಡಿರುವುದಂ ಸಹಾ ನೋಡಿ ಅಪ್ರಮಿತವಾದ ಚಿಂತೆಯಿಂ ಕೂಡಿ ಅಲ್ಲಿ ನಿಲ್ಲಲಾರದೆ ಹೆಜ್ಜೆಗಳನಿಡುತ ಮುಂದೆ ಕಾಣುವ ಅಶೋಕ ವೃಕ್ಷವಂ ಕಂಡು ಅದರ ಕುರಿತು ಎಲೈ ವೃಕ್ಷವೆ! ನಿನ್ನಂತೆ ನಾನೆಂದಿಗಾಗುವೆನೆಂದು ಪೇಳುತ, ಮರಿಗಳೊಡಗೂಡಿ ಮನಬಂದಂತೆ ಹಾರುತಲಿರುವ ಹರಿಣಿಗಳಂ ನೋಡಿ ಹಾ! ಎಂದು ಹಂಬಲಿಸಿ ಈ ಮೃಗಂಗಳು ಏನು ಪುಣ್ಯವಂ ಮಾಡಿ ಮರಿಗಳೊಡಗೂಡಿ ಸಂಚರಿಸುವವೋ! ಎಂದು ನುಡಿಯುತ್ತ, ಮತ್ತೂ ಮಗಳಾದ ಮಂದಾರ ಮಾಲೆಯಿಂದಲೂ, ಸಖಿಯರಿಂದಲೂ ಕೂಡಿಕೊಂಡು ಈ ವೃಕ್ಷಂಗಳ ಸಾಲಿನೊಳ್ ಕುಳಿತು ಎಂದಿಗೆ ಬೆಳ್ದಿಂಗಳೂಟವಂ ಮಾಡುವೆನೆನುತ ಅಲ್ಲಿಂದ ತೆರಳಿ, ಸ್ಫಟಿಕ ಶಿಲೆಗಳ ಸೋಪಾನದಿಂದೊಪ್ಪುವ ತಿಳಿಗೊಳದ ಬಳಿಯನೈದಿ, ಅಲ್ಲಿರುವ ಕಮಲ ಮೊದಲಾದುದಂ ಕಂಡು ವ್ಯಸನಗೊಂಡು, ನನ್ನ ಮಗಳಾದ ಮಂದಾರ ಮಾಲೆಯು ನೀಳವಾದ ತನ್ನ ತೋಳುಗಳಿಂದ ನಮ್ಮಂ ಧಿಕ್ಕರಿಸಿರುವಳೆಂದು ತಾವರೆಯು ಬಳ್ಳಿ

ಗಳು, ಮೊಗದ ಸೊಬಗಿನಿಂದ ನಮ್ಮ ಕಾಂತಿಗಳಂ ಕಳೆಗುಂದಿಸಿದಳೆಂದು ಸರೋರುಹಂಗಳು ಕನಕ ಕಲಶಂಗಳೆಂತಿರುವ ಕುಚಂಗಳಿಂದ ನಮ್ಮ ಹಾಸ್ಯವಗೈದಳೆಂದು ಚಕ್ರವಾಕಂಗಳು ಮನೋಹರವಾದ ನಡೆಗಳಿಂದ ನಮ್ಮಂ ಧಿಕ್ಕರಿಸಿರುವಳೆಂದು ರಾಜಹಂಸೆಗಳು ನೇತ್ರಂಗಳಿಂದ ನಮ್ಮಂ ಅಪಹಾಸಗೊಳಿಸಿದಳೆಂದು ಮತ್ಸರಗೊಂಡಿರುವ ಮತ್ಸ್ಯಂಗಳು ಮುಂಗುರುಳುಗಳಿಂದ ಮುಖಭಂಗವಂ ಮಾಡಿರುವಳೆಂದು ಮರಿದುಂಬಿಗಳು ಇವೆಲ್ಲ ಒಟ್ಟುಗೂಡಿ ಈ ತಿಳಿಗೊಳವಂ ಪೊಕ್ಕು ಅದಂ ಕುರಿತು ನಾಭಿಯಿಂದ ನಿನ್ನಂ ನಿರಾಕರಿಸಿರುವಳೆಂದು ಬಹುದಿನದಿಂದ ಚಾಡಿಯುಂ ಪೇಳುತ ಅದರ ಸರಸಹೃದಯವಂ ಮಂದಾರಮಾಲೆಯು ಪೂರ್ವ್ವಳೇ ಬಂದಾಗ ಸಮಯವಂ ನೋಡಿ ಮೋಸವಂ ಮಾಡುವೆವೆಂದು ಕಾಲವಂ ನಿರೀಕ್ಷಿಸುತಲಿರ್ದು ಸಮಯವಂ ತಿಳಿದು ತಿಳಿಗೊಳವು ಒಳಗೊಳ್ಳುವಂತೆ ಮಾಡಿರುವವೆಂದು ಅಳಲುತಲಿರುವಷ್ಟರೊಳ್ ಯುಚ್ಚರಗೊಂಡು ಈ ವಸ್ತುಗಳು ಯಿಂತುಮಾಡಿರುವಾಗಿ ತೋರಲಿಲ್ಲ ಯಾಕೆಂದರೆ ಕಮಲಂಗಳೇ ಅವಳ ಕರಂಗಳಲ್ಲವೇ, ನೈದಿಲೆಗಳೇ ನೇತ್ರಂಗಳಲ್ಲವೇ, ಭ್ರಮರಂಗಳೇ ಕಟಾಕ್ಷ ವೀಕ್ಷಣಂಗಳಲ್ಲವೇ ಸುವರ್ಣಸರೋಜಲತೆಯೇ ಶರೀರವಲ್ಲವೇ, ಕಲಹಂಸೆಗಳೇ ಪ್ರಾಣಸಖಿಯರಲ್ಲವೇ ಎಂದು ಪೇಳುತ್ತ, ಬಳಿಕ ಮತ್ತೊಂದು ಪರಿಯಾಗಿ ಭ್ರಾಂತಿಗೊಂಡು ಮನ್ಮಥನು ಸಕಲಜಗದೊಳಿರುವ ಪುರುಷರಂ ಜೈಸಲೆಣಿಸಿ ಈ ಮಂದಾರಮಾಲೆಯ ಶರೀರವಂ ಅಪಹರಿಸಿರುವನೊ? ಇಲ್ಲದಿರೆ ಇವಳ ಮೃದು ಮಧುರವಾದ ನುಡಿಗಳಂ ಕೇಳಿ ಕೋಗಿಲೆಗಳೆಲ್ಲಾ ಕೋಪಿಸಿಕೊಂಡು ಗುಂಪು ಕೂಡಿ ಬಂದು ಮಂದಾರಮಾಲೆಯಂ ಹಿಡಿದು ತಮ್ಮ ಒಡೆಯನಾದ ವಸಂತನೆಂಬ ವನಪಾಲಕನಿಗೆ ಒಪ್ಪಿಸಿರುವವೊ? ಅಲ್ಲದಡೆ ಆಕಾಶವೆನುವ ಮಾಯಗಾರನು ಮಂದಾರಮಾಲೆಯ ನಡುವು ತನ್ನಂತೆ ಇರುವುದಂ ತಿಳಿದು ಕೋಪದಿಂ ಬೆರದು ಇವಳ ಶರೀರವನೆಲ್ಲವಂ ತನ್ನಂತೆ ಮಾಡುವೆನೆಂದು ಈ ಮಂದಾರಮಾಲೆಯಂ ಮಾಯವಂಮಾಡಿ, ಮತ್ತು ಅವಳ ಮುಖವು ಚಂದ್ರನಂತೆಯೂ, ಹಣೆಯೊಳಿಟ್ಟಿರುವ ಕಸ್ತೂರಿಯ ತಿಲಕವು ಕಳಂಕದಂತೆಯೂ ಮುಗುಳು ನಗೆಗಳೇ ಬೆಳ್ದಿಂಗಳಂತೆಯೂ ಇರುವ

ದಂ ನೋಡಿ ಅಪಹರಿಸಿದ್ದಲ್ಲದೆ, ಬೆರಳುಗಳ ಚೆಲುವಿಕೆಯುಂ ಚಿಗರುಗಳಿಗೆ ಕೊಟ್ಟು, ಮೈ ಬಣ್ಣವಂ ಕುಂದಣದಲ್ಲಿಟ್ಟು, ಕಂಠದಂದವಂ ಶಂಖದಲ್ಲಿಳೆಪಡಿಸಿ, ಮಾತುಗಳ ಮಾಧುರ್ಯವಂ ಅಮೃತ ಕಲಶದಲ್ಲಿ ನಿಲ್ಲಿಸಿ, ಮುಂಗುರುಳುಗಳ ಕೌಟಿಲ್ಯವಂ ದುರ್ಜನರ ಮನಸ್ಸಿನೊಳಿಟ್ಟು ಕುಚಂಗಳ ಕಾಠಿನ್ಯವಂ ದೈವದಮನಸ್ಸಿನಲ್ಲಿರಿಸಿ, ನಾಭಿಯ ಗಾಂಭೀರ್ಯವಂ ಸರೋವರಂಗಳಿಗೆ ಕೊಟ್ಟು, ಹುಬ್ಬುಗಳಂ ಮನ್ಮಥನಿಗೆ ಬಿಲ್ಲಾಗಿ ನಿಲ್ಲಿಸಿ, ಕಣಕಾಲುಗಳಂ ಕಾಮನಿಗೆ ಬತ್ತಳಿಕೆಗಳಂ ಮಾಡಿ, ತೊಡೆಗಳ ಸೌಂದರ್ಯವಂ ಈ ಬಾಳೆಗಳ ಪಾಲು ಮಾಡಿದಂತೆ ತೋರುತಲಿದೆ, ಎಂದು ನುಡಿಯುತ ಅಪ್ಸರೋಳ್ ಚಿತ್ರವೈಕಲ್ಯವಿಂತಾಗುವದುಂಟೆ? ಈ ಪರಿಯಾಗಲಾರದೆಂದು ನಿಶ್ಚೈಸಿ, ಮತ್ತೂ ಮಂದಾರಮಾಲೆಯು ಈ ವನಲಕ್ಷ್ಮಿಯೊಡಗೂಡಿ ನಂದನವನವಿಹಾರವಂ ಮಾಡಲೋಸುಗ ಪೋಗಿರುವಳೊ? ಇಲ್ಲದಿರೆ ಮಂದರಪರ್ವತದಲ್ಲಿ ಪಾರಿಜಾತವನದೊಳ್ ವಿಹಾರವಂ ಮಾಡುತಲಿರುವ ಪಾರ್ವತೀದೇವಿಯ ಪಾದಪದ್ಮಂಗಳಂ ಪೂಜಿಸಿ, ಪರಮಪಾವನಳಾದ ದೇವಿಯುಂ ಸಂತೋಷಪಡಿಸಿ ಬೇಕಾದ ವರಗಳಂ ಪಡೆಯುವೆನೆಂದು ಕಲಹಂಸೆಯೊಡಗೂಡಿ ಪೋಗಿರುವಳೊ? ಅಥವಾ ಕಲಹಂಸೆಯೊಡಗೂಡಿ ಬೆಳದಿಂಗಳಂ ನೋಡುತ ರಂಗಮಂಟಪದಲ್ಲಿರುವ ತೂಗು ಮಂಚದೊಳ್ಕುಳಿತಿರುವ ಸಮಯದಲ್ಲಿ, ದುಷ್ಟರಾದ ದಾನವರು ಅಲ್ಲಲ್ಲಿ ಸಂಚರಿಸುತ ಬಂದು ಈರ್ವರಂ ಅಪಹರಿಸಿಕೊಂಡು ಪೋಗಿರುವರೊ? ಎನುತ ಹಂಬಲಿಸುತ ಕಂಬನಿ ತುಂಬುತ, ಅಲ್ಲಲ್ಲಿ ಲತಾಗೃಹಂಗಳೊಳ್ ಅರಸಿನೋಡುತ, ಜಾತಿ ಮೊದಲಾದ ಲತೆಗಳಂ ಕಂಡು ಅವಂ ಕುರಿತು ಎಲೈ ಜಾತಿಯೆ! ನಿನ್ನಂ ಪೂಜಿಸುವೆನು, ಮರೆಮಾಜದೆ ಮುಗಳಿರುವ ಬಳಿಯುಂ ನಿಜವಾಗಿ ಪೇಳೆಂದು ನುಡಿಯುತ, ಹಾಗೆ ಮಲ್ಲಿಗೆಯ ಬಳ್ಳಿಯುಂ ಕುರಿತು ಮಂದಾರಮಾಲೆಯು ಎಲ್ಲಿಗೆ ಪೋದಳೆಂದು ಕೇಳುತ, ಅಲ್ಲಿಂದ ಪಾವರಿಯುಂ ನೋಡಿ ನೀನಾದರೂ ಪೇಳೆಂದು, ಬಳಿಕ ಸಂಪಿಗೆ ಮೊದಲಾದ ವೃಕ್ಷಂಗಳಂ ಕಂಡು ಎಲೈ ವೃಕ್ಷಗಳಿರಾ! ನಿಮ್ಮಲ್ಲಿ ಆಗುವ ಕುಸುಮಂಗಳ ಗುಣಗಳಂ ತೆಗದು ಚತುರ್ಮುಖನು ತನ್ನ ಚಾತುರ್ಯವೆಲ್ಲವಂ ಚತುರ್ದಶ ಭುವನವೂ ನೋಡಿ ಆಶ್ಚರ್ಯಗೊಳ್ಳುವಂತೆ ಮಂದಾರಮಾಲೆಯುಂ ನಿರ್ಮಿ

ಸಿರುವನಲ್ಲವೆ? ಅವಳಿರುವ ಬಗೆಯಂ ನೀವು ತಿಳಿಯಿರಾ ಎಂದು ಕಳವಳ ಗೊಂಡು ಕೇಳುತ್ತಲಿರಲಾಗ, ಪುಷ್ಪಗಳ ಗೊಂಚಲುಗಳೆಂಬ ಕಣ್ಣುಗಳಿಂದ ಮಕರಂದವೆಂಬ ಕಂಬನಿಗಳಂ ಸುರಿಯಿಸುತ್ತ, ಗೂಡುಗಳಂ ಮಾಡಿ ಕೊಂಡು ಆಡುತಲಿರುವ ಶುಕಪಿಕ ಮಯೂರಗಳ ನಾದವೆಂಬ ರವದಿಂದ ತನ್ನಂತೆ ಮರುಗುವುವೋ? ಎಂಬಂತೆ ತೋರುತ್ತಿರಲದಂ ನೋಡಿ ಮಂಜೂಷೆಯು ಅಲ್ಲಿಂದ ತೆರಳಿ ಬಂದು ಮಂದಾರಮಾಲಿನಿಯ ಮಣಿಮಂದಿರಮಂ ಪೊಕ್ಕು, ಅಲ್ಲಲ್ಲಿ ಪದ್ಮಪತ್ರಗಳಂತೆ, ಗಿಳಿಗಳ ಸಾಲುಗಳಂತೆ, ರಾಜಹಂಸೆಗಳ ಗುಂಪಿನಂತೆ, ಬಳ್ಳಿಗಳ ಭಾವದಂತೆ, ಪರಿಪರಿಯಾಗಿ ಇಟ್ಟಿರುವ ಮುತ್ತಿನ ರಂಗವಲ್ಲಿಗಳಂ ನೋಡಿ ಮುತ್ತಿನ ಮಣಿಗಳು ಉದುರುವಂತೆ ಕಣ್ಣೀರುಗಳಂ ಬಿಡುತ್ತ ಮಂದಾರಮಾಲಿನಿಯು ಎಲ್ಲಿ ಹಾಯುವಾವಳೊ? ಎಂದು ಚಿಂತಿಸುತ್ತ, ಶಕುಂತಶಾಲೆಯತ್ತೈದಿ ನೋಡುವೆನೆಂದು ಬರುತ್ತಲಿರುವಾಗ ನವರತ್ನಮಯವಾದ ಪಂಜರಂಗಳಲ್ಲಿ ಮಂದಾರಮಾಲಿನಿಯು ಸಾಕುತ್ತಲಿರುವ ಪಕ್ಷಿಗಳಂ ನೋಡುತ್ತಲಿರಲಾಗ ಆ ಪಕ್ಷಿಗಳು ಈ ಮಂಜೂಷೆಯುಂ ಮಂದಾರಮಾಲೆ ಎಂದರಿತು ಎಂದಿಗಿಂತಲೂ ಇಂದು ಹೊತ್ತಾದುದು, ದಾಳಿಂಬದ ಬಿತ್ತುಂಗಳನ್ನಿತ್ತು ಪರಿಪರಿಯಾದ ಮಾತುಗಳಂ ಕಲಿಸುವ ಅರಗಿಣಿಗಳ ಮರಿಗಳಂ, ಮತ್ತಾ ಎತ್ತ ಸಂದವರಾಂಗಿವೆ! ಬಹು ಕಾಲದಿಂದ ಹಸಿದಿರುವ ನಮಗೆ ಎಳೆದಾವರೆಗಳ ಬಳ್ಳಿಗಳಂ ಆಹಾರವಾಗಿ ಕೊಟ್ಟು ವೈಯಾರದ ನಡೆಗಳಂ ಕಲಿಸೆಂದು ಕೂಗುವ ರಾಜಹಂಸೆಗಳ ಶಿಶುಗಳಂ, ಮತ್ತಾ ಪುಟ್ಟಿದ ಮೂರು ದಿನಂಗಳಿಗೆ ಸಮ್ಮ ತಂದೆತಾಯಿಗಳಂ ಬಿಡಿಸಿ ತಂದು ಈ ರತ್ನಮಯವಾದ ಪಂಜರಂಗಳಲ್ಲಿಟ್ಟು ಅಕ್ಕರೆಯಿಂದ ನಕ್ಕರೆಯಂ ಕೊಟ್ಟು ಮಕ್ಕಳಿಗಿಂತ ಹೆಚ್ಚಾಗಿ ಅಚ್ಚರಿಯಿಂದ ಹೆಚ್ಚು ಕಡಮೆ ಇಲ್ಲದೆ ಭಾರಿ ಭಾರಿಗೂ ವಿಚಾರಿಸುತ್ತ ಸಲಹುತಲಿದ್ದ ಈಗ ನಮ್ಮಂ ಸಾಕುವುದು ನಿನಗೆ ಸಾಕಾಯಿತೆ? ವಾಚಾಪಟುಗಳಾದ ಪಕ್ಷಿಗಳ ಮರಿಗಳಂ ಉಪೇಕ್ಷಿಸಲು ಮಾಡಬಹುದೆ? ಎತ್ತ ಮಂದಾರಮಾಲಿನಿ! ಬ್ಯಾಗ ಬಾ ಎಂದು ಭಾರಿ ಭಾರಿಗೂ ಬಾಯಿ ಬಿಟ್ಟು ಕರೆಯುತ್ತಲಿರುವ ಶಾರಿಕೆಗಳಂ, ಹುಲ್ಲೆಗಳ ಮರಿಗಳೆಲ್ಲವೂ ಮಂದಾರಮಾಲಿನೀ ಬಂದಳೆಂದು ಓಡೋಡಿ ಬಂದು ಮಂಜೂಷೆಯಂ ಮೂಸಿ

ನೋಡಿ ಮಂದಾರಮಾಲೆ ಅಲ್ಲವೆಂದು ಮನದೊಳ್ ತಿಳಿದು ತಲೆವಾಗಿ ಕಿವಿಗಳಂ ಜೋಲಿಸುತ್ತ, ಹಿಂತಿರಿಗಿ ನೋಡುತ ಮನ ಬಂದಂತೆ ಓಡೋಡಿ ಪೋಗುತಲಿರಲು, ಇದನ್ನೆಲ್ಲವಂ ನೋಡಿ ಹೃದಯದೊಳ್ ಶೂಲ ಮೂಡಿ ದಂತಾಗಿ ಮೂರ್ಛೆಗೊಂಡಿರುವ ಮಂಜೂಷೆಯಂ ಸಖಿಯರೆಲ್ಲರೂ ನೋಡಿ ಕಡುನೊಂದು ಇನ್ನೇನು ಗತಿ ಎನುತ್ತ, ಪನ್ನೀರು ಮೊದಲಾದ ವಸ್ತುಗಳಿಂದ ಶೀತೋಪಚಾರವಗೈದು, ಪುಷ್ಪಮಯವಾದ ಬೀಸಣಿಗೆಯಿಂ ಬೀಸುತ್ತಿರಲು, ಆಗ ಮಂಜೂಷೆಯು ಸುಳಿಯುವ ಎಳೆಗಾಳಿಯಿಂದ ಎಚ್ಚರಗೊಂಡು ಎದ್ದು ನೋಡಿ ಹುಚ್ಚುಗೊಂಡವಳಂತೆ ಮಗಳು ಬಂದಳೇ ಎಂದು ಭಾರಿ ಭಾರಿಗೂ ಕೆಳದಿಯರಂ ಕೇಳುತ್ತ, ಅಲ್ಲಿಂದ ತೆರಳಿ ನಿಜಮಂದಿರವಂ ಕುರಿತು ಬಂದು ಸಿಂತಲ್ಲಿ ನಿಲ್ಲದೇ ತಿರುಗುತಲಿರುವಾಗ ಗೂಡುಗಳಲ್ಲಿ ಮಡಗಿರುವ ನವರತ್ನ ಪವಡೆಗಳಂ, ಸರಿಗಳಂ ಪಿಡಿದು ನ್ಯಾಲೆಗಳೊಳಿರಿಸಿರುವ ಬಗೆಬಗೆಯಾದ ಬಣ್ಣದಿಂದೊಪ್ಪಿ ಮಿಂಚಿನಂತೆ ಹೊಳೆಯುತಲಿರುವ ಮುತ್ತಿನ ಸೀರೆಗಳಂ ಕಂಡು ಇನ್ಯಾರು ಉಡುವರು, ಈ ಆಭರಣಂಗಳಂ ಯಾರು ತೊಡುವರು ಎಂದು ಅಂಗಳದಲ್ಲೀಡಾಡುತ, ಬಹು ಪರಿಯಾಗಿ ಬಣ್ಣಿಸಿ ಹಂಬಲಿಸಿ ನಿಟ್ಟುಸುರುಗಳಂ ಬಿಡುತ, ಎಲೈ ಮಂದಾರಮಾಲೆಯೆ! ನಿನ್ನಲ್ಲಿ ನನಗೆ ಪ್ರೇಮವಿರುವದೂ? ಇಲ್ಲವೊ? ಪರೀಕ್ಷೆಯಂ ಮಾಡಿ ತಿಳಿಯಬೇಕೆಂದು ನಾನು ಕಾಣದಂತೆ ಅಡಗಿಕೊಂಡಿರುವೆಯೊ? ನನಗೆ ನಿನ್ನಲ್ಲಿರುವ ಮಮತೆಯು ಇಷ್ಟಷ್ಟೆಂದು ಗೊತ್ತು ಗುರಿಯು ಕಾಣುವದಿಲ್ಲ,ಆದ್ದರಿಂ ನಿನ್ನಂ ಕಾಣದೆ ಭಾರಿ ಭಾರಿಗೂ ಹಂಬಲಿಸುತಲಿರುವ ನನ್ನಂ ನೋಡಿದರೆ ನಿನಗೆ ತೋರುವದು, ನಿನಗೆ ಯೌವನವು ಆ ವಿರ್ಭವಿಸಿದ ವಿವರವಂ ತಿಳಿದು ಮದುವೆಯಂ ಮಾಡಲಿಲ್ಲವೆಂದು ನನ್ನ ಮೇಲೆ ಬಹಳವಾಗಿ ಕೋಪ ಉಂಟಾಗಿ ಮರೆಯಾಗಿರುವೆಯೊ? ಇನ್ನು ಮೇಲೆ ಇಂತಾಗಲಾರದು, ನಿನ್ನ ಮನಸಿದ್ದಂತೆ ನಡೆಯುವೆವು, ನಿನಗೆ ಅನುಗುಣವಾದ ವರನಂ ನೋಡಿ ಮದುವೆಯಂ ಮಾಡುವೆವು. ಮುಂದೆ ಬಂದು ನಿಲ್ಲೆಂದು ಪೇಳುತ, ಕಣ್ಣುಗಳೊಳ್ ನೀರು ತುಂಬಿ ಕಾಣದಂತಾಗಿ, ಮನದೊಳ್ ಮಗಳಾದ ಮಂದಾರಮಾಲೆಯ ರೂಪವಂ ಭಾರಿ ಭಾರಿಗೂ ಭಾವಿಸುತ ನೇತ್ರಂಗಳಂ ಬಿಟ್ಟು ನೋಡಲು. ಎಲ್ಲೆಲ್ಲಿ

ಯೊ ಮಂದಾರಮಾಲೆಯೋ ಮುಂದೆ ಬಂದು ನಿಂತಂತೆ ತೋರಿ, ಮಗಳು ಬಂದಳೆಂದು ಭ್ರಾಂತಿಗೊಂಡು ಮಮತೆಯಿಂದ ಬಿಗಿದಪ್ಪುವೆನೆಂದು ಕೈಗಳಂ ನೀಡಿ ಎಲೈ ಮಂದಾರಮಾಲೆಯೆ! ಸದ್ದುಮಾಡದೆ ಮುಂದೆ ಬಂದು ನಿಂದೆಯಾ ಎಂದು ಅಪ್ಪಿಕೊಳ್ಳಲು, ತೋಳುಗಳಿಗೆ ಏನೂ ಸಿಕ್ಕದೆ ಒಟ್ಟು ಬಯಲಾಗಿ ತೋರಲು, ಸುತ್ತಲೂ ನೋಡಿ ಅಲ್ಲಲ್ಲಿ ಕಂಡ ಕಂಡಂತೆ ತೋರಿ, ಒರಿದೇ ತಿರುಗುತ ಎಲ್ಲಿಯೂ ಕೈಗಳಿಗೆ ಸಿಕ್ಕದೆ ಭ್ರಮೆಗೊಂಡು ಆಕಾಶಮಂ ನೋಡಿ ಅಲ್ಲಿಯೂ ಕಾಣದೆ ಎಲೈ ಬಾಲೆಯೆ! ಎಲ್ಲಿ ಕಂಡರೂ ಮುನಿಸುಗೊಂಡು ಎನ್ನೊಡನೆ ಮಾತನಾಡದೆ, ಒಂದು ಕಡೆಯಲ್ಲಿಯೂ ನಿಲ್ಲದೇ ಮೊದಲಿನಂತೆ ನನ್ನಂ ತಾಯೆ! ಬಾರೆಂದು ಕರೆಯದೆ, ಇಂತು ಸಂಕಟಮಂ ಪಡಿಸುತ ನಗುತ ನೋಡುತಲಿರುವದು ನಿನಗೆ ಧರ್ಮವೇ ಎಂದು ನುಡಿಯುತಲಿರುವ ಮಂಜೂಷೆಯಂ ನೋಡಿ, ಸಖಿಯರೆಲ್ಲರೂ ಇಂತು ಮೊರೆ ಇಡುವ ಮಂಜೂಷೆಯಂ ನೋಡಿದರೆ ಕಲ್ಲುಗಳಾದರೂ ಕರಗಿ ಪೋಗುವವು. ವಜ್ರಂಗಳಾದರೂ ಒಡೆದು ಪೋಗುವವು ಬೆಟ್ಟಗಳಾದರೂ ಬಿರಿದು ನಿಲ್ಲುವವು. ಎಂದು ಅವಳಿಗಿಂತ ಅಧಿಕವಾಗಿ ವ್ಯಸನಗೊಳ್ಳುತ ಎಲ್ಲರೂ ಒಂದಾಗಿ ಸುತ್ತುವರಿದು ಈ ಪರಿಯಾಗಿ ಈ ತರುಣಿಯು ದುಃಖಪಡುತಲಿದ್ದರೆ ಇವಳು ಉಳಿಯುವ ಸಂಗತಿಯು ತೋರುವದಿಲ್ಲ. ಚಿತ್ರವರ್ಮನು ಬರುವವರಿವಿಗೆ ಇವಳು ಏನಾಗಿ ಪೋಗುವಳೊ? ತಿಳಿಯಲಿಲ್ಲ. ನಾವಿಷ್ಟು ಜನವೂ ಇದ್ದೂ ವ್ಯರ್ಥವಾಗುವದು. ಏನು ಮಾಡುವೆವೆಂದು ಚಿಂತಿಸುತ್ತಿರಲಷ್ಟರೊಳ್ ಕೆಲಂಬರು ಧೈರ್ಯವತಿಗಳಾದ ಸಖಿಯರು ಮಂಜೂಷೆಯಂ ಪಿಡಿದು ಕುಳ್ಳಿರಿಸಿ ನೀನು ಇಂತು ಶೋಕಿಸುವದುಚಿತವಲ್ಲ. ಇನ್ನು ಸ್ವಲ್ಪ ದಿವಸದಲ್ಲಿಯೇ ನಿನ್ನ ಪತಿಯಾದ ಚಿತ್ರವರ್ಮನು ಮಂದಾರಮಾಲೆಯಂ ಕರತರುವನು ಸಂದೇಹಗೊಳ್ಳಬ್ಯಾಡವೆಂದು ಪರಿ ಪರಿಯಾಗಿ ಸಮಾಧಾನಮಂ ಮಾಡಿ ಎಡೆಬಿಡದೆ ಅಡಿಗಡಿಗೂ ಮಂಜೂಷೆಯಂ ಒಡಂಬಡಿಸುತ ಶೀತೋಪಚಾರವಗೈಯುತ್ತಿರಲೂ.

ಅತ್ತಲಾ ಚಿತ್ರವರ್ಮನು ಮಗಳಾದ ಮಂದಾರಮಾಲೆಯಂ ಶಾಕದ್ವೀಪದೊಳ್ ಹುಡುಕುತ ಎಲ್ಲಿಯೂ ಕಾಣದೆ ಕಡುನೊಂದು ಬರಬರು

ತ ಲೋಹಿತಾಕ್ಷನಿರುವ ಚಿತ್ರವತೀ ಎಂಬ ನಗರವಂ ಪೊಕ್ಕು ಮಣಿಮಯ ವಾದ ಮಂದಿರಂಗಳಂ ನೋಡಿ, ಅಲ್ಲಲ್ಲಿ ಆಡುತ ಜನರಂ ಕಾಣದ ತೆರಳಿ ಬರುತ್ತ ಲೋಹಿತಾಕ್ಷನಿರುವ ಮಂದಿರಮಂ ಪೊಕ್ಕು ಅಲ್ಲಿರುವ ಆಶ್ಚರ್ಯಕರವಾದ ವಸ್ತುಗಳಂ ನೋಡಿ ವಿಸ್ಮಯಪಡುತ್ತ, ತಬ್ಬಿಬ್ಬುಗೊಂಡು ಬೆಪ್ಪು ಬೆರಗಾಗಿ ನಿಂತಿರುವ ಚಿತ್ರವರ್ಮನಂ ನೋಡಿ ಲೋಹಿತಾಕ್ಷನೆಂಬ ರಾಕ್ಷಸನು ಇವನೇನು ಮಾಡುತ್ತಿರ್ಪನೋ? ನೋಡುವಾ ಎಂದು ತಾನು ಗೂಢನಾಗಿ ನೋಡುತ್ತ, ಸ್ವಲ್ಪ ಹೊತ್ತು ಸುಮ್ಮನಿದ್ದು ಬಳಿಕ ಇವನ ಚೇಷ್ಟಿತವಂ ನೋಡಿ ಯಾರೋ ವಿಶ್ವಾಸಿಕರು ಈ ಪುರವಂ ನೋಡಿಕೊಂಡು ಇಲ್ಲಿರುವ ವೃತ್ತಾಂತವಂ ತಿಳಿದು ಬರುವನೆಂದು ಕಳುಹಿಸಿದ ಗೂಢಚಾರನಾಗಿರಬೇಕೆಂದು ಮನದೊಳ್ ನಿಶ್ಚಯಿಸಿ, ಈ ಜೀವದೂತನಂ ಬಿಡುವುದುಚಿತವಲ್ಲವೆಂದು, ಮತ್ತು ಪ್ರಾಣಿ ಮಾತ್ರಗಳು ಪ್ರವೇಶವಂ ಮಾಡುವುದಕ್ಕೆ ಅಶಕ್ಯವಾದ ಈ ಚಿತ್ರವತೀಪುರವಂ ಇವನೆಂತು ಭಯವಿಲ್ಲದೇ ಪ್ರವೇಶಿಸಿದನೆಂದು ಕೋಪಗೊಂಡು, ಚಿತ್ರವರ್ಮನಂ ಹಿಡಿದು ನಾಗಪಾಶದಿಂ ಬಿಗಿದು ಎತ್ತಿ ದುಷ್ಟಾತ್ಮನಾದ ಧೂರ್ತ! ನೀನ್ಯಾರೆಂದು ಕೇಳಲಾ ಚಿತ್ರವರ್ಮನು ಇದೇನಾಶ್ಚರ್ಯವೆಂದು ಸುತ್ತಲೂ ನೋಡಿ ಹಿಂಭಾಗದೊಳ್ ಪರ್ವತದಂತೆ ನಿಂತಿರುವ ಲೋಹಿತಾಕ್ಷನಂ ಕಂಡು ಇವನೇ ಬಿಗಿದನೆಂದು ತಿಳಿದು ತನ್ನ ಸಾಹಸವೆಲ್ಲವಂ ವೆಚ್ಚವಂ ಮಾಡಿ ಬಂಧನವಂ ಶ್ರಮಿಸಿ ಬಲತಪ್ಪಿ ಬಿಡಿಸಿಕೊಳ್ಳುವುದಕ್ಕೆ ಸಾಮರ್ಥ್ಯ ಸಾಲದೆ ಭಯಗೊಂಡು ಗಡಗಡನೆ ನಡುಗುತ್ತ ನಿಂತಿರಲಾ ರಾಕ್ಷಸನು ಈ ಚಿತ್ರವರ್ಮನಂ ಕುರಿತು ಎಲೈ ದೇವದೂತನೆ! ನೀನ್ಯಾರು ಏನು ಕಾರಣ ಇಲ್ಲಿಗೆ ಬಂದಿರುವೆ, ಯಾರಂ ಹುಡುಕುವೆ. ಅದನೆಲ್ಲವನೀಗಲಾದರೂ ಯಥಾರ್ಥವಾಗಿ ಹೇಳದೆಹೋದರೆ ನಿನ್ನಂ ಪ್ರಾಣದಿಂ ಬಿಡುವೆನು, ಇಲ್ಲವಿದ್ದರೆ ಕೊಂದು ಬಿಸುಡುವೆನೆಂದು ನುಡಿಯಲೂ, ಚಿತ್ರವರ್ಮನು ತನ್ನ ಮನದೊಳ್ ಇಂತೆಂದು ಚಿಂತಿಸುತ್ತಿದ್ದನು ಈ ದುಷ್ಟನಾದ ದಾನವನಿಗೆ ನಾನು ಬಂದಿರುವ ಕಾರ್ಯವಂ ಯಥಾರ್ಥವಾಗಿ ಹೇಳಿದಡೆ, ಮಂದಾರಮಾಲಿನಿಯಂ ಎಲ್ಲಿದ್ದರೂ ಬಿಡದೆ ಹುಡುಕಿ ಹಿಡಿತಂದು ತನ್ನ ಅಧೀನವಂ ಮಾಡಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಅಥವಾ ಇವನೇ ಅವ

ಹರಿಸಿರುವನೋ? ಈಗ ನಾನಾಗಿ ರಾಕ್ಷಸನಿಗೆ ಮಗಳ ವೃತ್ತಾಂತವಂ ಪೇಳಿದಡೆ ಅವಳಂ ನಾನೇ ಒಪ್ಪಿಸಿ ಕೊಟ್ಟು ಕಳದಂತಾಗುವದು, ಪೇಳ ದಿರ್ದಡೆ ಸುಮ್ಮನೆ ಬಿಡುವನಾಗಿ ತೋರುವದಿಲ್ಲ. ಏನು ಮಾಡಲಿ ಎಂದು ಪರಿಪರಿಯಾಗಿ ಹಂಬಲಿಸುತ ಸುಮ್ಮನೆ ನಿಂತಿರಲು,

ಲೋಹಿತಾಕ್ಷನು ತನ್ನ ಮನದೋಳ್ ಈದೇವದೂತನು ತಾನುಬಂದಿ ರುವ ಪರಿಯಂ ಪೇಳುವನಾಗಿ ತೋರುವದಿಲ್ಲ. ಸಂಹಾರವಂ ಮಾಡು ವೆನೆಂದರೆ ಇವನ ವೃತ್ತಾಂತವಂ ತಿಳಿಯದೇ ದೂತ ಮಾತ್ರನಂ ಸಂಹರಿ ಸುವದುಚಿತವಲ್ಲ. ಆದ್ದರಿಂ ಕೆಲವು ಕಾಲ ಕಾರಾಗೃಹದೊಳಿಟ್ಟು ಬಗೆ ಬಗೆಯಾಗಿ ಬಾಧಿಸಿದರೆ ಬಳಿಕ ತಾನು ಬಂದ ಸಮಾಚಾರವೆಲ್ಲವಂ ಸಾ ಂಗವಾಗಿ ಪೇಳುವನೆಂದು ತಿಳಿದು ಘಾಳಿಯೂ ಕೂಡ ಹೋಗುವದ ಕ್ಕೆ ಅವಕಾಶವಿಲ್ಲದೆ ಇರುವ ಒಂದು ಮಂದಿರದೋಳ್ ಆ ಗಂಧರ್ವಾಧಿ ಪನಾದ ಚಿತ್ರವರ್ಮನಂ ಪಾಶ ಸಹಿತವಾಗಿ ಇಟ್ಟು ಇವನಂ ಅರಸಿಕೊಂ ಡು ಯಾರು ಬರುವರೊ? ಎಂದು ಭಾರಿಭಾರಿಗೂ ದಾರಿಯಂ ನೋಡುತ್ತಿ ರಲು,

ಅತ್ತಲಾ ಛಾಯಾಗುಪ್ತನು ಸುಗಂಧರಾಜೇಂದ್ರನ ಅಪ್ಪಣೆಯಾ ದಂತೆ ಅಲ್ಲಲ್ಲಿ ಪಾರಿಜಾತ ತರುವಂ ಅರಸುತ ಬಂದು ಎಲ್ಲಿಯೂ ಕಾಣದೆ ಮುಪ್ಪತ್ತೆರಡು ಲಕ್ಷ ಯೋಜನ ವಿಸ್ತೀರ್ಣವಾದ ಶಾಕದ್ವೀಪದೊಳಿರುವ ರಮ್ಯಕವೆಂಬ ಪರ್ವತದ ಉಪರಿ ಭಾಗದೋಳ್ ಕಾಣುವ ಆಶ್ಚರ್ಯಕರ ವಾದ ಒಂದು ನಗರಿಯಂ ಕಂಡು ಇದೇನೊ? ಬಹು ವಿಚಿತ್ರವಾಗಿರು ವದು. ಇಲ್ಲಿ ದೇವತೆಗಳೊ? ಗಂಧರ್ವರೊ? ಯಕ್ಷರೊ? ರಾಕ್ಷಸರೊ? ಯಾರೊ ಮಹಾ ಬಲಿಷ್ಠರಾದವರು ಇರುವದಾಗಿ ತೋರುತಲಿಧೆ. ಆದರೂ ಹೋಗಿ ನೋಡುವಾ ಎಂದು ಅದೃಶ್ಯನಾಗಿ ಆ ಕಾಂತಿಮತೀಪುರವಂ ಪ್ರ ವೇಶಿಸಿ, ಅವರಮಧ್ಯದಲ್ಲಿ ಸರ್ವೋತ್ತಮವಾದ್ದ ಮಣಿಮಯವಾದ ಒಂದು ರಾಜ ಭವನವಂ ಕಂಡು, ಆ ಮಂದಿರವಂ ಪೊಕ್ಕು ಅಲ್ಲಿ ರತಿದೇವಿಗಳಂ ತೆ ಹೊಳೆಯುತಲಿರುವ ಸ್ತ್ರೀರುಗಳಂ, ಅವರೆಲ್ಲರೂ ಆಭರಣಗಳಿಲ್ಲದೇ ಮಲಿನಂಗಳಾದವಸ್ತ್ರಂಗಳಂ ಉಟ್ಟು ಯಮುನಾ ನದಿಯ ಕಿರುಕಾ ಲುವೆಗಳಂತೆ ಕಣ್ಣೀರುಗಳಂ ಬಿಡುತ್ತ, ಮಾತನಾಡದೆ ಎಲ್ಲರೂ ಒಂದೇ

ಮೇರೆಗೆ ಚಿತ್ರಪ್ರತಿಮೆಗಳಂತೆ ಅಲ್ಲಲ್ಲಿ ಸುಮ್ಮನೆ ನಿಂತಿರುವುದಂ ಕಂಡು, ಇದೇನು ಒಂದು ಅದ್ಭುತವಾದ ಕಾರ್ಯವು ನಡದಿರುವದಾಗಿ ತೋರುತಲಿದೆ, ಅದಂ ಚನ್ನಾಗಿ ವಿಚಾರಿಸಿ ತಿಳಿಯಬೇಕೆಂದು ಮನದಲ್ಲಿ ನಿಶ್ಚೈಸಿ, ಅಲ್ಲಿಯೇ ಗೂಢನಾಗಿ ಸಂಚರಿಸುತಲಿರಲು, ಮತ್ತೇ ಸ್ವಲ್ಪ ಹೊತ್ತಿನ ಮೇಲೆ ಚಿತ್ತಜನೆ ಮತ್ತಗಜದಂತಿರುವ ಉತ್ತಮರಾದ ಬಿತ್ತರಿಯರೆಲ್ಲ ಸುತ್ತುವರಿದು, ಇವರ ಮಧ್ಯದಲ್ಲಿ ಮಿಂಚಿನ ಬಳ್ಳಿಯಂತೆ ಥಳಥಳನೆ ಹೊಳೆಯುತ, ಬಳ್ಳಿಗಳಂತೆ ಬಳಕುತ, ಕಳವಳಿಸಿ ಮಗಳಾದ ಮಂದಾರಮಾಲೆಯಂ ಎಂದಿಗೆ ಕಾಣುವೆನೆಂದು ಹಂಬಲಿಸುತ, ಮುಂದೆ ಮುಂದೆ ತೆರಳಿ ಮೂರು ಲೋಕದಲ್ಲಿದ್ದರೂ ಮೂರು ದಿವಸದಲ್ಲಿ ಹುಡುಕಿ ಆ ತರುಣಿಯಂ ಕರತರುವೆನೆಂದು ಪತಿಯಾದ ಚಿತ್ರವರ್ಮನು ತೆರಳಿ ಪೋಗಿ ಐದು ದಿನವಾಯಿತು, ಈವರಿವಿಗೂ ಹಿಂತಿರಿಗಿ ಬಾರದೆ ಪತಿಯ ಸಮಾಚಾರವೇ ತಿಳಿಯದೇ ಇರುವದರಿಂದ ಏನಾಯಿತೊ? ತಿಳಿಯಲಿಲ್ಲ, ನನ್ನ ಪ್ರಾಣವಲ್ಲಭನಾದರೂ ಶತ್ರುಗಳ ಬಾಧೆ ಇಲ್ಲದೇ ಕ್ಷೇಮದಿಂ ಬರುವನೊ? ಬಾರನೊ? ಎಂದು ಚಿಂತೆ ಪಡುತಲಿರುವ ಮಂಜೂಷೆಯಂ ನೋಡಿ ಮನನೊಂದು ಈ ಸ್ತ್ರೀಯೆ ಇಂತಪ್ಪ ಸೌಂದರ್ಯದಿಂದಿರುವಾಗ ಇವಳ ಪುತ್ರಿಯಾದ ಮಂದಾರಮಾಲೆಯು ಎಂತಿರುವಳೊ? ನಾನು ಸಂಚಾರವಂ ಮಾಡಿದ ಈ ಸಕಲ ಭೂಮಂಡಲದಲ್ಲಿಯೂ, ಈ ಮಂಜೂಷೆಗೆ ಸಮಾನವಾದ ರೂಪವತಿಯಾದ ಸತಿಯಂ ಕಾಣೆನೆಂದು ವಿಸ್ಮಿತನಾಗಿ, ಆ ಮಂದಾರಮಾಲೆಯಂ ಯಾವವನು ಅಪಹರಿಸಿರುವನೊ? ತಿಳಿಯಲಿಲ್ಲ. ಆ ಕನ್ನೆ ಇರುವ ಬಳಿಯಾದರೂ ಗೊತ್ತಾದರೆ? ಇಲ್ಲಿ ಪರಿಯಂತರವೂ ಸಂಚಾರವಗೈದುದೆಲ್ಲ ಸಾರ್ಥಕವಾಗುವನು. ಬಂದಿರುವ ಕಾರ್ಯವನ್ನಾದರೂ ಸಾವಕಾಶದಿಂದ ಮಾಡಿಕೊಳ್ಳಬಹುದು. ಮೊದಲು ಆ ಮಂದಾರಮಾಲೆಯು ಎಲ್ಲಿರುವಳೊ? ನೋಡಿ ರಾಜಾಧಿರಾಜಂಗೆ ವಿಜ್ಞಾಪನೆಯಗೈದು, ಅವಳಂ ಅಪಹರಿಸಿದ ದುರಾತ್ಮನಂ ಸಂಹಾರವಗೈಸಿ, ಆ ಸುಕುಮಾರಾಂಗಿಯಂ ಸುಗಂಧರಾಜಂಗೆ ಪಾಣಿಗ್ರಹಣವಗೈಸಿ, ಆವರೀರ್ವರೂ ಸುಖದಿಂದಿರುವದಂ ಯಾವಾಗ ನೋಡಿ ಸಂತೋಷ ಪಡುವೆನೆಂದು ಯೋಚನೆಯಂ ಮಾಡುತ್ತ, ಅಲ್ಲಿಂದ ಮುಂದೆ ತೆರಳಿ, ಶಾಕದ್ವೀ

ಪವಲ್ಲಿರುವ ಸಪ್ತಖಂಡಗಳಂ ಅರಸಿ ನೋಡುತ್ತ, ಆ ಸರಸಿಯಂ ಕಾಣದೆ ಬ್ಯಾಸರಗೊಂಡು ಬರುಬರುತ ದೂರದೋಳ್ ವಿಲಕ್ಷಣವಾದ ಒಂದು ಬೆಳಕಂ ಕಂಡು, ಇದೇನು ಅಚ್ಚರಿ ಎನುತ ಬಹು ವೇಗದಿಂ ಬಂದರೂ ಅರ್ಧರಾತ್ರಿಯ ಸಮಯವಾಗುತ್ತಿರಲೂ, ಆ ಯಕ್ಷನು ಚಿತ್ರವತೀ ಎಂಬ ನಗರಿಯಂ ಕುರಿತು ಬಂದು ನೋಡುತ್ತಿರಲೂ, ಅಲ್ಲಿ ಎಲ್ಲೆಲ್ಲಿ ಯೂ ಸೂರ್ಯೋದಯವಾದಂತೆ ಬೆಳಕು ತುಂಬಿರುವದಂ ಕಂಡು, ಅಲ್ಲಲ್ಲಿ ಅರಸುತ ವಿಚಿತ್ರವಾದ ಪರಿಮಳದೊಡಗೂಡಿ ಸಂಚರಿಸುತ ಮಂದ ಮಾರುತನು ಆಕಾಶವನ್ನೆಲ್ಲ ಪರಿಮಳ ಭರಿತವಾಗಿ ಮಾಡುತಲಿರುವದಂ ತಿಳಿದು, ಇದೇನೋ? ಆಶ್ಚರ್ಯವಾದ ವಸ್ತುವಿರುವದಾಗಿ ತೋರುತಲಿಧೆ ಎಂದು ಸಮ್ಮಾನಮಾಡದೆ ಎಮ್ಬ ಬಂದು ಪಾರಿಜಾತವೃಕ್ಷವಿರುವ ಉಪವನ ವಂ ಪ್ರೊಕ್ಕು, ಅಲ್ಲಿ ಮೆಲ್ಲಮೆಲ್ಲನೆ ಸಂಚರಿಸುತ, ಆ ಪಾರಿಜಾತ ವೃಕ್ಷದ ಮನೋಹರವಾದ ಪರಿಮಳದಿಂ ಚಿರದು ಬೀಸುವ ಘಾಳಿಯಂ ಮೈಸೋಂಕಲು, ಅದೇನೋ? ಒಂದು ಪರಿಯಾಗಿ ಪೇಳುವದಕ್ಕೆ ಅಶಕ್ಯವಾದ ಆನಂದಮುಂಟಾಗಿ ಹಾಯಿಗೊಂಡು, ಸ್ವರ್ಗ ಮೊದಲಾದ ಲೋಕಂಗಳಲ್ಲಿ ಅನವರತ ವಾಸಮಂ ಮಾಡುವ ದಿಕ್ಪಾಲಕರು ಮೊದಲಾದ ದೇವತೆಗಳಿಗೂ ದುರ್ಲಭವಾದ ಈ ಪರಿಯಾದ ಸುಖವು ದೊರಕುವದಿಲ್ಲವೆಂದು ಸಂತೋಷ ಪಡುತ್ತ, ಈ ಪಾರಿಜಾತ ವೃಕ್ಷದ ಮಣಿಮಯವಾದ ಜಗತಿಯಲ್ಲಿ ಕುಳಿತು, ತನ್ನ ಪುಣ್ಯಗಳಿಗೆ ಎಣೆಯಂ ಕಾಣೆನೆಂದು ಇದು ಪಾರಿಜಾತ ತರುವೇ ಸರಿ ಎನುತ ನಿಶ್ಚಯವಾಗಿ ತಿಳಿದು, ಈ ಪುರದಲ್ಲಿ ಯಾವನೋ? ಒಬ್ಬ ಜಯಿಸುವದಕ್ಕೆ ಅಶಕ್ಯನಾದ ರಾಕ್ಷಸನು ಇರುವದಾಗಿ ತೋರುತಲಿಧೆ, ಅಲ್ಲದಿರೆ ಈ ವೃಕ್ಷದ ಬದಿಯೋಳ್ ಅನೇಕ ದೇವಸದನಂಗಳು, ಲಕ್ಷಾಂತರ ಜನಂಗಳು, ಅನೇಕ ಸಾತ್ವಿಕ ಪ್ರಾಣಿಗಳು ಅನವರತ ವಾಸವಂ ಮಾಡುತ ಸುಖದಿಂದಿರುವದರಲ್ಲಿ ಸಂದೇಹವಿಲ್ಲ. ಈ ಪುರವು ಯಾರಿಗೂ ಪ್ರವೇಶವಂ ಮಾಡುವದಕ್ಕೆ ಅನುಕೂಲವಿಲ್ಲದಂತೆ ಬಹು ಬಲವಂತನಾದ, ಪರಮದಾರುಣನಾದ ದಾನವನಿರುವದು ನಿಶ್ಚಯವೆಂದು ತಿಳಿದು, ಅಷ್ಟರೋಳ್ ನಾನು ರಾಯನ ಆಜ್ಞೆಯಾದಂತೆ ಮೊದಲು ಕುರಿತು ಬಂದ ಒಂದು ಕಾರ್ಯವು ಕೈಗೂಡಿದಂತೆ ಕಾಣುವದು.

ನಾನು ಬರುವ ಮಾರ್ಗದೊಳ್ ರಮ್ಯಕಪರ್ವತದ ಉಪರಿ ಭಾಗದಲ್ಲಿದ್ದ
ಕಾಂತಿಮತೀ ಪುರದಲ್ಲಿ ನಡೆದ ವೃತ್ತಾಂತವಂ ತಿಳಿದು, ಮಂದಾರಮಾಲಿ
ಯಂ ಹುಡುಕಿ ನೋಡುವೆನೆಂದು ಯೋಚಿಸಿ ಬಂದ ಕಾರ್ಯ ಮಾತ್ರ ಇ
ನ್ನೂ ಕೈಗೂಡಲಿಲ್ಲವೆಂದು ಯೋಚಿಸುತ್ತ, ಇಲ್ಲಿರುವ ರಾಕ್ಷಸನೆಂತಿರು
ವನೊ? ಇವನಿಗೆ ಎಷ್ಟು ಸಾಮರ್ಥ್ಯವಿರುವದೊ? ಇವನಿರುವ ಬಳಿಯ
ಲ್ಲಿ ಮತ್ತೋರ್ವರಂ ಕಾಣೆ, ಇವನ ಭಯದಿಂದಲೇ ಯಾರು ಬರಲಾರ
ರಂಬವಾಗಿ ತೋರುತಲಿದೆ, ಯಾಕೆಂದರೆ—ಮೂವತ್ತೆರಡು ಲಕ್ಷಯೋಜನ
ವಿಸ್ತೀರ್ಣವಾದ ಈ ಶಾಕದ್ವೀಪದ ಮಧ್ಯದಲ್ಲಿ ಸಕಲ ಲೋಕಾತಿಶಯ
ವಾದ ವಸ್ತುಗಳಂ, ಬೇಕು ಬೇಕಾದಂತೆ ಕೊಡುವ ಪಾರಿಜಾತ ವೃಕ್ಷ
ವಂ ನಿರ್ಭಯದಿಂದ ತನ್ನ ಕ್ರೀಡಾರ್ಥವಾದ ಉಪವನದಲ್ಲಿ ಒಬ್ಬನೇ
ಇಟ್ಟುಕೊಂಡಿದ್ದರೆ ಮಿಗಿಲಾದವರು ಸುಮ್ಮನೇ ಇರುವರೇ, ಅದರಿಂದ
ಇವನಿಗಿಂತಲೂ ಸಮರ್ಥನು ಈ ಭೂಮಂಡಲದಲ್ಲಿ ಇರುವನಾಗಿ ತೋ
ರುವದಿಲ್ಲ. ಚಿತ್ರವರ್ಮನ ಪುತ್ರಿಯಾದ ಮಂದಾರಮಾಲೆಯಂ ಈ
ದುರಾತ್ಮನೇ ಅಪಹರಿಸಿರುವನಾಗಿಯು ಕಾಣುತಲಿದೆ ಎಂದು ಯೋಚಿಸು
ತಲಿರುವ ಸಮಯದಲ್ಲಿ ಸೂರ್ಯನು ಉದಯಪರ್ವತಾರೋಹಣವಗೈ
ಯ್ಯುತ್ತಿರಲೂ, ಯಕ್ಷನು ಸುಮ್ಮನೆ ಮೈಮರೆಸಿರಬಾರದೆಂದು ಅಲ್ಲಿಂ
ದ ತೆರಳಿ, ಪರಮ ಸೂಕ್ಷ್ಮವಾದ ಪರರಿಗೆ ಅಗೋಚರವಾದ ರೂಪವಂ
ಧರಿಸಿ, ಆ ಪುರದಲ್ಲಿರುವ ಅತಿ ರಹಸ್ಯವಾದ ಸ್ಥಳಂಗಳಂ ಹುಡುಕಿ
ನೋಡಿ, ಒಂದೆಡೆಯೊಳುಂ ಮಂದಾರಮಾಲೆಯಂ ಕಾಣದೆ ಬರುವಷ್ಟ
ರೊಳ್ ಒಂದು ಮಂದಿರದಲ್ಲಿ ಅತಿ ದೀನವಾದ ಧ್ವನಿಯಂ ಕೇಳಿ, ಆ ಮಂ
ದಿರವಂ ಪೊಕ್ಕು ನೋಡಲು, ಅಲ್ಲಿ ನಾಗಪಾಶದಿಂ ಬಿಗಿದಿರುವ ಗಂಧರ್ವಾ
ಧಿಪತಿಯಾದ ಚಿತ್ರವರ್ಮನಂ ಕಂಡು, ಇವನಿಗೂ ಈ ಪಾಡಾಯಿತೆ? ಎಂದು
ಚಿಂತಿಸುತ ಪಾಶವಂ ಪರಿಹರಿಸುವೆನೆಂದು ಪ್ರಯತ್ನವಂ ಮಾಡಿ, ಕೈಲಾ
ಗದೆ ಸುಮ್ಮನೆ ಮಾನವನ್ನುಳುಹಿಕೊಂಡು ಹಿಂತಿರಿಗಿ ಪೋಗುವದು ನ
ಮ್ಮ ಕಾರ್ಯವಲ್ಲದೆ ಇಂಥಾ ಅಸಾಧ್ಯವಾದ ಕಾರ್ಯಂಗಳಲ್ಲಿ ಪ್ರವರ್ತಿಸು
ವದು ನಮಗೆ ಯೋಗ್ಯವಲ್ಲವೆಂದು ನಮ್ಮ ರಾಜೇಂದ್ರನೆ ಸ್ವಲ್ಪ ದಿನದಲ್ಲಿ
ಇಲ್ಲಿಗೆ ಬಂದು ಇವನ ಸೆರೆಯಂ ಬಿಡಿಸಿ, ಈ ರಾಕ್ಷಸನಿಗೆ ಶಿಕ್ಷೆಯುಗೈದು

ಮಂದಾರವಮಾಲೆಯಂ ಅರಸಿ ಕರತಂದು ಕೈಪಿಡಿದು ಈ ಪಾರಿಜಾತ ತರುವಂ ಕೊಂಡು ಹಿಂತಿರಿಗಿ ತೆರಳುವೆನೆಂದು ನಿಶ್ಚೈಸಿ, ಅಲ್ಲಿಂದ ಹೊರ ಟು ಬರುತ ಪುರವನ್ನೆಲ್ಲ ಒಂದು ಭಾರಿ ಸಂಚರಿಸಿ, ಅಲ್ಲಲ್ಲಿರುವ ವಿಚಿತ್ರಗ ಳನ್ನೆಲ್ಲ ಕಾಣುತ ವಿಸ್ಮಿತನಾಗಿ, ಆ ಪುರ ಮಧ್ಯದಲ್ಲಿರುವ ಮಣಿಮಯಮಾ ದ ಭೂಮಿ ದೇವಿಯು ಕಿರೀಟವ್ರೊ? ಎಂಬಂತೆ ಹೊಳೆಯುತಲಿರುವ ಸೌ ಧವನ್ನೈದಿ ನೋಡುತ್ತಿರಲು; ಅಲ್ಲಿ ಕತ್ತಲೆಗಳೆಲ್ಲಾ ಕೂಡಿ ಸೂರ್ಯನ ಭಯದಿಂದ ಒಂದೆಡೆಯಲ್ಲಿ ಅಡಗಿಕೊಂಡು ನಿಂತಿರುವದೊ? ಎಂಬಂತೆ ಯೂ, ಅಂಜನಪರ್ವತವೇ ಬಂದು ಈ ಆಕಾರದಿಂದಿರುವದೊ? ಎಂಬಂತೆ ಯೂ, ಪೂರ್ವದೋಳ್ ಮೃತರಾದ ದಾನವರ ಸಮುದಾಯದ ಮೈ ಬಣ್ಣವೆಲ್ಲವೂ ರೂಪುಗೊಂಡಂತೆಯೂ, ದಾನವರಿಂದ ಬಾಧೆ ಪಡುತಲಿ ರುವ ದೇವತಾ ಸ್ತ್ರೀಯರುಗಳ ಹೃದಯದೋಳ್ ಪುಟ್ಟಿದ ಶೋಕಾಗ್ನಿ ಯಿಂದುಂಟಾದ ಧೂಮವೇ ಆಕಾರವಗೊಂಡು ಇರುವದೊ? ಎಂಬಂತೆ ಯೂ, ಮತ್ತಂ ಈ ಶಾಕದ್ವೀಪದ ತಮೋ ಗುಣವೆಲ್ಲವೂ ಈ ಕಲ್ಪವೃ ಕ್ಷದ ಕಾಂತಿ ಎಂಬ ಸೂರ್ಯನಿಗೆ ಭಯಗೊಂಡು ಎಲ್ಲಿಗೂ ಪೋಗುವ ದಕ್ಕೆ ಮಾರ್ಗವಿಲ್ಲದೇ ಈ ಮಂದಿರವಂ ಪೊಕ್ಕು ಇರುವದೊ? ಎಂಬಂ ತೆಯೂ, ಇಂತುಮಲ್ಲದೆ ಭೂಮಂಡಲದ ಪಾಪವೆಲ್ಲ ರೂಪುಗೊಂಡು ಇರುವದೊ? ಎಂಬಂತೆಯೂ, ಅಂಜನ ಪರ್ವತದಲ್ಲಿ ಹತ್ತಿರುವ ಕಾಡು ಕಿಚ್ಚಿನಂತೆ ತೋರುವ ಕಣ್ಣುಗಳಿಂದ ನೋಡುವರನಾಕ್ಷಣದಲ್ಲಿಯೇ ಸುಡುವ ಲೋಹಿತಾಕ್ಷನೆಂಬ ರಾಕ್ಷಸನಂ ಕಂಡು, ಈ ದುರಾತ್ಮನು ಈ ಸುಕುಮಾರಾಂಗನಾದ ನಮ್ಮ ರಾಜೇಂದ್ರನಿಂದ ಸಂಹೃತನಾಗುವನಾಗಿ ತೋರುವದಿಲ್ಲ. ಬಹು ಬಲಶಾಲಿಯಾಗಿರುವನು, ಇವನಂ ಜೈಸುವ ಪರಿ ಎಂತೋ ತಿಳಿಯಲಿಲ್ಲ. ಆದರಾಗಲೀ ಮುಂದೆ ನೋಡಿಕೊಳ್ಳುವಾ, ಎಂತಾದರೂ ನಮ್ಮ ರಾಜಕುಮಾರನು ಇಂತು ದುಷ್ಟರಾದ ದಾನವರಂ ದಂಡಿಸುವ ಪರಿಯಂ ಚೆನ್ನಾಗಿ ತಿಳಿದಿರುವನು. ಇಲ್ಲದಿರೆ ಮುಂದಾದ ರೂ ಉಪಾಯಂಗಳಂ ನೂತನವಾಗಿ ಸಾಧನಂಗಳನ್ನಾದರೂ ಸಂಪಾದ ನೆಯುಗೈದು ಸಂಹರಿಸುವನಲ್ಲದೇ ಸುಮ್ಮನೆ ಬಿಡುವನಲ್ಲವೆಂದು ನಿಶ್ಚೈಸಿ, ಮಂದಾರವಮಾಲೆ ಇರುವ ಬಳಿಯು ತಿಳಿಯಲಿಲ್ಲ. ಯಾವ ನೆಲಮಾಳಿಗೆ

ಗಳಲ್ಲಿ ಬಚ್ಚಿಟ್ಟಿರುವನೋ? ನಮ್ಮ ರಾಜೇಂದ್ರನು ಬಂದಲ್ಲದೆ ಇವರ ವೃತ್ತಾಂತವು ವಿವರವಾಗಿ ತಿಳಿಯಲಾರದೆಂದು ನಿಶ್ಚೈಸಿ, ಅಲ್ಲಿಂದ ಹೊರಟು ಹಿಂತಿರಿಗಿ ಬರುತ ಎಲ್ಲೆಲ್ಲಿ ಏನೇನಾಶ್ಚರ್ಯವಿರುವದೊ? ಅದನೆಲ್ಲವಂ ಬರುವ ಮಾರ್ಗದಲ್ಲಿ ನೋಡುತ, ವೇಗದಿಂ ಸುಗಂಧರಾಜೇಂದ್ರನ ಸಮೀಪವನೈದಿ, ತಾನು ತಿಳಿದು ಬಂದಿರುವ ವೃತ್ತಾಂತವೆಲ್ಲವಂ ಸವಿಸ್ತರವಾಗಿ ತಿಳುಹಿ, ಆ ಲೋಹಿತಾಕ್ಷನೆಂಬ ರಾಕ್ಷಸನು ಸಾಮಾನ್ಯನಾಗಿ ತೋರುವದಿಲ್ಲ. ಅಧಿಕವಾದ ಸಾಧನಂಗಳಿಂದ ಸನ್ನದ್ಧರಾಗಿ ತೆರಳಬೇಕೆಂದು ವಿನಯದಿಂ ವಿಜ್ಞಾಪನೆಯಗೈಯಲು;

ಅನಂತರದಲ್ಲಿ ಸುಗಂಧರಾಜೇಂದ್ರನು ನಗುನಗುತ ಮಂದಾರಮಾಲೆಯಂ ಮನದೊಳ್ನೆನೆಯುತ, ಕಲ್ಪವೃಕ್ಷವು ಕೈ ಸೇರಿದಂತೆ ತಿಳಿಯುತ, ಸಂತೋಷಗೊಂಡು ಸುಮತಿಯೊಡನೆ ಛಾಯಾಗುಪ್ತವೆಂಬ ತೇಜಿಯನ್ನೇರಿ ಜಂಬೂದ್ವೀಪ ಮೊದಲಾದ ಸಪ್ತದ್ವೀಪ ಸಮುದ್ರಗಳಂ ಮೊದಲಿನಂತೆ ದಾಂಟಿ ಬರುತ, ಶಾಕದ್ವೀಪದ ಸಮೀಪದೊಳ್ ನಿಂತು ಯಕ್ಷನಂ ಕುರಿತು ಎಲೈ ಯಕ್ಷಾಧಿಪನೆ! ನೀನು ಮೊದಲು ಹೇಳಿದ ರಮ್ಯಕ ಪರ್ವತವು ಎಲ್ಲಿರುವದೊ? ಅಲ್ಲಿಗೆ ತೆರಳೆಂದು ನುಡಿಯಲಾ ಯಕ್ಷನು ರಾಜೇಂದ್ರನ ಅಪ್ಪಣೆಯಾದಂತೆ ಬರಬರುತ ಸ್ವಲ್ಪ ದೂರದೊಳ್ ಕಾಣುವ ರಮ್ಯಕ ಪರ್ವತವಂ ರಾಜೇಂದ್ರಂಗೆ ತೋರುತ್ತ ವೇಗದಿಂ ಕಾಂತಿಮತೀ ಎಂಬ ನಗರವನೈದಿ, ಅಲ್ಲಿ ಮಂದಾರಮಾಲೆಯು ಉಪವನದಲ್ಲಿರುವ ಶೃಂಗಾರ ಮಂಟಪದ ಮಧ್ಯದೊಳ್ ಸುಗಂಧರಾಜ ಸುಮತಿಗಳೀರ್ವರಂ ಇಳಿಯಿಸಿ ನಿಲ್ಲಲು, ರಾಜಕುಮಾರನು ಸುಮತಿಯು ಹಸ್ತಲಾಗವಿಂದ ಮೆಲ್ಲಮೆಲ್ಲನೆ ಅಲ್ಲಲ್ಲಿ ಸಂಚರಿಸುತ, ಮುಂದಿರುವ ಮಧ್ಯದಲ್ಲಿ ಕಟ್ಟಿರುವ ಮಾಣಿಮಯವಾದ ತೂಗುಮಂಚವಂ ಕಂಡು ಪಚ್ಚೆ ಕರ್ಪೂರದ ರಾಶಿಯಂತೆ ಪರಿಮಳವಾಗಿ ಶುಭ್ರವಾದ ಹಾಲ್ನೊರೆಯಂತೆ ಮೃದುವಾದ ಹಂಸತೂಲಿಕಾ ತಲ್ಪವಂ ನೋಡಿ ಮಂದಾರಮಾಲೆಯು ಎಲ್ಲಿ ಮಾಯವಾಗಿರುವಳೊ? ಎಂದು ಚಿಂತಿಸುತ, ಇಲ್ಲಿದ್ದು ಇದನೆಲ್ಲವಂ ನೋಡಿ ಸಹಿಸಕೂಡದು, ಇಂತಿರುವಲ್ಲಿ ಮಂದಾರಮಾಲೆಯಂ ನೋಡಬೇಕೆಂಬ ಇಚ್ಛೆಯಿಂದಲೋ? ಎಂಬಂತೆ ಅಲ್ಲಿಂದ ಹಿಂತಿರಿಗಿ, ಆ ಉಪವನವಂ ಬಿಟ್ಟು

ಬರುವದಕ್ಕೆ ಮುನ್ನಮಾದದೆ ಮುಂದೇನು ತೋರದೆ ಸುಮತಿಯು ಕರವಂ ಪಿಡಿದು ನಡೆಯುತ್ತ, ಯಕ್ಷನಂ ಕರೆದು ಚಿತ್ರಪತ್ರೀ ಎಂಬ ನಗರವಂ ಈಗಲೇ ಸೇರಬೇಕೆಂದು ನುಡಿದು, ಬಳಿಕ ಸುಮತಿಯೊಡಗೂಡಿ ಯಕ್ಷನನ್ನೇರಿ ಬಹುವೇಗದಿಂ ಬರುತ ದೂರದೊಳ್ ಪಾರಿಜಾತ ತರುವಿನ ಅಲೋಕಾತಿಶಯವಾದ ಸುವಾಸನೆಯಿಂದ ಪ್ರೇರಿತನಾದ ಮಂದಮಾರುತನೆಂಬ ಮದ್ದಾನೆಯು ಪಾರಿಜಾತಪುಷ್ಪದ ವಾಸನೆ ಎಂಬ ಮದವನೇರಿ ನ್ನು ಪುರದ ಹಾದಿಯೊಳ್ ಬರುವವರಂ ಕಾಣದೆ ಮುನ್ನ ಬಂದಂತೆ ಓಲ್ಯಾಡಿ ಬರುತ, ಸುಗಂಧರಾಜೇಂದ್ರನ ಬದಿಯನ್ನೈದಿ ಈ ಮಹೀಪಾಲಕನ ಶರೀರ ಸುಗಂಧದಿಂದ ಪಾರಿಜಾತಪುಷ್ಪದ ವಾಸನೆಯಿಂದುಂಟಾದ ಮದವಿಳಿದು ಬುದ್ಧಿ ತೋರಿ, ಈ ರಾಜೇಂದ್ರಂಗೆ ದುಷ್ಟನಾದ ಈ ದಾನವನ ಸಮಾಚಾರವಂ, ಅಲ್ಲಿಯೇ ಪಾರಿಜಾತ ತರುವಿರುವದಂ ಪೇಳಲೋಸುಗ ಬರುವನೋ? ಎಂಬಂತೆ ಮೆಲ್ಲ ಮೆಲ್ಲನೆ ತಂಪಾಗಿ ಸೊಂಪು ವಿಹಾರಿ ಭಯ ಭಕ್ತಿಯಿಂ ಕೂಡಿ ಭಾರಿಭಾರಿಗೂ ಶೀತೋಪಚಾರವಗೈವ ಚಾರನಂತೆ ಡಣ್ಣನೆ ಬೀಸುತ ರಾಜೇಂದ್ರನ ಶರೀರದ ಗಂಧವಂ ಅಪಹರಿಸಿ ಅಲ್ಲಿಂದ ಮುಂದೆ ತೆರಳಿ ಸಂಚರಿಸುತ ವಿರಹಿ ಜನಂಗಳೆಂಬ ಬಾಳೆಯ ಮರಂಗಳಂ ತಲೆಮಾಗಿಸಿ ಕಳವಳಗೊಳ್ಳುವಂತೆ ಮಾಡುತ ಸಂಚರಿಸುತ್ತಿಲಿರಲು; ಆ ವಾಸನೆಯಿಂದ ಆ ಮಹಾರಾಜನು ಆ ಮಂದಾರಮಾಲೆಯಂ ಮನದೊಳ್ನೆನೆನೆದು ಅವಳಂ ಎಂದಿಗೆ ಕಾಣುವೆನೋ? ಅವಳೊಡನೆ ಮಾತನಾಡುವ ಸುಕೃತವಂ ಎಂದಿಗೆ ಪಡೆಯುವೆನೋ? ಎಂದು ಯೋಚಿಸಿ ಮುಂದೆ ತೆರಳಿ ಬರುತ ಚಿತ್ರಪತ್ರೀ ನಗರದ ಪುರೋ ಭಾಗದಲ್ಲಿರುವ ವಿಹಾರವನವಂ ಪೊಕ್ಕು ಅಲ್ಲಿ ರಹಸ್ಯವಾದ ಒಂದು ಲತಾಗೃಹವಂ ನೋಡಿ ಅಲ್ಲಿ ಇಳಿದು ಯೋಚನೆಯಂ ಮಾಡಿ ಹಿಂದೆ ಸಂಹಾರವಂ ಮಾಡಿದ ದುರ್ಧರ್ಷ ಮೊದಲಾದ ದಾನವರಂತೆ ಈ ದಾನವನು ಸುಲಭದಿಂ ಸಂಹಾರವಂ ಮಾಡುವದಕ್ಕೆ ಯೋಗ್ಯನಾಗಿ ತೋರುವದಿಲ್ಲ, ಆದ್ದರಿಂ ಇವನ ಸಾಮರ್ಥ್ಯವೆಂತಿರುವದೋ? ಇವನು ವರವಂ ಎಂತು ಪಡೆದಿರುವನೋ? ಅದೆಲ್ಲವಂ ವಿವರವಾಗಿ ತಿಳಿಯುವ ಪರಿಯು ಕಾಣುವದಿಲ್ಲವಾದ್ದರಿಂ ಸ್ವಬಲ ಪರಬಲವಂ ತಿಳಿದು ಮುಂದಣ ಕಾರ್ಯದಲ್ಲಿ ಪ್ರವರ್ತಿಸಬೇಕೇ ಹೊರ್ತು

ಒಂದೂ ತಿಳಿಯದೆ ಮೂಢನಂತೆ ಕಾರ್ಯವಂ ಕೈಕೊಳ್ಳುವೆನೆಂದು ಅಹಂಕಾರದಿಂ ಪ್ರವರ್ತಿಸಿದರೆ ಫಲಬುದ್ಧಿಯಿಂದ ದೀಪವೋಳ್ ಬೀಳುವ ಪತಂಗವಂತಾಗುವವಲ್ಲದೇ ಕಾರ್ಯವು ಕೈ ಕೂಡಲಾರದು ಆದರಿಂ ಈ ಲೋಹಿತಾಕ್ಷನೆಂಬ ರಾಕ್ಷಸನ ಯೋಗಕ್ಷೇಮವೆಲ್ಲವಂ ಸೂಕ್ಷ್ಮನ ಮುಖದಿಂದ ತಿಳಿದಲ್ಲದೆ ಉಪೇಕ್ಷೆಯಿಂದ ಇವನ ಶಿಕ್ಷೆಯಾಗಲಾರದೆಂದು ನಿಶ್ಚೈಸಿ, ಛಾಯಾಗುಪ್ತನಂ ಕರೆದು ನೀನು ಆಯಾಸ ಪಟ್ಟಲ್ಲದೆ ಈ ಕಾರ್ಯಕ್ಕೆ ಉಪಾಯಾಂತರವಿಲ್ಲವಾದ್ದರಿಂ ನೀನು ಮಾಯೆಯಿಂ ರಾಕ್ಷಸರೂಪವಂ ತಾಳಿ ಲೋಹಿತಾಕ್ಷನ ಸಮೀಪವನೈದಿ ಅವನ ವೃತ್ತಾಂತವೆಲ್ಲವಂ ತಿಳಿದು ಬಾರೆಂದು ನಿರೂಪಿಸಿ ಕಳುಹಲು, ಬಳಿಕ ಛಾಯಾಗುಪ್ತನು ರಾಜೇಂದ್ರನ ಅಪ್ಪಣೆ ಯಾದಂತೆ ಮಾಯೆಯಿಂ ರಾಕ್ಷಸರೂಪವಂ ತಾಳಿ ಲೋಹಿತಾಕ್ಷನ ಸಮೀಪವನೈದುವೆನೆಂದು ಬರುತ್ತಿರಲು, ಬಳಿಕ ಲೋಹಿತಾಕ್ಷನು ದೂರದೋಳ್ ವೇಗದಿಂ ಬರುವ ರಾಕ್ಷಸನಂ ಕಂಡು ಭಯವಿಲ್ಲದೆ ನನ್ನ ಎದುರಾಗಿ ಶೂರನಂತೆ ಬರುವನಿವನ್ಯಾರು? ಇವನ ಸಾಹಸವಂ ನೋಡುವಾ ಎಂದು ಸಮೀಪದಲ್ಲಿರುವ ಮಹಾಗದಾಯುಧವಂ ಕರದೋಳ್ ಪಿಡಿದು ಕೆಂಡಗಳಂತಿರುವ ಕಣ್ಣುಗಳಂ ತಿರಿಗಿಸುತ, ಕೋಪಗೊಂಡು ಅಲ್ಲಿಯೇ ನಿಲ್ಲು ನಿಲ್ಲೆಂದು ನುಡಿಯುತ, ವಿಸಾರಿ ಬರುವ ಈ ದುರಾತ್ಮನಾದ ದಾನವನಂ ನೋಡಿ ಛಾಯಾಗುಪ್ತನು ಗಡಗಡನೆ ನಡುಗುತ ಭಯಗೊಂಡು ಏನು ಮಾಡುವನೋ? ಎಂದು ಸಂದೇಹಪಡುತ್ತ ಏನಾದರಾಗಲಿ ನುಡಿದು ನೋಡುವೆನೆಂದು ಧೈರ್ಯದಿಂ ಮುಂದೆ ಬಂದು ನಿಂದು ಎಲೈ ದಾನವೇಂದ್ರನೆ! ನಿನ್ನೊಡನೆ ಕದನವಂ ಮಾಡಲೋಸುಗ ಬಂದವನಲ್ಲ, ನಿನಗೆ ಹಿತವಾದ ಮಾತುಗಳಂ ಪೇಳಲೋಸುಗ ಬಂದಿರುವೆನಲ್ಲದೆ ಅಪಕಾರವಂ ಎಣಿಸುವದಕ್ಕೆ ಬಂದವನಲ್ಲವೆಂದು ನುಡಿಯಲದಂ ಕೇಳಿ ಲೋಹಿತಾಕ್ಷನು ಈಗ ನನಗೆ ಅಸಾಧ್ಯವಾಗಿರುವದೇನು? ನಿನ್ನ ಹಿತೋಪದೇಶದಿಂದಾಗತಕ್ಕ ಫಲವೇನೆನಲು, ಅದಂ ಕೇಳಿ ಛಾಯಾಗುಪ್ತನು ಎಲೈ ದಾನವೇಂದ್ರನೆ! ನನ್ನ ಮಾತುಗಳಿಂದ ನಿನಗೆ ಇದಕ್ಕಿಂತಲೂ ಅಧಿಕವಾದ ಐಶ್ವರ್ಯ ಉಂಟಾಗುವದರಲ್ಲಿ ಸಂದೇಹವಿಲ್ಲ. ಅದೆಂತೆನೆ — ದೈತ್ಯ, ದನುಜ, ದಾನವ, ರಾಕ್ಷಸರೆಂಬ ಈ ನಾಲ್ಕು ಕುಲಂಗಳಲ್ಲಿಯೂ

ಈಗ ಸರ್ವೋತ್ಕೃಷ್ಟರಾದ ಬಲಿ ಬಾಣ ಮೊದಲಾದ ದೈತ್ಯಾಧಿಪರೆಲ್ಲರೂ ನೀನು ಈ ಭೂಮಿಯೊಳ್ ಸರ್ವೋತ್ಕೃಷ್ಟನಾಗಿ ಇರುವದಂ ತಿಳಿದು ಸಂತೋಷವಗೊಂಡು ಸ್ವರ್ಗಾಧಿಪತ್ಯವಂ ತಾವು ಮಾಡುವೆವು, ಭೂಮಂಡಲಾಧಿಪತ್ಯವಂ ನೀನು ಮಾಡುವೆ, ಎಂದು ತಿಳಿದು ನಿನ್ನಲ್ಲಿ ಪರಮ ಕರುಣೆ ಉಂಟಾಗಿ, ಕೆಲವು ರಹಸ್ಯಂಗಳಂ ಹೇಳಿ ತಿಳುಹಿ ಬರುವದೆಂದು ನನ್ನಂ ನಿನ್ನ ಬಳಿಗೆ ಕಳುಹಿಸಿರುವರು ಎಂದು ಹೇಳಲಾ ಲೋಹಿತಾಕ್ಷನು ಇವನೆಲ್ಲವಂ ಕೇಳಿ ರಾಕ್ಷಸರೂಪನಾದ ಯಕ್ಷನಲ್ಲಿ ಸ್ವಪಕ್ಷನೆಂಬ ವಿಶ್ವಾಸ ಉಂಟಾಗಿ ಕೈಪಿಡಿದು ಕರತಂದು ತನ್ನ ಮಂದಿರದಲ್ಲಿ ಒಂದು ರಹಸ್ಯ ಸ್ಥಳದಲ್ಲಿ ಕುಳಿತು ಎಲೈ ದಾನವೇಂದ್ರ ದೂತನೆ! ನಾನು ಮೊದಲು ನಿಷ್ಠುರೋಕ್ತಿಗಳಂ ಹೇಳಿದೆನೆಂದು ಕೋಪಗೊಳಬೇಡ, ನನ್ನಲ್ಲಿ ದಯದಿಂದ ದಾನವಶ್ರೇಷ್ಠರಾದ ಬಲಿ ಬಾಣ ಮೊದಲಾದವರು ಅನುಗ್ರಹಿಸಿರುವ ಮಹಾಮಂತ್ರಸಮಾನವಾದ ಮಾತುಗಳಂ ಉಪದೇಶವಂ ಮಾಡಿದಂತೆ ಹೇಳಬೇಕೆಂದು, ಪರಿಪರಿಯಾಗಿ ಉಪಚಾರೋಕ್ತಿಗಳಿಂದ ಭಾರಿ ಭಾರಿಗೂ ಮನ್ನಿಸುತ್ತಿರಲು; ಆಗ ಈ ಕಪಟದೂತನಾದ ಯಕ್ಷನು ಆ ದಾನವನಂ ಕುರಿತು ಎಲೈ ಶೂರಾಗ್ರೇಸರನೆ! ಕೇಳು ನಮ್ಮ ಬಲಿ ಬಾಣ ಮೊದಲಾದ ದಾನವರು ಅಮರಾವತಿಯಂ ಆಕ್ರಮಿಸಿದ ಕಾಲದೊಳ್ ಇಂದ್ರನು ಎಲ್ಲಿಯೋ ಅಡಗಿ ಹೋದುದರಿಂದ ಅವನ ವಸ್ತುಗಳೆಲ್ಲವೂ ಕಂಡ ಎಲ್ಲೆಲ್ಲಿಯೋ ಸೇರಿ ಹೋದವು. ಅದರೊಳ್ ಕಲ್ಪವೃಕ್ಷ ಮಾತ್ರ ನಮ್ಮ ಕುಲಶಿಖಾಮಣಿಯಾದ ನಿನಗೆ ಸೇರಿರುವದಂ ತಿಳಿದು ಪರಮ ಸಂತೋಷಭರಿತರಾಗಿರುತ್ತಿದ್ದರು. ಅಷ್ಟರಲ್ಲಿಯೇ ದಾನವ ಸಮೂಹಕ್ಕೆ ಬಹು ಭಯಂಕರವಾದ ಒಂದು ಅಪೂರ್ವವಾದ ಸಮಾಚಾರವಂ ಕೇಳಿ ಕಳವಳಗೊಂಡು ನಿನ್ನ ಸಮೀಪವಂ ಕುರಿತು ನನ್ನಂ ಕಳುಹಿಸಿದರು. ಅಂತಿರ್ಪ ಸಮಾಚಾರವೇನೆಂದರೆ—ಜಂಬೂದ್ವೀಪದೊಳ್ ಯಾವನೋ ಒಬ್ಬ ರಾಜಕುಮಾರನು ದಾನವ ಕುಲಕ್ಕೆ ದಾವಾನಲನಂತೆ ಹುಟ್ಟಿರುವನಂತೆ, ಅವನ ಶೌರ್ಯವಂ ಅಷ್ಟಿಷ್ಟೆಂದು ಹೇಳುವದಕ್ಕೆ ಸಹಸ್ರ ಫಣಾಮಂಡಲ ಮಂಡಿತನಾದ ಮಹಾಶೇಷನಿಂದಲೂ ಕೂಡ ಶಕ್ಯವಲ್ಲವಂತೆ, ಇಂತಲ್ಲದೆ ಉಗ್ರಬಾಹು, ದುರ್ಧರ್ಷ ಮೊದಲಾದ ಮಹಾ ಶೂ

ರರಾದ ದೈತ್ಯಾಧಿಪತಿಗಳಂ ಅವರುಗಳ ಸೈನ್ಯದೊಡನೆ ಸಂಹಾರವಗೈದು ಮತ್ತೂ ಅವರುಗಳು ಬಹು ಸಾಹಸದಿಂ ಸಂಪಾದಿಸಿರುವ ಅಪೂರ್ವವಾದ ವಸ್ತುಗಳನೆಲ್ಲವಂ ಅಪಹರಿಸಿಕೊಂಡು ಪೋಗಿರುವನಂತೆ, ಆದ್ದರಿಂ ರಹಸ್ಯವಾಗಿರುವ ವಸ್ತುಗಳೆಲ್ಲವು ದಾನವರ ಕೈ ತಪ್ಪಿ ಪೋಗಿ ಆ ನರಾಧಮನ ವಶವಾಗಬಹುದೆ? ಎಂದು ಚಿಂತಿಸುತ್ತಲಿರುವಷ್ಟರೋಳ್ ಈ ಕಲ್ಪವೃಕ್ಷವೂ ಕೂಡ ದುರಾತ್ಮನಾದ ಆ ನರಾಧಮನ ಸ್ವಾಧೀನವೆಲ್ಲಾಗುವದೊ? ಎಂದು ಸಂದೇಹಗೊಂಡು ಅವನಂ ಜೈಸುವದು ನಿನ್ನಿಂದ ಸಾಧ್ಯವಾಗುವದೊ? ಆಗಲಾರದೊ? ಅದಂ ತಿಳಿದು ಬಂದಲ್ಲಿ ಅದಕ್ಕೆ ಸಹಾಯವೆಂತಾಗಬೇಕಾದರೂ ಮಾಡುವದಕ್ಕೆ ನಾವು ಸಿದ್ಧವಾಗಿರುವೆವೂ ಎಂದು ಪೇಳಿ ಇದನೆಲ್ಲವಂ ತಿಳಿದು ಬರುವದೆಂದು ನೆನ್ನಂ ಕಳುಹಿಸಿರುವರೆಂದು ನುಡಿಯಲಾಮಾತುಗಳೆಲ್ಲವಂ ಕೇಳಿ, ಲೋಹಿತಾಕ್ಷನು ಬಲಿ ಬಾಣ ಮೊದಲಾದವರಿಗೆ ಪ್ರಣಾಮವಗೈದು ಈ ಕಪಟರಾಕ್ಷಸನ ಮಾತಿನಲ್ಲಿ ಪರಮವಿಶ್ವಾಸದಿಂದ ಎಲೈ ದಾನವದೂತನೆ! ನಮ್ಮ ಕುಲ ಶಿಖಾಮಣಿಗಳಾದ ದೈತ್ಯೇಂದ್ರರು ಕ್ಷೇಮದಿಂದಿರುವರೆ? ಸ್ವರ್ಗಾಧಿಪತ್ಯವು ನಿರುಪಾಧಿಕವಾಗಿ ನಡೆಯುವದೆ? ಎಂದು ಅವರ ಯೋಗಕ್ಷೇಮಗಳಂ ವಿಸ್ತಾರವಾಗಿ ಕೇಳಿ ಭೂಲೋಕದೊಳೆಲ್ಲಿಯೋ ಒಂದು ಪ್ರದೇಶದಲ್ಲಿ ಯಾರೂ ಅರಿಯದಂತೆ ಓರ್ವನೇ ಕಾಲವಂ ಕಳೆಯುತಲಿರುವ ಬಾಲಕನಾದ ನನ್ನ ಮೇಲೆ ಇಷ್ಟುದಯೆಯು, ಆ ಮಹಾ ಸಾಮ್ರಾಜ್ಯಾನುಭವವಂ ಮಾಡುವ ಸಮಯದಲ್ಲಿಯೂ ಕೂಡ ನನ್ನ ಮೇಲೆ ಉಂಟಾದುದು ನನ್ನ ಪೂರ್ವ ಸುಕೃತವೇ ಸರಿ, ಇದು ಪರಮಾಶ್ಚರ್ಯವು, ಇನ್ನು ಮೇಲೆಮೊದಲು ನೀನು ಪೇಳಿದಂತೆ ನನಗೆ ಶ್ರೇಯಸ್ಸು ಬಿಚ್ಚುವದರಲ್ಲಿ ಸಂದೇಹವಿಲ್ಲವೆಂದು ನುಡಿದು, ಮತ್ತೂ ಹಿರಿಯರಾದವರು ಬಾಲಕರಿಗೆ ಬುದ್ಧಿಯಂ ಪೇಳುವದು ಯುಕ್ತವೇ ಸರಿ ಎಂದು ಬಹಳವಾಗಿ ಸಂತೋಷಗೊಂಡು, ನನ್ನ ಸಾಹಸವಂ ಕೇಳೆಂದು ನುಡಿದು,ಎಲೈ ದಾನವದೂತನೆ! ಪೂರ್ವದಲ್ಲಿ ನಾನು ಇಂದ್ರ ಮೊದಲಾದ ದೇವತೆಗಳಿಂದ ಪರಾಜಯವಂ ಪೊಂದಿ,ಅಲ್ಲಿಂದ ಬಂದು ಮಂದರಪರ್ವತದಂತಿರುವ ಹೇಮಕೂಟಾಚಲದ ಗುಹಾಂತರವಂ ಪೊಕ್ಕು ಯಾರೂ ಕಾಣದಂತೆ ರಹಸ್ಯವಾಗಿ ಹತ್ತು ಸಾವಿರ ದಿವ್ಯವರ್ಷ ಪರ್ಯಂತವೂ

ಆಹಾರವಂ ಬಿಟ್ಟು ಚತುರ್ಮುಖನಂ ಕುರಿತು ಉಗ್ರತಪವಂ ಮಾಡಿ ಸಂತೋಷಗೊಳಿಸಿ, ದೇವದಾನವ ಮಾನವರಿಂದ ಎಂದಿಗೂ ಪರಾಜಯ ವಾಗವಂತೆ ವರವಂ ಪಡೆದು, ಇಂದ್ರನಂ ಜೈಸಬೇಕೆಂಬ ಇಚ್ಛೆಯಿಂದ ಅಲ್ಲಿಂದ ತೆರಳಿ ಬರುತ ಮಾರ್ಗದೋಳ್ ನಮ್ಮ ಕುಲ ಶ್ರೇಷ್ಠರಾದ ಈ ಬಲಿ ಬಾಣ ಮೊದಲಾದವರು ಮೊದಲು ಸ್ವರ್ಗಾಧಿಪತ್ಯವಂ ಮಾಡುತ ಲಿರ್ದ ದೇವೇಂದ್ರನಂ ಪರಾಕ್ರಮದಿಂದ ಪರಾಜಯಗೊಳಿಸಿ, ಅಮರಾವತಿ ಯಂ ಆಕ್ರಮಿಸಿ, ತ್ರಿಲೋಕಾಧಿಪತ್ಯವಂ ಮಾಡುತ್ತಲಿರುವದಂ ತಿಳಿದು, ನಾನು ಮಾಡುವ ಕಾರ್ಯವನ್ನೇ ನನ್ನ ಕುಲಶ್ರೇಷ್ಠರಾದವರು ಮಾಡಿ ದರು. ಆದ್ದರಿಂ ನಾನು ಹಿಂತಿರಿಗಿ ಬರುತ ಹಾರಿಯೋಳ್ ದೂರದಲ್ಲಿ ಕಾಣುತ್ತಲಿರುವ ಪಾರಿಜಾತ ತರುವಂ ಕಂಡು, ಅದರ ಸಮೀಪವನೈದುವ ಕಾಲದೋಳ್ ಕೆಲರು ದಾನವದೂತರು ಬಂದು ನನ್ನ ಬಾಹು ಬಲವಂ ನೋಡಿ,ಈ ಪಾರಿಜಾತ ತರುವು ಸ್ವರ್ಗದಿಂದಿಳಿದು ಬರುತ ಬಹು ದಾನವ ಸಮೂಹವಂ ಸಂಹಾರವಂ ಮಾಡಿ ಕೆಳಕ್ಕೆ ಕೆಡಹಿ ಅವರ ಮೇಲೆ ನಿಂತಿ ರುವದೆಂದು ಪೇಳಿ ನನಗೆ ಪ್ರಣಾಮವಂ ಮಾಡಲಾಗ ನನಗೆ ಆಗ್ರಹ ಉಂಟಾಗಿ ವೇಗದಿಂ ಬಂದು ಈ ವೃಕ್ಷವಂ ಈಗಲೇ ಕಿತ್ತು ಬಿಸುಡುವೆ ನೆಂದು ನನ್ನ ಸಾಹಸವೆಲ್ಲವಂ ವೆಚ್ಚಗೊಳಿಸಿದರೂ ಈ ಮರವು ನೆಲವಂ ಕಟ್ಟಿ ಕಿತ್ತರೂಬಾರದೆ, ಸ್ವಲ್ಪವಾದರೂ ಚಲಿಸದೆ, ವಜ್ರಪರ್ವತದಂತೆ ಗಂ ಭೀರವಾಗಿ ನಿಂದಿರಲು, ಇದರಲ್ಲಿರುವ ಮಹಾ ಮಹಿಮೆಗಳೆಲ್ಲವಂ ನೋಡಿ ಈ ಪಾರಿಜಾತ ವೃಕ್ಷವಂ ಪಾತಾಳ ಲೋಕವಂ ಯ್ದೈದಿಸುವೆನೆಂದರೆ ಸಾಧ್ಯವಾಗುವಂತೆ ತೋರಲಿಲ್ಲ. ಬಿಟ್ಟು ಪೋಗುವೆನೆಂದರೆ ಮನ ಬಾರದೆ ಇದರ ಪರಿಮಳವೆಂಬ ಸಾಗರದೋಳ್ ಮುಳಿಗಿ ತೇಲ್ಯಾಡುತ, ಇಂಥಾ ಪಾರಿಜಾತ ವೃಕ್ಷವು ಸ್ವರ್ಗವಂ ಬಿಟ್ಟು ಎಂದಿಗೂ ಬರುವದಿಲ್ಲ, ಈಗ ಏನೋ ಒಂದು ಕಾರಣದಿಂದ ಭೂಮಿಯನೈದಿರುವದು, ಮತ್ತೂ ದೇವತೆ ಗಳಿಗೆ ವಶವಾದರೆ ಇದರಿಂದ ನಮ್ಮ ದಾನವ ಕುಲಕ್ಕೆ ಹಾನಿ ಬರುವದೆಂ ದು ತಿಳಿದು, ಈ ಪಾರಿಜಾತ ತರುವಂ ಉಪಾಯದಿಂದ ಸ್ವಾಧೀನವಂಮಾಡಿ ಕೊಂಡು, ಇದರಿಂದಲೇ ಬೇಕಾದ ವಸ್ತುಗಳಂ ಪಡೆಯುತ ಸುಖದಿಂದಿರ ಬೇಕಲ್ಲದೆ ಇದರೊಡನೆ ಕೆಣಿಸಿದರೆ ನಮಗೆ ಜಯ ಉಂಟಾಗಲಾರದೆಂದೆ

ಣಿಸಿ, ಆ ದಾನವರೆಲ್ಲರಂ ಬಂದಂತೆ ಹಿಂತಿರಿಗಿ ಓಡಿಸುತ ಇಲ್ಲಿಯೇ ನಿಂತು ಇರುತಲಿರ್ದು ಇದರ ಸಮೀಪದೋಳ್ ಮತ್ತೊರ್ವನು ಬಂದು ಸೇರದಂತೆ ಕಾದಿರುತ, ನಮ್ಮ ಮಾವನಾದ ಮಯಾಸುರನಂ ನೆನಮು, ಆ ಮಹಾಪುರುಷನಿಂದ ಈ ವಿಚಿತ್ರವಾದ ಪಟ್ಟಣವಂ ನಿರ್ಮಾಣವಗೈಸಿ, ಈ ಪಾರಿಜಾತ ವೃಕ್ಷವಿರುವ ವನವಂ ನನ್ನ ಉದ್ಯಾನವನವಂ ಮಾಡಿಕೊಂಡು, ಸುಖದಿಂದ ಇಲ್ಲಿಯೇ ಇರುತಲಿರುವಾಗ ಈ ಶಾಕದ್ವೀಪದೊಳಿರುವ ಕೆಲರು ಮಹಾ ಶೂರರಾದವರು ನನ್ನೊಡನೆ ಕೆಣಿಸಿ ಹೆಸರಿಲ್ಲದೆ ಪೋದರು. ಅನಂತರದಲ್ಲಿ ಈ ದ್ವೀಪವನೆಲ್ಲವಂ ಒಂದೇ ಸಂವತ್ಸರದೋಳ್ ಜೈಸಿ ಹಿಂತಿರಿಗಿ ಬಂದು ಇಲ್ಲಿಯೇ ಸುಖದಿಂದಿರುತ್ತಿರುವೆನು. ಅನಂತರ ಒಂದಾನೊಂದು ದಿನದೋಳ್ ದಿಕ್ಪಾಲಕರ ಕಡೆಯ ಒಬ್ಬ ಗೂಢಚಾರನು ಬಂದು ಇದನೆಲ್ಲವಂ ನೋಡುತ್ತಿರಲು, ಅವಂ ಕಂಡು ನಾನು ಅವನು ಹಿಂತಿರಿಗಿ ಪೋಗದಂತೆ ಪಿಡಿದು ನಾಗಪಾಶದಿಂ ಬಿಗಿದು ಸೆರೆಯ ಮನೆಯೊಳ್ ಇರಿಸಿ ಇರುವೆನು. ಇಂತಲ್ಲದೆ ಈ ದ್ವೀಪದೋಳ್ ನನ್ನ ಹೆಸರು ಹೇಳಿದರೆ ಘಾಳಿಯೂ ಕೂಡ ಸಂಚರಿಸಲರಿಯದು. ಮತ್ತು ಸೂರ್ಯ ಚಂದ್ರರು ಭಯದಿಂದ ನನಗೆ ಎಂತು ಸಂತೋಷವಾಗುವದೊ? ಆ ಪರಿಯಾಗಿ ತಮ್ಮ ಕಿರಣಂಗಳ ಪ್ರಚಾರವಂ ಮಾಡುವರು. ಇಂತಿರುವಲ್ಲಿ, ಮಿಕ್ಕಾದವರ ಪಾಡೇನು? ಆದ್ದರಿಂ ಜಂಬೂದ್ವೀಪದಲ್ಲಿರುವ ಓರ್ವ ನರಾಧಮನ ಭಯವು ನನಗೆ ಎಂತು ಉಂಟಾಗುವದು, ನೀನೇ ತಿಳಿದು ನೋಡು, ಮೊಲದಿಂದ ಮೃಗರಾಜನಾದ ಸಿಂಹನಿಗೆ ಎಂದಿನಾದರೂ ಪರಾಜಯ ಉಂಟೆ ಎಂದು ನುಡಿಯಲಾಗ ಕಪಟದಾನವನಾದ ಯಕ್ಷನು ಈ ಪರಿಯಾದ ಲೋಹಿತಾಕ್ಷನಮಾತುಗಳೆಲ್ಲವಂ ವಿಸ್ತಾರವಾಗಿ ಕೇಳಿ, ತನ್ನ ಮನದೋಳ್ ಸಾಕ್ಷಾತ್ಕಾಲಯಮನ ಸಮಾನನಾದ ಬಹು ಶೌರ್ಯಶಾಲಿಯಾದ ಈ ದಾನವಾಧಿಪನು, ಶಿರೀಷಕುಸುಮದಂತೆ ಸುಕುಮಾರಾಂಗನಾದ ನಮ್ಮ ರಾಜೇಂದ್ರನಿಂದ ಎಂತು ಸಂಹೃತನಾಗುವನೊ? ತಿಳಿಯಲಿಲ್ಲ. ಪರದೇವತಾನುಗ್ರಹದಿಂದ ಪರಾಜಿತನಾಗಬೇಕಾದ್ದಲ್ಲದೆ ಮತ್ತೊಂದು ಮಾರ್ಗಾಂತರವು ತೋರುವದಿಲ್ಲವೆಂದು ನಿಶ್ಚೈಸಿ, ಬಳಿಕ ಆ ಲೋಹಿತಾಕ್ಷನಂ ಕುರಿತು ಎಲೈ ರಾಕ್ಷಸರಾಯನೆ! ಸಕಲ ಶೂರಜನ ಸಮೂಹಂಗಳಿಂದ ನಿರಂತರದಲ್ಲಿ

ಯೂ ಶ್ಲಾಘ್ಯವಾದ ನಿನ್ನ ಸಾಹಸವಂ ಕೇಳಿದ ಮಾತ್ರದಿಂದಲೇ ನನಗೆ ಇಂತು ಸಂತೋಷವಾಗುವದು. ನಿನ್ನ ತಾಯಿ ತಂದೆಗಳು ಏನು ಸುಕೃತವಂ ಮಾಡಿರುವರೋ? ನಿನ್ನಂ ಜೈಸಲೋಸುಗ ಇಂದ್ರಾದಿ ಅಷ್ಟದಿಕ್ಪಾಲಕರು ಮೊದಲಾದ ಮುವ್ವತ್ತು ಮೂರು ಕೋಟಿ ದೇವತೆಗಳೊಡಗೂಡಿದ ಸಾಕ್ಷಾನ್ನಾರಾಯಣನೇ ಬಂದರೂ ಅವನೂ ಕೂಡ ನಿನ್ನಂ ಜೈಸಲಾರನೆಂದು ನಿಶ್ಚಯವಾಗಿ ನಾನು ತಿಳಿದಿರುವೆನು. ಈ ಪರಿಯಾಗಿರುವಲ್ಲಿ ಜಂಬೂದ್ವೀಪದೊಳ್ ಎಲ್ಲಿಯೂ ಇರುವ ಒಬ್ಬ ನರಾಧಮನ ಲಕ್ಷ್ಯವೇನು? ಮತ್ತೂ ನೀನು ಬಹು ಪುಣ್ಯಶಾಲಿಯಾಗಿ ಚಿರಕಾಲ ಸುಖದಿಂದ ಇರುವದಕ್ಕೆ ಯೋಗ್ಯನೆಂದು ಕಾಲೋಚಿತವಾಗಿ ಆ ಮಾತುಗಳನ್ನಾಡಿ ತಾನೂ ಕೂಡ ಬಹಳ ಸಂತೋಷಗೊಂಡಂತೆ ನಟಿಸಿ, ಅಮರಲೋಕವಂ ಕುರಿತು ತೆರಳಿ ಪೋಗಿ ಬರುವೆನೆಂದು ಹೇಳಲಾಗ ಲೋಹಿತಾಕ್ಷನು ಅಲ್ಲಿಂದ ವೇಗದಿಂದೆದ್ದು ತನ್ನ ಉದ್ಯಾನವನವಂ ಕುರಿತು ಪೋಗಿ ಪಾರಿಜಾತ ವೃಕ್ಷದೊಳಿರುವ ಆಶ್ಚರ್ಯಕರಂಗಳಾದ ಕೆಲವು ಪುಷ್ಪಂಗಳಂ ತಂದು ರಾಕ್ಷಸರೂಪನಾದ ಯಕ್ಷನ ಹಸ್ತದೊಳಿಟ್ಟು ಅವನಂ ಕುರಿತು ಈ ಪುಷ್ಪಗಳಂ, ಬಲಿ ಬಾಣ ಮೊದಲಾದ ದಾನವಾಧಿಪತಿಗಳಿಗೆ ನಾನು ಪ್ರಣಾಮವಗೈದು ಕೈಕಾಣಿಕೆಯಾಗಿ ಒಪ್ಪಿಸಿರುವೆನೆಂದು ಹೇಳಿ ಪರಿಪರಿ ಉಪಚಾರೋಕ್ತಿಗಳಿಂದ ಮನ್ನಿಸಿ ಕಳುಹಲಾ ಯಕ್ಷನು ಅಲ್ಲಿಂದ ಹೊರಟು ಲೋಹಿತಾಕ್ಷನು ನೋಡುವಂತೆ ಸ್ವಲ್ಪ ದೂರ ಪೋಗಿ, ಬಳಿಕ ರಾಕ್ಷಸ ರೂಪವಂ ಬಿಟ್ಟು ಎಂದಿನಂತೆ ಯಕ್ಷರೂಪನಾಗಿ ಸೂಕ್ಷ್ಮಾಕಾರದಿಂ ಸುಗಂಧರಾಜೇಂದ್ರನ ಸವಿಾಪವನೈದಿ, ಎಲೈ ಮಹಾರಾಜಕುಲಶಿರೋಮಣಿಯೆ! ಈ ರಾಕ್ಷಸನು ಮನುಷ್ಯರಿಂದ ಜಯಿಸುವದಕ್ಕೆ ಸಾಧ್ಯನಲ್ಲವೆಂದು ನುಡಿದು, ಮತ್ತೂ ಅಲ್ಲಿ ನಡದ ಸಮಾಚಾರವೆಲ್ಲವಂ ತಿಳುಹಿ, ಏನಾದರೂ ಸೂತನವಾಗಿ ಒಂದು ತಂತ್ರವಂ ಮಾಡಿ ಇವನಂ ಕೊಲ್ಲಬೇಕಲ್ಲದೆ ಸುಮ್ಮನೆ ಸಾಯುವನಲ್ಲವೆಂದು ಸೂಕ್ಷ್ಮವಾಗಿ ಸೂಚಿಸಲೂ, ಅದಂ ಕೇಳಿ ರಾಜೇಂದ್ರನು ಸುಮತಿಯಂ ಕುರಿತು ಎಲೈ ಮಂತ್ರಿಯೆ! ಮೊದಲು ನಾವೀರ್ವರೂ ಆಲೋಚಿಸಿದ ಪರಿಯಾಗಿಯೇ ದಾನವಾಧಿಪನಾದ ಲೋಹಿತಾಕ್ಷನು ಅತ್ಯಂತ ದುರ್ಜಯನಾಗಿರುವನು. ಏನು ಉಪಾಯವಂ ಮಾಡಿದರೆ ಈ

ದಾನವನಿಗೆ ಅಪಾಯ ಬರುವದೆಂದು ನಿರೂಪಿಸಲಾ ಮಂತ್ರಿಯು ಒಂದು ನಿಮಿಷಮಾತ್ರ ಆಲೋಚನೆಯಂಗೈದು, ಬಳಿಕ ರಾಜೇಂದ್ರನಂ ಕುರಿತು ಎಲೈ ರಾಜಕುಲತಿಲಕನೆ! ಕೇಳು ಈ ಕಾಲದೊಳ್ ಈ ರಾಕ್ಷಸನ ವಿಷಯವಾಗಿ ಭೇದೋಪಾಯವಂ ಮಾಡಿದಲ್ಲದೆ ಪರಾಕ್ರಮದಿಂದಲೂ, ಮಾಯೆಯಿಂದಲೂ, ಕೂಡ ಜೈಸುವದೆಂಬದೆ ಈ ದುರಾತ್ಮನಾದ ದಾನವನು ಶಕ್ಯವನಲ್ಲವಾದ್ದರಿಂದ ಯಕ್ಷಾಧಿಪನಾದ ಈ ಛಾಯಾಗುಪ್ತನಿಗೆ ಬಹು ಪ್ರಾಣದಲ್ಲಿ ಶಾಲ್ಮಲಿ ದ್ವೀಪದೊಳ್ ಸಂಚರಿಸುವ ದುರ್ಮರ್ಷಣನ ಸಹೋದರಿಯಾದ ವೈರೋಚನೀ ಎಂಬ ರಾಕ್ಷಸಿಯ ರೂಪವಂ ಕೈಗೊಳಿಸಿ ಕಳುಹಿ, ದುರ್ಜನನಾದ ಲೋಹಿತಾಕ್ಷನೆಂಬ ಈ ದುಷ್ಟ ರಾಕ್ಷಸನ ಬಳಿಯಲ್ಲಿ ಸೇರುವಂತೆ ಮಾಡಿ, ಬಳಿಕ ಅವನಿಂದ ಆ ರಾಕ್ಷಸನ ರಹಸ್ಯ ವೃತ್ತಾಂತಗಳೆಲ್ಲವಂ ವಿಸ್ತಾರವಾಗಿ ತಿಳಿದು ಬರುವಂತೆ ಮಾಡಿ, ನಮ್ಮಗಳ ಕಾರ್ಯವಂ ಕೈಕೊಳ್ಳಬೇಕಲ್ಲದೆ ಕೇವಲ ಯುದ್ಧವ ಮಾಡಲಾಗದೆಂದು ವಿಜ್ಞಾಪಿಸಿ, ಮತ್ತೂ ಕೆಲವು ರಹಸ್ಯಂಗಳಂ ಕೂಡ ಪೇಳಲು, ಅದಂ ಕೇಳಿ ರಾಜಕುಮಾರನು ಅಹುದಹುದೆಂದು ಆ ಮಾತುಗಳಂ ಮನದಂದು ಸುಮತಿಯ ಮಾತಿಗೆ ಬಹು ಸಂತೋಷಗೊಂಡು ಇಂತೀಪರ ಸಮಯದಲ್ಲಿ ನಿನ್ನ ಬುದ್ಧಿಯ ತೆಲುವೆಯು, ಅದಕ್ಕೆ ಅನುಗುಣವಾದ ಆಲೋಚನೆಯು, ಅಲ್ಲದೆ ಆ ಆಲೋಚನೆಗೆ ಅನುಕೂಲವಾದ ಪ್ರಯತ್ನವೂ ದೇವಮಂತ್ರಿಯಾದ ಬೃಹಸ್ಪತಿಗೂ ಕೂಡ ಇರಲಾರದೆಂದು ಸಂತೋಷಗೊಂಡು, ತನ್ನ ಕಂಠದೊಳ್ ಅಳವಡಿಸಿದ್ದ ಅಮೂಲ್ಯವಾದ ರತ್ನಹಾರದಿಂದ ಸುಮತಿಯ ಕಂಠವಂ ಅಲಂಕರಿಸಿ, ಅತ್ಯಂತ ಸಂಭ್ರಮದಿಂದ ಘಟ್ಟಿಯಾಗಿ ಪ್ರೇಮಾಲಿಂಗನವಗೈಕೊಂಡು, ಬಳಿಕ ಯಕ್ಷನು ಕರದು ಅವನಂ ಕುರಿತು ಮುಂದೆ ಮಾಡತಕ್ಕ ಕಾರ್ಯಗಳೆಲ್ಲವಂ ರಹಸ್ಯವಾಗಿ ನಿರೂಪಿಸಿ ಕಳುಹಲಾಗ, ಛಾಯಾಗುಪ್ತನು ಅಲ್ಲಿಂದ ತೆರಳಿ ಬರುತ್ತ ಚಿತ್ರಪತೀ ಪುರದ ಪುರೋಭಾಗದೊಳ್ ಬಾಗಿಲಲ್ಲಿರುವ ರತ್ನಮಯವಾದ ಜಗತಿಯಲ್ಲಿ ಕುಳಿತು, ವೈರೋಚನಿಯ ಆಕಾರವಂ ತಾಳಿ ಘಟ್ಟಿಯಾಗಿ ರೋದನವಗೈಯುತ್ತ, ದುರ್ಮರ್ಷಣನ ಗುಣಾನುವಾದವಂ ಮಾಡುತ್ತ ಹಂಬಲಿಸುತ್ತಲಿರಲೂ, ಆಗ ಲೋಹಿತಾಕ್ಷನು ಇದನೆಲ್ಲವಂ ಆಲೈಸಿ ಕೇಳಿ, ಘಾಳಿಯೂ ಕೂಡ ಸನ್ನ

ಪುರಮಂ ಪ್ರವೇಶಿಸುವುದಕ್ಕೆ ಭಯಗೊಂಡಿರುವವರಲ್ಲಿ ಇಂತು ಕೇವಲ ದೀನವಾದ ಧ್ವನಿ ಉಂಟಾಗುವುದಕ್ಕೆ ನಿಮಿತ್ತವೇನೆಂದು ಅಚ್ಚರಿಗೊಂಡು ಒಂದೂ ತಿಳಿಯದೆ, ಅಲ್ಲಿಂದ ತೆರಳಿ ಪುರದ್ವಾರವನ್ನೈದಿ ಅಲ್ಲಿ ಕುಳಿತು ರೋದನಗೈವ ಸತಿಯಂ ನೋಡಿ, ಇವಳು ದೇವಕನ್ನಿಕೆಯೋ? ಗಂಧರ್ವ ತರುಣಿಯೋ? ದಾನವಕಾಂತೆಯೋ? ಎಂದು ಯೋಚಿಸುತ್ತ, ಅವಳ ರೂಪವಂ ನೋಡಿ ಮೋಹಗೊಂಡು ಬಳಿಯನ್ನೈದಿ ಅವಳಂ ಕುರಿತು ಎಲೈ ಮೋಹನಾಂಗಿಯೇ! ನೀನ್ಯಾರು? ಇಲ್ಲಿಗೆ ಬರುವುದಕ್ಕೆ ನಿಮಿತ್ತವೇನು? ಅಥವಾ ಬಂದರೂ ಪಟ್ಟಣದ ಬಾಗಿಲಲ್ಲಿ ಕುಳಿತು ರೋದಿಯಿಸುವ ಪರಿಯೇನು? ಇದೆಲ್ಲವಂ ವಿಸ್ತಾರವಾಗಿ ಹೇಳೆನಲು, ಅದಂ ಕೇಳಿ ವೈರೋಚನ ರೂಪನಾದ ಯಕ್ಷನು ಲೋಹಿತಾಕ್ಷನ ವಾಕ್ಯಗಳಂ ಲಕ್ಷ್ಯಕ್ಕೆ ತಾರದೆ, ಮತ್ತೂ ನಿಂತಿರುವ ಅವನು ನೋಡದೆ ಕಾಲುವೆಗಳಂತೆ ಕಣ್ಣೀರುಗಳಂ ಬಿಡುತ ಸುಮ್ಮನೆ ಇರಲಾಗ ಲೋಹಿತಾಕ್ಷನು ಇಂತಿರ್ದ ಕಮಲಾಕ್ಷಿಯಂ ನೋಡಿ ಎಲೈ ವಿಚಕ್ಷಣಳೆ! ನೀನಿಂತು ಶೋಕಿಸುವುದಕ್ಕೆ ಕಾರಣವೇನ ? ಹೇಳೆಂದರೂ ಹೇಳದೆ ಸುಮ್ಮನೇ ಇರುವ ಪರಿಯೇನು? ಅದೆಲ್ಲವಂ ತಿಳುಹಿದರೆ ನಿನ್ನ ಕಷ್ಟವಂ ಬಿಡಿಸುವೆನೆಂದು ನುಡಿಯಲಾಗ ಕಪಟ ವೈರೋಚನನು ಆ ಮಾತುಗಳಂ ಕೇಳಿ ಸ್ವಲ್ಪ ಕೋಪಗೂಡಿ, ತಿರಿಗಿ ನೋಡಿ ನೀನಾರು? ನಿನ್ನಿಂದಲೇನಹುದು, ನೀನು ಬಂದಂತೆ ಹೋಗಬೇಕಲ್ಲದೆ ನನ್ನ ಕಷ್ಟೇಷ್ಟಗಳಂ ಕೇಳಿ ಫಲವೇನೆಂದು ನುಡಿದು, ಅಥವಾ ಹೇಳುವೆನು ಕೇಳು ಲೋಹಿತಾಕ್ಷನೆಂಬ ರಾಕ್ಷಸ ಶ್ರೇಷ್ಠನಾದರೂ ಇರುವ ಬಳಿಯಂ ಗೊತ್ತು ಮಾಡಿ ಕೊಡುವುದಕ್ಕೆ ನಿನಗೆ ಸಾಮರ್ಥ್ಯ ಉಂಟೆ ಎನಲೂ, ಅದಂ ಕೇಳಿ ಲೋಹಿತಾಕ್ಷನು ಇದೇನೊ? ಬಂದು ಆಶ್ಚರ್ಯಕರವಾದ ಕಾರ್ಯವಿರುವುದು. ಅದಂ ತಿಳಿದು ನೋಡುವೆನೆಂದು ತನ್ನ ಮನದೊಳ್ ಯೋಚಿಸಿ ಎಲೈ ರಮಣಿಯೆ! ನೀನು ಹೇಳಿದಂತೆ ಲೋಹಿತಾಕ್ಷನಿರುವ ಬಳಿಯಂ ತೋರಿ ಕೊಡುವೆನು ಹೇಳೆನಲೂ, ಆಗ ವೈರೋಚನಸ್ತ್ರೀರೂಪನಾದ ಯಕ್ಷನು ಶಾಲ್ಮಲಿದ್ವೀಪದೊಳ್ ಮಧ್ವರ್ಷನೆಂಬೋರ್ವ ದಾನವಶ್ರೇಷ್ಠನಿರ್ದನು, ಅವನಿಗೆ ಸೋದರಿಯಾದ ವೈರೋಚನೀ ಎಂಬ ಕನ್ನಿಕೆ ನಾನೆಂದು ತಿಳಿಯುವನಾಗು. ಮತ್ತೂ ಆ ಶಾಲ್ಮಲಿ ದ್ವೀಪಾಧಿಪ

ತ್ರಿಯಾದ ನಮ್ಮ ಅಣ್ಣನಾದ ದುರ್ಧರ್ಷನು ಓರ್ವ ಮನುಷ್ಯನಿಂದ ಸೇನಾಸಮೇತನಾಗಿ ಸಂಹೃತನಾಗಲು, ಅವಂ ಕಂಡು ಭಯಗೊಂಡು ರಾಕ್ಷಸಕುಲದೋಳ್ ಸರ್ವೋತ್ಕೃಷ್ಟನಾಗಿ ಶೂರನಾದ ಲೋಹಿತಾಕ್ಷನ ಸವಿಾಪಸ್ಸೈದಿ ಕೆಲವು ರಹಸ್ಯಂಗಳಂ ಪೇಳಬೇಕೆಂದು ಬಂದಿರುವೆನೆನಲಾಗ ಲೋಹಿತಾಕ್ಷನು ತನ್ನ ಮನದೋಳ್ ಈ ತರುಣಿಯು ಏನುಕಾರಣದಿಂ ಬಂದಿರುವಳೋ! ಇವಳಿಂದ ಕ್ಷೇಮವಾಗುವದೋ? ಅಥವಾ ಕಷ್ಟವೇ ಪ್ರಾಪ್ತವಾಗುವದೋ? ಎಂದು ಪರಿಪರಿಯಾಗಿ ಯೋಚಿಸಿ, ಆದರೂ ನಮ್ಮ ದಾನವಕುಲದಲ್ಲಿ ಪುಟ್ಟಿರುವವರಿಂದ ಇವಳ ಯೋಗಕ್ಷೇಮಂಗಳಂ ತಿಳಿಯದೆ ಕೇವಲ ತಿರಸ್ಕಾರವು ಮಾಡಲಾಗದೆಂದು ತಿಳಿದು, ಮತ್ತು ಅವಳಂ ಕುರಿತು ಎಲೈ ತರುಣಿಯೆ! ನಾನೇ ಲೋಹಿತಾಕ್ಷನು, ನೀನು ಪರಿಪರಿಯಾಗಿ ಯೋಚನೆಯಂ ಮಾಡಬೇಡವೆಂದು ನುಡಿಯಲು, ಅವಂ ಕೇಳಿ ಕಪಟವೈರೋಚನಿಯು ಗಳಗಳನೆ ಅಳುತ ಬೇಗದಿಂದೆದ್ದು ಲೋಹಿತಾಕ್ಷನ ಪಾದಂಗಳಂ ಪಿಡಿದು ಇಂತು ನನಗೆ ಮೋಸವಂ ಮಾಡುವದುಚಿತವೇ ಎಂದು ನುಡಿಯೆ, ಬಳಿಕ ನನ್ನ ಕಷ್ಟಂಗಳೆಲ್ಲವೂ ಕೂಗಲೇ ನಷ್ಟಂಗಳಾದವು. ಪಟ್ಟಣವಂ ಕುರಿತು ನೆಟ್ಟಗೆ ಈಗಲೇ ತೆರಳಬಹುದು. ಅಲ್ಲಿ ನನ್ನ ವೃತ್ತಾಂತವೆಲ್ಲವಂ ಸ್ಪಷ್ಟವಾಗಿ ಸೂಚಿಸುವೆನೆಂದು ಪೇಳಲು, ಆಗ ಲೋಹಿತಾಕ್ಷನು ಆ ಸತಿಯೊಡಗೂಡಿ ತನ್ನ ಮಂದಿರವನ್ನೈದಿ, ಅವಳಂ ಕುರಿತು ಇನ್ನು ನಿನ್ನ ವೃತ್ತಾಂತವೆಲ್ಲವಂ ಪೇಳೆನಲು, ಅವಂ ಕೇಳಿ ಕಪಟವೈರೋಚನಿಯು ಮೊದಲು ತಾನು ಪೇಳಿದಂತೆ ತಮ್ಮ ಅಣ್ಣನಾದ ದುರ್ಧರ್ಷನು ಶಾಲ್ಮಲಿ ದ್ವೀಪವೆಲ್ಲವಂ ಜೈಸಿ, ಅಲ್ಲಿ ದೇವತೆಗಳಿಗೂ ಕೂಡ ದುಷ್ಪ್ರವೇಶವಾದ ಒಂದುಪಟ್ಟಣವಂ ನಿರ್ಮಾಣವಗೈಸಿ, ಸಮಸ್ತ ದಾನವರೊಡಗೂಡಿ ಸುಖದಿಂದಿರುತ್ತಿರುವ ಸಮಯದೋಳ್ ಓರ್ವ ಸುಗಂಧರಾಜೇಂದ್ರನೆಂಬ ಭೂಪಾಲಕನು ಅಲ್ಲಿಗೆ ಬಂದು ರಾಕ್ಷಸರೆಲ್ಲರಂ ಸಂಹರಿಸಿ, ಬಳಿಕ ನಮ್ಮ ಅಣ್ಣನಾದ ದುರ್ಧರ್ಷನಂ ಕೂಡ ಒಂದು ಭಾರಿ ಪರಾಜಿತನ ಮಾಡಲಾಗ ರಾಕ್ಷಸರೆಲ್ಲರೂ ಹತರಾಗಿ, ನಾವೀರ್ವರೇ ಉಳಿದನಂತರ, ಇವನೊಡನೆ ಕಾದುವದು ಸಾಧಾರಣವಲ್ಲವೆಂದು ತಿಳಿದು, ಅಲ್ಲಿಂದ ತೆರಳಿ, ನಾವೀರ್ವರೂ ಬರುವ ಮಾರ್ಗದೋಳ್ ದುರ್ಧರ್ಷನು ನನ್ನೊ

ಡನೆ ಶಾಕದ್ವೀಪದೊಳ್ ಲೋಹಿತಾಕ್ಷನೆಂಬ ಮಹಾ ಬಲಶಾಲಿಯಾದ ಓರ್ವ ದಾನವೇಂದ್ರನಿರುವನು. ಅವನ ಸಮೀಪವನ್ನೈದಿ ಈ ದುಷ್ಟನಾದ ನರಾಧಮನ ಸಂಹಾರವಂ ಆತನಿಂದ ಗೈಸಿ, ಅನಂತರ ಸೋದರಿಯಾದ ನನ್ನಂ ನಿನಗೆ ಕೊಟ್ಟು ವಿವಾಹವಂ ಮಾಡಿ, ಈರ್ವರೂ ಕೂಡ ಸಕಲ ಲೋಕಂಗಳಂ ಜೈಸಿ ಸುಖದಿಂದಿರುವೆವೆಂದು ಪೇಳುತ, ಬರುತ್ತಿರಲಾಗ ದಾರಿಯೊಳ್ ಸುಗಂಧರಾಜನೆಂಬ ಆ ಭೂಪಾಲಕನು ಧನುವಂ ಪಿಡಿದು ನಮ್ಮ ಎದುರಾಗಿ ಬಂದು ಯುದ್ಧ ದುರ್ಮದನಾದ ದುರ್ಧರ್ಷನು ಬಗೆ ಬಗೆಯಾದ ಬಾಣಂಗಳಿಂ ತಡೆದು ಹೊಡೆಯುತ್ತಿರಲು, ಆ ಸಮಯ ದೊಳ್ನಮ್ಮಣ್ಣನಾದ ದುರ್ಧರ್ಷನು ಆ ರಾಜಕುಮಾರನೊಡನೆ ಬಹಳ ದಿವಸ ಪರಿಪರಿಯಾಗಿ ಯುದ್ಧವಂ ಮಾಡಿ ನಿರ್ವಹಿಸಲಾರದೆ ಮೃತಿಯಂ ಪೊಂದಿದನು. ಇದೆಲ್ಲವಂ ಕಂಡ ನಾನು ಶೋಕಾತುರಳಾಗಿ ಅಲ್ಲಿ ನಿಂತರೆ ನನ್ನ ಸೌಂದರ್ಯವಂ ನೋಡಿ ಆ ರಾಜಕುಮಾರನು ನನ್ನಂ ಪಿಡಿಯ ಲೋಸುಗ ಬರುವನೆಂಬರಿತು, ಅಲ್ಲಿಂದ ಹೊರಟು ಅವನು ಕಾಣದಂತೆ ನಿನ್ನ ಸಮೀಪವನ್ನೈದುವೆನೆಂದು, ಬಹು ವೇಗದಿಂ ಬರುತ ಬಿಸಲು ತಾಪ ವಂ ಸಹಿಸಲಾರದೆ, ಬಹು ದೂರ ನಡೆದ ಮಾರ್ಗಾಯಾಸದಿಂದ, ವಾಮ ದೇವನೆಂಬೋರ್ವ ಋಷಿಯ ಆಶ್ರಮವನ್ನೈದಿ ಬಳಲಿ ಬ್ಯಾಸರಗೊಂಡು, ಒಂದು ರಸಾಲ ವೃಕ್ಷದೊಳ್ ಯಾರೂ ಅರಿಯದಂತೆ ಕುಳಿತು ಶ್ರಮ ವಂ ಪರಿಹರಿಸಿಕೊಳ್ಳುತ್ತಿರುವ ಸಮಯದೊಳ್ ಆ ಋಷಿಯ ಶಿಷ್ಯರೀ ರ್ವರೂ ಅಲ್ಲಿ ನಾನಿರುವುದಂ ತಿಳಿಯದೆ ಓಡಿ ಬಂದು ವಾಮದೇವನಂ ಕು ರಿತು, ಎಲೈ ಮಹಾನುಭಾವನೆ! ಸುಗಂಧರಾಜನೆಂಬೋರ್ವ ನರಪತಿಯು ಶಾಲ್ಮಲಿ ದ್ವೀಪವಂ ಪೊಕ್ಕು ಅಲ್ಲಿ ಸಪರಿವಾರನಾದ ದುರ್ಧರ್ಷನೆಂಬ ದುಷ್ಟದಾನವನಂ ಸಂಹಾರವಂ ಮಾಡಿ, ನಮ್ಮ ಕಷ್ಟಗಳಂ ಬಿಡಿಸಿದನೆಂ ದು ಪೇಳಲಾ ಮಹಾಮುನಿಯು ಎಲೈ ಮತಿಹೀನರಾದ ಶಿಷ್ಯರುಗಳಿರಾ! ಇಷ್ಟು ಮಾತ್ರದಿಂ ನಿಮಗೆ ಸಂತೋಷವಾಯಿತೆಂದು ತಿಳಿಯದಿರಿ, ಮುಂದಾಗುವ ಕಾರ್ಯವಂ ತಿಳಿಯದೆ ಇಂತು ಸುಮ್ಮನೆ ಸಂತೋಷ ಪಡುವದುಂಟೆ? ಮತ್ತೂ ಈ ಸುಗಂಧರಾಜನು ಇಂತಾದುದಕ್ಕೆ ಸಂ ತೋಷಗೊಂಡು ಹಿಂತಿರುಗಿ ಪೋಗಿ, ಎಂದಿನಂತೆ ತನ್ನ ಮಂದಿರವನ್ನೈದಿ ಸೌ

ಷುವಲ್ಲಿರದೆ, ಶಾಕದ್ವೀಪವಂ ಪೊಕ್ಕು, ದುರಹಂಕಾರದಿಂದ ಅಲ್ಲಿರುವ ಲೋಹಿತಾಕ್ಷನೊಡನೆ ಕದನವಂ ಮಾಡಿ, ಪಾರಿಜಾತ ತರುವಂ ತರುವೆನೆಂದು ಪೋಗಿ, ಕಾಳಗಕ್ಕೆ ಕರೆಯಲಾ ಲೋಹಿತಾಕ್ಷನು ಕಾಲವಂ ಕಂಡವನಾದುದರಿಂದ ಆತನೊಡನೆ ಯುದ್ಧವಂ ಮಾಡದೆ ಕಪಟದಿಂದ ಈ ಪಾರಿಜಾತ ತರುವಂ ಕರಗಳಿಂದ ಕೀಳುವ ಸಾಮರ್ಥ್ಯ ನಿನಗೆ ಇದ್ದರೆ ತೆಗದುಕೊಂಡು ಪೋಗೆನ್ನುವನು, ಬಳಿಕ ಸುಗಂಧರಾಜೇಂದ್ರನು ಲೋಹಿತಾಕ್ಷನ ಮೋಸವಂ ತಿಳಿಯದ ತನ್ನ ಕರಗಳಿಂದ ಪಾರಿಜಾತ ತರುವಂ ಕೀಳುವೆನೆಂದು ಉದ್ಯೋಗಿಸಿ, ಆ ವೃಕ್ಷವಂ ಕೈಗಳಿಂ ಪಿಡಿಯಲಷ್ಟರೊಳ್ ಆ ಪಾರಿಜಾತ ತರುವು ದೇವತಾ ವೃಕ್ಷವಾದ್ದರಿಂ ಪಾತಾಳವಂ ಬಿಟ್ಟು ಕೈಗೆ ಬಂದಂತೆ ತೋರಿ, ಈ ರಾಜಕುಮಾರನಂ ರಸಾತಳಕ್ಕೆ ಕೆಡವಿ, ಅವನ ಮೇಲೆ ಕುಲಪರ್ವತದಂತೆ ಭಾರವಂ ವಹಿಸಿ ನಿಲ್ಲುವನು. ಬಳಿಕ ರಾಜಕುಮಾರನು ಮೇಲಕ್ಕೆ ಏಳಲಾರದೆ ಭೂಮಿಯು ಕೀಲಾಗಿ ಪೋಗುವನು. ಈ ಪರಿಯಂ ತಿಳಿಯದೆ ಸಂತೋಷದಿಂದ ಈ ಮಾತುಗಳಂ ನುಡಿಯುತಿರಿ ಎಂದು ಪೇಳಿ, ಕಡುನೊಂದು ಮರುಗುತ ನುಡಿಯುವ ಮಾತುಗಳಂ ಕೇಳಿ ನಾನು ಮೊದಲು ದುರ್ಧರ್ಷನು ಪೇಳಿದಂತೆ ನಿನ್ನನವಿವಾಹವನ್ನೈದಿ, ಆ ದುರಾತ್ಮನಾದ ಸರೋಧಮನಂ ನಿನ್ನಿಂದ ಸಂಹಾರವಗೈಸಿ, ಬಳಿಕ ನಿನ್ನೊಡಗೂಡಿ ವಿಹಾರವಂ ಮಾಡಬೇಕೆಂದು ನಿಶ್ಚೈಸಿ, ಅವನು ಬರುವಷ್ಟರೊಳ್ ಈ ಸಕಲ ವೃತ್ತಾಂತವಂ ನಿನಗೆ ತಿಳುಹಿ ಕುಶಲವಂ ಉಂಟು ಮಾಡಬೇಕೆಂದು ಬಹು ಪ್ರಯಾಸದಿಂದ ಬಂದೆನೆನಲು; ಅದಂ ಕೇಳಿ ಲೋಹಿತಾಕ್ಷನು ಕಾಲವಶನಾಗಿ ಈ ಮೋಸದ ಮಾತಿಗೆ ಮನಸೋತು, ಎಲೈ ರಮಣಿಯೆ! ನೀನು ಪೇಳಿದ ಮಾತುಗಳೆಲ್ಲ ನಿಜವೇ ಸರಿ. ನೀನು ಭಯಗೊಳ್ಳದೆ ನನ್ನ ಮಂದಿರದಲ್ಲಿ ಸುಖದಿಂದಿರುವಳಾಗು. ಆ ರಾಜಕುಮಾರನು ಎಲ್ಲಿರುವನು. ಅವನಂ ತೋರಿದರೆ ಈ ಕ್ಷಣದಲ್ಲಿಯೇ ನೀನು ಪೇಳಿದ ಉಪಾಯದಿಂದಲಾದರೂ, ನನ್ನಲ್ಲಿರುವ ವರ ಲಬ್ಧವಾದ ಮಹಾಯುಧದಿಂದಲಾದರೂ ಸಂಹರಿಸಿ, ನಿನ್ನಂ ಸಂತೋಷ ಪಡಿಸುವೆನೆನಲು; ಆದಂ ಕೇಳಿ ಕಪಟವೈರೋಚನಿಯು ಇವನಲ್ಲಿ ಇದೊಂದು ಸಾಧನವಿರುವದೆಂದು ಮನದೊಳ್ ಯೋಚಿಸಿ, ಬಳಿಕ ಮ

ತ್ತೊಂದು ಪರಿಯಾದ ಮಾತುಗಳಿಂದ ಸ್ವಲ್ಪ ಹೊತ್ತು ಕಾಲವಂ ಕಳೆಯುತ್ತ, ಅಲ್ಲಿ ಅವನೊಡಗೂಡಿ ಸಂಚರಿಸುತ್ತ, ಅವನ ಮನಸ್ಸಿದ್ದಂತೆ ಮಾತುಗಳನಾಡುತಲಿದ್ದು, ಬಳಿಕ ಎತ್ತೈದಾಪನೆಂದ್ರನೆ! ಪಾರಿಜಾತ ವೃಕ್ಷವಂ ನೋಡಬೇಕೆಂಬ ಅಪೇಕ್ಷೆಯು ನನ್ನಂ ಒತ್ತಾಯವಾಗಿ ಬಾಧಿಸುವದರಿಂದ ಅದಂ ತೋರಿಸಬೇಕೆನಲು, ಆಗ ಲೋಹಿತಾಕ್ಷನು ಕಪಟಸ್ತ್ರೀರೂಪಿಣಿಯ ಕರವಂ ಪಿಡಿದು ಉದ್ಯಾನ ವನವಂ ಕುರಿತು ಪೋಗುತಲಿರಲಾಗ ಅಲ್ಲಿ ಒಂದು ಮಂದಿರದಲ್ಲಿ ಅನೇಕ ನಾನೋಪಾಯವಾದಂತ ಚಿತ್ರಕ ಕಾಣಬರಲಾಗ ಕಪಟಸ್ತ್ರೀರೂಪಿಣಿಯು ಇದೇನು ವಿಚಿತ್ರವೆಂದು ಲೋಹಿತಾಕ್ಷನಂ ಕೇಳಲಾ ದಾನವನು ಇವು ನೋಡುವ ಮಾತುಗಳೆಂದರಿಯದೆ, ಅವಳ ಮುಖ ಸೌಂದರ್ಯದಿಂದ ಮೋಹಿತನಾಗಿ, ಮುಂದೆ ಬರುವ ಮೃತ್ಯುವನ್ನರಿಯದೆ, ಆ ಮಂದಿರದ ಬಾಗಲಂ ತೆಗೆದು, ಅಲ್ಲಿ ನೆಲ ನೋಕವಂತೆ ಅಂತರಿಕ್ಷದಲ್ಲಿಯೇ ನಾಗಪಾಶದಿಂದ ಬಿಗಿದು ಕಟ್ಟಿರುವ, ಮಹಾದೇವನ ವರಲಬ್ಧನಾದ ಮಹಾ ಶೂಲಾಯುಧವಂ ತೋರೆಂದು ನುಡಿದು, ಬಳಿಕ ಎತ್ತೈರಸಾಶಿಕೆ! ಇದರ ಪ್ರಭಾವವು ಹೇಳ್ವೆನು ಕೇಳು — ಈ ಶೂಲಾಯುಧವಂ ಪ್ರಯೋಗಿಸಲು, ಚಂದ್ರನಾಗಲೀ, ಚತುರ್ಮುಖನಾಗಲೀ, ದಿಕ್ಪತಿಗಳು ದೇವಾಸುರರೆಲ್ಲ ಒಟ್ಟುಗೂಡಿ ಬರಲೀ, ತಪ್ಪದೆ ಅವರೆಲ್ಲರಂ ನಿಮಿಷ ಮಾತ್ರದೊಳ್ ದಹಿಸಿ ತನ್ನ ಸ್ಥಾನವಂ ಕುರಿತು ಯೈದುವದೆಂದು ನುಡಿಯುತಾ ಕಪಟಸ್ತ್ರೀರೂಪನಾದ ಯಕ್ಷನು ಭಯಗೊಂಡು ಗಡಗಡನೆ ನಡುಗಿ, ಇಂತಪ್ಪ ಸಾಹಸ ಉಳ್ಳ ಈ ಮಹಾರಾಕ್ಷಸನಂ ಸುಗಂಧ ಮಹೀಪಾಲಕನು ಎಂತು ಸಂಹಾರವಗೈವನು. ಇವನು ಪರಾಜಿತನಾಗುವಂತೆ ತೋರುವದಿಲ್ಲವೆಂದು ಮನದೊಳ್ ಸಂಕಟಗೊಳುತ, ಹಾಗೆ ಒಂದು ಉಪಾಯವಂ ಚಿಂತಿಸಿ, ಮತ್ತೊ ಆ ಲೋಹಿತಾಕ್ಷನಂ ಕುರಿತು ಎತ್ತೈ ದಾನವೇಂದ್ರನೆ! ಈ ಮೂರು ಲೋಕದೊಳ್ ನಿನ್ನೊಡನೆ ಕಾಳಗವಂ ಕಾಯುವದಕ್ಕೆ ಕಾಲ ಯಮನೂ ಶಕ್ತನಾಗಿ ಕಾಣುವದಿಲ್ಲ. ಇಂತಿರುವಲ್ಲಿ ನರರ ಪಾಡೇನೆಂದು ಬಹಳವಾಗಿ ಕೊಂಡಾಡಿ, ಆ ಸುಗಂಧರಾಜನೆಂಬ ನರಾಧಮನು ಎಲ್ಲಿರುವನೋ ತಿಳಿಯಲಿಲ್ಲ. ಇಲ್ಲಿಗೂ ಬರುವನಾಗಿ ತೋರುವದಿಲ್ಲ, ಎಂತಾದರೂ ಆ ಮಾನವಾಧಮನಂ

ಸಂಹಾರವಗೈದಲ್ಲದೆ ದಾನವ ಕುಲಕ್ಕೆ ಕುಶಲವಾಗಲರಿಯದು, ಆದ್ದರಿಂ ಅವನಿರುವ ಪುರವನ್ನೈದಿ ಅವನ ಸಂಹಾರವಗೈದು ಬರುವದೇ ನಿನಗೆ ಪ್ರಕೃತಕಾರ್ಯವಲ್ಲದೇ, ಅವನ ವಿಷಯದಲ್ಲಿ ಉಪೇಕ್ಷೆಯಂ ಮಾಡುವದು ಸರ್ವಥಾ ಉಚಿತವಲ್ಲವೆಂದು ಪೇಳಲೂ, ಅದಂ ಕೇಳಿ ಲೋಹಿತಾಕ್ಷನು ವೈರೋಚನೀ ರೂಪನಾದ ಯಕ್ಷನಂ ಕುರಿತು ಎಲೈ ರಮಣಿಯೆ! ಈ ಕಲ್ಪ ತರುವಂ ಪರಿಪಾಲನೆಯಗೈಯುತ್ತ, ಮತ್ತೊರ್ವರು ಬಾರದಂತೆ ಕಾದುಕೊಂಡು ನಾನು ಇಲ್ಲಿಯೇ ಇರುವದೇ ಹೊರ್ತು, ಆ ಪುರುಷನನ್ನರಸುತ್ತ ಪೋಗುವದು ನನಗೆ ಉಚಿತವಲ್ಲ. ಆದ್ದರಿಂದ ನೀನು ಆ ನರಾಧಮನಿರುವ ಬಳಿಗೆ ಪೋಗಿ ಉಪಾಯಾಂತರದಿಂದ ಅವನಂ ನಾನಿರುವ ಬಳಿಗೆ ಬರುವಂತೆ ಕರತರುವದೆನಲಾಗ, ಕಪಟವೈರೋಚನಿಯು ಎಲೈ ಮಾನವೇಶ್ವರನೆ! ನಿನ್ನ ಆಜ್ಞೆಯಾದಂತೆ ಸರ್ವಸಾಹಸವಂ ಮಾಡಿ ರಾಜಕುಮಾರನಂ ಕರತರುವೆನು, ನೀನು ಇಲ್ಲಿಯೇ ಜಾಗರೂಕನಾಗಿ ಈ ಮಹಾಶೂಲಾಯುಧವಂ ಸಂರಕ್ಷಿಸುತ್ತಲಿರಬೇಕು. ಅವನು ಮಾನವನಾದರೂ ಬಹು ಮಾಯಾವಿಯಾದವನು ಆದ್ದರಿಂ ನೀನು ಮತ್ತೊಂದು ಕಾರ್ಯವಂ ನೆನೆಯದೆ, ಆ ಮಹಾ ಶೂಲವಿರುವ ಮಂದಿರದಲ್ಲಿಯೇ ಇರುತ್ತ, ಮತ್ತು ಮಹಾಸ್ತ್ರಂಗಳಂ, ಪರಿಪರಿಯಾದ ಆಯುಧಂಗಳಂ ಕೂಡ ಸನ್ನಹಿಸಿಕೊಂಡು ಬರುವುದು. ನಾನು ವೇಗದಿಂ ಪೋಗಿ ನೀನು ಪೇಳಿದಂತೆ ಕಾರ್ಯವಂ ನಿರ್ವಹಿಸಿಕೊಂಡು ಸುಗಂಧಮಹಾರಾಜನು ಮೋಹಗೊಳಿಸಿಕೊಂಡು ಬರುವೆನೆಂದು ನುಡಿದು, ಆ ದಾನವನಂ ಮೋಹಗೊಳಿಸಿ, ತನ್ನ ಸ್ವರೂಪವಂ ಮರೆಮಾಚಿಕೊಂಡಿರುತಲಿರ್ದು, ಅಲ್ಲಿಂದ ತೆರಳಿ ಕೆಲವು ದೂರ ಪೋಗಿ, ಬಳಿಕ ಅದೃಶ್ಯನಾಗಿ, ಹಿಂತಿರಿಗಿ ಆ ಲೋಹಿತಾಕ್ಷನು ಕಾಣದಂತೆ ಅವನ ಮಂದಿರವಂ ಪೊಕ್ಕು, ಸ್ವಲ್ಪ ಹೊತ್ತು ನೋಡುತಲಿರಲಾಗ ಲೋಹಿತಾಕ್ಷನು ಪರಿಪರಿಯಾದ ಮದ್ಯಮಾಂಸಾಹಾರಂಗಳಗೈದು ಮದವು ತಲೆಗೇರಿ ಮಹಾ ಶೂಲವಿರುವ ಮಂದಿರವಂ ಪೊಕ್ಕು, ಆ ಶೂಲದ ಕೆಳಭಾಗದಲ್ಲಿಯೇ ಮತ್ತನಾಗಿ ಮಲಗಿರಲಾಗ, ಗುಪ್ತನಾಗಿ ಇದನೆಲ್ಲವಂ ನೋಡುತಲಿರ್ದ [illegible]ಗುಪ್ತನು ಸುಗಂಧಮಹಾರಾಜಂಗೆ ಪರಮ ಆಪ್ತನಾದುದರಿಂದ [illegible]ರುಷಾ ಪ್ರಾಪ್ತಿ ಆಗುವದಕ್ಕೆ ಇದೇ ಸಮಯ

ತೆಂದು ಪೇಗಸಿಂ ಬಂದು ಸುಗಂಧಿಯೊಡಗೂಡಿರುವ ರಾಜೇಂದ್ರನಿಗೆ ಈ
ವೃತ್ತಾಂತವೆಲ್ಲಮಂ ಪೇಳ್ವುದುಮಾ ಮಹೀಶ್ವರಂ ಆ ದೈತ್ಯನ ಪಂಜರವನ್ನೈದಿ
ಸಿ, ಆ ಶೂಲಾಯುಧಮಂ ತೆಗೆದು, ಇನಿತು ಸಾವಕಾಶಮಂ ಮಾಡದೆ ಶೀಘ್ರ
ವಾಗಿ ಶೂಲವಂ ಬಿಗಿದಿರುವ ಮಹಾನಾಗಪಾಶಂಗಳಂ ಈಗಲೇ ಕತ್ತರಿಸಿ
ದರೆ ಅದರ ಕೆಳಭಾಗದಲ್ಲಿ ಮತ್ತನಾಗಿ ಮಲಗಿರುವ ಮಹಾ ರಾಕ್ಷಸನು
ಆ ಶೂಲದಿಂದಲೇ ಮೃತಿಯಂ ಹೊಂದುವನು, ಇಲ್ಲದಡೆ ಈ ದಾನವನ
ಮುಂದೆ ನಿನ್ನ ಸಾಹಸವು ನಡೆಯಲಾರದೆಂದು ನುಡಿಯಲು, ಆ ಸಮ
ಯದೊಳ್ ಯಕ್ಷ ಸುಮತಿಗಳೀರ್ವರ ಅನುಮತಿಯಿಂದ ಸುಗಂಧರಾ
ಜೇಂದ್ರನು ಶುಚಿರ್ಭೂತನಾಗಿ ಶ್ರೀದೇವಿಯಂ ನೆನದು, ಅಮೋಘವಾದ
ನಾಗಾಸ್ತ್ರವಂ ಪ್ರಯೋಗಿಸಿ, ಆ ನಾಗಪಾಶಂಗಳಂ ಕತ್ತರಿಸಲು, ಆ
ಕ್ಷಣದಲ್ಲಿಯೇ ಆ ಮಹಾಶೂಲಾಯುಧವು ಒಂದೇ ಕಾಲದೊಳ್ ಕೋ
ಟಿ ಸಿಡಿಲು ಎರಗಿದಂತೆ ಆ ರಾಕ್ಷಸನ ವಕ್ಷಸ್ಥಳದಲ್ಲಿ ಬಿದ್ದು ಅವನ ಪ್ರಾಣ
ವಾಯುಗಳಂ ಹೀರಿ ಪಾತಾಳವಂ ಪೊಕ್ಕು, ಮತ್ತೂ ತನ್ನ ಸಪ್ಪನೆವನ್ನೈ
ದಲಾಗ ಬ್ರಹ್ಮಾಂಡ ಕಟಾಹವೇ ಒಡದು ಪೋದುದೋ? ಎಂಬಂತೆಯು,
ಕಲ್ಪಾಂತ ಕಾಲದೊಳ್ ಮೇಘಗಳೆಲ್ಲ ಘುಡಿಘುಡಿಸಿ ಘರ್ಜಿಸುವವೋ?
ಎಂಬಂತೆಯು, ದಾನವರ ಭಾರವೆಲ್ಲ ಪೋದುದರಿಂದ ಭೂಮಿದೇವಿಯು
ಸಂತೋಷಗೊಂಡು ಘಟ್ಟಿಯಾಗಿ ನಗುತ್ತ, ಸುಗಂಧರಾಜೇಂದ್ರನ ಕೀರ್ತಿ
ಯಂ ಕೊಂಡಾಡುವಳೋ? ಎಂಬಂತೆಯು, ಮತ್ತೂ ಸುಗಂಧರಾಜೇಂ
ದ್ರನ ಪ್ರತಾಪವೆಂಬ ದಾವಾನಲನು ದಾನವರೆನ್ನುವ ಮಹಾರಣ್ಯವಂ
ಸುಡುವ ಸಮಯದೊಳ್ ಪುಟ್ಟುವ ಚಟಚಟ ಶಬ್ದವೋ? ಎಂಬಂತೆ
ಯು, ಮೂರು ಲೋಕಂಗಳ ಭಯವೆಲ್ಲವೂ ಪೋದುದೆಂದು ದಿಗಂಗನೆ
ಯರೆಲ್ಲ ಕೂಗಿ ಪೇಳುವರೋ? ಎಂಬಂತೆಯು ಪ್ರಳಯಕಾಲದ ರುದ್ರನ
ಘೋರಾಟ್ಟಹಾಸವೋ? ಎಂಬಂತೆಯು, ಸಪ್ತಸಾಗರಂಗಳೆಲ್ಲ ಕೂಡಿ
ಏಕಕಾಲದೊಳ್ ಭೋರಿಡುವವೋ? ಎಂಬಂತೆಯು, ಮತ್ತೂ ದಾನವರ
ಕುಲನಾಶವಾದುದಂ ನೋಡಿ ದೇವತೆಗಳೆಲ್ಲ ಸಂತೋಷಗೊಂಡು, ಮಹಾ
ಕುಲಾಚಲಂಗಳೆಂಬ ಕಿವಿಗಳಲ್ಲಿ ದಾನವರ ಭಯವೆಂಬ ಮುದ್ದೆಗಳಂ
ತುಂಬಿ, ಸುಗಂಧರಾಜೇಂದ್ರನ ಪ್ರತಾಪವೆಂಬ ರಂಜಕವನ್ನಿಟ್ಟು ಹಾ

ರಿಸಿದ ಘೋಷಗಳೋ? ಎಂಬಂತೆಯೂ, ಇಂತಲ್ಲದೇ ಆಕಾಶವೆಂಬ ತಳವಾರನು ರಾಕ್ಷಸರ ಹೆಸರಿಲ್ಲ, ಎಲ್ಲರೂ ಸುರಕ್ಷಿತವಾಗಿರೀ ಎಂದು ಮೇಘಮಂದರಂಗಳೆಂಬ ಮಹಾಭೇರಿಗಳಂ ರಭಸದಿಂ ಬಡಿಯುತ ಸಾರುವ ಧ್ವನಿಯೋ? ಎಂಬಂತೆಯೂ, ಶಾಕಿನೀ, ಡಾಕಿನೀ ಕಟ ಪೂತನಾದಿಗಣಂಗಳೆಲ್ಲ ಕೂಡಿ, ಆಹಾರಾರ್ಥವಾಗಿ ಸಿಕ್ಕಿರುವ ದಾನವರಂನೋಡಿ ಸಂತೋಷದಿಂದ ಅಲ್ಲಲ್ಲಿರುವ ತಮ್ಮತಮ್ಮ ಭೂತಗಣಂಗಳಂ ಔತಣಕ್ಕೆ ಬೇಗ ಬನ್ನಿರೆಂದು ದೂರದಿಂ ಕೂಗಿ ಕರೆಯುವವೋ? ಎಂಬಂತೆಯೂ, ಅದೊಂದು ಪರಿ ಅದ್ಭುತವಾದ ಶಬ್ದ ಉಂಟಾಗಲಾಗ ಶಾಕದ್ವೀಪದೊಳಿರುವ ಜನಂಗಳೆಲ್ಲ ತಲ್ಲಣಗೊಂಡು, ಲೋಹಿತಾಕ್ಷನು ಆರ್ಭಟಿಸಿ ಬರುವನೆಂದು ಗಡಗಡನೆ ನಡುಗುತ, ಏನೂ ತೋರದೆ ಗುಂಡು ಕಲ್ಲುಗಳಂತೆ ಉರುಳುವರು ಕೆಲಂಬರು, ಮರಗಳಂತೆ ನಿಂತವರು ಕೆಲಂಬರು, ಸಿಡಿಲು ಎರಗಿದಂತಾಗಿ ಎಚ್ಚರ ತಪ್ಪಿ ಮೂರ್ಛೆಗೊಂಡು ಮುಗ್ಗರಿಸಿಬಿದ್ದವರು ಕೆಲಂಬರು, ತತ್ತರಗೊಳುತ ಇನ್ನೇನು ಗತಿ ಎಂದು ಮಕ್ಕಳುಗಳಂ ಚಿಕ್ಕ ಮನೆಗಳೊಳ್ ಬಚ್ಚಿಟ್ಟು ಬಾಯಿಬಿಡುತ ನಿಂತಲ್ಲಿ ನಿಲ್ಲದೇ ಇರುವರು ಕೆಲಂಬರು, ಸುತ್ತಲೂ ನೋಡುತ ಲೋಹಿತಾಕ್ಷನೇ ಬಂದಂತೆ ತೋರಿ ಬಳಲಿ ಬಲತಪ್ಪಿ ತಬ್ಬಿಬ್ಬುಗೊಂಡು ಘಾಬರಿ ಬಡುತ ತಲೆ ತಿರಿಗಿ ಕೆಳಗೆ ಬೀಳುವರು ಕೆಲಂಬರು, ಕತ್ತಲೆಯೊಳ್ ಕಾಣುವ ಮನೆಗಳೇ ಪರ್ವತಂಗಳಂತೆ ತೋರಿ ಅಗೋ ಲೋಹಿತಾಕ್ಷನು ಅಲ್ಲಿ ಬರುವನು ನೋಡಿರೀ, ಎಲ್ಲಿಯಾದರೂ ಓಡಿ ಪೋಗಿ ಅಡಗಿಕೊಂಡು ಈ ಭಾರಿಗೆ ಬದುಕಿದರೆ ಮುಂದಕ್ಕೆ ಈ ಸ್ಥಳವಂ ಬಿಟ್ಟು ಬೆಟ್ಟವಂ ಸೇರುವಾ ಎಂದು ಓಡೋಡಿ ಬರುತ, ಕಲ್ಲುಗಳ ಎಡವಿ ಬೀಳುವರು ಕೆಲಂಬರು, ಮಡದಿಯರೊಡಗೂಡಿ ಮನಬಂದಂತೆ ವಿನೋದನಾಟವನಾಡಿ ಶ್ರಾಂತರಾಗಿ, ಮೈ ಮರದು ಮಣಿಮಯ ಮಂಚಗಳೊಳ್ ಮಲಗಿ, ಮರಳಿ ಮಮತೆಯಿಂದ ಉಬ್ಬಿ ಬರುವ ಮೋಹದಿಂ ತಬ್ಬಿರ್ದು, ಅಷ್ಟರೊಳ್ ಈ ಅಬ್ಬರವಂ ಕೇಳಿದರೂ ರತಿಕೇಳಿಗಳಂ ಬಿಡದೆ ಮಂಚದಿಂದಿಳಿಯದೆ, ತಮ್ಮಂಚುಗಳಲ್ಲಿ ಮಿಂಚುಗಳಂತೆ ಹೊಳೆಯುತ, ಪಂಚ ಬಾಣನ ಪಟ್ಟದಾನೆಯೆಂತಿರುವ ತರುಣಿಯರು ಈ ಧ್ವನಿಯ ಭಯದಿಂದ ತಾವಾಗಿ ಅಪ್ಪಿಕೊಳ್ಳುವ ಸುಖವನನುಭವಿಸುತ, ಬಂದ

ವಪ್ಪ ಬರಲೀ ಆ ಮೇಲೆ ನೋಡಿಕೊಳ್ಳುವ ಎಂದು ಬಿಟ್ಟು ಬಾರದೆ ಧೃಷ್ಟ ಯಾಗಿ ಧೈರ್ಯವಂ ತಾಳಿ ಏಳದೇ ಇರುವ ಯೌವನಸ್ಥರು ಕೆಲಂಬರು, ಇಂತೂ ಆ ಶಾಕದ್ವೀಪದಲ್ಲಿರುವ ಸಮಸ್ತ ಜನರೂ ಬಗೆಬಗೆಯಾಗಿ ಭಯ ಗೊಂಡು, ಒಂದೂ ತಿಳಿಯದೆ ಕಳವಳಗೊಳ್ಳುತಲಿರುವ ಸಮಯದೊಳ್ ಸುಗಂಧಮಹಾರಾಜೇಂದ್ರನು ಮಹಾದೇವನ ವರಪ್ರಸಾದದಿಂದ ರಾಕ್ಷ ಸನಿಗೆ ಲಬ್ಧವಾದ ಮಹಾಶೂಲದಿಂದಲೇ ಆ ಲೋಹಿತಾಕ್ಷನ ಸಂಹಾರ ವಾದುದಂ ನೋಡಿ ಅಚ್ಚರಿಗೊಂಡು, ಸುಮತಿಯಂ ಕುರಿತು ಎಲೈ ಮಂ ತ್ರಿಯೆ! ಇಂತಿರುವ ಶೂಲವಂ ಪಿಡಿದು ಯುದ್ಧಾಭಿಮುಖನಾಗಿ ಈ ದಾನ ವನು ಬಂದರೆ ನೋಡಿ ಜೀವಿಸುವರ್ಯಾರು? ಮತ್ತೂ ದೈವಬಲದಿಂದಲೂ, ನಿನ್ನ ಮಂತ್ರಾಲೋಚನೆಯಿಂದಲೂ, ಯಕ್ಷನ ಸಹಾಯದಿಂದಲೂ, ಈ ದುಷ್ಟದಾನವನ ಸಂಹಾರವಾದದ್ದಲ್ಲದೇ ನಮ್ಮಲ್ಲಿರುವ ಸಾಧನಗಳಿಂದ ಸಂಹರಿಸುವದಕ್ಕೆ ಶಕ್ಯಸಲ್ಲಾ ಎಂದು ಯಕ್ಷ ಮಂತ್ರಿಗಳಂ ಬಹಳವಾ ಗಿ ಶ್ಲಾಘನೆಯಗೈದು, ಇನ್ನು ನಮಗೆ ಅಶಕ್ಯವಾದ ಕಾರ್ಯವ್ಯಾವದೂ ಇಲ್ಲವೆಂದು ನುಡಿಯುತ, ಪರ್ವತವಂತೆ ಬಿದ್ದಿರುವ ದಾನವನಂ ನೋಡಿ ನೀನು ಸಹಾಯಾರ್ಥವಾಗಿ ಸಂಪಾದಿಸಿದ್ದ ಸಾಧನದಿಂದಲೇ ನಿನ್ನ ಸಂಹಾ ರವಾಯಿತೂ ಎಂದು ಸಂತೋಷದಿಂ ನುಡಿಯುತ, ಅವನ ಮಂದಿರವೆ ಲ್ಲವಂ ಯಕ್ಷ ಮಂತ್ರಿಗಳೊಡಗೂಡಿ ನೋಡುತ ಬಂದು, ಒಂದು ಕಡೆ ಯೊಳ್ ನಾಗಪಾಶದಿಂ ಬಿಗಿವಡೆದು ನರಳುತ ಬಿದ್ದಿರುವ ಚಿತ್ರವರ್ಮನಂ ಕಂಡು ಪಾಶವಂ ತರಿದು ಸೆರೆಯಂ ಬಿಡಿಸಿ, ಶೀತೋಪಚಾರವಗೈಸಲಾ ಚಿತ್ರವರ್ಮನು ಎಚ್ಚರಗೊಂಡು, ಕಣ್ದೆರದು ಏಕ ಕಾಲದೊಳ್ ಉದ ಯಿಸಿ ಬಂದ ಚಂದ್ರಸೂರ್ಯರಂತೆ ತೋರುತಲಿರುವ ಸುಗಂಧರಾಜ ಸು ಮತಿಗಳಂ ನೋಡಿ, ಬೇಗದಿಂದೆದ್ದು ಪ್ರಣಾಮವಂ ಮಾಡುವೆನೆಂಬಲಿ ಷ್ಟರೊಳ್ ರಾಜಾಜ್ಞೆಯಿಂದ ಸುಮತಿಯು ಚಿತ್ರವರ್ಮನಂ ಕೈವಿಡಿದು ಕರತಂದು ರಾಜೇಂದ್ರನ ಬದಿಯೊಳ್ ಕುಳ್ಳಿರಿಸಿ, ನಿನ್ನ ವೃತ್ತಾಂತ ವೆಲ್ಲವಂ ತಿಳುಹುವದೆನಲಾಗ ಆ ಚಿತ್ರವರ್ಮನು ಲೋಹಿತಾಕ್ಷನ ಭಯ ದಿಂದ ಒಂದೂ ತೋರದೆ ಸ್ತಬ್ಧನಾಗಿ ಸುಮ್ಮನೆ ಕುಳಿತು, ಸುತ್ತಲೂ ನೋ ಡಿ ಘಾಬರಿ ಬಡುವವಂ ಕಂಡು, ರಾಜೇಂದ್ರನು ನಸುನಗುತ ಸುಮತಿ

ಯುಂ ನೋಡಿ ಸಂಜ್ಞೆಯಂ ಮಾಡಲಾ ಸುಮತಿಯು ಎತ್ತಿ ಚಿತ್ರವರ್ಮನೇ! ಇನ್ನು ನೀನು ಭಯಗೊಳ್ಳುವದಕ್ಕೆ ಕಾರಣವಿಲ್ಲ ನಿನ್ನ ವೈರಿಯಾದ ಲೋಹಿತಾಕ್ಷನೆಂಬ ರಾಕ್ಷಸನು ನಮ್ಮ ಮಹಾರಾಜೇಂದ್ರನಿಂದ ಸಂಹೃತನಾದನು. ನೀನು ಭಯವಂ ಬಿಟ್ಟು, ಬುದ್ಧಿಯಂ ಸ್ವಾಧೀನವನ್ನೈದಿಕೊಂಡು, ಸಂತೋಷದಿಂ ನಮ್ಮ ರಾಜೇಂದ್ರನೊಡನೆ ನಿನ್ನ ವೃತ್ತಾಂತವಂ ಬಿನ್ನವಿಸುವುದೆನಲಾಗ ಚಿತ್ರವರ್ಮನು ಪಂಚ ಪ್ರಾಣಂಗಳು ಹೊಸದಾಗಿ ಬಂದಂತೆಯು, ದರಿದ್ರನಿಗೆ ನವನಿಧಿಗಳು ಸಿಕ್ಕಿದಂತೆಯು, ಕುರುಡನಿಗೆ ಕಣ್ಣು ಬಂದಂತೆಯು ತಿಳಿದು ಸಂತೋಷವೆಂಬ ಸಮುದ್ರದ ಪಾರವಂ ಕಾಣದೆ ಎದ್ದು ನಿಂದು, ಕೈಗಳಂ ಮುಗಿದು ಎತ್ತಿ ಮಹಾ ಮಹಿಮನಾದ ಮಹೀವಲ್ಲಭನೆ! ನಿನ್ನ ಸಾಹಸವಂ, ಸೌಂದರ್ಯವಂ, ಕೌಶಲ್ಯವಂ, ಸೌಶೀಲ್ಯವಂ, ಮಹಿಮೆಯುಂ ಕಾರುಣ್ಯವಂ, ಸೌರಭ್ಯವಂ, ಗಾಂಭೀರ್ಯವಂ, ಬುದ್ಧಿ ವೃತ್ತಿಯಂ, ಉಚಿತಜ್ಞತ್ವವಂ, ಉದಾರತ್ವವಂ, ಸಹಾ ವರ್ಣಿಸುವದಕ್ಕೆ ಸಾವಿರ ಫಣಂಗಳುಳ್ಳ ಮಹಾಶೇಷನೂ ಕೂಡ ಸಮರ್ಥನಲ್ಲ. ನಿನ್ನ ಗುಣಂಗಳೆಲ್ಲವಂ ಎಣಿಸುವದಕ್ಕೆ ಸಕಲ ವ್ಯಾಕರಣ ಪಂಡಿತನಾದ ಸೂರ್ಯನೂ ಕೂಡ ಶಕ್ತನಲ್ಲ, ನಿನ್ನ ಅಮಲವ ಸೌಂದರ್ಯವಂ ನೋಡಲೋಸುಗ ಸಹಸ್ರಾಕ್ಷನಾದ ಇಂದ್ರನು ಮತ್ತು ಸಾವಿರ ನೇತ್ರಂಗಳಂ ಅಪೇಕ್ಷಿಸುವನು. ಇಂತಿರುವಲ್ಲಿ ನಾನೆಷ್ಟು ಬಣ್ಣಿಸುವೆನು, ನೀನು ಮಾಡಿದ ನಿರ್ವ್ಯಾಜೋಪಕಾರಕ್ಕೆ ಪ್ರತ್ಯುಪಕಾರವಂ ಮಾಡಲೋಸುಗ ಎಷ್ಟು ಸಹಸ್ರ ಜನ್ಮಗಳಂ ಎತ್ತಿ ಪ್ರತ್ಯುಪಕಾರವಂ ಮಾಡಿದರೂ ತೀರಲಾರದು, ಈ ಲೋಹಿತಾಕ್ಷನೆಂಬ ದಾನವನು ಇಂದ್ರ ಮೊದಲಾದ ಅಷ್ಟದಿಕ್ಪಾಲಕರಿಂದಲೂ, ಮತ್ತು ಬಲಶಾಲಿಗಳಾದ ದೇವಾಸುರರಿಂದಲೂ ಜೈಸುವದಕ್ಕೆ ಶಕ್ಯನಲ್ಲ, ಆದರೂ ವಿಲಾಸದಿಂದಲೇ ಇವನ ಸಂಹಾರವಂ ಮಾಡಿ ಭೂ ಭಾರವಂ ಪರಿಹರಿಸಿದ ಮಹಾನುಭಾವನಾದ ನಿನಗೆ ಲೋಕಂಗಳೊಳ್ ಅಶಕ್ಯಗಳಾದ ಕಾರ್ಯಂಗಳೇ ಇಲ್ಲವೆಂದು ನುಡಿದು, ಮತ್ತು ತನ್ನ ವೃತ್ತಾಂತವೆಲ್ಲವಂ ತಿಳುಹಿ, ಕಂಬನಿ ದುಂಬಿ ಮುಗಳಂ ನೆನೆಯುತ್ತಲಿರಲಾಗ, ಸುಗಂಧರಾಜೇಂದ್ರನು ಬಂದನೂ ತಿಳಿಯದವನಂತೆ ಅವನಂ ಕುರಿತು ಇಂತು ವ್ಯಸನ ಪಡುವದಕ್ಕೆ ನಿಮಿತ್ತವೇನೆಂದು,

ಪ್ರಶ್ನೆಯಂ ಮಾಡಲು, ಆಗ ಚಿತ್ರವರ್ಮನು ರಾಜೇಂದ್ರನಂ ಕುರಿತು ಎಲೈ ಕರುಣಾಸಮುದ್ರನಾದ ಧರಣೀವಲ್ಲಭನೆ! ಈ ದ್ವೀಪದೋಳ್ ರಮ್ಯಕವೆಂಬ ಒಂದು ಕುಲಾಚಲವಿರುವದು, ಅದರ ಉಪರಿಭಾಗದೋಳ್ ಕಾಂತಿಮತೀ ಎಂಬ ನಗರವಿರುವದು, ಅದರೊಳ್ ಗಂಧರ್ವಾಧಿಪತ್ಯವ ಗೈಯುತ ಸಮಸ್ತ ಬಂಧುಗಳೊಡಗೂಡಿ ನಾನು ಸುಖದಿಂದಿರುವ ಕಾಲದೋಳ್ ನಸ್ನ ಪುತ್ರಿಯಾದ ಮಂದಾರಮಾಲೆಯು ಒಬ್ಬರೂ ಅರಿಯದಂತೆ ಎಲ್ಲಿಯೋ ಮಾಯವಾಗಿ ಪೋದುದರಿಂದ, ಅತ್ಯಂತ ದುಃಖತರವಾದ ಚಿಂತೆಯಂ ಪಡುತಲಿರುವ ನನ್ನ ಪತ್ನಿಯಾದ ಮಂಜೂಷೆಯಂ ಕುರಿತು ಎಲೈ ಪ್ರಾಣಪ್ರಿಯಳೆ! ನೀನು ಇಂತು ವ್ಯಸನಪಡಲ್ಯಾಕೆ? ಪ್ರೇಮ ಪುತ್ರಿಯಾದ ಮಂದಾರಮಾಲೆಯುಂ ಎಲ್ಲಿ ಪೋಗಿದ್ದರೂ ಅವಳಂ ದಿನ ಮೂರರಲ್ಲಿ ಕರತರುವೆನೆಂದು ಪೇಳಿ, ಸಮಾಧಾನಗೊಳಿಸಿ,ಅಲ್ಲಿಂದ ತೆರಳಿ ಅಲ್ಲಲ್ಲಿ ಅರಸಿ ನೋಡುತ, ಲೋಹಿತಾಕ್ಷನೆಂಬ ಈ ದಾನವನ ಪುರವಂ ಕುರಿತು ಬರಲಾಗ, ಈ ದುರಾತ್ಮನಾದ ರಾಕ್ಷಸನು ನನ್ನಂ ಮಹಾ ಪಾಶಂಗಳಿಂ ಬಿಗಿದು ಸೆರೆಯೊಳ್ಳಿಟ್ಟನು ಅತ್ತಲಾ ನನ್ನ ಪುರದೋಳ್ ಪ್ರಿಯಳಾದ ಮಂಜೂಷೆ ಮೊದಲಾದವರ ಪಾಡೇನಾಯಿತೊ? ಎಂದು ಒಂದು ಕಡೆಯೊಳಾಚಿಂತೆಯು ಶರೀರವಂ ದಹಿಸುತಲಿರುವದು, ಮತ್ತೊಂದು ಕಡೆಯೋಳ್ ಮಂದಾರಮಾಲೆಯು ಯಾರ ವಶವಾದಳೊ? ಎಂಬ ಆಲೋಚನೆಯು ನನ್ನ ಕಾಯುವು ಕಂಪಿಸುವದು, ಇದನೆಲ್ಲವಂ ಪರಿಹರಿಸಿ ನಿರ್ವ್ಯಾಜ ಕರುಣಾಶಾಲಿಯಾದ ನೀನು ನನ್ನಂ ಸಲಹಬೇಕೆಂದು ಸಾಷ್ಟಾಂಗ ಪ್ರಣಾಮವಗೈಯಲಾಗ, ಸುಗಂಧರಾಜೇಂದ್ರನು ಆ ಚಿತ್ರವರ್ಮನ ಮಾತಂ ಕೇಳಿ ದಯೆಯಿಂದ ಅವನಂ ಕುರಿತು ನಿನ್ನ ಮಗಳಾದ ಮಂದಾರಮಾಲೆಯು ಮೂರು ಲೋಕದೋಳ್ ಎಲ್ಲಿದ್ದರೂ ತಂದು ಕೊಡುವೆನು. ಅವಳ ಯೋಚನೆಯಂ ಮಾಡಬ್ಯಾಡವೆಂದು ನುಡಿದು, ಲೋಹಿತಾಕ್ಷನೇನಾದರೂ ಅಪಹರಿಸಿ ರಹಸ್ಯವಾಗಿ ಇಟ್ಟಿರುವನೊ? ನೋಡಿರೆಂದು ಯಕ್ಷ ಸುಮತಿ, ಚಿತ್ರವರ್ಮರಿಗೆ ಕಟ್ಟು ಮಾಡಲೂ, ಬಳಿಕ ಯಕ್ಷ ಸುಮತಿ ಚಿತ್ರವರ್ಮರು ರಾಯನ ಆಜ್ಞಾನುಸಾರವಾಗಿ ಮಂದಾರಮಾಲೆಯಂ ಹುಡುಕಲೋಸುಗ ಅಲ್ಲಲ್ಲಿ ರಹಸ್ಯವಾಗಿರುವ ಮಂದಿರಂಗಳೆಲ್ಲವಂ ಹುಡಿ

ಕೆ ಅವಳಂ ಎಲ್ಲಿಯೂ ಕಾಣದೇ, ಹಿಂತಿರಿಗಿ ಬಂದು ರಾಜೇಂದ್ರಂಗೆ ವಿಜ್ಞಾಪನೆಯಂಗೈಯಲು; ಅದಂ ಕೇಳಿ ಸುಗಂಧಮಹಾರಾಜೇಂದ್ರನು ಯಕ್ಷ ಚಿತ್ರವರ್ಮರೀರ್ವರಂ ಕರೆದು ನೀವು ಮೊದಲು ಕಾಂತಿಮತೀಪುರವನೈದಿ, ಅಲ್ಲಿರುವ ಮಂಜೂಷೆ ಮೊದಲಾದವರಂ ಸಂತೈಸಿ, ಮಂದಾರಮಾಲಿಕೆಯು ಎಲ್ಲಿರುವಳೋ? ಅರಸಿ ನೋಡಿ ಬೇಗ ಬರುವದೆಂದು ಅಜ್ಞಾಯನ್ನಿತ್ತು ಕಳುಹಿ, ಬಳಿಕ ಸುಮತಿಯೊಡಗೂಡಿ ಪಾರಿಜಾತ ತರುವಿರುವ ಉಪವನವಂ ಪೊಕ್ಕು, ಗಗನ ಮಧ್ಯದಲ್ಲಿ ಪೊಳೆಯುವ ಪೂರ್ಣಚಂದ್ರನಂತೆಯು, ದೇವಸಮೂಹದೊಳ್ ಶೋಭಿಸುವ ಪರಶಿವನಂತೆಯು, ಪರಿವಾರದಿಂದೊಡಗೂಡಿ ಬರುವ ಸರಸ್ವತಿಯಂತೆಯು, ಉಪ ಪರ್ವತಗಳಿಂದ ಒಪ್ಪಿದ ಹಿಮವಂತನಂತೆಯೂ, ಶೋಭಿಸುವ ಪಾರಿಜಾತ ತರುವಂ ನೋಡಿ, ಸಂತೋಷದಿಂ ಸುಮತಿಯಂ ಕುರಿತು ಮಾತನಾಡುತ್ತ, ಮೆಲ್ಲನೆ ಬರುತ ಕಲ್ಪವೃಕ್ಷದ ಸಮೀಪದಲ್ಲಿರುವ ಮಣಿಮಯವಾದ ಜಗತಿಯಂ ಕಂಡು, ಬಳಿಕ ಪಾರಿಜಾತ ವೃಕ್ಷವಂ ನೋಡಿ ಸಂತೋಷಸಮುದ್ರದ ಪಾರವಂ ಕಾಣದೆ, ಭಾರಿಭಾರಿಗೂ ನಮಸ್ಕಾರವಗೈದು ಈರ್ವರೂ ಆ ಮಣಿಮಯ ಜಗತಿಯೊಳ್ ಸುಖದಿಂ ಕುಳಿತಿರ್ದರೆಂಬಲ್ಲಿಗೆ,

ಗದ್ಯ—ಕುಂಡಲಿಶಯ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖನಿಖಿಲ ಸುರವರ ಪರಿಭವ ಪರಿಣತ ಪ್ರಚಂಡ ಬಲಚಂಡಮುಂಡ ಖಂಡನ ನಿಪುಣ ಕೋದಂಡ ಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ನರಸಕವಿತಾನಿಸ್ಸಹಾಯ ನಿರ್ಮಾಣ ಧೌರೇಯಘಟಿಕಾ ಶತಗ್ರಂಥ ದಿನ ದಿನ ಪ್ರಬಂಧ ನಿಬಂಧನ ಧುರಂಧರ ತ್ರಿಭುವನಪವಿತ್ರಾತ್ರೇಯಸಗೋತ್ರಾಶ್ವಲಾಯನ ಸೂತ್ರ ಚಾಮರಾಜ ಮಹಾರಾಜ ಪುತ್ರ ನರಪತಿ ಬಿರುದ ಮಹಿಶೂರ ಪುರವರಾಧೀಶ ಶ್ರೀ ಕೃಷ್ಣರಾಜವಡಯರವರಿಂದ ರಸಿಕಜನಾನಂದ ಕರಮಾಗಿ ವಿರಚಿತಮಾದ ಸೌಗಂಧಿಕಾ ಪರಿಣಯವೆಂಬ ಈ ನವೀನ ಕೃತಿಯೊಳ್ ಸುಗಂಧರಾಜನು ಶಾಕದ್ವೀಪವಂ ಪ್ರವೇಶಿಸಿ ಲೋಹಿತಾಕ್ಷನಂ ಸಂಹರಿಸಿ, ಕಲ್ಪವೃಕ್ಷವಂ ಕಂಡ

ನೆಂಬ ವೃತ್ತಾಂತ ಮೊದಲಾದ್ದಂ ಬಣ್ಣಿಸಿರುವ ಇಪ್ಪತ್ತಮೂರನೆಯ ಆಶ್ವಾಸನಿರೂಪಣಕ್ಕೆ ಮಂಗಳಮಹಾ

ಇಪ್ಪತ್ತಮೂರನೆಯ ಆಶ್ವಾಸ ಸಂಪೂರ್ಣವು.

ಶ್ರೀರಸ್ತು.

ಇಪ್ಪತ್ತನಾಲ್ಕನೇಯ ಆಶ್ವಾಸ ಪ್ರಾರಂಭಃ.

ಶ್ರೀಚಾಮುಂಡಿಕಾಂಬಾಯೈನಮಃ.

ಅನಂತರದಲ್ಲಿ ಸುಗಂಧಮಹಾರಾಜೇಂದ್ರನು ಸುಮತಿಯೊಡಗೂಡಿ ಸಂತೋಷಭರಿತನಾಗಿ, ಪಾರಿಜಾತ ತರುವಿನ ಕೆಳಗಣ ಮಣಿಮಯ ಜಗತಿಯೊಳ್ ಕುಳಿತು,ಆ ಮಂದಾರವೃಕ್ಷದ ಪ್ರಭಾವದಿಂದ ಅದೊಂದು ಪರಿಯಾದ ಹರ್ಷ ಉಂಟಾಗಿ, ಆ ಪಾರಿಜಾತ ವೃಕ್ಷದ ಪುಷ್ಪಂಗಳ ಪರಿಮಳಂಗಳಂ ಭಾರಿಭಾರಿಗೂ ಆಘ್ರಾಣವಗೈಯುತ್ತ, ಪರಿಪರಿಯಾಗಿ ಅದರ ಪ್ರಭಾವವಂ ಪೊಗಳುತ್ತ, ಈಗ ಭೂಮಿಗೆ ಗಂಧವತೀ ಎಂಬ ಹೆಸರುಂಟಾದುದು ಸಾರ್ಥಕವಾಯಿತೆಂದು ನುಡಿಯುತ್ತ, ಸಂಭ್ರಮದಿಂ ಕೂಡಿರಲು; ಆ ಸಮಯದೊಳ್ ಪಾರಿಜಾತ ವೃಕ್ಷವು ದೇವತಾತ್ಮಕವಾದುದರಿಂದ ತನ್ನ ನೆಲಳೊಳ್ ಕುಳಿತಿರ್ಪ ಸುಗಂಧ ರಾಜೇಂದ್ರನಂ ಕಂಡು ದೇವೇಂದ್ರನಂ ನೋಡಿದಂತೆ ಹರ್ಷಯುಕ್ತವಾಗಿ ತನ್ನಲ್ಲಿರುವ ಪುಷ್ಪಗಳಿಗಿಂತಲೂ, ಅಧಿಕವಾದ ಸುಗಂಧದಿಂ ಬೆರದಿರುವ ಸುಗಂಧಮಹಾರಾಜೇಂದ್ರನ ಶರೀರವಂ ನೋಡಿ,ಇವನು ಮಾನವನಲ್ಲವೆಂದರಿತು ಸ್ವಲ್ಪಕಾಲ ಆಲೋಚನೆಯಗೈದು, ಬಳಿಕ ಅಲ್ಲಿ ನಡೆದ ವೃತ್ತಾಂತವಂ, ಮಹಾರಾಜನ ಪೂರ್ವ ವೃತ್ತಾಂತವಂ ಕೂಡ ವಿಸ್ತಾರವಾಗಿ ತಿಳಿದು, ಈ ಮಹಾ

ಮತ್ತು ಪಾರಿಜಾತ ತರುವಂ ನೋಡಿ ನಲಿಯುತಲಿರುವ ಸಮಯದೋಳ್ ವಸಂತೋದಯವಾದುದು,ಅದೆಂತೆಂದರೆ—ಮನ್ಮಥನು ತನ್ನ ಯುವರಾಜನಾದ ವಸಂತನಂ ಕರದು ಮಂದಾರಮಾಲೆ ಎನುವ ಗಂಧರ್ವ ಸುಂದರಿಯೊಡಗೂಡಿ ಸುಗಂಧರಾಜೇಂದ್ರನು ವನವಿಹಾರವಂ ಮಾಡುವನಾದ ಕಾರಣ ಆವನ ಮನೋನುಗುಣ್ಯವಾಗಿ ಪರಿಪರಿಯಾದ ಫಲಪುಷ್ಪಂಗಳಿಂದ ಸಂತೋಷಗೊಳಿಸುತ, ಹತ್ತು, ಇಪ್ಪತ್ತು, ಮುವ್ವತ್ತು ದಿನದವರಿಗೂ, ಆ ಮಹಾರಾಜನ ಸಮಿಾಪದಲ್ಲಿಯೇ ಕಾದಿದ್ದು, ಬಳಿಕ ಹಿಂತಿರಿಗಿ ಬರುವದೆಂದು ಕಟ್ಟು ಮಾಡಿ, ತನ್ನ ಪರಿವಾರವನೆಲ್ಲವಂ ಕೊಟ್ಟು ಕಳುಹಲಾ ವಸಂತನುಸುಗಂಧರಾಜೇಂದ್ರನೆಲ್ಲಿರುವನೆಂದು ಅರಸಿ,ನೋಡಿಕಾಣದೆ ಕಳವಳಗೊಂಡಿರಲಾಗ, ಮನ್ಮಥನು ತನ್ನ ಯುವರಾಜನಾದ ವಸಂತನಿಗೆ ಸುಗಂಧರಾಜನಿಂದುಂಟಾದ ಅವಮಾನವಂ ನೋಡಿ, ಸಹಿಸಲಾರದೆ ಶರೀರವಂ ತೊರದು,ಸೂಕ್ಷ್ಮರೂಪನಾಗಿ ಯಾರೂ ಅರಿಯದಂತೆ, ಯೌವನವೆನುವ ಸಹನವಂ ಪೊಕ್ಕು, ತಾನಿರುವವಕ್ಕೆ ರಹಸ್ಯವಾಗಿರುವ ಸ್ಥಳಗಳಂ ಹುಡುಕುತ, ಅಲ್ಲಲ್ಲಿ ಸ್ವಲ್ಪ ಹೊತ್ತು ನಿಂತು ನೋಡುತ, ಬಂದು ತನಗೆ ಶತ್ರುವಾದ ಸುಗಂಧರಾಜನಂ ನೋಡಿ, ಇವನ ಮನವಂ ಮನೆಯಂ ಮಾಡಿ ಕಾದಿರುತ, ಸಮಯವಂ ನೋಡಿ ಮೋಸವಂ ಮಾಡುವೆನೆಂದು ಅಡಗಿಕೊಂಡಿರುತ್ತಿರಲು, ಇವನ ಸತಿಯಾದ ರತಿಯು ತನ್ನ ಪತಿಯಂ ಕಾಣದೆ ಕಳವಳಗೊಂಡು, ಪರವಶಳಾಗಿ ಚಿಂತಿಸುತ, ಬಳಿಕ ತನ್ನ ಪತಿಯ ಮಂತ್ರಿಯಾದ ವಸಂತನಂ ಕರದು ನಿಮ್ಮರಸು ಎಲ್ಲಿರುವನೊ? ಅರಸಿ ನೋಡಿ ಕರತರುವದೆಂದು ದೈನ್ಯದಿಂ ಹೇಳಲಾ ವಸಂತನು ಅಲ್ಲಿ ಹುಡಿಕಿ ನೋಡಿ, ಎಲ್ಲಿಯೂ ಕಾಣದೆ ಭೂಲೋಕವನ್ನೈದಿ, ಅಲ್ಲಲ್ಲಿರುವ ವನಂಗಳಂ ಪೊಕ್ಕು ಹುಡುಕುತ ಬರುವನೊ? ಎಂಬಂತೆಯು, ಹೇಮಂತ, ಶಿಶಿರ,ರೆಂಬ ದುಷ್ಟರಾದ ವನಪಾಲಕರ ಉರವಣೆಗೆ ಬ್ಯಾಸರಗೊಂಡಿರುವ ವನದೇವತೆಗಳಂ ಸಂತೈಸಲೋಸುಗ ಬೇಕಾದ ವಸ್ತುಗಳಂ ತೆಗಸಿಕೊಂಡು ಬರುವನೊ? ಎಂಬಂತೆಯು, ಶಿಶಿರ ಮೊದಲಾದ ಋತುಗಳೆಂಬ ಕಿರಾತರಿಂದ ಭಯಗೊಂಡು ಎಲ್ಲೆಲ್ಲಿಯೂ ಕಾಣದಂತೆ ಅಡಗಿಕೊಂಡು ಕಾಲವಂ ಕಳೆಯುತ,ಶಿಶಿರ ಋತುವು ಪೋಗಲೆಂದು ಮೌನವ್ರತವಂ ತಾಳಿ ತಪವಂ

ಗೈವ ಕೋಕಿಲ ಸ್ತ್ರೀರುಗಳ ಮೌನವ್ರತೋದ್ಯಾಪನೆಯುಂ ಮಾಡಿಸಲೋಸುಗ ಬರುವ ಪುರೋಹಿತನೋ? ಎಂಬಂತೆಯೂ, ಯೌವನವೆಂಬ ವನದೊಳ್ ಸಂಚರಿಸುತಲಿರುವ ವಿರಹಿಗಳೆಂಬ ಮೃಗ ಸಮೂಹಂಗಳಂ ಬ್ಯಾಟೆಯಾಡಲೋಸುಗ ಮನಸು ಮಾಡಿದ ಕಾಮನು ಆ ಮೃಗಸಮೂಹಂಗಳು ಚಲಿಸಿ ಪೋಗದಂತೆ ಕಾದಿರುವದೆಂದು ಕಟ್ಟು ಮಾಡಿ ಕಳುಹಿದ ಮಂತ್ರಿಯೋ? ಎಂಬಂತೆಯೂ, ಮಂದ ಮಾರುತನೆಂಬ ಮಿತ್ರನೊಡಗೂಡಿ ಅಲ್ಲಲ್ಲಿ ಸಂಚರಿಸುತಲಿರುವ ಸಮಯದೊಳ್, ಪ್ರಿಯಾಲ, ರಸಾಲ, ವಕುಳ, ತಿಲಕ, ಕುರವಕ, ಚಂಪಕ ಮೊದಲಾದ ವೃಕ್ಷಂಗಳು ಮಾಧವೀ, ಮಲ್ಲಿಗೆ ಮೊದಲಾದ ಬಳ್ಳಿಗಳಲ್ಲಿ ವಸಂತನು ಬರುವನೆಂದು ಪುಟ್ಟಿದ ಅನುರಾಗ ಹೆಚ್ಚಿ ಮೇಲುಕ್ಕಿ ಬರುವವೊ? ಎಂಬಂತೆಯೂ, ಮಾರುತನೆಂಬ ವಿಟಪುರುಷನ ಶರೀರ ಸ್ಪರ್ಶದಿಂದ ವನಪಂಕ್ತಿ ಎಂಬ ಜಾರತರುಣಿಯ ಶರೀರದೊಳಂಕುರಿಸಿದ ರೋಮಾಂಚಗಳೋ? ಎಂಬಂತೆಯೂ, ವಿರಹಿಗಳಾದ ಸ್ತ್ರೀ ಪುರುಷರ ಮೇಲೆ ಕೋಪಿಸಿಕೊಂಡಿರುವ ಮಾರನ ಕಣ್ಣುಗಳಿಂದ ಉದುರಿದ ಕಿಡಿಗಳೋ? ಎಂಬಂತೆಯೂ, ಮತ್ತು ಸುಗಂಧರಾಜೇಂದ್ರನ ಪ್ರತಾಪದಿಂದ ಪರಾಜಿತರಾಗಿ ವನವಂ ಪೊಕ್ಕಿರುವ ಪತಿಗಳಂ ಅರಸುತಲಿರುವ ಸಾಮಂತರಾಜರ ರಾಣಿಯರಂ ನೋಡಲೋಸುಗ ಸುಗಂಧರಾಜೇಂದ್ರನ ಪ್ರತಾಪಾಗ್ನಿಯು ಬಹುರೂಪುಗೊಂಡು ವೃಕ್ಷಂಗಳನ್ನೇರಿ ನೋಡುವದೋ? ಎಂಬಂತೆಯೂ, ವನಪ್ರವೇಶವಗೈವ ವಸಂತನೆಂಬ ಮಹಾರಾಜನಂ ಕಂಡು ವನದೇವತೆಗಳೆಲ್ಲ ಕುರವಿಂದ ರತ್ನಂಗಳಿಂದ ನಿವಾಳಿಯಂ ತೆಗದು ಎರಚಿದರೋ? ಎಂಬಂತೆಯೂ, ಮನ್ಮಥನ ಬಾಣಾಗ್ನಿ ಜ್ವಾಲೆಗಳ ಕೊನೆಗಳೋ? ಎಂಬಂತೆಯೂ, ವನಲಕ್ಷ್ಮಿಯೆಂಬ ರಮಣಿಯು ಪದ್ಮರಾಗ ರತ್ನಮಯವಾದ ಆಭರಣಂಗಳಿಂದ ಅಲಂಕಾರವಂ ಮಾಡಿಕೊಂಡಿರುವಳೋ? ಎಂಬಂತೆಯೂ, ವನಂಗಳೊಳ್ ಬಣಗಿ ಉಮರುತಲಿರುವ ಎಲೆಗಳಿಂದೊಡಗೂಡಿರುವ ಮರಂಗಳಂ ನೋಡಿ ದಯೆಗೂಡಿದ ವಸಂತನೆಂಬ ಮಹಾ ಪುರುಷನು ನೀವು ಬೆಳದು ಬಾಳಿರೆಂದು ಆಶೀರ್ವಾದವಗೈದು ತಳಿದಿರುವ ಕುಂಕುಮಾಕ್ಷತೆಗಳೋ? ಎಂಬಂತೆಯೂ, ತೋರುತಲಿರುವ ಚಿಗುರುಗಳ ಸಾಲುಗಳು ವೃಕ್ಷಲತೆಗಳಲ್ಲಿ ಸೂಜೆಯಂ

ಕೂಡೆ ಊರುವದಕ್ಕೆ ಅವಕಾಶವಿಲ್ಲದೆ ಅಂಕುರಿಸಿ ಶೋಭಿಸುತ ಕವಲೊಡೆದು ಕಿರಿಪಸುರುಗಳಾಗಿ ವನದೇವತೆಗಳ ಹಣೆಯೊಳಿರುವ ಕೆಂಪುರತ್ನಗಳ ತಿಲಕಗಳೋ? ಎಂಬಂತೆಯೂ, ಮಾರನಶರಗ ಅಲಗುಗಳೋ? ಎಂಬತೆಯೂ,ಲತೆಗಳೆಂಬ ನಾರಿಯರ ಹಣೆಯೊಳಿರುವ ಮುತ್ತಿನ ಬಟ್ಟಿನ ಕೆಂಪುರತ್ನದ ಲೋಲಕಗಳೋ? ಎಂಬಂತೆಯು, ತೋರುತ ಇಮ್ಮಡಿಯಾಗಿ ಕೆಂಪೇರಿ ಗುಂಪುಗುಂಪಾಗಿ ವೃಕ್ಷಂಗಳೇ ಕಾಣದಂತೆ ವನಂಗಳೆಲ್ಲ ಚಿಗುರುಗಳ ಮಯವಾಗಿರಲು,ವಸಾರಸು ದಿಗ್ವಿಜಯಾರ್ಥವಾಗಿತೆರಳಿ ಬರುವನೆಂದರಿತು ವನದೇವತೆಗಳೆಲ್ಲ ಒಟ್ಟುಗೂಡಿ ಮಾಡಿಸಿರುವ ಪದ್ಮರಾಗರತ್ನಮಯಂಗಳಾದ ಪಟಮಂಪಿರಂಗಳೋ? ಎಂಬಂತೆಯೂ. ವಸಂತನೆಂಬ ಮಹಾರಾಜನು ವಿಚಾರಣೆಯಗ್ಗೈದ ಚಿತ್ರದ ಚಾವಡಿಗಳೋ?ಎಂಬಂತೆಯು, ಚಿಗುರುಗಳ ಕೆಂಪಾದ ಕಾಂತಿಯುದಿಕ್ಕು ದಿಕ್ಕುಗಳನೆಲ್ಲವ್ಯಾಪಿಸುತ್ತಿರಲು;ವಸಂತ ಮಹೀಪಾಲಕನು ದಿಗಂಗನೆಯರಿಗೆ ಉಡುಗೆರೆಗಳಾಗಿ ಕೊಟ್ಟ ಕೆಂಪು ಚಂದ್ರಕಳೆಯದುಕೂಲಂಗಳೋ?ಎಂಬಂತೆಯು,ಯಾವಾಗಲೂ ಅರುಣೋದಯವಾಗಿರುವಂತೆಯು ಕೆಂಪಾದಕಾಂತಿಯಂ ಉಂಟುಮಾಡುತಲಿರುವ ಅರುಣೋದಯ ಸಮಯದೋಳ್ ಇದೇನದ್ಭುತವೆಂದು ಜೊತೆಯಲ್ಲಿರುವ ಕ್ಷಿಪಗಳಂ ಕೇಳಲೋಸುಗವೋ?ಎಂಬಂತೆಯು,ವಸಂತನೆಂಬಮಹಾರಾಜನಿಗೆ ಶಿಶಿರ ಋತುವೆಂಬುವನ ದುರಾಚಾರಂಗಳಂ ಪೇಳಲೋಸುಗವೋ?ಎಂಬಂತೆಯು,ಮೃದು ಮಧುರವಾದ ಆಹಾರಂಗಳಂ ಕಂಡು ತಮ್ಮ ತಮ್ಮ ಗುಂಪುಗಳಂ ಕರೆಯಲೋಸುಗವೋ? ಎಂಬಂತೆಯು, ಮತ್ತೂ ವಸಂತೋದಯವಾದುದು ವನವಿಹಾರಾರ್ಥವಾಗಿ ಬರುವದೆಂದು ತರುಣ ತರುಣಿಯರಂ ಕರೆಯಲೋಸುಗವೋ? ಎಂಬಂತೆಯು, ಓರೋರ್ವರೇ ಸಂಚರಿಸಬ್ಯಾಡಿರೆಂದು,ವಿರಹಜನಂಗಳಿಗೆ ಹಿತೋಪದೇಶವಂ ಮಾಡಲೋಸುಗವೋ? ಎಂಬಂತೆಯು, ಮನ್ಮಥನ ಭುಜಪ್ರತಾಪ ಬಿರುದುಗಳಂ ಹೊಗಳಲೋಸುಗವೋ? ಎಂಬಂತೆಯು, ಕೋಗಿಲೆಗಳೆಲ್ಲ ಮೌನವಂ ಬಿಟ್ಟು ಮಧುರವಾಗಿ ಕೇಳುವರ ಕಿವಿಗಳಿಗೆ ಇಂಪಾಗುವಂತೆ ಕೂಗುತಲಿರುವ ಸಮಯದೋಳ್ ವಸಂತೋದಯವಾಯಿತೆಂದು ವೃಕ್ಷಲತೆಗಳಲ್ಲಿ ಸಂತೋಷವು ಅಂಕುರಿಸಿ ಬರುವದೋ? ಎಂಬಂತೆಯು, ಸುಗಂಧರಾಜೇಂದ್ರನ

ಕೀರ್ತಿ ಎಂಬ ಬೆಳ್ದಿಂಗಳಿಂದ ಭೂಲೋಕವೆಲ್ಲ ಬಿಳುಪಾಗಿರಲಾಗ ಚಂದ್ರನೇ ಭೂಲೋಕವನ್ನೈದಿರುವನೆಂಬ ಸಂದೇಹದಿಂದ ನೋಡಲೋಸುಗ ಬಂದಿರುವ ನಕ್ಷತ್ರಗಳೋ? ಎಂಬಂತೆಯು, ಸಮುದ್ರರಾಜನು ತನಲ್ಲಿ ಪುಟ್ಟಿದ ಐರಾವತ ಮೊದಲಾದ ವಸ್ತುಗಳು ದಾನವರ ಅಧೀನವಾಗುತ್ತಿರಲು, ಸುಗಂಧರಾಜೇಂದ್ರನು ಆ ದಾನವರನೆಲ್ಲ ಸಂಹರಿಸಿ ಆ ವಸ್ತುಗಳೆಲ್ಲವಂ ತನ್ನ ಸ್ವಾಧೀನವಂ ಕೈಕೊಂಡನೆಂಬ ಸಂತೋಷದಿಂದ ಭೂಮಂಡಲವನೆಲ್ಲ ತನ್ನಲ್ಲಿ ಪುಟ್ಟಿರುವ ಮುತ್ತುಗಳಿಂದ ತುಂಬಿರುವನೋ? ಎಂಬಂತೆಯು, ಮನ್ಮಥನು ತನಗೆ ಜಯಸಮಯ ಒದಗಿತೆಂದು ತಿಳಿದು ಮೆಲ್ಲಮೆಲ್ಲನೆ ತನ್ನ ಬಾಣ ಪರಂಪರೆಗಳಂ ವಿರಹಿಗಳ ಮೇಲೆ ಪ್ರಯೋಗಿಸಲೋಸುಗ ಮೊದಲು ಮಾಡಿದನೋ? ಎಂಬಂತೆಯು, ವನಲಕ್ಷ್ಮಿಯು ದುಂಡಾದ ವಜ್ರಂಗಳಂ ಕೆತ್ತಿದ ಆಭರಣಂಗಳಂ ಧರಿಸಿರುವಳೋ? ಎಂಬಂತೆಯು ವನದೇವತೆಯು ತನ್ನ ಪ್ರಿಯನಾದ ವಸಂತನೊಡನೆ ವಿಹಾರವಂ ಮಾಡುವಾಗ ಶ್ರಮದಿಂ ಪುಟ್ಟಿದ ಕಿರಿ ಬೆಮರುಗಳ ಬಿಂದುಗಳೋ? ಎಂಬಂತೆಯು, ಕಿರಿ ಮೊಗ್ಗೆಗಳು ಅಂಕುರಿಸಿ ಬೆಳೆದು ಬರುವ ಸಮಯದೋಳ್ ಮಲ್ಲಿಗೆ ಮೊದಲಾದ ಬಳ್ಳಿಗಳು ವಸಂತನಿಂದ ಮುಖ ಭಂಗವನ್ನೈದಿರುವ ಜಾಜಿಯು ಬಳ್ಳಿಯಂ ನೋಡಿ ನಗುತ ಹಾಸ್ಯವನ್ನೈದವೋ? ಎಂಬಂತೆಯು, ವಸಂತನೆಂಬ ಕಾಂತನು ಬಂದುದರಿಂದ ಹೃದಯದೋಳ್ ತುಂಬಿ ತುಳುಕಿ ಒಳಗೆ ಅವಕಾಶವಿಲ್ಲದೆ ಹೊರಭಾಗದೋಳ್ ವ್ಯಾಪಿಸಿರುವ ಸಂತೋಷವೋ? ಎಂಬಂತೆಯು, ಸುಗಂಧರಾಜೇಂದ್ರನ ಮುಖಕಾಂತಿಯಿಂದ ಪರಾಜಿತನಾದ ಚಂದ್ರನು ಬಹು ರೂಪುಗೊಂಡು ವನವಂ ಪೊಕ್ಕು ವೃಕ್ಷ ಲತೆಗಳೋಳ್ ವಾಸವಂ ಮಾಡಿಕೊಂಡಿರುವನೋ? ಎಂಬಂತೆಯು, ವಸಂತನೆಂಬ ಹೂವಾಡಿಗನು ಪರಿಪರಿಯಾದ ಪುಷ್ಪಂಗಳಂ ತಂದು ಸಾಲು ಸಾಲಾಗಿ ಅಂಗಡಿಗಳನ್ನಿಟ್ಟಿರುವನೋ? ಯಂಬಂತೆಯು, ವನಲಕ್ಷ್ಮಿಯು ಮನ್ಮಥನ ಯುವರಾಜನಾದ ವಸಂತನಂ ವರಿಸಲೋಸುಗ ಲತೆಗಳೆಂಬ ಬಾಹುಗಳಿಂದ ಹಿಡಿದಿರುವ ಪ್ರೇಮಮಾಲೆಯೋ? ಎಂತೆಯು,ವನವೆಲ್ಲ ಪ್ರೇಮಮಯವಾಗಲಾಗ ಲತೆಗಳೆಂಬ ಜಾತಿ ಸ್ತ್ರೀಗಳು ಬಿಳುಪಾದ ದುಕೂಲಂಗಳಂ, ವಿಚಿತ್ರವಸ್ತ್ರಂಗಳಂ

ಕೂಡ ಉಟ್ಟಿರುವರೊ? ಎಂಬಂತೆಯೂ, ತೋರುತಲಿರುವ ಸಮಯ ದೋಳ್ ಎಳೆ ಗಿಳಿಗಳ ಬಳಗದ ಪೂರ್ವ ಸುಕೃತಂಗಳೆಲ್ಲ ಫಲಿಸಿದವೊ? ಎಂಬಂತೆಯು, ವನಲಕ್ಷ್ಮಿಯ ಯೌವನೋದಯ ಸಮಯದೋಳ್ ಅಂಕು ರಿಸುವ ಕುಚಾಗ್ರಗಳೊ? ಎಂಬಂತೆಯು, ವನವೆಂಬ ಮಹಾಯೋಗಿಯು ಕಂಠದೋಳ್ಧರಿಸಿರುವ ರುದ್ರಾಕ್ಷಗಳೊ? ಎಂಬಂತೆಯು, ಮನ್ಮಥಮ ಹಾರಾಜನು ಬರುವನೆಂದು ವಸಂತನು ವನವೆಂಬಹಜಾರದಲ್ಲಿ ಫಲವಸ್ತು ಗಳಂ ಕಟ್ಟಿರುವನೊ? ಎಂಬಂತೆಯು, ಮಂದಮಾರುತನೆಂಬ ಕುಮಾ ರರು ಆಡುವ ಗೋಲಿಗಳೊ? ಎಂಬಂತೆಯು, ತೋರುತಲಿರುವ ಫಲಂ ಗಂಳಿದ ವೃಕ್ಷಂಗಳು ತುಂಬುತ್ತಿರುವ ಸಮಯದೋಳ್ ಶಿಶಿರ ಋತು ವೆಂಬ ತರುವು ಕಳದು, ಕೆಂಪಾದ ಚಿಗುರುಗಳ ಕಾಂತಿ ಎಂಬ ಅರುಣೋ ದಯವಾಗಿ ಮಂದಮಾರುತವು ಕೂಡ ಸಂಚರಿಸಿ ವಸಂತೋದಯವೆಂ ಬ ಸೂರ್ಯೋದಯವಾಗಿ ಕೋಗಿಲೆಗಳ ಹೃದಯಗಳೆಂಬ ತಾವರೆಗಳು ಅರಳುತ್ತಿರಲಾ ಸಮಯದೋಳ್ ಕಾಮಿಗಳೆಂಬ ಯೋಗಿಗಳು ಮನ್ಮ ಥಾಗಮಂಗಳಂ ಸಾಂಗಮಾಗಿ ತಿಳಿದು, ಬಾಲ್ಯವೆಂಬ ಮನೆಯಂ ಬಿಟ್ಟು ಯೌವನವೆಂಬ ಮಹಾವನವಂ ಪ್ರೊಕ್ಕು, ಕಾಮಿನೀ ಸಾಯುಜ್ಯವಂ ಪಡೆಯಬೇಕೆಂಬ ಅಭಿಲಾಷೆಯು ಬಲವಾಗಿ, ಮತ್ತೊಂದು ಕಾರ್ಯವೆಂ ಬ ವಿಷಯಂಗಳಲ್ಲಿ ವೈರಾಗ್ಯ ಉಂಟಾಗಿ, ತಮ್ಮಂತೆ ಮನ್ಮಥಶಾಸ್ತ್ರ ಶ್ರವಣ, ಮನನ, ಅನುಭವ ಮೊದಲಾದವುಗಳಲ್ಲಿ ಪರಮ ಭಕ್ತಿಯುಕ್ತ ರಾದ, ಅನವರತ ರತಿಯಾಗಬೇಕೆಂಬ ಅಪೇಕ್ಷೆಯಿಂದಲೇ ರತೀದೇವಿಯ ಸ್ವರೂಪವಂ ತಾಳಿರುವ ತರುಣಿಯರೆಂಬ ಮಹಾಕಾಮಿನಿಯರೊಡಗೂಡಿ ಈರ್ವರು ಸುರತ ರೂಪವಾದ ತಪವಂ ಮಾಡಬೇಕೆಂದು ನಿಶ್ಚೈಸಿ, ಮ ಹಾಮೋಹವೆಂಬ ಸರೋವರದೋಳ್ ಸ್ನಾನವಗೈದುದೇ ಕಾಂತಿ ಎಂಬ ದಿವ್ಯ ವಸ್ತ್ರಂಗಳಂ ಧರಿಸಿ, ದಿವ್ಯ ಚಂದನವೆಂಬ ಭಸ್ಮಲೇಪವಗೈದು, ಮಧುರ ಸಲ್ಲಾಪಂಗಳೆಂಬ ಸ್ತೋತ್ರಂಗಳಂ ಪಠಿಸುತ, ಚುಂಬನವೆಂಬ ಆಚಮನವಗೈದು, ಚತುರಶೀತಿ ಬಂಧಂಗಳೆಂಬ ಪೀಠಂಗಳೋಳ್ಕುಳಿತು ಬಾಹ್ಯಸುರತವೆಂಬ ನ್ಯಾಸವಗೈದು, ಭುಜಾಲಿಂಗನವೆಂಬ ಯೋಗಪಟ್ಟೆ ವಂ ಕಟ್ಟಿ, ಕಾಮನೇ ಸರ್ವೋತ್ತಮನೆಂಬ ಜ್ಞಾನ ಉಂಟಾಗಿ, ಧ್ಯಾನ

ವಗ್ಗೈಯುತ; ಏಕಾಗ್ರಚಿತ್ತರಾಗಿ ಮಣಿತವೆಂಬ ಮಹಾಮಂತ್ರವಂ ಜಪಿಸುತ, ಸುರತವೆಂಬ ತಪವಂ ಸಾಂಗವಾಗಿ ಗೈಯ್ಯುತ್ತ, ಅಧರ ರಸವೆಂಬ ಅಮೃತವಂ ಸವಿದು, ಪರಮಾನಂದದಿಂದಿರುತ್ತಿಲಾ ಸಮಯದೊಳ್ ಎಳೆ ಗಿಳಿಗಳ ಬಳಗವೆಲ್ಲ ಅನವರತ ವೃಕ್ಷಂಗಳೊಳ್ವಾಸವಗೈವುದರಿಂದ ಇದು ಪರರಿಗೆ ತಿಳಿಯಬಾರದೆಂದು ಆ ವೃಕ್ಷಂಗಳೆಲ್ಲ ಒಟ್ಟುಗೂಡಿ ಯೋಚಿಸಿ, ತಮ್ಮಲ್ಲಿ ಪುಟ್ಟಿರುವ ಎಲೆಗಳನೆಲ್ಲ ಗಿಣಿಗಳಂತೆ ಹಸುರಾಗಿ ಮಾಡುತಿಲಿರುವವೊ? ಎಂಬಂತೆ ಮೆಲ್ಲಮೆಲ್ಲನೆ ಎಲೆಗಳೆಲ್ಲ ಎಳೆ ಹಸುರೇರಿ ಬರುತಲಿರಲಾಗ; ಒಂದು ಕಡೆಯೊಳ್ ಪಚ್ಚೆ ಪದ್ಮರಾಗಮಣಿಗಳಿಂದ, ಇನ್ನೊಂದು ಕಡೆಯೊಳ್ ಮುತ್ತು ವಜ್ರಗಳಿಂದ ಅಲಂಕರಿಸಿದಂತೆ ವೃಕ್ಷಂಗಳು, ಲತೆಗಳು ಕೂಡ ವಿರಾಜಿಸುತ್ತಿರಲೂ; ಇಂತುಮಲ್ಲದೆ ಧಳಧಳಿಪ ಎಳೆ ಚಿಗರುಗಳಂ ಸವಿದು ಕಲರವಂಗಳಗೈಯ್ಯುತಲಿರುವ ಕೋಗಿಲೆಗಳ ಮಧುರಸ್ವರವೆಂಬ ನೆವದಿಂದ ವನದೇವತೆಗಳು ಚಿಗರುಗಳೆಂಬ ಬೆರಳುಗಳಿಂದ ಲತೆಗಳೆಂಬ ವೀಣೆಗಳಲ್ಲಿ ಪಂಚಮಸ್ಥಾಯಿಯಾಗಿ ವಾದನೆಯಗೈಯುತಲಿರುವರೊ? ಎಂಬಂತೆ ತೋರುತ್ತಿರಲು, ಗಿಳಿಗಳ ಬಳಗದ ಕೂಗಾಟದಿಂ ಕೋಗಿಲೆಗಳ ಕಲರವಂಗಳಿಂ, ವನವಿಹಾರಾರ್ಥವಾಗಿ ಬಂದಿರುವ ಸುಂದರಿಯರ ಮಧುರವಾದ ಗಾನಂಗಳಿಂ ಪರಿವೃತವಾಗಿ, ವಿರಹಿಜನಂಗಳ ಹೃದಯಂಗಳು ತಲ್ಲಣಗೊಳ್ಳುವಂತೆ ಕಳಕಳಿಸುತಲಿರುವ ವನಪ್ರದೇಶದೊಳ್ ಅರಳಿದ ಮೊಲ್ಲೆ ಮಲ್ಲಿಗೆ ಮೊದಲಾದ ಹುವ್ವುಗಳಲ್ಲಿ ಅಮೃತ ಧಾರೆಯಂತೆ ಸುರಿವ ಮಕರಂದ ರಸಂಗಳಂ ಮನ ಬಂದಂತೆ ಪಾನವಗೈದು ಮದಿಸಿ, ಮತ್ತೊಂದು ಕಡೆಗೆ ಪೋಗಲಾರದೆ ಅಲ್ಲಲ್ಲಿ ಮೈಮರದು ಮಧುಕರನಿಕರಂಗಳು ಸುಮ್ಮನೆ ಕುಳುತಿರಲೂ; ಮನ್ಮಥನು ತನ್ನ ಬಾಣಂಗಳಾದ ಪುಷ್ಪಂಗಳಂ ಮತ್ತೊರ್ವರೂ ಮುಟ್ಟದಂತೆ ಅರಗಿನಿಂದ ಮುದ್ರೆಯಂ ಮಾಡಿರುವರೊ? ಎಂಬಂತೆ ತುಂಬಿಗಳೆನುವ ಚೋರರುಗಳು ಮಕರಂದವೆನುವ ರಸದ್ರವ್ಯವಂ ಚೌರ್ಯವಗೈವುದರಿಂದ ಸೆರೆಯನ್ನಿಟ್ಟಿರುವನೊ? ಎಂಬಂತೆ, ಪುಷ್ಪಂಗಳೆನುವ ಚಂದ್ರಮಂಡಲಂಗಳೊಳಿರುವ ಕಳಂಕಗಳೊ? ಎಂಬಂತೆ, ಬಳ್ಳಿಗಳೆನುವ ಭಾಮೆಯರು ಪಣೆಯೊಳಿಟ್ಟಿರುವ ಕಸ್ತೂರಿಯ ಬಟ್ಟುಗಳೊ? ಎಂಬಂತೆ, ಕಾಮಿಗಳಾದ ಜ

ನರುಗಳಂ ಮೋಹಗೊಳಿಸಲೋಸುಗ ಮನ್ಮಥನು ಮಾಡಿರುವ ಮದ್ದಿನ ಗುಳಿಗೆಗಳೊ? ಎಂಬಂತೆ ತೋರುತಲಿರುವ ತುಂಬೆಗಳು ಶೋಭಿಸುತ್ತಿರಲು; ಇಂತು ಮಲ್ಲದೆ ವನಲಕ್ಷ್ಮಿ ಎನುವ ತರುಣಿಯು ಪುಷ್ಪವತಿಯಾಗಿ ಮನ್ಮಥನ ಕೀರ್ತಿ ಎನುವ ಗಂಗಾ ಪ್ರವಾಹದೋಳ್ ಸ್ನಾನವನ್ನೈದು ಶುಚಿಯಾಗಿ ವಸಂತನೆನುವ ಪುರುಷನೊಡಗೂಡಿ ವಿಹಾರವನ್ನೈದು ಗರ್ಭವಂ ಧರಿಸಿ ಮಂದ ಮಾರುತನೆನುವ ಕುಮಾರನಂ ಪಡೆದು, ಪುಷ್ಪಂಗಳ ಗೊಂಚಲುಗಳೆಂಬ ತೊಟ್ಟಿಲಿನೊಳ್ ಹೂವುಗಳ ಧೂಳುಗಳೆನುವ ಮೃದುವಾದ ಹಾಸಿಗೆಯಂ ಮಾಡಿ ಮಲಗಿಸಿ, ಮಕರಂದವೆನುವ ಹಾಲಿನಿಂ ಹಾಯಿಗೊಳುವಂತೆ ಹೆಣ್ಣು ಕೋಗಿಲೆಗಳ ನಾದವೆಂಬ ಹಾಡುಗಳಂ ಪಾಡುತ್ತ, ಚಿಗುರುಗಳೆಂಬ ಕೈಗಳಿಂದ ತೂಗುವಳೊ? ಎಂಬಂತೆ ತೋರುತಲಿರುವ ಸಮಯದೋಳ್ ಮಂದಮಾರುತನು ಮೆಲ್ಲಮೆಲ್ಲನೆ ಅಡಿಗಳನ್ನಿಟ್ಟು ಅಲ್ಲಲ್ಲಿ ಸಂಚರಿಸುತ್ತಿರಲಾಗ ಮನ್ಮಥನು ಭೂಮಂಡಲವಂ ಜೈಸಲೋಸುಗ ಜಯಪ್ರಯಾಣವಂ ತೆರಳುವೆನೆಂದು ಯೋಚಿಸಿ ತನಗೆ ಅನುರೂಪವಾದ ರಥಂಗಳಂ ತರಿಸುವದೆಂದು ಮಂತ್ರಿಯಾದ ವಸಂತನಿಗೆ ನಿರೂಪಿಸಲಾ ವಸಂತನು ಪುಷ್ಪಂಗಳ ಗೊಂಚಲುಗಳೆಂಬ ಪತಾಕೆಗಳಿಂದಲು, ಚಿಗುರುಗಳ ಗುಂಪುಗಳೆಂಬ ಪದ್ಮರಾಗರತ್ನಂಗಳಿಂದಲು, ಎಲೆಗಳೆಂಬ ಪಚ್ಚೆಗಳಿಂದಲು, ಕೆತ್ತಿ ಮಾಡಿರುವವೊ? ಎಂಬಂತೆ ತೋರುತಲಿರುವ ವೃಕ್ಷಂಗಳೆಂಬ ಮಣಿಮಯವಾದ ರಥಂಗಳಂ ಸಿದ್ಧವಿಟ್ಟು, ತುಂಬಿಗಳ ಝೇಂಕಾರದಿಂ ಕೂಡಿರುವ ಅರೆಬಿರಿದ ಮೊಗ್ಗೆಗಳೆಂಬ ಕಿರು ಘಂಟೆಗಳನ್ನಳವಡಿಸಿ, ಮಂದಮಾರುತನೆನುವ ಸಾರಥಿಯಂ ಕುಳ್ಳಿರಿಸಿ, ಗಿಳಿಗಳೆನುವ ಕುದುರೆಗಳಂ ಕಟ್ಟಿ, ರಥವಂ ಸಿಂಗರಿಸಿ, ಕೋಗಿಲೆಗಳ ಕೂಗುಗಳೆಂಬ ಕಾಹಳೆಗಳಂ ಊದಿಸುತ ವಸಂತನೆ ಕಾದಿರುವನೊ? ಎಂಬಂತೆ ತೋರುತ್ತಿರಲು; ಇಂತು ಮಲ್ಲದೆ ಮಂದಮಾರುತನ ಸಂಚಾರದಿಂದ ಚಲಿಸುವ ಚಿಗುರುಗಳೆಂಬ ಬೆರಳುಗಳಿಂ ಸಂಜ್ಞೆಯಂ ಮಾಡಿ ವಸಂತನೆಂಬ ವಿಟಪುರುಷನಂ ಕರೆಯುತಲಿರುವ ಬಾಲಲತೆಗಳೆಂಬ ವಾರತರುಣಿಯರ ಮೇಲೆ ಪುಷ್ಪಗಳ ಪರಾಗಗಳೆನುವ ಪರಿಪರಿಯಾದ ಪರಿಮಳದಿಂ ಭರಿತವಾದ ಗಂಧದ ಹುಡಿಯಂ ಚೆಲ್ಲುತ ವಿಕ್ಸ್ವ ವಿಕ್ಸ್ವಗ

ಳೆಲ್ಲ ವಾಸನೆಯಿಂದ ತುಂಬಿ ತುಳುಕುವಂತೆ ಮಾಡಿ, ಪುಷ್ಪಗಳ ಸಮು ದಾಯವೆಂಬ ನೆವದಿಂದ ವಸಂತನು ನಗುತ ಬರುವನೊ? ಎಂಬಂತೆ, ಮ ನ್ಮಥನೆಂಬ ಮಹಾರಾಜನು ರಸಾಲವೃಕ್ಷವೆಂಬ ರತ್ನಖಚಿತವಾದ ಸಿಂಹಾ ಸನವನ್ನೇರಿ, ಪರಿವಾರದೊಡಗೂಡಿ ಒಡ್ಡೋಲಗಕೊಂಡು, ವನವೆನುವ ವಿ ಚಾರದ ಹಜಾರದೋಳ್ ಕುಳ್ಳಿರಲು, ಲತೆಗಳೆನುವ ವಾರನಾರಿಯರು, ಹೆಣ್ಣುದುಂಬಿಗಳ ಝೇಂಕಾರವೆಂಬ ಶ್ರುತಿಗೂಡಿರುವ ಶುಕಪಿಕಗಳ ಸಮೂಹದ ಮಧುರವಾದ ಗಾನಕ್ಕೆ ಸರಿಯಾಗಿ ಚಿಗುರುಗಳೆಂಬ ಕರಗ ಳಿಂದ ಮನ್ಮಥನ ಭುಜಪ್ರತಾಪದ ಜಯಪದಾಭಿನಯಂಗಳಗೈಯುತ, ಮಂದಮಾರುತನೆಂಬ ನಾಟ್ಯಾಚಾರ್ಯನ ಸಂಜ್ಞಾನುಸಾರವಾಗಿ ನಾಟ್ಯ ವಗೈಯುವವೊ? ಎಂಬಂತೆ ತೋರುತಲಿರಲು; ಅದರು ಗಂಚಿಯು ಬಳ್ಳಿಗ ಳಲ್ಲಿ ಅರಳಿರುವ ಪುಷ್ಪಂಗಳಿಂದಗರೆವ ಅಪರಿಮಿತವಾದ ಮಕರಂದ ರಸ ಗಳ ಸುಗಂಧವಿಂ ಪರಾಜಿತವಾಗಿರುವದೊ? ಎಂಬಂತೆ, ಜಾಜಿಯು ಎಳೆ ಬಳ್ಳಿಗಳು ತಲೆವಾಗಿ ಮನಸೋತು ಕಳೆಗುಂದಿ ಬಳುಕುತ ಚಿಂತೆಗೊಂ ಡಂತೆ ತೋರುತ್ತಿರಲು; ವಿರಹಿಜನಂಗಳ ಮೇಲೆ ಕೋಪಗೊಂಡಿರುವ ಕ್ರೂರನಾದ ಮಾರನೆಂಬ ವೀರನು ಭಾರಿಭಾರಿಗೂ ಪ್ರಯೋಗವಗೈದಿರು ವ ಆಗ್ನೇಯಾಸ್ತ್ರಂಗಳೊ? ಎಂಬಂತೆ ತೋರುವ ಕಿಂಶುಕ ವೃಕ್ಷಂಗಳ ಗುಂಪುಗಳಲ್ಲಿ ಅರಳಿರುವ ಕೆಂಪಾದ ಪುಷ್ಪಂಗಳಂ ದೂರದೋಳ್ನೋಡಿ ಬಹು ಮಧುರಂಗಳಾದ ಫಲಗಳೆಂದರಿತು ಗುಂಪು ಕೂಡಿ ಓಡೋಡಿ ಬಂ ದು ನೋಡಿ ಫಲವಲ್ಲದೇ ಇರಲು ನಾಚಿಗೆಕೊಂಡು ಹಿಂತಿರಿಗಿ ಪೋಗುವ ಗಿಣಿಗಳ ಬಳಗವೆಲ್ಲ ಸರಸಗಳಾದ ಫಲಗಳಂ ಕೂಡಿರುವ, ಬಾಲ ರಸಾಲ ವೃಕ್ಷಂಗಳಂ ಯ್ದೈದುತ್ತಿರಲು, ಲತೆಗಳೆಂಬ ಮುಗ್ಧೆಯರಾದ ತರುಣಿ ಯರು ಅರಳಿರುವ ಪುಷ್ಪಗಳ ನೆವದಿಂದ, ಮೆಲ್ಲಮೆಲ್ಲನೆ ಮಂದಹಾಸಗೊ ಳ್ಳುವಂತೆ ತೋರುತ್ತಿರಲದಂ ಕಂಡು, ಕೋಪಗೊಂಡು ತಮ್ಮ ಮುಖಂ ಗಳಂ ಕೆಂಪು ಮಾಡಿಕೊಂಡು ನೋಡುವವೊ? ಎಂಬಂತೆ ಸಾಲ್ವೇರಿ ಗಗನದೋಳ್ ಸೇರಿ, ಭಾರಿಭಾರಿಗೂ ಹಾರ್ಯಾರಿ ಬರುವ ಗಿಣಿಗಳು, ಮಂದಮಾರುತನೆಂಬ ವನಪಾಲಕನು ಮನ್ಮಥಮಹಾರಾಜನು ಬರುವ ನೆಂದರಿತು, ವನವೆನುವ ಮಹಾ ನಗರದ ವೃಕ್ಷಗಳ ಸಾಲುಗಳೆಂಬ ರಾಜ

ಬೀದಿಗಳೊಳ್ ನಿಚ್ಚಳವಾದ ಪಚ್ಚೆಗಳಲ್ಲಿ ಪವಳಗಳಂ ಕೆತ್ತಿ ಕಟ್ಟಿರುವ ಸಾವಿರಾರು ತೋರಣಂಗಳಂತೆ ತೊರುತ್ತಿರಲು, ಇಂತುಮಲ್ಲದೆ ಮಂದಮಾರುತನು ಮನ್ಮಥನು ಬರುವನೆಂದು ವಸಂತನಿಂ ತಿಳಿದು, ಅರಳಿದ ಹುವ್ವುಗಳಲ್ಲಿ ಸುರಿವ ಮಕರಂದದಿಂದ ವನಪ್ರದೇಶವೆನುವ ರಾಜಬೀದಿಯೊಳ್ ಧಳಯವಂ ಕೊಟ್ಟು, ಪುಷ್ಪಗಳ ಧೂಳಿಗಳೆಂಬ ಗಂಧದ ಪುಡಿಗಳಂ ಸುತ್ತಲೂ ಚೆಲ್ಲುತ, ಮಲ್ಲಿಗೆ ಮೊದಲಾದ ಪುಷ್ಪಂಗಳಿಂದಲಂಕೃತವಾದ ಲತೆಗಳಿಂ ಕೂಡಿರುವ ವೃಕ್ಷಗಳ ಪಙ್ತಿಗಳೆನುವ ಅಂಗಡೀಬೀದಿಗಳಂ ಸಿಂಗರಿಸಿ, ಸಜ್ಜುಗೊಳಿಸಿ ಮುಂದೆ ಮುಂದೆ ಮೆಲ್ಲ ಮೆಲ್ಲನೆ ನಡೆದು ನೋಡಿಕೊಳ್ಳುತ, ಮನ್ಮಥನ ಮಹೋತ್ಸವವಂ ಬೆಳೆಯಿಸುವದೆಂದು, ಕೋಗಿಲೆಗಳ ಕೋಮಲವಾದ ಕಂಠರವದಿಂ ಕೂಗುತ ಬರುವನೋ? ಎಂಬಂತೆ ತೋರುತಲಿರಲು, ಅಂತಪ್ಪ ವನಮಧ್ಯದೊಳ್ ವನಲಕ್ಷ್ಮಿ ಎಂಬ ತರುಣಿಯು ತನ್ನ ಮುಖ ಸೌಂದರ್ಯವಂ ನೋಡಿಕೊಳ್ಳಲೋಸುಗ ಮಡಗಿರುವ ಆಳವಾದ ತಿಳಿಗೊಳವೆಂಬ ಕನ್ನಡಿಯು ಮಾಲಿನ್ಯವಂ ತೊಳೆದು, ಪೊಳೆಯುವಂತೆ ಮಾಡಬೇಕೆಂದು ಮನಸು ಮಾಡಿ, ಸಮೀಪದಲ್ಲಿರುವ ಲತೆಗಳೊಳಗರಳಿರುವ ಪುಷ್ಪಗಳ ಹೊಸ ಧೂಳಿಗಳಂ, ಅಲ್ಲಲ್ಲಿ ಚಿಕ್ಕ ಚಿಕ್ಕ ರಾಶಿಗಳಂ ಸುರದಿರುವಳೊ? ಎಂಬಂತೆ, ಮನ್ಮಥನ ಕೀರ್ತಿಗಳೆನುವ ರಾಜಹಂಸೆಗಳೊ? ಎಂಬಂತೆ, ವಿರಹಾನಲಜ್ವಾಲೆಗಳ ತಾಪವಂ ತಾಳಲಾರದೆ, ಮೈಯಲ್ಲ ಬಿಳಿಪೇರಿ ತಲ್ಲಣಗೊಂಡು ಕಳವಳಿಸುತ ತರಹರಿಸಲಾರದೆ ತಂಪಾಗಿರುವ ಥಳಥಳನೆ ಪೊಳೆಯುವ ತಿಳಿಗೊಳವಂ ಪೊಕ್ಕಿರುವ ತರುಣಿಯರ ತಂಡತಂಡಗಳ ವಿರಹದಿಂದ ಬಿಳ್ಪೇರಿದ ಮುಖಮಂಡಲಗಳೊ? ಎಂಬಂತೆ, ವನಮಾರ್ಗದೊಳ್ ಅನವರತ ಸಂಚಾರವಗೈಯುವ ತುಂಬಿಗಳೆನುವ ಅಭ್ಯಾಗತರ ಸಮುದಾಯವಂ ಸಂತೈಸಲೋಸುಗ ಮನ್ಮಥನೆನುವ ಮಹಾ ಧಾರ್ಮಿಕನು ಮಕರಂದಗಳೆನುವ ಪಾನಕಂಗಳಂ ತುಂಬಿ, ಪರಾಗಗಳೆನುವ ಪಚ್ಚೆ ಕರ್ಪೂರದ ಪುಡಿಗಳಂ ತುಂಬಿ ಇಟ್ಟಿರುವ ಬೆಳ್ಳಿಯ ಬಟ್ಟಲುಗಳೊ? ಎಂಬಂತೆ, ಚತುರ್ಮುಖನು ತನ್ನ ವಾಹನವಾದ ರಾಜಹಂಸೆಗಳ ನಡಗೆಗಳಂ ನೋಡಿ ಸಂತೋಷಗೊಂಡು, ವರವಂ ಕೇಳುವದೆನಲಾ ಹಂಸೆಗಳು ತಮ್ಮ ವಂಶಂಗಳಲ್ಲಿ

ಪೃಟ್ಟದ ಕಲಹಂಸೆಗಳು ಭೂಲೋಕದಲ್ಲಿ ಸಂಚಾರವಗೈವುದರಿಂದ ಬಿಸಲಿನಿಂ ಬಸವಳಿಯದಂತೆ ಮಾಡಬೇಕೆಂದು, ವರವಂ ಕೇಳಲಾ ಚತುರ್ಮುಖನು ಕರುಣದಿಂ ಕೊಟ್ಟಿರುವ ಬಿಳಿಯ ಕೊಡೆಗಳೊ? ಎಂಬಂತೆ ತೋರುತಲಿರುವ ಬಿಳ್ದಾವರೆಯ ಹೂವುಗಳಿಂದ ಸುಧಾರಸಗಳಂತೆ ಸುರಿಯುತಲಿರುವ ಮಕರಂದ ಧಾರೆಗಳಂ ಸವಿದು ಹರ್ಷವೆರಸು ಮಾರನ ಭುಜಪ್ರತಾಪಂಗಳಂ ಪೊಗಳುವವೊ? ಎಂಬಂತೆ ಗಾನವಗೈವ ಭೃಂಗಾಂಗನೆಯರ ಮಧುರವಾದ ಸಂಗೀತವಂ ಕೇಳುತ, ತಾವರೆಯ ಹೂವುಗಳ ಸೆಳೆಲೋಳ್ ತೆರೆಗಳೆಂಬ ಊಯಾಲೆಗಳಲ್ಲಿ ಕುಳಿತು ಎಳ್ದಾವರೆಯ ಕಿರಿಬಳ್ಳಿಗಳಂ ಮೆಲ್ಲುತ ಸುಖದಿಂದಿರುವ ರಾಜ ಹಂಸೆಗಳೆಂಬ ತಮ್ಮ ಹೆಸರುಗಳಂ ಸಾರ್ಥಕವಾಗಿ ಮಾಡುತ, ವಸಂತನ ಯಶೋರಾಶಿಗಳಂತೆ ಶೋಭಿಸುತ್ತಿರಲೂ; ಇಂತು ಮಲ್ಲದೆ ಮತ್ತೊಂದು ಕಡೆಯೋಳ್ ತಿಳಿಗೊಳವೆಂಬ ತರುಣಿಯ ಮೊಗದಂತೆ ತೋರುವ ಕೆಂದಾವರೆಯ ಹೂವಿನಿಂದ ಗರೆವ ತಾಂಬೂಲ ರಸದಂತೆಸೆವ ಮಕರಂದ ರಸಪಾನದಿಂ ಮದಿಸಿ ಮೈಮರದು, ಮಂದಮಾರುತನ ಸಹಾಯದಿಂದ ತಾರುಮಾರಾಗಿ ತೂರ್ಯಾಡುತ, ಬರುವ ಮರಿದುಂಬೆಗಳ ಬಳಗವಂ ನೋಡಿ, ಸಂಪಿಗೆಯ ವನಲಕ್ಷ್ಮಿಯು ಕೋಪಗೊಂಡು ಮೈಯಲ್ಲ ಕೆಂಪೇರಿ ಮಧುಪಾನವಗೈವ ತುಂಬೆಗಳ ತಂಡ ತಂಡಗಳ ಸಮಾಗಮವು ತನಗೆ ಉಚಿತವಲ್ಲವೆಂದು ತಿಳಿದು ಪರಿಪರಿಯಾಗಿ ಯೋಚನೆಯುಗೈದು, ಮಾರನೆಂಬ ಮಹಾ ದೇವತೆಯಂ ಕುರಿತು ಬಿಸಲಿನೋಳ್ ನಿಂತು ತಪವಂ ಮಾಡಿ, ತುಂಬೆಗಳು ತನ್ನ ಸಮೀಪವಂ ಸೇರದಂತೆ ವರವಂ ಪಡದಿರುವವೊ? ಎಂಬಂತಿರುವ ಸಂಪಿಗೆಯ ವನಪಙ್ಕ್ತಿಯಂ ನೋಡಿ ಹಿಂತಿರಿಗಿ ಓಡೋಡಿ ಪೋಗುತಲಿರುವ ಮರಿದುಂಬೆಗಳಂ ನೋಡಿ, ಮಲ್ಲಿಗೆ ಮೊದಲಾದ ಲತೆಗಳು ಮನ ಮರುಗಿ ಈ ಸಂಪಿಗೆಯ ವನಲಕ್ಷ್ಮಿಗೆ ಸುವರ್ಣ ಹೆಚ್ಚಿ ಗರ್ವದಿಂ ಮೆರೆಯುತ, ಮಧುಕರಂಗಳಲ್ಲಿರುವ ಗುಣಂಗಳಂ ತಿಳಿಯದೆ ಕೆಂಡಗಳಂತೆ ಕೆಂಪಾಗಿ ತನ್ನ ಕಟುವಾದ ವಾಸನೆಯಿಂದ ಸಮೀಪವಂ ಸೇರಲೀಸದೆ ಮಧುಕರಂಗಳ ಮುಖ ಭಂಗವಂ ಮಾಡಬಹುದೇ ಎಂದು ಚಿಂತಿಸುತ, ಎಳೆ ಘಾಳಿ ಎನುವ ಬಾಲಕನಾದ ವನಪಾಲನಂ ಕಳುಹಿ, ಮರಿದುಂಬೆಗಳ ಬಳಗವಂ

ಕರತರಿಸಿ, ಅವುಗಳಿಗೆ ಬೇಕಾದಂತೆ ಪುಷ್ಪರಸಂಗಳಂ ಕೊಟ್ಟು ಉಪಚಾರಂಗಳಗೈವವೋ? ಎಂಬಂತೆ ಬಳ್ಳಿಗಳ ತುಂಬು ತುಂಬೆಗಳು ತುಂಬಿರಲು; ಮತ್ತು ವಸಂತ ಸಮಯವಾದುದರಿಂದ ತರುಣಿಯರು ತಮ್ಮ ತಮ್ಮ ಪ್ರಾಣಕಾಂತರೊಡಗೂಡಿ ಮೊದಲು ನಾವು ಓರೋರ್ವರಿರುವಾಗ ಈ ಮಾರನು ಶರಂಗಳಿಂದ, ತರುಣಿಯರೆಂದು ಇನಿತಾದರೂ ಕಾರಣವಿಲ್ಲದೆ ಕರುಣವಂ ಬಿಟ್ಟು, ಕ್ರೂರನಾಗಿ ಭಾರಿಭಾರಿಗೂ ಬಾಧೆ ಪಡಿಸುತಲಿರಲು, ರೂಪದಿಂದ ಮಾರನಿಗಿಂತ ಅಧಿಕರಾದ ಕಾಂತರು ಹತ್ತರಲಿರುವಾಗ, ತನ್ನ ಯುವರಾಜನಾದ ವಸಂತನೊಡಗೂಡಿ ಸೈನ್ಯ ಸಹಿತನಾಗಿ ಸನ್ನಾಹದಿಂ ಬಂದಿರುವನವನೇನು ಮಾಡುವನು ನೋಡುವಾ ಎಂದು ಪರೀಕ್ಷೆಯಂ ಮಾಡಲೋಸುಗವೋ? ಎಂಬಂತೆ, ತಮ್ಮ ಬೆರಳುಗಳಿಂದ ಚಿಗರುಗಳಂ, ಮುಗುಳುನಗೆಯಿಂದ ಪುಷ್ಪಂಗಳಂ, ಮುಖದಿಂದ ಕಮಲಂಗಳಂ, ದಂತ ಪಙ್ತಿಗಳಿಂದ ದಾಳಿಂಬದ ಬಿತ್ತಂಗಳಂ, ನಾಸಿಕದಿಂದ ಸಂಪಿಗೆಯ ಹುವ್ವುಗಳಂ, ಮುಂಗುರುಳುಗಳಿಂದ ತುಂಬಿಗಳ ಬಳಗವಂ, ಮಧುರವಾದ ಮಾತುಗಳಿಂದ ಮರಿ ಗಿಳಿಗಳಂ, ಕಂಠನಾದದಿಂದ ಕೋಗಿಲೆಗಳಂ, ಮಾತುಗಳ ಮಾಧುರ್ಯದಿಂದ ಮಕರಂದ ರಸವಂ, ಕುಚಂಗಳಿಂದ ಚಕ್ರವಾಕ ಪಕ್ಷಿಗಳಂ, ನಡುವಿನಿಂದ ಸಿಂಹಂಗಳಂ, ನಡೆಗೆಗಳಿಂದ ರಾಜ ಹಂಸಂಗಳಂ, ಬಾಹುಗಳಿಂದ ತಾವರೆಯ ಬಳ್ಳಿಗಳಂ, ನೇತ್ರಂಗಳಿಂದ ಕನ್ನೈದಿಲುಗಳಂ ಕೂಡ ಜೈಸಬೇಕೆಂದು ಇಚ್ಛೈಸಿ, ವನವಂ ಕುರಿತು ಬರುವರೊ? ಎಂಬಂತೆ ಉಪವನವಂ ಪೊಕ್ಕು ಕಾಮನಿಗೆ ದಕ್ಕದೆ, ಸಿಕ್ಕಿ ಸಿಕ್ಕದಂತೆ ತಿರುಗುತಲಿರಲು. ಆಗ ಕಂದರ್ಪನು ಉಕ್ಕುವ ಕೋಪದಿಂದ ಇವರನೊಕ್ಕಲಿಕ್ಕುವೆನೆಂದು ವಸಂತನೊಡಗೂಡಿ ಮಂದಮಾರುತನೆಂಬ ಪುಷ್ಪರಥವನ್ನೇರಿ, ಪರಿವಾರ ಸಹಿತನಾಗಿ ಬರುತ್ತ, ಮೊದಲು ತಾನು ಚಿಗರುಗಳೆನುವ ಭಲ್ಯಗಳ ಅಲಗುಗಳಂ, ಭುಜಪ್ರತಾಪವೆಂಬ ಅಗ್ನಿಜ್ವಾಲೆಯೊಳ್ ಕೆಂಪಾಗುವಂತೆ ಕಾಯಿಸಿ, ವಿರಹಿಗಳ ಹೃದಯವೆಂಬ ಮಡುವಿನಲ್ಲಿರ್ಪ ಕೆಂಪಾದ ನೀರಿನಿಂದ ಹದಂಗಳಂ ಕೊಟ್ಟು, ಬಳಿಕ ವಸಂತನ ಸಮೀಪದಲ್ಲಿಯೇ ಓರ್ವರೂ ಕಾಣದಂತೆ ಕೊಟ್ಟಿದ್ದ ಮಹಾಯುಧವಂ ಅವನಿಂದ ತೆಗದುಕೊಂಡು ಸಮಯವಂ

ನೋಡಿ ಹೊಡೆಯುವಾ ಎಂದು ನಾರಿಯರ ಸಂಗಡಲೇ ಅಸಂಗನಾಗಿ ಕಾಣ ದಂತೆ ಸಂಚರಿಸುತಲಿರುವಾಗ ಕಾಂತೆಯರು ತಮ್ಮ ತಮ್ಮ ಪ್ರಾಣಕಾಂ ತರುಗಳ ಕರಂಗಳಂ ಪಿಡಿದು ಅಲ್ಲಲ್ಲಿ ಸಂಚರಿಸಿ ವಿಹರಿಸುತ ಪುಷ್ಪಂಗ ಳಂ ತೆಗದು ಮುಡಿಯೊಳ್ಮುಡಿಯುತ್ತ, ಮನ ಬಂದಂತೆ ಮಾತನಾಡುತ ಸಂತೋಷದಿಂ ಸಂಚಾರವಗೈವ ಸಮಯದೋಳ್ ಮಾರನ ಪರಿವಾರ ವಂ ಕಂಡು ಅವರವರ ಕಾಂತರುಗಳು ಈ ತರುಣಿಯರ ಅವಯವಂಗ ಳಂ ನೋಡಿ ಕೋಗಿಲೆಗಳು ಮೊದಲಾದ ಪಕ್ಷಿಗಳ ತಂಡಗಳು ಚಿಗರು ಮೊಗರುಗಳೆಂದು ಬಂದು ತುಡುಕಿದರೇನು ಮಾಡುವದೆಂದು ಭಯಗೊಂ ಡು ತಾವು ಪೊದ್ದಿರುವ ಚಂದ್ರಗಾವಿಯ ದುಕೂಲಂಗಳಂ ತೆಗದು ಕಾಮಿ ನಿಯರಿಗೆ ಹೊದ್ದಿಸುವಷ್ಟರೋಳ್ ಈ ರಮಣಿಯರ ಮುಖವಾಸನೆಯಿಂ ದ ತಾವರೆಯ ಹುವ್ವುಗಳೆಂದರಿತು ಮಕರಂದ ರಸಗಳಂ ಸವಿಯಲೋಸು ಗ ಗುಂಪು ಗುಂಪಾಗಿ ಬಂದು ಕಾಂತೆಯರ ಮುಖದ ಸುತ್ತಲು ಮುತ್ತಿ ಒತ್ತಿ ಬರುತ್ತಿಲು; ಅವರ ಪುರುಷರು ತಮ್ಮ ಅಬಲೆಯರ ಕಪ್ಪಾದ ಕ ಡೆ ಕಣ್ಣು ನೋಟಂಗಳೆಂದು ಭ್ರಾಂತಿಗೊಂಡು, ತುಂಬಿಗಳೆಂದು ತಿಳಿ ಯದೆ ಸುಮ್ಮನೆ ನಿಂತಿರುವ ಸಮಯದೋಳ್ ಮಧುಕರಂಗಳು ಕಾಮಿ ಯರ ಮುಖಗಳ ಸಮೀಪವನೈದಿ ಬರುತ, ಆ ತರುಣಿಯರ ನಾಸಿಕಗಳಂ ನೋಡಿ ಸಂಪಿಗೆಯ ಪುಷ್ಪಗಳೆಂದು ಭ್ರಾಂತಿಯಿಂದ ಭಯಗೊಂಡು, ಓ ಡೋಡಿ ಪೋಗುತ್ತಿರಲು. ಇಂತು ಮಲ್ಲದೆ ಬರುವ ನಾರಿಯರ ಅಧರಂ ಗಳಂ ಕಂಡು ತೊಂಡೆ ಹಣ್ಣುಗಳೆಂದು ತಿಳಿದು, ಎಳೆ ಗಿಳಿಗಳೆಲ್ಲ ಒಟ್ಟು ಗೂಡಿ ಬರುತ ಕಾಂತೆಯರ ಕರಂಗಳೊಳಿರುವ ವೈಡೂರ್ಯ ರತ್ನಗಳಿಂದ ಕೆತ್ತಿದ ಉಂಗುರುಗಳಂ ನೋಡಿ ಭಯಗೊಂಡು ಪೋಗುತ್ತಿರುವ ಸಮ ಯದೋಳ್ ಮುಂದೆ ಪೋಗುತ್ತಿರುವ ಪುರುಷರಿಗೆ ಮಲ್ಲಿಗೆಯ ಬಳ್ಳಿ ಗಳು ಮರೆಯಾಗಿ ಕಾಂತೆಯರಿಗೆ ಕಾಣಿಸದಿರಲಷ್ಟರೋಳ್ ಕಾಮನು ಸಂಗಡ ಬರುತ, ತನ್ನ ಕೈಯೊಳ್ ಪಿಡಿದಿರುವ ಚಿಗರುಗಳೆಂಬ ಭಲ್ಲೆಗ ಳಂ ಅಬಲೆಯರ ಹೃದಯದೋಳ್ಮೂಡಿ, ಮೂಡುವಂತೆ ಗುರಿನೋಡಿ ಸ ಮಯ ಸಿಕ್ಕಿತೆಂದು ಹೊಡೆಯಲಾ ಭಲ್ಲೆಗಳು ಆ ಬಾಲೆಯರ ಹೃದಯ ದೋಳ್ ಮೂಡಿ ಕಳವಳಗೊಳಿಸಿ,ದಿಕ್ಕುಗಳು ತೋರದಂತೆ ಉನ್ಮಾದವತಿ

ಉಂಟು ಮಾಡಿ, ವಿರಹಾಗ್ನಿಗಳಂ ಉಬ್ಬಿಸುತ ಬಳಲಿಸಿ ಬೆಂಡಿನಂತೆ ಮಾಡುತಲಿರುವ ಸಮಯದೋಳ್ ಕಾಮಿನಿಯರು ಮನ್ಮಥನೆಂಬ ಮಹಾಭೂತವಾವರಿಸಿ ಕಳವಳಗೊಳುತ್ತ, ಹುಚ್ಚು ಹುಚ್ಚಾಗಿ, ತಾಪ ಹೆಚ್ಚಿ, ಕಣ್ಣುಗಳ ಮುಚ್ಚಿ, ಎಚ್ಚರವಿಲ್ಲದೆ ಭಾರಿ ಭಾರಿಗೂ ಬೆಚ್ಚಿ ಬೆಚ್ಚಿ ಬೀಳುತ್ತ, ತುದಿ ಮೊದಲಿಲ್ಲದೆ ಪರಿಪರಿಯಾದ ಮಾತುಗಳ ತೊದಲುತಲಿರುವಷ್ಟರೋಳ್ ಘಟ್ಟಿಯಾಗಿ ನಗುತ್ತ, ಮತ್ತೊಂದು ನಿಮಿಷದೋಳ್ ಕಂಬನಿಗಳಂತುಂಬಿ ಗಳಗಳನೆ ಅಳುತ ನಿಟ್ಟುಸುರುಗಳಂ ಬಿಟ್ಟು ತಟ್ಟತಟ್ಟಾಗಿ ಮಟ್ಟು ಮೀರಿ ಮೈ ಮರದು ಬೆಮರೇರಿ ಛಾಯಾರಿ ಬಸವಳಿದು, ವೃಕ್ಷವಂ ಬಿಟ್ಟು ಉರುಳಿ ಭೂಮಿಯೋಳ್ ಬಿದ್ದು ಹೊರಳುವ ಲತೆಗಳಂತೆ ಹೊರಳುತಲಿರುವ ತರುಣಿಯರಂ ಅವರವರ ಪ್ರಾಣಕಾಂತರುಗಳು ಅಲ್ಲಲ್ಲಿ ಹಿಂತಿರಿಗಿ ನೋಡಿ ಇದೇನು ಮಾಯವಾದುದೆಂದು ಚಿಂತಿಸುತ ಒಂದು ನಿಮಿಷವಾಲೋಚಿಸಿ, ಲತಾಗೃಹಂಗಳಂ ಮೆಲ್ಲಮೆಲ್ಲನೆ ಯೈದಿಸಿ, ಪರಿಪರಿಯಾಗಿ ಶೀತೋಪಚಾರಂಗಳಂ ಗೈಯುಲಾಗ ಅದರಿಂದ ಮತ್ತೊ ಹೊತ್ತು ಹೊತ್ತಿಗೆ ಹೆಚ್ಚಿರುವ ಮದನಾವೇಶವಂ ನೋಡಿ, ಇವರಿಗೆ ಮಾರನವಿಕಾರವಲ್ಲದೆ ಬೇರೇ ಏನೂ ಇಲ್ಲ. ನಾವು ಘಾಬರಿ ಪಡದೆ ಈ ಮದನಾವೇಶವಂ ಬಿಡಿಸುವದಕ್ಕೆ ಉಪಯೋಗಿಗಳಾದ ವಸ್ತುಗಳಂ ಸನ್ನೆಹಿಸಬೇಕೆಂದು ಆಯಾಯ ವಸ್ತುಗಳಂ ಬೇಗದಿಂ ಸನ್ನಾಹವಕ್ಕೈಕೊಂಡು ಕಾಂತೆಯುರಿರುವ ಲತಾ ಗೃಹಂಗಳನ್ನೈದಿ, ಚಿಗರುಗಳೆಂಬ ಚಿತಾಸನವಂ ಹಾಸಿ, ಪಚ್ಚೆ ಕಪ್ಪುರದ ಪುಡಿಗಳೆಂಬ ರಂಗವಲ್ಲಿಗಳಿಂದ ಮುಗ್ಗುಗಳಂ ಬರಮ ಲತಾಗೃಹದ ಬಾಗಿಲಂ ಮುಚ್ಚುವದೆಂಬ ದಿಗ್ಬಂಧನವಂ ಮಾಡಿ ಭುಜಂಗಳೆಂಬ ಪಾಶಂಗಳಿಂ ಬಿಗಿದು, ಮಲ್ಲಿಗೆಯ ಹೂವುಗಳ ಪರಾಗಗಳೆಂಬ ಕಾಮನ ಮೋಹನ ಚೂರ್ಣದಂತಿರುವ ಭಸ್ಮಂಗಳಂ ಕಾಮಿನಿಯರ ಮೇಲೆ ಚೆಲ್ಲುತ್ತ, ಕಿರಿ ಬೆಮರುಗಳೆಂಬ ಶುದ್ಧೋದಕದಿಂದ ತುಂಬಿರುವ ಕುಚಂಗಳೆಂಬ ಕನಕ ಕಲಶಂಗಳೆಲ್ಲಿ ತಮ್ಮ ತಮ್ಮ ಕರಂಗಳ ಬೆರಳುಗಳೆಂಬ ಮಾವಿನ ಚಿಗರುಗಳನ್ನಿಟ್ಟು, ಸತ್ಕಾರವೆಂಬ ಭೂತೋಚ್ಚಾಟನ ಮಂತ್ರದಿಂದ ಮಂತ್ರಿಸಿ, ಸಂಭೋಗ ಸುಖವೆಂಬ ಶಾಂತಿಯುಗೈದು, ಬಳಿಕ ಮದನಾವೇಶವಂಗಳಂ ಬಿಡಿಸುತಲಿರುವ ಕಾಮಿ ಜನಂ

ಗಳೆಂಬ ಮಾಂತ್ರಿಕ ಜನಂಗಳ ಸಮೂಹವಂ ಕಂಡು, ಕಾಂತೆಯರ ಸಮುದಾಯವು ಮದನಾ ವೇಶದಿಂದ ಅಷ್ಟಷ್ಟಾಗಿ ಬಿಡಗಡೆಯುಸ್ಸದಿ, ಆ ಮಾಂತ್ರಿಕರಿಗೆ ಅಧರ ಪಾನವೆಂಬ ಅಮೃತ ರಸವಂ ಕೊಟ್ಟು ಭುಜಾಲಿಂಗನವೆಂಬ ಉಡುಗೆರೆಗಳಂ ಹೊದ್ದಿಸಿ, ಕಿರು ಬೆಮರುಗಳೆನುವ ಮುಕ್ತಾಹಾರಂಗಳಿಂದ ಅಳವಡಿಸಿ,ಸಂತೋಷವನ್ನೈಯುತ ಸಂತೈಸುತಲಿರುವ ಸಮಯದೋಳ್ ಚಿಗರುಗಳೆಂಬ ಪವಳಗಳಿಂದಲು, ಎಲೆಗಳೆಂಬ ಪಚ್ಚೆಗಳಿಂದಲು, ದುಂಡು ಮಲ್ಲಿಗೆಯ ಕಿರಿ ಮೊಗ್ಗೆಗಳೆಂಬ ಮುತ್ತುಗಳಿಂದಲು, ಇರುವಂತಿಗೆಯ ಹೂವುಗಳೆಂಬ ವಜ್ರದ ರಾಶಿಗಳಿಂದಲು, ಕನ್ನೈದಿಲುಗಳೆಂಬ ನೀಲರತ್ನಂಗಳಿಂದಲೂ, ಪಾದರಿಯ ಪುಷ್ಪಂಗಳೆಂಬ ಗೋಮೇಧಿಕ ರತ್ನ ರಾಶಿಗಳಿಂದಲು ಶಾವಂತಿಗೆಯ ಹೂವುಗಳೆಂಬ ಪುಷ್ಯರಾಗ ರತ್ನ ಸಮುದಾಯಂಗಳಿಂದಲು, ಬಾಗೆಯ ಹುವ್ವುಗಳೆಂಬ ವೈಡೂರ್ಯ ರತ್ನಂಗಳಿಂದಲು, ಚಂಪಕ ಕುಸುಮಗಳೆಂಬ ಚಿನ್ನದ ಗಟ್ಟಿಗಳಿಂದಲು,ತುಂಬಿ ತುಳುಕುತಲಿರುವ ವೃಕ್ಷಂಗಳೆಂಬ ಘನವರ್ತಕರು ನವರತ್ನಗಳಂ ವನಪಙ್ಕ್ತಿಗಳೆಂಬಅಂಗಡಿಯಬೀದಿಗಳೋಳ್ ಕುಳಿತು, ಮಕರಂದವೆಂಬ ರಸದ್ರವ್ಯವಂ,ಪುಷ್ಪಧೂಳಿಗಳ ರಾಶಿಗಳೆಂಬಧಾನ್ಯಂಗಳಂ ಕಾಮಿಗಳೆಂಬ ಕೊಳ್ಳುವ ಜನಂಗಳಿಗೆ ಉಪಭೋಗವೆಂಬ ಮೌಲ್ಯವಂ ತೆಗದುಕೊಂಡುಮಾರುವದೆಂದುಕೋಗಿಲೆಗಳಕೂಗುಗಳೆಂಬನೆವದಿಂದಸಾವನೋ?ಎಂಬಂತೆವಿರಹಿಗಳಮೇಲೆಕೋಪಗೊಂಡು, ಮೊಗ್ಗುಗಳೆಂಬಹಲ್ಲಗಳಂಕಡಿಯುತ ಸಂಚರಿಸುವನೊ? ಎಂಬಂತೆ, ಕಾಂತನೊಡಗೂಡಿರುವ ಕಾಂತೆಯಂನೋಡಿ,ಹಂಸಗಳೆಂಬ ನೆವದಿಂದ ನೆಗುವನೊ?ಎಂಬಂತೆವಸಂತನೆಂಬಮಹಾರಾಜನು ವನರಾಜ್ಯವಂ ಪರಿಪಾಲಿಸುವ ಸಮಯದೋಳ್ ಮಂದಮಾರುತನು ಮಲಯ ಪರ್ವತದೋಳ್ ಪುಟ್ಟಿ ಶ್ರೀಗಂಧದ ಮರಂಗಳತೋಪಿನೋಳ್ ಬೆಳದು ಮದಿಸಿ, ಬಳಿಕ ಅಲ್ಲಲ್ಲಿ ಸಂಚರಿಸುತಲಿರುವ ಮಹಾ ವನಗಜಂಗಳ ಕಪೋಲಂಗಳಂ ಸುರಿವ ಮದೋದಕ ಧಾರೆಗಳ ಪರಿಮಳದಿಂದ ಪುಷ್ಟನಾಗಿ ಮದವೇರಿ ತೆರಳಿ ಬರುತ, ಮಾರ್ಗದೋಳ್ ಕರ್ಪೂರ ಬಾಳೆಯ ವನವಂಪೊಕ್ಕು ವಿಶ್ರಮಿಸಿಕೊಳ್ಳುವೆನೆಂದು, ಅಲ್ಲಿರುವ ಪಚ್ಚಕರ್ಪೂರದ ಪುಡಿಯ ರಾಶಿಗಳೋಳ್ ಪವಳಿಸಿದ್ದು, ಅಲ್ಲಿಂದ ಮರಳಿ

ತೆರಳಿ, ತಿಳಿಗೊಳಂಗಳೊಳ್ ಅರಳಿರುವ ತಾವರೆಯ ಹುವ್ವುಗಳೊಳ್ ಸೇರಿ, ಅಲ್ಲಿರುವ ಮಕರಂದ ರಸವಲ್ಲಿ ಮುಳಿಗಿ, ಅವರ ಧೂಳಿಗಳಲ್ಲಿ ಹೊರ ಳುತಿರ್ದು, ಎದ್ದು ಬರುತ ಮಲ್ಲಿಗೆಯ ಹೂವುಗಳಲ್ಲಿರುವ ಪರಿಮಳಂಗಳೆ ಲ್ಲವಂ ಅಪಹರಿಸಿ, ಹಾಗೆ ಸರೋವರದಲ್ಲಿ ವಿಹರಿಸುತಲಿರುವ ರಾಜಹಂ ಸೆಗಳಂ ನೋಡಿ, ಇವರ ನಡೆಯಂತೆ ನಡೆಯಂ ಕಲಿಯಬೇಕೆಂದು ವೇಗ ವಂ ಬಿಟ್ಟು, ಮೆಲ್ಲ ಮೆಲ್ಲನೆ ಅಡಿಗಳನ್ನಿಡುತ ಅಲ್ಲಲ್ಲಿರುವ ಪಟ್ಟಣಂಗಳ ಮಂದಿರಂಗಳೊಳ್ ಚಂದ್ರ ಶಾಲೆಗಳಲ್ಲಿ ಪತಿಗಳಿಂದ ಸಹಿತರಾಗಿ ಸುರತ ಸುಖವಂ ಅನುಭವಿಸಿ, ಸೊಂಪಿನಿಂ ನಿದ್ರೆಯಗೈವ ಪದ್ಮಿನೀ ಜಾತಿ ಯುವ ತಿಯರ ಕುಚತಟಂಗಳಲ್ಲಿ ಕಸ್ತೂರಿ, ಕಪ್ಪುರ ಕೇಸರ, ಗೋರೋಚ ನಂಗಳಂ ಬೆರಸಿ ಗಂಧವಂ ಮಾಡಿ ಬರದಿರುವ, ಮತ್ತೂ ಸುರತ ಸಮ ಯದೊಳ್ ಮುತ್ತುಗಳಂತೆ ಹೊಳೆಯುವ ಕಿರಿಬೆಮರುಗಳಿಂ ನೆನದಿರು ವ ಮಕರಿ ಕಾಪತ್ರಂಗಳ ಸುಗಂಧವಂ ಚೌರ್ಯವಗೈದು, ಕೆಂದಾವರೆಯ ಹೂವುಗಳ ವಾಸನೆಯಂತೆ ಘುಮಿಘುಮಿಸುವ ಕಾಮಿನಿಯರ ಮುಖ ವಾಸನೆಯುಂ ಸಂಗ್ರಹಿಸಿ, ಮತ್ತೂ ಆ ಚಂದ್ರಶಾಲೆಗಳಲ್ಲಿ ಪರಿಪರಿಯಾ ದ ಪುಷ್ಪಂಗಳಿಂ ಕಟ್ಟಿರುವ ಚಪ್ಪರದ ಲಾಮಂಚ ಮುಡಿವಾಳಗಳ ತೆರೆಗಳಲ್ಲಿ ಸಂಚಾರವಗೈದು, ಅಲ್ಲಿಂದ ತೆರಳಿ ಬರುತ ಹೂವಾಡಿಗರ ಬೀದಿಯೊಳ್ ಪರಿಪರಿಯಾದ ಪುಷ್ಪತೈಲಂಗಳಂ ತನ್ನ ತನುವಿನಲ್ಲಿ ತೀ ಡಿ, ಪನ್ನೀರಿನಲ್ಲಿ ಮಜ್ಜನಗೈದು, ಪರಿಮಳದ ಪುಡಿಗಳೊಳ್ ಹೊರ ಳುತಲಿರ್ದು ಅಲ್ಲಿಂದ ತೆರಳಿ, ತಾಳೆಯ ಹುವ್ವು ಗಳೆನುವ ಹದವಾದ ಕತ್ತಿಗಳ ಮೇಲೆ ಸಾಮುಗಳ ಮಾಡಿ, ಹಾಗೆ ಸಂಪಿಗೆಯ ಪುಷ್ಪಗಳ ಸಾ ಲಿನೊಳ್ಸಂಚರಿಸಿ, ಬಾಯಾರಿ ಪಾದರಿಯ ಪುಷ್ಪಂಗಳ ವಾಸನೆ ಎನುವ ಪಾನಕವಂ ಪಾನವಗೈದು, ಬರುತ ದೂರದೊಳ್ ಪಾರಿಜಾತ ತರುವಂ ನೋಡಿ, ಇದರ ವಾಸನೆಯುಂ ಅಪಹರಿಸಬೇಕೆಂದು ತವಕದಿಂ ಬರುವನೆ ನುತ ಯತ್ನವಂ ಮಾಡಿ, ಪರಿ ಪರಿಯಾದ ಪರಿಮಳಂಗಳಂ ಕೂಡಿರುವ ಮೈ ಭಾರದಿಂ ನಡೆಯಲಾರದೆ ಅಲ್ಲಲ್ಲಿ ನಿಲ್ಲುತ, ಪಾರಿಜಾತ ವೃಕ್ಷದ ನೆಳ ಲಿನೊಳ್ ಕುಳಿತಿರ್ದ ಸುಗಂಧರಾಜೇಂದ್ರನಂ ಕಂಡು, ತನಗೆ ಪರಮ ಮಿತ್ರನಾದ ಮನ್ಮಥನೆಂದರಿತು ಕ್ಷೇಮಾಲಿಂಗನವಗೈವೆನೆಂದು ಬಂದು,

ತನಗೆ ಗಂಧವಹನೆಂದು ಹೆಸರು ಪ್ರಸಿದ್ಧವಾಗಿರುವವು, ಮತ್ತೂ ಈ ಸುಗಂಧರಾಜೇಂದ್ರನ ಶರೀರವು ತನ್ನಂತೆ ಸುಗಂಧವಾಗಿರುವವಂ ನೋಡಿ, ಮತ್ಸರಗೊಂಡು ಮದಿಸಿ ಮಿತಿಮೀರಿ ಮೈ ಸೋಂಕಿ, ಈ ರಾಜೇಂದ್ರನೊಡನೆ ಕಾಳಗವಂ ಮಾಡುವೆನೆಂದು ಬರುವನೊ? ಎಂಬಂತೆ, ಮತ್ತೂ ಲೋಕಾತಿಶಯವಾದ ರಾಜೇಂದ್ರನ ದೇಹ ಸೌಂದರ್ಯವಂ ಕಂಡು ಮುಟ್ಟಿನೋಡಲೋಸುಗವೊ? ಎಂಬಂತೆ ಮೈ ಸೋಂಕಿ, ಹಾಯಿಗೊಳಿಸುತಲಿರುವ ಸಮಯದೋಳ್ ಮಂದಾರ ವೃಕ್ಷದ ಉಪರಿಭಾಗದಲ್ಲಿ ಶುಕರೂಪದಿಂದಿರುವ ಮಂದಾರಮಾಲೆ ಎಂಬ ಗಂಧರ್ವ ತರುಣಿಯು ಸುಗಂಧರಾಜೇಂದ್ರನ ಸೌಂದರ್ಯವಂ ನೋಡಿ ಆಶ್ಚರ್ಯವೆಂಬ ಸಮುದ್ರದೋಳೋಲ್ಯಾಡುತ, ಒಂದು ಮುಹೂರ್ತ ಪರಿಯಂತ ನೋಡುತ ರೆಪ್ಪೆಗಳ ಮುಚ್ಚದೆ ಇರುವಂತೆ ಚತುರ್ಮುಖನು ನೇತ್ರಂಗಳಂ ಸೃಷ್ಟಿಯಗೈದುದು ಸಾರ್ಥಕವಾದುದೆಂದು ಸಂತೋಷಪಡುತ, ತನ್ನ ಸಮೀಪದೋಳ್ತನ್ನಂತೆ ಶುಕರೂಪದಿಂದಿರುವ ಕಲಹಂಸೆಯಂ ಕರೆದು, ಎಲೈ ಸಖಿಯೆ! ಕಂದರ್ಪ ಕೋಟಿ ಲಾವಣ್ಯದಿಂ ಮೆರೆವ ಈ ಮಹಾ ಮಹಿಮನಾದ ಪುರುಷನಂ ನೋಡಿ ನೇತ್ರಂಗಳ ಪಾಪಂಗಳಂ ಪರಿಹರಿಸಿಕೋ ಎಂದು ನುಡಿದು, ಇಲ್ಲಿಗೆ ಈ ಮಹಾ ಪುರುಷನು ಬರುವದಕ್ಕೆ ಕಾರಣವೇನೋ ತಿಳಿಯಲಿಲ್ಲ. ಇಲ್ಲಿರುವ ದುಷ್ಟನಾದ ಲೋಹಿತಾಕ್ಷನೆಂಬ ರಾಕ್ಷಸನ ಭಯವಿಲ್ಲದೆ, ತನ್ನೊಡನೆ ಮತ್ತೋರ್ವ ಮಿತ್ರನೊಡಗೊಂಡು ಸಂತೋಷದಿಂ ನಲಿಯುತ ಮಾತನಾಡುತಲಿರುವ ಪರಿಯಂ ನೋಡಿದರೆ ಮಾಯೆಯಿಂದ ರಾಕ್ಷಸನೇ ಈ ಪರಿಯಾದ ರೂಪವಂ ಧರಿಸಿ ನಾವಿಲ್ಲಿರುವದಂ ತಿಳಿದು ನಮ್ಮಂ ಮೋಹಗೊಳಿಸಲೋಸುಗ ಬಂದಿರುವನೊ? ಅಲ್ಲದಡೆ ಆ ದುಷ್ಟದಾನವನಂ ಸುಕುಮಾರಾಂಗನಾದ ಈಮಹಾ ಪುರುಷನು ಸಂಹಾರಮಗೈದು ನಿರಾತಂಕನಾಗಿ ಸುಖದಿಂದ ಕುಳಿತಿರ್ಪನೊ? ಏನೋ ಒಂದೂ ನಿಜವಾಗಿ ತಿಳಿಯಲಿಲ್ಲವಾದ್ದರಿಂದ ನೀನು ಮೆಲ್ಲ ಮೆಲ್ಲನೆ ದಾನವನ ಮಂದಿರವನೈದಿ ನೋಡಿ ಬಾ, ಎಂದು ನುಡಿಯಲಾಗ ಕಲಹಂಸೆಯು ಮೃದುವಾದ ಆ ಮಾತುಗಳಂ ಕೇಳಿ, ಬಳಿಕ ಆ ದಾನವನು ಮಂದಿರವನೈದಿ ಹೊರಭಾಗದೋಳ್ ಬಿದ್ದಿರುವ ಘೋರವಾದ ರಾಕ್ಷಸನ ಕಳೇಬರ

ವಂ ನೋಡಿ ಸಂತೋಷಗೊಂಡು, ಓಡೋಡಿ ಬಂದು ಸಖಿಯಾದ ಮಂದಾರಮಾಲೆಯೊಡನೆ ಈ ಸಮಾಚಾರವಂ ಹೇಳಲಾಗ ಮಂದಾರಮಾಲೆಯು ತುದಿ ಮೊದಲಿಲ್ಲದ ಸಂತೋಷದಿಂ ಭರಿತಳಾಗಿ, ಈ ಮಹಾ ಪುರುಷನೇ ಆ ದಾನವನಂ ಸಂಹರಿಸಿರುವನೆಂದು ನಿಶ್ಚಯಿಸಿ, ನಿನ್ನೇ ದಿನ ಅದ್ಭುತವಾದ ಒಂದು ಶಬ್ದವಾದುದೇ ಈ ದುಷ್ಟ ದಾನವನ ಸಂಹಾರ ಕಾಲದೋಳ್ ಪುಟ್ಟಿದ ಶಬ್ದವೆಂದು ನಿಶ್ಚಯಮಂಗೈದು, ದೇವದಾನವ ಗಂಧರ್ವ ಮೊದಲಾದವರಿಂದಲೂ ನೋಡಲಶಕ್ಯನಾದ ಈ ರಾಕ್ಷಸನ ಶಿಕ್ಷಿಸುವ ಸಾಮರ್ಥ್ಯವು ಅತಿ ಸುಕುಮಾರಾಂಗನಾದ ಈ ಮಹಾ ಪುರುಷನಿಗೆ ಎಂತು ಬಂದಿರುವುದೊ? ತಿಳಿಯಲಿಲ್ಲ. ಈತನು ರಮಾಪತಿಯೊ? ಇಲ್ಲದಿರೆ ಉಮಾಕಾಂತನೊ? ಅಥವಾ ಭಾರತೀ ಪತಿಯಾದ ಬ್ರಹ್ಮನೊ? ಶಚೀಪತಿಯೊ? ಈ ನಾಲ್ವರೊಳ್ ಯಾರೋ ಒರ್ವನು, ಈ ರೂಪದಿಂ ಅವತರಿಸಿ ಇರುವನಲ್ಲದೆ ಸಾಧಾರಣನಲ್ಲವೆಂದು ನುಡಿಯುತ್ತ, ಪಾರಿಜಾತವೃಕ್ಷದ ಉಪರಿ ಭಾಗದೋಳ್ ಕುಳಿತಿರುವ ರಾಜಕುಮಾರನು ಕೇಳುವಂತೆ ಮಧುರವಾಗಿ ಮಾತುಗಳನಾಡುತ, ಮತ್ತು ಮಹಾರಾಜನ ಅವಯವಂಗಳ ಸೌಂದರ್ಯಾತಿಶಯವಂ ನೋಡಿ, ಈ ಮೋಹನಾಂಗನೊಡನೆ ಮಾತುಗಳನಾದರೂ ಆಡುವರ ಪುಣ್ಯವೆಂತುಟೊ? ಎಂದು ಕೊಂಡಾಡುತ, ತಾನು ಶುಕರೂಪದಿಂದಿರುವಳಾದರೂ ಈ ಮಹಾರಾಜನ ಸೌಂದರ್ಯವೆಂಬ ಉರುಳಿನೊಳ್ಸಿಕ್ಕಿ, ವಿರಹವೆನುವ ಕಾಡುಕಿಚ್ಚಿನ ಶಕೆ ತಟ್ಟಿ ಕಂದಿರುವ ಎಳೆಚಿಗುರುಗಳಂತೆ ತೋರುತ್ತಿರಲಾಗ ಕಲಹಂಸೆಯು ಅವಳ ಭಾವವಂ ತಿಳಿದು, ಬಳಿಕ ತಾನೂ ಕೂಡ ಸುಮತಿಯು ಸೌಂದರ್ಯವೆನುವ ಸರೋವರದೋಳ್ ಮುಳುಗಿ ಮೇಲಕ್ಕೆ ಏಳಲಾರದೆ ಇರುವಳಾದರೂ ಅದಂ ತೋರ್ಪಡಿಸದೆ ಸಹನೆಯಂಗೈದು, ಮಂದಾರಮಾಲೆಯಂ ಕುರಿತು ಎಲೈ ತರುಣೀ ಶಿರೋಮಣಿಯೆ! ನೀನಿರುವ ಪರಿಯಂ ನೋಡಿದರೆ ಮೂರು ಲೋಕಂಗಳಲ್ಲಿಯೂ ಇಲ್ಲದ ಸೌಕುಮಾರ್ಯದಿಂ ಒಪ್ಪಿ ಮೆರೆಯುತಲಿರುವ ಈ ಮಹಾರಾಜನ ರೂಪವಂ ನೋಡಿ, ಮರುಳಾಗಿ ಮಾರನ ಶರಗಳಿಗೆ ಗುರಿಯಾದಂತೆ ತೋರುತಲಿದೆ, ಈಗ ಶುಕ ರೂಪದಿಂದಿರುವ ನಿನಗೆ ಈ ಪರಿಯಾಗುವವರಲ್ಲಿ ಎಂದಿನಂತೆ ನೀನು ಗಂಧರ್ವ ಕಾಮಿನಿಯ ರೂಪವಂ ವಹಿಸಿ

ಪಡೆ ಮತ್ತೇನು ವಿಚಿತ್ರವಾಗುತ್ತಿದೆಯೋ? ತಿಳಿಯುತ್ತಿಲ್ಲವಾದ್ದರಿಂ ಈ ಸಾಯಂ ಪಲ್ಲಭನು ನಿನ್ನ ಅಭಿಪ್ರಾಯದಂತೆ ನಿನ್ನೊಡನೆ ಬೆರೆಯುವನೋ? ಅಥವಾ ಉಪೇಕ್ಷೆಯಂ ಮಾಡುವನೋ? ತಿಳಿಯಕೂಡದು. ಇಂತಲ್ಲದೆ ನಾವೀರ್ವರು ತಂದೆ ತಾಯಿಗಳಿಗೆ ಹೇಳದೆ, ಚಂದ್ರಿಕಾ ವಿಹಾರವಂ ಮಾಡುವೆವೆಂದು ಬಂದು ಈ ಪಾರಿಜಾತ ತರುವಂ ಸೇರಿ ವಿಹರಿಸುತ್ತ, ಅವರೆಲ್ಲರಂ ಮರೆತು ಬಹುಹೊತ್ತಾದುದರಿಂದ ಅವರೆಲ್ಲರೂ ಎಂತು ಸಹಿಸುವರೋ? ತಿಳಿಯಲಿಲ್ಲ. ಈಗ ಬೇಗ ಕಾಂತಿಮತೀ ಪುರವನ್ನೈದುವದು ನಮಗೆ ಉಚಿತವಲ್ಲದೆ ಇಲ್ಲಿ ನಿಲ್ಲುವದು ಯುಕ್ತವಲ್ಲವೆಂದು ನುಡಿಯಲ್ಕಾ ಮಂದಾರಮಾಲಿನಿಯು ಸಖಿಯ ವಾಕ್ಯವಂ ಕೇಳಿ ಎಲೌ ಕಲಹಂಸೆ! ಈ ಪಾರಿಜಾತವೃಕ್ಷದ ಸಮೀಪದಲ್ಲಿರುವ ಜನರುಗಳ ಅಪೇಕ್ಷೆ ಇದ್ದಂತೆ ಆಯಾಯ ಫಲಂಗಳಂ ಈ ವೃಕ್ಷವು ಉಂಟು ಮಾಡಿ ಕೊಡುವದರಿಂದ ನಾನು ಅಪೇಕ್ಷಿಸಿದ ಕಾರ್ಯವು ಕೈಗೂಡಿ ಬರುವದರಲ್ಲಿ ಸಂದೇಹವಿಲ್ಲ. ಮತ್ತೂ ನಾವೀರ್ವರೂ ತಾಯಿ ತಂದೆಗಳಿಗೆ ತಿಳಿಯದಂತೆ ತೆರಳಿ ಬಂದು ಪಾರಿಜಾತ ತರುವಂ ಕಂಡು ಇದರಲ್ಲಿ ಮೋಹವನ್ನೈಯ್ದುತಿರ್ದು, ಫಲವಿಲ್ಲದೆ ನಿರರ್ಥಕವಾಗಿ ಪುರವಂ ಕುರಿತು ಪೋಗುವದು ನಿನಗೆ ಉಚಿತವಾಗಿ ತೋರುವದೇ? ತಿಳಿದು ನೋಡುವಳಾಗು. ಇಂತಲ್ಲದೆ ಈ ಪಾರಿಜಾತವೃಕ್ಷದ ಫಲರೂಪವಾದ ರಾಜೇಂದ್ರನ ಅಧರ ಸುಧಾ ರಸವಂ ಸವಿಯದೆ ವಿರಹವೆನ್ನುವ ಬಿರುಸಾದ ಬಿಸಿಲಿನ ತಾಪವಡಗಲಾರದೆಂದು ನುಡಿಯುತಲಿರುವ ಗಿಳಿಗಳ ಮಧುರವಾದ ಮಾತುಗಳಂ ಕೇಳಿ, ರಾಜೇಂದ್ರನು ಮಂದಾರಮಾಲೆಯ ವೃತ್ತಾಂತವು ಕೆಲವು ತಿಳಿದಂತಾಯಿತೆಂದು ಸಂತೋಷಗೊಂಡು, ಮತ್ತೂ ಆ ರಮಣಿಯಂ ಮನದೊಳ್ ನೆನೆದು ಮೋಹವೆಂಬ ಸಮುದ್ರದ ಪಾರವಂ ಕಾಣದೆ, ಕನಸು ಕಂಡಂತೆ ಕಳವಳಿಸಿ, ಸಮೀಪದಲಿರುವ ಸುಮತಿಯಂ ನೋಡಲಾಗ, ಅವನು ಈ ರಾಯನ ವಿರಹ ಭಾರವಂ ಸೂಕ್ಷ್ಮದಿಂ ತಿಳಿದು ನೋಡಿ, ಪಾರಿಜಾತ ತರುವಿನ ಮೇಲು ಭಾಗದೊಳ್ ಪರಿಪರಿಯಾಗಿ ಪೇಳುವ ಗಿಳಿಗಳ ಮೃದು ಮಧುರವಾದ ಮಾತುಗಳಂ ಕೇಳಿ ಇವು ಶುಕಂಗಳಲ್ಲ, ಮತ್ತೂ ಕಲಹಂಸೆ ಎಂಬ ಸಖಿಯೊಡಗೂಡಿ ಬಂದಿರುವ ಮಂದಾರ ಮಾಲೆಯೋ ಎಂದು ನಿಶ್ಚೈಸಿ,

ಳೆ ಕಲಹಂಸೆಗೆ ಗಂಧರ್ವರೂಪವು ಪೋಗಿ ಈ ಶುಕರೂಪಬರುವದಕ್ಕೆ ಏನು ಕಾರಣವಾದ್ದೋ? ಯಾವ ಋಷಿಯ ಶಾಪವೋ? ಇಲ್ಲವೆ ಜನ್ಮಾಂತರದ ಪಾಪವೋ? ಅಥವಾ ಕರ್ಮವೋ? ಎಂದು ಪರಿಪರಿಯಾಗಿ ಯೋಚಿಸುತ್ತ, ಇದಂ ತಿಳಿದು, ಪಿತೃ ರಾಜೇಂದ್ರನು ಈ ಶುಕಂಗಳ ನುಡಿಗಳಂ ಕೇಳಿ, ಮಂದಾರಮಾಲೆಯುಂ ಮನದೊಳ್ಕೆ ಸಮ ಮನ್ಮಥನ ವಶನಾಗಿರುವನು. ಇದಕ್ಕೆ ಇಷ್ಟರೊಳು ಉಪಾಯವೆನುತ ಆ ತರುಣಿಯುಂ ನೇತ್ರಂಗಳಿಂದ ನೋಡದೆ ಮನದೊಳ್ ನನೆದ ಮಾತ್ರದಿಂದಲೇ ಈ ಪರಿಯಾಗಿರುವಲ್ಲಿ ಪ್ರತ್ಯಕ್ಷವಾಗಿ ನೋಡಿದ ಬಳಿಕ ಏನಾಗುವದೋ? ತಿಳಿಯಲಿಲ್ಲ. ಈ ಶುಕಂಗಳಿಗೆ ಪೂರ್ವ ರೂಪವು ಬರುವದಾಗಿ ತೋರುವದಿಲ್ಲ. ಮಂದಾರಮಾಲೆಯುಂ ನೋಡದೆ ರಾಜೇಂದ್ರನು ಇಲ್ಲಿಂದ ತೆರಳುವನಾಗಿ ತೋರಲಿಲ್ಲ. ಇನ್ನೇನಾಗುವದೋ? ಎಂದು ಮನದೊಳ್ ಚಿಂತಿಸುತ ಏನಾದರಾಗಲಿ, ಈ ಶುಕಂಗಳಂ ಪೋಗದಂತೆ ಪಿಡಿಯಬೇಕಲ್ಲದೆ ಸುಮ್ಮನೆ ಬಿಟ್ಟಲ್ಲಿ ಪ್ರಮಾದ ಉಂಟಾಗುವದರೊಳ್ ಸಂದೇಹವಿಲ್ಲವೆಂದು ನಿಶ್ಚಯವಾಗಿ ತಿಳಿದು, ಆ ಗಿಳಿಗಳಂ ಪಿಡಿಯಲೋಸುಗ ಮೆಲ್ಲ ಮೆಲ್ಲನೆ ಪಾರಿಜಾತ ವೃಕ್ಷವಂ ಏರುವೆನೆಂದು ಬರುವಷ್ಟರೊಳ್ ಮಂದಾರ ಮಾಲೆಯು ಕಲಹಂಸೆಯಂ ಕುರಿತು ಎಲೆ ಸಖಿಯೆ! ನೀನು ಪೂರ್ವದಂತೆ ಗಂಧರ್ವನಾರಿಯ ರೂಪವಂ ಧರಿಸಿ, ಕೆಳಭಾಗದೊಳ್ ಮಣಿಮಯವಾದ ಜಗತಿಯೊಳ್ ಕುಳಿತಿರುವ ರಾಜೇಂದ್ರನ ಬಳಿಯನ್ನೈದಿ, ಎಂತಾದರೂ ಅವಂಗೆ ನನ್ನಲ್ಲಿ ಅನುರಾಗ ಉಂಟಾಗುವಂತೆ, ಬ್ಯಾಸರಗೊಳ್ಳದೆ ನನ್ನಲ್ಲಿ ಇಲ್ಲದಿರುವ ಗುಣಂಗಳನ್ನಾದರೂ ಪೇಳಿ, ಮಮತೆಯುಂ ಬೆಳೆಸುವ ಭಾರ ನಿನ್ನದಲ್ಲದೆ ಮತ್ತೊರ್ವರಲ್ಲಿಲ್ಲ. ನೀನು ಬಾಲ್ಯದಿಂ ನನಗೆ ಸಖಿಯಾಗಿದ್ದು, ಇಂತಿಪ್ಪ ಮಹಾ ಪದದೊಳ್ ತಾಯಿ ತಂದೆಗಳಿಗಿಂತ ಅತಿಶಯವಾಗಿಯು ಇರುತ್ತ, ತನ್ನಂ ಸಲಹುವದರಿಂ ಈಗ ಅದೆಲ್ಲವು ಈ ಕಾರ್ಯಕ್ಕೆ ಕೂಡಿದರೆ ಸಾರ್ಥಕವಾಗುವದು, ಇಲ್ಲವಡೆ ನೀನೋರ್ವಳೇ ಇಲ್ಲಿಂದ ತೆರಳಿ ಕಾಂತಿಮತೀ ಪುರವನ್ನೈದಿ ನನ್ನ ತಾಯಿಯಾದ ಮಂಜೂಷೆಗೆ ಏನೋ ಒಂದು ಸಮಾಚಾರವಂ ಪೇಳುವುದಾಗುವದರಲ್ಲಿ ಸಂದೇಹವಿಲ್ಲವೆಂದು ಖಂಡಿತವಾಗಿ ನುಡಿಯಲಾಗ, ಕಲಹಂಸೆಯು ಆ ಸಖಿಯ ಮಾತುಗಳಂ

ಕೇಳಿ ಮನದೊಳ್ ಭಯಗೊಂಡು, ಎಂತಾದರೂ ಇವರೀರ್ವರಿಗೂ ಸಂಘಟನೆಯಾಗೈವೆನೆಂದು ಆ ಮಂದಾರ ವೃಕ್ಷದಿಂದಿಳಿದು, ಎಂದಿನಂತೆ ಗಂಧರ್ವ ತರುಣಿಯಾಗಿ, ಘನಾಳಿಯಿಂದ ಬಳುಕುತಲಿರುವ ಮಲ್ಲಿಗೆಯ ಬಳ್ಳಿಯಂತೆ ಕಳಕಳಿಸುತ ಬಂದು, ಇಳೆಯ ಪಾಲಕನಾದ ರಾಜೇಂದ್ರನ ಪಾದಪದ್ಮಂಗಳಿಗೆರಗಿ, ಮುಖವೆಂಬ ಚಂದ್ರನ, ಮುಗುಳು ನಗೆ ಎಂಬ ಬೆಳದಿಂಗಳಿಂದ ಮುಚ್ಚಿರುವ ತಾವರೆಯ ಮೊಗ್ಗೆಯೋ? ಎಂಬಂತೆ ಕೈಗಳಂ ಮುಗಿದು, ಮುಂದೆ ನಿಂದಿರಲಾಗ ಸುಗಂಧರಾಜೇಂದ್ರನು ಆ ಕಲಹಂಸೆಯಂ ನೋಡಿ, ಎಲೌ ಬಾಲಿಕೆ! ನೀನ್ಯಾರು? ಈ ವನ ಸಂರಕ್ಷಕಳಾದ ದೇವತೆಯೋ? ಇಲ್ಲದಡೆ ಈ ಚಿತ್ರವತೀ ಪುರದ ಲಕ್ಷ್ಮಿಯೋ? ಪೇಳೆಂದು ಬೆಸಗೊಳಲಾ ಕಲಹಂಸೆಯು ಎಲೈ ಮಹೀವಲ್ಲಭನೆ! ನಾನು ವನದೇವತೆಯಲ್ಲ. ಚಿತ್ರವತೀಪುರದ ಲಕ್ಷ್ಮಿಯು ಅಲ್ಲ, ಈ ಪಾರಿಜಾತವೃಕ್ಷದಲ್ಲಿರುವ ನಿನ್ನ ಚರಣ ಸೇವಕಳಾದ ಮಂದಾರಮಾಲೆಯ ಸಖಿ ಎಂದು ನುಡಿಯಲಾ ರಾಜೇಂದ್ರನು ಅದಂ ಕೇಳಿ ಸಂತೋಷಗೊಂಡು ಎಲೈ ಬಾಲೆಯೆ! ನೀನು ಇಲ್ಲಿಗೆ ಬರುವದಕ್ಕೆ ಕಾರಣವೇನು? ಮಂದಾರ ಮಾಲೆ ಎಂಬುವಳ್ಯಾರು? ಯಾವ ರೂಪದಿಂದಿರುವಳು, ನೀನು ಬಂದ ಕಾರ್ಯವೇನೆಂದು ಮುಗುಳು ನಗೆಯಿಂ ನುಡಿಯಲಾ ರಾಯನ ವಾಕ್ಯವಂ ಕೇಳಿ, ಕಲಹಂಸೆಯು ಎಲೈ ಭೂಪಲ್ಲಭನೆ! ನನ್ನೊಡತಿಯಾದ ಮಂದಾರಮಾಲೆಯು ಈ ಮಂದಾರ ವೃಕ್ಷದಲ್ಲಿ ಶುಕರೂಪದಿಂ ವಾಸವಗೈಯುತ ನಿನ್ನ ಚರಣ ದರ್ಶನವನ್ನು ಅಪೇಕ್ಷಿಸುತ್ತಿರುವಳು, ಇದೇ ನಮ್ಮ ವೃತ್ತಾಂತವೆಂದು ಪೇಳಿದ ಮಂದಾರಮಾಲೆಯ ಸೌಂದರ್ಯಾತಿಶಯವಂ ಪರಿಪರಿಯಾಗಿ ಕೊಂಡಾಡುತಲಿರಲಾ ರಾಜೇಂದ್ರನು ಆ ಕಲಹಂಸೆಯಂ ಕುರಿತು ನಿಮ್ಮ ಒಡತಿಯಾದ ಮಂದಾರಮಾಲೆಯಂ ಇಲ್ಲಿಗೆ ಕರತರುವದೆಂದು ನುಡಿಯಲಾ, ಮಹೀ ಪುರಂದರನ ಸರಸ ವಚನವಂ ಕೇಳಿದ ಮಂದಾರಮಾಲೆಯು ಮುದಮಂ ತಾಳಿ, ಬೇಗದಿಂದೆದ್ದು ಎಂದಿನಂತೆ ಗಂಧರ್ವ ಸುಂದರಿಯ ರೂಪವಂ ಧರಿಸಿ, ವೃಕ್ಷದಿಂದಿಳಿಯುತ ದಾನವರ ಬಾಧೆಯಂ ಸಹಿಸಲಾರದೆ ಮಾನವ ರೂಪದಿಂದಿರುವ ಪುರಂದರನ ಸಮೀಪವನ್ನೈದಿ, ದೂರು ಪೇಳಲೋಸುಗ ಅಮರಾವತೀಪುರದಲಕ್ಷ್ಮಿಯೋ ಬಂದಿರುವಳೋ?

ಎಂಬಂತೆ ಪಾರಿಜಾತವೃಕ್ಷವು ತನ್ನ ಸಮೀಪವನ್ನೈದಿರುವ ಮಹೇಂದ್ರಾವತಾರನಾದ ಸುಗಂಧರಾಜೇಂದ್ರಂಗೆ ಉಪಭೋಗಯೋಗ್ಯವಾಗಿ ತನ್ನಲ್ಲಿ ಪುಟ್ಟಿರುವ ಪುಷ್ಪಂಗಳಿಂದಲೆ ಊರ್ವ್ವ ತರುಣಿಯಂ ನಿರ್ಮಾಣವಗೈದು ಕಪ್ಪವಾಗಿ ಒಪ್ಪಿಸಿದ ಕಾಮಿನಿಯೊ? ಎಂಬಂತೆ, ಸುಗಂಧರಾಜೇಂದ್ರನು ಲೋಕಕಂಟಕರಾದ ದಾನವರಂ ಸಂಹರಿಸಿ, ದೇವಗಂಧರ್ವ್ವ ಮಾನವರು ಮೊದಲಾದವರಿಗೆ ಸೌಖ್ಯವಂ ಉಂಟುಮಾಡಿದುದರಿಂದ ಸಂತೋಷಗೊಂಡ ಚತುರ್ಮುಖನು ಸಕಲ ಲೋಕಂಗಳಲ್ಲಿರುವ ಸತಿಯರೆಲ್ಲರ ಸೌಂದರ್ಯವೆಲ್ಲವಂ ಸಂಗ್ರಹಿಸಿ ಒಟ್ಟು ಮಾಡಿ ಗುಟ್ಟಾಗಿ ಓರ್ವ ತರುಣಿಯಂ ನಿರ್ಮಾಣವಗೈದು, ರಾಜೇಂದ್ರನಂ ವರಿಸಿ ಪರಿಪರಿಯಾಗಿ ಸುಖಪಡಿಸುವದೆಂದು ಕಳುಹಲು ಸುಗಂಧರಾಜೇಂದ್ರನೆನ್ನರಸುತ ಬರುವ ತರುಣಿಯೊ? ಎಂಬಂತೆ, ಮೇಘಮಂಡಲದಲ್ಲಿರುವ ಮಿಂಚುಗಳೆಲ್ಲ ಒಂದಾಗಿ ವಸಂತಸಮಯದಲ್ಲಿ ವನವಿಹಾರವಂ ಮಾಡಲೋಸುಗ ಭೂಮಿಯನ್ನೈದುವದೊ? ಎಂಬಂತೆ, ವನಲಕ್ಷ್ಮಿಯು ಮಹಾರಾಜನ ಸೌಂದರ್ಯವಂ ನೋಡಿ ಮೋಹಗೊಂಡು ರೂಪವಂ ತಾಳಿ ಅವನೊಡನೆ ವಿಹಾರವಂ ಮಾಡಲೋಸುಗ ಬರುವಳೊ? ಎಂಬಂತೆ, ಭಂಗಾರದ ಬಳ್ಳಿಯಂತೆ ಥಳಥಳನೆ ಹೊಳೆಯುತ, ಮೈಬಣ್ಣದಿಂದ ವನಪಙ್ಕ್ತಿಗಳನೆಲ್ಲ ಸಂಪಿಗೆಯ ಹೂವುಗಳಿಂ ಸಂಪೂರ್ಣವಾದಂತೆ ಮಾಡುತ, ಕಡೆ ಕಣ್ಣುಗಳ ನೋಟಗಳೆಂಬ ಕನ್ನೈದಿಲೆಯ ಹೂವುಗಳಿಂ ಸಾಲು ಸಾಲಾಗಿ ತೋರಣಂಗಳಂ ಕಟ್ಟಿದಂತೆ ಮಾಡುತ, ಮೊಗದ ಸೊಬಗಿನಿಂ ಚಂದ್ರನಂತೆ ಎಲ್ಲೆಲ್ಲಿಗೂ ಬೆಳ್ದಿಂಗಳನ್ನುಂಟು ಮಾಡುತ, ಸರ್ವಾಂಗ ಸುಂದರಿಯಾದ ಮಂದಾರ ಮಾಲೆಯು ಬೃಂದಾರಕ ಯೋಗ್ಯವಾದ ಮಂದಾರ ಪುಷ್ಪದ ಮಾಲೆಯಂತೆ ಸುವಾಸನೆಯಂ ತುಂಬುತ ಬಂದು, ರಾಜೇಂದ್ರನ ಚರಣ ಸರಸಿಜ ದ್ವಂದ್ವಗಳಿಗೆ ಪ್ರಣಾಮವಗೈದು,ಮಹಾರಾಜನ ಮುಖಚಂದ್ರನಂನೋಡಿಚಕೋರಪಕ್ಷಿಯಂತೆ ನಿಂದಿರುವ ಸಮಯದೊಳ್ ಮೊದಲಿನಂತೆ ಮಂದಮಾರುತನು ಮನಬಂದಂತೆ ಮಂದಾರ ಕುಸುಮಗಳ ಕಿರಿ ಎಸಳೆನಿಪ ಮನ್ಮಥಾಗ್ನಿಯ ಕಿಡಿಗಳಿಂ ಮಹೀವಲ್ಲಭನ ಮೇಲೆ ಚೆಲ್ಲಿ ಹಿಗ್ಗುತ್ತ, ನುಗ್ಗಿ ಬಂದು ಮೆಲ್ಲಮೆಲ್ಲನೆ ಮೈ ಸೋಂಕಿ, ಝಲ್ಲೆನಿಸುತ ಮನವಂ ಪೊಕ್ಕು

ಗಡಗಡನೆ ನಡುಗಿಸುತ್ತಲಿರುವುದಂ ಕಂಡು, ಕುರಿತು ಬಂದಕಾರ್ಯವಂ ಮರೆತು, ಮಲಗಿದ್ದ ಮಾರನು ಎಚ್ಚರಗೊಂಡು ಎದ್ದು ಸದ್ದು ಮಾಡದೆ ಸಮಯಸಿಕ್ಕಿತೆಂದು ತಿಳಿದು, ಮುಂದೆ ನಿಂತಿರುವ ಮಂದಾರಮಾಲೆಯ ಹುಬ್ಬುಗಳೆನುವ ಧನುವಂ ಹಿಡಿದು, ರೆಪ್ಪೆಗಳೆನುವ ಹೆದೆಯಂ ಬಿಗಿದು, ಕಿರಿದಾದ ನೋಟಂಗಳೆಂಬ ಬಾಣಂಗಳಂ ಸಂಧಾನವಗೈದು, ರಾಜೇಂದ್ರನ ಎದೆಗೆ ಸರಿಯಾಗಿ ಗುರಿ ನೋಡಿ ಹೊಡೆಯಲಾ ಮಹೀಪತಿಯು ಪಾರಿಜಾತ ಮಹೀರುಹವಂ ಅವಲಂಬನವಂ ಮಾಡಿ, ಮಂದಾರಮಾಲೆಯು ಬರುವುದಕ್ಕೆ ತಡವಂ ಮಾಡಿದಳೆಂಬ ಕೋಪದಿಂದಲೋ? ಎಂಬಂತೆ ಕಣ್ಣುಗಳು ಕೆಂಪೇರಿ, ಮೊಗದೊಳ್ ಸಣ್ಣ ಮುತ್ತುಗಳಂತೆ ಕಿರಿ ಬೆವರೂರಿ, ಭಾರಿಭಾರಿಗೂ ಪರಿಪರಿಯಾಗಿ ವಿರಹವೇರೇರಿ, ಬಂದು ರೆಪ್ಪೆಗಳಂ ಮುಚ್ಚದೆ ನಾಚಿಗೆಯುಂ ಬಿಟ್ಟು ಮುಂದೆ ಬಂದು ನಿಂದಿರುವ ಸುಂದರಿಯಾದ ಮಂದಾರಮಾಲೆಯುಂ ನೋಡುತ, ಮನವಂ ನೇತ್ರಗಳೊಡನೆ ಆ ಸತಿಯ ಮುಖಚಂದ್ರನಲ್ಲಿಟ್ಟಿರಲು; ಮನವು ಎಂದಿನಂತೆ ಹಿಂದಿರಗದೇ ಇರಲಾಗ ಸುಮತಿಯು ಮಾತನಾಡದೆ ಮೈ ಮರೆದು ಕುಳಿತಿರ್ಪ ರಾಜೇಂದ್ರನಂ ನೋಡಿ ಈಗ ಸಾವಕಾಶವಂ ಮಾಡುವ ಸಮಯವಲ್ಲವೆಂದರಿತು ಮಂದಾರ ಮಾಲೆಯುಂ ನೋಡಲವಳೂ ಕೂಡ ರಾಜೇಂದ್ರನಿಗಿಂತ ಸಹಸ್ರ ಮಡಿಯಾಗಿ ವಿರಹವೇದನೆಯನನುಭವಿಸುತ ರತ್ನ ಪುತ್ಥಳಿಯಂತೆ ಚಲಿಸದೆ ಇರುವುದಂ ನೋಡಿ, ಕಲಹಂಸೆಯುಂ ಕರದು ಈರ್ವರಿಗೂ ಶೀತೋಪಚಾರವಗೈವುದೆಂದು ಕಟ್ಟು ಮಾಡಿ, ಅಲ್ಲಿಂದ ತೆರಳಿ ಬಂದು ಉಪವನದ ಬಾಗಿಲಲ್ಲಿ ಕುಳ್ಳಿರಲು, ಅತ್ತಲಾ ಕಲಹಂಸೆಯು ಮಂದಾರಮಾಲೆ ಸುಗಂಧರಾಜೇಂದ್ರರೀರ್ವರಿಗೂ ಶೀತೋಪಚಾರವಂ ಮಾಡಲೋಸುಗ ಬೇಕಾದ ವಸ್ತುಗಳಂ ಸಂಗ್ರಹಿಸುವೆನೆಂಬ ನೆವದಿಂದ ಆ ಉಪವನದಿಂ ತೆರಳಿ ಬರುತ್ತಿರಲು; ಬಳಿಕ ಸುಗಂಧರಾಜೇಂದ್ರ ಮಂದಾರಮಾಲೆಯರೀರ್ವರೂ ತಮ್ಮ ತಮ್ಮ ಮನದ ಮೂರ್ಛೆಗಳಂ ತಾವು ತಾವೆ ತಿಳಿದು ಎಚ್ಚರಗೊಂಡು, ಮೆಲ್ಲ ಮೆಲ್ಲನೆ ಮಾತನಾಡುತ ಸುರತಾನುರಾಗವು ಹೆಚ್ಚಿ ಬಂದು ಮಾತಿಗೆ ಮಾತ್ತೊಂದು ಪರಿಯಾಗಿ ಸಂದರ್ಭವಿಲ್ಲದೆ ಮನೆ ಬಂದಂತೆ ಮಾತನಾಡುತಲಿರುವಾಗ. ರಾಜೇಂದ್ರನು ತನ್ನ ಕಂಠದಲ್ಲಿದ್ದ

ರತ್ನ ಹಾರವಂ ತೆಗೆದು ಕೈಯೊಳ್ ಪಿಡಿದು ಮೆಲ್ಲ ಮೆಲ್ಲನೆ ಬರುತ್ತಲಿರುವುದಂ ನೋಡುತ್ತಿ, ಮಂದಾರಮಾಲೆಯು ತನ್ನ ಕೊರಳೊಳಳವಡಿಸಿದ್ದ ಮುಕ್ತಾಹಾರವಂ ತೆಗೆದು ಕರದೊಳ್ ಪಿಡಿದು ಈರ್ವರೂ ನಾನು ಮುಂದು ತಾನು ಮುಂದೆನುತ ಪರಸ್ಪರ ಕಂಠಗಳಲ್ಲಿ ಹಾರಂಗಳಂ ಅಳವಡಿಸಿ, ಸಂತೋಷವೆಂಬ ಸಮುದ್ರದೊಳ್ ಮಂಗಳ ಸ್ನಾನವಂ ಮಾಡಿ, ಭಂಗಾರದಂತೆಸೆವ ಸೈ ಬಣ್ಣವೆಸೆವ ಅರಿಸಿನದ ವಸ್ತ್ರಂಗಳಂ ಧರಿಸಿ, ಪರಸ್ಪರ ಮನೋರಥಂಗಳಂ ಪೂರೈಸುವೆವೆಂಬ ಕಂಕಣಂಗಳಂ ಕಟ್ಟಿ, ಲಜ್ಜೆಗಳೆನುವ ತೆರೆಯಂ ತೆಗೆದು, ಕಲ್ಪವೃಕ್ಷದ ತೇಜಸ್ಸೆನುವ ಅಗ್ನಿಯಂ ಸಾಕ್ಷಿಯಂ ಮಾಡಿ ಪಾಣಿಗ್ರಹಣವಗೈದು, ಪಾರಿಜಾತ ಪುಷ್ಪಂಗಳ ಪರಾಗಗಳೆನುವ ರಂಗವಲ್ಲಿಯಿಂದಲಂಕರಿಸಿರುವ ಕಲ್ಪವೃಕ್ಷದ ಕೆಳಗಣ ಜಗತಿ ಎನುವ ಮಣಿಮಯವಾದ ಹಸೆಯ ಜಗಲಿಯಲ್ಲಿ ಕುಳಿತು, ಮುಗುಳುನಗೆ ಎನುವ ಲಾಜಗಳಿಂದ, ಜಗತಿಯ ಮಣಿಯ ಕಾಂತಿ ಎಂಬ ಅಗ್ನಿಕುಂಡದಲ್ಲಿ ಹೋಮವಗೈದು, ಗಂಧರ್ವ ವಿವಾಹವಂ ಬೆಳೆಯಿಸಿ, ಸುರತ ಸುಖವಂ ಅನುಭವಿಸಬೇಕೆಂದು ಕುತೂಹಲದಿಂದಿರುವ ಸಮಯದೊಳ್ ಪಾರಿಜಾತ ವೃಕ್ಷದ ಮಹಿಮೆಯಿಂದಿವರೀರ್ವರೂ ಅಪೇಕ್ಷಿಸಿದ ಪದಾರ್ಥಂಗಳನೆಲ್ಲ ತತ್ ಕ್ಷಣದೊಳ್ ರತ್ನಮಯಪಾತ್ರಂಗಳಲ್ಲಿ ತೆಗೆದುಕೊಂಡು ಕಾದಿರುವ ದಿವ್ಯ ತರುಣಿಯರಂ ನೋಡಿ, ಮಂದಾರಮಾಲೆಯು ಇದೇನೆಂದು ಆಶ್ಚರ್ಯಗೊಂಡಿರಲಾಗ ರಾಜೇಂದ್ರನು ಆ ವೃಕ್ಷದ ಪ್ರಭಾವವೆಂದು ನುಡಿಯಲು; ಅಷ್ಟರೊಳ್ ಮತ್ತೊಂದು ಕಡೆಯೊಳ್ ಆ ದಿವ್ಯ ತರುಣಿಯರು ಪಾರಿಜಾತ ಪುಷ್ಪಗಳಿಂ ಚಪ್ಪರವಂ ರಚಿಸಿ, ಆ ಪುಷ್ಪ ದಳಂಗಳಿಂದಲೇ ತೆರೆಗಳಂ ಮಾಡಿ, ಮಧ್ಯದೊಳ್ ಮಣಿಮಂಚವನ್ನಿರಿಸಿ, ಆ ಪುಷ್ಪಗಳ ಕಿರಿ ಎಸಳುಗಳಿಂದಲೇ ಹಾಸಿಗೆಯಗೈದು, ಪರಿಪರಿಯಾದ ಭಕ್ಷ್ಯ ಭೋಜ್ಯಂಗಳಂ, ಪಾರಿಜಾತ ಪುಷ್ಪಂಗಳ ಮಕರಂದ ರಸಂಗಳಂ, ಮಧುರವಾದ ಫಲಂಗಳಂ ರತ್ನದ ಬಟ್ಟಲುಗಳೊಳ್ ತುಂಬಿ, ಸಾಲು ಸಾಲಾಗಿರಿಸಿ, ಮಂಧಾರ ಪುಷ್ಪಮಾಲೆಗಳಂ, ದಿವ್ಯ ಚಂದನಂಗಳಂ, ಕರ್ಪೂರವೀಳ್ಯವಂ ತುಂಬಿರುವ ತಟ್ಟೆಗಳಂ, ಆ ಮಣಿಮಂಚದೊಳಿಟ್ಟು, ತಾವು ಬಂದಂತೆ ನಿಮಿಷದೊಳ್ಮರೆಯಲು. ಬಳಿಕ ಮಂ

ಮಂದಾರವಮಾಲೆ ಸುಗಂಧರಾಜೇಂದ್ರರೀರ್ವರೂ ಕೇಳೀಗೃಹವನ್ನೈದಿ, ಪನ್ನೀರುಗಳಿಂದ ಪಾದಂಗಳಂ ತೊಳೆದು, ದಿವ್ಯಾನ್ನ ಭೋಜನಗೈದು ಪರಸ್ಪರಾನುರಾಗ ಹೆಚ್ಚಿ ಬರುವಂತೆ ಸುರತಾಪೇಕ್ಷೆಯು ಇಮ್ಮಡಿಯಾಗಿ ಗಂಧ ಮೊದಲಾದ ಪರಿಮಳ ದ್ರವ್ಯಂಗಳಂ ಧರಿಸಿ, ಸೌಂದರ್ಯವೆನುವ ದಿವ್ಯಾಭರಣಂಗಳಿಂದ ಒಪ್ಪಿ, ಪರಸ್ಪರ ಯೋಗಕ್ಷೇಮ ವೃತ್ತಾಂತಂಗಳಂ ಪೇಳುತ್ತ, ಅಪರಿಮಿತಪ್ರೇಮಪ್ರರವೀಳ್ಯವಂ ಸವಿದು, ನಗುತ ನಲಿಯುತಲಿರುವ ಸಮಯದೊಳ್ ಮಹಾರಾಜನ ಅನುಜ್ಞೆಯಿಂದ ಮಂದಾರವಮಾಲೆಯು ಗಂಧರ್ವಗಾನವ ಗೆಯ್ಯುತಲಿರುವ ಕಾಲದೊಳ್ ಅಲ್ಲಿರುವ ರತ್ನಮಯ ಪಾತ್ರೆಗಳೆಲ್ಲ ಮಂದಾರವಮಾಲೆಯ ಗಾನದಿಂ ಕರಗಿ ನೀರಾಗಿ ಹರಿಯುತಲಿರುವದಂ ರಾಜೇಂದ್ರನು ಕಂಡು ಮನದೊಳ್ ಈ ಮೋಹನಾಂಗಿಯ ಗಾನದಿಂದ ರತ್ನಂಗಳೆಲ್ಲ ನೀರಾಗುವಾಗ ಈ ಕಲ್ಪವೃಕ್ಷವು ಕರಗಿ ನೀರಿನಂತಾದರೇನು ಮಾಡುವದೆಂದು ಯೋಚಿಸುತ, ಗಾನವಂ ಕೇಳುವವರಲ್ಲಿ ಭಾರಿ ಭಾರಿ ಕುತೂಹಲವಧಿಕವಾಗುತಲಿರಲದಂ ಕಂಡು, ಮಂದಾರವಮಾಲೆಯು ನಸುನಗುತಲಿರಲು; ಆಗ ರಾಜೇಂದ್ರನು ಮೆಲ್ಲ ಮೆಲ್ಲನೆ ಸಮೀಪವನ್ನೈದಿ, ಮಂದಾರವಮಾಲೆಯಂ ಕುರಿತು ಎಲೈ ರಮಣಿಯೆ! ನಿನ್ನ ಕುಚಂಗಳೆನುವ ಚಕ್ರವಾಕಪಕ್ಷಿಗಳು, ಮುಖವೆನುವ ಚಂದ್ರನಂ ನೋಡಿ ಭಯಗೊಂಡು ಓಡಿ ಪೋದರೇನು ಮಾಡುವದೆನುತ, ನನ್ನ ಕರಂಗಳೆನುವ ಪಂಜರಂಗಳೊಳ್ ಇರ್ಪಲೆಂದು ಕುಚಂಗಳಂ ಪಿಡಿದು, ರೋಮಾವಳಿಯೆನುವ ಕೃಷ್ಣಸರ್ಪವು ನಿನ್ನ ಅಧರವೆನುವ ನಾಗರತ್ನವಂ ಕಂಡು ಕೊಂಡು ಪೋಗುವೆನೆಂದು ಬಂದರೇನು ಮಾಡುವದೆನುತ ಅವಳ ಬಿಂಬಾಧರದ ಸುಧಾರಸವನಾಸ್ವಾದಿಸುತ, ಮೊಗವೆನುವ ತಾವರೆಯ ಪುಷ್ಪವ ಕಂಡು ಮುಂಗುರುಳುಗಳೆನುವ ಮರಿದುಂಬಿಗಳೆರಗಿದರೆ ಎಂತಾಗುವದೋ? ಎನುತ ಮೊಗದೊಳ್ ಮೊಗವಂ ಇಟ್ಟು, ಮತ್ತೂ ನಿನ್ನ ನಾಸಾಭರಣವೆನುವ ರಾಜಹಂಸೆಯು ನೀಳವಾದ ತೋಳುಗಳಂ ತಾವರೆಯ ಕಿರಿ ಬಳ್ಳಿಗಳೆಂದು ಕಚ್ಚಿದರೆ ಎಂತು ಸೈರಿಸುವೆ ಎನುತ ಭುಜಂಗಳಂ ಆಲಿಂಗನವಗೈಯುತಲಿರಲಾ ರಾಜೇಂದ್ರನಂ ನೋಡಿ ಮಂದಾರವಮಾಲೆ ನಸುನಸುನಗುತ, ಅಷ್ಟರೊಳ್ ತಿರಿಗಿ ನಾಚಿಗೆಗೊಳುತ, ಮೆಲ್ಲಮೆಲ್ಲನೆ

ರಾಜೇಂದ್ರನ ಮನಸಿಪ್ಪಂತೆ ಅವಯವಂಗಳಂ ಸ್ವಾಧೀನವಗೈದು, ಮತ್ತಂ ಬೆರಸು ದೃಢಾಲಿಂಗನವಗೈಯುತ್ತ ಮದನ ಮಹೋತ್ಸವಾರಂಭವಂ ಮಾಡಿ, ಸಂಭ್ರಮದಿಂದ ತುಂಬಿ ತುಳುಕುತ, ಕಿರಿಬೆವರೆನುವ ಮುಕ್ತಾಹಾರಂಗಳಂ ಚೆದರಿಸುತ್ತ, ಸಂತೋಷ ಸಮುದ್ರದೊಳೀರ್ವರೂ ಓಲ್ಯಾಡುತಲಿರಲಾಗ ರಾಜೇಂದ್ರನು ಸಕಲ ಕಲಾಕುಶಲನಾದುದರಿಂದ ಪರಿಪರಿಯ ಚಮತ್ಕಾರಂಗಳಗೈಯುತ್ತ, ಆ ತರುಣಿಯ ಮನವಂ ಹಾಯಿಗೊಳಿಸುತ್ತ, ಮಣಿತ ಧ್ವನಿಗಳಿಂದ ಕಪೋತಪಕ್ಷಿಗಳನಾದವಂ ನಾಚಿಸುತ್ತ, ಚತುರಶೀತಿ ಬಂಧಂಗಳಿಂದ ಬೆರಸು ಸುರತ ಸುಖವಂ ಸೂರೆಗೊಂಡು, ಬಳಿಕ ಈರ್ವರೂ ರತಿ ಶ್ರಾಂತರಾಗಿ, ಸುಖನಿದ್ರೆಯಿಂದ ಆ ರಾತ್ರಿ ಎಲ್ಲವಂ ಕಳೆಯುತ್ತಿರಲೂ; ಆ ಸಮಯದೋಳ್ ಸೂರ್ಯೋದಯವಾಗಲು, ಎಂದಿನಂತೆ ಈರ್ವರೂ ಮಜ್ಜನ ಭೋಜನಾದಿಗಳಗೈದು, ಸರ್ವಾಭರಣಭೂಷಿತರಾಗಿ ವನವಿಹಾರವಂ ಮಾಡಲಿಚ್ಛೈಸಿ ಅನ್ಯೋನ್ಯಕರಂಗಳಂ ಪಿಡಿದು, ಅಲ್ಲಲ್ಲಿ ವಿಹಾರಪೂರ್ವಕವಾಗಿ ಸಂಚರಿಸುತಲಿರುವಾಗ ಮಂದಾರಮಾಲಿಯು ಪುಷ್ಪಾಪಚಯವಂ ಮಾಡಬೇಕೆಂದು, ನುಡಿಯಲಾ ಮಹೀವಲ್ಲಭನು ಎಲೈ ಕೋಮಲಾಂಗಿಯೆ! ಮಲ್ಲಿಗೆಯ ಹೂವುಗಳೆಲ್ಲ ನಿನ್ನ ಮಂದಹಾಸವಂ ನೋಡಿ ಮನನೊಂದು ಮಕರಂದವೆಂಬ ನೆವದಿಂದ ಕಂಬನಿ ತುಂಬುತಲಿರುವದು, ಸಂಪಿಗೆಯ ಹೂವುಗಳು ನಿನ್ನ ಮೈಬಣ್ಣವಂ ನೋಡಿ ಕಳವಳಗೊಂಡು ಭಯದಿಂದ ತಲ್ಲಣಿಸಿ ಭೂಮಿಯೊಳ್ ಬೀಳುವವೋ? ಎಂಬಂತೆ ವೃಕ್ಷದಿಂ ಉದುರುತಲಿರುವವು, ಕನ್ನೈದಿಲು ಹೂವುಗಳು ನಿನ್ನ ನೇತ್ರಂಗಳ ಚಲುವಿಕೆಯಂ ನೋಡಿ ಮುಖಭಂಗವಂ ಪೊಂದಿ ಕರಂಗಳಂ ಮುಗಿವಂತೆ ತೋರುತಲಿರುವವು, ಬಾಳೆಯ ಹೂವುಗಳು ನಿನ್ನ ಅವಯವಂಗಳ ಮಾರ್ದವವಂ ಕಂಡು ಲಜ್ಜಿತಂಗಳಾಗಿ ತಲೆಬಾಗಿರುವವು, ಪದ್ಮಂಗಳು ನಿನ್ನ ಮುಖಕಾಂತಿಯಿಂದ ಪರಾಜಯವಂ ಪಡೆದು ಸರೋವರಂಗಳಂ ಪೊಕ್ಕು ಸೂರ್ಯನಂ ಕುರಿತು ಬಿಸಲೊಳ್ ತಪವಂ ಮಾಡುತಲಿರುವವು, ಕಾಡರಿಯ ಹೂವುಗಳು ನಿನ್ನ ಬಿಂಬಾಧರದ ಬಣ್ಣದಿಂದ ಭಂಗವಂ ಹೊಂದಿ ತುಂಬಿಗಳೆಂಬ ನೆವದಿಂದ ಮೊಗಂಗಳು ಕಪ್ಪು ಮಾಡಿಕೊಂಡಿರುವವೂ, ಮೊಲ್ಲೆಯ ಮೊಗ್ಗೆಗಳು

ನಿನ್ನ ದಂತಪಂಙ್ತಿಗಳ ಕಾಂತಿಗಳಿಂದ ಭಯಗೊಂಡು ಬಾಯಿಬಿಡುತಲಿರುವವು, ನೋಡೆಂದು ನುಡಿದು, ಬಳಿಕ ಇಂತುಮಲ್ಲದೇ ನೀನೇ ಮಂದಾರವಮಾಲಿಯಲ್ಲವೇ? ಎಂದು ಚಾತುರ್ಯದಿಂದ ಮಾತುಗಳನಾಡುತ ಕೈ ಪಿಡಿದು, ಅಲ್ಲಲ್ಲಿ ಮೆಲ್ಲ ಮೆಲ್ಲನೆ ಸಂಚರಿಸುತ ಉಪವನದ ಬಾಗಿಲೊಳ್ ಕುಳಿತಿರುವ ಕಲಹಂಸೆ ಸುಮತಿಗಳೀರ್ವರಂ ನೋಡುವೆನೆಂದು ಬರುತ್ತಿರಲು;

ಅತ್ತಲಾ ಚಿತ್ರವರ್ಮರೀರ್ವರೂ ಮಂದಾರ ಮಾಲೆಯಂ ಹುಡುಕುತ ಪ್ರಪಂಚವನೆಲ್ಲವಂ ತಿರಿಗಿ ಎಲ್ಲಿಯೂ ಕಾಣದೆ ಹಿಂತಿರಿಗಿ ಬಂದಬಳಿಕ ಚಿತ್ರವರ್ಮನು ಉಪವನದ ಬಾಗಿಲೊಳ್ ಕುಳಿತಿರುವ ಸುಮತಿ ಕಲಹಂಸೆಯರಂ ಕಂಡು, ಇವರಿಂದ ಮಂದಾರವಮಾಲೆಯ ವೃತ್ತಾಂತವೆಲ್ಲವಂ ವಿಸ್ತಾರವಮಾಗಿ ತಿಳಿದು, ಪರಮ ಸಂತೋಷಭರಿತನಾಗಿ, ವೇಗದಿಂ ಕಾಂತಿಮತೀಪುರವನೈದಿ, ಅಲ್ಲಿರುವ ತನ್ನ ಪತ್ನಿಯಾದ ಮಂಜೂಷೆ ಮೊದಲಾದವರಿಗೆ ಈ ವೃತ್ತಾಂತವೆಲ್ಲವಂ ತಿಳುಹಿ, ಅವರೆಲ್ಲರಂ ಒಡಗೊಂಡು ಪರಿಪರಿ ದಿವ್ಯಾಭರಣ ಮೊದಲಾದ ಅಪ್ರೂರ್ವ ವಸ್ತುಗಳಂ ಗಂಧರ್ವರಿಂದ ತೆಗಿಸಿಕೊಂಡು, ಚಿತ್ರವತಿಯನೈದಿರಲಾಗ ಮಂದಾರವಮಾಲೆ ಸುಗಂಧಮಹೀವಲ್ಲಭರೀರ್ವರೂ ಸುಮತಿ ಕಲಹಂಸೆಯರೀರ್ವರಂ ನೋಡಿ, ಪರಸ್ಪರಾನುರೂಪವಂ ನೋಡಿ ಗಂಧರ್ವ ವಿವಾಹವಗೈದು, ವನವಿಹಾರವಗೈವಂತೆ ಕಟ್ಟು ಮಾಡಿ, ಪರಮಾನುದ ಭರಿತರಾಗಿ, ಅಲ್ಲಿಂದ ತೆರಳಿ ಬಂದು ಮಂದಾರ ಮಾಲೆಯ ತಾಯಿ ತಂದೆಗಳಾದ ಮಂಜೂಷೆಯು ಮಗಳಾದ ಮಂದಾರ ಮಾಲೆಯಂ ತಬ್ಬಿ ಮುದ್ದಾಡಿ, ಸಂತೋಷ ಉಬ್ಬಿ ದರಿದ್ರನಿಗೆ ನವನಿಧಿಗಳು ಕೈ ವಶಮಾದಂತೆ ಆನಂದಪಡುತಲಿರಲಾಗ, ಚಿತ್ರರ್ಮನು ವಿಚಿತ್ರ ವಸ್ತ್ರಾಭರಣಂಗಳಂ, ಅಪ್ರೂರ್ವ ರತ್ನಂಗಳಂ ಕೂಡ ತಂದು ರಾಜೇಂದ್ರಂಗೆ ಕೈಕಾಣಿಕೆಯಾಗಿ ಒಪ್ಪಿಸಲು, ಸುಗಂಧಮಹೀಪಾಲಕನು ಚಿತ್ರವರ್ಮನಂ ಕುರಿತು ಎಲೈ ಗಂಧರ್ವಾಧಿಪನೆ! ನೀನು ಇಂದು ಮೊದಲುಗೊಂಡು ಚಿತ್ರವತೀ ಪುರವನ್ನಾಳಿಕೊಂಡಿರುವದೆಂದು ಪೇಳಿ ಪಟ್ಟವಂ ಕಟ್ಟಿ ಬಳಿಕ ಶಾಕದ್ವೀಪದಲ್ಲಿರುವ ರಾಜಾಧಿರಾಜರು ಒಪ್ಪಿಸುವ ಕಪ್ಪಂಗಳಂ ಒಪ್ಪಿಸಿಕೊಂಡು ಧರ್ಮದಿಂ ರಾಜ್ಯವನ್ನಾಳುತ್ತಿರುವದೆಂದು ಆವರಂ

ಕುರಿತು ಕಟ್ಟು ಮಾಡಿ ಉಚಿತವಾಗಿ ಉಪಚಾರಂಗಳಗೈಸಿ ಕಳುಹಿ, ಪಾರಿಜಾತ ತರುವಿರುವ ಉಪವನವಂ ಪೊಕ್ಕು ಮಂದಾರಮಾಲೆಯೊಡೆಗೂಡಿ ಮೋಹಲಿಸಂತೆ ಮದನ ಕದನವಂ ಮಾಡುತ್ತಿರಲಾಗ ಮಂತ್ರಿಯಾದ ಸುಮತಿಯು ರಾಜೇಂದ್ರನಂ ಕುರಿತು ಎಲೈ ರಾಜಕುಲತಿಲಕನೆ! ಬಂದು ಬಹಳ ದಿವಸಗಳಾಯಿತೆಂದು ವಿಜ್ಞಾಪನೆಯಗೈಯಲೂ, ಬಳಿಕ ಸುಗಂಧರಾಜೇಂದ್ರನು ಸುಮತಿಯೊಡಗೂಡಿ ಶುಚಿಯಾಗಿ ಬಂದು ಪಾರಿಜಾತ ವೃಕ್ಷವಂ ಪರಿಪರಿಯಾಗಿ ಪೂಜೆಯಗೈದು ಪ್ರಾರ್ಥಿಸಿ, ಆ ವೃಕ್ಷವಂ ಕರಂಗಳಿಂದ ಪಿಡಿಯಲಾ ತರವು ಪೂಮಾಲೆಯಂ ಪಿಡಿದೆತ್ತಿದಂತೆ ರಾಜೇಂದ್ರನ ಹಸ್ತ ಸ್ಪರ್ಶದಿಂ ಸುಲಭವಾಗಿ ಕೈ ಸೇರಲು, ರಾಜೇಂದ್ರನು ಕರಗತವಾದ ಕಲ್ಪ ವೃಕ್ಷವಂ ಸುಮತಿಯ ಹಸ್ತದೊಳಿತ್ತು ಮಂದಾರಮಾಲೆ, ಕಲಹಂಸೆ, ಸುಮತಿಯರೊಡಗೂಡಿ ವಿಚಿತ್ರ ವಸ್ತ್ರಾಭರಣಂಗಳಗೊಂಡು ಮಂಜೂಷೆ ಚಿತ್ರವರ್ಮರಿಗೆ ವಂದನೆಯಂ ಮಾಡಿ, ಅವರುಗಳ ಅನುಮತಿಯಿಂದ ಯಕ್ಷನನ್ನೇರಿ ಅಂತರಿಕ್ಷದೋಳ್ ತೆರಳಿ ಬರುತ ಅಲ್ಲಲ್ಲಿರುವ ವಿಚಿತ್ರಂಗಳಂ ಮಂದಾರಮಾಲೆಗೆ ತೋರುತ, ಕ್ಷಣದೋಳ್ನೂರಾರು ಯೋಜನಗಳಂ ದಾಂಟುತ, ಆಯಾಯ ದ್ವೀಪಂಗಳೊಳಿರುವ ಜನಂಗಳಂ ಅಚ್ಚರಿಗೊಳಿಸುತ, ಜಂಬೂದ್ವೀಪದೊಳಿರುವ ಕಳಿಂಗನಗರದ ಸಮೀಪವಂ ವೇಗದಿಂ ಯೈದುತ್ತಿರಲಾಗ ಯಕ್ಷನೆಂಬ ಪುಷ್ಪಕದೋಳ್ಕುಳಿತಿರ್ಪ ಸುಗಂಧ ಮಹಾರಾಜೇಂದ್ರಂಗೆ ಸುಮತಿಯು ಪಿಡಿದಿರುವ ಶ್ವೇತಚ್ಛತ್ರವೋ? ಎಂಬಂತೆ ವಿರಾಜಿಸುತಲಿರುವ ಪಾರಿಜಾತ ವೃಕ್ಷವು ಪುಷ್ಪಗಳ ವಾಸನೆಯಿಂದ ಕಳಿಂಗದೇಶವನೆಲ್ಲ ಸುಗಂಧದೇಶವನ್ನಾಗಿ ಮಾಡುತ, ಎಲ್ಲಿಯೂ ಪರಿಮಳಂಗಳಂ ತುಂಬಿ ತುಳುಕುವಂತೆ ಮಾಡುತ, ಸುಗಂಧರಾಜನೆನುವ ನಾಮವಂ ಸಾರ್ಥಕವಾಗಿ ಮಾಡುತ, ಕಳಿಂಗ ಪುರವಂ ಕುರಿತು ಬರುತ್ತಿರಲು, ಆಗ ಅಲ್ಲಿರುವ ಜನಂಗಳೆಲ್ಲರೂ ಅದೊಂದು ಬಗೆಯಾದ ಅಪರಿಮಿತವಾದ ಹರ್ಷ ಉಂಟಾಗಿ ಗುಂಪುಗುಂಪಾಗಿ ಇದೇನಚ್ಚರಿ ಎಂದು ನೋಡುತ್ತಿರಲಾಗ ಕಳಿಂಗಪುರದ ಕಾಮಿನಿಯರೆಲ್ಲ ತಮ್ಮ ತಮ್ಮ ಮಂದಿರಂಗಳ ಚಂದ್ರಶಾಲೆಗಳನ್ನೇರಿ, ಏರೀರಿ ಮೀರಿ ಬರುವ ಪರಿಮಳ ಸಮುದ್ರದಲ್ಲಿ ಮುಳುಗಿ ಏಳುವೆವೆಂದು

ಮುಖಂಗಳಂ ಎತ್ತುವರೊ? ಎಂಬಂತೆ ಪಾರಿಜಾತ ವೃಕ್ಷಮೊತಗೂಡಿ ಮೇಲೆ ಬರುತಲಿರುವ ಸುಗಂಧರಾಜೇಂದ್ರನು ನೋಡುತಲಿರುವ ಸಮಯದೋಳ್, ತರುಣಿಯರ ಮುಖಚಂದ್ರನಂ ನೋಡಿ ಇದೇನಸ್ತ್ಯತವೆಂದು ನೋಡಲೋಸುಗ ಕ್ಷೀರಸಾಗರವೇ ಗಗನಮಾರ್ಗದೊಳ್ ಬರುವದೋ? ಎಂಬಂತೆ ಪಾರಿಜಾತವೃಕ್ಷ ಕಾಂತಿಯು ಬೆಳಗುತ್ತಿರಲು, ಆ ಕಾಲದೋಳ್ ಸಹಸ್ರ ವಸಂತೋದಯವು ಒಂದೇ ಸಮಯದೊಳಾದಂತೆ ಅಲ್ಲಿರುವ ಉಪವನವೃಕ್ಷಂಗಳೆಲ್ಲ ಪಲ್ಲವ ಪುಷ್ಪಫಲಂಗಳಿಂದ ಭರಿತವಾಗಿ ವಿರಾಜಿಸುತ್ತಿರಲು, ಆಗ ಸೌಗಂಧಿಕಾದೇವಿಯು ಮಂದಿರದ ಚಂದ್ರಶಾಲೆಯ ಮೇಲು ಭಾಗದೊಳ್ ಬರುತ್ತಿರಲಾ ಕಳಿಂಗರಾಜಪುತ್ರಿಯು ಚಿತ್ರಲೇಖೆಯ ಹಸ್ತದಿಂದ ರಾಜೇಂದ್ರನ ಉಪಚಾರಕ್ಕೆ ಯೋಗ್ಯಂಗಳಾದ ವಸ್ತುಗಳಂ ತೆಗಿಸಿಕೊಂಡು ವೇಗದಿಂ ಬಂದು ಕಾದಿರಲಾಗ, ರಾಜೇಂದ್ರನು ಆ ಕಳಿಂಗರಾಜಪುತ್ರಿಯಂ ನೋಡಿ ಚಂದ್ರಶಾಲೆಯೊಳ್ ಎಚ್ಚರದಿಂದಿಳಿಯಲು, ರಾಜಪುತ್ರಿಯು ರಾಜಪುತ್ರಂಗೆ ಹಸ್ತಲಾಗವಂ ಇತ್ತು ರತ್ನಪೀಠದೊಳ್ಕುಳ್ಳಿರಿಸಿ, ಚಿತ್ರಲೇಖೆ ಒಪ್ಪಿಸುವ ವಸ್ತುಗಳಗೊಂಡು ಪರಿಪರಿಯಾಗಿ ಉಪಚಾರಂಗಳಗೈದು, ಕಲ್ಪವೃಕ್ಷವಂ ನೋಡಿ ಸಲಿಯುತ, ಮಂದಾರಮಾಲೆ ಕಲಹಂಸೆಯರಂ ಕಂಡು ಆಚ್ಚರಿಗೊಂಡು ಅವರ ವೃತ್ತಾಂತವಂ ಕೇಳಿ, ಪರಿಪರಿ ವಸ್ತ್ರಾಭರಣಂಗಳಂ ಕೊಟ್ಟು ಮನ್ನಿಸಿ, ರಾಜೇಂದ್ರನಂ ಭಾರಿಭಾರಿಗೂ ನೋಡುತ್ತಿರಲು, ಆಗ ರಾಜೇಂದ್ರನು ಕಲ್ಪವಂ ಕೊಡುವದೆಂದು ಸುಮತಿಗೆ ಸನ್ನೆಯಂ ಮಾಡಲು, ಸುಮತಿಯು ಕಳಿಂಗರಾಜಪುತ್ರಿಗೆ ಕಲ್ಪವೃಕ್ಷವಂ ಒಪ್ಪಿಸಿ, ಇನ್ನು ಮೇಲೆ ಪುಣ್ಯಕವ್ರತವಂ ಬೆಳೆಯಿಸಬಹುದೆಂದು ನುಡಿಯಲಾ ರಾಜಪುತ್ರಿಯು ಅಮೂಲ್ಯ ರತ್ನಾಭರಣಂಗಳಂ, ದಿವ್ಯದುಕೂಲಂಗಳಂ, ತಾಂಬೂಲ ಮೊದಲಾದ ಉಪಹಾರಂಗಳಂ ರಾಜೇಂದ್ರನ ಎದುರಾಗಿ ಕೈ ಕಾಣಿಕೆಗಳಂ ತಂದಿಟ್ಟು ಪ್ರಣಾಮವಗೈದು, ಬಳಿಕ ಬಗೆ ಬಗೆಯಾದ ಉಪಚಾರಂಗಳಿಂದಲು ಸಂತೋಷಪಡಿಸಿ, ಕಾಂಡಪಟದಮರೆಯೊಳ್ನಿಂದಿರಲು,

ಆಗ ಕಳಿಂಗರಾಜನು ಇದನೆಲ್ಲವಂ ಕೇಳಿ ಹರ್ಷದಿಂ ಓಡಿ ಬಂದು ರಾಜೇಂದ್ರನಂ ನೋಡಿ ಪರಿ ಪರಿಯಾಗಿ ಪೂಜೆಯಗೈದು ಕೊತ್ತಲಂಗ

ಲೋಳ್ ಫಿರಂಗಿಗಳಂ ಹಾರಿಸಲು, ಆಗ ರಾಜೇಂದ್ರನು ಕಳಿಂಗರಾಜ ಪುತ್ರಿಯು, ವಿಜಯವರ್ಮರಾಯನು ಕೂಡ ಮಾಡುವ ಉಪಚಾರಂಗಳಂ ಸ್ವೀಕರಿಸಿ, ಅವರ ಅನುಮತಿಯಿಂದ ಅಲ್ಲಿಂದ ತೆರಳಿ ತನ್ನ ಕಟಕವನ್ನೈದುತ್ತಿರಲಾಗ ವೀರಸೇನ ಮೊದಲಾದವರು ಎದುರ್ಗೊಂಡು ಬಂದು ಫಿರಂಗಿಗಳಂ ಹಾರಿಸಿ ಪ್ರಣಾಮವಂ ಮಾಡಿ ಸಂಗಡ ಬರುತ್ತ ಆ ಸ್ಥಾನಮಂಟಪವನ್ನೈದಲು, ಬಳಿಕ ರಾಜೇಂದ್ರನು ವೀರಸೇನ ಮೊದಲಾದವರಿಗೆ ಅಪ್ಪಣೆಯನಿತ್ತು ಪಟಮಂದಿರವನ್ನೈದಿ ಕುಸುಮಲತೆ, ಮಂದಾರಮಾಲೆ, ಸುಮತಿ, ಕಲಹಂಸೆ ಮೊದಲಾದವರಿಂದೊಡಗೂಡಿ ಭೋಜನಗೈದು, ಕಲಹಂಸೆ ಸುಮತಿಗಳೀರ್ವರಿಗೂ ನಿಮ್ಮ ಪಟಮಂದಿರವನ್ನೈದುವದೆಂದು ಅಪ್ಪಣೆಯನ್ನಿತ್ತು, ಕುಸುಮಲತೆ, ಮಂದಾರಮಾಲೆ ಮೊದಲಾದವರಿಂದೊಡಗೂಡಿ ವಿನೋದವಂ ಮಾಡುತ, ಮನ್ಮಥಮಹೋತ್ಸವವಗೈಯುತ ಸುಖದಿಂದಿರುತ್ತಿರ್ದನೆಂಬಲ್ಲಿಗೆ. * * * *

ಗದ್ಯ—ಕುಂಡಲಿಶಯನ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖನಿಖಿಲ ಸುರವರ ಪರಿಭವ ಪರಿಣತ ಪ್ರಚಂಡ ಬಲಚಂಡಮುಂಡ ವಿಖಂಡನ ನಿಪುಣ ಕೋದಂಡ ಕಾಂಡಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾನಿಸ್ಸಹಾಯ ನಿರ್ಮಾಣ ಧೌರೇಯಘಟಿಕಾ ಶತಗ್ರಂಥ ದಿನ ದಿನ ಪ್ರಬಂಧ ನಿಬಂಧನ ಧುರಂಧರ ತ್ರಿಭುವನಪವಿತ್ರಾತ್ರೇಯಸಗೋತ್ರಾಬ್ಧಲಾಯನ ಸೂತ್ರ ಚಾಮರಾಜ ಮಹಾರಾಜ ಪುತ್ರ ನರಪತಿ ಬಿರುದ ಮಹಿಶೂರ ಪುರವರಾಧೀಶ ಶ್ರೀ ಕೃಷ್ಣರಾಜವಡೆಯರವರಿಂದ ರಸಿಕಜನಾನಂದ ಕರಮಾಗಿ ವಿರಚಿತಮಾದ ಸೌಗಂಧಿಕಾ ಪರಿಣಯಮೆಂಬ ಈ ನವೀನ ಕೃತಿಯೊಳ್ ವಸಂತಋತುವರ್ಣನ, ಮಂದಾರಪುಮಾಲಾ ಸಂಭೋಗ, ಕಲ್ಪವೃಕ್ಷಪಣಮಂ ಗೆದ್ದು ತಂದದ್ದು ಮೊದಲಾದ್ದಂ ಬಣ್ಣಿಸಿರುವ ಇಪ್ಪತ್ತನಾಲ್ಕನೇ ಆಶ್ವಾಸ ನಿರೂಪಣಕ್ಕೆ ಮಂಗಳ ಮಹಾ. * * * * * * *

ಇಪ್ಪತ್ತನಾಲ್ಕನೆಯ ಆಶ್ವಾಸ ಸಂಪೂರ್ಣವು.

ಶ್ರೀರಸ್ತು.

## ಇಪ್ಪತ್ತೈದನೇಯ ಆಶ್ವಾಸ ಪ್ರಾರಂಭಕೆ.

ಶ್ರೀಚಾಮುಂಡಿಕಾಂಬಾಯೈನಮಃ.

ಅನಂತರದಲ್ಲಿ ಸುಗಂಧಮಹಾರಾಜೇಂದ್ರನು ಪರಿಪರಿಯಾದ ಅಕಾಲ ಪುಷ್ಪಂಗಳಂ, ಫಲಂಗಳಂ ತುಂಬಿರುವ ಅಪೂರ್ವವಾದ ಪದಾರ್ಥವಾಗಿ ಕೇಳಿರುವ ವೃಕ್ಷವಂ ತಂದು ಸೌಗಂಧಿಕಾದೇವಿಯ ಮನೋರಥವಂ ನೆರವೇರಿಸಿ, ಆ ರಾತ್ರಿಯಲ್ಲಿ ತನ್ನ ವಿಜಯಲಕ್ಷ್ಮೀವಿಲಾಸವೆಂಬ ಹಜಾರದಲ್ಲಿ ಹಂಸತೂಲಿಕಾ ತಲ್ಪದೊಳ್ ನಿದ್ರಾಮುದ್ರಾವಶಂಗತನಾಗಿರುತ್ತಿರಲು, ಬೆಳುಪೇರಿ ಬರುವ ಬೆಳಗಿನ ಝಾಮದಲ್ಲಿ ಸ್ವಾಮಿಯೇ ಎಚ್ಚರಿಕೆ ಪರಾಕೆಂದು ನುಡಿಯುವ ಗಿಣಿ ಮುಂತಾದ ಪಕ್ಷಿಗಳ ಶಬ್ದಂಗಳಿಂದಲು, ಉದಯಕಾಲದಲ್ಲಿ ಬಾರಿಸುವ ಮೊಳಗಿಸುವ ವೀಣಾವೇಣು ಮೃದಂಗ ಮೊದಲಾದ ವಾದ್ಯ ಧ್ವನಿಗಳಿಂದಲು, ಮುಖಮಜ್ಜನದ ಸಾಮಗ್ರಿಗಳಂ ಸಜ್ಜುಗೊಳಿಸಿ ಸರದಿಗಾಯುವ ಸೇವಕ ಜನರ ಪರಸ್ಪರ ಸಲ್ಲಾಪಗಳಿಂದಲೂ, ಎಚ್ಚರವನ್ನೈದಿ, ಶ್ರೀದೇವಿಯ ಪಾದಪಂಕಜವಂ ಧ್ಯಾನಿಸುತ್ತ, ಪವಳದ ಪಟದಲ್ಲಿರುವ ಪಾರ್ವತೀದೇವಿಯ ಪಾದಪಂಕಜವಂ ನೋಡಿ ಕೈಗಳಂ ಮುಗಿಯುತ್ತ, ನಿಜಕರಕಮಲಂಗಳಂ ನಿರೀಕ್ಷಿಸಿ, ಪರ್ಯಂಕದಿಂದೆದ್ದು ಬರುತ ಮುಂಭಾಗದೊಳ್ ಇರುವ ಮುತ್ತಿನ ಹಜಾರದಲ್ಲಿ ನಿಂದಿರ್ದ ಬ್ರಾಹ್ಮಣಾಶೀರ್ವಚನಂಗಳಂ ಕೇಳಿ, ಬಳಿಕ ಪರಮಹರ್ಷದಿಂ ಬಂದು ಕಂಡು ದಂಡಪ್ರಣಾಮವಂ ಮಾಡುವ ವೀರಸೇನ ಸುಮತಿ ಮೊದಲಾದ ಸಾಮಾಜಿಕರಂ ದಯೆಯಿಂದವಲೋಕಿಸುತ ಇಂದ್ರನೀಲಮಣಿ ಪೀಠದೊಳ್ ಕುಳಿತು ಮುಖಮಜ್ಜನವಗೈವ ಸಮಯದೊಳ್ ಬೇಹುಗೆ ಗೊತ್ತಾಗಿರುವ ಚಾರವರ್ಣನು ಪೇಳುವ ಆಯಾಯ ದೇಶಾಧಿಪತಿಗಳ ವೃತ್ತಾಂತಂಗಳಂ ಕೇಳಿ, ಮಂತ್ರಿಯ ಮುಖವಂ ನೋಡಿ ಪ್ರತ್ಯುತ್ತರಂಗಳಂ ಪೇಳುತ ಮುಖಮಜ್ಜನವಂ ಮಾಡಿ ಕಪ್ಪುರವೀಳ್ಯವಂ ಧರಿಸಿ, ಮಜ್ಜನ ಮಂದಿರವಂ ಕುರಿತು ಪೋಗಿ ಪರಿಮಳ ಭರಿತವಾದ ಪನ್ನೀರಿನಿಂ ಮಜ್ಜನಗೈದು, ಚಂದ್ರಕಿರಣ ಸಮೂಹಂಗಳಂ

ಒನಿರ್ಗಸಿದಂತೆಸೆವ ಧೌತವಸ್ತ್ರವಂ ಧರಿಸಿ, ಹಣೆಯೊಳ್ ಪಂಚಬ್ರಹ್ಮಮಂತ್ರಂಗಳಿಂದ ಅಭಿಮಂತ್ರಿಸಿದ ಭಸ್ಮಧಾರಣವಂ ಮಾಡಿ, ಸಂಧ್ಯಾವಂದನೆ ಮೊದಲಾದ ಆಹ್ನಿಕಗಳಂ ಸಾಂಗವಾಗಿ ನೆರವೇರಿಸಿ, ಪುರಶತ್ರಾಂಗಿಯಾದ ಮಹಾದೇವಿಯುಂ ಧ್ಯಾನಿಸಿ, ಸಕಲ ಸಾಮಂತರಾಜಸಮೂಹಂಗಳಿಂದೊಡಗೂಡಿ ಷಡ್ರಸೋಪೇತವಾದ ಭಕ್ಷ್ಯಭೋಜ್ಯಂಗಳಂ ಸವಿದು, ಬಳಿಕ ಕಪ್ಪುರವಿಳ್ಯವಮೆದ್ದು, ಜಯಲಕ್ಷ್ಮೀವಿಲಾಸವೆಂಬ ಹಸಾರಕ್ಕೆ ಬಂದು, ಕುರುವಿಂದ ಮಣಿಯ ಕಾಂತಿಯಿಂದ ಚಕಚಕಿಸುವ ಕಿರೀಟವಂ ಧರಿಸಿ, ಮರಕತ ಕವಚವಂ ತೊಟ್ಟು, ವಜ್ರಕುಂಡಲದಿಂದ ಅಲಂಕೃತನಾಗಿ, ದಿವ್ಯಾಂಬರಂಗಳಂಧರಿಸಿ, ಬಾಗಿಲೊಳ್ ನಿಂತಿರ್ದ ಗಜರಥದ ಸಮೀಪಕ್ಕೆ ಮಂತ್ರಿಯಾದ ಸುಮತಿಯು ಹಸ್ತಲಾಗದಿಂದೊಡಗೂಡಿ ಬಂದು, ಭಲ್ರೆ! ಪರಾಕು! ಸ್ವಾಮಿ! ಎಚ್ಚರಿಕೆ! ಎಂದು ಪೇಳುವ ಪರಿಚಾರಕ ಜನರ ಪರಿ ಪರಿ ಮಾತುಗಳಂ ಕೇಳಿ ಮುಂದೆನೋಡುತ್ತ, ಕೈಗಳಂ ಕಟ್ಟಿಕೊಂಡು ಸಾಲಾಗಿ ನಿಂತಿರ್ದ ಇವರು ಸಾಮಂತರಾಯರು, ಇವರು ಸೇನಾಪತಿಗಳು, ಇವರು ರಾಹುತರೆಂದು ಪೇಳುವ ಗುರಿಕಾರರ ಮಾತುಗಳಂ ಕೇಳಿ ಕಡೆಗಣ್ಣುಗಳಿಂ ನೋಡುತ್ತ, ಎಡಬಲದೊಳ್ ಭಟ್ಟರು ಒಟ್ಟಾಗಿ ಕೂಡಿ ಘಟ್ಟಿಯಾಗಿ ಜಗನೊಬ್ಬರ ಗಂಡಬಿರುದ, ರಾಜವೇಶ್ಯಾಭುಜಂಗ, ಇಂತೆಂದು ಒಕ್ಕಣಿಸುವ ಬಿರುದ ಪದ್ಯಂಗಳಂ ಕೇಳಿ ಇಮ್ಮಡಿಯಾದ ಭುಜಪರಾಕ್ರಮ ಉಳ್ಳವನಾಗಿ, ಉದಯ ಶಿಖರದಂತೆ ಉದ್ದವಾಗಿದ್ದ ಗಜರಥವನ್ನೇರಲಾಗ, ಸುಮತೀ ವೀರಸೇನರೀರ್ವರೂ ರಾಜಹಂಸದಂತಿರುವ, ರನ್ನದ ಹಿಡಿಗಳಂ ವಿರಾಜಿಸುತಿರ್ಪ ಚಾಮರಗಳಂಕರದೊಳ್ಪಿಡಿದು ಬೀಸುತ್ತಿರಲು, ಪಟಹ ನಿಸ್ಸಾಣ ಭೇರೀ ಝಾಂಕಾರ ಶಬ್ದಂಗಳು ದಿಕ್ಕುಗಳಂ ತುಂಬಿ ಭೋರೆಂದು ಮೊರೆಯುತ್ತಿರಲಾ ಸಮಯದಲ್ಲಿ ಮಿತಸೇನಾಪರಿವೃತನಾಗಿ ವಿಜಯನಗರದ ರಾಜಬೀದಿಯೊಳ್ ಬರುತ್ತಿರುವ ಸುಗಂಧಮಹಾರಾಜೇಂದ್ರನು ಸುಮಾನಗಾತ್ರಿಯರಾದ ಸುಂದರಿಯರಂ ನೋಡುತ್ತ, ಅವರ ಮನದೊಳ್ ಈ ರಾಜೇಂದ್ರನು ಜಯಂತನೊ? ವಸಂತನೊ? ಶ್ರೀಮಂತನೊ ಎಂದು ಸಂದೇಹಗೊಳಿಸುತ್ತ ಬರುತ್ತಿರಲು;

ಅತ್ತಲಾ ಕಳಿಂಗಮಂತ್ರಿಯು ತನ್ನೊಡೆಯನಾದ ವಿಜಯವರ್ಮ್ಮರಾಯನ ಸವಿಾಪವನೈದಿ ಎಲೈ ಸ್ವಾಮಿಯೆ! ಸುಗಂಧಮಹಾರಾಜೇಂದ್ರನು ಮಿತ ಸೇನೆಯಿಂದೊಡಗೂಡಿ ಆರನೇ ಪಣವಂ ಪರಾಂಬರಿಸಬೇಕೆಂಬ ನಿಮಿತ್ತದಿಂ ಚಿತ್ತೈಸುತಲಿರುವನೆಂದು ನುಡಿಯಲಾ ಮಾತಂ ಲಾಲಿಸಿ ಕಳಿಂಗಪತಿಯು ತನ್ನ ಸವಿಾಪದಲ್ಲಿ ನಿಂತಿರ್ದ ಅಂತಃಪುರದ ಗುರಿಕಾರನಂ ನೋಡಿ ಎಲೈ ಗುರಿಕಾರನೆ! ನೀನು ತ್ವರೆಯಿಂದ ತೆರಳಿ ಅಂತಃಪುರದ ಮುಂಭಾಗದಲ್ಲಿರುವ ಮುತ್ತಿನ ಹಜಾರದೊಳ್ ರತ್ನಪೀಠವಂ ಸಜ್ಜುಗೊಳಿಸಿ, ಮುತ್ತಿನ ಆರತಿಯಂ ಪಿಡಿದ ಮುತ್ತೈದೇರು ಎದುರಾಗಿ ಬರುವಂತೆ ನಿಯಮಿಸಿ, ಬಳ್ಳಿ ಮಿಂಚುಗಳಂ ಕೂಡಿರುವ ಕಾಲಮೇಘದಂತಿರ್ಪ ಸರಿಗೆಗಳಂ ಬಿಡಿಸಿರುವ ಕಪ್ಪಿನ ಕಾಂಡಪಟವಂ ಕಟ್ಟಿಸಿ, ಎನ್ನ ಪುತ್ರಿಯಾದ ಸೌಗಂಧಿಕಾದೇವಿಗೆ ಸುಗಂಧಮಹಾರಾಜೇಂದ್ರನು ಬಂದ ವರ್ತಮಾನವಂ ತಿಳುಹಿಸೆಂದು ಚಿತ್ರಲೇಖೆಗೆ ಕಟ್ಟುಮಾಡಿ, ದಿವ್ಯಾಂಬರಾಭರಣಂಗಳಂ ರತ್ನದ ತಟ್ಟೆಗಳೊಳ್ ತುಂಬಿಸಿ, ಕಸ್ತೂರಿ ಮೊದಲಾದ ಪರಿಮಳದ್ರವ್ಯಂಗಳಂ, ಪಚ್ಚೆಯ ಡಬ್ಬಿಗಳೊಳಿಟ್ಟು, ನೀರಾಜಿಯ ಮುಸುಕುಗಳಂ ಹೊದ್ದಿಸಿದ ಹತ್ತಾರು ಸುತ್ತು ವೀಳ್ಯದ ತಟ್ಟೆಗಳಂ ವಿಟ್ಟವಾಗಿ ಮಡಗಿಸಿ ಬಾಗಿಲೊಳ್ ಕಾದಿರೆಂದು ಕಟ್ಟುಮಾಡಿ, ತಾನು ಒಡ್ಡೋಲಗದಿಂದೆದ್ದು ಅರಮನೆಯ ಬಾಗಿಲ ಬಳಿಯೊಳ್ ಬರುತಿರ್ಪ ರಾಜೇಂದ್ರನಂ ಎದುರ್ಗೊಂಡು ಕರೆತರುತಿರಲಾಗ ಮುತ್ತೈದೇರು ಆ ಸುಗಂಧಮಹಾರಾಜೇಂದ್ರಂಗೆ ಮುತ್ತಿನ ಆರತಿಯನ್ನೆತ್ತಿ ಮಾಣಿಕದ ಶೇಸೆಯಂ ತಳಿಯಲು; ಬಳಿಕ ಸುಗಂಧರಾಜೇಂದ್ರನು ಕಳಿಂಗರಾಯನ ಅರಮನೆಯೊಳ್ ರನ್ನದ ಪೀಠದಲ್ಲಿ ಕುಳಿತು, ಸುಮತಿಯ ಮೊಗವಂ ನೋಡಲಾಗ ಮಂತ್ರಿಯಾದ ಸುಮತಿಯು ಕಳಿಂಗಪತಿಯಂ ಕುರಿತು ಎಲೈ ವಿಜಯವರ್ಮ್ಮರಾಯನೆ! ನಿಮ್ಮ ಪುತ್ರಿಯಾದ ಸೌಗಂಧಿಕಾದೇವಿಯು ಅಭಿಪ್ರಾಯವಂ ತಿಳಿದು ಆರನೇ ಪಣವಂ ಅಪ್ಪಣೆಯಂ ಕೊಡುವದಾಗೆಂದು ಪೇಳಲಾ ರಾಯನು ಸುಮತಿಯ ವಾಕ್ಯವಂ ಮನದೊಳಿಟ್ಟು ಮರಳಿ ಅವನಂ ಕುರಿತು ಎಲೈ ಮಂತ್ರಿಯೆ! ಅಖಂಡ ಭೂಮಂಡಲವನ್ನಾಳುವ ನಿಮ್ಮ ರಾಜೇಂದ್ರಂಗೆ ಅಸಾಧ್ಯವಾಗಿರುವ ಕಾರ್ಯಂಗಳು

ಮೂರು ಲೋಕಂಗಳಲ್ಲಿಯೂ ಇಲ್ಲ. ಈ ಪರಿ ಇರುವಲ್ಲಿಯೂ ಪಣಂಗಳು ತೃಣದಂತೆ ತೋರುವವು ಯಥಾರ್ಥವೇ ಸರಿ, ಆದರೆ ನಮ್ಮಂ ಹಾಸ್ಯವಂ ಮಾಡುವ ನೆಪದಿಂದ ನೀನೇ ಹೇಳುತಲಿದ್ದೀ ಎಂದು ನಸುನಗುತ ಅವನ ಕರವಂ ಪಿಡಿದು ಅಲ್ಲಾಡಿಸುತ್ತಿರಲೂ;

ಅತ್ತಲಾ ಸೌಗಂಧಿಕಾದೇವಿಯು ತನ್ನ ಸಖಿಯಾದ ಚಿತ್ರಲೇಖೆಯ ಭುಜದಲ್ಲಿ ಕರವನ್ನಿಟ್ಟು, ಘಲ್ಲು ಘಲ್ಲೆಂದು ಮೊರೆಯುವ ಕಾಲಂದಿಗೆಗಳ ಶಬ್ದಂಗಳಿಗೆ ಸರಿಯಾಗಿ ತಾಳಗಳಂ ಬಡಿಯುವಂತೆ ಖಣಿಖಣೀರೆಂಬ ರತ್ನದ ಕಾಲುಂಗರಗಳ ರವದಿಂದ ರಾಜೇಂದ್ರನಂ, ರತಿಪತಿಯಾದ ಕುಸುಮಶರನ ಬಾಣಂಗಳಿಗೆ ಸೂಟಿಪಡಿಸುತ್ತ, ಕಾಂಡಪಟದ ಜಾಲಂಧರಗಳಿಂದ ರಾಜೇಂದ್ರನ ಅಂಗ ಸೌಂದರ್ಯವಂ ಸೌಕುಮಾರ್ಯವಂ ಕೂಡ ನೋಡಿ, ಕಿರಿ ಚೆಮರೇರಿ ಮೈ ಎಲ್ಲಾ ಪುಳಕಗೊಂಡು, ಸೊಕ್ಕಿ ಮನೋಜಪಾರವಶ್ಯವನ್ನೈದಿ ಸ್ತಂಭೀ ಭಾವವಂ ಹೊಂದಿರುತ್ತಿರಲೂ ಆ ಸಮಯದೊಳ್ ಚಿತ್ರಲೇಖೆಯು ಕಾಂಡಪಟದ ಮುಂದಗಡೆಯಲ್ಲಿ ನಿಂತು ಮಂತ್ರಿಯಂ ಕುರಿತು ಎಲೈ ಸುಮತಿಯೆ! ನಮ್ಮ ಒಡೆತಿಯಾದ ಸೌಗಂಧಿಕಾದೇವಿಯು ಪದ್ಮಿನೀ ಮೊದಲಾದ ಜಾತಿ ಸ್ತ್ರೀರುಗಳಂ ಸೇವಾರ್ಥವಾಗಿ ತರಬೇಕೆಂದು ಪ್ರತಿಜ್ಞೆಯಂ ಮಾಡಿರುವ ಆರನೇ ಪಣವು ಇದೆ ಎಂದು ಬಿನ್ನವಿಸಲಾ ಸುಮತಿಯು ಆ ಮಾತುಗಳಂ ಶಿರಸಾವಹಿಸಿ, ನಿಮ್ಮ ಮನಸ್ಸಿಗೆ ಬಂದಂತೆ ಆಗಲೆಂದು ನುಡಿಯಲಾ ರಾಜೇಂದ್ರನು ಆ ಮಾತುಗಳಂ ಕೇಳಿ, ಸುಮತಿಯ ಮೊಗವಂ ನೋಡಿ ನಸುನಗುತ ವಜ್ರದ ಹಾವಿಗೆಯೊಳ್ ಪಾದವಿನ್ಯಾಸವಂ ಮಾಡುವ ಸಮಯದಲ್ಲಿ ವಿಜಯವರ್ಮರಾಯನು ದಿವ್ಯಾಂಬರಾಭರಣಂಗಳಂ, ಪುಷ್ಪಮಾಲಿಕೆ ಮೊದಲಾದ ಪರಿಮಳ ದ್ರವ್ಯಂಗಳಂ, ವೀಳ್ಯದ ತಟ್ಟೆಗಳಂ ಕೂಡೆ ಒಪ್ಪಿಸಿ, ಬಳಿಕ ವಿಲಾಸದಿಂ ಅಲ್ಲಿಲ್ಲಿ ನೋಡುತ, ಬರುತಲಿರುವ ರಾಜೇಂದ್ರನಂ ಗಜರಥವನ್ನೇರಿಸಿ, ಅಂಜಲಿಯಂ ಮಾಡಿ, ಅಪ್ಪಣೆಯಗೊಂಡು ನಿಷಧಾಂತಃಪುರವಂ ಪ್ರವೇಶಿಸಲು,

ಅತ್ತಲಾ ಸುಗಂಧರಾಜೇಂದ್ರನು ತನ್ನ ಕಟಕವಂ ಸೇರಿ ರಥದಿಂ ಇಳಿದು ವಿಜಯಲಕ್ಷ್ಮೀವಿಲಾಸವೆಂಬ ಮುತ್ತಿನ ಹಜಾರವಂ ಪೊಕ್ಕು

ಹಂಸತೂಲಿಕಾ ತಲ್ಪದೊಳ್ಕುಳಿತು, ಆರನೀ ಪಣವಂ ಸಾಧಿಸುವ ಸಾಧ ನೆಗಳಂ ಯೋಚಿಸುತ, ದಿಕ್ಕುಗಳಂ ನಿರೀಕ್ಷಿಸುತ, ಅಂತರಿಕ್ಷವನ್ನವಲೋ ಕಿಸುತ, ಹಲ್ಲುಗಳಿಂದ ತುಟಿಯಂ ಸವರುತ, ಸವಿಾಪದೊಳ್ಕುಳಿತಿರ್ದ ವಿದ್ಯಾಸಾಗರನೆಂಬ ಉಪಾಧ್ಯಾಯನಂ ನೋಡಿ, ಎಲೈ ಉಪಾಧ್ಯಾಯನೇ! ಪದ್ಮಿನೀ, ಚಿತ್ರಿಣೀ, ಶಂಖಿನೀ, ಹಸ್ತಿನೀರೆಂಬ ನಾಲ್ಕು ಜಾತಿಗಳಲ್ಲಿ ಸಂಕೀರ್ಣವಿಲ್ಲದಿರುವ ಜಾತಿಸ್ತ್ರೀವರ್ಗಗಳಂ ತರಬೇಕೆಂದು ಕಳಿಂಗರಾಜ ಪುತ್ರಿಯು ಪೇಳಿದ ಪಣವಂ ಕೇಳಿ ಎನ್ನ ಬುದ್ಧಿಗೆ ಸಂಕರವಿಲ್ಲದಿರುವ ಆ ಜಾತಿ ಸ್ತ್ರೀವರ್ಗಗಳು ಪುಟ್ಟುವವೇ ದುರ್ಲಭವೆಂದು ತೋರುತಲಿಧೆ, ಆದರೂ ಆ ಜಾತಿ ಸ್ತ್ರೀವರ್ಗಗಳ ಅವಯವ ಸೌಂದರ್ಯವಂ, ಅವರುಗಳ ಆಹಾರಂಗಳಂ, ಚೇಷ್ಟೆಗಳಂ, ಆ ಮಂದಯಾನೆಯರ ಕ್ರೀಡಾಸ್ಥಾನಂ ಗಳಂ, ಕಲಾಸ್ಥಾನಂಗಳಂ, ಚುಂಬನ ಭೇದಂಗಳಂ, ನಖದಂತಕ್ಷತ ಭೇ ದಂಗಳಂ, ವಿಜಾತೀಯ ಬಂಧಂಗಳಂ, ವಶೀಕರಣ ಸಾಧನಂಗಳಾದ ಮ ಣಿಮಂತ್ರಮೂಲಿಕೆಗಳಂ, ಮತ್ತಾಯಾಯ ದೇಶಂಗಳೊಳ್ ಜನಿ ಸಿದ ಸ್ತ್ರೀವರ್ಗಗಳ ಲಕ್ಷಣಂಗಳಂ, ಆ ಭಾಮಿನಿಯರ ಭಾವಂಗಳಂ ಅರಿ ತು ನವರಸ ಭರಿತವಾದ ಮಾತುಗಳಿಂದ ಅವರ ಮನವಂ ಪಾರವ ಶವಂ ಮಾಡುತ, ಕಲಾಸ್ಥಾನಂಗಳನ್ನರಿತು, ಕರಂಗಳಂ ಸೋಂಕಿಸಿ, ಕ ಲಾ ಪತನವಂ ತಿಳಿದಿರುವ ಪುರುಷ ಭೇದಂಗಳಂ ಕೂಡ ತಿಳಿಯಬೇಕೆಂ ದು ಪೇಳಲಾ ಮಾತುಗಳಂ ಕೇಳಿದ ವಿದ್ಯಾಸಾಗರನು ಸಾವಧಾನ ಚಿತ್ತ ದಿಂ ಪರಾಂಬರಿಸಬೇಕೆಂದು ವಿಜ್ಞಾಪನೆಯನ್ಗೈದು, ಎಲೈ ರಾಜಾಧಿರಾ ಜನೇ! ವಾತ್ಸ್ಯಾಯನ ಮಹರ್ಷಿಯಿಂದ ಪೇಳಲ್ಪಟ್ಟ ಶಾಸ್ತ್ರದೊಳ್ ನಿಶ್ಚೈಸಿರುವ ಪದ್ಮಿನೀ, ಚಿತ್ರಿಣೀ, ಶಂಖಿನೀ, ಹಸ್ತಿನೀರೆಂಬ ಜಾತಿ ಸ್ತ್ರೀಯರು ನಾಲ್ವರಲ್ಲಿ ಮೊದಲು ಪೇಳಿದ ಪದ್ಮಿನೀ ಜಾತಿ ಕಾಮಿನಿಯು ಉತ್ತಮೋತ್ತಮಳೆಂದೆನಿಸುವಳು. ಚಿತ್ರವಾದ ಚಿತ್ತಜನ ಕೆಂಡಾರಿಯಂ ತೆ ಚಕಿಚಕಿಸುವ ಮೈ ಬಣ್ಣದಿಂ ದಿಕ್ಕುಗಳಂ ಬೆಳಗಿಸುವಳೋ? ಎಂತಿ ರ್ದ ಚಿತ್ರಿಣೀ ಜಾತಿ ಮಿಡಾರಿಯು ಕೂಡ ಉತ್ತಮಳೆನಿಸುವಳು. ಮಾ ತ್ತಿನ ಶರಗಿನೊಳ್ ಸಿಕ್ಕಿ ಮೊಗವಂ ತೋರಿ ತೋರದಿರುವ, ಚಕ್ರವಾ ಕ ದಂಪತಿಗಳಂತೆ ಪೊಳೆವ ಪೀವರ್ಲಿಗಳ ಸೊಗಸಿನಿಂ ನೊಕ್ಕಿ ನೋಲು

ಮತ್ತೈರಾಸದಿಂ ಮೆರೆವ ಶಂಖಿನೀ ಜಾತಿ ಸ್ತ್ರೀಯಾದಿಯು ಮಧ್ಯಮಳೆನಿಸುವಳು, ಮತ್ತರಾದ ವಿಟರ ಚಿತ್ತ ಕಮಲಂಗಳಂ ಕತ್ತರಿಪ ಕಾಮನು ಕರದಿಂದೆತ್ತಿರುವ ಕತ್ತರಿಯೊ? ಎಂಬ ಭ್ರಮೆಯಂ ಪುಟ್ಟಿಸುವ ಹಸ್ತಿನೀ ಜಾತಿ ಹರಿಣಾಕ್ಷಿಯು ಅಧಮಳೆಂದೆನಿಸುವಳು. ಈ ನಾಲ್ಕು ಜಾತಿ ಸ್ತ್ರೀವರ್ಗಗಳಲ್ಲಿ ಕ್ರಮವಾಗಿ ಬಂದಿರುವ ಪದ್ಮಿನೀ ಜಾತಿ ಸ್ತ್ರೀ ಲಕ್ಷಣವಂ ಮೊದಲು ಹೇಳಲ್ಪಟ್ಟ ವಾತ್ಸ್ಯಾಯನ ಮಹರ್ಷಿಯ ಮತಾನುಸಾರವಾಗಿಯೇ ಹೇಳುವೆನು ಕೇಳು—ಯಾವಳೊಬ್ಬಳ ಶರೀರದಲ್ಲಿ ದಿವ್ಯಗಂಧ ವಾಸನೆಯು, ಚಂದ್ರಬಿಂಬವಂ ಪೋಲ್ವ ಮೊಗವು, ಮರಿಹರಿಣ ನೇತ್ರದಂತೆ ಚಲಿಸುತ ಕಟಾಕ್ಷಂಗಳಲ್ಲಿ ಸ್ವಲ್ಪ ರಕ್ತವರ್ಣವಾಗಿರುವ ನೇತ್ರಂಗಳು, ಬಿಲ್ವ ಫಲಂಗಳಂ ಪೋಲ್ವ ಪಿರಿದಾದ ಮೊಲೆಗಳು ತಿಲಕುಸುಮದಂತೆಸೆವ ನಾಸಿಕವು, ಕಸ್ತೂರಿಗೆ ಸಮಾನವಾದ ಶರೀರ ಕಾಂತಿಯು. ಮತ್ತೂ ನಂದಿಕೇಶ್ವರ ಮತದಲ್ಲಿ ಈ ಕಾಮಿನಿಯ ಶರೀರವು ಸಂಪಿಗೇ ಹೂವಿನ ಬಣ್ಣದಂತೆ ಕಾಂತಿಯು, ದೇವಬ್ರಾಹ್ಮಣ ಪೂಜೆಗಳಲ್ಲಿ ವಿಶ್ವಾಸವು, ರಾಜ ಹಂಸದಂತೆ ನಡೆಯು, ತ್ರಿವಳಿಗಳಿಂದ ಕೂಡಿ ಬಡವಾಗಿ ಬಗ್ಗಿರುವ ಮಧ್ಯಭಾಗವು, ಹಂಸೆಗಳ ಧ್ವನಿಗೆ ಸಮವಾದ ಧ್ವನಿಯು, ಅರಳಿದ ಕಮಲದಂತೆಸೆವ ಕಾಮನ ಛತ್ರವು, ತಾವರೆಯ ಮೊಗ್ಗೆಯಂತೆ ಕೋಮಲವಾದ ಉದರವು ಕಾಮಜಲದಲ್ಲಿ ಮಕರಂದ ಭರಿತವಾದ ಕಮಲದ ವಾಸನೆಯು, ಲಜ್ಜೆಯು, ಬಿಳುಪಾದ ಪುಷ್ಪಂಗಳಲ್ಲಿಯು, ವಸ್ತ್ರಗಳಲ್ಲಿಯೂ ಪ್ರೀತಿಯು, ಶುಚಿಯಾಗಿ, ಮೃದುವಾಗಿ ಸ್ವಲ್ಪವಾಗಿ ಅನ್ನವನ್ನುಂಬುವದು. ಈ ಲಕ್ಷಣಗಳಿಂದ ಪದ್ಮಿನೀ ಜಾತಿ ಸ್ತ್ರೀ ಎಂದರಿಯಬೇಕು. ಉತ್ತಮವಾದ ನಡೆಯು, ಅತಿ ಉದ್ದವು, ಅತಿ ಕುಜ್ಜವೂ ಅಲ್ಲದೆ ಮಟ್ಟವಾಗಿರುವದು, ಪಿರಿದಾದ ಕುಚಗಳು, ಕಾಗೆಯ ಕಾಲಿನಂತೆ ಕಣಕಾಲುಗಳು, ಉಬ್ಬಿದ ತುಟಿಯು, ಹುನ್ನಾದ ಜಲದೊಳ್ ಜೇನು ತುಪ್ಪದಂತೆ ವಾಸನೆಯು, ಶಂಖವಂಪೋಲ್ವ ಕೊರಳು, ಚಕೋರ ಧ್ವನಿಯಂತೆ ಧ್ವನಿಯು ನೃತ್ಯ, ಗೀತ, ವೀಣಾದಿಗಳಲ್ಲಿ ತಿಳುವಳಿಕೆಯು, ಬಟುವಾದ, ಉನ್ನತವಾದ, ಬಳಿಗೆ ಮೃದುವಾದ, ಮದನ ಜಲಾರ್ದ್ರವಾದ, ಸ್ವಲ್ಪ ರೋಮಾನ್ವಿತವಾದ ಕಾಮ ಗೃಹವು ಸ್ವಭಾವದಿಂ ಚಪಲವಾದ

ದೃಷ್ಟಿಯು, ಚುಂಬನಾದಿ ಬಾಹ್ಯ ಸುರತದೋಳ್ ಪ್ರೀತಿಯು, ಕಿರಿದಾಗಿ ಸವಿಯೊಪ್ಪ ಆಹಾರದೊಳ್ವಿಶ್ವಾಸವು, ಚಿತ್ರಂಗಳಾದ ಭೂಷಣಂಗಳೋಳ್ ಇಚ್ಛೆಯು, ಈ ಲಕ್ಷಣಗಳಿಂದೊಡಗೂಡಿದ ಕಾಮಿನಿಯುಂ ಚಿತ್ರಿಣೀ ಜಾತಿ ಸ್ತ್ರೀ ಎಂದರಿಯಬೇಕು. ದಪ್ಪವಾದ ಶರೀರವು, ಕೊಂಚ ಕುಬ್ಜತೆಯು ಕೋಪವು, ದೇಹವಲ್ಲಿಯು, ಅವಯವಗಳಲ್ಲಿಯೂ ಕೂಢ ಶಖೆಯು, ನೀಳವಾದ, ದಟ್ಟವಾದ ರೋಮಂಗಳು, ಸುಣ್ಣದಂತೆ ನಾರುವ ಕಾಮ ಜಲವುಳ್ಳ ಮದನ ಮಂದಿರವು, ಕೋಟವಲ್ಲಿ ಹಲವು ನಖಕ್ಷತಂಗಳು, ಸ್ವಲ್ಪವಾದ ಕಾಮಜಲ ಬಿಂದುಗಳು, ಶರೀರದೋಳ್ ಸ್ವಲ್ಪವಾದ ಬಿಸಿಯು, ಮಿತವಾದ ಆಹಾರವು, ಕೊಂಡ್ರೆತ್ತುದ್ದಿಂದ ಕಳಿವಿದ ಚಿತ್ತವು, ಗರ್ದಭ ಧ್ವನಿಯು, ಪಿರಿದಾದ ಕೆಂಪಾದ ಮೊಲೆಗಳು, ಈ ಲಕ್ಷಣಗಳಿಂದೊಡಗೂಡಿದ ಭಾಮಿನಿಯುಂ ಶಂಖಿನೀ ಜಾತಿ ಸ್ತ್ರೀ ಎಂದರಿವುದು. ಒಳ್ಳಿತವಲ್ಲದ ನಡತೆಯು, ವಕ್ರವಾಗಿ, ದೊಡ್ಡದಾಗಿರುವ ಬೆರಳುಗಳುಳ್ಳ ಕಾಲುಗಳು, ಗುಡ್ಡವಾಗಿ, ಬಲ್ಲಿತಾದ ಕೊರಳು, ಕೆಂಪಾದ ಕೂದಲು, ಧೂರ್ತ ಚೇಷ್ಟೆಯು, ದೊಡ್ಡ ದೇಹವು, ಗಜಮದ ವಾಸನೆಯುಳ್ಳ ಶರೀರವು, ಕಾಮ ಜಲವು, ಇಮ್ಮಡಿಕಾರ, ಕಹಿಗಳುಳ್ಳ ಆಹಾರವು, ದೊಡ್ಡದಾದ ತುಟಿಯು, ಬೇಗದಿಂ ಒಡಂಬಡದೆ ದುಃಖದಿಂ ಒಡಂಬಡುವದು, ಹೊರಗೆ ಕರಿಕೂದಲಾಗಿ ಒಳಗೆ ವಿಶಾಲವಾದ ಮದನಸದನವು, ಗದ್ಗದಧ್ವನಿಯು, ಈ ಲಕ್ಷಣಂಗಳಿಂದೊಡಗೂಡಿದ ಅಬಲೆಯುಂ ಹಸ್ತಿನೀ ಜಾತಿ ಸ್ತ್ರೀಯೆಂದರಿವುದು. ಎಲೈ ಮಹಾರಾಜನೆ! ಇನ್ನು ಈ ಸ್ತ್ರೀರುಗಳಿಗೆ ರತಿದಿವಸಂಗಳಂ ಪೇಳ್ವೆನು—ಪದ್ಮಿನೀಜಾತಿಸ್ತ್ರೀಯು ಅತಿಸುಲಭೆಯಾದ್ದರಿಂ ಇವಳಿಗೆ ದಿನಂಗಳು ಗೊತ್ತಿಲ್ಲ. ಬಿದಿಗೆ, ಚೌತಿ, ಪಂಚಮಿ, ಷಷ್ಠಿ, ಅಷ್ಟಮಿ, ದಶಮಿ, ದ್ವಾದಶಿ, ಈ ದಿನಂಗಳು ಚಿತ್ರಿಣೀ ಜಾತಿ ಸ್ತ್ರೀಗೆ ಪ್ರಿಯಂಗಳು. ಸಪ್ತಮಿ, ನವಮಿ, ಚತುರ್ದಶಿ, ಪೂರ್ಣಿಮಾ, ಈ ನಾಲ್ಕು ದಿನಂಗಳು ಹಸ್ತಿನೀ ಜಾತಿ ಸ್ತ್ರೀಗೆ ಪ್ರಿಯಂಗಳು. ಪಾಡ್ಯ, ತದಿಗೆ, ಏಕಾದಶಿ, ತ್ರಯೋದಶಿ, ಈ ನಾಲ್ಕು ದಿನಂಗಳು ಶಂಖಿನೀ ಜಾತಿ ಸ್ತ್ರೀಗೆ ಪ್ರಿಯಂಗಳು. ಪದ್ಮಿನೀ ಜಾತಿ ಸ್ತ್ರೀಗೆ ಯಾವ ವ್ಯವಸ್ಥೆಯೂ ಕೂಡ ಇಲ್ಲ. ಒಂದೊಂದು ದಿನ ಹಗಲಾಗಲಿ, ಇರುಳಾಗಲಿ,

ಮೊದಲನೇ ಎರಡನೇ ಮೂರನೇ ಝಾಮಂಗಳೋಳ್ ಕ್ರಮದಿಂದ ಚಿತ್ರಿಣೀ, ಹಸ್ತಿನೀ, ಶಂಖಿನೀಯೆಂಬ ಸ್ತ್ರೀಯರ್ಗಳು ಕೂಡುವರು. ಈ ಕಾಮಿನಿಯರಂ ವಶ್ಯಮಂ ಮಾಡುವ ಔಷಧಂಗಳಂ ಪೇಳ್ವೆನು ಅದೆಂತೆನೆ— ಬಾಳೇಗೆಡ್ಡೇರಸದಿಂ ಜಾಯಿಕಾಯಿ ನೆನಸಿ, "ಓಂಪಚಪಚವಿಹಂಗಮ ಕಾಮದೇವಾಯಸ್ವಾಹ" ಎಂಬ ಮಂತ್ರದಿಂ ಅಭಿಮಂತ್ರಿಸಿ ಚಿತ್ರಿಣೀಗೆ ವೀಳ್ಯದೋಳ್ ಬೆರಸಿ ಕೊಡಲು ವಶಳಾಗುವಳು. ಪಾರಿವಾಳದ ತುಂಬಿಯ ಗರಿಗಳಂ ಜೇನುತುಪ್ಪದಿಂ ಅರದು "ಓಂಪಚ ವಶಂಕರೀಸ್ವಾಹಾ" ಎಂಬ ಮಂತ್ರದಿಂ ಅಭಿಮಂತ್ರಿಸಿ ವೀಳ್ಯದೋಳ್ ಬೆರಸಿ ಹಸ್ತಿನಿಗೆ ಕೊಡಲು ವಶಳಾಗುವಳು. ಗಂಧಕ ತಗರದ ಬೇರಂ. ಬೆಲ್ಲವತ್ತದ ಹಣ್ಣಂ ಕೂಡ ಅರದು "ಓಂಹರಹರ ಪಚಕಾಮದೇವಾಯಸ್ವಾಹಾ" ಎಂಬ ಮಂತ್ರದಿಂ ಅಭಿಮಂತ್ರಿಸಿ ವೀಳ್ಯದೋಳ್ಬೆರಸಿ ಶಂಖಿನಿಗೆ ಕೊಡಲು ವಶಳಾಗುವಳು. ಹಿಂದೆ ಪೇಳಿದ ಜಾತಿಗಳಿಗೆ ಪ್ರಕಾಂತರದಿಂದಚಂದ್ರ ಕಲೆಗಳಂ ಪೇಳ್ವೆನು ಅದೆಂತೆನೆ—ಅಂಗುಷ್ಠ, ಅಂಗಾಲು, ಹರಡು, ಮೊಣಕಾಲು, ಒಳದೊಡೆ, ಹೊಕ್ಕಳು, ಎದೆ, ಕುಚ, ಕಂಕಳು, ಕೊರಳು, ಗಲ್ಲ, ತುಟಿ, ಕಣ್ಣು, ಹಣೆ, ನೆತ್ತಿ, ಈ ಹದಿನೈದು ಸ್ಥಾನಂಗಳಲ್ಲಿ ಶುಕ್ಲಪಕ್ಷಪಾಡ್ಯ ಮೊದಲಾಗಿ ಪೂರ್ಣಿಮಾ ಪರ್ಯಂತ ದಿನದಿನದಲ್ಲಿಯು ಒಂದೊಂದು ಸ್ಥಳದೋಳ್ ಎಡಭಾಗದೋಳ್ ಕಲೆಯೇರಿ ಬರುವದು. ಕೃಷ್ಣಪಕ್ಷಪಾಡ್ಯ ಮೊದಲಾಗಿ ಬಲಭಾಗದಲ್ಲಿ ನೆತ್ತಿ, ಹಣೆ, ಕಣ್ಣು, ತುಟಿ, ಗಲ್ಲ, ಕೊರಳು, ಕಂಕಳು, ಕುಚ, ಎದೆ, ಹೊಕ್ಕಳು, ಒಳದೊಡೆ, ಮೊಣಕಾಲು, ಹರಡು, ಅಂಗಾಲು, ಅಂಗುಷ್ಠ, ಈ ಸ್ಥಾನಂಗಳೋಳ್ ಕಳೆ ಇರುವದು. ಇಂತು ಎರಡು ಪಕ್ಷದಲ್ಲಿಯೂ ಕಳಾ ಸ್ಥಾನಂಗಳ ಗುರುತಂ ತಿಳಿಯುವದು. ಇನ್ನು ಶುಕ್ಲಪಕ್ಷ ಪಾಡ್ಯ ಮೊದಲಾಗಿ ಪೂರ್ಣಿಮಾ ಪರ್ಯಂತರದಿನದಿನವಲ್ಲಿಯೂ ಚಂದ್ರಕಳೆಗೆ ಮಾಡುವ ಉಪಚಾರವಂ ಪೇಳ್ವೆನು ಅದೆಂತೆನೆ—ಪಾಡ್ಯದೋಳ್ ಮುಂಗುರುಳುಗಳಂ ಪಿಡಿಯುವದು. ಬಿದಿಗೆಯೋಳ್ ಹಣೆಯಂ ಚುಂಬಿಸುವದು, ತದಿಗೆಯೋಳ್ ನೇತ್ರಂಗಳಂ ಚುಂಬಿಸುವದು, ಚೌತಿಯೋಳ್ ತುಟಿಯೋಳ್ ತುಟಿಯಂ ಪಿಡಿಯುವದು, ಪಂಚಮಿಯೋಳ್ ಗಲ್ಲವಂ ಚುಂ

ಬಿಸುವದು, ಷಷ್ಠಿಯೋಳ್ ಕಂಠವಂ ನಖದಿಂ ಗೀರುವದು, ಸಪ್ತಮಿಯೋಳ್ ಕಂಕುಳಲ್ಲಿ ಉಗುರೊತ್ತಂ ಮಾಡುವದು, ಅಷ್ಟಮಿಯೋಳ್ ಮೊಲೆಗಳಂ ಬಿರುಸಾಗಿ ಹಲವು ಭಾರಿ ಹಿಡಿಯುವದು, ನವಮಿಯೋಳ್ ಎದೆಯಂ ಮುಷ್ಟಿಯಿಂದ ಮೆಲ್ಲನೆ ಹೊಡೆವುದು, ದಶಮಿಯೋಳ್ ನಾಭಿಯಂ ಪೀಡನವಂ ಮಾಡುವದು, ಏಕಾದಶಿಯೋಳ್ ಮದನ ಮಂದಿರದಲ್ಲಿ ತನ್ನ ಬೆರಳಂ ಆನೆಯ ಸೊಂಡಿಲಂತೆ ಬಾಗಿಸಿ ಅಲ್ಲಾಡಿಸುವದು, ದ್ವಾದಶಿ, ತ್ರಯೋದಶಿ, ಚತುರ್ದಶಿ, ಪೂರ್ಣಿಮಾ, ಈ ನಾಲ್ಕು ದಿನಂಗಳಲ್ಲಿಯೂ, ಮೊಣಕಾಲು, ಹರಡು, ಅಂಗುಷ್ಠ, ಅಂಗಾಲುಗಳಂ, ಅಡಿಗಡಿಗೆ ಚಿರ್ಚಿರೆ ಮತ್ತೆ ಮತ್ತೆ ಹೊಡೆವುದು, ಈ ಪರಿಯಿಂ ರಮಿಸುವಾಗ ಮಾಡುತ್ತಿರಲಾಗ ಆ ಸ್ತ್ರೀಯರುಗಳು ಚಂದ್ರಕಿರಣಂಗಳು ಸೋಂಕಿದ ಚಂದ್ರಕಾಂತಮಯವಾದ ಪುತ್ಥಳಿಯು ಜಿನುಗುವಂತೆ ಕಾಮಕಳೆಯಂ ದ್ರವಿಸುವರು. ಈ ಜಾತಿಸ್ತ್ರೀಯರಂ ರಮಿಸುವ ಕಾಲದೋಳ್ ವಿಷ್ಣು ಬೀಜವಾದ ಅಕಾರವಂ, ಕಾಮಬೀಜವಾದ ಇಕಾರವಂ, ರುದ್ರಬೀಜವಾದ ಉಕಾರವಂ, ಶಕ್ತಿಬೀಜಂಗಳಾದ ಏಕಾರ, ಐಕಾರಂಗಳಂ, ಮನ್ಮಥನ ಪಂಚಬಾಣಂಗಳಂ ಕೂಡೆ ಸ್ಮರಿಸುವದು. ವಿಷ್ಣುಬೀಜಕ್ಕೆ ಸ್ಥಾನವು ಎದೆಯು, ಕಾಮಬೀಜಕ್ಕೆ ಮೊಲೆಯು, ರುದ್ರಬೀಜಕ್ಕೆ ಕಣ್ಣು, ಒಂದುಶಕ್ತಿಬೀಜಕ್ಕೆ ನೆತ್ತಿ, ಮತ್ತೊಂದು ಶಕ್ತಿಬೀಜಕ್ಕೆ ಮದನಮಂದಿರವು, ಇವು ಸ್ಥಾನಂಗಳು. ರತಿಕಾಲದಲ್ಲಿ ಈ ಐದುಬೀಜಾಕ್ಷರಂಗಳಂಸ್ಮರಿಸಲು, ಕಾಮದೇವನು ಎದೆಮೊದಲಾದ ಐದು ಸ್ಥಾನಂಗಳಲ್ಲಿಯೂ ತನ್ನ ಐದು ಬಾಣಂಗಳಂ ಪ್ರಯೋಗಿಸಿ ಸ್ತ್ರೀಯರಿಗೆ ಕಾಮಜಲ ಮೊಸರ್ದು, ಉರಿವ ಕೆಂಡವಂ ಪೊಲ್ವಂತೆ ಒಂದೊಂದು ಹನಿಗಳಾಗಿ ಸ್ರವಿಸುವಂತೆ ಮಾಡುವನು. ಈ ಕಲಾ ಸ್ಥಾನಂಗಳು ನಂದಿಕೇಶ್ವರ ಮತಾನುಸಾರವಾಗಿ ಪೇಳಲ್ಪಟ್ಟುವು, ಈ ಕಲಾಸ್ಥಾನಂಗಳನ್ನೇ ಘೋಣೀ ಪುತ್ರ ಮೊದಲಾದ ಋಷಿಗಳು ಪ್ರಕಾರಾಂತರವಾಗಿ ಪೇಳುವರು.

ಇನ್ನು ಮೇಲೆ ಪುರುಷಲಕ್ಷಣಂಗಳಂ ಪೇಳ್ವೆನು ಅದೆಂತೆನೆ—ಶಶ, ವೃಷ, ಅಶ್ವರೆಂದು ಮೂರು ಪರಿ ಪುರುಷ ಜಾತಿ ಇರುವದು. ಈ ಪುರುಷರ ಗುಹ್ಯವು, ಆರು, ಒಂಭತ್ತು, ಹನ್ನೆರಡು ಬೆರಳು ಉದ್ದ

ಪಾಗಿರುವವು, ಸ್ತ್ರೀ ಜಾತಿಯು ಕೂಡ ಹರಿಣೀ, ಬಡಬಾ, ಕರಿಣೀ, ಎಂದು ಮೂರು ಪರಿಯಾಗಿರುವವು, ಈ ಸ್ತ್ರೀಯರುಗಳ ಮದನ ನಾಂಬಿ ರ ಪ್ರಮಾಣವು, ಹಿಂದೆ ಹೇಳಿದ ಪುರುಷರ ಗುಹ್ಯ ಪ್ರಮಾಣದಂತಿರು ವವು. ಇವು ಸ್ತ್ರೀ ಪುರುಷರ ಪ್ರಮಾಣ ಭೇದಂಗಳು. ಇನ್ನು ಶಶಾದಿ ಪುರುಷ ಲಕ್ಷಣಂಗಳಂ ಪೇಳ್ವೆನು ಅದೆಂತೆನೆ—ಕೆಂಪಾದ ಅಗಲವಾದ ಕಣ್ಣುಗಳು, ಸಣ್ಣನಾದ ಸಮನಾದ ಹಲ್ಲುಗಳು, ಬಟುವಾದ ಮೊಗವು, ಒಳ್ಳಿತಾದ ಕೇಶವು, ಮೃದುವಾಗಿ, ಕೆಂಪಾಗಿ, ಕೋಮಲವಾಗಿ, ಹೊಂ ದಿರುವ ಬೆರಳುಗಳುಳ್ಳ ಕೈಗಳು, ಒಳ್ಳಿತಹ ನುಡಿಯು, ದೊಡ್ಡದಾಗಿ ಚಂಚಲವಾಗಿ, ಕಪ್ಪಾಗಿ, ಮೃದುವಾಗಿ, ಅತಿ ನೀಳವಲ್ಲದೆ ಇರುವ ಮುಂ ಡೆಯು ಕೂದಲು, ಬಡವಾದ ಕೊರಳು, ತೊಡೆ, ಕಿರಿದೊಡೆ, ಅಂಡು ಗಳು, ಕೈ ಕಾಲುಗಳು, ಕಿರಿದಾದ ಊಟ ನಿದ್ರೆಗಳು, ಸ್ವಲ್ಪ ಕಾಮ ಸುಖವು, ಧನವತ್ವವು, ಶುಚಿತ್ವವು, ಬಿಳಿದಾಗಿ ಪರಿಮಳ ಉಳ್ಳ ವೀರ್ಯ ವು, ಆರು ಅಂಗುಳ ಪ್ರಮಾಣ ಗುಹ್ಯವು, ಈ ಲಕ್ಷಣಗಳಿಂದೊಡಗೂಡಿ ದವರು, ಶಶ ಜಾತಿ ಪುರುಷರು. ಅಗಲವಾದ ಉನ್ನತವಾದ ತಲೆಯು, ದೊಡ್ಡದಾದ ಮೊಗ, ಹಣೆಯು, ಬಲಮುಳ್ಳ ಕೊರಳು ಕಿವಿಗಳು, ಆ ಮೆಯು ಬೆನ್ನಿನಂತೆ ಉಬ್ಬಿದ ಹೊಟ್ಟೆಯು, ಧಪ್ಪವಾದ ಶರೀರವು, ಜೋ ಲುವ ತೋಳ್ಗಳು, ಕೆಂಪಾದ ಅಂಗೈಗಳು, ಉದ್ಧವಾದ ತುಟಿಗಳು, ತು ಳಿಯಾದ ಕಿವಿಗಳು, ತಾವರೆಯ ಹೂವಿನ ಎಸಳಂ ಪ್ರೋಲ್ವ ಕಂಗಳು, ಸಾ ತ್ವಿಕಗುಣವು, ವಿನೋದದಿಂ ಸ್ವೇಚ್ಛೆಯಿಂದೊಡಗೂಡಿ ನಡೆಯುವ ಮೃ ದುವಾದ ನುಡಿಯು, ಕೋಪಮಂ ಸೈರಿಪುದು, ತ್ಯಾಗ ಗುಣವು, ಪ್ರಿ ಯವಾದ ನಿದ್ರೆಯು, ಲಜ್ಜೆ ಇಲ್ಲದೆ ಇರುವದು, ದೀಪನವು, ಶ್ಲೇಷ್ಮ ಪ್ರಕೃತಿಯು. ಕೋಮಲವಾದ ನಡುವು, ಒಡಲೋಳ್ ಪರಿವಪ್ಪ ನೆಣ ವು, ಸುಣ್ಣದಂತೆ ನಾರುವ ವೀರ್ಯವು, ಎಲ್ಲಾ ಜಾತಿ ಸ್ತ್ರೀಯರಿಗೂ ಯಾ ವಾಗಲೂ ಬೇಕಾಗಿರುವವು, ಒಂಭತ್ತು ಅಂಗುಳ ಪ್ರಮಾಣ ಗುಹ್ಯವು, ಈ ಲಕ್ಷಣಗಳಿಂದೊಡಗೂಡಿದವರು ವೃಷಭ ಜಾತಿ ಪುರುಷರು. ಅಸಿ ದಾಗಿ, ನೀಡವಾಗಿರುವ ಮೊಗ, ಕಿವಿ, ಕೊರಳು, ತುಟಿ, ಹಲ್ಲುಗಳು, ಉ ಬ್ಬಿದ ಕಣ್ಣುಗಳು, ಮಾಂಸದಿಂ ಬಲಿತ ತೋಳುಗಳು, ದೊಡ್ಡದಾದ,

ನೀಳವಾದ, ಒತ್ತಾದ ಕೊರಲು, ಜಾಣತನಕ್ಕೆ ಮತ್ಸರವು, ಬಂಕುಳಿ ಕಾಲು ಜಂಘೆಗಳು, ಸುಂದರವಾದ ನಖಂಗಳು, ದೀರ್ಘವಾದ ಬೆರಳುಗಳು, ನೀಳವಾದ ಅಗಲವಾದ ಕಣ್ಣುಗಳು, ವಿವೇಕವು, ಮೃದುವಾದ ನುಡಿಯು, ಹೆಚ್ಚಾದ ನಿದ್ರೆಯು, ಶೀಘ್ರವಾದ ನಡೆಯು, ದೊಡ್ಡದಾದ ತೊಡೆಯು, ದೀಪನವು, ಸ್ತ್ರೀ ಪ್ರಿಯತ್ವವು, ಸತ್ಯವಾದ ವಚನವು, ಅಧಿಕವಾದ ವೀರ್ಯವು, ನಯವುಳ್ಳ ಎಲುವುಧಾತುಗಳು, ನೀರಡಿಕೆ ಮೊಪ್ಪದು, ಬೆಣ್ಣೆಯಂತೆ ಮೃದುವಾದ, ಹೊಂಬಣ್ಣವಾದ, ಅತಿಕಾರವಾದ ಕಾಮಜಲವು, ಹನ್ನೆರಡಂಗುಲ ಪ್ರಮಾಣ ಗುಹ್ಯವು, ಸಮವಾದ ಎದೆಯು ,ಈ ಲಕ್ಷಣಗಳುಳ್ಳವನು ಅಶ್ವಜಾತಿ ಪುರುಷನು. ಇಂತು ಸ್ತ್ರೀ ಪುರುಷ ಜಾತಿ ಭೇದಂಗಳಂ ನಿಶ್ಚೈಸುವದು. ಇನ್ನು ಮೇಲೆ ಸ್ತ್ರೀರುಗಳ ಪ್ರಾಯವಂ ಪೇಳ್ವೆ ಅದೆಂತೆನೆ—ಹದಿನಾರು ವರುಷ ಪರ್ಯಂತರವು, ಬಾಲೆ ಎನಿಸಿಕೊಂಬಳು, ಅಲ್ಲಿಂದ ಮೇಲೆ ಐವತ್ತೈದು ವರುಷ ಪರ್ಯಂತ ಪ್ರೌಢೆ ಎನಿಸಿಕೊಂಬಳು, ಅಲ್ಲಿಂದ ಮೇಲೆ ವೃದ್ಧೆ ಎನಿಸಿಕೊಂಬಳು. ಇನ್ನು ರೂಪಭೇದಂಗಳಂ ಪೇಳ್ವೆನು ಅದೆಂತೆನೆ—ಉದ್ಧಟುಳ್ಳವಳು, ಕಪಪ್ಪದವಳು, ಅಸಿಯಳು, ಹಲವು ಕಾಮ ಕಳೆಗಳಂ ಬಹಳವಾಗಿ ಯ್ಯೆದಿಸುವಳು ಇವಳು ಶ್ಲಥಾ ಎನಿಸಿಕೊಂಬುವಳು, ದೊಡ್ಡದಾದ ದೇಹವುಳ್ಳವಳು, ಅರಿಶಿನದ ಬಣ್ಣದವಳು, ಗುಡ್ಡನಾದವಳು, ಯೌವಾಗಲೂ ರತಿಪ್ರಿಯಳು, ಉಬ್ಬಿದ ಕಂಕುಳುಳ್ಳವಳು, ಇವಳು ಘನೆ ಎನಿಸಿಕೊಂಬಳು. ಇಂತು ಜಾತಿ ಸ್ತ್ರೀ ಪುರುಷ ಲಕ್ಷಣಂಗಳಂ ತಿಳಿದ್ರುತವಿಸುವರಿಗೆ ಸ್ವರ್ಗಾದಿ ಸುಖಂಗಳು ಸುಲಭವಾಗಿ ಲಭ್ಯಂಗಳಾಗುವವು ಇನ್ನು ಆಯಾಯ ದೇಶಂಗಳಲ್ಲಿರುವ ಸ್ತ್ರೀರ್ಗಳ ಲಕ್ಷಣಂಗಳಂ ಪೇಳ್ವೆನು ಅದೆಂತೆನೆ—ಉತ್ತಮವಾದ ನಡೆಯು, ನಖ ದಂತಕ್ಷತ ಚುಂಬನಂಗಳ ಬಲ್ಲದೆ ಇರುವದು, ಈ ಗುಣಂಗಳಿಲ್ಲದವರು ಮಧ್ಯದೇಶದ ಸ್ತ್ರೀರುಗಳು, ವಿಚಿತ್ರವಾದ ಬಂಧಂಗಲ್ಲಿಯೂ, ರತಿಯಲ್ಲಿಯೂ ಪ್ರೀತಿಯುಳ್ಳವರು ಅವಂತೀ ದೇಶದ ಸ್ತ್ರೀರುಗಳು, ಇವರೇ ಬಾಹ್ಲಿಕ ದೇಶದ ಸ್ತ್ರೀರ್ಗಳು. ಆಲಿಂಗನದಲ್ಲಿ ಪ್ರೀತಿಯುಳ್ಳವರು, ನಖದಂತಕ್ಷತಂಗಳಬಲ್ಲದೆ ಇರುವರು, ಹೈಲುಗಳನೇ ಬಯಸುವದರಿಂದ ಹರ್ಷಿಸುವರು ಆಭೀರ

ದೇಶದ ನಾರಿಯರು. ಮಾಳವ ದೇಶದ ಮಾನಿನಿಯರೂ ಕೂಡ ಇದೇ ಪರಿ ಯಾಗಿರುವರು. ಇರಾವತೀ, ಸಿಂಧುಗಳೆಂಬ ನದೀತೀರಂಗಳಲ್ಲಿರುವ ದೇಶಂಗಳಲ್ಲಿಯೂ, ವಿಪಾಶಾ, ವಿತಸ್ತಿಗಳೆಂಬ ನದಿಗಳ ಮಧ್ಯದೇಶಗಳಲ್ಲಿ ಪುಟ್ಟಿದ ಸ್ತ್ರೀಯರುಗಳು, ಮದನ ಮಂದಿರದಲ್ಲಿ ಮಾಡುವ ಚುಂಬನ, ಕರಿಕರ ಕ್ರೀಡೆ ಮೊದಲಾದ ಉಪಚಾರಂಗಳಿಂದಲೇ ಸಾಧ್ಯರಾಗುವರು. ಮೆಲ್ಲನೆ ಹೊಯ್ಲುಗಳಿಂದಲೂ, ನಖ ದಂತಕ್ಷತಗಳಿಂದಲೂ ದ್ರವಿಸುವರು, ಆಲಿಂಗನದಲ್ಲಿ ಪ್ರೀತಿಯುಳ್ಳವರು, ರತಿ ಎಂಬ ಹಬ್ಬದಲ್ಲಿ ಕುಣಿಯುವರು ಲಾಟ ದೇಶದ ಲಲನೆಯರು. ತೆಲಗು ದೇಶದ ಸ್ತ್ರೀಯರು ತಮ್ಮ ನಿಜವಾದ ನಡೆವಳಿಯಂ ಮೀರಿ ನಡೆವರು, ಅನಾಚಾರವ ಗೈವರು, ರತಿಯೋಳ್ ಬಳಲುವರು, ಶುಚಿಯಾದ ಕೆಲಸಂಗಳಂ ವಿಲಾಸದಿಂ ಮಾಡುವರು. ಕಳಿಂಗ ದೇಶದ ಕಾಮಿನಿಯರು. ನಖ ಕ್ಷತ ಪ್ರಿಯರು, ಕೈಗಳೋಳ್ ಶಂಖದ ಬಳೆಗಳಂ ಧರಿಪರ್ಪರು, ಯಾವಾಗಲೂ ಮದ್ಯಪಾನ ಪ್ರಿಯರು, ರತಿಯೋಳ್ ಬಳಲುವರು, ಎದೆ ಎಲ್ಲಾ ತುಂಬಿದ ಮೊಲೆಯುಳ್ಳವರು. ಅತಿಶಯವಾದ ರತಿ ಪ್ರೀತಿಯುಳ್ಳವರು. ತುರುಷ್ಕ ದೇಶದ ಸ್ತ್ರೀಯರುಗಳು ಹೆಚ್ಚಾದ ಮದ್ಯಪಾನಾಸಕ್ತರು, ನಖ ದಂತಕ್ಷತ ಚುಂಬನಂಗಳೋಳ್ ಪ್ರೀತಿಯುಳ್ಳವರು, ಕೆಂಪಾದ ಶರೀರವುಳ್ಳವರು, ದೊಡ್ಡದಾದ ಮದನ ಧ್ವಜವಂ ಬಯಸುವರು. ಕರ್ನಾಟ ದೇಶದ ಕಾಂತೆಯರು, ಒಳ್ಳೆ ವಸ್ತ್ರ ಭೂಷಣಂಗಳಲ್ಲಿ ಪ್ರೀತಿಯುಳ್ಳವರು, ಉದ್ದವಾದ ಮುಡಿ ಕೂದಲುಗಳ ತುದಿ ಗಂಟುಗಳುಳ್ಳವರು, ನಾಚಿಗೆಯಿಂ ಕೂಡಿರುವರು, ವಿಕಾರವಾಗಿ ನುಡಿಯುವರು, ಗಂಡನಲ್ಲಿ ನಡತೆಯುಳ್ಳವರು, ವ್ಯವಹಾರದವರು. ಸ್ತ್ರೀ ಮಳೆಯಾಳ ದೇಶದ ನಾರಿಯರು, ಕೋಸಲ ದೇಶದ ನಾರಿಯರು ಕೂಡ ಸ್ಥೂಲವಾದ ಮದನ ಧ್ವಜವನ್ನೇ ಬಯಸುವರು. ಮಹಾರಾಷ್ಟ್ರ ದೇಶದ ಮಾನಿನಿಯರು, ಪಾಟಲೀ ಪುತ್ರದೇಶದ ಪ್ರಮದೆಯರು ಕೂಡಾ ಪುಂಡು ಮಾತುಗಳಂ, ಉಪೇಕ್ಷೆಯಿಂ ಕೂಡಿದ ಮಾತುಗಳಂ ಆಡುವರು ರತಿಯಲ್ಲಿ ನಾಚಿಕೆ ಪಡರು, ಅರುವತ್ತುನಾಲ್ಕು ಕಲೆಗಳಲ್ಲಿಯೂ ಪ್ರೀತಿಯುಳ್ಳವರು. ತಿಗಳತ್ತಿಯರು ಬಾಹ್ಯಾಭ್ಯಾಂತರಗಳೆಂಬ ರತಿದ್ವಯಂಗಳಲ್ಲಿಯೂ ಪ್ರೀತಿಯುಳ್ಳವರು ಅಧಿಕವಾದ ಮದನ ಜಲವುಳ್ಳವರು.

ಅತಿ ಕಾಮಿಗಳಾದುದರಿಂ ಮೊದಲು ಕೂಟದಲ್ಲಿಯೇ ತೃಪ್ತಿಯಂ ಹೊಂದುವರು. ವನಾಯುಜ ದೇಶದ ವಾಮಲೋಚನೆಯರು ತಮ್ಮ ಶರೀರಂಗಳಲ್ಲಿರುವ ದೋಷಂಗಳಂ ಮುಚ್ಚಿ, ಪರರ ಶರೀರದಲ್ಲಿರುವ ದೋಷಂಗಳಂ ಕಂಡು ಪಿರಿದಾಗಿ ನಗುವರಾಗಿಯು, ತಾಡನ ನಖ ದಂತಕ್ಷತಾದಿಗಳಂ ಸೈರಿಸುವರಾಗಿಯು, ಮೊದಲಲ್ಲಿಯು, ಕಡೆಯಲ್ಲಿಯೂ ಸ್ವಲ್ಪ ಕಳೆಯಂ ಬಿಡುವರಾಗಿಯು, ರತಿ ಮಧ್ಯದೋಳ್ ಪೆಗ್ಗಳವಾಗಿ ಕಳೆಯಿಂ ಬಿಡುವರಾಗಿಯೂ ಇರುವರು. ಮಧುರಾದೇಶದ ಮಾನಿನಿಯರು, ಗೌಡದೇಶದ ಕಾಮಿನಿಯರೂ ಕೂಡ ಮೃದುವಾದ ಶರೀರ ಉಳ್ಳವರಾಗಿಯು, ಆಲಿಂಗನ ಚುಂಬನಂಗಳಂ ಪೆಗ್ಗಳವಾಗಿ ಮಾಡುವರಾಗಿಯು, ಸ್ವಲ್ಪವಾದಕಾಮಜಲವುಳ್ಳವರಾಗಿಯು, ಬಿರಿಸಾದಚೇಷ್ಟೆ ವುಳ್ಳವರಾಗಿಯು,ಸ್ಮರಯುದ್ಧದಲ್ಲಿವಿರಕ್ತಿಯಂಸೈದವರು. ಕುಂತಲದೇಶದ ಕಮಲಯಾಕ್ಷಿಯರು ಸುರತವಿಚಾರದಲ್ಲಿ ಚಾತುರ್ಯ ಉಂಟಾಗಿ, ಎಲ್ಲಾದೇಶದ ಸೊಗಸುಗಳನ್ನರಿತವರಾಗಿಯು, ಬಿರಿಸಾದ ಜಾಣ್ಮೆಯ ನುಡಿವ ಚಿತ್ತ ಉಳ್ಳವರಾಗಿಯು ಸುರತದಲ್ಲಿ ಹಲವು ಪರಿಯಾಗಿ ನುಡಿದವರಾಗಿಯು, ಯಾವಾಗಲೂ ಘನೆಯ ರಾದುದರಿಂ, ಔಷಧ ಕ್ರಿಯೆಗಳಂ, ಬಿರಿಸಾದ ಕಠಿನ ಧ್ವಜದ ಕೂಟದಿಂದಲ್ಲದೆ ಸಂತೋಷಿಸದವರಾಗಿಯೂ, ಮನೋವಾಕ್ಕಾಯಂಗಳಿಂ ಶುದ್ಧವಾಗಿ ರಮಿಸಿ ಸುಖಿಸುವರಾಗಿಯೂ, ಎದೆಯಂ ಕೊಟ್ಟು ಹೈಲು, ಉಗರೊತ್ತು ಮೊದಲಾದವ ಗೈಯುವರಾಗಿಯೂ, ಶೃಂಗಾರಮುಳ್ಳವರಾಗಿಯೂ ಇರುವರು. ಮತ್ತೂ ಅವರು ಚಿತ್ತದೋಳ್ ಪೆಗ್ಗಳವಾದ ತವಕಮುಳ್ಳವರಾದುದರಿಂ ಸುರತದಲ್ಲಿ ಸೊಗಸನ್ನರಿಯುದವರಿಂ ಪಿರಿದಾಗಿ ವ್ಯಸನೆ ಪಡುವರು, ಇವರು ಸ್ವಲ್ಪ ಸುರತದಿಂ ದಣಿಯರು. ಕಾಮರೂಪದೇಶದ ಕಾಮಿನಿಯರು ಬಾಗೆಯ ಹುವ್ವಿನಂತೆ ಮೃದುವಾದ ಅಂಗ ಉಳ್ಳವರಾಗಿಯೂ, ಹಲವು ಭಾರಿ ದ್ರವಿಸುವರಾಗಿಯು, ಕೈ ಪಿಡಿದ ಮಾತ್ರದಿಂದಲೇ ರತಿಯಂ ಹೊಂದುವರಾಗಿಯು, ಅವಯವದೋಳ್ ಸಂಪೂರ್ಣವಾದ ಕಾಮ ರಸಮುಳ್ಳವರಾಗಿಯು, ಪ್ರಿಯವಂ ನುಡಿಯುವರಾಗಿಯು ಇರುವರು. ಉತ್ಕಲ ದೇಶದ ಉತ್ಪಲಾಕ್ಷಿಯರು ಹಲವು ಪರಿ ನಖ ವಿಕಾರಂಗಳಂ, ಪ್ರೌಢವಾದ ಹಸ್ತದ ಹೈಲುಗಳಂ, ಈ ಪರಿಪಕ್ವವೆಂಬ ಮೋ

ಉಪಚಾರಂಗಳಿಂ ಕೂಡೆ ಸಂತೋಷವಂ ಹೊಂದುವರಾಗಿಯೂ, ಯಾವಾಗಲೂ ಸ್ಮರ ಸಮರವಂ ಬಯಸುವರಾಗಿಯೂ, ಲಜ್ಜಾರಹಿತರಾಗಿಯೂ ಭಾಗ್ಯ ಉಳ್ಳವರಾಗಿಯೂ, ಪ್ರೀತಿಯುಳ್ಳವರಾಗಿಯೂ ಇರುವರು. ಇಂತು ಸಕಲ ದೇಶದ ಸ್ತ್ರೀರುಗಳ ಲಕ್ಷಣಂಗಳಂ, ಅವರವರ ಚೇಷ್ಟೆಗಳಿಂದಲೇ ತಿಳಿಯಬಹುದು. ಈ ಪರಿಯಾಗಿ ಸ್ತ್ರೀರುಗಳ ಜಾತಿ ಭೇದಂಗಳನ್ನರಿತು, ಆಲಿಂಗನ, ಚುಂಬನ, ನಖಕ್ಷತ, ದಂತಕ್ಷತ, ತಾಡನ, ಚಪೇಟನ, ಆಕರ್ಷಣ, ಮರ್ದನ ಮೊದಲಾದ ಕೃತ್ಯಂಗಳೆಂಬ ಬಾಹ್ಯಸುರತವಂ ತಿಳಿದು ಸುರತವಂ ಮಾಳ್ಪುದು. ಈ ಸುರತವು ಬಾಹ್ಯವೆಂದು ಅಭ್ಯಂತರವೆಂದು ಎರಡು ವಿಧವಾಗಿರುವದು. ಅದರೊಳ್ ಬಾಹ್ಯಸುರತವಂ ಮೊದಲು ಮಾಡಬೇಕು. ಈ ಬಾಹ್ಯ ರತದೊಳ್ ಮೊದಲಲ್ಲಿ ಆಲಿಂಗನವಂ ಮಾಡಲು ಯೋಗ್ಯವಾವುದು, ಈ ಆ ಲಿಂಗನವು, ಜಾತಕೇಳಿ ಗಳೆಂದು ಎರಡು ಪರಿಯಾಗಿರುವದು ಅದರೊಳ್ ಜಾತ ಕೇಳಿ ಎಂಬ ಆಲಿಂಗನವು ನಾಲ್ಕು ಬಗೆಯಾಗಿಯೂ, ಅಜಾತ ಕೇಳೀ ಎಂಬ ಆಲಿಂಗನವು, ಎಂಟು ವಿಧವಾಗಿಯೂ, ಅಂತು ಹನ್ನೆರಡು ಪರಿ ಎಂದು ಕಾಮ ಶಾಸ್ತ್ರವಂ ಬಲ್ಲವರು ಪೇಳುವರು. ಅದೆಂತೆನೆ— ಎದುರಾಗಿ ಬರುವ ಓರ್ವ ಕಾಮಿನಿಯು ಶರೀರದೊಡನೆ ಅನ್ಯಾಪದೇಶದಿಂದ ಪುರುಷನ ಶರೀರವು ತಾಗಿದೊಡೆ ಅದಂ ಸ್ಪೃಷ್ಟಕವೆಂದು ಪೇಳ್ವರು. ಮತ್ತೂ ಜಾತ್ರೆಗಳಂ ಪೊರಮಡುವಲ್ಲಿಯೂ, ದೇವರ ನೋಂಪಿನಲ್ಲಿಯೂ, ಹಬ್ಬಗಳಲ್ಲಿಯೂ, ಕಾಗಸತ್ತಲೆಯಲ್ಲಿಯೂ, ಪೋಗುತಲಿರುವಲ್ಲಿ ಸ್ತ್ರೀ ಪುರುಷರೀರ್ವರೂ ಪರಸ್ಪರ ಶರೀರಂಗಳಂ ಮುಟ್ಟಿಕೊಂಡಿರಲದು ಘೃಷ್ಟಕವೆನಿಸಿಕೊಂಬುದು. ಸ್ತ್ರೀ ಪುರುಷರೀರ್ವರೂ ಓರೋರ್ವರನೊತ್ತಿಕೊಂಡು ಪೋಗಿ ಗೋಡೆಯ ಆಧಾರದಿಂದ ಗೈವ ಆಲಿಂಗನವಂ ಪೀಡನವೆಂದು ಪೇಳ್ವರು. ಇವು ಮೊದಲಾದ ಆಲಿಂಗನೆಗಳೇ ಜಾತಕೇಳೀ ಎಂದು, ಪ್ರಸಿದ್ಧಂ ಗಳಾಗಿರುವವು. ಇದಲ್ಲದೆ ಅನೇಕ ಭೇದಂಗಳುಳ್ಳ ಇನ್ನು ಕೆಲವು ಆಲಿಂಗನಂಗಳು ಸ್ತ್ರೀ ಪುರುಷರಿಗೆ ಪರಸ್ಪರಾನು ರಾಗವಂ ಪುಟ್ಟಿಸುವವೆಂದು ಹಿರಿಯರು ಪೇಳ್ವರು. ಅದೆಂತೆನೆ—ನಿಂದಿರ್ದ ಪುರುಷನ ಶರೀರವಂ ತನ್ನ ಶರೀರದಿಂದ ಬಳ್ಳಿಯಂತೆ ಸುತ್ತಿಕೊಂಡು ಎಡ

ದ ಕಾಲಿನಿಂದ ಕಟಿಪ್ರದೇಶವಂ ಸುತ್ತಿ, ಎಡೆದ ಕೈಯಿಂದ ಮಧ್ಯವಂ ತ ಕ್ಕೈಸಿ, ಬಲದ ಕೈಯಿಂದ ಶಿಖಿಯಂ ಪಿಡಿದು, ಅವನ ಮೊಗವಂ ತನ್ನ ಮೊಗಕ್ಕೆ ಸರಿ ಮಾಡಿ ಮೆಲ್ಲನೆ ಸೀತ್ಕಾರವಗೈಯುತ್ತ, ಅವನ ಮೊಗವ ನ್ನೆತ್ತಿ ಚುಂಬನವಂ, ಮಧುರವಾದ ಕಂಠಧ್ವನಿಯುಂ ಕೂಡ ಮಾಡುತ್ತ ಅಧಿಕವಾದ ಲೀಲೆಯಿಂದ ಪುರುಷನಂ ಬಾಗಿಸಲು ಇದು ಕಾಲವೇಷ್ಟನ ವೆಂಬ ಆಲಿಂಗನ ಭೇದವೆನಿಸಿಕೊಂಬುದು. ಸ್ತ್ರೀಯು ನಿಂದಿರ್ದ ಪುರು ಷನನ್ನಾಲಿಂಗಿಸಿ ಅವನ ಗುಹ್ಯವಂ ಮದನಮಂದಿರಪೋಳ್ ಪ್ರವೇಶಿಸಿ ಚಪೇಟೆಯಂ ಮಾಡಲದು ಲತಾವೇಷ್ಟನವೆಂಬ ಆಲಿಂಗನ ಭೇದವು. ಇಂತಿರ್ಪ ಆಲಿಂಗ ಭೇದಂಗಳು ಅನೇಕಂಗಳಾಗಿರುವವು.

ಇನ್ನು ಚುಂಬನ ಸ್ಥಾನಂಗಳಂ ಪೇಳ್ವೆನು, ಆ ಸ್ಥಾನಂಗಳು ಯಾವ ದೆಂದೊಡೆ—ಕಣ್ಣು, ಕೊರಳು, ಗಲ್ಲ, ತುಟಿ, ಕೆನ್ನೆ, ನಾಲಿಗೆ, ಮೊಲೆ ಗಳು, ಮದನ ಮಂದಿರವು, ಹಣೆ, ಹೊಕ್ಕಳು, ಇವುಗಳು ಚುಂಬನ ಸ್ಥಾನಂಗಳು. ಪುರುಷನು ಬಾಲೆಯ ಮನೋಹರವಾದ ಮೊಗವಂ ಮೇಲಕ್ಕೆ ಎತ್ತಿ ತನಗೆ ಎದುರು ಮಾಡಿಕೊಂಡು, ಸ್ತ್ರೀಯು ಇದೇ ಪರಿ ಯಾಗಿ ಎದುರಾಗಿ ನಿಂತು ಪುರುಷನ ಮುಖವಂ ಎದುರು ಮಾಡಿಕೊಂ ಡು ಬಳಿಕ ಈರ್ವರೂ ತಮ್ಮತಮ್ಮ ತುಟಿಗಳಂ ನೀಡಿ ಕ್ರಮದಿಂದೋರೋ ರ್ವರು ಚುಂಬನವಂ ಮಾಡಲದು ನಿಚತಕವೆಂಬ ಚುಂಬನ ಭೇದವು. ಮತ್ತೂ ಪುರುಷನು ತನ್ನ ಬಾಯ್ದೆರೆದು ಬಾಲೆಯ ಎರಡು ತುಟಿಗಳಂ ಚುಂಬಿಸಲದು ಸ್ಫುರಿತಕವೆಂಬ ಚುಂಬನ ಭೇದವು. ಪುರುಷನು ಮಾ ನಿನಿಯ ಕೊರಲಂ ಚುಬುಕವಂ ಕೂಡೆ ಕೈಗಳಂ ಪಿಡಿದು ಅವಳ ಹಿಂದೆ ನಿಂತು ಮುಖವಂ ಸ್ವಲ್ಪ ತಿರುಹಿ ಅವಳ ಕೆಳಗಿನ ತುಟಿಯಂ ತಾ ಪಿಡಿದು ಅವಳ ಕೈಯಿಂದ ತನ್ನ ಕೆಳಗಣ ತುಟಿಯಂ ಅಂಗುಷ್ಟ ತರ್ಜನಿಗಳಿಂದ ಪಿಡಿಯಿಸಿ ಚುಂಬಿಸಲದು ಭ್ರಾಂತವೆಂಬ ಚುಂಬನ ಭೇದವು, ಈ ಪರಿ ಯಲ್ಲೀ ಪುರುಷನು ಸ್ತ್ರೀಯ ಮೊಗವಂ ಕೆಳಕ್ಕೆ ತಿರುಹಿ ತನಗೆ ಅಭಿ ಮುಖವಂ ಮಾಡಿಕೊಂಡು ಎಡದ ಕೈಯಿಂದ ಅವಳ ಕೈಗಳಂ ಪಿಡಿದು, ಬಲದ ಕೈಯಿಂದ ಗಲ್ಲವಂ ಎತ್ತಿ ತುಟಿಯಂ ಚುಂಬಿಸಲದು ತಿರ್ಯಕ್ಚುಂ ಬನವೆಂಬ ಭೇದವು. ಮತ್ತೂ ಅಬಲೆಯರ ಎರಡು ತುಟಿಯಂ ತನ್ನ

ಎರಡು ತುಟಿಗಳಿಂದೊತ್ತಿ ಚುಂಬಿಸುವದೇ ಪೀಡಿತವೆಂಬ ಚುಂಬನ ಭೇದವು. ಇಂತು ಚುಂಬನ ಭೇದಂಗಳು ಅನೇಕ ಪರಿಯಾಗಿರುವವು.

ಇನ್ನು ನಖಕ್ಷತ ಸ್ಥಾನಂಗಳಂ, ಅವರ ಪ್ರಭೇದಂಗಳಂ ಕೂಡ ಪೇಳ್ವೆನು—ಲಾಲಿಸೈ ರಾಜೇಂದ್ರನೆ! ಕಣ್ಗಳು, ಕೈಗಳು, ತೊಡೆಗಳು, ರತಿಮಂದಿರವು, ಮೊಲೆಗಳು, ಬೆನ್ನು, ಎದೆ, ಕೊರಳು, ಇವುಗಳಲ್ಲಿ ಮಾಡುವ ನಖಕ್ಷತಂಗಳು ಪುರುಷಂಗೆ ಹೊಸ ಕೂಟದಲ್ಲಿಯೂ, ಲಜ್ಜೆ ಗೆಡುವಲ್ಲಿಯೂ, ಮುಟ್ಟಾಗಿ ವಿರಾಮವಳಲ್ಲಿಯೂ, ಮದ್ಯ ಪಾನದಿಂ ಸೊಕ್ಕಿದವಳಲ್ಲಿಯೂ ಪ್ರಯೋಜನಂಗಳು. ಇದೇ ಪರಿಯಾಗಿ ದಂತಕ್ಷತ ಸ್ಥಾನಂಗಳಂ ಊಹಿಸಬೇಕು. ಇನ್ನು ಅಭ್ಯಂತರ ರತಿಯಂ, ಆ ರತೀ ಕ್ರೀಡಾ ಯೋಗ್ಯವಾದ ಕೇಳೀಗೃಹ ಲಕ್ಷಣವಂ ಕೂಡ ಪೇಳ್ವೆನು ಅದೆಂತೆನೆ—ಕಪ್ಪುರ ದೀಪಗಳಿಂದಲೂ, ಪರಿಪರಿ ಪುಷ್ಪಂಗಳಿಂದಲೂ, ಹಂಸ ತೂಲಿಕಾ ತಲ್ಪದಿಂದಲೂ, ಪರಿಮಳಿಸುವ ಅಗರು ಸಾಮ್ರಾಣಿ ಧೂಪಂಗಳಿಂದಲೂ ಕೂಡಿ, ನಳಕೂಬರನ ನವನಾಟಕಶಾಲೆಯಂತಿರ್ಪ ಕೇಳೀಗೃಹದಲ್ಲಿ ಕಾಮುಕನಾದ ಪುರುಷನು ಪರಿಮಳ ಭರಿತವಾದ ಪನ್ನೀರಿನಿಂದ ಸ್ನಾನಮಂ ಮಾಡಿ, ದಿವ್ಯಾಂಬರಾಭರಣಂಗಳಂ ಧರಿಸಿ, ಷಡ್ರಸೋಪೇತವಾದ ಅನ್ನವಂಭುಂಜಿಸಿ, ಕಪ್ಪುರ ವೀಳ್ಯವಂ ಧರಿಸಿ, ಪೀಠಮರ್ದ, ವಿಟ, ಚೇಟ, ವಿದೂಷಕರೆಂಬ ಸಂಗಡಿಗಾರರಿಂ ಕೂಡಿಕೊಂಡು, ಘನ್ನ, ನಯ, ದೇಶೀಯಗಳೆಂಬ ಗಾನಪ್ರಭೇದಂಗಳಿಂದೊಡಗೂಡಿದ ತಾನ ಮೂರ್ಛನಂಗಳಲ್ಲಿ ಸೊಕ್ಕಿ ಸೋಲುತ, ಸರ್ವಾಂಗ ಸೌಂದರ್ಯೆ ಉಳ್ಳ ಸ್ತ್ರೀಯಂ ಕುರಿತು, ಮೃದು ಮಧುರವಾದ ಹಾಸ್ಯ ಕಥಾ ಲಾಪಂಗಳಂ ಮಾಡುತಲಿರುವ ಪುರುಷನು ತನ್ನ ಬಾಹುಗಳಂ ಕಾಮಿನಿಯನ್ನು ಭಾರಿ ಭಾರಿಗೂ ಆಲಿಂಗನವಂ ಮಾಡುವ ನೆವದಿಂದ ಕುಪ್ಪಸದ ಮುಡಿಯಂ ಸಡಿಲಿಸಿ, ನೆರಿಯಂ ಕೈಯಿಂದ ಕಡೆಯೊಳ್ ನೂಕಿ, ಕೂದಲುಗಳನ್ನೇವರಿಸುತ, ಸಿಕ್ಕಂ ಬಿಡಿಸುತ, ಮತ್ತೊಂದು ಕೈಯಿಂದ ಮೊಲೆಯ ತೊಟ್ಟುಗಳಂ ಅಡಿಗಡಿಗೆ ಮುಟ್ಟಿ ಸವರುತಲಿರಲಾ ಸಮಯದೊಳ್ ಸರಸ ಸಲ್ಲಾಪಾದಿಗಳಿಂದ ಕಾಮಿನಿಗೆ ಕಾಮವು ಹೆಚ್ಚಿ ಬರುವ ಹದವನ್ನರಿತು ತನ್ನ ಸ್ನೇಹಿತರಾದ ವಿಟ, ಚೇಟ, ವಿದೂಷಕರಂ ಮರೆಯಾಗಿ ಕಳುಹಿ,

ಕೊರಳಲ್ಲಿ ಮನೋಹರವಾದ ಧ್ವನಿಯಂಗೈಯುತ್ತ, ಆ ಕಾಮಿನಿಯ ಚಿತ್ತಕ್ಕೆ ಆನಂದವಂ ಪುಟ್ಟಿಸಿ, ಬಳಿಕ ಧೈರ್ಯದಿಂ ಆ ಕಾಂತೆಯ ಹಣೆಯುಂ, ಗಲ್ಲವಂ, ಚುಬುಕವಂ, ನಾಸಾಗ್ರವಂ ಕೂಡ ಚುಂಬಿಸುತ್ತ, ಭಾರಿ ಭಾರಿಗೂ ಕಾಲುಗಳಂ ಮುಟ್ಟುತ್ತ, ಸೀತ್ಕಾರವಗೈಯುತ್ತ, ನಾಲಿಗೆಯಿಂದ ಗದ್ದವಂ, ನಾಲಿಗೆಯುಂ ಕೂಡ ಚುಂಬಿಸುತ್ತ, ನಖಕ್ಷತಂಗಳಿಂದ ಮನೋಹರವಾದ ಮದನ ಮಂದಿರದಲ್ಲಿಯೂ, ತೊಡೆಯಲ್ಲಿಯೂ ಬಡಿಯುತ್ತ, ಉಟ್ಟಿರುವ ಸೀರೆಯುಂ ತೊಲಗಿಸಿ, ಆ ಕಾಂತೆಯುಂ ಶ್ರಾಂತೆಯುಂ ಮಾಡಿ, ಬಳಿಕ ಅಭ್ಯಂತರ ರತಿಯೊಳ್ ಕ್ರೀಡಿಸುವದು ಮಹಾಫಸ್ಯ ಕಾರ್ಯವೆಂದು ವಾತ್ಸ್ಯಾಯನ ಮುನಿಯು ಹೇಳಲ್ಪಟ್ಟ ಕಾಮಾಗಮ ತಂತ್ರರಹಸ್ಯದೊಳ್ ವಿಸ್ತಾರವಾಗಿ ವಿಸ್ತರಿಸಲ್ಪಟ್ಟಿತ್ತು, ಈ ಅಭ್ಯಂತರ ರತಿಪ್ರಭೇದಂಗಳು ಅನೇಕ ಪ್ರಕಾರವಾಗಿರ್ಪವು, ಈ ಅಭ್ಯಂತರ ರತಿ ಪ್ರಭೇದಂಗಳಿಗೆ ಸಾಧನವಾಗಿರ್ಪ ಎಂಭತ್ತು ನಾಲ್ಕು ಬಂಧಂಗಳಂ ಪೇಳ್ವೆನು ಅದೆಂತೆನೆ—ಚಕ್ರ, ಉಪರತಿ, ಭ್ರಮಣ, ಏಕಪಾದ, ಘಟಿತ, ಮಕರ, ಮರ್ಕಟ, ಶುಕ, ಮಾರ್ಜಾಲ, ಧೇನುಕ. ವ್ಯಸ್ತ, ಗರ್ದಭ, ಹಸ್ತಿಕ, ಶುನಕ, ಮೃಗ, ಸ್ವಸ್ತಿಕ, ಪದ್ಮ, ಕುಕ್ಕುಟ, ಹಂಸ, ಕ್ರೌಂಚ. ಸರ್ಪ, ಮತ್ಸ್ಯ, ಕಚಗ್ರಹ, ಜಾಲ, ದೀಪ, ವಿಜಯ, ಭಯಾನಕ, ಮನ್ಮಥಪ್ರಿಯ, ಮುಸಲ, ಶಂಖ. ಡೋಲಕ, ಸಂಯುತ, ಪಲ್ಲವ, ನಾಗ, ಕೇಸರ, ಕುಮುದ, ಘೂಕ, ವೃಶ್ಚಿಕ, ಮಯೂರ, ಅಯುತ, ಕರ್ಕಟ, ಗರುಡ, ವಿಪ್ರ್ಲತ, ವೇಣು, ಪಾರಾವತ, ರಂಭಾಪ್ರಿಯ. ಕರ, ತಿರ್ಯಕ್, ಕಂತುಕ, ಧ್ವಜ, ಗೌರೀಪ್ರಿಯ. ಚಂದ್ರಾಭರಣ, ವಿಕ್ರಮ, ಏಕರೂಪ, ಲಲಿತ, ಶಂಕರಪ್ರಿಯ, ಕಳಾವತರಣ, ತುರಗಾರೋಹಣ, ಕುಂಡಲಿ, ಮಂಡೂಕ, ಮುರಜ. ಸರ್ವತೋಮುಖ, ಅಧೋಮುಖ, ಚಿತ್ರ, ಕಂದರ್ಪ, ವೃಷಭ, ಆವೃತ, ವಿಚಿತ್ರ, ಹಾಸ್ಯ, ವಿಟಾಧಿಪತಿ, ಸರ್ವಾಂಗಮರ್ದಕ. ವೀರದರ್ಪ ವಿನಾಶನ, ನೀವೀ ನಿವಾರಣ, ಶಾರ್ದೂಲ, ವಲಿತ, ಅಂಗುಳೀಪೀಡನ, ವಲ್ಲೀ, ಜಯ, ಋಕ್ಷ, ಕೂರ್ಮ, ಬಂಧರಾಜ. ಕರ್ಣಾಭರಣ, ತ್ರಿವಳೀ, ನೀರ, ಅಂಬಕಗಳೆಂಬ ಈ ಎಂಭತ್ತು ನಾಲ್ಕು ಬಂಧಗಳು, ಮೊದಲಾದ ವಿಚಿತ್ರಂಗಳಾದ

ಇನ್ನೂ ಅನೇಕವಾದ ಬಂಧಂಗಳಿರುವವೆಂದು ನುಡಿದು, ಬಳಿಕ ಎಲೈ ಮಹಾರಾಯನೇ! ನೀನ್ನ ಅಪ್ಪಣೆಯಾದುದರಿಂದ ನಾನು ವೃದ್ಧನಾದರೂ ನಿನ್ನ ಆಜ್ಞಾನುಸಾರವಾಗಿ ಎಲ್ಲವಂ ನಿರೂಪಿಸಿರುವೆನು. ಮತ್ತೂ ಕಾಮಶಾಸ್ತ್ರ ಲಕ್ಷಣ ಸಮುಸ್ವಯವಂ ಮಾಡಿದಡೆ ಪ್ರತ್ಯವಾಯ ಉಂಟಾಗುವದು, ಅಲ್ಲದೇ ಪತಿವ್ರತಾ ಸ್ತ್ರೀರುಗಳಲ್ಲಿಯೂ, ತಾಯಿ ಮೊದಲಾದ ಗುರುಜನಂಗಳಲ್ಲಿಯೂ, ಅಕ್ಕತಂಗಿಯರಲ್ಲಿಯೂ ಕೂಡ ಈ ಲಕ್ಷಣಂಗಳಂ ಊಹಿಸಿದ ಮಾತ್ರದಿಂದಲೇ ಪಾತಕ ಉಂಟಾಗುವದೆಂದು ನುಡಿದು, ಸಮಸ್ತ ಪಾಪ ಹಾರಕವಾದ ಪರಮೇಶ್ವರನ ನಾಮವನ್ನೇ ನೆನೆಯುತ ಕೈಗಳಂ ಮುಗಿದು ಕುಳಿತಿರುವ ಉಪಾಧ್ಯಾಯನಂ ನೋಡಿ, ಸುಗಂಧ ರಾಜೇಂದ್ರನು ಅಯ್ಯಾ ಗುರುವರ್ಯನೇ! ನಾನೂ ಕೂಡ ಈ ಜಾತಿ ಸ್ತ್ರೀ ಭೇದಂಗಳಂ ನಿಮ್ಮಿಂದ ತಿಳಿಯಬೇಕೆಂದು ಕೇಳಿದೆನಲ್ಲದೇ ಇದಂ ಪರೀಕ್ಷಿಸಬೇಕೆಂದು ಕೇಳಿದವನಲ್ಲವಾದ್ದರಿಂ ಕ್ಷಮಿಸುವನಾಗೆಂದು ನುಡಿಯುತ ಪದ್ಮಿನ್ಯಾದಿ ಜಾತಿ ಸ್ತ್ರೀ ಲಕ್ಷಣಂಗಳಂ, ಮತ್ತೂ ಆಯಾಯ ದೇಶಂಗಳೊಳ್ ಜನಿಸಿದ ಸಂಕರ ಸ್ತ್ರೀ ಜಾತಿ ಭೇದಂಗಳಂ, ಆ ಸ್ತ್ರೀರಂ ಕೂಡಿ ರಮಿಸುವ ಪುರುಷರ ಲಕ್ಷಣಂಗಳಂ, ಅವರಂ ವಶ್ಯರಂ ಮಾಡುವ ಮಣಿಮಂತ್ರ ಮೂಲಿಕಾದಿ ಸಾಮರ್ಥ್ಯಂಗಳಂ ಕೂಡ ಕೇಳಿ ಅಚ್ಚರಿಗೊಂಡು, ಸಾಕ್ಷಾತ್ಸರಸ್ವತೀದೇವಿಯೇ ಈ ಪರಿಯಾದ ಪುರುಷಾಕಾರವಂ ತಾಳ್ದು ಬಂದಿರುವಳೊ? ಎಂದು ನಿಜ ಗುರುವಾದ ವಿದ್ಯಾ ಸಾಗರನಂ ಪರಿ ಪರಿಯಾಗಿ ಸ್ತುತಿಸಿ, ಅಮೂಲ್ಯ ದಿವ್ಯಾಭರಣಂಗಳಂ ಕೊಟ್ಟು ಕಳುಹಿ, ಆ ಬಳಿಕ ಸುಗಂಧಮಹಾರಾಯನು ಮತಿವಂತನಾದ ಸುಮತಿಯಂ ನೋಡಿ, ಎಲೈ ಮಂತ್ರಿ ಶ್ರೇಷ್ಠನೆ! ಎನ್ನ ಬುದ್ಧಿಗೆ ಜಾತಿ ಸಾಂಕರ್ಯವಿಲ್ಲದೇ ಇರುವ ಕಾಂತೆಯರು ಭೂಲೋಕದೋಳ್ ಇರುವಂತೆ ತೋರಲಿಲ್ಲವಾದ್ದರಿಂದ ಈ ಪಣವು ಮಹಾ ಅಸಾಧ್ಯವಾಗಿ ತೋರುತಲಿಧೆ ಎಂದು ನುಡಿದು, ಚಿಂತಾಗ್ರಸ್ತನಾಗಲಾಗ ಸುಮತಿಯು ಇಂತು ಚಿಂತಾಗ್ರಸ್ತನಾಗಿರುವ ಮಹಾರಾಯನಂ ಕುರಿತು ಎಲೈ ಸರ್ವಜ್ಞಶಿಖಾಮಣಿಯಾದ ಸ್ವಾಮಿಯೆ! ನೀನು ಚಿಂತಿಸುವ ಕಾರ್ಯವು, ನಮ್ಮ ವಶವರ್ತಿಯಾಗಿರುವ ಯಕ್ಷಾಧಿಪನಾದ ಛಾಯಾಗುಪ್ತನಿಂ ತಿಳಿಯಬೇಕೆಂದು ವಿ

ಜ್ಞಾಪನೆಯಂ ಪಡೆದಲಾ ಮಹಾರಾಯನು ಅಹುದೆಂದು ಭಾಯಾಗುಪ್ತನಂ ಸ್ಮರಿಸಲು; ಆ ಕ್ಷಣದೊಳ್ ಆ ಯಕ್ಷನು ಕೈಗಳಂ ಕಟ್ಟಿಕೊಂಡು ಪುರೋ ಭಾಗದಲ್ಲಿ ಭಕ್ತಿಯುಕ್ತನಾಗಿ ಪಕ್ಷಗಳಂ ಕೂಡಿದ ಮೈನಾಕ ಪರ್ವತದಂತೆ ಬಂದು ಕಾಣಿಸಿಕೊಂಡು ಆ ರಾಯನಂ ಕುರಿತು ಇಂತೆಂದನು, ಎಲೈ ರಾಜಕುಲತಿಲಕನೆ! ಶ್ರೀ ದೇವಿಯ ಕಟಾಕ್ಷಕ್ಕೆ ಪಾತ್ರನಾದ ನಿನಗೆ ಅಸಾಧ್ಯವಾದ ಕಾರ್ಯಂಗಳು ಮೂರು ಲೋಕಂಗಳಲ್ಲಿಯೂ ಕಾಣಲಿಲ್ಲವಾದರೂ ನನ್ನಿಂದ ಆಗತಕ್ಕ ಕಾರ್ಯಂಗಳಂ ನಿರೂಪಿಸಬೇಕೆಂದು ಬಿನ್ನವಿಸಲಾಗ ರಾಜಾಧಿರಾಜನಾದ ಸುಗಂಧ ಮಹಾರಾಯನು ಈ ಪರಿಯಾಗಿ ನುಡಿದ ಭಾಯಾಗುಪ್ತನಂ ಕುರಿತು ಎಲೈ ಯಕ್ಷಾಧಿಪನೆ! ಕೇಳು, ಸ್ವರ್ಗ ಮರ್ತ್ಯ ಪಾತಾಳಾದಿ ಲೋಕಂಗಳಲ್ಲಿ ಸಾಂಕರ್ಯವಿಲ್ಲದಿರುವ ಪದ್ಮಿನ್ಯಾದಿ ಜಾತಿ ಸ್ತ್ರೀ ರತ್ನಂಗಳಂ ಕಂಡು ಕೇಳಿ, ದಿಕ್ಕುಗಳಂ ದೀರ್ಘ ದೃಷ್ಟಿಯಿಂದೀಕ್ಷಿಸುತ್ತ ಬಂದು ಮುಹೂರ್ತ ಮಾತ್ರ ಧ್ಯಾನಿಸಿ ತಲೆಯಂ ತೂಗಿಸುತ ಎಲೈ ಸುಗಂಧರಾಜ ಸಾರ್ವಭೌಮನೆ! ಕೇಳು ಸ್ವರ್ಗಲೋಕದೊಳ್ ಸುಧರ್ಮಾ ಎಂಬ ಸಭೆಯಲ್ಲಿ ನಾಟ್ಯವನ್ನಾಡುತ್ತ ರಂಭಾ, ಮೇನಕಾ, ಊರ್ವಸಿ, ತಿಲೋತ್ತಮಾ, ಎಂಬ ಪೆಸರುಗಳಿಂದ ಪ್ರಸಿದ್ಧಿಯಂ ಪಡೆದಿರುವ ದೇವವೇಶ್ಯೆಯರು ಪದ್ಮಿನೀ, ಚಿತ್ರಿಣೀ, ಶಂಖಿನೀ, ಈ ಪರಿ ಜಾತಿ ಲಕ್ಷಣಗಳಿಂದ ಕೂಡಿರುವರು ಈಗ ಮಹೇಂದ್ರನು ದೂರ್ವಾಸ ಶಾಪದಿಂದ ತೇಜೋ ಹೀನನಾಗಲಾಕಾಲದೊಳ್ ಆ ಸುರಸುಂದರಿಯರು ಅಸುರರಿಂದಾಕ್ರಮಿಸಿದ ಅಮರಾವತಿಯಂ ಬಿಟ್ಟು ಎಲ್ಲಿ ಪೋದರೊ? ತಿಳಿಯಲಿಲ್ಲವೆಂದು ನುಡಿಯಲಾ ಮಾತುಗಳಂ ಕೇಳಿ, ಮಹಾರಾಯನು ಮನದೊಳಾಲೋಚಿಸಿ, ಎಲೈ ಕಾರ್ಯ ದಕ್ಷನಾದ ಯಕ್ಷನೆ! ಗಗನದಲ್ಲಿ ಸಂಚರಿಪ ಶಕ್ತಿಯುಳ್ಳ ನೀನು ಜಂಬೂ ದ್ವೀಪ ಮೊದಲಾದ ಸಪ್ತ ದ್ವೀಪಂಗಳಂ, ಚತುರ್ದಶ ಭುವನಂಗಳಂ, ಮತ್ತು ಮನುಷ್ಯರಿಂ ಪ್ರವೇಶಿಸಲಶಕ್ಯವಾದ ಪ್ರದೇಶಂಗಳಂ ಕೂಡ ಪ್ರವೇಶಿಸಿ, ಆ ಕಳಾವತಿಯು ಇರುವ ಸ್ಥಳವಂ ಗೊತ್ತು ಮಾಡುವದಕ್ಕೆ ನೀನೇ ಸಮರ್ಥನೆಂದು ಆಜ್ಞಾಪಿಸಲಾ ಭಾಯಾಗುಪ್ತನು ಪರಮ ಹರ್ಷದಿಂ ಪರರಾಯಭಯಂಕರನಾದ ಮಹಾರಾಯನಾಜ್ಞೆಯಂ ಶಿರಸಾವಹಿಸಿ ಸಾಷ್ಟಾಂಗ

ದಂಡಪ್ರಣಾಮವಗೈಯಲು ಆಗ ಸಮಯದೊಳಾ ಸಾರ್ವಭೌಮನು ಸಾಯುಧಪರಿವಾರ ಸಮೇತಳಾದ ಸರ್ವಮಂಗಳೆಯಾದ ಶ್ರೀ ಚಾಮುಂಡಿಕಾಂಬಾ ದೇವಿಯ ಚರಣಸರೋಜಂಗಳಂ ಧ್ಯಾನಿಸಿ, ಮರಳಿ ಛಾಯಾಗುಪ್ತನಂ ಕುರಿತು ನಿನಗೆ ಮಂಗಳವಾಗಲೆಂದು ಮರಳಿ ಮರಳಿ ಹರಸಿ ಕಳುಹಲು, ಒಳಿಕ ಆ ಯಕ್ಷನು ಘಾಳಿಯಂತೆ ಗಗನದೊಳ್ ಗಮಿಸುತ್ತ, ಮನುಷ್ಯ ಲೋಕದಲ್ಲಿರುವ ಲಾಟವರಾಟ ಮರಾಟ ಮುಂತಾದ ದೇಶಂಗಳಂ ವೀಕ್ಷಿಸುತ್ತ, ಬಲ ಭಾಗದೊಳ್ ಬಲಾರಿಯ ಭವನದಂತಿರುವ ಬಂಗಾಳ ದೇಶವನ್ನವಲೋಕಿಸುತ್ತ, ಪಾರ್ವತೀದೇವಿಯ ಪಾದಾರವಿಂದವಿನ್ಯಾಸದಿಂ ಪರಿಶುದ್ಧನಾದ, ಪರಮ ಪಾವನನಾದ ಹಿಮವಂತನ ಪಾದಂಗಳಂ ನೆನೆಯುತ್ತ, ತನ್ನ ಮನದೊಳ್ ಪ್ರಕೃತಕಾರ್ಯ ನಿರ್ವಾಹದ ಪ್ರಕಾರವಂ ಯೋಚಿಸುತ್ತ, ಭರತ, ಕಿಂಪುರುಷ ಮುಂತಾದ ಖಂಡಂಗಳಂ ಕಳೆಯುತ್ತ, ಮುಂಭಾಗದೊಳ್ ಮನಸ ನಿಧಿ ಧ್ಯಾನಾಸನಂಗಳಿಂ ಮನವಂ ಐಕ್ಯವಂ ಮಾಡಿ ಮಾಹೇಶ್ವರಪದವನ್ನೈದಿ, ಮಹಾನುಭಾವರಾದ ಮಹರ್ಷಿಗಳಿಂ ಸೇವಿತನಾಗಿ, ಬ್ರಹ್ಮಾದಿ ದೇವತಾ ಸಮೂಹಂಗಳಿಗೆ ಆಧಾರವಾಗಿ, ಗ್ರಹ ನಕ್ಷತ್ರ ತಾರಕಾ ನಿಕರದಿಂ ಪರಿವೇಷ್ಟಿತವಾಗಿ, ರತ್ನಶಿಖರ ಸಹಸ್ರಗಳಿಂದ ರಾಜಿಸುವ ಮಹಾಮೇರುವಿಗೆ ನಮಸ್ಕಾರವಗೈಯುತ್ತ, ಆ ಕಾಲದೊಳ್ ಕಲಧೌತಮಯವಾದ ಪ್ರಾಕಾರದಿಂ ಪರಿವೃತವಾಗಿ, ಅಕ್ಷಯವಾದ ನಿಧಿಗಳಂ ಪರೀಕ್ಷಿಸುವ ಯಕ್ಷರುಗಳಿಂ ಪರಿ ರಕ್ಷಿತವಾದ ಅಳಕಾಪುರಿಯ ಗೋಪುರ ಪುರೋಭಾಗದೊಳ್ ಯಕ್ಷಾಧಿಪ ಲಕ್ಷ್ಮಿಗೆ ಆವಾಸಸ್ಥಾನವಂತಿರ್ಪ ಚೈತ್ರ ರಥವೆಂಬ ಪೆಸರಿನಿಂ ಪ್ರಸಿದ್ಧವಾದ ಉದ್ಯಾನವನದಲ್ಲಿರುವ ಮಣಿಮಂತನಂ ನೋಡಿ, ಪ್ರಕೃತಕಾರ್ಯ ಸಾಧನವಂ ಕೇಳುವೆನೆಂದು ಆಲೋಚನೆಯಗೈದು, ಅಂತರಿಕ್ಷಮಾರ್ಗದಿಂ ಪಕ್ಷಗಳಂ ಬಗ್ಗಿಸಿ ಬೀಳುವ ಪಕ್ಷಿಯಂತೆ ಇಳಿದು ಬಂದು ನಿಂದಿರಲು; ಬಳಿಕ ಮಣಿಮಂತನು ಛಾಯಾಗುಪ್ತನಂ ನೋಡಿ ಎಲೈ ಮಿತ್ರನೆ! ನಿನ್ನಂ ನೋಡಿ ಬಹು ಕಾಲವಾಯಿತು, ನಿನ್ನ ಪತ್ನೀ ಪುತ್ರಾದಿಗಳು ಕುಶಲವೆ? ಎಂದು ಪ್ರಶ್ನೆಯಗೈದು, ಮಧುರವಾದ ಫಲಗಳಿಂ, ಪರಿಮಳಭರಿತವಾದ ಪುಷ್ಪಮಾಲಿಕೆಗಳಿಂ ಸತ್ಕಾರವಂ ಮಾಡಿ, ಸಮಯೋಚಿತವಾದ ಮಾತುಗಳಂ

ಪೇಳುತಲಿರುವ ಸಮಯದಲ್ಲಿ ಛಾಯಾಗುಪ್ತನು ಮಣಿಮಂತನಂ ಕುರಿತು ಎಲೈ ಮಿತ್ರನೆ! ಅಮರಾವತೀ ಪಟ್ಟಣದಲ್ಲಿರುವ ಅಮರವೇಶ್ಯೆಯರಾದ ರಂಭಾದಿಗಳೆಲ್ಲಿರುವರು ತಿಳಿದಿರುವೆಯಾ? ಮತ್ತೂ ಈಗ ಅವರಿಂದ ಅವಶ್ಯಕವಾದ ಒಂದಾನೊಂದು ಕಾರ್ಯವಿರುವವರಿಂದ ನೆಲೆಯಂ ತಿಳಿದು ಪೇಳಬೇಕೆಂದು ನುಡಿಯಲಾ ಮಾತಂ ಕೇಳಿ, ಮಣಿಮಂತನು ನಸುನಗುತ ಪರಿಹಾಸೋಕ್ತಿಗಳಂತಲೆದೂಗಿ, ತಬ್ಬಿಕೊಂಡು ತಾಳಗಳಂ ಹಾಕುತ್ತ, ಎಲೈ ಮಿತ್ರನಾದ ಛಾಯಾಗುಪ್ತನೆ! ನಮ್ಮ ಅಲಕಾಪುರಿಯೊಳ್ಯಾವವನಾದರೂ ಆ ಕಳಾಪತಿಯರಂ ಕಾಮಿಸಬೇಕೆಂದು ಬಂದಿರುವ ವರ್ತಮಾನವಂ ಯಕ್ಷೇಶ್ವರನಾದ ನಳಕೂಬರನಿಗೆ ತಿಳುಹಿಸಿದ ಕ್ಷಣದಲ್ಲಿಯೇ ನಮ್ಮಿರ್ವರಿಗೂ ಚಂಡಶಾಸನವಂ ಮಾಡಿಸುವದರಲ್ಲಿ ಅಂತರವಿಲ್ಲ, ಆದರೂ ನೀನು ನನಗೆ ಪರಮ ಸಖನಾದುದರಿಂದ ಮರೆಮಾಚುವದು ಉಚಿತವಲ್ಲವೆಂದು ಪೇಳಿ, ಕೈಗಳಂ ಪಿಡಿದು ರಹಸ್ಯವಾದ, ವನಲಕ್ಷ್ಮಿಗೆ ವಾಸಯೋಗ್ಯವಾದ, ಮೆಲ್ಲನೆ ಅಲ್ಲಲ್ಲಿ ಅಂಬೆಗಾಲಿನಿಂ ದಾಟುತ ಬರುವ ಮಂದಮಾರುತ ಮರಿಗಳಿಗೆ ಆಧಾರವಾದ, ಮೊಲ್ಲೆ ಮಲ್ಲಿಗೆಮುಂತಾದ ಬಳ್ಳಿಗಳಿಂದುದುರುತಲಿರುವ ಪುಷ್ಪಪರಾಗ ವರ್ಷದಿಂದೊಡಗೂಡಿದ ಲತಾ ಮಂಟಪದೊಳ್ ಕುಳಿತು, ವೃತ್ತಾಂತವೆಲ್ಲವಂ ಪೇಳಲುಜ್ಜುಗಿಸಿ, ಅಯ್ಯಾ ಮಿತ್ರನೆ! ಈಗದುರ್ಗಮವಾದ ಸ್ವರ್ಗವು ದಾನವರಿಂ ತುಂಬಿ ತುಳುಕುತಲಿರ್ಪ, ದೇವಮಂತ್ರಿಯಾದ ಬೃಹಸ್ಪತಿಯೂ, ಕಶ್ಯಪ, ಅತ್ರಿ, ಭರದ್ವಾಜ, ಮೊದಲಾದ ಬ್ರಹ್ಮ ಋಷಿಗಳು ತಮ್ಮ ತಮ್ಮ ಪತ್ನೀ ಪುತ್ರಾದಿಗಳಿಂದೊಡಗೂಡಿ ತಮ್ಮ ತಮ್ಮ ಅರಣಿ ಮೊದಲಾದ ಯಜ್ಞಪಾತ್ರೆಗಳಂ ಕುಶಾಸನಂಗಳಲ್ಲಿ ಕಟ್ಟಿ ಹೊತ್ತು ನಿಜ ನಿವಾಸಂಗಳಂ ಬಿಟ್ಟು ತಮ್ಮ ತಮ್ಮ ರೂಪಂಗಳಂ ಮರೆಮಾಡಿಕೊಂಡು ಮಹಾ ಮೇರು ಪರ್ವತದ ಗುಹಾಂತರಾಳಂಗಳಂ ಪೊಕ್ಕು ಈ ಕಠಿಣವಾದ ಕಾಲವಂ ಕಳೆಯಲಾರವೆಂದು ಪರಸ್ಪರ ಮಾತುಗಳನ್ನಾಡುತ, ವಿವಿಧವಾದ ವಿಪತ್ತುಗಳಂ ಅನುಭವಿಸುತಲಿರುವರು. ನೀನು ಪೇಳಿದ ರಂಭಾದಿ ವೇಶ್ಯೆಯರು ತಮ್ಮ ತಮ್ಮ ಮನೆಗಳಂ ಬಿಟ್ಟು ಎಲ್ಲಿಯೂ ಪೋಗದೆ, ಇಲ್ಲಿಯೇ ಕಾಲವಂ ಕಳೆಯಬೇಕಲ್ಲದೆ ಅಲ್ಲಲ್ಲಿಗೆ ಪೊರಮಟ್ಟು ಪೋಗಲಾರವೆಂದು ಪೇಳುತಲಿರಲಾ ಕಾಲದೊಳ್ ಸ್ವರ್ಗಾ

ಧಿಪತಿಯಾದ ರಾಕ್ಷಸೇಶ್ವರನು ದೈತ್ಯದಾನವ ಸಮೇತನಾಗಿ ಒಡ್ಡೋಲಗ ಗೊಂಡು ಕುಳಿತು, ರಂಭಾದಿವೇಶಿಯರ ನರ್ತನವಂ ನೋಡಬೇಕೆಂದು ನಿಶ್ಚೈಸಿ, ಅವರಂ ಕರತರುವದೆಂದು ದೂತರಿಗೆ ನಿಯಮಿಸಲಾಗ ದೂತರು ಆ ಕ್ಷಣದಲ್ಲಿಯೆ ಅವರಂ ಕರತಂದು ಮುಂದೆ ನಿಲ್ಲಿಸಿ ರಾಕ್ಷಸೇಶ್ವರನಿಗೆ ವಿಜ್ಞಾಪನೆಯಂ ಮಾಡಲಾ ರಾಕ್ಷಸನು ನರ್ತನವಂ ಮಾಡಲೀ ಎಂದು ಅಪ್ಪಣೆಯಂ ಕೊಡಲು ಆಗ ರಂಭಾದಿ ವೇಶಿಯರು ಕಾಲುಗೆಜ್ಜೆಗಳಿಗೆ ಕೈಗಳಂ ಜೋಡಿಸಿ ರಂಗ ಭೂಮಿಗೆ ನಮಸ್ಕಾರವಂ ಮಾಡಿ, ಬಳಿಕ ನಾಟ್ಯಾಂಗಂಗಳಾದ ವೀಣಾ ವೇಣು ಮೃದಂಗಾದಿ ವಿವಿಧ ವಾದ್ಯಂಗಳಿಗೆ ಪ್ರದಕ್ಷಿಣ ಪೂರ್ವಕವಾಗಿ ವಂದನೆಯಂಗೈದು, ಪ್ರಾಕ್ಷಾಪಾಕದಿಂ ದೊಡಗೂಡಿದ ಪದ್ಯಗಳಿಂದ ಪುರಾಣ ಪುರುಷನಾದ ಪರಮೇಶ್ವರನ ಪಾದಪದ್ಮಂಗಳಿಗೆ ಪುಷ್ಪಾಂಜಲಿಗಳಂ ಎರಚಿ, ಸಮವಾಗಿ ಪಾದಂಗಳನಿಟ್ಟು, ಸಮ ಪತಾಕ ಹಸ್ತಂಗಳಿಂದ ನಿಂತು, ಹಸ್ತಂಗಳಂ ಕಡೆಗಣ್ಣುಗಳಿಂದ ಈಕ್ಷಿಸುತ, ಶರತ್ಕಾಲ ಮೇಘ ಮಂಡಲದಿಂ ತೆರಳಿ ಬರುವ ಚಂದ್ರ ಬಿಂಬದಂತೆ ಮನೋಹರನಾದ ತೆರೆಯೋಳ್ ಮುಖವಂ ತೋರುತ, ನಾಟ್ಯರಂಗದೋಳ್ ಮನೋಹರವಾಗಿ ಮೇಳವಿಸಿರುವ ಗದ್ಯ ಪದ್ಯಂಗಳನ್ನಾಲಾಪಿಸುತಲಿರಲಾ ಸಮಯದೋಳ್, ಸಭಾ ರಂಜನವಂ ಮಾಡುವ ಸೂತ್ರಧಾರನು ತೆರೆಯ ಮುಂದುಗಡೆಯೊಳ್ ಬಂದು ಎಲೈ ನರ್ತಕಿಯರೆ! ಇಂದ್ರ ಪರಾಜಯವೆಂಬ ನಾಟಕವಂ ಅಭಿನಯಿಸುವದೆಂದಾಜ್ಞಾಪಿಸಲು; ಆಗ ರಂಭಾದಿ ವೇಶಿಯರು ತಮ್ಮ ತಮ್ಮ ಮನದೋಳೀ ನೆಂದರೇನು? ಪರಾಜಯವೆಲ್ಲಿಹುದು, ಹುಚ್ಚು ಬಲಿತು ಪೇಳದ ಪೆಚ್ಚು ಮಾತುಗಳೆಂದೆಣಿಸಿ, ವಿದೂಷಕನಾದ ಕಳಾ ಧರನಂ ನೋಡಿ ನಗುತ, ಈ ನಾಟಕದ ಅಭಿನಯವಂ ನಾವು ಮಾಡಬಾರದೆಂದು ನಿಶ್ಚೈಸಿ, ಬಳಿಕ ಈ ದುಷ್ಟ ರಾಕ್ಷಸರಿಗೆ ಮೋಹವಂ ಪುಟ್ಟಿಸಬೇಕೆಂದೆಣಿಸಿ, ಘನವಾದ ನಾಟರಾಗದಿಂ ಮಾಟವಂ ಮಾಡಿ, ಅಹರೀರಾಗದಿಂ ಲಹರಿಯಂ ಹೆಚ್ಚಿಸಿ, ಶೋಕವರಾಳಿಯಿಂದ ಶೋಕವಂ ಪುಟ್ಟಿಸಿ, ಹಿಂದೋಳ ರಾಗದಿಂದ ಹಿಂದು ಮುಂದು ತೋರದಂತೆ ಮಾಡಿ, ಮೋಹನಾಲಾಪದಿಂ ಮೋಹಗೊಳಿಸಿ, ದೇವಗಾಂಧಾರರಾಗದಿಂ ದೇವತಾ ಸಾರ್ವಭೌಮನಾದ ಇಂದ್ರನಿ

ಸ್ತುತಿಸ್ಸಿ,ಈ ಪರಿ ರಾಗಾಲಾಪನದಿಂದಲೇ ರಾಕ್ಷಸರಿಗೆ ಶಿಕ್ಷೆಯಂ ಮಾಡುತ ಮತ್ತೂ ವಿದೂಷಕನ ಮುಖವಂ ನೋಡಲು ಆಗ ವಿದೂಷಕನು ಪಂಚಸದಿಂದ ಪಂಚತ್ವವನ್ನೈದಿರುವಂತೆ ತೋರುವ ರಾಕ್ಷಸರಂ ನೋಡಿ, ಈ ಕಾಲದೊಳ್ ಕೊಂಚವಾಗಿ ಪಂಚಮ ರಸವಂ ತೋರಿಸಿ ಕಳಾವತಿಯರ ಮುಖಂಗಳಿಗೆ ಕಳೆಗಳಂ ಹೆಚ್ಚಿಸಬೇಕೆಂದೆಣಿಸಿ, ರಾಕ್ಷಸ ಸಭೆಯಂ ಪೊಕ್ಕು, ಸಾಲಾಗಿ ಬಿದ್ದಿರುವ ತಾಳೇ ಮರಗಳಂತಿರುವ ರಾಕ್ಷಸರ ತಲೆಗಳಲ್ಲಿ ತಾಳಂಗಳಂ ಹಾಕುತ್ತ, ಮೆಟ್ಟು ತಾಳ ಮೆಟ್ಟುಗಳಿಂದ ರೆಟ್ಟೆಗಳಿಗೆ ಹಿಂಗಟ್ಟುಗಳಂ ಕಟ್ಟುತ್ತ, ಅಟ್ಟತಾಳ ಗತಿಯಿಂದ ಅಂಡುಗಳ ಮೇಲೆ ಗುಟುಗಳಂ ಒದೆಯುತ್ತ, ನೊಂಪಾದ ಜಂಪೆತಾಳದಿಂದ ಪತ್ರಗಳಂ ಆಟವಂ ಆಡಿಸುತ್ತಿರಲು; ಆಗ ಆ ಕಳಾವತಿಯರು ವಿದೂಷಕನ ಹಾಸ್ಯರಸದಿಂದ ಆನಂದ ಭೈರವಿಯನ್ನಾಲಾಪಿಸುತ ನಿಂತಿರಲು, ಬಳಿಕ ರಾಕ್ಷಸರೆಲ್ಲ ಬೆಟ್ಟಗಳಿಂದ ಉರುಳಿ ಬರುವ ಗೋಡು ಕಲ್ಲುಗಳಂತೆ ಹೊರಳುತ ತಮ್ಮ ತಮ್ಮ ವಿಕಾರಂಗಳಂ ನೋಡಿ, ಇದು ಮಯಾಸುರನಿಂದ ಮಾಡಲ್ಪಟ್ಟ ಸಭಾ ಮಹಿಮೆಯೊ? ಇಲ್ಲದಿರೆ ಮದ್ಯಪಾನದ ಮದವೇರಿ ಮತ್ತಿನಿಂದ ಮನ ಬಂದಂತೆ ಮಾಡಿಕೊಂಡಿರುವ ನಮ್ಮ ಚೇಷ್ಟೆಗಳೊ? ಇಂತುಮಲ್ಲದೆ, ಮಹೇಂದ್ರನು ಮಾಡಿದ ಮಾಟದ ಮಹಿಮೆಯೊ? ಎಂದು ಪರಿಪರಿಯಾಗಿ ಅಚ್ಚರಿಗೊಳುತ್ತ, ದಿವ್ಯಾಂಬರಾಭರಣಂಗಳಿಂದ ಬಹುಮಾನವಂ ಮಾಡಲಾ ದೇವ ವೇಶಿಯರು ಕೈಗಳಂ ಮುಗಿದು, ಇತರ ರಾಕ್ಷಸರಿಂದ ಬಾಧೆ ಉಂಟಾಗದಂತೆ ಅಪ್ಪಣೆಯಂ ಕೊಡಬೇಕೆಂದು ಬೇಡಿಕೊಳ್ಳಲಾಗ ರಾಕ್ಷಸೇಶ್ವರನು ಅಮರಾವತಿ ಬೀದಿಯೊಳ್ ಈ ವೇಶಿಯರಿಗೆ ಮತ್ತೋರ್ವರಿಂದ ಬಾಧೆ ಉಂಟಾಗದಂತೆ ಸಾರಿಸಿ ಎಂದು ಗೊತ್ತುಗಾರರಿಗೆ ಅಪ್ಪಣೆಯನ್ನಿತ್ತು ಕಳುಹಲು; ಬಳಿಕ ಆ ಕಲಾವತಿಯರು ತಮ್ಮ ತಮ್ಮ ಮನೆಗಳೊಳ್ ಸುಖದಿಂದಿರುತ್ತಿರಲು,

ಕೆಲವುಕಾಲ ಕಳೆದನಂತರ ಕೆಲರು ತುಂಟರಾದ ರಾಕ್ಷಸರ ಹುಡುಗರು ಯೋಚನೆಯಂ ಮಾಡಿ,ಈ ದೇವ ವೇಶಿಯರಂ ಮೋಸವಂ ಮಾಡಲೆಣಿಸಿ,ಓರ್ವನು ದೇವಮಂತ್ರಿಯಾದ ಬೃಹಸ್ಪತಿಯಂತೆಯೂ, ಮತ್ತೋರ್ವನು ದೇವತಾಸಾರ್ವಭೌಮನಾದ ಮಹೇಂದ್ರನಂತೆಯೂ, ಓರ್ವನು ಜಯಂ

ತನಂತೆಯು, ವೇಷಗಳಂತಾಳಿ ರಂಭಾದಿ ವೇಶಿಯರಮನೆಗಳಂ ಕುರಿತು ಪೋಗಲಾ ಚಂದ್ರವದನೆಯರ್ಕಳವರುಗಳ ಮೋಸವನ್ನರಿಯದೆ ಕಪಟವೇಷದ ಇಂದ್ರಜಯಂತರಿಗೆ ಸಾಷ್ಟಾಂಗವಾಗಿಎರಗಿ, ಬಳಿಕ ಅದೇಪರಿಯಾದ ಗುರುವಿಗೆ ಮರ್ಯಾದೆಯಿಂದ ಅಂಜಲಿಯಂ ಮಾಡಿ, ರತ್ನಪೀಠಂಗಳೋಳ್ ಕುಳ್ಳಿರಿಸಿ ರಾಜೋಪಚಾರಂಗಳಂ ಮಾಡುತ್ತ, ಎಲೈ ದೇವದೇವನೆ! ನಮ್ಮ ಸಾಲ್ವರ ನಾಟ್ಯವಂ ಅವಲೋಕಿಸಿ ಬಹು ಕಾಲವಾಯಿತೆಂದು ಬಿನ್ನವಿಸಿ, ನರ್ತನವ ಗೈಯ್ಯುತ್ತಿರಲು; ಬಳಿಕ ಆ ರಾತ್ರಿಯೊಳ್ ಮಿಗಿಲಾದ ರಾಕ್ಷಸರು ಈ ವೇಶಿಯರ ಮನೆ ಬಾಗಿಲಲ್ಲಿ ನಿಂತು, ಎಲೈ ರಂಭಾದಿಗಳಿರಾ! ನಿಮ್ಮ ನಾಟ್ಯವಂ ನಾವು ನೋಡಬೇಕೆಂದು ಹೇಳುತ, ಮನೆಯೊಳ್ ಪ್ರವೇಶವಂ ಮಾಡಿ, ಮುಸುಕುಗಳಿಂದ ಮೊಗಂಗಳಂ ಮರೆ ಮಾಡುತ, ಸಾಲಾಗಿ ಕುಳಿತಿರುವವರಂ ನೋಡಿ ಇವರ್ಯಾರೆಂದು ನುಡಿಯುತ, ಅವರುಗಳ ಸಮೀಪಕ್ಕೆ ಪೋಗಿ ಮುಸುಕುಗಳಂ ತೆಗದು ಚನ್ನಾಗಿ ನೋಡಿ, ಎಲೈ ಅಣ್ಣಂದಿರ್ಗಳಿರಾ! ಇಂದ್ರನಂ ಹಿಂದು ಮುಂದು ನೋಡದೆ ಹಿಂಗಟ್ಟುಗಳಂ ಕಟ್ಟಿರಿ, ಜಯಂತನ ಜಡೆಯಂ ಪಿಡಿದು ಜಾಡಿಸಿ, ಆ ಗುರುವಿಗೆ ಗುರುತು ಮಾಡಿ ಕಳುಹಿಸಿರೀ ಎಂದು ನುಡಿಯುತ, ಹಾಗೇ ರಂಭಾದಿ ವೇಶಿಯರಂ ನೋಡಿ ಎಲೈ ತುಂಟುಗಾತಿಯರಾ! ನೀವು ಮಾಡಿರುವ ಕೃತ್ಯಂಗಳಂ ನಮ್ಮ ರಾಕ್ಷಸೇಶ್ವರನು ಅರಿಯನು, ಆದ್ದರಿಂ ಈ ಕ್ಷಣವಲ್ಲಿಯೆ ತಿಳುಹಿಸಿ, ವೇಶಿಯರಾದ ನಿಮಗೆ ದಾಸೀಜನಕ್ಕೆ ಮಾಡುವ ಮುಂಡನವಂಮಾಡಿಸಿ, ಮುಂಡೆಗಳಲ್ಲಿ ಮಂಕರಿಗಳನ್ನಿರಿಸಿ ಮಣ್ಣು ಹೊರುವಂತೆ ಮಾಡಿಸುವದರಲ್ಲಿ ಅಂತರವಿಲ್ಲವೆಂದು ಭಯಂಕರವಾದ ಮಾತುಗಳನ್ನಾಡುತ ನಿಂತಿರುವ ರಾಕ್ಷಸರಂನೋಡಿ, ಹುಲಿಯ ಹಿಂಡುಗಳಿಂದ ಸುತ್ತು ವರಿದಿರುವ ಹೆಣ್ಣು ಹುಲ್ಲೆಗಳಂತೆ, ಸುಂಟರ ಘಾಳಿಗೆ ಸಿಕ್ಕಿದ ಬಾಳೆಯ ಸುಳಿಗಳಂತೆ, ಬಲೆಗೆ ಬಿದ್ದಿರುವ ಬಾಲ ಮೀನುಗಳಂತೆ, ತೆರೆಗಳಲ್ಲಿ ಕಾಣಬರುವ ಚಂದ್ರ ಬಿಂಬದಂತೆ ಗಡಗಡನೆ ನಡುಗುತ, ಆ ರಾಕ್ಷಸರ ಅಡಿಗಳಿಗೆ ಅಡ್ಡ ಬೀಳುತ, ನಾವು ಅಬಲೆಯರು, ಏನೂ ಅರಿಯೆವು ರಕ್ಷಣವಂ ಮಾಡಬೇಕೆಂದು ತತ್ ಕ್ಷಣದಲ್ಲಿಯೇ ಮಹಾ ಪಥವಂ ತೋರಿ ಕಳುಹಿಸಿ, ಆ ಬಳಿಕ ಆ ವೇಶಿಯರೆಲ್ಲ ಒಟ್ಟಾಗಿ ಇವರು ಯಥಾರ್ಥ

ವಾದ ಇಂದ್ರಾಗ್ನಿಗಳೋ? ಅಲ್ಲದೆ ಅವರ ವೇಷಗಳಂ ತಾಳಿ ಬಂದ ರಾಕ್ಷಸರೋ? ತಿಳಿಯದು. ಇದರ ಪರೀಕ್ಷೆಯಂ ಮಾಡಿದರೆ ವಿಷಮ ಬರುವದಂದರಿತು, ಕಾವ್ಯಕಳಾಭಿಜ್ಞನಾದ ಕಳಾಧರನೆಂಬ ನಿರೂಪಕನ ಕರುಣಾಭಾವದಿಂ ಕನಕ ಗಿರಿಯು ಕಾಂತಾರವಂ ತೆರಳಿ ಬರುತ್ತ, ಮಾರ್ಗಾಯಾಸದಿಂ ಓರೋರ್ವರು ಎಲೆ ತಂಗಿಯರಾ! ನಮ್ಮ ಅಂಗಗಳೆ ನಮಗೆ ಭಾರವಾಗಿ ಬಳಲಿ ನಡೆಯಲಾರವೆಂದು ನುಡಿಯುತ್ತ, ಪಾಷಾಣ ತಿಟ್ಟುಗಳಲ್ಲಿ ಹತ್ತಾರು ಹೆಜ್ಜೆಗಳನ್ನಿಟ್ಟು, ಹಾ ಎಂದು ನಿಟ್ಟುಸಿರುಗಳಂ ಬಿಡುತ್ತ, ಕಟಕಟಾ ಕಡೆಯಂ ಕಾಣದಿರುವ ಕಾಡಿನೊಳ್ ಕಾರುಣ್ಯವಿಲ್ಲದ ಕಠಿಣಚಿತ್ತನಾದ ಕಮಲಸಂಭವನು ಈ ಪರಿ ನಮ್ಮ ನಾಲ್ವರಂ ಪಾಡು ಪಡಿಸಬಹುದೆ ಎಂದು ಕೈಗಳೊಳ್ ನೆಟ್ಟಿಗೆಗಳಂ ತೆಗೆಯುತ್ತ, ಸಹಿಸಲಶಕ್ಯವಾದ ಕಷ್ಟವಂ ಪಡಿಸಬೇಕೆಂದು ಕಟ್ಟು ಮಾಡಿರುವ ನಿನಗೆ ನಮ್ಮ ಸಮಾನರಾದ ತಾಯಿ ತಂಗಿಯರು ಯಾರೂ ಇಲ್ಲವೆ, ಎಂದು ಚತುರ್ಮುಖನಂ ಕುರಿತು ಬಗೆ ಬಗೆಯಾಗಿ ಬೈಯುತಲಿರಲಾಗ ರಂಭೆಯು ಊರ್ವಶಿಯ ಕೈಯ್ಯಂ ಪಿಡಿದು ಎಲೈ ಸಖಿಯೆ! ಈ ಮಾತಂ ಕೇಳು, ದಾಯಾದಿ ಮತ್ಸರವಂ ಮನದೊಳ್ ಮಡಗಿರುವ ದೇವದಾನವರು ಓರೋರ್ವರು ಮಡಿದು ಹೋಗದೆ ಮಂದರ ಪರ್ವತವಂ ಮಂತುಮಾಡಿ ಪಾಲ್ಗಡಲ ಮಥನವಂ ಯಂತುಮಾಡಿದರೋ? ವಿಷ್ಣುಮಾತ್ರನಿಂದಲೇ ರಮಾದೇವಿಯು ಸಮಾನಕಾಲದೊಳ್ ನಮ್ಮಿಬ್ಬರಂ ನೆಪ ಇಲ್ಲದೆ ದೈವವು ಯಾಕೆ ಪುಟ್ಟಿಸಿದನೋ? ಪುಟ್ಟಿದವರು ಕರಾಳವಾದ ಕಾಲಕೂಟ ಜ್ವಾಲೆಗಳಂ ಕಂದಿ ಹೋಗದೆ ಈ ಕರ್ಮವಂ ಅನುಭವಿಸಲೇ ಎಂದು ಪದ್ಮಸಂಭವನು ಹಣೆಯೊಳ್ ಬರದಿರುವನೋ? ಎಂದು ಪರಿಪರಿಯಾಗಿ ಹಂಬಲಿಸುತ್ತ, ಕಾಲುವೆಯಂತೆ ಹರಿಯುವ ಕಣ್ಣೀರಿನಿಂ ಕುಚ ಕುಂಭಗಳಂ ತುಂಬುತ್ತ, ಬೆಟ್ಟದಲ್ಲಿ ಹುಟ್ಟಿದ ಹುಲ್ಲುಗಳಂ ಸುಡುತಲಿರುವ ಕಾಡ್ಗಿಚ್ಚಿನ ಝುಳಂಗಳಂ ನೋಡಿ ಇವು ಬ್ರಹ್ಮಾಂಡ ಕಟಾಹವಂ ದಹಿಸುವ ಬಡಬಾನಲಜ್ವಾಲಾ ಸಮೂಹಂಗಳೋ? ಅಲ್ಲದೆ ಕಲ್ಪಾಂತದೊಳ್ ಉದಯಿಸಿದ ಚಂಡಕಿರಣನ ತಂಡಂಗಳೋ? ಇಂತು ಮಲ್ಲದೆ ಶಂಕರನ ಮೂರನೆ ಕಣ್ಣಿನೊಳ್ ಉದ್ಭವಿಸಿದ ವಹ್ನಿ ಜ್ವಾಲಾ ಕಲಾಪಂಗಳೋ? ಅಲ್ಲದೆ ಆದಿ

ಶೇಷನ ಉಸುರುಗಳಿಂ ಜನಿಸಿದ ಕಿಡಿಗಳ ಸಮೂಹಂಗಳೋ? ಹೀಗಲ್ಲದೆ
ಕಾಲನೇತ್ರದಿಂದ ಕೆಂಪೆಗಳಂ ವರ್ಷಿಸುವ ಪುಷ್ಕಲಾವರ್ತ ಮೇಘಂಗ
ಳೋ? ಎಂಬ ಪರಿ ಪರಿಯಾಗಿ ಊಹಿಸುತ, ಸೂಜಿ ಮೊನೆಗಳಂತೆ ಚು
ಚ್ಚುವ ಸೂರ್ಯ ಕಿರಣಂಗಳಂ ಬೆಂದು ಕಾದಿರುವ ಸೀರೆಗಳಂದ ಪುಟಪಾ
ಕವಲ್ಲಿ ಇಟ್ಟಿರುವ ಪುತ್ಥಳಿಗಳಂತೆ ತೋರುತ್ತ, ನಡೆಯುತ್ತಲಿರುವ ಸಮ
ಯದೊಳ್ ಮಾರ್ಗಕ್ಕೆ ಅಡ್ಡಲಾಗಿ ಓಡ್ಯಾಡುವ ಕಾಡ್ಕೋಣಂಗಳಂ
ಕೂಡೆ ನೋಡಿ ಹೆದರುತ್ತ, ಚಮರೀಮೃಗ ಸಮೂಹಂಗಳಂ ಚೆನ್ನಾಗಿ ಕಾ
ಣುತ್ತ, ಕಸ್ತೂರಿ ಮೃಗಗಳ ನಾಭಿಗಳಿಂ ಸುರಿದಿರುವ ನಾಭೀ ರಕ್ತಂಗಳಂ
ಕೈಗಳಿಂ ತೆಗೆಯುತ್ತ, ಮದ್ದಾನೆಗಳ ಘೀಂಕಾರ ಶಬ್ದಗಳಿಂ, ಕಾಡು ಹಂ
ದಿಗಳ ಘುರುಘುರ ಧ್ವನಿಗಳಿಂ, ಚಂಡವಾಯುವಿನ ಹಿಂಡುಗಳಿಂದ ಸುತ್ತ
ಲ್ಪಟ್ಟು ಭೋರೆಂದು ಮೊರೆಯುವ ಮರಗಳ ರವಂಗಳಿಂ, ಘೂ ಎಂದು
ಕೂಗುವ ಕಾಡು ಹಕ್ಕಿಗಳ ಭಯಂಕರ ಶಬ್ದಂಗಳಿಂ ವಿಭ್ರಾಂತ ಚಿತ್ತ
ರಾದ ಕೆಲವರು ಹಿಂದು ಬೀಳಲು, ಕೆಲವರು ಮುಂದು ಮುಂದೆ ಓಡಿ
ಹೋಗಿರುವ ಕಾಂತೆಯರಂ ಕಾಣದೆ ಕಳವಳಗೊಂಡು ನಿಂತು ಕಳಾಧ
ರನಂ ಕುರಿತು ಹೋ! ಎಂದು ಕೂಗಲಾಗ ಕಳಾಧರನು ಆ ಶಬ್ದದಿಂ ಬ
ಟ್ಟಾಗಿ ಕೂಡಿರ್ದ ರಂಭಾದಿ ನಾಲ್ವರಂ ನೋಡಿ, ಎಲೈ ತಂಗಿಯರಾದ ತರು
ಣಿಯರಾ! ಈ ದುರ್ಗಮವಾದ ಮಾರ್ಗಮಂ ಕಳೆದು ಬಂದವು, ನನ್ನಾಣೆ
ನಂಬಬೇಕೆಂದು ವಿನಯೋಕ್ತಿಗಳಿಂ ಲಾಲಿಸಿ ನಗಿಸುತ್ತ, ಕಮರಿಗಳಿಂದ
ಹರಿಯುವ ನೀರಿನೊಳ್ ಕೈ ಕಾಲುಗಳಂ ತೊಳೆಯುತ್ತ, ಎದುರಾಗಿ ಬ
ರುವ ಯಕ್ಷ ಸ್ತ್ರೀಗಳಂ ಕಂಡು ಅಳಕಾಪುರಿಯು ಎಷ್ಟು ದೂರ
ವಿದೆ ಎಂದು ಕೇಳುತ್ತ, ಬಳಿಕ ಎಲೈ ಕಳಾವತಿಯರಾ! ಇವು ಕೈಲಾಸ
ಪರ್ವತದ ಸಮೀಪದಲ್ಲಿರುವ ಮಾಕಂದ ಮಂದಾರ ವೃಕ್ಷಂಗಳ ಸಾಲು
ತೋಪುಗಳು, ಇವು ದೋಹದ ವಿಶೇಷಂಗಳಿಂದ ಆಕಾಲದೊಳ್ ಪುಷ್ಪ
ಫಲ ಭರಿತಂಗಳಾದ ಅಳಕಾಪುರೋಪವನಂಗಳು, ಇವು ಜಾರಿಣಿಯ
ರ ಸುರತಕ್ರೀಡೋಚಿತ ಮಂದಿರಂಗಳು, ಇವು ಲವಂಗ, ಮಾತುಲುಂಗ,
ಪುನ್ನಾಗ, ವೃಕ್ಷಂಗಳಿಂ ಸುತ್ತಿ ಬೆರದಿರುವ ಯಾಲಕ್ಕಿ ಬಳ್ಳಿಯ ಮಂ
ಟಪಂಗಳು, ಇವು ಸ್ಫಟಿಕ ಸರೋವರಂಗಳು, ಇವು ಮಹಾ ಹ್ರದಂಗ

ಳೆಂದು ತೋರಿಸುತ್ತ, ಎದುರಾಗಿ ಕಾಣಬರುವದೇ ನಿಮ್ಮೆಲ್ಲರಂ ರತಿಕಾಂತನ ನಾಟ್ಯವನ್ನಾಡಿಸಿದ ನಳಕೂಬರನ ನಾಟ್ಯಶಾಲೆ ಎಂದು ಕಿವಿಗಿಂಪಾಗಿ, ಮನೋಹರವಾಗಿ ನುಡಿಯುತ್ತಿರಲು; ಆಗಲಾ ದೇವವೇಶ್ಯೆಯರು ಆ ಹಾಸ್ಯದ ಮಾತುಗಳಂ ಕೇಳಿ ನಸುನಗುತ್ತ, ಪುರೋಭಾಗದೊಳ್ ಅಷ್ಟಲಕ್ಷ್ಮಿಯರಿಗೆ ಆ ವಾಸಸ್ಥಾನವಾಗಿರುವ ಅಳಕಾಪಟ್ಟಣಕ್ಕೆ ಅಗಳನಂತೆ ಸುತ್ತಿ ಬಂದಿರುವ ಅಲಕನಂದಾ ಎಂಬ ನದಿಯನ್ನೈದಿ ಆನಂದದಿಂ ಮಜ್ಜನವಂ ಮಾಡಿ, ಪಚ್ಚೆ ಕಲ್ಲುಗಳಂ ಕಟ್ಟಿದ ಸೋಪಾನ ಪಙ್ಕ್ತಿಗಳಂದಲು, ತಟ ತಟಾ ಎಂಬ ಶಬ್ದಂಗಳಂದೊಡಗೂಡಿದ ತೆರೆಗಳ ತುಂತುರುಗಳಿಂದಲೂ, ತಂಪಾಗಿರ್ಪ ತಾವಿನಲ್ಲಿ ಬಾಡಿರುವ ಬಳ್ಳಿಗಳಂತೆ ನಿಲ್ಲಲಾರದೆ, ಮಾರ್ಗಾಯಾಸದಿಂ ಬ್ಯಾಸರಗೊಂಡು ಮಲಗಿದ ಮಾತ್ರದಿಂ ಪರೀ ಮೂರ್ಛೆಯನ್ನೈದಲಾಗ, ಕಲಾಧರನು ಹತ್ತಾರು ಕಮಲಂಗಳಂ ಒಟ್ಟಾಗಿ ಕೂಡಿಸಿ ತಲೆದಿಂಬುಗಳಂತೆ ಇಟ್ಟು, ಕಣ್ಣುಗಳಲ್ಲಿ ಕಮಲ ದಳಂಗಳಂ ಒತ್ತಿ, ಕಿವಿಗಳಲ್ಲಿ ಪಚ್ಚೆ ಕಪ್ಪುರದ ಬತ್ತಿಗಳನ್ನಿಟ್ಟು, ಮಲ್ಲಿಗೆ ಹೂವುಗಳಂ ಪೋಣಿಸಿದ ಬೀಸಣಿಗೆಯಂ ಬೀಸುತ್ತ, ಮುಖ ಕಮಲಂಗಳಿಗೆ ಝುಮ್ಮನೆ ಮುತ್ತಿರುವ ಮರಿದುಂಬಿಗಳ ತಂಡಗಳಂ ತಡೆಯುತ್ತ, ಇದೇನಚ್ಚರಿಯು, ಕಣ್ಣುಗಳಂ ಬಿಡದೆ, ಮಧುರವಾಗಿ ಮಾತುಗಳನ್ನಾಡದೆ, ಮಲಗಿದವರು ಮಲಗಿದ್ದಂತೆಯೇ ಇರುವರು. ಇವರು ಎಲ್ಲರಂತೆ ಎಚ್ಚರವಾಗಿ ಇದ್ದರೆ, ತಾಯಿಯಾದ ಅಳಕನಂದಾದೇವಿಯೇ ನಿನ್ನಂ ಪೂಜಿಸಿ ತೆರಳಿ ಪೋಗುವೆನೆಂದು ಮುಡುಪುಗಳಂ ಕಟ್ಟಿ ನಿಂದಿರಲಾ ಸಮಯದೊಳ್ ದೈವವಶದಿಂದ ಬಂದ, ಶೈತ್ಯ, ಸೌರಭ್ಯ, ಮಾಂದ್ಯಗಳಂ ಕೂಡಿರುವ ಮಂದಮಾರುತದ ಗದ್ದಲದಿಂದೆದ್ದು ನಿಟ್ಟುಸುರುಗಳಂ ಬಿಡುತ್ತ, ಕೈಗಳನ್ನೆತ್ತಿ ಮೈಗಳಂ ಮುರಿಯುತ್ತ, ಮಾರ್ಗಾಯಾಸದಿಂ ಮೈಮರತು ಮಲಗಿದೆವೆಂದು ನುಡಿಯುತ್ತ, ಕಲ್ಲೊತ್ತುಗಳಂದ ಕಂದಿರುವ ಕಾಲ್ಗಳಂ ಕೈಗಳಿಂ ಪಿಡಿಯುತ್ತ, ನಾಟಿದ ಮುಳ್ಳುಗಳಂ ಉಗುರುಗಳಿಂ ಕೀಳುತ್ತಲಿರುವ ಆ ದೇವವೇಶ್ಯೆಯರು ಕಳಾಧರನಂ ಮರೆಯಾಗಿ ಕಳುಹಿ, ನೆರಿಗಳಂ ಸಡಲಿಸಿ ಸೀರೆಗಳಂ ಬಿಚ್ಚಿ, ತಾಪವಂ ತಾಳಲಾರದೆ, ತಮ್ಮ ಅವಯವ ಸೌಂದರ್ಯವಂ ನೋಡಿ ತಾವೇ ನಗುತ ನೀರಿನಲ್ಲಿಳಿದು, ಇಲ್ಲಿ ಕಣ

ಕಾಲುಪ್ರಮಾಣ, ಇಲ್ಲಿ ಕಟಿಪ್ರಮಾಣ, ಇಲ್ಲಿ ಕಂಠಪ್ರಮಾಣವೆಂದು ನುಡಿಯುತ್ತ, ಹಾಗೇ ಮುಂದುಗಡೆಯೊಳ್ ಮುತ್ತಿನ ಸಮೂಹಂಗಳಂ ಕೂಡಿ, ಶ್ವೇತದ್ವೀಪದಂತಿರ್ಪ ಮರಳು ದಿಣ್ಣೆಯನ್ನೇರಿ ಮನೋಹರವಾದ ಮಾತುಗಳನ್ನಾಡುತ್ತ, ಮುಷ್ಟಿಗಳಿಂ ಮುತ್ತುಗಳನ್ನೆರಚುತ್ತ, ನೀರಂಜೀ ಮರಗಳನ್ನೇರಿ ಧುಮುಕಲುದ್ಯೋಗಿಸಲಾ ರಂಭೆಯು ಕಮಲದ ಮೊಗ್ಗೆ ಗಳಂ ಜಿಗಟಿ ಕುಚ ಕಲಶಂಗಳೊಳ್ ಮೆಲ್ಲನೆ ಒತ್ತುತ್ತಿರಲು, ತಿಲೋತ್ತ ಮೆಯು ಅರಳಿದ ಕನ್ನೈದಿಲುಗಳಂ ಕಣ್ಣುಗಳೊಳಿರಿಸಿ ಎನ್ನ ನೇತ್ರಂಗ ಳಿಗೆ ಸರಿಬರಲಾರವೆಂದು ನಿವಾಳಿಯಂ ತೆಗದು ಬಿಸುಡಲು, ಊರ್ವಸಿ ಯು ಕದಳೀ ಕಂಭಂಗಳಂ ತನ್ನ ಊರು ಕಾಂಡಂಗಳೊಡನೆ ಸರಿ ಬರು ವವೊ? ಎಂದು ನೋಡುತ್ತಿರಲು, ಮೇನಕೆಯು ಪಾನಕವಂ ಮಾಡಿ ಪಾನವ ಗೈಯ್ಯುತ್ತ, ಕಮಲ, ಕನ್ನೈದಿಲುಗಳಂ ಕತ್ತರಿಸಿ, ಕುಪ್ಪಸ, ಸೀರೆಗ ಳಂತೆ ಮಾಡಿ ಶರೀರದಲ್ಲಿ ಒತ್ತಿಕೊಂಡು, ಬಳಿಕ ಅರ್ಧ ವಿಕಸಿತವಾದ ಕುಮುದ ಕುಟ್ಮಲಂಗಳಂ ಕುಚ ಕುಂಭಂಗಳೊಳ್ ಇಡುತಲಿರಲು, ಆಗ ಆ ಕಾಂತೆಯರೆಲ್ಲರೂ ಪರಸ್ಪರ ಹಸ್ತಂಗಳಂ ಪಿಡಿದು ಮಂಡಲಾಕಾರ ವಾಗಿ ತಿರುಗುತ್ತ, ನದಿಯೊಳ್ ಇಳಿಯುವ ಸಮಯದೊಳ್ ತಾವರೆ ದಂಟುಗಳಿಂದ ಬಿಗಿದ ತಾಳೆಯ ಹೂವುಗಳ ತೆಪ್ಪಂಗಳಲ್ಲಿ ಕುಳಿತು ನದಿ ಯಲ್ಲಿ ಹರಿಸುತಲಿರಲಾಗ, ಯಕ್ಷವೇಶಿಯರು ಜಲಕ್ರೀಡೆಯಂ ಮಾಡುವ ಈ ವೇಶಿಯರಂ ನೋಡಿ, ಇವಳು ರಂಭೆಯು, ಇವಳು ಊರ್ವಸಿಯು, ಈ ಈರ್ವರ ಮೈಗಳಂ ಸವರುತಲಿರುವ ಇವರೀರ್ವರುಗಳು ಮೇನಕಾ, ತಿಲೋತ್ತಮೆಯರೆಂದು ಕೂಗುತ್ತ, ನದಿಯಲ್ಲಿ ಧುಮುಕಿ ಅವರ ಸಮೀಪ ವನ್ನೈದಿ, ಕುಶಲವಂ ಕೇಳಿ ಕುಚಂಗಳಿಂದ ಕುಚಂಗಳಂ ಒತ್ತಿ ಆಲಿಂಗ ನಗೈದು, ಮುದ್ದಿಸುತ್ತ ನಮ್ಮ ನವನಾಟಕಶಾಲೆಯೇ ನಿಮ್ಮ ನಾಲ್ವರಿಗೆ ಬಿಡದಿ ಎಂದು ನುಡಿಯುತ್ತ, ಸಾಲಾಗಿ ನಿಂತು ತಾವರೆ ದಂಟುಗಳಂ ಚೀರ್ಗೊ ಳವಿಗಳಂತೆ ಮಾಡಿ ಉದಕವಂ ಚಿಮ್ಮುತ್ತ, ತಣ್ಣಗಿರುವ ತಾವರೆಯ ದಂ ಟುಗಳಿಂದ ಓರ್ವರಂ ಓರ್ವರು ಹೊಡೆಯುತ್ತ, ಅಂಡೆಗಳಂತಿರುವ ಅರ ಳಿದ ಕಮಲಂಗಳಲ್ಲಿ ನೀರುಗಳಂ ತುಂಬಿ ಎರಚುತ್ತ, ಪುಷ್ಪ ಪರಾಗಂಗ ಳಂ ಚೆಲ್ಲುತ್ತ, ಮಂದಮಾರುತದ ಮರಿಗಳಂ ತಬ್ಬಿ ತೆರಳಿ ಬರುವ ತರಂಗ

ತತಿಗಳಲ್ಲಿ ಮುಣುಗಿ ತೇಲಿಬರುವ ಹಂಸಶಿಶುಗಳಂ ಮುದ್ದಿಡುತ್ತ, ಮುಳುಗಿರ್ಪ ತೊಟ್ಟುಗಳುಳ್ಳ ಮೊಲೆಗಳಂ ನೋಡಿ, ಇವು ನಮ್ಮ ಸಜಾತೀಯಂಗಳೆಂಬ ಭ್ರಮೆಯಿಂದ ಓಡಿಬರ್ಪ ಚಕ್ರವಾಕ ಪಕ್ಷಿಗಳಂ ಹಿಡಿಯುತಲಿರಲು. ಆ ಕಾಲದೊಳ್ ಕೆಲರು ನಾರಿಯರು ವಿಲಾಸದಿಂ ನೀರಿನೊಳ್ ಮುಳುಗಿ ತಮ್ಮ ಪ್ರೇಮ ಸಖಿಯರ ಮುಂಗಾಲುಗಳಂ ಹಿಡಿದು ಸೆಳೆಯುಯುತ್ತಿರಲು; ಮತ್ತೆ ಕೆಲಂಬರು ತಮ್ಮ ತಮ್ಮ ಸಖೀಜನಂಗಳ ಬೆನ್ನುಮೇಲೆ ಹತ್ತಿ ನೋಡುವರಿಗೆ, ಆಶ್ಚರ್ಯಕರವಾಗಿ, ಚಕ್ರಾಕಾರವಾಗಿ, ತಲೆಕೆಳಗಾಗಿ, ನೀರಿನೊಳ್ ಧುಮುಕುತ್ತಿರಲು. ಮತ್ತೆ ಕೆಲಂಬರು ನಾರಿಯರು ಪಚ್ಚಕರ್ಪೂರದ ಬದಿಯಂ ಕೈಗಳಿಂದೆತ್ತಿ ಪರಿಪರಿಯಾದ ಪರಿಹಾಸಮಾತುಗಳನ್ನಾಡುತ ಎರಚುತ್ತಿರಲು; ಇನ್ನು ಕೆಲಂಬರು ವೈಯ್ಯಾರಿಯರು ಕೋಮಲಂಗಳಾದ ಕುಮುದ ಕುಟ್ಮಲಂಗಳಲ್ಲಿ ಕಮನೀಯವಾದ ಕುಂಕುಮವಂ ತುಂಬಿ ಚಂದವಾದ ಚಂಡುಗಳಂತೆ ಹೊಡಿಯುತ್ತಿರಲು. ಮತ್ತೆ ಕೆಲಂಬರು ಕಮನೀಯಮಾದ ಕಾಲವನ್ನರಿತು ಕಾಂಭೋಜ ರಾಗವನ್ನಾಲಾಪಿಸುತ್ತಿರಲು. ಮತ್ತೆ ಕೆಲವರು ಅಬಲೆಯರು ಆ ಕಾಂಭೋಜರಾಗದ ಆಲಾಪನಕ್ಕೆ ಅನುಗುಣವಾಗಿ ಗಂಭೀರವಾದ ನದೀತೀರಂಗಳತತಿಗಳಲ್ಲಿ ಕರಂಗಳಿಂದ ಮನೋಜ್ಞವಾದ ಮೃದಂಗವಾದ್ಯವಂ ಮಾಡುತ್ತಿರಲು, ಮತ್ತೆ ಕೆಲವರು ಮಾನಿನಿಯರು ಆ ಮೃದಂಗ ವಾದ್ಯಕ್ಕೆ ಸರಿಯಾಗಿ ನೀರಿನಲ್ಲಿ ತಾಳಗಳಂ ತಟ್ಟುತ್ತಿರಲು, ಮತ್ತೆ ಕೆಲವರು ಮಂದಗಮನೆಯರು ಆ ತಾಳಕ್ಕೆ ಸರಿಯಾಗಿ ಸಜ್ಜುಮಾಡಿಕೊಂಡು ತಾನಗಾನವಗೈಯ್ಯುತ್ತಿರಲು, ಮತ್ತೆ ಕೆಲವರು ಕಲಾವತಿಯರು ಆ ತಾಳವಂ ಮೇಳವಿಸಿ ವೀಣಾಧ್ವನಿಗಳಂತಿರುವ ತಮ್ಮಗಳ ಕಂಠಗಾನದಿಂ ಮೋಹಿಸಿ, ಕಣ್ಗಳಂ ಮುಚ್ಚಿ ಕಮಲವನಂಗಳಲ್ಲಿರುವ ಕಲಹಂಸೆಗಳಂ ಬೆದರಿಸುತ್ತ, ಚಕೋರಂಗಳಂ ಚೆದರಿಸುತ್ತ, ಚಾತಕಂಗಳಿಗೆ ವ್ಯಾತೆಯಂ ತೋರಿಸುತ್ತ, ಹೆಣ್ಣು ಹಂಸೆಗಳೊಡನೆ ಸೇರಿ ವಿಹರಿಸುತಲಿರುವ ಪುರುಷ ಹಂಸೆಗಳಂ ನೋಡಿ ಇದು ಹಂಸ ಬಂಧವೆಂದು ಅಳವಡಿಸುತ್ತ, ಜನರಂಜಕವಾದ ಜಲಕ್ರೀಡೆಯೊಳಾಸಕ್ತರಾಗಿರಲು;

ಅತ್ತಲಾ ಅಳಕಾಪುರಿಯೊಳ್ ನಮ್ಮೊಡೆಯನಾದ ನಳಕೂಬರನು ಜಯಂತನ ಕರವಂ ಪಿಡಿದು ಎತ್ತರವಾದ ಚಿತ್ತರದ ಉಪ್ಪರಿಗೆಯ ಉಪರಿ ಭಾಗದೊಳ್ ಕುಳಿತು ದೂರದರ್ಶನವೆಂಬ ಕನ್ನಡಿಯೊಳ್ ಪ್ರತಿಫಲಿಸಿದ ದಿಕ್ಪಾಲಕರ ಗೋಪುರಂಗಳಂ ವೀಕ್ಷಿಸುತ್ತ, ಅಮರಾವತಿಯಿಂದೋಡಿ ಬಂದ ಕಂಬನಿದುಂಬಿದ ಜಯಂತನಂ ವಿಶ್ವಾಸದಿಂದಾಶ್ವಾಸ ಪಡಿಸುತ್ತ, ಅಲಕನಂದಾ ನದಿಯೊಳ್ ಜಲಕ್ರೀಡೆಯನ್ನಾಡುವ ರಂಭಾದ್ಯಪ್ಸರ ಸ್ತ್ರೀರುಗಳಂ ಸವಿಾಪದಲ್ಲಿದ್ದಂತೆ ಕಂಡು ಉಪ್ಪರಿಗೆಯಿಂದಿಳಿದು ಬಾಗಿಲೊಳ್ ಕಾದಿರ್ದ ನನ್ನಂ ಕುರಿತು ಅಯ್ಯಾ ಮಣಿಮಂತನೆ! ಅಳಕನಂದಾ ನದಿಯೊಳ್ ಜಲಕ್ರೀಡೆಯನ್ನಾಡುವ ರಂಭಾದಿವೇಶ್ಯೆಯರಂ ಕರದುಕೊಂಡು ಬಾ ಎಂದು ಆಜ್ಞಾಪಿಸಲು, ಆಗ ನಾನು ಅತಿ ತ್ವರೆಯಿಂದ ಅಳಕನಂದಾ ನದಿಯನ್ನೈದಿ ಆ ರಂಭಾದಿಕಾಂತಾರತ್ನಂಗಳಿಗೆ ಅಳಕೇಶ್ವರನಾದ ನಳಕೂಬರನು ಚೈತ್ರರಥವೆಂಬ ಹೆಸರುಳ್ಳ ಆರಾಮದೊಳ್ ವಿರಾಮವಾಗಿ ವಿಹಾರವಗೈಯ್ಯುತ ನಿಮ್ಮ ನಾಲ್ವರಂ ಕರದುಕೊಂಡು ಬಾ ಎಂದು ನಿರೂಪಿಸಿರುವೆನೆಂದು ಪೇಳಿದ ಮಾತ್ರದಿಂದಲೇ ಆ ದೇವವೇಶ್ಯೆಯರು ಕಂದರ್ಪನ ದರ್ಪಣದಂತಿರ್ದ ತಮ್ಮ ಮುಖಂಗಳಲ್ಲಿ ಪದ್ಮರಾಗ ಮಣಿಬಟ್ಟುಗಳನ್ನಿಟ್ಟು, ಚಕಚಕಿಸುವ ನಖಕಾಂತಿಗಳಂ ನಿಜಕಾಂತಿಯಿಂದ ಪರೀಕ್ಷೆಯಗೈಯ್ಯಬೇಕೆಂದು ಬಂದಿರುವ ಭಾರ್ಗವನಂತಿರುವ ವಜ್ರದುಂಗುರವಂ ಸಜ್ಜುಗೊಳಿಸಿ, ನೀಲಮಣಿ ನಿವಹಂಗಳಂ ನಿಂದಿಸುವ ತುರುಬುಗಳಲ್ಲಿ ಮಲ್ಲಿಗೆ ಹೂವುಗಳಂ ತುಂಬಿ, ಸೊಗಸು ಮೀರಿದ ಸೋಗೆಗಣ್ಣುಗಳಿಗೆ ಕಪ್ಪುಗಳಂ ತಿದ್ದಿ, ಬಟುವಾದ ಕುಚಂಗಳಂ ಕೂಡಿ, ಅಂಗ ರಾಗದ ಐಕ್ಯವಂ ಹೊಂದಿದ ಕುಪ್ಪುಸಗಳಲ್ಲಿ ಮಡಗಿರ್ದ ವೀಳ್ಯದ ಮಡುಪುಗಳಂ ಮೆಲ್ಲುತಲಿರಲಷ್ಟರೊಳ್ ಜಂಭಾರಿಯು ಸಂಭಾವಿಸಿ ಕೊಟ್ಟ ಅಂಚು ಸೀರೆಯ ನೆರಿಗಳಂ ಸರಿ ಮಾಡುತಲಿರುವ ರಂಭೆಯು, ಪೂರ್ವದೊಳ್ ಪುರೂರವಸ್ಸಿನಿಂದ ಆರ್ಜಿಸಿದ ಮಣಿಹಾರಂಗಳಂ ಸರಿ ಮಾಡುತಲಿರುವ ಊರ್ವಸಿಯು, ವಜ್ರದ ವಂಕಿಗಳಂ ತಿರಿಗಿಸುತಲಿರುವ, ತಪವಂ ಮಾಡುತಲಿರ್ದ ಗಾಧಿಪುತ್ರನ ಮಾನವನ್ನಪಹರಿಸಿದ ಮೇನಕಿಯು, ನನ್ನ ಅವಯವ ಸೌಂದರ್ಯವೇ ಆಭರಣಂಗಳಿಗೆ ಅಲಂಕಾರ

ವೆಂದು ಘೋಷಣಂಗಳಿಂ ದೂಷಣವಂ ಮಾಡಿ ಮಹಾಭಿಸಯಂಗಳಲ್ಲಿ ತ್ರಿಭುವನಾತ್ರ ಉತ್ತಮಳೆಂದೆಣಿಸಿದ ತಿಲೋತ್ತಮೆಯುಂ, ಈ ನಾಲ್ವರೂ ಅತಿಶೀಘ್ರದಿಂದೆಪ್ಪ ಹೋಗುತಲಿರಲಾ ಕಾಂತೆಯರಂ ನೋಡಿ ಹಿಂದಣಿಂದೋಡಿ ಬರುವ ಕಳಾಧರನು ರಂಭೆಯಂ ಕುರಿತು ಎಲೈ ರಂಭೆಯೆ! ತಲೆಯಂ ಮುಟ್ಟಿ ಭಾಷೆಯಂ ಮಾಡಿದರೂ ನಿಮ್ಮ ವೇಶಿ ಜಾತಿಯರಂ ನಂಬಬಾರದೆಂದು ನುಡಿವ ಹಿರಿಯರ ಮಾತುಗಳಂ ಮಹಾ ವಾಕ್ಯದಂತೆ ತಿಳಿಯಬೇಕಲ್ಲದೆ ನೀವೆಲ್ಲರೂ ಕೊಂಚಗಾತಿಯರೇ ಕಾಲವಂ ಕಂಡು ಬಂದವರು, ಅದೆಂತೆನೆ—ತಪೋಸಿದ್ಧಿಯಾದ ವಿಶ್ವಮಿತ್ರನಂ ನಾನಾ ಪ್ರಕಾರವಾಗಿ ನಾಟ್ಯವನಾಡಿಸಿ, ಕಾಲ್ಗೆಜ್ಜೆಗಳ ಗಂಟಂ ತಲೆಯೊಳು ಹೊರಿಸಿ, ಇಂದ್ರನ ಸಭೆಯಂ ಹೊಂದಿಸಿದ ಹೊಂತಗಾತಿಯೊಬ್ಬಳು, ಮತ್ತೋರ್ವಳು ಪುರೂರವನ್ನ ಮನೆಯಂ ಮಾರಿಸಿ ಮಹಾ ಪಥಮಂ ತೋರಿಸಿ ಬಂದ ಭಾಗ್ಯವಂತಳು, ಒಬ್ಬಳು ಸ್ವರ್ಗದಲ್ಲಿದ್ದವರು ಸಾಲದೆ ಮನುಷ್ಯ ಲೋಕದಲ್ಲಿ ಜನಿಸಿ ಯಜ್ಞಂಗಳಂ ಮಾಡಿ ಅಭಿಜ್ಞರಾದ ಬ್ರಾಹ್ಮರಿಂದಲೇತಿನಸಂ ತೀರಿಸಿಕೊಂಡ ನೇಮವಂತಳು, ನೀನಾವಳೊ? ನಾನಾವೇವರ್ತನೆಗಳಂ ಬಿಟ್ಟು ವಶ್ಯಕರವಾದ ಮದ್ದುಗಳನಿಟ್ಟು ವಶ್ಯರಂ ಮಾಡಿ ತಗಲಿಸಿಕೊಂಬ ತಂಟಲಗಾರಿಯರು, ಈ ಪರಿಯೊಳು ಅಮರಾವತಿಯುಂ ಹಾಳುಮಾಡಿ, ಈ ಹುಡುಗಾಟ್ಯವಂ ಸೇರಿರುವ ಕಾರಣ, ಎನ್ನ ಬುದ್ಧಿಗೆ ನೀವು ನಾಲ್ವರೂ ಜಂಭಾರಿ ತನುಜನಾದ ಜಯಂತ ಕುಬೇರ ಪುತ್ರನಾದ ನಳಕೂಬರ ಮೊದಲಾದ ಹುಡುಗರಂ ಉಳಿಯಗೊಡಿಸುವರಾಗಿ ಕಾಣುವದಿಲ್ಲವೆಂದು ನುಡಿದು, ಇಂತಲ್ಲದೆ ಈಗ ಅಳಕಾಪುರಿಯಂ ಸುತ್ತು ಪರಿದಿರುವ ಅಳಕನಂದಾ ನದೀತೀರದಲ್ಲಿ ಉಟ್ಟಿದ್ದ ಸೀರೆಗಳಂ ಬಿಚ್ಚಿ ಬಿಸುಟು, ಹೊತ್ತನ್ನರಿಯದ ಹತ್ತಾರು ಘಳಿಗೆ ನೀರಿನೊಳ್ ಬಿದ್ದು ಒದ್ದಾಡಿದ ಸುಮಾನಗಾತಿಯರಾದ ನಿಮ್ಮ ಸುಮಾನವನ್ನಾನೆಂತು ಪೇಳಲಿ. ಇಂತು ಮಲ್ಲದೆ ಬಹುಕಾಲದಿಂ ದೇವವೇಶಿಯರೊಳ್ ಮುಖ್ಯರಾದ ನಿಮ್ಮ ನಾಲ್ವರಂ ನಂಬಿ ಮುದಿಯಾದ ನನ್ನಂ ಮನ್ನಿಸಬೇಕೆಂಬ ಬುದ್ಧಿಯಂ ಕನಸಿನಲ್ಲಿ ಕಾಣೆನು, ಅದೆಂತೆನೆ—ಯಕ್ಷನು ಪೇಳಿದ ಮಾತುಗಳಂ ಕೇಳಿ ಬಿಸಲಿನಲ್ಲಿ ಬಿದ್ದಿರುವ ನನ್ನಂ ಮರತು ಎಮ್ಮೆಗಳಂತೆ

ಓಡಿಪೋಗುವುದಂ ನೋಡಿದರೆ ಆಶ್ಚರಿಯಾಗುತಲಿದೆ ಎಂದು ನುಡಿಯೆ ನುಡಿಯಲಾ, ವಿದೂಷಕನಾದ ಕಳಾಧರನ ಹಾಸ್ಯ ಮಾತುಗಳಂ ಕೇಳದ ರಂಭಾದಿ ವೇಶಿಯರು ನಗುತ ನಲಿಯುತ ಮಾರ್ಗವನಡೆಯುತ ಬರುತ್ತ, ಮುಂಭಾಗದಲ್ಲಿ ವಜ್ರದ ಕಂಭಗಳಂ ಸಾಲಾಗಿ ನಿಲ್ಲಿಸಿ, ಚಂದ್ರಕಾಂತ ಶಿಲೆಗಳಿಂದ ಸೇರುವೆಯಂ ಮಾಡಿರ್ಪ ಸೇತುವೆಯಂ ದಾಂಟಿ, ಖಡ್ಗ ಶೂಲ ಮುಂತಾದ ಆಯುಧಗಳಂ ಪಿಡಿದಿರುವ ಯಕ್ಷರುಗಳಿಂ ರಕ್ಷಿತವಾಗಿರ್ಪ ಅಳಕಾಪುರಿಯ ಕೋಟೆಯ ಬಾಗಿಲಂಪೊಕ್ಕು, ರಾಜಬೀದಿಯೊಳ್ ಬರುತ್ತ, ಪವಳದ ಕಂಭಸಾಲುಗಳಿಂ, ಪಚ್ಚೆಯ ಲೋವೆಗಳಿಂ, ಕವಾಟಂಗಳಿಂ, ಕುರವಿಂದ ಮಣಿಶಿಖರಂಗಳಿಂ ಒಪ್ಪಿದ ಉಪ್ಪರಿಗೆಗಳಿಂದಲು, ಚಂದ್ರಕಾಂತ ಜಗಲಿಗಳಿಂ ಝಗಝಗಿಸುವ ಅಂಗಡಿಗಳಿಂದಲೂ, ಕುಣಿವ ಕುದುರೆಗಳಿಂದಲು, ಮದಿಸಿದ ಮದ್ದಾನೆಗಳಿಂದಲು, ಭೂಮಿಯಂತೆ ಗಗನದಲ್ಲಿ ಬರುವ ರಥಂಗಳಿಂದಲೂ, ಕುರವಿಂದ ರತ್ನಗಳ ರಾಸಿಗಳಿಂದಲೂ ರಾಜಿಸುವ ರಾಜಬೀದಿಯಂ ನೋಡಿ ಇದು ತೇಜೋವತಿಯೊ? ಅಲ್ಲದೆ ಭೋಗವತಿಯೊ? ಎಂದು ಸಂದೇಹ ಪಡುತ ಬರುತ್ತಿರಲಾ ಸುರಸುಂದರಿಯರಂ ನೋಡಿ ನಿಂತಲ್ಲಿಯೇ ನಿಂತು ಮೋಹಿತರಾದವರು ಕೆಲಂಬರು, ತಮ್ಮ ತಮ್ಮ ವ್ಯಾಪಾರಂಗಳಂ ಬಿಟ್ಟು ಸಂಗಡಲೇ ಬರುವರು ಕೆಲಂಬರು. ಕಟಾಕ್ಷವಿಂ ಕಾಮನಕಾಟವಂ ಕಳೆಯಬೇಕೆಂದು ಕಾಲುಗಳಂ ಪಿಡಿಯುವರು ಕೆಲಂಬರು, ಇಂತು ಮೋಹಿತರಾದವರಂ ಕಟಾಕ್ಷಿಸುತ್ತ, ಮತ್ತು ಕೈಗಳಂ ಮುಗಿದು ಕರೆಯಬೇಕೆಂದು ಬಂದಿರುವ ಒಲವುಗಾರರಂ ಸೋಲಿಸುತ್ತ ರಂಭಾದಿಗಳು ಬರುತ್ತಿರಲೂ, ಬಳಿಕ ನಾನು ಮುಂಪೆ ಮುಂದೆ ಪೋಡೋಡಿ ಬಂದು ನಮ್ಮೊಡೆಯನಾದ ನಳಕೂಬರನ ಸಮೀಪವನೈದಿ ಸಾಷ್ಟಾಂಗವಾಗಿ ನಮಸ್ಕಾರವಗೈದು ಎಲೈ ಯಕ್ಷಾಧಿಪನೆ! ಸುರಸುಂದರಿಯರಾದ ರಂಭಾದಿಗಳು ಬಂದಿರುವರೂ ಎಂದು ಬಿನ್ನೈಸಲಾ ಮಾತಂ ಕೇಳದ ಯಕ್ಷೇಶ್ವರನಾದ ನಳಕೂಬರನು ಸಂತೋಷ ಸಮುದ್ರದೊಳ್ ಓಲಾಡುತ, ಜಂಭಾರಿಜನಾದ ಜಯಂತನ ಕರವಂ ಪಿಡಿದು ಕಾಕು ಹಾಕುತ್ತ, ಮುಗುಳು ನಗೆಯಿಂದ ಮುಖವನ್ನಲಂಕರಿಸುತ್ತ, ಬಹುಮಾನದಿಂ ನನ್ನಂ ಸನ್ಮಾನಿಸುತ್ತ ಇರುತ್ತಿರಲಾ ಸಮಯದೊಳ್

ಆ ರಂಭಾದಿವೇಶ್ಯೆಯರು, ಚಲಿಸಿದ ತುರುಬುಗಳಿಂ, ಕಿಕ್ಕಿರಿಸಿದ ಕುಚಂಗಳಿಂ, ಖಣಿಖಣೀರೆಂದು ಧ್ವನಿಗೈಯ್ಯುವ ಕಾಲುಂಗುರುಗಳಿಂ, ಗೆಜ್ಜೆಕಿರು ಘಂಟೆಗಳಿಂದಲಂಕರಿಸಿದ ಒಡ್ಯಾಣಂಗಳಿಂ, ಬಳುಕುತಲಿರ್ದ ಮಧ್ಯಪ್ರದೇಶಂಗಳಿಂ, ಜಾರುವ ಸೆರಗುಗಳಿಂ ನಾಗರಾಜನಂ ನಾಚಿಸುವ ನಡೆಗೆಗಳಿಂ, ಕಾಮುಕರ ಮನವಂ ಕರಗಿಸುವ ಕಾಲಸರ ಧ್ವನಿಗಳಿಂ, ವಿಟರಮನಗಳಂ ಸೋಲಿಸುವ ವೈಯಾರದಿಂ ಕೂಡಿ, ನಾಲ್ಕು ಪರಿ ರೂಪುಗಳಂ ತಾಳ್ದು ಬಂದಿರುವ ರತೀದೇವಿಯಂತೆ ತೋರುತ ಬಂದು, ನಳಕೂಬರ, ಜಯಂತರ ಚರಣಸರೋಜಂಗಳಿಗೆರಗಿ ಬಳ್ಳಿ ಮಿಂಚುಗಳಂತೆ ಥಳಥಳಿಸುತ ನಿಂದಿರಲಾಗ ಯಕ್ಷೇಶ್ವರನಾದ ನಳಕೂಬರನು ಆ ನಾರೀರತ್ನಂಗಳಂ ನೋಡಿ ನಸುನಗುತ ಕುಶಲವಂ ಕೇಳಿ ಸಮೀಪದಲ್ಲಿ ನಿಂದಿರ್ದ ನನ್ನಂ ನೋಡಿ ಎಲೈ ಮಣಿಮಂತನೆ! ನಮ್ಮ ನವನಾಟಕಶಾಲೆಯ ಮೇಲ್ಮಚ್ಚಿನಲ್ಲಿ ಬಿಡದಿಯಂಬಿಡಿಸಿ, ಈ ಸುರಸುಂದರಿಯರನ್ನಲ್ಲಿಳಿಸಿ, ಪರಿಪರಿಯಾದ ದಿವ್ಯಾಂಬರಾಭರಣಂಗಳಂ, ಕಸ್ತೂರಿ ಮೊದಲಾದ ಪರಿಮಳದ್ರವ್ಯಂಗಳಂ ಕಾಲ ಕಾಲಂಗಳೊಳ್ ಕಳುಹಿಸುತ್ತ, ಪ್ರತಿ ದಿನವಲ್ಲಿಯೂ ನಡೆದ ವೃತ್ತಾಂತಂಗಳಂ ನನಗೆ ತಿಳುಹಿಸುತ್ತ ಇರುವದೆಂದು ಅಪ್ಪಣೆಯನ್ನಿತ್ತು, ಬಳಿಕ ತನ್ನ ಅರಮನೆಯ ಒಳಮಾರ್ಗದಿಂ ಹೊರಟು ನವನಾಟಕಶಾಲೆಯ ನೈದುತ್ತಿರಲು;

ಇತ್ತಲಾ ನಾನು ಒಡೆಯನಾದ ನಳಕೂಬರನು ನಿಯಮಿಸಿದ ಪರಿಯಾಗಿ ಆ ಸುರಸುಂದರಿಯರಂ ನವನಾಟಕಶಾಲೆಯ ಮೇಲ್ಮಚ್ಚಿನ ಬಿಡದಿಯೊಳ್ ಇಳಿಸಿ, ಕಾಲಕಾಲದೊಳ್ ಬೇಕಾದವಸ್ತುಗಳಂ ಕಳುಹಿಸಿ ಕೊಡುತ, ಪರಿಪರಿ ಉಪಚಾರಂಗಳಂ ಮಾಡುವಂತೆ ಪರಿಚಾರಕ ಜನರಿಗೆ ನಿಯಮಿಸಿ, ಬಳಿಕ ಚೈತ್ರರಥವೆಂಬ ಉದ್ಯಾನ ವನಕ್ಕೆ ಪೋಗುತ್ತಿರಲಾ ಮಾರ್ಗದೊಳ್ ಕಳ್ಳರಿಗೆ ಗೊತ್ತುಗಾರನಾದ ಪೂರ್ವಯಕ್ಷನು ನನ್ನಂ ಕಂಡು ಕೈಗಳಂ ಮುಗಿದು ಅಯ್ಯಾ ಮಣಿಮಂತನೆ! ಅಳಕಾಪುರಿಯಲ್ಲಿರುವ ಯಕ್ಷವೇಶ್ಯೆಯರ ಬೀದಿಯೊಳ್ ಮದ್ಯಪಾನವಂ ಮಾಡಿ ತಾರುಮಾರಾಗಿ ಬಿದ್ದಿರುವ ಯಕ್ಷರಂ ಹಿಡಿದು ಕೊಂದಿರುವೆವೆಂದು ನುಡಿಯಲಾಮಾತಂ ಕೇಳಿದ ನಾನು ಆ ಕಳ್ಳರಂ ಸಂಗಡಲೇ ಹಿಡಿಸಿಕೊಂಡು ಬಂದು, ನವ

ನಾಟಕಶಾಲೆಯ ಬಾಗಿಲೊಳ್ ನಿಲ್ಲಿಸಿ, ನಳಕೂಬರನಂ ಕಾಣಿಸಿಕೊಂಡು ಈ ಮಾತಂ ವಿಜ್ಞಾಪಿಸಲಾ ಕ್ಷಣದಲ್ಲಿಯೇ ಆ ಯಕ್ಷರಾಯನು ಆ ಸ್ಥಾನ ಮಂಟಪಕ್ಕೈತಂದು, ಆ ಕಳ್ಳರಂನೋಡಿ ನೀವ್ಯಾರು? ಯಾರ ಗುಂಪಿಗೆ ಸೇರಿದವರೆಂದು ನಿರೂಪಿಸಲಾ ದೂತರು ಎಲೈ ಯಕ್ಷಾಧಿಪನೆ! ನಾವು ಬೇಹುಗಾರರ ಗುಂಪಿಗೆ ಸೇರಿದವರೆಂದು ಬಿನ್ನವಿಸಲಾ ಮಾತುಗಳಂ ಕೇಳಿ, ನಳಕೂಬರನು ಬೇಹುಗಾರರ ಗೊತ್ತುಗಾರನಂ ಕರಸಿ ವಿಚಾರಿಸಿ, ಆ ಕಳ್ಳ ಭಂಟರಿಗೆ ಹಿಂಗಟ್ಟುಗಳಂ ಕಟ್ಟಿಸಿ ಕಶೆಗಳಿಂದ ಹೊಡೆಸಿದರೂ ನಾವು ಯಕ್ಷರೇ ಹೊರತು ಮತ್ತೊಬ್ಬರಲ್ಲಾ ಎಂದು ನುಡಿಯಲಾ ದೂತರ ಮಾತುಗಳಂ ಕೇಳಿ, ನಳಕೂಬರನು ಜಯಂತನಂ ಕುರಿತು ಎಲೈ ಮಿತ್ರನೆ! ಈ ದೂತರು ಯಕ್ಷವೇಷಧಾರಿಗಳಾದ ರಾಕ್ಷಸರೇ ಹೊರತು ಮತ್ತೋರ್ವರಲ್ಲಾ ಅದೆಂತೆನೆ—ಅವರು ನುಡಿದ ನುಡಿಗಳಿಂದಲೇ ನಾನು ತಿಳಿದೆನು. ಅವರೂ ಚನ್ನಾಗಿ ಪರೀಕ್ಷೆಯಂ ಮಾಡದಲ್ಲದೇ ಶಿಕ್ಷೆಯಂ ಮಾಡುವದು ಉಚಿತವಲ್ಲಾ ಎಂದು ನುಡಿಯಲಾ ಮಾತಂ ಕೇಳಿ ಜಯಂತನು ಅಯ್ಯಾ ಮಿತ್ರಶಿರೋಮಣಿಯಾದ ನಳಕೂಬರನೆ! ಪೂರ್ವದಲ್ಲಿ ನನಗೆ ಬೃಂದಾರಿಕಾ ಎಂಬ ಯೋಗಿನಿಯು ತಿರಸ್ಕರಿಣೀ ಎಂಬ ಮಂತ್ರೋಪದೇಶವಂ ಮಾಡಿರುವಳು. ಆ ಮಂತ್ರ ಮಹಿಮೆಯಿಂ ನಾನು ಶತ್ರುಗಳ ದೃಷ್ಟಿಗೆ ಗೋಚರನಾಗುವದಿಲ್ಲ. ನನ್ನ ದೃಷ್ಟಿಗೆ ಆ ಶತ್ರುಗಳೂ ಕಾಣಬರುವದಿಲ್ಲ. ಅದುಕಾರಣ ಈ ದೂತರೀರ್ವರೂ ರಾಕ್ಷಸರೇ ಹೊರತು ಯಕ್ಷರಲ್ಲಾ ಎಂದು ಹೇಳಲಾ ಮಾತುಗಳಂ ಕೇಳಿ ನಳಕೂಬರನು ಆ ದೂತರಂ ಅಂಗಹೀನರನ್ನಾಗಿ ಮಾಡಿಸಲು, ಆ ಕ್ಷಣವೆ ಆ ದೂತರು ರಾಕ್ಷಸ ರೂಪವಂ ತಾಳಲಾ ನಳಕೂಬರನು ಮತ್ತಾ ಆ ದೂತರಂ ಕುರಿತು ಎಲೈ ರಾಕ್ಷಸರುಗಳಿರಾ! ನೀವು ನಮ್ಮ ಪಟ್ಟಣವಂ ಪ್ರವೇಶಿಸಿ ಯಕ್ಷವೇಷಿಯರ ಬೀದಿಯಲ್ಲಿ ಮನೆಗಳಂ ಪೋಗುವದಕ್ಕೆ ನಿಮಿತ್ತವೇನೆಂದು ಪ್ರಶ್ನೆಯಂ ಮಾಡಲಾಗ ಆ ದೂತರು ಕುಬೇರನಂ ಕುರಿತು ಎಲೈ ಯಕ್ಷಾಧಿಪನೆ! ನಾವು ಸ್ವರ್ಗಾಧಿಪನಾದ ರಾಕ್ಷಸೇಶ್ವರನ ಆಜ್ಞೆಯಿಂದ ರಂಭಾದಿವೇಶ್ಯೆಯರ ನೆಲೆಯಂ ಗೊತ್ತುಮಾಡಿಕೊಂಡು ಪೋಗಲೋಸುಗ ಬಂದೆವೆಂದು ಬಿನ್ನವಿಸಲಾ ಮಾತುಗಳಂ ಕೇಳಿ, ಕುಬೇರನು ಅಚ್ಚರಿಗೊಂ

ಡುಂ ಆ ದೂತರಂ ಖರಗಳ ಮೇಲೆ ಕುಳ್ಳಿರಿಸಿ ಅಳಕಾಪುರಿಯ ಬೀದಿಗಳಲ್ಲಿ ಮೆರವಣಿಗೆಯಂ ಮಾಡಿಸಿ, ಅಲಕನಂದಾ ನದಿಯಂ ದಾಂಟಿಸಿ ಕಳುಹಿಸಲಾದೂತರು ಅಮರಾವತಿಯನ್ನೈದಿ ರಾಕ್ಷಸೇಶ್ವರನ ಬಳಿಯಲ್ಲಿ ತಮಗೆ ಯಕ್ಷಾಧಿಪನು ಮಾಡಿಸಿದ ವಿರೂಪವಂ ತೋರಿಸಿ ರೋದಸವಗೈಯುತ್ತ, ನಿಂದಿರಲಾಗ ರಾಕ್ಷಸೇಶ್ವರನು ಆ ದೂತರಂ ನೋಡಿ ಅತ್ಯಂತಕೋಪದಿಂ ಈಗಲೇ ಆ ಅಲಕಾಪಟ್ಟಣವಂ ಸೂರೆ ಮಾಡುವೆನೆಂದು ಅನೇಕ ಕೋಟಿ ದೈತ್ಯದಾನವ ಸೇನಾ ಸಮೇತನಾಗಿ ತೆರಳಲಾ ವರ್ತಮಾನವಂ ಯಕ್ಷಾಧಿಪನು ಗೂಢಚಾರರ ಮುಖದಿಂ ತಿಳಿದು, ಈ ರಂಭಾದಿ ವೇಶಿಯರಿಂದ ಇಷ್ಟು ಅನರ್ಥಕ್ಕೆ ಕಾರಣವಾಯಿತೆಂದು ನಿಶ್ಚೈಸಿ, ಜಯಂತನಿಗೆ ತಿಳುಹಿಸಲು. ಅದಂ ಕೇಳಿ ಜಯಂತನು ಅತ್ಯಂತ ವ್ಯಸನದಿಂದ ಈ ಸುರಸುಂದರಿಯರಂ ರಕ್ಷಿಸಬೇಕೆಂದು ಯೋಚಿಸಿ, ಕ್ರೌಂಚದ್ವೀಪದೋಳ್ ಆನಂದ ಪರ್ವತದಲ್ಲಿ ಶಕ್ತಿಯಂ ಧ್ಯಾನಿಸುತ್ತಲಿರುವ ತನಗೆ ಗುರುಸ್ವರೂಪಿಣಿಯಾದ ಬೃಂದಾರಿಕಾ ಎಂಬ ಯೋಗಿನಿಯ ಸಾನ್ನಿಧ್ಯದಲ್ಲಿ ರಂಭೆ ಮೊದಲಾದ ಸುರಸುಂದರಿಯರಂ ನಿಲ್ಲಿಸಿ ಬಂದನು. ಅನಂತರದಲ್ಲಿ ನಡೆದ ವೃತ್ತಾಂತವಂ ನಾನು ಅರಿಯೆನೆಂದು ನುಡಿದು, ಮತ್ತೂ ಛಾಯಾಗ್ತನಂ ಕುರಿತು ಈ ರಹಸ್ಯಮಾತುಗಳಂ ನಿನ್ನ ಮನದಲ್ಲಿಯೇ ಇಡುವದೆಂದು ನುಡಿದು ಇನ್ನು ಕ್ಷಣಮಾತ್ರವೂ ಇಲ್ಲಿ ನೀನು ನಿಲ್ಲದೆ ತೆರಳುವನಾಗೆಂದು ಹೇಳಿ ಫಲ ಪುಷ್ಪಾದಿಗಳಿಂದ ಸತ್ಕಾರವಂ ಮಾಡಿ ಕಳುಹಿಸಲು; ಬಳಿಕ ಛಾಯಾಗುಪ್ತನು ಅತ್ಯಂತ ಸಂತೋಷದಿಂ ಅಮೃತಾಪಹರಣವಂ ಮಾಡಿ ಬರುವ ಗರುತ್ಮಂತನಂತೆ ಆಕಾಶಮಾರ್ಗದಿಂ ಬಂದು, ಸೇನಾಕಟಕದೋಳ್ ಮಣಿಮಂದಿರದಲ್ಲಿ ಸುಮತಿ ವೀರಸೇನ ಮೊದಲಾದ ಆಪ್ತಜನರಿಂ ಕೂಡಿ ಆಲೋಚನೆಯಂ ಮಾಡುತ್ತ ಚಿಂತಾಗ್ರಸ್ತನಾಗಿರುವ ಸುಗಂಧಮಹಾರಾಯನ ಅಡಿಗಳಿಗೆ ಅಡ್ಡಬಿದ್ದು ಅಂಜಲಿಯಂ ಮಾಡಿ, ನಿಂದಿರಲಾ ಸುಗಂಧಮಹಾರಾಯನು ಅತ್ಯಂತ ಸಂತೋಷದಿಂ ಯಕ್ಷನಂ ಕುರಿತು ಎಲೈ ಛಾಯಾಗುಪ್ತನೆ! ನೀನು ಹೋಗಿ ಬಂದ ಕಾರ್ಯವೇನಾಯಿತು, ಅದಂ ವಿಸ್ತಾರವಾಗಿ ವಿವರಿಸುವನಾಗೆಂದಾಜ್ಞಾಪಿಸಲಾಗ ಯಕ್ಷನು ಅಲ್ಲಲ್ಲಿ ನಿಂದಿರ್ದ ಸೇವಕ ಜನರಂ ನೋಡುತ್ತ,

ನೃಪತಿಯು ಮೊಗವಂ ನೋಡಲಾ ಮಂತ್ರಿಯು ಏನೋ ವಿಶೇಷವಿರುವದೆಂದರಿತು, ಸೇವಕಜನರಂ ಹೊರಡಿಸಿ ಬಾಗಿಲು ಗೊತ್ತುಗಾರನಿಗೆ ಯಾರಂ ಬಿಡದಂತೆ ಕಟ್ಟು ಮಾಡಿ ರಾಯನ ಸಮೀಪವನ್ನೈದಿ ನಿಂದಿರಲು, ಬಳಿಕ ಯಕ್ಷನು ರಾಯನಂ ಕುರಿತು ಅಯ್ಯಾ ರಾಜೇಂದ್ರನೇ! ನಾನು ನಿಮ್ಮಡಿಗಳ ಆಜ್ಞಾನುಸಾರವಾಗಿ ಗಗನಮಾರ್ಗದಿಂ ಹೊರಟು ಸ್ವರ್ಗ, ಮರ್ತ್ಯ, ಪಾತಾಳ ಲೋಕಂಗಳಲ್ಲಿಯೂ, ದೇವತೆಗಳಿಗೆ ಸಂಚಾರ ಯೋಗ್ಯಂಗಳಾದ ಮೇರುಮಂದರ ಮೊದಲಾದ ಪರ್ವತಂಗಳಲ್ಲಿಯೂ, ಕಿಂಪುರುಷ ಮೊದಲಾದ ಖಂಡಗಳಲ್ಲಿಯೂ, ಜಂಬೂದ್ವೀಪ ಮೊದಲಾದ ದ್ವೀಪಂಗಳಲ್ಲಿಯೂ, ಹದಿನಾರು ಲಕ್ಷಯೋಜನ ವಿಸ್ತಾರವಾದ ದಧಿಸಮುದ್ರದಿಂ ಸುತ್ತುವರಿದಿರುವ ಕ್ರೌಂಚದ್ವೀಪಕ್ಕೆ ಅಧಿಪತಿಯಾದ ಧೃತಿಮಂತರಾಯನ ಪುತ್ರರಾದ ಕುಶಗ, ಮನುಗ, ತೃಷ್ಣ, ಪೀವರ ಅಂಧಕಾರಕ, ದ್ವೈಪತೃಷ್ಣ, ಪುಂಡರೀಕರೆಂಬ ಏಳು ಮಂದಿಗೂ ಆ ದ್ವೀಪವಂ, ಕುಶಕಖಂಡ, ಪೀವರಖಂಡ, ಅಂಧಕಾರಖಂಡ, ದ್ವೈಪತೃಷ್ಣಖಂಡ, ಪುಂಡರೀಕ ಖಂಡಗಳೆಂದು ಈ ಪರಿಯಾಗಿ ಏಳು ಖಂಡಗಳನ್ನಾಗಿ ವಿಭಾಗವಂ ಮಾಡಿದ ಆ ಖಂಡಗಳಿಗೆ, ಶುಕ್ಲಪರ್ವತ, ವರ್ಧಮಾನಪರ್ವತ, ಉಪಬರ್ಹಣಪರ್ವತ, ಉಪಭೋಜನಪರ್ವತ, ನಂದಪರ್ವತ, ಆನಂದ ಪರ್ವತ, ಪುಂಡರೀಕ ಪರ್ವತಗಳೆಂಬ ಏಳು ಮರ್ಯಾದಾಪರ್ವತಂಗಳಿರುವವು. ಆ ಪರ್ವತಂಗಳಲ್ಲಿ ಜನಿಸಿದ ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತೀ, ರೂಪವತೀ, ಪವಿತ್ರಾ, ಶುಕ್ಲವತೀ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುವ ಮಹಾನದಿಗಳಿರುವವು. ಇಂತಿರ್ಪ ಮಹಾನದಿಗಳಿಂ ಸುತ್ತುವರಿದು, ಮೇರುಪರ್ವತದಂತೆ ಅನೇಕ ಕೋಟಿ ಯೋಗಿಗಳಿಂದಲೂ, ಯೋಗಿನೀಯರುಗಳಿಂದಲೂ, ಸೇವಿತವಾಗಿರ್ಪ ಕ್ರೌಂಚಪರ್ವತದಿಂದ ಅಲಂಕೃತವಾದ ಕ್ರೌಂಚದ್ವೀಪದಲ್ಲಿಯೂ ಕೂಡ ಹುಡುಕಿ ನೋಡಿ, ಮತ್ತೂ ಆ ಕ್ರೌಂಚದ್ವೀಪಕ್ಕೆ ಸುತ್ತಲೂ ಬ್ರಹ್ಮಾಂಡ ಕಟಾಹದಂತಿರುವ ಕೋಟೆಯಂ ನೋಡಿ ಅದಕ್ಕೆ ಎಲ್ಲಿಯೂ ಬಾಗಿಲುಗಳಂ ಕಾಣದೆ ಕ್ಷಣಮಾತ್ರ ಆಲೋಚಿಸಿ, ಏನಾದರಾಗಲೀ ಈ ಕೋಟೆಯಂ ದಾಂಟುವೆನೆಂದು ಆಕಾಶಮಾರ್ಗದಿಂ ಹಾರಿ ಹೋಗಲು. ಆ ಕೋಟೆಯು ನಾನು ನನ್ನ

ದೂರ ಹೋದರೂ ಅಷ್ಟು ಪರ್ಯಂತವೂ ಬೆಳೆದು ಬರುವದಂ ನೋಡಿ
ಇದೇನು ಆಶ್ಚರ್ಯವು, ಈ ಕೋಟೆಯು ದೇವದಾನವರಿಗೂ ಕೂಡ ದು
ರ್ಘಟವೆಂದು ನನ್ನ ಬುದ್ಧಿಗೆ ತೋರಿ ವ್ಯಸನದಿಂ ಬಂದೆನೆಂದು ಪೇಳಲಾ
ಮಾತುಗಳಂ ಕೇಳಿ ಅತ್ಯಂತ ವ್ಯಸನದಿಂ ಭ್ರಾಂತನಾದನೃಪನಸ್ಥಿತನಸ್ಸೆ ಪ್ರತಿ
ಹೊರಳುತ್ತ ಅಯ್ಯಾ ಸುಮತಿಯೆ! ಇದು ಸಾಧ್ಯವು, ಇದು ಅಸಾಧ್ಯ
ವು, ಎಂದು ಯೋಚಿಸದೆ ಪ್ರತಿಜ್ಞೆಯಂ ಮಾಡುವದು ಎನ್ನ ಬುದ್ಧಿಯ
ಮಾಂದ್ಯವೇ ಸರಿ. ದಿಗ್ವಿಜಯವಂ ಮಾಡಿದ ಬಳಿಕ ರತ್ನಪುರಪ್ರವೇಶವಂ
ಮಾಡದೆ ಈ ಸ್ವಯಂವರಕ್ಕೆ ಬರಬಹುದೆ? ಎಂದು ಅನೇಕ ಪರಿಯಾಗಿ
ಅಪ್ಪಣೆಯಂ ಕೊಡಲಾ ಮಾತುಗಳಂ ಕೇಳಿ ಸುಮತಿಯು ಸವಿಾಪಕ್ಕೆ
ಬಂದು ಎಲೈ ರಾಜೋತ್ತಮನೆ! ಸಾಮಾದ್ಯುಪಾಯ ಚತುಷ್ಟಯದಿಂದ
ಲೂ, ಅಸಾಧ್ಯವಾದ ಈ ಕಾರ್ಯವು ದೈವವಶದಿಂದಲೇ ಸಾಧ್ಯವಾಗಬೇ
ಕಲ್ಲದೆ ಮತ್ತೊಂದು ಪರಿಯಿಂದ ಸಾಧ್ಯವಾಗಲರಿಯದೆಂದು ಪೇಳಿ, ಮ
ತ್ತೂ ಶ್ರೀಮಹಾದೇವಿಯ ಕಟಾಕ್ಷಕ್ಕೆ ಪಾತ್ರನಾದ ನಿನ್ನಿಂದ ಸಾಧಿಸಲಶ
ಕ್ಯವಾದ ಕಾರ್ಯವು ಲೋಕತ್ರಯದಲ್ಲಿಯೂ ಇಲ್ಲವೆಂದು ವಿಜ್ಞಾಪನೆ
ಯಂ ಮಾಡಲಾ, ರಾಜೇಂದ್ರನು ತೂಗುಮಂಚದಿಂದೆದ್ದು ಯೋಚನೆಯಂ
ಮಾಡುತ್ತ ಬರುತ್ತಿರಲಾಗ, ಕಾರ್ಯದಕ್ಷನಾದ ಯಕ್ಷನು ಸವಿಾಪವನೈದಿ
ಸ್ವಾಮಿ ರಾಜೇಂದ್ರನೆ! ಕ್ರೌಂಚ ದ್ವೀಪವಾಸಿಯಾದ ಬೃಂದಾರಿಕಾ
ಎಂಬ ಮಹಾಯೋಗಿನಿಯು, ಈಗ ಕೈಲಾಸ ಪರ್ವತಪ್ರಾಂತ್ಯದೊಳಿರುವ
ದಾರುಕಾವನದಲ್ಲಿ ವಾಸವಂ ಮಾಡಿರುವಳು, ಆ ಮಹಾಯೋಗಿನಿಯ
ಸವಿಾಪಕ್ಕೆ ಚಿತ್ತೈಸಿದರೆ ಕ್ರೌಂಚದ್ವೀಪ ಸಾಧನ ಕ್ರಮವು ಚಿತ್ತಕ್ಕೆ
ವೇದ್ಯವಾಗುವದೆಂದು ಬಿನ್ನವಿಸಲಾ, ಮಾತುಗಳಂ ಕೇಳಿ ಮೈಯುಬ್ಬಿ
ಯಕ್ಷನಂ ತಬ್ಬಿ ಸಂತೋಷದಿಂ ಮಂತ್ರಿ ಸೇನಾಪತಿಗಳಂ ಕುರಿತು ಎಲೈ
ಸುಮತಿ ವೀರಸೇನರುಗಳಿರಾ, ನಾನು ದಾರುಕಾವನದಲ್ಲಿರುವ ಬೃಂದಾ
ರಿಕಾ ಎಂಬ ಮಹಾ ಯೋಗಿನಿಯ ಸವಿಾಪವಂ ಕುರಿತು ಈಗಲೇ ತೆರಳಿ
ರುವೆನಾದ್ದರಿಂ ಪ್ರಯಾಣಸೂಚಕವಾದ ಭೇರಿಯಂ ಧ್ವನಿಗೊಳಿಸುವದೆಂ
ದಾಜ್ಞಾಪಿಸಿ, ವೀರಸೇನನಂ ಸವಿಾಪಕ್ಕೆ ಕರದು ಎಲೈ ಸೇನಾಪತಿಯೆ!
ನಮ್ಮ ಸೇನೆಯೊಳ್ ಕಾಲಕಾಲದಲ್ಲಿ ನೀನು ಕಂಟಕಶೋಧನೆಯಂಗೈಯುತ್ತ,

ಸೇನಾನಾಯಕರಂ ವಿಶ್ವಾಸದಿಂದಾಶ್ವಾಸಗೊಳಿಸುತ್ತ, ಪ್ರಯಾಣಕ್ಕಾಗಿ ಅತಿ ಜಾಗ್ರತೆಯಿಂದಿರುವದೆಂದು ಕಟ್ಟು ಮಾಡಿ, ಬಾಗಿಲೊಳ್ ಕಾದಿರ್ದ ಪದ್ಮಿನೀ ಎಂಬ ಉತ್ತಮಾಶ್ವವನ್ನೇರಿ, ಮತ್ತೂ ಸೇನಾಪತಿಯಾದ ಹಿತಸೇನನೆಂಬುವನು ಕುರಿತು ನೀನು ಹಿಂದಕ್ಕೆ ತೆರಳಬೇಕೆಂದು ಹೇಳಿ ಕಳುಹಿಸಿ, ಕಟಕವಂ ಬಿಟ್ಟು ಸ್ವಲ್ಪ ದೂರ ಬಂದು ಕುದುರೆಯನ್ನಿಳಿದು, ಚಂದ್ರಹಾಸ, ಬಿಲ್ಲು, ಬತ್ತಳಿಕೆ ಮೊದಲಾದ ಆಯುಧಗಳಂ ಮಂತ್ರಿಯ ಕೈಯಲ್ಲಿ ಕೊಟ್ಟು ಅವನೊಡಗೂಡಿ ಛಾಯಾಗುಪ್ತನನ್ನೇರಲು, ಆಗ ಛಾಯಾಗುಪ್ತನು ಗಗನಮಾರ್ಗದೊಳ್ ನಡೆಯುತ್ತ, ಎಲೈ ರಾಜೇಂದ್ರನೆ! ಮುಂದೆ ಕಾಣುವದೇ ನವನೃಪೇಶ್ವರರ ದಶಾಶ್ವಮೇಧಂಗಳಿಗೆ ಸಾಕ್ಷಿಯಾಗಿರ್ದ ಪ್ರಯಾಗಕ್ಷೇತ್ರವು, ಇದು ನೈಮಿಶಾರಣ್ಯವು, ಇದು ಚಂಪಕಾರಣ್ಯವು, ಇದು ಆನಂದವನವು, ಇದು ಪಂಚಬ್ರಹ್ಮಸ್ವರೂಪನಾದ ಪಶುಪತಿಯಸ್ಥಾನವು, ಇದು ಹಿಮಾಚಲವು, ಇದೇ ಭರತಖಂಡಕ್ಕೆ ಅವಧಿ ಪರ್ವತವೆಂದು ಬಿನ್ನೈಸುತ ಕಿಂಪುರುಷ, ಹರಿವರ್ಷಾದಿ ಖಂಡಂಗಳಂ ದಾಂಟಿ, ಇಳಾವೃತ ಖಂಡ ಮಧ್ಯದೊಳ್ ಮಹಾ ಮೇರುವಿಗೆ ಈಶಾನ್ಯ ಭಾಗದಲ್ಲಿರುವ ಕೈಲಾಸಪರ್ವತದ ಸಮೀಪದೊಳಿರುವ ದಾರುಕಾವನವು ಇದೇ ಎಂದು ಹೇಳುತ್ತ, ಅದರ ಸಮೀಪದಲ್ಲಿರುವ ಚಂದ್ರಸರೋವರದ ಬಳಿಯೊಳಿಳಿಯಲಾಗ, ರಾಜಮಂತ್ರಿಗಳಿರ್ವರೂ ಪಾದಚಾರಿಗಳಾಗಿ ಆ ಸರೋವರದಲ್ಲಿ ಸ್ನಾನವಂ ಮಾಡಿ ಆಹ್ನಿಕಗಳಂ ನೆರವೇರಿಸಿದ ಬಳಿಕ ರಾಯನು ಯಕ್ಷನಂ ಮುಂದು ಮಾಡಿಕೊಂಡು ಸುಮತಿಯು ಹಸ್ತಲಾಗವಿಂ ನಡೆಯುತ್ತ, ದಾರುಕಾವನವಂ ಪ್ರವೇಶಿಸಿ ಅಲ್ಲಿ ಒಂದು ಕಡೆಯೊಳ್ ಬದ್ಧ ಪದ್ಮಾಸನದಲ್ಲಿ ಕುಳಿತು ಪರಮೇಶ್ವರಿಯ ಪಾದಪಂಕಜಗಳೊಳ್ ಚಿತ್ತೈಕ್ಯವಂ ಮಾಡಿರುವ ಮಹಾಯೋಗಿಗಳಂ, ಒಂದು ಕಡೆಯೊಳ್ ಕಮಲಾಸನದಲ್ಲಿ ಕುಳಿತು ಮಹಾ ಕಾರಣನಾದ ಕೈಲಾಸಪತಿಯಂ ಧ್ಯಾನವಗೈಯ್ಯುತ್ತಲಿರುವ ಧ್ಯಾನಯೋಗಿಗಳಂ, ಒಂದು ಕಡೆಯೊಳ್ ಪ್ರಾಣಾಯಾಮಂಗಳಿಂದ ವಾಯು ಜಯವಂ ಮಾಡಿ ಕೇವಲ ಕುಂಭಕದಲ್ಲಿಯೆ ನಾದಾನುಸಂಧಾನವಂ ಮಾಡುವ ಅಭ್ಯಾಸ ಯೋಗಿಗಳಂ ಕೂಡ ನೋಡುತ್ತ, ಮತ್ತೂ ಅನೇಕ ಸಹಸ್ರ ಬ್ರಹ್ಮರ್ಷಿಗ

ಳಿಂದ ಸೇವಿತವಾಗಿ ಸತ್ಯಲೋಕದಂತಿರುವ ಆ ದಾರುಕಾ ವನದಲ್ಲಿ ಸಂಚರಿಸುತ್ತ; ಬಲದ ಕಡೆಯೊಳ್ ಪದ್ಮಾಸನಾರೂಢಳಾಗಿ ಚಿನ್ಮುದ್ರೆಯಂ ಧರಿಸಿ ಲಂಬಿಕಾಯೋಗವಂ ಅವಲಂಬಿಸಿ, ಶಿವ ಸಾಮರಸ್ಯವನ್ನೈದಿ ಪರ್ಣಶಾಲೆಯಲ್ಲಿ ಕುಳಿತಿರುವ ಮಹಾಯೋಗಿನಿಯಂ ಕಂಡು, ಪ್ರದಕ್ಷಿಣಪೂರ್ವಕ ಸಾಷ್ಟಾಂಗ ದಂಡಪ್ರಣಾಮವಂ ಮಾಡಿ, ಸುಮತಿಯಂ ಕುರಿತು ಎಲೈ ಮಂತ್ರಿಯೆ! ಈ ಮಹಾ ಯೋಗಿನಿಯು ತಪವಂಮಾಡುವ ಸಾಕ್ಷಾತ್ ಅಪರ್ಣಾದೇವಿಯೊ? ಅಥವಾ ಸತ್ಯಲೋಕದಿಂದಿಳಿದಿರುವ ಭಾರತೀ ದೇವಿಯೊ? ಇಂತಲ್ಲದೇ ಯೋಗಿನೀ ವೇಷವಂತಾಳಿರುವ ವನದೇವತೆಯೊ? ಎಂದು ಪರಿಪರಿಯಾಗಿ ಪೇಳುತ್ತ, ಪರ್ಣಶಾಲೆಯ ಸಮೀಪದಲ್ಲಿ ಕುಳಿತು, ಆ ಮಹಾಯೋಗಿನಿಯು ಸಮಾಧಿಯಿಂದ ಬಹಿರ್ಮುಖಳಾಗಬೇಕೆಂದು ಶ್ರೀಚಾಮುಂಡಿಕಾದೇವಿಯ ಚರಣಾರವಿಂದಗಳಲ್ಲಿ ಚಿತ್ತವಂ ಇಟ್ಟು, ನವಾಕ್ಷರೀ ಮಹಾಮಂತ್ರವಂ ಕಲ್ಪೋಕ್ತ ಪ್ರಕಾರವಾಗಿ ಜಪಿಸುತ್ತ, ಈ ಮಹಾಯೋಗಿನಿಯ ಅನುಗ್ರಹವುಂಟಾಗುವವರಿವಿಗೂ ಈಗ ಕುಳಿತಿರ್ದ ಆಸನವಂ ಬಿಟ್ಟು ಮೇಲಕ್ಕೆ ಏಳುವದಿಲ್ಲವೆಂದು ಮನದೊಳೆ ನಿಶ್ಚೈಸಿ, ಮತ್ತೂ ಸುಮತಿಯೊಡಗೂಡಿ ಆ ಮಹಾಯೋಗಿನಿಯ ಚರಣ ಸರೋಜಂಗಳಿಗೆ ಪೂಜೆಯಂ ಮಾಡುತ್ತ ಕೆಲವು ದಿವಸ ಅಲ್ಲಿಯೇ ಇರುತಿರ್ದನೆಂಬಲ್ಲಿಗೆ. * * * * * *

ಗದ್ಯ—ಕುಂಡಲಿಶಯ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖನಿಖಿಲ ಸುರವರ ಪರಿಭವ ಪರಿಣತ ಪ್ರಚಂಡ ಬಲಚಂಡಮುಂಡ ವಿಖಂಡನ ನಿಪುಣ ಕೋದಂಡ ಕಾಂಡಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ನರಸಕವಿತಾನಿಸ್ಸಹಾಯ ನಿರ್ಮಾಣ ಧೌರೇಯ ಘಟಿಕಾಶತಗ್ರಂಥ ದಿನ ದಿನ ಪ್ರಬಂಧ ನಿಬಂಧನ ಧುರಂಧರ ತ್ರಿಭುವನಪವಿತ್ರಾತ್ರೇಯಸಗೋತ್ರಾಶ್ವಲಾಯನ ಸೂತ್ರ ಚಾಮರಾಜ ಮಹಾರಾಜ ಪುತ್ರ ನರಪತಿ ಬಿರುದ ಮಹಿಶೂರ ಪುರವರಾಧೀಶ ಶ್ರೀ ಕೃಷ್ಣರಾಜವಡಯರವರಿಂದ ರಸಿಕಜನಾನಂದ ಕರವಾಗಿ ವಿರಚಿತವಾದ ಸೌಗಂಧಿಕಾ

ಪರಿಣಯವೆಂಬ ಇಪ್ಪತ್ತೈದನೇ ಆಶ್ವಾಸ ನಿರೂಪಣಕ್ಕೆ ಮಂಗಳ ಮಹಾ. * * * * * * *

ಇಪ್ಪತ್ತೈದನೆಯ ಆಶ್ವಾಸ ಸಂಪೂರ್ಣವು.

ಶ್ರೀರಸ್ತು

ಇಪ್ಪತ್ತಾರನೇಯ ಆಶ್ವಾಸ ಪ್ರಾರಂಭಃ

ಶ್ರೀಚಾಮುಂಡಿಕಾಂಬಾಯೈನಮಃ.

ಆ ಬಳಿಕ ಸುಗಂಧಮಹಾರಾಯನು ಮಂತ್ರಿಯಂ ಕುರಿತು ಎಲೈ ಸುಮತಿಯೆ! ಈ ಮಹಾಯೋಗಿನಿಯು ಯಾವ ಯುಗದಲ್ಲಿ ಯೋಗಪಟ್ಟೆವಂ ಧರಿಸಿ ಲಂಬಿಕಾಯೋಗವನ್ನವಲಂಬಿಸಿ ಬ್ರಹ್ಮಾದಿಗಳಿಗೂ ತಿಳಿಯಲಶಕ್ಯವಾದ ಬ್ರಹ್ಮಾನಂದ ಸುಖವನ್ನೈದಿರುವಳೋ? ಇವಳನ್ನು ಶೀತೋಪಚಾರಂಗಳಿಂದ ಶೀಘ್ರವಾಗಿ ಎಚ್ಚರವಂ ಮಾಡಬೇಕೆಂದು ಹೇಳುತ್ತಾ, ರಾಜೇಂದ್ರನು ತನ್ನ ಹಸ್ತಗಳಿಂದ ಕಮಲಪತ್ರಂಗಳಂ ಕಣ್ಣುರೆಪ್ಪೆಗಳಿಗೆ ಒಪ್ಪಿಸುತ್ತಾ, ಹಣೆಯಲ್ಲಿ ಪರಿಮಳವಾದ ಪಚ್ಚಕರ್ಪೂರದ ಪಟ್ಟೆಯನ್ನಿಟ್ಟು, ಬ್ರಹ್ಮರಂಧ್ರದಲ್ಲಿ ತಂಪಾದ ತಾವರೆದಂಟುಗಳಂತಲೆಯೊಳಿಟ್ಟು, ತಳಿರುಗಳಿಂದ ಘಾಳಿಯಂಬೀಸುತ್ತಾ, ಕರಪಾದಗಳಿಗೆ ಕನ್ನೈದಿಲೆ ಪುಷ್ಪಗಳಿಂದ ಶೀತಳವಾದ ಉದಕಗಳಿಂದಲು ಸೆಚನೆಯಂ ಮಾಡುತ್ತಾ, ಪರಮೇಶ್ವರಿಯ ಪಾದಪಂಕಜಗಳಂ ಧ್ಯಾನಿಸುತ್ತಾ, ಶೀತೋಪಚಾರಗಳಂ ಮಾಡುವ ಈರ್ವರಂ ವಾನಪ್ರಸ್ಥಾಶ್ರಮವಂ ವಹಿಸಿರುವ ವರುಣದತ್ತನೆಂಬ ಒಬ್ಬ ಬ್ರಾಹ್ಮಣನು ನೋಡಿ ಎಲೈ ಸತ್ಪುರುಷರುಗಳಿರಾ! ನೀವಿಬ್ಬರು ಮಾಡುವ ಶೀತೋಪಚಾರಂಗಳು ಶಿವಪದವನ್ನೈದಿರುವ ಈ ಮಹಾ

ಯೋಗಿನಿಯ ಚಿತ್ತವಂ ಬಹಿರ್ಮುಖವಂ ಮಾಡಲಾರವು, ನೀವಿಬ್ಬರು ಮಾಡುವ ಶೈತ್ಯೋಪಚಾರಂಗಳು ಬೂದಿಯಲ್ಲಿ ಮಾಡಿದ ಹೋಮದಂತೆ ವ್ಯರ್ಥವೆಂದು ಎನ್ನ ಬುದ್ಧಿಗೆ ತೋರಿತು ಅದೇನೆಂದು ಕೇಳುವಿರಾ ಈ ದಾರುಕಾವನದಲ್ಲಿ ಮಹಾಯೋಗಿನಿಯು ಲಂಬಿಕಾ ಯೋಗವನ್ನವಲಂಬಿಸಿ ಬಹುಕಾಲವಾಯಿತು, ಅದರಿಂದಿನ್ನು ಸಮಾಧಿಸ್ಥಿರವಾಯಿತು ಬಹಿರ್ಮುಖವಾಗುವದಿಲ್ಲವೆಂದು ಪೇಳ್ದ ವರುಣದತ್ತನ ಮಾತುಗಳಂ ಕೇಳಿ ಮನದೋಳ್ಚಿಂತಿಸುತ್ತಾ ರಾಜನಂದನನು ಮಂತ್ರಿಯ ಮುಖವಂ ನೋಡಿ ಎಲೈ ಸುಮತಿಯೇ! ಈ ಶೈತ್ಯೋಪಚಾರಗಳಿಂ ಬಹಿರ್ಮುಖಳಾಗುವದಿಲ್ಲ, ಈಗ ಒಂದುಪಾಯವಂ ಪೇಳ್ವೆನು ಕೇಳು, ನಾನು ಪರಕಾಯಪ್ರವೇಶವಂ ಮಾಡಿ ಈ ಯೋಗಿನಿಯ ಚಿತ್ತವಂ ತತ್ತರಂದ ತಡವಡಿಸಿ ಪ್ರಕೃತಿಮಾರ್ಗವನ್ನೈದಿಸುವೆನು ಎಂದು ಪ್ರತಿಜ್ಞೆಯಂ ಮಾಡಿ, ಮಂತ್ರಿಯ ಹಸ್ತವಂ ಪಿಡಿದು ನಡೆಯುತ್ತಾ ಪರ್ಣಶಾಲೆಯ ಹಿಂಭಾಗದಲ್ಲಿರುವ ಕೈಲಾಸ ಪರ್ವತದ ಗುಹಾಂತರಾಳವಂ ಪೊಕ್ಕು, ಸುಮತಿಯಂ ಕುರಿತು ಎಲೈ ಮಂತ್ರಿಯೇ! ತಂಪಾದ ತಳಿರುಗಳಿಂ ಜಗತಿಯಂ ನಿರ್ಮಿಸು ಎಂದು ಪೇಳುತ್ತಾ, ಮತ್ತು ಈ ಜಗತಿಯಲ್ಲಿ ಬಿದ್ದಿರುವ ನನ್ನ ಶರೀರವನ್ನು ಪ್ರತಿ ಕ್ಷಣದಲ್ಲಿಯು ಪರಿಮಳ ದ್ರವ್ಯಂಗಳಿಂದ ಪಾಣಿಪಾದಂಗಳಿಗೆ ಪರಿಮಳ ಗೊಳಿಸುತ್ತಾ ಪುಷ್ಪಧೂಪಗಳಿಂದ ಶರೀರವಂ ಪ್ರೋರಿಸುತ್ತಾ ನಾನಾವಿಧ ಧೂಪಗಳಿಂದ ಧೂಪಿಸುತ್ತಾ, ಛಾಯಾಗುಪ್ತನನ್ನು ಗುಹಾದ್ವಾರದಲ್ಲಿ ಕುಳ್ಳಿರಿಸಿ ಅತಿಜಾಗ್ರತೆಯಿಂದ ನೀನು ಕಾದಿರು ಎಂದು ಕಟ್ಟುಮಾಡಿ, ಆ ಜಗತಿಯಲ್ಲಿ ಬದ್ಧ ಪದ್ಮಾಸನದಲ್ಲಿ ಕುಳಿತು ಪ್ರಾಣಾಯಾಮಗಳಿಂದ ವಾಯುವಂ ವಶವಂ ಮಾಡಿ ತಮಕುಂಭಕದಲ್ಲಿ ನಿಲ್ಲಿಸಿ, ಪ್ರಾಣವಾಯುವಿನಿಂದ ಸೂಕ್ಷ್ಮವಾದಸುಷುಮ್ನಾ ನಾಡಿಯ ಬಾಗಿಲೊಳ್ ಅಡ್ಡಲಾಗಿ ಹೆಡೆಯನ್ನೆತ್ತಿರುವ ಮೂಲಾಧಾರ ಕುಂಡಲಿಯಂದಂಡಿಸಿ, ಪಂಚಪ್ರಾಣಗಳೆಂಬ ಪಂಚ ಬಣ್ಣದ ಗಿಣಿಗಳನ್ನು ಅಪವರ್ಗ ಮಾರ್ಗದಲ್ಲಿರುವ ಬಾಗಿಲಲ್ಲಿ ಕಾದು ಇರುವ ಗಣಪತಿ ರುದ್ರ ವಿಷ್ಣು ಬ್ರಹ್ಮ ಮೊದಲಾದ ಗೊತ್ತುಗಾರರಿಗೆ ಎಚ್ಚರವಂ ಮಾಡುವಂತೆ ಮುಂದೆಕಳುಹಿಸಿ, ಕಾರಣಶರೀರದ ಕೈಲಾಘವದಿಂ ಸಪ್ತದಶಾಂಗಗಳಿಂ ಕೂಡಿದ ಮಹಾಲಿಂಗವಂ ತೆರಳಿಸಿದ ಹರಾಕಾಶ

ಪ್ರಾಗ್ಭವಂ ನೈದಿಸುತ್ತಿರುವ ಸಮಯದೋಳ್ ಆ ಮಹಾಲಿಂಗದೇವನು ವೀಣಾ ವೇಣು ತಾಳ ಮೃದಂಗ ಭೇರಿ ಮೊದಲಾದ ದಶವಿಧನಾದಗಳಿಂದ ಕೂಡಿಕುಣಿಯುವ ಕುಂಡಲಿಯಂ ನೋಡಿ ಸಂತೋಷದಿಂ ಬರುತ ಬರುತ ಆಜ್ಞಾಚಕ್ರವೆಂಬ ತೂಗುಮಂಚದೋಳ್ ತೂಗುವ ಮುಕ್ತಿಕಾಂತೆಯ ಮುಖವಂ ಮುದ್ದುಗೊಳುತ್ತ ಸಹಸ್ರಾರ ಕಮಲಕರ್ಣಿಕಾ ಮಧ್ಯದೋಳ್ ತುಂಬಿ ತುಳುಕುವ ಅಮೃತವಂ ಸವಿದು ಆ ಮಹಾಲಿಂಗವು ಸ್ಥೂಲ ಶರೀರವಂ ಬಿಟ್ಟು ಪರ್ಣಶಾಲೆಯಲ್ಲಿ ಯಾಗವಂ ತಾಳರುವ ಮಹಾಯೋಗಿಯ ಇಡಾ ಪಿಂಗಳಾ ಎಂಬ ನಾಡಿಗಳಲ್ಲಿ ಪ್ರವೇಶವಗೈದು ಆ ಶರೀರದ ಆಯಾಯ ಸ್ಥಾನಗಳಲ್ಲಿ ಪಂಚಪ್ರಾಣಗಳು ನಿಲ್ಲಲು, ಆ ಸಮಯದಲ್ಲಿ ಮನಸ್ಸು ಪ್ರಾಣವಾಯುವಿನಿಂದ ಕೂಡಿ ಸಂಕಲ್ಪ ವಿಕಲ್ಪಗಳಂ ಪುಟ್ಟಿಸುತ್ತಾ ಇಡಾ ಪಿಂಗಳಾ ನಾಡಿಗಳಲ್ಲಿ ವಾಯುಸಂಚಾರವಂ ಮಾಡಿಸುತ್ತಿರುವ ಕಾಲದೋಳ್ ಆ ಬೃಂದಾರಕಾಯೆಂಬ ಯೋಗಿನಿಯು ಚಿನ್ಮುದ್ರೆಯಂ ಬಿಟ್ಟು ನೇತ್ರಗಳಂ ತೆಗದು ನೋಡುತ್ತಾ ತನ್ನ ಮನವಲ್ಲಿ ಅಚಂಚಲವಾದ ಸಮಾಧಿಯನ್ನೈದಿರುವ ಎನ್ನ ಚಿತ್ತವು ಬಹಿರ್ಮುಖವಾಗುವದಕ್ಕೆ ನಿಮಿತ್ತವೇನೆಂದು ಯೋಚಿಸಿದರೂ ಯೋಚನೆ ಹರಿಯದೆ ಅಂತರಿಕ್ಷವಂನೋಡುತ್ತಾ ಇದಂತಿಳಿಯಲ್ಕೋಸುಗ ಬೇರೆ ನಾನುಯಾವ ಸಮಾಧಿಯಲ್ಲಿ ಇದ್ದು ಬಹುಕಾಲವಾದದ್ದರಿಂದ ಆಗಾಮಿ ಸಂಚಿತ ಪ್ರಾರಬ್ಧರೂಪಮಾದ ಕರ್ಮತ್ರಯಂಗಳನನುಭವಿಸುವ ಪ್ರಾಣಿಗಳ ಅವಸ್ಥಾ ವಿಶೇಷಂಗಳಂತಿಳಿಯದೆ ಈ ಸಂಶಯನಿವೃತ್ತಿ ಆಗೋದಿಲ್ಲ, ಆ ಅವಸ್ಥಾ ವಿಶೇಷಂಗಳ ಮೂಲಕ ಪ್ರವೃತ್ತಿಯು ಅಧೀನಮೂಲಕ ಪ್ರಕೃತಿಸ್ವರೂಪವೆ ಬ್ರಹ್ಮಾಂಡ ಸ್ವರೂಪವೆಂದು ನಿಶ್ಚೈಸಿ, ಜ್ಞಾನ ದೃಷ್ಟಿಯಿಂದ ಈಕ್ಷಿಸಲು, ಆಗ ಹಿಂದಿರುವರ ಸಪ್ರಭಾವದಿಂದ ನಿರ್ಮಲವಾದ ಕನ್ನಡಿಯಲ್ಲಿ ಪ್ರಾಣಿಗಳ ಶರೀರಂಗಳು ಪ್ರತಿಬಿಂಬಿಸಿದಂತೆ ಹಿಂದಿನಲ್ಲಿರುವ ಚೈತನ್ಯ ಪ್ರಭಾವದಿಂದ ಪರಿಶುದ್ಧಮಾಗಿ ನಿಶ್ಚಿಯಾತ್ಮಿಕವಾದ ಬುದ್ಧಿಯಲ್ಲಿ ಪ್ರತಿಫಲಿಸಿದ ಬ್ರಹ್ಮಾಂಡ ಕಟಾಹಾತ್ಮಕವಾದ ಮೂಲಪ್ರಕೃತಿಯ ಅಪ್ರಾಕೃತ ಶರೀರವಂ ನೋಡಿ, ಆ ಶರೀರದಲ್ಲಿ ಕಲ್ಪಿತವಾದ ಅತಲ ವಿತಲ ಸುತಲ ತಲಾತಲ ರಸಾತಲ ಪಾತಾಳ ಲೋಕಂಗಳನ್ನು ಸತ್ಯಲೋಕ ತ

ಸ್ವರ್ಲೋಕ ಮೊದಲಾದ ಊರ್ಧ್ವ ಲೋಕಂಗಳನ್ನು ವೀಕ್ಷಿಸಿ, ಅಷ್ಟದಿಕ್ಪಾಲಕರಿಂದ ಆವೃತವಾದ ಮಹಾಮೇರು ಪರ್ವತವಂ ನೋಡುತ್ತಾ ರಾಕ್ಷಸರಿಂದ ತುಂಬಿರುವ ಸ್ವರ್ಗವನ್ನವಲೋಕಿಸಿ, ಇಂದ್ರಾದಿ ದೇವತೆಗಳಿಗೆ ಬಂದ ವಿಪತ್ತುಗಳು ಏನೋ? ಎಂದು ದಿವ್ಯ ದೃಷ್ಟಿಯಿಂದೀಕ್ಷಿಸಿ, ಮಹಾ ಋಷಿಯಾದ ದೂರ್ವಾಸ ಶಾಪದಿಂ ಸಾಯುಧ ಸಪರಿವಾರ ಸಮೇತನಾಗಿ ಭೂಲೋಕದಲ್ಲಿ ಕರ್ನಾಟಕ ಸಿಂಹಾಸನಾಧೀಶ್ವರನಾಗಿ ರತ್ನಪುರವನ್ನಾಳುವ ಸುಚರಿತ್ರಮಹಾರಾಯನಿಗೆ ಎನ್ನ ಉಪಾಸನಾ ದೇವತೆಯಾದ ರಾಜರಾಜೇಶ್ವರಿಯು ವರದಿಂದ ಉದ್ಭವಿಸಿದ ಸುಗಂಧಮಹಾರಾಯನೆ! ಇಂದ್ರನೆಂದು ನಿಶ್ಚಯಿಸಿ, ಉಪಶ್ರುತೀ ದೇವಿಯು ಪ್ರಭಾವದಿಂದ ಕಳಿಂಗರಾಯನಿಗೆ ಪುತ್ರಿಯಾಗಿ ಜನಿಸಿ ಇರುವ ಸೌಗಂಧಿಕಾದೇವಿಯೇ ಶಚೀದೇವಿ ಎಂದು ನಿಶ್ಚಯಿಸಿ, ಸುಗಂಧರಾಯನ ಸೂಕ್ಷ್ಮ ಶರೀರವನ್ನು ತನ್ನ ಶರೀರದಲ್ಲಿಯೇ ನೋಡಿ, ಈ ನರಾಧಮನೇ ಎನ್ನ ಅಖಂಡ ಸಮಾಧಿಯಲ್ಲಿ ಆನಂದಾನುಭವದಿಂದ ಇರುವ ಎನ್ನ ಚಿತ್ತವಂ ಕತ್ತರಿಸಿದ ಕಲಿಪುರುಷನು, ಇದಲ್ಲದೆ ಮನುಷ್ಯಲೋಕದಲ್ಲಿ ಜನಿಸಿ ಮತ್ತನಾಗಿ ಮೈ ಮರತು ಇದು ಅಕಾರ್ಯವೆಂದು ತಿಳಿಯದ ಮಾರ್ಗದಲ್ಲಿ ಪ್ರವೃತ್ತಿಸಿದ ಈ ರಾಯನಂ ಎನ್ನ ತಪೋಗ್ನಿಯಿಂದ ದಹಿಸುವೆನು ಎಂದಾಲೋಚಿಸಿ, ತತ್ಕ್ಷಣದಲ್ಲಿ ಉಪಶಾಂತಿಯನ್ನೈದಿ, ಯೋಗಿಯು ತನ್ನ ಮನಸ್ಸಿನಲ್ಲಿ ಬಹುಕಾಲದಿಂ ಮಾಡಿರುವ ತಪಸ್ಸು ದಗ್ಧವಾಗಿ ಹೋಗುವದಲ್ಲಾ ಅದುಕಾರಣ ತಪವಂ ಮಾಡುವ ಮಹಾನುಭಾವರು ಉಪಶಾಂತಿ ಎಂಬ ಉಪಹಾರದಿಂದಲೇ ತಪೋವೃದ್ಧಿಯನ್ನೈದಿಸುವವರಿಂ ಅಂತವಿಲ್ಲದೆ ಸಪ್ತದ್ವೀಪಂಗಳು ರಾಕ್ಷಸರಿಂದ ವ್ಯರ್ಥವಾಗಿರುವದನ್ನು ಕಂಡು, ದೂರ್ವಾಸರು ದುಷ್ಟರಾಗಿ ಮಹಾಬಲಿಷ್ಠರಾದ ರಾಕ್ಷಸರಂ ಸಂಹಾರವಂ ಮಾಡಿಸುವ ನಿಮಿತ್ತವಾಗಿ ಮಹೇಂದ್ರನಿಗೆ ಭೂಲೋಕದಲ್ಲಿ ಜನಿಸು ಎಂದು ಶಾಪವನಿತ್ತರು, ಮಹಾನುಭಾವರಾದವರಿಗೆ ಕೋಪಬಂದರೂ ಅದು ಲೋಕಕ್ಕೆ ಉಪಕಾರವೆ ಹೊರತು ಅಪಕಾರವಾಗೋದಿಲ್ಲ. ಈ ಪರಿ ಇರುತ್ತಿರಲು ಈ ರಾಯನು ಎನ್ನ ತಪಸ್ಸಿಗೆ ವಿಘ್ನವನ್ನಾಚರಿಸಿದಕಾರಣ ಈತನ ಲಿಂಗ ಶರೀರವನ್ನು ನನ್ನ ದೇಹದಲ್ಲಿಯೇ ಲೀನವಂ ಮಾಡುವದೆ ಈತನಿಗೆ ಶಿಕ್ಷೆ ಎಂದು ಉಪೇಕ್ಷೆಯಿಂ

ವಿದ್ಯಾಭ್ಯಾಸವಂ ಮಾಡುವ ಕಾಲದೋಳ್ ನಿನ್ನ ಕರವಂ ಪಿಡಿದು ಎಲೈ ಸಖನೆ! ನಿನ್ನಂ ಬಿಟ್ಟು ನಾನು ಕ್ಷಣಮಾತ್ರವು ಇರಲಾರೆನೆಂದು ಎನಗೆ ಭಾಷೆಯಂ ಮಾಡಿ ಈಗ ತಟವಟ ಮಾಡುವದು ನಿನಗೆ ಉಚಿತವಲ್ಲ ನಿನ್ನ ಪಾದಗಳಲ್ಲಿಯೆ ಐಕ್ಯವನ್ನೈದಿಸುವದು ಉಚಿತ ಇದಲ್ಲದೆ ನಿನ್ನ ಅಡಿಗಳಂ ಬಿಟ್ಟು ನಾನೆಲ್ಲಿಗೆ ಪೋಗಲೀ ಎಂದು ನುಡಿಯುತ್ತಾ, ಪದ್ಮಾಸನದಲ್ಲಿಯೆ ಇರುವ ರಾಯನ ಶರೀರವಂ ಸವರುತ್ತಾ ಆತನ ಪಾದಂಗಳಂ ಸೇತೋದ್ರೇಕದಿಂದ ನೆನಸುತ್ತಾ ಎಲೈ ಸ್ವಾಮಿಯೆ! ಕಣ್ಣುಗಳಂ ತೆರದು ಮಧುರವಾದ ಮಾತುಗಳನೆಂತು ಪೇಳುವದಿಲ್ಲ, ನಾನು ಏನಪರಾಧವಂ ಮಾಡಿದೆ? ನಿನ್ನ ವಿಯೋಗವನ್ನು ನಾನು ಸಹಿಸಲಾರೆನೆಂದು ಹಂಬಲಿಸುತ್ತಾ ಚಂದ್ರಹಾಸವನ್ನೆತ್ತಿ ತನ್ನ ಕಂಠಛೇದವಂ ಮಾಡಿಕೊಂಬುವ ಮಂತ್ರಿಯಂ ನೋಡಿ ಹಾಹಾಕಾರವಂ ಮಾಡುತ್ತಾ ಛಾಯಾಗುಪ್ತನು ಕರವಂ ಪಿಡಿದು ಚಂದ್ರಹಾಸವಂ ಕಿತ್ತು ಎಲೈ ಮತಿವಂತನಾದ ಸುಮತಿಯೆ! ನೀನು ಈಪರಿ ಅಧೈರ್ಯದಿಂದ ಪ್ರಲಾಪನಗೈವದು ಯುಕ್ತವಲ್ಲ. ರಾಯನು ಎಚ್ಚರವಾಗುವ ಉಪಾಯಗಳಂ ಯೋಚಿಸುತ್ತಾ ಧೈರ್ಯವನ್ನವಲಂಬಿಸಿ ಪರಮೇಶ್ವರಿಯ ಪಾದವನ್ನೆ ಧ್ಯಾನಿಸುತ್ತಿರುವ ಮಹಾಯೋಗಿನಿಯನ್ನೆ ಮರಳಿ ಮರಳಿ ಪ್ರಾರ್ಥನೆಯಂ ಮಾಡಬೇಕೆಂದು ಪೇಳುತ್ತಾ. ಸುಮತಿಯ ಕೈ ಪಿಡಿದು ಗುಹಾಂತರಾಳದಿಂ ಪೊರಟು ಬಾಗಿಲ ಸಮೀಪಕ್ಕೆ ಕರತಂದು ನಿಲ್ಲಿಸಲು, ಆಗ ಮಂಕಾಗಿ ಮರದಂತೆನಿಂತಿರುವ ಮಂತ್ರಿಯ ಚಿತ್ತವು ಸುಗಂಧಮಹಾರಾಯನ ಆಕಾರವಂ ತಾಳಿ ದಿಕ್ಕು ವಿದಿಕ್ಕುಗಳಲ್ಲಿ ಆ ರಾಯನಂ ನೋಡಿ ಓಡುತ್ತಾ ಆಲಿಂಗನವಂ ಮಾಡುತ್ತಾ ತನ್ನ ಮೊಗ್ಗಲಲ್ಲಿ ಇದ್ದವನಂತೆ ಕಂಡು ಮಾತುಗಳನ್ನಾಡುತ್ತಾ ಜಗತ್ತಿಗೆ ಪ್ರಾಣರೂಪನಾದ ಮಂದಮಾರುತವೇ ಮಹಾರಾಯನಂ ಕಂಡು ಮಾತಾಡಿ ಬಂದೆಯಾ ಎಂದು ನುಡಿಯುತ್ತಾ ಕುಂದ ಮಂದಾರ ವೃಕ್ಷಂಗಳಂ ಕುರಿತು ಕೇಳುತ್ತಾ ಮೈ ಮರತು ಬಂದಂತೆ ಓಡುವ ಮಂತ್ರಿಯಂ ನೋಡಿದ ದಯಾ ಶಾಲಿನಿಯಾದ ಬೃಂದಾರಕಾಯೋಗಿನಿಯು ಮಹಾ ದೇವಿಯ ಉಪಾಸಕನಾದ ರಾಯನನ್ನು ತನ್ನ ಕರುಣಾ ಕಟಾಕ್ಷದಿಂದೀಕ್ಷಿಸಿ ಆತನ ಸೂಕ್ಷ್ಮ ಶರೀರವಂ ತನ್ನ ಶರೀರದಿಂದ ಬಿಡಲು, ಆ ಲಿಂಗಶರೀರವು

ಗುಹಾಂತರಾಳವಂ ಪ್ರೊಕ್ಕು ಸುಗಂಧರಾಜೇಂದ್ರನ ಶರೀರವಂ ಪ್ರವೇಶಿಸಲ್ಕು, ಆಗ ಆ ರಾಯನು ಎಚ್ಚರವಾಗಿ ಸರ್ವಮಂಗಳೆಯ ಚರಣಗಳಂ ನೆನದು, ಬದ್ಧ ಪದ್ಮಾಸನದಿಂದೆದ್ದು ಗುಹಾದ್ವಾರಕ್ಕೆ ಬಂದು ದೂರದಲ್ಲಿ ಪಲಾಯನವಂಮಾಡುವ ಸುಮತಿಯುಂ ಛಾಯಾಗುಪ್ತನನ್ನು ನೋಡಿ ಆ ಮಹಾರಾಯನು ಅವರ ಸಮೀಪವನ್ನೈದಿ ನಿಲ್ಲಲು, ಆ ಈರ್ವರುಹಸಿವಿನಿಂದ ಆಯಾಸಪಡುವವರಿಗೆ ಅಮೃತಕಲಶ ಸಿಕ್ಕಿದಂತೆ ಅತಿ ಸಂತೋಷದಿಂದೆದ್ದು ಸಾಷ್ಟಾಂಗದಂಡ ಪ್ರಣಾಮವಂ ಮಾಡಿ ಕೈಗಳಂ ಕಟ್ಟಿಕೊಂಡು ನಿಂತಿರುವರಂಕಂಡು ಅಯ್ಯಾ ಸುಮತಿಯೆ! ನೀನು ಎನ್ನ ಸಾಮರ್ಥ್ಯವಂ ತಿಳಿದು ಈ ಪರಿ ವ್ಯಸನಾಕ್ರಾಂತನಾಗಿ ಹಂಬಲಿಸುತ ಅರಣ್ಯದಲ್ಲಿ ಬಿದ್ದು ಹೋಗುವ ನಿನ್ನಂ ನೋಡಿ ನನಗೆ ಆಶ್ಚರ್ಯವಾಯಿತು, ನೀನು ಮಹಾಧೈರ್ಯವಂತನಾದವನು ಈ ಪರಿ ದುಃಖ ಪಡಬಹುದೆ? ಎಂದು ಪ್ರಿಯೋಕ್ತಿಗಳಂ ಪೇಳುತ್ತಾ ಚಂದ್ರ ಸರೋವರವನ್ನೈದಿ ವಿಧ್ಯುಕ್ತವಾಗಿ ಸ್ನಾನವಂ ಮಾಡಿ, ಶುಭ್ರವಾದ ವಸ್ತ್ರವಂ ಧರಿಸಿ ಭಸ್ಮಧಾರಣೆಯಂ ಮಾಡಿ ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಗಳಂ ನೆರವೇರಿಸಿ, ಪರ್ಣಶಾಲೆಯ ಸಮೀಪಕ್ಕೆ ಬರುವ ಮಾರ್ಗದಲ್ಲಿ ರಾಯನು ಮಂತ್ರಿಯಂ ಕುರಿತು ಆ ಮಹಾಯೋಗಿನಿಯು ಸಮಾಧಿಯಿಂದ ಬಹಿರ್ಮುಖಳಾದಳೋ? ಇಲ್ಲವೋ? ಎಂದು ಅಪ್ಪಣೆಯಂ ಕೊಡಲು, ಆ ಮಂತ್ರಿಯು ಎಲೈ ಮಹಾನುಭಾವನೆ! ನಿನ್ನ ಮಹಿಮೆ ನಾನು ಪೇಳುವದಕ್ಕೆ ಸಮರ್ಥನಲ್ಲ, ಪರಕಾಯ ಪ್ರವೇಶವಂ ಮಾಡಿದ ಒಂದುಮುಹೂರ್ತಕ್ಕೆ ಬಹಿರ್ಮುಖಳಾಗಿ ನಿತ್ಯ ಕರ್ಮವನ್ನೆರವೇರಿಸಿ ಪರ್ಣ ಶಾಲೆಯೊಳ್ ಯೋಗಪೀಠದೋಳ್ ಕುಳಿತು ಜಪವಂ ಮಾಡುವಳಂ ಕಂಡು ಗುಹಾಂತರಾಳವಂ ಪ್ರೊಕ್ಕು ಬದ್ಧ ಪದ್ಮಾಸನದಲ್ಲಿರ್ದ ಶರೀರವಂ ನೋಡಿ ಶೀತೋಪಚಾರಗಳಂ ಮಾಡಿದರೂ ಬಹಿರ್ಮುಖವಾಗದೆ ಹತ್ತಾರು ದಿನಂಗಳು ಕಳೆಯುತ ಬರಲು ಆಗ ಎನ್ನ ಬುದ್ಧಿಗೆ ಪರಬ್ರಹ್ಮಸ್ವರೂಪಿಣಿಯಾದ ಚಿನ್ಮಯಳಾದ ಪರಾಶಕ್ತಿಯವಾದ ಕಮಲವನ್ನೆ ಧ್ಯಾನವಗೈಯ್ಯುತ್ತಿರುವ ಈ ಮಹಾಯೋಗಿನಿಯು ಮಾಡಿದ ಕಪಟಕೃತ್ಯವೆಂದು ತಿಳಿದು ತಪೋವಿಘ್ನವಾಯಿತೆಂದು ಇನ್ನು ಏನೇನು ಕೃತ್ಯಗಳಂ ಮಾಡುವಳೋ? ಎಂದು ಸಂದೇಹ

ಒಂದು ಕಡೆ, ಇದಲ್ಲದೆ ನಾವು ಮಹತ್ತಾದ ಕಾರ್ಯವಂ ಯಾತರಿಂದ ಸಾಧ್ಯವಾಡಬೇಕೋ? ಅದರಿಂದ ನಮಗೆ ಮಹದ್ವಿಪತ್ತು ಬಂದ ಬಳಿಕ ಅದು ಇಷ್ಟಸಿದ್ಧಿಗೆ ಕಾರಣವಲ್ಲಾ. ಮತ್ತು ಮಹತ್ತಾದ ವಿಪತ್ತಿಗೆ ಕಾರಣವಾದುದರಿಂ ಇಷ್ಟ ಕಾರ್ಯಸಿದ್ಧಿ ಇಲ್ಲದೆ ಅನಿಷ್ಟವು ಸಿದ್ಧಿ ಯಾಗುವದು ಎಂದು ಹೇಳಿರುವ ವಿಷಮಾಲಂಕಾರಾರ್ಥ ನಿಮಗೆ ಸರಿಬಂತು ಎಂದು ಅತಿ ದುಃಖಾಕ್ರಾಂತನಾಗಿ ಇರುತ್ತಿರ್ದನೆಂದು ವಿಜ್ಞಾಪನೆಯಂ ಮಾಡುತ್ತಿರಲಾ ಸುಮುಖಿಯುಂ ನೋಡಿ ಅಯ್ಯಾ ನೀನು ಹೇಳ್ದ ಮಾತು ಯಥಾರ್ಥವೇ ಸರಿ, ಮಹಾಯೋಗಿನಿಯು ವಶವಾದರೆ ಮರಳಿ ಇದ್ದದ್ದೆ ಖಂಡಿತವಾದರೆ ಏನೇ ವಿಪತ್ತು ಬಂದರೂ ಈ ಅರ್ಥಕ್ಕೆ ಸಂದೇಹವಿಲ್ಲಾ ಎಂದು ನುಡಿಯುತ್ತಾ ನೆಲ್ಲನೆ ಹಂಸಗಾಮಿನಿ ಸಮೀಪದಲ್ಲಿ ಪ್ರತ್ಯಕ್ಷಳಾದಳು ನೋಡಿ ದೂರದಲ್ಲಿಯೆ ಸಾಷ್ಟಾಂಗ ದಂಡ ಪ್ರಣಾಮವಂ ಮಾಡಿ ನಿಂತಿರ್ದ ರಾಜನನ್ನೀಕ್ಷಿಸಿ ನಸುನಗುತ ಸುಗಂಧರಾಜನಂ ಚೆನ್ನಾಗಿ ನೋಡಿ ಅಯ್ಯಾ ಸುಗಂಧರಾಯನೆ! ನೀನು ಕ್ಷೇಮ ವಾಗಿ ಇದ್ದೀಯಾ ನಿನ್ನ ತಂದೆಯಾದ ಸುಚರಿತ್ರರಾಯನು ಗುಣವತಿ ದೇವಿ ಮುಂತಾದ ದೇವಿಯರು ಕುಶಲವೆ? ಎಂದು ಕೇಳಿ ಮರಳಿ ಮರಳಿ ನಗುತ ಸಮೀಪದಲ್ಲಿ ಕೂತಿರು ಎಂದು ಆಜ್ಞೆಯಂ ಕೊಡಲು, ಆ ರಾಜನು ಪುನಃ ಪ್ರಣಾಮವಂ ಮಾಡುತ್ತಾ ಈ ಮಹಾಯೋಗಿನಿಯು ಎನಗೆ ಇಷ್ಟರೂಪ ದರ್ಶನವಂ ಮಾಡಿಸಿದ ಮಹೇಶ್ವರಿಯೋ ಹೊರ್ತು ಮತ್ತೊಬ್ಬಳಲ್ಲಾ ಎಂದು ನಿಶ್ಚೈಸಿ, ಆಗ ಆ ಸ್ವರೂಪವಂ ತಾಳಿ ಬಂದ ಪರಮೇಶ್ವರಿಯೇ ಈ ಯೋಗಿನೀ ಸ್ವರೂಪವಂ ಧರಿಸಿ ಎನಗೆ ಅನುಗ್ರಹವಂ ಮಾಡಿ ರಕ್ಷಿಸಬೇಕೆಂದು ಚಿತ್ತೈಸಿದಳೆಂದು ಮನದೋಳ್ ನೆನೆಯುತ್ತಾ ಭಕ್ತಿಪೂರವಶ್ಯದಿಂದ ಮೈ ಮರತು, ಯಾವ ದೇವಿಯು ಸ್ಥಾವರಜಂಗಮ ಸ್ವರೂಪಂಗಳಂ ತಾಳಿ ಆಯಾ ಸ್ವರೂಪಂಗಳಿಗೆ ಯೋಗ್ಯವಾದ ಕರ್ಮಗಳಂ ಮಾಡುತ್ತಾ ಕ್ರೀಡೆಯಂ ಮಾಡುತ್ತಿರುವ ಪರಮೇಶ್ವರಿಯ ಪಾದಂಗಳಿಗೆ ಪ್ರಣಾಮವೆಂದು ಹೇಳುತ್ತಾ ಪುನಃ ಪುನಃ ಪ್ರಣಾಮಂಗಳಂ ಮಾಡಿ ಕೂತಿರಲು. ಆ ಬಳಿಕ ಆ ಯೋಗಿನಿಯು ಅಯ್ಯಾ ರಾಯನೆ! ಅಖಂಡ ಭೂಮಂಡಲವನ್ನಾಳುವ ನೀನು ಮನುಷ್ಯರುಗಳಿಂದ ಪ್ರವೇಶವಂ ಮಾಡುವದಕ್ಕೆ ಅಶಕ್ಯವಾದ

ಈ ಇಳಾವೃತಖಂಡಕ್ಕೆ ಬರಬಹುದೆ? ಬಂದರು ಈ ದಾರುಕಾವನದಲ್ಲಿ ತಪವಂ ಮಾಡುವ ನನ್ನಂ ಬಹಿಷ್ಕರಿಸುವಂ ಮಾಡಬಹುದೆ? ಈ ಪರಿ ಸ್ವೇಚ್ಛೆಯಿಂದ ಸಂಚಾರವಂಮಾಡುವದಕ್ಕೆ ಇದೇನು ವಸಂತವನವೆಂದು ತಿಳದೆಯೊ? ಅವಲ್ಲ ಇದು ಅಘೋರತಪಸ್ಸು ಮಾಡುವ ತಾಪಸರ ತಪೋ ವನಂಗಳು, ಇಲ್ಲಿ ಸಂಚಾರವಂಮಾಡುವ ಯೋಗಿ, ಯೋಗಿನೀ ಜನಂಗಳು ಸ್ವರ್ಗಮರ್ತ್ಯಪಾತಾಳಾದಿ ಲೋಕಂಗಳಂ ಕ್ಷಣಮಾತ್ರದಲ್ಲಿಯೆ ಉತ್ಪತ್ತಿ ಲಯಂಗಳೆಂ ಮಾಡುವ ಸಾಮರ್ಥ್ಯವುಳ್ಳವರೆಹೊರತು ನಿನ್ನಾಶ್ರಯದಿಂದ ಜೀವಿಸಿ ನಿನ್ನ ಮನಸ್ಸು ಬಂದಂತೆ ನಡೆಯುವಜನರಲ್ಲ, ಪರದೇವತಾಪಾದ ಕಮಲಂಗಳಂ ಸಂಬಿದವನಾದುದರಿಂ ನೀನು ಮಾಡಿದ ತಪ್ಪುಗಳು ಒಪ್ಪ ಬೇಕಾಯಿತು, ಎಂದು ಅಪ್ಪಣೆಯಂ ಕೊಟ್ಟ ಮಹಾಯೋಗಿನಿಯ ಮಾ ತುಗಳಂ ಶಿರಸಾವಹಿಸಿ ಪರಮಭಕ್ತಿಯಿಂದ ಎದ್ದು ನಿಂತು ಅಂಜಲಿಬದ್ಧ ನಾಗಿ ತಾಯೆ ಮಹಾಯೋಗಿನಿಯೆ! ಸರ್ವಜ್ಞಳಾದ ನಿಮ್ಮಡಿಗಳಿಗೆನಾನು ವಿಜ್ಞಾಪನೆಯಂ ಮಾಡುವದಕ್ಕೆ ಶಕ್ತನಲ್ಲಾ ಆದರು ನಿಮ್ಮ ಸನ್ನಿ ಧಾನ ಮಹಿಮೆಯಿಂದ ಏನೊ ಒಂದು ಮಾತು ಬಿನ್ನೈಸಬೇಕೆಂದು ಎನ್ನ ಮನವು ಬಯಸುತಲಿದೆ, ಅಭಯವನ್ನಪ್ಪಣೆಯನ್ನಿತ್ತರೆ ಬಿನ್ನೈಸುವೆನೆಂ ದು ಪೇಳಿದ ರಾಯನ ಮಾತಂ ಕೇಳಿ ಮುಗುಳುನಗೆಯಿಂದ ಕೂಡಿ ವ್ಯ ದುವಾಗಿ ಅಯ್ಯಾ ರಾಯನೆ! ನಿನ್ನ ಮನೋಧರ್ಮವು ತಿಳಿಯಬೇಕೆಂಬ ಇ ಚ್ಛೆ ಎನಗೆ ಉಂಟೊ? ಎಂದು ಅಪ್ಪಣೆಯನ್ನಿತ್ತ ಯೋಗಿನಿಯಮಾತಂ ಕೇಳಿ ರಾಯನು ಚರಾಚರಾತ್ಮಕವಾದ ಬ್ರಹ್ಮಾಂಡಕ್ಕೆ ಚೈತನ್ಯಸ್ವ ರೂಪಿಣಿಯಾದ ಪರದೇವತೆಯೆ! ಪ್ರಾಣಿಗಳ ಪ್ರಾರಬ್ಧ ಕರ್ಮಾನುಸಾರ ವಾಗಿ ಮಾಡಿಸುವಳು ಮಾಡುವಳು ಆ ಜಗನ್ಮಾತೆಯೆ ಹೊರತು ನಿ ರ್ಗುಣನಾದ ಆ ಪರಬ್ರಹ್ಮನಿಗು ಸಾಮರ್ಥ್ಯ ಸಾಲದು ಎಂದು ವಿಜ್ಞಾಪ ನೆಯಂ ಮಾಡಲು, ಆಗ ಯೋಗಿನಿಯು ಯೋಗಿಗಳ ಮನಸ್ಸಿಗೆ ಮನೋ ಹರವಾಗಿರ್ದ ಮಾತಂ ಮನಸಿಟ್ಟು ಲಾಲಿಸಿ, ಅಯ್ಯಾ ಕಂದನೆ! ಎಂದು ಕರುಣದಿಂ ಕರದು ಕರವಂ ಪಿಡಿದು ತನ್ನ ಅಂಕದೊಳ್ ಕುಳ್ಳಿರಿಸಿ ಕೊಂಡು ಶಿರವನ್ನಾಘ್ರಾಣಿಸಿ, ನೀನು ಸಾಮಾನ್ಯ ಪುರುಷನು ಅಲ್ಲಾ, ಅದಕಾರಣ ಪುರುಷನೆಂದು ಪೇಳುತಾ ಮಗನೆ! ಪರಕಾಯಪ್ರವೇಶ ವಿದ್ಯ

ಎನಗೆ ತಿಳಿಯಿತು, ಇನ್ನು ಏನು ವಿದ್ಯೆಗಳು ಗುರುಮುಖವಾಗಿ ಇದೆ ಎಂದು ಕೇಳಲು, ಆಗರಾಯನು ತಾಯೆ ಯೋಗಿನಿಯೆ! ಅದೃಶ್ಯ ಖಡ್ಗಸಂಭನ ವಿದ್ಯೆ ಮೊದಲಾದ ವಿದ್ಯೆಗಳು ಸ್ವಲ್ಪವಾಗಿ ತಿಳಿದು ಇದ್ದೇನೆ ಎಂದು ವಿಜ್ಞಾಪನೆಯಂ ಮಾಡಲು. ಎಲೈ ಮಗುವೆ! ಎನ್ನ ದೃಷ್ಟಿಗೆ ಕಾಣದಂತೆ ಅದೃಶ್ಯವಾಗೂ ಎಂದು ಆಜ್ಞೆಯಂ ಕೊಡಲು, ಆಗರಾಯನು ಗಂಧಮಾದನ ಪರ್ವತದಲ್ಲಿ ದೇವಖಾತವೆಂಬ ಸರೋವರದಲ್ಲಿರುವ ತಾವರೆ ದಂಟಿನಲ್ಲಿ ಸೂಕ್ಷ್ಮವಾದ ಹುಳುವಾಗಿ ಇರುವದಕ್ಕಿಂತಲು ಪೂರ್ವದಲ್ಲಿಯೆ ಆ ಯೋಗಿನಿಯು ಸೂಕ್ಷ್ಮಶರೀರಳಾಗಿ ಪ್ರವೇಶವಗೈದು ಇಲ್ಲಿಯು ಏನಯ್ಯಾ ಸುಗಂಧರಾಯನೆ! ಎಂದು ಕೇಳುತ್ತಾ, ನೀನು ದೃಶ್ಯನಾದೆಯಲ್ಲಾ ಎಂದು ಪೇಳಲು, ಆ ರಾಯನು ನಾಚಿಗೆಯಿಂದೊಡಗೂಡಿ ಪರ್ಣಶಾಲೆಯೋಳ್ ಯಥಾಪ್ರಕಾರವಾಗಿ ಕುಳಿತು ತಾಯೆ! ನಿನ್ನ ಮಹಿಮೆ ನಾನೆಂತು ಪೇಳಲೀ ಎಂದು ನುಡಿಯುತ್ತಾ ಅಡಿಗಳಿಗೆ ನಮಿಸುತ್ತಿರುವ ರಾಯನಂ ನೋಡಿ ಎಲೈ ಪುತ್ರನೆ! ಇನ್ನು ಖಡ್ಗಸ್ತಂಭನ ವಿದ್ಯೆಯಂ ನೋಡಬೇಕೆಂದು ಪೇಳಲು, ಆ ರಾಯನು ಸುಮತಿಯ ಮುಖವಂ ನೋಡಿ ಅಯ್ಯಾ ನೀನು ಚಂದ್ರಹಾಸದಿಂದ ಎನ್ನ ಶರೀರವಂ ನಾನಾ ಪ್ರಕಾರವಾಗಿ ಕಡಿಯಬೇಕೆಂದು ಪೇಳಲು, ತತ್ಕ್ಷಣದಲ್ಲಿಯೆ ಮಂತ್ರಿಯು ಚಂದ್ರಹಾಸದಿಂದಕಡಿದರು ಗುಂಡುಕಲ್ಲನ್ನು ಕಡಿದಂತೆ ಖಣಿರೆನ್ನುವ ಶಬ್ದವುಂಟಾಗಿ ಶರೀರ ಯಥಾಪ್ರಕಾರವಾಗಿ ಇರುವದಂ ನೋಡಿ ಎಲೈ ಪುತ್ರನೆ! ಈ ವಿದ್ಯೋಪದೇಶವಂ ಮಾಡಿದವರು ನಿಮ್ಮಂ ಸಂತೋಷವಂ ಪಡಿಸಿ ದ್ರವ್ಯವಂ ಸಂಪಾದನೆ ಮಾಡುವ ನಿಮಿತ್ತದಿಂದ ಪೇಳಿದರು, ಆದ್ದರಿಂದ ಈ ಗುರುವು ಚೌರ್ಯಗುರುವೆಂದು ಹಿರಿಯರು ಪೇಳುವರು, ಎಂದು ನುಡಿಯುತ ಇನ್ನು ನಾನು ಅದೃಶ್ಯವಾಗುವೆನು, ನನ್ನಂ ಕಾಣಿಸಿಕೊಂಡರೆ ನಿನ್ನ ವಿದ್ಯಾಸಾಮರ್ಥ್ಯವೆ ಸರಿ ಎಂದು ನುಡಿಯುವ ಸಮಯದಲ್ಲಿಯೆ ಅದೃಶ್ಯವಾಗಲು, ಆಗ ರಾಯನು ಬ್ರಹ್ಮಾಂಡ ಕಟಾಹದಲ್ಲಿದ್ದ ಸ್ಥಾವರ ಜಂಗಮಾತ್ಮಕವಾದ ಪ್ರಾಣಿಮಾತ್ರದಲ್ಲಿ ಹುಡುಕುತ್ತಾ ಎಲ್ಲಿಯು ಕಾಣದೆ ಬೆಪ್ಪಾಗಿರ್ದ ಪರ್ಣಶಾಲೆಯೋಳ್ ಖಿನ್ನನಾಗಿ ನಿಂತಿರ್ದ ಈ ಕ್ಷತ್ರಿಯ ಪಟುವಿನ ಮುಂದುಗಡೆಯಲ್ಲಿ ಇದ್ದ ಯೋಗಪೀಠದೋಳ್ ಕುಳಿತು, ಯೋಗಿನಿಯು ಏನಯ್ಯಾ

ರಾಯನೆ! ಎಂದು ಹೇಳಲು, ಆಗ ರಾಯನು ಮಹದಾಶ್ಚರ್ಯವನ್ನೈದಿ ಸ್ತಂಭದಂತೆ ನಿಂತಿರ್ದ ಕ್ಷತ್ರಿಯನ ಮುಖವಂ ನೋಡಿ ಎಲೈ ಬಾಲಕನೆ! ನಿನ್ನ ತೀಕ್ಷ್ಣವಾದ ಚಂದ್ರಹಾಸವೆಂಬ ಖಡ್ಗದಿಂದ ನನ್ನ ಶರೀರವಂ ಛೇದಿಸು ಎಂದು ಹೇಳಲು, ಆಗ ರಾಯನು ಚಂದ್ರಹಾಸವಂ ಕರದಲ್ಲಿ ಹಿಡಿದು ಯೋಗಿಸಿಯ ಶರೀರವಂ ಖಂಡಿಸಿದರು ತಡೆಯಿಲ್ಲದೆ ಆ ಕಾಶದಲ್ಲಿ ತಿರಿಗಿಸಿದಂತೆ ಇರಲು, ಆ ಮಹಾರಾಯನು ಖಡ್ಗವಂ ಬಿಸುಟು, ತಾಯೆ! ನಿನ್ನ ಮಹಿಮೆಯನ್ನ ಬಾಲಕನಾದ ನಾನು ಏನೆಂದು ಸ್ತುತಿಸಲಿ ಎಂದು ಹೇಳಿ, ವಿಸ್ಮಯನಾಗಿ ನಿಂತಿರ್ದ ಕ್ಷತ್ರಿಯು ಹುಡಗನಂ ನೋಡಿ ಎಲೈ ಪುತ್ರನೆ! ಬಾ ಎಂದು ಪ್ರೇಮದಿಂ ಸಮಯೋಚಿತವಾದ ಮಾತುಗಳಿಂದ ಸನ್ಮಾನಿಸಿ ಸಮೀಪದಲ್ಲಿ ಕುಳ್ಳಿರಿಸಿ, ಸುಮತಿ ಛಾಯೆಯಾಗುವ್ವರನ್ನು ಅತ್ತಲಿ ಕುಳ್ಳಿರಿಸಿ ಎಂದು ಕಟ್ಟು ಮಾಡಿ,ಎಲೈ ಪುತ್ರನೆ! ನೀನು ಮುಖ್ಯಾಧಿಕಾರಿ ಎಂದು ತಿಳಿದು ನಿನಗೆ ಯೋಗಶಾಸ್ತ್ರವಂ ಸಮರ್ಪಕವಾಗಿ ಹೇಳುತಲಿದ್ದೇನೆ ಸಾವಧಾನಚಿತ್ತನಾಗಿ ತಿಳಿದು ಕೊಳ್ಳು ಎಂದು ಅಪ್ಪಣೆಯಂ ಕೊಟ್ಟು ಪರಮೇಶ್ವರಿಯ ಪಾದಂಗಳಂ ಸ್ಮರಿಸಿ ಎಲೈ ಪುತ್ರನೆ! ಯೋಗಂಗಳು ನಾಲ್ಕು ವಿಧವಾಗಿ ಇರುವವು, ಮಂತ್ರಯೋಗ ಹಠಯೋಗ ಲಯ ಯೋಗ ರಾಜಯೋಗವೆಂದು. ಆ ನಾಲ್ಕರಲ್ಲಿ ಮಂತ್ರಯೋಗವು, ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಪಂಚಾಕ್ಷರ, ಷಡಕ್ಷರ, ಅಷ್ಟಾಕ್ಷರ, ನವಾಕ್ಷರ, ದ್ವಾದಶಾಕ್ಷರ, ಪಂಚ ದಶಾಕ್ಷರಗಳಿಂದ ಯುಕ್ತವಾದ ಮಹಾ ಮಂತ್ರಂಗಳು ಅನೇಕವಾಗಿರ್ಪವು, ಆ ಅನೇಕ ಮಂತ್ರಗಳಲ್ಲಿ ಮುಖ್ಯವಾದ ಏಕಾಕ್ಷರಿಯು ಪ್ರಣವ ಸ್ವರೂಪವಾಗಿರ್ಪುದು, ಆ ಪ್ರಣವವು ಮೂರು ಅಕ್ಷರಗಳಿಂದ ಯುಕ್ತವಾದರೂ ಆ ಅಕ್ಷರಂಗಳೆ ಸೂರ್ಯಮಂಡಲ, ಚಂದ್ರಮಂಡಲ, ವಹ್ನಿಮಂಡಲವೆಂಬ ಮಂಡಲತ್ರಯಂಗಳು, ನಾದಬಿಂದು ಕಳಾಸ್ವರೂಪಂಗಳು ಪರಬ್ರಹ್ಮ ಸ್ವರೂಪವೆಂದು ಹೇಳುವರು. ಬ್ರಹ್ಮವಾದಿಗಳು ಎಲೈ ಮಗನೆ! ಈ ಏಕಾಕ್ಷರವನ್ನೆ ಯತೀಶ್ವರರು ಫಲವನ್ನಪೇಕ್ಷಿಸದೆ ಹನ್ನೆರಡು ಸಹಸ್ರ ಜಪವಂ ಮಾಡಿ ಪರಬ್ರಹ್ಮನಲ್ಲಿ ಐಕ್ಯಮಂ ಪೊಂದುವರು ಈ ಪರಿಯಾದ ಅನೇಕ ಮಂತ್ರಂಗಳನ್ನು ಸಂಸಾರಿಕ ಜನರು ಫಲವನ್ನಪೇಕ್ಷಿಸಿ ಉಪಾಸನೆಯಂ ಮಾಡುವುದೆ ಮಂತ್ರ

ಯೋಗವೆಂದು ವೇದಶಿರಸ್ಸುಗಳು ಹೇಳುವವು, ಎಲೈ ಪುತ್ರನೆ! ಹಠಯೋಗವನ್ನು ನಿರೂಪಿಸುತಲಿದ್ದೇನೆ ಕೇಳು—ಹಠವೆಂದರೆ ವಾಯುವನ್ನು ವಶವಂ ಮಾಡುವದು, ಆಹಾರಕ್ಕೆ ಯಮನಿಯಮ, ಆಸನ, ಪ್ರಾಣಾಯಾಮ ಪ್ರತ್ಯಾಹಾರ, ಧ್ಯಾನ ಧಾರಣ, ಸಮಾಧಿಗಳೆಂದು ಎಂಟು ಅಂಗಗಳು, ಆ ಎಂಟರಲ್ಲಿ ಯಮವೆಂದರೆ—ಬಾಹ್ಯೇಂದ್ರಿಯ ವ್ಯಾಪಾರಂಗಳಂ ಬಿಟ್ಟು ಪದಾರ್ಥರೂಪಂಗಳಾದ ವಿಷಯಂಗಳಲ್ಲಿ ವಿರಕ್ತಿಯೇ ಯಮವೆಂದು ತಿಳಿಯಬೇಕು. ಸಂಸಾರವಂ ಬಿಟ್ಟು ಏಕಾಂತವಾದ ಗುಹಾಂತರಾಳದಲ್ಲಿ ವಾಸವಂ ಮಾಡಿ ಸಂಸಾರಿಕ ಜನಗಳ ಸಂಗವಂ ಮಾಡದೆ ಶರೀರ ಸೌಖ್ಯವಂ ವರ್ಜಿಸಿ ಯೋಗಾಭ್ಯಾಸದಲ್ಲಿ ಆಸಕ್ತಿಯಾವದೋ? ಅದೇ ನಿಯಮವೆಂದು ನಿರ್ಧಾರಣಾಯಂ ಮಾಡು. ಕೃಷ್ಣಾಜಿನ, ವ್ಯಾಘ್ರಾಜಿನ, ಕುಶಾಸನ ಮೊದಲಾದ ಆಸ್ತರಣಗಳಿಂದ ಕೂಡಿ ಅರುವತ್ತು ನಾಲ್ಕು ಆಸನಂಗಳಂ ಅಭ್ಯಾಸವಂ ಮಾಡಿ ಅದರಲ್ಲಿ ಮುಖ್ಯವಾದ ಸಿದ್ಧಾಸನದಲ್ಲಿ ಕುಳಿತು ಅಭ್ಯಾಸವಂ ಮಾಡುವದೆ ಆಸನವೆಂದು ಹೇಳುವರು, ಎಡದಪಾರ್ಶ್ವದಲಿರುವ ನಾಸಾರಂಧ್ರವು ಚಂದ್ರನಾಡಿ ಎಂದು ಇಳಾ ಎಂದು ಹೇಳ್ವರು, ಆ ನಾಡಿಯಿಂದ ವಾಯುವಂ ಸೇದುವದು ಪೂರಕವು, ಆ ವಾಯುವನ್ನು ಶರೀರದಲ್ಲಿ ನಿಲ್ಲಿಸುವದೆ ಕುಂಭಕವು, ಬಲದ ಪಾರ್ಶ್ವದಲ್ಲಿದ್ದ ಪಿಂಗಳಾ ಎಂದು ಹೆಸರುಳ್ಳ ಸೂರ್ಯನಾಡಿಯಿಂದ ಕುಂಭಕದಲ್ಲಿ ನಿಲ್ಲಿಸಿದ ವಾಯುವನ್ನು ಹೊರಕೆ ಬಿಡುವದೆ ರೇಚಕವು, ಮತ್ತು ಸೂರ್ಯನಾಡಿಯಿಂದ ಪೂರಕವಂ ಮಾಡಿ ಕುಂಭಕದಲ್ಲಿ ನಿಲ್ಲಿಸಿ, ಚಂದ್ರನಾಡಿಯಿಂದ ವಾಯುವನ್ನು ಸವ್ಯ ಅಪಸವ್ಯವಾಗಿ ಪ್ರಣವಸ್ಮರಣಪೂರ್ವಕವಾಗಿ ರೇಚಕವಂ ಮಾಡುತ ಪ್ರಣವವನ್ನು ಎಷ್ಟು ಸರ್ತಿ ಎಣಿಸುತ್ತಾ ಪೂರಕವಂ ಮಾಡಿದರೆ ಅದಕ್ಕೂ ಎರಡರಷ್ಟು ಕುಂಭಕದಲ್ಲಿ ವಾಯುವಂ ನಿಲ್ಲಿಸಿ ಅಭ್ಯಾಸವಗೈವದೆ ಪ್ರಾಣಾಯಾಮವೆನಿಸುವದು. ಉಪ್ಪು, ಹುಳಿ, ಖಾರ, ಶೈತ್ಯ ಮುಂತಾದ ಸಂಗಗಳಂ ವರ್ಜಿಸಿ. ಅನ್ನವು ಅರ್ಧಗ್ರಾಸ, ಹಾಲು ತುಪ್ಪ ಮಿಶ್ರವಂ ಮಾಡಿ ಕಾಲುಗ್ರಾಸ ಉದಕಪಾನ ಕಾಲುಗ್ರಾಸ, ಈ ಪರಿ ಆಹಾರ ನಿಯಮವಂ ಮಾಡಿ, ಪ್ರಾಣಾಯಾಮವಂ ಮಾಡುವದೆ ಪ್ರತ್ಯಾಹಾರವೆನಿಸುವದು. ಮೂಲಸ್ಥಾ

ನವೆ ಮೂಲಾಧಾರಚಕ್ರ, ಅದರ ಮೇಲ್ಗಡೆಯಲ್ಲಿ ಇರ್ದ ಸ್ವಾಧಿಷ್ಠಾನ ಚಕ್ರ, ನಾಭಿಸ್ಥಾನವೆ ಮಣಿಪೂರಕಚಕ್ರ, ಹೃದಯವೆ ಅನಾಹತಚಕ್ರ, ಕಂಠಸ್ಥಾನವೆ ವಿಶುದ್ಧ ಚಕ್ರ, ಭ್ರೂಯುಗಗಳ ಮಧ್ಯದಲ್ಲಿ ತೋರುವದೆ ಆಜ್ಞಾಚಕ್ರ;ವಾಯುವಿಗೆ ಸಂಚಾರ ಮಾಡುವದಕ್ಕೆ ಯೋಗ್ಯವಾಗಿರುವ ಈ ಷಡಾಧಾರ ಚಕ್ರಂಗಳಿಗೆ ಕ್ರಮವಾಗಿ ಗಣೇಶ, ಬ್ರಹ್ಮ, ವಿಷ್ಣು, ರುದ್ರ, ಮಹೇಶ್ವರ, ಸದಾಶಿವರು ಅಧಿದೇವತೆಗಳು; ಪೃಥಿವಿ, ಉದಕ, ತೇಜಸ್ಸು, ವಾಯುವು, ಆಕಾಶ, ಮನಸ್ಸು ಈ ಆರು ತತ್ವಂಗಳು; ಆ ರು ಚಕ್ರಂಗಳಲ್ಲಿ ಕ್ರಮವಾಗಿ ಧ್ಯಾನಿಸುತ್ತಾ ಈಗ ಪೇಳ್ದ ಚಕ್ರಂ ಗಳ ಮಧ್ಯಂಗಳಲ್ಲಿ ಇರುವ ಮಣಿಪೂರಕ ಚಕ್ರದಲ್ಲಿ ಅಗ್ನಿಮಂಡಲ ವನ್ನು ಹೃದಯಸ್ಥಾನವಾದ ಅನಾಹತಚಕ್ರದಲ್ಲಿ ಸೂರ್ಯಮಂಡಲವನ್ನು ಭ್ರೂಮಧ್ಯಸ್ಥಾನವಾದ ಆಜ್ಞಾಚಕ್ರದೋಳ್ ಚಂದ್ರಮಂಡಲವನ್ನು ಪ್ರತ್ಯೇಕವಾಗಿ ಅಭ್ಯಾಸವಂ ಮಾಡುವದೆ ಧ್ಯಾನವೆಂದು ನುಡಿಯುವರು. ಈಗ ಪೇಳ್ದ ಆರು ಅಂಗಗಳಿಂದ ವಾಯುವಂ ವಶಮಾಡಿದ ಬಳಿಕ ಮೂ ಲಾಧಾರದಲ್ಲಿ ವಾಸವಂ ಮಾಡಿರ್ದ ಅಪಾನವಾಯುವಿನಿಂದ ಕುಂಡಲಿಯೆಂ ಬ ಸರ್ಪವಂ ದಂಡಿಸಿ ಹೆಡೆಯನ್ನೆತ್ತಿ ಇಡಾ ಪಿಂಗಳಾ ಎಂಬ ನಾಡಿಗಳಂ ನೊಂಕದ ವಾಯುವನನ್ನು ಈಎರಡರ ಮಧ್ಯದೋಳ್ ಇರ್ದಸುಷುಮ್ನಾ ನಾಡಿಯ ಸೂಕ್ಷ್ಮಮಾರ್ಗದೊಳಿಪ್ಪೊಗಿಸಿ, ಆ ಮೇಲೆ ಮೆಲ್ಲಗೆ ಮೂಲಾ ಧಾರ ಚಕ್ರವಂ ದಾಟಿಸಿ, ಬಳಿಕ ಸ್ವಾಧಿಷ್ಠಾನ ಚಕ್ರವನ್ನೇರಿಸಿ, ಅನಂ ತರ ಮಣಿಪೂರಕ ಚಕ್ರದಲ್ಲಿರುವ ಸಮಾನವಾಯುವಿನ ಸಹವಾಸವಂ ಮಾಡಿಸಿ, ಆ ಬಳಿಕ ಅನಾಹತಚಕ್ರವಂ ಸೇರಿಸಿ, ಅಲ್ಲಿ ವಾಸವಂ ಮಾಡಿ ರ್ದ ಪ್ರಾಣವಾಯುವಿನಿಂದ ಸ್ನೇಹವಂ ಬೆಳಸಿ ಅಲ್ಲಿಂದ ಮುಂದುಗಡೆ ಯಲ್ಲಿ ಇದ್ದ ವಿಶುದ್ಧಚಕ್ರವಂ ಸೇರಿಸಿ, ಆ ಸ್ಥಳಕ್ಕೆ ಗೊತ್ತಾಗಿರುವ ಉದಾನವಾಯುವಿನಿಂದೊಡಗೂಡಿಸಿ, ಅಲ್ಲಿಂದ ಪೊರಡಿಸಿ ಮಾರ್ಗದಲ್ಲಿ ಬರುವ ಸಮಯದೋಳ್ ವ್ಯಾನವಾಯುವಿನ ಆಲಿಂಗನವಗೈಸಿ, ಈ ಪರಿ ಒಟ್ಟಾಗಿ ಪಂಚಪ್ರಾಣಂಗಳಂ ಬೆರಸಿ ಆಜ್ಞಾಚಕ್ರವನ್ನೈದಿಸಿ, ಅಂತರಿಕ್ಷ ರದಲ್ಲಿರುವ ದೀಪದಂತೆ ಅಲ್ಲಿ ಚಲನವಂ ಮಾಡದೆ ಸ್ಥಿರವಾಗಿ ನಿಲ್ಲಿಸಿ, ಅಖಂಡತೇಜೋಮಂಡಲದಲ್ಲಿ ಐಕ್ಯವಗೊಳಿಸುವದೆ ಧಾರಣೆ ಎಂಬು ನಿಶ್ಚ

ಯಮಂ ಮಾಡಿ ಇರುವದು. ಎಲೈ ಕಂದನೆ! ಈಗ ಹೇಳಿದ ಮೇರೆಗೆ ಆ
ಷಟ್ಚಕ್ರದಲ್ಲಿಯೂ ಆನಂದವನನುಭವಿಸುವದೆ ಸಮಾಧಿ; ಈ ಸಮಾಧಿಯ
ನ್ನು ಅಭ್ಯಾಸಬಲದಿಂದ ದೃಢವಾಗಿ ನಿಲ್ಲಿಸಿದವನೆ ಸಿದ್ಧಪುರುಷನು, ಆತ
ನಿಗೆ ಅಣಿಮಾದಿ ಸಿದ್ಧಿಗಳು ಅನಾಯಾಸದಿಂದಲೆ ಸಿದ್ಧಿಯಾಗುವವು, ನಿಗ್ರ
ಹವನ್ನು ಅನುಗ್ರಹವನ್ನು ಮಾಡುವದಕ್ಕೆ ಸಮರ್ಥನು. ಭೂತಭವಿ
ಷ್ಯದ್ವರ್ತಮಾನ ಕಾಲಂಗಳಂ ತಿಳಿಯುವನು. ಆ ಮಹಾನುಭಾವನೆ ಸ್ಥಾ
ವರ ಜಂಗಮಾತ್ಮಕವಾದ ಪ್ರಾಣಿಗಳ ವ್ಯಾಪಾರಂಗಳಂ ಕರತಲದಲ್ಲಿ
ಇರುವಂತೆ ಕಾಣುವನು. ಇಂತೆಂದು ಹೇಳ್ದ ಮಹಾಯೋಗಿನಿಯ ಯೋ
ಗಾಭ್ಯಾಸ ಪ್ರಕಾರಂಗಳಂ ಕೇಳಿ ವಿಸ್ಮಯಚಿತ್ತನಾಗಿ ಮರಳಿ ಮರಳಿ
ಪ್ರಣಾಮಂಗಳಂ ಮಾಡುತ್ತಾ ಎಲೈ ತಾಯೆ! ನೀವು ಅಪ್ಪಣೆಯಂ ಕೊ
ಟ್ಟ ಹಠಯೋಗವು ಬಹುಕಾಲಕ್ಕೆ ಸಾಧ್ಯವಾಗುವದು ಮಹಾ ದುರ್ಘ
ಟವಾಗಿ ತೋರ್ಪುದು. ಅದಲ್ಲದೆ ಈ ಹಠಯೋಗದಿಂದ ಆಗತಕ್ಕ ಫಲ
ಗಳು ಅಣಿಮಾದಿ ಸಿದ್ಧಿಗಳ ಹೊರತು ಮುಕ್ತಿ ಬರಲಾರದು. ಇಂತುಮ
ಲ್ಲದೆ ಮೊದಲು ಅಪ್ಪಣೆಯಂ ಕೊಟ್ಟ ಮಂತ್ರಯೋಗ, ಹಠಯೋಗ, ಲಯ
ಯೋಗಂಗಳ ಸ್ವರೂಪಂಗಳು ಅವರಿಂದಾಗುವ ಫಲಂಗಳು, ಎನ್ನ ಚಿತ್ತಕ್ಕೆ
ತಿಳಿಯಬಂತು, ತಾಯೆ! ಮಹಾಯೋಗಿನಿಯೆ ಶಿಷ್ಯನಾದ ನನ್ನಲ್ಲಿ ಕರುಣ
ವಿಟ್ಟು ರಾಜಯೋಗವಂ ಎನಗೆ ಉಪದೇಶವಂ ಮಾಡಿ ಕೃತಾರ್ಥನಂ ಮಾ
ಡಬೇಕೆಂದು ಸಾಷ್ಟಾಂಗದಂಡಪ್ರಣಾಮವಂ ಮಾಡಿ ನಿಂತಿರ್ದ ಸುಗಂಧ
ರಾಯನಂ ನೋಡಿ ಆನಂದಭರಿತಳಾಗಿ ಇರುತ್ತಿರಲು, ಆಸಮಯದಲ್ಲಿ ರಾ
ಯನು ಪರ್ಣಶಾಲೆಯ ಬಾಗಿಲೊಳ್ ಕಂಡೂ ಕಾಣದೇ ಇರುವಂತೆ ಕಾ
ದಿರುವ ಸುಮತಿಯು ಹಸ ದಲ್ಲಿರುವ ದ್ರಾಕ್ಷೆ ಮುಂತಾದ ಫಲಂಗಳಂ ಮ
ತ್ತು ಅಪೂರ್ವವಾದ ಮಂದಾರ ಕುಂದಮಲ್ಲಿಕಾ ಪುಷ್ಪಂಗಳಂ ನೋಡಿ
ಅತಿ ಜಾಗ್ರತೆಯಿಂದೆದ್ದು ಆ ಫಲಪುಷ್ಪಂಗಳಂ ಯೋಗಿನಿಯ ಚರಣಂಗಳಿ
ಗೆ ಸಮರ್ಪಣೆಯಂ ಮಾಡಿ ನಾನು ಧನ್ಯನಾದೆನೆಂದು ನುಡಿಯುತ್ತಾ ದಂಡ
ಪ್ರಣಾಮವಂ ಮಾಡಿ ನಿಂತಿರ್ದ ರಾಯನಂ ನೋಡಿ ಆನಂದಪರವಶಳಾಗಿ ಎಲೈ
ಪುತ್ರನೆ! ಪದ್ಮಿನೀವಲ್ಲಭನಾದ ಸೂರ್ಯನು ಪದ್ಮಿನೀವಲ್ಲಭನಾಗಬೇಕೆಂದು ಎಣಿ
ಸಿದನಿನ್ನಂ ಕಾಣಬೇಕೆಂದು ಬಂದವನನ್ನು ಪೇಕ್ಷಿಸಬಾರದು. ಆ ಮಹಾನು

ಭಾವನಾದ ಸೂರ್ಯನಿಗೆ ಪ್ರೀತಿಕರವಾದ ರಕ್ತೋತ್ಪಲಗಳಿಂದ ಅರ್ಘ್ಯ
ವಂ ಕೊಟ್ಟು ಸೌರಮಂತ್ರದಿಂ ಸ್ತುತಿಸಿ ಕಳುಹಿಸು, ಎಂದು ಅಪ್ಪಣೆ
ಯಂ ಕೊಟ್ಟ ಯೋಗಿನಿಯ ಮಾತುಗಳಂ ಲಾಲಿಸಿ, ರಾಯನು ತಾಯೆ
ಯೋಗಿನಿಯೆ! ನೀವು ಮಧ್ಯಾಹ್ನ ಸಮಯೋಚಿತವಾದ ಕರ್ಮಗಳಂ ನೆರ
ವೇರಿಸಿ ಬರಬಹುದೆಂದು ವಿಜ್ಞಾಪನೆಯಂ ಮಾಡಲಾಗ ರಾಯನ ಹಸ್ತ
ಲಾಘವದಿಂದೆದ್ದು ಚಂದ್ರಸರೋವರ ಸಮೀಪಕ್ಕೆ ಬರುತಿರುವ ಯೋ
ಗಿನಿಯಂ ನೋಡಿ ಅತ್ತಲಿತ್ತಲಿರುವ ಯೋಗಿಗಳು ಯೋಗಿನೀ ಜನರು ಷ
ಣ್ಮುಖನಿಂದೊಡಗೂಡಿ ಬರುವ ಸರ್ವಮಂಗಳೆಯೋ? ಅಲ್ಲದೆ ಜಯಂತನ
ಕರವಂ ಪಿಡಿದು ಬರುವ ಶಚೀದೇವಿಯೋ? ಇದಲ್ಲದೆ ಮನ್ಮಥನ ಹಸ್ತಲಾ
ಘವದಿಂ ಬಿಜಯಗೈಯುವ ಮಹಾಲಕ್ಷ್ಮಿಯೋ? ಎಂಬಂತೆ ಈರ್ವರು
ಪ್ರತ್ಯಕ್ಷವಾದರು ಎಂದು ಆಶ್ಚರ್ಯವನ್ನೈದಿರುವರಂ ಆನಂದದಿಂ ನೋಡು
ತ್ತಾ ಇಪ್ಪತ್ತೈದು ತತ್ವಂಗಳಂ ವಿಭಾಗವಂ ಮಾಡಲಾಗಿ ಮಿಕ್ಕಿದ್ದ ಆತ್ಮ
ತತ್ವವೆಂದು ಆಡುವ ಮಾತುಗಳಂ ಲಾಲಿಸುತ್ತಾ ನಮಸ್ಕಾರವಮಾಡುವರಂ
ನಾನಾಪ್ರಕಾರವಾಗಿ ಆಶೀರ್ವಚನಗಳಂ ಮಾಡುತಾ ಚಂದ್ರಸರೋವರದ
ಸಮೀಪಕ್ಕೆ ಬಂದು ಒಂದು ಕಡೆಯೋಳ್ ಮಹರ್ಷಿಗಳು ಮಹನ್ಯಾಸ
ಪೂರ್ವಕವಾಗಿ ಮಹಾದೇವನಿಗೆ ಅಭಿಷೇಚನವಂ ಮಾಡುವರು, ಒಂದು
ಕಡೆಯೋಳ್ ಸಾಮಗಾನದಿಂದ ಸಾಂಬಶಿವನಂ ಸ್ತುತಿಯುಗೈಯುವರು.
ಮತ್ತೊಂದು ಪ್ರದೇಶದಲ್ಲಿ ಸಹಸ್ರನಾಮಗಳಿಂದ ನಾರಾಯಣರ ಸ್ಮರಿ
ಸುವರು, ವೇದಾರ್ಥಗಳನ್ನು ವಿಶದವಾಗಿ ಶಿಷ್ಯರಿಗೆ ಶಿಕ್ಷೆಯಂ ಮಾಡು
ವರು. ಸೌರಮಂತ್ರಗಳಿಂದ ಸೂರ್ಯನಂ ಸ್ತುತಿಸುವರು ಕೆಲವರು, ಮ
ತ್ತು ಕೆಲವರು ಪ್ರಕೃತಿ ಪುರುಷನಿಗೆಭೇದ ಅಭೇದ ವಿಚಾರಗಳಂ ಮಾಡು
ತ್ತಾ ತೆರಳ ಬರುವ ಯೋಗಿನಿಯಂ ನೋಡಿ ತಾಯೆ ಮಹಾಯೋಗಿನಿಯೆ!
ದಯಮಾಡಬೇಕೆಂದು ಪೇಳ್ವ ಮಾತುಗಳಂ ಮನಸಿಟ್ಟು ಕೇಳಿ ಬಹು
ಮಾನಸ ಸರೋವರದ ತೀರವನ್ನೈದಿ ಸ್ನಾನವಂ ಮಾಡಿ ಕಾಷಾಯವಸ್ತ್ರ
ವಂ ಧರಿಸಿ ಪಂಚಬ್ರಹ್ಮ ಮಂತ್ರಗಳಿಂದ ಭಸ್ಮಧಾರಣೆಯಂ ಮಾಡಿ
ಜಟಾಮಂಡಲದಲ್ಲಿದ್ದ ಜಪಮಾಲೆಯಂ ಹಸ್ತದಿಂ ಪಿಡಿದು ಪಂಚದಶಾ
ಕ್ಷರೀ ಮಂತ್ರವಂ ಧ್ಯಾನಿಸುತ್ತ ಪರವಶಳಾಗಿ, ಆ ಮಹಾಯೋಗಿನಿಯು

ರಾಮನೆಂಬೊಡಿ ಜಸುಂತನೆಂಬ ಭ್ರಮೆಯಿಂದ ಜಯ ಎಂದು ಹೇಳಿ, ಜಾಗ್ರತೆಳಾಗಿ ಮನದೊಳ್ ಇಂದ್ರನು ಮನುಷ್ಯ ಲೋಕದಲ್ಲಿ ವೃಷ್ಟಿ ದಪನಾಪಾಗ್ಯ ಅಂಗಾಂಗ ಸೌಂದರ್ಯವು ಇಂಗಿತ ವ್ಯಾಪಾರವು ಸಹ ಸ್ವರ್ಗದಲ್ಲಿ ಇದ್ದಂತೆ ಕಾಣಿಸಿದ್ದರಿಂದ ಭ್ರಮೆಯನ್ನೈದಿದನೆಂದು ನಸುನಗುತ ಅಯ್ಯಾ ಮಗನೆ! ನಿನ್ನ ನಿತ್ಯಕರ್ಮಾನುಷ್ಠಾನಂಗಳು ತೀರಿತೋ ಇಲ್ಲವೋ, ಕಾಲಾತೀತವಾಯಿತು ಜಾಗ್ರತೆಯಿಂದೆದ್ದು ಬಾ ಎಂದು ಹೇಳಲು, ಆಗ ರಾಯನು ಕಿರೀಟಕುಂಡಲಂಗಳು ಸುಮತಿಯ ಕೈಯ್ಯಲ್ಲಿಟ್ಟು ಸಮೀಪಕ್ಕೆ ಬಂದು ತಾಯೆ! ನಾನು ಸುಗಂಧವರ್ಮನೆಂದು ಗೋತ್ರಾಭಿವಂದನೆಯಂ ಮಾಡಿ ಹಸ್ತಲಾಘವಂ ಕೊಟ್ಟು ಪರ್ಣಶಾಲೆಯ ಸಮೀಪಕ್ಕೆ ಕರಮಕೊಂಡು ಬಂದು ಪಾದಪ್ರಕ್ಷಾಳನವಂ ಮಾಡಿ ಶೇಷತೀರ್ಥವಂ ಶಿರಸಾವಹಿಸಿ, ರಾಯನು ತನ್ನ ಉತ್ತರೀಯ ವಸ್ತ್ರದಿಂದ ಪಾದಂಗಳಂ ಒರಸಿ, ಯೋಗಪೀಠದೊಳ್ ಕುಳ್ಳಿರಿಸಿ ಸಮೀಪದಲ್ಲಿ ನಿಂತಿರಲು, ಆಗ ಆ ಬೃಂದಾರಕಾಯೋಗಿನಿಯು ರಾಯನ ಭಕ್ತಿ ವಿಶ್ವಾಸಂಗಳಿಗೆ ಆನಂದವನ್ನೈದಿ ಅರೆ ಕಣ್ಣುಗಳಿಂದ ಅರ್ಧಕ್ಷಣ ಧ್ಯಾನವಂ ಮಾಡಿ, ಅಯ್ಯಾ ಸುಗಂಧಪುತ್ರನೆ! ಬಾ ಎಂದು ಪ್ರೀತಿಪುರಸ್ಸರವಾಗಿ ಕರವಂ ಪಿಡಿದು ಕುಶಾಸನದಲ್ಲಿ ಕುಳ್ಳಿರಿಸಿ, ಅಯ್ಯಾ ನಿನ್ನ ವೈರಾಗ್ಯ ಭಾಗ್ಯ ನಾನೆಂತು ಹೇಳಲಿ ಮಹಾನುಭಾವರಾದವರು ಸಹ ಈ ಹಠಯೋಗ್ಯಕ್ಕೆ ಮೋಹಿಸಿ, ಅಣಿಮಾದಿ ಸಿದ್ಧಿಗಳಂ ಬಯಸುವರು, ನೀನು ಈ ಸಿದ್ಧಿಗಳಂ ತುಚ್ಛೀಕರಿಸಿ ಪರಬ್ರಹ್ಮ ಸಾಕ್ಷಾತ್ಕಾರವಂ ಮಾಡಿಸುವ ರಾಜಯೋಗವನ್ನೇ ಅಪೇಕ್ಷಿಸುತಲಿರ್ದೆಯೆ, ನಿನ್ನ ವೈರಾಗ್ಯವು ಯೋಗಿಗಳಿಗೂ ಬರಲಾರದು, ಇಂತೆಂದು ಹೇಳುತ್ತಾ ಸಾವಧಾನಚಿತ್ತದಿಂ ಕೇಳು, ಈ ಯೋಗಮಾರ್ಗ ಅತಿ ಸೂಕ್ಷ್ಮವಾದದ್ದು ಎಂದು ನುಡಿಯುತ್ತಾ ಎಲೈ ಪುತ್ರನೆ! ಹಟಯೋಗದ ಎಂಟನೆ ಅಂಗವಾದ ಸಮಾಧಿಯೆ ರಾಜಯೋಗವೆಂದು ಹೇಳುವರು. ಆ ರಾಜಯೋಗವು ಸಾಂಖ್ಯ, ತಾರಕ, ಅಮನಸ್ಕವೆಂದು ಮೂರು ವಿಧವಾಗಿ ಇರುವದು, ಆ ಮೂರರೊಳಗೆ ಸಾಂಖ್ಯ ತಾರಕಗಳು ಎರಡು ಹಠಯೋಗಕ್ಕೆ ಸಮೀಪವಾಗಿರುವವು. ಅಯ್ಯಾ ಮಗನೆ! ಯೋಗಂಗಳು ಮಧ್ಯದಲ್ಲಿ ಶ್ರೇಷ್ಠವಾದುವರಿಂದ ರಾಜಯೋಗವೆಂದು ಪ್ರಸಿದ್ಧವಾಯಿತು

ಮೊದಲು ಸಾಂಖ್ಯಯೋಗದಿ ಪರಬ್ರಹ್ಮ ಸಾಕ್ಷಾತ್ಕಾರವಾಗುವ ಪರಿಯಂ ಪೇಳುವೆನು, ಅತಿಸೂಕ್ಷ್ಮಬುದ್ಧಿಯಿಂದ ತಿಳಿಯಬೇಕೆಂದು ನುಡಿಯುತ್ತಾ ಮುಹೂರ್ತಮಾತ್ರಮಂ ಧ್ಯಾನಿಸಿ ಅಯ್ಯಾ ಈ ಯೋಗಕ್ಕೆ ಸಾಧನವಾಗಿಇರ್ಪುದೇ ಶಾಂಭವೀಮುದ್ರೆ,ಆಮುದ್ರಾಲಕ್ಷಣವೇನೆಂದುಕೇಳಿದಿರಾ? ಪೇಳುವೆನು ಕೇಳೆಂದಹರಾಕಾಶದಲ್ಲಿ ದೃಷ್ಟಿ ಇಟ್ಟು ಹೊರಗಣಕಣ್ಣಿಗಳಿಂದ ರೆಪ್ಪೆಯಂಮುಚ್ಚದೆ ನೋಡುತ್ತಾ ಇರುವದೇ ಶಾಂಭವೀಮುದ್ರಾ॥ ಈ ಮುದ್ರೆಯಿಂದ ನೋಡೂವಲಕ್ಷ್ಯಂಗಳು, ಅಂತರ್ಲಕ್ಷ್ಯ ಬಹಿರ್ಲಕ್ಷ್ಯ ಮಧ್ಯಲಕ್ಷ್ಯಗಳೆಂದು ಮೂರುಪ್ರಕಾರ, ಎಲೈರಾಯನೆ ! ಈಮೂರುಲಕ್ಷ್ಯಂಗಳನ್ನುಧ್ಯಾನಿಸುವ ಮಹಾಪುರುಷರುಜನಸಂಗವಿಲ್ಲದ ಏಕಾಂತಪ್ರದೇಶದಲ್ಲಿ ಮುಕ್ತಾಸನದೊಳ್ ಕುಳಿತು ಎಡದಕಾಲು ಹಿಮ್ಮಡಿಯಿಂದ ಮೂಲಾಧಾರಚಕ್ರಮಂ ಬಂಧಿಸಿ ಒಡ್ಯಾಣಬಂಧನವನ್ನು ಘಟ್ಟಿಯಾಗಿಬಿಗಿದು ಜಾಲಂಧರಬಂಧವಂ ಸಜ್ಜುಮಾಡಿ ಈ ಬಂಧತ್ರಯಂಗಳಿಂದ ಈ ಪಿಂಡಾಂಡವಂ ಸಮವಾಗಿನಿಲ್ಲಿಸಿ, ಮನಸ್ಸಿನಿಂದ ಅಪಾನವಾಯುವಂ ಚೆನ್ನಾಗಿ ಈಕ್ಷಿಸಿ ಊರ್ಧ್ವ ದೇಶವಂ ಹೊಂದಿಸಿ ಒಡ್ಯಾಣ ಬಂಧನದಲ್ಲಿರುವ ಪ್ರಾಣವಾಯುವಿನಿಂದ ಐಕ್ಯಮಂಮಾಡಿ ಈ ಪರಿಪೂರ್ಣದಲ್ಲಿಹೇಳಿದ ಮಂತ್ರಯೋಗವಂ ಧ್ಯಾನಿಸುತ ಈರೀತಿ ಪ್ರತಿ ದಿನದಲ್ಲಿಯು ಒಂದು ಝಾವ ಅಭ್ಯಾಸವು ಮಾಡುತ್ತಾ ಇರುತ್ತಿರಲು ಮೂರುತಿಂಗಳಲ್ಲಿ ಘಳಿಗೆಪರ್ಯಂತ ವಾಯುವು ನಿಶ್ಚಲವಾಗಿ ಪಿಂಡಾಂಡದಲ್ಲಿ ನಿಲ್ಲಿಸುವದು ಈ ಪ್ರಕಾರ ಅಭ್ಯಾಸಬಲದಿಂದ ವಾಯುವು ಯತ್ನವಿಲ್ಲದೆ ಸ್ವೇಚ್ಛೆಯಿಂದ ಸುಷುಮ್ನಾಮಾರ್ಗದಲ್ಲಿ ಪೊಕ್ಕು ರೇಚಕಪೂರಕಗಳಂಬಿಟ್ಟು ಕೇವಲ ಕುಂಭಕದಲ್ಲಿನಿಂತಬಳಿಕ ಅಯ್ಯಾಕುವರನೆ ! ಆಗಅಂತರ್ಲಕ್ಷ್ಯಮಂಧ್ಯಾನಿಸಬೇಕು, ಅದು ಹ್ಯಾಗೆಂಬಯಾ ಪೇಳ್ವೆನು ಕೇಳು,ಮೂಲಾಧಾರವೆ ಆದಿ, ಬ್ರಹ್ಮರಂಧ್ರವೆ ಅಂತ್ಯವಾಗಿರುವ ಸುಷುಮ್ನಾಮಧ್ಯದೊಳ್ ಅನೇಕ ಬಳ್ಳಿ ಮಿಂಚುಗಳಂತಿರುವ ತೇಜೋಮಂಡಲವನ್ನು ಭಾವಿಸುವ ಚಿತ್ತವು ಆ ತೇಜೋಮಂಡಲದಲ್ಲಿಟ್ಟು ಐಕ್ಯವಾಗಿ ಸರ್ವವ್ಯಾಪಕಮಾದ ತೇಜೋಮಯಾಕಾಶವಾಗಿರುತ ಆ ಮೇಲೆ ಆ ತೇಜೋಮಯಾಕಾಶವೂ ತೋರದೆ ಅಖಂಡ, ಅದ್ವಯ, ಪರಬ್ರಹ್ಮಸ್ವರೂಪವಾಗಿರ್ಪುದೇ ಸಾಕ್ಷಾತ್ಕಾರವೆಂದು

ನಿಶ್ಚಯಿಸುವದು, ಎತ್ತಿನಗೊರಸಿನಪ್ರಮಾಣಗಳ ಮಧ್ಯದಲ್ಲಿ ಅಗ್ನಿಮಂಡಲ, ಆ ಮಧ್ಯದಲ್ಲಿ ಸೂರ್ಯಮಂಡಲ, ಆ ಮಧ್ಯದಲ್ಲಿ ಚಂದ್ರಮಂಡಲ, ಆ ಮಧ್ಯದೊಳ್ ತೇಜೋಮಯಾಕಾಶವನ್ನು ಭಾವಿಸುತ್ತ ಚಿತ್ತವು ಅಲ್ಲಿಯೇ ಐಕ್ಯವಾಗಿ ಏನೂತೋರದೆ ಅಖಂಡಸ್ವರೂಪವಾಗಿರ್ಪುದು, ಇದು ಎರಡನೆ ಅಂತರ್ಲಕ್ಷ್ಯವೆಂದು ಹೇಳಲು; ಆಗ ರಾಜನು ಆ ಲಕ್ಷ್ಯಗಳು ಚೆನ್ನಾಗಿ ಮನೋಭಾವನೆ ಮಾಡುತ್ತ ಆನಂದ ಭರಿತನಾಗಿ ತಾಯೆ ಪರದೇವತೆಯೆ ! ಇನ್ನು ಬಹಿರ್ಲಕ್ಷ್ಯ ಅನುಸಂಧಾನವಂ ಮಾಡುವಕ್ರಮವಂ ಅಪ್ಪಣೆಯಿತ್ತು ನನ್ನಂ ಕೃತಾರ್ಥನಂ ಮಾಡಬೇಕೆಂದು ಪ್ರಾರ್ಥನೆಯಂ ಮಾಡುವರಾಜನಂ ನೋಡಿ, ಆ ಮಹಾಯೋಗಿನಿಯು ಅಯ್ಯಾ ಸುಗಂಧಕುಮಾರ ! ಬಹಿರ್ಲಕ್ಷ್ಯವು ಹೇಳುವೆನು ಕೇಳು, ನಾಸಾಗ್ರದೊಳ್ ಎರಡು ಅಂಗುಲ ಪ್ರಮಾಣದಲ್ಲಿ ನೀಲವರ್ಣವಾದ ಆಕಾಶತತ್ವವನ್ನು, ಆಮೇಲೆ ಎರಡು ಅಂಗುಲ ಪ್ರಮಾಣದೊಳ್ ಧೂಮ್ರವರ್ಣವಾದ ವಾಯುತತ್ವವನ್ನು ಅದಕ್ಕೆ ಎರಡು ಅಂಗುಲ ಪ್ರಮಾಣದಲ್ಲಿ ರಕ್ತವರ್ಣವಾದ ತೇಜಸ್ತತ್ವವನ್ನು, ಅನಂತರ ಅಂಗುಲದ್ವಯ ಪ್ರಮಾಣದೊಳ್ ತೆರೆಗಳಿಂದ ಕೂಡಿರುವ ಜಲತತ್ವವನ್ನು, ಆಬಳಿಕ ಇದೇಪ್ರಮಾಣದಲ್ಲಿ ಪೀತವರ್ಣದಿಂ ಕೂಡಿದ ಪೃಥ್ವೀತತ್ವವನ್ನು, ಈಪರಿ ನಾಸಾಗ್ರ ಮೊದಲುಗೊಂಡು ದ್ವಾದಶಾಂಗುಳ ಪರ್ಯಂತವಾಗಿ ಈಪಂಚತತ್ವ ಸ್ವರೂಪಂಗಳಂ ಪ್ರತ್ಯೇಕವಾಗಿ ಧ್ಯಾನಿಸಿ, ಆಮೇಲೆ ಚಿದಾಕಾಶದಲ್ಲಿ ಅನೇಕಸಹಸ್ರಬಳ್ಳಿಮಿಂಚುಗಳು ಹೊಳೆಯುವಂತೆ ತೇಜೋಮಂಡಲವು ಹೊರಗೆ ಒಳಗೆವ್ಯಾಪಿಸಿ ತನ್ಮಯವಾಗಿ ಅನಂತರ ಏನೂತೋರದೆ ಬ್ರಹ್ಮಸ್ವರೂಪವಾಗಿರ್ಪುದು, ಇದು ಬಹಿರ್ಲಕ್ಷ್ಯವೆಂದು ತಿಳಿ ; ಎಲೈ ಮಗನೆ ! ಸ್ಮರಣರೂಪವಾದ ಚಿತ್ತವನ್ನು ನಿಶ್ಚಯಾತ್ಮಕವಾದ ಬುದ್ಧಿಯೊಡನೆ ಕೂಡಿಸಿ ನಿಶ್ಚಲವಾಗಿಮಾಡಿ ಹೊರಗಣವ್ಯಾಪಾರಂಗಳಂ ಮರೆತು ಆ ನಿರ್ಮಲಬುದ್ಧಿಯಿಂದ ಜ್ಯೋತಿರ್ಮಯಾಕಾಶವನ್ನು ನೋಡಿ ಆ ಆಕಾಶದಲ್ಲಿ ಬುದ್ಧಿಯಂ ಬೆರಸಿ ಅಲ್ಲಿ ಅಖಂಡವಾದ ಸಚ್ಚಿದಾನಂದಸ್ವರೂಪವನೈದಿ ಸುಖದಿಂದಿರುವದೇ ಮಧ್ಯಲಕ್ಷ್ಯವೆಂದು ತಿಳಿಯಬೇಕು ; ಈಗಹೇಳ್ದ ಮೂರುಲಕ್ಷ್ಯಂಗಳಿಂದ ಯುಕ್ತವಾದ ರಾಜಯೋಗವು ಪರಮೇಶ್ವರನು ತನಗೆ ಅರ್ಧಾಂಗಿಯಾದ ಅಪರ್ಣಾದೇವಿ

ಯರಿಗೆ ಉಪದೇಶವಂ ಮಾಡಿದ ಈ ಪರಮರಹಸ್ಯಯೋಗವು ಅನಧಿಕಾರಿಗಳಿಗೆ ಉಪದೇಶವಂ ಮಾಡಿದೊಡೆ ಮಹಾಪಾತಕ ಉಂಟಾಗುವದು, ನೀನು ಪರಮೇಶ್ವರಿಯ ಕಟಾಕ್ಷಕ್ಕೆ ಪಾತ್ರನಾದುದರಿಂದ ಜನ್ಮಾಂತರದಲ್ಲಿರ್ದ ನಿನ್ನ ಮಹಿಮೆಯಿಂ ನಾನು ಶಿವನ ಇಚ್ಛೆಯಿಂದಲೂ ಅತಿರಹಸ್ಯವಾದ ಯೋಗವಂ ಉಪದೇಶವಂ ಮಾಡಿದನೆಂದು ಅಪ್ಪಣೆಯಂ ಕೊಟ್ಟ ಮಹಾಯೋಗಿಯ ಪ್ರೀತಿಪೂರ್ವಕವಾದ ಮಾತುಗಳಂ ಕೇಳಿ ರಾಜನು ಆನಂದಸಮುದ್ರದೊಳ್ಮುಳುಗಿ ತಾಯೆ ಯೋಗಿನಿಯೆ ! ತಾರಕರಾಜಯೋಗಕ್ಕೆ ಮುದ್ರೆ ಶಾಂಭವೀ, ಇಂತೆಂದು ಅಪ್ಪಣೆಯಿತ್ತು, ಇದಲ್ಲದೆ ಮತ್ತೊಂದುಮುದ್ರೆ ಉಂಟೋ ಇಲ್ಲವೋ ಎಂಬಸಂದೇಹವಂ ಪರಿಹರಿಸಬೇಕೆಂದು ವಿಜ್ಞಾಪನೆಯಂ ಮಾಡಲು, ಆಗ ಆ ಯೋಗಿನಿಯು ಅಯ್ಯಾ ರಾಜನೆ ! ಕೇಳು, ಈಗ ಹೇಳಿದತಾರಕರಾಜಯೋಗಕ್ಕೆ ಖೇಚರೀ, ಭೂಚರೀ, ಮಧ್ಯ, ಷಣ್ಮುಖೀ ಶಾಂಭವೀ ಇಂತಿಪ್ಪ ಮುದ್ರೆಗಳೈದು, ಈ ಐದರಲ್ಲಿ ಮುಖ್ಯವಾಗಿ ರಹಸ್ಯವಾಗಿ ಸುಲಭವಾದಕಾರಣ ಶಾಂಭವೀಮುದ್ರೆಯು, ಆ ಮುದ್ರೆಯಿಂದ ನೋಡುವಲಕ್ಷ್ಯಂಗಳಂ ಹೇಳ್ವೆ. ನಿನ್ನ ಮನಸ್ಸಿನಲ್ಲಿ ಮಿಕ್ಕಾದ ನಾಲ್ಕು ಮುದ್ರೆಗಳಿಂದ ಧ್ಯಾನವಂ ಮಾಡುವರೀತಿ ಕೇಳಬೇಕೆಂದು ಇಚ್ಛೆ ಉಂಟಾದರೆ, ಆ ಲಕ್ಷ್ಯಂಗಳಂ ಹೇಳುತಲಿರ್ಧೇನೆ ಕೇಳು ರಾಜನ ! ಅಂಗುಷ್ಠಾದ್ಯಂಗುಳಿಗಳಿಂ ಶ್ರೋತ್ರಾದಿಗಳಂ ಮುಚ್ಚಿ ಪೂರ್ವದಲ್ಲಿ ಹೇಳ್ದಪ್ರಕಾರದಿಂ ಮೂಲಬಂಧ ಒಡ್ಯಾಣಬಂಧ ಜಾಲಂಧರಬಂಧಂಗಳಿಂ ಬಿಗಿದಾಗಿಹಿಡಿದು ಹುಬ್ಬುಗಳ ಮಧ್ಯದಲ್ಲಿ ಲಕ್ಷ್ಯವಂ ನಿಟ್ಟು ಧ್ಯಾನವಂ ಮಾಡುವದೆ ಷಣ್ಮುಖಿ ಎಂದು ಹೇಳುವರು, ಬದ್ಧಪದ್ಮಾಸನದಲ್ಲಿ ಕುಳಿತು ಎರಡು ದೃಷ್ಟಿಗಳಂ ಭ್ರೂಮಧ್ಯದಲ್ಲಿಟ್ಟು ಧ್ಯಾನವಂ ಮಾಡುವದೆ ಖೇಚರೀಮುದ್ರೆ ಎಂದು ನುಡಿಯುವರು, ನಾಸಿಕಾಮಧ್ಯದಲ್ಲಿ ನೋಡುತ್ತಾ ಹುಬ್ಬುಗಳಮಧ್ಯದಲ್ಲಿ ಧ್ಯಾನಿಸುವದೇ ಭೂಚರೀ ಎಂದು ತಿಳಿ, ಮಧ್ಯಲಕ್ಷ್ಯವು ನಿನಗೆ ಪೂರ್ವದಲ್ಲಿಯೆ ಹೇಳ್ದೆವು, ಇಂತೆಂದು ಅಪ್ಪಣೆಯನ್ನಿತ್ತು, ಅಯ್ಯಾ ಕುಮಾರನೆ ! ಇನ್ನು ಸಾಂಖ್ಯರಾಜಯೋಗವಂ ಕೇಳು, ಪ್ರಕೃತಿಸ್ವರೂಪ, ಪುರುಷಸ್ವರೂಪ, ಈಶ್ವರಸ್ವರೂಪ, ಜೀವಸ್ವರೂಪಂಗಳಂ, ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾ[illegible]ನಮಯವೆಂಬ ಪಂಚಕೋಶಂಗಳಂ, ಇನ್ನೊ

ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಈ ಪಂಚಭೂತಂಗಳ ಪಂಚೀಕರಣವಂ ಗುರುಮುಖವಾಗಿ ತಿಳಿದು ಧ್ಯಾನಿಸುವದೇ ಸಾಂಖ್ಯವೆಂದು ಪೇಳುತ್ತಾ ಎಲೈ ಬಾಲಕನೆ ! ಪರಮರಹಸ್ಯವಾದ ಅಮನಸ್ಕರಾಜಯೋಗವನ್ನು ಸಾವಧಾನಚಿತ್ತದಿಂ ಪರಾಮರಿಸು ಎಂದುಪೇಳಿ, ಅಮೃತದಂತೆ ಅತಿಮಧುರವಾದ ನಾನಾವಿಧಫಲಂಗಳಂ ರಾಯನಹಸ್ತದಲ್ಲಿ ಇಟ್ಟು, ಫಲಾಹಾರವಂಮಾಡುಎಂದು ಪೇಳುತ್ತಾ ಶಾಲಾಸಮೀಪದೋಳ್ ಕಾವಿರುವ ಹುಡುಗನ್ಯಾರೊ?ಎಂದುಕೂಗಲು, ಆಗ ಸುಮತಿ ತಾಯೆ ! ನಾನು ಸೇವಕನೆಂದು ವಿಜ್ಞಾಪನೆಯಂಮಾಡುತ್ತಾ ಬಂದನುಮುತ್ತಿಗೆ ಫಲಗಳಂ ಕೊಟ್ಟು ಎಲೈರಾಯನೆ ! ನೀನು ನಿರಂತರದಲ್ಲಿ ಆತ್ಮಸಮಾಧಿಯು ಬಯಸುತಲಿದ್ದೀಯೆ, ಅಮನಸ್ಕ ರಾಜಯೋಗಸಮಾಧಿ ಆತ್ಮಾನಾತ್ಮವಿವೇಕವಿಲ್ಲದೆ ಇದ್ದವರಿಗೆ ಅತಿದುರ್ಗಮವಾಗಿ ತೋರುವದು, ಇನ್ನು ಸಪ್ತಸಮುದ್ರಗಳನಾದರು ಸರಾಗವಾಗಿ ದಾಟಬಹುದು, ಬೆಟ್ಟಗಳಂ ಮೇಲಕ್ಕೆ ಇಟ್ಟು ಹಣ್ಣೇಕಲ್ಲುಗಳಂತೆ ಆಡಬಹುದು, ಮರಳನ್ನು ಹಗ್ಗದಂತೆಮಾಡಬಹುದು, ಭಸ್ಮದಲ್ಲಾದರು ತೈಲವಂ ತೆಗೆಯಬಹುದು, ಬೀಯಾರಿಕೆಯಿಂದ ಬಿಸಿಲುತೊರೆಯಲ್ಲಾದರು ಉದಕಪಾನವಂಗೈಯ್ಯಬಹುದು, ಆದರು ಈ ಅಮನಸ್ಕರಾಜಯೋಗವನ್ನು ಮನದಿಂ ಗ್ರಹಿಸದು ಮಹದಶಕ್ಯವೆಂದು ಆಜ್ಞಾಪಿಸುತ್ತಾ ಎಲೈಪುತ್ರನೆಕೇಳು ! ಗೋವಿನಕೆಚ್ಚಲಿನಲ್ಲಿ ಎಡಬಿಡದೆ ಕಚ್ಚಿಕೊಂಡು ರಕ್ತವನ್ನೇ ಪಾನವಂಮಾಡುವ ಉಣ್ಣೆಗಳು ಹಾಲರುಚಿಯಯೇನುಬಲ್ಲವು, ಮತ್ತಾ ತೆಂಗಿನಕಾಯಿಯಲ್ಲಿರುವಉದಕಗಳಮಾಧುರ್ಯವಂ ಕಪಿ ಯೇನುಬಲ್ಲದು, ರಮಿಸಬೇಕೆಂದು ಬಂದಿರುವ ರಂಭೆಯರತಿಸೌಖ್ಯವಂ ನಪುಂಸಕನು ಏನುಬಲ್ಲನು, ನಿರ್ಮಲವಾದ ಕನಡಿಯು ಕೈಯಲ್ಲಿಇದ್ದರೂ ಹುಟ್ಟುಕುರುಡನು ಏನುಕಾಣಬಲ್ಲ, ಆ ಪರಿಯು ಸಾಂಖ್ಯಯೋಗ ತಾರಕಯೋಗಂಗಳು ತಿಳಿದವರಿಗುಸಹ ನಿತ್ಯವಾದ ನಿರ್ಮಲವಾದ ಬ್ರಹ್ಮಾನಂದಸೌಖ್ಯವು ದೊರಕಲಾರದು, ಆಸೌಖ್ಯಾನುಭವ ಅಮನಸ್ಕ ರಾಜಯೋಗಿಗಳಿಗೆ ಸರಿ, ಮತ್ತೊಬ್ಬರಿಗೆ ಆಗಲಾರದೂಯೆಂದು ವೃದ್ಧಯೋಗಿನಿಯ ಮಾತುಗಳಂ ಕೇಳಿ, ರಾಯನುವಿಸ್ಮಿತನಾಗಿ ತಾಯೆ ! ಈಗ ನೀವು ಅಪ್ಪಣೆಯಂ ಕೊಟ್ಟ ಮಾತುಗಳಿಂದ

ಎಷ್ಟು ಬುದ್ಧಿಗೆ ತಾರಕ ಸಾಂಖ್ಯಗಳು, ಎರಡೂ ವ್ಯರ್ಥವೆಯೆಂದು ತೋರುತ್ತಲಿದೆ ಎನ್ನಲು, ಅಪ್ಪಾಮಗನೆ ! ನಿನಗೆ ತೋರಿದ್ದು ಸತ್ಯ, ಅದೇನೆಂಬೆಯಾ ಕೇಳು, ಬೀದಿಬೀದಿ ತಿರಿಗಿ ಕೂಗುತ್ತಾ ಕಿರುಚುತ್ತಾ ಇದ್ದ ನಾಯನ್ನು ಬೇಟೆಗಾರನು ಬೇಟೆನಾಯಿ ಇದು ಎಂದು ತಿಳಿದು ಅನ್ನೋದಕಂಗಳನ್ನಿತ್ತು ಕಂಭಕ್ಕೆ ಕಟ್ಟಿದಡೆ ಆ ಕಂಭಕ್ಕೆ ಸುತ್ತುತ್ತಾ ಅಲ್ಲಿಯೆ ಬಿದ್ದಿರುವನಾಯಿಯಂತೆ ಸಂಕಲ್ಪವಿಕಲ್ಪಗಳಿಂದ ಕೂಡಿ ಒಳಗೆ ಹೊರಗೆ ಓಡಾಡುವ ಮನಸ್ಸನ್ನು ಪ್ರಣವನಾದಕ್ಕೆ ಕಟ್ಟಿ ಆನಾದವನ್ನೇ ಕೇಳುತ್ತಾ ಅಲ್ಲಿಯೇ ಐಕ್ಯವಾಗುವ ನಿಮಿತ್ತವಾಗಿ ಮಾಡುವ ಸಾಧನಂಗಳೆ ಹೊರತು ಈ ಸಾಂಖ್ಯತಾರಕಗಳಿಗೆ ಮತ್ತೊಂದು ಪ್ರಯೋಜನವಿಲ್ಲ, ಇನ್ನೇನು ಇದರಿಂದಾಗತಕ್ಕದ್ದು ಎಂದು ಕೇಳಿಯಾ? ಆತ್ಮಸಾಕ್ಷಾತ್ಕಾರಕ್ಕೆ ಕಾರಣಂಗಳೂ ಎಂದು ಹೇಳಿದ ಮಾತುಗಳಂ ಕೇಳಿ ರಾಮನು ತಾಯೆ ! ಪರಬ್ರಹ್ಮಸ್ವರೂಪಿಣಿಯಾದ ಯೋಗಿನಿಯೆ ? ಇನ್ನು ಏನು ಅನುಗ್ರಹವಂ ಮಾಡಿ ನನ್ನಂ ಕೃತಾರ್ಥನಂ ಮಾಡಬೇಕೊ ನಾನರಿಯೆ ! ಅದನ್ನು ಅನುಗ್ರಹಿಸಿ ನನ್ನಂ ಕೃತಾರ್ಥನಂ ಮಾಡಬೇಕೆಂದು ಸಾಷ್ಟಾಂಗ ಪ್ರಣಾಮಮಂ ಮಾಡಿದ ರಾಮನನ್ನು ನೋಡಿ ಈತನಿಗೆ ಪೂರ್ವಜನ್ಮದಲ್ಲಿ ಇದ್ದ ಮಹಾತ್ಮೆಯಂ ಧ್ಯಾನಿಸಿ ಆತನೇ ಈತನೆಂಬ ಅಭೇದಬುದ್ಧಿಯಿಂದ ಎಲೈ ಮಗನೆ ! ಬಾರೆಂದು ಅಂಕದೊಳ್ ಕುಳ್ಳಿರಿಸಿ ಮುಖವಂ ಮುದ್ದುಗೊಳುತ ಈ ವಿದ್ಯವನ್ನು ಉಪದೇಶಮಾಡುವದಕ್ಕೆ ಈತನೇ ಯೋಗ್ಯನೆಂದು ನೆನೆಯುತ್ತಾ ಎಲೈ ದೇವನೆ ! ನಿನಗೆ ನಾನು ಹೇಳುವದೇನು ಇದೆ, ಅಷ್ಟೂ ತಿಳಿದೇ ಇದ್ದೀಯೆ ಎಂದು ನುಡಿಯುತ್ತಾ ಆದರೂ ದೇಶಕಾಲಪಾತ್ರಂಗಳು ಭೇದವಾಗಿ ಇರುವದರಿಂದ ಹೇಳ್ವೆನು ಕೇಳು, ಅತಿಸೂಕ್ಷ್ಮದೃಷ್ಟಿಯಿಂದ ಗ್ರಹಿಸು, ಎಲೈ ಮಗನೆ ! ಈ ಮನಸ್ಸು ಜ್ಞಾನವಿಲ್ಲದ ಪ್ರಾಣಿಗಳಿಗೆ ಸಂಸಾರವನ್ನುಂಟುಮಾಡಿ ಬಂಧನವಂ ಮಾಡೋದು ಈ ಸಂಕಲ್ಪವಿಲ್ಲದ ಮನಸ್ಸು ಮೋಕ್ಷಸ್ವರೂಪವಾಗಿರೋದು, ಅದು ಏನೆಂದು ಹೇಳಿಯಾ ಕೇಳು, ಸಮಸ್ತ ಸಂಸಾರವು ಮನಸ್ಸಿನಲ್ಲಿ ಹುಟ್ಟೋದು, ಈ ಸಂಸಾರ ಮನಸ್ಸಿನಲ್ಲಿಯೆ ಅಣಗಿಹೋಗೋದು, ಆದರಿಂದ ಮನಸ್ಸೇ ಸಂಸಾರಕ್ಕೆ ಕಾರಣವು, ಅದು ಏನೆಂಬೆಯಾ ಕೇಳು, ಆ ಮನಸ್ಸು ಗಾಢವಾದ ಸುಷುಪ್ತಿಯಲ್ಲಿ ಮುಣುಗಿದ್ದ ಸಮಯದಲ್ಲಿ ಏನೂ ತೋರದೆ ಸ್ವಸ್ಥವಾಗಿರೋದು

ಈ ಮನಸ್ಸು ಎಚ್ಚರವಾದರೆ ಮಾಯಾಪ್ರಪಂಚವು ಸರ್ವವೂ ತೋರೋದು, ಅದುಕಾರಣ ಬಂಧವೂ ಮೋಕ್ಷವೂ ಇನ್ನೂ ಕಾರ್ಯಕಾರಣಂಗಳಂತಾನೇಯೆಂದು ತೋರುತ್ತಾ ಇರೋದು, ಇಂಥಾ ಮನಸ್ಸನ್ನು ಹಿರಿಯರು ಅವಿದ್ಯಾಪ್ರಕೃತಿ ಅಜ್ಞಾನ ಮಾಯೆಯೆಂದು ಹೇಳುವರು ಯಥಾರ್ಥವೇಸರಿ, ಅಂಥ ಮನಸ್ಸು ಇಲ್ಲದೆಯಿದ್ದರೆ ಅದು ಅಮನಸ್ಕವೆಂದು ಯೋಗಶಾಸ್ತ್ರಗಳು ಹೇಳುವವು, ಒಂದುಕಾಲದಲ್ಲಿ ಇದು ಮನಸ್ಸು ಇಂತೆಂದು ತೋರಿದರು ಆ ತೋರುವದು ಭ್ರಾಂತಿಯೆಂದು ನಿಶ್ಚಯವಂ ಮಾಡಬಹುದು, ಅದು ಹ್ಯಾಗೆ ಎಂದು ಹೇಳಿಯೇ ಕೇಳು, ಮಾರ್ಗದಲ್ಲಿ ಬಿದ್ದಿರುವ ಹಗ್ಗವು ಸನುಕತ್ತಲೆಯಿಂದ ಇದು ಸರ್ಪವೆಂದು ತೋರಿ ಹಾರಿಹೋಗಿ ಆ ಬಳಿಕ ದೂರದಿಂ ನೋಡಿ ಇದು ಹಗ್ಗವೇ ಸರಿ ಹಾವಲ್ಲವೆಂದು ನಿಶ್ಚೈಸಿದಬಳಿಕ ಅಜ್ಞಾನದಿಂದ ತೋರಿದ ಹಾವು ಅಸತ್ಯವಾಗಿ ಹಗ್ಗವೇ ಕಾಣಲ್ಪಡುವದು ಹ್ಯಾಗೋ ? ದೂರದಲ್ಲಿ ಕಾಣಿಸಲ್ಪಟ್ಟ ಮೋಟುಮರವ ಕಂಡು ಪುರುಷನೆಂದು ಭ್ರಮಿಸಿ ಸಮೀಪಕ್ಕೆ ಹೋದಬಳಿಕ ಪುರುಷನೆಂಬ ಭ್ರಾಂತಿಯು ಬಿಟ್ಟು ಇದು ಮರವೇಸರಿಯೆಂದು ನಿಶ್ಚೈಸಿದಬಳಿಕ ಪುರುಷನು ಹ್ಯಾಗ ತೋರುವದಿಲ್ಲವೋ? ಮತ್ತಂ ದೂರದಲ್ಲಿ ಇರುವ ಬಿಸಲು ತೋರಿಕೆಯಲ್ಲಿ ಉದಕಭ್ರಾಂತಿಯಿಂದ ಸಮೀಪಕ್ಕೆ ಓಡಿಹೋಗಿ ಇದು ಉದಕವಲ್ಲ ಬಿಸಲು ತೋರಿಕೆಯೆಂದು ನಿಶ್ಚೈಸಿದಬಳಿಕ ಉದಕವು ಇಲ್ಲದಾಗುವದು ಹ್ಯಾಗೋ? ಇನ್ನೂ ಥಳಥಳಿಸುವ ಕಪ್ಪುಚಿಪ್ಪನ್ನು ನೋಡಿ ಇದು ಬೆಳ್ಳಿಯೆಂದು ಭ್ರಮಿಸಿ ಸಮೀಪಕ್ಕೆ ಹೋಗಿ ಇದು ಕಪ್ಪುಚಿಪ್ಪು ಎಂದು ತಿಳಿದ ಬಳಿಕ ಬೆಳ್ಳಿಯೆಂಬ ಭ್ರಾಂತಿ ಹೋಗುವದು ಹ್ಯಾಗೋ? ಇಂತಿವಲ್ಲದೆ ಬಯಲಾದ ಆಕಾಶದಲ್ಲಿ ಕಪ್ಪು ತೋರಿ ಇದು ಕಪ್ಪು ಅಲ್ಲಾ ಆಕಾಶವೇ ಎಂದು ನಿಶ್ಚಯವಂ ಮಾಡಿದಬಳಿಕ ಕಪ್ಪು ಇಲ್ಲವೆಂದು ತಿಳಿಯೋದು ಹ್ಯಾಗೋ? ಆರೀತಿಯಿಂದ ಚೈತನ್ಯದಲ್ಲಿ [illegible] ದ ಇದು ಮನಸ್ಸು ಎಂಬ ಭ್ರಾಂತು ತೋರಿ ಆ ತೋರಿದ ಭ್ರ[illegible]ಜ್ಞಾನದಿಂದ ನಾಶವಾದಬಳಿಕ ಚೈತನ್ಯಸ್ವರೂಪನಾದ ನನ್ನಲ್ಲಿ [illegible] ಮನಸ್ಸು ಇಲ್ಲಾ ಎಂದು ಹೇಳಿದ ಆ ಯೋಗಿನಿಯಂ ನೋಡಿ ರಾಯನು ತ[illegible]ಶು ಅಪ್ಪಣೆಯಂ ಕೊಟ್ಟ ಮಾತುಗಳಿಂದ ನಾನಪರಮಾನಂದಭರಿತನಾದೆ, ಆದರೂ ಒಂದು ಸಂದೇಹವದೆ, ಅದೇನೆಂಬೆಯಾ

ತಾಯೆ! ಪ್ರಸಕ್ತಿಯಿಲ್ಲದೆಯುಂ ಅನೇಕಪ್ರಕಾರ ಮನೋವಿಕಾರಂಗಳ್ ನಾನಾಪ್ರಕಾರವಾಗಿ ಉದ್ಭವಿಸುತ್ತಲಿವೆ, ಆ ವಿಕಾರಂಗಳಂ ನಾಶವಂಮಾಡುವಪರಿ ಹ್ಯಾಗೆಂದು ರಾಯನು ಮಾಡಿದಪ್ರಶ್ನೆಯಂ ಕೇಳಿ ಅಯ್ಯಾಪುತ್ರನೆ ಕೇಳು! ಕಣ್ಗಳಂಮುಚ್ಚುತ್ತ ತೆರೆಯುತ್ತ ಆ ಸಚ್ಚಿದಾನಂದಸ್ವರೂಪನಾದ ಪರಮೇಶ್ವರನು ಕಾಣುತ್ತ ಇರಬೇಕು. ಆ ಪ್ರಕಾರ ಕಾಣದೆಇದ್ದಡೆ ಕಣ್ಗಳಂ ಮುಚ್ಚಿ ತೆರೆಯುವಷ್ಟರಲ್ಲಿಯೆ ಅನಂತಾನಂತ ಮನೋವಿಕಾರಂಗಳುದ್ಭವಿಸುತ್ತಲಿವೆ, ಅದುಕಾರಣ ಸರ್ವದಾಪರಮೇಶ್ವರನಲ್ಲಿಯೇ ಮನವನ್ನೈಕ್ಯವಂಮಾಡಬೇಕು, ಹಾಡಿದಬಳಿಕ ಸೂರ್ಯನು ಅಸ್ತಂಗತನಾಗುವಕಾಲದಲ್ಲಿ ಕಿರಣಗಳಂ ಬಿಟ್ಟು ಹೋದಪರಿಯಲ್ಲಿ ಅಸ್ತಂಗತನಾಗುವವಿಲ್ಲವೊ? ಆ ಪರಿ ಮನಸ್ಸು ವಿಕಾರಂಗಳಿಂದ ಬಿಟ್ಟು ಮುಕ್ತವಾಗಿಯೆ ಲೀನವಾಗುವದು, ಅದುಕಾರಣ ಅಮನಸ್ಕನಾದವಗೆ ವಿಕಾರಂಗಳು ತೋರೋಬಗೆ ಹೇಗೆ, ನೀನು ಪರಿಶುದ್ಧವಾದ ಕೇವಲಚೈತನ್ಯಪ್ರಕಾಶನು ಆದುದರಿಂ ಶರೀರಂಗಳು, ಇಂದ್ರಿಯಂಗಳು, ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಂಗಳು, ಇದುಒಂದೂನಾನಲ್ಲ, ಸ್ವಯಂ ಪ್ರಕಾಶವಾದನಾದ ಸಚ್ಚಿದಾನಂದಸ್ವರೂಪನು ನಾನೆಂದು ನಿನ್ನೊಳಗೆ ನೀನೋಡುವ ಸಮಾಧಿಸಮಯದಲ್ಲಿ ವಿಕಾರವಿಲ್ಲದವನಾಗಿ ಏಕರೂಪನಾಗಿ ಇರೋಣದರಿಂದಲೇ ಇದು ಸರ್ವವಿಕಾರಶೂನ್ಯವಾದ ಸಹಜವಾದ ಅಮನಸ್ಕರಾಜಯೋಗಸಮಾಧಿಯೆಂದು ಹೇಳುತ್ತಾ, ಆ ಮಹಾಯೋಗಿನಿಯು ಅಂಕದೊಳ್ ಕುಳ್ಳಿರಿಸಿಕೊಂಡು ತನ್ನ ದಕ್ಷಿಣ ಹಸ್ತವಂ ರಾಯನ ಶಿರಸ್ಸಿನಲ್ಲಿ ಇಟ್ಟು ಸ್ವಾನುಭವರಸಾವೇಶವನ್ನುಂಟುಮಾಡಿ ಎಲೈ ಗುರುಪುತ್ರನೆ! ಈಗನೀನು ಪೂರ್ಣಾಧಿಕಾರನಾದೆ ಎಂದು ಶಿರಸ್ಸಂನಾಘ್ರಾಣಿಸಿ ಮುಖವಂಮುದ್ದುಗೊಳುತ್ತ ಆನಂದಪರವಶಳಾದ ಮಹಾಯೋಗಿನಿಗೆ ಪ್ರದಕ್ಷಿಣಪೂರ್ವಕವಾಗಿ ಸಾಷ್ಟಾಂಗ ದಂಡಪ್ರಣಾಮಗಳಂ ಮಾಡಿ ಆ ಚಾಮುಂಡಿಕಾದೇವಿಯೆ! ಈ ಮಹಾಯೋಗಿನಿಯೆಂದು ಧ್ಯಾನಿಸುತ್ತಾ ಇರುವಸಮಯದಲ್ಲಿ ಬೃಂದಾರಕಾಯೋಗಿನಿಯು ಒಂದುಮುಹೂರ್ತಕಾಲಸುಮ್ಮನೆಇದ್ದು, ಅನಂತರ ಎಲೈ ರಾಯನೆ! ನೀನು ನನ್ನಸಮೀಪವಂ ಕುರಿತುಬರುವದಕ್ಕೆ ನಿಮಿತ್ತವೇನು, ನಿನ್ನನನ್ನಿಂದ ಆಗತಕ್ಕಕಾರ್ಯಂಗಳು ಏನುಎಂದು ಪ್ರಶ್ನೆಯಂಮಾಡ

ಲು, ಅಗರಾಜನು ತಾಯೆ ! ಈ ಚತುರ್ದಶಭುವನಗಳಲ್ಲಿ ಇರುವ ಪ್ರಾಣಿಗಳವ್ಯಾಪಾರಂಗಳಂ ತಿಳಿದಂಥಾ ಮಹಾನುಭಾವಳಾದ ನಿನಗೆ ನಾನುಅರಿಕೆಮಾಡತಕ್ಕದ್ದೇನು ಇದೆ, ಇಂತು ವಿಜ್ಞಾಪನೆಯಂಮಾಡಲಾಗ ಆ ಮಹಾಯೋಗಿನಿಯು ನಸುನಗುತಾ ಅಯ್ಯಾ ನಿನ್ನಭಿಪ್ರಾಯವನ್ನು ನಾನುಬಲ್ಲೆ, ನಿನ್ನ ಮನೋಸಂಸ್ಕಾರವಾಗಿ ಸಮಸ್ತಕಾರ್ಯಂಗಳು ಆಗುವದರಲ್ಲಿ ಅಂತರವಿಲ್ಲ, ಕ್ರೌಂಚದ್ವೀಪದೊಳ್ ಆನಂದಪರ್ವತದಲ್ಲಿ ಆನಂದವಲ್ಲೀ ಮಹಾದೇವಿಯು ಚರಣಕಮಲಗಳಂ ಧ್ಯಾನಿಸುತ್ತಾ ಅಲ್ಲಿವಾಸವಂ ಮಾಡಿರ್ದ ನನ್ನಸಮೀಪಕ್ಕೆಬಂದಬಳಿಕ ನಿನ್ನಮನೋರಥವು ಸಫಲವಾಧೀತುಎಂದು ಹೇಳಲು, ಆಗ ರಾಜನು ತಾಯೆ ಯೋಗಿನಿಯೆ ! ಆ ದ್ವೀಪವು ಬ್ರಹ್ಮಾದಿಗಳಿಗೂ ಪ್ರವೇಶವಂಮಾಡುವದಕ್ಕೆ ಅಶಕ್ಯವೆಂದು ಜನರುಹೇಳುವರು, ಅದುಕಾರಣ ತಮ್ಮಸಂಗಡಲೆ ನನ್ನಂ ಕರದುಕೊಂಡುಹೋದರೆ ಎನಗೆ ಆ ದ್ವೀಪದಲ್ಲಿ ಪ್ರವೇಶಸುಲಭವಾಗಿ ಆಧೀತು, ಎಂದುಬಿನ್ನವಿಸಲು, ಆಗ ಆ ಯೋಗಿನಿಯು ಅಯ್ಯಾ ನೀನು ಕರ್ಮಭೂಮಿಯೊಳ್ ಜನಿಸಿ ಯಜ್ಞಾದಿಕರ್ಮಂಗಳಂ ಮಾಡಿ ಪುತ್ರಸಂತಾನವಂಪಡದು ಪುತ್ರಾದಿಗಳಸೌಖ್ಯವಂ ಅನುಭವಿಸಬೇಕೆಂಬ ಜನ್ಮಾಂತರವಾಸನೆಯಿಂದ ಪುಟ್ಟಿದವನು ಹಾಪುರುಷನು [illegible] ಭೋಗವಂಸನುಭವಿಸುವರಿಗೆ ಯೋಗ್ಯವಾಗದ ಭೂಮಿಗೆ ನಿನ್ನನು ಕರದುಕೊಂಡು ಹೋಗುವದಕ್ಕೆ ಶಕ್ತಳಲ್ಲ, ನೀನುಮಾಡಿದ ಪ್ರಾರಬ್ಧಕರ್ಮಾನುಸಾರದಿಂದ ಆಯಾಯಕರ್ಮಂಗಳಂ ಅನುಭವಿಸುತ್ತಾ ಹೀಗೇ ಬರುತ್ತಲಿದ್ದೀಯೆ, ಇನ್ನು ಕರ್ಮಾನುಸಾರವಾಗಿ ಬರುವ ವಿಪತ್ತುಗಳಂ ಸಮೀಪಕ್ಕೆ ಬರದಂತೆ ಮಾಡಿಕೊಎಂದುತಿಳುಹಿಸಿ ಎಲೈರಾಯನೆಕೇಳು! ಆ ವಿಪತ್ತುಗಳಂ ಮೂಲಪ್ರಕೃತಿಯಾದಪರಮೇಶ್ವರಿಯುಸಹಾ ಪರಿಹಾರಮಾಡಕೂಡದು, ಅದು ಏನೆಂದೆಯಾ ಕರ್ಮವನ್ನು ಅನುಭವಿಸೀಎಂದು ಕಟ್ಟುಮಾಡಿಕಳುಹಿಸಿದ ಕಾಳೀಶ್ವರೀ ನೀನು ಅನುಭವಿಸತಕ್ಕ ಕರ್ಮಂಗಳಿಗೆ ವಿರುದ್ಧಚರಣೆಯಂಮಾಡಿದರೆ ಆ ಪರಮೇಶ್ವರಿಯಲ್ಲಿಇದ್ದ ಸರ್ವಜ್ಞತ್ವಕ್ಕೆ ಹಾನಿಬರೋದಲ್ಲದೆ ಇದಲ್ಲದೆ ಮಹಾದೇವಿಯು ಸಮಸ್ತಶಾಸ್ತ್ರಂಗಳು ಅಣಿಮಾದಿಸಿದ್ಧಿಗಳು ಸಹ ಅನುಗ್ರಹವಂಮಾಡಿದವು ಅದರಿಂದ ಎನಗೆ ಅಸಾಧ್ಯವಾದಕಾರ್ಯವಿ

ಲ್ಲಾನೆಂದು ಎಣಿಸಬೇಡ ಆ ಅಣಿಮಾದಿಸಿದ್ಧಿಗಳು ಚಿತ್ಸ್ವರೂಪಿಣಿಯಾದ
ಪರಮೇಶ್ವರಿಯ ವಿಭೂತಿಗಳು ನಿನ್ನಅರಮನೆಯಲ್ಲಿರುವ ಭಾಗ್ಯಭಂಡಾರ
ಗಳು ಅಲ್ಲ, ನೀನು ಜನ್ಮಾಂತರದಲ್ಲಿ ಯಾವಮಹಾನುಭಾವನೊ ಅದುಕಾ
ರಣ ಎನಗೆಪರಮಭಕ್ತನು ಈತನೆಂದು ಜನರಿಗೆ ತಿಳಿಯುವದಕ್ಕೆ ಆ ಪರ
ಮೇಶ್ವರಿ ತನ್ನಅಣಿಮಾದಿ ವಿಭೂತಿಗಳಂ ನಿನ್ನಲ್ಲಿಮಡಗಿದಳೆ ಹೊರತು ಅ
ದಂ ವ್ಯಯವಂಮಾಡು ಎಂದು ಅಪ್ಪಣೆಯಂಕೊಡಲಿಲ್ಲ, ಈ ರಹಸ್ಯವಂ
ನೀನರಿಯದೆ ವ್ಯಯವಂಮಾಡಿದಡೆ ಭಂಡಾರದ್ರೋಹವೆಂಮಾಡಿದ ಪಾತಕ
ಉಂಟಾದೀತು, ಅಥವಾ ವ್ಯಯವಂಮಾಡಿದರೂ ನಿನ್ನಪ್ರಾರಬ್ಧಕ್ಕೆ ಅನು
ಸಾರವಾದ ಫಲವೇಬಂದೀತು, ಇಂದ್ರಾದಿದೇವತೆಗಳು ಒಬ್ಬರೂ ಆಸಿದ್ಧಿ
ಗಳಿಂದ ಕಾರ್ಯಂಗಳು ಸಾಧಿಸಲಿಲ್ಲ, ಅದುಕಾರಣ ಈಶ್ವರಿಯ ಇಚ್ಛೆ ಯಾ
ರಿಗೂ ತಿಳಿಯುವದಕ್ಕೆ ಅಶಕ್ಯ, ನೀನು ಕಾಲಕರ್ಮಸಂಯೋಗಬಂದಲ್ಲಿ
ಕ್ರೌಂಚದ್ವೀಪಕ್ಕೆಬರುತ್ತೀಯೆ ಎಂದುಹೇಳುತ್ತಾ ಅರ್ಗಳಯಂತ್ರವಂ
ಕೊಟ್ಟು ಈ ಯಂತ್ರವು ನಿನ್ನನ್ನು ಕ್ರೌಂಚದ್ವೀಪದ ಕೋಟೆಯೊಳಕ್ಕೆ
ಪ್ರವೇಶವಂಮಾಡಿಸುವದು, ಅದುಹ್ಯಾಗೆಎಂದುಹೇಳಿಯಾ ಈ ಯಂತ್ರದ
ಲ್ಲಿ ಕುಳಿತು ಏಳು ಅಹೋರಾತ್ರದಲ್ಲು ಅರ್ಗಳಮಂತ್ರಜಪವಂ ಮಾಡಿದಡೆ
ಕೋಟೆಒಳಕ್ಕೆ ಬಿಡೋದು, ಈ ಯಂತ್ರಸಾಮರ್ಥ್ಯ, ಇದು ಅತಿಗೋಪ್ಯ
ವಾಗಿ ಇರತಕ್ಕದ್ದು, ಈ ದೇವರಹಸ್ಯ ನೀನುಯಾರಿಗೂ ತಿಳುಹಿಸಬೇಡ
ಅನ್ಯರಿಗೆ ತಿಳುಹಿಸಿದ್ದೇ ಉಂಟಾದರೆ ಈ ಯಂತ್ರ ಎನಗೆ ಫಲಕೊಡೋದಿಲ್ಲ
ಎಂದು ಅಂತರ್ಧಾನವನ್ನೈದುತ್ತಿರಲು, ಆಬಳಿಕ ಸುಗಂಧರಾಜೇಂದ್ರನು
ಮಂತ್ರಿಯಂಕುರಿತು ಅಮಾತ್ಯಸುಮತಿಯೆ ! ಈ ಯೋಗಿನೀಕೊಟ್ಟಯಂ
ತ್ರವನ್ನು ಯಥಾಶಾಸ್ತ್ರೀಯವಾಗಿ ಪೂಜೆಯಂಮಾಡಿ ಪುನಶ್ಚರಣೆಯಂ
ಮಾಡಿದರೆ ಕಾರ್ಯಸಿದ್ಧಿ ಆದೀತೊ ಆಗಲಾರದೊ ನಿನ್ನಬುದ್ಧಿಗೆ ಯಾವಪ್ರ
ಕಾರ ತೋರುವದೆಂದಪ್ಪಣೆಯಂಕೊಡಲು, ಆಗ ಸುಮತಿಯು ಎಲೈರಾ
ಜೇಂದ್ರನೆ ! ಈ ಯೋಗಿಜನಂಗಳು ಮಹಾನುಭಾವರು ಮಹಾವಿರಕ್ತ
ರು ಸ್ವತಂತ್ರರು, ಅದುಕಾರಣ ಇವರಸಮೀಪದಲ್ಲಿ ಮಹಾಯಂತ್ರಗಳು
ಇರಬಹುದು, ಸಂದೇಹವಿಲ್ಲ, ಅಂಥಾದ್ದನ್ನು ನಮಗೆ ಹ್ಯಾಗೆಕೊಟ್ಟರು
ಯಂತೆಂದಡೆ ವಿರಕ್ತರಾದಕಾರಣ ಕೊಡಬಹುದು, ಅವರುಸ್ವತಂತ್ರರಾದ

ಕಾರಣ ಚಿತ್ತಕ್ಕೆಬಂದಂತೆ ಹೋಗುವರು, ಇದುಪುರಶ್ಚರಣೆಯಂಮಾಡಿ
ಪರೀಕ್ಷಿಸಬಹುದು, ಎಂದುಹೇಳಿದ ಮಂತ್ರಿಯಮಾತಂಕೇಳಿ ಗುಹಾಂತ
ರಾಳದಲ್ಲಿ ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಗಳಂ ನೆರವೇರಿಶಿ ನಾ
ನಾವಿಧಪುಷ್ಪಂಗಳಿಂದ ಗದ್ದಿಗೆಯಂರಚಿಸಿ ಆ ಯಂತ್ರವನ್ನು ಗದ್ದಿಗೆಯ
ಲ್ಲಿಮಡಗಿ ಧ್ಯಾನಾದಿಕಲ್ಪೋಕ್ತಪೂಜೆಯಂಮಾಡಿ ಮಂತ್ರಯೋಗದಿಂದ
ಧ್ಯಾನಿಸುತ್ತಾ ಇರುತ್ತಿರಲು.

ಅತ್ತಲಾ ಪಾತಾಳ ಲೋಕದೊಳ್ ಭೋಗವತೀ ಪಟ್ಟಣಕ್ಕೆ
ಧೊರೆಯಾದ ಸಿಂಹವಕ್ತ್ರನ ಪುತ್ರನಾದ ಕರಾಳವಕ್ತ್ರನೆಂಬ ದೈತ್ಯೇಶ್ವ
ರನು ಒಡ್ಡೋಲಗದೊಳ್ ಕುಳಿತು ಲೀಲಾವಿನೋದದಿಂ ಇರುತ್ತಿರುವ
ಸಮಯದಲ್ಲಿ ಶಂಕುಕರ್ಣನೆಂಬ ದೈತ್ಯ ಮಂತ್ರಿಯು ದುಃಖಾಕ್ರಾಂತ
ನಾಗಿ ರೋದನಮಂ ಗೈಯ್ಯುತ ಒಡ್ಡೋಲಗ ದಲ್ಲಿರುವ ಕರಾಳವಕ್ತ್ರ
ನಂನೋಡಿ ಸಾಷ್ಟಾಂಗ ದಂಡಪ್ರಣಾಮಮಂ ಮಾಡಿ ಹಂಬಲಿಸುತಶಂ
ಕುಕರ್ಣನಂನೋಡಿ ಅಯ್ಯಾ ಶಂಕುಕರ್ಣನೆ ! ನಾನು ಸುಖದಿಂದಿರುವ
ಕಾಲದಲ್ಲಿ ನೀನು ಅತ್ಯಂತ ದುಃಖಮಂ ಪಡುವದಕ್ಕೆ ಕಾರಣವೇನು, ನನ್ನ
ಅಳಿಯನಾದ ಉಗ್ರಬಾಹುವು ಉಚಿತಾನುಚಿತವಿಚಾರಮಂಮಾಡದೆ ಉಗ್ರ
ಶಿಕ್ಷೆಯಂಮಾಡಿದನೋ? ಇಂತುಮಲ್ಲದೆ ಮಹೇಂದ್ರನು ಮನಸ್ಸುಬಂದಂತೆ
ಮಾತುಗಳನ್ನಾಡಿದನೋ? ಅದಲ್ಲದೆ ಅಸುರರಿಗು ನಿಮಗು ಅನ್ಯೋನ್ಯಯು
ದ್ಧವಾಗಿ ಪ್ಲಕ್ಷದ್ವೀಪವನ್ನಾಕ್ರಮಿಶಿದರೋ? ಹೀಗಲ್ಲದೆ ಕಾಲಗತಿಯಿಂದ ಉ
ಗ್ರಬಾಹುವು ಕಾಲಯಮನ ವಶವನ್ನೈದಿದನೋ? ಇದೇನುವಿಪತ್ತು ನಿನಗೆ
ಬಂತು ಎಂದು ಸಮೀಪಕ್ಕೆಕರೆದು ಸಾಂತ್ವವಚನಗಳಿಂದ ಸನ್ಮಾನಮಂ
ಮಾಡಿ ಉಚಿತಾಸನದೊಳ್ ಕುಳ್ಳಿರಿಶಿ ಅಯ್ಯಾಶಂಕುಕರ್ಣನೆ ! ನೀನು
ವ್ಯಸನಪಡುವದಕ್ಕೆ ಕಾರಣವೇನೆಂದುಹೇಳಲು, ಆಗ ಶಂಕುಕರ್ಣನು
ಸ್ವಾಮಿ ದೈತ್ಯೇಶ್ವರನೆ! ಕೇಳು, ನಮ್ಮಪ್ಲಕ್ಷದ್ವೀಪಕ್ಕೆ ಕೈಲಾಸಪರ್ವತ
ದಂತಿರ್ಪ ಅಪೂರ್ವವಾದ ಒಂದು ಆನೆ ದ್ವೀಪದ ನಾಡಾನೆಗಳೆಲ್ಲಾ ಶೇರಿ ಇ
ಕ್ಷುವನಂಗಳಂ ಭಕ್ಷಿಸುತ್ತಾ ಇರುತ್ತಿರಲು, ಒಂದಾನೊಂದುಕಾಲದೊಳ್
ನನ್ನೊಡೆಯನಾದ ಉಗ್ರಬಾಹುವು ಮೃಗಯಾರ್ಥವಾಗಿ ಅರಣ್ಯಕ್ಕೆ
ಹೋಗಿ ಆ ಆನೆಯಂ ನೋಡಿ ಈ ಗಜವು ಸಾಮಾನ್ಯವಾದ ನಾಡಾ

ಡುಗಜವಲ್ಲ, ಇಂದ್ರನಐರಾವತವೊ ಅಲ್ಲದೆ ದಿಗ್ಗಜಗಳಿಂದ ಪುಟ್ಟಿದಮಹಾ ಗಜವೊಎಂದು ಅತ್ಯಂತಆಸಕ್ತಿಯಿಮ್ಮಡಿಸಿ ಅನೇಕದೈತ್ಯಭಟರಿಂದೊಡಗೂಡಿ ಆಗಜವಂಹಿಡಿದು ತರಬೇಕೆಂದು ಹೋಗಲು, ಆ ಆನೆಯು ಅನೇಕದೈತ್ಯಸೇನೆಯುಂ ಸಂಹಾರವಂಮಾಡಿ ಸ್ವಾಧೀನವಾಗದೆ ಮನಸ್ಸುಬಂದಂತೆ ಮರಗಳಂಕೀಳುತ್ತಾ ಕಾಡಾನೆಗಳಲ್ಲಿ ಆಡುತ್ತಿರಲು, ಆ ಕಾಲದಲ್ಲಿ ಉಗ್ರಬಾಹುವುಶೌಷ್ಕಲಕನ ಸಮೀಪಕ್ಕೆ ಹೊರಟು ಮಾಯಾವಿದ್ಯಂಗಳಂಕಲಿತು ಒಂದೊಂದುದಿವಸ ಬಗೆಬಗೆಯಾಗಿ ದಿಕ್ಪಾಲಕರಂತೆ ವೇಷವಂತಾಳಿ ಸಮೀಪಕ್ಕೆಹೋಗುತ್ತಾ ಒಂದುಕಾಲದೋಳ್ ಇಂದ್ರನಂತೆ ವೇಷವಂತಾಳಿ ಸಮೀಪಕ್ಕೆಹೋಗಲಾ ಆನೆಯು ಸೊಂಡಿಲನ್ನು ಕುಂಭಸ್ಥಳದಲ್ಲಿ ಇಟ್ಟು ಘೀರ್ಜನೆವಂಮಾಡಿ ಚಿಟ್ಟದಂತೆ ಚಲನವಿಲ್ಲದೆ ಸುಮ್ಮನೆನಿಲ್ಲಲು, ಆಗ ಉಗ್ರಬಾಹುವು ಸಂತೋಷಪಡುತ್ತಾ ಹಿಡಿತಂದು ಬಗೆಬಗೆಯಾದ ಆಹಾರಗಳ ಕೊಡಿಸುತ್ತಾ ಆ ಆನೆಯನೇರಿ ವಿಮಲಪುರೀಬೀದಿಯೋಳ್ ವಿಹಾರವಂಮಾಡುತ್ತಾ ಇರುತ್ತಿರಲು, ಒಂದುಕಾಲದೋಳ್ ಚಿತ್ತರವಲ್ಲಿಯು ಬರೆಯುವದಕ್ಕೆ ಗೊತ್ತುತೋರದಿರುವ ಮಾರಸರೂಪದಂತೆ ಮನದಲ್ಲಿಯೆನೆಯುತಕ್ಕರೂಪವುಳ್ಳವನು ಗುಣಗಳಲ್ಲಿ ಗುರುವಂತೆ, ಬಲವಲ್ಲಿ ಬಲಾರಿಯುಂ ಕಡಮೆಯಾಗಿಮಾಡುತ್ತಾ ಮಯ, ಶಂಬರ, ಮಾರೀಚ, ಮೊದಲಾದ ಮಾಯಾವಿಗಳಿಗೆ ಮಾತುಗಳಂ ಕಲಿಸುವದಕ್ಕೆ ಬಂದನೋಎಂಬಂತೆ ತೊರುತ್ತಾ ಭರತಖಂಡವನಾಳುವ ಯಾವನೋ ಒಬ್ಬರಾಯನು ಪ್ಲಕ್ಷದ್ವೀಪವನ್ನೈದಿ ಉಗ್ರಬಾಹುವಿನೆತನುವನ್ನು ಉಗುರುನಿಂದಲೀಶೀಳಿಕಳೆದುಕಸ್ತ್ರಾಗ್ನಿಯಿಂದ ವಿಮಲಪುರೀಯನ್ನು ವಿಮಲಪುರೀಯಂತೆಮಾಡಿ ಪ್ಲಕ್ಷದ್ವೀಪದ ಇಕ್ಷುವನದಲ್ಲಿ ಆಡುತ್ತಿರುವ ಆಗಜದಸಮೀಪಕ್ಕೆಹೋಗಲು,ಆ ಗಜವು ಬಹುಕಾಲದಿಂದ ಆಳಿದಅರಸನಂತೆ ನೋಡುತ್ತಾ ಮೈಮರತು ಮುಂಡೆಯುಲ್ಲಿ ಸೊಂಡಿಲವಂನಿತ್ತು ದಂಡಪ್ರಣಾಮವಂಮಾಡಲು, ಆಗ ಆ ರಾಯನು ಗಜವನ್ನೇರಿ ಹೊರಟುಹೋದನು, ಸ್ವಾಮಿದೈತ್ಯೇಶ್ವರನೆ ! ಇನ್ನು ಆರಾಯನು ಮಾಡಿದಕಾರ್‍ಯಂಗಳು ನಾನೆಂತುಪೇಳಲಿ, ವಜ್ರಪುರವನ್ನಾಳುವ ಜಂಝಾಮಾರುತನೆಂಬ ರಾಕ್ಷಸನನ್ನುತಂದು ಅಪೂರ್ವವಾದ ಅಶ್ವ ನಿಮಿತ್ತವಾಗಿ ಯಮನಪಟ್ಟಣಕ್ಕೆ ಸೇರಿಸಿದನು,ಆತನಬಲಪರಾಕ್ರಮಂಗಳಂ

ನಾನೆಂತುಬಣ್ಣಿಸಲಿ, ಈ ಪರಿ ಮಾನವರಿಂದ ದಾನವರಿಗೆಭಯುಬಂದಬಳಿಕ ನೀನು ಬಾಳಿದರೇನು? ಬಾಳದೆಇದ್ದರೇನು? ಇಂತುಪೇಳಿದ ಶಂಕುಕರ್ಣ ನದೈನ್ಯವಾದ ಮಾತುಗಳಂಕೇಳಿ ಕರಾಳವಕ್ತ್ರನು ಕಂಬನಿಗಳಂತುಂಬಿ ಹುಡುಗನಾದ ಉಗ್ರಬಾಹುವಂ ನೆನವು ಹಂಬಲಿಸುತ್ತಾ ಈ ಪರಿಮಾ ಡಿದಮನುಷ್ಯನಂ ಖಂಡಿಸಿ ನಿಕುಂಭಿಳಾದೇವಿಗೆ ನಿವೇದನೆಯಂಮಾಡಬೇ ಕೆಂದು ಪ್ರತಿಜ್ಞೆಯಂಮಾಡಿ ಅನೇಕಅರ್ಬುದ ದೈತ್ಯದಾನವಸೇನೆಯಿಂ ದೊಡಗೂಡಿ ಪಾತಾಳದಿಂಪೊರಮಟ್ಟು ಹಾಳಾಗಿರ್ದ ಅಮರಾವತಿಯಂ ನೋಡಿ ಇಲ್ಲಿರ್ದು ನಾವೇನುಮಾಡತಕ್ಕದ್ದೆಂದು ಯೋಚಿಸಿ ದೈತ್ಯೇಶ್ವರನು ಎಲೈಶಂಕುಕರ್ಣನೆ ! ಈಗನಾವು ಮಾಡತಕ್ಕಕಾರ್ಯಂಗಳು ಏನೆಂದುಪೇಳ ಲು,ಆಗಶಂಕುಕರ್ಣನು ಸ್ವಾಮಿದೈತ್ಯೇಶ್ವರನೆ ! ಇಂದ್ರನು ಓಡಿಹೋ ದಬಳಿಕ ಐರಾವತವೊದಲಾದ ಆತನವಾಹನವಸ್ತುಗಳಂ ಗೊತ್ತುಮಾಡಿ ನ ಮ್ಮಸ್ವಾಧೀನವಾಗಿ ಮಾಡಿಕೊಂಡು ಸಪ್ತದ್ವೀಪಂಗಳು ನಮ್ಮದೈತ್ಯರಿಗೆ ನೇಮಿಸಿಕೊಟ್ಟುಅಮರಾವತಿಪಟ್ಟಣವಂನಾಳುತಸುಖದಿಂದಿರುವದೆ ನಮ್ಮ ಕಾರ್ಯವೆಂದು ಪೇಳುವ ಶಂಕುಕರ್ಣನ ಮಾತುಗಳಂಕೇಳಿ ಅಗ್ನಿ, ಯಮ ಮೊದಲಾದ ದಿಕ್ಪಾಲಕರಂ ಕರೆಕಳುಹಿಸಿ ಆ ದೈತ್ಯೇಶ್ವರನು ಇಂದ್ರನು ಎಲ್ಲಿಹೋದನು, ಆತನವಾಹನವಸ್ತುಗಳು ಎಲ್ಲಿಇನೆ, ಇವೆಷ್ಟೂ ಗೊತ್ತು ಮಾಡಿ ತಂದುಕೊಡಬೇಕು, ಹೀಗೆಮಾಡದೆಇದ್ದಡೆ ನಿಮ್ಮನಿಮ್ಮ ಅಧಿಕಾ ರಂಗಳು ನಿಮಗೆ ನಿಲ್ಲಲಾರವು, ನಿಮಗೆ ಚಂಡಶಾಸನವಂ ಮಾಡುವದರ ಲ್ಲಿ ಅಂತರವಿಲ್ಲ, ಎಂದು ಪೇಳಿದದೈತ್ಯೇಶ್ವರನ ಮಾತುಗಳಂಕೇಳಿ ಭಯ ಭ್ರಾಂತರಾಗಿ ದಿಕ್ಪಾಲಕರು ಸ್ವಾಮಿ ದೈತ್ಯೇಶ್ವರನೆ! ಇಂದ್ರನು ಶಾಪದಿಂ ದ ಅದೃಶ್ಯನಾಗಿಹೋದನು, ಆತನವಸ್ತುವಾಹನಂಗಳು ಸಪ್ತದ್ವೀಪಗಳೊ ಳ್ ಅಲ್ಲಲ್ಲಿಬಿದ್ದುಹೋದವು, ಇನ್ನುನಾವೇನೂಅರಿಯೆವು, ಎಂದು ಪೇಳು ತ್ತಿರುವಸಮಯದಲ್ಲಿ ದೂತರುಬಂದು ಸಾಷ್ಟಾಂಗಪ್ರಣಾಮವಂಮಾಡಿ ಎ ಲೈ ದೈತ್ಯೇಶ್ವರನೆ ! ಕುಬೇರನಮಗನಾದ ನಳಕೂಬರನು, ಜಯಂತನು ಇವರೀರ್ವರೂ ಬೃಹಸ್ಪತಿಯಿಂದೊಡಗೂಡಿ ಕೈಲಾಸಪರ್ವತದಸಮೀಪದ ಲ್ಲಿರುವ ದಾರುವನದೋಳ್ ತಪವಂಮಾಡುವ ಬೃಂದಾರಕಾಸಮೀಪವನ್ನೈ ದಿ ಆ ಯೋಗಿನಿಯಂ ಕರೆದುಕೊಂಡು ಕ್ರೌಂಚದ್ವೀಪಕ್ಕೆ ಹೊರಟು

ಹೋದರೆಂದು ವಿಜ್ಞಾಪನೆಯಂ ಮಾಡಲು, ಆಗ ಆ ದೈತ್ಯನು ಕುಬೇರನಂ ನೋಡಿ ಎಲೈ ಕುರುಡನಾದ ಕುಬೇರನೆ ! ನೀನು ಕಪಟಕೃತ್ಯಂಗಳಂ ಕಲಿತುಇದ್ದೀಯೆ ? ನಿನ್ನ ಮನಸ್ಸಿಗೆ ನಮ್ಮನ್ನಾಶ್ರಯಿಸಿ ಇರಬೇಕೆಂದು ತೋರಲಿಲ್ಲವೊ ? ಏನೋ ನಾಕಾಣೆಎಂದು ಪೇಳಿದ ಆ ದೈತ್ಯೇಶ್ವರನ ಮಾತುಗಳಂ ಕೇಳಿ ಗಡಗಡನೆ ನಡುಗುತ್ತ ಎಲೈಸ್ವಾಮಿಯೆ ! ಪುಂಡುಗಾರನಾದ ಜಯಂತನಂ ಕೂಡಿ ನಳಕೂಬರನು ದೇವವೇಶಿಯರೊಡನೆ ಮನಸ್ಸುಬಂದಂತೆ ಎಲ್ಲಿಗೋ ಹೊರಟುಹೋದರು, ವಿಶೇಷವರ್ತಮಾನಂಗಳಂ ಈ ಚಿಗೆ ನಾನರಿಯೆನೆಂದುಪೇಳಿ ಅಂಜಲಿಬದ್ಧನಾಗಿ ನಿಂತಿರಲು, ಆಗ ಉಗ್ರಬಾಹುವಿಗೆ ಜ್ಯೇಷ್ಠನಾದ ಮಹಾಬಾಹುವಿನಿಂದೊಡಗೂಡಿ ಶಂಕುಕರ್ಣನುಗೊಣಗುಟ್ಟುವ ಮಾತುಗಳಂ ಕೇಳಿ ಕರಾಳವಕ್ತ್ರನೆಂಬದೈತ್ಯೇಶ್ವರನು ಆ ಮಂತ್ರಿಗಳ ಈರ್ವರಂ ಕುರಿತು ನೀವು ಎಲ್ಲಿಬಂದರೂ ಗುಸುಗುಂಪುಮಾತುಗಳು ಬಿಡೋದು ಈ ಇಷ್ಟ ಅರ್ಥವಂ ಸ್ಫುಟವಾಗಿ ಪೇಳೋದು ಯಂದಿಗೂಇಲ್ಲ, ಎಲೈಶಂಕುಕರ್ಣನೆ ! ಈ ಮೇರಿಗೆ ಕಾರ್ಯಾಕಾರ್ಯವಿಚಾರಂಗಳಂ ಪೇಳದೆ ಉಗ್ರಬಾಹುವಿನನ್ನು ಉಳಿಸಲಿಲ್ಲ, ನಿನ್ನಸ್ವರೂಪವೇ ಇಷ್ಟೆಂದುಪೇಳ್ದ ದೈತ್ಯೇಶ್ವರನಂ ಕುರಿತು ಮಂತ್ರಿಗಳೀರ್ವರು ಎಲೈಸ್ವಾಮಿಯೆ ! ಈಗದೂತರು ವಿಜ್ಞಾಪನೆಯಂ ಮಾಡಿದಅರ್ಥಕ್ಕೆ ಉಪಾಯವಂ ಯೋಚಿಸಿಇದ್ದೇವೆ, ಅಪ್ಪಣೆಯಾದರೆ ವಿಜ್ಞಾಪನೆಯಂ ಮಾಡುವೆವೆಂದು ಸಮೀಪಕ್ಕೆಬಂದು ಎಲೈಸ್ವಾಮಿಯೆ ! ದಿಕ್ಪಾಲಕರು ವಿಜ್ಞಾಪನೆಯಂ ಮಾಡಿದಅರ್ಥವು ದೂತರುಬಂದು ಹೇಳಿದಅರ್ಥವೂ ಈ ಎರಡು ಒಂದೇ ಪ್ರಕಾರವಾದುದರಿಂದದ್ವೀಪಾಂತರಂಗಳಿಗೆ ವಿಜಯಂಗೈಯಬೇಕು,ನಾನು ಪೇಳ್ದರಾಯನು ದ್ವೀಪಾಂತರಂಗಳಲ್ಲಿಯೆ ಸಂಚಾರವಂಮಾಡುತ್ತಾ ಇದ್ದಾನು, ಇಂದ್ರನವಸ್ತುಗಳು ಕೆಲವುವಾಹನಂಗಳು ಜಯಂತಮೊದಲಾದ ಸಾಮಾಜಿಕರು ರಂಭಾದಿವೇಶಿಯರು ಸಹ ದೇವದಾನವರಿಗೂ ಅಸಾಧ್ಯವಾದ ಕ್ರೌಂಚದ್ವೀಪದಲ್ಲಿಯೆ ವಾಸವಂಮಾಡಿರಬೇಕೆಂದು ನಮ್ಮಬುದ್ಧಿಗೆತೋರುತ್ತಲಿದೆ ಎಂದುಪೇಳಲು, ಆಗ ದೈತ್ಯೇಶ್ವರನು ಕುಬೇರನಂ ಕುರಿತು ಎಲೈ ಕುಬೇರನೆ ! ನವನಿಧಿಗಳಂ ಸವರಿಸಿಕೊಂಡು ಹಿಂದುಕಡೆಯಲ್ಲಿಬಾಯೆಂದು ಕಟ್ಟುಮಾಡಿ, ಅಗ್ನಿಯನ್ನು ಅಡಿಗೆಮನೆಗೆಗೊತ್ತುಮಾ

ಡ್ರಿಯಮುನಿಗೆ ಮೃತ್ಯುವಿನಂ [illegible] ಸಾ ಮುಂದುಕಡೆಯಲ್ಲಿ
ಬರುವಂತೆ ಅಪ್ಪಣೆಯಿತ್ತು ಸಿಖುಖುತ್ರಿಯಕರನಂಪಿಡಿದು ತನ್ನಸಮೀ
ಪದಲ್ಲಿರುವಂತೆ ಕಟ್ಟುಮಾಡಿ, ಚಾರಣಸೇವಕನಾದ ನರುಣನಿಗೆ ಬಿರಿದು ಬಾ
ವಲಿಗಳಂಪಿಡಿದು ಬಲದಲ್ಲಿಬಾರೆಂದುನೇಮಿಸಿ ಬಲಪ್ರಗಾರನಾದವಾಯುವಿ
ಗೆ ವಶವಾಗಿ ಮಾತುಗಳನ್ನಾಡುತ್ತಾ ಕಶೆಯಂ ಪಿಡಿದಿರುವ ಕೌಶಾಸನಿಗ
ಕೋಶಾಲಯುವೇ ಗೊತ್ತೆಂದುಹೇಳುತ್ತಾ ಅನೇಕಕೋಟ್ಯಬಲದ ಸೇನೆ
ಯಿಂದೊಡಗೂಡಿ ಕ್ರೌಂಚದ್ವೀಪವಂಕುರಿತು ಬರುಬರುತ ಮಾರ್ಗದಲ್ಲಿ
ವಾಯುವಂ ನೋಡಿ ದೈತ್ಯೇಶ್ವರನು ಪ್ರಾಣಸಖನಾದ ಜಗತ್ಪ್ರಾಣನೆ ನಿ
ನ್ನೊಡನೆ ಬಂದುಕ್ರೈಕಾಳಗವಂ ಕಾಯಬೇಕೆಂಬ ಇಚ್ಛೆಯುಂಟೆಂದುಹೇಳ
ಲು, ಆಗವಾಯುವು ಸ್ವಾಮಿದೈತ್ಯೇಶ್ವರನೆ ! ಮುದುಕನಾದನಾನು ನಿನ್ನೊ
ಡನೆ ಕಾಳಗವಂ ಕಾಯಲಾರೆನೆಂದು ಹೇಳಿದವಾಯುವಿನ ಮಾತಂಕೇಳಿ ಕ
ರಾಳವಕ್ತ್ರನು ನಿನ್ನಬಲವಂ ಪರೀಕ್ಷೆಯಂಮಾಡಬೇಕು, ನಿನ್ನಮನಸ್ಸು
ಬಂದಂತೆ ಘಾಳಿಯಂಬೀಸಿ ಪರ್ವತಗಳನ್ನೆಲ್ಲಾಡಿಸೂ ಎಂದು ಅಪ್ಪಣೆಯ
ನ್ನಿತ್ತು ಬಳಿಕ ಮಾರ್ಗದೋಳ್ ಬರುತ ಬಂದುಕಾಲದಲ್ಲಿ ವಾಯುದೇವ
ನು ಚಂಡಮಾರುತ ತಂಡಂಗಳನ್ನುಂಟುಮಾಡಿ ಬಿಗಿಯಾಗಿ ಬೀಸುವಸ
ಮಯದಲ್ಲಿ ಎದ್ದಕೆಂಧೂಳಿಗಳು ಭೂವ್ಯೋಂತರಿಕ್ಷಂಗಳಂ ಕಪ್ಪಿ ಗಾಢವಾ
ದ ಅಂಧಕಾರಉಂಟಾಗಲು, ಆಗ ಸೂರ್ಯನು ಹೊಳೆಯಂತೆ ಘಾಳಿಯೋಳ್
ಬಿದ್ದು ಗಗನಕ್ಕೆ ಹಾರಿಹೋದನು, ಚಕ್ರವಾಳಪರ್ವತವು ಚಕ್ರದಂತೆ
ತಿರುಗುವಸಮಯದಲ್ಲಿದಿಗ್ಗಜಂಗಳು ಬಿಗಲುಬಿದ್ದು ಒಪ್ಪಾಡಿದವು, ಶೇಷನು
ಶಯನವಂಮಾಡಿದನು, ಸಮುದ್ರೋದಕಂಗಳು ಆಕಾಶಕ್ಕೆ ಹಾರಿಹೋ
ದವು, ಭೂತಲವು ತಾಳೆವಾಲೆಯಂತೆ ತಟತಟತ್ಕಾರಶಬ್ದದಿಂದ ತಲ್ಲಣಪಟ್ಟಿ
ತು, ಪರ್ವತಂಗಳು ರೆಕ್ಕೆಗಳಿಂದ ಕೂಡಿರುವ ಪಕ್ಷಿಗಳಾಗಿ ಹಾರಿಹೋ
ದವು, ದಿಕ್ಪಾಲಕರಪಟ್ಟಣಂಗಳು ದಿಕ್ಕುದಿಕ್ಕುಗಳಲ್ಲಿ ವಿಪರೀತವಾಗಿಬಿದ್ದವು
ಬ್ರಹ್ಮಾಂಡಕಟಾಹವು ಚೆಂಡಿನಂತೆ ಪುಟಹಾರುತ್ತಾ ಹೀಗೆ ಬಂದುಮು
ಹೂರ್ತಇರುತ್ತಿರಲು, ಆ ಕಾಲದಲ್ಲಿ ಸುಗಂಧರಾಯನು, ಸುಮತಿ, ಛಾಯಾ
ಗುಪ್ತ, ಇವರೀರ್ವರಕೈಗಳಂಪಿಡಿದು ಕಣ್ಣುಗಳಂಮುಚ್ಚಿಕೊಂಡು ಘಾ
ಳಿಯೋಳ್ ಬಿದ್ದು ಘಾಬರಿಯಿಂದ ಗಂಗಾತೀರದಲ್ಲಿದ್ದ ವಾಮದೇವಾಶ್ರ

ನುಕ್ಕೆ ಸ್ವಪ್ನವಶದಿಂದ ಬಂದುಬಿದ್ದು ಎಲೈಸುಮಂತ್ರಿಯೆ ! ಇದೇನುವಿಪರೀತವೊ ಕಾಣೆವುನಾವು, ಎಲ್ಲಿಇದ್ದವರು ಎಲ್ಲಿಗೋಬಂದುಬಿದ್ದೆವು, ಎನ್ನಬುದ್ಧಿಗೆ ಪ್ರಳಯಕಾಲವೇ ಬಂದುಒದಗಿತೋ ಏನೋ ತಿಳಿಯಲಶಕ್ಯವು, ದೈವಕೃತ್ಯಂಗಳು ಹ್ಯಾಗೆಇಹವೊ? ಮನುಷ್ಯಮಾತ್ರರಾದ ನಮ್ಮಿಂದ ಆಗತಕ್ಕದ್ದುಏನು, ಆ ಮಹಾಯೋಗಿನಿಯುಅಪ್ಪಣೆಯ ಕೊಟ್ಟಮಾತುಗಳು ಸಟೆಯಾಗುವದು ಸರ್ವಥಾಇಲ್ಲ, ಮಹಾತ್ಮರಾದವರ ಮಾತುಗಳಂ ಮಂತ್ರಗಳಂತೆ ಮನದಿಂ ನೆನೆಯಬೇಕೆಂದು ಪೇಳುತ್ತಾ ಎಲೈಮಂತ್ರಿಯೆ ! ಕಾರಣವು ಸಾಧಿಸುವದು ಮಹಾಪ್ರಯಾಸವೇಸರಿ, ನಾವು ಈ ವಿಪತ್ತುಗಳಂ ಕಳೆದು ಪ್ರಾಣವಂತರಾಗಿಇದ್ದರೆ ಪುಣ್ಯಸಾಧನವಂ ಮಾಡತಕ್ಕದ್ದು, ಎನ್ನ ಬುದ್ಧಿಗೆ ಈ ಅವಾಂತರಗಳಲ್ಲಿ ನಾವು ಉಳಿವೋಮಟ್ಟು ಕಾಣಲ್ಪಡಲಿಲ್ಲ, ಅಯ್ಯಾಮಂತ್ರಿಯೆ ! ನಮ್ಮಪಾಡು ಈ ಪಾಡಾಯಿತಲ್ಲ, ಸೇನಾಕಟಕದಲ್ಲಿ ಏನೇನುಅವಾಂತರಂಗಳು ಆಗಿರುವವೊ ? ರತ್ನಪುರವು ಏನೇನುಗತಿಯಿತೊ ? ಒಡೆಯನಾದ ಸುಚರಿತ್ರರಾಯ ಕ್ಷೇಮದಿಂ ಇದ್ದಾನೊ? ತಾಯಿ ಗುಣವತಿಹ್ಯಾಗೆ ಇರುವಳೋ ನಾನರಿಯೆ ? ಪರಮೇಶ್ವರಿಯ ಪಾದವೇಗತಿ, ನೀರಿನಲ್ಲಿಮುಳುಗಿಸಿದರೂ ಮುಳುಗಿಸಲಿ, ಹಾಲಿನಲದ್ದಿದರೂ ತೇಲಿಸಲಿ, ಆ ಘೋರ ಅಡವಿಗೆಹೊರತು ನಮಗೇನೆಂದುನುಡಿಯುತ್ತಾ ಯಕ್ಷನಂ ಕರದು ಅಯ್ಯಾ ಯಕ್ಷನೆ ! ನೀನು ಕಟಕಕ್ಕೆಹೋಗಿ ವೀರಸೇನಮೊದಲಾದ ಸೇನಾಪತಿಗಳು, ಸೇನೆಯು, ಸೇವಕಜನರು, ಈಗ ಬಂದ ಪ್ರಳಯಕಾಲ ವಾಯುವಿನವೇಗಕ್ಕೆ ತಡೆಯಲಾರದೆ ಯಾರಾರು ಏನೇನುವಿಪತ್ತುಗಳಂ ಪಟ್ಟರೋ ಅದೆಲ್ಲವಂ ವಿಚಾರಿಸಿ ರತ್ನಪುರದಲ್ಲಿರುವ ಮಹಾರಾಯನ ಕ್ಷೇಮಸಮಾಚಾರವಂ ಮತ್ತಂ ಗುಣವತೀದೇವಿ ಮೊದಲಾದ ತಾಯಿಗಳ ಕುಶಲವಂ ತಿಳಿದುಬಾರೆಂದು ಅಪ್ಪಣೆಯನ್ನಿತ್ತು ಕಳುಹಿಸಿದಬಳಿಕ ರಾಯನು ಗಂಗಾನದಿಯಲ್ಲಿ ಸುಮಂತ್ರಿಸಮೇತನಾಗಿ ಸ್ನಾನವಂಮಾಡಿ ಸಂಧ್ಯಾವಂದನೆಕರ್ಮಂಗಳಂ ಮಾಡುತ್ತಿರಲು, ಆಗ ಆ ನದೀತೀರಕ್ಕೆ ವಾಮದೇವನೆಂಬ ಮಹರ್ಷಿಯುಬಂದು ದೂರದಿಂದಲೇನೋಡಿ ತೇಜೋವಂತನಾದ ಈರಾಯನು ಸುಚರಿತ್ರಮಹಾರಾಯನಿಗೆ ಮಂತ್ರೋಪದೇಶವಂಮಾಡಿದ ಬಳಿಕ ಆಮಹಾದೇವಿಯು ವರಪ್ರಸಾದದಿಂದುದ್ಭವಿಸಿದ ಮಹಾನುಭಾವನು

ಈತನೊ ಎಂದು ಆನಂದಪಡುತ್ತಾ ಸವಿಾಪವನ್ನೈದುತ್ತಿರಲು, ಆಗ ರಾಜನು ಪ್ರದಕ್ಷಿಣವಂಮಾಡಿ ನಾನು ಆತ್ರೇಯಸ ಗೋತ್ರೋದ್ಭವನಾದ ಸುಗಂಧವರ್ಮನೆಂದು ಹೇಳುತ್ತಾ ಗೋತ್ರಾಭಿವಂದನೆಯಂ ಮಾಡಲು, ಆಮಹರ್ಷಿಯುಕರವಂ ಪಿಡಿದು ಕಲ್ಯಾಣವಾಗಲೀಯೆಂದು ಆಶೀರ್ವಚನವಂಮಾಡಿ ಪರಮೇಶ್ವರಿಯ ಪಾದಕಟಾಕ್ಷಕ್ಕೆ ಪಾತ್ರನಾದ ಪರಮಪಾವನನೆಂದು ನೆನಯುತ್ತಾ ಎಲೈ ರಾಯನೆ ನಮ್ಮ ಆಶ್ರಮಕ್ಕೆ ಬಾಎಂದು ಕರದುಕೊಂಡು ಪೋಗಿ ಪರ್ಣಶಾಲೆಯೊಳ್ ಕುಳ್ಳಿರಿಸಿ ಕಂದಮೂಲಫಲಂಗಳಂ ಕೊಟ್ಟು ಸತ್ಕಾರವಂ ಮಾಡಿದ ಬಳಿಕ ಆ ಸುಗಂಧರಾಯನು ಮಹರ್ಷಿಯಂ ಕುರಿತು ಎಲೈ ಸ್ವಾಮಿಯೆ! ಈಗ ಎರಡುಘಳಿಗೆ ಒಳಗೆ ಪ್ರಳಯಕಾಲವಾಯುವುಬೀಸಿ ಎಲ್ಲೋ ಇದ್ದವರು ಇಲ್ಲಿಬಂದು ಬಿದ್ದೆವು, ಇದೇನು ಆಶ್ಚರ್ಯವೊ ತಾವುಸರ್ವಜ್ಞರಾದ ಕಾರಣ ಅಪ್ಪಣೆಯಂ ಕೊಡಬೇಕೆಂದು, ವಿಜ್ಞಾಪನೆಯಂಮಾಡಲಾ ಮಹರ್ಷಿಯು ಕ್ಷಣಕಾಲವು ಧ್ಯಾನಿಸಿ ಅಯ್ಯಾ! ರಾಯನೆ ಇದು ಪ್ರಳಯವಾ ಅಲ್ಲ ಪ್ರಾಣಿಗಳಿಗೆ ವಿಪತ್ತು ಅಲ್ಲ, ಕ್ರೌಂಚದ್ವೀಪವಂ ಸಾಧಿಸಬೇಕೆಂದುಬಂದಿರುವ ಕರಾಳವಕ್ತ್ರನೆಂಬ ದೈತ್ಯೇಶ್ವರನ ಕಟಾಕ್ಷಕ್ಕೆ ಪಾತ್ರನಾದ ವಾಯುವಿನ ವಿನೋದ ವಿಹಾರವೆಂದು ಹೇಳಿ ನಸುನಗುತ ಎಲೈ ರಾಯನೆ! ನೀನು ದುಷ್ಟರಾಕ್ಷಸರಂ ಸಂಹರಿಸಿ ಭೂಭಾರವಂ ತಗ್ಗಿಸಿ ಧರ್ಮಸಂಸ್ಥಾಪನವಂ ಮಾಡಬೇಕೆಂದು ಪುಟ್ಟಿದ ಪುರಾಣಪುರುಷನೆಂದು ಅಪ್ಪಣೆಯಂ ಕೊಟ್ಟ ಮಹರ್ಷಿಯ ಮಾತುಗಳಂ ಕೇಳಿ ರಾಜನು ಎಲೈ ಮಹಾನುಭಾವನೆ! ನಾನು ಕ್ರೌಂಚದ್ವೀಪಕ್ಕೆ ಹೋಗುವ ಉಪಾಯವನ್ನು ಎನಗೆ ಅನುಗ್ರಹವಂ ಮಾಡಬೇಕೆಂದು ನುಡಿಯಲು, ಆಗ ವಾಮದೇವನು ಜ್ಞಾನದೃಷ್ಟಿಯಿಂದ ಭೂತಭವಿಷ್ಯದ್ವರ್ತಮಾನಂಗಳಂ ತಿಳಿದರೂ ದೇವರಹಸ್ಯಂಗಳಂ ಪ್ರಕಾಶವಂ ಮಾಡಬಾರದೆಂದು ನಿಶ್ಚಯಿಸಿ, ಅಯ್ಯಾ ರಾಯನೇ! ಆದ್ವೀಪದ ಪ್ರವೇಶವಂ ಮಾಡುವದಕ್ಕೆ ಬ್ರಹ್ಮಾದಿಗಳಿಗೂ ಅಸಾಧ್ಯ ಆನ[illegible]ಪರ್ವತದಲ್ಲಿ ಆವಿರ್ಭವಿಸಿದ ಆನಂದವಲ್ಲಿ ಮಹಾದೇವಿಯ ದರ್ಶನಾರ್ಥ[illegible]ಹೋಗಿ ನಮ್ಮಂಥಾವನು ಹಿಂತಿರಿಗಿ ಬಂದೆನು ಅಲ್ಲಿ ಯಾರಿಗೂ[illegible] ಆ ಆಶೆಯಂ ಬಿಡೀ ಎಂದು ಹೇಳು

ತ್ತಾ ಆವರೂ ಒಂದು ಉಪಾಯವುಂಟು,ಅದೇನೆಂದಡೆ ಕ್ರೌಂಚದ್ವೀಪವಾಸಿನಿಯಾದ ಬೃಂದಾರಿಕಾ ಎಂಬಯೋಗಿನಿಯು ಕಟಾಕ್ಷ ವದಗಿದ್ದೇವುಂಟಾದರೆ ಅದೇನು ಮಹಾತ್ಕಾರ್ಯವಲ್ಲ, ಆ ಯೋಗಿನಿಯು ಈ ಸಮಯದಲ್ಲಿ ದಾರು-ಕಾವನದೋಳ್ ಅಖಂಡಸಮಾಧಿಯಲ್ಲಿ ಇರುವಳು, ನಾವು ಎಷ್ಟುಸಾರಿಯೋ ಅವಳಸಮೀಪಕ್ಕೆ ಹೋಗಿ ಬಹುಕಾಲ ಅಲ್ಲಿಕಾದಿದ್ದರೂ ಬಹಿರ್ಮುಖಳಾಗೋದಿಲ್ಲ ಎಂದು ತಿಳಿದು ಹಿಂತಿರಿಗಿಬಂದೆವು, ನಿನ್ನಪುಣ್ಯಾಪ್ರಭಾವದಿಂದ ಆಗತಕ್ಕಕಾರ್ಯವೇ ಹೊರತು ಉಪಾಯದಿಂದ ಸಾಧ್ಯವಂಮಾಡುವ ಕಾರ್ಯವಲ್ಲ, ಇಂತೆಂದು ಪೇಳ್ದ ವಾಮದೇವ ಋಷಿಯುವಾತುಗಳಂ ಮನವಿಟ್ಟು ಲಾಲಿಸಿ ಮುಗುಳುನಗೆಯಿಂದ ಸುಮತಿಯುಮುಖವನ್ನೀಕ್ಷಿಸಿ ಮನದೋಳ್ ಮಹೇಶ್ವರಿಯೇ ಎನಗೆ ಮಹಾಯೋಗಿನಿಯಸ್ವರೂಪವಂತಾಳಿ ಪ್ರತ್ಯಕ್ಷಳಾಪಳು ಎಂದು ಸಂತೋಷಸಮುದ್ರದೋಳ್ ಮುಳಗಿರುವ ಸಮಯದಲ್ಲಿ ಛಾಯಾಗುಪ್ತನು ಮುಂದುಗಡೆಯಲ್ಲಿಬಂದುನಿಂತು ಪ್ರಣಾಮವಂಮಾಡಿ ವಾರಗಣ್ಣಿನನೋಟದಿಂದಲೇ ವಾರೆಯಾಗಿ ಕರಮುಕೊಂಡುಹೋಗಿ ರಾಯನಂಕುರಿತು ಎಲೈ ರಾಜೇಂದ್ರನೆ ! ಅಪ್ಪಣೆಯಂ ಕೊಟ್ಟರೀತಿಗೆ ಕಟಕಕ್ಕೆಹೋಗಿ ವೀರಸೇನನಂಕಂಡು ಸ್ವಾಮಿಯ ಕ್ಷೇಮವಂಪೇಳಲು, ಆಗ ವಿರಸೇನನು ಅಯ್ಯಾ ಯಕ್ಷನೆ ! ನೀನು ಸುಗಂಧರಾಜೇಂದ್ರನ ಕ್ಷೇಮವಂ ಪೇಳುವಪರ್ಯಂತವು ಪ್ರಾಣಂಗಳಂ ಕೈಗಳಲ್ಲಿ ಪಿಡಿದುಇದ್ದೆವು, ಇನ್ನು ಯಾವುಏನಾದರೇನುಚಿಂತೆ ನಮ್ಮೊಡೆಯನಾದ ರಾಜಾಧಿರಾಜನ ಕುಶಲವೆ ಜಗತ್ತಿಗೆ ಕುಶಲವು,ಇದಲ್ಲದೆ ನಮ್ಮ ಸೇನಾಕಟಕದೋಳ್ ನಿನ್ನೆದಿನ ಮಧ್ಯಾಹ್ನಕಾಲದಲ್ಲಿ ಎಲ್ಲಿಂದಲೋ ಒಂದು ಉತ್ಪಾತಹುಟ್ಟಿಬಂತೋ ಎಂಬಂತೆ ಒಂದು ಘಾಳಿಬೀಸಲು ಆಗ ನಮ್ಮ ಸೇನೆಯೋಳ್ ಹಾರಾಡುವಆನೆ ಕುದುರೆಗಳನ್ನು ಹಗ್ಗ ಸುರಪಣಿಗಳಿಂದ ಕಟ್ಟಿಸುತ್ತಾ ಬಿಡಾರಗಳಾದ ಗುಡಾರಗಳ ಗೂಟಗಳು ಬಲವಾಗಿ ಬಡಿಸುತ್ತಾ ರತ್ನಪುರದಿಂದಬಂದ ಸುಚರಿತ್ರಮಹಾರಾಯನ ಕ್ಷೇಮಸಮಾಚಾರಂಗಳಂ ಪತ್ರಿಕಾಮುಖದಿಂದಕೇಳಿ ಸಂತೋಷಪಡುತ್ತಾ ವಣಾರ್ಥವಾಗಿ ಪೋಗಿರುವ ಸುಗಂಧಮಹಾರಾಜೇಂದ್ರನಿಗೆ ಕ್ಷೇಮವಾಗಲೀಎಂದು ಚಾಮುಂಡೀದೇವಿಯ ಚರಣಗಳನ್ನೇಧ್ಯಾನಿಸುತ್ತಾ ಇರುವಸಮಯದಲ್ಲಿಯೋ

ನೀನು ಬಂದುಕ್ಷಣವನು ಪೇಳುವುದರಿ ದನಾಸ್ತಿಕರು ಅಸಂಭವಿತರಾದವು ಎಂದು ಪೇಳಿ ವೀರಸೇನನು ನಿಮ್ಮಡಿಗಳಿಗೆ ಇಂತಾಸಂತ ಪ್ರಕಾರವಂಗಳಂ ಪೇಳುವನು ಎಂದು ಭೀಮಸಾಗುಪ್ತನು ಮಿತ್ರಾಪನಮುಂಗೈಯನ್ನು ವಾತುಗಳಂಕೇಳಿ, ಸುಗಂಧರಾಜೇಂದ್ರನು ಸಂತೋಷಪಟ್ಟು ಸುಮತಿಯ ಮುಖವಂನೋಡಿ, ಎಲೈ ಮಂತ್ರೀಶ! ಎನ್ನಬುದ್ಧಿಸ್ಥಿರವಾಯಿತು, ಇದನ್ನು ಯೋಗಿಸಿಯು ಪೇಳದರೀತಿಗೆ ಇಲ್ಲಿಯೇ ಪ್ರಸಕ್ತರಸಯಂ ಪ್ರತಿಪಾದಿ ಕ್ಷಾಂಬನ್ನೀಪಕ್ಕೆ ಪೊರಟುಹೋಗಬಹುದೆಂದು ಪೇಳುತ್ತಾ ಬಂದಾನೊಂದು ಏಕಾಂತ ಪ್ರದೇಶದೊಳ್ ಮೌನವಂತನಾಗಿ ಮಂತ್ರ ಶಾಸ್ತ್ರದಲ್ಲಿ ಹೇಳಿದರೀತಿಯಿಂದ ಆ ಅಗಾಧಮಂತ್ರದಲ್ಲಿ ಕುಳಿತು ಮಂತ್ರಯೋಗಪ್ರಕಾರದಿಂದ ಏಕಾಗ್ರಚಿತ್ತನಾಗಿ ಧ್ಯಾನಿಸುತ್ತಾ ಇರುತ್ತಿರಲು, ಅತ್ತಲಾ ಕರಾಳವಕ್ತ್ರನೆಂಬ ದೈತ್ಯನು ಅನೇಕ ದೈತ್ಯದಾನವ ಸೇನೆಯೊಡಗೂಡಿ ಅಳತಾವೃತಖಂಡವು ಇತ್ತಲೊ ಅತ್ತಲೋ ಎಂಬಂತೆ ನಡೆಯುತ್ತಾ. ಲವಣಸಮುದ್ರವಂ ನೋಡಿ ದಾನವರು ಈ ಹುಚ್ಚು ಹೊಳೆಯನ್ನು ಸೃಷ್ಟಿಕರ್ತನಾದ ಬ್ರಹ್ಮದೇವನು ಏತಕೋ ಪಚ್ಚ ಎಂದುನಗಾಡಿದನು. ಆವನು ಹುಚ್ಚನೇ ಸರಿಎಂದು ಹುಚ್ಚುಮಾತುಗಳನ್ನಾಡುತ್ತಾ, ಲವಣಸಮುದ್ರವಂ ಲಾಘವದಿಂದ ದಾಂಟಿ ಪ್ಲಕ್ಷದ್ವೀಪವನ್ನೈದುತ್ತಿರಲು ಕಾಲದೋಷಸ್ಯದೈತ್ಯೇಶ್ವರನಾದ ಕರಾಳವಕ್ತ್ರನು ಶಂಕುಕರ್ಣನಂನೋಡಿ ಅಯ್ಯಾ ಶಂಕುಕರ್ಣನೆ ! ಈ ಪ್ಲಕ್ಷದ್ವೀಪದಲ್ಲಿಯೂ ಉಗ್ರಬಾಹುವಿನಹುಟ್ಟು ಇಲ್ಲದಂತೆಮಾಡಿ ಬಂದ ಮಹಾನುಭಾವನೀನಲ್ಲವೇ? ಎಂದುಪೇಳುತ್ತಾ ಮಹಾಬಾಹುವಂ ಮಹಾರ್ಣದಯಿಂದಕಾಣುತ್ತಾ ಬರುಬರುತ್ತ. ಪ್ಲಕ್ಷದ್ವೀಪವಂದಾಟಿ ಇಕ್ಷುಸಮುದ್ರವನ್ನೀಕ್ಷಿಸದೆ ಮಾರ್ಗದಲ್ಲಿ ಬರುತ ಶಂಕುಕರ್ಣನನ್ನುವಿಲೋಕಿಸಿ ಎಲೈ ಶಂಕುಕರ್ಣನೆ ! ನೀನು ಉಗ್ರಬಾಹುವಿನನ್ನು ಉಗುರುಗಳಿಂದಲೀ ಶೀಳಿ ಕಳೆದು ಬಿಸುಟನೆಂದು ಪೇಳಿದೆಯಲ್ಲ, ಅವನಬಲಪರಾಕ್ರಮಂಗಳಂ ನಿರೂಪಿಸೂಎಂದು ಅಪ್ಪಣೆಯಂಕೊಟ್ಟ ದೈತ್ಯೇಶ್ವರನ ಮಾತುಗಳಂಕೇಳಿ ಮಹಾಬಾಹುವಿನ ಮೊಗವಂನೋಡುತ್ತಾ ಸ್ವಾಮಿ ! ಅವನಬಲಪರಾಕ್ರಮಗಳಂ ನಾನೆಂತುಪೇಳಲಿ. ಆತನು ದೈತ್ಯವನಕ್ಕೆ ದಾವಾನಲನು, ಬುದ್ಧಿಯಲ್ಲಿ ಬೃಹಸ್ಪತಿಯು, ಪರಾಕ್ರಮದಲ್ಲಿ ಪರಶುರಾಮ

ನೇಸರಿ, ಶಸ್ತ್ರಾಸ್ತ್ರವಿದ್ಯೆಗಳೊಳ್ ಷಣ್ಮುಖನೇಸರಿ ಮಾಯಾವಿದ್ಯೆಯೊಳ್ ಮಯ, ಮಾರೀಚ, ಶಂಬರರಂ ಮಕ್ಕಳಂತೆ ಮನ್ನಿಸುವನು, ಮನುಷ್ಯನಾದರೂ ಮನ್ಮಥನಂತೆ ತೋರುವನು, ಇದಲ್ಲದೆ ಸ್ವರ್ಗದಲ್ಲಿ ನಾನು ಇಂದ್ರನಂ ನೋಡಿ ಇರುವದರಿಂದ ನನ್ನ ಮನಸ್ಸಿಗೆ ಅವನೇ ಇವನೊ ಇವನೇ ಅವನೊ ಎಂಬ ಸಂಶಯವಂಕುರಿಸಿ ಇದೆ, ಹೀಗಲ್ಲದೆ ಇದ್ದರೆ ಮನುಷ್ಯನೆಲ್ಲಿ? ದ್ವೀಪಾಂತರದಲ್ಲಿ ಪ್ರವೇಶವಂ ಮಾಡಿದನೆಂದರೆ ಏನು? ಅದರಿಂ ಭೂಲೋಕದಲ್ಲಿ ಇಂದ್ರನೇ ಉದ್ಭವಿಸಿ ಇರಬೇಕೆಂದು ತೋರುತಲಿದೆ, ಅಂತುಮಲ್ಲದೆ ಆ ಮಹಾಗಜವು ಮಾಯೆಯಿಂದ ಮಹೇಂದ್ರನಂತೆ ಕಾಣಿಸುತಲಿರುವ ಉಗ್ರಬಾಹುವಿನಂ ಅಗ್ರಭಾಗದೊಳ್ ಆಳಿದವನಂತೆ ಕಾಣುತಾ ಅಡಿಗಳಿಗೆ ಅಡ್ಡಬೀಳುತನಿಂತಡಿಯಲ್ಲಿಯೇ ನಿಂತಿದ್ದನ್ನೋಡಿ ಇದು ಏರಾವತವೇ ಆದೀತೆಂದು ಯೋಚಿಸಿ ಒಡೆಯನಾದ ಉಗ್ರಬಾಹುವಿಗೆ ಇದೇನೋ ಕಪಟಗಜವೇ ಸರಿಯೆಂದು ಹೇಳಿದರೂ ಕೇಳಲಿಲ್ಲ, ಈ ರಾಜನ ಮಾತುಗಳು ಮರ್ಮವಂ ಭೇದಿಸುವಂತೆ ತೋರುತಲಿವೆ, ಕೃತ್ರಿಮಶತ್ರುವಾದ ಈತನು ಈಶ್ವರಕಾರುಣ್ಯದಿಂದ ಜಯಿಸುವನಲ್ಲದೆ ಬಲಪರಾಕ್ರಮದಿಂದ ಸಾಧ್ಯವಂ ಮಾಡುವದಕ್ಕೆ ಸರ್ವಥಾ ಅಶಕ್ಯನೇಸರಿ ಎಂದು ವಿಜ್ಞಾಪನೆಯಂ ಮಾಡಿದರೂ ಮನಸ್ಸಿಗೆ ತರಲಿಲ್ಲ, ಇದಲ್ಲದ ಪಾತಾಳಕ್ಕೆ ಹೋಗಿ ನಿಮ್ಮಡಿಗಳಿಗೆ ಅರಿಕೆಮಾಡಿ ಅಪ್ಪಣೆಯಾದಮೇರೆಗೆ ನಡೆಯುವದು ಉಚಿತವೆಂದು ಹೇಳಿದರೂ ಕೇಳದೆ ಕಾಳಗವಂ ಮಾಡಬೇಕೆಂದು ಕಾಲುಗಳಂ ಸವರುತ್ತಾ ನನ್ನಂ ಕಂಡಕ್ಷಣದಲ್ಲಿಯೆ ಕಡಿಯಬೇಕೆಂದು ಕತ್ತಿಯನೆತ್ತಿ ಬರುವಸಮಯದಲ್ಲಿ ಕಾಲ್ಗಳಂ ಕಟ್ಟಿಕೊಂಡಬಳಿಕ ನನ್ನಂಬಿಟ್ಟನು, ಇಂಥಾ ಮೂರ್ಖನಾದ ಉಗ್ರಬಾಹುವಿನ ಹುಟ್ಟಡಗಿಸಿದ ಮಹಾವೀರನು ಆತನು ಮಾಡಿದ ಸಾಹಸಕೃತ್ಯಂಗಳಂ ನಾನು ಹೇಳುವದಕ್ಕೆ ಶಕ್ತನಲ್ಲವೆಂದು ವಿಜ್ಞಾಪನೆಯಂ ಮಾಡಲು, ಆಗ ಶಂಕುಕರ್ಣನ ಮಾತುಗಳಂ ಕೇಳಿ ಕರಾಳವಕ್ತ್ರನೆಂಬ ದೈತ್ಯೇಶ್ವರನು ಮನದೊಳ್ ಮಹತ್ತಾದ ಚಿಂತಾಸಮುದ್ರದಲ್ಲಿ ಮುಳುಗಿದನು ಅನ್ಯಕೆಲಂಬರು ದೈತ್ಯದಾನವವೀರರು ಶಂಕುಕರ್ಣನು ಹೇಳಿದಮಾತುಗಳಂ ನೆನದು ನಿದ್ರಾಹಾರಗಳಂ ಬಿಟ್ಟು ಯಾವದಿಕ್ಕುಗಳಲ್ಲಿ ನೋಡಿದರೂ ಸುಗಂಧರಾಯನಂತೆ ಕಾಣುತ್ತಾ ಕಳವಳಹ

ತ್ತಿ ಮಾರ್ಗದೊಳ್ ಬರುತ ಬೆಟ್ಟಗಳಂತೆ ಬಿದ್ದಿರುವಬೂದಿಗುಡ್ಡೆಗಳನ್ನು, ನೀರುಹೀರಿಹೋಗಿರುವ ನದೀನದಂಗಳನ್ನು, ಅಲ್ಲಲ್ಲಿ ಹಾಳಾಗಿಇರುವ ಪಟ್ಟಣಗಳನ್ನುನೋಡಿ ಆರಾಮನ ಅಸ್ತ್ರಾಗ್ನಿಯಿಂದಲೆ ಈ ಪ್ಲಕ್ಷದ್ವೀಪವು ಈಪರಿ ಆಯಿತೆಂದು ಮಾತುಗಳನ್ನಾಡುತ್ತಾ ಶಾಲ್ಮಲಿದ್ವೀಪಕ್ಕೆ ಸುತ್ತಿ ಬಂದಿರುವ ಸುರಾಸಮುದ್ರವನ್ನೋಡಿ ಕರಾಳವಕ್ತ್ರನೆಂಬ ದೈತ್ಯೇಶ್ವರನು, ಮಹಾಬಾಹುವು, ಶಂಕುಕರ್ಣ, ಮುಂತಾದಮಂತ್ರಿಗಳಂ ಕುರಿತು ಎಲೈಮಂತ್ರಿಗಳಿರಾ! ನಾವು ಪಾತಾಳಲೋಕವಿಂ ಬಂದಬಳಿಕ ಮಾರ್ಗಾಯಾಸದಿಂದಲು ಮನೋವ್ಯಸನದಿಂದಲುಂ ಮಹಾವಿಪತ್ತು ಬರುವ ರೀತಿತೋರುತಲಿಧೆ, ಈ ವಿಪತ್ತುಗಳಂ ಪರಿಹರಿಸಿ ಜಯಪ್ರದವಂ ಕೊಡುವರೀತಿಗೆ ಸುರಾಸಮುದ್ರತೀರದೊಳ್ ನಮ್ಮಕುಲದೇವತೆಯಾದ ನಿಕುಂಭಿಳಾ ಮೂರ್ತಿಯುಂ ನಿರ್ಮಾಣವಂ ಮಾಡಿ ಪೂಜೆಯುಂ ಮಾಡಬೇಕೆಂದು ಎನ್ನಬುದ್ಧಿ ಬಯಸುವವರಿಂ ಈ ತೀರದಲ್ಲಿಯೇ ಧ್ವಜಪತಾಕೆಗಳಂ ನಿಲ್ಲಿಸಿ ನಿರಾಜೆ ಗುಡಾರಗಳುಂ ಬಿಡಾರಂಗಳಂತೆ ರಚಿಸುವದಕ್ಕೆ ಶಂಕುಕರ್ಣನಿಗೆ ನೇಮಿಸಿ ಸಮೀಪದಲ್ಲಿ ನಿಂತಿರ್ದ ನಿಖುಖುತಿಯುಕಂಡು ಅಯ್ಯಾ! ನೀನು ದಿಕ್ಪತಿಗಳಿಗೆ ನಮ್ಮ ಸೇನಾನಿವೇಶನಕ್ಕೆ ಸುತ್ತಲು ಅತಿಜಾಗ್ರತೆಯಿಂದ ಕಾವಿರುವಂತೆಕಟ್ಟುಮಾಡಿಬಾ ಯೆಂದು ಹೇಳಿ, ಕುಲಗುರುವಾದ ಶೌಷ್ಕಲಕನಂಕಂಡು ಎಲೈ ಸ್ವಾಮಿಯೆ! ನೀವು ನಿಕುಂಭಿಲಾದೇವಿಗೆ ದಿವ್ಯಾಂಬರಾಭರಣಗಳಿಂದ ಅಲಂಕಾರವಂಮಾಡಿ ಧ್ಯಾನಾವಾಹನಾದಿಗಳಿಂದ ಸಾಕ್ಷಾತ್ಕಾರ ವಾಗುವಂತೆ ದೀಕ್ಷೆಯುಂಮಾಡಿ ಪೂಜೆಗೈಯ್ಯಬೇಕೆಂದು ಪ್ರಾರ್ಥನೆಯುಂಮಾಡಿಮೊಗ್ಗಲಲ್ಲಿಯೆನಿಂತಿರ್ದಮಹಾಬಾಹುವಿನಂನೋಡಿ,ಅಯ್ಯಾ ಮಂತ್ರಿಯೆ! ನೀನು ಅಡಿಗೆಮನೆಯಲ್ಲಿ ಕಾದಿರ್ದು ಬೇಕಾದ ಪದಾರ್ಥಗಳನ್ನು ಒದಗಿಸುತ ಈ ಸಮುದ್ರದಲ್ಲಿರುವ ಮೀನುಗಳು ಮೊಸಳೆಗಳು ಮುಂತಾದ ಜಲಜಂತುಗಳ ಮಾಂಸಗಳನ್ನೂ ಗಂಡಭೇರುಂಡ, ಶರಭ ಮುಂತಾದ ಪಕ್ಷಿಗಳ ಮಾಂಸಗಳಂ ಪರಿಮಳದ್ರವ್ಯಗಳಿಂದಸಂಬರಿಸಿ ಪಕ್ವವಂಮಾಡಿಸು ಇನ್ನುಮುಖ್ಯರಾದ ನಮ್ಮಸೇನಾನಾಯಕರಂ ಸಾಯಂಕಾಲದ ಊಟಕ್ಕೆ ಬಿಡದಿಗೆ ಬರುವಂತೆ ಕಟ್ಟುಮಾಡುಎಂದು ಹೇಳಿ ತನ್ನಗುಡಾರಕ್ಕೆ ಪೋಗಿ ಮಣಿಮಂಚದೋ

ತೌರುಮನೆಯಂತೆ ತೋರುವ ಸುರಾಸಮುದ್ರವಂನೋಡಿ ಸ್ವಾಮಿ ಸಮುದ್ರರಾಜನೆ! ಅಸುರರೆಂಬ ನಮ್ಮಲ್ಲಿ ಸಂಶಯಂಬಿಟ್ಟು ಸುರರಿಗಿಂತಲು ಅಧಿಕವಾಗಿ ಸುರಾಪಾನವಂಮಾಡಿ ಸಂರಕ್ಷಣೆಯಂ ಮಾಡಬೇಕೆಂದು ಪ್ರಾರ್ಥಿಸುತ್ತಾ ನೊರೆಗಳಂಬೊಡಗೂಡಿದ ತೆರೆಗಳೊಳ್ ಮುಳುಗಿ ಮದವೇರಿ ಮತ್ತಣಗಿ ಮೈಮರೆತು ಬರುವ ಮಂದಮಾರುತನ ಮದಗಂಧಕ್ಕೆ ಮನಸೋತು ವರುಣನಂನೋಡಿ ಎಲೈ ದಿಕ್ಪತಿಯೆ! ನಿನ್ನಾಲಯಕ್ಕೆ ಅತಿಥಿಗಳಾಗಿಬಂದ ಅಸುರರಿಗೆಲ್ಲರಿಗೂ ಅಲ್ಲಲ್ಲಿಯ ಔತಣಗಳಂಮಾಡಿಸು, ಹತ್ತಾರುಸಾವಿರಗುಡಾಣಗಳಲ್ಲಿ ಸುರೆಯಂತುಂಬಿಸಿ ನಿಕುಂಭಿಳಾನಿವೇದನಕ್ಕೆ ಕಳುಹಿಸು, ಅಡಿಗೆಮನೆಯಲ್ಲಿ ಅರವತ್ತು ಸಾವಿರ ಹವಳಕಲಶಂಗಳಲ್ಲಿ ಮದ್ಯವಂತುಂಬಿ ಮಡಿಯಿಂದಮಡಗಿಸು, ಭಂಗಿತೋಳಾಯಿಮೊದಲಾದ ಮತ್ತ ದ್ರವ್ಯಗಳಂ ಗೊತ್ತಾಗಿ ಕಲ್ಪಿಸಿ ಪಾನಕಗಳಂಮಾಡಿಸೂ ಎಂದುವರುಣಿಗೆಕಟ್ಟುಮಾಡಿ ಮಣಿಮಂಚದಿಂದೆದ್ದು ಆಭರಣಗಳಂ ಅಲ್ಲಿಯೆಬಿಸಟು ಗುಡಾರದಿಂಪೊರಮಟ್ಟು ದೈತ್ಯೇಶ್ವರನು ಸ್ನಾನಾರ್ಥವಾಗಿ ಸಮುದ್ರತೀರವ ನೈದುತ್ತಿರಲು, ಆಗ ಸೂರ್ಯನು ಮಿತಿಮೀರಿ ಮದ್ಯಂಗಳಕುಡಿದು ಮತ್ತುಗೊಂಡವನಂತೆ ಮೈಮರೆತು ಅಸ್ತಾಚಲವಂಹತ್ತಿ ಹೆಜ್ಜೆಯಿಲ್ಲದೆ ಬೀಳುತ ಆಕಾಶವನ್ನೇ ಹಸ್ತಗಳಿಂದ ಆಧಾರವಾಗಿಪಿಡಿದು ಬಿದ್ದನೋ ಎಂಬಂತೆ ಅಸ್ತಂಗತನಾಗಲು, ಆಸಮಯದಲ್ಲಿ ದೈತ್ಯದಾನವರೆಲ್ಲರುಸ್ನಾನಗಳಂ ಮಾಡಿ ಆಚಮನವಂಮಾಡುವ ನೆಪದಿಂದಕುಡಿಯುವರು, ಕೆಲಂಬರುಮತ್ತೆ ಕೆಲಂಬರು ಇದು ಶಿವರಾತ್ರಿಯ ಪುಣ್ಯಕಾಲ, ಶಿರಸ್ನಾನವಂ ಮಾಡುವುದು ಮಹಾ ಉತ್ತಮವೆಂದುಹೇಳುತ್ತಾ ಮುಳುಗಿ ಒಳಗೆ ಗುಟುಕಾಗಿ ಹೊಟ್ಟೆ ತುಂಬಾಕುಡಿದು ಅಷ್ಟರಲ್ಲಿಯೆ ಭ್ರಷ್ಟರಾಗಿ ಹರನಸ್ಮರಣವಂಮರೆತು ಸುರಾ ಎಂದು ಹೇಳುತ್ತಾ ಮಂಕಾಗಿನಿಂತಿರುವರು, ಬೈಲಿಗೆ ಹೋಗಿಬರುವೆವೆಂದು ತಂಬಿಗೆಗಳಲ್ಲಿ ತುಂಬಿ ತೆರಳಿ ಪೋಗಿ ಅತ್ತಲಿತ್ತಲು ನೋಡಿ ಕುಳಿತು ಕುಡಿಯುವರು ಕೆಲವಂಬರು. ಮತ್ತು ಕೆಲವರು ರಾಕ್ಷಸಭಟರು ಸಂಧ್ಯಾದೇವಿಯೆ ನಿನಗೆ ಸಾಷ್ಟಾಂಗವು ಸಾಗಿಪೋಗೆನ್ನುವರು, ಕೆಲಂಬರು ದಾನವರು ಮತ್ತೇರಿ ಯಜ್ಞೋಪವೀತವೆ! ನೀನು ಯಜ್ಞದಲ್ಲಿಯೆ ಬರಬೇಕಲ್ಲದೆ ಯಾವಾಗಲು ಕತ್ತಿನಲ್ಲಿಬಿದ್ದು ಒದ್ದಾಡದೆ ಹೊರಟು

ಹೋಗೂಎಂದು ಪೇಳುತ್ತಾ ಕಿತು ಬಿಸಿ ತ್ತ ಕೆಲಂಬರು ಮು
ತ್ತುಗೊಂಡು ನಮಗೆ ಪಾತಾಳಲೋಕವು ಲೋಕವು ಬ್ಯಾಡ
ನುಂಗಿದರೆ ಮೋಕ್ಷವಂ ಕೊಡುವ ಸುರಾಸ ಸವಿನೋಡುವ
ಎಂದು ಪೇಳುತ್ತಾ ಸಾಲಾಗಿ ಬಿದ್ದಿರುವರು, ಈ ಪರಿ ದಾನವರು ಮಾನವಂ
ಬಿಟ್ಟು ಏನೇನೊ ಚೇಷ್ಟೆಗಳಂ ಮಾಡುತಲಿರುವದ ನೋಡಿ ಶೌಷ್ಕಲಕ
ನಿಂದೊಡಗೂಡಿ ಶಂಕುಕರ್ಣ ಮಹಾಬಾಹು ಇವರೀರ್ವರು ಸ್ನಾನಾರ್ಥವಾ
ಗಿ ಪೋಗಿರುವ ದೈತ್ಯೇಶ್ವರನ ಸಮೀಪಕ್ಕೆ ಬಂದು ತಾರುಮಾರಾಗಿ ಕುಡಿ
ದು ತಟ್ಟಾಗಿ ಬಿದ್ದಿರುವ ಕರಾಳವಕ್ತ್ರನಂ ನೋಡಿ ಸ್ವಾಮಿ! ರಾತ್ರಿ ಹತ್ತಾ
ರುಘಳಿಗೆ ಆಯಿತು ನಿಕುಂಭಿಳಾ ಪೂಜಾರ್ಥವಾಗಿ ಅರಿಕೆಮಾಡಬೇಕೆಂ
ದು ಶೌಷ್ಕಲಕಾಚಾರ್ಯರು ಕಾದು ಇದ್ಧಾರೆ, ಚಿತ್ತೈಸಬೇಕೆಂದು ಶಂಕುಕ
ರ್ಣನು ವಿಜ್ಞಾಪನೆಯಂ ಮಾಡಿದರೂ ಎಚ್ಚರವಾಗದೆ ಬಿದ್ದು ಮತ್ತು ಮಾ
ತುಗಳನ್ನಾಡುತ್ತಾ ನಿಕುಂಭಿಳಾದೇವಿಗೆ ಇದೇ ನಿವೇದನವೆಂದು ಮುಷ್ಟಿ
ಯಂ ಪಿಡಿದು ಅಲ್ಲಾಡಿಸಿ ತೋರಿಸುತ್ತಾ, ತಬ್ಬಿಬ್ಬು ಮಾತುಗಳಿಂದ ತನ್ನ ಸೇ
ವಕರಂ ಕೂಗಿ ಶಂಕುಕರ್ಣ ಶೌಷ್ಕಲಕರೀರ್ವರ ಕೊರಳಿಗೆ ಕೊಕ್ಕೆಗಳಂ
ಸಿಕ್ಕಿಸಿ ನೇತಾಡಿಸುವದಕ್ಕೆ ನೇಮಕವಂ ಮಾಡಲಾಗ ಶಂಕುಕರ್ಣ ಶೌಷ್ಕ
ಲಕರೀರ್ವರು ಸೇನಾನಿವೇಶನವಂ ಬಿಟ್ಟು ಓಡಿಹೋಗಿ ಸ್ವಾಮಿ ಶೌಷ್ಕಲಕರೆ!
ಈ ಪರಿ ಮತ್ತರಾದವರಂ ಪಾತಾಡಿಶಿದರೆ ಫಲವೇನು, ದೇವತಾಪ್ರಾರ್ಥನೆ
ಯಂ ಮಾಡಿ ಪೂಜಾರ್ಥವಾಗಿ ಮುಸ್ತೈದೆಗಳಂ ಸಜ್ಜುಮಾಡಿಶಿ ಕಡೆಗೆ
ಕರ್ಮಭ್ರಷ್ಟರಾದ ದೋಷಬಂದು, ಇದಲ್ಲದೆ ಕುಲದೇವತೆಯಾದ ನಿಕುಂ
ಭಿಳಾದೇವಿಗೆ ಕರವನ್ನೀಡಿ ತೋರಿಶಿದ್ದು ಕಂಡೀ ಇದ್ದೀರಿ ಅದರಿಂದ ದೈವ
ದ್ರೋಹವು ಎರಡನೆದೋಷ, ಮತ್ತಂ ಮಹಾನುಭಾವರಾದ ನಮ್ಮ ಕುಲ
ಕ್ಕೆ ಗುರುಗಳಾದ ನಿಮ್ಮ ನೀಪರಿ ನಿಂದೆಯಂ ಮಾಡಿದ್ದು ಮೂರನೇದೋಷ
ಈ ಮೂರು ಪಾಪಂಗಳಿಗೂ ಅಧಿಕವಾದ ಪಾತಕಂಗಳು ಇಲ್ಲ, ಆದುದರಿಂದ
ಈ ದುಷ್ಟನಾದ ಕರಾಳವಕ್ತ್ರನಿಗೆ ಕಾಲ ಅತಿಸಮೀಪಕ್ಕೆ ಬಂದಿರುವಂತೆ
ಎನ್ನ ಬುದ್ಧಿಗೆ ತೋರುತಲಿದೆ ಎಂದು ಪೇಳುತ್ತಾ ಶಂಕುಕರ್ಣನು ಶೌಷ್ಕ
ಲಕನಿಂದೊಡಗೂಡಿ ಪಾತಾಳಲೋಕಕ್ಕೆ ಹೋಗುತ್ತಿರಲು, ಅಷ್ಟರೊಳ್
ದುಷ್ಟಮಾರ್ಗದಿಂ ಭ್ರಷ್ಟರಾಗಿಬಿದ್ದಿರುವ ದಾನವರು ಏನುಮಾಡುವರೊ?

ಎಂಬಭಯದಿಂದ ಸದ್ದುಮಾಡದೆ ಮುದ್ದುಗಾರನಾದ ಮಂದಮಾರುತನ ಮುಂದುಮಾಡಿ ಕತ್ತಲೆಯೆಂಬ ಕಂಬಳಿಯಂಪೊದ್ದು ಅಂದಗಾರನಾದಚಂದ್ರನು ಯಾಮಿನಿಯೆಂಬ ಕಾಂತೆಯಂಕಾಣದೆ ವಿರಹವೆಂಬ ಪಾಂಡುವಿನಿಂದ ಮೈಯುಬ್ಬಿ ಬಿಳುಪೇರಿ ಬಿರಿದುಬೀಳುವ ಶರೀರಕಾಂತಿಗಳಂನೋಡಿ ನಿಟ್ಟುಸಿರುಗಳಂ ಬಿಡುತ ಬಲಹೀನನಾಗಿ ಅಲ್ಲಲ್ಲಿ ಮೆಲ್ಲಮೆಲ್ಲನೆ ಹೆಜ್ಜೆಗಳಂನಿಡುತ ಉದಯಶಿಖರವನ್ನೇರಿ ಎಂಟುದಿಕ್ಕುಗಳನ್ನು ಏಕವಾಗಿ ಈಕ್ಷಿಸುತ್ತಾ ಎಲ್ಲಿಯೂ ಯಾಮಿನಿಯೆಂಬ ಕಾಂತೆಯಂ ಕಾಣದೆ ಅಸ್ತಾಚಲವಲ್ಲಾದರು ಇರುವಳೊ ಏನೋ? ಎಂಬಸಂಶಯದಿಂದ ಹುಡುಕುವದಕ್ಕೆ ಹೊರಟನೋ ಎಂಬಂತೆ ಚಂದ್ರನು ಗಗನಮಾರ್ಗದಲ್ಲಿ ನಡೆಯುತ್ತಿರಲು, ಆಗ ದೈತ್ಯದಾನವರೆಲ್ಲರೂ ಎದ್ದು ನಿಲ್ಲಲಾರದೆ ಬೀಳುತ ಮರಳಿಮರಳಿ ಮದ್ಯಪಾನವಂಮಾಡಿ ಮೈಗಳಂಮರೆತು ಕಾಕುಗಳಂ ಹಾಕುತ್ತಾ ಹಾಹಾಕಾರವಂಮಾಡುತ್ತಾ ಉಟ್ಟಿರುವವಸ್ತ್ರಗಳಂ ಬಿಚ್ಚಿ ಹಸ್ತಂಗಳಿಗೆ ಸುತ್ತಿಕೊಂಡು ಕತ್ತಿ ಗುರಾಣಿ ಭಾಲೆ ಭರ್ಜಿ ಬಾಕು ಕುಂತ ಮುಂತಾದ ಆಯುಧಗಳಂ ಪಿಡಿದು ಸಾಧನೆಗಳಂ ಮಾಡುವರ್‍ಯಾರೊ ಇಲ್ಲಿಗೆಬಾರೋ ಎಂದು ತಬ್ಬಿಬ್ಬಾಗಿಕೂಗುತ್ತಾ ಅಷ್ಟರೋಳ್ ತಮ್ಮಂಥಾವರೆ ಮರೆತುಮಹಾಮೋಹದಲ್ಲಿ ಬಿದ್ದಿರುವ ಸಮಯದಲ್ಲಿ ಶೈತ್ಯ ಸೌರಭ್ಯ ಮಾಂದ್ಯಂಗಳಿಂದ ಕೂಡಿಬಂದ ವಾಯುವಿನ ಹೊಳಪಿನಿಂದ ಒಂದುಕಡೆಯೋಳ್ ಮತ್ತನಾಗಿ ಬಿದ್ದಿರುವ ಮಹಾಬಾಹುವು ವಾಯುವಿನಿಂ ಹಾ ಸುಗಂಧವೆ ಎಂದುಪೇಳ್ದ ಮಾತುಗಳಂ ದೈತ್ಯಭಟರುಕೇಳಿ, ಅಲ್ಲವೊ ಸುಗಂಧರಾಯನು ಬಂದನಂತೆ ಏಳಿರೋಯುದ್ಧವಂ ಮಾಡಿರೊ ಎಂಬಮಹತ್ತಾದ ಗದ್ದಲವಂಕೇಳಿ ಕರಾಳವಕ್ತ್ರನು ಖಡ್ಗವಂಪಿಡಿದು ತಾರುಮಾರಾಗಿಬೀಳುತ್ತಾ ಇದೋಸುಗಂಧರಾಯನು, ಇದೋಸುಮತಿ, ಹಿಡೀರೋ, ಕಡೀರೊ, ಕತ್ತರಿಸಿರೊ, ಎಂದು ಕೂಗುವ ಕರಾಳವಕ್ತ್ರನಧ್ವನಿಯಂಕೇಳಿ, ಆ ಸಮಯದೋಳ್ ಎಲ್ಲಿನೋಡಿದರೂ ಅಲ್ಲಲ್ಲಿಯೆ ಸುಗಂಧರಾಯನಂತೆ ಕಾಣುತ್ತಾ ದೈತ್ಯದಾನವಸೇನೆಯಿಂ ಒಟ್ಟಾಗಿಕೂಡಿ ಓರ್ವರೋರ್ವರಂ ಕಡಿಯುತ್ತಾ ಭಲ್ಲೆಭರ್ಜಿಗಳಿಂದ ಇರಿಯುತ್ತಾ ಮುದ್ಗರಗಳಿಂದ ಮರ್ದಿಸುತ್ತಾ ಅನ್ಯೋನ್ಯ ಯುದ್ಧವಂಮಾಡಿ ಮಡಿದುಹೋದಪರಿಯಂ ದಿಕ್ಪಾಲಕರುಕಂಡು ಕಾಣದೆ

ಇದ್ದಂತೆ ಸದ್ದುಮಾಡದೆ ದೂರಕ್ಕೆಹೋಗಿ ಸಂತೋಷಪಡುತ್ತಾ ತಮ್ಮ ತಮ್ಮ ಪಟ್ಟಣಂಗಳಿಗೆ ಪೋಗಲು,ಆಸಮಯದೊಳ್ ಹುಟ್ಟಿದ ಮಹಾಧ್ವನಿಯು ಭೂಮ್ಯಂತರಿಕ್ಷಂಗಳಂ ತುಂಬಿ ಬ್ರಹ್ಮಾಂಡಕಟಾಹವು ಭೋರೆಂದು ಮೊರೆಯುತ್ತಿರಲು, ಅತ್ತಲಾ ಹಿಮಾಚಲದೊಳ್ ಸುಗಂಧರಾಜೇಂದ್ರನು ಬೃಂದಾರಕಾಯೋಗಿನಿಯು ದಯಮಾಡಿದ ಯಂತ್ರದೊಳ್ ಕುಳಿತು ಆರು ಮತ್ತೊಂದುದಿವಸ ಹಗಲಿರುಳು ಮೌನಮುದ್ರೆಯನ್ನವಲಂಬಿಸಿ ಪುನಶ್ಚರಣ ಪೂರ್ತಿಯಂಮಾಡಿ ಎಂಟನೆದಿವಸ ಪ್ರಾತಃಕಾಲದಲ್ಲಿ ಸುಮತಿಯಿಂದೊಡಗೂಡಿ ಗಂಗಾನದೀತೀರಕ್ಕೆ ಬರುತ್ತ ಮಾರ್ಗದಲ್ಲಿ ರಾಜೇಂದ್ರನು ಅಯ್ಯಾಮಂತ್ರಿಯೆ! ಒಂದು ಆಶ್ಚರ್ಯಕರವಾದ ನಿದರ್ಶನವಾಯಿತು, ನಿನ್ನೇರಾತ್ರಿ ಸಮಾಧಿಯಿಂದ ಬಹಿರ್ಮುಖವಾಗುವ ಮಧ್ಯಕಾಲದೊಳ್ ಕನ್ನಡಿಯೊಳ್ ಕಾಣಿಸಿದ ಪ್ರತಿಬಿಂಬದಂತೆ ಆಕ್ರೌಂಚದ್ವೀಪವು ಬುದ್ಧಿಯಲ್ಲಿತೋರಿತು, ಅರ್ಗಳವೆಂಬಕೋಟೆಯು ಆನಂದಪರ್ವತದಲ್ಲಿಯೆ ಅಣಗಿಪೋದಂತೆ ದರ್ಶನವಾಯಿತು, ಆ ಬೃಂದಾರಕಾಮಹಾಯೋಗಿನಿಯು ಆನಂದವಲ್ಲೀದೇವಿಯ ಗೋಪುರದ ಮುಂದುಗಡೆಯಲ್ಲಿ ಮುತ್ತಿನಗದ್ದಿಗೆಯಲ್ಲಿ ಕುಳಿತಿರುವಳು, ಅಷ್ಟರೊಳ್ ನನ್ನಂ ಕಂಡು ನಸುನಗುತ ಅಯ್ಯಾಕಂದನೆ! ಬಾಎಂದು ಮಧುರವಾದ ಮಾತಂಪೇಳುತ್ತ ಕರವಂಪಿಡಿದು ಅಂಕದೊಳ್ ಕುಳ್ಳಿರಿಸಿ ಶಿರವನ್ನಾಘ್ರಾಣಿಸುತ ಮುಖವಂಮುದ್ದುಗೊಳುತ ಇರುವಂತೆ ದರ್ಶನವಾಯಿತು, ಇದುಸ್ವಪ್ನವಲ್ಲ, ಸಮಾಧಿಯಿಂದ ಬಹಿರ್ಮುಖವಾಗುವಕಾಲದಲ್ಲಿ ಈ ಪರಿದರ್ಶನವಾಗೋದು ಉಂಟು, ಇದನ್ನೆ ಜ್ಞಾನದೃಷ್ಟಿ ಎಂತಲು ದೂರದರ್ಶನ ಎಂತಲು ಹಿರಿಯರು ಪೇಳುವರು, ಅದುಕಾರಣ ನಮ್ಮಕಾರ್ಯಕ್ಕೆಗೂಡಿಬಂತು, ಇನ್ನುಸಂದೇಹವಿಲ್ಲ, ಎಂದುಪೇಳುತ್ತಾ ಭಾಗೀರಥೀಸಮೀಪವನ್ನೈದಿ ಸಾಷ್ಟಾಂಗದಂಡಪ್ರಣಾಮವಂ ಮಾಡಿ ಸಂಕಲ್ಪಪೂರ್ವಕವಾಗಿ ಉದಕದಲ್ಲಿ ಇಳಿದು ಸ್ನಾನವಂಮಾಡುತ್ತಾ ತೀರದಲ್ಲಿನಿಂತಿರ್ದ ಸುಮತಿಯಂನೋಡಿ ಎಲೈಮಿತ್ರನೆ! ಈ ಮಹಾಮಹಿಮಳಾದ ಭಾಗೀರಥೀ ಉದಕವು ಶಿರಸ್ಸಿನಲ್ಲಿ ಬಿಂದುಮಾತ್ರ ಬಿದ್ದರೆ ಶಿವಪದವನ್ನೈದುವರು, ಇಂತೆಂದು ಚತುರ್ವೇದಗಳು ಮತಭೇದವಂಬಿಟ್ಟು ಮಹಿಮೆಯಂಪೊಗಳುವವು, ಈಪರಿ ಇರುತಿರಲು ;

ಎಲೈ ಸುಮತಿಯೇ ! ನೀನು ಸ್ನಾನವಂ ಮಾಡದೆ ಹೊತ್ತಾದ ಶಿಷ್ಯಗಳಂ ಮಾಡಿಕೊಂಡು ದೂರದಿಂದಲೇ ಮರೆಯಾಗಿನಿಂತಿರುತ್ತಾ ಇರುವವು ನಿನಗೆ ಯುಕ್ತವಲ್ಲವಾಗಿಹೋ? ಎಂದು ಪೇಳುತ್ತಾ ಕರಗಳಿಂದ ಉದಕವಂ ಎರಚಲು, ಆಗ ಸುಮತಿಯು ಸ್ವಾಮಿ ನನ್ನೊಡೆಯನೆ ! ನಿನ್ನಿಂದ ಆಗೋದಿಲ್ಲ, ಶಿವನುಬ್ಯಾಡ ಶಿವಪದವುಬ್ಯಾಡ ನನ್ನೊಡೆಯನಾದವನೇ ಎನಗೆ ಶಿವನಪಾದವೆಂದು ಪ್ರೋದಿಪೋಗುಣನಂ ಕಂಡು, ಅಯ್ಯೋ ಛಾಯಾಗುಪ್ತನೇ ಅವನಂ ಹಿಡಿದುಕೊಂಡು ಬಾ ಎಂದು ಅಪ್ಪಣೆಯಂ ಕೊಡಲು, ಛಾಯಾಗುಪ್ತನು ಬ್ಯಾಗ ಓಡಿದು ನೀರನೊಳ್ ತಲೆಕೆಳಗಾಗಿ ತಳ್ಳಲು, ಆಗ ರಾಜೇಂದ್ರನು ಸುಮತಿಯಂ ತಬ್ಬಿಕೊಂಡು ತರಂಗಂಗಳಲ್ಲಿ ಈಜುತ್ತಾ ಕ್ಷಣಮಾತ್ರ ವಿನೋದದಿಂದಿದ್ದು ಆಬಳಿಕ ಗಂಗಾಸ್ತವಮಂ ಪೇಳುತ್ತಾ ತೀರಕ್ಕೆ ಬಂದು ಶುಭ್ರವಸ್ತ್ರಂಗಳಂ ಧರಿಸಿ ವಿಭೂತಿಯಂ ಫಣೆಯೊಳಿಟ್ಟು ಸಂಧ್ಯಾವಂದನಾದಿ ನಿತ್ಯಕರ್ಮಗಳಂ ನೆರವೇರಿಸಿ ಕಿರೀಟಕುಂಡಲಗಳಿಂದ ಅಲಂಕೃತನಾಗಿ ವಾಮದೇವಾಶ್ರಮಕ್ಕೆ ಬಂದು ಆ ಮಹರ್ಷಿಗೆ ಗೋತ್ರಾಭಿವಂದನೆಯಂ ಮಾಡಲು, ಆಗ ಋಷಿಯು ಎಲೈ ಸುಗಂಧರಾಜೇಂದ್ರನೆ ! ನೀನು ಆಯುಷ್ಮಂತನಾಗು ಎಂದು ಆಶೀರ್ವಚನವಂ ಮಾಡಿ ನಿನ್ನ ಮನೋಭೀಷ್ಟವು ಶೀಘ್ರವಾಗಿ ಸಿದ್ಧಿಸಲೀ ಎಂದು ಹರಸಿಕಳುಹಿದ ನಂಬಳಿಗೆ * * *

ಗದ್ಯ॥ ಕುಂಡಲಿಶಯನ ಖಂಡಪರಶು ಪುಂಡರೀಕಭವಾ ಖಂಡಲಪ್ರಮುಖ ನಿಖಿಲ ಸುರವರ ಪರಿಭವಪರಿಣತ ಪ್ರಚಂಡ ಬಲಚಂಡ ಮುಂಡ ವಿಖಂಡನ ನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಶ್ರೀ ಚಾಮುಂಡಿಕಾ ಕಟಾಕ್ಷವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತಗ್ರಂಥ ದಿನ ದಿನಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯ ಸಗೋತ್ರ ಸುಚರಿತ್ರ ಶ್ರೀಚಾಮರಾಜಮಹಾರಾಜಪುತ್ರ ನರಪತಿಬಿರುದ ಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜ ಒಡೆಯರವರಿಂದ ರಸಿಕ ಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ಈ ನವೀನಕೃತಿಯೊಳ್ ಬೃಂದಾರಕಾ ಯೋಗಿನಿಯು ಸುಗಂಧಮಹಾರಾಜೇಂ

ದ್ವನಿಗೆ ಯೋಗಶಾಸ್ತ್ರ ಉಪದೇಶ ಪ್ರತಿಪಾದಕನಾದ ಇಪ್ಪತ್ತೆರಡನೇ ಆಶ್ವಾಸಕ್ಕೆ ಮಂಗಳಮಹಾ. * * * * * * * * *

ಇಪ್ಪತ್ತೆರಡನೇ ಆಶ್ವಾಸ ಸಂಪೂರ್ಣವು.



ಶ್ರೀರಸ್ತು.

ಇಪ್ಪತ್ತುಮೂರನೇ ಆಶ್ವಾಸ ಪ್ರಾರಂಭಃ.

ಶ್ರೀ ಸೌಗಂಧಿಕಾಂಬಾಯೈನಮಃ.

ಅನಂತರವಲ್ಲಿ ಸುಗಂಧ ಮಹಾರಾಜೇಂದ್ರನು ಮಹರ್ಷಿಯಾದ ವಾಮದೇವನತಪೋವನವಂ ಪಾಂಚ ಬಂದುಛಾಯಾಗುಪ್ತನ ಹೆಗಲೋಳ್ ಸುಮತಿಯು ಸಮೇತನಾಗಿ ಕುಳಿತಿರಲು; ಛಾಯಾಗುಪ್ತನು ಗರುತ್ಮಂತ ನಂತೆ ಗಗನಕ್ಕೆಹಾರಿ, ಅಂತರಿಕ್ಷ ಮಾರ್ಗದೋಳ್ ಬರುತ ನೇಪಾಳನಾಥ ನಾದ ಪಶುಪತಿಯ ಪಾದಂಗಳಂ ನೆನೆಯುತ್ತಾ, ಎಲೈ ರಾಜೇಂದ್ರನೇ! ವಾಯುವ್ಯ ಕೋಣದಲ್ಲಿ ಕಾಣಲ್ಪಡುವದೆ ಗಂಗಾವತರಣವು, ಇದು ಕೇತಾ ರಕ್ಷೇತ್ರ, ಆಚೆಗೆ ಕಾಣುವದೇ ನರನಾರಾಯಣರಿಗೆ ಆವಾಸ ಸ್ಥಾನವಾಗಿ ರ್ಪ ಬದರಿಕಾಶ್ರಮವೆಂದು ವಿಜ್ಞಾಪನೆಯಂ ಮಾಡುತ್ತಾ, ಹಿಮಾಲಯ ವಂ ದಾಂಟಿ, ದೇವತಾಸಂಚಾರ ಯೋಗ್ಯವಾಗಿರ್ಪ ಕಿಂಪುರುಷ ಖಂಡ ವಂ ಕಳೆದು, ಹರಿವರ್ಷವಂ ನಾಶ್ರೈಶಿ, ಚಿನ್ನದ ಭೂಮಿಗಳಲ್ಲಿ ಧಗಧಗಿಸುವ ರನ್ನದ ಉಪ ಪರ್ವತಂಗಳಿಂದಕೂಡಿ ಸಹಸ್ರ ಶಿಖರಗಳ ಕಾಂತಿಗಳಿಂದ ದಿ ಕ್ಕುಗಳಂ ಬೆಳಗಿಸುತ್ತಿರುವ ಮೇರುಪರ್ವತವ ನೀಕ್ಷಿಸಿ, ನಮಿಸುತ್ತಾ, ರಾ ಯನು ಛಾಯಾಗುಪ್ತನಂ ಕುರಿತು ಅಯ್ಯಾ ಯಕ್ಷನೆ! ನಮ್ಮ ರತ್ನಪುರ ದಂತೆ ರನ್ನದ ಕೋಟೆ ಕೊತ್ತಳಗಳಿಂದ ಕೂಡಿರುವ ಪಟ್ಟಣವ್ಯಾವದೋ ಒಂದು ಕಾಣುತ್ತಲಿಧೆ, ನೀನು ಕಂಡೆಯಾ ಯೆಂದು ನುಡಿಯಲು, ಆ ಛಾ ಯಾಗುಪ್ತನು ಸ್ವಾಮಿ ಮಹಾನುಭಾವನೆ! ಅದನ್ನ ಅಲಕಾಪುರಿಯೆಂದು

ಹೇಳುವರು, ಅದಕ್ಕೆ ಮುಂದುಗಡೆಯಲ್ಲಿ ಕಾಣುವದೇ ಕೈಲಾಸವು, ಇದೆ ಬದರಿಕಾವನವೆಂದು ವಿಜ್ಞಾಪನೆಯಂ ಮಾಡಲಾಗ, ರಾಯನು ಯೋಗಿನಿಯ ಪರ್ಣಶಾಲೆಯಂ ಕಂಡು ಕೈಗಳಂ ಮುಗಿಯುತ್ತಾ, ವಾಯುಪಥದಲ್ಲಿ ಹೋಗುವ ಛಾಯಾಗುಪ್ತನಂ ಶಾಬಾಸೆಂದು ಮೆಚ್ಚುತ್ತಿರುವ ರಾಯನಂ ಕುರಿತು ಸ್ವಾಮಿ ! ನಾವು ಬಹಳದೂರ ಹೊರಟುಬಂದೆವು, ಒಂದಾದರು ದ್ವೀಪವುಕಾಣುವದಿಲ್ಲ,ದಿಕ್ಕುಗಳನ್ನರಿಯದೆ ಮಾರ್ಗ ತಪ್ಪಿ ಎಲ್ಲಿಗೂ ಹೋಗುವಂತೆ ಕಾಣುತ್ತಲಿದೆ ಎಂದು ವಿಜ್ಞಾಪನೆಯಂ ಮಾಡುತ್ತಾ, ಭೂಪ್ರದೇಶವಂನೋಡಿ, ಏಳುಭಾಗಂಗಳಾಗಿ ಪ್ರವಹಿಸುವ ಗೋದಾ ವರೀನದಿಯಿಂದ ಕೂಡಿರುವ ಕಳಿಂಗ ರಾಜ್ಯಕ್ಕೆ ಕರದುಕೊಂಡುಬಂದೆ, ಈಅಪರಾಧವಂ ಕ್ಷಮಿಸಿ ರಕ್ಷಿಸಬೇಕೆಂದು ಕೈಗಳಂಮುಗಿಯುತ್ತಿರುವ ಯಕ್ಷನಂನೋಡಿ ನಸುನಗುತ ಅಯ್ಯಾಯಕ್ಷನೆ! ಇದುಕಳಿಂಗಪಟ್ಟಣವೂಅಲ್ಲ, ಇದುಸಪ್ತಗೋದಾವರಿಯೂಅಲ್ಲ. ಇವೆಸಪ್ತದ್ವೀಪಂಗಳು, ಸಣ್ಣಗೆ ಕಾಲುವೆಗಳಂತೆ ಕಾಣುವವೆ ಸಪ್ತಸಮುದ್ರಂಗಳು, ಎಂದುಹೇಳಲು, ಆಗಯಕ್ಷನು ಸ್ವಾಮಿ! ನನ್ನೊಡೆಯನೆ ಕ್ರೌಂಚದ್ವೀಪಕ್ಕೆ ಅರ್ಗಳವೆಂಬಕೋಟೆಸುತ್ತಿರುವದು, ಅದರಿಂದಿಗೆ ಆರೆದ್ವೀಪಂಗಳು ಕಾಣಬೇಕು, ಕ್ರೌಂಚದ್ವೀಪ ಕಾಣುವಬಗೆ ಹ್ಯಾಗೆಂದು ಪ್ರಶ್ನೆಯಂಗೈಯ್ಯಲು, ಆಗರಾಯನು ಅಯ್ಯಾಯಕ್ಷನೆ ! ಆ ಮಹಾಯೋಗಿನಿಯಪ್ರಭಾವ ಹ್ಯಾಗೆಇರುವದೂ ? ಅವಳಮಹತ್ತು ಯಾರುಬಲ್ಲರೂ ಎಂದು ಆಜ್ಞಾಪಿಸುತ್ತಾ, ಪ್ಲಕ್ಷ ಶಾಲ್ಮಲಿ ಕುಶದ್ವೀಪಂಗಳಂ ದಾಂಡಿಹೋಗುತ್ತಾ, ಭೂಭಾಗವಂನೋಡಿ ಸುಮತಿಯಂಕುರಿತು ಅಯ್ಯಾಮಂತ್ರಿಯೆ ! ಸುರಾಸಮುದ್ರವು ಕೆಂಪಾದಮದ್ಯವುಳ್ಳದ್ದೆಂದು ಶಾಸ್ತ್ರದಲ್ಲಿಹೇಳಲಿಲ್ಲ, ಈ ಅರ್ಥವು ನೀನೂಬಲ್ಲೆಯಲ್ಲಾ, ಈ ಆಶ್ಚರ್ಯವೇನೊ? ತಿಳಿಯಬೇಕೆಂದುಸಶ್ಚರ್ಯಸಿದ ರಾಯನಂ ಕುರಿತು ಸುಮತಿಯು ಸ್ವಾಮಿ ರಾಜಾಧಿರಾಜನೆ ! ಸುರೆಯು ಎಲ್ಲಾದರು ಕೆಂಪಾಗಿಇರೋದುಉಂಟೆ? ಈ ಸುರಾಸಮುದ್ರವು ಸೂರ್ಯಕಿರಣಂಗಳಿಂದ ಕಳೆಕಳವೆಂದು ಕುದಿಯುತ್ತಾ ಕೆಂಪುವರ್ಣವಾಗಿ ನಮಗೆಕಾಣೋದೆಹೊರ್ತು ಕೆಂಪುವರ್ಣವಲ್ಲಾ ಎಂದು ವಿಜ್ಞಾಪನೆಯಂಮಾಡಲು, ಆಗ ಗಗನಮಾರ್ಗದಲ್ಲಿ ಅತಿಬಾಗ್ರತೆಯಿಂದ ಹೋಗುತ್ತಾ, ಛಾಯಾಗುಪ್ತನು

ಮಂತ್ರಿಯು ಮಾತುಗಳಂ ಕೇಳಿ ಅಮಾತ್ಯಾ ಮೊನ್ನೆ ರಾತ್ರಿಯೊಳ್ ಬ್ರಹ್ಮಾಂಡಕಟಾಹ ಬಿಚ್ಚಿಗಿಸುವಂತೆ ಏನೋ ಒಂದು ಮಹಾಶಬ್ದವಾಯಿತು ಎಂದು ಹೇಳ್ದನಲ್ಲ, ಆ ಶಬ್ದವು ಇದರಿಂದಲೇ ಹುಟ್ಟಿತು, ಅದೇನೆಂದಡೆ—ಕರಾಳವಕ್ತ್ರನೆಂಬ ದೈತ್ಯೇಶ್ವರನು ಕ್ರೌಂಚದ್ವೀಪಮಂ ಸೂರೆಗೈಯಲೆಂದು ಪೋಗುತ್ತಾ, ಸುರಾಸಮುದ್ರವಂ ನೋಡಿ, ದೈತ್ಯಪಟರೊಡನೆ ಕೂಡಿ ಸುರಾಪಾನವಂ ಮಾಡಿ ಶರೀರಪರವಶವಾಗಿ, ತನ್ನಂ ತಾನೆ ಕಡಿದುಕೊಂಡು ಮಡಿದುಪೋದರು, ಆ ರಕ್ತವು ನದಿಗಳಂತೆ ಹರಿಯುತ್ತಾ ಸುರಾಸಮುದ್ರದೊಳ್ ಸಂಗಮವಾಗಲು ಸಮುದ್ರವು ಕೆಂಪಾಯಿತು, ಎಂದುಹೇಳಲು ; ಆಗ ಆ ಮಹಾರಾಯನು ಪ್ರತ್ಯಕ್ಷದಲ್ಲಿಯೂ ಆಶ್ಚರ್ಯಪಡುತ್ತಾ ಸುರಾಸಮುದ್ರವಂ ದಾಟುತ್ತಾ ರಾಕ್ಷಸರುಗಳ ನಗರಗಳಂ ನೋಡಿ ದುರ್ಗಂಧಕ್ಕೆ ಬಾಯಿಗೆ ಮುಚ್ಚಿಕೊಳ್ಳುತ್ತ, ಎಲೈ ಯಕ್ಷನೆ ! ಇನ್ನು ನಾವಕಾಶವಂ ದಾಟಿಬಂದೆ, ಈ ದುರ್ಗಂಧಕ್ಕೆ ತಾಳಲಾರೆನೆಂದು ಹೇಳುತ್ತಿರುವಷ್ಟರೊಳ್, ಮುಂದುಗಡೆಯಲ್ಲಿ ಬ್ರಹ್ಮನಿಗೆ ಆವಾಸವಾಗಿ ಅನೇಕಬ್ರಹ್ಮರ್ಷಿಗಳಿಂದ ಸೇವಿತವಾಗಿ, ರತ್ನಸೋಪಾನಪಂಕ್ತಿಗಳಿಂದ ಕೂಡಿರುವ ಬ್ರಹ್ಮಮಾನಸವೆ ಸರೋವರಗಳಿಂದಲೂ ಶತಸಹಸ್ರ ಸರೋವರಗಳಿಂದಲೂ, ಕುಂದ ಮಂದಾರಮಾಕಂದ ಚಂಪಕ ಚಾಂಪೇಯ ಮೊದಲಾದವೃಕ್ಷಗಳಿಂದ ಶೋಭಿತವಾದ ಕ್ರೌಂಚಪರ್ವತವಂ ನೋಡಿ ಸಂತೋಷಪಡುತ್ತಾ, ಪೂರ್ವದಲ್ಲಿ ಆನಂದವೇ ಪರ್ವತರೂಪವಂ ತಾಳಿಬಂತೊ ? ಎಂಬಂತೆ ಪ್ರಸನ್ನವಾಗಿರ್ಪ ಆನಂದಪರ್ವತವಂ ಕಂಡು ಆನಂದಭರಿತನಾಗಿ, ಛಾಯಾಗುಪ್ತನಂ ಕುರಿತು ಅಯ್ಯಾ ಯಕ್ಷನೆ ! ಇನ್ನು ಗಗನದಲ್ಲಿ ಪೋಗೋದು ಯುಕ್ತವಲ್ಲ, ಭೂಪ್ರದೇಶಕ್ಕೆ ಇಳುಹಿಸು ಎನ್ನಲಾಗ ಯಕ್ಷನು ನಿಮಿಷಮಾತ್ರದಲ್ಲಿಯೆ ಭೂಮಿಗೆಬಂದು ಇಳಿಯಲು, ರಾಯನು ಬಿಲ್ಲುಬತ್ತಳಿಕೆಗಳಂ ಧರಿಸಿ, ಯಕ್ಷನುಮುಂ ಬಿಟ್ಟುಕೊಂಡು ಚಂದ್ರಾಯುಧವಂ ಪಿಡಿದು ಸುಮಿತ್ರನನ್ನು ಹಿಂದುಗಡೆಯಲ್ಲಿ ಬರಬೇಕೆಂದು ನೇಮಿಸಿ, ರತ್ನದ ಹಾವಿಗೆಗಳಂ ಮೆಟ್ಟಿಕೊಂಡು ಪ... ರಿ ಯಾಗಿ ಮಧ್ಯದಲ್ಲಿ ಇರುತಿರುವ ರಾಜೇಂದ್ರನಂ ಕಂಡು ... ದೊಳ್ ಎದುರಾಗಿ ಬರುತ್ತಿರುವ ಆ ... ಜನರು ... ಶೋಕತ್ರಯವಂ ಜಯಿಸಿ

ಬರುವ ಜಯಂತನೋ ? ಎಂದು ಸಂದೇಹದಿಂ ನಿಂತಕಡೆಯಲ್ಲಿಯೇ ಹೆಜ್ಜೆ ಆಚೆಗೆ ಇಡದೆ ಆಶ್ಚರ್ಯದಿಂ ನೋಡುವರು ಕೆಲಂಬರು, ಕೆಲಂಬರು ಬೃಂದಾರಿಕಾ ಸಮೀಪದಲ್ಲಿಯೆ ಜಯಂತನಂ ಕಂಡು ಬಂದೆವು, ಜಯಂತನಲ್ಲಾ, ಈತನು ದ್ವೀಪಾಂತರವಂ ನಾಳುವ ಯಾವನೋ ಒಬ್ಬ ಮಹಾರಾಯನಾಗಿರಬೇಕೆಂದು ಪೇಳುವರು, ಕೆಲಂಬರು ಬೃಂದಾರಿಕಾ ಸಮೀಪದಲ್ಲಿದ್ದ ಜಯಂತನಂ ಕಾಣಬೇಕೆಂದು ಬರುತಿರುವ ವಸಂತನೋಯೆಂದು ಪೇಳುವರು ಕೆಲಂಬರು, ಈಪರಿ ಸಂದೇಹವಂ ಗೊಳುಸುತ್ತಾ ಬರುತ್ತಿರಲು;

ಅತ್ತಲಾ ಬೃಂದಾರಿಕಾ ಯೋಗಿನಿಯು ಮುತ್ತಿನ ಗದ್ದಿಗೆಯೊಳ್ ಕುಳಿತು ಧ್ಯಾನಾರೂಢಳಾಗಿ ಮನಸ್ಸೆಂಬ ಮೊಗುವಿಗೆ ಬ್ರಹ್ಮಾಂಡ ಕಟಾಹ ವೆಂಬ ಚಿತ್ರಪಠದೊಳ್ ಇರುವಚತುರ್ದಶ ಭುವನಂಗಳಂತೋರಿಸುತ್ತಾ, ಆ ಭುವನಂಗಳಲ್ಲಿ ಸಂಚಾರವಂಮಾಡುವ ಪ್ರಾಣಿಗಳ ವಿಹಾರ ಆಹಾರಗಳಂತೋರಿಸಿ ನಗುಗೊಳಿಸುತ್ತಾ, ಇಳಾವೃತ ಮುಂತಾದಖಂಡಂಗಳಲ್ಲಿ ವಿಲಾಸವಂ ಮಾಡಿಸುತ್ತಾ, ಭರತಖಂಡಾಧಿಪತಿಯಾದ ಸುಗಂಧರಾಯನನ್ನು ಎಲ್ಲಿಯೂ ನೋಡದೆ ಬಂದೆಯಲ್ಲಾ ಎಲೈ ನೀನು ಎಷ್ಟು ಚಪಲನೊ? ನಾಕಾಣೆಯಂದು ಮನಸ್ಸೆಂಬ ಮಗನಂ ಮಾತಾಡಿಸದೆ ಸಿದ್ಧಿಯುಂ ಪಡೆದಿರುವ ಬುದ್ಧಿಯೆಂಬಮಗಳೆ ! ಸುಗಂಧರಾಯನಂ ನೋಡೋಣ ಬಾ ಯೆಂದು ಕರೆದಳೊ ? ಯೆಂಬಂತೆ ಅರ್ಧೋನ್ಮೀಲಿತ ನೇತ್ರಳಾಗಿ ನೋಡಲು, ಆಗ ರಾಯನಂಆನಂದ ಪರ್ವತ ಸಮೀಪದಲ್ಲಿಯೆ ಕಂಡು, ಆನಂದ ಪರವಶಳಾಗಿ ಝುಗ್ಗನೆ ಗದ್ದಿಗೆಯಿಂದೆದ್ದು ಜಯಂತ ಸಳಕೊಬರರಿಗೆ ಎನ್ನ ಸಂಗಡಲೇ ಬರಬೇಕೆಂದು ಪೇಳುತ್ತಾ, ಆನಂದವಲ್ಲೀ ಮಹಾದೇವಿಗೆ ಧರಿಸಿರುವ ಮಂದಾರಪುಷ್ಪ ಮಾಲಿಕೆಗಳಂ ಮಾಣಿಕ್ಯದ ತಟ್ಟೆಗಳಲ್ಲಿ ತುಂಬಿಸಿ, ಜಯಂತನ ವಶವಂಮಾಡಿ, ಸಮೀಪದಲ್ಲಿ ನಿಂತಿರ್ದ ಬೃಹಸ್ಪತಿಯು ಹಸ್ತಲಾಘವಿಂ ದೇವಾಲಯುದಿಂದ ಪೊರಟು ಬರುವ ಯೋಗಿನಿಯಂ ನೋಡಿ, ಜಯಂತ ಮೊದಲಾದವರು ಈ ಮಹಾಯೋಗಿನಿಯು ಏನೊ ಒಂದು ಮಹದಾಶ್ಚರ್ಯಕರವಾದ ಕಾರ್ಯಂಗಳನ್ನೆ ಮಾಡುವಳೊ ಎಂದುಯೋಚಿಸುತ್ತಾ ಸಂಗಡಲೇ ನಡೆಯುತ್ತಿರಲು, ಆಗಬೃಂದಾರಿಕಾ

ಯೋಗಿನಿಯು ಬೃಹಸ್ಪತಿಯಂಕುರಿತು ಅಯ್ಯಾ ಸುರಾಚಾರ್ಯನೇ! ಆ ಮೂಲಪ್ರಕೃತಿಯಾದ ಪರಮೇಶ್ವರಿಯ ಲೀಲಾವಿನೋದಗಳಂ ನಾನೆಂತು ಬಣ್ಣಿಸಲೀ, ಎಲ್ಲಿಯಿದ್ದ ಪ್ರಾಣಿಗಳನ್ನು ಯಾವಕಾಲದಲ್ಲಿ ಎಲ್ಲೆಲ್ಲಿಯೋ ತಂದುಬಿಟ್ಟು ತಾನು ತಟಸ್ಥಳಾಗಿರುವಳು. ಆ ಮಹಾದೇವಿಯ ಚರ್ಯೆ ಯಂ ಮಹಾದೇವನೇ ಬಲ್ಲನೆಂದು ನಸುನಗುತ್ತ, ಸಮೀಪದಲ್ಲಿ ಬರುತ್ತಿರುವ ರಾಯನಂ ಚೆನ್ನಾಗಿ ನೋಡಿ, ಆನಂದಾವಿರ್ಭಾವದಿಂದ ಆ ಮಹೇಂದ್ರನೆ ಈತನೆಂದು ನೆನೆಯುತ್ತಾ, ಈ ಹುಡುಗನಾದ ಜಯಂತನೂ ಇಲ್ಲಿಬರುವ ಮಹಾನುಭಾವನು ನನ್ನತಂದೆಯೆಂದು ಅರಿತವನಲ್ಲ, ಎಲೈ ಜಗಜ್ಜನನಿ ಯೇ! ನಿನ್ನಮಾಯೆಯಂ ಇನ್ಯಾರು ಬಲ್ಲರೆಂದು ಮನದೊಳ್ ನೆನೆಯು ತ್ತಾ, ಎದುರಾಗಿಬರುವ ರಾಯನಂನೋಡಿ, ಅಯ್ಯಾ ಸುಗಂಧರಾಯನೆ! ಬಾ ಯೆಂದು ಕರೆಯುತ್ತಾ ಸಮೀಪವನಂ ಸೈದುತ್ತಿರಲು, ಆರಾಯನು ಗೋತ್ರವನ್ನುಚ್ಚರಿಸಿ ಸುಗಂಧವರ್ಮ ನಾನೆಂದು ಹೇಳುತ್ತಾ ಗೋತ್ರಾಭಿ ವಂದನೆಯಂ ಮಾಡಲು, ಆಗ ಆ ಯೋಗಿನಿಯು ರಾಯನಕರವಂ ಹಿಡಿದು ಎಲೈ ಪುತ್ರನೆ! ನೀನು ಮಿತ್ರರಿಂದಕೂಡಿ ಕುಶಲವೇಯೆಂದು ಕುಶಲಪ್ರ ಶ್ನೆಯಂ ಗೈಯಲು, ಆಗ ರಾಯನು ತಾಯೆ ನಿನ್ನಡಿದಾವರೆಗಳಂ ನಂಬಿ ರುವ ಎನ್ನಕುಲಕ್ಕೆ ಕುಶಲವೆಂದು ವಿಜ್ಞಾಪನೆಯಂ ಮಾಡಲಾ, ಯೋ ಗಿನಿಯು ಬೆನ್ನುಸವರಿ, ಶಿರವನಾಘ್ರಾಣಿಸಿ, ಬರುತ ಅಲ್ಲಲ್ಲಿ ಬದ್ಧಾಸನದ ಲ್ಲಿ ಕುಳಿತಿರುವ ಸಿದ್ಧಪುರುಷರಿಗೆ ಕುಮಾರನ ಕರವಂ ಹಿಡಿದು ಕೈಲಾಸ ದಿಂದ ಬರುವ ಕಾಮೇಶ್ವರಿಯಂತೆ ಕಾಣಿಸುತ್ತಾ, ಆನೆಂದವಲ್ಲೀ ದೇವಾ ಲಯದ ಪುರೋಭಾಗದೊಳ್ ಗಗನವಂ ಮುಟ್ಟಿರುವ ಘಾಳ ಗೋಪುರ ವಂ ದಾಟಿ, ಅಯ್ಯಾ ರಾಯನೆ! ಈ ಮಹಾದೇವಿಗೆ ಪ್ರದಕ್ಷಿಣಪೂರ್ವಕ ವಾಗಿ ಬಂದು, ಆ ದೇವಿಯ ಪ್ರಸಾದವಂ ಶಿರಸಾವಹಿಸಿ, ಮಠಕ್ಕೆ ಪೋ ಗುವಾ ಎಂದು ಆಜ್ಞಾಪಿಸುತ್ತಾ, ಪ್ರದಕ್ಷಿಣೆಗಳಂಮಾಡಿ, ಪ್ರಸಾದವಂ ಸ್ವೀಕರಿಸಿ, ತನ್ನಮಠಕ್ಕೆ ಕರತಂದು ಉನ್ನತವಾದ ರನ್ನದಪೀಠದಲ್ಲಿ ಕೂ ತುಕೊಳ್ಳುವಂತೆ ನೇಮಿಸಿ, ಜಯಂತ ನಳಕೂಬರ ಬೃಹಸ್ಪತಿ ಮೊದಲಾ ದವರಿಗೆ ಉಚಿತವಾದ ಪೀಠಗಳಲ್ಲಿ ಕೂತಿರುವಂತೆ ಕಟ್ಟುಮಾಡಿ, ತಾನು ತಾಯೆ ಪರಮೇಶ್ವರಿಯೆ! ನಿನ್ನಪಾದಗಳೆ ಗತಿಯೆಂದು ಪದಳದಗದ್ದಿಗೆ

ಯೊಳ್ ವಿಶ್ರಾಂತವಾಗಿ ಕುಳಿತು, ಒಂದು ಮುಹೂರ್ತವಾತ್ರ, ಧ್ಯಾನಿಸಿ, ನೆಸುನಗುತ ಜಯಂತನಂ ನೋಡಿ ಅಯ್ಯಾ ಜಯಂತನೆ ! ಈರಾಜೇಂದ್ರನಿಗೆ ಅಘ್ರ್ಯಪಾದ್ಯಾದಿಗಳಂ ಕೊಟ್ಟು, ಮಧುಪರ್ಕವಂಮಾಡಿ, ಆ ಬಳಿಕ ಪಾದಪೂಜೆಯಂ ಮಾಡೆಂದು ಅಪ್ಪಣೆಯಂಕೊಡಲು, ಆಗ ಬೃಹಸ್ಪತಿಯು ಮನದೋಳ್ ಸಂದೇಹವಂಪಡುತ್ತಿರಲು, ಆ ಸಮಯದಲ್ಲಿ ಮಹಾಯೋಗಿನಿಯು ಅಯ್ಯಾ ಸುರಾಚಾರ್ಯನೆ! ಒಂದು ಸೂಕ್ಷ್ಮಧರ್ಮಉಂಟು, ಅದೇನೆಂಬೆಯಾ ಈ ಜಯಂತನು ಆ ರಾಮನು ಇವರೀರ್ವರೂ ಎನ್ನ ಸಮೀಪದಲ್ಲಿಯೆ ಸಾಂಖ್ಯಯೋಗ, ತಾರಕಯೋಗ, ಅಮನಸ್ಕಯೋಗಂಗಳನ್ನು ಶಿಷ್ಯಭಾವದಿಂದ ಅಭ್ಯಾಸವಂಮಾಡಿದರು, ಅದುಕಾರಣ ಎನಗೆ ಇವರಿಬ್ಬರಲ್ಲಿ ತಾರತಮ್ಯವು ಏನೂತೋರಲಿಲ್ಲ, ಇದಲ್ಲದೆ ನಿನ್ನಲ್ಲಿ ನನ್ನಲ್ಲಿ ಈತನಲ್ಲಿ ಆತನಲ್ಲಿಯೂ ಸಹ ಒಂದೇಮೇರೆಗೆ ಪರಮೇಶ್ವರನು ಇರೂವಾಗ ನಿಮಗೆ ಸಂದೇಹಬರುವದಕ್ಕೆ ಕಾರಣವೇನು, ಅಯ್ಯಾ ಸುರಾಚಾರ್ಯನೆ! ಇದಲ್ಲದೆ ಜಯಂತನಿಗೂ ಸುಗಂಧರಾಮನಿಗೂ ರೂಪದಲ್ಲಿಯೂ ಮಾತುಗಳಲ್ಲಿಯೂ ಚೇಷ್ಟೆಗಳಲ್ಲಿಯೂ ಲೇಶಮಾತ್ರವೂ ಹೆಚ್ಚು ಕಡಮೆ ಏನೊತೋರದೆ ಈತನೇ ಆತನು, ಆತನೇ ಈತನು, ಇವರೀರ್ವರೋಳ್ ಭೇದಕಾಣೋದೆಇಲ್ಲ, ಆ ಭೇದವು ಇವರಿಬ್ಬರಂಪುಟ್ಟಿಸಿದ ಬ್ರಹ್ಮನೇಬಲ್ಲನು, ನಾವೇನುಬಲ್ಲೆವು, ಈ ಸಂದೇಹ ನಿಮಿಗ್ಯಾಕೆಬಂತೆಂದು ಬೃಹಸ್ಪತಿಯಂಕುರಿತು ಪೇಳುತ್ತಾ ಪುರ್ಬುಗಳಿಂ ಸಂಜ್ಞೆಯಂಮಾಡಲು, ಆಗಬೃಹಸ್ಪತಿಯು ಬೃಂದಾರಕಾ ಯೋಗಿನಿಯುಪೇಳ್ದ ಸಂಕೇತಮಾತುಗಳಂಕೇಳಿ, ಇದೇನೊ ದೇವರಹಸ್ಯವಾಗಿರಬೇಕು, ಈ ರಹಸ್ಯವಂ ವಿಂಗಡವಾಗಿ ತಿಳಿಯಬೇಕೆಂದು ಯೋಚಿಸುತ್ತಾ, ಶೀಘ್ರದಿಂದೆದ್ದು ಅಯ್ಯಾ ಜಯಂತನೆ! ಆ ಮಹಾನುಭಾವನಪಾದಂಗಳಿಗೆ ಪೂಜೆಯಂಮಾಡಬೇಕೆಂದು ನುಡಿಯುತ್ತಾ, ಪತ್ತಾರುರತ್ನಜತಟ್ಟೆಗಳಲ್ಲಿ ಪೂಜಾದ್ರವ್ಯಂಗಳಂ, ಪುಷ್ಪಮಾಲಿಗಳಂ, ಗಂಧಕಸ್ತೂರಿಮೊದಲಾದ ಪರಿಮಳದ್ರವ್ಯಗಳಂ, ನವರತ್ನಗಳಂ, ದಿವ್ಯವಸ್ತ್ರಾಭರಣಗಳಂ, ಸಜ್ಜುಮಾಡಿಕೊಂಡು, ಬೃಹಸ್ಪತಿಕರವಂಪಿಡಿದು ಜಯಂತನು ಸುಗಂಧಮಹರಾಜೇಂದ್ರನ ಸಮೀಪಕ್ಕೆ ಬಂದು ದಂಡಪ್ರಣಾಮವಂಮಾಡಿ, ರಾಜೇಂದ್ರನಪಾದಂಗಳಂ ಹಸ್ತ

ದಿಂದಪಿಡಿದು, ರತ್ನದ ತಟ್ಟೆಯೊಳಿಟ್ಟು ದಿವ್ಯೋದಕಗಳಿಂದ ಪಾದಂಗಳಂ ತೊಳದು ಪಾದೋದಕವಂ ತನ್ನ ಕಣ್ಣುಗಳಿಗೆ ವರಶಿ ಶಿರಸ್ಸಿನಲ್ಲಿ ಧರಿಸುತ್ತಿರುವ ಜಯಂತನಭುಜವಂ ತನ್ನ ಹಸ್ತದಿಂದಪಿಡಿದು, ಎಶ್ನಯಶಸ್ಸುಪ್ರತಾಪಗಳು ಯಥಾಪೂರ್ವವಾಗಿ ಇರಲೀ ಎಂಬ ಶ್ರುತ್ಯರ್ಥವುಂ ಸ್ಮರಿಸಿ ಶ್ರೋತ್ರಾಚಮನವಂಮಾಡುವಾಗ ಮನವುಕರಗಿವ್ಯೆಯುಬ್ಬಿ ಧ್ಯುಮ್ನನೆ ರೋಮಾಂಚವಾಗಿ ಮಾತುಗಳನಾಡಬೇಕೆಂದರೆ ವ್ಯೆಮರತು ಆನಂದಪರವಶನಾಗಿ ಬಾಷ್ಪೋದಕಗಳಿಂದ ಕೂಡಿರುವ ಕಣ್ಣುಗಳಿಂದ ಜಯಂತನಂಕಾಣುತ್ತಾ, ಪೇಳುವದಕ್ಕೆ ಅಶಕ್ಯವಾದ ಪ್ರೇಮಯುಂಟಾಗಿ ಸುಗಂಧರಾಜೇಂದ್ರನು ದಿವ್ಯಶರೀರವಂಧರಿಶಿರುವ ಮಹಾಪುರುಷನ ಶರೀರಸ್ಪರ್ಶದಿಂದ ಮನುಷ್ಯರಿಗೆ ಆನಂದವೂ ಪ್ರೇಮವೂ ತೋರುವದುಂಟೋ? ಯೇನೋಎಂದು ಮನದೋಳ್ ಯೋಚಿಸುತ್ತಿರುವ ಕಾಲದಲ್ಲಿ, ರಾಜೇಂದ್ರನಹಿಂದುಗಡೆಯಲ್ಲಿ ಮೈಗಾವಲಾಗಿ ಚಂದ್ರಹಾಸವಂಪಿಡಿದುನಿಂತಿರುವ ಸುಮತಿಯು ಆ ಯೋಗಿಪೇಳ್ದಮಾತುಗಳಂಮನ್ನಿಶಿ, ರಾಯನಪಾದಂಗಳಿಗೆ ಪೂಜೆಯಂಮಾಡುವ ಜಯಂತನ ಭಕ್ತಿವಿಶ್ವಾಸಂಗಳಿಗೂ ರಾಯನಪ್ರೇಮಾತಿಶಯಕ್ಕೂ ಬೆರಗಾಗಿ, ಹಿಂದುಮುಂದು ತೋರದೆ ಆಶ್ಚರ್ಯವಂನೈದುತ್ತಿರಲು, ಆಬಳಿಕ ಜಯಂತನು ರತ್ನಪೀಠದೋಳ್ ರಾಯನ ಪಾದಂಗಳನ್ನಿಟ್ಟು ನವರತ್ನಗಳಿಂದಲುಂಕುಂದಮಂದಾರ ಪುಷ್ಪಗಳಿಂದಲುಂ ಪೂಜೆಯಂಮಾಡಿ, ದಿವ್ಯಚಂದನ, ಕಸ್ತೂರಿ, ಕರ್ಪೂರ ಮೊದಲಾದ ಪರಿಮಳ ದ್ರವ್ಯಗಳಂ ಸಮರ್ಪಿಸಿ, ಮುತ್ತಿನ ಆರತಿಯನ್ನೆತ್ತಿ, ದ್ರಾಕ್ಷೆ ಇಕ್ಷು ಜಂಬು ಜಂಬೀರಮೊದಲಾದ ದಿವ್ಯಫಲಂಗಳಂ ನಿವೇದನವಂಮಾಡಿ ರಾಯನ ಪಾದಂಗಳಲ್ಲಿ ಪಣೆಯಂನಿಟ್ಟು, ಪಾವನನಾದೆನೆಂದು ನುಡಿಯುತ್ತಾ, ದಿವ್ಯಾಂಬರಾ ಭರಣಗಳಂ ಒಪ್ಪಿಸಿ, ಬೃಹಸ್ಪತಿಯ ಕರವಂ ಪಿಡಿದುಬಂದು ಜಯಂತನು ತನ್ನ ಪೀಠದೋಳ್‌ಕುಳಿತಿರಲು, ಆಬಳಿಕ ರಾಯನು ಛಾಯಾಗುಪ್ತನ ಮುಖವಂ ನೋಡಲು, ಆಗಯಕ್ಷನು ತಟ್ಟೆಗಳಂ ಆಚೆಗೆ ತೆಗೆಯುವ ಕಾಲದಲ್ಲಿ ಬೃಂದಾರಿಕಾ ಯೋಗಿನಿಯು ಅಯ್ಯಾ ರಾಜೇಂದ್ರನೆ ! ಈ ನೂತನವಾದ ದಿವ್ಯಾಂಬರಗಳನ್ನುಟ್ಟು ದಿವ್ಯ ರತ್ನಕುಂಡಲ ಕಿರೀಟ ಕವಚವಂಧರಿಸಿ ಎನ್ನನೇತ್ರಗಳಿಗೆ ಉತ್ಸವನ್ನುಂಟುಮಾಡ

ಬೇಕೆಂದು ಅಪ್ಪಣೆಯಂಕೊಡಲು, ಆಗ ರಾಜೇಂದ್ರನು ತಾಯೆ! ನಿಮ್ಮ ಸಂತೋಷಬಂದಂತೆ ಆಗಲೀ ಎಂದು ಮರೆಯಾಗಿ ಕಾಂಡಪಟವಂ ಕಟ್ಟಿಸಿ, ನೂತನಾಲಂಕಾರಗಳಿಂದ ನವಮನ್ಮಥನಂತೆ ಕಾಂಡಪಟದಿಂದ ಪೊರಟು ಬರುತ್ತಿರಲು, ಆಗ ಜಯಂತ, ನಳಕೂಬರ, ಬೃಹಸ್ಪತಿ ಮುಂತಾದವರು ಸಾಲಾಗಿಸಿಲ್ಲಲು, ಆ ರಾಜೇಂದ್ರನು ಬೃಂದಾರಿಕಾ ಮಹಾಯೋಗಿನಿಯ ಅಡಿದಾವರೆಗಳಿಗೆ ಅಡ್ಡಬೀಳಲು, ಆಯೋಗಿನಿಯು ಅಯ್ಯಾಪುತ್ರನೆ! ನಿನಗೆ ಅಭೀಷ್ಟಕಾರ್ಯಂಗಳು ಕೈಗೂಡಿಬರಲೀ ಎಂದುಹರಶಿ, ಜಯಂತನಂನೋಡಿ ಅಯ್ಯಾಪುತ್ರನೆ ! ನಿನ್ನ ಅರಮನೆಯೊಳ್ ಅಂಬಿಕಾಭವನವೆಂಬ ಹಜಾರದೊಳ್ ಬಿಡದಿಯಂಮಾಡಿ, ದೇವ್ರೋಪಚಾರಗಳಿಂದ ದೇವದೇವನಂತೆ ಸನ್ಮಾನವಂಮಾಡೆಂದು ಹೇಳಿಕಳುಹಲು, ಆಗ ಜಯಂತನು ರಾಜೇಂದ್ರನ ಕರವಂಪಿಡಿದು ಬಾಗಿಲೊಳ್‌ಕಾದಿರ್ದವಿಮಾನದಲ್ಲಿ ಜಯಂತಮೊದಲಾದವರು ರಾಜೇಂದ್ರನಿಗೆ ಹಸ್ತಲಾಘವಂಕೊಟ್ಟು ಕುಳ್ಳಿರಿಶಿಕೊಂಡು ಆ ಬಳಿಕ ಅಂತರಿಕ್ಷಮಾರ್ಗದಲ್ಲಿ ಪೊರಮಟ್ಟು ಆ ವಿಮಾನವು ಶುಕ್ಲಾನದೀತೀರದಲ್ಲಿರ್ದ ಜಯಂತನ ಅರಮನೆಯ ಬಳಿಯಲ್ಲಿ ನಿಲ್ಲಲು, ಆಗ ಜಯಂತನು ರಾಜೇಂದ್ರನ ಹಸ್ತವಂಪಿಡಿದು ಅಂಬಿಕಾಭವನವೆಂಬ ಹಜಾರದೊಳ್ ಇಳುಹಿಸಿ, ನಾನಾಉಪಚಾರಗಳಂ ಮಾಡುವಂತೆ ಶೃಶ್ರೂಷೆಗೆನೇಮಿಸಿ, ಅನಂತರ ಭೋಜನಶಾಲೆಯೊಳ್ ಜಯಂತ, ನಳಕೂಬರ, ಬೃಹಸ್ಪತಿ, ಛಾಯಾಗುಪ್ತ ಮೊದಲಾದವರಿಂದೊಡಗೂಡಿ ಸುಗಂಧರಾಜೇಂದ್ರನು ದಿವ್ಯವಾದ ಭಕ್ಷ್ಯಭೋಜ್ಯಂಗಳಂ ಭುಂಜಿಸಿ, ದಿವ್ಯ ಗಂಧಾನುಲೇಪನವಂಮಾಡಿ, ಕರ್ಪೂರದವೀಳ್ಯಗಳಂ ಧರಿಶಿ, ಸುಖದಿಂದಿರುತ್ತಿರಲು,

ಆ ಬಳಿಕ ಒಂದುಕಾಲದೊಳ್ ಜಯಂತ ಬೃಹಸ್ಪತಿ ಈರ್ವರೂ ಸುಗಂಧರಾಯನ ವಿನೋದವಿಹಾರಂಗಳಂ, ಚಮತ್ಕಾರ ಮಾತುಗಳಂ, ಮತ್ತಾರಾಯನ ಭಕ್ತಿವಿಶ್ವಾಸಂಗಳಿಂದ ಬೆರದಿರುವ ವಿನಯವಿವೇಕಸಂಪತ್ತುಗಳಂನೋಡಿ, ಈ ಮಹಾಪುರುಷನಾಗಿ ಮಹೇಂದ್ರನೆ!ಭೂಲೋಕದಲ್ಲಿ ಜನಿಶಿದನೊ ? ಹೀಗಲ್ಲದೆ ಇದ್ದಡೆ ಆ ಇಂದ್ರನಲ್ಲಿ ಇದ್ದಗುಣಂಗಳು ರೂಪವು ವಿನೋದವಿಹಾರಂಗಳೆಲ್ಲವು ಈ ರಾಯನಲ್ಲಿಯೇ ತೋರುವದದುಕಾ

ರಣ ಈ ದೇವರಹಸ್ಯವು ರಮಾಪತಿಯೇಬಲ್ಲನೆಂದು ಯೋಚಿಸುತ್ತಾ, ಎ
ಲೈ ದೇವಮಂತ್ರಿಯೆ! ಈ ರಾಯನ ಚರ್ಯೆಗಳಂ ಬೃಂದಾರಿಕಾಯೋಗಿ
ಯು ತಿಳದಿರಬೇಕು, ಆ ಯೋಗಿನಿಯ ಸಮೀಪಕ್ಕೆಪೋಗಿ ಈ ರಹಸ್ಯತಿಳಿ
ಯತಕ್ಕದ್ದೆಂದು ಹೇಳುತ್ತಾ, ಜಯಂತನು ಬೃಹಸ್ಪತಿಸಮೇತನಾಗಿ ವಿ
ಮಾನವನೇರಿ ಬೃಂದಾರಿಕಾಸಮೀಪವನ್ನೈದಿ, ಪ್ರಣಾಮಂಗೈದು ಉ
ಚಿತವಾದ ಪೀಠವಲ್ಲಿ ಕುಳಿತು, ಆ ಬಳಿಕ ಮುಹೂರ್ತಮಾತ್ರಕ್ಕೆ ಆ ಮ
ಹಾಯೋಗಿನಿಯು ಕಣ್ಣುಗಳಂತೆರದು ಯಾವಾಗಬಂದಿರಯ್ಯಾ ಜಯಂ
ತನೆ ! ಎಂದು ಅಪ್ಪಣೆಯಂಗೆಯಲು, ಆಗ ತಾಯೆ ! ನಾವುಬಂದು ಮು
ಹೂರ್ತಕಾಲವಾಯಿತೆಂದು ವಿಜ್ಞಾಪನೆಯಂಮಾಡುತ್ತಾ, ತಾಯೆ! ಇ
ನ್ನೊಂದು ರಹಸ್ಯವುಂಟು, ಎನಗೆಸಂದೇಹನಿವೃತ್ತಿ ಆಗುವರೀತಿಗೆ ಅಪ್ಪ
ಣೆಯಂಕೊಡಬೇಕೆಂದು ನುಡಿದ ಜಯಂತನಮಾತಂಕೇಳಿ, ಆವದ್ದಾ ನೀ
ವು ನಿಮ್ಮಗುರುಗಳಸಹಿತವಾಗಿ ಏಕಕಾಲದಲ್ಲಿ ಬಂದಾಗಲೇ ನಾನುತಿಳಿದೆ
ನು, ಎನ್ನಲಾಗ ಜಯಂತನು ತಾಯೆ ! ಮಹಾನುಭಾವಳಾದ ನಿನಗೆತಿಳಿ
ಯದೆ ಇರುವಕಾರ್ಯಂಗಳು ಲೋಕತ್ರಯಂಗಳಲ್ಲಿಯು ಇಲ್ಲ, ಅದುಕಾರ
ಣ ಈ ರಾಯನುಯಾರು, ಯಾವಖಂಡವನ್ನಾಳುವರಾಯನು, ಈ ಸ
ಮುದ್ರಂಗಳನ್ನು ದ್ವೀಪಂಗಳನ್ನು ದಾಂಟಿ ಕ್ರೌಂಚದ್ವೀಪಕ್ಕೆ ಬರುವ
ಕಾರಣವೇನು, ಈ ರಾಯನಿಗೂ ತಾಯೆ ! ನಿಮಗೂ ಎಲ್ಲಿಪರಿಚಯ, ಇ
ದೆಲ್ಲವಂ ಎನಗೆ ಅಪ್ಪಣೆಯನ್ನಿತ್ತು, ಮನಸ್ಸಂತೋಷವಂ ಮಾಡಬೇಕೆಂದು
ವಿಜ್ಞಾಪನೆಯಂಮಾಡಿದ ಜಯಂತನಂನೋಡಿ, ನಸುನಗುತ ಅಯ್ಯಾಬೃ
ಹಸ್ಪತಿಯೆ ! ಬಾಲಕನಾದ ಜಯಂತನಿಗೆ ಸಂದೇಹಬರಬಹುದು, ಸರ್ವ
ಜ್ಞನಾದ ನಿನಗೂ ಸಂದೇಹತೋರಿತೆ ಎಂಬುವದು ಎನ್ನಬುದ್ಧಿಗೆಆಶ್ಚ
ರ್ಯವಾಯಿತು, ಈ ಸಂದೇಹನಿವೃತ್ತಿ ನಿಮ್ಮ ಈರ್ವರಿಗೂ ಆಗಬೇಕೆಂದು
ಪಾದಪೂಜಾಸಮಯದಲ್ಲಿಯೆ ಕೆಲವುಮಾತುಗಳಿಂದ ನಿಮ್ಮ ಈರ್ವರಿಗೂ
ವ್ಯಕ್ತವಾಗಿ ತಿಳಿಯಲಿಲ್ಲವೇನೊ ? ಈಗ ಸ್ಪಷ್ಟವಾಗಿಪೇಳುವೆನುಕೇಳಿ,
ಪೂರ್ವದಲ್ಲಿ ದೂರ್ವಾಸಶಾಪದಿಂದ ಮಹೇಂದ್ರನು ಭರತಖಂಡವನ್ನಾಳು
ವ ರಾಜಶ್ರೇಷ್ಠನಾದ ಸುಚರಿತ್ರಮಹಾರಾಯನಿಗೆ ಪುತ್ರನಾಗಿಸುಗಂಧ
ಮಹಾರಾಯನೆಂಬ ಪೆಸರಿನಿಂದ ಪ್ರಸಿದ್ಧನಾಗಿಜನಿಸಿದನು ಆ ನಿನ್ನತಾಯಿ

ಯಾದ ಶಚೀದೇವಿಯು ಕಳಿಂಗದೇಶಾಧಿಪತಿಯಾದ ವಿಜಯವರ್ಮರಾಯನಿ ಗೆಪುತ್ರಿಯಾಗಿ ಸೌಗಂಧಿಕಾದೇವಿಯೆಂಬ ಪೆಸರಿನಿಂದಜನಿಸಿದಳು, ಆದೇವಿಯುಸ್ವಯಂವರದಲ್ಲಿ ಎಂಟುಪಣಂಗಳುತಂದವರನ್ನು ಪರಿಣಯವಾ ಗುವದೆಂದು ನಿಶ್ಚೈಸಿದಳು, ಆ ಪಣಂಗಳು ಯಾವವೆಂದರೆ—ನಿಮ್ಮತಂದೆ ಯಾದ ಮಹೇಂದ್ರನವಜ್ರಾಯುಧವು, ಚತುರ್ದಂತಯುಕ್ತಮಾದಗಜವು, ಪಕ್ಷಗಳಿಂಕೂಡಿರುವ ಅಶ್ವವು, ಚಿಂತಾಮಣಿಯು, ಕಲ್ಪವೃಕ್ಷವು, ಕಾಮ ಧೇನುವು, ಪುಷ್ಪಕವಿಮಾನವು, ಪದ್ಮಿನೀಮೊದಲಾದಜಾತಿಸ್ತ್ರೀಯರುಗಳು, ಇವಂ ತಂದವರನ್ನೇ ನಾನುವರಿಸುವಳೆಂದುಪ್ರತಿಜ್ಞೆಯಂಮಾಡಿದಳು,ಈ ಪಣಂಗಳನ್ನೆ ಸೌಗಂಧಿಕಾದೇವಿ ಕೋರುವದಕ್ಕೆ ಕಾರಣವೇನೆಂದಡೆ, ನಿ ಮ್ಮತಾಯಿಯಾದ ಶಚೀದೇವಿಯಸಮೀಪದಲ್ಲಿರ್ದ ಲೀಲಾಶುಕವು ಸೌಗಂ ಧಿಕಾದೇವಿಯ ಸಮೀಪದಲ್ಲಿಸೇರಿ ಮುಖ್ಯವಾದ ಎಂಟು ವಸ್ತುಗಳನ್ನೇ ಕೇಳು ಎಂದು ಬೋಧಿಸಿತು. ಆ ಪಣವಂ ಸಾಧಿಸುವ ಸಾಮರ್ಥ್ಯ ಈ ಮಹಾರಾಯನಿಗೆ ಹೊರ್ತು ಮತ್ತೊರ್ವರಿಂದಾಗದು, ಈಗ ವಜ್ರ, ಗಜ,ಅಶ್ವ, ಚಿಂತಾಮಣಿ, ಕಲ್ಪವೃಕ್ಷ, ಈ ಐದುವಸ್ತುಗಳಂ ಆಸೌಗಂ ಧಿಕಾದೇವಿಗೆ ತಂದು ಕೊಟ್ಟನು. ಈಪದ್ಮಿನ್ಯಾದಿ ಜಾತಿ ಸ್ತ್ರೀಯರುಗಳಂ ತರಬೇಕೆಂದು ಕೇಳಿದ ಆರನೇಪಣವಂ ಸಾಧಿಸಬೇಕೆಂದು ನಿಶ್ಚಯಿಸಿ, ದಾ ರುಕಾವನದಲ್ಲಿ ತಪವಂ ಮಾಡುತ್ತಿರುವ ನನ್ನಸಮೀಪಕ್ಕೆ ಬರಲು ಆಗ ನಾ ನು ಜ್ಞಾನದೃಷ್ಟಿಯಿಂದ ಸರ್ವವಂತಿಳಿದು ನಿನ್ನ ಸಮೀಪದಲ್ಲಿರುವ ರಂ ಭಾದಿವೇಶ್ಯರನ್ನು ಈತನಸ್ವಾಧೀನವಂ ಮಾಡಿಸ ಬೇಕೆಂದು ಯೋಚಿಸಿ, ಈ ಸುಗಂಧ ಮಹಾರಾಯನನ್ನು ಈದ್ವೀಪಕ್ಕೆ ಬರುವಂತೆ ನೇಮಿಸಿ, ದಾ ರುಕಾವನವಂ ಬಿಟ್ಟು ಇಲ್ಲಿಗೆ ಪೊರಟುಬಂದೆನು, ಅದುಕಾರಣ ಜಾತಿ ಸ್ತ್ರೀಯರ ನಿಮಿತ್ತವಾಗಿ ಈದ್ವೀಪಕ್ಕೆ ಬಂದು ಇರ್ಧಾನೆ. ಆಯ್ಯಾಜಯಂ ತನೆ ! ಈದೇವರಹಸ್ಯ ಆರಾಯನಿಗೆ ತೋರಿಸದೆ, ಆತನಿಗೆ ಇಷ್ಟಮಾದ ಪದಾರ್ಥಂಗಳಂ ಒಪ್ಪಿಸಿ ಸಂತೋಷಪಡಿಸಿ ಕಳುಹಿಸೊಯೆಂದು ಪೇಳಲಾ ಗ, ಜಯಂತ ಬೃಹಸ್ಪತಿ ಇವರೀರ್ವರು ಮಹದಾಶ್ಚರ್ಯವನ್ನೈದಿ, ತಾಯಿ ಮಹಾನು ಭಾವಳಾದ ಯೋಗಿನಿಯೆ! ಈದೇವ ರಹಸ್ಯಂಗಳು ನಿಮ್ಮದಿವ್ಯ ಚಿತ್ತಕ್ಕೆ ವೇದ್ಯವೇಹೊರ್ತು ಬ್ರಹ್ಮಾದಿಗಳಿಗೂ ತಿಳಿಯಲಶಕ್ಯವೆಂದು ಪೇ

ಳುತ್ತಾ ಈರ್ವರೂ ಯೋಗಿನಿಯ ಪಾದಂಗಳಿಗೆ ನಮಸ್ಕಾರವಂ ಮಾಡಿ ಅಪ್ಪಣೆಯಂ ತೆಗದುಕೊಂಡು, ವಿಮಾನಮಂ ಸೇರಿ ಅಂಬಿಕಾ ಭವನವೆಂಬ ಹಜಾರವಂ ಸೇರುತ್ತಿರಲಾಗ, ಸುಗಂಧ ಮಹಾರಾಯನು ನಳಕೂಬರ ಸುಮತಿಗಳಿಂದ ಕೂಡಿ ಆ ಹಜಾರದ ಉಪರಿ ಭಾಗದಲ್ಲಿರ್ದ್ದ ಪಚ್ಚೆಯ ಉಪ್ಪರಿಗೆಯೊಳ್ ಕುಳಿತು, ನಳಕೂಬರನ ಕರದಲ್ಲಿರ್ದ ದೂರದರ್ಶಕವೆಂಬ ಕನ್ನಡಿಯಂ ಪಿಡಿದು, ಆ ಕನ್ನಡಿಯಲ್ಲಿ ಪ್ರತಿಫಲಿಸಿದ ಐವತ್ತು ಕೋಟಿ ಯೋಜನ ಅಗಲವಾದ ಭೂಮಂಡಲವಂ ಸಮೀಪದಲ್ಲಿದ್ದಂತೆ ನೋಡಿ ಆಶ್ಚರ್ಯಪಡುತ್ತಾ, ಅಯ್ಯಾ ಸುಮತಿಯೇ! ಇಂಥಾ ಕನ್ನಡಿಯಂ ಈವರಿವಿಗೆ ಎಲ್ಲಿಯೂ ಕಾಣೆ, ಇದು ಅಪೂರ್ವವಾದದ್ದು ಎಂದು ಅಪ್ಪಣೆಯ ಕೊಡುತ್ತಾ, ಭಾಮಾಗುಪ್ತನಂ ಕರೆದು, ಅಯ್ಯಾ ನಿನ್ನ ಹೆಗಲಿನೊಳ್ ಕುಳಿತು ಈ ಕನ್ನಡಿಯೊಳ್ ಪ್ರತಿಫಲಿಶಿದ ಭೂಮಂಡಲವೆಲ್ಲವಂ ನೋಡಬೇಕೆಂಬ ಇಚ್ಛೆ ಉದಯಿಸಿಧೆ ಎನಲಾಗ, ಸ್ವಾಮಿ ಎನ್ನೊಡೆಯ! ಚಿತ್ತೈಸಬೇಕೆಂದು ಸಮೀಪಕ್ಕೆ ಬರಲಾ ರಾಯನು ಯಕ್ಷನ ಹೆಗಲಿನೊಳ್ ಕುಳಿತು, ಅಯ್ಯಾ ನಳಕೂಬರನೆ! ಬಾಯೆಂದು ಕರವಂ ಪಿಡಿದು, ಎದುರಾಗಿ ಹೆಗಲಿನೊಳ್ ಕುಳ್ಳಿರಿಸಿ, ಪ್ರೇಮಪುರಸ್ಸರವಾದ ಮಾತುಗಳಂ ನಾಡುತ್ತಿರುವ ಕಾಲದೊಳ್, ಆ ಯಕ್ಷನು ಘಾಳೀಪಟವಂತೆ ಗಗನಕ್ಕೆ ಹಾರಿ ಮಂಡಲಾಕಾರವಾಗಿ ಸಂಚಾರವಂ ಮಾಡಲಾಗ, ರಾಯನಿಗೆ ನಳಕೂಬರನು ಎಲೈ ರಾಜೇಂದ್ರನೇ! ಪರಾಂಬರಿಸಬೇಕೆಂದು ಕನ್ನಡಿಯಂ ಹಸ್ತಕ್ಕೆ ಒಪ್ಪಿಸಲು, ಆ ರಾಯನು ಮಾನಸೋತ್ತರ ಪರ್ವತದ ಮೇಲ್ಗಡೆಯಲ್ಲಿ ಅತಿವೇಗದಿಂ ತಿರಗುತ್ತಿರುವ ಸೂರ್ಯನ ರಥಚಕ್ರವಂ ನೋಡಿ ವಿಸ್ಮಿತನಾಗಿ, ಅರುಣನ ಹಸ್ತದಿಂದ ಬಿಗಿಯಾಗಿ ಪಿಡಿವಿರುವ ಹಗ್ಗಂಗಳಿಂದ ಅಲಂಕೃತವಾದ ಅಶ್ವಗಳ ಹಾರಾಟದಿಂ ವಲ್ಲಾಡುವ ರಥದಲ್ಲಿ ಅಖಂಡಮಂಡಲಾಕಾರವಾಗಿರ್ಪ ತೇಜೋಮಂಡಲವಂ ನೀಕ್ಷಿಶಿ, ಸೌರಮಂತ್ರದಿಂದ ಸ್ತೋತ್ರವಂ ಮಾಡುತ್ತ, ಎಲೈ ನಳಕೂಬರನೆ! ನಾಲ್ಕು ವೇದಗಳಿಂದ ಸ್ತುತಿಸಲ್ಪಡುವ ನಾರಾಯಣನೇ ಈ ಸೂರ್ಯನು, ಈತನೆ ನಮ್ಮ ಕ್ಷತ್ರಿಯ ಕುಲಕ್ಕೆ ನಾಯಕನಾದವನೆಂದು ಪೇಳಿ, ನಮಿಸುತ್ತಾ ಸೂರ್ಯನ ಕಿರಣಗಳಿಂದ ಸುತ್ತಿ ಸುವರ್ಣ ಕಂಕಣದಂತಿರುವ ಚಕ್ರವಾಳಪರ್ವತವಂ ಚೆನ್ನಾಗಿ

ಕಾಣುತ್ತಾ, ಸಪ್ತಸಮುದ್ರಗಳಂ ಅದರಮಧ್ಯದಲ್ಲಿರುವ ದ್ವೀಪಂಗಳಂ ನೋಡುತ್ತಾ, ದ್ವೀಪಂಗಳನ್ನಳತೆಯಂ ಮಾಡಿ ಮಧ್ಯದಲ್ಲಿ ನಟ್ಟ ಮಾನದಂಡದಂತಿರ್ಪ್ಪ ಸುಮೇರುವಂ ನಮಾರವಾಗಿ ಸ್ತುತಿಸುತ್ತಾ ಭರತಖಂಡವಂ ವೀಕ್ಷಿಸಿ ಅಯ್ಯಾ ನಳಕೂಬರನೆ! ಭರತರಾಯ ಮೊದಲಾದ ಎಲ್ಲಾ ಚಕ್ರವರ್ತಿಗಳು ಬಾಳಿದ ಭರತಖಂಡದಲ್ಲಿ ಐವತ್ತಾರು ದೇಶಂಗಳಂ ನಾಳುವ ಅರಸುಗಳೆಲ್ಲರೂ ನಮ್ಮರಮನೆಗೆ ಕಪ್ಪಂಗಳಂ ಕೊಟ್ಟು ಕಾದಿರುವರು ಆದೇಶಂಗಳು ಅಂಗೈಯಲ್ಲಿ ಅಳವಡಿಸಿದಂತೆ ಕನ್ನಡಿಯೊಳ್ ಕಾಣುತಲಿವೆ ನೋಡುವನಾಗೆಂದು ನಗುತ, ಇದು ನೇಪಾಳ, ಅದು ಭೂಪಾಳ, ಅದು ವರಾಟ; ಇದು ಮರಾಟ, ಮಗಧ, ಮಾಳವ, ಚೋಳ, ದೇಶಂಗಳಂ ತೋರಿಸುತ್ತಾ, ಕೇರಳ ಸಮೀಪದಲ್ಲಿ ಕಾಣಲ್ಪಡುವದೆ ಕಲಿಕಾಲಕಲ್ಪವೃಕ್ಷದಂತಿರ್ಪ ಕರ್ನಾಟದೇಶವು, ಅದರ ಮಧ್ಯದಲ್ಲಿ ರತ್ನಶಿಖರಸಹಸ್ರಂಗಳಿಂದ ರಾಜಿಸುವದೇ ನಮ್ಮ ರತ್ನಪುರ ರಾಜಧಾನಿ ಎಂದು ಕುಂಭಸಗಳಂ ತುಂಬಿ, ಕಳಿಂಗಪಟ್ಟಣದಲ್ಲಿ ಕಾದಿರುವ ಸೇನಾಕಟಕಂ ಕಂಡು, ಕೈಗಳಿಂದ ತೋರಿಸುತ್ತಾ ವಿಹಾರವನ್ನು ಮಾಡುತ್ತಿರಲು, ಆಗ ಜಯಂತ ಬೃಹಸ್ಪತಿ ಇವರೀರ್ವರು ವಿಮಾನವಂ ದಿಳಿದು ಅಂಬಿಕಾ ಭವನನಂ ಪೊಕ್ಕು ಹಜಾರದೊಳ್ ಆ ಮಹಾರಾಯನಂ ಕಾಣದೆ ಕಳವಳಮಂ ಪಡುತ್ತಾ, ಜಯಂತನು ಗುರುವಂ ಕುರಿತು ಅಯ್ಯಾ ಆಚಾರ್ಯನೇ! ಅಖಿಲವಾದ ಲೋಕಗಳಂ ನಾಳುವ ಆ ಖಂಡಲನು ಅಮರಾವತಿಯಂ ಬಿಟ್ಟು ಔರಸಪುತ್ರನಾದ ನನ್ನ ಅವಲೋಕಿಸದೆ ದೂರ್ವಾಸಶಾಪ ನೆವದಿಂ ಮನುಷ್ಯ ಲೋಕದಲ್ಲಿ ಪುಟ್ಟಿ, ಮಾನರಂತೆ ನಮ್ಮೆಲ್ಲರಂ ಮರತು ಮನಸ್ಸು ಬಂದಂತೆ ವಿಹಾರಗಳಂ ಮಾಡುವ ಪರಿ ನೋಡಿದಡೆ ಎನ್ನ ಬುದ್ಧಿಗೆ ಈ ಮಹಾನುಭಾವನು ಅಮರಾವತೀಪಟ್ಟಣಕ್ಕೆ ಬರುವ ಬಗೆ ತೋರುವದಿಲ್ಲ, ಎಲೈ ಆಚಾರ್ಯನೆ! ನಿಮ್ಮಡಿಗಳಾಣೆ ನಾನೆಲ್ಲಿಯೂ ನಿಲ್ಲಲಾರೆ, ಈತನ ಸಂಗಡಲೆ ನಾನು ಪೊರಟು ಹೋಗುವೆನು, ಇಷ್ಟು ದಿವಸವು ನಾನು ತಾಯಿತಂದೆಗಳಂ ಕಾಣಬೇಕೆಂಬ ಇಚ್ಛೆ ಇಂದಲೇ ಸಮಸ್ತ ದ್ವೀಪಂಗಳಂ, ಬದರೀಕೇತಾರ ಮೊದಲಾದ ಶಿವವಿಷ್ಣು ಕ್ಷೇತ್ರಂಗಳಲ್ಲಿ, ಮತ್ತು ಭೂಲೋಕದಲ್ಲಿ ಭಕ್ತಾನುಗ್ರಹಾರ್ಥವಾಗಿ ಆವಿರ್ಭವಿಸಿದ ಅಷ್ಟಾದಶ ಪೀಠಂಗಳಲ್ಲಿಯೂ ಸಂಚಾರವಂ ಮಾಡುತ್ತಾ ಎಲ್ಲಿ

ಯೂ ಕಾಣದೆ ಬೇಸರಗೊಂಡು ಬಂದು, ಈ ಮಹಾಯೋಗಿನಿಯಾದ ಬೃಂದಾರಕಾಸಮೀಪದಲ್ಲಿ ಕುಳಿತಿರುವದು ನೀವೆಲ್ಲರು ಕಂಡೇ ಇದ್ದೀರಿ, ಈ ಯೋಗಿನಿಯ ಪ್ರಭಾವದಿಂದ ಈ ಸ್ಥಳಕ್ಕೆ ಬಂದಬಳಿಕ ಇತನಬಿಟ್ಟು ನಾ ನಿಲ್ಲಲಾರೆ, ಇನ್ನು ನಾನೆಷ್ಟು ಕಾಲ ತಾಯಾದ ಶಚೀದೇವಿಯಂ ಕಾಣದೆ ಇರಬೇಕು, ನಾನರಿಯೆ, ಯಾವಾಗಲೂ ತಾಯಾದ ಶಚೀದೇವಿಯ ಸ್ವರೂಪವೇ ಕಣ್ಣುಗಳಿಗೆ ಕಟ್ಟಿದಂತೆ ಕಾಣಿಸುತಲಿದೆ, ನಾನು ಯಾವರೀತಿ ಪ್ರಾಣಗಳಂ ಧರಿಸಿರಲೀ, ಅಕಟಕಟಾ ನಾನೆಂತು ಪಾಪಿಷ್ಠನೊ ? ಪೂರ್ವಜನ್ಮದಲ್ಲಿ ಯಾವಪುರುಷನಿಗೆ ತಾಯಿತಂದೆಗಳಿಂದ ಭೇದವಂ ಪುಟ್ಟಿಸಿ ಇದ್ದೆನೊ ? ಆ ಪಾಪವೆ ಈಗ ನಾ ನನುಭವಿಸಬೇಕಾಯಿತಲ್ಲದೆ ಮತ್ತೊಂದು ಕಾರಣವಿಲ್ಲಾ, ಎಲೈ ದೇವನಮಂತ್ರಿಯೆ! ಈಗ ಮಹಾಪುರುಷನಾದ ರಾಜನು ಈಗಲೇ ಎಲ್ಲಿ ಪೋದನೊ ? ಅದಲ್ಲದೆ ಮತ್ತೊಂದುರೂಪವಂತಾಳಿ ಬರುವನೊ ? ಏನೊ ಎಂದು ಎನ್ನ ಮನಸ್ಸು ಡೋಲಾಯಮಾನವಾಗಿ ಇದೆಯಲ್ಲಾ, ಈಪರಿ ಇರಲು, ಆ ಮಹಾನುಭಾವನನ್ನು ಕಳುಹಿಸಿ, ನಾನು ಯಾವರೀತಿಯಿಂದ ಪ್ರಾಣಗಳಂ ಧರಿಸಿ ಇರಬೇಕೆಂದು ಕಂಬನಿಗಳಂ ತುಂಬಿ ಪ್ರಲಾಪವಂ ಮಾಡುವ ಜಯಂತನಂ ನೋಡಿ, ಅಯ್ಯಾ ಮಹೇಂದ್ರಕುಮಾರನೆ ! ದೇವರಹಸ್ಯಂಗಳಂ ತಿಳಿದು, ಬಾಲಕನಂತೆ ಪ್ರಲಾಪವಂ ಮಾಡುವದು ಉಚಿತವಲ್ಲ, ನೀನು ಅಭಿಜ್ಞನಾದಕಾರಣ, ಅಧಿಕವಾಗಿ ನಿನಗೆ ಹೇಳುವದಕ್ಕೆ ಶಕ್ಯವಲ್ಲಾ. ಆ ಮಹಾಪುರುಷನಾದ ರಾಯನಿಗೆ ಅಭೀಷ್ಟವಾದ ವಸ್ತುಗಳನ್ನು ಒಪ್ಪಿಸಿ, ರಂಭಾದಿದೇವಾಪ್ಸರೋಜನರ ಮೇಳವಂ ಕಟ್ಟಿಸಿ, ಮನಸ್ಸಂತೋಷವಂ ಮಾಡಿ, ಭಯಭಕ್ತಿವಿಶ್ವಾಸಂಗಳಿಂದ ನಾನಾ ಉಪಚಾರಂಗಳಂ ಮಾಡುತ್ತಾ, ಆತನಮನಸ್ಸು ಬಂದಂತೆ ಮಾಡಿ ಕಳುಹಿಸಬೇಕಲ್ಲದೆ ಮೂರ್ಖತನವಂ ಮಾಡೋದು ಯುಕ್ತವಲ್ಲಾ ಎಂದು ಹೇಳಿ, ಸುರಾಚಾರ್ಯನು ತನ್ನಮನೆಗೆ ಪೋಗುತ್ತಿರಲು ; ಆಗ ಸುಗಂಧಮಹಾರಾಯನು ಅರಮನೆ ಬಾಗಿಲಲ್ಲಿ ಇಳಿಯುತ್ತಿರಲು ; ಆ ಸಮಯದಲ್ಲಿ ನಳಕೂಬರನು ರಾಯನಿಗೆ ಹಸ್ತಲಾಗವಂ ಕೊಟ್ಟು ಮಣಿಮಂತನಿಗೆ ಸಂಜ್ಞೆಯಂ ಮಾಡಲಾಗ ಯಕ್ಷನು ಪವಳದಹಾವಿಗೆಗಳಂ ಪಾದಕ್ಕೆ ಒಪ್ಪಿಸಿ ಕೈಗಳಂ ಕಟ್ಟಿಕೊಂಡ ಮುಂದಗಡೆಯಲ್ಲಿ ನಡೆಯುತ್ತಿರಲು, ರಾಯನು ಅಂಬಿಕಾಭವನವೆಂಬ ಹ

ಪಾರಕ್ಕೆ ಚಿತ್ತೈಸಿ ರತ್ನ ಪರ್ಯ್ಯಂಕದಲ್ಲಿ ಕುಳಿತಿರಲು; ಆಗ ಸುಮಾತಿಯು ನವಿಲು ಪಿಂಛದಿಂ ಬಿಗಿದು ಕಟ್ಟಿರುವ ಬೀಸಣಿಗೆಯಿಂದ ಮೆಲ್ಲನೆ ಘಾಳಿಯಂ ಬೀಸುತ್ತಾ, ವಿಜಯಗುಪ್ತನು ಪಾದಂಗಳಂ ತಟ್ಟುತ್ತಾ ಇರುವ ಕಾಲದಲ್ಲಿ, ಜಯಂತನು ನಲಕೂಬರನನ್ನು ಹಸ್ತಸಂಜ್ಞೆಯಿಂದ ಆಚೆಗೆ ಕರದು ಕೊಂಡು ಹೋಗಿ ಅಯ್ಯಾಮಿತ್ರನೆ! ಈದಿವಸ ರಾತ್ರಿಯೋಳ್ ರಾಜೇಂದ್ರನಿಗೆ ಚಂದ್ರಿಕಾವಿಹಾರವಂ ಮಾಡಿಸಿದಲ್ಲದೆ ಮಾರ್ಗಾಯಾಸವು ಬಿಟ್ಟುಗೋದಿಲ್ಲ, ನೀನು ಹೋಗಿ ನವರಂಗ ನಾಟಕ ಶಾಲೆಯನ್ನಲಂಕರಿಸುವಂತೆ ನೇಮಿಸಿ, ಪಾಕ ಶಾಲೆಗೆ ಗೊತ್ತುಗಾರನಾದ ಮಣಿಮಂತನಂ ಕುರಿತು ಅಯ್ಯಾ ಯಕ್ಷನೆ! ರಾಜೇಂದ್ರನಿಗೆ ಭಕ್ಷಣ ಯೋಗ್ಯಂಗಳಾದ ಮಧುರಾನ್ನವಂ, ನಾನಾ ವಿಧಭಕ್ಷ್ಯಂಗಳಂ, ಇದಲ್ಲದೆ ದಿವ್ಯ ಮೂಲಿಕಾ ರಸಂಗಳಂ ತೆಗದು ಪಾರಿಜಾತ ಪುಷ್ಪಾಸವವಂ ಬೆರಸಿದ ಅಮೃತವಂ ಮಹೇಂದ್ರನಿಗೆ ಮಾಡುವಂತೆ ಮಾಣಿಕ್ಯದ ಕುಜಾಯಿಕಳಲ್ಲಿ ತುಂಬಿಸಿ, ನಿಂಬ ದಾಡಿಂಬ ಮೊದಲಾದ ಫಲಾಸವಗಳಿಗೆ ಪರಿಮಳಗಳಂ ಕಟ್ಟಿ ಪಚ್ಚೆಯ ಕುಪ್ಪಿಗೆಗಳಲ್ಲಿ ಹೆಚ್ಚಾಗಿ ಮಡಗಿಸಿ, ಕುಂಕುಮ ಕೇಸರಿಯ ರಸದಲ್ಲಿ ದೇವಕುಸುಮಾಸವವಂ ಕೂಡಿಸಿದ ಕಾರವಿಂದ ಕುಜಾಯಿಗಳ ಸಜ್ಜು ಮಾಡಿ, ದೀಕ್ಷಾಬದ್ಧರಾದ ನಮ್ಮ ಸುರಾಚಾರ್ಯರಿಗೆ ದ್ರಾಕ್ಷಾಸವವು ಉಪೇಕ್ಷೆಯಂ ಮಾಡದೆ ಅಪೇಕ್ಷಾಪೂರ್ತಿ ಯಾಗುವಂತೆ ಮಾಡಿಸೆಂದು ನೇಮಿಸಿ, ಜಯಂತನು ಅಂಬಿಕಾಭವನಕ್ಕೆ ಪೋಗಲು; ಆಗ ನಳಕೂಬರು ನವರಂಗ ನಾಟಕ ಶಾಲೆಯ ಮೇಲ್ಮಚ್ಚುಗಳಲ್ಲಿ ಸುರಹೊನ್ನಿಗೆ ಸುರಾಯಿ ಕಂಭಗಳ ಮೇಲೆ ಜೊಂಪಿ ಅಂದವಾಗಿರುವ ಮಂದಾರದ ಹುವ್ವಿನ ಬೋದಿಗೆಗಳೋಳ್ ಜೋಲಾಡುವ ದುಂಡುಮಲ್ಲಿಗೆ ಗೊಂಡೆಗಳಂ ಬೆರೆದಿರುವ ಸೊಂಪಾದ ಸಂಪಿಗೇ ಹುವ್ವಿನ ಗೊಂಚಲಿಗೆ ಕಟ್ಟಿರುವ ಪಚ್ಚೆತೆನೆಗಳಿಂದ ನಿರ್ಮಿಸಿದ ಪಂಚಬಣ್ಣದ ಗಿಣಿಗಳನಲಿಗೆ ಸರಿಯಾಗಿ ಮೊಲ್ಲೆ ಮಲ್ಲಿಗೆ ಮೊಗ್ಗೆಗಳ ಮೇಲ್ಮುಸುಗಂ ಪೊದ್ದಿರುವ ಚಪ್ಪರದಲ್ಲಿ ತಂಪಾಗಿರುವ ತಳಿರುಗಳ ಹಾಸಿಗೆಗಳಂ ಮಾಡಿಸಿ, ಅದರ ಮೇಲ್ಗಡೆಯಲ್ಲಿ ಕಮಲದಳಗಳಂ ಕತ್ತರಿಸಿ ತಲೆದಿಂಬುಗಳಂ ಮಾಡಿಸಿ, ಹದವಾದ ಪಚ್ಚಕರ್ಪೂರದ ಹಂತಗಳ ಸಾಲಿಗೆ ಸಾಂಬ್ರಾಣಿಕಡ್ಡಿಗಳಂ ಹತ್ತಿಸಿ, ಪುಷ್ಯರಾಗದ ಪುತ್ಥ

ಳಿಗಳ ಕರಗಳಲ್ಲಿ ಕರ್ಪೂರದ ದೀಪಗಳಂ ಮುಟ್ಟಿಸುವಂತೆ ನೇಮಿಸಿ, ಸಮೀಪದಲ್ಲಿರ್ದ ಕಲಾಧರನು ಕಂಡು, ಎಲೈ ವಿದೂಷಕನೆ ! ಈ ದಿವಸ ರಾತ್ರಿಯೊಳ್ ರಂಭೆಯಂ ನವರಂಗ ನಾಟಕಶಾಲೆಗೆ ಕರದುಕ್ಕೊಂಡು ಬಾಯೆಂದು ಹೇಳಿ, ನಳಕೂಬರನು ನಾಟಕಶಾಲೆಯಿಂದ ಹೊರೆಮಟ್ಟು, ಅಂಬಿಕಾ ಭವನವೆಂಬ ಹಜಾರಕ್ಕೆ ಬರುತ್ತಿರಲು, ಜಯಂತನು ನಳಕೂಬರನಂ ಕರೆದು ಅಯ್ಯಾ ಮಿತ್ರನೆ ! ನಾನು ಹೇಳ್ದರೀತಿಗೆ ಹುವ್ವಿನ ಚಪ್ಪರವಂ ಅಚ್ಚುಗಟ್ಟಾಗಿ ಕಟ್ಟಿಸಿಬಂದೆಯಾ ಎಂದುಕೇಳುತ್ತಾ, ಅಯ್ಯಾ ನಿನಗೆ ಇನ್ನೊಂದುಮಾತಂ ಹೇಳುವದಕ್ಕೆಮರತೆ, ರಂಭೆಗೆ ರತ್ನಾಲಂಕಾರಂಗಳನ್ನ ಮಾಡಿಕೊಂಡು ಬರುವಂತೆ ಕಳಾಧರನಿಗೆ ಕಟ್ಟುಮಾಡಬೇಕಾಗಿತ್ತು, ಈರಂಭೆಯು ರತಿಕ್ರೀಡೆಗೆ ರಾಜಧಾನಿಯಾಗಿರುವಳು ಎಂದು ಎನ್ನತಂದೆಯಾದ ಮಹೇಂದ್ರನು ಈಪರಿ ಮಾತುಗಳಂನಾಡುವನು, ಅದು ಕಾರಣ ಆತನಿಗೆ ಆಹ್ಲಾದವಾಗುವಂತೆ ನಾವು ನಡಯಬೇಕನ್ನಲಾಗ, ನಳಕೂಬರನು ನಾಲಿಗೆ ಕಚ್ಚಿ ಅಯ್ಯಾ ಮಿತ್ರನೆ ! ಈರಹಸ್ಯ ತಿಳಿವಬಗೆ ಹ್ಯಾಗೆ, ಬೃಂದಾರಿಕಾ ಯೋಗಿನಿಯು ಹೇಳಿದಳೋ ಯೇನೆಂದುಕೇಳಲು ಹೌದುಕಾಣಯ್ಯಾ ಮಿತ್ರನೆ ! ಅದು ಹೇಳುವದಕ್ಕೆ ಅವಕಾಶವಿಲ್ಲವೆಂದು ಹೇಳುತ್ತಾ, ಅಂಬಿಕಾಹಜಾರದಲ್ಲಿ ಮಲಗಿರುವ ಮಹಾಪುರುಷನಸಮೀಪಕ್ಕೆ ಬಂದು ನಿಂತಿರ್ದ ಸುಮತಿಯಂನೋಡಿ ಸಂಜ್ಞೆಯಂಮಾಡಲಾ ಸುಮತಿಯು ಸಮೀಪಕ್ಕೆಬಂದುನಿಲ್ಲಲಾಗ,ಮಂತ್ರಿಯಂ ಕುರಿತು ಅಯ್ಯಾ ಸಾಯಂಕಾಲವಾಗುವ ಸಮಯ ಇನ್ನೂ ಮಹಾರಾಜೇಂದ್ರನು ಎಚ್ಚರವಾಗಲಿಲ್ಲ,ಏನುಮಾಡಬೇಕೆಂದುಯೋಚಿಸುತ್ತಾ ಕ್ರೀಡಾಮಂದಿರದೊಳ್ ಮಣಿ ಪಂಜರದಲ್ಲಿ ಮಾತಾಡುತ ಲಿರುವ ಕ್ರೀಡಾ ಶುಕದ ಸಮೀಪವಂ ಸೈದಿ, ಅಯ್ಯಾ ಶುಕವೆ ! ನೀನು ಇಲ್ಲಿ ಮಲಗಿರುವ ರಾಜೇಂದ್ರನಿಗೆ ಎಚ್ಚರವಂಮಾಡಬೇಕೆಂದು ಆಜ್ಞಾಪಿಸಿದ ಜಯಂತನಮಾತಂ ಕೇಳಿ, ಆ ಕ್ರೀಡಾಶುಕವು ಅಂಬಿಕಾಭವನವಂಪ್ರವೇಶಿಸಿ, ಅಲ್ಲಲ್ಲಿ ಕಟ್ಟಿರುವ ಗಿಣಿಗಳಂನೋಡಿ ಸಂತೋಷದಿಂ ಮಾತುಗಳಂನಾಡುತ್ತಾ, ಒಂದುಪಂಜರದಲ್ಲಿ ವಿರಹತಾಪದಿಂದ ಹೊರಳುತ್ತಿರುವ ಹೆಣ್ಣು ಶುಕವಂನೋಡಿ ಪಂಜರವಂ ಪ್ರವೇಶಿಸಿ, ಚುಂಬನವಂ ಮಾಡುತ್ತಾ ಎಲೆ ಹೆಣ್ಣುಗಿಣಿಯೆ! ನಿನ್ನಕ್ರೀಡಾ

ಸರೋವರದಲ್ಲಿ ಮಂದಮಾರುತನಿಂದ ಕ್ರೀಡಿಸುವ ಸೌಗಂಧಿಕೆಯನ್ನು ಇಂದ್ರನು ಯಾವಪರಿಯಲ್ಲಿ ಅಪಹರಿಸಿದನೋ? ಅಪರಿ ನಿನ್ನನ್ನಪಹರಿಸಿ ಕೊಂಡು ಕ್ರೀಡಾಭವನಕ್ಕೆ ಪೋಗುವೆನೆಂದು ವಿನೋದಮಾತುಗಳಂ ನಾಡುತ್ತಾ, ಮುಟ್ಟಾಡುವ ಶುಕದಂಪತಿಗಳಂ ನೋಡಿ ಆ ಮಾತುಗಳಂ ಚನ್ನಾಗಿ ಲಾಲಿಸಿ, ಸುಪುತ್ರಿಯು ತನ್ನಮನದೊಳ್ ಈಶುಕವು ಅಮರಾವತೀಪಟ್ಟಣದಿಂದಬಂದ ಶುಕವು, ತನ್ನಪತ್ನಿಯಾದ ಹೆಣ್ಣುಶುಕವಂ ಕುರಿತು ಇಂದ್ರನು ಸೌಗಂಧಿಕಾಹರಣವಂ ಮಾಡಿದ ಮಾತುಗಳು ದೃಷ್ಟಾಂತ ಪೂರ್ವಕವಾಗಿ ಪೇಳಿತು, ಇದರಿಂದ ಇಂದ್ರನು ಅಮರಾವತಿಯಿಂದ ಬಂದು ಸೌಗಂಧಿಕಾಪಹಾರವಂ ಮಾಡಿಕೊಂಡು ಹೋದನು, ಈಮಾತು ನಿಜವಲ್ಲಾ, ಇದು ನಿಶ್ಚಯವೇಸರಿ, ಆ ದೇವಿಯ ಸೌಂದರ್ಯವು ದೇವತಾಸ್ತ್ರೀಯರಿಗೂಬರಲಾರದು, ಅದುಕಾರಣ ಇಂದ್ರನು ಅಪಹಾರವಂಮಾಡಿರುವನೂ ಎಂದು ನಿಶ್ಚಯಿಸಿ ಚಿಂತಿಸುತ್ತಾ, ಈಮಾತು ರಾಯನಿಗೆಹೇಳಿದ್ದೇ ಉಂಟಾದರೆ ಪ್ರಾಣವಿಯೋಗವಂ ಮಾಡುವವರಲ್ಲಿ ಸಂದೇಹವಿಲ್ಲಾ, ಎಂದು ನೆನೆಯುತ್ತಾ ವ್ಯಸನಾಕ್ರಾಂತನಾಗಿ, ನಿಂತಿರ್ದ ಪೊಂದುಕ್ಷಣಕ್ಕೆ ರಾಯನುಕಳವಳಿಸಿ ಬೆಚ್ಚುಬಿದ್ದು ಝಗ್ಗನೆ ಪರ್ಯಂಕದಿಂದೆದ್ದು ಎಲಾ ಸುಪುತ್ರಿಯೆ! ಬಿಲ್ಲು ಬತ್ತಳಿಕೆಗಳಂ ಕೊ ಎಂದು ತಬ್ಬಿಬ್ಬು ಮಾತುಗಳನ್ನಾಡುತ್ತಾ, ಹತ್ತಾರು ಹೆಜ್ಜೆಗಳನ್ನಿಟ್ಟು ನಿಟ್ಟುಸುರಂಬಿಡುತ್ತಾ ದಿಕ್ಕುದಿಕ್ಕುಗಳನ್ನೀಕ್ಷಿಸುತ್ತಾ, ಹಿಂದಕ್ಕೆಬಂದು ಪರ್ಯಂಕದೋಳ್ ಕುಳಿತು, ಶಿಖಾಬಂಧನವಂಮಾಡಿ, ಚಿಂತಾಸಮುದ್ರದೋಳ್ ಮುಳುಗಿ ಹಲ್ಲುಗಳಿಂದ ತುಟಿಯಂ ಸವರುತ್ತಾ, ಹೆಬ್ಬೆಟ್ಟಿನಿಂದ ಭೂಮಿಯಂ ಕೆರೆಯುತ್ತಾ, ಮಾತನಾಡದೆ ಮೌನದಿಂದ ಕುಳಿತಿರ್ದ ರಾಯನ ಮುಖಕಮಲವಂನೋಡಿ, ಸುಪುತ್ರಿಯು ಮನದೋಳ್ ಈ ಶುಕಗಳ ಮಾತುಗಳಂಕೇಳಿ ಕೋಪದಿಂದ ಎದ್ದನೊ? ಅಲ್ಲದೆ ಇಂದ್ರನು ಸೌಗಂಧಿಕಾಪಹಾರವಂ ಮಾಡಿದಂತೆ ಸ್ವಪ್ನವನ್ನೇನಾದರು ಕಂಡನೊ? ಈ ಎರಡರೋಳ್ ಒಂದೇನೋ ಆಗಿರೋದು ನಿಶ್ಚಯ, ಈಗಿಣಿಗಳು ಕೂಗಿದಮಾತುಗಳಂ ವಿಜ್ಞಾಪಿಸಿದಡೆ ಪ್ರಮಾದ ಬರೋದೆಂದು ಯೋಚನೆಯಂ ಮಾಡುತ್ತಿರಲು, ರಾಜೇಂದ್ರನು ಪರ್ಯಂಕದಿಂದೆದ್ದು ಪವಳದ ಹಾವಿಗೆಗಳಂ ಮೆಟ್ಟಿ

ಕೊಂಡು ಹಸ್ತ್ರಾಸನಂ ಗೈದನು ಸುಮತಿಯಂ ನೋಡದೆ ಹಜಾರವಂ ಪ್ರೋರಮುಟ್ಟಿ ಒಬ್ಬನೆ ಬರುತ್ತಿರಲು, ಆಗ ಜಯಂತ ನಳಕೂಬರರಿರ್ವರು ಕೈಗಳಂ ಮುಗಿದು ಸಂಗಡಲೆ ಪೋಗುತ್ತಿರಲು, ರಾಯನು ಸುಮತಿಯಂ ಕರೆದು ಎಲೈ ಮಂತ್ರಿಯೆ ! ದೇವೇಂದ್ರನು ಸೌಗಂಧಿಕಾದೇವಿಯನ್ನಪಹಾರ ಮಾಡಿದಂತೆ ವಿಕಾರವಾದ ಸ್ವಪ್ನವಂ ಕಂಡೆ, ಆ ಸ್ವಪ್ನ ಫಲವು ಹ್ಯಾಗೆ ಇರುವದೊ ತಿಳಿಯ ಕೂಡದಲ್ಲಾ, ನಿನ್ನ ಬುದ್ಧಿಗೆ ಏನುತೋರುತಲಿದೆ ಎಂದಾಜ್ಞಾಪಿಸಲು, ಆಗಮಂತ್ರಿಯು ರಾಯನುಚ್ಚರಿಸಿದ್ದಕ್ಕೆ ಸರಿಯಾಗಿ ತಾಕರ್ಣ್ಯ ವಾಬಿತೆಂದು ತಿಳಿದು, ಗಿರಿಗಳ ಮಾತುಗಳಂ ಮುಚಿವಾಚಿ, ಸ್ವಾಮಿ ಮಹಾನುಭಾವನೆ ! ತಾವು ಕಂಡಸ್ವಪ್ನಕ್ಕೆ ಫಲವು ಶಾಸ್ತ್ರದಲ್ಲಿ ಹೇಳಿಲ್ಲ, ಈ ಅರ್ಥ ಚಿತ್ತಕ್ಕೆ ವೇದ್ಯವಾಗಿ ಇದೆಯೆಂದು ವಿಜ್ಞಾಪನೆಯಂ ಮಾಡುತ್ತಿರಲು, ರಾಯನು ಜಯಂತನಂ ನೋಡಿ, ಅಯ್ಯಾ ನಮ್ಮ ಮುದ್ದು ಪುತ್ರನೆ! ಅಮರಾವತೀ ಪಟ್ಟಣದಿಂದ ಕ್ಷೇಮ ಸಮಾಚಾರಂಗಳು ಬರುವದುಂಟೋ ಎಂದು ಕೇಳಲು, ಆ ಜಯಂತನು ಎಲೈ ಮಹಾನುಭಾವನೆ ! ಪ್ರತಿಕ್ಷಣದಲ್ಲಿಯೂ ಸಮಾಚಾರಂಗಳು ಎನಗೆ ತಿಳಿಯುವದು. ಈಗ ಎರಡು ಘಳಿಗೆ ಪೂರ್ವದಲ್ಲಿ ಸಮಾಚಾರ ಬಂತೆಂದು ವಿಜ್ಞಾಪನೆಯಂ ಮಾಡುತ್ತಾ, ಶುಕ್ಲಾನದೀತೀರದಲ್ಲಿದ್ದ ಸಹಸ್ರಸ್ತಂಭ ಮಂಟಪಕ್ಕೆ ಚಿತ್ತೈಸಿ, ಜಯಂತನಳಕೂಬರರಿಂದೊಡಗೂಡಿ, ನದಿಯೊಳ್ ಜಳಕಮಂಗೈದು, ದಿವ್ಯಾಂಬರಗಳಂ ಧರಿಸಿ, ಭಸ್ಮಧಾರಣೆಯಂ ಮಾಡಿ, ಸಂಧ್ಯಾವಂದನೆಯಂ ಮಾಡುತ್ತಿರುವ ಕಾಲದಲ್ಲಿ ದೇವಮಂತ್ರಿಯಾದ ಬೃಹಸ್ಪತಿಯಂ ಕಂಡು, ಜಯಂತನು ನಳಕೂಬರನು ಸಾಷ್ಟಾಂಗ ಪ್ರಣಾಮಮಂ ಮಾಡಿ, ರತ್ನಪೀಠದಲ್ಲಿ ಕುಳ್ಳಿರಿಸಿ, ಮಾತುಗಳನ್ನಾಡುತ್ತಿರುವ ಕಾಲದಲ್ಲಿ ಸಂಧ್ಯಾ ಸ್ವರೂಪಿಣಿಯಾದ ಪರಮೇಶ್ವರಿಗೆ ವಂದನೆಯಂ ಮಾಡಿ, ಬೃಹಸ್ಪತಿಯು ಸಮೀಪಕ್ಕೆ ಬಂದು, ರಾಯನು ಅಂಜಲಿಬದ್ಧನಾಗಿ, ಸ್ವಾಮಿ ! ನಾನು ಜಪಮಂ ಮಾಡುತ್ತಿದ್ದೆನು, ಪ್ರತ್ಯುತ್ಥಾನವಂ ಮಾಡದೆ ಕುಳಿತಿದ್ದ ಅಪರಾಧವಂ ಕ್ಷಮಿಸಬೇಕೆಂದು ಪ್ರಾರ್ಥನೆಯಂ ಮಾಡುತ್ತಾ ವಂದನೆಯಂ ಮಾಡಿ, ರತ್ನಪೀಠದೊಳ್ ಕುಳಿತು, ಕಿರೀಟಕುಂಡಲಗಳಂ ಧರಿಸಿ, ಪಾದುಕೆಗಳಂ ಮೆಟ್ಟಿಕೊಂಡು, ಬೃಹಸ್ಪತಿ ಜಯಂತ

ನಳಕೂಬರ ಸಮೇತನಾಗಿ ಆ ರಾಜೇಂದ್ರನು ವಿಮಾನವನ್ನೇರಿ ಕರದೀಪಿಕಾ ಸಹಸ್ರಂಗಳಂ ಪಿಡಿದು ಅಪ್ಸರಸ್ತ್ರೀಯರು ಮುಂದುಗಡೆಯಲ್ಲಿ ನಡೆಯುತ್ತಿರಲು ಮೆಲ್ಲನೆ ಅಂಬಿಕಾಭವನದ ಬಾಗಿಲೊಳ್ ವಿಮಾನವನ್ನಿಳಿದು, ಜಯಂತನ ಕರವಂಪಿಡಿದು ಹಜಾರಕ್ಕೆ ಬರುತ್ತಿರುವ ಕಾಲದಲ್ಲಿ, ನಳಕೂಬರನು ಎಲೈ ರಾಜೇಂದ್ರನೆ ! ಭೋಜನಶಾಲೆಗೆ ಚಿತ್ತೈಸಿ ಆರೋಗಣೆಯಂ ಮಾಡಿ ಹಜಾರಕ್ಕೆ ಬಿಜಯಂಗೆಯ್ಯಬಹುದೆಂದು ವಿಜ್ಞಾಪನೆಯಂ ಮಾಡಲಾಗ, ರಾಯನು ಬೃಹಸ್ಪತಿಯಂ ಕುರಿತು ಎಲೈ ಸ್ವಾಮಿಯೇ ! ತಾವು ಊಟಕ್ಕೆ ದಯಮಾಡಬಹುದೆಂದು ಅಪ್ಪಣೆಯಂ ಕೊಡುತ್ತಾ, ಬೃಹಸ್ಪತಿಯ ಹಸ್ತವಂ ಪಿಡಿದು ಭೋಜನಶಾಲೆಗೆ ಚಿತ್ತೈಸೆಲು, ಮಣಿಮಂತನು ರತ್ನದಕಲಶಂಗಳಿಂದ ಸುಗಂಧಯುತವಾದ ಗಂಗೋದಕಗಳಿಂದ ರಾಜೇಂದ್ರನ ಪಾದಂಗಳ ತೊಳೆದು, ಬಿಳುಪಾದ ಕರವಸ್ತ್ರದಿಂದ ಪಾದವಂ ಒರಸಿ, ಕ್ರಮವಾಗಿ ಬೃಹಸ್ಪತಿ, ಜಯಂತ, ನಳಕೂಬರರಿಗೆ ಪಾದಪ್ರಕ್ಷಾಳಿಗಳಂ ಮಾಡಿ, ಸುಮತಿ ಛಾಯಾಗುಪ್ತ ರೀರ್ವರಿಗು ಉದಕವಂ ಕೊಟ್ಟಬಳಿಕ ಜಯಂತನು ರಾಯನ ಕರವಂಪಿಡಿದು, ಮಧ್ಯದಲ್ಲಿರ್ದ ಮಣಿಪೀಠದಲ್ಲಿ ಕುಳ್ಳಿರಿಸಿ, ರಾಯನ ಎದುರಾಗಿ ಬೃಹಸ್ಪತಿಯಂ ರತ್ನಪೀಠದಲ್ಲಿ ಕೂಡುವಂತೆ ನೇಮಿಸಿ, ರಾಯನ ಉಭಯಪಾರ್ಶ್ವಗಳಲ್ಲಿ ನಳಕೂಬರ ಜಯಂತರು ಕುಳಿತು, ಅಯ್ಯಾ ಸುಮತಿಯೆ ! ಛಾಯಾಗುಪ್ತನೆ ! ಊಟಕ್ಕೆ ದಯಮಾಡಬೇಕೆಂದು ಕರದು ಉಚಿತವಾದ ಪೀಠಂಗಳಲ್ಲಿ ಕೂಡುವಂತೆ ಕಟ್ಟುಮಾಡಿ, ಮತ್ತು ಕೆಲವು ದೇವತಾ ಸಮೂಹಂಗಳಿಗೂ ಯಕ್ಷರಿಗೂ ಸಹ ಎಡೆಗಳಂ ಮಾಡುವಂತೆ ನೇಮಿಸಿ, ಮಣಿಮಂತನ ಮೊಗವಂ ನೋಡಲು, ಆಗ ಮಣಿಮಂತನು ಬಗೆಬಗೆಯಾಗಿ ಮಾಡಿದ ದಿವ್ಯವಾದ ಮಧುರಾನ್ನಗಳಿಂದಲೂ, ನಾನಾವಿಧವಾದ ಭಕ್ಷ್ಯಂಗಳಿಂದಲುಂ ಸಜ್ಜುಮಾಡಿರುವ ಹತ್ತಾರು ರನ್ನದ ತಟ್ಟೆಗಳಂ ತಂದು ಕ್ರಮವಾಗಿ ಮುಂದುಗಡೆಯಲ್ಲಿರಿಸಿ, ಪುಷ್ಪಾಸವ ಫಲಾಸವ ಮೊದಲಾದ ಆಸವಂಗಳಂ ತುಂಬಿರುವ ಚಂದ್ರಕಾಂತ ಕುಜಾಯಿಗಳಂ ವಜ್ರ ವೈಢೂರ್ಯ ಗೋಮೇಧಿಕ ಪುಷ್ಯರಾಗಂ ಗಳಿಂದ ಮಾಡಿದ ಬಟ್ಟಲುಗಳನ್ನು ರಾಜೇಂದ್ರನ ಪಾರ್ಶ್ವದಲ್ಲಿ ಪವಳದಪೀಠದೊಳ್ ಮಡ

ಗಿ, ಲಾವಂಚ ಮುಡಿನಾಳ ಪಚ್ಚೆಯ ತೆನೆಗಳಿಂದ ನಿರ್ಮಿಸಿದ ಪನ್ನೀರು ನಿಂದಚಿಮಿಕಿಸಿದ ಬೀಸಣಿಗೆಯಂ ಕೈಯಲ್ಲಿ ಪಿಡಿದು, ಕಮಲದಾಮನೆಂಬ ಪರಿಚಾರಕನು ಬೀಸುತ್ತಿರಲು, ಸುಗಂಧಮಹಾರಾಯನು ಆಗ ಬೃಹಸ್ಪತಿಯಂ ನಿರೀಕ್ಷಿಸಿ ಸ್ವಾಮಿ ಗುರುಗಳಿರಾ! ಪರಿಷೇಚನೆಯಂ ಮಾಡಿ ಪರಿಗ್ರಹಿಸ ಬಹುದೆಂದು ಬಿನ್ನವಿಸುತ್ತಾ ಜಯಂತ ನಳಕೂಬರರಂ ಅವಲೋಕಿಸಲಾಗ ಜಯಂತನು ಬೃಹಸ್ಪತಿ ಮುಂತಾದ ದೇವತೆಗಳಿಗೆ ಆಪೋಶನವಂ ಇತ್ತು ರಾಯನ ಆಜ್ಞಾನುಸಾರವಾಗಿ ಜಯಂತನು ಊಟಕ್ಕೆ ಕುಳಿತಿರಲು, ಆಗ ನಳಕೂಬರನು ಎಲೈ ರಾಜೇಂದ್ರನೇ! ದಿವ್ಯೌಷಧಿಗಳಿಂದ ಮಾಡಿದ ಅಮೃತಾಸನವಿದು, ಆ ಸ್ವಾದನೆಯಂ ಮಾಡಿದಡೆ ಆನಂದವಾಗುವದು ಅನುಗ್ರಹಿಸ ಬೇಕೆಂದು ಪೇಳಲು, ಆಗ ರಾಯನು ಅಮೃತಾಸನವಂ ಪಾನವಂಮಾಡಿ, ಪಚ್ಚೆಯ ಬಟ್ಟಲೊಳ್ ಪಾರಿಜಾತ ಪುಷ್ಪಾಸವವಂ ತುಂಬಿ ಜಯಂತ ನಳಕೂಬರರಿಗೆ ದಯಪಾಲಿಸಿ, ಎಲೈ ಗುರುವೆ! ದೀಕ್ಷಾಬದ್ಧರಾದ ನಿಮಗೆ ದ್ರಾಕ್ಷಾಸವು ಉಚಿತವೆಂದು ನುಡಿದು ಚೋಷ್ಯವಂ ಸೊರೆಯುತ್ತಾ ಮಧುರವಾದ ಭಕ್ಷ್ಯಂಗಳಂ ಮೆಲ್ಲುತ್ತಾ ದಿವ್ಯಾನ್ನವಂ ಭುಂಜಿಸಿ ದಾಹಶಾಂತಿ ಕರವಾದ ದಾಳಿಂಬ ಫಲಾಸವವಂ ಪಾನವಂ ಮಾಡಿ ತೇಗುತ್ತಾ, ರಾಯನು ಜಯಂತನಂ ಕುರಿತು, ಅಯ್ಯಾ ಮಹೇಂದ್ರ ಪುತ್ರನೆ ! ದೇವತಾ ಯೋಗ್ಯವಾದ ದಿವ್ಯಾನ್ನವು ಎನ್ನ ಪೂರ್ವಪುಣ್ಯದಿಂದ ಲಭ್ಯವಾಯಿತೆಂದು ಉಪಚಾರೋಕ್ತಿಗಳಂ ನಾಡುತ್ತಾ ಕರಗಳಂ ತೊಳೆದು ಕಾಮೇಶ್ವರಿಯ ಪಾದಾರವಿಂದವಂ ನೆನೆಯುತ್ತಾ ನಳಕೂಬರನ ಹಸ್ತಲಾಗದಿಂ ಒಡಿದು ಬರುತ ಕರ್ಪೂರವೀಳ್ಯವಂ ಧರಿಸುತಲಿರುವ ಕಾಲದೊಳ್ ಕಿವಿಗೆ ಸವಿಯಾಗಿ ಇರುವ ಅಮೃತವಸೋನೆಯೊ? ಷಡ್ಜಾದಿಸ್ವರಂಗಳ ಸರಸವಾಗಿ ಪಾಡುವವೊ? ಕೋಗಿಲೆಗಳ ಕೋಲಾಹಲಧ್ವನಿಯೊ? ಗಂಧರ್ವಕಾಂತೆಯರುಗಾನವಂ ಮಾಡುವರೊ, ಎಂದಿಪರಿ ಸಂದೇಹವಂಗೊಳಿಸುವ ಮಧುರವಾದ ಗಾನವು ಬ್ರಹ್ಮಾನಂದಕರವಾಗಲಾಗಿ ರಾಯನು ಅಲ್ಲಿನಿಂತು ಆಕಾಶದಲ್ಲಿಯೆ ಸಾವಕಾಶವಾಗಿ ಕಿವಿಗಳಂ ಜೋಲಿ ಗಗನವೆ ಗಾನಸ್ವರೂಪವಾಯಿತೊ! ಅಲ್ಲದೆ ಆನಂದವೆ ನಾದಾಕಾರವಾಯಿತೊ ಏನೊ ಎಂದು ಸಂದೇಹಗೊಳುತ, ತಿಳಿಯಲಶಕ್ಯವಾಗಿ

ಮನವು ಗಾನಪಕ್ಷಿಯೋಳ್ ಲೀನವಾಗಲು, ಆಗ ರಾಜನು ಅಯ್ಯಾ ನಳಕೂಬರನೆ ! ಈ ಗಾನವಂಮಾಡುವವರು ಯಾವಲೋಕದವರೊ? ಎಲ್ಲಿರುವರೊ ಅಲ್ಲಿಗೆ ಮೆಲ್ಲನೆಪೋಗಿ ಚಂದ್ರಿಕಾವಿಹಾರವಂಮಾಡುತ ಚನ್ನಾಗಿಕೇಳಬೇಕಲ್ಲಾ, ಎಂದು ಅಪ್ಪಣೆಯಂಕೊಡಲು, ಆಗ ನಳಕೂಬರನು ಸ್ವಾಮಿ..!ಪಯಣಮಾಡಬೇಕೆಂದು ಒಳಬಾಗಿಲಿನಿಂದ ಪೊರಟು ನವರಂಗನಾಟಕಶಾಲೆಯ ಮೇಲ್ಮಚ್ಚಿಗೆಪೋಗಲು, ಆ ಕ್ಷಣದಲ್ಲಿಯೆ ಝಗ್ಗನೆ ಗದ್ದಿಗೆಯಿಂದೆದ್ದು ಬಿನಿವಾದ ಪೇರ್ಮೊಲೆಗಳಭಾರದಿಂ ಬಡವಾಗಿ ಬಗ್ಗಿರುವನಡುವು ನಡುಗುತ್ತಿರಲು, ಚಂದ್ರಗಾವಿ ಶೀರೆಯಸೆರಗೆಗಳನಾಲುಗಳಂ ಪಾದದಿಂತಳ್ಳುತ್ತಾ ಕಾಲಂದಿಗೆಗಳು ಘಲ್ಲಘಲ್ಲೆಂದು ಮೊರೆಯುತ್ತಿರಲು, ಮುಗುಳುನಗೆಯಿಂದಮೊಗವನ್ನಲಂಕರಿಸುತ್ತಾ ಮದನನಸಮ್ಮೋಹನಶಕ್ತಿಯೆ ರೂಪುಗೊಂಡುಬಂದಂತೆ ಅಂದಗಾತಿಯಾದ ಮಂದಯಾನೆಯರು ಮುಂದಕ್ಕೆಮೂರು ಹೆಜ್ಜೆಗಳನ್ನಿಟ್ಟು ಸೊಕ್ಕಿಸೋಲುವ ಸೊಗಸಿನಿಂದುಕ್ಕಿಬಂದು ರಾಯನ ಪಾದಂಗಳಂ ತನ್ನಪಣೆಯಿಂದೊತ್ತಿ ಬಳ್ಳಿಮಿಂಚಿನಂತೆ ಥಳಕ್ಕನೆಎದ್ದು ಎದುರಾಗಿನಿಂತಿರ್ದ ಸೊಗಸುಗಾತಿಯಂನೋಡಿ ಮನಸೋತು ತಬ್ಬಿಬ್ಬಾಗಿ ಪ್ರೀಯುಬ್ಬಿ ಜುಮ್ಮನೆ ರೋಮಾಂಕುರಂಗಳುದಯಿಸಿ ಮನೋಜಪಾರವಶ್ಯವಶ್ಯನಿರುವ ಮಹಾರಾಜನ ಮನೋಭಾವವನ್ನರಿತು, ನಳಕೂಬರನು ತಾಪಾಗಿರುವ ತಳಿರುಹಾಸಿಗೆಯಲ್ಲಿ ಮಲಗಿಸಿ ತಳಿರುದಿಂಬುಗಳಮೇಲೆ ತಲೆಯನ್ನಿಟ್ಟು ಹಿಂದಕ್ಕೆತೆರಳಿ ಬಂದು ರಂಭೆಯು ಕಿವಿಯೋಳ್ ರಾಯನ ಮನಬಂದಂತೆ ರಮಿಸು ಎಂದು ಪೇಳಿ, ನಾಟಕಶಾಲೆಯ ಬಾಗಿಲೋಳ್ ಜಾಗ್ರತೆಯಿಂದ ಕಾದಿರುವಂತೆ ಕಾವಲುಗಾರರಿಗೆ ಗೊತ್ತುಮಾಡಿ ನಳಕೂಬರನು ತನ್ನ ಹಜಾರವಂ ಕುರಿತು ಪೋಗಲು,

ಇತ್ತಲಾ ರಂಭೆಯು ರಾಯನಿಗೆ ಎಚ್ಚರವಾಗುವಂತೆ ರಾಗಾಧಿದೇವತೆಯಾದ ರಾಜಮಾತಂಗಿಯಂ ಧ್ಯಾನಿಸಿ ರನ್ನದ ವೀಣೆಯಂ ಶ್ರುತಿಮಾಡಿ ಕಾಲವರಿತು ಕಾಂಭೋಜರಾಗವಂ ಮೇಳವಿಸಿ, ಷಡ್ಜ ಮಧ್ಯಮ ಪಂಚಮ ಋಷಭ ಗಾಂಧಾರ ಸ್ವರಗಳ ವರ್ಜಾವರ್ಜಂಗಳ ತಿಳಿದು ಘನ ನಯ ದೇಶಿಯ್ಯ ರಾಗಗಳಂ ಮೇಳವಿಸಿ, ತಾನ ಗಾನಮೂರ್ಛನಗಳಿಂದ ವೀಣೆಯಂ ನುಡಿಸುತ್ತಾ, ಸೊಗಸುವಿಹಾರಿ ಸೊಂಪೇರಿ ಸಂಭಾ

ಗಿ ಪಾಡುವ ಸಮಯದಲ್ಲಿ ರಾಗಾಲಾಪನೆತ್ರಿಯೋ ರಂಭೆಯ ನಾದವೋ? ಎಂಬಂತೆ ರಾಗಾಲಾಪನೆಯಂ ಮಾಡಲಾಗ, ರಾಯನು ಹಾಯಾಗಿ ಕೇಳುತ್ತಾ ಹಾಸಿಗೆಯಿಂದೆದ್ದು ಸಮೀಪವನ್ನೈದಿ ತಾನಗಾನದಲ್ಲಿ ಲೀನವಾಗಿರುವ ಈ ಕಳಾವತಿಯನ್ನು ಕಂದರ್ಪಕೇಳಿಯೊಳ್ ಕಲಿಸುವೆ ಕಾಮನಕಾಟವಂತಡೆಯಲಾರೆನೆಂದು ಕರವಂ ಪಿಡಿಯಲು, ಆ ಕಾಮಿನಿಯು ವಿನಯಂ ಆಕೆಗೆ ಇಟ್ಟು ನಾಚಿಕೆಯಿಂದೊಡಗೂಡಿದ ರಂಭೆಯು ಶಿರವಂ ಸವರುತ್ತಾ ಜಡೆಯಂ ಪಿಡಿದು ಕನ್ನಡಿಗಳಂತೆ ಥಳಥಳಿಸುವ ಕೆನ್ನೆಗಳಂ ಚುಂಬಿಸಿ ಕಣ್ಣುಗಳಂ ಮುತ್ತಿಟ್ಟು ಕಂಠದಲ್ಲಿ ಕರವನ್ನಿಟ್ಟು ಕಳಾಸ್ಥಾನಗಳಂ ಊಹಿಸುತ್ತಾ ಆಲಿಂಗಿಸಿ ಎದೆಗೆ ಎದೆಯಂ ಕೊಟ್ಟು ಕುಚಗಳನ್ನೊತ್ತುತ್ತಾ ಅಂಕದೊಳ್ ಕುಳ್ಳಿರಿಸಿ ಮುಳುಗಿರುವ ಮೊಲೆಯ ತೊಟ್ಟುಗಳಂ ಹಸ್ತದಿಂದಳಪಡಿಸಿ, ಕಾಮಿಗೊಂಡು ಅನ್ಯೋನ್ಯವಾಗಿ ಆಲಿಂಗನವನ್ನಾಡುತ್ತಾ ಚುಂಬನ ನಖಕ್ಷತಗಳಿಂದೀಪರಿ ಬಾಹ್ಯರತಿಯೊಳ್ ಮನವು ಕರಗಿ ಮದನಮಾಯೆಯೊಳ್ ಮುಳುಗಿರುವ ಈರ್ವರಂ ನೋಡಿ ಮನ್ಮಥನು ಈತನ ಸಂಗಡಗಾರರಾದ ಚಂದ್ರನಿಗೆ ಚನ್ನಾಗಿ ಕಾಯುವಂತೆ ಕಟ್ಟುಮಾಡಿ, ಮಂದಮಾರುತಮರಿಗಳನ್ನು ಮೃಗಾವಲಾಗಿ ನಡಗಿ, ತಾನು ಈರ್ವರಮನಸಿನಲ್ಲಿ ಗುಟ್ಟಾಗಿಹೊಕ್ಕು ಕಮಲಕಾಂಡವೆಂಬ ಕೊಳವಿಯೊಳ್ ಪುಷ್ಪಪರಾಗವೆಂಬ ಮದ್ದುತುಂಬಿ ದುಂಡುಮಲ್ಲಿಗೆ ಗುಂಡುನುತಗಿ ತಳಿರೆಂಬ ಜಂಕಿಯನ್ನಿತ್ತು ಎದೆಗೇಗುರಿಮಾಡಿ ಢಮೀರೆಂದು ಗುಂಡುತಗಲಿದಂತಾಗಿ ಚಂದ್ರಕಿರಣವಬಿಸಲು ತಂಡಂಗಳಿಗೆ ಬೇಸರಗೊಂಡು ಕಿಚ್ಚಿನಂತೆ ಹೆಚ್ಚಿ ಬರುವ ವಿರಹತಾಪಕ್ಕೆ ತಾಳಲಾರದೆ ಮೈಗಳಂ ಮರೆತು ಪುನ್ನಾಗವೃಕ್ಷಕ್ಕೆ ಸುತ್ತಿ ಚರಮ ಭೇದವಾಗಿತೋರದಿರುವ ಮಲ್ಲಿಗೆಬಳ್ಳಿಯಂತೆ ಹೆಣಗಿರುವ ರಂಭೆಯು ನೀಲಮಣಿಗಳಿಂದ ನಿರ್ಮಿತವಾದ ಚಿನ್ನದಬಟ್ಟಲಂತೆ ಒಪ್ಪುವಾದ ಮದನಮಂದಿರದಲ್ಲಿ ಕರಿಕರಕ್ರೀಡೆಯಂ ಮಾಡಿ, ರತಿಕ್ರೀಡೆಯಲ್ಲಿ ಆಸಕ್ತಿಯನ್ನುಂಟುಮಾಡಿ ಮಣಿತಮಂತ್ರಂಗಳಂ ಧ್ಯಾನಿಸುತ್ತಿರುವ ಈರ್ವರಮನಸ್ಸುಗಳು ಕಂಠದಲ್ಲುಕ್ಕಿಬರುವ ಕಪೋತಧ್ವನಿಯೆಂಬ ನಾದದಲ್ಲಿ ಲೀನವಾಗಿ ಮುದುಕೊತ್ತುಗಳಂ ಕೊಡುತ ದಂತಕ್ಷತವಂ ಮಾಡಿ ಅಧರಾಮೃತವನ್ನಾಸ್ವಾದನಂಗೈದು, ಸೀತ್ಕಾರದಿಂದ ಭುಜಗಳಂ ಗಂಟಿಕ್ಕಿ ವಾರೆಯಾಗಿ

ಮೊಗವಂ ತಿರಿಗಿಸಿ ಎಳೆ ನಗುಗಳಿಂದ ಹಾಸ್ಯವಂ ಮಾಡುತ್ತ ಕೆನ್ನೆಗಳನ್ನು ಅಂಗೈಯಿಂದ ಅಪ್ಪಳಿಸುತ್ತಾ ರತಿಲಾಹರಿಜೆಟ್ಟಿ, ಹಾ ಇದೇ! ಶಾಬಾಸೆಂದು ನೆಟ್ಟ ಹಸ್ತದೋಳ್ ಹಸ್ತವಂ ಹಾಕುತ್ತಿರುವ ನುಂದಗಾತಿಯಂ ನೋಡಿ ರಾಯನು ಮನಸೋತು ಮತ್ತನಾಗಿ ಪ್ರೊತ್ಪೊತ್ತಿ ರತಿಕ್ರೀಡೆಯಂ ಮಾಡುತ ಮರಳಿ ಮರಳಿ ಮಾತುಗಳಂ ಪೇಳುವಷ್ಟರೋಳ್ ಚಿತ್ತವು ಪರಾಯತ್ತವಾಗಿ ಅರೆಮಾತುಗಳನ್ನಾಡುವರಾಯನ ಸಮರತಿ ಸಾಧನಕ್ಕೆ ಸರಿಯಾಗಿ ಮಾರಸಾಧನವಂ ಮಾಡುತ್ತಾ, ಆ ಸಾಧನಗಾತಿಯು ಕಾಮನ ಗರಡಿಯೋಳ್ ಘುಮಘುಮಿಸುವ ಕಮಲಗಂಧಕ್ಕೆ ಕಣ್ಣುಗಳಂ ಮುಚ್ಚಿ, ಜೆಟ್ಟಿಬರುವ ರಾಯನ ಪ್ರೇಮಾತಿಶಯವಂತಿಳಿದು, ಮದನನ ಮದ್ದಾನೆಯಂ ನೇರಿಬರುವಮಾಹುತನಂತೆ ಮುಂದೆಯಾನೆ ಮೇಲ್ಗಡೆ ಬಿಲ್ಲಿ ಹತ್ತಿ ಮೆತ್ತಮೆತ್ತನೆ ಮೆತ್ತುತ ಅತ್ತಲಿತ್ತಲು ಮೆರಿಸುತ್ತಾ ಮದನ ಮಂದಿರದ ಮುಂದುಗಡೆಯಲ್ಲಿ ಮುಳುಗಿರುವ ರತ್ನಸದ ಗುತ್ತಿಗೆಯನ್ನೆತ್ತಿ ಗುರಿಯಾಗಿ ವಿಾಟುತ್ತಾ, ಸೀತ್ಕಾರಗಳಂ ನೆಳೆಯುತ್ತಾ, ಅಂಡುಗಳಲ್ಲಿ ಅಂಗೈಗಳನ್ನಿತ್ತು ಅಮಿಕಿ ದುರುಸಾಗಿ ಧುಮಿಕಿ ತಳ್ಳುತ್ತ, ಮೆಲ್ಲಮೆಲ್ಲನೆ ಮೇಲ್ಕುತ್ತುಗಳಂ ಗುದ್ದಿಗುಮಿಸುತ್ತಾ, ಮದನ ಕಳೆಗಳನರಿತು ಹಾಯಿಜೆಟ್ಟಿ ಅರೆಗಣ್ಣುಗಳಿಂದ ಸುರತಸುಖಾನುಭವವೆಂಬ ಆನಂದದಲ್ಲಿ ಮಗ್ನಳಾಗಿರ್ದ ಮರಳಿ ಮನ್ಮಥಾವೇಶದಿಂದ ಮೈಮರತು ಮನಸ್ಸುಬಂದಂತೆ ಗಾನವಂಗೈಯುತ, ಚಕ್ರದಂತೆ ಚಲಿಸುತ, ರನ್ನದಕೀಲು ಪುತ್ಥಳಿಯಂತೆ ನಾಟ್ಯವನ್ನಾಡುತ್ತಾ, ಮಧುರವಾದ ಅಧರಾಮೃತವಂ ಸವಿನೋಡುತ್ತಾ, ವೀರನಾದ ಮಾರನ ಹಜಾರಕ್ಕೆ ಜಘನಘಟ್ಟನೆಗಳಿಂದ ಚಟಚಟಾತ್ಕಾರ ಶಬ್ದಂಗಳಂಮಾಡುತ್ತಾ, ಕಂಕಣ ಝಣಝಣತ್ಕಾರ ಧ್ವನಿಗಳಿಂದ ಕೂಡಿ ಘುಲ್ಲುಘುಲ್ಲೆಂದು ಮೊರೆಯುವ ಕಾಲಂದಿಗೆ ಶಬ್ದಂಗಳು ಕಾಮನ ಕಾಳಗದಲ್ಲಿ ಕೈಗಳಂ ಮಾಡುವರಿಗೆ ಕವಳವಂ ಪೇಳುವಂತಿರುವಕಾಲದಲ್ಲಿ ಮುಗುಳುನಗೆಯಿಂದ ಮೊಗವನ್ನಲಂಕಾರವಂಮಾಡಿ, ಉಪರಿ ಸುರತಕ್ರೀಡಾವಿಹಾರವಂಮಾಡಿ, ಕಳಾವತಿಯು ಅಧರವಂಚುಂಬಿಸಿ, ಕುಚಗಳಂಪಿಡಿದು ಕಳಾಪತನವಾಗುವಂತೆ ಕಂಠದಲ್ಲಿನಖಕ್ಷತವಂ ಮಾಡಲು, ಆ ಕಾಮಿನಿಯು ಕಡೆಗಣ್ಣುಗಳಿಂದ ಕಾಮನಂಧ್ಯಾನಿಸಿ ಮೈ

ಬಳಿಕ ಮನವುಕ್ಕರಗಿ ಮಗ್ನಳಾಗಿ ಚಂದ್ರಕಿರಣಂಗಳುನೋಂಕಿದ ಚಂದ್ರಕಾಂತಪುತ್ಥಳಿಯು ಕಿರುಬೆವರು ಸಾಲಾಗಿ ಹರಿಯುತ್ತಿರಲು, ಮುಂಗುರುಳು ಮುಖವಂ ಮುಚ್ಚಲು, ಕತ್ತಿನಲ್ಲಿರುವ ಹಾರಂಗಳುಕಿತ್ತುಹೋಗಿ ಮುತ್ತುಗಳು ಝಲ್ಲನೆ ಸುರಿಯುತ್ತಿರಲು, ಕೇಶಪಾಶವು ಸಡಲಿ ಕಂದರ್ಪನ ಕರಿಯುಗುಡಾರದಂತೆ ಗುಪ್ಪನೆಮೈಯಲ್ಲಗಪ್ಪಿ, ಕುಚಭಾರದಿಂದ ನಡುವು ಅಳುಕಿ, ಗಡಗಡನೆ ನಡುಗಿ ಉಪಸಂಹೃತವಾಗಿ ಬೀಳುವ ಮದನನ ಸಮ್ಮೋಹನಾಸ್ತ್ರದಂತೆ ರಾಯನಎದೆಯೊಳ್ ಮಲಗಿ ರತಿಸುಖಾನುಭವದಲ್ಲೀರ್ವರು ಮಗ್ನರಾಗಿ ಇರುತ್ತಿರಲು ; ಆಗ ಶೈತ್ಯ ಸೌರಭ್ಯ ಮಾಂದ್ಯಂಗಳಿಂದಕೂಡಿ ಮಂದಮಾರುತನು ಸದ್ದುಮಾಡದೆಯೇ ಮೈಗಳುಸವರುತ್ತಿರುವಕಾಲದಲ್ಲಿ ನಿಟ್ಟುಸಿರುಗಳಂಬಿಡುತ ರಂಭೆಯು ನಾಚಿಕೆಯಿಂದಾಚೆಗೆಪೋಗಬೇಕೆಂದು ಸೆರಗಂ ಶರೀರಕ್ಕೆ ಮರೆಮಾಡುತ್ತಾ ಸೀರೆಯಂ ಸೆಳೆಯುತ್ತಾ ತೆರೆಗೆಮರೆಯಾಗಿ ಪೋಗಲು, ಆಗರಾಯನು ಎದ್ದು ದುಕೂಲವಸ್ತ್ರವಂಧರಿಸಿ ಸರಿಗೆಯಿಂಚಿರದಿರುವ ಸಣ್ಣದುಪಟಿಯ ಒಲ್ಲೆವಾಟು ಸರಿಯಾಗಿಮಾಡುತ್ತಾ ತೆರೆಯೊಳ್ ಮರೆಯಾಗಿರುವ ಪದ್ಮನೇತ್ರೆಯನ್ನು ಮರಳಿಮರಳಿ ಕರೆಯುತ್ತಾ, ಸಮಿಾಪವನ್ನೈದಿ ಎಲೈ ರಮಣಿಯೆ ! ಎನ್ನವಾಕ್ಯಕ್ಕೆ ಮನ್ನಣೆ ಘೋರೆಯಾದ ಚಂದ್ರನ ಚಂದ್ರಿಕೆಗಳಲ್ಲಿ ವಿಹಾರವಂಮಾಡುತ ಚಕೋರ ದಂಪತಿಗಳ ಚೆಲ್ಲಾಟವಂ ನೋಡುವಾ ಬಾರೆಂದು ಕರೆಯುತ್ತಾ, ಓರ್ವರೋರ್ವರಂತಬ್ಬಿ ತೆರಳಬರುತ ಚಂದ್ರಕಾಂತ ಜಗತಿಯೊಳ್ ಕುಳಿತು ಉಗುರೊತ್ತುಗಳಿಂದ ಕೆಂಪು ಕೆಂಪಾಗಿರುವ ಕೆನ್ನೆಗಳಿಗೆ ಪಚ್ಚೆಕರ್ಪ್ಪುರವಂನೊತ್ತಿ ಮುತ್ತುಗೊಡುವ ರಾಯನಿಗೆ ರಂಭೆಯು ರತಿಶ್ರಮಪರಿಹಾರವಂಮಾಡುವ ನೆಪದಿಂದ ಸೆರಗಂಸೆಳೆದು ಶರೀರವಂಮರಸಿ, ಮಲಯಜಾಲೇಪನವಂಮಾಡುತ್ತಾ, ಹಸ್ತವಂಪಿಡಿದು ಕುಚಗಳಂನೋಂಕುವಂತೆ ಮಾಡುತ್ತಾ, ಪರಿಮಳವಾದ ಪಾರಿಜಾತ ಪುಷ್ಪಮಾಲಿಕೆಗಳಂ ಕಂಠಕ್ಕೆ ಧರಿಸುತ್ತಾ . ಮಧುರವಾದ ಮಾದಲ ಮಾವು ಮೊದಲಾದ ಹಣ್ಣುಗಳಂ ಮೆಲ್ಲುತ್ತಾ ಸಂಭೋಗ ಶೃಂಗಾರ ರಸಭರಿತವಾದ ಗದ್ಯಪದ್ಯಂಗಳಂ ಆಲಾಪಿಸುತ್ತಿರುವ ರಂಭೆಯ ರತಿಯನ್ನೆನೆ ನೆನೆಯುತ್ತಾ ರಾಯನು ಎಲೈ ಮೋಹನಾಂಗಿಯೇ ! ನಿನ್ನಂಬಿಟ್ಟು ನಿಲ್ಲಲಾರೆ ಇನ್ನೊಮ್ಮೆ

ನನ್ನಂ ವಂಚಿಸಿ ಮನಸಿಜನ ಮಹಾಸ್ತ್ರಂಗಳುಂ ಎಡೆದು ... ಮುಖದಲ್ಲಿ
ಮುಖವಂ ಸೇರಿಸಿ ಚುಂಬಿಸುತ್ತಿರುವ ಕಾಲದೊಳ್, ಸೂರ್ಯಂ ... ವನದಲ್ಲಿ ಈ
ಸ್ತ್ರೀಪುರುಷಸಂಭೋಗ ಶೃಂಗಾರವಂ ನೋಡಿದ ದೋಷದಿಂದಬಂದ ಪಾ
ಪವಂ ಪರಿಹಾರವಂ ಮಾಡಿಕೊಳ್ಳಲು ಪಶ್ಚಿಮ ಸಮುದ್ರದೊಳ್ ಸ್ನಾನ
ವಂ ಮಾಡುವುದಕ್ಕೆ ತೆರಳಿದನೋ? ಎಂಬಂತೆ ಚಂದ್ರನು ಅಸ್ತಾಚಲವನ್ನೈ
ದುತ್ತಿರಲು, ಪತಿವಿಯೋಗವಂ ಸೈರಿಸಲಾರದ ಪತಿವ್ರತಾಸ್ತ್ರೀಯರಂತೆ
ತಾರಕಾ ಸಮೂಹಂಗಳು ತಮ್ಮಿಂತಾವೆ ತಾವು ಕರಗಿಹೋಗುತ್ತಿರಲು, ಕ
ಮಲ ಗಂಧಂಗಳಂ ಸೆಳೆದು ಚಲ್ಲುತ್ತಾ ತಂಪಾಗಿ ತಂಗಾಳಿ ತಂಡಗಳು ಬೀ
ಸುತ್ತಿರುವ ಕಾಲದೊಳ್ ಬೆಳಗಾಗಿ ಬರುವ ದಿಗಂಗನಾಮುಖಂಗಳ
ನೀಕ್ಷಿಸುತ್ತಾ, ಕೋಳಿಯುಂದು ಕೂಗುವ ಕುಕ್ಕುಟಾರವಂಗಳಂ, ಗಿಳಿ
ಗೊರವಂಕ ಮುಂತಾದ ಹಕ್ಕಿಗಳ ಧ್ವನಿಗಳಂ ಕೇಳಿ, ಬೆಳಗಾಯಿತೆಂ
ದು ಬೇಗ ಎದ್ದು ಅಡಿಗಳಿಗೆ ಅಡ್ಡಬಿದ್ದು, ಹಾರಿಹೋಗಿರುವ ಕರಗಂ ಕುಚ
ಮಂಡಲಕ್ಕೆ ಸೆಳೆಯುತ್ತಾ, ಮುಂಗುರುಳುಗಳಂ ಕಿವಿಗೆ ಸರಿಯಾಗಿ ತಿ
ರಿಗಿತಿದ್ದುತ ಹಾರನೂಲಿಂದ ಬಲಪುಗಾರನಂ ನೋಡಿ ತಲೆತೂಗಿ ತೆರಳಿ ಬಂ
ದು ಮುಂದೆ ಹೆಜ್ಜೆಗಳು ತಪ್ಪಿಡುತ ಬರುತ ಹೋಗುವ ತರಳಾಕ್ಷಿಯುಂ
ನೋಡಿ ನಿಟ್ಟುಸಿರುಗಳಂ ಬಿಡುತ್ತ ಅಲ್ಲಿ ನಿಲ್ಲಲಾರದೆ ಹಿಂದೆ ಬಂದು ರಾ
ಯನು ರಂಭೆಯ ಕರವಂ ಪಿಡಿದು ಮೆಲ್ಲನೆ ಮೇಲ್ಮಚ್ಚಿನಿಂ ಇಳುಹಿಸಲು,
ಆಗ ರಂಭೆಯು ರಾಯನ ರತಿಕ್ರೀಡಾ ವಿಹಾರವನ್ನೆ ನೆನೆಯುತ್ತಾ ಮೈ
ಮರೆತು ಮನೆಗೆ ಬಂದೆನೋ ಇಲ್ಲವೋ ಎಂದು ಭ್ರಾಂತಿಯುಂ ಪ್ರವಿ
ಮರಳಿ ಮಂದಿರವಂ ಸೇರುತ್ತಿರಲು, ಆಕಾಲದಲ್ಲಿ ಸುಗಂಧರಾಯನು ಅಂ
ಬಿಕಾ ಭವನವಂ ಪೊಕ್ಕು ಹಜಾರದೊಳ್ ಹಂಸತೂಲಿಕಾ ತಲ್ಪದಲ್ಲಿ ಮಲ
ಗಿ, ಮನದಲ್ಲಿ ಪದ್ಮಿನೀಜಾತಿ ಸ್ತ್ರೀಲಕ್ಷಣಗಳಿಂದ ಕೂಡಿರುವ ಈ ಕಮಲಾ
ಕ್ಷಿಯು ಎನಗೆ ವಶ್ಯವಾಗುವ ಪರಿಯೆಂತಿರುವದೋ ಇದಕ್ಕೆ ಏನು ಉಪಾ
ಯವಂ ಮಾಡಬೇಕೋ ತಿಳಿಯಲಿಲ್ಲಾ. ಇದಲ್ಲದೆ ಮಣಿಮಂತ್ರಾದಿಗಳಿಂದ
ವಶ್ಯವಂ ಮಾಡೆನೆಂದರೆ ದ್ವೀಪಾಂತರದಲ್ಲಿರುವ ಈ ದಿವ್ಯಸ್ತ್ರೀಯುಂ ಮಣಿ
ಮಂತ್ರಾದಿಗಳು ಸೋಂಕಲಾರವು, ಮನುಷ್ಯಮಾತ್ರನಾದ ನನ್ನಿಂದಾ ಆಗ
ತಕ್ಕ ಕಾರ್ಯವಲ್ಲಾ, ಪರಮೇಶ್ವರಿಯ ಪ್ರಸಾದವೇ ಎನಗೆ ಗತಿಯೋ ಹೊರತು ಮ

ತ್ತೊಂದುಸಾಧನವಿಲ್ಲ, ಎಂದ ನೇಕಪ್ರಕಾರವಾಗಿ ಚಿಂತಿಸುತ್ತಿರಲು, ಆ ಬಳಿಕದಿಗಂಗನೆಯು ಪಣೆಯೊಳ್ಳಿಟ್ಟ ಪದ್ಮರಾಗಬೊಟ್ಟಿನಂತೆ ಉದಯಗಿರಿಶಿಖರದೊಳ್ ಮೊಡಗಿರುವಮಣಿಕಿರೀಟದಂತೆ, ಗಗನಸರೋವರದಲ್ಲಿಹುಟ್ಟಿದ ಸಹಸ್ರದಳಕಮಲದಂತೆ, ಸೂರ್ಯನು ಉದಯಗಿರಿಯಕಟಕವಂ ಸೇರಿ ಪತ್ನಿಯಂ ಪಡಿಯಬೇಕೆಂದು ಕಮಲಾಕರಂಗಳಲ್ಲಿ ತಪವಂ ಮಾಡುವ ಕಮಲಿನಿಯರಂ ಕರಂಗಳಂ ನೊಂಕಿಸಿ ನಗೆಗೊಳಿಸುತ್ತಾ, ಚಕ್ರವಾಕಂಗಳನೆಡೆಯಂ ಬಿಡಿಸುತ್ತಾ ಪ್ರತಿಕ್ಷಣವು ಪ್ರವರ್ಧಮಾನನಾಗಿ ಬರುತ ಕರ್ಮಸಾಕ್ಷಿಯನ್ನೋಡಿ ಪರ್ಯಂಕದಿಂದೆದ್ದು ಪವಳದಹಾವಿಗೆಗಳಂ ಮೆಟ್ಟಿಕೊಂಡು ಸೂರ್ಯನನ್ನವಲೋಕಿಸಿ, ಸೂರ್ಯಪುಟವನುರಚಿಸಿಳಲನಲ್ಲಿ ಬರುವನುಗಂಧ ಮಹಾರಾಜನಂ ನೋಡಿ, ಸುಮಂತ್ರಿಯು ದಂಡಪ್ರಣಾಮವಂ ಮಾಡಿ ಕೈಕಟ್ಟಿಕೊಂಡು ನಿಂತಿರ್ದ ಮಂತ್ರಿಯನ್ನೀಕ್ಷಿಸುತ್ತಾ. ಮಣಿಪೀಠದಲ್ಲಿಕುಳಿತು ಮುಖಮಜ್ಜನವಂಮಾಡಿ ಕರ್ಪೂರವೀಳ್ಯವಂಧರಿಸಿ, ಅಯ್ಯಾಸುಮತಿಯೇ! ಎನಗೆ ಅಪೇಕ್ಷಿತವಾದ ಬಂದುಕಾರ್ಯವು ಒದಗಲಿಲ್ಲ. ಅದಕ್ಕೆ ಉಪಾಯವಂಯೋಚಿಸಿ ಜಾತಿಸ್ತ್ರೀರುಗಳು ಎಲ್ಲಿಇರುವರೋ ಆ ನೆಲೆಯಂ ತಿಳಿದುಕೊಂಡುಬಂದೆಯಾ ಎಂದು, ಹೇಳ್ದ ರಾಜನವಾತುಗಳಂಕೇಳಿ ಎಲೈಸ್ವಾಮಿಯೇ! ಈಕಾರ್ಯಅತಿಸುಲಭವಾಗಿ ಸಾಧ್ಯವಾಗುವದು, ಈ ಕಾರ್ಯವು ಸಾಧ್ಯವೋ ಅಸಾಧ್ಯವೋ ಎಂಬಚಿಂತೆಯುಂಬಿಟ್ಟು ಚಿತ್ತಕ್ಕೆ ಬರುವಂತೆ ವಿಚಾರವಂಮಾಡಬೇಕಲ್ಲದೆ ಇದೇನೋಮಹತ್ಕಾರ್ಯವೆಂದುಯೋಚನೆಯುಂಮಾಡುವದುಚಿತವಲ್ಲ, ಎಂದುಹೇಳ್ದ ಮಂತ್ರಿಯುವಚನವಂ ಕೇಳಿ ರಾತ್ರಿಯೊಳ್‌ನಡೆದ ಸಂಭೋಗಶೃಂಗಾರ ರಸಾನುಭವವಂ ಮನನವಂ ಮಾಡುತ್ತಿರುವ ಸಮಯದೊಳ್, ಜಯಂತನಳಕೂಬರರುಬಂದು ನಮಸ್ಕಾರಗಳಂಮಾಡುತ್ತಿರಲು; ಆಗರಾಜನು ಪೀಠದಿಂದೆದ್ದು ಈರ್ವರಕೈಗಳಂಪಿಡಿದು ಆಲಿಂಗನವಂಮಾಡಿ ಎಲೈದೇವತೆಗಳಿರಾ ನಿಮ್ಮ ಮೈತ್ರಿ ಉಂಟಾದುದರಿಂ ಎನಗೆ ಏನೋಬಂದಪೂರ್ವವಾದ ಫಲವುಬರುವಂತೆ ತೋರುತಲಿರ್ದೆಎಂದುಹೇಳುತ್ತಾ, ಮಜ್ಜನಗೃಹವಂ ಸೈದಿ ಸ್ನಾನವಂಮಾಡಿ ಸಂಧ್ಯಾವಂದನೆಮೊದಲಾದ ನಿತ್ಯಕರ್ಮಂಗಳಂನೆರವೇರಿಸಿ ಪರಮೇಶ್ವರಿಯಪಾದಂಗಳಂ ನೆನೆಯುತ್ತಾ, ಜಯಂತನಳಕೂಬರರೀರ್ವರಿಂದೊಡಗೂ

ದಿ ಭೋಜನಶಾಲೆಗೆ ಚಿತ್ತೈಸಿ ಷಡ್ರಸೋಪೇತಗಳಂ ಸವಿದು ಪುಷ್ಪಾಸವ ಫಲಾಸವ ಮೊದಲಾದ ಆಸವಗಳಂ ಪಾನವಂಮಾಡಿ ಆನಂದಪರವಶರಾಗಿ, ರಾಜನ ಮನಸ್ಸಿನಲ್ಲಿರುವ ಅಭಿಪ್ರಾಯಮಂ ನರಿತು ಬೃಂದಾರಿಕಾಯೋಗಿನಿಯು ಜೇಷ್ಠ ದೇವರಹಸ್ಯವಂ ನೆನೆದು ಜಯಂತನು ಕಂಬನಿಗಳಂ ತುಂಬಿ ಎಲೈ ಮಹಾನುಭಾವನೆ ! ನಿನ್ನಲ್ಲಿರುವ ಗುಣಾತಿಶಯಂಗಳು ಎನಗೆ ಆನಂದವನ್ನುಂಟುಮಾಡುತ್ತಿದೆ, ಅದುಕಾರಣ ನೀನೆಸಖನು, ನೀನೆ ಮಿತ್ರನು, ನೀನೆ ತಂದೆ, ನೀನೆ ದೈವವೆಂದು ನಿನ್ನಲ್ಲಿಯೆ ನಮ್ಮಿರ್ವ್ವರ ಮನಸ್ಸು ಲೀನವಾಗಿರುವುದರಿಂದ ಶರೀರಂಗಳು ಭೇದವಾಗಿ ತೋರುವವು, ಅಂತಃಕರಣ ಧರ್ಮಂಗಳಿಗೆ ಲೇಶಮಾತ್ರವು ಭೇದಕಾಣಲ್ಪಡುವುದಿಲ್ಲ, ನಿಮ್ಮ ಮನೋರಥಂಗಳೆಲ್ಲವು ಫಲಿಸುವಂತೆ ಮಾಡಿ, ಸುಮತಿ ಸಹಾಯರಾಗುಪ್ಪ ರೀರ್ವ್ವರಂ ನೀವು ಆಳಿದ ಭರತಖಂಡಕ್ಕೆ ಕಳುಹಿಸಿ ನೀವಲ್ಲಿಯೆ ಸುಖದಿಂದಿರಬಹುದೆಂದು ವಿಜ್ಞಾಪನೆಯಂ ಮಾಡಿದ ಜಯಂತನಿಗೆ ಆಲಿಂಗನವಂಕೊಟ್ಟು, ಅಯ್ಯಾ ಮಹೇಂದ್ರಪುತ್ರನೆ ! ಸೌಗಂಧಿಕಾದೇವಿಯು ಸ್ವಯಂವರಕಾಲದಲ್ಲಿ ಪದ್ಮಿನ್ಯಾದಿ ಜಾತಿಸ್ತ್ರೀಯರುಗಳಂ ತಂದು ಪಣವಾಗಿಒಪ್ಪಿಸಿ ಪರಿಣಯವಂ ಮಾಡುವೆನೆಂದು ಪ್ರತಿಜ್ಞೆಯಂಮಾಡಿದುದರಿಂದ ಆ ಪ್ರತಿಜ್ಞಾಪೂರಣವಂಮಾಡಿ ಆ ದೇವಿಯೊಡನೆಕೂಡಿ ಇಲ್ಲಿಗೆಬರುವೆನೆಂದು ಅಪ್ಪಣೆಯಂಕೊಡುತ, ಆಲಿಂಗನವಂಮಾಡಿ ಜಯಂತ ನಲಕೂಬರರ ಕೈಗಳಂಪಿಡಿದು ವನಲಕ್ಷ್ಮಿಯು ವಾಸಭವನದಂತಿರ್ಪ ಗೃಹೋಪವನವಂಪೊಕ್ಕು ಪುಷ್ಪಾಪಚಯವಂ ಮಾಡುವ ಊರ್ವಶಿ ತಿಲೋತ್ತಮೆಯರೀರ್ವರಂ ನೋಡಿ ವಿಭ್ರಾಂತಿಚಿತ್ತನಾಗಿ, ರಾಯನು ಅಲ್ಲಲ್ಲಿ ಇರುವ ಲತಾಮಂಟಪಗಳಂನೋಡುವ ಆ ಈರ್ವ್ವರ ಅಂಗಾಂಗ ಸೌಂದರ್ಯಕ್ಕೆ ಆಶ್ಚರ್ಯವಂಪಡೆಯುತ್ತಾ ಜಯಂತ ನಲಕೂಬರರ ಕೈಗಳಂಬಿಟ್ಟು ಕಾಮನ ಶರದೊಳ್ ಶಿಕ್ಕಿ ಶರೀರವಂಮರೆದು ಮಾತಾಡದೆ ಮಲ್ಲಿಗೆ ಲತಾಮಂಟಪಕ್ಕೆ ಮರೆಯಾಗಿ ಪೋಗುವ ರಾಯನಂನೋಡಿ ಜಯಂತನು ನಲಕೂಬರನು ಕಂಡು ನಸುನಗುತ ಎಲೈಮಿತ್ರನೆ! ಈಗ ನಾವು ಇಲ್ಲಿ ಇರುವದು ಯುಕ್ತವಲ್ಲವೆಂದು ಹೇಳುತ್ತಾ ಉಪವನದ ಬಾಗಿಲಲ್ಲಿ ಕಾದಿರುವಂತೆ ಮಣಿಮಂತನಿಗೆ ಗೊತ್ತಾಗಿ ಹೇಳಿ ಅಂಬಿಕಾಭವನವಂ ಕುರಿತು

ಪೋಗುತ್ತಿರಲು,

ಇತ್ತಲಾ ಸುಗಂಧರಾಯನು ಮಾಕಂದ ಮರಗಳಿಗೆ ಚೆಲುವಿರುವ ಮೊಲ್ಲೆಮಲ್ಲಿಗೆ ಬಳ್ಳಿಗಳಿಂದುದುರುವ ಪುಷ್ಪಂಗಳಿಂದ ಗಮ್ಮನೆ ಪರಿಮಳಿಸುವ ಲತಾಮಂದಿರಕ್ಕೆ ಪೋಗುತ್ತಿರಲು, ಆಗ ಊರ್ವಶಿಯು ತಿಲೋತ್ತಮೆಯಂ ಕುರಿತು, ಎಲೆ ಸಖಿಯೆ ! ಈ ಮೋಹನಾಂಗನ ಅಂಗಸಂಗವಿಲ್ಲದೆ ಇರುವ ಮಾನಿನಿಯು ಮರವೇಸರಿ, ನಿನ್ನೆ ರಾತ್ರಿ ರಂಭೆಯು ಈ ರಾಜಶೇಖರನ ರತಿಕ್ರೀಡೆಗೆ ಮೋಹಿಸಿ ಏನೂ ತೋರದೆ ಮನಮುತ್ತಿಯೆ ಮೈಮರೆತು ಮಲಗಿರುವಳೆಂ ನೋಡಿದೆಯಲ್ಲಾ ಎಂದು ಪೇಳುತ್ತಾ, ಚಿಗುರುಗಳಂ ಚಿವುಟುತ್ತಾ, ಬಳ್ಳಿಗಳನ್ನಲ್ಲಾಡಿಸುತ್ತಾ, ಮನೋಜಪದಪರಾಗಿ ಪಲ್ಲಿಗಳುಮರವಾಗಿ ಚಂದ್ರಕಾಂತ ಜಗಲಿಗಳನ್ನು ಹತ್ತಿ ರಾಯನಂ ಕಾಣದೆ ಮಂದಾರವೃಕ್ಷಕ್ಕೆ ಮರೆಯಾಗಿ ಬಂದು ಬಗ್ಗಿನೋಡುವ ಬಾಲೆಯರಂ ಕಂಡು ಕಳವಳಪಡುತ ಹಕ್ಕಿಗಳ ಹಾರಿಸುವ ನೆವದಿಂದ ರಾಯನು ಪುಷ್ಪಗುಚ್ಛವಂ ಹಾಕಲು, ಆ ಪುಷ್ಪಗುಚ್ಛವು ಊರ್ವಶಿಯ ಎದೆಗೆ ಗುರಿಯಾಗಿ ತಗಲಿದ ಪರಿಯಂ ನೋಡಿ, ತಿಲೋತ್ತಮೆಯು ಊರ್ವಶಿ ಕರವಂ ಪಿಡಿದು ಲತಾಮಂಟಪಕ್ಕೆ ಓಡುತ್ತಿರುವುದಂ ನೋಡಿ ರಾಯನು ವೇಗದಿಂದೆದ್ದು ಎದುರಾಗಿಬಂದು ಆ ಕಳಾವತಿಯರಂ ತಕ್ಕೈಸಿ ಬಾಹುಗಳೆಂಬ ಬಳ್ಳಿಗಳಿಂದ ಬಿಗಿದು ಲತಾಮಂಟಪದೊಳ್ ಪಚ್ಚೆಕರ್ಪೂರದ ಏಣ್ಣೆಗಳಮಧ್ಯದಲ್ಲಿರುವ ಪಲ್ಲವ ಪರ್ಯಂಕದೊಳ್ ಕುಳಿತು ತಿಲೋತ್ತಮೆಯು ಕಣ್ಣುಗಳಂ ಮುಚ್ಚುಗೊಳುತ ಊರ್ವಶಿಯ ಕುಚಗಳಂ ಪಿಡಿದು ಈಪರಿಯಾದ ತಾಳಫಲಂಗಳು ಮಂದಾರಮಂಟಪದಲ್ಲಿ ಮಾತಗಿ ಮರೆತು ಬಂದೆನೆಂದು ಊರ್ವಶಿಯಂ ಕಳುಹಿಸಿ, ತಿಲೋತ್ತಮೆಯು ಅಧರವಂ ಚುಂಬಿಸಿ ಆಲಿಂಗನವಂ ಮಾಡುತ್ತಿರುವಷ್ಟರೊಳ್, ಮನಸಿಜ ಮಹಾರಾಯನು ಆಸ್ಥಾನಮಂಟಪಕ್ಕೆ ಬಂದನೆಂದು ಸೇವಕಜನರು ಸೆಳೆಯುವ ಕಾಂಡಪಟದಂತೆ, ಆಶ್ರಯವಿಲ್ಲದೆ ಬೀಳುತಲಿರುವ ಬಲಹೀನನಂತೆ, ಅಂಗರಾಗದಲ್ಲೈಕ್ಯವಂ ಪಡೆಯಿತೋ ಎಂಬಂತೆ, ಮದನಮಹಾರಾಯನ ಮಂತ್ರಮಹಿಮೆಯಿಂದ ಮಾಯವಾಯಿತೋ ಎಂಬಂತೆ, ವಿಷ್ಣುಪದದಲ್ಲಿಯೆ ಸಾಯುಜ್ಯ ಮುಕ್ತಿಯಂ ಪೈದಿತೋ ಎಂಬಂತೆ, ಕನಸಿನಲ್ಲಿ ಪುಟ್ಟಿರುವ

ಕೀರೆಯಂತೆ ಮುಕುಳವಸ್ತ್ರವು ಕುಂಡಕಾಣದೆ ಕಟಿಪ್ರದೇಶದಿಂದ ಬೀಳ ಹೋಗುತ್ತಿರಲು, ಈ ವಿಚಿತ್ರವಾದ ಬಾಹ್ಯ ರತಿಕಾಲದಲ್ಲಿ ಸುಮಶರನ ಶರಪರಂಪರೆಗಳಿಗೆ ಸಿಕ್ಕಿ ಸುಗಂಧ ಮಹಾರಾಜೇಂದ್ರನು ಕರದಿಂ ಕರಿಕರ ಕ್ರೀಡೆಯುಂ ಮಾಡುತಲಿರುವ ರಾಯನಂ ಅರೆನೋಟದಿಂ ನೋಡಿ ನಲವುಟಿಟ್ಟು ಪಂಚಶರ ಬಾಧೆಗೆ ತಾಳಲಾರದೆ, ಯದುವಂಶ ತಿಲಕನಾದ ರಾಯನು ಎದುರಾಗಿ ಕುಳಿತು ಎಡೆಬಿಡದೆ ತಳ್ಳುತ್ತಾ ರಾಯನ ಎದೆಗವೊಲೆಗಳನ್ನೊತ್ತಿ, ಮುದ್ದುಗೊಳುತಲಿರುವ ಮುದ್ದುಗಾತಿಯುಂ ನೋಡಿ ಮೋಹಸಾಗರದೊಳ್ ಮುಳಿಗಿ ಕಾಮನಿಯು ಕಳಾಸ್ಥಾನವಂ ಸೋಂಕಿಸಲು, ಆ ಕಾಲದಲ್ಲೀರ್ವರು ರತಿಸುಖಾನುಭವಕ್ಕೆ ಸೊಕ್ಕಿ ಕಪ್ಪುರದ ದಿನ್ನೆಗಳಲ್ಲಿ ಕೈಗಳಂ ನಿಟ್ಟು ಮಲಗಿರುವ ಕಾಲದಲ್ಲಿ ಊರ್ವಶಿ ಫಲಗಳಂತೆಗಡು ಕೊಂಡು ಪಟ್ಟು ಕಪ್ಪುರದ ತಿಪ್ಪೆಗಳಲ್ಲಿ ಪಾದಗಳಂ ನಿಕ್ಕಿ ಘುಮುಕುತ್ತಾ, ಮಾರ್ಗಕ್ಕೆ ಮರೆಯಾಗಿರುವ ಮಲ್ಲಿಗೆ ಬಳ್ಳಿಗಳಂ ತಕಿತ್ತಾ, ಜಾರಿ ಬೀಳುವ ಜವಾಜಿ ತಾವುಗಳಂ ಬಿಟ್ಟು ಶೀತಳವಾದ ಶಿಲಾತಲಂಗಳಲ್ಲಿ ಮೋಡಿಬರುವ ಊರ್ವಶಿಯು ಕಾಲಂದಿಗೆಗಳ ಶಬ್ದಂಗಳಂ ಕೇಳಿ ತಿಲೋತ್ತಮೆಯು ಝಗ್ಗನೆದ್ದು ಕೀರೆಯ ನೆರಿಗಳಂ ಸರಿಮಾಡುತ್ತಾ ಮುಂಗುರುಳುಗಳಂ ತಿದ್ದುತ ಮಲಗಿರುವ ಮಹಾರಾಯನ ಹಸ್ತವಂ ಪಿಡಿದು ಎಬ್ಬಿಸಿ, ಹಾಸ್ಯವಂ ಮಾಡುತ್ತಾ ಇರುತಿರಲು, ಆಗ ಊರ್ವಶಿ ಮಾರನ ವಶಳಾಗಿ ವಸ್ತ್ರವುರುತು ವಿರಹ ತಾಪಕ್ಕೆ ತಾಳಲಾರದೆ ಕಳವಳ ಪಡುತ, ಲತಾಮಂಟಪವಂ ಸೇರಲು, ಆಗ ರಾಯನು ಊರ್ವಶಿಯ ಭುಜದಲ್ಲಿ ಹಸ್ತವಂ ನಿಟ್ಟು ತಿಲೋತ್ತಮೆಯು ಒಪ್ಪಿಸುವ ಕಿರು ಕಿತ್ತಲೆ ಮಾವು ಮುಂತಾದ ಫಲಗಳಂ ಮೆಲ್ಲುತ್ತಾ, ಕ್ರೀಡಾ ಸರೋವರಕ್ಕೆ ಚಿತ್ತೈಸಿ ಎಲೈ ಊರ್ವಶಿಯೆ! ಜಲಕ್ರೀಡೆಯಂ ಮಾಡದಿದ್ದಡೆ ಈ ಶರೀರತಾಪವು ಪರಿಹಾರ ವಾಗಲಾರದೆಂದು,ಪೇಳುತ್ತಾ ತಿಲೋತ್ತಮೆಯಂ ಕುರಿತು ಎಲೈ ಕಳಾವತಿಯೆ! ನವರಂಗ ನಾಟಕ ಶಾಲೆಗೆ ಪೋಗಿ ದಿವ್ಯಾಂಬರಗಳಂ ತೆಗೆದುಕೊಂಡು ಬಾಯೆಂದು ಅಪ್ಪಣೆಯಂ ನಿತ್ತು ಕಳುಹಿಸಿ, ಊರ್ವಶಿಯು ಕರವಂ ಪಿಡಿದು ಎಲೈ ಕಾಂತೆಯೆ! ಕಮಲ ವನದ ಮಧ್ಯದಲ್ಲಿ ಹೆಣ್ಣು ಹಂಸೆಯು ಮೇಲ್ಗಡೆಯಲ್ಲಿ ಹತ್ತಿ ಮೆಟ್ಟಾಡುವ ರಾಜಹಂಸೆಯು ರತಿಕ್ರೀಡೆಯಂ ನೋಡೆಂದು

ತೋರ್ಪ ಮೊಗವಂ ಮುದ್ದಿಟ್ಟು, ಕುಚಕುಂಭಗಳಂ ಪಿಡಿದ ತುದಿಗಳಂ ನುಲಿ
ಯುತ್ತಾ; ಎತ್ತಿಕೊಂಡು, ಪೊಕ್ಕಿಲಿಯುಂ ಮುದ್ದಿಟ್ಟು, [illegible]ವಂ ಪೊಕ್ಕು
ಕಮಲದ ಮೊಗ್ಗೆಗಳಂ ಚಿವುಟುತ್ತಾ, ಕುಚ ಕುಟ್ಮಲಂಗಳಿಗೆ ಸರಿಬರಲಾ
ರವೆಂದು ಬಿಸುಟು, ಸರೋವರ ಮಧ್ಯದಲ್ಲಿರುವ ಪವಳದ ದೋಣಿಯೊಳ್
ಕುಳಿತು ವಿಹಾರವಂ ಮಾಡುತ, ಕಮಲ ಛತ್ರಿಯ ನೆರಳೊಳ್ ಕ್ರೀ
ಡಿಸುವ ಹಂಸಮಿಥುನವಂ ನೋಡಿ, ಎಲೈ ಪ್ರಿಯಳೆ! ನಾವೀರ್ವರು ಹಂ
ಸ ಬಂಧದಿಂದ ರಮಿಸುವಾ ಎಂದು ಪೇಳೆ, ರಾಯನು ಕಾಮ ಮಂತ್ರವಂ
ಜಪಿಸಿ, ಕಾಮ ಪೂಜೆಯಂ ಮಾಡಲು, ಊರ್ವಶಿಯು ರತಿದೇವಿಯಂ ಧ್ಯಾ
ನಿಸಲು, ಆಗ ರತಿ ಮನ್ಮಥರು ಈರ್ವರು ಪೃಥ ಭಕ್ತಿಗೆ ಮೆಚ್ಚಿ, ಅವರ
ಮನದಲ್ಲಿ ಲೀನವಾಗಲು, ಆಗರಾಯನು ಹಂಸೆಯಂತೆ ಕೂಗುತ್ತಾ, ತಾ
ವರೆದಂಟುಗಳಂ ಚಪ್ಪ[illegible]ತ್ತಾ, ರತಿಕ್ರೀಡಾಸಕ್ತಿಯುಳ್ಳ ಹೆಣ್ಣು ಹಂಸೆಯಂತೆ
ಕ್ರೇಂಕಾರ ಧ್ವನಿಯಂ ಮಾಡುವ ಊರ್ವಶಿಯ ತುಟಿಯಂ ಕಚ್ಚುತ್ತಾ,
ತಾವರೆ ದಂಟುಗಳಂ ಕೊಕ್ಕುಗಳಿಂದ ಕುಟುಕುವಂತೆ ಕಾಣಿಸುತ್ತಾ,
ಚುಂಬನವಂ ಮಾಡುತ್ತಾ, ಮದನ ಮಹಾರಾಯನ ಮನವು ಸಂತೋ
ಷಗೊಳಿಸುತ್ತಾ, ರೆಕ್ಕೆಗಳಂತೆ ತೋರುವ ಕರಗಳಿಂದ ಕುಚಂಗಳಂ ಪಿ
ಡಿದು ಮುಖವಂ ಮುದ್ದುಗೊಳುತ, ಮಾರನ ಮಹಾಮಂತ್ರ ಸಾಮ
ರ್ಥ್ಯದಿಂ ಹಂಸೆಗಳಂತೆ ರಮಿಸುವ ರಾಜದಂಪತಿಗಳಂ ಕಂಡು ಹತ್ತಾ
ರುಸಾವಿರ ಕಲಹಂಸ ಮಿಥುನಂಗಳು ಕಲಕಲ ಧ್ವನಿಗಳಂ ಮಾಡುತ್ತಾ,
ಮಾರನ ವಶವರ್ತಿ ಮದನಕ್ರೀಡೆಯಂ ಮಾಡುವ ಹಂಸೆಗಳಂ ಹಾಸ್ಯಗ
ಳಂ ಮಾಡುವಂತೆ ಧ್ವನಿಯಂ ಮಾಡುತ್ತಾ ಈರ್ವರು ರತಿಕ್ರೀಡಾ ಸಕ್ತರಾ
ಗಿ ಇರುತಿರಲು, ಆಗನಾಟಕ ಶಾಲೆಯಿಂ ಪೊರಟು, ಮೇನಕೆಯುಂ ಜೊತೆಗೂಡಿ
ಸರೋವರವಂ ಸೈದಿ, ತಿಲೋತ್ತಮೆಯು, ಎಲೈ ಸಖಿಯೆ! ರಾಯನು ಎನ
ಗೆ ಮರೆಮಾಚಿ, ಯಾವ ಲತಾಮಂದಿರಗಳಲ್ಲಿ ಊರ್ವಶಿಯ ಊರುಪ್ರ
ದೇಶವಂ ನೋಡಿ, ಮಾರನಿಗೆ ಮನವಂ ನೊಪ್ಪಿಸಿ, ಮಲ್ಲಿಗೆ ಬಳ್ಳಿಗಳಿಂ
ದ ಬೆರದಿರುವ ಮಂದಿರದಲ್ಲಿಯೆ ಸೊಕ್ಕಿ ಮಲಗಿದನೋ? ಏನೋ ಕಾಣೆ,
ಎನಗೆ ಮೋಸವಂ ಮಾಡಿ ಪೋದನಲ್ಲಾ, ಎಲೈ ತಂಗಿಯೆ! ಈ ಕಿರೀಟ
ಕುಂಡಲಗಳಂ ನೋಡುತ್ತಾ, ಇಲ್ಲಿಯೇ ನಿಂತಿರು, ನಾನು ಬಂದು

ನಿಮಿಷ ಮಾತ್ರದಲ್ಲಿಯೇ ಬರುವೆನೆಂದು ಹೇಳಿ,ಅಲ್ಲಲ್ಲಿರುವ ಲತಾಮಂಟಪಗಳಲ್ಲಿ ಹಂಸ ಚಕ್ರವಾಕ ಮೊದಲಾದಪಕ್ಷಿಗಳ ಕ್ರೇಂಕಾರಧ್ವನಿಗಳಿಂದ ಕ್ರೀಡಾಸರೋವರಂಗಳಲ್ಲಿ ನೋಡುತ್ತಾ, ಎಲ್ಲಿಯೂಕಾಣದೆ, ರಾಯನ ರತಿಕ್ರೀಡೆಯಂನೆನದು, ಹುಚ್ಚುಗೊಂಡಂತೆ ಮಂದಾರ ಮಾಕಂದಮೊದಲಾದ ಮರಗಳಂಮಾತಾಡಿಸುತ್ತಾ,ವಿಭ್ರಾಂತಚಿತ್ತಳಾಗಿ, ಉಪವನದಲ್ಲಿ ಹುಡುಕುತ್ತಿರಲು; ಮೇನಕೆಯು ಸರೋವರದತೀರದಲ್ಲಿನಿಂತು ಒಂದೇ ಕಾಲದಲ್ಲಿ ಹತ್ತಾರುಹಂಸ ಸಹಸ್ರದಂಪತಿಗಳು ಕ್ರೀಡಿಸುವದಂನೋಡಿ, ಇದೇನೋಒಂದು ಆಶ್ಚರ್ಯವಾಗಿ ತೋರುತಲಿಧೆ ಎಂದು ಮೂಗಿನಮೇಲೆ ಬೆಟ್ಟಂನಿಟ್ಟುಯೋಚಿಸುತ್ತಾ,ಈರಾಯನು ಊರ್ವಶಿಯಂಕೂಡಿ ಹಂಸಬಂಧದಿಂದ ರಮಿಸುವಂತ್ತೆ,ತೋರುತಲಿಧೆ.ಎಂದುನಿಶ್ಚೈಶಿ, ಮೇನಕೆಯೂ ಹಂಸರೂಪವಂತಾಳ್ದು, ಗಗನದಿಂದಿಳಿದುಬಂದು, ಹಂಸಬಂಧದಿಂದ ರಮಿಸೂವ ರಾಯನ ಸಮೀಪಕ್ಕೆಬಂದು, ರಕ್ಷಿಗಳಂ ಜೊಲುಮಾಡಿಕೊಂಡು ಬಗ್ಗಿ ಮೊಗವಂನೋಡುವ ಹೆಣ್ಣುಹಂಸೆಯನೆಳ್ದಿ, ಹಾರಿ ಮೆಲ್ಲಗೆಯಲ್ಲಿ ಮೆಟ್ಟಾಡುತ, ಮುಖವಂಚುಂಬಿಸುತ್ತಾ, ರಾಯನು ಹಂಸೆಯಂತೆ, ಕ್ರೇಂಕಾರಧ್ವನಿಯಂಮಾಡುತ್ತಾ, ಕಂಠದಿಂದಕಂಠವನ್ನೊತ್ತಿ ಕಳಾಪತನವಾಗುವಸಮಯದಲ್ಲಿ, ಮನುಷ್ಯರೂಪವಂತಾಳ್ದು, ಉದಕದಲ್ಲಿಧುಮುಕುವ ಈರ್ವರಂಕಂಡು ಊರ್ವಶಿಯು ರಾಯನಮೇಲೆಬಿದ್ದುದಂ ಮೇನಕೆಯುಕಂಡು, ಎಲೈಸವತಿಯೆ ! ನಿನ್ನಸಾಹಸವು ಇನ್ಯಾರಿಗೂಬರಲಾರದೆಂದು ಹಾಸ್ಯವಂಮಾಡುತ,ರಾಯನಿಂದೊಡಗೂಡಿ ಜಲಕ್ರೀಡೆಯಂ ಮಾಡಿ, ತೀರವಂಶೇರಿ, ದಿವ್ಯಾಂಬರಗಳನ್ನುಟ್ಟು, ರಾಯನಿಗೆ ವಸ್ತ್ರವನ್ನಿತ್ತು, ಕಿರೀಟಕುಂಡಲಗಳಂ ಕೊಡುತ್ತಾ, ಅಲ್ಲಲ್ಲಿ ವಿಭ್ರಾಂತಚಿತ್ತಳಾಗಿ ತಿರುಗುವ ತಿಲೋತ್ತಮೆಯಂ ಕರೆಯುತ್ತಾ, ರಾಯನುದಿವ್ಯಗಂಧಂಗಳಂ ಹಚ್ಚಿ, ಹಣ್ಣುಗಳಂ ಮೆಲ್ಲುತಲಿರುವ ಕಾಂತೆಯರಂ ಕುರಿತು, ರಾಯನು, ಎಲೈ ಕಳಾವತಿಯರೆ, ಅಂಬಿಕಾಭವನಕ್ಕೆ ಪೋಗುವಾ ಎಂದು ಪೇಳುತ್ತಾ, ಪಾದುಗೆಗಳಂ ಮೆಟ್ಟಿಕೊಂಡು, ಕಾಂತೆಯರ ಕರಲಾಘದಿಂ ನವರಂಗ ನಾಟಕಶಾಲೆಯಂ ಪೊಕ್ಕು, ನಾರಿಯರ ನಲ್ಲಿಯೆ ನಿಲ್ಲಿಸಿ, ಅಂಬಿಕಾಭವನವಂ ಪೊಕ್ಕು, ಹಂಸತೂಲಿಕಾತಲ್ಪದೊಳ್ ಕುಳಿತಿರಲು ;

ಆ ಸಮಯದಲ್ಲಿ, ಬೃಂದಾರಿಕಾಯೋಗಿನಿಯೂ ಬೃಹಸ್ಪತಿಯು ಹಸ್ತಲಾಘವದಿಂದ ಅಂಬಿಕಾಭವನಕ್ಕೆ ಬರುತ್ತಿರಲು ರಾಯನು ಜಯಂತನಳಕೂಬರರಿಂದಕೂಡಿ ಎದುಗೊಂಡು ಮಹಾಯೋಗಿನಿಯ ಚರಣಂಗಳಿಗೆ ಶರಣವಂ ಮಾಡಲು ಆಗ ಯೋಗಿನಿಯು ರಾಯನ ಹಸ್ತವಂಪಿಡಿದು ಅಯ್ಯಾ ಸುಗಂಧರಾಯನೆ ! ನೀನು ಕುಶಲವಾಗಿ ಇದ್ದೀಯಾ ಎಂದು ಕುಶಲಪ್ರಶ್ನೆಯಂಮಾಡಲಾ ರಾಯನು, ತಾಯೆ ಮಹಾಯೋಗಿನಿಯೆ! ನಿಮ್ಮಅನುಗ್ರಹಕ್ಕೆ ಪಾತ್ರನಾದ ನನಗೆಕುಶಲಪರಂಪರೆಗಳೇ ಉಂಟಾಗುವವೆಂದು, ವಿಜ್ಞಾಪನೆಯಂಮಾಡಿ, ಅಂಜಲಿಬದ್ಧನಾಗಿನಿಂತು ತಾಯೆ! ಎನಗೆಅಪ್ಪಣೆಯಾದರೆ ಪೋಗುವೆನೆಂದು, ಹೇಳ್ದರಾಯನಂಕುರಿತು, ಅಯ್ಯಾ ನಿನಗೆಅಪ್ಪಣೆಯಂ ಕೊಡಬೇಕೆಂಬ ಇಚ್ಛೆಇಂದಲೇ ನಾನುಬಂದೆನೆಂದು ಅಪ್ಪಣೆಯನ್ನಿತ್ತು, ಮುಹೂರ್ತಮಾತ್ರ ಧ್ಯಾನವಂ ಮಾಡಿ, ಮನೋಯಾನವೆಂಬ ವಿಮಾನವಂ ಮನದಿಂದಲೆ ಕಲ್ಪಿಸಿ, ಬಾಗಿಲೊಳ್ ನಿಲ್ಲಿಸಿ,ಜಯಂತನಂಕರೆದು ಕಿವಿಯೊಳ್ ಜಾತಿಸ್ತ್ರೀಯರನಾಲ್ವರಂ ರಾಯನಿಗೆ ಒಪ್ಪಿಸುವಂತೆ ಹೇಳಿ,ಆನಂದವಲ್ಲೀಮಹಾದೇವಿಗೆ ಧರಿಶಿರುವ ಮಂದಾರಮಾಲೆಯಂ ರಾಯನಕಂಠದಲ್ಲಿಮುಡಗಿ, ಜಯಂತನಮೊಗವಂನೋಡಲಾಗ, ಜಯಂತನು ದಿವ್ಯಾಂಬರಾಭರಣಂಗಳಂ ರಾಯನಿಗೆಸಮರ್ಪಿಸಿ ಪದ್ಮಿನೀ ; ಚಿತ್ರಿಣೀ ; ಹಸ್ತಿನೀ ; ಶಂಖಿನೀ ; ಜಾತಿಲಕ್ಷಣಂಗಳಿಂದ ಕೂಡಿರುವ ನಾಲ್ವರು ಅಪ್ಸರಸ್ತ್ರೀಯರಂಕರೆದು, ರಾಯನಪಾದಕ್ಕೆ ಸಮರ್ಪಿಸಿ, ಎಲೈ ರಾಜೇಂದ್ರನೆ ! ನಿನ್ನಪಟ್ಟದ ರಾಣಿಗೆ ದಾಸ್ಯವಂ ಮಾಡುವದಕ್ಕೆ ಯೋಗ್ಯರಾದವರು,ಈನಾಲ್ವರಂಕರದುಕೊಂಡು,ಚಿತ್ತೈಸಬಹುದೆಂದು ವಿಜ್ಞಾಪನೆಯಂಮಾಡುತ್ತಾ ಸಾಷ್ಟಾಂಗದಂಡಪ್ರಣಾಮವಂ ಮಾಡಲಾಗ, ರಾಯನು ಜಯಂತನಕರವಂಪಿಡಿದು, ಎಬ್ಬಿಸಿ ಆಲಿಂಗನವಂಮಾಡಿ, ನಳಕೂಬರನಂ ತಕ್ಕೈಸಿ, ಬೃಂದಾರಿಕಾಯೋಗಿನಿಗೆ ಸಾಷ್ಟಾಂಗ ದಂಡಪ್ರಣಾಮವಂಮಾಡಿ, ಬೃಹಸ್ಪತಿಗೆ ಕರಂಗಳಂ ಮುಗಿದು, ಬಿಲ್ಲುಬತ್ತಳಿಕೆಗಳಂ ಧರಿಸಿ, ಅಂಬಿಕಾಭವನವಂ ಪೊರಟು, ಮನೋಯಾನವೆಂಬ ವಿಮಾನಸಮೀಪಕ್ಕೆ ಬಂದು ನಿಲ್ಲಲಾಗ ಬೃಂದಾರಿಕಾದೇವಿಯು, ಅಯ್ಯಾಪುತ್ರನೇ ! ಇದು ಮನಸ್ಸಿನಿಂದ ಕಲ್ಪಿತವಾದ

ವಿಮಾನ್ನ, ನೀನು ಸೇನಾಕಟಕವಂ ಶೇರಿ, ಇಳಿವಕ್ಷಣದಲ್ಲಿಯೆ, ಅದೃಶ್ಯವಾ
ಗಿ ಪೋಗುವದೆಂದು ಪೇಳಿ, ರಾಯನ ಕರವಂ ಪಿಡಿದು, ವಿಮಾನಕ್ಕೆ ಪ್ರದಕ್ಷಿ
ಣವಾಗಿ ಬಂದು ಯೋಗಿನಿಯ ಅಪ್ಪಣೆಯಿಂದ, ವಿಮಾನಾರೂಢನಾಗಿ, ಅ
ಪ್ಸರಸ್ತ್ರೀರುಗಳಂ ವಿಮಾನದಲ್ಲಿ ಕೂಡುವಂತೆ ಕಟ್ಟುಮಾಡಿ, ಸುಮತಿ
ಗೆ ಚಂದ್ರಹಾಸವಂ ಪಿಡಿದು, ಹಿಂದುಗಡೆಯಲ್ಲಿ ನಿಂತಿರುವಂತೆ ನೇಮಿಸಿ,
ಛಾಯಾಗುಪ್ತನಂ ನೋಡಿ, ಅಯ್ಯಾ ಯಕ್ಷನೇ ನೀನು ನಿಮಿಷಮಾತ್ರಕ್ಕೆ ಸೇ
ನಾಕಟಕವಂ ಸೇರಿ, ವೀರಸೇನ ಮೊದಲಾದ ಸೇನಾಪತಿಗಳಿಗೆ, ನಾವು ಬರು
ವ ವರ್ತಮಾನವಂ ತಿಳುಹಿಸೂ ಎಂದು ಕಳುಹಿಸಿ, ಪರಮೇಶ್ವರಿಯ ಪಾದಾ
ರವಿಂದಂಗಳನೆನದು, ಧ್ಯಾನವಂ ಮಾಡಲಾಗ, ವಿಮಾನವು ಗಗನವನ್ನೇರಿ,
ವಾಯುಪಥವಂ ಶೇರಿ ಮುಹೂರ್ತಮಾತ್ರಕ್ಕೆ ಬಂದು, ಸೇನಾಕಟಕಕ್ಕೆ
ಇಳಿಯುವ ಸಮಯದಲ್ಲಿ, ದಿಕ್ಕುಗಳು ಪ್ರಸನ್ನವಾಗಲು, ದಿವ್ಯಗಂಧಂಗಳಿಂ
ದಕೂಡಿ ಮಂದಮಾರುತವು ಬೀಸುತ್ತಿರಲು, ವೀರಸೇನ ಮೊದಲಾದ ಸೇನಾ
ಪತಿಗಳು ಸಾಲಾಗಿ ಕೈಗಳಂ ಕಟ್ಟಿಕೊಂಡು ನಿಂತಿರಲು ; ಘಮೋರೆಂದು ಫಿ
ರಂಗಿಗಳಂ ಹಾರಿಸುತ್ತಿರಲು, ಭೇರೀ ಪಟಹ ನಿಸ್ಸಾಳ ಶಬ್ದಂಗಳು ಘೋ
ರೆಂದು ಮೊರೆಯುತ್ತಿರಲು ; ಆಗ ವಿಮಾನವು ಸೇನಾಕಟಕದೋಳ್ ನಿಲ್ಲ
ಲಾಗ ಸುಮತಿಯು ಹಸ್ತಲಾಗವಿಂದೆದ್ದು ರತ್ನದ ಹಾವಿಗೆಗಳಂ ಮೆಟ್ಟಿಕೊ
ಳ್ಳುತ್ತಿರುವ ಕಾಲದೋಳ್ ಸೇನಾಪತಿಯಾದ ವೀರಸೇನನು ಒಡೆಯನಾದ ಸು
ಗಂಧಮಹಾರಾಜೇಂದ್ರನ ಅಡಿದಾವರೆಗಳಿಗೆ ಅಡ್ಡಬಿದ್ದು ನಿಂತಿರ್ದ ವೀರ
ಸೇನನಂ ನೋಡಿ ಅಯ್ಯಾ ಸೇನಾಪತಿಯೆ ! ನೀನು ಕ್ಷೇಮವಾಗಿದ್ದೀಯಾ, ಎ
ನ್ನ ಸೇನಾನಾಯಕರೆಲ್ಲರೂ ರೋಗ ರುಜನೆಗಳಿಲ್ಲದೆ ಕುಶಲವಾಗಿ ಇರುವ
ರೇ ಎಂದು ಅಪ್ಪಣೆಯಂ ಕೊಡಲಾಗ ವೀರಸೇನನು ಸ್ವಾಮಿ ಒಡೆಯನೆ! ನಿ
ಮ್ಮ ಚರಣಕಟಾಕ್ಷದಿಂ ಸೇನಾನಾಯಕರು ಮೊದಲಾದ ಸೇನಾಂಗವೆಲ್ಲವು
ಅತ್ಯಂತಸುಖದಿಂದಿದ್ದು ಸ್ವಾಮಿಯ ಚರಣದರ್ಶನವನ್ನೇ ಅಪೇಕ್ಷಿಸುತ್ತಾ
ಇರುವರೆಂದು ಪೇಳಲಾಗ, ಮಹಾರಾಯನು ಸಂತೋಷಭರಿತನಾಗಿ ವೀ
ರಸೇನನ ಹಸ್ತಲಾಗದಿಂ ಬರುತಿರುವ ರಾಯನ ಮುಂದುಗಡೆಯಲ್ಲಿ ಪದ್ಮಿ
ನ್ಯಾದಿ ಜಾತಿಸ್ತ್ರೀರ್ಗಳು ಕಳಾಧರನಿಂದೊಡಗೂಡಿ ನಡೆಯುತ್ತಿರಲು ವಿ
ಜಯಲಕ್ಷ್ಮೀವಿಲಾಸದಲ್ಲಿರುವ ಮುತ್ತಿನ ಹಜಾರಕ್ಕೆ ಚಿತ್ತೈಸಿ ಹಂಸತೂ

ಲಿಕಾತಲ್ಪದೋಳ್ ಕುಳಿತಿರಲು, ಆ ಸಮಯದಲ್ಲಿ ಕಳಾವತಿಯುರುಸಾಳ್ವರು ಕಳಾಧರನನುಂ ಮುಂಗಡೆಯಲ್ಲಿ ಸಾಲಾಗಿ ನಿಂತಿರ್ದವರಂ ರಾಯನು ನೋಡಿ ಸುಮತಿಯುಂ ಕರೆದು ಅಯ್ಯಾ ಮಂತ್ರಿಯೆ! ಈ ಮಾನವರದೃಷ್ಟವು ಅತಿ ದುಸ್ತರವಾಗಿ ಇರುವದು, ಅದು ಕಾರಣ ಈ ದಿವ್ಯಸ್ತ್ರೀಯರುಗಳ ಸಂರಕ್ಷಣೆವು ಪರಮೇಶ್ವರೀ ಕಟಾಕ್ಷದಿಂದಲೆ ಆಗಬೇಕೆಂದು ರಹಸ್ಯವಾಗಿ ಹೇಳುತ್ತಾ ಹೆಚ್ಚಾಗಿ ಜನರಂ ಬಿಡಬ್ಯಾಡವೆಂದು ಬಾಗಿಲ ಗೊತ್ತುಗಾರರಿಗೆ ಅಜ್ಞಾಪಿಸುತ್ತಾ, ಮುತ್ತಿನ ಸಹಜಾರಕ್ಕೆ ಎದುರಾಗಿರ್ದ ಚಿತ್ರದ ಸಹಜಾರಕ್ಕೆ ಸಾಳ್ವರಂ ಕರೆದು, ರಾಜನು ಎಲೈ ಕಳಾವತಿಯರೆ! ಈ ಸಹಜಾರದಲ್ಲಿ ಸುಖವಾಗಿ ಇರಬಹುದೆಂದು ನಸುನಗುತ ಸಾಳ್ವರಂ ಮುದ್ದುಗೊಳುತ ಆದರಣಪೂರ್ವಕವಾಗಿ ಆಲಿಂಗನವಂ ಮಾಡಿ ಎನಗೆ ಮಾಡುವ ಉಪಚಾರಂಗಳಂತೆ ಈ ಸಾಳ್ವರಿಗೂ ಅದೇ ಪ್ರಕಾರವಾಗಿ ನಾನೋಪಚಾರಂಗಳಂ ಮಾಡಬೇಕೆಂದು ಕಟ್ಟುಮಾಡಿ, ಕಳಾಧರನಂ ಕುರಿತು ಎಲಾ ವಿದೂಷಕನೆ! ಇಲ್ಲಿರುವ ಕೆಲಕಿಂಕರನಿಂದೊಡಗೂಡಿ ಕಟಕವಂ ಬಿಟ್ಟು ಕೆಳಗಿನ ಪಟ್ಟಣವಸುತ್ತಾ ಇಳಿದಿರುವ ಕಾಂಭೋಜದೇಶಾಧಿಪತಿ ಮೊದಲಾದವರ ಕಟಕಗಳಲ್ಲಿ ಕಂಡವರೆಲ್ಲರಿಗೂ ಕಾಟಗಳಂ ಮಾಡದೆ ಇಲ್ಲಿಯೆ ಕಾದಿರುವುದು ಅಪ್ಪಣೆಯನ್ನಿತ್ತು ಮುತ್ತಿನ ಸಹಜಾರಕ್ಕೆ ಬರುತ್ತಿರಲು, ಸುಮತಿಯು ಸ್ವಾಮಿ ಸನ್ನಿಧಿಯೆ! ಸಾಯಂಕಾಲವಾಯಿತು ಸ್ನಾನ ಸಂಧ್ಯಾವಂದನೆಯುಂ ಮಾಡಿ ಸುಖನಿದ್ರೆಯಂಗೈಯ್ಯಬಹುದೆಂದು ವಿಜ್ಞಾಪನೆಯಂ ಮಾಡಲಾಗ, ಸುಮತಿಗೆ ಬಿಡಾರಕ್ಕೆ ಪೋಗೂವಂತೆ ಅಪ್ಪಣೆಯಂ ಕೊಟ್ಟು, ಸ್ನಾನಮಂದಿರಕ್ಕೆ ಚಿತ್ತೈಸಿ ಪನ್ನೀರಿನಿಂದ ಜಳಕವಂ ಮಾಡಿ, ದಿವ್ಯಾಂಬರವನ್ನುಟ್ಟು ಸಂಧ್ಯಾವಂದನೆಯುಂ ನೆರವೇರಿಸಿ, ಚಾಮುಂಡಿಕಾದೇವಿಯ ಚರಣಂಗಳಂ ನೆನೆಯುತ್ತಾ ಭೋಜನಮಂದಿರಕ್ಕೆ ಬಿಜಯಂಗೈದು ಇಷ್ಟವಾದ ಮಧುರಾನ್ನವಂ ಭುಂಜಿಸಿ, ಕರ್ಪೂರವೀಳ್ಯವಂ ಸವಿದು ಕಳಾವತಿಯರಂ ಕೂಡಿ ಕಾಮನ ಕಾಳಗಗಳಲ್ಲಿ ಕೂಡಿ ಸುಂದರಾಂಗನು ರಾತ್ರಿಯೊಳ್ ಸುಖನಿದ್ರೆಯಂಗೈಯುತ್ತಿರಲು,

ಆ ಬಳಿಕ ಸೂರ್ಯನು ಉದಯಪರ್ವತವನ್ನೇರಿ ಬರುವದಂ ನೋಡಿ ಸುಮತಿ ವೀರಸೇನರೀರ್ವರು ರಾಜೇಂದ್ರನು ಎಚ್ಚರವಾದನೆ ಎಂದು

ಯೋಚಿಸುತ್ತಾ, ಹಜಾರದ ಬಾಗಿಲಲ್ಲಿ ಕುಳಿತಿರಲು, ರಾಜೇಂದ್ರನು ನಿದ್ರೆಯಿಂದ ಎಚ್ಚೆತ್ತು ಪರಮೇಶ್ವರಿಯ ಪಟವಂನೋಡಿ ನಮಸ್ಕರಿಸಿ, ಪರ್ಯಂಕದಿಂದೆದ್ದು ಪಾದುಕೆಗಳಂ ಮೆಟ್ಟಿಕೊಂಡು ಬರುತ್ತ ಪಾರ್ಶ್ವದೊಳ್ ಕೈಗಳಂ ಮುಗಿದು ನಿಂತಿರ್ದ ಸುಮತಿ ವೀರಸೇನರೀರ್ವರಂ ನೋಡುತ್ತಾ ಮುಂದುಗಡೆಯಲ್ಲಿರ್ದ ಮುತ್ತಿನಪೀಠದಲ್ಲಿಕುಳಿತು ಮುಖಮಜ್ಜನವಂ ಮಾಡುತ್ತಾ ದೂರದಲ್ಲಿ ಕೈಗಳಂ ಕಟ್ಟಿಕೊಂಡು ನಿಂತಿರ್ದ ಚಾರವರ್ಣನು ದೇಶಾಧಿಪತಿಗಳು ಸ್ವಯಂವರನಿಮಿತ್ತವಾಗಿ ಆಡುವ ಸಮಾಚಾರಂಗಳೆಲ್ಲವಂ ವಿಜ್ಞಾಪನೆಯಂ ಮಾಡಲಾ ಸಮಾಚಾರಂಗಳೆಲ್ಲವಂ ಕೇಳಿ, ರಾಯನು ವೀರಸೇನನ ಮುಖವಂ ನೋಡಿ ನಸುನಗುತ ಪ್ರೀತಿಯಿಂದೆದ್ದು ಮಜ್ಜನಗೃಹವನ್ನೈದಿ ಮಜ್ಜನವಂ ಮಾಡಿ ದಿವ್ಯಾಂಬರವನ್ನುಟ್ಟು ಸಂಧ್ಯಾವಂದನೆ ಮೊದಲಾದ ನಿತ್ಯಕರ್ಮಂಗಳಂ ನೆರವೇರಿಸಿ, ಭೋಜನಶಾಲೆಗೆ ಬರುತ ಸೇನಾಪತಿಯನ್ನೋಡಿ ಅಯ್ಯಾವೀರಸೇನನೆ! ಗಜರಥವನ್ನಲಂಕರಿಸಿ ಮಿತಸೇನೆಯಿಂದಕೂಡಿ ಬಾಗಿಲೊಳ್ ಕಾದಿರೆಂದು ಕಟ್ಟಳೆಮಾಡಿ ಕಳುಹಿಸಿ, ರಾಯನು ಷಡ್ರಸೋಪೇತವಾದ ಅನ್ನವಂ ಭುಂಜಿಸಿ ಕರ್ಪೂರ ವೀಳ್ಯವಂ ಮೆಲ್ಲುತ ಹಜಾರಕ್ಕೆ ಬಂದು ಕಿರೀಟಕುಂಡಲಗಳಿಂದ ಅಲಂಕೃತನಾಗಿ ಪದ್ಮಿನ್ಯಾದಿ ಜಾತಿಸ್ತ್ರೀಯರುಗಳಿಂದ ಪರಿವೃತನಾಗಿ ಸುಮತಿಯ ಕರಲಾಗದಿಂದ ಹಜಾರದಬಾಗಿಲೊಳ್ ಕಾದಿರ್ದ ಗಜರಥವನ್ನೇರಿ ವೀರಸೇನ ಸುಮತಿ ಈರ್ವರು ಹಿಂದುಗಡೆಯಲ್ಲಿ ಚಾಮರವಂ ಬೀಸುತ್ತಿರಲು, ಭೇರೀಪಟಹಶಬ್ದಂಗಳು ಭೋರೆಂದು ಮೊರೆಯುತ್ತಿರಲು, ಪದ್ಮಿನ್ಯಾದಿಜಾತಿಸ್ತ್ರೀಯರು ದಿವ್ಯಾಂಬರಾಭರಣಂಗಳಿಂದಲಂಕೃತರಾಗಿ ದೇವಗಾನಂಗೈಯುತ್ತಿರಲು; ರಾಜೇಂದ್ರನು ವಿಜಯನಗರದ ರಾಜಬೀದಿಯೊಳ್ ಸೇನಾಪರಿವೃತನಾಗಿಹೊರಡುವಕಾಲದಲ್ಲಿ ಪುರಜನರು ಪದ್ಮಿನ್ಯಾದಿಜಾತಿಸ್ತ್ರೀಯರ ದಿವ್ಯಸೌಂದರ್ಯಂಗಳನ್ನವಲೋಕಿಸಿ ಹಿಂದುಮುಂದುತೋರದೆ ಎತ್ತಲ್ಲಿ ನಿಂತಿರ್ದ ಸ್ತ್ರೀಪುರುಷರು ಅಲ್ಲಲ್ಲಿ ಜೋನಿಂತು ಆಶ್ಚರ್ಯವನ್ನೈದಿ, ರತಿದೇವಿಯೊ ಮನೋಬುದ್ಧಿ ಚಿತ್ತ ಅಹಂಕಾರಂಗಳೆ ನಾರೀಸುಂದರರೂಪವಂತಾಳ್ದು ಬಂದರೋ ಎಂದು ಭ್ರಾಂತಿಚಿತ್ತರಾಗಿ ಯೋಚಿಸುತ್ತಿರಲು, ಸುಗಂಧರಾಜೇಂದ್ರನು ಅರಮನೆಯಂ ಕುರಿತು ಬರುವ ವರ್ತಮಾನವಂ ವಿಜಯನ

ಕ್ರರಾಯನು ಕೇಳಿ ಬಾಗಿಲ ಸಮೀಪಕ್ಕೆ ಬಂದು ಎದುರ್ಗೊಂಡು ದಂಡಪ್ರಣಾಮವಂ ಮಾಡಿ ನಿಂತಿರಲು, ಆಕಾಲದಲ್ಲಿ ರಾಜೇಂದ್ರನು ಗಜರಥದಿಂದಿಳಿದು ಕಳಿಂಗರಾಯನ ಹಸ್ತಲಾಗದಿಂ ಬರುತ ರಾಯನು ಸುಮತಿಯ ಮುಖವಂ ನೋಡಲಾ ಸುಮತಿಯು ಪದ್ಮಿನ್ಯಾದಿ ಜಾತಿಸ್ತ್ರೀರುಗಳಂ ಕರೆದುಕೊಂಡು ರಾಯನ ಮುಂದುಗಡೆಯಲ್ಲಿಯೆ ಸುಮತಿಯು ನಡೆದು ಬರಲು, ರಾಜೇಂದ್ರನು ಮೆಲ್ಲಮೆಲ್ಲನೆ ಅಲ್ಲಲ್ಲಿ ಪರಾಮರಿಸುತ್ತಾ ವಂದಿಮಾಗಧರು ಪೇಳುವ ಬಿರುದುಪದ್ಯಂಗಳಂ ಕೇಳುತ್ತಾ ಅಂತಃಪುರದ ಮುಂದುಗಡೆಯಲ್ಲಿರ್ದ ಮುತ್ತಿನ ಸಹಜಾರದಲ್ಲಿ ಕಟ್ಟಿರುವ ಕಾಂಡಪಟದ ಸಮೀಪದಲ್ಲಿರ್ದ ಮಣಿಪೀಠದಲ್ಲಿ ಕುಳಿತಿರಲು, ವಿಜಯವರ್ಮರಾಯನು ಪ್ರಣಾಮವಂ ಮಾಡಿ ಪಾರ್ಶ್ವದಲ್ಲಿ ನಿಂತಿರಲು, ಸುಮತಿಯು ವಿಪ್ರಸ್ತ್ರೀರುಗಳನ್ನು ರಾಜೇಂದ್ರನ ಸಮೀಪದಲ್ಲಿ ನಿಲ್ಲಿಸಿ ತಾನು ಕಳಿಂಗರಾಯನ ಸಮೀಪದಲ್ಲಿ ನಿಲ್ಲಲು, ಆಗ ಕಳಿಂಗರಾಯನು ಸುಗಂಧರಾಜೇಂದ್ರನ ಶೌರ್ಯ ಧೈರ್ಯ ಔದಾರ್ಯ ಸೌಂದರ್ಯಾದಿ ಗುಣಂಗಳಿಗೆ ಆಶ್ಚರ್ಯಂಬಟ್ಟು ವಿಸ್ಮಿತನಾಗಿ ನಿಂತಿರುವ ಭಾವವನ್ನರಿತು, ಸುಮತಿಯು ಎಲೈ ಕಳಿಂಗಭೂಪತಿಯೆ ! ಸೌಗಂಧಿಕಾದೇವಿಗೆ ವರ್ತಮಾನವಂ ತಿಳುಹಿ ಈ ಪದ್ಮಿನ್ಯಾದಿ ನಾಲ್ಕು ಜಾತಿಸ್ತ್ರೀರುಗಳಂ ಅಂತಃಪುರಕ್ಕೆ ಕರೆದುಕೊಂಡು ಪೋಗುವಂತೆ ಸುಗಂಧಮಹಾರಾಜೇಂದ್ರನ ಅಪ್ಪಣೆ ಆಗಿಇದೆ ಎಂದು ಪೇಳುತ್ತಿರಲು, ಅಷ್ಟರೊಳ್ ಚಿತ್ರರೇಖೆಯು ಕಾಂಡಪಟದ ಮುಂದುಗಡೆಯಲ್ಲಿ ನಿಂತು ರಾಜೇಂದ್ರನ ಸಮೀಪದಲ್ಲಿ ನಿಂತಿರುವ ವಿಪ್ರಸ್ತ್ರೀರುಗಳಂ ನೋಡಿದ ಮಾತ್ರದಿಂದಲೆ ವಿಸ್ಮಿತಳಾಗಿ ಚಿತ್ರದಲ್ಲಿ ಬರೆದಿರುವ ಭಾವಚಿತ್ರದ ಬೊಂಬೆಯೊ ಎಂಬಂತೆ ಸುಮ್ಮನೆ ನಿಂತಿರ್ದ ಚಿತ್ರರೇಖೆಯಂ ನೋಡಿ ಕಾಂಡಪಟದಹಿಂದುಗಡೆಯಲ್ಲಿ ಮಣಿಮಂಚದೊಳ್ ಕುಳಿತು ಈ ವಿಪ್ರಸ್ತ್ರೀರೂಪಲಾವಣ್ಯಕ್ಕೆ ಮೋಹಿತಳಾಗಿ ಏನೂತೋರದೆ ಇರುವ ಸೌಗಂಧಿಕಾದೇವಿಯಂ ನಿರೀಕ್ಷಿಸಿ ಲೀಲಾಶುಕವು ತನ್ನ ಮನದೊಳ್ ಈ ವಿಪ್ರಸ್ತ್ರೀಯರಂ ನೋಡಿ ಸೌಗಂಧಿಕಾದೇವಿ ಮೊದಲಾದ ಅಂತಃಪುರದಸ್ತ್ರೀರೆಲ್ಲರೂ ವಿಸ್ಮಿತರಾದರೆಂದು ಯೋಚಿಸಿ, ಲೀಲಾಶುಕವು ಕಾಂಡಪಟದ ಸಮೀಪದಲ್ಲಿ ನಿಂತಿರ್ದ ಚಿತ್ರರೇಖೆಯ ಭುಜದಮ್ಯಾಲೆ ಹಾರಿಬಂದು ಕುಳಿತು ತುಟಿಯಂ ಕೊಕ್ಕಿ

ನಿಂದ ಕಟ್ಟಿ ಯುಜ್ಜ್ವಲವಾದುದಾಗ ಸುಗಂಧನೃಪಾಲಕನುಂ ನಿಂತಿ ವಿಜಯವರ್ಮರಾಯನು ಪೊವಲಾದವರ ಮುಖಮಂ ನೋಡಿ ಹಾಸ್ಯ ಮಾತುಗಳಂ ಪೇಳಿ ನಗುತ್ತಾಯಿರಲು, ಆಗ ಚಿತ್ರಲೇಖೆ ನಾಚಿಗೊಂಡು ಸೆರಗಿನಿಂದ ಮುಖಮಂ ಮುಚ್ಚುತ್ತ ನಸುನಗುತ ತೆರೆಯ ಮರೆಯಿಂ ಕೆ ಪೋಗಿ ಸೌಗಂಧಿಕಾದೇವಿಯು ಹಸ್ತದಿಂದ ಮಾಡಿದ ವೀಳ್ಯದ ಮಡಪುಗಳಂ ರತ್ನದ ತಟ್ಟೆಯೊಳಿಟ್ಟು ಮಣಿಹಾರಂಗಳಂ ಮತ್ತೊಂದು ತಟ್ಟೆಯೊಳ ಮಡಗಿ ಮುತ್ತಿನ ಸೌಗಾಸುಗಳಂ ಪೊಂದಿಸಿ ಚಿತ್ರಲೇಖೆಯು ಕಾಂಡಪಬದಿಂ ಪ್ರೊರಮಿಟ್ಟು ರಾಜೇಂದ್ರನ ಸಮೀಪದಲ್ಲಿ ಬಂದು ನಿಂತು ಮಣಿಹಾರಂಗಳಂ ನೊಪ್ಪಿಸಿ ನಸುನಗುತ ವೀಳ್ಯದ ಮಡಪುಗಳಂ ಆ ರಾಜೇಂದ್ರನ ಹಸ್ತವು ಸೋಂಕುವಂತೆ ಒಪ್ಪಿಸಿ ಪಾರೆ ನೋಟದಿಂದ ರಾಯನಂ ನೋಡುತ್ತಾ ಸ್ವಾಮಿ! ಈ ವೀಳ್ಯದ ಮಡಪುಗಳಂ ತಾವೆ ಒಪ್ಪಿಸಿಕೊಳ್ಳಬೇಕೆಂದು ನಮ್ಮ ದೇವಿಯು ಪಾದಕ್ಕೆ ವಿಜ್ಞಾಪನೆಯಂ ಮಾಡಿದಳೆಂದು ಪೇಳ್ವ ಚಿತ್ರಲೇಖೆಯ ಮಾತುಗಳಂ ಕೇಳಿ ಆನಂದಪರವಶನಾಗಿ ವೀಳ್ಯಮಂ ಮೆಲ್ಲುತ್ತಾ ರಾಯನು ದಿವ್ಯಸ್ತ್ರೀರ ಕಂಠಗಳಿಗೆ ಮಣಿಹಾರಂಗಳಂ ಹಾಕಿ ಚಿತ್ರಲೇಖೆಯ ಹಸ್ತದಲ್ಲಿ ಸ್ತ್ರೀಗಳ ಕರಂಗಳಂ ನಿತ್ತು ಇವರು ದ್ವೀಪಾಂತರಗಳಲ್ಲಿರುವ ಸುಕುಮಾರಾಂಗಿಯರು ಅತ್ಯಂತ ವಿಶ್ವಾಸಪೂರ್ವಕಮಾಗಿ ಸಂರಕ್ಷಣೆಯಂ ಮಾಡಬೇಕೆಂದು ಅಪ್ಪಣೆಯಂ ಕೊಡಲು, ಆಗ ಚಿತ್ರಲೇಖೆಯು ದಿವ್ಯಸ್ತ್ರೀಯರುಗಳಂ ಕರಕೊಂಡು ಅಂತಃಪುರಕ್ಕೆ ಪೋಗುತ್ತಿರಲು, ಸುಗಂಧರಾಜೇಂದ್ರನು ಪ್ರೀತಿಯಿಂದೆದ್ದು ಆನಂದಭರಿತನಾಗಿ ಹಾವುಗೆಗಳಂ ಮೆಟ್ಟಿಕೊಂಡು ವಿಜಯವರ್ಮರಾಯನ ಹಸ್ತಲಾಗದಿಂ ಬರುತ ಬಾಗಿಲಲ್ಲಿರ್ದ ಗಜರಥದ ಸಮೀಪಕ್ಕೆ ಬಂದು ರಥಾರೂಢನಾದ ರಾಜೇಂದ್ರನಿಗೆ ಪ್ರಣಾಮಮಂ ಮಾಡಿ ವಿಜಯವರ್ಮರಾಯನು ತನ್ನ ನಿಜಾಂತಃಪುರಕ್ಕೆ ಪೋಗುತ್ತಿರಲು, ಅತ್ತಲಾ ಸುಗಂಧರಾಜೇಂದ್ರನು ಗಜರಥಮಂ ನೇರಿ ನಿಜಸೇನಾ ಕಟಕಮಂ ನೇರಿ ಗಜರಥದಿಂ ಬಳಿದು ವಿಜಯಲಕ್ಷ್ಮೀ ವಿಲಾಸಮಂ ನೈದಿ ಲೀಲಾವಿನೋದದಿಂ ದಿರುತ್ತಿರ್ದ ನೆಂಬಲ್ಲಿಗೆ * * * *

ಗದ್ಯ—ಕುಂಡಲಿಶಯನ ಖಂಡಪರಶು ಪುಂಡರೀಕಭವಾ ಖಂಡಲ ಪ್ರಮುಖ ನಿಖಿಲಸುರನರ ಪರಿಭವ ಪರಿಣತ ಪ್ರಚಂಡ ಬಲ ಚಂಡ

ಮುಂಡ ವಿಖಂಡನ ನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸಮರ್ಥಂಕಷ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತಗ್ರಂಥ ವಿವಿಧ ಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸ ಗೋತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ ನರಪತಿ ಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯ ವೆಂಬ ಈ ನವೀನ ಕೃತಿಯೊಳ್ ಪಾತಿವ್ರತ್ಯ ಪ್ರಭಾವಂ ಸಾಧಿಸಿದನೆಂಬ ಅಷ್ಟತ್ರಿಂಶನೋಧ್ಯಾಯಕ್ಕೆ ಮಂಗಳಂ ಮಹಾ.

ಅಷ್ಟತ್ರಿಂಶನೋ ಅಧ್ಯಾಯ ಸಂಪೂರ್ಣವು.



ಶ್ರೀರಸ್ತು.

ಅಷ್ಟತ್ರಿಂಶನೋಽಧ್ಯಾಯ ಪ್ರಾರಂಭಃ.

ಶ್ರೀಚಾಮುಂಡಿಕಾಂಬಾ ದೇವ್ಯೈನಮಃ

ಪೂರ್ವದಲ್ಲಿ ದುರ್ವಾಸರ ಶಾಪದಿಂದ ಸ್ವರ್ಗಲೋಕವು, ಅಮರಾವತಿ ಪಟ್ಟಣವು, ಅಧಿಪತಿಯಾದ ದೇವೇಂದ್ರನು, ಅವನಪತ್ನಿಯಾದ ಶಚೀದೇವಿಯು, ಐಂದ್ರೇಂದ್ರಾಣಿಗಳ ಭೋಗೋಪಕರಣಂಗಳು, ಇವೆಲ್ಲವು ಅದೃಶ್ಯಂಗಳಾಗಿ ಎಲ್ಲಿಗೋ ಹೋಗಿ ಇರುವಲ್ಲಿ ಸ್ವರ್ಗಲೋಕದಲ್ಲಿ ಬಹು ಸಂತೋಷದಿಂದ ಇರುವ ಕಾಮಧೇನುವು ಸ್ವರ್ಗವೆಲ್ಲಾ ಅಸ್ವಸ್ಥ್ಯವಾಗಿ ಅಮರಾವತೀ ಪಟ್ಟಣವು ರಾಕ್ಷಸಾಕ್ರಾಂತವಾಗಿರಲು ಭೂಲೋಕದಲ್ಲಿ ಯಾರು ಯಾರು ಏನು ಮಾಡಿದರೂ ಕೇಳುವವರಿಲ್ಲದ್ದಾಗಿ ತಿಳಿದು, ತಾನು ಬ್ರಹ್ಮದೇವನಿಂದ ಜಗದ್ರಕ್ಷಣಾರ್ಥವಾಗಿ ಐಸ್ಸುರಭಿ ರೂಪದಿಂದ ಸೃಜಿಸಲ್ಪಟ್ಟದ್ದಂ ತನ್ನಿಂದಾ ಉತ್ಪನ್ನಂಗಳಾದ ಲೋಕೋಪಕಾರಂಗಳಾದ ಧೇನುಗಳಂ ಅನೇಕ ಕೃಷ್ಯಾದಿ ಕಾರ್ಯೋಪಯುಕ್ತಂಗಳಾದ ವೃಷಭಂಗಳಂ, ಬ್ರಾಹ್ಮಣರುಗಳಂ ಋಷಿಗಳಂ ದೇವತೆಗಳ

ಮೊದಲಾದ ತನ್ನ ಸಂತತಿಯಿಂ ನೆನ ನೆನದು, ಪೂರ್ವದಲ್ಲಿ ದೇವೇಂದ್ರನು ಅ ಮರತ್ವವು,ಬಹು ಪರಾಕ್ರಮವು, ಸಕಲರಾಕ್ಷಸರಂ ಜಯಿಸಿ ಶ್ರಮವಿಲ್ಲದೆ ಇರುವ ಶಕ್ತಿಯು ಬರಬೇಕೆಂದು, ಸುರಭಿಯಾದ ತನಗೆ ಕರುವಾಗಿ ಪುಟ್ಟಿ ತನ್ನ ಸ್ವಸ್ವಬಲದಿಂದ ಅವಷ್ಟನ್ನು ಸಂಪಾದಿಸಿ, ದೇವೇಂದ್ರನಾಗಿ ಇರು ತ್ತ ತನ್ನ ಕಂಡರೆ ಮಾತೃ ಭಾವದಿಂದ ಇರುವನು, ಆದ್ದರಿಂದ ತನಗೆ ದೇ ವೇಂದ್ರನು ಪುತ್ರನಿಗಿಂತಲೂ ಹೆಚ್ಚಾಗಿಯೂ ಸ್ವರ್ಗಾಧಿಪತ್ಯದಿಂದ ತನಗೆ ಸ್ವಾಮಿಯಾಗಿಯೂ ಇರುವನು, ಇಂಥಾ ಪುತ್ರರೂಪನಾದ ಇಂದ್ರನಂ ಬಿ ಟ್ಟು ಇರುವದು ನನ್ನಿಂದ ಶಕ್ಯವಲ್ಲಾ, ಲೋಕದಲ್ಲಿ ಹಿರಿಯುವರು ಮಾತೃ ಪಿತೃ ದುಃಖಂಗಳಂ ಭಾರ್ಯಾ ಭರ್ತೃ ದುಃಖಂಗಳಂ ಪುತ್ರೀ ಪುತ್ರ ದುಃ ಖಂಗಳಂ ದುಸ್ಸಹಂಗಳಾಗಿ ಹೇಳುವರು, ಅದರೊಳಗೂ ಆ ಮಾತೃ ಪಿತೃ ದುಃಖಗಳು ಬಾಲ್ಯದಲ್ಲಿ ಆಗಬಾರದು, ಭರ್ತೃ ಭಾರ್ಯಾ ದುಃಖಗಳಂ ಬುವದು ಯವ್ವನದಲ್ಲಿ ಬರಬಾರದು, ಪುತ್ರೀಪುತ್ರಶೋಕಂಗಳು ವೃದ್ಧಾ ಪ್ಯದಲ್ಲಿ ಸಂಭವಿಸ ಬಾರದು, ಹೀಗೆ ಇರುವಲ್ಲಿ ಬಹು ವಯಸ್ಸಾದ ನನ ಗೆ ಅಂಥಾದೇವೇಂದ್ರನು ಕಣ್ಣಿನಲ್ಲಿಯೂಕಾಣದೆ ಕಿವಿಯಲ್ಲಿಯೂ ಕೇ ಳದೆ ಮನಸ್ಸಿಗೂ ಗೋಚರವಿಲ್ಲದೆ ಇರುವದಕ್ಕಿಂತಲು ದುಃಖವೆಂಬು ವದು ಬೇರೆಯಿಲ್ಲಾ, ಪ್ರಪಂಚದಲ್ಲಿ ಯಾರಿಗೆ ಯಾವ ಯಾವ ವಸ್ತುಗ ಳಂ ಬಿಟ್ಟು ಅಗಲಿದ್ದರಿಂದ ದುಃಖಗಳುಬಂದು ಇರೂವದೊ? ಪುನಃ ಅವರಿಗೆ ಅಂಥಾ ವಸ್ತುವಿನ ಪ್ರಾಪ್ತಿಯಿಂದ ದುಃಖ ಶಾಂತಿ ಆಗುವದೆಂದು ಹೇಳು ವರು, ಅಥವಾ ವಿವೇಕ ಜ್ಞಾನದಿಂದಲೂ ವಿರಕ್ತ ಭಾವದಿಂದಲೂ ಪುಣ್ಯ ತೀರ್ಥಸ್ನಾನ ಪುಣ್ಯದೇಶ ಸಂಚಾರಗಳಿಂದಲೂ ಆಶ್ರಮಾಂತರ ಸ್ವೀಕಾರ ದಿಂದಲುಂ ಶೋಕ ನಾಶನವಂ ಹೇಳೂವರು, ಅಂಥಾ ಇಂದ್ರನಂ ತಿರಗಿ ಯಾವಾಗ ಎಲ್ಲಿ ಕಾಣುವೆನೊ ತಿಳಿಯಲಿಲ್ಲಾ, ವಿವೇಕಜ್ಞಾನವು ವಿರಕ್ತಿ ಯು ಪಶುತ್ವ ಉಳ್ಳವರಿಗೆ ಬರಲರಿಯದು, ಆಶ್ರಮಾಂತರ ಸ್ವೀಕಾರವು ಬ್ರಾಹ್ಮರಿಗೂ ಕ್ಷತ್ರಿಯರಿಗೂ ಯೋಗ್ಯವಲ್ಲದೆ ಮತ್ತೊಬ್ಬರಿಗೂ ಸಲ್ಲದು, ಪುಣ್ಯತೀರ್ಥ ಸ್ನಾನ ಪುಣ್ಯ ದೇಶ ಸಂಚಾರಗಳಾದರೇ ಮಾಡಬಹುದು ಎಂದು ನಿಶ್ಚೈಸಿಕೊಂಡು, ತನ್ನವತ್ಸ ಸಹಿತವಾಗಿ ಅಲ್ಲಿಂದಾ ಹೊರಟು ತಾಯಿ ಮನೆಯಿಂದಾ ಅತ್ತೆಯ ಮನೆಗೆ ಕಳುಹಿಸಲ್ಪಟ್ಟ ಹೆಣ್ಣಿನಂತೇ,

ತಿಳಿದು ಸರ್ಪವಂ ಕೊಲ್ಲಲು ತನ್ನಿಂದ, ಶಕ್ಯವಲ್ಲಾ ಅಶಕ್ಯವಾದ ಕಾರ್ಯವೂ ಕೂಡಾ ಉಪಾಯದಿಂದ ಶಕ್ಯವಾಗುವದು ಎಂದು ನಿಶ್ಚೈಸಿ, ಆಪ್ರದೇಶದಲ್ಲಿ ಇರುವ ಪಟ್ಟಣದ ರಾಜೇಂದ್ರನ ಬಾಲ ಕುಮಾರನ ಕೈಯೊಳಿರುವ ಮುತ್ತಿನ ಸರವಂ ಎಲ್ಲರು ಕಾಣುವಂತೆ ಕೊಕ್ಕಿನೋಳ್ಕಚ್ಚಿ ಕೊಂಡು ಬರುತ್ತಾ, ಆರಾಜಭಟರ ಮುಂದೆ ಸರ್ಪವಿರುವ ಆಮರದ ಪೊಟ್ಟರೆಯೋಳ್ ಹಾಕಿ ಬಿಡಲು, ಅದಂ ಕಂಡು ಆರಾಜಭಟರು ಮರದ ಪೊಟ್ಟರೆಯಂ ಬಿಡಿಸಿ ಆಭರಣವಂ ತೆಗಿಯುವಾಗ ಅಲ್ಲಿ ಆರ್ಭಟಿಸುವ ಸರ್ಪವಂ ಕಂಡು ಕೊಂದು ಆಭರಣವಂ ತೆಗದುಕೊಂಡು ಹೋದ ತರುವಾಯ ಕಾಗೆಯು ಮರಿಗಳಿಂ ದೊಡಗೂಡಿ ಬಹುಸಂತೋಷದಿಂದ ಸುಖವಾಗಿ ಇತ್ತು.

ಎಂದು ಸುರಭಿಯುತಾನು ಧೈರ್ಯದಿಂದ ತನ್ನ ಕೊಂಬುಗಳಿಂದ ಎರಡು ದಡಂಗಳಂ ತಿವಿದು ಕಾಲುಗಳಿಂ ಕೆರದು ಪೈಸರವಂ ಮಾಡಿ ಹಳ್ಳದ ಮಧ್ಯಕ್ಕೆ ಬಾಯಿಂದ ಹುಲ್ಲು ಸೊಪ್ಪುಗಳಂ ಕಚ್ಚಿಕೊಂಡು ತಂದು ಹಾಕಿ ಕರುವಂ ಮೇಲಕ್ಕೆ ಕರದುಕೊಂಡು ಬಂದು ಭೂಲೋಕವಂ ಸಂಚರಿಸುತ್ತಾ, ಅಲ್ಲಲ್ಲಿ ಇರುವ ಕ್ಷೇತ್ರ ತೀರ್ಥಗಳ ಸಂಬಂಧದಿಂದ ಯಥಾಪ್ರಕಾರ ಶಕ್ತಿ ಉಂಟಾಗಿ ಮನೋಗತಿ ಮಾತ್ರದಲ್ಲಿ ನೆನದ ತಾವುಗಳಿಗೆ ಕರುಸಹಿತವಾಗಿ ಬರುತ್ತಾ, ಒಬ್ಬರಿಂದಲು ತನ್ನ ಹಿಡಿಯಲಶಕ್ಯವಾದ ಸಾಮರ್ಥ್ಯ ಉಳ್ಳದ್ದಾಗಿ ಭೂಲೋಕದಲ್ಲಿ ತನ್ನ ಸಾನ್ನಿಧ್ಯದಿಂದ ಸಕಲ ಸಂಪತ್ಸಮೃದ್ಧಿಯನ್ನುಂಟು ಮಾಡುತ್ತಾ, ಅಲ್ಲಿಲ್ಲಿ ಪ್ರದೇಶಗಳಂ ಪರಿಶುದ್ಧಂಗಳಾಗಿ ಮಾಡುತ್ತಾ, ಜಂಬೂದ್ವೀಪದೊಳಿರುವ ಕ್ಷೇತ್ರಂಗಳೆಲ್ಲಾ ಸಂಚರಿಸಿದ್ದಾಯಿತೆಂದು ಪ್ಲಕ್ಷದ್ವೀಪವಂ ಕುರಿತು ಪೋಗಿ, ಅಲ್ಲಿರುವ ನದಿಗಳಂ ಪರ್ವತಗಳಂ ಕ್ಷೇತ್ರಗಳಂನೋಡಿ ಅದಕ್ಕೆ ಮುಂದೆ ಇರುವ ಕುಶದ್ವೀಪವಂ ಕುರಿತು ಬಂದು, ಇದೆ ದೇವೇಂದ್ರನಿಂದ ನನಗೆ ವಾಸಾರ್ಹವಾಗಿ ಹೇಳಲ್ಪಟ್ಟದ್ದು ಎಂದು ನೆನೆದು ಅಲ್ಲಿರುವ ಪುಣ್ಯದೇಶಂಗಳೆಲ್ಲವಂ ತಿರುಗಿತಿರುಗಿ ಸಂಚರಿಸಿ ನೋಡುತ್ತಾ ದರ್ಭೆಗಳಿಂದಲುಂ ತೃಣಗಳಿಂದಲುಂ ನಿಬಿಡವಾಗಿ ಎಂಟುಲಕ್ಷಯೋಜನ ಉಳ್ಳ ಘೃತ ಸಮುದ್ರದಿಂದ ಸುತ್ತುವರಿದು ಉದ್ಭಿದ, ವೇಣುಮಂತ್ರ, ಸ್ವೈರಥ, ಲಂಬನ, ಧೃತಿ, ಪ್ರಭಾಕರ, ಕಪಿಲ ಇಂತೆಂಬ ಪ್ರಸಿದ್ಧರಾ

ಗಿ ಇರುವ ಜ್ಯೋತಿಷ್ಮಂತ ಮಹಾರಾಯನ ಮಕ್ಕಳಾದ ಏಳುಮಂದಿ
ಇಂದಲು ಏಳುಖಂಡ ರೂಪದಿಂ ಪರಿಪಾಲಿತವಾಗಿ ಇವರ ನಾಮಂಗಳುಳ್ಳ
ಏಳು ವರ್ಷಂಗಳಿಂದಲುಂ ಶೋಭಿತವಾಗಿ, ಅಲ್ಲಿ ಇರುವ ಸುರಾಸುರ
ಗಂಧರ್ವ ಕಿನ್ನರ ಕಿಂಪುರುಷರುಗಳಿಂದಲುಂ, ಬ್ರಾಹ್ಮಣ ಕ್ಷತ್ರಿಯ ವೈಶ್ಯ
ಶೂದ್ರ ಮೊದಲಾದ ವರ್ಣಾಶ್ರಮ ಧರ್ಮಂಗಳಿಂದಲುಂ, ಮಂದೇಹರಿಂದ
ಲುಂ ಯುಕ್ತವಾಗಿ ವಿಧೂಮ, ಹೇಮ, ದ್ಯುತಿಮಂತ, ಪುಷ್ಪವಂತ, ಕುಶೇ
ಶಯ, ಹರಿ, ಮಂದರಗಳೆಂಬ ಈ ಏಳು ಪರ್ವತಂಗಳಿಂದಲುಂ, ಇನ್ನೂ ಉ
ಪ ಪರ್ವತಗಳಿಂದಲುಂ ಪ್ರಕಾಶವಾಗಿ ಧೂತಪಾಪ, ಶಿವಾ, ಪವಿತ್ರಾ, ಸಮ್ಮ
ತಾ, ವಿದ್ಯುದಂಭಾ, ಮಹಿ, ಸರ್ವಪಾಪಹರಾ ಇಂತೆಂಬ ಏಳುಮಹಾ ನದಿ
ಗಳಿಂದಲುಂ ಉಪನದಿಗಳಿಂದಲುಂ ಸಹಿತವಾಗಿ ಎಂಟುಲಕ್ಷ ಯೋಜನಉಳ್ಳ
ಕುಶದ್ವೀಪದಲ್ಲಿ ಸಂಚರಿಸುತ್ತಾ, ಅಲ್ಲಿ ಇರುವ ಪುಣ್ಯ ಭೂಮಿಗಳಲ್ಲಿ ವಿಹರಿ
ಸುತ್ತಾ ಇರಲು, ಅಲ್ಲಿ ಇರುವ ವಿಧೂಮವೆಂಬ ಮಹಾಪರ್ವತದ ಮೂಲಗ
ಹೆಯಲ್ಲಿ ಐವತ್ತು ಯೋಜನದಿಂದ ಅಜಗೆಬಹುವಿಸ್ತಾರವಾಗಿ ಅನೇಕವಾದ
ಉಕ್ಕಿನ ಪ್ರಾಕಾರಗಳಿಂದಲು, ದಶದಿಕ್ಕುಗಳಲ್ಲಿಯು ಕ್ರಿಮಿಗಳೂ ಕೂಡ
ಸಂಚರಿಸುವದಕ್ಕೆ ಅಶಕ್ಯವಾದ ಕಾಲಚಕ್ರದಂತೆ ತಿರುಗುವ ಉಕ್ಕಿ
ನ ಚಕ್ರಗಳಿಂ ನಿರ್ಮಿಶಿದ ದ್ವಾರಗಳಿಂದಲುಂ, ಬಿಬ್ರಿಂದಲೂ ಕಾಣಲಶಕ್ಯ
ವಾಗಿ ಪಿಶಾಚಗಳಿಂದಲೂ ಪ್ರವೇಶಿಸಲು ದುರ್ಘಟವಾಗಿ ಮಯ, ವಾ
ದನಾ, ಪುರೀಷಯೆಂಬ ಹೆಸರು ಉಳ್ಳದ್ದಾಗಿ ವಿಷಗಳ ತುಂಬಿ ತುಳುಕುವ
ಅಗಳುಗಳಿಂದ ವಿಷಮಯವಾದ ಮುಳ್ಳು ಮರಗಳ ಬೇಲಿಯಿಂದ ವೇಷ್ಟಿ
ತವಾಗಿ ಎಂಟು ದಿಕ್ಕಿನೊಳ್ ಇರುವ ಪರ್ವತಾದಿಗಳಂ ಕತ್ತರಿಸುವ ಮ
ಹಾಕೀಲು ಕತ್ತರಿಗಳಿಂದ ಕೀಲಿತವಾಗಿ ಸೂರ್ಯಮಂಡಲದಂತೆ ಅತಿವೇಗದಿಂ
ದ ತಿರುಗುವ ಪಟ್ಟಣದಲ್ಲಿ ಬಹುಸಾಧನಾದಿಗಳಾಗಿ ಭಯಂಕರರಾದ ಅ
ನೇಕ ಬಲವ ರಾಕ್ಷಸರಿಂದ ಸೇವಿತನಾಗಿ ಮೂತ್ರೀಕರಿಸಿ ಬಂದಿರುವ ಕ
ತ್ರಿಶಿರೋಪಾಧಿಯಲ್ಲಿ ಅನಮಿಷರ ಜೀವ ತಿಳಿಯದೆ ಕರೀ ಮೇಘದ ಸ
ಮೂಹದೋಪಾದಿಯಲ್ಲಿರುತ್ತಾ, ಅನೇಕ ಗುಹೆಗಳೇ ಬಾಯಿಗಳಾಗಿ ಆ
ಹಾರಂ ಗೊಳ್ಳುತ್ತಾ, ಅನೇಕ ರಂಧ್ರಂಗಳೆ ಕಣ್ಣಾಗಿ ನೋಡುತ್ತಾ, ಅನೇ
ಕ ಹಳ್ಳಂಗಳೆ ಕಿವಿಗಳಾಗಿ ಕೇಳುತ್ತಾ, ಅನೇಕ ಗುಡ್ಡಂಗಳೆ ಕಾಲ್ಗಳಾಗಿ

ನಡೆಯುತ್ತಾ, ಅನೇಕ ವೃಕ್ಷಂಗಳ್ ತೋಳ್ಗಳಾಗಿ ಬೀಸುತ್ತಾ, ವಾಸವಾಗಿ ಬ್ರಹ್ಮಶಾಪದಿಂದ ರಾಕ್ಷಸನಾಗಿ ಇರುವ ಅಘಾಸುರನೆಂಬ ರಾಕ್ಷಸಾಧಿಪನು ತನ್ನ ಚಾರರ ಮುಖದಿಂದ ಆದ್ವೀಪದಲ್ಲಿ ನಡಿಯುವ ಸಮಾಚಾರವಂ ತರಿಶಿಕೊಳ್ಳುತ್ತಾ ನಿಶಾಚರಿಯೋಳ್ ಇರುವಲ್ಲಿ ಒಂದುದಿನ ಈ ವಿಲಕ್ಷಣವಾದ ಒಬ್ಬರಿಂದಲೂ ಪಿಡಿಯಲಶಕ್ಯವಾದ ನಡೆಯುವ ಬಳಿಯಲ್ಲಿ ಕ್ಷೀರವಂ ಸುರಿಸುತ್ತ, ನಡೆದ ಮಾತ್ರದಿಂದ ಒಣಗಿ ಇರುವ ಸಸ್ಯಾದಿಗಳಂ ಫಲವತ್ತಾಗಿ ಮಾಡುತ್ತಾ, ಕರುವಿನಿಂದೊಡಗೂಡಿ ಸಕಲವಾದ ಸುಲಕ್ಷಣಗಳಿಂದ ಕೂಡಿ ಅಲ್ಲಿ ಸಂಚರಿಸುವ ಆ ಸುರಭಿಯಂ ಕಂಡು ಅಘಾಸುರನ ದೂತರು ಆ ರಾಕ್ಷಸೇಂದ್ರನಿಗೆ ತಿಳಿಸಲು, ಆಕ್ಷಣದಲ್ಲಿಯೆ ಅಘಾಸುರನು ಕಳ್ಳ ಮಾರ್ಗದಿಂದ ಬಂದು ಆಧೇನುವಂ ಕಂಡು ಬಹು ಸಾಹಸಂಗಳಂ ಮಾಡಿ ಬಹುಬಲಾತ್ಕಾರದಿಂದಪಿಡಿದು ಪಟ್ಟಣಕ್ಕೆ ಕೆಳೆದುಕೊಂಡುಹೋಗಿ ಕ್ಷೀರದ ರುಚಿಯಂ ನೋಡಿ ಬಹು ಸಂತೋಷದಿಂದ ಉಪಚಾರಂಗಳಂ ಮಾಡಿಸುತ್ತಾ ಕಟ್ಟಿಹಾಕಿಕೊಂಡು ಇರಲು;

ಇತ್ತಲಾ ಸುಗಂಧ ಮಹಾರಾಜನು ಪೂರ್ವದಲ್ಲಿ ಸೌಂದರಾಂಗಿಯಾದ ಸುಗಂಧಿಕಾ ದೇವಿಯು ಸಖೀಮುಖದಿಂದ ವಿಜ್ಞಾಪನಂಗೈದ ಅಪ್ಸರೊ ಜಾತಿಸ್ತ್ರೀ ಚತುಷ್ಟಯಾನಯನವೆಂಬ ಪಣವಂ ತಂದುಕೊಟ್ಟು ಆ ರಾಜಕುಮಾರಿಯಿಂದ ಬಹು ಮಾನಿತನಾಗಿ ಸಂತೋಷದಿಂದ ತನ್ನ ಬಿಡಾರವಂ ಪೊಕ್ಕು, ರಾತ್ರಿಯೋಳ್ ತನ್ನ ಸಂಗೀತವಿಲಾಸವೆಂಬ ಹೆಸರು ಉಳ್ಳದ್ದಾಗಿ ಆಸ್ಥಾನದ ಉಪರಿ ಭಾಗದೊಳಿರುವ ಹಜಾರದಲ್ಲಿ ಸಕಲ ಸಂಪತ್ಸಮೃದ್ಧವಾಗಿ ಕುಬೇರನಂತೆ ಕುಳಿತು ಇರುವ ಸಮಯದಲ್ಲಿ ಪೂರ್ವದಿಕ್ಕಿನೋಳ್ ಸೌಗಂಧಿಕಾ ದೇವಿಯನುರಾಗದಂತೆ ಚಂದ್ರೋದಯದ ರಕ್ತಿಮಹಿಮೆಯು ಅಧಿಕವಾಗಲು, ಅಂತಃ ಪಟದ ಮೇಲುಭಾಗದೋಳ್ ಕಂಡು ಕಾಣದಂತೆ ತೋರುವ ಬಾಲೆಯ ಮುಖವಂ ದರ್ಶಿಸುವ ಚಂದ್ರ ರೇಖೆಯು ಸ್ವಲ್ಪವಾಗಿ ಕಾಣಲ್ಪಡಲು, ಅವಳ ಎಳೆ ನಗೆಯಂತೆ ಪ್ರಕಾಶಿಸುವ ಬೆಳದಿಂಗಳುಂಟಾಗಲು, ತಾನೇ ನೋಡಲು ಬಂದಿರುವ ಸೌಗಂಧಿಕಾ ದೇವಿಯ ಮುಖವೇ ಸರೀ ಎಂಬ ಚಂದ್ರಮಂಡಲವತಿ ಪ್ರಕಾಶವಾಗಿ ಕಾಣಲು, ಆಸುಧತಿಯ ಕಟಾಕ್ಷದಂತೆ ಶೀತಳವಾಗಿ ಇರುವ ಚಂ

ದ್ರಕಿರಣಂಗಳು ವ್ಯಾಪಿಸಲು, ಆ ಕಾಂತಿಯು ಕಂಠದೊಳ್ ಘಣಘಣಿಸುವ ಮುತ್ತಿನಸರಗಳಿಗೆ ಸಮಾನವಾದ ನಕ್ಷತ್ರಂಗಳು ಪಙ್ಕ್ತಿಯಾಗಿ ಕಣ್ಗೆದೋರಲು, ಆಗ ಬಹು ಸಂತೋಷದಿಂದ ಆ ರಾಜ ಪುತ್ರಿಯು ಸಾನ್ನಿಧ್ಯಕ್ಕಿಂತಾ ಅಧಿಕವಿಕಾಸವುಳ್ಳ ಮನಸ್ಸು ಉಂಟಾದವನಾಗಿ ಚಂದ್ರನಂ ಕುರಿತು ಇದು ಪೂರ್ವದಿಕ್ಕಾಮಿನಿಯು ಮುಖದೊಳ್ ಥಳಥಳಿಸುವ ವಜ್ರದ ಬೊಟ್ಟೋ? ಉದಯಾದ್ರಿಯು ತಟದೊಳ್ವಿಹಾರಂ ಗೈಯ್ಯುವ ಕಾಂತೆಯರ ಮುತ್ತಿನ ಕಂತುಕವೋ? ಮನ್ಮಥನ ಬಾಣಂಗಳಂ ಮೊನೆಮಾಡುವ ಸಾಣೆ ಚಕ್ರವೋ? ಜಾರಚೋರಾದಿಗಳಿಗಪಶಕುನವಾಗಿ ತೋರುವ ಪ್ರತಿ ಸೂರ್ಯನೋ? ಪುರುಷರಂ ಬಿಟ್ಟು ಅಗಲಲಾಗದೆಂದು ಸಾರಿ ಬಡಿಯಲು ತಂದು ಇರುವ ಮನ್ಮಥನ ಜಾಗಟೆಯೋ? ಜನನೇತ್ರದಾರಿದ್ರ್ಯವಂ ಬಿಡಿಸಿ ಪ್ರಕಾಶಿಸುವ ದಾತೃಗಳಾದ ನೃಪತಿಗಳ ನುನ್ನತೀ ಕರಿಶಿದ ಕೀರ್ತಿಯೋ? ಮದನ ಮಹಾರಾಜಂಗೆ ಹಿಡಿದಿರುವ ಶ್ವೇತಛತ್ರವೋ? ಗಗನ ಸರೋವರದ ಮಧ್ಯದೊಳ್ ಪ್ರಕಾಶಿಸುವ ಬಿಳಿದಾವರೆಯೋ? ರಾತ್ರಿ ಎಂಬ ಕಾಮಿನಿಯಿಂದ ಕಳಂಕವೆಂಬ ಧಾನ್ಯ ಸಹಿತವಾಗಿ ನೀಸಲ್ಪಟ್ಟ ಘಾರಟವೋ? ಕ್ಷೀರ ಸಮುದ್ರದ ಮಧ್ಯದಿಂದೆದ್ದು ಬಂದಿರುವ ನವನೀತದ ಉಂಡೆಯೋ? ಇದು ಚಂದ್ರನೋ ಎಂದು ಸರಸರಸಿಕ ಜನರಿಂದೊಡಗೂಡಿ ಬಗೆಬಗೆಯಾಗಿ ಉತ್ಪ್ರೇಕ್ಷಿಸುತಲಿರುವ ಸಮಯದಲ್ಲಿ, ಆ ಮಹಾಸ್ಥಾನದಲ್ಲಿ ಒಂದಾನೊಂದು ಗವುಳಿನುಡಿಯಲು, ಅದರನುಡಿಯ ಕೇಳಿದ ಸುಗಂಧರಾಯನ ಮುಖವಂ ನೋಡಿ ನಿಮಿತ್ತಜ್ಞನಾದ ಒಬ್ಬ ಬ್ರಾಹ್ಮಣನು ಎದ್ದು ಕೈ ಕಟ್ಟಿಕೊಂಡು ಬಹು ಭಕ್ತಿಯಿಂದ ಎಲೈ ರಾಜೇಂದ್ರನೆ! ಕೇಳು, ಈಗ ಒಂದು ಚಮತ್ಕಾರ ಉಂಟಾಗುವದು, ಅದೇನೆಂದರೆ—ಈಕ್ಷಣದಲ್ಲಿಯೆ ಫಲಪುಷ್ಪ ಸಹಿತವಾಗಿ ಮಿತ್ರಲಾಭದಿಂದೊಡಗೂಡಿಸಿ ಸ್ತ್ರೀಯು ಮುಖವಾಗಿ ಪ್ರಿಯಜನರಿಂದ ಕಳುಹಿಸಲ್ಪಟ್ಟ ಪತ್ರಿಕಾದ್ಯಾಗಮನ ಉಂಟಾಗುವದು ಇದು ಸತ್ಯವೆಂದು ಶಾಸ್ತ್ರೀಯವಾದ ಭವಿಷ್ಯತ್ಸೂಚಕಾರ್ಥವಂ ವಿಜ್ಞಾಪಿಸಲು, ಆ ಮಾತಂ ಕೇಳಿದ ರಾಜೇಂದ್ರನು ಇದಂ ಪರೀಕ್ಷಿಸಬೇಕೆಂದು ಆಸಕ್ತನಾಗಿ ಇರುವ ಸಮಯದಲ್ಲಿ ಸೌಗಂಧಿಕಾ ದೇವಿಯಿಂದ ಕಳುಹಿಸಲ್ಪಟ್ಟ ನವಮಲ್ಲಿಕಾಲತೆಯೆಂಬ ಪ್ರಿಯ ಸಖಿಯು

ಸುವರ್ಣದ ತಟ್ಟೆಗಳಲ್ಲಿ ಅಮೃತವೇ ಘನೀಭೂತವಾಗಿ ಇರುವಂತೆ ತೋರುವ ನಾನಾವರ್ಣಂಗಳಾಗಿ ದಿವ್ಯ ಗಂಧ ಯುತವಾದ ಫಲಗಳಂ ದಿಕ್ಕುದಿಕ್ಕುಗಳೊಳ್ ಘುಮಘುಮಿಸುವ ವಿಚಿತ್ರ ಪುಷ್ಪಹಾರಂಗಳಂ, ಕೆತ್ತನೆಯ ಬಟ್ಟಲ್ಗಳಲ್ಲಿ ತುಂಬಿಯಿರುವ ಪರಿಮಳ ಗಂಧಂಗಳಂ, ರಾಜಯೋಗ್ಯ ವಾದ ವೀಳ್ಯಂಗಳಂ, ನಾನಾವಿಧ ಪರಿಮಳ ಪುಷ್ಪಂಗಳಿಂದ ವಿಚಿತ್ರವಾಗಿ ರಚಿಸಿ ದಳಗಳಮಧ್ಯದಲ್ಲಿ ಕಸ್ತೂರಿಯಿಂದ ಬರೆದು ಇರುವ ತುರಾಯಿಯೆಂಬ ಪುಷ್ಪಗುಚ್ಛವಂ ಮಣಿಮಯ ತಟ್ಟೆಗಳಲ್ಲಿ ಮಡಗಿ, ನೀರಾಜಿ ಗೌನುಗಳಿಂದೊಡಗೂಡಿ ರಾಜೇಂದ್ರನ ಮುಂದಿರಿಸಿ ಭಯಭಕ್ತಿ ವಿಲಾಸಗಳಿಂದ ಯುಕ್ತಳಾಗಿ ಕೈಮುಗಿದು ಗಿಣಿಯಂತೆ ಮುದ್ದುಮುದ್ದಾಗಿ ನಿನ್ನ ಪ್ರಾಣಕಾಂತೆಯಾದ ಎನ್ನೊಡತಿ ಸೌಗಂಧಿಕಾದೇವಿಯು ಸ್ವಾಮಿಯವರ ಚರಣ ಕಮಲಂಗಳಿಗೆ ಎರಗಿ ಕುಶಲ ಪ್ರಶ್ನೆ ಪುರಸ್ಸರವಾಗಿ ಫಲ ಪುಷ್ಪವೀಳ್ಯಂಗಳಂ ಒಪ್ಪಿಸಿ ಅಪ್ಪಣೆಯಂ ತೆಗದುಕೊಂಡು ಬಾಯೆಂದು ಪೇಳಿ ಕಳುಹಿಸಲು ಬಂದೆನೆಂದು ಚೆದರುವ ಹುಲ್ಲೆಯ ಮರಿಯಂತೆ ಕಣ್ಗಳಂ ಬಳಬಳಸಿ ಚಲಿಸುತ್ತಾ, ಎಳೆಬಾಳೆಯಸುಳಿಯಂತೆ ಬಳಬಳಕುತ್ತಾ ವಿಜ್ಞಾಪನಂಗೈದ ಬಾಲಸಖಿಯಂ ನೋಡಿ, ಸಂತೋಷದಿಂ ನಗುತ ಕೈಯೊಳ್ಪಿಡಿದಿರುವ ಥಳಥಳಿಪ ವಸ್ತ್ರವಂ ಗಲ್ಲದ ಮೇಲಿಟ್ಟು ಪಾರೆನೋಟದಿಂ ನೋಡುವ ರಾಜಕುಮಾರನು ಗಂಧ ಪುಷ್ಪಾದಿಗಳಂ ಕಟಾಕ್ಷಿಸುತ ಎಲೈ ನವಮಲ್ಲಿಕಾಲತೆಯೆ! ಪುಷ್ಪಂಗಳು ಇನ್ನೂ ಮೊಗ್ಗಾಗಿ ಇರುವವಲ್ಲದೆ ತುಂಬಿಗಳ ನೋಂಕಿದ್ದಲ್ಲಾ, ಫಲಂಗಳು ಸಣ್ಣನಾಗಿ ಪೋರಕಾಯಾಗಿ ಇರುವವು ಇನ್ನೂ ಪಕ್ಷಿಗಳು ಮುಟ್ಟಿದ್ದಲ್ಲಾ, ಗಂಧವಂ ನೋಡಲು ಒಂದೆ ಬಗೆಯಾಗಿ ಇರುವದು ವಸ್ತುಗಳಿಂದ ಬೇರೆ ಬೆರದ್ದಲ್ಲಾ, ಎಲೆಗಳು ನೆರಳೊಳಗೆ ಇದ್ದದ್ದಲ್ಲದೆ ಬಿಸಲಂ ಕಂಡದಲ್ಲಾ, ಎಂದು ನಮ್ಮಿಂದ ಪೇಳಿದ್ದಾಗಿ ನಿಮ್ಮೊಡತಿಯಂ ಕುರಿತು ತಿಳಿಯ ಪೇಳಬಲ್ಲೆಯಾ ಎನುತ ಹಾಸ್ಯ ರಸದಿಂದ ಒಡಗೂಡಿ ಸ್ವಾಭಿಪ್ರಾಯ ಗರ್ಭಿತವಾಗಿ ಮೃದುವಾದ ಮಾತನಾಡುತ ಸವಿಾಪದೊಳ್ಪಿಡಿದಿರುವ ತಟ್ಟೆಯಮಧ್ಯದೊಳಲಂಕಾರವಾಗಿ ಇರಿಸಿರುವ ಪುಷ್ಪದ ತುರಾಯಂ ತೆಗದುಕೊಂಡು ಕೈಯೊಳ್ಪಿಡಿದಿರುತ ಹಾಗೆ ಅದರದಳಗಳ ಮಧ್ಯದಲ್ಲಿ ಕಸ್ತೂರಿಯಿಂ ಬರೆ

ದಿರುವ ಅಕ್ಷರವಂ ಮನದೊಳಗೆ ಓದಿ ನೋಡಲು,

ಶುಭ ಗುಣದೋಳ್ ಶ್ರೀಕಾಂತ, ರೂಪಿನಲ್ಲಿ ರತಿಕಾಂತ, ಸ್ವಪತ್ನಿಯೊಳು ನಳನಂತ, ಕಲಿಗಳೋಳ್ ಋತುಕಾಂತ, ಸಕಲರೋಳ್ ಶ್ರೀಮಂತ, ಬಲದೊಳಗೆ ದೇವೇಂದ್ರ, ಗಮನದೊಳು ನಾಗೇಂದ್ರ, ಸಹತ್ರೆಯಲಿ ಶ್ರೀರಾಮ, ವಿನಯದಲಿ ಸೌಧಾಮ, ಸಕಲಗುಣ ಸಂಪನ್ನ, ಸುದತಿಯರ ಮೋಹನ್ನ, ಮಾರ್ದವಾದಿ ಶತಗುಣಗಳನುಳ್ಳ ಚಿಹ್ನ, ದಾನದಲಿ ರಾಧೇಯ, ರಿಪುಕುಲಕೆ ಪ್ರತಿಸೂರ್ಯ, ಬಾಲಿಯರ ಬಲುಪುಣ್ಯ, ಫಲರೂಪಲಾವಣ್ಯ ಇಂತೆಂದು ಜಗದೊಳಗೆ ಪೊಗಳಿ ಕೊಳುತಿರುವ ಪ್ರಾಣವಲ್ಲಭನಾದ ರಾಜಾಧಿರಾಜ ಸುಗಂಧರಾಜ ಮಹಾರಾಜೇಂದ್ರ ಚಂದ್ರನ ವಿಮಲಕೋಮಲ ಚರಣ ಕರುಣಾರುಣ ಪದ್ಮಂಗಳಿಗೆ

ತತ್ಕೈಂಕರಿಯಾಗಿರುವ ಸೌಗಂಧಕಿಯು ತನುಮನೋವಾಗ್ಗಳೆಂಬ ಕರಣತ್ರಯ ಸಹಿತಳಾಗಿ ಭಯ ಭಕ್ತಿ ವಿನಯ ವಿಶ್ವಾಸಾಂತಃಕರಣಗಳಿಂದ ನಮಿಸಿ ಬಿನ್ನವಿಸುವ ಪರಿಯಂ ಲಾಲಿಸಬೇಕು:—

ಪಾಲಿನೊಂದೊಡಗೂಡಿ ನೀರು ಬೆಲೆಯಪ್ಪುದು, ಧಾನ್ಯದೊಳು ಬೆರದ ಧೂಳುಗಳು ಕ್ರಯವಡೆವದು, ಹೂವಿನೊಂದೊಡಗೂಡಿ ನಾರು ರಂಜಿಸುವದು, ಪರಿಮಳದಿಂದ ಕೇತಕಿಯ ದುರ್ಗುಣಂಗಳು ಮರೆಯಾಗಿ ಇರುವದು, ಸುಜ್ಞಾನದಿಂದ ದೇಹಶರೀರವು ನಿತ್ಯವಾಗಿ ಇರುವದು, ಎಂದು ಚಿತ್ತದೊಳರಿತು ನಿನ್ನಂಗಸಂಗದಿಂದೆನ್ನ ನೃಪಾಂಗನೆಯನ್ನಾಗಿ ಕರುಣಿಸಬೇಕು, ಮತ್ತೊಂದಾನೊಂದು ದಿವಸದೋಳ್ ಸಮಾನರಾಗಿರುವ ಸಖೀಜನರನುಂ ಪೆ ನಾನುಯೇನೊ ಎಂದು ಮಾತು ಮಾತಿನಿಂದ ಸಕಲಇಷ್ಟಾರ್ಥಂಗಳಂ ಭಕ್ಷ್ಯಭೋಜ್ಯಂಗಳಂ ಕೊಡುವ ಸುವರ್ಣ ಸಮಾನವರ್ಣಂಗಳಾದ ರೆಕ್ಕೆಗಳಿಂದಲೂ, ಲಕ್ಷ್ಮೀಕರವಾಗಿ ಕಾಣುವ ದಿವ್ಯಮುಖದಿಂದಲೂ, ತ್ರಿಶೂಲಾಗ್ರದಂತಿರುವ ಶೃಂಗಗಳಿಂದಲೂ, ಭೂಮಿಯು ಸ್ಪರ್ಶಿಸಿ ತುಷ್ಟಿಯಂ ಮಾಡುವ ಪುಚ್ಛಂಗಳಿಂದಲೂ, ಜ್ಞಾನಸಹಿತವಾಗಿ ಚತುರ್ವಿಧಪುರುಷಾರ್ಥಂಗಳಂ ಐದು ಬಗೆಯಾಗಿ ಕರೆಯುವ ಐದು ಮೊಲೆಗಳಿಂದಲೂಂ ಸಹಿತವಾಗಿರುವ ಬಂಧುರಧೇನುವಂ ಗೋಪದ್ಮ ವ್ರತಾಂಗವಾಗಿ ಪೂಜಿಸದೆ ವಿವಾಹವಂ ಮಾಡಿಕೊಳ್ಳೆನೆಂದು ಶಪಥವಂ ಮಾಡಿರುವ ಎನ್ನ

ಯು ಮಾತಂ ಸುಪಥಮಂಮಾಡಿ ಪ್ರೊರೆಯುಬೇಕು, ಈಗಕರುಣಿಸಿದ ಪಣಂ
ಗಳೊಳ್ ಒಂದೊಂದು ಪಣಕ್ಕೆನ್ನ ದೇಹವಂ ನಿಮ್ಮಡಿಗಳಿಗೆ ಮಾರಿದರೂ
ತೀರದು, ಬೇಡುಸಬಡವರಿಗೆ ಅಷ್ಟೈಶ್ವರ್ಯವಂ ಒಂದೊಂದಾಗಿ ಕೊಡುವ
ಮಹಾಲಕ್ಷ್ಮಿಗೆ ಏನಾದರೂಬೇಸರ ಉಂಟೆ, ಜಗವಂಧರಿಸುವ ಭುಜಗೇಂ
ದ್ರಂಗೆ ದ್ವಿಜಗಳ ಗರಿಯೊಳ್ ಒಂದೇನು ಭಾರವೆ, ಅಗಾಧಜಲ ಉಳ್ಳ
ಸಮುದ್ರನ ಜಲವಂ ಕಲಶದಿಂ ತುಂಬಿಯುಣಿಸಲು ತರವೆ, ಮೇಘವಂ
ಬೇಡಿ ನೀರಂಸುರಿಸಲು ಯಾರಿಂದಲಾದರು ಶಕ್ಯವೆ, ಸೂರ್ಯನಂ ಕೇಳಿ
ಪ್ರಭೆಯುಂ ತರಲುಬಹುದೆ, ನಿಮ್ಮ ಪ್ರೀತ್ಯಂತಃ ಕರಣ ದಯೆಗಳಿಂದ ಎನ್ನ
ಪ್ರತಿಜ್ಞೆಯು ಪೂರ್ಣವಾಗುವದಲ್ಲದೆ ಅಡಿಗಡಿಗೆ ವಿಜ್ಞಾಪಿಸಲು ಶಕ್ಯವೆ,
ಬಾಲಶುಕ ಪಿಕಾದಿಗಳ ಉಕ್ತಿಗಳೊಳ್ ಸ್ಥೂಲಸೂಕ್ಷ್ಮಂಗಳೆಂಬ ದೋ
ಷಮಂ ತರುಲತಾದಿಗಳೊಳರುವ ಉಪಕೃತಿವಚನವಂ ಬಂದುಪೇಳದ ವಿವೇ
ಕಮುಂಸ್ಮರಿಸದಂತೆ ಎನ್ನಿಂದೇನಾದರೂ ದೋಷಾಪರಾಧಂಗಳಿದ್ದರೂಕ್ಷಮಿ
ಶಿ ಸಲುಹುವದು ಸ್ವಾಮಿಗೆ ಸಲ್ಲುವದು; ಎಂದು ಬರೆದಿರುವದಂ ನೋಡಿ
ಪ್ರೇಮಾತಿಶಯ ಉಳ್ಳ ರಾಜೇಂದ್ರನು ನಸುನಗುತ ಮನವೆರಗಿ ರಾಣಿಯ
ವಿಜ್ಞಾಪನೆಂಗಳಂ ಮನಗೊಂಡುತಟ್ಟೆಯೊಳ್ ತಂದಿರುವ ಫಲಪುಷ್ಪಗ
ಳಂ ತರಿಶಿಕೊಂಡು ಬದಲಾಗಿ ತಮ್ಮಬಳಿಯೊಳಿರುವ ಅಪೂರ್ವ ವಸ್ತುಗ
ಳಂ ತುಂಬಿಶಿ ಚಿನ್ನದವಾಲಿಯೊಳ್ ತರುಣಿಯರ ಶಿಖಾಮಣಿ, ಸರಸ
ವಚನಾಲಾಪರಸಿಕಾಗ್ರಣಿ, ನಗೆಮೊಗದ ಕಡುಜಾಣೆ, ಸಕಲಗುಣಸಂ
ಪನ್ನೆ, ರೂಪಿನಲ್ಲಿ ರತಿಯೆಂದು ಜಗದೊಳಗೆ ಪ್ರಖ್ಯಾತೆಯಾಗಿ ಇರುವ
ಸೌಗಂಧಿನಿಯುಮನದೊಳಗೆ ನೋಡಿಕೊಳ್ಳುವದು, ನವಮಲ್ಲಿಕಾಲತೆಯೆಂ
ಬ ಸಖಿಯ ಎಳೆನುಡಿಯಿಂದಲುಂ, ಕುಸುಮಗಳ ತುರಾಯಿ ಮಧ್ಯದಿಂ
ದಲುಂ ತಿಳಿಯ ಬಂದದ್ದಾಯಿತು, ಕರುವಿನೊಡಗೂಡಿ ಸುರಭಿಬಂತೆಂದು
ತಿಳಿದು ಹರ್ಷದಿಂದಿರುವದು, ಲೀಲೆಯಿಂ ಭೂಮಿಯನ್ನು ತಳಕಳಕಾಗಿ
ಮಾಡುವೆನು, ಸಾಗರವಂ ಶೋಷಿಸುವೆನು, ಮೇರುವಂ ಮುರಿದಿಡುವೆನು
ಪ್ರೀತಿಯ ವಿಷಯಳಾದ ನಿನ್ನ ಸಂತೋಷಾರ್ಥವಾಗಿ ಒಂದುಧೇನುವಂ
ತಂದುಕೊಡುವದು ನನಗೆ ಬೇಕಾಗಿಯೆ ಇರುವದೆಂದು ಬರೆದು ನವಮಲ್ಲಿ
ಕಾಲತೆಯುಂ ಕರೆದು ಪ್ರೇಮ ಸನ್ಮಾನದಿಂದೊಡಗೂಡಿ ವಾಲಿಯುಂ ಕೊ

ಟ್ಟು ಕಳುಹಿಸಲು, ಆಗ ನವ ಮಲ್ಲಿಕಾಲತೆಯು ರಾಯಂಗೆ ಕೈಸಾರಿದು ಅಪ್ಪಣೆಯಂ ತೆಗೆದುಕೊಂಡು ಬಂದು ಕರುಣಿಸಿದ ವಾಲೆಯುಂ ವಸ್ತ್ರಗಳು ಸಹಿತಾ ತನ್ನ ಪರಿಜನರಿಂದೊಡಗೂಡಿ ತೆರಳುತ್ತಾ, ನಿಜಕಾಂತಿಯಿಂ ಬೆಳದಿಂಗಳಂ ಸೋಲಿಸುತ ಎಳೆ ಮಿಂಚು ಪೊಳೆದಂತೆ ನಿಮಿಷದೊಳು ಸೌಗಂಧಿಕಾದೇವಿಯರ ಮನೆಯಂ ಸೇರಿ ಒಡತಿಗೆ ನಮಿಸಿ ನಡೆದ ವೃತ್ತಾಂತವಂ ಅರಿಪುತ್ತೆ ವಸ್ತ್ರಗಳಂ ಇರಿಸಿ ಬಿನ್ನೈಸಲು, ಆಗ ಸೌಗಂಧಿಕಾದೇವಿಯು ಆವಸ್ತ್ರಗಳಂ ಕಂಡು ಗುರುವಂ ಕಂಡಶಿಷ್ಯನಂತೆ, ಅರಸಂ ಕಂಡ ನಿಜದೂತನಂತೆ ಝುಗ್ಗನೆದ್ದು ಅತ್ಯಾದರದಿಂದಾತ್ತೆ ತಿಳಿದು ವಸ್ತ್ರಗಳಂ ಮುಟ್ಟಿ ಕೈ ಜೋಡಿಸುತ ಪಲಗನೆ ಮಸ್ತಕದೊಳು ಪ್ರೀತಿಯುಳ್ಳ ಚಿನ್ಹದ ಬರಹೋಲೆಯಂ ನೋಡಿ ಬೇಗದ ಕಣ್ಣಿಗೆ ಒತ್ತಿಕೊಂಡು ವಕ್ಷಸ್ಥಳದೊಳ್ ಸ್ತ್ರೀಸಗಿ ಭಾವಿಸುತ್ತ ಶಿರಸಾವಹಿಸಿ ಮನದೊಳಗೆ ಓದಿನೋಡಿಕೊಂಡು ಅತಿ ಹರ್ಷ ಪ್ರಕಾಶಿತಳಾಗಿ ಆತನ ಗುಣಗಣಕ್ಕೆ ತಲೆವಾಗಿ ಆತನ ರೂಪ ಲಾವಣ್ಯ ಸೌಕುಮಾರ್ಯ ಪರಾಕ್ರಮಂಗಳಿಗೆ ಮನಸೋತು, ಆತನ ಪ್ರೀತಿಯಂ ನೆನೆನೆನದು ರೋಮಾಂಚಂಗೊಳುತ ಆತನ ಸೌಜನ್ಯ ಸೌಂದರ್ಯಾನು ನೆ ವ್ಯಾಪಾರಂಗಳನು ರಹಸ್ಯವಾಗಿ ಬರೆದು ಕೇಳುತ್ತಾ ಸಖಿಯರೊಡನೆ ಸಂತೋಷದಿಂದಿರುತ್ತಿರಲು.

ಇತ್ತಲಾ ಸುಗಂಧರಾಯನು ಗೌಳೀನುಡಿಯ ಬಗೆಯಂ ಪೇಳಿದ ವಿಪ್ರವರ್ಯನಂ ಕುರಿತು ಎಲೈ ಭೂಸುರೋತ್ತಮನೆ! ನೀ ಪೇಳಿದ ಪಲ್ಲೀಸೊಲ್ಲಿನ ಫಲಂಗಳಂ ನೋಡಿ ಪೇಳುವ ಪರಿಯಂ ಸವಿಸ್ತಾರವಾಗಿ ಪೇಳುವದು, ದು ನಿರೂಪಿಸಿದವನಾತಂ ಕೇಳಿ, ಬ್ರಾಹ್ಮಣನು ಪೇಳಿದ ಪರಿಯೆಂತೆಂದರೆ

ಪೂರ್ವದೊಳ್ ರುತ್ರಾಂತನು ಅಮೃತಮಂಥನವಾಗ ಗುಡಗಳಮೇಲೊಂದುಬಿಂದುಬಿದ್ದು ಇರುವದಂ ಕಂಡು ಪಲ್ಲನೆಂಬರಾಕ್ಷಸನು ಆಗುತನಂ ಭಕ್ಷಿಸಿ, ಅವರೊಳಿರುವ ಕಡ್ಡಿಯನುಗಿಯಲು, ಅದು ತಲೆ ಬಾಲ ಕಾಲು ಕೈಗಳಂದಕೂಡಿಸಜೀವವಾಗಿ ಗುಡಸಂಬಂಧದಿಂ ಗೌಳಿಯೆಂದೆನಿಸಿಕೊಂಡು ಭೂಮಿಯೊಳು ಬೀಳಲು, ಬಿದ್ದ ಪಲ್ಲಿಯಂ ಕಂಡು ಸಕಲದೇವತೆಗಳು ಅಮೃತದಿಂದ ಪುಟ್ಟಿದ ಕಾರಣ ಅವರ ಶುಭಾಶುಭ ಸೂಚಕವಾದ ನುಡಿಗಳು ಫಲಿಸಲೀ ಎಂದು ವರವಂ ಕೊಡಲು, ತದಾದಿಯಾಗಿ ಪಲ್ಲೀ ಶಕುನವು ಸರಿ

ಯಾಗಿ ಬರುವದು, ಅದೆಂತು ನೋಡುವದೆಂದರೆ:-ಸೂರ್ಯಗೌಳಿಮೊದಲಾಗಿ ಶನಿಗೌಳಿಯವರಿಗೂ ಏಳು ಗೌಳಿಹೇಳುವದು, ಸೂರ್ಯಗೌಳಿಯು ಅರಸು ಎನಿಸಿ ಕೊಳ್ಳುವದು, ಆ ಅರಸು ಶನಿವಾರ ಹಗಲು ಮೂವತ್ತು ಘಳಿಗೆಯು ಪೂರ್ವದಿಕ್ಕಿನಲ್ಲಿ ಇರುವನು, ಶನಿವಾರ ರಾತ್ರಿ ಘಳಿಗೆಮೂವತ್ತು ಆದಿತ್ಯವಾರ ಹಗಲು ಘಳಿಗೆ ಮೂವತ್ತು ದಕ್ಷಿಣ ದಿಕ್ಕಿನಲ್ಲಿ ಇರುವನು, ಆದಿತ್ಯವಾರ ರಾತ್ರಿ ಮೂವತ್ತು ಸಹಿತವಾಗಿ ಸೋಮವಾರ ಅರವತ್ತು ಘಳಿಗೆಯು ನೈರುತ್ಯದಿಕ್ಕಿನಲ್ಲಿ ಇರುವನು, ಮಂಗಳವಾರ ಐವತ್ತು ಘಳಿಗೆ ಪಶ್ಚಿಮ ದಿಕ್ಕಿನಲ್ಲಿ ಇರುವನು, ಮಂಗಳವಾರಶೇಷ ಹತ್ತು ಘಳಿಗೆ ಬುಧವಾರ ಹಗಲು ಮೂವತ್ತು ಘಳಿಗೆವರಿಗೂ ವಾಯುವ್ಯ ದಿಕ್ಕಿನಲ್ಲಿ ಇರುವನು, ಬುಧವಾರ ರಾತ್ರಿ ಮೂವತ್ತು ಬೃಹಸ್ಪತಿವಾರ ಐವತ್ತು ಘಳಿಗೆ ಪರ್ಯಂತ ಉತ್ತರ ದಿಕ್ಕಿನಲ್ಲಿ ಇರುವನು, ಬೃಹಸ್ಪತಿವಾರದ ಶೇಷ ಹತ್ತು ಘಳಿಗೆ ಶುಕ್ರವಾರ ಅರವತ್ತು ಘಳಿಗೆಯು ಈಶಾನ್ಯದಿಕ್ಕಿನಲ್ಲಿ ಇರುವನು, ಆಗ್ನೇಯವು ಹಾಳು ಮೂಲೆ ಯೆನಿಸಿಕೊಂಬದು, ಪೂರ್ವದಿಕ್ಕಿನಲ್ಲಿ ಆದಿತ್ಯನಿದ್ದರೆ ದಕ್ಷಿಣದಿಂದ ಚಂದ್ರಾದಿಯಾಗಿ ಯೇಳು ಗೌಳಿಗಳ ಫಲವು ಹೇಳುವದು, ಸೂರ್ಯನಲ್ಲಿ ರಾಜಕಾರ್ಯ ಧನಸುಖ ಆರೋಗ್ಯ ಸಾಹಸಂಗಳ ಹೇಳುವದು, ಚಂದ್ರನಲ್ಲಿ ಹೆಣ್ಣಿನ ಜನನ ಸ್ತ್ರೀಪ್ರಾಪ್ತಿ ಮನಸ್ಸಂತೋಷ ಹೆಚ್ಚು ಧಾರಣೆಗಳ ಹೇಳುವದು, ಕುಜನಲ್ಲಿರೋಗ ಮೃತ್ಯು ಜ್ವಾಲಾದಿಭಯ ಕಾರ್ಯನಾಶಗಳು ಹೇಳುವದು, ಬುಧನಲ್ಲಿ ಸಮಧಾರಣೆ ವ್ಯಾಪಾರಲಾಭ ವಾಹನ ಪ್ರವಾಹಗಳಿಂದ ಸಮ್ಮಂಗಳಂ ಹೇಳುವದು, ಗುರು ಗೌಳಿಯಿಂದ ಮದುವೆ ಮಂತ್ರೋಪದೇಶ ಗುರುಸಮಾಗಮ ಸನ್ಮಾನ ವಾರ್ತೆಗಳಂ ಹೇಳುವದು, ಶುಕ್ರ ಗೌಳಿಯಿಂದ ಧಾರಣೆತೆಗ್ಗು ಸ್ತ್ರೀ ಸೌಖ್ಯ ವಾಹನ ಭೂಷಣ ಪ್ರಾಪ್ತಿಯಿಂದು ಹೇಳುವದು, ಶನಿಗೌಳಿಯು ಭಯ ಹಾನಿ ಶೂದ್ರಸಲ್ಲಾಪ ಹೀನ ಕಾರ್ಯಗಳು ಹೇಳುವದು, ಸದಾ ಶೂನ್ಯವೆಂಬ ಆಗ್ನೇಯದಲ್ಲಿ ಸರ್ವದಾ ನೆನದ ಕಾರ್ಯವಾಗುವದೆಂದು ಹೇಳುವದು, ಈಪರಿಯೋಳ್ ತಿಳಿದು ಹೇಳುವದು. ಹೀಗಲ್ಲದೆ ಮತ್ತೊಂದು ಪರಿಯೋಳ್ ನೋಡಬಹುದು, ಅದು ಹ್ಯಾಗಂದರೆ ಗೌಳಿನುಡಿದ ಇಂದ್ರಾದಿ ದಿಕ್ಕಿನೋಳ್ ಎಂಟರೊಳಗೆ ಯಾವದೊ ಅದರಲಕ್ಷಣಂ ನುಡಿಗೊಂ

ವು ಆಗಿನ ನಕ್ಷತ್ರ ಲಿಖ್ಯವಂ ಕೂಡಿ ಅಂದಿನವಾರ ಸಂಖ್ಯೆಯುಂ ಜೊತೆಮಾ
ಡಿ ಆಗಿನತಿಥಿ ಸಂಖ್ಯೆಯುಂ ಕೂಡಿ, ಆಗಿನಲಘ್ನವನಂ ಸೇರಿಸಿ ಹತ್ತಾರಿಂ ಗು
ಣಿಸಿ, ಹದಿನಾರರಿಂ ಭಾಗಿಸಲು, ಬಂದ ಲಬ್ಧಗಳಿಗೆ ಒಂದರಿಂದ ಕ್ರಮವಾಗಿ
ಈ ಫಲಗಳಂ ಹೇಳುವದು, ಭೀತಿಯು, ಮರಣವಾರ್ತೆ, ಶತ್ರುಗಳ ಆಗಮನ,
ಸ್ತ್ರೀಪ್ರಾಪ್ತಿ, ಕಲಹ, ಉಪಾಯದಿಂದ ಮಾತಕ್ಕವ್ಯ. ಕ್ಷೀರವಸ್ತ್ರಾಂ
ತ, ಪುಷ್ಪಫಲಪ್ರಾಪ್ತಿ, ತಾಂಬೂಲಭೋಗ, ದ್ರವ್ಯಲಾಭ, ಬುದ್ಧಿ ಭ್ರಮಣ
ವಾರ್ತೆ, ಕಾಗದಪತ್ರ ಬರೋಣ. ಒಳ್ಳೆಸ್ತ್ರೀಸಲ್ಲಾಪ, ಮೃಷ್ಟಾನ್ನ ಭೋ
ಜನ. ಬಂಧುಗಳವಾರ್ತೆ, ಸರ್ವಪ್ರಾಪ್ತಿ ಧನಸಮಾಚಾರವು, ಆನಂ
ದ ಸಂತೋಷ ಸಮಾಚಾರ ಶ್ರವಣ. ಈ ಹದಿನಾರು ಫಲಗಳಂ ನೋಡಿ
ಹೇಳುವದು. ಗೌಳಿಯು ಬಂದುಸೊಲ್ಲಾಗಲಿ ಮೂರುಸೊಲ್ಲಾಗಲಿ ಮಾಡಿ
ದರೆ ಮರಣಭಯಂ ಹೇಳುವದು. ಎರಡು ಐದು ಆರು ಸೊಲ್ಲು ಮಾಡಿದರೆ ಶು
ಭಂಗಳಹೇಳುವದು. ನಾಲ್ಕು ಏಳು ಎಂಟು ಮಾಡಿದರೆ ಕಲಹ ವ್ಯಸನಗಳಂ
ಹೇಳುವದು. ಇದಲ್ಲದೆ ಸ್ಥೂಲವಾಗಿ ಫಲಹೇಳಬೇಕಾದರೆ ಇಂದ್ರದಿಕ್ಕಿನಲ್ಲಿ
ಒಳ್ಳೇದು, ಆಗ್ನೇಯದಿಕ್ಕಿನಲ್ಲಿ ಕಲಹ, ಯಮದಿಕ್ಕಿನಲ್ಲಿ ಅರ್ಥಲಾಭ,
ನೈರುತ್ಯದಿಕ್ಕಿನಲ್ಲಿ ಯುದ್ಧ, ವರುಣದಿಕ್ಕಿನಲ್ಲಿ ಪತ್ರಿಕಾಗಮನ, ವಾಯು
ವ್ಯದಿಕ್ಕಿನಲ್ಲಿ ದೇಶಗಮನ, ಕುಬೇರದಿಕ್ಕಿನಲ್ಲಿ ಜಯ, ಈಶಾನ್ಯದಿಕ್ಕಿನಲ್ಲಿ
ಹಾನಿ, ಈಮೇರೆ ಹೇಳುವದು. - ಸ್ಥಿರವಾರ ಜಯ. ಕನ್ಯಾಪ್ರಾಪ್ತಿ,
ಪುತ್ರೋತ್ಪತ್ತಿ, ಪುರುಷಪ್ರಾಪ್ತಿಯಲ್ಲಿಯು. ದಕ್ಷಿಣ ಗೌಳಿಯು ಶೀನುವ
ಳ್ಳೇದು, ನಷ್ಟವಾದ ಮುಳಪ್ಯರು, ಪ್ರಯಾಣ ಪ್ರವೇಶ, ರೋಗವಾರ್ತೆ
ಗಳಲ್ಲಿ ವಾಮವೆಂಬ ಎಡೆಗಡೆಯು ಗೌಳಿಶೀನುಗಳು ಒಳ್ಳೇದು, ಅರ್ಥ
ಕಾರ್ಯ ಗರ್ಭಸಮಾಚಾರ, ಕೊಡುವಳಿ ತರುವಳಿ ಮಾತು, ಸಾಯಂಕಾಲ
ದಲ್ಲಿ ಪೃಷ್ಠದಲ್ಲಿ ಎದುರು ಗೌಳಿಶೀನು ಸಹಒಳ್ಳೇದು, ಕಾರಾಗೃಹಮೋ
ಚನ, ದಕ್ಷಪದಾರ್ಥ ಲಾಭ, ಭೀತಿ ಶಂಕೆ. ಕೃತ್ರಿಮ ಕಾರ್ಯಭೇದದಲ್ಲಿ
ಪಶ್ಚಿಮ ಹಿಂದಣ ಗೌಳಿ ಶೀನುವಳ್ಳೇದು, ಭವಿಷ್ಯದ್ವ್ಯಾಪಾರ ದೇಶಕಾರ್ಯ
ವನಸ್ಥಾಪನ ಕ್ರಯವ್ಯಾಪಾರಗಳಲ್ಲಿ ನಿತ್ಯ ಮೇಲೆ ಊರ್ಧ್ವದಿಕ್ಕಿನ ಗೌಳಿ
ಶೀನು ಒಳ್ಳೇದು, ಮಿತ್ರಕಾರ್ಯ ರೋಗಾಧಿಖನನಗಳಲ್ಲಿ ಯುದ್ಧಕಾರ್ಯ
ಗಳಲ್ಲಿ ಗೋವ್ಯಾಪಾರದಲ್ಲಿ ಕೆಳಕ್ಕಾಗಿ ನುಡಿದರೆ ಒಳ್ಳೇದು, ಕೆಳಕ್ಕಾಗ

ಗ ವಿದಿಕ್ಕುಗಳಲ್ಲಿ ನುಡಿವರೆ ಉಭಯದಿಕ್ಕುಗಳ ಫಲಂಗಳಂ ನೋಡಿ ಮಿ ಶ್ರ ಫಲವಂ ಹೇಳುವದು ಎಂದು- ಬ್ರಾಹ್ಮಣನಿಂದ ಶಾಸ್ತ್ರೀಯವಾಗಿ ಹೇಳಲ್ಪಟ್ಟಿರುವ ಪಲ್ಲಿ ಶಕುನದ ಮರ್ಯಾದೆಯಂ ಕೇಳಿದ ಸುಗಂಧಮಹಾ ರಾಯನು ಆ ಬ್ರಾಹ್ಮಣನಿಗೆ ಬೇಕಾದ ಉಡುಗೆರೆಯಂ ಕೊಟ್ಟು ಕಳು ಹಿ ಆ ಸಭೆಯಿಂದೆದ್ದು, ಸಂಧ್ಯಾದಿ ಕರ್ಮಗಳಂ ನೆರವೇರಿಸಿ ಪ್ರಿಯ ಮಿತ್ರ ರಾದ ಸ್ವಜನರಿಂದ ಸಹಿತವಾಗಿ ರಾಜಭೋಗ ಯೋಗ್ಯವಾದ ಆ ರೋ ಗಣೆಯಂ ಮಾಡಿ ಶಯ್ಯಾಗೃಹದೊಳ್ ರತ್ನಪರಿಯಂಕದಲ್ಲಿ ನಿದ್ರಾಸು ಖದಿಂದಿರುತ್ತಿರಲು ಉಷಃಕಾಲದೊಳ್ ನೃತ್ಯಮೃತ್ಯಲುಂ ಕೈವಾರಿ ಸುವ ಸಕಲವಾದ್ಯಂಗಳಂ ಗಾಯಕರು ಹಾಡುವ ಉದಯರಾಗಾಲಾಪಗ ಳಿಂದ ಎಚ್ಚರಂಗೊಂಡು ದೇವರುಗಳಂ ವಿಪ್ರಮುಗ್ಧಂಗಳಂ ಕಪಿಲದೇ ನು ಫಲಪುಷ್ಪಂಗಳಂ ನೋಡಿ ನಿಜದೇವತಾಸ್ತುತಿಯಂ ಹೇಳುತ್ತಾ ಶತಪ ಧದಿಂ ಚಲಿಸುತ್ತಾ, ಇಂದ್ರ ದಿಕ್ಕಿನೊಳ್ ಸೂರ್ಯನ ಕುದುರೆಗಳಿಂದ ತುಳ ಯಲ್ಪಟ್ಟ ಉದಯಗಿರಿ ಪ್ರದೇಶದಿಂದೆದ್ದು ಇರುವ ಗೈರಿಕಾದಿ ಧಾತು ಧೂಳಿಗಳೋ? ನಾರಾಯಣನಿಂ ಛೇದಿಸಲ್ಪಟ್ಟ ಮಂದೇಹರ ದೇಹ ಘಾಯದಿಂದ ಹೊರಟು ಚೆಲ್ಲಿ ಇರುವ ರಕ್ತಂಗಳೋ? ಉದಯಗಿರಿಯೊ ಳಿರುವ ಸನ್ಯಾಸಿಗಳು ಹರಡಿರುವ ಕಾಷಾಯ ವಸ್ತ್ರಂಗಳೋ? ಮಿತ್ರನಂ ಕುರಿತು ಸ್ನಿಗ್ಧೆಯರಿಂದೆರಚಲ್ಪಟ್ಟ ಕೇಶಳಿಯೋ? ರಾತ್ರಿಯೊಳ್ ಸರಸ ಕ್ರೀಡಾದಿಗಳು ಮುಗಿದುದೆ ಬೆದರಿಯೆದ್ದು ಬರುವ ಜಾರಜಾರಿಣಿಯರ ಹೃದ ಯ ಕೋಪಾಗ್ನಿ ಪ್ರಭೆಯೋ? ಪೂರ್ವದಿಕ್ಕಾಮಿನಿಯು ಹೊದ್ದಿರುವ ಚಂ ದ್ರಗಾವಿಯ ಮೇಲು ಮುಸುಗಿನ ವಸ್ತ್ರವೋ ಎಂದು ತೋರುವ ಪ್ರಭೆ ಯಿಂದೊಡಗೂಡಿ ಉದಯಿಸುವ ಸೂರ್ಯನಂ ಧ್ಯಾನಿಸುತ್ತ ಸ್ನಾನಸಂಧ್ಯಾ ದಿ ನಿತ್ಯಕರ್ಮಂಗಳಂ ಮಾಡಿ ತತ್ಕಾಲೋಚಿತಂಗಳಾದ ಮಹಾದಾನಂಗಳಂ ಕೊಟ್ಟು ಮಹಾರಾಜಾಧಿರಾಜರಿಗೆ ಯೋಗ್ಯವಾದ ಭೋಜನೋಪಚಾ ರಂಗಳಂ ಪರಿಗ್ರಹಿಸಿ, ನಿತಜನವೃಷ್ಟಿ ಬಂದುರಂಗ ಮಾಳಿಗೆಯ ಹ ಜಾರ ದೊಳ್ಕುಳಿತು ವಿದ್ಯಾಸಾಗರರೆಂಬ ಉಪಾಧ್ಯರಂ ಕರಸಿ ಪ್ರತ್ಯ ತ್ಥಾನಾದಿಗಳಿಂದ ನಮಸ್ಕರಿಸಿ ಕುಳ್ಳಿರಿಸಿಕೊಂಡು ಅವರ ಸಂಗಡ ಪ್ರ ಪಂಚದಲ್ಲಿ ಗೋವುಗಳು ಯಾವ ಯಾವ ಪ್ರಕಾರಂಗಳಾಗಿ ಇರುವವು

ಎಷ್ಟೆಷ್ಟು ಬಗೆಯಾಗಿ ತೋರುವವು. ಅವರೊಳ್ ಸುವರ್ಣ ಸಮಾನ ಪುಷ್ಟವಾಗಿ ಮೂರು ಶೃಂಗಗಳಿಂದಕೂಡಿ ಸ್ನಿಗ್ಧವಾದ ಬಾಲವುಳ್ಳದ್ದಾಗಿ ಐದು ಮೊಲೆಗಳಿಂದ ಸಕಲ ಇಷ್ಟಾರ್ಥಂಗಳುಂ ಕರೆವ ಧೇನುಗಳು ಎಂತಿರುವವು ಅವರ ಪ್ರಕಾರ ಲಕ್ಷಣ ಸ್ವರೂಪ ಮಹಾತ್ಮ್ಯ ದಾನವಿಧಾನಂಗಳಿಂದಾಗುವ ಪುಣ್ಯಫಲ ವಿಶೇಷಂಗಳಂ ನಮಗೆ ಬೋಧಿಸ ಬೇಕೆಂದು ನುಡಿದುದ ಆರಾಜಕುಮಾರನ ಮಾತಂ ಕೇಳಿ, ವಿದ್ಯಾಸಾಗರನು ಅದೆಲ್ಲವಂ ವಿಸ್ತಾರವಾಗಿ ನಿರೂಪಿಸಿದನೆಂತೆನೆ:-ಎಲೈ ದೀರ್ಘಾಯುಷ್ಮಂತನಾದ ರಾಜಕುಮಾರನೆ ! ಸಾವಧಾನದಿಂದ ಕೇಳು. ಇದು ಭಾರತದೊಳಿರುವದು ವಸಿಷ್ಠಮುನಿಯು ಕಲ್ಮಾಷಪಾದರಾಯನಿಗೆ ನಿರೂಪಿಸಿದನು. ಅದು ಹ್ಯಾಗೆಂದರೆ :—

ಪೂರ್ವದಲ್ಲಿ ಗೋವುಗಳು ಬ್ರಹ್ಮದೇವರಿಂದ ಸೃಜಿಸಲ್ಪಟ್ಟು ಪುನಃ ಆಬ್ರಹ್ಮಸಂಕಾರಿತು ಲಕ್ಷವರ್ಷ ತಪವಂ ಮಾಡಿ ಬ್ರಹ್ಮದೇವರಿಂದ ತಮಗೆ ಅಲಂಕಾರಾರ್ಥವಾಗಿಯು ಸಾಧನಾರ್ಥವಾಗಿಯು ಬೇಕಾಗಿರುವ ಕೊಂಬುಗಳಂ ತಮ್ಮಿಂದ ಲೋಕಗಳಿಗೆಲ್ಲಾ ಆಗುವ ಉಪಕಾರವಂ ತಮ್ಮ ಗೋಮಯಾದಿಗಳಿಗೆ ಸರ್ವಶುದ್ಧಿ ಕರತ್ವವುಂ ಮಾಡುವ ಸಕಲ ಯಜ್ಞಾದಿಗಳಲ್ಲಿ ತಮ್ಮನ್ನೇ ದಕ್ಷಿಣೆಯಾಗಿ ಕೊಡುವಂತೆಯು, ತಮ್ಮ ದಾನದಿಂದ ಕೊಡುವವರಿಗೆ ಸಕಲಪುಣ್ಯಪ್ರಾಪ್ತಿಯುಂ ತಮ್ಮ ನಿಂದಿಸಿಬಾಧಿಸುವರಿಗೆ ಅನೇಕಪಾಪಪ್ರಾಪ್ತಿಯುಂ. ಇವು ಎಲ್ಲವಂ ವರವಾಗಿ ಕೇಳಿ ಪಡೆದುಕೊಂಡು ತಾವು ಲೋಕೋಪಕಾರ ಮಾಡ ರಕ್ಷಣ ಕಾರ್ಯಂಗಳಂ ನಡಿಸಿ ಅವತರಿಸಿ ಇರುವದರಿಂದ ಗೋವುಗಳಿಗೆ ಸಮಾನವಾದ ಪುಣ್ಯ ವಸ್ತುಗಳೇ ಇಲ್ಲ. ಕ್ಷೀರಾಧ್ಯಾಜ್ಯಗಳಿಂದ ಸಕಲ ಯಜ್ಞಾದಿ ಪ್ರವರ್ತನೆಯು, ಸಮಸ್ತ ದೇವತಾತೃಪ್ತಿಯು, ಸರ್ವ ಪ್ರಾಣಿಗಳ ಪೋಷಣೆಯು, ಗೋವುಗಳಿಂದಲೇ ಉಂಟಾಗುವವು, ಎರಡರಿಂದ ಆರರವರಿಗೂ ಸ್ತನಗಳುಳ್ಳ ಬಿಳಿದು ಕಪ್ಪು ಕೆಂಪು ಹಳದಿ ವರ್ಣಗಳಿಂದಲೂ ಮಿಶ್ರವರ್ಣಂಗಳಿಂದಲೂ ಬಹುವಿಧಂಗಳಾಗಿರುವವು, ಎಳೆಯ ಕರುಗಳುಳ್ಳ ಸಮೃದ್ಧಿಯಾಗಿ ಕ್ಷೀರವಂ ಕರೆವ ಕಪಿಲಧೇನುವನ್ನು ಅಲಂಕರಿಸಿ ಸತ್ಪಾತ್ರನಾದ ಬ್ರಾಹ್ಮಣನಿಗೆ ಭೂಷಣಾದಿಗಳಿಂದ ಸತ್ಕರಿಸಿ ಕರೆಯುವ ಕಂಚು ಸಹಿತ ಯಥೋಕ್ತ ದಕ್ಷಿಣಾ ಪುರಸ್ಸರವಾಗಿ ದಾನವಂ ಕೊಟ್ಟರೆ ಅಂದ್ರ ಪದವಿಯನ್ನು ಐದಿ ಇಂದ್ರಲೋ

ಕದೊಳು ಹಸುವಿನ ಒಂದೊಂದು ರೋಮಕ್ಕೊಂದೊಂದು ವರ್ಷದವರೆ
ರೆಗೆ ಇಂದ್ರಭೋಗವನ್ನನುಭವಿಸುವನು, ಕರೀ ಹಸುವನ್ನು ಈಹೇಳಿದ
ಪ್ರಕಾರ ಸತ್ಕರಿಶಿ ಶ್ರೋತ್ರಿಯನಾದ ಬ್ರಾಹ್ಮಣನಿಗೆ ಕೊಡಲು ವಸ್ತು
ಲೋಕಪ್ರಾಪ್ತಿ ಉಂಟಾಗುವದು, ಇದೇ ಮೇರಿಗೆ ಎಳೆಕರುವಿನಿಂದೊಡ
ಗೂಡಿದ ಬಿಳೀಹಸುವನ್ನು ದರಿದ್ರನಾದ ಬ್ರಾಹ್ಮಣನಿಗೆ ಕೊಟ್ಟರೆ ವರುಣ
ಲೋಕದಲ್ಲಿ ವಾಸವುಂಟಾಗುವದು, ಕುಟುಂಬಿಯಾದ ಬ್ರಾಹ್ಮಣನಿಗೆ ಪು
ಸ್ಕರ ಹೊಂಬಣ್ಣವಾದ ಗೋವಂ ದಾನವಂ ಕೊಡಲು ಕುಬೇರಲೋಕ
ದಲ್ಲಿ ಸೌಖ್ಯ ಉಂಟಾಗುವದು, ಧೂಮ್ರವರ್ಣವಾದ ಗೋವಂ ದಾನವ
ನ್ನು ಆಶ್ರಿತನಾದ ಬ್ರಾಹ್ಮಣನಿಗೆ ಕೊಡಲು ಪಿತೃ ಋಣಮುಕ್ತನಾಗಿ ಪಿ
ತೃಲೋಕ ಭೋಗವಂ ಪಡೆವನು, ಹಳದೀವರ್ಣವಾದ ಹಸುವಂ ದಾನ
ವಂ ಕೊಡಲು ವಿಶ್ವೇದೇವಲೋಕದಲ್ಲಿ ವಾಸವಂ ಗೈವನು, ಅಮಲವರ್ಣ
ವಾದ ಗೋವಂ ದಾನವಂ ಶಿವಪ್ರೀತಿಯಾಗಿ ಮಾಡಲು ಶಿವಲೋಕ ಪ್ರಾಪ್ತಿ
ಉಂಟು, ಚಿತ್ರವರ್ಣವಾದ ಗೋವಿನ ದಾನವಂ ಕಾಂಸ್ಯ ದೋಹನ ಸಹಿತ
ವಾಗಿ ಸತ್ಪಾತ್ರದಲ್ಲಿ ಕೊಡಲು ವಿಚಿತ್ರ ಭೋಗಂಗಳನ್ನನುಭವಿಸುವನು,
ಇದಲ್ಲದೆ ಯಜ್ಞಾದಿ ಉಪಕರಣಂಗಳಂ ವಹಿಸುವ ಸಾಧುವಾಗಿ ಎಳದಾಗಿ
ಚನ್ನಾಗಿರುವವೃಷಭವಂ ರತ್ನಶೃಂಗ ಗಳಿಂದಲಂಕರಿಶಿ ಆಹಿತಾಗ್ನಿಗಳಾದ
ವರಿಗೆ ದಾನವಂ ಮಾಡಲು ಮೂರುಲೋಕಂಗಳಲ್ಲಿಯೂ ನಿರುಪಮಂಗ
ಳಾದ ಸುಖಂಗಳನ್ನು ಐದುವನು ಸಂಶಯವಿಲ್ಲ, ಕಪ್ಪಾಗಿರುವ ಕಂಠದೊ
ಳಗೂಡಿ ಎಳದಾಗಿ ಸಾಧುವಾದ ಸುಲಕ್ಷಣವುಳ್ಳ ವೃಷಭಗಳಂ ಅಲಂಕಾರ
ಸಹಿತವಾಗಿ ದಾನವಂ ಕೊಡಲು ಬ್ರಹ್ಮಲೋಕದಲ್ಲಿ ಸುಖವಾಗಿರುವನು,
ಕೆಂಪುವರ್ಣವಾಗಿ ಮುಖದಲ್ಲಿಯು ಬಾಲದಲ್ಲಿಯು ಕೊಂಬು ಕಾಲು
ಗೊರಸುಗಳು ಸಹ ಬಿಳಿದಾಗಿರುವ ವೃಷಭವು ನೀಲವೃಷಭವೆನಿಶಿ ಕೊಂ
ಬುವದು,ಇಂಥಾನೀಲವೃಷಭವನ್ನು ಹೋಮಪೂರ್ವಕವಾಗಿಪೂಜಿಶಿ ಸತ್ಪಾ
ತ್ರದೊಳು ದಾನವಂ ಕೊಡಲು ಕುಲಕೋಟಿ ಸಮೇತವಾಗಿ ಶಾಶ್ವತವಾದ
ಪುಣ್ಯಲೋಕವನ್ನು ಐದುವನು, ಮತ್ತು ಅಮೃತರೂಪವಾದ ಹಾಲು
ಮೊಸರು ತುಪ್ಪಗಳು ಇದಕ್ಕೆ ಕಾರಣವಾದ ಗೋವುಗಳು ಹೃದಯದಲ್ಲಿ
ಕಣ್ಣಿನಲ್ಲಿ, ಶ್ರೋತ್ರದಲ್ಲಿ, ಶರೀರದಲ್ಲಿ, ಧಾತುಗಳಲ್ಲಿ,ಮುಂದುಗಡೆಯಲ್ಲಿ

ತಿಂಪುಗಡೆಯಲ್ಲಿ, ಪಾರ್ಶ್ವಗಳಲ್ಲಿ, ನಿದ್ರೆಯಲ್ಲಿ, ಜಾಗ್ರತೆಯಲ್ಲಿ, ಸ್ವಪ್ನದಲ್ಲಿ, ಸರ್ವದಾ ಸರ್ವತ್ರ ಇರುತ ರಕ್ಷಿಸಲೀಯುಂಬ ಅಮೃತಾಜ್ಯ ಗೋಮುತ್ರವಂ ತ್ರಿಸಂಧ್ಯಾ ಕಾಲದಲ್ಲಿಯೂ ಪಠಿಶಿದರೆ ಸಕಲ ಪಾಪಂಗಳೂ ಹೋಗಿ ಯಜ್ಞಫಲ ಉಂಟಾಗುವದು, ಒಂದು ಗೋದಾನಕ್ಕೆ ಫಲವೆಷ್ಟು ಹೇಳತ್ತೋ ಆ ಮೇರೆಗೆಯಷ್ಟು ಗೋದಾನವಂ ಮಾಡಿದರೂ ಫಲವು ಅಷ್ಟು ಹೆಚ್ಚಾಗುವದು, ಗೋದಾನವನ್ನು ಸಾಧಾರಣವಾಗಿ ವಿಸುತರಿಯುಲ್ಲೂ ಮಾಡಲು ಹಿಂದೆಹೇಳಿದ ಫಲಗಳುಂಟು, ಇದಲ್ಲದೆ ಅಮಾವಾಸ್ಯೆ ಪೂರ್ಣಿಮಾ ಸಂಕ್ರಮಣ ವ್ಯತೀಪಾತ ಮಹಾಲಯ ಗ್ರಹಣ ಶ್ರಾದ್ಧ ತೀರ್ಥಕ್ಷೇತ್ರ ವ್ರತಾಂಗ ಸಾದ್ಗುಣ್ಯಾದಿಗಳಲ್ಲಿ ಸಾಲಂಕೃತವಾಗಿಕರುಸಹಿತ ಕರೆಯುವ ಲಕ್ಷಣವುಳ್ಳ ಗೋವಿನದಾನವಂ ದರಿದ್ರನಾಗಿ ಶ್ರೋತ್ರಿಯನಾದ ಬ್ರಾಹ್ಮಣನಿಗೆ ಯಥೋಕ್ತಾಲಂಕಾರವಂಮಾಡಿ ದಕ್ಷಿಣೆಸಹಿತವಾಗಿ ಪುಚ್ಛವಂಪಿಡಿದು ಉದಕಧಾರಾ ಪುರಸ್ಸರವಾಗಿ ಮಂತ್ರದಿಂದಕೊಡಲು ದೇಶವೈಲಕ್ಷಣ್ಯ ಕಾಲವೈಲಕ್ಷಣ್ಯ ಪಾತ್ರವೈಲಕ್ಷಣ್ಯ ವಸ್ತುವೈಲಕ್ಷಣ್ಯಾನುಸಾರವಾಗಿ ಅನೇಕವಾದ ಅಗ್ನಿಷ್ಟೋಮ ಅತಿರಾತ್ರ ವಾಜಪೇಯ ಅಶ್ವಮೇಧಾದಿ ಫಲಂಗಳನ್ನು ಹೆಚ್ಚಾಗಿಕೊಡುವದು. ಇದರಲ್ಲಿ ಉಭಯಮುಖೀ ಗೋದಾನವಂ ಘೃತಪಾತ್ರ ತಿಲಪರ್ವ ಮೊದಲಾದ ಉಕ್ತವಸ್ತುಗಳಿಂದ ಸತ್ಕರಿಶಿ ತನ್ಮಂತ್ರದಿಂದ ಜಪಿಸಿ ಸತ್ಪಾತ್ರದೊಳು ವಿಶೇಷ ದಕ್ಷಿಣಾಸಹಿತವಾಗಿ ಹಿಂದೆ ಹೇಳಿದ ಮೇರೆಗೆ ಸಕಲ ಸುಪತ್ಸಮೃದ್ಧಿ ಯುತನಾಗಿ ದಾನವಂಕೊಡಲು ಇಂದ್ರಾದಿ ಲೋಕಂಗಳಂ ಪಡದು ಅಲ್ಲಿಯ ಭೋಗಂಗಳಂನನುಭವಿಸಿ ಬ್ರಹ್ಮಲೋಕವಂ ಐದುವನು, ಇಂಥಾ ಉಭಯ ತೋಮುಖೀ ಗೋವಿನ ದಾನವಂ ಗ್ರಹಣಾದಿ ಪುಣ್ಯಕಾಲದಲ್ಲಿ ಕೊಟ್ಟವನು ಮನ್ವಾದಿ ಪುಣ್ಯಲೋಕಂಗಳಂ ಚಿರಕಾಲನನುಭವಿಶಿ ಬ್ರಹ್ಮಪದವಿಯಂ ನೈದವನು, ಇಂಥಾ ಉಭಯತೋಮುಖೀ ಗೋದಾನವನ್ನು ಅನೇಕವಾಗಿ ಪುಣ್ಯಕಾಲಂಗಳಲ್ಲಿ ಕೊಟ್ಟರೆ ಬ್ರಹ್ಮನಿಂದ ಪೂಜ್ಯನಾಗಿ ಸಾಯುಜ್ಯವಂ ನೈದವನು. ಈಮೇರೆ ತಿಲಗೋದಾನ ರಜತಗೋದಾನ ಸ್ವರ್ಣಗೋದಾನಂಗಳಂ ಮಾಡಲು ಸಕಲ ಪಾಪದಿಂದ ಬಿಡಲ್ಪಟ್ಟು ಸಕಲ ಸಂಪತ್ಸಂಮೃದ್ಧನಾಗಿ ಆದಿತ್ಯ ಲೋಕವಂ ಪಡೆವನು, ಈ ಗೋದಾ

ನಗಳೆ ಷೋಡಶ ಮಹಾದಾನವಲ್ಲಿ ದಶಮಹಾದಾನವಲ್ಲಿ ಕೇವಲ ದಶದಾನ ವಲ್ಲಿಯು ಆದಿ ಮಧ್ಯಾಂತಗಳೋಳ್ ಪ್ರತಿಪಾದಿತಂಗಳಾಗಿ ಇರುವವು, ಆಷೋಡಶ ಮಹಾದಾನಂಗಳು ಯಾವವೆಂದರೆ.—ತುಲಾ ಪುರುಷದಾನ, ಪಂಚ ಲಾಂಗಲ ದಾನ, ಮಹಾಭೂದಾನ, ಬ್ರಹ್ಮಾಂಡದಾನ; ಹಿರಣ್ಯ ಗರ್ಭದಾನ, ಕಲ್ಪಪಾದಪದಾನ, ಗೋಸಹಸ್ರದಾನ, ಹಿರಣ್ಯ ಕಾಮಧೇನು ದಾನ, ಸಾಲಂಕೃತಾಹೂಯ ಕನ್ಯಾದಾನ, ಹಿರಣಾಶ್ವರಥದಾನ, ಹಿರಣ್ಯ ಹಸ್ತಿರಥದಾನ, ವಿಶ್ವಚಕ್ರದಾನ, ಕಲ್ಪಲತಾದಾನ, ಸಪ್ತಸಾಗರ ದಾನ, ರತ್ನಧೇನುದಾನ, ಮಹಾ ಭೂತಘಟದಾನ, ಇಂತೆಂದು ಹದಿನಾರು ಪ್ರಕಾರವಾಗಿ ಪ್ರಸಿದ್ಧವಾಗಿರುವವು, ಈ ಷೋಡಶ ಮಹಾದಾನಕ್ಕೆ ತುಲಾ ಪುರುಷದಾನವೆ ಆದಿಯಾಗಿ ಕಲ್ಪ ಪ್ರತಿಪಾದಕ ವಾಗಿ ಪ್ರಕೃತಿ ಎನಿಸಿಕೊಂಡು ಆಚಾರ್ಯ ಬ್ರಹ್ಮನವಸ್ಥ ಹೋತೃ ಜಾಪಕ ಪಾಠಕರೆಂಬ ಸಪ್ತವಿಂಶತಿ ಪುರುಷ ಪರುಣಾತ್ಮಿಕವಾಗಿ, ಅಗ್ನಿಕುಂಡ ಚತುಷ್ಟಯಾನ್ವಿತವಾಗಿ, ಗೋವಿಂದೋಮಾಪತಿ ಬ್ರಹ್ಮ ಮೊದಲಾದ ತುಲಾದಂತ ಪ್ರತಿಮೆಗಳು, ಇನ್ನು ನವಗ್ರಹ ಪ್ರತಿಮೆಗಳು, ಕರೆತಳ ಪ್ರತಿಮೆಗಳು ಮುಂತಾದ ಕಲ್ಪೋಕ್ತ ದೇವತಾ ಪ್ರತಿಮೆಗಳಿಂ ಸಹಿತವಾಗಿ, ಋಗ್ಯಜುಸ್ಸಾಮಾಥರ್ವಣ ಮಂತ್ರಂಗಳಿಂದ ಯಥಾವಿಧಿಯಾಗಿ, ಸಮಿದಾಜ್ಯ ಚರುಗಳನ್ನು ಸ್ರುಕ್ರುವಗಳಿಂದ ಯಜಮಾನನ ಕರ್ತೃಕೋದ್ದೇಶತ್ಯಾಗ ಯುತವಾಗಿ ಹವನವಂ ಮಾಡಲ್ಪಟ್ಟು ಸುವರ್ಣ ತುಲಾ, ರಜತ ತುಲಾ ಎಂದು ಪ್ರಸಿದ್ಧವಾಗಿ ಇರುವದು, ಕಡಿಮೆ ಹದಿನೈದು ದಾನಂಗಳು ತುಲಾ ಪುರುಷ ದಾನವನ್ನೆ ಅನುಕಲ್ಪವಾಗಿ ತಾಳ್ದು ವಿಕೃತಿ ಎನಿಸಿಕೊಂಡು ಇರುವವು, ಈ ಶೋಡಶ ಮಹಾದಾನಂಗಳು ಪ್ರಭುತ್ವ ಉಳ್ಳವರಿಂದ ಮಾಡತಕ್ಕದ್ದು, ವೇದಶಾಸ್ತ್ರ ಸಂಪನ್ನರಾದ ಯೋಗ್ಯರಿಂದಲೆ ಪ್ರತಿಗ್ರಹಿಸುವಂಥಾವು ಸರ್ವ ಸಾಧಾರಣವಲ್ಲಾ, ಇನ್ನು ಮಹಾ ದಶದಾನಂಗಳು ಯಾವವೆಂದರೆ ಕನಕದಾನ, ಅಶ್ವದಾನ, ತಿಲಪರ್ವತದಾನ, ಗಜದಾನ, ಭೂದಾನ, ಸೊಪಸ್ಕರೋಪಕರಣ ಸಹಿತ ಗೃಹದಾನ, ಕನ್ಯಾದಾನ, ಕಪಿಲಧೇನು ದಾನ, ದಾಸೀದಾನ, ರಥದಾನ, ಇಂತೆಂದು ಹೇಳಲ್ಪಡುತ್ತಲಿರುವವು, ಇದು ಸಂಪನ್ನರಿಂದ ಕೊಡತಕ್ಕದ್ದು, ಇದಲ್ಲದೆ ಕೇವಲದಶದಾ

ಗಳಾಗಿ ಇರುವವು; ಸಮಸ್ತ ಲೋಕಂಗಳಿಗೂ ತಾಯಿಯೆನಿಸಿದ ಗೋವು ಗಳಂ ಕಂಡು ನಡೆಸುವಲ್ಲಿ ಪ್ರದಕ್ಷಿಣವಾಗಿ ಪೋಗುತ್ತಾ ಕೈಯಿಂದ ಸ ವರಿದರೆ ಭೂಪ್ರದಕ್ಷಿಣೆ ಮಾಡಿದಫಲ ಉಂಟು,ಚರ್ಮವು,ರೋಮಂಗಳು, ಶೃಂಗಗಳು, ಪಾದಂಗಳು,ಕ್ಷೀರಗಳು, ಮಾಂಸಗಳು ಮುಂತಾದಸಕಲವು ಯಜ್ಞಾದಿಸಾಧನಂಗಳಾಗಿಯೂ ಸರ್ವೋಪಯುಕ್ತಂಗಳಾಗಿಯೂಇರು ವಂತೆ ಭೂಮಿಯಲ್ಲಿ ಅವತರಿಸಿರುವ ದೇನುಗಳಿಗಿಂತಾ ಪವಿತ್ರವಾಗಿ ಪಾಪ ಪರಿಹಾರಕವಾಗಿ ಇರುವವಸ್ತು ದೊರೆಯಲಾರದು,ಸಕಲಕ್ಕೂ ತಾಯಿಯೂ ಗಿ ಅಮೃತವಂ ಕೊಟ್ಟು ರಕ್ಷಿಸುವ ಗೋವಿಗೆ ನಿತ್ಯವು ನಮಸ್ಕಾರವಂ ಮಾಡಬೇಕು, ಮಾಂಧಾತ, ನಹುಷ, ಯಯಾತಿ, ಮೊದಲಾದ ಚಕ್ರವ ರ್ತಿಗಳು ಗೋಪೂಜೆಯಿಂ ಗೋದಾನದಿಂದಲುಂ ಇಂದ್ರನಿಗೆ ಅಧಿಕವಾದ ಪದವಿಯಂ ಪಡೆದರು, ಗೋಸಂಬಂಧವಾದ ಪಂಚಗವ್ಯದಿಂದ ಸಕಲದೇ ಹಂಗಳು ಸಕಲ ಪದಾರ್ಥಂಗಳು ಶುದ್ಧಿಯಾಗುವವು, ಗೋಪ್ರದಕ್ಷಿಣ ಭೂಪ್ರದಕ್ಷಿಣ, ಗೋನಮಸ್ಕಾರವೆ ಸಕಲದೇವತಾ ನಮಸ್ಕಾರ, ಒಂದು ಗೋಮಾತ್ರ ಸಂರಕ್ಷಣೆಯಿಂದ ಸಕಲ ಧರ್ಮವು ಬರುವದು, ಹಸುಗಳೆ ಬ್ರಹ್ಮನೆಂದು ವಿಷ್ಣುವೆಂದು, ಮಹೇಶ್ವರನೆಂದು ಸಕಲ ದೇವತೆಗಳೆಂ ದು ಪ್ರತಿಪಾದಿಸುವ ಮಂತ್ರವಂ ಜಪಿಸಿದರೆ ಸಕಲ ಪಾಪಂಗಳಂ ಪರಿಹ ರಿಸಿ ಸಕಲೇಷ್ಟಾರ್ಥವಂ ಕೊಡುವದು, ಗೋವಿಗೆ ಆಹಾರವಾದ ಧಾನ್ಯಂ ಗಳಂ ತೊಳೆದು ಪಾಕವಂ ಮಾಡಿ ಭುಜಿಸಿದರೆ ಸಕಲ ಕೃಚ್ಛ್ರ ಫಲಗ ಳಂ ಕೊಡುವದು. ಗೋವುಗಳ ಕೊಂಬುಗಳಲ್ಲಿ ಸಕಲ ತೀರ್ಥಂಗಳು ಇರುವವು. ಶೃಂಗಮಧ್ಯದಲ್ಲಿ ಸಕಲ ಕ್ಷೇತ್ರಂಗಳು ಇರುವವು. ಮುಖ ದಲ್ಲಿ ಜ್ಯೇಷ್ಠಾದೇವಿಯು, ಕಣ್ಣುಗಳಲ್ಲಿ ಸೂರ್ಯ ಚಂದ್ರರು, ಕಿವಿಗ ಳೊಳು ಶ್ರುತಿಗಳು,ಬಾಯೊಳಗೆ ವಸಿಷ್ಠಾದಿ ಋಷಿಗಳು, ನಾಲಿಗೆಯಲ್ಲಿ ರುದ್ರದೇವರು, ದಂತಗಳಲ್ಲಿ ವರ್ಣಾಭಿಮಾನಿ ದೇವತೆಗಳು, ಕಂಠದಲ್ಲಿ ಗೌರಿದೇವಿಯು, ಬೆನ್ನಿನಲ್ಲಿ ಸಕಲ ದೇವತೆಗಳು, ಕೆಚ್ಚಲಿನಲ್ಲಿ ಲಕ್ಷ್ಮೀ ದೇವಿಯು, ಸ್ತನಗಳಲ್ಲಿ ಚತುರ್ವಾರುಣರು, ಕ್ಷೀರದಲ್ಲಿ ಅಶ್ವಿನೀದೇವತೆ ಗಳು, ದಧಿಯಲ್ಲಿ ಧನ್ವಂತರಿಯು,ಬೆಣ್ಣೆಯಲ್ಲಿ ಸೋಮದೇವತೆಯು, ಆ ಜ್ಯದಲ್ಲಿ ತೇಜೋಮೂರ್ತಿಗಳು, ಪೃಷ್ಠದೇಶದಲ್ಲಿ ಬ್ರಹ್ಮನು, ಕುಕ್ಷಿಯ

ಸುರಭಿ ಎನಿಸಿಕೊಂಬುವದು, ಕೆಂಪರಡು ಬಗೆಯಾಶ್ರೇಷ್ಠಂಗಳು, ಇದಕ್ಕೆ ಸ್ಯಾನಾಧಿಕ ಸ್ತನಂಗಳುಳ್ಳವು ಮಧ್ಯಮಂಗಳಾಗಿ ಇರುವವು, ಇದು ಇರುವ ಹಸುಗಳ ಕ್ಷೀರಂಗಳು ಹತ್ತು ದಿವಸದವರಿಗೆ ಹವಿರ್ಯೋಗ್ಯಂಗಳಲ್ಲ; ಕಾಮಧೇನುಗಳ್ ಧೇನೂಪನಿಷತ್ಪ್ರಕಾರದಿಂದ ಹೇಳಿದ್ದರೊಳಗೆ ನೀವು ಅಪ್ಪಣೆಯಂ ಕೊಟ್ಟಮೇರೆಗೆ ಇರುವದು, ಕಾಮಧೇನು ಒಂದಲ್ಲದೆ ಮತ್ತೊಂದು ಕಾಣಲ್ಪಡಲಿಲ್ಲ. ಆಧೇನುವು ದೇವಲೋಕವಲ್ಲಾಗಲಿ ಭೂಮಿಯಲ್ಲಿ ವಸಿಷ್ಠಾದಿಮಹಾಋಷಿಗಳ ಆಶ್ರಮ ಬಳಿಯಲ್ಲಿ ಆಗಲಿ ಕುಶದ್ವೀಪದಲ್ಲಿ ಆಗಲಿ ಯಾವ್ಯಾವರೂ ಒಂದು ಬಳಿಯಲ್ಲಿ ಇರುವದು, ಎಂದು ತನಗೆ ತಿಳಿದಷ್ಟಂ ಹೇಳಿ ಸುಮ್ಮನೆ ಇರುವ ವಿದ್ಯಾಸಾಗರನಂ ನೋಡಿ ರಾಜೇಂದ್ರನು ಇದು ಬಹು ಚೆನ್ನಾಗಿ ನಿರೂಪಿಸಲ್ಪಟ್ಟಿತು ಎಂದು ಉಪಾಧ್ಯಾಯನಂ ಸನ್ಮಾನಿಸಿ ಮರ್ಯಾದೆಯಿಂದ ಅವನಂ ಕಳುಹಿ, ಭಾಮಾಗುಪ್ತನಂ ಕರದು ಎಲೈ ಭೃತ್ಯವರ್ಯನೆ! ಜಗತ್ತಿನೋಳ್ ನಿನ್ನಂಥಾ ದೂತರು ಒಬ್ಬರೂ ಇಲ್ಲ, ನೀನು ಸಕಲ ಕಾರ್ಯಮಂ ಕ್ಷಣಮಾತ್ರದಲ್ಲಿ ನೆರವೇರಿಸುತ್ತ ಬಹು ಸಮರ್ಥನಾಗಿ ಇರುವದರಿಂದ ಸಕಲಹಿತ ರಹಸ್ಯವಾದ ಕಾರ್ಯಂಗಳಂ ನಿನಗೆ ಹೇಳುವೆನು, ಈಗ ಪ್ರಕೃತದೊಳ್ ಐದುಮೊಲೆಯುಳ್ಳ ಮೂರು ಶೃಂಗವುಳ್ಳ ಎರಡು ಪುಚ್ಛ ಸಹಿತವಾಗಿ ಸಿಂಹಮುಖದಿಂದ ಸುವರ್ಣ ಸಮಾನವರ್ಣವುಳ್ಳ ಒಂದು ಧೇನುವನ್ನು ದೇವಲೋಕ ವಸಿಷ್ಠಾದಿ ಮಹಾ ಋಷ್ಯಾಶ್ರಮ ಕುಶದ್ವೀಪ ಮೊದಲಾದ ಪ್ರದೇಶಗಳಲ್ಲಿ ಎಲ್ಲಿ ಯಾವರು ವಿಚಾರಿಸಿ ತಿಳಿದುಕೊಂಡುಬಂದು ಹೇಳುವದೆಂದು ಆಜ್ಞಾಪಿಸಲು, ಆ ಕ್ಷಣದಲ್ಲಿಯೆ ಭಾಮಾಗುಪ್ತನ ವಾಮಭಾಗದೊಳ್, ಗರುತ್ಮಂತನು ಚರಿಸಲು, ಬಲಭಾಗದಲ್ಲಿ ವಾಯಸಂಗಳು ಹಾರಲು, ಆತನ ಅಭಿಮುಖದಲ್ಲಿ ಕರು ಸಹಿತವಾದ ಗೋವು ಎದುರಾಗಿ ಬರಲು, ಹಿಂದುಗಡೆಯಲ್ಲಿ ಘಂಟಾನಾದವಾಗಲು, ಉಪರಿ ಭಾಗದಲ್ಲಿ ಮಂದ ಮಾರುತನು ಪ್ರದಕ್ಷಿಣವಾಗಿ ಬೀಸಲು, ಇದು ಕಂಡು, ರಾಯನ ಸಮೀಪದಲ್ಲಿ ಇರುವ ಒಬ್ಬ ಶಾಕುನಿಕ ಬ್ರಾಹ್ಮಣನು ಆಗ ಆದ ಶಕುನಂಗಳಂ ಶ್ಲಾಘಿಸುತ್ತ, ಬಾಯಿಂದ ಲೊಚ್ಚುಗರೆಯುತ್ತ, ಶಿರಃಕಂಪವಂ ಮಾಡಲು, ರಾಯನು ಆ ಬ್ರಾಹ್ಮಣನಂ ಕುರಿತು ಇದೇನು ವಿಶೇಷವೆನಲು, ಆ ಬ್ರಾಹ್ಮಣ

ನು ರಾಯನಂ ಕುರಿತು, ಈಗಿನ ಪ್ರಯಾಣ ಕಾಲದಲ್ಲಿ ಆದ ಪಾಪು ಗರುಡ, ವಾಯಸ ಬಲ, ಗೋದರ್ಶನ, ಘಂಟಾರವಂಗಳಿಂದಾ ಯಾವು ಯಾವ ನಿಮಿತ್ತ[illegible]ನು ಕೃತಕಾರ್ಯನಾಗಿ ಬರುವನು. ಮುಂದೆ ಆಕಾರ್ಯದಲ್ಲಿ, ಬಹು ಬಲವಂತನಾದ ಶತ್ರುವು ಭೃತ್ಯನಾಗುವನು, ಆಕಾರ್ಯವು ಯಶಸ್ಕರವಾಗಿ ಇರುವದು. ಅನ್ಯ ಕಾರ್ಯವಾದರು ಸ್ವಕಾರ್ಯಕ್ಕಿಂತಾ ಅಧಿಕವಾಗಿ ತೋರುವದು ಎಂದು ವಿಜ್ಞಾಪಿಸಲು. ಆಬ್ರಾಹ್ಮಣನಮಾತಂ ಕೇಳಿದ ರಾಜನು, ಅದರ ವಿವರವಲ್ಲಿ ಕುತೂಹಲನಾಗಿ ಈಶಕುನ ಶಾಸ್ತ್ರ ಮರ್ಯಾದೆಯನ್ನು ವಿವರಿಸೆಂದು ಅಪ್ಪಣೆಯಂಕೊಡಲು, ಆ ಮಾತಂ ಕೇಳಿದ ಆ ಶಾಕುನಿಕ ಬ್ರಾಹ್ಮಣನು, ಆ ಶಕುನ ಮರ್ಯಾದೆಯಂ ಶಾಸ್ತ್ರ ಸಮ್ಮತದಿಂ ಪೇಳುವ ನೆಂತೆನೆ:—

ಕೇಳ್ಳ ನ[illegible]ರಾಜೇಂದ್ರನೆ ! ಪರೋಕ್ಷ ಕಾರ್ಯಂಗಳ ಸಿಧ್ಯಸಿದ್ಧಿಗಳಿಗೆ ಸೂಚಕವಾದ ಶಕುನ ಶಾಸ್ತ್ರದಲ್ಲಿ ನಿಮಿತ್ತವು, ಶುಭಾ ಶುಭ ಭೇದದಿಂದೆರಡು ಪ್ರಕಾರವಾಗಿ ಇರುವದು. ಅದರೊಳು ಶುಭನಿಮಿತ್ತವೆಂತಿರುವದೆಂದರೆ:— ಪೂರ್ಣಕುಂಭಗಳು, ಧ್ವಜ, ಛತ್ರ, ಚಾಮರಗಳು, ದೀಪಮಾಲೆಗಳು, ಧವಿಭಾಂಡಗಳು, ಅಂಕುಶಗಳು ಇಂಥಾವುಗಳು ಯಾವುದಾದರು ಎದುರಾಗಿ ಬಂದರೆ, ಕಾರ್ಯಸಿದ್ಧಿಯಾಗುವದು. ಕನ್ಯೆಯರು, ವೃಷಭಂಗಳು, ಹಸ್ತಿತುರಂಗಗಳು, ವಿಪ್ರಯುಗ್ಮವು ಜ್ವಲಿಸುವ ಅಗ್ನಿಯು, ಫಲ, ಪುಷ್ಪ, ಮಾಲಿಕೆ, ಪದ್ಮ, ಚಂದನ, ಧಾನ್ಯ, ಲಾಜ, ಅನ್ನ, ಶವ, ಇವರೊಳಗೆ ಯಾವದು ಕಂಡರು ಕಾರ್ಯಸಿದ್ಧಿ ಆಗುವದು. ವೇಶ್ಯಾಸ್ತ್ರೀರು, ಆಯುಧಂಗಳು, ಅಕ್ಷತೆ, ತಿಲ, ವಾಜಿರವ, ಬಿಳಿಯವಡಿ, ಸುಮಂಗಲೀರು, ಪುತ್ರವತೀರು, ಕರುಸಹಿತವಾದ ಹಸುಗಳು, ಇವುಗಳೊಳಗಾಗಿ ಯಾವದಾದರೂ, ಅಷ್ಟೂ ಆದರೂ ಎದುರಾಗಿಬಂದರೆ ಶುಭ ಪರಂಪರೆ ಉಂಟಾಗುವದು. ಭೇರಿ, ಮೃದಂಗ, ಶಂಖ, ವೀಣಾ, ವೇಣು, ಧ್ವನಿಗಳು, ಘಂಟೆ, ಜಾಗಟೆ, ವೇದಘೋಷ ಶತಘ್ನಿ ಶಬ್ದಂಗಳು ಕೇಳಲ್ಪಟ್ಟರೆ, ಜಯವಾಗುವದು, ಪೇಳುತಿರುವ ಮಾತಿಗೆ ಸಮುತ್ತರವಾದ ಉಪಶ್ರುತಿ ನಡೆ, ಬದಕು, ಜಯಿಸು, ಬಿಡು, ಬಿಡಿಸು ಹೊಂದು, ಹೊಂದಿಸು ಹೊರಡು, ಈಶಬ್ದ ಶ್ರವಣಗಳಿಂದಾ ಫಲಪ್ರಾಪ್ತಿ ಉಂಟಾಗುವ

ದು ಘೃತ, ಕ್ಷೀರ, ಗಿಂಡಿ, ಸಾಸುವೆ, ಮಾಂಸ, ಗೋರೋಚನ, ರತ್ನಗಳು, ಶ್ವೇತವಸ್ತ್ರಗಳು ಮೃತ್ತಿಕೆಗಳಂ ಕಂಡರೆ ಲಾಭವುಂಟು. ಕೈತಪ್ಪಾಳೆ ಯಿಡುವದು, ಪ್ರದಕ್ಷಿಣವಾಗಿ ಮೃಗಗಳು ಸಂಚರಿಸುವದು, ಪ್ರದಕ್ಷಿಣ ವಾದ ವಾಯುಗತಿಯು. ಹಂಸ, ಗರುಡ, ಮಯೂರ ಇವುಗಳದರ್ಶನವು ಒಳ್ಳೇದು ಈ ಪಕ್ಷಿಗಳ ಕಂಡು ಹೊಡನಾದರೆ ಸಕಲಶುಭಕಾರ್ಯಂಗಳು ಕೈಗೂಡುವದು ಭಾರದ್ವಾಜ ಪಕ್ಷಿಯು ಎಡಗಡೆಯು ಕ್ಷೀರ ವೃಕ್ಷಂಗಳ ನಾಗಲೀ ಶೈಲನಾಗಲಿ ಸೇರಿದರೆ ಐಶ್ವರ್ಯಾಭಿವೃದ್ಧಿ ಆಗುವದು. ಹಾಲ ಹಕ್ಕಿಯು ನಮ್ಮ ಹಿಂದುಗಡೆ ಬಿಟ್ಟಿಕಂಡರೆ ಬಹು ಪುತ್ರಪ್ರಾಪ್ತಿ ಆಗುವದು ನರಿಗಳು ಪ್ರದಕ್ಷಿಣ ಗತಿಯಿಂದಾ ನಡೆಯಲಿ ಅಥವಾ ಎಡಗಡೆಯಲ್ಲಿ ಕೂಗಲಿ ಒಳ್ಳೇದು ಆಗುವದು. ಕೆಂಪುನಾಯಿ ಎಡಕ್ಕೆ ಬಂದರೆ ಶೀಘ್ರದಿಂದ ಕಾರ್ಯಸಿದ್ಧಿ. ಬಿಳೀನಾಯಿ ಎಡಕ್ಕೆ ಬಂದರೆ ಶೀಘ್ರದಲ್ಲಿ ಕಾರ್ಯವಾಗುವದು, ಕರೀ ನಾಯಿ ಎಡಕ್ಕೆ ಬಂದರೆ ಆ ಕ್ಷಣವೇ ಕಾರ್ಯವಾಗುವದು. ಬೂದನಾಯಿ ಎಡಕ್ಕೆ ಬಂದರೆ ನಿರ್ವಿಘ್ನದಿಂದಾ ಕಾರ್ಯವಾಗುವದು ಸುರಾದರ್ಶನ ಒಳ್ಳೇದು. ಕೆಂಬೂತ ಬಲಕ್ಕೆ ಬಂದರೆ ಹಂಸ ಎಡಕ್ಕೆ ಬಂದರೆ ನೆನಸಕಾರ್ಯ ಕೈಗೂಡುವದು. ಈ ಪ್ರಕಾರವಾಗಿ ಶುಭಸೂಚಕಂಗಳಂ ನಿಶ್ಚಯಿಸಿ ಫಲಂಗಳಂ ಹೇಳುವದು. ಇದಲ್ಲದೆ ಅಶುಭ ನಿಮಿತ್ತ ಎಂತಿರುವದು ಎಂದರೆ—ಮಜ್ಜಿಗೆ, ಎಣ್ಣೆಗಡಿಗೆ, ಎಣ್ಣೆ ಪೂತ್ತಿಕೊಂಡವ ಎದುರಿಗೆ ಬರುವವ, ಹಾವು, ವಾನರ, ಸವದೆ, ಚರಣಿ, ಹತ್ತಿ, ತುಬಟ್ಟ ಮೂಗುಹರಕ, ಜೋಗಿ, ಜೋಳಿ, ಸನ್ಯಾಸಿ, ತಲೆ ಕೆದರಿದವರು, ಒದ್ದೆಬಟ್ಟೆ ಉಟ್ಟವರು, ಋತುಸ್ತ್ರೀಯರು, ಸೀರುಯಿಲ್ಲದಗಡಿಗೆ, ಬ್ರಾಹ್ಮಣಸ್ತ್ರೀವಿಧವೆ, ಒಂಟಿಬ್ರಹ್ಮಚಾರಿ, ಕುಂಬಾರ, ರಕ್ತಪುಷ್ಪ, ಹಂದಿ, ಲವಣ ಇವುಗಳು ಎದುರಾಗಿ ಬಂದರೆ ಕಾರ್ಯಹಾನಿ ಆಗುವದು, ಹೊಡವಣಘೋತ್ರದಶರಗು ಹಿಡಿಯೋಣ, ಬೀಳೋಣ, ಅಳೋಣ, ತಡಿಯೋಣ, ಇಂಥಾವು ಆದರೆ ಕಾರ್ಯನಿಘ್ನವಾಗುವದು, ಬೆಕ್ಕು ಅಡ್ಡಲಾದರೆ, ವಾಯುಸಕಟ್ಟದರೆ, ಮೊಲಾಕಂಡರೆ ಕಾರ್ಯಕೆಡುವದು,ಬಾ ಇರು, ಎಲ್ಲಿಗೆ ಹೋಗುತ್ತೀಯೆ, ನಾನು ಬರಲೆ ಯೆಂಬುವ ಮಾತುಗಳು ಕಾರ್ಯಕ್ಕೆ ಅಡ್ಡಿ ಯಾಗಿಮಾಡುವದು. ಜಗಳ, ನೆಲ್ಲಿ ಹೊಟ್ಟು

ಡೆಗೂಡಿ ಭೃತ್ಯಾಮಾತ್ಯಸಹಿತನಾಗಿ ಸರಸ ಇಷ್ಟಾಲಾಪದಿಂ ದಿರುತ್ತಿರಲು;

ಆಗಛಾಯಾಗುಪ್ತನು ಶುಭಸೂಚಕಂಗಳಾದ ಶಕುನಗಳಂ ಕಂಡು ತಿಳಿದು ಸಂತೋಷದಿಂದ ವಾಯುಮಾರ್ಗಾನುಸಾರವಾಗಿ ಮನೋವೇಗದಿಂದ ಸ್ವರ್ಗಲೋಕವಂಪೊಕ್ಕು ಅಲ್ಲಿರುವಪ್ರಜೆಗಳಕಾರ್ಯದೊಳಿರುವ ಅಮರರು ಹರಿಯುವ ದೇವಗಂಗೆಯಂ, ನವ ಉಪವನಂಗಳಂ, ವಿವಿಧ ಪಟ್ಟಣಂಗಳಂ, ನಾನಾವಿಧವಾದ ಗ್ರಾಮಂಗಳಂ, ನೀರಿಲ್ಲದ ಕೆರೆಯಂತೆ ಜ್ಞಾನವಿಲ್ಲದ ವೀರ್ಯರಂತೆ, ಅಪ್ರಕಾಶಂಗಳಾಗಿರುವುದಂ ಕಂಡು ಹರ್ಷವಿಸ್ಮಿತನಾಗಿ ನೋಡುನೋಡುತ ಅಮರಾವತೀನಗರವಂ ಪ್ರವೇಶಿಸಿ ಅಲ್ಲಿ ಕೆಲವು ಮುರಿದುಬಿದ್ದು ಕೆಲವು ಮುರಿಯದೆ ಇರುವ ಗೋಪುರಪ್ರಾಕಾರಂಗಳಂ ಛಿನ್ನಾ ಭಿನ್ನಂಗಳಾದ ಗೃಹ ಉದ್ಯಾನಂಗಳಂ, ಹುಲ್ಲುಗಳು ಹುಟ್ಟಿರುವ ಅನೇಕ ಅಂತಸ್ತುಗಳುಳ್ಳ ಉಪ್ಪರಿಗೆ ಸಾಲುಗಳಂ, ಮಲಿನವಾದ ದೇವಾಲಯಂ, ಸರೋವರ ಮುಂತಾದಪ್ರದೇಶಗಳನ್ನೀಕ್ಷಿಸಿ ಅಲ್ಲಿರುವ ಅಮರರಂ ಅಲಕ್ಷ್ಯವಾಗಿ ಕಾಣುತ ನಿರ್ಭಯದಿಂದ ವ್ಯಾಪಿಸಿಕೊಂಡು ಕೊಬ್ಬಿರುವ ರಾಕ್ಷಸರಂ ಕಂಡು ಕಾಲಗತಿಗೆ ಶಿರಃಕಂಪನಂ ಮಾಡುತ, ಅಲ್ಲಿರುವನಂದವನದ ಪ್ರದೇಶವಂ ಯತ್ನ ಮೊನೆಮುಟ್ಟು ಬಿಡದರಸಿ, ಉಕ್ತಲಕ್ಷಣ ಉಳ್ಳ ಅಂಥಾಧೇನುವಂ ಯಲ್ಲಿಯೂ ಕಾಣದೆ, ಅಲ್ಲಿಂದಾತಿರಗಿ ನಾನಾವಿಧವಾದ ಮಹಾಕಲ್ಪವೃಕ್ಷ ಪಙ್ಕ್ತಿಗಳಿಂ ಸರ್ವಕಾಲದಲ್ಲೂ ಫಲ ಪುಷ್ಪಂಗಳಿಂದ ನಿಬಿಡವಾದ ವನೋಪವನಂಗಳಿಂದಲೂ, ವೈರವಂ ಬಿಟ್ಟು ಅನ್ಯೋನ್ಯಗಳಾಗಿರುವ ಗೋವ್ಯಾಘ್ರ ಗಜಸಿಂಹ ಮುಂತಾದ ಮೃಗ ಪಕ್ಷಿಗಳಾಗಿ ತಂಡತಂಡಗಳಿಂ, ಮಧುರ ಸುಗಂಧೋದಕ ಉಳ್ಳದ್ದಾಗಿ ಅಪ್ರಮಾಣವಾಗಿಲೋಳಿರುವ ಪುಣ್ಯಕರವಾದ ಪುಷ್ಕರ ನದೀ ಸರಸ್ಸುಗಳಿಂದಲೂ, ಅನೇಕ ಗುಹಾಗೃಹ ಲತಾಗೃಹ ನಾನಾಧಾತು ಮೂಲಿಕಾ ಮಹಾಶಿಲಾತಲ ವಿಶಿಷ್ಟವಾದ ಪರ್ವತಗಳಿಂದಲೂ, ವ್ಯಾಘ್ರಚರ್ಮ ಕೃಷ್ಣಾಜಿನ ಧೌತ ವಲ್ಕಲ ಕಾಷಾಯ ಸ್ರುಕ್ಸ್ರುವಸಮಿದ್ಧ್ರ, ಕುಶ ಚಮಸ, ಉಲೂಖಲ, ಮುಸಲ, ಶೂರ್ಪ, ಯೂಪ, ಚರು, ಕಮಂಡಲು, ದಂಡ ಪಾದುಕಾ, ಗೋವಾಳ, ಛತ್ರ, ಪುಸ್ತಕ, ದೇವತಾರ್ಚನೆ, ಶಿಷ್ಯ, ಪತ್ನೀ, ಪುತ್ರ, ಆಜ್ಯ, ಮೌಂಜಿ, ಕೌಪೀನ, ಕಾಷ್ಠಗಳಿಂದಲೂ ದಕ್ಷಿಣಾಹವನೀಯ

ತಪ್ಪಿಲ್ಲಾ, ಇಂದಿಗೆ ಎನ್ನ ಶಾಪಂಗಳ್ ಪೋದವು, ನಾನುಧನ್ಯನು, ಶಕುನಂಗಳಿಗೆ ಇದೆ ಫಲವು, ಇಂತಿವ ಸುರಭಿಯಂ ಪೂಜಿಸಬೇಕೆಂದು ಜಪಜಾಗಿ ನುಡಿವ ಎಮ್ಮೊಡತಿಯ ದನ್ಯಳೆಂದು ಮನದೊಳು ನುಡಿಯುತ ಅಲ್ಲಿ ಮುಗಿಲು ಮುಟ್ಟುತ್ತಿರುವ ಕಬ್ಬಿಣದ ಮನೆಯ ಮಧ್ಯ ಹಜಾರದೊಳ್ ಬೆಟ್ಟದ ಗುಡ್ಡವಂತೆ ಕುಳಿತುಯಿರುವ ಘೋರರೂಪು ಉಳ್ಳ ಅಘಾಸುರನೆಂಬ ರಾಕ್ಷಸೇಂದ್ರನಂ ಕಂಡು ಅವನ ಪರಿವಾರಂಗಳಂ, ಅವನ ಆವಾಸವಾವಯವಂಗಳಂ, ಅವನ ಆಹಾರ ವಿಹಾರಂಗಳಂ, ಶೌರ್ಯಪರಾಕ್ರಮಂಗಳಂ ನೋಡಿ ಪರ್ವತದ ರಾಕ್ಷಸನಾಗಿ ಇರುವನೆಂದು ತಿಳಿದು ತಾಗೆ ಯೋಚಿಸುತ್ತಾ ಬಳ್ಳಿದಾಯಿತು, ಇವ ಇನ್ನಿಷ್ಟರಲಿ? ನಮ್ಮರಾಯನಿಗೆ ಇವನೇನು ಅಸಾಧ್ಯನೆ, ರಾಯನೊಳಿರುವ ಜಗಜ್ಜನನಿಯ ಅನುಗ್ರಹವೇನು ಸವರವೆ? ಇದರಯೋಚನೆ ಯಾಕೆ, ತ್ವರೆಯಿಂದ ರಾಯನಂ ಕಂಡು, ಇದಂ ಪೇಳುವದೆ ಅವಶ್ಯಕಾರ್ಯವೆಂದು ಹೊರಟು, ಮುಹೂರ್ತ ಮಾತ್ರದೊಳ್ ರಾಯನಬಳಿಗೆಬಂದು ಸಾಷ್ಟಾಂಗಪ್ರಣಾಮಂ ಗೈದುಕೈಮುಗಿದು ತಾನು ಪೋಗಿರ್ದ ಮಾರ್ಗಂಗಳಂ ಲೋಕಂಗಳಂ ದೇಶಂಗಳಂ ದ್ವೀಪಂಗಳಂಸವಿಸ್ತಾರವಾಗಿ ಕ್ರಮದಿಂಪೇಳಿ, ಸುರಭಿಯ ವೃತ್ತಾಂತವಂ ಚನ್ನಾಗಿ ವಿಜ್ಞಾಪನಂ ಗೈಯಲು, ಆ ಮಾತಂ ಕೇಳಿ ಸುಗಂಧರಾಯನು ಛಾಯಾಗುಪ್ತನಬೆನ್ನಂತಟ್ಟಿ ಭಲಾ ಎಂದು ಆಛಾಯಾಗುಪ್ತನಂ ಕಳುಹಿ, ತಾನು ಸುಬುದ್ಧಿ ಮೊದಲಾದ ತನ್ನ ಮಿತ್ರಾಮಾತ್ಯರಿಂದೊಡಗೂಡಿ ಮಾತಾಡುತ್ತ ಆ ರಾತ್ರಿಯೊಳ್ ಸದಾಸುಖದಿಂದ ಇರುತ್ತಿದ್ದನೆಂಬಲ್ಲಿಗೆ.

ಗದ್ಯ — ಕುಂಡಲಿಶಯನ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖ ನಿಖಿಲಸುರವರ ಪರಿಭವ ಪರಿಣತ ಪ್ರಚಂಡ ಬಲಚಂಡಮುಂಡ ವಿಖಂಡನ ನಿಪುಣ ಕೋದಂಡಕಾಂಡ ಮಂಡಿತಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸಮಂಕಸ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತಗ್ರಂಥ ದಿನವಿನ ಪ್ರಬಂಧ ನಿಬಂಧನ ದುರಂಧರ ತ್ರಿಭುವನ ಪವಿತ್ರಾತ್ರೇಯಸ ಗೋತ್ರ, ಸುಚರಿತ್ರ, ಚಾಮರಾಜ ಮಹಾರಾಜಪುತ್ರ, ನರಪತಿ

... ಆಗ ಪರಿಜನರುಂ ಕುರಿತು ಈಗ ಆನೆಯುಂ ಕೊಟ್ಟಿರುವ ಪುಷ್ಪಹಾರಂ ನನ್ನ ಹಾಗೆಯೆ ಇರಲಿ, ಸುಗಂಧರಾಯನು ಮಡಲು ತುಂಬಿದ ಕುಸುಮಫಲ ಮುತ್ತುಗಳು ಜತನದಿಂದಿರಲಿ, ಮುತ್ತೈದೆಯರು ಹರಸಿ ಕೊಟ್ಟಿರುವ ಸೇಸೆಯನು ಚೆಲ್ಲದೆ ಅಲ್ಲಿಯೆ ಇರಲಿ ಎಂದು ಹೇಳುವ ರಾಜಕುಮಾರತಿಯ ವಚನವಂ ಕೇಳಿ ಹಿತಪರಿಜನರಾದ ಸಖಿಗಳು ವಿಸ್ಮಿತರಾಗಿ ಅಭಿಪ್ರಾಯವು ತಿಳಿಯದೆ ಇದೇನು ನಿದ್ರೆಯೊ? ಕಂಡ ಕನಸೊ? ಧಿಟವೋ! ಏರೋದವೋ? ಎನಲು, ಆಗ ಸೌಗಂಧಿಕಾ ದೇವಿಯು ಪರಿಭಾವಿಸಿ ಕನಸೆಂದು ತಿಳಿದು ಲಜ್ಜೆಯಿಂದ ಸುಮ್ಮನೆ ರಹಸ್ಯವಾಗಿ ಎದ್ದು ಬಂದು ಲೀಲಾಶುಕದ ಬಳಿಗೆ ಪೋಗಿ ಆಶುಕದೊಡನೆ ಸ್ವಪ್ನವಂ ಪೇಳಲು, ಆಶುಕವು ರಾಜಕುಮಾರತಿಯಂ ಕುರಿತು ನಿನಗೆ ಯೋಚನೆಬೇಡ, ನೀನು ಕಂಡ ಸ್ವಪ್ನಕ್ಕೆ ಬಹು ಶುಭ ಫಲಂಗಳೇ ಉಂಟು, ಅದೇನೆಂದರೆ— ನೀನು ಶೀಘ್ರದಿಂದ ರಾಜಕುಮಾರನಾದ ಸುಗಂಧರಾಯಂಗೆ ಪಟ್ಟಮಹಿಷಿಯಾಗಿ ಸುಪುತ್ರನಂ ಪಡೆದು ಬಂಧುಗಳ ಭಾಗ್ಯದಿಂದ ಕುಲಶಿಖಾಮಣಿಯಾಗಿ ಸಕಲೈಶ್ವರ್ಯದಿಂದ ಇಂದ್ರಶಚೀಪುರ ಭೋಗವಂ ಪಡೆಯುವೆಯೆಂದು ಪೇಳಲು, ಆಮಾತಂ ಕೇಳಿ ಸೌಗಂಧಿಕಾದೇವಿಯು ನಿನ್ನ ವಾಕ್ಯ ಅಮೃತವಾಗಿ ಇರಲಿಯೆಂದು ಪೇಳಿ, ಪುನಃ ಆಶುಕವಂ ಕುರಿತು ಈ ಸ್ವಪ್ನಗಳು ನಿಜವಂತೆ ತೋರುವವು, ಇದರ ಪರಿ ಎಂತಿರುವದೊ? ಅದರ ವಿವರವಂ ಪೇಳಬೇಕೆಂದು ನುಡಿದ ರಾಜಕುಮಾರಿಯ ಮಾತಂ ಕೇಳಿ, ಆ ಲೀಲಾಶುಕವು ಸ್ವಪ್ನದ ಫಲಾಫಲಂಗಳಂ ಶಾಸ್ತ್ರೀಯವಾಗಿ ಪೇಳ್ದುದೆಂತೆನೆ;

ಪ್ರಾಣಿಗಳಿಗೆ ಜಾಗ್ರತ್ತೆ, ಸ್ವಪ್ನ, ಸುಷುಪ್ತಿ ಎಂದು ಮೂರು ಅವಸ್ಥೆಗಳುಂಟು; ಜಾಗ್ರತೆಯಲ್ಲಿ ಸಕಲವಿಷಯಂಗಳು ಪ್ರತ್ಯಕ್ಷವಾಗಿ ಬಹುಕಾಲಾನುಭವಯೋಗ್ಯಂಗಳಾಗಿ ಇರುವವು, ಸ್ವಪ್ನಾವಸ್ಥೆಯಲ್ಲಿ ಸಕಲವಿಷಯಂಗಳು ಅದೇಪೇರಿಗೆ ಪ್ರತ್ಯಕ್ಷಂಗಳಾಗಿ ಇದ್ದರೂ ಕ್ಷಣಿಕಗಳಾಗಿ ಇರುವವು. ಸುಷುಪ್ತ್ಯವಸ್ಥೆಯಲ್ಲಿ ಒಂದು ವಿಷಯವೂ ಪ್ರತ್ಯಕ್ಷವಿಲ್ಲದೆ, ಸ್ತಬ್ಧವಾಗಿರುವದು, ಈ ಅವಸ್ಥೆಗಳಲ್ಲಿ ಸ್ವಪ್ನವೆಂಬುವದು ದೃಷ್ಟ, ಶ್ರುತ, ಅನುಭೂತ, ಪ್ರಾರ್ಥಿತ, ಕಲ್ಪಿತ ಭಾವಿ ದೋಷಜಗಳೆಂಬದಾಗಿ ಯೇಳು ಪ್ರಕಾರವಾಗಿ ಇರುವದು, ಇವರೊಳಗೆ ದೋಷಜವೆಂಬ ಏಳನೇದು ಪಾ

ತಿಕ, ಪೈತ್ತಿಕ, ಶ್ಲೇಷ್ಮಜ, ಚಿಂತಿತವೆಂದು ನಾಲ್ಕು ಬಗೆಯಾಗಿ ಇರುವದು, ಅತ್ಯಂತ ಪಿತ್ತವಾಗಿರುವವನಿಗೆ ಸ್ವಪ್ನದಲ್ಲಿ ವಾತಪ್ರಕೋಪದಲ್ಲಿ ಶ್ಲೇಷ್ಮಕೋಪದಲ್ಲಿ ಹಗಲು ಕಂಡಸ್ವಪ್ನ ಬಹುತರವಾಗಿ ಹಂಬಲಿಸಿ ತೊಳಲುತ್ತಿರುವ್ಯಾಕುಲರೊಳ್ ಕಾಣುವ ಸ್ವಪ್ನಗಳು ಫಲಾಫಲಂಗಳಿಗೆ ಕಾರಣವಲ್ಲ. ಸ್ವಪ್ನ ಮೊದಲಾದ ಕಡೆಯ ಆರು ಪ್ರಕಾರದ ಸ್ವಪ್ನಗಳು ಫಲಾಫಲಂಗಳಿಗೆ ಕಾರಣವಾಗಿರುವವು, ರಾತ್ರಿ ಮೊದಲು ಝಾವದೊಳ್ ಕಂಡಸ್ವಪ್ನವು ಒಂದು ವರುಷಕ್ಕೆ ಫಲಿಸುವದು, ಎರಡನೇ ಝಾವದಲ್ಲಿ ಕಂಡದ್ದು ೮ನು ತಿಂಗಳಲ್ಲಿ ಫಲಿಸುವದು, ಮೂರನೇ ಝಾವದಲ್ಲಿ ಕಂಡಸ್ವಪ್ನವು ಮೂರು ತಿಂಗಳಿಗೆ ಫಲವಂ ಕೊಡುವದು, ನಾಲ್ಕನೇಯದಾದ ಸ್ವಪ್ನವು ಒಂದು ತಿಂಗಳಿಗೆ ಫಲಿಸುವದು, ಅರುಣೋದಯಕಾಲದೊಳ್ ಕಂಡ ಸ್ವಪ್ನವು ಹತ್ತು ದಿನಕ್ಕೆ ಫಲಿಸುವದು, ಸೂರ್ಯೋದಯವ್ಯಾಳೆಯಲ್ಲಿ ಕಂಡ ಸ್ವಪ್ನವು ಸದ್ಯಃ ಫಲವನ್ನುಂಟು ಮಾಡುವದು, ಎರಡು ಸ್ವಪ್ನ ಕಂಡರೆ ಸುಸ್ವಪ್ನವಾಗಲೀ ದುಸ್ಸ್ವಪ್ನವಾಗಲೀ ಕಡೇಲಿಕಂಡದ್ದೇ ಫಲಿಸುವದು, ದುಸ್ವಪ್ನವಂ ಕಂಡರೆ ದೇವರಮುಂದೆ ಆಗಲಿ, ಬ್ರಾಹ್ಮಣ ಸಭೆಯಲ್ಲಿ ಆಗಲಿ, ಗೋವುಗಳ ಕಿವಿಯಲ್ಲಿ ಆಗಲೀ ಹೇಳಲು ದೋಷ ಪರಿಹಾರವಾಗುವದು; ಸುಸ್ವಪ್ನವಂ ಕಂಡರೆ ಪ್ರಾಜ್ಞರಸಂಗಡಲೂ ಹೇಳಬಾರದು; ಸ್ವಪ್ನದಲ್ಲಿ ಯಾವನ ದೇಹವು ಅಗ್ನಿಯಿಂದ ಬೆಂದು ಹೋಗುವದೋ? ಅವನು ಅರಸಾಗುವನು, ತಾನು ಉಪ್ಪರಿಗೆಯಲ್ಲಿದ್ದ ಹಾಗೆ ಸಮುದ್ರವಂ ದಾಟುವಹಾಗೆ ಕಂಡರೆ ಅವನು ಹೀನವಂಶಜನಾದರೂ ಪ್ರಭು ಆಗುವನು, ನರೂಳಿಗೆ ಕುಳಿತುಕೊಂಡು ತಾವರೆಯೆಲೆಯೊಳಗೆ ಪರಮಾನ್ನವಂ ಭಕ್ಷಿಸುವರೆ ಭೂಪತಿಯಾಗುವನು, ಸೂರ್ಯಮಂಡಲವಂ ಭಕ್ಷಿಸಿದರೆ ರಾಜ್ಯಪ್ರಾಪ್ತಿಯಾಗುವನು, ಚಂದ್ರಮಂಡಲಂ ಕಂಡರೆ ಧನಿಕನಾಗುವನು, ಆನೆ. ಕುದುರೆ. ಗೋವು. ಸಿಂಹ, ಪಕ್ಷಿಗಳು, ಸೇನೆ, ಆಯುಧ, ಹೆಣ್ಣುಹಾವಿ ಹೆಣ್ಣು ಕೂಸು ಕಂಡರೆ ಕುಟುಂಬ ವೃದ್ಧಿ ಆಗುವದು, ಮಲ್ಲಿಗೆ, ಜಾಜಿ, ವಕುಳ, ನಂದ್ಯಾವರ್ತ, ಉತ್ಪಲ ಕಮಲ ಈ ಪುಷ್ಪಮಾಲಿಕೆಗಳಂ ಕಂಡರೆ ಧನಪ್ರಾಪ್ತಿ, ತಾಂಬೂಲ ದರ್ಪಣ ಶಂಖ, ಚಂದನ, ಮುತ್ತು, ಧೂಪ, ಘೃತಕಲಶ, ತಿಲ ಇವುಗಳಂ ಕಂಡರೆ ಶುಭಪರಂಪರೆ ಉಂಟಾಗುವದು.

ಕುಂಭ, ಜೋಯಿಸ, ಕನ್ಯೆ. ಶ್ವೇತವಸ್ತುಗಳು ಸರ್ಪ, ಆಭರಣ, ಕ್ಷೀರ ಮೊಸರು, ಬೆಣ್ಣೆ, ಇವುಗಳ ಕಂಡರೆ ಧನಧಾನ್ಯಪಶ್ವಾದಿ ವೃದ್ಧಿಗಳುಂಟು, ತುಪ್ಪ, ಹಿಂಡಿ, ಕಲ್ಲು, ಅರಶಿನ, ಹುಣಿಶೆಹಣ್ಣಿನಸಿಪ್ಪೆ, ಬಾಳೆಯಲೆ ಇವುಗಳ ಕಂಡರೆ ಬಂಧು ಸಮೃದ್ಧಿಯುಂಟಾಗುವದು, ತೆಂಗಿನಕಾಯಿ, ಹಣ್ಣುಹಂಪಲಗಿಡ, ದಾಳಿಂಬ, ಮಾತುಲುಂಗ ಇವುಗಳನ್ನು ಸ್ತ್ರೀಯರು ಕಂಡರೆ ಪುತ್ರರಂ ಪಡೆಯುವರು, ಪುರುಷನು ಕಂಡರೆ ಸಂಪನ್ನನಾಗುವನು, ಸ್ತ್ರೀಸಂಗ, ಲವಣ ಇವುಗಳಂ ಕಂಡರೆ ನೆನೆದಕಾರ್ಯವಾಗುವದು, ಕೈಯಲ್ಲಿ ಫಲಗಳಂ ಪಿಡಿದು ಇದ್ದಹಾಗೆ ಎಚ್ಚರವಾದರೆ ಇಷ್ಟಾರ್ಥವು ಕೈಸೇರುವದು, ಜಿಗಣೆ, ಹಾವು, ಚೇಳು ಕಚ್ಚಿದರೆ ಪುತ್ರಲಾಭ, ಯೆಂಜಲು ಬೆರದುಯಿದ್ದರೆ ಸಂಪತ್ತು, ಕೊಕ್ಕರೆ, ಕೋಳಿ, ಕ್ರೌಂಚಪಕ್ಷಿಗಳ ಕಂಡರೆ ಶುಭ, ಸಂಕೋಲೆ ಹೆಡಕಟ್ಟು ಹಾಕಿದ್ದಾಗಿ ಕಂಡರೆ ಆರೋಗ್ಯ, ಹೂಜಿ, ಭಂಡಾರ, ಎರೆಯುಪ್ಪುಗಳ ಕಂಡರೆ ಸಂಪತ್ತು, ವೃಷಭ ಮನೆ, ಚಿನ್ನದಬಟ್ಟಲು, ಚೆಂಬು ಇವುಗಳ ಕಂಡರೆ ಭೂಲಾಭ, ಬಲಿತಪೈರುಳ್ಳ ಭೂಮಿಯಂ ಕಂಡರೆ ಐಶ್ವರ್ಯ ಉಂಟು. ಬಿಳೀಹಸುವಂಕೆರು ಸಹಿತವಾಗಿ ಕಂಡರೆ ಆಯುರ್ವೃದ್ಧಿ, ಮೈಯಲ್ಲಾ ಇರುವೆ ಮುತ್ತಿದ್ದಾಗಿ ಕಂಡರೆ ಸುಖ ಉಂಟಾಗುವದು. ತ್ರಿಮೂರ್ತಿಗಳು, ದೇವತೆಗಳು, ದಿಕ್ಪಾಲಕರು, ಅಪ್ಸರರುಗಳು ಇವುಗಳಕಂಡರೆ ಯಶಸ್ವಿ ಆಗುವನು. ವ್ಯಾಧಿ ನಾಶವಾಗುವದು, ತುಪ್ಪ ಲಭಿಸಿದರೆ ಆಯುರ್ವೃದ್ಧಿ, ದಧಿಲಾಭದಿಂದ ರಾಜ್ಯಪ್ರಾಪ್ತಿ. ಮಾಂಸಲಭಿಸಿದರೆ ಧನಲಾಭ, ಉಗುರು, ಉಡಿಧಾರ, ಹಾರಂಗಳಂ ಕಂಡರೆ ಬಂಧವಿಮೋಚನ ಉಂಟು. ರಕ್ತ ಸುರೆ ಇವುಗಳಂ ಕಂಡಿದರೆ ಬ್ರಾಹ್ಮಣನಾದರೆ ವಿದ್ಯಾಪ್ರಾಪ್ತಿ, ಇತರನಾದರೆ ಧನಪ್ರಾಪ್ತಿ, ಪಾದುಕ, ಪಾದರಕ್ಷೆ, ಛತ್ರಗಳಕಂಡರೆ ಲಾಭ ಮೊಲ್ಕದಿಂದ ಪ್ರಯಾಣ ಉಂಟು. ಯಾವವಸ್ತು ಆಗಲಿ ಬಿಳುಪಾಗಿದ್ದದ್ದಂ ಕಂಡರೆ ಒಟ್ಟಿಗೆ ಒಳ್ಳೇದು. ಬಿಳಿವಸ್ತುಗಳಲ್ಲಿ ಹತ್ತಿ, ಮಜ್ಜಿಗೆ, ಭಸ್ಮ, ಅಸ್ಥಿ, ತಾವರೆ, ಗೆಣಸು ಇವುಗಳು ಮಾತ್ರ ಕಾಣಬಾರದು, ಕಂಡರೆ ಅಶುಭ, ಕೃಷ್ಣವರ್ಣಗಳುಳ್ಳ ಪದಾರ್ಥಂಗಳಕಂಡರೆ ಒಳ್ಳೆಯದಲ್ಲ, ಅದರೊಳಗೆ, ದೇವರುಗಳು, ಬ್ರಾಹ್ಮರು, ಧೊರೆ, ಗೋವು, ಆನೆ, ಕುದುರೆ, ಈ ವ

ಸ್ತುಗಳು ಮಾತ್ರವಲ್ಲದೆ ಎರಡು ಕೈಗಳಿಂದ ಸೂರ್ಯ ಚಂದ್ರರಂ ಹಿಡಿದುಯಿದ್ದರೆ ಎರಡು ಕಡೆಯಿಂದ ರಾಜ್ಯಪ್ರಾಪ್ತಿ. ಫಲವಾದ ವೃಕ್ಷವಾಗಲೀ ಈ ವೃಕ್ಷಗಳುಳ್ಳ ಪರ್ವತಾರೋಹಣವಾಗಲೀ ಕಂಡರೆ ರಾಜಸನ್ಮಾನ, ಆನೆ, ಕುದುರೆಗಳಮೇಲೆ ಏರುವದು ಒಳ್ಳೇದು, ಅಡಿಕೆ, ತೆಂಗು, ಮಾವು ಮುಂತಾದ ಫಲವೃಕ್ಷಾರೋಹಣವು ಮಾಡಿ ಅವರ ಫಲವನ್ನು ತೆಗದುಕೊಂಡರೆ ಶುಭಫಲಪ್ರಾಪ್ತಿ ಉಂಟು. ಯೂಪಸ್ತಂಭ ಹುತ್ತ, ಅಶ್ವತ್ಥ ಬಿಳೀಗಿಡವಂ ಬಿಟ್ಟು ಪ್ರಾಸಾದವನ್ನಾಗಲಿ ಏರುವದೆ ಶುಭವು, ನರಿಗಳಂ ಕಂಡು ಬಾಜಾರಿ ಏರ್ಪರೆ ರಾಜ್ಯಪ್ರಾಪ್ತಿ. ಸಮುದ್ರಗಳ ನದಿಗಳ, ಕೆರೆಗಳಂ ನಾವದು ದಾಟಿದರೆ ದುಃಖ ನಿವೃತ್ತಿಯಾಗುವದು. ಕಲಕಿದ ಸಮುದ್ರ ನದಿಗಳಂ ಕಂಡರೆ ಧನಲಾಭ. ಮಾತೃ, ಪಿತೃ, ಪುತ್ರ, ಬಾಂಧವ ಬಂಧು ಮಿತ್ರರಂ ಕಂಡರೆ ಸಂಪತ್ತು ಉಂಟು. ಅಗಮ್ಯಾಗಮನವಂ ಕಂಡರೆ ಕಲ್ಯಾಣ ಉಂಟು. ಬಿಳಿಯುವಸ್ತ್ರವಂ ಧರಿಸಿದ ಪುರುಷರನ್ನಾಗಲೀ ಸ್ತ್ರೀಯರನ್ನಾಗಲೀ ಕಂಡರೆ ಧನಪ್ರಾಪ್ತಿ. ವಿದ್ಯಾಪ್ರಾಪ್ತಿ ಉಂಟು. ಮನುಷ್ಯ, ಕಾಗೆ, ಮತ್ಸ್ಯ, ಇವರಮಾಂಸಗಳಂ ಮುಟ್ಟಿದರೆ ಆರೋಗ್ಯದಿಂದೇಹ ಪುಷ್ಟಿ, ಸುಳಿಮುರಮುಟ್ಟಿದರೆ ಧನಿಕನಾಗುವನು. ಬಿಳೀವಸ್ತ್ರವುಳ್ಳ ಸ್ತ್ರೀಯು ಹಾಸಿಗೆಗೆ ಬಂದರೆ ಲಕ್ಷ್ಮೀಕಟಾಕ್ಷ ಉಂಟು. ಕನ್ಯಕೆ ಆಗಲಿ ಪದ್ಮ ಹುಡಗಿ ಆಗಲಿ ಕೈಹಿಡಿದುಕೊಂಡಹಾಗೆ ಕಂಡರೆ ಐಶ್ವರ್ಯ ಬರುವದು. ಸುವರ್ಣ ಗರುಡುಗಳ ಕಂಡರೆ ಒಳ್ಳೇದು. ಉಪ್ಪರಿಗೆ, ಸಜ್ಜ, ಪುಷ್ಪಕ ಮಾತ್ರಾದುವ ಧೊರೆಯುಕಂಡರೆ ಬಹು ಸಂಪತ್ತು ಉಂಟು. ಮನೆ ಮುಂತಾದ್ದು ಕಟ್ಟುವದು ಕುಲಗೋತ್ರಗಳ ಮಾತು ಕೇಳುವದು ಗಿಡಗಳ ಹುಟ್ಟುಹಾಕಿ ವನವಮಾಡುವದು ಇವುಗಳಂ ಕಂಡರೆ ಪ್ರಾಜ್ಞನಾಗುವನು, ಅಗಿಲು ಆಭರಣಗಳಂ ಕಂಡರೆ ಲಾಭಉಂಟು. ಮಾದಿಸಹಣ್ಣು ಕಂಡು ಭಕ್ಷಿಸಿದರೆ ಪುತ್ರನಾಗುವನು ಸೋಮಪಾನ ಸುರಾಪಾನವಂ ಮಾಡಲು ಒಳ್ಳೇದು. ಪುರೀಷವಂ ಕಂಡಲ್ಲಿ ಪುತ್ರಲಾಭ, ಭಕ್ಷಿಸಿದ ಹಾಗೆ ಕಂಡರೆ ಕೋಟ್ಯಾಂತರಲಾಭ ಉಂಟು. ವೃಷಭವಾಗಲಿ ಕುದುರೆಯಾಗಲಿ ಕಟ್ಟಿದ ರಥವನ್ನೊಬ್ಬನೆ ಏರಿದರೆ ಧನಿಕನಾಗುವನು. ಪೀಠದಲ್ಲಿ ಹಾಸಿಗೆಯಲ್ಲಿ ವಾಹನದಲ್ಲಿ ಆಗಲಿ ಕುಳಿತು ತಾನೆ ಅಗ್ನಿಯಿಂದ ದಹ

ಮಹಾಸನಾಗಿ ಕಂಡರೆ ಮಹೀಪತಿ ಆಗುವನು. ದೀಪ ಗೋಪುರ ಗದ್ದೆಗಳಂ ಕಂಡರೆ ಶುಭ. ಹಸೀಪದಾರ್ಥ ಹಸೀಮಾಂಸಗಳಂ ತಿಂದವನಾಗಿ ಕಂಡರೆ ಒಳ್ಳೇದು ಮನುಷ್ಯರ ಕಾಲು ತಿಂದರೆ ಬಹುಲಾಭ. ಬಾಹುಗಳ ತಿಂದರೆ ಸಹಸ್ರಲಾಭ. ಶಿರಸ್ಸಂ ತಿಂದರೆ ರಾಜ್ಯಲಾಭ ಬಿಳಿಯ ಸರ್ಪವು, ಬಲಗಡೆಯ ತೋಳಿನಲ್ಲಿ ಕಡಿದರೆ ಸ್ವಲ್ಪದಿನದಲ್ಲಿ ಧನ ಪುತ್ರಲಾಭ, ಹಾಲನ್ನು ಬಹಳ ಕುಡಿದರೆ ಬಹುಸಂಪನ್ನನಾಗುವನು. ನಾಯಿ ಕಡಿದು ರಕ್ತ ಕಾಣದೆ ಇದ್ದರೆ ಒಳ್ಳೇದು ತನ್ನ ತಲೆಕತ್ತರಿಸಿ ಬಿದ್ದು ರಕ್ತ ಚೆಲ್ಲುತ ಇದ್ದರೆ ಆರೋಗ್ಯ ಸಂಪತ್ತು. ತನ್ನನ್ನ ಬಾಲ್ಯದವನಾಗಿಯೂ ವೃದ್ಧನಾಗಿಯೂ ಕಂಡರೆ ಆಯುರಭಿವೃದ್ಧಿ. ತನ್ನ ಮನೆಯು ಧ್ವಜಾದಿಗಳಿಂದ ಅಲಂಕರಿಸಲ್ಪಟ್ಟದ್ದಾಗ ಕಂಡರೆ ಜಯ, ಚಿನ್ನದ ಕೊಡೆ. ಬೆಳ್ಳೀ ತಗಡಿಂದ ಅಲಂಕೃತವಾಗಿ ಆಕಾಶದಿಂದ ಹತ್ತರಕ್ಕೆ ಬಂದರೆ ರಾಜ್ಯಪ್ರಾಪ್ತಿ. ದೇವತಾ ಪ್ರತಿಮೆಗಳ ಮಾತುಗಳು ಕೇಳಿದರೆ ಶುಭ. ಬೆಳ್ಳಿಮನೆ ತುಂಬಾ ಧಾನ್ಯ ಕಂಡರೆ ಪುತ್ರನಾಗುವನು. ಮನೆ ಅಗ್ನಿ ದಗ್ಧವಾದರೆ ಭೂಸಂಪತ್ತು. ಸುವರ್ಣದಕ್ಕಿಗಳಿಂದಾ ವೃಕ್ಷಚ್ಛಾದಿಸಟ್ಟರೆ ಧನಾರೋಗ್ಯವುಂಟು. ತಾನೆ ಚಿನ್ನವಾದರೆ ಆಯುರಭಿವೃದ್ಧಿ. ಶಂಖ, ಚಕ್ರ, ಬಿಸಣಿಗೆ, ಚಾಮರ ಕುಂಭಗಳ ಕಂಡರೆ ಧನಲಾಭ, ಹಸೆಂಟು ಕಂಡರೆ ಸಕ್ಕರೆ ತಿಂದರೆ ಆರೋಗ್ಯ. ವೇದ ಶಾಸ್ತ್ರ ಪುರಾಣ ಶ್ರವಣದಿಂದ ವಿದ್ಯಾಲಾಭ ದೇವರು ಬ್ರಾಹ್ಮಣರು ವಿದ್ವಾಂಸರು ಸಜ್ಜನ ಸಂಗತಿ ಸಲ್ಲಾಪಂಗಳು ಸುಪ್ರಸನ್ನಕವಾಗಿ ಇರುವವು. ಶಕೃತ್ಪುರೀಷಲೇಪನ, ವೇಶ್ಯಾಗಮನ, ವೃಶ್ಚಿಕದಂಶನ, ಸ್ತ್ರೀ ಸಂಭಾಷಣ, ತಾಂಬೂಲ ಭೋಗ, ಕುಂಕುಮ ಲಾಭ, ಕ್ಷೀರಾನ್ನ ಆಹಾರ, ಕ್ಷೀರಾಭಿಷೇಕಂಗಳಂ ಕಂಡರೆ ಸ್ತ್ರೀಭೋಗವುಂಟು. ಪಲ್ಲಕ್ಕಿಯೇರೋಣ ಪೀಠದಲ್ಲಿ ಕೂಡೋಣ ತನ್ನ ಹೆಂಡತಿಯಂ ಕಂಡರೆ ಆರೋಗ್ಯ, ಇವೆಲ್ಲಾ ಶುಭಫಲಸೂಚಕಗಳಾದ ಸ್ವಪ್ನಗಳೆಂದು ತಿಳಿಯುವದು. ಇನ್ನು ಅಶುಭಫಲ ಸೂಚಕಂಗಳಾದ ಸ್ವಪ್ನಂಗಳು ಹ್ಯಾಗೆ ಇರುವವೆಂದರೆ,

ಕರಿ ನಾಯಿ, ನರಿ, ಹದ್ದು, ಹಂದಿಗಳು, ಕಾಗೆ, ಗಿಡುಗ, ರಾಕ್ಷಸರಂ ಕಂಡರೆ ಹಾಸ್ಯಬಿದ್ದವನ ಬೀಳುವನ ಉಷ್ಟ್ರ ಗರ್ದಭ ಕರಿಯೆಮ್ಮೆ ಕರೀಸೀರೆಯುಂ ಉಟ್ಟ ಸ್ತ್ರೀಯಂ ಕಂಡರೆ ವ್ಯಸನ ತೋರುವದು. ದೇವತಾಪ್ರತಿಮೆಗ

ಳೆದುರಿಗೆ ಕುಣಿದಾಡಿದವರೂ ನೆಗವಾಡಿದವರೂ ಕೈ ತಟ್ಟಿದರೂ ಪ್ರೋಡ್ಯಾಡಿದ
ರೂ ರೋದನವಂ ಮಾಡಿದರೂ ಸರಿ ಈ ಸ್ವಪ್ನವನ್ನು ಯಾವಬಳಿಯಲ್ಲಿ
ಕಂಡರೂ ಆ ಪ್ರದೇಶಕ್ಕೆ ಹಾನಿ. ಕೆಂಪಿನವಸ್ತ್ರ, ಗಂಧ ಪುಷ್ಪಗಳಿಂದಾ
ಯುಕ್ತಳಾದಸ್ತ್ರೀಯು ಬಂದು ಶರಗು ಹಿಡಿದರೆ ಅನಿಷ್ಟ, ರಕ್ತಮಾ
ಲ್ಯಾಂಬರಧರನಾಗಿ ದಕ್ಷಿಣ ಮುಖವಾಗಿ ಹೋದರೆ ಹೀಗೆ ಹೋದವನಿಗೆ
ಮೃತ್ಯುಭಯ. ಇದೆ ಮೇರಿಗೆ ಕೆಂಪುವಸ್ತ್ರಗಳಿಂದಾ ಅಲಂಕೃತನಾಗಿ
ಹೀಗೆ ಅಲಂಕೃತವಾದ ಸ್ತ್ರೀಯಂ ಕೈಹಿಡಿದುಕೊಂಡು ಹೋಗುವವ
ನ್ನಾಗಿ ಕಂಡರೆ ಹೀಗೆ ಹೋದವನಿಗೆ ಅನಿಷ್ಟ, ಕಪ್ಪಾಗಿತಲೆ ಕೆದರಿ ಇರುವ
ಳಂ ಕಂಡರೆ ಗೃಹಭೀತಿ ಉಂಟಾಗುವದು, ಚಂಡಾಲ, ಪತಿತ, ಮ್ಲೇಚ್ಛ
ಭ್ರಷ್ಟ, ವಾಯಸ, ತೋಳ, ಕೃಷ್ಣಸರ್ಪಗಳಂ, ಕಂಡರೆ ಭಯ ಉಂ
ಟಾಗುವದು. ಮಧುವಿನಿಂದಾ ತುಪ್ಪ ತೈಲದಿಂದ ಅಭ್ಯಂಜನವಂ ಮಾಡಿ
ಕೊಂಡವನಿಗೆ ಮೃತ್ಯು ಭಯ. ಇಂಥಾವನು ಕಂಡವರಿಗು ಅನಿಷ್ಟ, ದುಷ್ಟ
ಮೃಗಗಳು ಮಾನವ ವದನಾ ಅಟ್ಟಿಕೊಂಡು ಬಂದರೆ ಅನಿಷ್ಟ. ಪೂರ್ಣ
ಕುಂಭಾದಿಗಳು ಒಡೆದು ಹೋದಹಾಗು ಕೆರೆಗಳು, ನದಿಗಳು, ಸಮುದ್ರಗ
ಳು ಕೊಳಗಳು ಒಣಗಿ ಹೋದಹಾಗೆ ಕಂಡರು ದರಿದ್ರ ಉಂಟಾಗುವದು. ಬ
ಣ್ಣ ಅರಶಿನ ಹಚ್ಚಿಕೊಂಡರೆ ರೋಗಉಂಟು, ಹಲ್ಲುಗಳು ಕಳೆದಾಗಲಿ
ಬಿದ್ದಾಗ್ಗೆ ಪಳ್ಳಯುಪದಲ್ಲಿ. ನಿರ್ಜೀವಶರೀರವನ್ನು ರೋಗಿಯಾದವನು ಆಲಿಂಗಿ
ಸಿದರೆ ಆರೋಗ್ಯ ಉಂಟಾಗುವದು. ಸ್ವಸ್ಥವಾದವನ ಆಲಿಂಗನವಂ ಮಾಡಲು
ರೋಗಬರುವದು, ಮೂತ್ರವಿಸರ್ಜನವಂ ಮಾಡಲು ಪುರುಷನಾದರೆ ಧಾ
ನ್ಯನಾಶ ಸ್ತ್ರೀಯಾದರೆ ಅಪವಾದ ಬರುವದು. ಹತ್ತಿ ಮೂಳೆ ಸರ್ಪಗ
ಳ ಕಂಡರೆ ತೊನ್ನುಹತ್ತುವದು. ಭಸ್ಮವಂ ಕಂಡರೆ ತನ್ನ ಅವಯವವು ಬೆ
ಳದಹಾಗೆ ಕಂಡರು ಬಂಧುನಾಶ ಉಂಟಾಗುವದು, ಸೋರೆ ಕುಂಬಳ
ಮುಳ್ಳುಯಿರುವ ಕಾಯಿಗಳು ಬಿದ್ದದ್ದು ಕಂಡರೆ ಅನಿಷ್ಟ ಮುಳ್ಳುಮರ
ವಂ ಏಬ್ಬಿಸಿ ಹತ್ತಿ ಬಿದ್ದರೆ, ರಾಜಭಟರಿಂದಾ ಮುಷ್ಟಿಪ್ರಹಾರಾದಿಗಳು
ಆದರೆ ಅನಿಷ್ಟ, ಪ್ರಯಾಣಾ, ಹೊರಡೋಣ, ಭಾವಿಯಲ್ಲಿ, ಕೆಸರಲ್ಲಿ ಬೀ
ಳೋಣ. ಹೀಗೆ ಕಂಡರೆ ವ್ಯಾಧಿ ಉಂಟಾಗುವದು. ಮಕ್ಷಿಕೆಗಳು ಸೊಳ್ಳೆ
ಗಳು ಕಡಿದರೆ ಸ್ತ್ರೀಯಿಂದ ಹಾನಿಯಾಗುವದು. ಈದುಸ್ವಪ್ನದೋಷಂ

ಗಳು ಹೋಗಬೇಕಾದರೆ ಹೋಮ ಶಾಂತಿ ದಾನ ಸುರಾರ್ಚನದಿಂದ ಪರಿಹರವಾಗಬೇಕು. ಈಪ್ರಕಾರ ಸ್ವಪ್ನಗಳು ಶುಭಾಶುಭ ಫಲಸೂಚಕಂಗಳಾಗಿ ಶಾಸ್ತ್ರಮರ್ಯ್ಯಾದೆಯಿಂದ ಹೇಳಲ್ಪಡುವವು ಎಂದುನುಡಿವ ಲೀಲಾಶುಕವಂ ಕುರಿತು ಸೌಗಂಧಿಕಾದೇವಿಯು ಎಲೈಸರ್ವಜ್ಞಶಿಖಾಮಣಿಯಾದಶುಕವರ್ಯನೆ! ನಿನಗೆಸಮಾನವಾದವರುಒಬ್ಬರೂ ಇಲ್ಲ, ನಿನಗೆಸಪ್ತಾಂಗವಂಕೊಟ್ಟರೂ ಸಲ್ಲುವದುಎಂದು ಸಂತೋಷಪಡಿಸಿ ಆಶುಕವಸಂಗಡ ಇಷ್ಟಾಲಾಪವಾಗಿ ಸಂತೋಷದಿಂದ ಮಾತಾಡುತಿರುತ್ತಿರಲು ;

ಅತ್ತಲಾ ಸುಗಂಧರಾಯನು ಉದಯಕಾಲದೊಳೆದ್ದು ದೇಶದೇಶಾಂತರಂಗಳಿಂದ ಬಂದಿರುವ ಚಾರರಿಂದಲುಂ ವಿಜ್ಞಾಪನಲೇಖನಗಳಿಂದಲುಂ ಸಕಲದೇಶ ವೃತ್ತಾಂತಗಳಂ ಚನ್ನಾಗಿ ತಿಳಿದು ಆಯಾಯ ಕಾರ್ಯ್ಯಂಗಳಿಗೆ ಅನುರೂಪವಾದ ಮತ್ತು ದೇಶಕಾಲಗಳಿಗೆ ವಿಹಿತವಾದ ವರ್ಣಾಶ್ರಮ ಧರ್ಮಂಗಳಿಗೆ ಅನುಗುಣವಾದ ಪ್ರಜಾಪಾಲನ ರೂಪವಾಗಿ ಮನಸ್ಸಿನಿಂದಲೂಕೂಡ ಉದಾಸೀನವಂಮಾಡಲಶಕ್ಯವಾಗಿ ಭಯವಂ ಸ್ಥಾಪಿಸಿ, ಧನಧಾನ್ಯ ಪರ್ಯ್ಯಂತವಾದ ರಾಜಭಾಗವನ್ನು ತೆಗೆದುಕೊಳ್ಳುವವರಲ್ಲಿ ಮುಖ್ಯಸಾಧನವಾಗಿರುವ ಆಜ್ಞಾನಿರೂಪಣವೆಂಬ ನಿಬಂಧ ಲೇಖನಂಗಳಂ ಮುದ್ರಾಲಾಕ್ಷಾದಿ ರಾಜಕೀಯ ಕುರುಹುಗಳು ಉಳ್ಳದ್ದಾಗಿ ಮಾಡಿಸಿ ನಾನಾಮುಖವಾಗಿ ಕಳುಹಿಸುತ್ತಾ ಒಂದು ಕಡೆಯೋಳ್ ವಿಜ್ಞಾಪಿಸುತ್ತಿರುವ ರಹಸ್ಯವಾದ ರಾಜಕಾರ್ಯ್ಯಂಗಳಂ ಅವಶ್ಯವಾಗಿ ಕೇಳುತ್ತಾ ಮತ್ತೊಂದು ಕಡೆಯೋಳ್ ಸರಸವಾಗಿ ಪ್ರಭುತ್ವ ಭೀಕರದಿಂದೊಡಗೂಡಿ ಮಿತಾಕ್ಷರವಾಗಿ ಗೂಢವಾದ ಬಹು ಅರ್ಥಂಗಳುಳ್ಳ ವಜ್ರ ಲಿಖಿತದಂತೆ ಬಂದು ಕಾಲಕ್ಕೂ ಅಪೋಹಬರದಹಾಗೆ ರಾಮಬಾಣದಂತೆ ಬಹುಚುರುಕಾಗಿತಡೆ ಇಲ್ಲದೆ ಪ್ರಕೃತ ಕಾಲೋಪಯುಕ್ತವಾದ ಮಿತವಾಗಿಇರುವ ವಾಗ್ಝರಿಯಂಬೀಸುತ್ತಾ, ಮತ್ತೊಂದು ಅವಧಾನದೋಳ್ ಕೈಗಳಂ ಕಟ್ಟಿಕೊಂಡುತಲೆವಾಗಿ ಚಿತ್ರದಬೊಂಬೆಯಂತೆ ನಿಶ್ಚಲವಾಗಿ ನಿಂತು ಭಯ ಭಕ್ತಿಯಿಂದ ನ್ಯೂನಾಧಿಕಂಗಳಿಲ್ಲದೆ ದೇಶೀಯಭಾಷಾ ಸಂಪ್ರದಾಯದಿಂದೊಡಗೂಡಿ ಯಥಾರ್ಥವಾಗಿ ಕೆಲವರು ಲೆಖ್ಖಗಳಂ ಹಿಡಿದು ಕೆಲಂಬರು ಸುಮ್ಮನೆ ತಮ್ಮ ಮುಖ ಮಾತ್ರದಿಂದಲು ವಿಜ್ಞಾಪಿಸುವ ಬಿನ್ನಹಂಗಳನ್ನಾಲೈಸುತ್ತ

ಯೊಳಗಿರುವ ಮಾರ್ಗವಾಗಿ ಪೋಗಲು ಅಲ್ಲಿ ಐವತ್ತು ಯೋಜನ ವಿಸ್ತೀರ್ಣವಾದ ಉಕ್ಕಿನಕೋಟೆಗಳಿಂದಲುಂ ಉಕ್ಕಿನಚಕ್ರಗಳಿಂದಲುಂ ಕಲ್ಲುಗಳಂ ಕೂಡಾ ಕತ್ತರಿಸುವ ಕತ್ತರಿಗಳಿಂದಲುಂ ವಿಷವೇ ತುಂಬಿ ತುಳುಕುವ ಅಗಳುಗಳಿಂದಾ ವಿಷಮಯವಾದ ಮುಳ್ಳುಗಿಡಗಳ ಬೇಲಿಗಳಿಂದಕೂಡಿ ಧೂಳಿಯು ಕೂಡಸಂಚರಿಸುವುದಕ್ಕೆ ಅಶಕ್ಯವಾಗಿರುವ ಮಯಮಾಯಾಪುರಿಯೆಂಬ ಪಟ್ಟಣವಂ ಛಾಯಾನಾಗುಪ್ತ ಸಹಿತನಾಗಿ ಕಂಡು ಈಪಟ್ಟಣವಂ ನಿರ್ಮಾಣವಂ ಮಾಡಿದವನು ಬ್ರಹ್ಮದೇವರಿಗಿಂತ ಸಮರ್ಥನೆ ಆಗಿಇರುವನು, ಇಂಥಾ ವಿಚಿತ್ರ ಮಾಯಾನಗರವಂ ನಾವು ಎಲ್ಲಿಯುಕಂಡು ಕೇಳಿದ್ದೇ ಇಲ್ಲಾ, ಎಂದು ಪ್ರಶಂಸಿಸುತ್ತ, ನಗರವಂ ಪೊಕ್ಕು ಧೇನುವಂ ತರುವಪರಿಯಂತು ಎಂದು ಯೋಚಿಸುತ್ತ ಗರುಡಮಂತ್ರ ಮೊದಲಾದ ಅನೇಕವಿಷಹರಮಂತ್ರ ಯಂತ್ರಪ್ರಯೋಗವಿಂದ್ರಜಾಲಮೂಲಿಕಾಶಕ್ತಿಗಳಿಂದಲುಂ ವಿಷಮಯವಾದ ಬೇಲಿ ಅಗಳುಗಳಂ ದಾಟಿ ಬಾಳೆಕಂಭಗಳಂ ಸೋದುತ ಚಕ್ರ ಭ್ರಮಣ ಗತಿಗಳಂ ಸಿಕ್ಕಿಸಿ ಮಹಾಪ್ರಯತ್ನದಿಂ ಕೋಟೆಯಂಬೇಧಿಸಲು, ಆಗ ಸುಗಂಧರಾಯನಿಂದ ಭೇದಿಸಲ್ಪಟ್ಟ ಬೇಲಿ ಅಗಳು ಕೋಟೆಗಳ ವೃತ್ತಾಂತವೆಲ್ಲವಂ ಕೇಳಿ ಆಪಟ್ಟಣಕ್ಕೆ ಅಧಿಪತಿಯಾದ ಅಘಾಸುರನೆಂಬ ಮಹಾರಾಕ್ಷಸೇಂದ್ರನು ತನ್ನ ಮಂತ್ರಿಯಂ ಕುರಿತು, ಎಲೈ ಮಂತ್ರಿಯೇ! ಸೃಷ್ಟಿ ಜನಗೊಬ್ಬರಿಂದಲು ದೃಷ್ಟಿಸಿನೋಡಲು ಬಹು ಕಷ್ಟವಾಗಿ ಇರುವ ಈ ಪುರವನ್ನು ಇಷ್ಟು ಬಗೆಯಾಗಿಮಾಡಿ ಬಹು ಗುಟ್ಟಿನಿಂದ ಬರುವ ದುಷ್ಟನಾಗಿರುವ ಧೃಷ್ಟ ಪುರುಷನು ಇಷ್ಟು ದೂರವಂ ಬಂದು ತುಷ್ಟಿ ಪಡೆಯುವ ದೇನು? ಅವನ ಇಷ್ಟ ಕಾರ್ಯವಂ ತಿಳಿದು ಘಟ್ಟನೆ ಬರುವದೆಂದು ಇಷ್ಟು ಜನವೊಂದಾಗಿ ಜಗ ಜಟ್ಟಿಯಾಗಿರುವ ಬಹುಘಟ್ಟಿಗನ ನೋಡಿ ಅತಿಗುಟ್ಟಿನಿಂದ ಕಳುಹಿಸಿ ಅಷ್ಟು ಕೋಟೆಯು ಸಿಡಿದು ಅಗಳುಬೇಲಿಗಳಂ ಸಲಿಸುಟ್ಟವಾಗಿ ಮಾಡಿ ಬರುತ ಮುಷ್ಟಿಸೈನ್ಯಗಳ ಕಟ್ಟಿ ಬರುವನು, ಅವನ ಅಷ್ಟು ಮರ್ಮಂಗಳಂ ನೋಡಿ ಸ್ಪಷ್ಟವಾಗಿ ತಿಳಿದು ಬಂದು ಉಸರಿಸುತ ಕಟ್ಟುಮಾಡುವದೆಂದು ನುಡಿದ ರಾಕ್ಷಸೇಂದ್ರನಾದ ಅಘಾಸುರನ ಮಾತಂ ಕೇಳಿ ಅವನ ಮಂತ್ರಿಯು ಬೇಗದಿಂದ ಸಮರ್ಥನಾದ ಒಬ್ಬರಾಕ್ಷಸನಂ ಕಳುಹಿಸಿ ಆರಾಕ್ಷಸನು ಹೋಗಿ ಸುಗಂಧರಾಜನ ರೂಪಲಾವ

ಣ್ಯಾ ಸೌಕುಮಾರ್ಯ ಶೌರ್ಯ ಪರಾಕ್ರಮಂಗಳಂ ನೋಡಿಬಂದು, ತನ್ನ ಸಂಗಡ ಸವಿಸ್ತಾರವಾಗಿ ಪೇಳಿದ್ದೆಲ್ಲವಂ ತನಗೆಧೊರೆಯಾದ ಅಘಾಸುರನ ಮುಂದೆ ಪೇಳಲು, ಆ ಮಾತಂ ಕೇಳಿದ ರಾಕ್ಷಸೇಂದ್ರನು ಮದ್ದಿಸ ಮನೆಯೊಂದಿಗೆ ಯಜ್ಞೇಶ್ವರನೆ ನೆಂಟತನವಂ ಮಾಡಿದಂತೆ ಅಗಿ ನನ್ನ ಪಟ್ಟಣವಂ ಕುರಿತು ಮಾನುಷನೆಂಬ ಕ್ರಿಮಿಯುಂ ಬರುವದೆಂದರೇನು? ಯಾರಾದರಾನೆ ಆಗಲಿ ಇಲ್ಲಿ ಬರುವದಕ್ಕೆ ಕಾರಣವೇನು? ಅವನಂ ಕಡುಬಿನಂತೆ ಮುರಿದು ತಿನ್ನುವೆನು, ಅವ ಪಾಕಶಾಸನನಾಗಲೀ ಶೋಕಸಾಗರದಲ್ಲಿ ಮುಳುಗಿಸುವೆ, ಅವ ವಹ್ನಿಯಾದರೂ ಮುಸ್ಕಿಹಿಡಿವೆನು, ಯಮನೇ ಬಂದರೂ ಕನಸಂಗೊಳಿಸುವೆ, ನಿಋತಿ ಆದರೂ ಗುರುಗತಿಯುಂ ಕೇರಿಸುವೆ,ವರುಣನೆಂದರು ಕರುಣವಿಲ್ಲದೆ ಕೊಲ್ಲುವೆ,ವಾಯುವನ್ನಾದರೂ ಕಾಯವಂ ತಿನ್ನುವೆ,ಯಕ್ಷೇಶನಾದರೂ ಶಿಕ್ಷಿಸಿಯೆ ಬಿಡುವೆ,ಈಶನೆ ಆಗಲಿಪಾಶದಿಂದ ಬಿಗಿಯುವೆ, ಬ್ರಹ್ಮತಾನಾದರೂ ಸುಮ್ಮನೆ ಬಿಡುವನೆ, ಪ್ರತ್ಯಾರಿಯೆ ಬರಲು ಪ್ರೈತ್ಯವಂ ಬಿಡಿಸುವೆ,ಮೃತ್ಯುವಂ ತಿನ್ನುವೆನು ಮತ್ಸ್ಯಗಸಂಬಡುವನೆ, ಹಾಹಾಯೆಂದು ಮದದ ಕೊಬ್ಬಿನಿಂದ ಅಬ್ಬಬ್ಬಾಗಿ ನುಡಿದು ತನ್ನ ಹತ್ತಿರದೊಳಿರುವ ಅತಿಶೂರರಾಗಿ ಭಯಂಕರರಾದ ಒಂದೊಂದು ಲಕ್ಷಸೈನ್ಯಂಗಳಿಗೆ ಅಧಿಪತ್ಯ ಉಳ್ಳ ಶವಭಕ್ಷ, ಶೋಣಿತಪಾನ, ಮಾಂಸಾಶನ ಪಿಶಾಚ, ಬಹುಘೋರ, ವ್ಯಾಘ್ರಮುಖ, ದುರ್ಗಂಧ, ವಿಷಲೇಪ, ಮೃತ್ಯುಕರ, ರಣದುಂದುಭಿ, ಅಗ್ನಿವರ್ಣ, ವಜ್ರದಂಷ್ಟ್ರ, ಅತಿಘೋರದಂಷ್ಟ್ರ, ಸರ್ಪಜಿಹ್ವ, ಲೋಕಶತ್ರು ಮೊದಲಾದ ಪಟುಭಟಾಧಿಪರಂ ಕರೆದು ನೀವೆಲ್ಲರು ಒಟ್ಟಾಗಿ ಭೇದವಿಲ್ಲದೆ ಕಾರ್ಯಸಮರ್ಥರಾಗಿ ನಿಮ್ಮ ನಿಮ್ಮಿಂದ ಅಭ್ಯಾಸ ಮಾಡಲ್ಪಟ್ಟಿರುವ ಗದಾ, ಮುಸಲ, ಪರಿಘ, ಪಟ್ಟಿಸ, ಭಿಂಡಿವಾಲ, ಕುಂತ, ಕುಠಾರ, ಶೂಲ, ಖಡ್ಗ, ಖೇಟಕ, ಮುಂತಾದ ಸರ್ವಾಯುಧಂಗಳಂ ಪಿಡಿದು, ನಮ್ಮ ಪಟ್ಟಣದ ಕೋಟೆಯಂದಾಟಬರುವ ನರನಂಜೀವನಸಹಿತನಾಗಿ ಕಟ್ಟಿ ಪಿಡಿದು ತಂದು ಕೊಡುವದೆಂದು ಶಿತಲುಯುರಗಿದಂತೆ ಅರ್ಘಟಿಕೆ ಮಾತ್ರದಿ ಪೇಳಿದ ರಾಕ್ಷಸೇಂದ್ರನ ಆಜ್ಞಾರೀತಿಯಂ ವಿಾರದೆ, ಬಹುಪರಾಕ್ರಮಿಗಳಾದ ಆ ಭಟಾಧಿಪರೆಲ್ಲರೂ ತಮ್ಮ ತಮ್ಮ ಸೈನ್ಯಂಗಳಂದೊಡಗೂಡಿ ಹೊರಡುತಾ, ನಾಮುಂದೆ ತಾಮುಂದೆ ನನೆ

ರಲಿ ತನಗಿರಲಿ ಕೊಲ್ಲದಿರಿ ಕೊಲ್ಲದಿರಿ ಮೆಲ್ಲಗೆ ಮೆಲ್ಲಗೆ ಇಂತೆಂದು ನುಡಿ ಯುತಲಿ ಕೋಟಿಗಳ ಒತಮೊಬ್ಬ ಕರ್ತರಿಂದೊಡಗೂಡಿ ಧಾಟಿಯಿಂದ ನಿಂತಿರುವ ಸುಗಂಧರಾಜೇಂದ್ರನಂ ಕಂಡು ಏನೊ ಒಬ್ಬಮನುಷ್ಯಮಾ ತ್ರದವ ಬಂದುಯಿರುವನೆಂದು ಅಲಕ್ಷ್ಯವಾಗಿ ತಿಳಿದು, ಅ ರಾಕ್ಷಸ ಭಟಾ ಧಿಪರೆಲ್ಲರು ಸುತ್ತಲೂ ಮುತ್ತರಾಗಿ ಪಿಡಿಯುವವರಲ್ಲಿ ಸನ್ನದ್ಧರಾಗಿ ಬ ಹುಯುದ್ಧವಂ ಕೈದೋರಲು; ಆಗ ರಾಜಕುಮಾರನಾದ ಸುಗಂಧರಾ ಯನು ಶಾಸ್ತ್ರಂಗಳಗ್ರಹಿಸುವ ವಿದ್ಯಾರ್ಥಿಯಂತೆ, ಪುಣ್ಯವಂ ಪಡೆಯುವ ಕರ್ಮ ನಿಷ್ಠನಂತೆ, ಆ ರಾಕ್ಷಸರ ಹಾವಳಿಯ ಒಂದುಕ್ಷಣ ಪರಿಯಂತವು ಸಹಿಸಿ ಎದುರಾಗಿನಿಂತು ಯುದ್ಧವಂ ಮಾಡುತ್ತಿರುವ ನಾನಾವಿಧವಾದ ಆ ಯುಧಪಾಣಿಗಳಾದ ರಾಕ್ಷಸರಂ ಕುರಿತು ಕ್ರಮವಾಗಿ ಒಂದೆರಡು ನಾ ಲ್ಕೆಂಟು ಹದಿನಾರೆಂಬ ದ್ವಿಗುಣ ಸಂಖ್ಯೆಗಳುಳ್ಳ ಬಾಣಂಗಳಂ ಪ್ರಯೋ ಗಿಸಿಬಿಡಲು, ಆ ಬಾಣಗಳ ಘಾತಕ್ಕೂ ಧನುಸ್ಸಿನಟೇಂಕಾರಧ್ವನಿಗು ಭ ಯಪಡದೆ ಆರಾಕ್ಷಸರೆಲ್ಲರೂ ಒಟ್ಟಾಗಿ ಬಂದು ಸುಗಂಧರಾಜನ ಮೈ ಮುತ್ತಿ ತಮ್ಮ ತಮ್ಮ ಆಯುಧಗಳಿಂದ ಯುದ್ಧವಂ ಮಾಡುತ ಶಕ್ತಿಪರಾ ಕ್ರಮ ಸಾಹಸ ಚಮತ್ಕಾರಗಳಂ ತೋರುತ ಕೈಯಿಂದಲೇ ಪಿಡಿಯುವೆ ವು ಎನುತ ಯತ್ನವಂ ಮಾಡಲು, ಆಗ ಶೂರಾಗ್ರೇಸರನಾದ ಸುಗಂಧರಾ ಯನು ಅವರನೆಲ್ಲರಂ ಒಬ್ಬೊಬ್ಬರಾಗಿ ಹಬ್ಬದಕುರಿಯಂತೆ ಮಾಡಿ ಸಿಂ ಹನಾದವಂ ಮಾಡಲು, ಆಗ ಹತಶೇಷರಾದ ಒಂದೆರಡು ರಾಕ್ಷಸರು ಬಿದ್ದು ಓಡಿಹೋಗಿ ಬಾಯೊಳಗೆ ಕೈಸನ್ನೆಯಿಂದ ತಮ್ಮೊಡೆಯನಾದ ಅಘಾಸುರ ನೊಡನೆ ಭಟರೆಲ್ಲಾ ಮಡಿದುದಂ ಆ ಸುಗಂಧರಾಯನು ರಾಕ್ಷಸರನೆಲ್ಲರಂ ಕುರಿತು ಮೂದಲಿಸಿ ಬಗೆಬಗೆಯಾಗಿ ಹೇಳಿದ ಅವಮಾನ ವಾಕ್ಯಂಗಳಂ ವಿಜ್ಞಾಪಿಸಲು, ಆಗ ಅಘಾಸುರನೆಂಬ ರಾಕ್ಷಸಾಧಿಪನು ಶತ್ರುವಿನ ಮಾ ತಂ ಕೇಳಿ, ಬಹುಕೋಪದಿಂದ ಕಾಲಾಗ್ನಿಯಂತೆ ಕೆರಳಿ ಪ್ರಳಯಕಾಲದ ಯಮನಂತೆ ಘುಡಿಘುಡಿಸುತಯೆದ್ದು, ತೇರಿನ ಭಂಡಿಗಳಂತೆ ಇರುವ ಕ ಣ್ಣುಗಳಂ ತಿರಗಿಸುತ, ಈಚಲಹೊದೆಗಳಂತೆ ಇರುವ ಮೀಸೆಗಳಂ ಕು ಣಿಸುತಾ, ಗುಹೆಗಳಿಗೆ ಸರಿಹಾಗಿ ಭಯಂಕರವಾಗಿ ಇರುವಬಾಯಿಗ ಳಂತೆಗೆಯುತ, ಮೈಯೊಳಗೆ ಇರುವ ರೋಮಗಳಪೊದೆಯೊಳ್ ಮರಿಮಾ

ಡಿ ಇರುವ ಹುಲಿ, ಕರಡಿ, ಹಾವುಗಳ ಸಂಚಾರದಿಂದಲು, ಹಲ್ಲುಸಂದಿಯೊಳ್ಸಿಕ್ಕಿ ಕೂಗಿ ಕೊರಗುವ ಆನೆ ವನಮಹಿಷಂಗಳಿಂದಲುಂ, ತಲೆಯೊಳಗೆ ಹುಟ್ಟಿ ಇರುವ ವೃಕ್ಷಕುಂಜಗಳಲ್ಲಿ ಕೂಗುತಿಹ ಹದ್ದು, ಗೂಜೆ, ವಾಯಸ ಮೊದಲಾದ ದುಷ್ಟಪಕ್ಷಿಗಳ ತಂತೆತಂತೆಗಳಿಂ, ಅತಿಭಯಂಕರವಾಗಿ ನಡೆದುಬರುವ ಬೆಟ್ಟದಂತೆ ಎದುರಾಗಿ ಬಗೆಬಗೆಯಾದ ಶಸ್ತ್ರಾಸ್ತ್ರಸಹಿತನಾಗಿ ಕೂಗುತಾ ಬರುವ ರಾಕ್ಷಸೇಂದ್ರನಂ ಅವನ ಮುಂಭಾಗದೊಳ್ ಸಮುದ್ರದ ತೆರೆಗಳಂತೆ ಪಸರಿಸಿರುವ ಅವನ ಮೈಗಾವಲ ರಾಕ್ಷಸರುಗಳಂ ಕಂಡು, ಸುಗಂಧರಾಜನು ಇದೇನು? ತಾನೆನಡೆದು ಬರುವ ಕುಲಗಿರಿಯೋ? ಪ್ರಳಯಕಾಲದಮಹಾ ಭೂತವೋ? ಇವರಾಕ್ಷಸನೋ? ಇವನ ಪೆತ್ತವಳು ಎಂಥಾ ಜನನಿಯೋ? ಇವನೊಡನೆ ಯುದ್ಧವಂ ಮಾಡಿದರೆ, ಯಾರಿಂದಲಾದರು ಎದುರಿಗೆ ನಿಲ್ಲಲುಶಕ್ಯವೆ? ಭಗವಂತನ ಲೀಲೆಗಳ ಇಷ್ಟೆಂದು ಬಣ್ಣಿಸುವರ್ಯಾರೆನುತ ಮಂತ್ರಿಯೊಡನೆ ಮಾತಾಡುತ್ತ, ಸುಗಂಧರಾಯನು ತನ್ನಯೆದುರಿಗೆ ಬರುವ ಅಘಾಸುರನೆಂಬ ರಾಕ್ಷಸನಂ ತನ್ನ ಬಾಣಂಗಳಿಂದ ತಡೆಯಲು, ಕೊಳ್ಳಿಗಳಿಂದ ಚೆದರಿಸಿದ ಮದ್ದಾನೆಯಂತೆ, ಬಾಣಂಗಳಂ ಲಕ್ಷ್ಯಗೊಳ್ಳದೆಕೊಡರಿ ಸಿಡಿಲುಗಳು ಎರಗಿದಂತೆ,ಸಿಂಹನಾದವಂ ಮಾಡುತ ಬರುವ ರಾಕ್ಷಸೇಂದ್ರನು ರಾಯನಂ ಕುರಿತು. ಎಲೈ ನರಕೀಟನೆ? ನನ್ನಂ ಕೆಣಕಿ ಬದುಕಿ ಇರುವರ್ಯಾರು, ನಿನ್ನ ಹೆಸರೇನು, ಎನ್ನಂ ನೀನ್ಯಾರೆಂದು ತಿಳಿದಿರುವೆ, ನರರೊಳಗೆ ಆಡುವ ಆಟ ಇಲ್ಲಿನಡೆಯುವದಿಲ್ಲ, ಲೋಹಕಾರಬೀದಿಯೊಳ್ ಸೂಜಿಯಂ ಮಾರುವದಕ್ಕೆ ಬಂದವನಂತೆ, ಹೆರುಬಲ್ಲವಗೆ ಎರೆಯುಂತೋರಿದಂತೆ, ಎನ್ನೊಡನೆ ಯುದ್ಧವಂ ಮಾಡಿ ತೋರುವದಕ್ಕೆ ಬಂದಿರುವ ನಿನ್ನನ್ನು ಕಾಲುಗಳಿಂದಾ ತುಳಿದು ಹೊಸಕಿ ಬಿಡುವೆನೆಂದು ಮೇಲೆಬಿದ್ದುಬರುವ ಅಘಾಸುರನಂ ನೋಡಿ, ಸುಗಂಧರಾಜೇಂದ್ರನು ಎಲವೊ! ಖೂಳರಕ್ಕಸನೆ! ಕೇಳು, ಬಗಳುವ ಶ್ವಾನಂಗಳು ಹುಲಿಯ ಮೇಲೆ ಬೀಳಲರಿಯದು, ಕಾರ್ಯವಂಮಾಡುವ ಮಹಾಪುರುಷನು ಅದಂ ಬಾಯಿಂದ ಹೇಳುವದಿಲ್ಲ, ಸಿಂಹವನು ಕಂಡು ಕೈತಪ್ಪಳೆಯಿಂದ ಓಡಿಸಬಹುದೆ? ಬರಿಯಬಾಯಿಮಾತುಗಳಿಂದ ಫಲವೇನು, ಯುದ್ಧದೊಳ್ ಸಾಮರ್ಥ್ಯವಂ ಕೈದೋರಿ ನರಿ ಎನ್ನಿಸಿ ಕೊಂಡವನೆ

ಶೂರನೆಂದು ಮೂದಲಿಸಿ ಬಗೆಬಗೆಯಾದ ಬಾಣಂಗಳಿಂದ ಬುಡದಿಂದಕೊನೆವರಿಗೂ ಪುಷ್ಪಗಳಿಂದ ನಿಬಿಡವಾದ ಮುಳ್ಳು ಮುತ್ತುಕದ ಮರದಂತೆ ರಾಕ್ಷಸನ ದೇಹವಂ ಕೆಂಪಾಗಿಮಾತಲು, ಆಗರಾಕ್ಷಸನು ಬಹುಕೋಪದಿಂದ ಸುಗಂಧರಾಜನ ಸಮೀಪಕ್ಕೆ ಬಂದು ನಿಂತು ತನ್ನ ಘೋರವಾದ ಬಾಣಂಗಳಿಂದಲುಂ,ಕಲ್ಲುಗಳಿಂದಲುಂ. ಮರಗಳಿಂದಲುಂ, ಇನ್ನೂ ಅನೇಕವಿಧಂಗಳಾದ ಶಸ್ತ್ರಾಸ್ತ್ರಗಳಿಂದಲುಂ, ರಾಜಕುಮಾರನಂ ಪ್ರಹರಿಸಲು; ಆಗ ಸುಗಂಧರಾಜನು ರಾಕ್ಷಸೇಂದ್ರನ ಘಾತಕ್ಕೆ ಮಂಕಾಗಿ ಮೈಮರೆತು ನಿಮಿಷದೊಳ್ ತಿಳಿದು ಎಚ್ಚೆತ್ತವನಾಗಿ ಪುನಃ ರಾಕ್ಷಸನಂ ಕುರಿತು ಬಹು ಘೋರಯುದ್ಧವಂ ಮಾಡಲು, ಆಗ ಇವರಿಬ್ಬರಿಗು ಪ್ರಹಾರಂಗಳು ಚಪರುವದು, ಚಿಗಿಯುವದು, ಹಾರುವದು, ಕೆಡಹುವದು ಜರೆಯುವದು, ಅಸ್ತ್ರಪ್ರತ್ಯಸ್ತ್ರಗಳ ಸಂಧಾನ ವಿಮೋಚನ ಮೊದಲಾದ ಯುದ್ಧ ಕುಶಲತೆ ಚಮತ್ಕಾರಗಳು ಸಮ ಸಮವಾಗಿ ಬರುತ್ತಾ ಯುದ್ಧವಂ ಮಾಡುತ್ತಾ ಇರಲು; ಆಗಸುಗಂಧರಾಜನು ಸಮ್ಮೋಹನಾಸ್ತ್ರವಂ ಪ್ರಯೋಗಿಸಿದ ನಿಮಿಷದೊಳ್ ಕೋಟಿ ಸುಗಂಧರಾಯನ ರೂಪವಂ ಸುತ್ತಮುತ್ತಂ ಕಂಡು, ಆರಾಕ್ಷಸನು ಅಷ್ಟು ರೂಪಗಳಿಂದ ಸುಗಂರಾಜನುಮಾಡುವ ಘೋರಯುದ್ಧವನ್ನು, ಅವರೊಳಾಗುವ ಪ್ರಹಾರಂಗಳಂ ಸಹಿಸಲಾರದೆ ಭಯಪಟ್ಟು ಕಂಗೆಟ್ಟು ನಡುನಡುಗುತ ಸುಗಂಧರಾಜನಂ ಕುರಿತು, ಎಲೈ ದೇವಾಂತಕಪುರುಷನೆ! ನಿನಗೆ ಧರೆಯೊಳಗೆ ಎಣೆಯಾರು? ನಿನ್ನೊಡನೆ ಯುದ್ಧವಮಾಡಿ ಬದುಕುವರು ಯಾರು,ನಾನು ನಿನ್ನೊಡನೆ ಮಿತ್ರತ್ವವಂ ಬಳಸುವನಲ್ಲದೆ ಯುದ್ಧವಂ ಮಾಡುವವನಲ್ಲ,ಈರಾಜ್ಯವಂ ನಿನ್ನವಶವಂಮಾಡಿ, ನಿನ್ನವನಾಗಿ ಇರುವೆನೆಂದು ನಮ್ರದಿಂದ ನುಡಿದ ರಾಕ್ಷಸನಮಾತಂ ಕೇಳಿ, ದಯಾನಿಧಿಯಾದ ಸುಗಂಧರಾಜನು, ಆರಾಕ್ಷಸೇಂದ್ರನ ಮೇಲೆ ಪ್ರಯೋಗಿಸಿದ ಮಹಾ ಅಸ್ತ್ರಂಗಳಿಗೆ ಉಪಸಂಹಾರವಂಮಾಡಿ ಆತನಂ ಕರೆದು ಪ್ರೀತಿಯಿಂದ ಕೈಹಿಡಿದು ಮಾತಾಡುತ,ಆತನೊಡನೆ ಪುರವಂ ಪ್ರವೇಶಿಸಿ, ಬಹುಸ್ನೇಹ ಮರ್ಯಾದೆಯಿಂದ ಆವನ ಭವನದೊಳ್ ಕುಳಿತು ಅವನಿಂದ ಒಪ್ಪಿಸಲ್ಪಟ್ಟ ಕೈಗಾಣಿಕೆಗಳಂ ಅಂಗೀಕರಿಸುತ, ಆವೇಶದ ಪ್ರಭುತ್ವವನ್ನು ಅಘಾಸುರನಿಗೆ ಅಭಯ ರೂಪದಿಂದಿತ್ತು

ಅಲ್ಲಿಯ ಹಜಾರದೊಳ್ ಒಡ್ಡೋಲಗದಲ್ಲಿ ಕುಳಿತು ಇರುವ ಸಮಯ
ದೊಳ್, ಸುಗಂಧರಾಜೇಂದ್ರನ ಪ್ರೀತಿಯನ್ನು ವಿಶೇಷವಾಗಿ ಸಂಪಾದಿಸ
ಲಿಚ್ಛೆಯುಳ್ಳ ಅಘಾಸುರನು ರಾಜೇಂದ್ರನ ಮನೋಭಿಪ್ರಾಯವಂತಿಳಿದು
ತನ್ನ ಬಳಿಯೊಳಿರುವ ಅಮೋಘವಾದ ದಿವ್ಯಸುರಭಿಯನ್ನು ಕರುವಿನಿಂದೊ
ಡಗೂಡಿ ಬಹುಬಗೆಯಾದ ದ್ವೀಪದ್ವೀಪಾಂತರದ ವಸ್ತು ವಸ್ತ್ರಾದಿಗಳಿಂ
ದ ಸಹಿತವಾಗಿ, ಕೈಗಾಣಿಕೆ ತಂದು ಒಪ್ಪಿಸಲು, ಆಗ ಸುಗಂಧರಾಯ
ನು ಬಹು ಸಂತೋಷದಿಂದ ಸುರಭಿಯುಂನೋಡಿ ಕೈಮುಗಿದು ಸುದಿನ
ವೆಂದು ನೆನೆದು, ಈಮಹಾಬಲಶಾಲಿಯಾದ ರಾಕ್ಷಸನು ಶರಣಾಗತನಾಗಿ
ಬಹು ಸ್ನೇಹವಂ ಬಳಸುವದು ಆವಿಪ್ರೋತ್ತಮನಿಂದ ಪೇಳಲ್ಪಟ್ಟ ಶುಭ
ಶಕುನಂಗಳ ಫಲವೇ ಸರಿಯೆಂದು ನಿಶ್ಚೈಶಿ, ಅಘಾಸುರ ಸಹಿತನಾದ
ಛಾಯಾಗುಪ್ತನಿಂದೊಡಗೂಡಿ ಧೇನುವಂ ಪಿಡಿದು ತರುವಂತೆ ಕಟ್ಟು
ಮಾಡಿಶಿ, ವಾಯುವೇಗವುಳ್ಳ ರಾಕ್ಷಸರಿಂದ ವಹಿಸಲ್ಪಟ್ಟು ಅಘಾಸುರ
ನಿಂದ ಸಮರ್ಪಿತವಾದ ಆಂದೋಳಿಕವನ್ನು ಏರಿ ವಾಹನಾರೂಢನಾದ ಮಂ
ತ್ರಿಯೊಡಗೂಡಿ, ಬರುತಿರುವ ರಾಯನಂನೋಡಿ ಇವ ಇಂದ್ರನೋ! ಉ
ಪೇಂದ್ರನೊ? ಸುಗಂಧರಾಜೇಂದ್ರನೊ? ಎಂದು ನುಡಿಯುತಿಹ ಜನರು
ಗಳ ಪರಸ್ಪರಾಲಾಪಗಳಂ ಲಾಲಿಸುತ ಬಹುವೇಗದಿಂದ ಬಂದು ತನ್ನ ಬಿ
ಡಾರವಂ ಪೊಕ್ಕು ಆಧೇನುವಂ ಅಘಾಸುರನಿಂದ ಸಹಿತವಾಗಿ ಮಂತ್ರಿ
ಛಾಯಾಗುಪ್ತರಿಂದೊಡಗೂಡಿ ಸೌಗಂಧಿಕಾದೇವಿಯ ಅರಮನೆಗೆ ಕಳುಹ
ಲು. ಆಗಕಳಿಂಗರಾಜನ ಪಟ್ಟಣವಾದ ವಿಜಯನಗರದ ಬೀದಿಯೊಳ್ಬರು
ವ ಬಹುವಿಚಿತ್ರವಾದ ಸುರಭಿಯುಂ ಅದಂ ಕೈಯಿಂದ ಪಿಡಿದು ನಡೆದು
ಮಾತಾಡುತಬರುತಿರುವ ಬೆಟ್ಟದಂತೆಯಿರುವ ರಾಕ್ಷಸನಂನೋಡಲೋಸು
ಗ ಆವಿಜಯನಗರವಾಸಿನಿಯರಾದ ಕಾಮಿನಿಯರು ಕೆಲವರು ತಮ್ಮ ತುರಿ
ಬಿನೊಳ್ ಗೆಜ್ಜೆಯಂ ಶಿಕ್ಕಿಶಿ, ಕಾಲುಗಳಿಗೆ ಹೂವಿನ ಸರವಂಕಟ್ಟಿ ಬ
ರುತ್ತಿದ್ದರು. ಕೆಲವರು ಶೀರೆಯಂ ತಳಕೆಳಕಾಗಿ ಉಟ್ಟು ಬಂದು ಇರುವ
ರು. ಕೆಲಂಬರು ಮೂಗಿನೊಳ್ ವಾಲೆಯಂ ನಿಟ್ಟು, ಕಿವಿಗಳೊಳ್ ಮೂ
ಗತಿಯಂ ಶಿಕ್ಕಿಸಿ ಅವಸರದಿಂದ ಬರುತಿರುವರು. ಕೆಲವರು ಶೀರೆಯಂ ಬಿ
ಟ್ಟು ಬಂದು ನೋಟದ ಬಳಿಯೊಳ್ ತಿಳಿದು ಎಲ್ಲರೊಡನೆ ಹೀಗೆಬಂದೆನೆ?

ಎಂದುಪೇಳಿ ನಿಶ್ಶ್ವಸುವರು. ಮತ್ತಂಕೆಲಂಬರು ಇದೇಸಮಯವೆಂದು ಅಲಂಕೃತರಾಗಿ ಸಂದಣಿಯ ನಡುವಿಂದ ಬೇಕಾದ ಪುರುಷರಂ ಕಂಡು ಮೇಲ್ವರಿಶಿ ಬರುವರು. ಮತ್ತಂಕೆಲವರು ಮಕ್ಕಳನೆತ್ತಿಕೊಂಡು ಬರುತ ದಾರಿಯೊಳ್ ಪೋಗಲಾರದೆ ಮಕ್ಕಳಂ ನೆಲದಲ್ಲಿ ಕೂಡಿಸಿಬರುವರು. ಒಬ್ಬಳು ಅವರಗರಿಯ ನಾನೇಕಂಡೆ ಅದು ನವಿಲೆಂದು ಪೇಳುವಳು. ಮತ್ತೊಬ್ಬಳು ರೆಕ್ಕೆಗಳನ್ನ ನಾನುಮಾತ್ರಕಂಡೆ ಕರೀಪಕ್ಷಿಯೇ ಸಿದ್ಧವೆನುವಳು ಮತ್ತೊಬ್ಬಳು ನಮ್ಮವರ ಮನೆಗೆ ಕಂಡ ಆಳುಬಂದನಂತೆ ಅದು ನರಳೆಮ್ಮೆ ಎಂಬುವಳು, ಇಂತುವಿಚಿತ್ರವಾಗಿ ನೋಡುವ ಜನರಿಂ ನಿಬಿಡವಾದ ಬೀದಿಯೊಳ್ ಪನ್ನೀರಂತಳಿದು ರಂಗೋಲಿಮೊದಲಾದ ವಸ್ತುಗಳಿಂದಲಂಕರಿಶಿ ಆರತಿಯಂ ಪಿಡಿದು ನಿಂದಿರುವ ಸುಂದರಾಂಗಿಯರ ಸಂದಣಿಯಿಂದ ಮೆಲ್ಲಮೆಲ್ಲನೆ ನಡೆದುಬರುವ ಸುರಧೇನುವು ರಾಜಕುಮಾರತಿಯ ಸ್ವಯಂವರದ ತೊಟ್ಟಿಯಬಾಗಿಲ ಬಳಿಗೆ ಬಂದಸಮಯದೊಳ್ ಸೌಗಂಧಿಕಾದೇವಿಯು ತನ್ನ ಪ್ರಿಯಸಖೀಜನರಿಂದ ಒಡಗೂಡಿ ಪನ್ನೀರು, ವಸ್ತ್ರ, ಕಲಶ, ಕನ್ನಡಿ, ಧೂಪ, ದೀಪ, ನೈವೇದ್ಯಂಗಳಂ ಧಾತುವಸ್ತಿಕೆಗಳಂ ಆರತಿಗಳಂ ತರಿಶಿಕೊಂಡು ಬಂದು ಧೇನುವಂ ಪೂಜಿಶಿ ನೋಡುವದಕ್ಕೆ ಕಣ್ಣುಗಳು ಯೆರಡುಸಾಲದೆಂದು ಪೇಳಲು ಯೋಗ್ಯವಾದ ಧೇನುವಂ ಕಂಡು ಅದರೊಡನೆ ಬಂದು ಮಹಾಭೂತದಂತೆ ಇರುವ ಅಘಾಸುರನೆಂಬ ರಾಕ್ಷಸನಂ ನೋಡಿ ಚೋದ್ಯಂಗೊಳುತ ಇಂಥಾವಸ್ತುಗಳಂ ಸಾಧ್ಯವಾಗಿ ಮಾಡಿತಂದು ಇರುವ ರಾಜಕುಮಾರನ ಶೌರ್ಯ, ಧೈರ್ಯ, ಪರಾಕ್ರಮಂಗಳಿಗೆ ದೃಷ್ಟಿ ಆಗದೆ ಇರಲೀ, ಎಂದು ತನ್ನ ದೇವರಂ ಪ್ರಾರ್ಥಿಸುತ್ತ, ತಾನು ಮಲಗುವ ಮನೆಯ ಬಾಗಿಲಮುಂದೆ ಧೇನುವಂ ಕಟ್ಟಿಶಿ ಅಡಿಗಡಿಗೆ ಬಹು ಉಪಚಾರಂಗಳಿಂದ ಪೂಜಿಸುತ ಅತ್ಯಂತಸಂತೋಷದಿಂದ ಇರುತ್ತಿದ್ದರುಎಂಬಲ್ಲಿಗೆ

ಗದ್ಯ—ಕುಂಡಲಿಶಯನ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖ ನಿಖಿಲಸುರವರ ಪರಿಭವ ಪರಿಣತ ಪ್ರಚಂಡಬಲ ಚಂಡಮುಂಡ ವಿಖಂಡನ ನಿಪುಣ ಕೋದಂಡಕಾಂಡ ಮಂಡಲಾಗ್ರಧರ ಜುಜಾದಾಡ ಪರಿಮಂಡಿತ ಚಾಮುಂಡಿಕಾಕಟಾಕ್ಷ ವೀಕ್ಷಣ ಪ್ರವರ್ಧಮಾನ

ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತಗ್ರಂಥ ವಿಸಧಿನ ಪ್ರಬಂಧ ನಿಬಂಧನ ದುರಂಧರ ತ್ರಿಭುವನ ಪವಿತ್ರಾತ್ರೇಯುಸ ಗೋತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ ನರಪತಿಬಿರುದಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯ ವೆಂಬ ಈ ನವೀನ ಕೃತಿಯೊಳ್ ಸುಗಂಧಮಹಾರಾಜೇಂದ್ರನು ಧೇನು ವಣವಂಗೆವ್ವನೆಂಬಲ್ಲಿಗೆ, ಇಪ್ಪತ್ತೊಂಭತ್ತನೆ, ಆಶ್ವಾಸಕ್ಕೆ ಮಂಗಳಂ ಮಹಾ.

ಇಪ್ಪತ್ತೊಂಭತ್ತನೇ ಆಶ್ವಾಸ ಸಂಪೂರ್ಣವು.

ಶ್ರೀರಸ್ತು.

ಮೂವತ್ತನೇಯ ಆಶ್ವಾಸ ಪ್ರಾರಂಭಃ.

ಶ್ರೀಚಾಮುಂಡಿಕಾಂಬಾಯೈನಮಃ

---

ಅತ್ತಲಾ ಮುನಿಶಾಪದಿಂದ ಇಂದ್ರಂಗೆ ಬಂದಿರುವ ಅಜ್ಞಾತಜನ್ಮಮಂ, ಅವನ ಸ್ತ್ರೀಪುತ್ರ ಬಾಂಧವರಿಗೆಲ್ಲಾ ಬಂದಿರುವ ದೇಶಭ್ರಷ್ಟತ್ವಮಂ, ಆಮಹೇಂದ್ರಂಗೆ ಅತಿಮುಖ್ಯವಾದ ಆಯುಧವಾಹನಂಗಳಿಗೆಲ್ಲಾ, ಪ್ರಾಪ್ತವಾದ ಚಾಯುಮಾಯುಂಗಳಂ ತಿಳಿದು ಆಸ್ವರ್ಗಲೋಕದೊಳಗಿಗಿರುವ ಆವರ್ತ, ಸಂವರ್ತ, ಪುಷ್ಕಳ, ದ್ರೋಣ, ಕಾಳಕ, ನೀಲ, ವರುಣ, ವಾಯು, ತಮೋ ಮೇಘಗಳೆಂಬ ನವಮೇಘಂಗಳು ಆದೇವೇಂದ್ರನ ಸಂಚಾರ ವಿಹಾರಂಗಳಿಗೆ ಸದಾಯೋಗ್ಯವಾಗಿ ಇರುವ ವ್ಯೋಮಯಾನ ಯಾವಾಗಲು ನಮ್ಮೊಡನೆ ಕೂಡಿಬಹುನಡತೆಯುಳ್ಳದ್ದಾಗಿ ಇರುವದರಿಂದ ಆವಿಮಾನವಂ ಬಿಟ್ಟು ಇರಲಾರೆವು, ಇಲ್ಲಿ ಇರುವಾ ಎಂದರೆ ಅರಾಜಕವಾಗಿ ರಾಕ್ಷಸಾಕ್ರಾಂತ ವಾಗಿಯು ಇರುವದರಿದ ಇಲ್ಲಿವಾಸವಾಗಿರುವ ಸಜ್ಜನರಿಗೆ ಬಹು ಉಪದ್ರವಂಗಳು ಬಂದೇ ಬರುವದು, ಅಥವಾ ಉಪದ್ರವಗಳು ಬರದಂತೆ ಅಮರಾವತಿಯ ಮೇಲು ಭಾಗದೊಳಂತರಿಕ್ಷದಲ್ಲಿವಿಮಾನಸಹಿತನಾಗಿ ನೋಡುತ್ತಲಿರುವೆವು ಎಂದರೆಮುಂದೆ ಏನಾದರೂ

ಅಮರರು ಯಥಾ ಪ್ರಕಾರವಾಗಿ ಒಂದು ವ್ಯಾಳೆ ಬಂದು ಇಲ್ಲಿಯಿರುವ ನೆಮ್ಮಂ ಕಂಡರೆ ಒಬ್ಬರೂ ಇಲ್ಲದ ಪಟ್ಟಣವನ್ನು ಇವರೆ ರಾಕ್ಷಸ ಸಹಾಯರಾಗಿ ಸೂರೆಗೊಂಡವರು ಎಂದು ನಮ್ಮನ್ನೆ ಬಾಧಿಸುವರು, ಆದ್ದರಿಂದ ಲೋಕದೊಳ್ ಜನವಾಕ್ಯವೇ, ಆಜನವಾಕ್ಯಗಳಿಗೆ ಸರಿಯಾಗಿರುವದು ಜನವಾಕ್ಯವಂ ಮೀರಲಾಗದು, ಆಗಲೀ ನಾವು ಮತ್ತೆಯಲ್ಲಿಯಾದರು ಸುಖದಿಂದ ಇರುವದೆಂದರೆ ಸಕಲ ಭೂಮಂಡಲಕ್ಕು ನಾವೇ ಜೀವನ ಪ್ರದರಾಗಿ ಇದ್ದವರು ಈಗಎಲ್ಲಿಗೆ ಪೋಗಿ ಜೀವಿಸುವೆವು,ಕಟಕಟಾ ಸ್ವದೇಶವಂ ಬಿಟ್ಟು ಪರದೇಶವಂ ಕುರಿತು ಪೋಗುವರು ಎಷ್ಟು ಪಾಪಿಗಳೊ? ಈಕಷ್ಟವೆಂದು ಪೋಗುವದೋ ನಮ್ಮೊಡೆಯನಾದ ದೇವೇಂದ್ರನಂ ಎಂದಿಸಂತೆ ಯಾವಾಗ ಕಾಣುವೆವೋ ತಿಳಿಯಲಿಲ್ಲಾ, ಗ್ರಹಗತಿಗಳು ಯಾರ್ಯಾರಿಗೂ ತಪ್ಪಿದ್ದಲ್ಲಾ, ಅಂಥಾ ದಶರಥಮಹಾರಾಯನು ಜನ್ಮಶನಿಯಿಂದ ಬಾಧಿಸಲ್ಪಟ್ಟು ಆತನಸ್ತ್ರೋತ್ರವಂ ಗೈಯಲಿಲ್ಲವೆ? ಏಕಾದಶಿ ಸ್ಥಿತಿ ಶುಕ್ರನಿಂದ ರಾವಣನು ಮಡಿದು ಪೋಗಲಿಲ್ಲವೆ? ಶೂರನಾದ ಕೌರವನು ತೃತಿಯ ಬೃಹಸ್ಪತಿಯಿಂದ ಆದ ಬಗೆಯು ಮಾರತಿರುವದೆ? ಚತುರ್ಥಸ್ಥಾನಗತನಾದ ಬುಧನು ಯುಧಿಷ್ಠಿರನಂ ಕೋಟಲೆಗೊಳಿಸದೆ ಬಿಟ್ಟನೆ? ಹರಿಶ್ಚಂದ್ರನು ಸಪ್ತಮಾಂಗಾರಕನಿಂದ ಏನೇನು ಭಂಗಪಡಲಿಲ್ಲಾ? ಅಷ್ಟಮಸ್ಥಾನಗತನಾದ ಚಂದ್ರನಿಂದ ಕಂಸನು ಧ್ವಂಸವಂಯ್ದಿದನು, ನಳಚಕ್ರವರ್ತಿಯು ದೇಶಭ್ರಮಣವಂ ಪಂಚಮಸ್ಥಸೂರ್ಯನಿಂದಾ ಯ್ದಿದಲಿಲ್ಲವೇ? ಹೀಗೆ ಇರುವಲ್ಲಿ ದೇವೇಂದ್ರಂಗೆತಾನೇ ಎಂತು ತಪ್ಪುವದುಯೆಂದು ತೊಳಲಿತೊಳಲಿ ಈಅರಾಜಕವಾದ ಸ್ವರ್ಗಲೋಕವಂ ಬಿಟ್ಟುಭೂಲೋಕದೆಲ್ಲಿಲ್ಲಿ ಯಾವದರುವೊಂದು ಶುದ್ಧದೇಶವಲ್ಲಿ ಜೀವನಸಮೃದ್ಧಿ ಉಳ್ಳ ಬಳಿಯಲ್ಲಿ ಕಾಲಹರಣವೇ ಈಗಿನಪ್ರಕೃತಕಾರ್ಯವಾಗಿ ತೋರುವದೇ ಹೊರ್ತು ಬ್ಯಾರೆಇಲ್ಲವೆಂದು ನಿಶ್ಚಯಿಸಿ ವ್ಯೋಮಯಾನ ಸಹಿತವಾಗಿ ಪೊರಮಟ್ಟು ಅಂತರಿಕ್ಷದೊಳ್ಬರುತ ಬರುತ ಸಕಲ ದ್ವೀಪಂಗಳಕಡೆಯಭಾಗದಲ್ಲಿರುವ ಪುಷ್ಕರದ್ವೀಪದಸಮೀಪಕ್ಕೆ ಬಂದುಅಲ್ಲಿರುವ ಪುಣ್ಯಕರವಾದ ಶ್ವೇತದ್ವೀಪವೆಂಬ ಉಪದ್ವೀಪವಂ ಕಲಿದೋಷವಿಲ್ಲದ ಪುಷ್ಕರಪರ್ವತವಂ ಕಂಡು ಅಲ್ಲಿ ಋಷಿವೇಷದಿಂದ ಭಟರು ಸಹಿತವಾಗಿ ತಪಸ್ಸಂಮಾಡುವ

ರಾಕ್ಷಸನಂ ಋಷಿಯೆಂದು ತಿಳಿದು. ಅಲ್ಲಿಇರುವ ಸ್ವಾದೋದಕ ಸಮುದ್ರದ ತೀರದೋಳ್ ಮೆಲ್ಲನೆ ಇಳಿಯುವ ನವಮೇಘ ಯುಕ್ತಮಾದ ದಿವ್ಯವ್ಯೋಮಯಾನವಂ ಕಂಡು ಋಷಿವೇಷದಿಂದ ಪರಿವಾರದೊಡನೆ ತಪಸ್ಸಂಮಾಡುತಲಿರುವಹಾಗೆ ಕರಾಳನೆಂಬ ರಾಕ್ಷಸನು ಮೆಲ್ಲನೆ ಧ್ವನಿಇಲ್ಲದೆ ಇಳಿಯುವಮೇಘಂಗಳಂ ಅದರಮೇಲೆವಪ್ಪಿ ಇರುವ ವ್ಯೋಮಯಾನವಂ ನಿರೀಕ್ಷಿಸಿ ಮನದೋಳ್ ಶಂಕೆತೋರಿ ಹಾಗೆ ಇಂದ್ರಂಗೆ ಬಂದುಇರುವ ದುರ್ದಶೆಯಂ ತಿಳಿದು ಈವಿಮಾನವು ಇಂದ್ರನವಿಮಾನವಾಗಿ ಇದ್ದರು ಇರಬಹುದು ಯೆಂದುತಿಳಿದು ಆಇಂದ್ರಪದವಿಗೆ ತಪಸ್ಸಂಮಾಡುವ ನಾನು ಈವಿಮಾನವಂ ಬಿಡಬಾರದುಯೆಂದು ಆಲೋಚಿಸಿ ಇದನವಶ್ಯವಾಗಿ ಕಟ್ಟಿಕೊಂಡು ಇರಬೇಕೆಂದು ತನ್ನ ಪರಿವಾರಸಮೇತನಾಗಿ ಬಂದು ಮೇರುವಿನಂತೆ ಅಳ್ಳಾಡಿಸುವದಕ್ಕೆ ಅಸಾಧ್ಯವಾಗಿ ಇರುವ ವಿಮಾನವಂ ಬಹು ಬಲಾತ್ಕಾರ ಸನ್ನಾಹದಿಂದ ಹಿಡಿದು ಹೊರಜಿಗಳಂತೆ ತೋರುವ ತನ್ನ ತೋಳುಗಳಿಂದ ಸೆಳೆತಂದು ಪುಷ್ಕರ ಪರ್ವತದ ಶಿಖರಂಗಳಿಗೆ ಮೇಘಸಹಿತವಾಗಿ ಆವಿಮಾನಕ್ಕೆ ಕಟ್ಟಿರುವ ವಜ್ರಸರಪಣಿಗಳಿಂದಲೇ ಬಿಗಿದು ಕಟ್ಟಿ ಕೃತಕೃತ್ಯನಾದೆನುಯೆಂದು ಸಂತೋಷದಿಂದ ವಿಮಾನವಂ ಬಳಬಳಸಿ ನೋಡುತಾಬಂದು ಪುನಃಇಂದ್ರಪದವಿಯಂ ಜಾಗ್ರತೆಇಂದ ಯೈದಬೇಕೆಂದು ತಪಸ್ಸಂಮಾಡುತಿರಲು

ಅನಂತರದಲ್ಲಿ ಇತ್ತಲಾ ಕ್ಷತ್ರಿಯ ಸಂಪ್ರದಾಯಾನುಸಾರವಾಗಿ ಅತಃಪುರದಲ್ಲಿ ಇರುವ ಸೌಗಂಧಿಕಾ ದೇವಿಯು ಕಂಡು ಕಾಣದಹಾಗೆಯು, ಭ್ರೂಸಂಜ್ಞಾದಿ ಸನ್ನೆಗಳಿಗೆ ಯೋಗ್ಯವಾಗಿಯು, ಪರಸ್ಪರಮನೋಭಿಪ್ರಾಯಂಗಳಂ ತಿಳಿಸುವ ನೋಟಕ್ಕೆ ಸಹಾಯವಾಗಿ ಇರುವ ಸೂಕ್ಷ್ಮಪಟವಂತೆರೆಯಾಗಿ ಕಟ್ಟಿಸಿ, ಯಾವ ಪ್ರಕಾರದಲ್ಲಿಯಾದರು ರಾಜಸ್ತ್ರೀಯರುಗಳು ಸೂರ್ಯನಂಕೂಡ ದೃಷ್ಟಿಸಿ ನೋಡಬಾರದೆಂಬ ಮರ್ಯಾದೆ ಇರುವವರಿಂದ ತಂದೆಯೇಆಗಲಿ, ಮಗನೇಆಗಲೀ, ಭ್ರಾತೃವೇಆಗಲಿ, ಯಾರಾವರೂಸರಿ ಪುರುಷರ ಸಂಗಡ ಏಕಾಂತದಲ್ಲಿ ಯೆದುರಾಗಿ ಸಮಕ್ಷಮದೋಳ್ ನಿಂತು ಕುಳಿತು ನಿಷ್ಕಳಂಕದಿಂದಭಯವಿಲ್ಲದೆ ಮಾತಾಡಲಾಗದುಯೆಂದು ತಿಳಿದು, ಸಮೀಪದೋಳ್ ಸಕಲ ಇಂಗಿತಂಗಳಂ

ತಿಳಿವ ಸಾಕ್ಷೀಭೂತನಾಗಿ ರತ್ನ ಪಂಜರದಲ್ಲಿ ಇರುವ ಲೀಲಾಶುಕ ಮುಖದಿಂದ ಅಲ್ಲಿ ಚಿನ್ನದ ಚಪ್ಪರದೊಳ್ ರತ್ನ ಪೀಠದಲ್ಲಿ ಬಾಲಸೂರ್ಯನಂತೆ ಕುಳಿತು ಇರುವ ಸುಗಂಧ ರಾಯನಿಗೆ ತಾನು ನಿಸ್ಸಂಶಯವಾಗಿ ಸ್ವಾಧೀನವಾಗಿ ಇರುತಿರುವಂತೆ, ತನ್ನ ತಾನು ಮಾಡಿದ ಪ್ರತಿಜ್ಞೆಯು ಕೊನೆಸಾಗುವದಂ, ಆಗತಕ್ಕ ಪ್ರಕೃತ ಕಾರ್ಯದ ಅಭಿಪ್ರಾಯವಂ ತಿಳಿಯಿಸುವೆನೆಂದು ಶುಕವಂ ಕುರಿತು ತನ್ನ ಮನೋಗತವನೆಲ್ಲವಂ ರಾಜೇಂದ್ರಂಗೆ ಹೇಳುವತೆರದಿಂದ ಹೇಳಲು, ಆ ರಾಜಕುಮಾರಿಯಿಂದ ಹೇಳಲ್ಪಟ್ಟ ಮಾತಂ ಕೇಳಿದ ಲೀಲಾಶುಕವು ಕೂಡಲಾಗಿ ತಿರುಗಿ ಸುಗಂಧರಾಯನಂ ಕುರಿತು ತಿಳಿಯಪಡಿಸಿದ ಪರಿ ಏನೆಂದರೆ,—ಎಲೈ ರಾಜಕುಮಾರನೆ ! ವಿಜಯವರ್ಮರಾಯನ ಕುಮಾರತಿಯಾದ ಸೌಗಂಧಿಕಾದೇವಿಯು ನಿನಗೆ ಸ್ವಾಧೀನ ವಾಗುವದಕ್ಕೆ ಪಣಂಗಳಂ ನೆರವೇರಿಸಿದ್ದು ಸಾಧಕವೆ ಸರಿ? ಆದರೂ ಆ ಸೌಗಂಧಿಕಾ ದೇವಿಯಿಂದ ಪ್ರತಿಜ್ಞೆಯಾಗಿ ಮಾಡಿರುವ ಎಂಟನೆ ಪಣವಂ ಲೀಲಾಮಾತ್ರದಿಂದ ನೆರವೇರಿಸಿ ರಾಜಕುಮಾರತಿಯ ಪಾಣಿಗ್ರಹಣವಂ ಮಾಡಿಕೊಂಡು ಸುಖವಾಗಿ ಇರುವಂತೆ ಕರುಣೆಯಿಂದ ಪ್ರಕೃತ ಕಾರ್ಯದೊಳು ಉದ್ಯೋಗಿಸುವಂತೆ ಮಾಡಬೇಕು, ಶೂರಾಗ್ರೇಸರನಾದ ನಿನಗೆ ಅಸಾಧ್ಯಕಾರ್ಯ ಒಂದೂ ಇಲ್ಲ, ಈಗ ನಡ್ರಿ ಮಾಡತಕ್ಕ ಎಂಟನೇ ಪಣದ ವಿವರವೇನೆಂದರೆ ವಿಜ್ಞಾಪಿಸುತ್ತಿದ್ದೇನೆ

ಸಕಲಸಂಪತ್ತಿನಿಂದ ಸಮೃದ್ಧವಾಗಿ ಅನೇಕ ರತ್ನ ಸ್ತಂಭಗಳಿಂದಲು ಚಿನ್ನದ ಕಲಶಂಗಳಿಂದಲು, ಧಾತುಮಯವಾದ ಉಪಕರಣಂಗಳಿಂದಲು ಯುಕ್ತವಾಗಿ ಅತಿಪ್ರಕಾಶವಾಗಿ ನೆನಸಿದ ಮಾತ್ರದಲ್ಲೀ ಮನೋವೇಗದಿಂದ ಆಯಾಯ ಸ್ಥಾನಗಳಿಗೆ ಬಂದು ಸೇರುವದಾಗಿಯು, ಮತ್ತೂ ಆವರ್ತ ಮೊದಲಾದ ಸಪ್ತ ಮೇಘಂಗಳಿಂದ ವಹಿಸಲ್ಪಟ್ಟು ಇರುವ ವ್ಯೋಮಯಾನವನ್ನು ತಂದು ರಾಜಪುತ್ರಿಗೆ ಕರುಣಿಸಿಕೊಟ್ಟು ಪ್ರತಿಜ್ಞಾಪೂರ್ತಿಯ ಮಾಡಿಸಿ, ಆ ಸೌಗಂಧಿಕಾ ದೇವಿಯನ್ನು ಪರಿಗ್ರಹಿಸುವದು ಮಹಾಶೂರಾಗ್ರೇಸರನಾದ ನಿನಗೆ ಒಬ್ಬನಿಗೆ ಸಲ್ಲುವದೆಂದು ಮಹಾಚತುರೆಯಾದ ರಾಜಕುಮಾರತಿಯ ಸರಸವಚನಾನುಸಾರವಾಗಿ ನುಡಿದ ಲೀಲಾಶುಕದ ಮೃದುಮಾತುಗಳಂ ಶರ್ಕರೆಯ ಪಾತ್ರದೊಳ್ ಶ್ರವಿದ ಮಕರಂದದಂತೆ ಕಿವಿಗಿಂಪಾಗಿ ಬಹುಸೊಂಪಿನಂ

ಕೇಳಿ ಅಘಟಿತಘಟನಾ ಸಾಮರ್ಥ್ಯವುಳ್ಳ ಸುಗಂಧರಾಯನು ಹಾಗೆ ಅಧೀತೆಂದು ನುಡಿದು ಆ ರಾಜಕುಮಾರಿಯಿಂದ ಸಮರ್ಪಿಸಲ್ಪಟ್ಟು ಘುಮಿಘುಮಿಪ ಮಡಿಪುವೀಳ್ಯವಂ ಗ್ರಹಿಸಿ, ಲಾಂಛನರೇಖೆಯಂತೆ ತೋರುವಯುಳವಿರಾಶಿಗಳಿಂದ ಪ್ರಕಾಶಿಸುವ ಮುಖದೊಳ್ ಬೆಳದಿಂಗಳಂ ಜರೆವ ನಗೆಯಿಂದೊಡಗೂಡಿ ನಲಿನಲಿದು ನಡೆಯುವ ಮದ್ದಾನೆಯುಮರಿಯಂತೆ ರಾಜಪುತ್ರಿಯು ಸಮೀಪದಿಂದ ಹೊರಟು ತನ್ನ ಬಿಡಾರವಂ ಪೊಕ್ಕು ತನ್ನ ಮಂತ್ರಿಜನಾದ ಸುಮತಿಯುಂ ಕರೆದು ಕೈಯಂ ಪಿಡಿದು ಆ ರಾಜಪುತ್ರಿಯು ಲೀಲಾಶುಕಮುಖದಿಂದ ತಿಳುಹಿದ ಪಣವೃತ್ತಾಂತವೆಲ್ಲವಂ ನಿರೂಪಿಸುತ ಮಂತ್ರಿ ಸಹಿತನಾಗಿ ಆಲೋಚನೆಯಂ ಮಾಡಿ ತನ್ನ ಭೃತ್ಯನಾದ ಛಾಯಾಗುಪ್ತನಂ ಕರೆದು, ಎಲೈ ಛಾಯಾಗುಪ್ತನೇ! ನೀನು ಮನೋವೇಗ ಉಳ್ಳವನು, ಬಹು ಸಮರ್ಥನು, ಅದ್ದರಿಂದ ಈಗ ಸಕಲ ಸಂಪತ್ಸಮೃದ್ಧಿಯುಳ್ಳ ರತ್ನಸ್ತಂಭಗಳಿಂದ ಕೂಡಿ ಸುವರ್ಣಕಲಶಯುಕ್ತ ವಾಗಿ ನವಮೇಘಗಳಿಂದ ವಹಿಸಲ್ಪಟ್ಟು ಮನಸ್ಸಿನಲ್ಲಿ ನೆನೆದ ಬಳಿಗೆ ತೆಗೆದುಕೊಂಡು ಹೋಗಿ ಬಿಡುವ ಸಾಮರ್ಥ್ಯವುಳ್ಳ ಒಂದು ದಿವ್ಯ ವಿಮಾನವನ್ನು ಯಾವ ಲೋಕದೊಳ್, ಯಾವದ್ವೀಪದಲ್ಲಿ, ಯಾವಖಂಡದಲ್ಲಿ, ಯಾವದೇಶದಲ್ಲಿ, ಯಾವಪರ್ವತದಲ್ಲಿ, ಯಾರಬಳಿಯಲ್ಲಿದೆ ಎಂಬುದಾಗಿ ತಿಳಿದು, ಅದನ್ನಂ ಸಾಧಿಸಿ ತರುವ ಪರಿಯನ್ನಾಲೋಚನೆ ಗೈದು ವಿಚಾರಿಸಿ ತಿಳಿದುಕೊಂಡು, ಅತಿಜಾಗ್ರತೆಯಿಂದ ಬರುವ ದವಶ್ಯಕಾರ್ಯವೆಂದು ಹೇಳಿ ಕಳುಹಿಸಿ, ತಾನು ಮನಸ್ಸಿನೊಳ್ ಛಾಯಾಗುಪ್ತನುಬರುವದನ್ನೇ ನಿರೀಕ್ಷಿಸುತ್ತಾ ಪ್ರಿಯಮಿತ್ರರೊಡನೆ ಚಿತ್ರಶಾಲೆಯೊಳ್ ಚದುರಂಗ, ಪಗಡೆ ಚಿತ್ರಫಲಕೆ ಮೊದಲಾದ ವಿಲಾಸಗಳಿಂದ ವಿನೋದವಾಗಿ ಇರುತ್ತಿರಲು;

ಆ ಛಾಯಾಗುಪ್ತನು ವಾಯುವೇಗದಿಂದ ಹೊರಟು ಐವತ್ತಾರು ದೇಶಂಗಳಿಂದಲು, ನವಖಂಡಂಗಳಿಂದಲು, ದೇಶಾರಣ್ಯಂಗಳಿಂದಲು, ಐನೂರು ನದಿಗಳಿಂದಲು, ಸಪ್ತಮಹಾಸಗರಗಳಿಂದಲು, ಕುಲಾಚಲಗಳಿಂದಲು, ಲಕ್ಷಯೋಜನ ಪರಿಮಿತವಾಗಿ ಸುತ್ತಲು ಲಕ್ಷಯೋಜನ ವಿಸ್ತಾರವಾದ ಲವಣ ಸಮುದ್ರದಿಂದ ಸುತ್ತು ವರೆಯಲ್ಪಟ್ಟಿರುವ ಲಕ್ಷಯೋಜನ ವಿಸ್ತೀರ್ಣ ವಾದ ಜಂಬೂ ದ್ವೀಪವೆಲ್ಲವುಂ ಸಮು

ಗ್ರವಾಗಿ ನೋಡಿ ಅದರಬಾಹ್ಯದೋಳ್ ಇಕ್ಷುಸಮುದ್ರಸಹಿತ ಯೆರಡು ಲಕ್ಷಯೋಜನ ಪರಿಮಿತವಾಗಿ ಅಲ್ಲಿರುವ ಪಟ್ಟಣಗಳಂ, ನದೀ ನದಂಗಳಂ, ದೇವರ್ಷಿಗಳ ಆಶ್ರಮಗಳಂ, ದೇಶವಿಶೇಷಗಳಂ ಯುಕ್ತವಾದ ಪ್ಲಕ್ಷದ್ವೀಪಮಂ ಚನ್ನಾಗಿ ನೋಡಿ, ಅದರ ಹೊರಗಿನ ಭಾಗದಲ್ಲಿ ಸುರಾಸಮುದ್ರದಿಂ ಪರಿವೇಷ್ಟಿತವಾದ ಆಯಾಯ ಪ್ರದೇಶದೊಳಿರುವ ಅತಿಶಯವಾದ ರತ್ನದ ಗಣಿ, ಕಲ್ಪವೃಕ್ಷ, ಮೂಲಿಕಾವಿಶೇಷ, ಮನುಷ್ಯಾದಿ ವಿಶೇಷ, ವಸ್ತುವಿಶೇಷಗಳಿಂದ ಸಹಿತ ನಾಲ್ಕು ಲಕ್ಷಯೋಜನವಾದ ಕುಶದ್ವೀಪದೊಳ್ನೇತ್ರ ವಿನ್ಯಾಸವಂ ನಿಬಿಡವಾಗಿ ಮಾಡಿ, ಅದರ ಹೊರ ಭಾಗದೊಳ್ ಘೃತ ಸಮುದ್ರದೊಡಗೂಡಿ ಅಲ್ಲಿಯ ವಿದ್ಯಾನಗರಂಗಳಿಂದ ಅಪ್ಸರ ಸ್ತ್ರೀಸಮೂಹದಿಂದ, ಆನೆ, ಕುದುರೆ, ಮೊಖಗಳುಳ್ಳ ಕಿನ್ನರಾದಿಗಳಿಂದಲು ಯುಕ್ತವಾಗಿ ಇರುವ ಎಂಟು ಲಕ್ಷಯೋಜನ ಉಳ್ಳ ಕ್ರೌಂಚದ್ವೀಪವಂ ಪರಿಶೋಧಿಸಿ, ಅದರ ಬತ್ತಿನೋಳ್ ದಧಿಸಮುದ್ರ ವಿಶಿಷ್ಟವಾಗಿ ಆ ಪ್ರದೇಶದೊಳಿರುವ ಕಸ್ತೂರಿಮೃಗ ಮೊದಲಾದ ಅನೇಕ ಮೃಗಂಗಳಿಂ, ಮಹಾಋಷಿಗಳಿಂ, ಶೋಭಿತವಾಗಿ ಹದಿನಾರು ಲಕ್ಷಯೋಜನ ವಿಸ್ತಾರ ಉಳ್ಳ ಶಾಕದ್ವೀಪದಲ್ಲಿ ಸಂಚಾರವಂ ಮಾಡಿ, ತದ್ಬಾಹ್ಯದೋಳ್ ಕ್ಷೀರಸಮುದ್ರಮಂ ಕಂಡು, ಅಲ್ಲಿ ಕ್ಷೀರಾಬ್ಧಿನಾಥನೆಂದು ಹೆಸರುಳ್ಳ ಮಹಾ ವಿಷ್ಣುವು ವ್ಯೂಹ ರೂಪದಿಂದ ಕ್ಷೀರಸಮುದ್ರದೋಳ್ ನಾಗಪರ್ಯಂಕದಲ್ಲಿ ಮಹಾಲಕ್ಷ್ಮೀ ಸಮೇತನಾಗಿ ನಿಖಿಲ ಜಗದ್ರಕ್ಷಣಾರ್ಥವಾದ ಯೋಗನಿದ್ರೆಯೊಳಿರುತಿರಲು, ಆಸ್ವಾಮಿಯಂ ಕಂಡು ಪ್ರಣಾಮ ಸ್ತುತಿಗಳಿಂದ ಮನಸ್ಸಿನಲ್ಲಿ ಆರಾಧಿಸಿ ಪ್ರಾರ್ಥನೆಯಂಮಾಡಿ ಭಗವದನುಗ್ರಹವಂ ಸಂಪಾದಿಸಿ,ಈಕ್ಷೀರಸಮುದ್ರದಿಂದಾಕ್ರಾಂತವಾಗಿ ಅಲ್ಲಿರುವ ನಾನಾದೇಶ, ನಾನಾನದಿ, ನಾನಾಪರ್ವತ, ನಾನಾವಿಧದಿವ್ಯ ವಸ್ತುವಿಶೇಷಗಳಿಂದ ಕೂಡಿ ಮೂವತ್ತೆರಡು ಲಕ್ಷ ಪರಿಮಿತ ಯೋಜನ ಉಳ್ಳ ಶಾಲ್ಮಲದ್ವೀಪದ ಯಾವತ್ತು ಪ್ರದೇಶವನ್ನು ನೋಡುತ ತೆರಳಿ, ಆದರಿಂದ ಆಚೆಗೆ ಶುದ್ಧೋದಕ ಸಮುದ್ರದಿಂ ಸುತ್ತವರಿದು ಅಲ್ಲಿರುವ ಗರುಡ, ಗಂಧರ್ವ ಕಿನ್ನರ, ಕಿಂಪುರುಷರು, ನಗರವಿಶೇಷಗಳಿಂ, ವಿಜಾತೀಯವಾದ ವಸ್ತುವಾಹನ ಮೃಗ, ಪಕ್ಷಿ, ರತ್ನಗಳಿಂ, ಅಲಂಕೃತವಾಗಿ ಅರವತ್ತು ನಾಲ್ಕು

ಲಕ್ಷಯೋಜನ ವಿಸ್ತೀರ್ಣವಾದ ಪುಷ್ಕರ ದ್ವೀಪವಂ ಕ್ರಮದಿಂದ ಪ್ರವೇಶಿಸಿ ಭಗವದನುಗ್ರಹ ಸಾಮರ್ಥ್ಯದಿಂದ ದೃಷ್ಟಿಗೋಚರವಾದ ಆದ್ವೀಪಕ್ಕೆ ನೇತ್ರಸ್ಥಾನವಾದ ಶ್ವೇತದ್ವೀಪವೆಂಬ ಕಮಲಕ್ಕೆ ಕರ್ಣಿಕಾಯಮಾನವಾಗಿ ಅದರನಡುವೆ ಸಹಸ್ರ ರತ್ನ ಶಿಖರೋಪೇತವಾಗಿ ಕೋಟಿಸೂರ್ಯಪ್ರಕಾಶವಾದ ಮಾನಸೋತ್ತರ ಪರ್ವತವಂ ಮಹಾಪೀಠರೆಂಬದಾಗಿಯು ಧಾತಕೀ, ಚಂಡಕೀ, ಎಂಬದಾಗಿಯು, ಹೆಸರುಳ್ಳ ಎರಡು ವರ್ಷಗಳಿಂದಲುಂ, ಹತ್ತುಸಾವಿರ ವರ್ಷಜೀವಿಸುತ ರೋಗಾದ್ಯುಪದ್ರವಂಗಳು ಈಷ್ಯಾದಿದುರ್ಗುಣಂಗಳೂ ಇಲ್ಲದಿರುವ ಜನರಂ ಕಂಡು, ಆಪರ್ವತದಕಿಬ್ಬಿಯೋಳ್ ಸರ್ವಸಿದ್ಧ ಕ್ಷೇತ್ರವೆಂಬ ಸ್ಥಾನದೋಳ್ ಜ್ಞಾನಾಶ್ವತ್ಥಚ್ಛಾಯು ಸಹಿತವಾದ ಅಮೃತ ಸರೋವರ ತೀರದಲ್ಲಿ ದೇವೇಂದ್ರನೊಡನೆ ಯುದ್ಧವಂ ಮಾಡಿ, ಇಂದ್ರಪದವಿಯ ಸಿದ್ಧಿಗೋಸ್ಕರ ತಪಸ್ಸಂ ಮಾಡುತ್ತಿರುವ ಗಂಧರ್ವನ ದೆಶೆಯಿಂದ ರಾಕ್ಷಸ ಸ್ತ್ರೀಯಲ್ಲಿ ಜನಿಸಿ ಆದ್ವೀಪವಂ ಬಾಧಿಸುತ ಲೋಕಕಂಟಕನಾಗಿ ಬಹುಶೂರನಾಗಿ ಸಕಲ ಶಸ್ತ್ರಾಸ್ತ್ರ ತಿಳಿದವನೆಂದು ಬಹುಗರ್ವಿತನಾಗಿ ಇರುವ ಕರಾಳನೆಂಬ ರಾಕ್ಷಸನಂ ಕಂಡು, ಅವನ ನಿವಾಸದೋಳ್ ಮೂರ್ತಿಭವಿಸಿ ಬಂದಿರುವ ಅಸ್ತ್ರಶಸ್ತ್ರಗಳೆಂಬವರೋಳ್ ಕಳೆದೋರುವ ಅವನಭೃತ್ಯಾಮಾತ್ಯರಂ ತಿಳಿದು, ಆನನಿವಾಸದೋಳ್ ಅತಿವಿಸ್ತಾರವಾಗಿ ನವರೋಘಯುತವಾಗಿ ಮನೋಗಾಮಿಯಾದ ವಿಶ್ವಕರ್ಮನ ಹಸ್ತ ಚಮತ್ಕಾರಕ್ಕೆ ಮುಖ್ಯವಿಷಯವಾದ ನಾಲ್ಕುದಿಕ್ಕಿನೋಳ್ ವಜ್ರದ ಸರಪಣಿಗಳಿಂದ ಪರ್ವತಶಿಖರಕ್ಕೆ ಶೇರಿಸಿಚನ್ನಾಗಿ ಕಟ್ಟಿ, ಬಬ್ಬರಿಗು ಸಾಧ್ಯವಲ್ಲದೆ ಇರುವ ದಿವ್ಯವಿಮಾನವಂ ಕಂಡು ಇದೆ ರಾಜಕುಮಾರ ಹೇಳಿದ್ದಾಗಿ ಇರುವದೆಂದು ಚಿಹ್ನೆಗಳಿಂದ ತನ್ನೊಳಗೆ ತಾನೆ ನಿಶ್ಚೈಸಿ, ಆ ಛಾಯಾಪುರುಷನು ಸಂತೋಷ ಯೋಚನೆಗಳಿಂದ ಯುಕ್ತನಾಗಿ ಈ ಪರಿಯೊಳಿರುವವರಂ ಜೈಸಿ ಈವಿಮಾನವಂ ತರುವದು ಯಾರಿಂದಶಕ್ಯವೆಂದು ಯೋಚಿಸಿ, ಇವಂ ಭೂತ ಭವಿಷ್ಯದ್ವರ್ತಮಾನಂಗಳಂ ತಿಳಿದ ಕಾಲಜ್ಞಾನಿರಿಂದ ತಿಳಿಯಬೇಕೆಂದು ನಿಶ್ಚೈಸಿ, ಅಲ್ಲಲ್ಲಿ ಇರುವ ತಪೋನಿಷ್ಠರ ಮುಖವಚನದಿಂದ ದೈವಜ್ಞನಾದ ತಪೋನಿಷ್ಠನಾದ ಬಹುಶ್ರುತನಾದ ಸೂರ್ಯ ಶರ್ಮನೆಂಬ ಜ್ಯೋತಿಷ್ಯಮಹಾ ಪುರುಷನು ನೆಲಗೊಂ

ಡು ಆತನಿಗೆ ನಮಸ್ಕಾರವಂ ಮಾಡಿಆತನಂ ಕುರಿತು ಎಲೈತ್ರಿಕಾಲಜ್ಞಶಿರೋಮಣಿಯೆ! ನಾನು ಯೋಚಿಸಿರುವ ಕಾರ್ಯದ ಕೊನೆ ಸಾಗುವಪರಿಯಂ ಪೇಳಬೇಕೆಂದುನುಡಿದ ಛಾಯಾಗುಪ್ತನ ಮಾತಂಕೇಳಿ ತಪಸ್ವಿಯಾದ ಸೂರ್ಯಶರ್ಮನು ಹಾಗೆ ಆಕಾಶವಂನೋಡಿ ಬೆರಳುಗಳನ್ನೆಣಿಸುತ ಪುಸ್ತಕಂಗಳಂ ಪೂಜಿಸಿ ಕವಡೆ ಫಾಳಂಗಳಂ ಬಿಡಿಸಿ ಸೂತ್ರವಂ ಹಾಕಿ ಪ್ರೋದಿನೋಡಿ ನಿಮಿತ್ತವಂ ನಿಶ್ಚಯಿಸಿ ಛಾಯಾಗುಪ್ತನಮುಖಹಸ್ತಾದಿಗಳಿಂದ ದೂತಲಕ್ಷಣವಂ ತಿಳಿದು ಆಗ ಛಾಯಾಗುಪ್ತನಂ ಕುರಿತು ಎಲೈ ಪೃಥ್ವೀಕನೆ! ನೀನು ಕೇಳಿದಪ್ರಶ್ನೆಗೆ ಸದುತ್ತರವಂ ಪೇಳುವೆನು ಕೇಳು, ಅದೇನಂದರೆ-ದೇವಯೋಗ್ಯವಾದವಸ್ತುವು ಮಾನುಷೋಪಭೋಗ ಯೋಗ್ಯವಾಗಬೇಕೆಂದು ಸಂಶಯದಿಂದ ಕೇಳುತಲಿದ್ದೀಯೆ, ಆ ಮನುಷ್ಯನೆ ದೇವಾಂಶ ಪುರುಷನಾದಕಾರಣ ಆತನಿಗೆ ಸ್ವಾಧೀನವಾಗುವದರಲ್ಲಿ ಸಂಶಯಬೇಡ, ಆದರೂ ಕಾರ್ಯಗಳಲ್ಲಿ ಒಂದು ಪಾಲು, ದೈವಕೃತ ಆರುಪಾಲು, ಮನುಷ್ಯಪ್ರಯತ್ನ ಸಾಧ್ಯವೆಂದು ಶಾಸ್ತ್ರಮರ್ಯಾದೆ ಇರುವದ್ದರಿಂದ ಸ್ವಲ್ಪಪ್ರಯತ್ನಮುಖದಿಂದ ಸಾಧಿಸಬೇಕು, ಈಗಿನಪ್ರಕೃತಕಾರ್ಯಕ್ಕೆ ಮುಖ್ಯಸಾಧನವಂ ಪೇಳುವೆನು, ರಹಸ್ಯವಿಂದ ಕೇಳು, ಇದಲ್ಲದೆ ಮತ್ತೊಂದರಿಂದ ಸಾಧ್ಯವಲ್ಲವೆಂದು ಚೆನ್ನಾಗಿ ತಿಳಿಯತಕ್ಕದ್ದು, ಆ ರಹಸ್ಯವೇನಂದರೆ-ನೀನು ಪ್ರಶ್ನೆಯಂಮಾಡಿದ ಸಮಯವು ವಿಷ್ಣು ಕಲಾಂಶವಾದ್ದರಿಂದ ಆ ವಿಷ್ಣೋಪಾಸನೆಯಿಂದಲೆ ಕಾರ್ಯಕೂಡಿಬರತಕ್ಕದ್ದು, ಈಜಗತ್ತೆಲ್ಲವು ವಿಷ್ಣುವಿನ ಅಧೀನವಾಗಿ ಅದರೊಳಗು ಶ್ವೇತದ್ವೀಪವು ಆ ಭಗವಂತನಿಗೆ ಪ್ರೇಮಾಸ್ಪದವಾಗಿ ಇರುವದ್ದರಿಂದಲು. ಅಲ್ಲಿಇರುವವರು ಕೇವಲ ವಿಷ್ಣೂಪಾಸಕರಾಗಿ ಇಂದ್ರಪದವಿಗೆ ಶೇರಿದವಸ್ತುಗಳು ವಿಷ್ಣುಕಲೆಯುಳ್ಳದ್ದಾದ್ದರಿಂದಲು, ಆ ವಿಷ್ಣುವಿನ ನಿತ್ಯವಿಭೂತಿ,ಅವರೊಳ್ ಪರವ್ಯೂಹವಿಭವಾಂತರ್ಯಾಮ್ಯರ್ಚಾವತಾರಂಗಳಂ ಆದರಭೇದಂಗಳಂ,ಪಂಚಸಂಸ್ಕಾರವೆಂಬ ತಪ್ತಮುದ್ರಾಂಕನ ಊರ್ಧ್ವಪುಂಡ್ರ, ಭಗವದ್ದಾಸ್ಯ ನಾಮ ಮಂತ್ರರತ್ನ ಸ್ವೀಕರಣ, ಭಗವದಾರಾಧನಪ್ರಭಾವಂಗಳಂ, ಅರ್ಚಿರಾದಿಗತಿ ಏಕಾದಶೀ ಮಾಹಾತ್ಮ್ಯ, ತುಳಸೀಮಾಹಾತ್ಮ್ಯ, ತೀರ್ಥಯಾತ್ರಾ ವಿಶೇಷಂಗಳಂ,ಇನ್ನು ಅನಂತಕಲ್ಯಾಣ ಗುಣಪ್ರತಿಪಾದಕವಾದ ಸಕಲವೇದಾಂತಾದ್ಯನುಸಂಧಾನ ಮುಂತಾದ ಇಂತೀ

ಭಗವನ್ನಾಮಸಹಸ್ರ ಪ್ರಭಾವಂಗಳಂ ಹಿರಿಯರಮುಖದಿಂದ ಭಕ್ತಿಪುರಸ್ಸರವಾಗಿ ಕೇಳಿದವರಿಗೆ ಭಗವಂತನು ಪ್ರಸನ್ನನಾಗುವನು, ಈಪೇರಿಗೆ ಭಗವತ್ಪ್ರಸಾದ ಉಳ್ಳವರಿಗೆ ಸರ್ವವು ಲಭ್ಯವಾಗುವದೆಂದು ಶಾಸ್ತ್ರವಿರುವದರಿಂದ ಇದಲ್ಲದೆ ಬೇರೆಉಪಾಯಾಂತರವಿಲ್ಲವೆಂದು ಹೇಳಿದ ಸೂರ್ಯಶರ್ಮನ ಮಾತಂ ಕೇಳಿ, ಛಾಯಾಗುಪ್ತನು ಇದೆ ಸರಿಯೆಂದು ತಿಳಿದು, ಮೇಘದಿಂದ ಬಿಡಲ್ಪಟ್ಟ ಸೂರ್ಯನಂತೆ ಅಜ್ಞಾನದಿಂದ ಬಿಡಲ್ಪಟ್ಟು ತತ್ವಜ್ಞಾನ ಉಳ್ಳವನಾಗಿ ಸಂತೋಷದಿಂದ ಯೋಗಿಯಾದ ಸೂರ್ಯಶರ್ಮನಿಗೆ ಪ್ರಣಾಮವಂಗೈದು, ವಾಯುವೇಗದಿಂ ಅಲ್ಲಿಂದಾ ಹೊರಟುಸುಗಂಧರಾಯನ ಬಳಿಗೆ ಕೃತಕೃತ್ಯನಾಗಿ ಸುಖದಿಂದ ಬಂದು ಕೈಮುಗಿದು ನಿಂತು ತಾನು ಹೋಗಿದ್ದ ಕಾರ್ಯ ವೃತ್ತಾಂತವೆಲ್ಲವಂ ಸವಿಸ್ತಾರವಾಗಿ ಪೇಳಿ, ದೈವಜ್ಞನಿಂದ ಪೇಳಲ್ಪಟ್ಟ ವಿವಾಹಸಾಧನೋಪಾಯ ರಹಸ್ಯ ವಿಶೇಷವಂ ಚನ್ನಾಗಿ ತಿಳಿಸಿದ ತರುವಾಯ ಸುಗಂಧರಾಯನು ತನ್ನ ಮಂತ್ರಿಯಾದ ಸುಮತಿಯೊಡಗೂಡಿ ವಿಮಾನವಂ ತಂದಪ್ಪಕ್ಕಿಂತಲು ಹೆಚ್ಚಾಗಿ ತಿಳಿದು, ಛಾಯಾಗುಪ್ತನಿಗೆ ಕ್ಷೇಮಾಲಿಂಗನವಂ ಕೊಟ್ಟು ತನ್ನ ಸೇನೆಗಳೆಲ್ಲವಂ ಬಿಡಾರದ ಸಮೀಪದಲ್ಲಿ ಇಳಿದ ಬಳಿಯೊಳ್ ಇರಿಸಿ, ಸೇನಾರಕ್ಷಣಾರ್ಥವಾಗಿ ಸೇನಾಪತಿಗೆ ನೇಮಿಸಿ, ಮಂತ್ರಿಮಾತ್ರ ಸಹಿತನಾಗಿ ತಾನು ಸನ್ನದ್ಧನಾಗಿ ಸಕಲಾಸ್ತ್ರಶಸ್ತ್ರಂಗಳಂ, ಬೇಕಾದ ವಸ್ತುಗಳಂ ತೆಗದುಕೊಂಡು ಖೇಚರವಿದ್ಯವೆಂಬ ಮಹಾ ವಿದ್ಯೋಪಾಸನವಂ ಮಾಡಿ, ಛಾಯಾಗುಪ್ತನೊಡಗೂಡಿ ಗಗನವನ್ನಡರ್ದು ಜಂಬೂದ್ವೀಪವೊದಲಾದ ಆರು ದ್ವೀಪಂಗಳಂ, ಲವಣ ಸಮುದ್ರ ಮೊದಲಾದ ಷಟ್ಸಮುದ್ರಗಳಂ ಸವಿಸ್ತಾರವಾಗಿ ನೋಡುತ ಭಗವತ್ಸೃಷ್ಟಿ ಕಾರ್ಯಕ್ಕೆ ಅತಿ ಚೋದ್ಯಂಗೊಳುತ ಅಲ್ಲಿ ಇರುವ ಕ್ಷೀರಾಬ್ಧಿಯೊಳ್ ಶೇಷತಲ್ಪದಲ್ಲಿ ಪವಳಿಸಿಕೊಂಡು ತನ್ನ ದಿವ್ಯದೇಹ ಕಾಂತಿಯಿಂದ ಜಗತ್ತೆಲ್ಲವಂ ಮಾಡುತ, ನೀಲಮೇಘ ಶ್ಯಾಮನಾಗಿ ವೇದಸ್ವರೂಪನಾಗಿ ಅಡಿಗಡಿಗೆ ಬ್ರಹ್ಮಾದಿಗಳಿಂದ ವಿಜ್ಞಾಪಿಸುವ ಜಗದ್ವ್ಯಾಪಾರಂಗಳಂ ಲಾಲಿಸುತ, ಅವರವರಿಗೆ ಅನುರೂಪವಾದ ಭವಿಷ್ಯತ್ಕಾರ್ಯಂಗಳಂ ವೇದರೂಪವಾದ ತನ್ನ ಮುಖವಚನದಿಂದ ಅಭಯಂಗಳಾಗಿ ಕರುಣಿಸುತ, ಕ್ಷೀರಸಮುದ್ರದ ತೆರೆಗಳಿಂದುಂಟಾದ ಕ್ಷೀರಬಿಂದುಗ

ಳನ್ನು ಮುಕ್ತಾಹಾರವಂತೆ ವಹಿಸುತ, ಅಲ್ಲಿರುವ ಮಹಾಋಷಿಗಳಿಂದ ಸ್ತೋತ್ರಂಗೊಳುತ ಬಹುತಪಸ್ಸಿನಿಂದ ಲಬ್ಧನಾಗಿ ದೇವದೇವೋತ್ತಮನಾಗಿ, ದೇವತಾ ಸಾರ್ವಭೌಮನಾಗಿ, ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನಾಗಿ, ಭಕ್ತಜನ ರಕ್ಷಣದಲ್ಲಿ ಬದ್ಧದೀಕ್ಷನಾಗಿ, ಸರ್ವಶೇಷಿಯಾಗಿ ಇರುವ ಸ್ವಾಮಿಯಂ ಕಂಡು ಧ್ಯಾನ, ಸ್ತೋತ್ರ, ಪ್ರಣಾಮಂಗಳಿಂದ ಪೂಜಿಸಿ, ಇನ್ನು ನನ್ನ ಕಾರ್ಯವೆಲ್ಲವು ಭಗವದನುಗ್ರಹದಿಂದ ಕೈಗೂಡುವದು ಎಂದು ಚಿತ್ತಮಂ ದೃಢೀಕರಿಸಿ, ಅಲ್ಲಿಂದ ಹೊರಟು ಶುದ್ಧೋದಕ-ಸಮುದ್ರವೇಷ್ಟಿತವಾದ ಪುಷ್ಕರ ದ್ವೀಪವೆಂಬ ಏಳನೇ ದ್ವೀಪವಂ ಕಂಡು ಅದರ ಮಧ್ಯದೊಳಿರುವ ಅತಿಪ್ರಕಾಶಮಾನವಾದ ಮಾನಸೋತ್ತರ ಪರ್ವತವಂ, ಅದರ ಪಾರ್ಶ್ವದೋಳ್ ಬಿಗಿದು ಕಟ್ಟಿರುವ ವಿಮಾನವಂ, ಅದರ ಸಮೀಪದೊಳಿರುವ ವಿಜಾತೀಯರಾದ ರಾಕ್ಷಸರಂ, ಅವರ ಮಧ್ಯದೋಳ್ ಅತಿಭಯಂಕರನಾಗಿ ಜನಕಂಟಕನಾಗಿ ಇಂದ್ರನಂ ಜಯಿಸಿ ಇಂದ್ರಪದವಿಯಂ ಸಂಪಾದಿಸುವದಕ್ಕೋಸ್ಕರ ತಪಸ್ಸಂಮಾಡುತ್ತಲಿರುವ ಕರಾಳನೆಂಬ ರಾಕ್ಷಸೇಂದ್ರನಂ ಅವನ ಬಳಿಯಲ್ಲಿರುವ ಅತಿಕ್ರೂರವಾದ ಶಸ್ತ್ರಾಸ್ತ್ರಂಗಳಂ ಕಂಡು ದುರ್ಘಟವಾದ ದೇವವಿಮಾನವಂ ಸುಲಭದಿಂ ಅದಂ ಸಾಧಿಸಲೋಸುಗ ಸಾಧನೆಗೆ ಬೇಕಾಗಿರುವ ಸರ್ವರಿಂದಲುಂ ಅವಶ್ಯವಾಗಿ ಕೇಳತಕ್ಕದ್ದಾಗಿ ಇರುವ ವಿಷ್ಣು ಮಾಹಾತ್ಮ್ಯಂಗಳೆಲ್ಲವಂ ಕೇಳಲಾಸಕ್ತಿ ಉಳ್ಳವನಾಗಿ ಆಪರ್ವತದ ಪುರೋಭಾಗದೋಳ್ ವಿಷ್ಣು ಸಮಾನ ರೂಪರಾದ ಪರಮ ವಿಷ್ಣು ಭಕ್ತರಾದ ಸರ್ವಜ್ಞರಾವ ಸರ್ವದಾ ತುಳಸೀಮಾಲಿಗಳಂ ಧರಿಸಿ ಶಂಖ ಚಕ್ರ ಮೊದಲಾದ ಭಗವನ್ಮುದ್ರೆಗಳಿಂದಲು, ಊರ್ಧ್ವ ಪುಂಡ್ರಂಗಳಿಂದಲು ಮಹಾವಿಷ್ಣುವಿನ ಉಪಾಸನೆಯಿಂದಲು, ಕೂಡಿರುವ ಬ್ರಹ್ಮ ಋಷಿಗಳಂ ಕಂಡು ಅವರಿಗೆ ಸಾಷ್ಟಾಂಗ ಪ್ರಣಾಮವಂ ಮಾಡಿ ಅಭಿವಾದನಂ ಗೈದು ಭಯ ಭಕ್ತಿಗಳಿಂದ ಕೂಡಿ ಆ ಮಹಾಪುರುಷರಂ ಕುರಿತು ಸುಗಂಧರಾಯನು ವಿಜ್ಞಾಪನಂ ಗೈದ ಪರಿ ಏನೆಂದರೆ? ಎಲೈ ಪೂಜ್ಯರಾದ ಮಹಾ ವಿಷ್ಣುಭಕ್ತರಾದ ಬ್ರಹ್ಮಋಷಿಗಳಿರಾ ! ನಾನು ಭೂಲೋಕದಲ್ಲಿರುವ ಜಂಬೂದ್ವೀಪದಿಂದ ನಿಮ್ಮ ದರ್ಶನಾರ್ಥವಾಗಿ ಬಂದು ಇರ್ದೇನೆ, ನನಗೆ ತಮ್ಮ ಅ

ನುಗ್ರಹದಿಂದ ಚತುಃಷಷ್ಟಿಕಲೆಗಳಂ ತಿಳಿದು ಇರುವದು, ಅವರೊಳ್ ಮುಖ್ಯ ಶಾಸ್ತ್ರವೆಂಬ ವೇದಾಂತ ಪ್ರತಿಪಾದಿತ ನಾದ ಶ್ರೀಮಹಾವಿಷ್ಣುವಿನ ನಿತ್ಯ ವಿಭೂತಿ ರೂಪವಾಗಿ ಪರವೆನಿಸಿಕೊಂಡ ವೈಕುಂಠದ ವಿಸ್ತಾರವಂ, ಲೀಲಾ ವಿಭೂತಿರೂಪವಾದ ವ್ಯೂಹ, ಅಂತರ್ಯಾಮಿ, ಅರ್ಚಾವತಾರಕ್ಕೆ ಶೇರಿದ್ದು ಸ್ವಯಂವ್ಯಕ್ತ ವೆಂಬದಾಗಿಯು, ಆರ್ಷವೆಂಬದಾಗಿಯು, ಪೌರಾಣಿಕವೆಂಬದಾಗಿಯು, ಮಾನುಷವೆಂಬದಾಗಿಯು, ನಾಲ್ಕು ಬಗೆ ಉಂಟು: ಅವರ ವಿಭಾಗವಂ, ತುಳಸೀಮಹಾತ್ಮ್ಯ, ಏಕಾದಶಿಪ್ರಭಾವ, ವೈಷ್ಣವಲಕ್ಷಣ ರೂಪವಾದ ಪಂಚಸಂಸ್ಕಾರ ಮುಂತಾದ ಮಹಾತ್ಮ್ಯಗಳಂ ಚೆನ್ನಾಗಿ ತಮ್ಮ ಮುಖದಿಂದ ಕೇಳಲಿಚ್ಛೆಯುಳ್ಳ ನನಗೆ ಅಮೃತಕ್ಕೆ ಸಮಾನವಾಗಿ ಇರುವ ಶ್ರೀಹರಿಯ ದಿವ್ಯಮಹಾತ್ಮ್ಯಗಳನ್ನು ಕೃಪೆಯಿಂದ ಅನುಗ್ರಹಿಸಬೇಕೆಂದು ಭಯಭಕ್ತಿಯಿಂದ ಕೂಡಿ ವಿನಯೋಕ್ತಿಗಳಿಂದ ವಿಜ್ಞಾಪನಂಗೈವ ರಾಜಕುಮಾರನಂ ಕಂಡು ಅವನ ಯೋಗ್ಯತೆಯಂ ತಿಳಿದು, ಈತನ ಮನೋಗತವಾಗಿ ಇರುವ ಕಾರ್ಯವಿಶೇಷವಂ ನಿಶ್ಚಯಿಸಿದ ಆ ಬ್ರಹ್ಮಋಷಿಗಳು ಈತನು ದೇವಾಂಶ ಪುರುಷನಾದ್ದರಿಂದ ಈ ಪುಣ್ಯಾಕರವಾದ ಭಗವಂತನ ಮಾಹಾತ್ಮ್ಯಗಳನ್ನು ಹೇಳುವದು ಅವಶ್ಯಕಾರ್ಯವೆಂದು ಎಲ್ಲರೂ ಸಮ್ಮತಿಸಿ, ನಿಷ್ಕರ್ಷೆಯಂ ಮಾಡಿ, ಆ ಸಭೆಯೊಳ್ ಮಹಾಶ್ರೇಷ್ಠರಾದ ಸರ್ವಜ್ಞರಾದ ಪ್ರಪನ್ನರಲ್ಲಿ ಶಿರೋಮಣಿಯಾದ ವಿಷ್ಣುಚಿತ್ತನಾಮಾಂಕಿತರಾದ ಪರಮಾಚಾರ್ಯರನ್ನು ಕುರಿತು ತಾವು ಸಕಲ ತತ್ವಾರ್ಥಂಗಳಂ ತಿಳಿದವರಾದ ಕಾರಣ ತಾವೇ ಅನುಗ್ರಹಿಸಬೇಕೆಂದು ನುಡಿಯಲು, ಆಗ ವಿಷ್ಣುಚಿತ್ತರು ಸುಗಂಧರಾಯನಂ ಕುರಿತು ನಿರೂಪಿಸಿದರದೆಂತೆನೆ, ಎಲೈ ದೀರ್ಘಾಯುಷ್ಮಂತನಾದ ರಾಜಕುಮಾರನೆ ! ನಿನಗೆ ಲೇಸಾಗಲಿ, ನಿನ್ನ ಅಭಿಪ್ರಾಯ ಯಾವತ್ತೂ ತಿಳಿಯ ಬಂತು, ನೀನು ಕೃತಕೃತ್ಯನಾಗುವದರಲ್ಲಿ ಸಂಶಯವಿಲ್ಲ, ನೀನು ಪ್ರಶ್ನೆಯಂ ಮಾಡಿದ ಅರ್ಥಂಗಳು ಬಹುರಹಸ್ಯಂಗಳಾಗಿ ಇರುವವು, ಸಾಧಾರಣರಿಗೆ ಹೇಳತಕ್ಕದ್ದಲ್ಲಾ, ಹೇಳುವರಿಗೆ ಅನಾದಿ ಸಂಪ್ರದಾಯಾರ್ಥಂಗಳು ತಿಳಿದು ಇರಬೇಕು, ಕೇಳುವರಿಗೆ ಆಸ್ತಿಕ್ಯವೂ ಪರಮ ಭಕ್ತಿಯು ಇರಬೇಕು; ಆದರೂ ಹಿರಿಯರ ಮುಖದಿಂದ ಕೇಳಿ ತಿಳಿದಷ್ಟನ್ನು ಹೇಳುವೆನು, ಆಗಭಗವಂತನ ಗುಣಸಾ

ಗವದೊಳ್ ಬಂದ, ಲೋಕನಾತ್ರಯನನ್ನು ವರ್ಣಿಸುವುದಕ್ಕೆ ಬ್ರಹ್ಮಾದಿಗಳಲೂ, ವೇದಗಳಿಂದಲೂ ಶಕ್ಯವಲ್ಲ.ಅಂಥಾ ಕಲ್ಯಾಣ ಗುಣಪೂರ್ಣ ಭಗವಚ್ಚ-ಮಹಾತ್ಮ್ಯವನ್ನು ನಾನು ವರ್ಣಿಸಲು ಹೇಳಲು ಶಕ್ತನೇ? ಆದರೂ ನನ್ನ ಬುದ್ಧಿಗೆ ತೋರಿದಷ್ಟು ಹೇಳುತ್ತಿದ್ದೇನೆ. ಸಾವಧಾನಚಿತ್ತನಾಗಿ ಕೇಳು. ಪರಬ್ರಹ್ಮ ಸ್ವರೂಪನಾದ, ಲಕ್ಷ್ಮೀಪತಿಯಾದ ಜ್ಞಾನಾನಂದೈಕ ಸ್ವರೂಪನಾದ, ಸ್ವಯಂಪ್ರಕಾಶನಾದ ಸರ್ವೇಶ್ವರನಾದ ಶ್ರೀಮನ್ನಾರಾಯಣನು ನಿತ್ಯವಿಭೂತಿ, ಲೀಲಾವಿಭೂತಿ, ಎಂಬುದಾಗಿ ಎರಡು ಪ್ರಕಾರದನ್ನು ಅಂಗೀಕರಿಸಿ ಇರುವನು; ಆ ನಿತ್ಯವಿಭೂತಿಯೇ ಪರಮಪದ ಹೆಸರುಳ್ಳ ವೈಕುಂಠ ವೆನಿಸಿಕೊಂಡು ಇರುವುದು, ಆ ವೈಕುಂಠಲೋಕವು ಅಪ್ರಾಕೃತವಾಗಿ ಕೋಟಿಸೂರ್ಯ ಪ್ರಕಾಶವಾಗಿ ತ್ರಿಪಾದ್ವಿಭೂತಿಯೆನಿಸಿಕೊಂಡು ಇರುವುದು, ಆ ತ್ರಿಪಾದ್ವಿಭೂತಿ ಎಂಬ ವೈಕುಂಠಲೋಕದೊಳ್ ಅನೇಕ ಲೋಕಂಗಳು, ಅನೇಕ ದೇಶಂಗಳು, ಅನಂತ ವಿಸ್ತಾರಂಗಳಾಗಿ ಶುದ್ಧ ಸತ್ವಮಯಂಗಳಾಗಿ ಪರಬ್ರಹ್ಮಾನಂದ ಸುಖಕ್ಕೆ ಸ್ಥಾನಂಗಳಾಗಿ, ನಿತ್ಯವಾಗಿ, ನಿರ್ವಿಕಾರವಾಗಿ ಅಜ್ಞಾನರಹಿತವಾಗಿರುವವು, ಆ ವೈಕುಂಠವು ಅನೇಕ ರತ್ನಮಯವಾದ ಸುವರ್ಣ ಪ್ರಾಕಾರ ಸಹಸ್ರಂಗಳಿಂದಲೂ ರತ್ನಗೃಹಗಳಿಂದಲೂ, ವೇದಮಯಂಗಳಾದ ನದಿಗಳಿಂದಲೂ, ಸ್ಮೃತಿ ಇತಿಹಾಸ ಪುರಾಣಗಳೆಂಬ ಸ್ಥಾವರ ಜಂಗಮಗಳಿಂದಲೂ, ಶೋಭಿಸುವದು. ವಿರಜಾ ನದಿಗು ವೈಕುಂಠಕ್ಕೂ ಮಧ್ಯಪ್ರದೇಶವೆ ಕೈವಲ್ಯವೆನಿಸಿ ನಗರಂಗಳಿಗೆ ಹೊಂದುವ ಪ್ರಕಟಸೋಪಾದಿಯಲ್ಲಿ ಇರುವವು; ಕೈವಲ್ಯನಿಷ್ಠರು ಆತ್ಮಾನುಭವವಂ ಮಾಡುತ್ತ ಶುದ್ಧ ಜ್ಞಾನಸ್ವರೂಪರಾಗಿ ಸ್ವರೂಪಾನಂದವನ್ನು ಪಡೆದು ಇರುವರು, ಶುದ್ಧ ಮುಕ್ತರಿಗೆ ಲಕ್ಷ್ಮೀ ಪತಿತ್ವವು, ಸೃಷ್ಟ್ಯಾದಿಕರ್ತೃತ್ವವು,ಮುತಾದ ಭಗವಂತನಲ್ಲಿಯೇ ಯೋಗ್ಯವಾದ ಕೆಲವುಗುಣಂಗಳು ಹೊರತು ಮಿಕ್ಕಾದ ಸಮಸ್ತ ಸದ್ಗುಣಂಗಳು ಭಗವಂತನಲ್ಲಿ ಇರುವಂತೆ ಇರುವವು. ನಿಷ್ಕಾಮಿಗಳಾದ ಪ್ರಪನ್ನರಾದ ಮಧುವಿದ್ಯಾ, ಅಕ್ಷರವಿದ್ಯಾ, ದಹರವಿದ್ಯಾ, ಆದಿತ್ಯವಿದ್ಯಾ ಮೊದಲಾದ ಮೂವತ್ತೆರಡು ವಿದ್ಯೋಪಾಸನಂಗಳು ಮಾಡಿ ಪರಮ ಭಾಗವತರಾಗಿ ಇರುವ ಮಹಾತ್ಮರಿಗೆ ಆ ಮುಕ್ತಿಲೋಕ ಉಂಟಾಗುವದು ವಜ್ರಮಯವಾದ ವಿಮಾನ ಕೋಟಿಗಳಿಂದ ಅನೇಕಸಹಸ್ರ ಗೋಪುರ

…ಗಳಿಂದ ದಿವ್ಯಮಯಂಗಳಾದ ತೋರಣಂಗಳಿಂದಲೂ, ಚಂಡ, ಪ್ರಚಂಡ, ಭದ್ರ ಸುಭದ್ರ, ಜಯ, ವಿಜಯ, ಧಾತು ವಿಧಾತರೆಂಬ ದ್ವಾರಪಾಲಕರಿಂದ ಸಹಿತವಾದ ಪೂರ್ವ ದಕ್ಷಿಣ ಪಶ್ಚಿಮ ಉತ್ತರಂಗಳಾದ ಗೋಪುರದ್ವಾರ ಚತುಷ್ಟಯಂಗಳಿಂದಲೂ ಕುಮುದ, ಕುಮುದಾಕ್ಷ, ಪುಂಡರೀಕ, ವಾಮನ, ಶಂಕುಕರ್ಣ, ಸರ್ಪನೇತ್ರ, ಸುಮುಖ, ಸುಪ್ರತಿಷ್ಠಿತರೆಂಬವಾಗಿ ಎಂಟುದಿಕ್ಕಿನೋಳ್ ತಮ್ಮ ಪರಿವಾರಸಮೇತವಾಗಿ ಕಾದಿರುವ ಗಣಾಧಿಪರಿಂದಲೂ, ಸೋಮ ಸೂರ್ಯ ಅಗ್ನಿಪ್ರಕಾಶವಾದ ಮನೆಗಳಸಾಲುಗಳಿಂದಲೂ ನಿತ್ಯಸೌಂದರ್ಯ ಯೌವನಂಗಳುಳ್ಳ ದಿವ್ಯಸ್ತ್ರೀ ಸಮೂಹದಿಂದಲೂ, ಶೋಭಿತವಾದ ಶ್ರೀವೈಕುಂಠ ನಗರಮಧ್ಯದೋಳ್ ಮನೋಹರವಾದ ನಾನಾವಿಧ ರತ್ನಮಯವಾದ ಪ್ರಾಕಾರಂಗಳಿಂದಲೂ, ತೋರಣಗಳಿಂದಲೂ ವಿಮಾನಂಗಳಿಂದಲೂ, ಅಂತರಾಂತರವಾದ ಚಂದ್ರಶಾಲಾದಿಗಳಿಂದಲೂ, ಪ್ರಕಾಶಮಾನವಾದ ಶ್ರೀಮನ್ನಾರಾಯಣನಿಗೆ ನಿತ್ಯವಾಸ ಯೋಗ್ಯವಾದ ದಿವ್ಯವಾದ ಶ್ರೀಮನ್ಮಂದಿರ ಇರುವದು; ಆ ಮಂದಿರದ ಮಧ್ಯದೋಳ್ ಒಂದು ಕಡೆಯಲ್ಲಿ ದಿವ್ಯ ಅಪ್ಸರೋಗಣದ ನರ್ತನಗಳಿಂದಲೂ, ಮತ್ತೊಂದು ಕಡೆಯಲ್ಲಿ ಗಂಧರ್ವಗಾನದಿಂದಲೂ, ಮತ್ತೊಂದು ಕಡೆಯೋಳ್ ಸಾಮಘೋಷದಿಂದಲೂ ಇನ್ನೊಂದು ಕಡೆಯೋಳ್ ನಿತ್ಯಮುಕ್ತರ ಜಯಧ್ವನಿಗಳಿಂದಲೂ, ಪೂರ್ಣವಾದ ಅನೇಕರತ್ನ ಮಯವಾದ ಸಹಸ್ರಸ್ತಂಭ ಉಳ್ಳದ್ದಾಗಿ ನಿತ್ಯಮುಕ್ತರಿಂದ ಸದಾಪೂರ್ಣವಾಗಿ ಇರುವ ಆಸ್ಥಾನಮಂಟಪ ಮಧ್ಯದೋಳ್ ಧರ್ಮ, ಜ್ಞಾನ, ಐಶ್ವರ್ಯ, ವೈರಾಗ್ಯಗಳೆಂಬ ನಾಲ್ಕು ಪೂರ್ವಭಾಗ ಪಾದಂಗಳಿಂ, ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ಪಶ್ಚಿಮ ಭಾಗಪಾದಂಗಳಿಂ ಯುಕ್ತವಾಗಿ ಆಧಾರ ಶಕ್ತ್ಯಾದಿ ಸನತ್ರಾರೂಪವಾದ ಯೋಗಪೀಠವೆಂಬ ದಿವ್ಯಸಿಂಹಾಸನದೋಳ್ ಅಷ್ಟಾಕ್ಷರವೇ ಅಷ್ಟದಳವಾಗಿ ಉಳ್ಳ ಸಾರಸ್ವತ ಪದ್ಮಪೀಠದೋಳ್, ಚಂದ್ರಿಕೆನೋಳ್ ಪೊಳೆಯುವ ಇಂದ್ರನೀಲರತ್ನ ಸಮಾನನಾಗಿ, ನಿತ್ಯಸೌಂದರ್ಯ ಸೌಕುಮಾರ್ಯ, ಯೌವನ, ಲಾವಣ್ಯ ಮುಂತಾದ ಅನೇಕಕಲ್ಯಾಣಗುಣ ಸಂಪನ್ನನಾಗಿ, ಕೋಟಿಸೂರ್ಯ ಪ್ರಕಾಶವಾದ ಅಪ್ರಾಕೃತವಾದ ದಿವ್ಯ ಜೀವರತ್ನ ಖಚಿತವಾದ ಕಿರೀಟ ಕುಂಡಲ ಹಾರ ಭುಜಕೀರ್ತಿ

ಬಾಹುಪುರಿ ಕಂಕಣ ನೂಪುರ ಮೊದಲಾದ ಭೂಷಣಗಳಿಂದಲೂ,
ಪೀತಾಂಬರಾದಿ ದಿವ್ಯವಸ್ತ್ರಗಳಿಂದಲೂ, ಭೂಷಿತನಾಗಿ ಅತಿಕೋಮಲವಾ
ಗಿ ಪಂಕಜೋಪಮ ನಿಷಣ್ಣವಾದ ದಕ್ಷಿಣಪಾದವಂ ಪೀಠದೊಳಿಟ್ಟು ಶ್ರೀಮ
ಹಾಲಕ್ಷ್ಮಿಗೆ ಆಧಾರವಾದ ವಾಮಪಾದವಂ ನೀಡಿಕೊಂಡು ಸರ್ವಾಭರಣ
ಭೂಷಿತೆಯಾದ ಸೌಂದರ್ಯ ಯೌವನಾದಿ ಗುಣಮೂರ್ತಿಯಾದ ಮ
ಹಾಲಕ್ಷ್ಮಿಯಿಂ ವಿಶಿಷ್ಟನಾಗಿ ಶಂಖ ಚಕ್ರ ವರದಾಭಯಹಸ್ತ ಶ್ರೀವ
ತ್ಸ ಕೌಸ್ತುಭ ವನಮಾಲಿಕೆಗಳಿಂದ ಶೋಭಿಸುತ್ತ ಉಭಯಪಾರ್ಶ್ವದೊಳ್
ಭೂದೇವಿ ನೀಳಾದೇವಿಯರಿಂದ ಒಪ್ಪಿಸುವ ತಾಂಬೂಲವಂ ಗ್ರಹಿಸುತ್ತ ವಿ
ಮಲಾ, ಉತ್ಕರ್ಷಣೀ, ಜ್ಞಾನ, ಕ್ರಿಯಾ, ಪ್ರಹ್ವಾ, ಇಚ್ಛಾ, ಸತ್ಯ,
ಈಶಾನ ಎಂತೆಂಬ ಅಷ್ಟಮಹಿಷಿಯರಿಂದ ಚಾಮರದ್ವಯ ವ್ಯಂಜನ, ದ
ರ್ಪಣ, ಛತ್ರ, ಸುವರ್ಣಪಾನ, ಕರಗ, ಕಾಳಾಂಜಿ ಮೊದಲಾದ ಭೋಗೋ
ಪಚಾರಂಗಳನ್ನಂಗೀಕರಿಸುತ್ತ ನಿತ್ಯಜ್ಞಾನಾನಂದಾಮಲಸ್ವರೂಪನಾ
ದ ಶ್ರೀಯಃಪತಿಯಾದ, ನಿತ್ಯಪೂರ್ಣಕಾಮನಾದ ಶ್ರೀಮನ್ನಾರಾಯಣ
ನು ಕುಳಿತು ವಿಷ್ವಕ್ಸೇನಾನಂತ, ವೈನತೇಯ, ಸುದರ್ಶನ, ಪಾಂಚ
ಜನ್ಯ, ಮೊದಲಾದ ನಿತ್ಯಸೂರಿಗಳ ಸಮೂಹದಿಂದಲೂ, ಇನ್ನು ಭೂತ
ಮುನಿಯೆಂಬ ಪೊಯಿಗೆ ಆಳ್ವಾರಿಂದಲು, ಸರೋಯೋಗಿಯೆಂಬ ಪೂದ
ತ್ತಾಳ್ವಾರಿಂದಲೂ, ಮಹದಾಹ್ವಯರೆಂಬ ಪೇಯಾಳ್ವಾರಿಂದಲೂ, ಭಟ್ಟ
ನಾಥರೆಂಬ ತಿರುಮಳಿಶೆಯಾಳ್ವಾರಿಂದಲೂ, ಶ್ರೀದೇವಿಯೆಂಬ ಆಂಡಾಳ್ ದೇ
ವಿಯಿಂದಲೂ, ಭಕ್ತಿಸಾರರೆಂಬ ಪೆರಿಯಾಳ್ವಾರಿಂದಲೂ, ಕುಲಶೇಖರಾಳ್ವಾ
ರಿಂದಲೂ, ಯೋಗಿವಾಹರೆಂಬ ತಿರುಪಾಣಿಯಾಳ್ವಾರಿಂದಲೂ, ಭಕ್ತಾಂಘ್ರಿ
ರೇಣುಗಳೆಂಬ ತೊಂಡರಡಿಪ್ಪೊಡಿಯಾಳ್ವಾರಿಂದಲೂ, ಪರಕಾಲರೆಂಬ ತಿರುಮಂ
ಗೈಯಾಳ್ವಾರಿಂದಲೂ, ಯತೀಂದ್ರರೆಂಬ ಶ್ರೀಭಾಷ್ಯಕಾರರಿಂದಲೂ, ಪರಾಂಕು
ಶರೆಂಬ ಸರ್ವಶ್ರೇಷ್ಠರಾದ ನಮ್ಮಾಳ್ವಾರಿಂದಲೂ. ಇನ್ನು ದೇಶಿಕ ವೇ
ದಾಂತಾಚಾರ್ಯ ಜೀಯರ್ ಪ್ರಮುಖ ಸಕಲ ಪೂರ್ವಾಚಾರ್ಯರಿಂದಲು,
ಇನ್ನು ಅನೇಕ ಮುಕ್ತರುಗಳಿಂದಲೂ, ಸೇವ್ಯಮಾನನಾಗಿ ಪ್ರಣವಾರ್ಥ
ಸ್ವರೂಪನಾಗಿ ಅಪ್ರಾಕೃತವಾದ ನಿತ್ಯನಾದ ದಿವ್ಯಮಹಾವೈಭವದಿಂ ಯು
ಕ್ತನಾಗಿ ಇರುತ್ತ, ತಾನೇ ಅಪ್ರಾರ್ಥಿತ ಕಟಾಕ್ಷದಿಂದ ಚೇತನರಿಗೆ ತಿಳಿಯು

ಲ ಕಕ್ಷ್ಯವಾದ ತನ್ನ ಪರಾತ್ಪರತ್ವವಂ ಪರಿಭಾವಿಸಿ ಪ್ರತ್ಯೇಹವನ್ನಂಗೀಕರಿಸಿ, ಕ್ಷೀರಾಬ್ಧಿಯೊಳ್ ಶೇಷತಲ್ಪದಲ್ಲಿರುತ ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸ, ಅಂಬರೀಷ, ಶುಕ, ಶೌನಕ, ಭೀಷ್ಮ, ದಾಲ್ಭ್ಯ, ರುಕ್ಮಾಂಗದ, ಅರ್ಜುನ, ಬಲಿ, ವಿಭೀಷಣ, ವಸಿಷ್ಠ, ಭೀಮ, ಆಂಜನೇಯ, ಬ್ರಹ್ಮ, ವಾಯು, ಇಂದ್ರ ಮೊದಲಾದ ಪರಮಭಾಗವತರಿಂದ ಸಂಸೇವ್ಯಮಾನನಾಗಿ ಇದ್ದರೂ ಆ ತನ ಮಹಾವಿಭೂತಿಯು ಬ್ರಹ್ಮಾದಿಗಳಿಗೆ ಮಾತ್ರ ತಿಳಿಯಲು ಯೋಗ್ಯವಾಯಿತೇ ಹೊರತು ಸರ್ವಸಾಧಾರಣವಾಗಲಿಲ್ಲ, ಮತ್ತು ಆದಿಸಂಕಲ್ಪ ರೂಪವಾದ, ದುಷ್ಟನಿಗ್ರಹ ಶಿಷ್ಟಪರಿಪಾಲನ ರೂಪವಾದ, ಜಗತ್ಸಂರಕ್ಷಣವೂ ಆಗಲಿಲ್ಲವೆಂದು ಕಟಾಕ್ಷದಿಂದ ವಿಧವನೆಂಬ ಮತ್ಸ್ಯಾದ್ಯನೇಕಾವತಾರಂಗಳಂ ಅಂಗೀಕರಿಸಿದನು, ಅವು ಹ್ಯಾಗೆಯೆಂದರೆ- ಮತ್ಸ್ಯಾವತಾರದಲ್ಲಿ, ಎಡದ ಕೈಯಲ್ಲಿ ಶಂಖವು, ಬಲದ ಕೈಯಲ್ಲಿ ಗದೆ ಇಂತು ಧರಿಸಿ ದ್ವಿಭುಜನಾಗಿ ಕಟಿಯಿಂದ ಕೆಳಗೆ ಮತ್ಸ್ಯರೂಪನಾಗಿ ಮೇಲಕ್ಕೆ ನಿಜರೂಪದಿಂದ ಶುಭ್ರ ವರ್ಣನಾಗಿ ಇರುವನು. ಕೂರ್ಮಾವತಾರದಲ್ಲಿಯು ಕಟಿಯಿಂದ ಮೇಲಕ್ಕೆ ಮತ್ಸ್ಯಾವತಾರದಂತೆ ನಿಜರೂಪದಿಂದ ಶಂಖ ಗದೆಗಳಹಿಡಿದು ಹೊಂಬಣ್ಣದವನಾಗಿ ಸೊಂಟದಿಂದ ಕೆಳಗೆ ಕೂರ್ಮಾಕೃತಿಯಾಗಿ ಇರುವನು. ವರಾಹಾವತಾರದಲ್ಲಿ ಜೇನುತುಪ್ಪದ ಬಣ್ಣವುಳ್ಳವನಾಗಿ ಚತುರ್ಭುಜದೊಳ್ ನಾಲ್ಕು ಆಯುಧಂಗಳು ಧರಿಸಿ ವರಾಹ ಮುಖದವನಾಗಿ ಮನುಷ್ಯದೇಹನಾಗಿ ಇರುವನು. ನಾರಸಿಂಹನು ಶುಭ್ರವರ್ಣನಾಗಿ, ಸಿಂಹದಂತೆ ಮುಖವುಳ್ಳವನಾಗಿ, ಮನುಷ್ಯಾಕೃತಿಯಾದ ದೇಹದವನಾಗಿ, ಎರಡು ಭುಜಗಳಲ್ಲಿ ಗದಾಚಕ್ರವನ್ನು ಧರಿಸಿ ಇನ್ನೆರಡು ಹಸ್ತಗಳಿಂದ ಹಿರಣ್ಯಕಶಿಪುವನ್ನು ಸೀಳುತಲಿರುವನು. ವಾಮನನು ವೊಂದುಕೈಯಲ್ಲಿ ಛತ್ರವನ್ನು ವೊಂದುಕೈಯಲ್ಲಿ ಕರಗವನ್ನು ಧರಿಸಿ ಶ್ಯಾಮಲ ವರ್ಣದವನಾಗಿ ಇರುವನು. ಪರಶುರಾಮನು ಸುವರ್ಣವರ್ಣನಾಗಿ, ದ್ವಿಭುಜನಾಗಿ, ವೊಂದುಕೈಯಲ್ಲಿ ಪರಶುವನ್ನು ಧರಿಸಿ ಇರುವನು. ಶ್ರೀರಾಮನು ದ್ವಿಭುಜನಾಗಿ ಶ್ಯಾಮವರ್ಣನಾಗಿ ಧನುರ್ಬಾಣವನ್ನು ಧರಿಸಿ ಇರುವನು. ಬಲರಾಮನು ಬಿಳುಪಾಗಿ ಎಡದ ವೊಂದು ಕೈಯಲ್ಲಿ ಮದ್ಯಪಾತ್ರೆ ಬಲದ

ಕೈಯಲ್ಲಿ ನೇಗಲು ಮತ್ತೆರಡುಹಸ್ತದಲ್ಲಿ ಗದಾ ಮುಸಲಂಗಳನ್ನು ಧರಿಸಿ ಇರುವನು. ಬೌದ್ಧಾವತಾರದಲ್ಲಿ ದ್ವಿಭುಜನಾಗಿ ನಿರಾಯುಧನಾಗಿ ಕಾಷಾಯ ವಸ್ತ್ರವನ್ನು ಉಟ್ಟು ಹೆಗಲೊಳು ವಸ್ತ್ರಖಂಡವನ್ನು ಧರಿಸಿ ಪದ್ಮಾಸನದಲ್ಲಿ ಕುಳಿತು ಇರುವನು. ಶ್ರೀಕೃಷ್ಣನು ನೀಲಮೇಘ ಶ್ಯಾಮನಾಗಿ ಎರಡು ಹಸ್ತಗಳಿಂದ ಶಂಖ ಚಕ್ರಗಳಂ ಧರಿಸಿಕೊಂಡು ಇರುವನು. ಕಲ್ಕ್ಯವತಾರದಲ್ಲಿ ಅಶ್ವಾರೂಢನಾಗಿ ದ್ವಿಭುಜನಾಗಿ ಖಡ್ಗವನ್ನು ಧರಿಸಿಕೊಂಡು ಇರುವನು. ಈ ಮೇರಿಗೆ ದಶಾವತಾರಗಳನ್ನೆತ್ತಿ ದುಷ್ಟನಿಗ್ರಹ ಶಿಷ್ಟಪರಿಪಾಲನ ರೂಪವನಾದ ಸ್ವಮಹಿಮೆಯನ್ನು ತೋರಿಸಿದನು; ರೂಪಭೇದಂಗಳಿಂದ ಭಿನ್ನೋಪಾಸನವಂ ಮಾಡಿ ಪರತತ್ವವಂ ಕಡೆಗಾಣದೆ ಇರುವ ಪ್ರಾಣಿಗಳ ಉದ್ಧಾರಾರ್ಥವಾಗಿ ಅಂತರ್ಯಾಮಿರೂಪದಿಂದ ಸಕಲಹೃದಯಗಳಲ್ಲಿ ನಿಜರೂಪದಿಂ ತೋರಿದಭಗವಂತನು ಕೇವಲ ಜ್ಞಾನಿಗಳಿಗೆ ಅಲ್ಲದೆ ಸಾಧಾರಣ ಜನರಿಂದ ಅಂತರ್ಯಾಮಿ ರೂಪದಿಂ ತಿಳಿಯಲಶಕ್ಯವೆಂದು ತನ್ನೊಳಗೆ ತಾನೆ ತಿಳಿದು ಕೃಪೆಯುಳ್ಳವನಾಗಿ ಸರ್ವಶ್ರೇಷ್ಠವಾಗಿ ಸುಲಭವಾಗಿಯು, ಇರುವ ಅರ್ಚಾವತಾರರೂಪವನ್ನಂಗೀಕರಿಸಿ ಅದರೊಳು ಸ್ವಯಂವ್ಯಕ್ತ, ಆರ್ಷ, ಪೌರಾಣ, ಮಾನುಷಗಳೆಂಬ ನಾಲ್ಕು ಪ್ರಕಾರದಲ್ಲಿ ಶ್ರೀರಂಗ, ವೆಂಕಟಾದ್ರಿ, ಹಸ್ತಿಶೈಲ, ಯಾದವಗಿರಿ, ಶ್ರೀಮುಷ್ಣ ಬದರಿಕಾಶ್ರಮ, ಸಾಳಗ್ರಾಮ, ನೈಮಿಶಾರಣ್ಯ, ಪುಷ್ಕರ, ತೋತಾದ್ರಿಗಳೆಂಬ ಸ್ಥಳಂಗಳಲ್ಲಿ ಇರುವ ದಿವ್ಯರೂಪದಿಂದಲೂ, ಸಮಸ್ತವಾದ ಸಾಳಗ್ರಾಮ ಮೂರ್ತಿ ರೂಪಗಳಿಂದಲೂ, ಸ್ವಯಂವ್ಯಕ್ತನಾಗಿ ಇನ್ನು ಶ್ರೀವೈಕುಂಠನೆಂಬ ಸ್ಥಾನದಲ್ಲಿ ವಾಸುದೇವನೆಂಬದಾಗಿಯೂ, ಆಮೋದವೆಂಬ ಸ್ಥಾನದಲ್ಲಿ ಸಂಕರ್ಷಣನೆಂಬದಾಗಿಯೂ, ಪ್ರಮೋದವೆಂಬ ಕ್ಷೇತ್ರದಲ್ಲಿ ಪ್ರದ್ಯುಮ್ನನೆಂದೂ ಸಮ್ಮೋದವೆಂಬ ಬಳಿಯಲ್ಲಿ ಅನಿರುದ್ಧನೆಂತಲೂ, ಸತ್ಯಲೋಕದಲ್ಲಿ ವಿಷ್ಣುವೆಂದು, ಸೂರ್ಯಮಂಡಲದಲ್ಲಿ ಪದ್ಮಾಕ್ಷನೆಂಬದಾಗಿಯೂ, ಕ್ಷೀರಾಬ್ಧಿಯಲ್ಲಿ ಶೇಷಶಯನನೆಂತಲೂ, ಶ್ವೇತದ್ವೀಪದಲ್ಲಿ ತಾರಕನೆಂದೂ ಪ್ರಸಿದ್ಧಿಯಂ ಪಡೆದಿರುವನು, ಇದುಮಲ್ಲದೆ ಭೂಲೋಕದೋಳ್ ನೂರೆಂಟು ತಿರುಪತಿ ಎಂಬ ಕ್ಷೇತ್ರಂಗಳಲ್ಲಿ ಇರುವ ದೇವರುಗಳ ನಾಮಂಗಳಂ ಪೇಳುವೆನು, ಕೇಳೈ ರಾಜವಲ್ಲಭನೆ ! ಬದರಿಕಾಶ್ರಮದಲ್ಲಿ ನಾರಾಯಣನೆಂದು,

ನೈಮಿಶಾರಣ್ಯದಲ್ಲಿ ಹರಿಯೆಂಬ ಜಡಾಕೃತಿಯೆಂದೂ, ಹರಿಕ್ಷೇತ್ರದಲ್ಲಿ ಸಾಳಗ್ರಾಮ ದೇವನೆಂದೂ, ಅಯೋಧ್ಯೆಯಲ್ಲಿ ರಘೂತ್ತಮನೆಂದೂ ಮಧುರಾಪುರಿಯಲ್ಲಿ ಬಾಲಕೃಷ್ಣನೆಂದೂ, ಮಾಯಾಭಿಧ ಕ್ಷೇತ್ರದಲ್ಲಿ ಮಧುಸೂದನನೆಂದೂ, ಕಾಶಿಯಲ್ಲಿ ಭೋಗಶಯನನೆಂದೂ, ವಾರಣಾದ್ರಿಯಲ್ಲಿ ವರದರಾಜನೆಂದೂ ಕಾಂಚೀಯಲ್ಲಿ ಚಂದ್ರಮೋದ ಕಮಲಾಕ್ಷನೆಂದೂ, ಕಾಂಚೀಸ್ಥ ಪರಮೇಶ್ವರದಲ್ಲಿ ಪರಮೇಶಪುರಾಕೃತಿಯೆಂದೂ, ಕಾಂಚೀಸ್ಥ ಶ್ರೀಗ್ರಾಮಗ್ರಹದಲ್ಲಿ ಯಥೋಕ್ತಕಾರಿಯೆಂದೂ, ಕಾಂಚೀಸ್ಥ ಪಾಟಲಕಪುರದಲ್ಲಿ ಪಾಂಡವದೂತನೆಂದೂ, ಕಾಂಚೀಸ್ಥ ಗ್ರಾಮಪದ್ಮದಲ್ಲಿ ಉನ್ನತತ್ರಿವಿಕ್ರಮನೆಂದೂ, ಕಾಂಚೀಸ್ಥ ಹಸ್ತಿಗ್ರಾಮದಲ್ಲಿ ಯೋಗನೃಸಿಂಹನೆಂದೂ, ಕಾಂಚೀಸ್ಥ ಅಷ್ಟಭುಜಸ್ಥಾನದಲ್ಲಿ ಗಜೇಂದ್ರವರದನೆಂದೂ, ಕಾಂಚೀಸ್ಥ ಮೇಘಾಲಯಸ್ಥಾನದಲ್ಲಿ ಮೇಘಾಕಾರನೆಂದೂ, ಕಾಂಚೀಸ್ಥ ನೀರಾಲಯಸ್ಥಾನದಲ್ಲಿ ಜ್ಞಾನಾಕಾರನೆಂದೂ, ಕಾಂಚೀಸ್ಥ ತ್ರಿಸ್ಥಾತ್ಪುರದಲ್ಲಿ ಪ್ರಾಕಾರ ದೇವನೆಂದೂ, ಕಾಂಚೀಸ್ಥ ಶೇಷಾಭಿಧಸ್ಥಾನದಲ್ಲಿ ಶೇಷಾಕಾರನೆಂದೂ, ಕಾಂಚೀಸ್ಥ ಕಾಮಕೋಟಿಸ್ಥಾನದಲ್ಲಿ ಲಕ್ಷ್ಮೀನೃಸಿಂಹನೆಂದೂ, ಕಾಂಚೀಸ್ಥ ಪ್ರವಾಳವನಸ್ಥಾನದಲ್ಲಿ ಪ್ರವಾಳವರ್ಣನೆಂದೂ, ಕಾಂಚೀಸ್ಥ ದೀಪಪ್ರಕಾಶಸ್ಥಾನದಲ್ಲಿ ದೀಪಾಕಾರನೆಂದೂ, ಕಾಂಚೀಸ್ಥ ಕರ್ಮಸ್ಥಾನದಲ್ಲಿ ಮಹಾವಿಷ್ಣುವೆಂದೂ, ಕಾಂಚೀಸ್ಥ ಬಹ್ವಾಪುರಿಯಲ್ಲಿ ವೈಕುಂಠೇಶನೆಂದೂ, ಕಾಂಚೀಸ್ಥ ನಂದವ್ರಜಸ್ಥಾನದಲ್ಲಿ ಪರವಪ್ರಭುವೆಂದೂ, ಅವಂತಿಯಲ್ಲಿ ಅವನೀಪತಿಯೆಂದೂ, ದ್ವಾರಕಿಯಲ್ಲಿ ಯಾದವೇಂದ್ರನೆಂದೂ, ವ್ರಜದಲ್ಲಿ ಗೋಪೀಜನಪ್ರಿಯನೆಂದೂ; ಬೃಂದಾವನದಲ್ಲಿ ನಂದನಂದನನೆಂದೂ, ಕಾಳೀಯಹ್ರದದಲ್ಲಿ ಗೋವಿಂದನೆಂದೂ, ಗೋವರ್ಧನಕ್ಷೇತ್ರದಲ್ಲಿ ಗೋಪವೇಷನೆಂದೂ ಭವಘ್ನಪುರಿಯಲ್ಲಿ ಪದ್ಮಲೋಚನನೆಂದೂ, ಗೋಮಂತ ಪರ್ವತದಲ್ಲಿ ಶೌರಿಯೆಂದೂ, ಹರಿದ್ವಾರದಲ್ಲಿ ಜಗತ್ಪತಿಯೆಂದೂ, ಪ್ರಯಾಗದಲ್ಲಿ ಮಾಧವನೆಂದೂ, ಗಯೆಯಲ್ಲಿ ಗದಾಧರನೆಂದೂ, ಗಂಗಾಸಾಗರದಲ್ಲಿ ವಿಷ್ಣುವೆಂದೂ, ಚಿತ್ರಕೂಟದಲ್ಲಿ ರಾಘವನೆಂದೂ, ನಂದಿಗ್ರಾಮದಲ್ಲಿ ರಾಕ್ಷಸಘ್ನನೆಂದೂ, ಪ್ರಭಾಸಕ್ಷೇತ್ರದಲ್ಲಿ ವಿಶ್ವರೂಪಿಯೆಂದೂ, ಶ್ರೀಕೂರ್ಮದಲ್ಲಿ ಕೂರ್ಮನೆಂದೂ, ನೀಲಾದ್ರಿಯಲ್ಲಿ ಪುರುಷೋತ್ತಮನೆಂದೂ, ಸಿಂಹಾಚಲದಲ್ಲಿ ಮಹಾಸಿಂಹ

ನೆಂದೂ, ತುಲಸೀವನದಲ್ಲಿ ಜಗದೀಶನೆಂದೂ, ಕೃತಕೋಶಕ್ಷೇತ್ರದಲ್ಲಿ ಪಾಪಹರನೆಂದೂ, ಶ್ವೇತಾದ್ರಿಯಲ್ಲಿ ಸಿಂಹರೂಪಿಯೆಂದೂ, ಧರ್ಮಪುರಿಯಲ್ಲಿ ಯೋಗಾನಂದನೆಂದೂ, ಶ್ರೀಕಾಕೊಳದಲ್ಲಿ ಆಂಧ್ರನಾಯಕನೆಂದೂ, ಅಹೋಬಿಲದಲ್ಲಿ ಹಿರಣ್ಯಾಸುರಮರ್ದನನೆಂದೂ, ಪಂಡಾಪುರದಲ್ಲಿ ವಿಟ್ಠಲನೆಂದೂ, ವೆಂಕಟಾದ್ರಿಯಲ್ಲಿ ರಮಾಸಖನೆಂದೂ, ಯಾದವಾದ್ರಿಯಲ್ಲಿ ನಾರಾಯಣನೆಂದೂ, ಘಟಿಕಾಚಲದಲ್ಲಿ ನೃಸಿಂಹನೆಂದೂ, ಗೃಧ್ರಸರಸ್ತೀರದಲ್ಲಿ ವಿಜಯರಾಘವನೆಂದೂ, ತೋತಾದ್ರಿಯಲ್ಲಿ ತುಂಗಶಯನನೆಂದೂ, ಗಜಸ್ಥಳದಲ್ಲಿ ಗಜಾರ್ತಿಘ್ನನೆಂದೂ, ವೀಕ್ಷಾರಣ್ಯದಲ್ಲಿ ವೀರರಾಘವನೆಂದೂ, ಬಲಿಪುರದಲ್ಲಿ ಮಹಾಬಲನೆಂದೂ, ಭಕ್ತಿಸಾರಪುರದಲ್ಲಿ ಜಗತ್ಪತಿಯೆಂದೂ, ಅಹೀಂದ್ರಪುರಿಯಲ್ಲಿ ದೇವದೇವೇಶನೆಂದೂ, ಗೋಪಪುರೀಕ್ಷೇತ್ರದಲ್ಲಿ ಗೋಪರತಿಯೆಂದೂ, ಶ್ರೀಮುಷ್ಣದಲ್ಲಿ ಮಹಾವರಾಹನೆಂದೂ, ಮಹಿಪತ್ತನದಲ್ಲಿ ಶ್ರೀಪ್ರಸನ್ನಕೃಷ್ಣನೆಂದೂ, ಶ್ರೀರಂಗದಲ್ಲಿ ರಂಗನಾಥನೆಂದೂ, ಶ್ರೀರಾಮಕ್ಷೇತ್ರದಲ್ಲಿ ಜಾನಕೀಪ್ರಿಯನೆಂದೂ, ದಕ್ಷಿಣದ್ವಾರಕೆಯಲ್ಲಿ ಗೋಪಾಲನೆಂದೂ, ಶ್ರೀನಿವಾಸಸ್ಥಳದಲ್ಲಿ ಪೂರ್ಣನೆಂದೂ, ಸ್ವರ್ಣಮಂದಿರ ಕ್ಷೇತ್ರದಲ್ಲಿ ಸುವರ್ಣದೇವನೆಂದೂ, ವ್ಯಾಘ್ರಪುರಿಯಲ್ಲಿ ಮಹಾಬಾಹುವೆಂದೂ, ಆಕಾಶನಗರದಲ್ಲಿ ಹರಿಯೆಂದೂ, ಉತ್ಪಲಾವರ್ತದಲ್ಲಿ ಶೌರಿಯೆಂದೂ, ಮಣಿಕೂಟಪುರದಲ್ಲಿ ಮಹಾಪ್ರಭನೆಂದೂ, ಕೃಷ್ಣಪುರಿಯಲ್ಲಿ ಮಹಾವಿಷ್ಣುವೆಂದೂ, ಭಕ್ತಿಸ್ಥಾನದಲ್ಲಿ ಭಕ್ತವನೆಂದೂ, ಶ್ವೇತಹ್ರದಕ್ಷೇತ್ರದಲ್ಲಿ ಶಾಂತಮೂರ್ತಿಯೆಂದೂ, ಮಣಿಪುರದಲ್ಲಿ ಸುರಪ್ರಿಯನೆಂದೂ, ಭಾರ್ಗವಸ್ಥಾನದಲ್ಲಿ ಭರ್ಗನೆಂದೂ, ವೈಕುಂಠ ಕ್ಷೇತ್ರದಲ್ಲಿ ಮಾಧವನೆಂದೂ, ಪುರುಷೋತ್ತಮಕ್ಷೇತ್ರದಲ್ಲಿ ಶ್ರೀಜಗನ್ನಾಥನೆಂದೂ ಚಕ್ರತೀರ್ಥದಲ್ಲಿ 'ಸುದರ್ಶನನೆಂದೂ, ಕುಂಭಕೋಣದಲ್ಲಿ ಶಾರ್ಙ್ಗಪಾಣಿಯೆಂದೂ, ಭೂತಸ್ಥಾನದಲ್ಲಿ ಶಾರ್ಙ್ಗಿಯೆಂದೂ, ಕಪಿಸ್ಥಲದಲ್ಲಿ ಗಜಾರ್ತಿಘ್ನನೆಂದೂ, ತ್ರಿಕೂಟದಲ್ಲಿ ಗೋವಿಂದನೆಂದೂ, ಖಂಡನಪುರಿಯಲ್ಲಿ ಹರಶಾಪಘ್ನನೆಂದೂ, ಉತ್ತಮಕ್ಷೇತ್ರದಲ್ಲಿ ಅನುತ್ತಮನೆಂದೂ, ಶ್ವೇತಗಿರಿಯಲ್ಲಿ ಶಾಂತನೆಂದೂ, ಪಾರ್ಥಸ್ಥಲದಲ್ಲಿ ಪರಬ್ರಹ್ಮನೆಂದೂ, ಕೃಷ್ಣಕೋಟಿಯಲ್ಲಿ ಮಧುದ್ವಿಟ್ಟೆಯೆಂದೂ, ನಂದಪುರಿಯಲ್ಲಿ ಮಹಾನಂದನೆಂದೂ, ವೃದ್ಧಪುರಿಯಲ್ಲಿ ವಿಷಯಪ್ರಿಯನೆಂದೂ, ಸಂಗಮಗ್ರಾಮದಲ್ಲಿ ಅಸಂಗನೆಂದೂ, ಶರ

ಣ್ಯ ಕ್ಷೇತ್ರದಲ್ಲಿ ಶರಣ್ಯನೆಂದೂ, ಸಾರಕ್ಷೇತ್ರದಲ್ಲಿ ಸಾರನಾಥನೆಂದೂ, ಮಣಿ ಮಂಟಪದಲ್ಲಿ ಮಲ್ಲಾರಿಯೆಂದೂ, ನಿಬಿಡಕ್ಷೇತ್ರದಲ್ಲಿ ನಿಬಿಡಾಕಾರನೆಂದೂ, ಧನುಷ್ಕೋಟಿಯಲ್ಲಿ ಜಗದೀಶ್ವರನೆಂದೂ, ಮೋಹಪುರಿಯಲ್ಲಿ ಕಾಳಮೇಘನೆಂದೂ, ಮಧುರೆಯಲ್ಲಿ ಸುಂದರನೆಂದೂ, ಕುರುಕಾಕ್ಷೇತ್ರದಲ್ಲಿ ರಮಾಸಖನೆಂದೂ, ಗೋಷ್ಠೀಪುರದಲ್ಲಿ ಗೋಷ್ಠಪತಿಯೆಂದೂ, ದರ್ಭಶಯನದಲ್ಲಿ ದರ್ಭಶಾಯಿಯೆಂದೂ, ಧನ್ವಮಂಗಳದಲ್ಲಿ ಶೌರಿಯೆಂದೂ, ಭ್ರಮರಸ್ಥಳದಲ್ಲಿ ಬಲಾಢ್ಯನೆಂದೂ, ಕುರಂಗಕ್ಷೇತ್ರದಲ್ಲಿ ಮಹಾಪೂರ್ಣನೆಂದೂ, ವಟಸ್ಥಲದಲ್ಲಿ ವಿಷ್ಣುವೆಂದೂ, ಕೃಷ್ಣಾನದೀತೀರದಲ್ಲಿ ಅಚ್ಯುತನೆಂದೂ, ಅನಂತಶಯನದಲ್ಲಿ ಅನಂತ ಪದ್ಮನಾಭನೆಂದೂ, ಇಂತೆಂಬ ಕೆಲವು ಸ್ವಯಂವ್ಯಕ್ತಂಗಳು, ಕೆಲವು ಸಿದ್ಧಂಗಳು, ಕೆಲವು ಪುರಾಣೋಕ್ತಂಗಳಾಗಿ ಇರುವ ಅಷ್ಟೋತ್ತರಶತಸ್ಥಾನಗಳೆಂಬ ನೂರೆಂಟು ತಿರುಪತಿಗಳಲ್ಲಿ ಆಯಾಯಸ್ಥಲಪುರಾಣ ರೀತಿಯಿಂದ ಆಯಾಯಮೂರ್ತಿಗಳ ಭಾವ ದೇವಿಯ ವರರೂಪ ಅಲ್ಲಲ್ಲಿ ತೀರ್ಥ ಇಂಥಾವರಿಗೆ ಪ್ರತ್ಯಕ್ಷಯೆಂಬದಾಗಿ ಜಗತ್ಪ್ರಸಿದ್ಧವಾಗಿ ಆರ್ಷವೆಂದು ಋಷಿಗಳಿಗೆ ಪ್ರತ್ಯಕ್ಷನಾಗಿಯು, ಮತ್ತು ಪೌರಾಣವೆಂದು ಮತ್ಸ್ಯ, ಮಾರ್ಕಂಡೇಯ, ಭಾಗವತ, ಭವಿಷ್ಯೋತ್ತರ, ಬ್ರಹ್ಮಾಂಡ, ಬ್ರಹ್ಮಕೈವರ್ತ, ಬ್ರಾಹ್ಮ, ವಿಷ್ಣು, ವರಾಹ, ವಾಮನ, ವಾಯು, ಆಗ್ನೇಯ, ಲಿಂಗ, ಪಾದ್ಮ, ನಾರದೀಯ, ಕೂರ್ಮ, ಸ್ಕಾಂದ, ಗಾರುಡ ಪುರಾಣಗಳೆಂಬ ಈ ಹದಿನೆಂಟು ಪುರಾಣಗಳೊಳ್ ಪ್ರತಿಪಾದಿತನಾದ ಸ್ಥಲಂಗಳಲ್ಲಿ ಅನೇಕ ರೂಪಭೇದದಿಂದ ಸೇವಿಸಲ್ಪಟ್ಟವನಾಗಿಯೂತಿರಿಗೂ ಮಾನುಷವೆಂದು ಸುವರ್ಣಾದಿಲೋಹಂಗಳಿಂದಲೂ ಶಿಲಾ ದಾರು ಸುಧಾದಿಗಳಿಂದಲೂ ಮೃತ್ತಿಕಾದಿ ದ್ರವ್ಯಗಳಿಂದಲೂ ನಿರ್ಮಿಸಲ್ಪಟ್ಟ ಮೂರ್ತಿ ಉಳ್ಳವನಾಗಿಯೂ ಇರುವನು; ಮೂರ್ತಿಗಳು ಯಾವದೆಂದರೆ ಪೇಳುವೆನುಕೇಳು, ಕೇಶವ ಮೂರ್ತಿ ಮೊದಲಾದ ಚತುರ್ವಿಂಶತಿ ಮೂರ್ತಿಗಳು ಬಲಭಾಗದ ಕೆಳಗಣ ಹಸ್ತ ಅದರಮೇಲಣ ಹಸ್ತ ಎಡಭಾಗದ ಮೇಲಣಹಸ್ತ ಅದರ ನಾಲ್ಕು ಆ ಕೆಳಗಣಹಸ್ತ ಈ ನಾಲ್ಕುಹಸ್ತಗಳಲ್ಲಿಯೂ ಪ್ರದಕ್ಷಿಣ ಕ್ರಮವಾಗಿ ಆಯುಧಗಳಂ ಧರಿಸಿಇರುವರು ಆಕ್ರಮ ವೆಂತೆಂದರೆ:—ಕೇಶವ ಮೂರ್ತಿಯು ಪದ್ಮ, ಶಂಖ, ಚಕ್ರ, ಗದೆಗಳಂಧರಿಸಿ ಸುವರ್ಣ ವರ್ಣ

ನಾಗಿ ಶ್ವೇತವಸ್ತ್ರನಾಗಿ ಮುಕ್ತಾಭರಣಗಳಧರಿಸಿ ಇರುವನು, ನಾರಾಯಣ
ನು ಶಂಖ, ಪದ್ಮ, ಗದಾ, ಚಕ್ರಗಳಂ ಕ್ರಮವಾಗಿ ಧರಿಸಿ ನೀಲಮೇಘಶ್ಯಾ
ಮನಾಗಿ ಪೀತಾಂಬರವಂ ಧರಿಸಿ, ಮಣಿ ಭೂಷಣಾಲಂಕೃತನಾಗಿ ಇರುವ
ನು. ಮಾಧವನು ಗದಾ, ಚಕ್ರ, ಶಂಖ, ಪದ್ಮಗಳಂ, ಧರಿಸಿ, ನೀಲೋತ್ಪ
ಲ ವರ್ಣನಾಗಿ ಚಿತ್ರಮಾಲ್ಯಾಂಬರಂಗಳಂ ಧರಿಸಿ ಪ್ರಕಾಶಿಸುವನು. ಗೋ
ವಿಂದಮೂರ್ತಿಯು, ಚಕ್ರ, ಗದಾ, ಪದ್ಮ, ಶಂಖಗಳಂ ಪಿಡಿದು ಚಂ
ದ್ರನಂತೆ ಬಿಳುಪಾಗಿ ಸುವರ್ಣಾಭರಣ ಭೂಷಿತನಾಗಿ ಇರುವನು, ವಿಷ್ಣು
ವು, ಗದಾ, ಪದ್ಮ, ಶಂಖ, ಚಕ್ರಗಳಂ ಧರಿಸಿ ಬಿಳುಪಾಗಿ ಪೀತಾಂಬರವ
ನ್ನುಟ್ಟು ಭಕ್ತರಂ ಪಾಲಿಸುತ್ತಿರುವನು. ಮಧುಸೂದನಮೂರ್ತಿಯು
ಚಕ್ರ, ಶಂಖ, ಪದ್ಮ, ಗದೆಗಳಂ ಧರಿಸಿ ಪದ್ಮವರ್ಣನಾಗಿ ಜಗತ್ಸೃಷ್ಟಿ
ಯಂ ಮಾಡುವನು. ತ್ರಿವಿಕ್ರಮನು ಪದ್ಮ, ಗದಾ, ಚಕ್ರ, ಶಂಖಗಳಂ,
ಪಿಡಿದು, ರಕ್ತವರ್ಣನಾಗಿ ಪರಿಪಾಲಿಸುವನು ವಾಮನಮೂರ್ತಿಯು,
ಶಂಖ, ಚಕ್ರ, ಗದಾ, ಪದ್ಮಂಗಳಂ, ಧರಿಸಿ ಮಲ್ಲಿಗೆಹೂವಿನಂತೆ ಬಿಳು
ಪಾಗಿ ಇರುವನು. ಶ್ರೀಧರಮೂರ್ತಿಯು ಪದ್ಮ, ಚಕ್ರ, ಗದಾ, ಶಂಖ
ಗಳಂ ಪಿಡಿದು, ಬಿಳಿದಾವರೆಯ ವರ್ಣದಂತೆ ಬಿಳುಪಾಗಿ ಮುಕ್ತಾಭರಣ
ಭೂಷಿತನಾಗಿ ಭಕ್ತರಿಂದ ಸೇವಿಸಲ್ಪಡುವನು, ಹೃಷೀಕೇಶನು ಗದಾ,
ಚಕ್ರ, ಪದ್ಮ, ಶಂಖಗಳೆಂಬ ಆಯುಧಗಳಂ ಪಿಡಿದು, ಕೆಂಪಾದ ವಸ್ತ್ರಾ
ಭರಣ ಪುಷ್ಪಂಗಳಂ ಧರಿಸಿ, ಮಿಂಚಿನಂತೆ ಹೊಂಬಣ್ಣವಾಗಿ ಇರುವನು,
ಪದ್ಮನಾಭಮೂರ್ತಿಯು ಶಂಖ, ಪದ್ಮ, ಚಕ್ರ, ಗದೆಗಳಂ ಪಿಡಿದು, ಇಂ
ದ್ರನೀಲವರ್ಣನಾಗಿ ಚಿತ್ರಮಾಲ್ಯಾನುಲೇಪನನಾಗಿ ಪೀತಾಂಬರದಿಂದ ಒಪ್ಪು
ತಲಿರುವನು, ದಾಮೋದರಮೂರ್ತಿಯು ಪದ್ಮ, ಶಂಖ, ಗದಾ, ಚಕ್ರ
ಗಳಂ ಧರಿಸಿ ಹಸುರುವರ್ಣ ಉಳ್ಳವನಾಗಿ ಪೀತಾಂಬರದಿಂದಲೂ ನಾನಾರತ್ನ
ಗಳಿಂದಲೂ, ಅಲಂಕೃತನಾಗಿ ಇರುವನು. ಸಂಕರ್ಷಣ ಮೂರ್ತಿಯು
ಗದಾ, ಶಂಖ, ಪದ್ಮ, ಚಕ್ರಗಳಂ ಶೋಭಿಸುತ್ತ ಶುಭ್ರವರ್ಣನಾಗಿರುವ
ನು. ವಾಸುದೇವಮೂರ್ತಿಯು ಗದಾ, ಶಂಖ, ಚಕ್ರ ಪದ್ಮಗಳಂ ಪಿಡಿ
ದು ಶ್ವೇತವರ್ಣನಾಗಿ ಸರ್ವಾಭರಣ ಭೂಷಿತನಾಗಿರುವನು. ಪ್ರದ್ಯುಮ್ನ
ನು ಚಕ್ರ, ಶಂಖ, ಗದಾ, ಪದ್ಮಗಳಿಂದ ಪ್ರಕಾಶವಾದ ಹಸ್ತವುಳ್ಳವ

ನಾಗಿ ಸುವರ್ಣವರ್ಣನಾಗಿ ಪ್ರೊಳೆಯುತ್ತಿರುವನು. ಅನಿರುದ್ಧನೂ ಚಕ್ರ ಗದೆ, ಶಂಖ, ಪದ್ಮಗಳಂ ಪಿಡಿದು, ನೀಲವರ್ಣನಾಗಿ ಇರುವನು, ಪುರುಷೋತ್ತಮಮೂರ್ತಿಯೂ ಚಕ್ರ, ಪದ್ಮ, ಶಂಖ, ಗದೆಗಳಂ ಧರಿಸಿ ಶ್ವೇತವರ್ಣದವನಾಗಿ ಇರುವನು, ಅಧೋಕ್ಷಜಮೂರ್ತಿಯೂ ಪದ್ಮ, ಗದೆ, ಶಂಖ, ಚಕ್ರಗಳಂ ಪಿಡಿದು, ನೀಲವರ್ಣನಾಗಿ ಒಪ್ಪುವನು, ನಾರಸಿಂಹನೂ, ಚಕ್ರ, ಪದ್ಮ, ಗದಾ, ಶಂಖವಿಂ ಪ್ರೊಪ್ಪಿ ಶ್ವೇತವರ್ಣನಾಗಿ ಇರುವನು. ಅಚ್ಯುತಮೂರ್ತಿಯೂ, ಗದಾ, ಪದ್ಮ, ಚಕ್ರ, ಶಂಖವಂ ಧರಿಸಿ, ಮಿಂಚಿನ್ನ ಪ್ರಕಾಶನಾಗಿ ಇರುವನು, ಜನಾರ್ದನನೂ, ಪದ್ಮ, ಚಕ್ರ, ಶಂಖ, ಗದೆಗಳಂ ಪಿಡಿದು, ರಕ್ತವರ್ಣನಾಗಿ ಇರುವನು, ಉಪೇಂದ್ರಮೂರ್ತಿಯೂ, ಶಂಖ, ಗದಾ, ಚಕ್ರ, ಪದ್ಮಗಳಂ ಪಿಡಿದು, ನೀಲವರ್ಣನಾಗಿ ಇರುವನು. ಹರಿಮೂರ್ತಿಯೂ, ಶಂಖ, ಚಕ್ರ, ಪದ್ಮ, ಗದೆಗಳಂ ಪಿಡಿದು, ಕನಕವರ್ಣದಿಂದ ಪ್ರೊಪ್ಪುತ್ತಿರುವನು. ಶ್ರೀಕೃಷ್ಣಮೂರ್ತಿಯೂ, ಶಂಖ, ಗದೆ, ಪದ್ಮ, ಚಕ್ರಗಳಂ ಧರಿಸಿ ಕೃಷ್ಣವರ್ಣದವನಾಗಿ ಮಹಾವಿಭೂತಿ ಉಳ್ಳವನಾಗಿ ಇರುವನು. ಅಲ್ಲದೆ ಇನ್ನೂ ರಂಗನಾಥಮೂರ್ತಿ ಮೊದಲಾದ ದ್ವಿಭುಜ ಅಷ್ಟಭುಜ ಅನೇಕ ಭುಜಗಳುಳ್ಳ ಮೂರ್ತಿಗಳಾಗಿಯೂ ತೋರುತ್ತಲಿರುವನು. ಇನ್ನೂ ಬ್ರಹ್ಮಾದಿ ಸಕಲ ದೇವತೆಗಳಲ್ಲಿಯೂ, ನಾರದಾದಿ ಸಕಲ ಋಷಿಗಳಲ್ಲಿಯೂ, ದೇವತಿರ್ಯಙ್ಮನುಷ್ಯ ಸ್ಥಾವರಗಳಲ್ಲಿಯೂ, ತನ್ನ ಕಲಾಧಿಕ್ಯದಿಂದ ಪೂಜೆಯನ್ನು ತೆಗೆದುಕೊಳ್ಳುತ್ತಾ ಇರುವನು, ಈ ಯಾವರೀತಿಯಿಂದಲಾಗಲೀ ಉಪಾಸನಂಗೈದು ತನ್ನಂ ಸೇರಲೀಯೆಂದು ಸಂಕಲ್ಪಿಸಿ ಚೇತನರಲ್ಲಿ ಅಪಾರ ದಯೆಯುಳ್ಳ ಭಗವಂತನ ಮಹಾತ್ಮ್ಯವನ್ನು ಹೇಳಲು ಉಪನಿಷತ್ತುಗಳಿಗೂ ಕೂಡ ಸಾಮರ್ಥ್ಯವಿಲ್ಲ, ಸಹಸ್ರಮುಖ ಉಳ್ಳ ಆದಿಶೇಷನಿಂದಲಾದರೂ ಆ ಮಹಾಮಹಿಮೆಯಂ ವರ್ಣಿಸಲು ಶಕ್ಯವಲ್ಲ, ಆದರೂ ಪ್ರಪತ್ತಿಮಾರ್ಗದಿಂದಲ ಮಹಾವಿಷ್ಣುವನ್ನೈದುವ ಸುಲಭೋಪಾಯ ಉಂಟು, ಅದು ಹೇಗೆಂದರೆ, ಪಾದ್ಮೋತ್ತರಖಂಡದೊಳ್ ಉಮಾಮಹೇಶ್ವರ ಸಂವಾದರೀತ್ಯಾ ಕರ್ಮದೇಹ ಸಂಬಂಧಲಬ್ಧವಾದ ಅಜ್ಞಾನ ತಮಸ್ಸ್ವರೂಪಾತ್ಮಕವಾದ ಸುದರ್ಶನಾದಿ ಭಗವನ್ಮುದ್ರ ಲಾಂಛನಂಗಳಂ ಭುಜದೊಳ್ ಧರಿಸಿ ಮತ್ತಂ ಕ್ಷೀರಸಮುದ್ರ

ನೆಲೆಗೊಂಡಿರುವ ಶ್ವೇತದ್ವೀಪದಿಂದ ಸ್ವೈಚ್ಛೆಯಿಂದಾದ ಗರುಡನು ತಂದು ಶ್ರೀ ರಂಗ ಪನಾದವಾದಿ ಮೊದಲಾದ ಪುಣ್ಯ ಕ್ಷೇತ್ರಂಗಳೊಳಿರಿಸಿ ದಿವ್ಯಗಂಧ ಯುಕ್ತವಾಗಿ ಶಂಖ, ಚಕ್ರ, ಪದ್ಮಾದಿ ಚಿಹ್ನಿತಂಗಳಾಗಿ ಸಕಲೈಶ್ವರ್ಯ ಪ್ರದಂಗಳಾಗಿ ಇರುತಿರ್ಪ ಶುಭವಾದ ಶುದ್ಧ ಸತ್ವನಾದ ಮುಕ್ತಿಸಾ ಧಕವಾದ ಶ್ವೇತಮೃತ್ತಿಕೆಯನ್ನು ಪರಾಶರೋಪನಿಷತ್ಪ್ರಕಾರವಾಗಿ ಸ್ವ ಸಿಂಹಬೀಜ ವಿಷ್ಣುಗಾಯಿತ್ರಿಯಿಂದ ತ್ರಿರಾಲೋಡನವಂ ಮಾಡಿ ಅ ಷ್ಟಾಕ್ಷರದಿಂದ ಅಭಿಮಂತ್ರಿಸಿ ಗುರುಪರಂಪರಾನುಸಂಧಾನ ಸಹಿತ ಲಲಾಟ, ಕುಕ್ಷಿ, ವಕ್ಷಸ್ಸು, ಕಂಠ, ದಕ್ಷಿಣಕುಕ್ಷಿ, ಈ ಭುಜಮೂಲ, ಸ್ಕಂಧ, ವಾಮಕುಕ್ಷಿ, ವಾಮಭುಜ, ವಾಮಸ್ಕಂಧ, ಬೆನ್ನು, ಹೆಕ್ಕತ್ತು, ಶಿರಸ್ಸು ಈ ಸ್ಥಾನಂಗಳೊಳ್ ಕೇಶವಾದಿ ವಾಸುದೇವ ಪರ್ಯಂತ ನಾಮಮಂತ್ರಗಳಿಂದ ಘನಪದ್ಮದಾಕೃತಿಯಾಗಿ ಧಾರಣವಂ ಗೈದು ಶ್ರೀಮಹಾವಿಷ್ಣುಮೂರ್ತಿಗೆ ಅಭಿಷಿಕ್ತವಾದ ಶ್ರೀರೂಪವಾದ ಶ್ರೀ ಚೂರ್ಣವೆಂಬ ಹರಿದ್ರಾಚೂರ್ಣವನ್ನು ಶ್ರೀಂಬೀಜದಿಂದ ಆಲೋಡನವಂ ಗೈದು ಲಕ್ಷ್ಮೀಗಾಯತ್ರಿಯಿಂದ ಅಭಿಮಂತ್ರಿಸಿ ಪ್ರಾಗ್ರೋಕ್ತ ಸ್ಥಾನಂಗಳೊಳ್ ಶ್ರೀಂ ಲಕ್ಷ್ಮ್ಯೈ ಇತ್ಯಾದಿ ಮಂತ್ರಗಳಿಂದ ಶ್ವೇತಮೃತ್ತಿಕಾ ಮಧ್ಯದೊಳ್ ಋಜುವಾಗಿ ಧರಿಸಿದ ಮಹಾತ್ಮ್ಯದಿಂದಲೇ ಸರ್ವರು ಸಮಸ್ತ ಪಾಪಂಗಳಿಂದಲೂ ಸಮಸ್ತ ದುಃಖಗಳಿಂದಲೂ ಬಿಡಲ್ಪಟ್ಟು ಸರ್ವಶ್ರೇಯ ದರ್ಶನಗಳುಳ್ಳವರಾಗಿ ಸಕಲದೇವತೆಗಳಿಂದಲೂ ತಿಳಿಯಲ್ಪಟ್ಟವರಾಗಿ ಸಕಲತೀರ್ಥಗಳಿಂದ ಸ್ನಾತರಾಗಿ ಅಶ್ರೋತ್ರಿಯರಾದರೂ ಶ್ರೋತ್ರಿಯರಾಗಿ ಅನುಪನೀತರಾದರೂ ಉಪನೀತರಾಗಿ ದುಸ್ಸಂಗ ದುಷ್ಪ್ರತಿಗ್ರಹಾದಿಗಳಿಂದಲೂ ಶುದ್ಧರಾಗಿ ಪವಿತ್ರ ಪಾವನರಾಗುವರು, ಇವರೇ ಪರಮೈಕಾಂತಿಗಳೆನಿಸಿಕೊಂಬುವರು, ಇವರ ದರ್ಶನವೇ ಭಗವದ್ದರ್ಶನವು, ಇವರ ಪಾದತೀರ್ಥಂಗಳೇ ಸಕಲ ಪಾಪ ವಿಮೋಚಕವು, ಇವರದರ್ಶನವೇ ಸತ್ಕರ್ಮಾನುಷ್ಠಾನವು, ಇವರ ಸಲ್ಲಾಪವೇ ಪರಮ ತಪಸ್ಸು, ಇವರ ಅಂಗಸಂಗವೇ ಮೋಕ್ಷ, ಇವರ ಪೂಜೆಯು ಭಗವತ್ಪೂಜೆಗಳಿಗಿಂತ ಅಧಿಕವಾಗಿ ಇರುವದು, ಇಂಥಾ ಭಕ್ತರೇ ಪರಮ ಪಾವನರೆಂದು ಶಾಸ್ತ್ರಂಗಳು ಬಹು ಪ್ರಕಾರವಾಗಿ ಘೋಷಿಸುವವು. ಮತ್ತಂ ದ್ವಾರಕೆಯೊಳ್ ಶ್ರೀಕೃಷ್ಣಪ್ರಸಾದ ಲಬ್ಧವಾದ

ಶಂಖ ಚಕ್ರಾದ್ಯನೇಕ ಮುದ್ರೆಗಳುಳ್ಳ ಐಶ್ವರ್ಯ ಪ್ರದವಾದ ದರ್ಶನ ಮಾತ್ರದಿಂದಲೇ ಸಕಲಪಾಪಂಗಳಂ ಪರಿಹರಿಸಿ ನಿಃಶ್ರೇಯಸ್ಸನ್ನುಂ ಕೊಡುವ ಗೋಪೀಚಂದನ ಧಾರಣದಿಂ ವಾಸುದೇವೋಪನಿಷತ್ಪ್ರತಿಪಾದಿತ ತತ್ತನ್ಮಂತ್ರಗಳಿಂದ ಅಭಿಮಂತ್ರಿಸಿ ಭಕ್ತಿಯಿಂದ ಪ್ರೋಕ್ತ ಲಲಾಟಾದಿ ಸ್ಥಾನಗಳೊಳು ಆಯಾಯ ಮಂತ್ರಗಳಿಂದ ಧರಿಸಿ ಶಂಖ, ಚಕ್ರ, ಗದಾ ಪದ್ಮ, ನಾರಾಯಣ ದಶಾಕ್ಷರ ಮುದ್ರೆಯಿಂ ಯಥಾ ಶಾಸ್ತ್ರೋಕ್ತವಾಗಿ ಮುದ್ರಿತನಾಗಿ ನಿರಂತರ ವಿಶುದ್ಧಾಂಗಾರ ಶುಭ್ರವಸನದಿಂದ ಲಾಂಛಿತಂಗಳಾಗಿ ಮಾಡಿ ವೈಷ್ಣವತೇಜಸ್ಸಿನಿಂದ ಭಕ್ತಿಯಿಂದ ಪ್ರಕಾಶಿಸುತ್ತಿರುವ ಶ್ರೀವೈಷ್ಣವಶ್ರೇಷ್ಠ ಸಮೂಹವಂ ಕಂಡು ಭಾಗವತರು ಪೂಜಲಾದವರು ದ್ರಷ್ಟವ್ಯರೂ ಪೂಜ್ಯರೂ ಮಾನ್ಯರು ಇವರು ಇರುವಲ್ಲಿ ಭಗವಂತನೇ ನಿತ್ಯವಾಸನಾಗಿರುವನು, ಇವರ ದರ್ಶನದಿಂದ ಸಕಲ ಪಾಪವೂ ಹೋಗುವದು, ಇವರ ಸ್ಪರ್ಶದಿಂದ ಗಂಗಾದಿ ಸಕಲ ತೀರ್ಥಸ್ನಾನದ ಫಲಂಗಳು ಲಭಿಸುವದು. ಇಂಥಾ ಪೂರ್ವೋಕ್ತ ಪ್ರಕಾರವಾದ ವೈಷ್ಣವ ಲಕ್ಷಣ ಲಕ್ಷಿತರಾದ ಪರಮ ಭಾಗವತರು, ಮತ್ತಂ ಜಗದ್ವ್ಯಾಪಾರವನು ಬಿಟ್ಟವರಾಗಿ ಶೇಷತ್ವ ಪಾರತಂತ್ರ್ಯಗಳಂ ವಹಿಸುತ ತನ್ನ ತನ್ನ ಪುತ್ರ ಗೃಹೋಪಕರಣಾದಿಗಳನ್ನು ಕೂಡ ಶಂಖಚಕ್ರಾದಿ ಲಾಂಛನ ದಾಸ್ಯನಾಮ ಪುಂಡ್ರನಾಮಗಳುಳ್ಳದ್ದಾಗಿ ಮಾಡಿ ವ್ಯವಹರಿಸುತ್ತಾ, ಇನ್ನು ಮೂರು ಪದ ಉಳ್ಳ ಎಂಟು ಅಕ್ಷರ ಉಳ್ಳ ಮಂತ್ರರತ್ನವೆಂಬ ನಾರಾಯಣಾಷ್ಟಾಕ್ಷರ ಮಂತ್ರವನ್ನು ಗುರುಮುಖದಿಂದ ಉಪದೇಶವಂಕೊಂಡು ಸರ್ವದಾ ಧ್ಯಾಯನಾನುಸಂಧಾನ, ಪ್ರಪತ್ತಿ, ಶರಣಾಗತಿ, ಚರಮಶ್ಲೋಕ, ಗುರುಪರಂಪರಾ ದ್ವಯಭೇದ ಮಹಾರ್ಥ ರಹಸ್ಯ ಗ್ರಂಥಾನುಸಂಧಾನಂಗಳಂ ಮಾಡುತ ಸಾಕ್ಷಾದ್ಭಗವದಭಿಮುಖರುಳ್ಳ ಸರ್ವಶ್ರೇಷ್ಠವಾದ ಸರ್ವಕಾಲದಲ್ಲೂ ಧರಿಸಲು ಯೋಗ್ಯವಾಗಿ ಸಮಸ್ತ ಸಂಚಿತ ಪಾಪಂಗಳಂ ಪರಿಹರಿಸಿ ಆಗಾಮಿಯಾದ ಅಜ್ಞಾನ ಮೊದಲಾದ ದೋಷಂಗಳಿಗೆ ಆಸ್ಪದಂಗಳಾಗದೆ ನರಕಾದಿ ಭಯ ಛೇದಕಂಗಳಾಗಿ ಒಂದೊಂದು ಮಣಿಗೆ ದೇವಸಹಸ್ರವರ್ಷ ಬ್ರಹ್ಮಾದಿಲೋಕಪ್ರಾಪ್ತಿಯಂ ಕೊಡುವ ಅಷ್ಟೋತ್ತರಸಹಸ್ರ ಅಷ್ಟೋತ್ತರಶತ ದ್ವಾತ್ರಿಂಶತ್ಸಂಖ್ಯೆಯಿಂದಲಾದರೂ ಕೂಡಿ ವರ್ತುಳವಾಗಿ ಗುರು

ಪ್ರಸಾದ ಲಬ್ಧವಾದ ತುಲಸೀಮಣಿ ಪದ್ಮಾಕ್ಷಂಗಳ ಮಾಲಿಕೆಗಳಂ ಮುತ್ತು ದೇವತಾಪ್ರಸಾದವಾದ ಶ್ರೀಪವಿತ್ರಂಗಳಂ ಧರಿಸಿ ಸ್ವಯಂವ್ಯಕ್ತಂಗಳಾಗಿ ಇರುವ ಸಾಳಗ್ರಾಮಲಕ್ಷಣ ತುಲಸೀಮಾಹಾತ್ಮ್ಯವಂ ತಿಳಿದು ಅಭಿಮನ ಉಪಾದಾನ ಇಜ್ಯಾ ಅಧ್ಯಯನ ಯೋಗಗಳೆಂಬ ಪಂಚಕಾಲ ಪರಾಗಯಣನಾಗಿ ತತ್ತತ್ಕರ್ಮಗಳನ್ನು ಶಾಸ್ತ್ರೀಯವಾಗಿ ತತ್ತತ್ಕಾಲದೊಳ್ ನೆರವೇರಿಸಿ ಇಜ್ಯೆಯೆಂಬ ಪೂಜಾಕಾಲದೊಳ್ ಮಂತ್ರಾಸನ ಸ್ನಾನಾಸನ ಅಲಂಕಾರಾಸನ, ಭೋಜ್ಯಾಸನ, ಪರ್ಯಂಕಾಸನ, ಪುನರ್ಮಂತ್ರಾಸನ, ಯಾನಾಸನಗಳೆಂಬ ಸಪ್ತಾಸನಗಳಿಂದಾ ದ್ವಾತ್ರಿಂಶದುಪಚಾರ ಷೋಡಶೋಪಚಾರಾತ್ಮಕವಾಗಲೀಎಂದು ರೀತಿಯಿಂದ ಶೋಷಣ ದಾಹನ ಪ್ಲಾವನಾದಿಗಳಂ ಶಂಖ, ಚಕ್ರ, ಸುರಭಿ ವರಾಹ ಜ್ಞಾನ ತತ್ವ ಗದಾ ಪದ್ಮ ಮೊದಲಾದ ಮುದ್ರೆಗಳಿಂದಲೂ ವ್ಯಾಪಕ ನ್ಯಾಸಾದಿ ಮೂಲಮಂತ್ರಗಳಿಂ ತತ್ತನ್ಮೂರ್ತಿ ಮಂತ್ರಗಳಿಂದಲುಂ, ಪಂಚೋಪನಿಷನ್ಮಯವಾದ ಭಗವದ್ವಿಗ್ರಹನ್ಯಾಸಾದಿ ಧ್ಯಾನಾವಾಹನ, ಆಸನ, ಅರ್ಘ್ಯ, ಪಾದ್ಯ, ಆಚಮನೀಯ, ಮಧುಪರ್ಕ, ಸ್ನಾನ, ಶುದ್ಧೋದಕಸಮರ್ಪಣ, ದಂತಧಾವನ, ಜಿಹ್ವಾನಿರ್ಲೇಹನ, ಗಂಡೂಷ, ಮುಖಮಜ್ಜನ, ಸ್ನಾನಾಚಮನ, ವಸ್ತ್ರೋಪಚಾರ, ದಿವ್ಯವಸ್ತ್ರಧಾರಣ, ಯಜ್ಞೋಪವೀತ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ, ಉತ್ತರನೀರಾಜನ, ಚತುರ್ವೇದ, ಇತಿಹಾಸ, ಪುರಾಣ, ಭಾಗವತ, ಭಾಷ್ಯ, ಭಗವದ್ಗೀತಾದಿ ಪಠನ, ಮಂತ್ರಪುಷ್ಪ, ಪರ್ಯಂಕ, ಛತ್ರ, ಚಾಮರ, ವ್ಯಜನ, ದರ್ಪಣ, ನೃತ್ಯ, ಗೀತವಾದ್ಯ, ನಮಸ್ಕಾರ ಸ್ತೋತ್ರ ಮಂತ್ರ, ಉದ್ವಾಸನ, ಅಪಚಾರಕ್ಷಮಾಪಣ, ತೀರ್ಥ ಪ್ರಸಾದ ಸ್ವೀಕಾರ ಕ್ರಮದಿಂದ ಭಾಷ್ಯಕಾರಾದಿ ಕ್ರಮೋಕ್ತ ನಿಬಂಧನಾನುಸಾರವಾಗಿ ನಿಷ್ಕಾಮನಾಗಿ ಶುದ್ಧ ಮುಮುಕ್ಷುವಾಗಿ ಅರ್ಥಪಂಚಕಜ್ಞಾನಿಯಾಗಿ ಭಗವದಾರಾಧನಂ ಗೈಯುತ ಬ್ರಹ್ಮನಿಷ್ಠನಾಗಿ ಇರುವದು ಸುಲಭೋಪಾಯವಾಗಿರುವದು, ಈಭಗವದಾರಾಧನವೆ ವ್ರತಂಗಳಿಗೆಲ್ಲಾ ಉತ್ತಮವ್ರತವು, ಸತ್ಕರ್ಮಂಗಳೊಳ್ ಶ್ರೇಷ್ಠಕರ್ಮವು, ತಪಸ್ಸಿನವಳಿಗಾಗಿ ಮಹಾತಪಸ್ಸು, ಸೇವೆಯೊಳ್ ಇದುಅಂತರಂಗ ಸೇವೆಯು, ಸಾಧನ ಬುದ್ಧಿಯಂ ಬಿಟ್ಟು ಸಾಧನದೊಳಗಾಗಿ ಮುಖ್ಯಸಾಧ

ನವು, ಯಜ್ಞಾದಿ ಸಕಲ ಧರ್ಮಂಗಳೊಳುತ್ತಮೋತ್ತಮಧರ್ಮವಾಗಿ ಕೈಂಕರ್ಯ ಪುರುಷಾರ್ಥ ಪ್ರದವಾಗಿಯೂ ಇರುವವು. ಮತ್ತಂ ದೇಶಕಾಲ ಕ್ರಮ ಭೇದದಿಂದ ಉತ್ತರೋತ್ತರೋತ್ಕರ್ಷಾತಿಶಯ ಉಳ್ಳದ್ದಾಗಿಯೂ ಇರುವವು, ಎಂದು ವಿಷ್ಣುಚಿತ್ತರಿಂದ ನಿರೂಪಿಸಲ್ಪಟ್ಟು ಇರುವ ಧರ್ಮ ವಚನವಂ ಕೇಳಿದ ಸುಗಂಧರಾಯನು ಹರ್ಷಿತನಾಗಿ ಆ ವಿಷ್ಣುಚಿತ್ತರಂ ಕುರಿತು ಕೈ ಮುಗಿದು ಎಲೈ ಮಹಾಪುರುಷನೇ! ನಿನ್ನಿಂದ ನಿರೂಪಿಸಲ್ಪಟ್ಟ ಸೂಕ್ಷ್ಮ ಧರ್ಮವುಳ್ಳ ಸುಲಭೋಪಾಯಂಗಳು ಚೆನ್ನಾಗಿ ತಿಳಿಯಲ್ಪಟ್ಟವು. ಇನ್ನು ಸ್ವಯಂವ್ಯಕ್ತಕ್ಕೆ ಸೇರಿದ ಸಾಳಗ್ರಾಮ ಲಕ್ಷಣವನ್ನು ಅನುಗ್ರಹಿಸಬೇಕೆಂದು ನಮಸ್ಕಾರ ಪುರಸ್ಸರವಾಗಿ ವಿಜ್ಞಾಪನಂಗೈವ ಸುಗಂಧರಾಯನ ವಚನವಂಕೇಳಿ ವಿಷ್ಣುಚಿತ್ತರು ನಿರೂಪಿಸಿರದೆಂತೆನೆ

ಕೇಳೈ ವರ್ಧಿಷ್ಣುವಾದ ಸುಗಂಧರಾಯನೆ! ಪೂರ್ವದೊಳೊಂದಾನೊಂದು ಕಾಲದಲ್ಲಿ ಶ್ರೀಮಹಾವಿಷ್ಣುವು ಮುಕ್ತಿನಾಥನಿಗೆ ಆಶ್ರಯವಾದ ಒಂದು ಪರ್ವತ ಶ್ರೇಷ್ಠದ ಸಮೀಪಕ್ಕೆ ಬಂದು ಅಲ್ಲಿ ಗಂಡೂಷಾರ್ಥವಾಗಿ ಪಾತಾಳಗಂಗೆಯಂ ತನ್ನ ಕೈಯಿಂದ ತೆಗೆದುಕೊಂಡು ವದನದೊಳ್ತುಂಬಿ ಉಗಿಯಲು, ಆ ಜಲವೇ ಗಂಡಕೀನದಿಯಾಗಿ ಹರಿಯಲು, ವದನದೊಳಿರುವ ಆ ಜಲಕಣಂಗಳೇ ವಜ್ರಕೀಟಂಗಳಾಗಿ ಪೊರಮಡಲು, ಆ ಪರ್ವತದ ಶಿಲೆಗಳು ಜಲಜವಾಗಿಯೂ ಸ್ಥಲಜಂಗಳಾಗಿಯು ವಜ್ರಕೀಟಂಗಳಿಂದ ಚಕ್ರಾದಿಯುತವಾಗಿ ಮಾಡಲ್ಪಟ್ಟು ಇರುವ ಸಾಳಗ್ರಾಮಗಳಾಗಿ ಮಾನಭೇದ, ವದನಭೇದ, ಕ್ಷೇತ್ರಭೇದ, ಮೂರ್ತಿಭೇದ, ಅವಾಂತರ ಭೇದಂಗಳುಳ್ಳದ್ದಾಗಿಯೂ ಇರುವವು, ಅದರಲ್ಲಿ ಜಲಜಗಳು ಯೆಂಬವು ಕೋಮಲಂಗಳಾಗಿ ನಯವಾಗಿ ಸ್ವಲ್ಪ ಶೀತಲವಾಗಿ ಇರುವವು, ಸ್ಥಲಜಂಗಳೆಂಬವು ಕಠಿಣವಾಗಿ ತರಿಯಾಗಿ ಶೀತರಹಿತವಾಗಿ ಇರುವವು, ಸಾಳಗ್ರಾಮಗಳು ಶ್ವೇತ, ಶ್ಯಾಮ, ಕೃಷ್ಣ, ನೀಲ, ಎಳ್ಳೆಗಸೇಹೂವಿನ ವರ್ಣ, ಹೊಂಬಣ್ಣ, ಪೀತವರ್ಣ, ಅರಿಸಿನದಬಣ್ಣ, ಗೌರ, ಕೆಂಚಿನಬಣ್ಣ, ರಕ್ತವರ್ಣ, ಅತಿರಕ್ತವರ್ಣ, ಕಪಿಲವರ್ಣ, ಲೋಹಿತವರ್ಣ, ಜೇನುತುಪ್ಪದವರ್ಣ, ಕರ್ಪೂರವರ್ಣ, ಬಹುವರ್ಣ, ಕಳಂಕ ಧೂಮ್ರವರ್ಣಂಗಳೆಂಬ ಈ ವರ್ಣಂಗಳುಳ್ಳದ್ದಾಗಿ ಇರುವದು. ವಜ್ರ ದುಂಬೆಗಳ ಆಧಿಕ್ಯಾನುಸಾ

ರವಾಗಿ ಪದನಾಧಿಕ್ಯ ಚಕ್ರಾಧಿಕ್ಯಂಗಳು ಉಳ್ಳವ್ದಾಗಿ ಇರುವವು, ಅವ ರೊಳ್ ವಾಸುದೇವ ಕ್ಷೇತ್ರವು ಬಿಳುಪಾಗಿರುವದು. ಶ್ರೀಮನ್ನಾರಾಯ ಣ ಕ್ಷೇತ್ರವು ಹಳದಿಯೊಡನೆ ಕೂಡಿದ ಗೌರವರ್ಣವಾಗಿರುವದು. ಹಿರಣ್ಯ ಗರ್ಭ ಕ್ಷೇತ್ರವು ಸುವರ್ಣಮಯವಾಗಿರುವದು. ಶ್ರೀಧರಕ್ಷೇತ್ರವು ಹಳದಿ ವರ್ಣವಾಗಿರುವದು, ನಾರಾಯಣಕ್ಷೇತ್ರವು ನೀಲಮೇಘಶ್ಯಾಮ ವಾಗಿರು ವದು. ವಿಷ್ಣುಕ್ಷೇತ್ರವು ಕೃಷ್ಣವರ್ಣ ವಾಗಿರುವದು.ದಾಮೋದರಕ್ಷೇತ್ರವು ಶುದ್ಧನೀಲವರ್ಣವಾಗಿರುವದು. ಅನಿರುದ್ಧ ಕ್ಷೇತ್ರವು ಸ್ವಲ್ಪ ನೀಲವಾಗಿರು ವದು.ಮಾಧವ ಕ್ಷೇತ್ರವು ಮಧುವರ್ಣ ವಾಗಿರುವದು.ಸಂಕರ್ಷಣಕ್ಷೇತ್ರವು ಕೆಂಪು ವರ್ಣವಾಗಿರುವದು. ನೃಸಿಂಹಕ್ಷೇತ್ರವು ಕಪಿಲವರ್ಣವಾಗಿರುವದು. ಅನಂತಕ್ಷೇತ್ರವು ಬಹುವರ್ಣವಾಗಿರುವದು. ವಾಮನಕ್ಷೇತ್ರವು ಹೊಂಬಣ್ಣ ಮಿಶ್ರವಾಗಿರುವದು. ಈ ಪ್ರಕಾರದಲ್ಲಿ ಕ್ಷೇತ್ರಂಗಳನ್ನು ಈವರ್ಣಭೇದಗಳಿಂ ದ ತಿಳಿಯತಕ್ಕದ್ದು; ವರ್ಣಂಗಳಿಗೆ ಫಲವೇನಂದರೆ-ಶ್ವೇತವರ್ಣ ಮೋಕ್ಷ ಪ್ರದ, ನೀಲಲಕ್ಷ್ಮಿಪ್ರದ,ಶ್ಯಾಮವರ್ಣ ಪುಷ್ಟಿಪ್ರದ,ಕೃಷ್ಣವರ್ಣ ಕೀರ್ತಿ ಪ್ರದ,ಹಳದೀವರ್ಣಧನಪ್ರದ,ಹೇಮವರ್ಣರತ್ನಪ್ರದ, ಪಾಂಡರ ಕೀರ್ತಿಪ್ರ ದ,ರಕ್ತವರ್ಣರಾಜ್ಯಪ್ರದ, ಮಿಶ್ರವರ್ಣಂಗಳೊಳ್ ಮಿಶ್ರಫಲಂಗಳಾಗು ವವು.ಇನ್ನು ಮೂರ್ತಿಗಳ ಲಕ್ಷಣಗಳಿಗೆ ಸೂಚಕಂಗಳೇನಂದರೆ;ಚಕ್ರ, ಶಂ ಖ ಗದಾ, ಪದ್ಮ, ವನಮಾಲೆ, ಚಾಪ, ತೂಣೀರ, ಶ್ರೀವತ್ಸ,ಕೌಸ್ತುಭ,ಹಿರ ಣ್ಯರೇಖೆ, ರಜತರೇಖೆ, ಸುವರ್ಣಬಿಂದು, ರಜತಬಿಂದುಗಳು, ಸ್ಥಿರಾಸ ನ, ಚಲಾಸನ, ತ್ರಿಕೋಣ, ವರ್ತುಲ, ದೀರ್ಘ, ಹ್ರಸ್ವ, ಉನ್ನತ, ಪದ ನಸಂಖ್ಯೆ, ಲಘುತ್ವ, ಭಾರ, ಶೈತ್ಯ, ಉಷ್ಣತ್ವ, ಮೊದಲಾದ ಚಿಹ್ನೆಗಳ ಭೇದಂಗಳಿಂದ ಮುಂದೆ ಹೇಳಲ್ಪಡುವ ಮೂರ್ತಿಗಳಂ ತಿಳಿಯಬೇಕು, ಈ ಸಾಲಿಗ್ರಾಮಲಕ್ಷಣ ಚಿಹ್ನೆಗಳಲ್ಲಿ:ಕರಾಳ.ವಿಕರಾಳ. ತಿರ್ಯಕ್ಚಕ್ರ ಅಧೊ ಮುಖ ಪೃಥುಚಕ್ರ, ಊರ್ಧ್ವಚಕ್ರ, ಕೋಣವಕ್ತ್ರ, ಬದ್ಧಚಕ್ರ, ಅಚಕ್ರ, ವಕ್ರಚಕ್ರ, ಭಿನ್ನಚಕ್ರ, ಭುಗ್ನಚಕ್ರ, ವಿಷಮಚಕ್ರ, ದಗ್ಧ ವರ್ಣ, ಸ್ಫುಟಿತ, ಭಗ್ನೋಷ್ಠ, ಅಂತಸ್ಸ್ಫುಟಿತ, ಭುಗ್ನ,ದರ್ದುರ, ನಿಮ್ನ ಮಸ್ತಕ, ಅತಿಸ್ಥೂಲ, ಅತಿಹ್ರಸ್ವ, ಅಂತಸ್ಸಲಿಲ, ವಿಕೋಣ, ಬಹುರೇ ಖಾಢ್ಯ, ಚಲಾಸನ, ಉನ್ನತ, ಉಷ್ಣಸ್ಪರ್ಶ, ದಗ್ಧಪೃಷ್ಠ, ರೂಕ್ಷ, ಛಿ

ಪ್ರಾಸಸ್ವಬಹುಳವು, ಅಸ್ಪಷ್ಟಲಾಂಛನಗಳೆಂಬ ಇಂಥಾದೋಷಂಗಳುಳ್ಳ ಮೂರ್ತಿಗಳು ವರ್ಜ್ಯಂಗಳಾಗಿರುವವು; ಇನ್ನು ಮತ್ಸ್ಯಾದಿ ದಶಮೂರ್ತಿಗಳು, ಕೇಶವಾದಿ ಚತುರ್ವಿಶಂತಿ ಮೂರ್ತಿಗಳು, ಹಯಗ್ರೀವ, ಕಪಿಲ, ಯಜ್ಞದತ್ತ, ಶಿಂಶುಮಾರ, ಮುಕುಂದ, ಹಂಸ, ಲಕ್ಷ್ಮೀಪತಿ, ದೇವದೇವ, ವಟಪತ್ರಶಾಯಿ, ವಿಶ್ವಂಭರ, ವಿಶ್ವರೂಪ, ಗರುಡಧ್ವಜ, ಪೀತಾಂಬರಧರ, ಸತ್ಯವರಶ್ರವ, ಅಮೃತಾಂಶು, ಚಕ್ರಪಾಣಿ, ಮಾಯಾನಾರಾಯಣ, ಬಹುರೂಪಿ, ಪುಂಡರೀಕ, ಮಾಯಾ ನಾರಾಯಣ, ಪಾರಿಜಾತ, ಸುದರ್ಶನ, ಜಗಸ್ಯೋನಿ, ಅನಂತ, ಹರಿಹರ, ಹರಿಬ್ರಹ್ಮ ಶಂಕರನಾರಾಯಣ, ಶಂಕರಬ್ರಹ್ಮ, ಸ್ವಯಂಭು, ಪರಮೇಷ್ಠಿ, ಪಿತಾಮಹ, ಚತುರ್ಮುಖ, ಭೂಗರ್ಭ, ಗರುಡ, ಶೇಷ, ಬಲರಾಮ, ಸೀರಪಾಣಿ, ಪ್ರಲಂಬಘ್ನ, ಶಿವನಾಭ, ಅಘೋರ, ಸದ್ಯೋಜಾತ, ವಾಮದೇವ ತತ್ಪುರುಷ, ಈಶಾನ, ಸೂರ್ಯ, ಹೈಹಯ, ದತ್ತಾತ್ರೇಯ, ಕ್ಷೀರಾಬ್ಧಿಶಯನ, ಲಕ್ಷ್ಮೀನಾರಾಯಣ, ಎಂಬ ಅಶೀತಿ ಮೂರ್ತಿಭೇದಂಗಳುಂಟು. ಈಗ ಪೇಳಿದ ಮೂರ್ತಿಗಳೊಳ್ ಒಂದೊಂದರಲ್ಲಿ ಅನೇಕಭೇದಂಗಳುಂಟು, ಆಯಾಯಾಮೂರ್ತಿಗಳಿಗೆ ಮುಖ್ಯಗಳಾಗಿರುವಲಕ್ಷಣಕ್ಕೆ ಅಧಿಕವಾದರೇಖಾದಿಗಳಿಂ ತಿಳಿದು ಆ ಮೂರ್ತಿಗಳೊಳಗೆ ಅವಾಂತರ ಭೇದವುಳ್ಳ ಮೂರ್ತಿಗಳಂಊಹಿಸುವದು, ದೀರ್ಘವಾಗಿ ನಯವಾಗಿ ದ್ವಾರಮಧ್ಯದಲ್ಲಿ ಎರಡು ಚಕ್ರಗಳು ಪುಚ್ಛದಲ್ಲಿ ಪೊಂದು ಚಕ್ರವು ಪಾರ್ಶ್ವದಲ್ಲಿ ಮತ್ಸ್ಯಾಕಾರವಾಗಿ ಕುಂಚಿನವರ್ಣವಾಗಿ ಇರುವದು ಮತ್ಸ್ಯಮೂರ್ತಿ ಯೆನಿಸಿಕೊಂಡು ಸಕಲ ಭಾಗ್ಯಪ್ರದವಾಗಿ ಇರುವದು, ಬೆನ್ನು ಉಬ್ಬಾಗಿ ಶ್ವೇತಖುರವು ಮುಖದಲ್ಲಿ ಎರಡು ಚಕ್ರವು ಬೆನ್ನು ಮೇಲೆ ಮೂರುಬಿಂದುವು ಕೂರ್ಮಾಕಾರವಾಗಿಯು ಇರುವದು. ಕೂರ್ಮಮೂರ್ತಿಯೆನ್ನುವರು. ಮತ್ತು ದೀರ್ಘವಾಗಿ ದಕ್ಷಿಣ ಭಾಗದಲ್ಲಿ ಶಂಖರೇಖೆ ವಾಮಭಾಗದಲ್ಲಿ ಚಕ್ರರೇಖೆ ಕುಂಡಲ ರೇಖಾತ್ರಯಗಳಿಂದ ಯುಕ್ತವಾಗಿ ದುಂಡಾಗಿ ಸ್ವರ್ಣಸ್ಪೃಷ್ಟಿ ಉಳ್ಳದ್ದಾಗಿ ಇರುವದು. ಇದೂ ಕೂರ್ಮಮೂರ್ತಿಯು ಚಕ್ರದ ಉಭಯ ಪಾರ್ಶ್ವದಲ್ಲಿಯು ಸೂಕ್ಷ್ಮಾಕಾರವಾಗಿ ದೀರ್ಘದ್ವಾರ ಉಳ್ಳದ್ದಾಗಿ ನಾಭಿ ಚಕ್ರಯುತವಾಗಿ ಇರುವದು, ಇದೂವೊಂದು ಕೂರ್ಮಮೂರ್ತಿಯೆನಿಸಿಕೊಂ

ಬುವದು. ಪೂಜಿಸುವವರಿಗೆ ಸಂತತಿವೃದ್ಧಿಯಾಗುವದು. ಯೆಳ್ಳಗನೇಹೂವಿನಂತೆಯೂ, ಕನ್ನೈದಿಲೆಯಂತೆಯೂ, ವರ್ಣ ಉಳ್ಳದ್ದಾಗಿ ದೀರ್ಘಾಕಾರ ದೀರ್ಘದ್ವಾರದಲ್ಲಿ ಯೆರಡು ಚಕ್ರಸಹಿತವಾಗಿ ಚಿನ್ನ ಉಬ್ಬಾಗಿ ಸ್ವರ್ಣರೇಖೆ ಉಳ್ಳದ್ದು ವರಾಹ ಮೂರ್ತಿ ಎನಿಶಿಕೊಂಡು ಭಕ್ತರಿಗೆ ರಾಜ್ಯಪ್ರದವಾಗಿರುವದು, ಈ ಮೂರ್ತಿಯೇ ವನಮಾಲಾಯುತವಾದರೆ ಲಕ್ಷ್ಮೀವರಾಹವೆನಿಶಿ ಕೊಳುತ ಸಕಲೈಶ್ವರ್ಯ ಪ್ರದವಾಗುವದು. ಇದೇ ಅಂಕುಶಾಕಾರವಾದ ವದನ ಉಳ್ಳದ್ದಾಗಿ ಭೂಮಿಯಂ ನೋಡುತ್ತಿರಲು ಭೂವರಾಹವೆನಿಶಿ ಭೂಪ್ರದವಾಗಿ ಇರುವದು, ಬೃಹತ್ತಾದ ಎರಡು ಚಕ್ರ ಉಳ್ಳದ್ದಾಗಿ ವಾಮಚಕ್ರದಲ್ಲಿ ಕೃಷ್ಣಬಿಂದುಸಹಿತ ವದನವಿಸ್ತಾರವಾಗಿ ಸ್ಥಿರಾಸನವಾಗಿ ಇರುವದು ನೃಸಿಂಹ ಮೂರ್ತಿಯನಿಶಿಕೊಂಬುವದು. ಇದರಲ್ಲಿ ಲಕ್ಷ್ಮೀನೃಸಿಂಹ, ಕಾಪಿಲನೃಸಿಂಹ, ವಿದಾರಣನೃಸಿಂಹ, ಪಾತಾಳನೃಸಿಂಹ, ಕುಕ್ಷಿನೃಸಿಂಹ, ಛತ್ರನೃಸಿಂಹ, ವಿದ್ಯುಜ್ಜಿಹ್ವ ನೃಸಿಂಹ, ಮೊದಲಾದ ನಾನಾಭೇದಗಳುಂಟು; ಅಭೀಷ್ಟವನ್ನು ಕೊಡುವವು, ಅತಿ ಹ್ರಸ್ವವಾಗಿ ವರ್ತುಲಾಕಾರದಿಂದ ಅತಸೀಪುಷ್ಪ ಸಮಾನವಾಗಿ ಮುಖದೊಳೆರಡು ಸಮಚಕ್ರ ಉಳ್ಳದ್ದಾಗಿ ಇರುವದು. ವಾಮನ ಮೂರ್ತಿಯು ಇದು ಸಕಲ ಭಾಗ್ಯಪ್ರದವಾಗುವದು. ಈ ಮೂರ್ತಿಗೆ ಎರಡು ಮೂರು ಬಿಂದು ಮುಖದ ಬಳೀಲಿ ಇದ್ದರೆ ದಧಿವಾಮನಮೂರ್ತಿ ಆಗುವದು; ಇನ್ನು ಇವರಲ್ಲಿ ಮಹಾವಾಮನಮೂರ್ತಿ ಮೊದಲಾದ ಅನೇಕ ಭೇದಂಗಳು ಉಂಟು, ಸ್ವಲ್ಪಬಿಳುಪಾಗಿ ಕಪ್ಪಾದ ಕೊಡಲಿಸಹಿತವಾಗಿ ದೀರ್ಘವಾಗಿ ಪಾರ್ಶ್ವಗಳಲ್ಲಿ ಭಿತ್ತಿ ಚಕ್ರ ಸಹಿತವಾಗಿ ರೇಖಾ ದಂಷ್ಟ್ರಯುತವಾಗಿಯಿದ್ದರೆ ಜಾಮದಗ್ನ್ಯಮೂರ್ತಿಯನಿಶಿಕೊಂಬುವದು. ಧನುರ್ಬಾಣ ಬತ್ತಳಿಕೆಗಳಿಂದಲು ಕುಂಡಲ ಮಾಲಿಕೆ ಕೇಸರ ಉಳ್ಳದ್ದಾಗಿ ಸಮಚಕ್ರವಿದ್ದರೆ ವೀರರಾಮಮೂರ್ತಿ, ಇದೆಮೂರ್ತಿಗೆ ಮೂರುಚಕ್ರವಿದ್ದರೆ ಶೀತಾರಾಮವೆನಿಶಿ ಕೊಂಬುವದು,ಇದೇಮೂರ್ತಿಗೆ ಎರಡುವದನ ನಾಲ್ಕುಚಕ್ರಗಳಿದ್ದು ದೀರ್ಘಾಕಾರದ ಕೃಷ್ಣವರ್ಣವಾಗಿ ಇದ್ದರೆ ಚತುಶ್ಚಕ್ರ ಶೀತಾರಾಮನೆನಿಶಿಕೊಂಡು ಬಹು ಧನಪ್ರದವಾಗಿ ಇರುವದು. ಮೂರುವದನ ಆರುಚಕ್ರ ಧನುರ್ಬಾಣ ತೂಣೀರಯುಕ್ತವಾದರೆ ಷಟ್ಚಕ್ರ ಸೀತಾರಾಮ

ಮೂರ್ತಿ ಆಗುವದು. ಇನ್ನು ವಿಜಯರಾಮ, ಪಟ್ಟರಾಮ, ಬಾಲರಾಮ, ಕೋದಂಡರಾಮ, ದಶರಥರಾಮ, ಏಕಚಕ್ರರಾಮ, ಪಟ್ಟಾಭಿರಾಮ ಮೊದಲಾದ ಭೇದಗಳುಂಟು. ಸ್ಫಟಿಕವರ್ಣವಾಗಿ ಹಲ ಮುಸಲ ರೇಖೆಸಹಿತ ಮಧುಬಿಂದು ಯುಕ್ತನಾಗಿ ಒಂದು ಕಡೆಯಲ್ಲಿ ಎರಡು ಚಕ್ರವಿದ್ದು ಮತ್ತೊಂದು ಕಡೆಯಲ್ಲಿ ಪುಷ್ಪವಿದ್ದರೆ ಬಲರಾಮಮೂರ್ತಿಯೆನ್ನಿಸಿಕೊಂಬುವದು. ತೂಣೀರಸಹಿತ ಮತ್ಸ್ಯಾಕಾರವಾಗಿ ಎರಡು ಚಾಪ ನಾನಾಯುಧಧ್ವಜೋಪೇತವಾಗಿ ಇದ್ದರೆ ಶ್ರೀರಾಮ ಪಂಜರವೆನಿಸಿಕೊಂಬುವದು. ಶೂರರಾದ ಕ್ಷತ್ರಿಯರಿಗೆ ಯೋಗ್ಯವಾಗುವದು, ಸರ್ವತ್ರ ಜಯಪ್ರದವಾಗಿರುವದು, ಕೃಷ್ಣವರ್ಣವಾಗಿ ವರ್ತುಲವಾಗಿ ಚಕ್ರರಹಿತವಾಗಿ ವ್ಯಕ್ತವದನವಾಗಿ ಇರುವದು ಶ್ರೀರಾಮ ಬಾಣವೆನಿಸಿಕೊಂಬುವದು. ಶತ್ರುಹರ, ವರ್ತುಲ ಕೃಷ್ಣವರ್ಣ ಸ್ವಲ್ಪದ್ವಾರ ಯುಕ್ತವಾಗಿ ಬತ್ತಳಿಕೆ ಆಕಾರವಾಗಿ ಇರುವದು ರಾಮತೂಣೀರವೆನಿಸಿ ಕೊಂಬುವದು. ಸಕಲಜಯಹರ. ಈ ಬಾಣತೂಣೀರಗಳೆರಡು ಮೂರ್ತಿಯು ಬಹುಶೂರರೇ ಪೂಜಿಸಬೇಕಲ್ಲದೆ ಸರ್ವಸಾಧಾರಣರಿಗೆ ಸಲ್ಲದು, ಪೀತವರ್ಣವಾಗಿ ಕೃಶತನುವಾಗಿ ಭಿತ್ತಿಪಾರ್ಶ್ವದೊಳೆರಡುಚಕ್ರ, ವಸ್ತ್ರಸಮಾಸನಾಭಿಯುಕ್ತವಾಗಿ ಗರ್ಭಾಕಾರವಾಗಿ ಸ್ಫುಟವಾದ ವೇಣುದಂಡೋಪಶೋಭಿತವಾಗಿರುವದು ಶ್ರೀಕೃಷ್ಣಮೂರ್ತಿಯೆನಿಸುವದು; ಇವರಲ್ಲಿ ಮದನಗೋಪಾಲ, ಸಂತಾನಗೋಪಾಲ, ಗೋವರ್ಧನ, ಕಾಳಿಂಗಮರ್ದನ, ಸ್ಯಮಂತಕಹರ, ಕಂಸಮರ್ದನ, ಲಕ್ಷ್ಮೀಗೋಪಾಲ ಇಂಬ ಬಹುಭೇದಂಗಳುಂಟು, ಸ್ತ್ರೀಪುತ್ರಸೌಭಾಗ್ಯಪ್ರದ ಇಂದ್ರನೀಲವರ್ಣವಾಗಿ, ಸ್ಫುಟವಾಗಿ, ವನಮಾಲಾ ಸಮೇತವಾಗಿ, ಅಂಕುಶಾಕಾರ ವದನ ಪೃಷ್ಠವಾಗಿ, ಅತಿರಕ್ತಸೂಕ್ಷ್ಮರೇಖಾಢ್ಯವಾಗಿ, ಪೃಷ್ಠ ಚಕ್ರ, ಸ್ಥಿರಾಸನ, ಖಡ್ಗರೇಖಾ, ಸಮೇತವಾಗಿ ಇರುವದು ಕಲ್ಕಿಮೂರ್ತಿ, ಇದು ಸರ್ವಶುಭಪ್ರದವಾಗಿರುವದು. ಸುವರ್ಣ ರಜತಬಿಂದು ಯುಕ್ತವಾಗಿ ಸೂಕ್ಷ್ಮದ್ವಿಚಕ್ರ ವನಮಾಲಾದ್ಯಯು ಯುಕ್ತವಾಗಿ ಚತುಷ್ಕೋಣ ಶ್ಯಾಮವರ್ಣಯುಕ್ತವಾಗಿ ಇರುವದು ಕೇಶವಮೂರ್ತಿ ಸೌಭಾಗ್ಯಪ್ರದ. ಶ್ಯಾಮವರ್ಣವಾಗಿ ನಾಭಿಯಲ್ಲಿ ಚಕ್ರ, ದೀರ್ಘರೇಖಾತ್ರಯ, ದಕ್ಷಿಣದಲ್ಲಿ ರಂಧ್ರ, ಪುಸ್ತಕಾಕಾರ, ಅಂಕುಶರೇಖಾಸಹಿತವಾದ ಒಂದು ಚಕ್ರಸಹಿತವಾಗಿ ಇ

ರುವದು ನಾರಾಯಣಮೂರ್ತಿ ಇಷ್ಟಾರ್ಥಪ್ರದ. ಇದೇಮೂರ್ತಿ ಒಂದೆರಡು ಮೂರು ನಾಲ್ಕು ಚಕ್ರಭೇದದಿಂದ ಲಕ್ಷ್ಮೀನಾರಾಯಣ ಮೊದಲಾದ ಭೇದವಾಗಿರುವದು ಇದು ಬಹು ಸಾಮ್ರಾಜ್ಯಪ್ರದ. ಲಕ್ಷ್ಮೀನಾರಾಯಣ ಮೂರ್ತಿಯಲ್ಲಿ ಬಹುಭೇದವುಂಟು, ಅಷ್ಟು ಬಗೆಯೂ ಹೇಳ್ವುದು. ಈ ಲಕ್ಷ್ಮೀನಾರಾಯಣ ಮೂರ್ತಿ ಇರುವ ಬಳಿಯಲ್ಲಿ ರಾಜ್ಯವಾಗಲೀ ಅಪದಸಮಾನ ಸಂಪತ್ತಾಗಲೀ ಇರುವದು. ಮೇಘವರ್ಣದಿಂಕೂಡಿ ನಾಲ್ಕು ಚಕ್ರ ಸಹಿತವಾಗಿ ಸಮವಾಗಿ ಸೂಕ್ಷ್ಮವದನ ಉಳ್ಳದ್ದು ಮಾಧವಮೂರ್ತಿ ಮೋಕ್ಷಪ್ರದ ಅತಿಸೂಕ್ಷ್ಮವಲ್ಲದ ಕೃಷ್ಣವರ್ಣದಿಂ ಕೂಡಿದವದನದೋಳ್ ದತ್ತ ಚಕ್ರ ಉಳ್ಳದ್ದು ಗೋವಿಂದಮೂರ್ತಿ ಸರ್ವಾಭೀಷ್ಟಪ್ರದ. ಪಾದಚಕ್ರ ಉಳ್ಳದ್ದಾಗಿ ಬೃಹದ್ವದನ ಉನ್ನತಾಕಾರವಾಗಿ ಮಸ್ತಕದಲ್ಲಿ ಹಳ್ಳವಾಗಿ ಕಪಿಲ ಕೃಷ್ಣವರ್ಣ ಉಳ್ಳದ್ದು ವಿಷ್ಣುಮೂರ್ತಿ ವಿಷಯಭೋಗಪ್ರದ. ಇದೇ ಮೂರ್ತಿ ವಿಷ್ಣುಕ್ರಾಂತಿಚಿಹ್ನವಾಗಿ ವನಮಾಲಿ ಪಂಚಾಯುಧ ವಿದ್ದರೆ ಮಹಾವಿಷ್ಣು ಸರ್ವದಾ ಶುಭಪ್ರದ. ಏಕಚಕ್ರ ಮಹಾಕಾಂತಿ ಸ್ವರ್ಣವರ್ಣವಾಗಿದ್ದರೆ ಮಧುಸೂದನಮೂರ್ತಿ ಭಾಗ್ಯಪ್ರದ. ತ್ರಿಕೋಣಾಕೃತಿಯಾಗಿ ಮೂರು ಚಕ್ರಯುತವಾಗಿ ಶ್ಯಾಮವರ್ಣ ಉಳ್ಳದ್ದಾಗಿ ಕುಕ್ಕುಟಾಂಡದಂತೆ ಇರುತ ಶಿರಸ್ಸಿನೋಳೊಂದು ಚಕ್ರವಿದ್ದರೆ ತ್ರಿವಿಕ್ರಮಮೂರ್ತಿ ಧಾನ್ಯಪ್ರದ. ಅತಿಹ್ರಸ್ವವಾಗಿ ವರ್ತುಲಾಕಾರದಿಂ ಅತಸೀ ಪುಷ್ಪವರ್ಣದಿಂದ ಯೆರಡು ಚಕ್ರಗಳಿಂದಲೂ ಬಿಂದುವಿನಿಂದಲೂ ಸಹಿತವಾಗಿರುವದು ವಾಮನಮೂರ್ತಿಭಾಗ್ಯಪ್ರದ. ಕದಂಬ ಕುಸುಮವರ್ಣವಾಗಿ ವನಮಾಲಾಢ್ಯವಾಗಿ ಪಂಚರೇಖೆಯಿಂ ಚಕ್ರದ್ವಯದಿಂ ಯುತವಾಗಿ ಮಧ್ಯೆ ಕಮಲರೇಖೆ ಉಳ್ಳ ಸೂಕ್ಷ್ಮವದನವಾದದ್ದು ಶ್ರೀಧರಮೂರ್ತಿ, ಇದೇ ಪುರೋಭಾಗದಲ್ಲಿ ಯೆರಡು ಚಕ್ರ ಪಾರ್ಶ್ವಗಳಲ್ಲಿಯೂ ಯೆರಡು ಚಕ್ರ ವದನತ್ರಯಯುತವಾಗಿ ಇದ್ದಾಗ್ಯೂ ಶ್ರೀಧರಮೂರ್ತಿ ಆಗುವದು, ಸಕಲಭಾಗ್ಯ ಪ್ರದ. ಇದೆ ಮೂರ್ತಿ ಅರ್ಧಚಂದ್ರಾಕಾರವಾಗಿ ಪಂಚ ಚಕ್ರಯುತವಾಗಿ ಇದ್ದರೂ ಶ್ರೀಧರ, ಐಶ್ವರ್ಯಪ್ರದ, ಈ ಮೂರ್ತಿಯೇ ಪಂಚವದನ ದಶಚಕ್ರ ಯುತವಾಗಿ ಶಾಮಲವರ್ಣ ಕೋಮಲಾಕಾರವಾಗಿ ಇದ್ದರೆ ದಶಚಕ್ರ ಶ್ರೀಧರಮೂರ್ತಿ ಬಹುಪುಷ್ಟಿಪ್ರದವು. ಊರ್ಧ್ವಚಕ್ರ ನಿಷ್ಕೋ

ಸರ ಅರ್ಧಚಕ್ರ ಸಕೇಸರವಾಗಿ ಇದ್ದಮಾತ್ರದಿಂದಲೆ ಪದ್ಮನಾಭಮೂರ್ತಿ ಎನಿಸಿ ಕೊಂಬುದು. ಈಲಕ್ಷಣ ವಿಪರೀತವಾಗಿ ಇದ್ದರೆ ಹಲಾಯುಧ ವೆಸಿಸಿಕೊಂಬುವದು ಬಲಪ್ರದ. ನಾಭೀಲಿ ಚಕ್ರಪ್ರಕಾಶವಾದ ಶಿರಸ್ಸ ನೇರಳೇಹಣ್ಣಿನಂತೆ ಆಕಾರ ವರ್ಣ ಉಳ್ಳದ್ದು ದಾಮೋದರವರಮೂರ್ತಿ ಭುಕ್ತಿಮುಕ್ತಿ ಫಲಪ್ರದ. ಸ್ಥೂಲವಾಗಿ ಮಧ್ಯ ಚಕ್ರ, ಗರಿಕೆ ಹುಲ್ಲಿನವರ್ಣ ಕೂಡಿದ ವದನ ದೀರ್ಘಾಕೃತಿ ವನಮಾಲಾಧ್ಯಕಂಠ ವುಳ್ಳದ್ದಾಗಿರುವದು ದಾಮೋದರಮೂರ್ತಿ ಎನಿಸಿಕೊಂಬುವದು. ಒಂದುಭಾಗದೊಳ್ ಒಂದು ಚಕ್ರ ಮತ್ತೊಂದು ಭಾಗದೊಳ್ ಯರಡು ಚಕ್ರ ಮೇಲೊಂದು ಕಮಲ ಕೆಂಪುವರ್ಣವಾಗಿರುವದು ಸಂಕರ್ಷಣಮೂರ್ತಿ ಶುಭಪ್ರದವಾಗಿರುವದು. ಸಮವದನದಲ್ಲಿ ಎರಡು ಚಕ್ರಯಿದ್ದು ಅಂತಶ್ಚಕ್ರವಿಲ್ಲದೆ ಬಿಳುಪಾಗಿ ಇರುವದು. ವಾಸುದೇವಮೂರ್ತಿ ಶುಭಪ್ರದ, ಮತ್ತಂ ಪಂಚಾಯುಧ ರೇಖೆ ಉಳ್ಳದ್ದಾಗಿ ನಾಭಿಯಲ್ಲಿ ಚಂದ್ರಪ್ರಭೆ ವುಳ್ಳದ್ದಾಗಿ ಶಂಖ, ಚಕ್ರ ವುಳ್ಳದ್ದಾಗಿಯು ಇದ್ದರೆ ಅದು ವಾಸುದೇವ ಮೂರ್ತಿ ಇಷ್ಟಸಿದ್ಧಿ ಆಗುವದು. ಆಕಾರ ಹಸೀಅಡಿಕೆ ಮೋರಿಗೆ ಇರುತ ಹ್ರಸ್ವವಾಗಿ ಸ್ವಲ್ಪ ವರ್ತುಳವಾಗಿ ವದನಪ್ರದೇಶದಲ್ಲಿ ಸಮಚಕ್ರವುಳ್ಳದ್ದಾಗಿ ಅಂತಶ್ಚಕ್ರವಿಲ್ಲದ ಲಲಾಟದಲ್ಲಿ ಶ್ವೇತರೇಖೆಯಿದ್ದರೆ ಇದುಶ್ರೀವಾಸುದೇವಮೂರ್ತಿ ಇಷ್ಟಾರ್ಥಸಿದ್ಧಿಪ್ರಂಟು,ಹೊಂಬಣ್ಣವಾಗಿ ಪಾರ್ಶ್ವದ್ವಯದಲ್ಲಿ ಸೂಕ್ಷ್ಮಚಕ್ರಬೆನ್ನಿನಲ್ಲಿ ಮಕರರೇಖೆ ಸೂಕ್ಷ್ಮಕೇಸರವುಳದ್ದಾಗಿ ಇರುವದು ಪ್ರದ್ಯುಮ್ನಮೂರ್ತಿ ಪುಷ್ಟಿಪ್ರದ. ಮತ್ತಂ ಸೂಕ್ಷ್ಮಚಕ್ರ ಶ್ವೇತವರ್ಣ ವದನಬಾಹುಳ್ಯ ದೀರ್ಘಾಕಾರವಾಗಿ ಇರುವದು ಪ್ರದ್ಯುಮ್ನಮೂರ್ತಿ ಪುಷ್ಟಿಪ್ರದ. ನೀಲವರ್ಣ ದುಂಡುವದನ ಸಮೀಪದ ಭಿತ್ತಿಯೊಳ್ ಸಮಚಕ್ರ ಪದ್ಮ ಲಾಂಛಿತವಾಗಿ ಇರುವದು ಅನಿರುದ್ಧ ಮೂರ್ತಿ ಸರ್ವಾಭೀಷ್ಟಪ್ರದ. ಮಧ್ಯಚಕ್ರ ಉಳ್ಳದ್ದಾಗಿ ಸುವರ್ಣರೇಖೆ ಮಸ್ತಕದಲ್ಲಿ ಪೃಥುಚಕ್ರ ಉಳ್ಳದ್ದಾಗಿ ಇರುವದು ಪುರುಷೋತ್ತಮಮೂರ್ತಿ ಭಾಗ್ಯಪ್ರದ. ಮತ್ತಂ ಕೃಷ್ಣವರ್ಣ ಧೂಸರಚಕ್ರದ್ವಯಾನ್ವಿತವಾಗಿ ಶಿರಸ್ಸಿನೊಳ್ ಬೃಹಚ್ಚಕ್ರವಿದ್ದರೇ ಇದು ಒಂದು ಪುರುಷೋತ್ತಮಮೂರ್ತಿ ಭಾಗ್ಯಪ್ರದ. ಅತಿ ರಕ್ತವರ್ಣವಾಗಿ ಬಟುವಾಗಿ ಒಳಗೆ ಯೆರಡು ಚಕ್ರ ಉಳ್ಳದ್ದಾಗಿ ರಕ್ತರೇ

ಖೆ ಉಳ್ಳದ್ದಾಗಿ ಇರುವದು ಅಧೋಕ್ಷಜಮೂರ್ತಿ, ಇದೇಮೂರ್ತಿ ಕಪಿಲವರ್ಣವಾಗಿ ಸ್ಥೂಲಾಕಾರವಾಗಿ ಇರುವದೂ ಇದು ಅಧೋಕ್ಷಜಮೂರ್ತಿ ಶುಭಪ್ರದ. ಕೃಷ್ಣವರ್ಣವಾಗಿ ವಾಮಪಾರ್ಶ್ವದಲ್ಲಿ ಯೆರಡು ಚಕ್ರ ಉಳ್ಳದ್ದಾಗಿ ಬಿಂದು ಯುಕ್ತವಾಗಿ ಇರುವದು ನಾರಸಿಂಹ ಮೂರ್ತಿ ಭುಕ್ತಿ ಮುಕ್ತಿ ಫಲಪ್ರದ. ವಾಮದಕ್ಷಿಣಪಾರ್ಶ್ವಗಳಲ್ಲಿ ನಾಲ್ಕುಚಕ್ರವಾಗಲಿ ಯೆಂಟುಚಕ್ರವಾಗಲಿಯಿದ್ದು ವದನಮುಖದೋಳೊಂದುಚಕ್ರವಿದ್ದು ಕುಂಡಲದ್ವಯ ಶೋಭಿತವಾಗಿ ಇದ್ದರೇ ಶಂಖ, ಚಕ್ರ, ಗದಾ, ಶಾರ್ಙ ಯುತವಾಗಿ ಕಪಿಲವರ್ಣವಾಗಿಯೂ ಇದ್ದರೇ ಅಚ್ಯುತಮೂರ್ತಿ ಭಾಗ್ಯಪ್ರದ. ಪೂರ್ವಭಾಗದಲ್ಲಿವೊಂದುವದನ, ಪಶ್ಚಾದ್ಭಾಗದಲ್ಲಿ ವೊಂದು ವದನ ನಾಲ್ಕು ಚಕ್ರ ಇದ್ದರೇ ಜನಾರ್ದನಮೂರ್ತಿ ಶತ್ರುನಾಶನ. ಮತ್ತಂ ಒಳಗೆನಾಲ್ಕುಚಕ್ರವಿದ್ದು ವರ್ತುಳಾಕಾರವಾಗಿ ನೀಲೋತ್ಪಲವರ್ಣವಾಗಿ ಇರುವದು ಜನಾರ್ದನ ಮೂರ್ತಿಯೆಂಬುವದು. ಇಂದ್ರನೀಲಮಣಿವರ್ಣವಾಗಿ ಹ್ರಸ್ವಚಕ್ರವುಳ್ಳದ್ದಾಗಿ ಕೋಮಲವೃತ್ತವಾಗಿ ಪಾರ್ಶ್ವದೋಳೆರಡು ಚಕ್ರವಿರುವದು ಉಪೇಂದ್ರಮೂರ್ತಿ ಶುಭಪ್ರದ. ಸಮವದನವಾಗಿ ಯೆರಡುಚಕ್ರ ಸಹಿತ ವರ್ತುಲವಾಗಿ ನಯವಾಗಿ ಇರುವದು ಹರಿಮೂರ್ತಿ ಸೌಖ್ಯಪ್ರದ. ರಕ್ತಪೀತವರ್ಣಮಿಶ್ರವಾಗಿ ಅಂಕುಶಾಕಾರವಾಗಿ ಚಕ್ರದ್ವಯ ಸಮಸ್ಥಿತವಾಗಿ ಯೆರಡು ಪಾರ್ಶ್ವದೋಳ್ ಪದ್ಮರೇಖೆಯಿಂದೊಡಗೂಡಿ ಕುಂಡಲರೇಖಾಯುತವಾಗಿ ಇರುವದು ಹಯಗ್ರೀವಮೂರ್ತಿ ವಿದ್ಯಾಪ್ರದ. ಮತ್ತಂ ಮುಖದಲ್ಲಿ ಅಶ್ವಾಕೃತಿಯಾಗಿ ಮುದ್ರಾಕ್ಷಮಾಲಾ ಮಸ್ತರೇಖೆ ಉಳ್ಳದ್ದಾಗಿ ಪಂಚಬಿಂದು ಯುತವಾಗಿ ಕಪಿಲ ಕೃಷ್ಣವರ್ಣ ಮಿಶ್ರವಾಗಿ ಇರುವದು ಇದುಹಯಗ್ರೀವಮೂರ್ತಿ ಜ್ಞಾನಪ್ರದವು. ರಕ್ತಪೀತಮಿಶ್ರವರ್ಣವಾಗಿ ವದನವಾಮಭಾಗದೋಳ್ ವೊಂದುಚಕ್ರ ದಕ್ಷಿಣಭಾಗದೋಳ್ ಸ್ರುಕ್ಸ್ರುವರೇಖೆಉಳ್ಳದ್ದಾಗಿಕೆಳಗೆ ಮೇಲೆ ಯೆರಡು ಚಕ್ರ ಉಳ್ಳದ್ದಾಗಿ ಇರುವದು ಯಜ್ಞಮೂರ್ತಿ ಸಕಲಸತ್ಕರ್ಮಪ್ರದ. ಸಿತಾಸಿತಾರುಣವರ್ಣವಾಗಿ ಯಡಮಕಡೆ ಬೆನ್ನು ಉನ್ನತವಾಗಿ ಮಧ್ಯದಲ್ಲಿ ಅಕ್ಷಮಾಲೆರೇಖೆ ಉಳ್ಳದ್ದಾಗಿ ಇರುವದು ದತ್ತಾತ್ರೇಯಮೂರ್ತಿ ಸರ್ವಕಾಮಫಲಪ್ರದ. ದೀರ್ಘಾಕಾರವಾಗಿ ಬೆನ್ನಿನಲ್ಲಿ ಕ್ರಮವಾಗಿ ಅನೇಕರೇಖೆ ಉಳ್ಳದ್ದಾಗಿ ಉನ್ನ

ತವಾದ ಪೃಥ್ವಾಗ್ರದೋಳೇಕಚಕ್ರಉಳ್ಳದ್ದಾಗಿ ವೃಶ್ಚಿಕಾಕಾರವಾಗಿ ಇರುವದು ಸರ್ವಾಧಾರವಾದ ಶಿಂಶುಮಾರಮೂರ್ತಿ ಸಿದ್ಧಿಪ್ರದ. ಆರುವದನ ಹನ್ನೆರಡುಚಕ್ರ ಕೃಷ್ಣವರ್ಣವಾಗಿ ಇದ್ದರೆ ಮುಕುಂದಮೂರ್ತಿ ಭಾಗ್ಯಪ್ರದವು. ಇದೇ ಶ್ವೇತವರ್ಣವಾಗಿ ಇದ್ದರೆ ಮೋಕ್ಷಪ್ರದ. ಧನುರಾಕಾರವಾಗಿ ಚಕ್ರದ್ವಯಸಹಿತ ನೀಲರೂಪವಾಗಿ ಇರುವದು ಹಂಸಮೂರ್ತಿ ಶುದ್ಧ ಮೋಕ್ಷಪ್ರದ. ನವಿಲಿನ ಕಂಠದಂತೆ ಕಾಂತಿಉಳ್ಳದಾಗಿ ದೀರ್ಘಾಕಾರವಾಗಿ ವರ್ತುಲದಿಂದ ನಯವಾಗಿ ಬಟುವಾದ ವದನಯುಕ್ತವಾಗಿ ವದನದಲ್ಲಿ ಯರಡುಚಕ್ರಉಳ್ಳದ್ದಾಗಿ ಪೊಂದು ಪಾರ್ಶ್ವದಲ್ಲಿ ಪದ್ಮಾಕೃತಿಯಾಗಿ ಇರುವದು ಪರಮಹಂಸಮೂರ್ತಿ ಸರ್ವಸಾಧಾರಣವಲ್ಲ. ವದನದಲ್ಲಿ ಕಂಠದಲ್ಲಿ ಮಯೂರಕಂಠದ ವರ್ಣಉಳ್ಳದ್ದಾಗಿ ಕೃಷ್ಣವರ್ಣಸಹಿತವಾಗಿ ಸೂಕ್ಷ್ಮಚಕ್ರವಿಶಿಷ್ಟವಾಗಿ ಪೃಥುವದನ ಉಳ್ಳದ್ದಾಗಿ ವಾಮಭಾಗದಲ್ಲಿ ಸುವರ್ಣರೇಖೆ ವ್ಯಕ್ತವಾಗಿ ವನಮಾಲಾಲಂಕೃತವಾಗಿ ಇರುವದು ಲಕ್ಷ್ಮೀಪತಿಮೂರ್ತಿ ಸಕಲ ಸಂಪತ್ಸಮೃದ್ಧಿಪ್ರದ. ದೂರ್ವಾವರ್ಣವಾಗಿ ಸೂಕ್ಷ್ಮಚಕ್ರಯುತವಾಗಿ ಸುವರ್ಣರೇಖೆ ಉಳ್ಳದ್ದಾಗಿ ಇರುವದು ದೇವದೇವಮೂರ್ತಿ ಇಷ್ಟಾರ್ಥಪ್ರದ. ವರ್ತುಳವಾಗಿ ಯರಡುಚಕ್ರಸಹಿತವಾಗಿ ಹಾಲಿನಗುಳ್ಳೆಯಂತೆ ಸ್ವಲ್ಪ ನೀಲಕೂಡಿದ ಶ್ವೇತವರ್ಣವಾಗಿ ಇರುವದು ವಟಪತ್ರಶಾಯಿಮೂರ್ತಿ ಇಷ್ಟಪ್ರದ. ಕಪೋತಪಕ್ಷಿಯ ಹೆಣ್ಣುಹಕ್ಕಿಯ ಆಕಾರವಾಗಿ ಬಹುಚಕ್ರಾಂಕಿತವಾಗಿ ಅನೇಕರೂಪವಾಗಿ ಅನೇಕರೇಖೆ ಉಳ್ಳದ್ದಾಗಿ ಇರುವದು ವಿಶ್ವರೂಪಮೂರ್ತಿ ತಪಸ್ಸಿದ್ಧಿಪ್ರದ, ವಾಮಭಾಗದಲ್ಲಿ ಸುವರ್ಣಶೃಂಗ ಸಹಿತವಾಗಿ ದುಂಡಾಗಿ ನಯವಾಗಿ ಪದ್ಮಕೇಸರ ವುಳ್ಳದ್ದಾಗಿ ಚಕ್ರಮಧ್ಯದಲ್ಲಿ ಬಿಂದುಭೂಷಿತವಾಗಿ ಧ್ವಜರೇಖಾಯುತವಾಗಿ ಯಿರುವದು ಗರುಡಧ್ವಜಮೂರ್ತಿ, ಲಕ್ಷ್ಮೀಕರ. ಗೋರೋಚನ ವರ್ಣವಾಗಿ ನಯದಿಂದ ವರ್ತುಳವಾಗಿ ಸೂಕ್ಷ್ಮಚಕ್ರವುಳ್ಳದ್ದಾಗಿ ಪೀತಾಂಬರವುಳ್ಳದ್ದು ಪೀತಾಂಬರಮೂರ್ತಿ ವಸ್ತ್ರಭೂಷಣಪ್ರದ.ಮತ್ತಂ ಇದೇ ಮೂರ್ತಿಯು ವದನಪ್ರದೇಶದಲ್ಲಿ ಚಕ್ರವುಳ್ಳದ್ದಾಗಿ ಬಹುವರ್ಣಸಮನ್ವಿತವಾಗಿ ಇರುವದು ಅದೂ ಪೀತಾಂಬರಮೂರ್ತಿ ಯನಿಸಿಕೊಂಬುವದು. ಅತಿವರ್ತುಳವಾಗಿ ಮನೋಹರವಾಗಿ ಚಕ್ರಗಳುಳ್ಳದ್ದಾಗಿ ಸರ್ವಾಂಗದಲ್ಲೂ ಸುವರ್ಣ-

ಬಿಂದುಸಹಿತವಾಗಿ ಇರುವದು ಸತ್ಯವರಮೂರ್ತಿ ಸೌಖ್ಯಪ್ರದ. ನೀಲೋತ್ಪಲ ವರ್ಣ, ವರ್ತುಳಾಕಾರ ಸಣ್ಣವದನ ಕೋಮಲವಾದ ಮಧ್ಯಚಕ್ರವುಳ್ಳದ್ದು ಅಮೃತಾಹರಣ ಮೂರ್ತಿ ಆಯುಷ್ಯಪ್ರದ. ಪೂರ್ವಭಾಗದಲ್ಲಿ ಮೂರುವದನ ಬೆನ್ನಮೇಲೆ ವೊಂದುವದನ ಯೆಂಟುಚಕ್ರವುಳ್ಳದ್ದು ಚಕ್ರವಾಳ ಮೂರ್ತಿ ಜಯಪ್ರದ. ಏಕ ಚಕ್ರವುಳ್ಳದ್ದಾಗಿ ಮಂದವದನದಿಂದಕೂಡಿ ಶುಕ್ಲವರ್ಣಯುತವಾದದ್ದು ಪುಂಡರೀಕಮೂರ್ತಿ ಸತ್ವಪ್ರದ. ಯೆರಡು ಕೊನೆಯಲ್ಲಿಯೂ ಯೆರಡುಚಕ್ರವುಳ್ಳದ್ದು ಪಾರಿಜಾತಮೂರ್ತಿ ಶುಭ. ಕಪ್ಪುವರ್ಣವಾಗಿ ಶಿರಸ್ಸಿನಮೇಲೊಂದು ಚಕ್ರವಿದ್ದರೆ ಸುದರ್ಶನಮೂರ್ತಿ ಮತ್ತಂ ಬೃಹಚ್ಚಕ್ರವುಳ್ಳದಾಗಿ ನಿಮ್ನನಾಭಿ ಚಕ್ರವುಳ್ಳದ್ದಾಗಿಯು ಸ್ವಲ್ಪರಕ್ತವರ್ಣವುಳ್ಳದ್ದಾಗಿ ಇರುವದು ಮಹಾಸುದರ್ಶನಮೂರ್ತಿ ವಿರಕ್ತರು ಪೂಜಿಸತಕ್ಕದ್ದು ಮತ್ತಂ ಶತರೇಖೆವುಳ್ಳದ್ದಾಗಿ ಪ್ರದಕ್ಷಿಣಾವರ್ತವಿಂದೊಡಗೂಡಿ ಇರುವದು ಉತ್ತಮ ಸುದರ್ಶನಮೂರ್ತಿ ಶತ್ರುನಾಶನಕರವು. ವದನದಲ್ಲಿ ಒಂದುಚಕ್ರ ಕೆಂಪುವರ್ಣವಾಗಿ ಇರುವದು ಜಗದ್ಯೋನಿಮೂರ್ತಿ ಅಭಿವೃದ್ಧಿಪ್ರದ. ಸ್ಥೂಲವಾಗಿ ಐದುವದನವುಳ್ಳದ್ದಾಗಿ ಒಹುಚಕ್ರವುಳ್ಳದ್ದು ಅನಂತಮೂರ್ತಿ, ಮತ್ತಂ ಹದಿನಾಲ್ಕು ಚಕ್ರಮೊದಲಾಗಿ ಇಪ್ಪತ್ತು ಚಕ್ರದವರಿಗೂ ಇರುವದು ನಾನಾವರ್ಣವಾಗಿ ನಾಗಭೋಗ ಚಿಹ್ನಿತವಾಗಿ ಇರುವದು ಅನಂತಮೂರ್ತಿ ಧನಧಾನ್ಯಪ್ರದ. ಸಮವಾಗಿ ವರ್ತುಳವಾಗಿ ಬಹುವರ್ಣಯುತವಾಗಿ ವದನದಲ್ಲಿ ಚಕ್ರಸಹಿತವಾದದ್ದು ಆನ್ವಯಮೂರ್ತಿ ಲಾಭಪ್ರದ. ವಂದುವದನದಮೇಲೆ ಮತ್ತೊಂದುವದನ ಈಮೇರಿಗೆ ಮೂರುವದನಗಳಲ್ಲಿ ಆರುಚಕ್ರ ಶ್ಯಾಮಳವರ್ಣದೀರ್ಘಾಕಾರವಾಗಿ ಇರುವದು ತ್ರಿಮೂರ್ತಿಯೆನಿಸಿ ಕೊಳ್ಳುವದು ಸಕಲಭಾಗ್ಯಪ್ರದ. ಮೂರು ವದನ ದೊಳ್ ಮೂರುಚಕ್ರ ವಿದ್ದರೂ ಇದೇ ತ್ರಿಮೂರ್ತಿ ಆಗುವದು. ವೊಂದು ವದನ ಮೇಲೆ ವೊಂದು ವದನ ಹೀಗೆ ಯೆರಡು ವದನಗಳಲ್ಲಿ ನಾಲ್ಕು ಚಕ್ರವುಳ್ಳದ್ದು ಹರಿಹರಮೂರ್ತಿ ಸಂಸಾರಿಗಳಿಗೆ ಆಗದು. ಮತ್ತಂ ಶಿರಸ್ಸಿನಲ್ಲಿ ಆಗಲಿ ಬೆನ್ನಿನಲ್ಲಿಆಗಲಿ ಶಿವನಾಭಿಯು ಪೂರ್ವೋಕ್ತಲಕ್ಷಣವು ಇದ್ದರೆ ಇದೂ ಹರಿಹರಮೂರ್ತಿಐಶ್ವರ್ಯಪ್ರದ. ಇದೇ ಮೂರ್ತಿಗೆ ಎಡಗಡೆಯಾಗಲಿ ಬಲಗಡೆಯಾಗಲಿ ಶಿವನಾಭಿ

ವಿದ್ದರೆ ಶಂಕರನಾರಾಯಣಮೂರ್ತಿ ಭುಕ್ತಿ ಮುಕ್ತಿಪ್ರದ. ದೀರ್ಘವದನ ಮುಂದುಗಡೆಯಲ್ಲಿ ಚಕ್ರ ಶಿರಸ್ಸಿನಲ್ಲಿ ವರ್ತುಲವಾದ ಕೆಂಪುರೇಖೆ ಉಳ್ಳದ್ದಾಗಿ ನೀಲವರ್ಣವಾಗಿರುವದು ಸ್ವಯಂಭುಮೂರ್ತಿ ಜ್ಞಾನಪ್ರದ. ಬಿಳುಪಾಗಿ ಒಂದುಚಕ್ರವಿದ್ದು ಬೆನ್ನಿನಲ್ಲಿ ಇಬ್ಭಾಗವಾಗಿ ದಟ್ಟವಾದ ವದನವುಳ್ಳದ್ದಾಗಿ ಹೊಂಬಣ್ಣವಾಗಿ ಇರುವದು ಪರಮೇಷ್ಠಿಮೂರ್ತಿ ಭುಕ್ತಿ ಮುಕ್ತಿ ಪ್ರದ. ನಾಲ್ಕುದಿಕ್ಕಿನಲ್ಲೂ ನಾಲ್ಕು ಸ್ವರ್ಣರೇಖೆ ಮಧ್ಯೆ ಎರಡು ಚಕ್ರವಿದ್ದರೆ ಚತುರ್ಮುಖ ಮೂರ್ತಿಯೆನಿಸಿಕೊಳ್ಳುವದು ನಾಲ್ಕುವದನವುಳ್ಳದ್ದಾಗಿ ಎಂಟು ಚಕ್ರ ಸಹಿತವಾಗಿ ಕೃಷ್ಣವರ್ಣವಾಗಿ ದಟ್ಟವಾಗಿ ಇರುವದು ಪಿತಾಮಹ ಮೂರ್ತಿಯೆನಿಸಿಕೊಳ್ಳುವದು ಬಂಧು ಸಂಪತ್ಪ್ರದ. ಮುಖದಲ್ಲಿ ಸುವರ್ಣಬಿಂದು ಗರ್ಭದಲ್ಲಿ ಸುವರ್ಣವೊಳಗೆ ಧ್ವಾಜಿ ಪುರಟು ಆಗಿ ಇರುವ ಸೂಕ್ಷ್ಮವದನ ಮಧ್ಯಚಕ್ರವು ಶ್ರೀವತ್ಸಲಾಂಛನ ಪಾರ್ಶ್ವ ಚಕ್ರವುಳ್ಳದ್ದು ಹಿರಣ್ಯಗರ್ಭಮೂರ್ತಿ ಪುರ್ನಬ,ನಿಧಿಪ್ರದ. ಎರಡು ರೇಖೆಗಳು ವಿಷಮೋಚನವಾದ ಒಂದು ವದನ ವುಳ್ಳದ್ದು ಗರುಡಮೂರ್ತಿ ದುರ್ಲಭ. ವಿಷಾದಿ ಹರವಾಗಿ ಇರುವದು, ಪೃಷ್ಠದಿಂದಾ ಮುಖಪರ್ಯಂತವು ರೇಖೆವುಳ್ಳದ್ದಾಗಿಯೂ ಕುಂಡಲಾಕಾರವಾದ ಸುವರ್ಣರೇಖೆ ವುಳ್ಳದ್ದಾಗಿ ಸರ್ಪಾಕೃತಿಯಾಗಿ ಚಕ್ರಯುತವಾಗಿ ಇರುವದು ಸೀರಪಾಣಿಮೂರ್ತಿ. ಮುತ್ತೂ ನೀಲ ಶ್ವೇತವರ್ಣ ಸಹಿತವಾಗಿ ಸುಚಕ್ರವಾಗಲೀ ವಿಚಕ್ರವಾಗಲೀ ಒಂದುಚಕ್ರವಿದ್ದರೇ ಸೀರಪಾಣಿಮೂರ್ತಿ ಒಳ್ಳೇದಲ್ಲ. ರಕ್ತವರ್ಣವಾಗಿ ವದನವೊಳಗೊಂದು ಚಕ್ರವಿರುವದು ಪ್ರಲಂಬಘ್ನಮೂರ್ತಿ ಒಳ್ಳೇದಲ್ಲ. ಯುಕ್ತಿಗನೇಹೂವಿನವರ್ಣವಾಗಿ ಒಂದುನಾಭಿವುಂಟಾಗಿ ಪಾರ್ಶ್ವದಲ್ಲಿ ಜಪಮಾಲೆ ಇದ್ದರೇ ನರಮೂರ್ತಿ ಶುಭಪ್ರಾಪಕ. ಅಧೋಭಾಗದಲ್ಲಿ ಕೂರ್ಮಾಕೃತಿ ಪೃಷ್ಠಭಾಗದಲ್ಲಿ ಖುರವುಳ್ಳದ್ದಾಗಿ ವರ್ತುಳವಾಗಿ ಕೃಷ್ಣವರ್ಣವಾಗಿ ಚಕ್ರವಿಲ್ಲದೆ ಮೇಲುಗಡೆ ಶಿವರೂಪ ಮಧ್ಯದಲ್ಲಿ ವಿಷ್ಣುರೂಪವಾಗಿ ಇರುವದು ಸರ್ವಸಿದ್ಧಿ ಪ್ರದವಾದ ಶಿವನಾಭ ಮೂರ್ತಿ, ಮತ್ತಂ ಈಶಿವನಾಭಮೂರ್ತಿಯೇ ಶಿರಸ್ಸಿನೊಳ್ ದಟ್ಟವಾಗಿ ಹಳ್ಳವಿದ್ದರೆ ಗೌರೀನಾಭವೆನ್ನಿಸಿಕೊಂಬುವುದು ಕೆಂಪಾಗಿ ಶಿರಸ್ಸಿನಲ್ಲಿ ಕೆಂಜಡೆ ಚಂದ್ರರೇಖೆವುಳ್ಳದ್ದು ಅಘೋರಮೂರ್ತಿ ಪ್ರಶಸ್ತವಲ್ಲ. ಹೇಮವರ್ಣ ಜಟಾಯುಕ್ತವಾಗಿ ಹೇಮಬಿಂದು

ಮಸ್ತಕದಲ್ಲಿ ಉಳ್ಳದ್ದಾಗಿ ಮುಂದುಗಡೆಯಲ್ಲಿ ಗೋಖುರ ಉಳ್ಳದ್ದಾಗಿ ಚಕ್ರರೇಖೆ ನನೀರೇಖೆ ಇರುವದು ಸದ್ಯೋಜಾತಮೂರ್ತಿಯು ಸಹಿಸಿಕೊಂಬುವದುಪುತ್ರಪೌತ್ರಾದಿ ವೃದ್ಧಿಪ್ರದ ಪಿತಾಂಗವಾಗಿ ಶ್ವೇತಜಟೆಯುಳ್ಳದ್ದಾಗಿ ಇರುವದು ವಾಮದೇವಮೂರ್ತಿ ಗೃಹಸ್ಥನಿಂದ ಪೂಜಿಸಲು ಯೋಗ್ಯವು. ಸ್ವಲ್ಪ ಕಪಿಲವರ್ಣವುಳ್ಳದ್ದಾಗಿ ಕೃಷ್ಣವರ್ಣವು ಜಟೆಯುಉಳ್ಳದ್ದಾಗಿ ಚಂದ್ರರೇಖೆ ಉಳ್ಳದ್ದಾಗಿ ಪಾರ್ಶ್ವರೇಖೆವುಳ್ಳದ್ದಾಗಿ ಇರುವದು ಈಶಾನಮೂರ್ತಿ ಶುಭಪ್ರದ. ಪೂರ್ವಭಾಗದಲ್ಲಿ ಮಿಂಚಿನರೇಖೆ ಇರುವದು ಮೇಲೆಜಟೆ ಚಂದ್ರಿಕೆಗಳು ಇರುವದು ತತ್ಪುರುಷ ಮೂರ್ತಿ ದುರ್ಲಭ ಸರ್ವ ಕಾಮ ಫಲಪ್ರದ. ಒಳಗೆ ಹೊರಗೆ ಸಹ ಹನ್ನೆರಡು ಚಕ್ರವಿದ್ದು ಸೂರ್ಯಾಕೃತಿಯಾಗಿ ಕೆಂಪಾಗಿ ಇರುವದು ಆರೋಗ್ಯಪ್ರದವಾದ ಸೂರ್ಯಮೂರ್ತಿ, ಒಳಗೆನಾಲ್ಕು ಚಕ್ರ ದಕ್ಷಿಣ ಭಾಗದಲ್ಲಿ ಸಹಸ್ರದಳ ಪದ್ಮಾಕೃತಿಯಾಗಿ ಇರುವದು ಹೈಹಯನೆಂಬ ಕಾರ್ತವೀರ್ಯಮೂರ್ತಿ ಸಕಲಸಿದ್ಧಿಪ್ರದ. ಕೃಷ್ಣವರ್ಣವಾಗಿ ವದನದಮುಂದುಗಡೆ ಎರಡು ಚಕ್ರಉಳ್ಳದಾಗಿ ರುದ್ರಾಕ್ಷಮಾಲಾಯುತವಾಗಿ ಇರುವದು ದತ್ತಾತ್ರೇಯ ಮೂರ್ತಿ ಅಭಯಪ್ರದ. ಮುಖದೊಳೇಕಚಕ್ರ ಸಹಿತವಾಗಿ ನಾನಾವರ್ಣಯುತವಾಗಿ ಚಕ್ರೋಭಯಪಾರ್ಶ್ವಗಳಲ್ಲಿ ಪದ್ಮಯುತವಾಗಿ ನಯವಾಗಿ ಬಟುವಾಗಿಇರುವದು ವಿಷ್ವಕ್ಸೇನಮೂರ್ತಿ ಭಾಗ್ಯಪ್ರದ. ಈಪ್ರಕಾರ ಲಕ್ಷಣಂಗಳಿಂ ತಿಳಿದು ಮೂರ್ತಿಗಳಂ ನಿಶ್ಚಯಿಸತಕ್ಕದ್ದು. ಕೇಳ್ಸುಗಂಧರಾಯನೆ ! ಈಗ ಪೇಳಿದ ಸಾಲಿಗ್ರಾಮ ಮೂರ್ತಿಗಳಲ್ಲದೆ ದ್ವಾರಕಾ ಚಕ್ರಂಗಳೆಂಬ ಮೂರ್ತಿಗಳುಂಟು ಅದೆಂತೆಂದರೆ- ಒಂದು ಚಕ್ರಮೊದಲಾಗಿ ಚಕ್ರವೃದ್ಧಿಕ್ರಮದಿಂದ ಸುದರ್ಶನ, ಲಕ್ಷ್ಮೀನಾರಾಯಣ, ಅಚ್ಯುತ, ಜನಾರ್ದನ, ವಾಸುದೇವ, ಪ್ರದ್ಯುಮ್ನ, ಪಟ್ಟಾಭಿರಾಮ, ಪುರುಷೋತ್ತಮ, ಶ್ರೀಧರ, ದಶಜನ್ಮಮೂರ್ತಿ, ಅನಿರುದ್ಧಮೂರ್ತಿ, ದ್ವಾದಶಾತ್ಮಕಮೂರ್ತಿ, ಅನಂತಮೂರ್ತಿಗಳೆಂಬದಾಗಿ ಹೆಸರುಳ್ಳಂಥಾ ದ್ವಾರಕಾಮೂರ್ತಿ ಭೇದಂಗಳಂ ತಿಳಿಯುವದು. ಈಹೇಳಿದ ಸಾಲಿಗ್ರಾಮ ಮೂರ್ತಿಗಳೊಳಗೆ ಯಾವಮೂರ್ತಿಯು ಪೂಜಕರಿಗೆ ಇಷ್ಟದೇವ ದೇವತಾಮೂರ್ತಿಯೊ ಅದೇಮೂರ್ತಿಯೇ ಮುಖ್ಯವಾಗಿ ಪೂಜಿಸುವದ್ದರಿಂದ ಇಹಪರಭೋಗಂಗಳುಂಟು, ಸಾಲಿಗ್ರಾಮಪೂಜೆ ತೀರ್ಥಂ

ಗಳಿಲ್ಲದೇ ಭೋಜನಂಗಳಂ ಮಾಡಕೂಡದು, ಸಾಲಿಗ್ರಾಮತೀರ್ಥಸ್ವೀಕಾರದಿಂದ ಸಕಲಪಾಪಂಗಳು ಹೋಗಿ ದೇಹ ಪವಿತ್ರವಾಗುವದು. ಭೋಜನಾನಂತರ ಸಾಲಿಗ್ರಾಮ ತೀರ್ಥವಂ ಸ್ವೀಕರಿಸಲು ಉಪವಾಸಸದೃಶ ಯೋಗ್ಯತೆವುಂಟಾಗುವದು, ಸಲಕ್ಷಣವಾದ ಸಾಲಿಗ್ರಾಮಮೂರ್ತಿಗಳು ಯಾವಗೃಹದಲ್ಲಿ ಪೂಜಿಸಲ್ಪಡುತಲಿವೆಯೋ? ಅಲ್ಲಿ ಸಕಲ ಸಂಪತ್ಸಮೃದ್ಧಿಯಾಗಿ ಲಕ್ಷ್ಮಿಗೆ ಆವಾಸಸ್ಥಾನವಾಗಿರುವದು. ಸಾಳಿಗ್ರಾಮದಾನಮಾತ್ರದಿಂದಲೇ ಚತುರ್ದಶ ಭುವನವನ್ನು ದಾನವಾಗಿ ಕೊಟ್ಟ ಫಲಬರುವದು, ಸಾಳಿಗ್ರಾಮ ಪೂಜೆಮಾತ್ರದಿಂದ ತ್ರಿಮೂರ್ತಿಗಳು ಸಕಲದೇವತೆಗಳು ಪೂಜಿತರಾಗುವರು, ಸಕಲದೇವತಾ ಪೂಜಾಫಲಂಗಳು ಲಭಿಸುವವು, ಕಲಿಯುಗದಲ್ಲಿ ಸಾಳಿಗ್ರಾಮ ಪೂಜೆಯಿಂದ ಸಕಲ ಯಜ್ಞಂಗಳು, ಸಕಲವ್ರತಂಗಳು, ಸಕಲದಾನಂಗಳು, ಸಕಲತೀರ್ಥಯಾತ್ರೆಗಳು, ಸಕಲತಪಸ್ಸುಗಳು, ಸಕಲ ವೇದಾಧ್ಯಯನ ಫಲಂಗಳೂ ಕೂಡಾ ಲಭಿಸುವವು, ಸಾಳಿಗ್ರಾಮ ಪೂಜೆ ಮಾಡುವಲ್ಲಿ ಸಮವಾಗಿಯೇ ಪೂಜೆಮಾಡಬೇಕು, ವಿಷಮವಾಗದು, ವಿಷಮದೋಳ್ ಮೂರೂ ಆಗದು, ಒಂದೇ ಇದ್ದರೆ ಯೋಗ್ಯವು, ಸಮದೋಳೆರಡು ಆಗದು, ಸಾಳಿಗ್ರಾಮಕ್ಕೆ ಪ್ರತಿಷ್ಠಾ ಸಂಪ್ರೋಕ್ಷಣ ಪ್ರಾಣಾದ್ಯೈಕಲ್ಯಾದಿ ಪ್ರಾಯಶ್ಚಿತ್ತವಿಲ್ಲ, ಸುವರ್ಣಾದಿ ದೇವತಾಪ್ರತಿಮೆಗಳು ಎಷ್ಟು ಇದ್ದಾಗ್ಯೂ ಆಲಯಂಗಳಲ್ಲಿ ಆಗಲೀ ಗೃಹಂಗಳಲ್ಲಿ ಆಗಲಿ ಸಾಳಿಗ್ರಾಮವಿಲ್ಲದೆ ಇರುವ ಪೂಜೆ ಸಾಂಗವಾಗಿ ಇರದು, ಸಾಳಿಗ್ರಾಮ ಪೂಜೆಗೆ ಸದೃಶವಾದ್ದು ಯಾವದು ಇಲ್ಲ, ಸಾಳಿಗ್ರಾಮಶಿಲೆಯು ವಡದು ಇದ್ದಾಗ್ಯು ಸುಲಕ್ಷಣವಾದ ಚಕ್ರವುಳ್ಳ ಸಾಳಿಗ್ರಾಮವು ಪೂಜಾಯೋಗ್ಯವು. ಯಾವಪ್ರದೇಶದಲ್ಲಿ ಸಾಳಿಗ್ರಾಮ, ದ್ವಾರಕಾಚಕ್ರ ತುಳಸೀ ಶಂಖಚಕ್ರ ಭಗವದ್ಭಕ್ತರಾದ ಪರಮ ಭಾಗವತರು ಪದ್ಮವನ ಮೇಲಪಾರಾಯಣ ಮೂರ್ಧಾಭಿಷಿಕ್ತರಾದ ಧೊರೆಗಳು ಇರುವರೊ? ಆಪ್ರದೇಶದಲ್ಲಿ ಶ್ರೀಹರಿಯು ಲಕ್ಷ್ಮಿಸಮೇತನಾಗಿ ನಿತ್ಯವಾಸವಾಗಿರುವನು. ವಿಷ್ಣುಪಾದೋದಕವಂ ಪತಿತಪಾವನ ಕರವಾದ ಪ್ರಸಾದವಂ ನಿತ್ಯವಲ್ಲೂಸ್ವೀಕರಿಸಲು ಇಹದೋಳ್ ಸಕಲಪಾಪಗಳಿಂದ ಬಿಡಲ್ಪಟ್ಟು ಅಷ್ಟೈಶ್ವರ್ಯಂಗಳಂ ಪಡದು ಅನಂತರದಲ್ಲಿ ಶ್ರೀ ವೈಕುಂಠಲೋಕವನ್ನೈದುವರು ಎಂದು ಪೇಳಿದ ವಿಷ್ಣುಚಿತ್ತರ

ಮಾತಂ ಕೇಳಿದ ಸುಗಂಧಮಹಾರಾಜೇಂದ್ರನು ಪರಿಶುದ್ಧನಾಗಿ ದಿವ್ಯಪರಿಮಳಗಳಿಂದೊಡಗೂಡಿ ಅತಿಮಧುರವಾಗಿ ಇರುವ ಶರ್ಕರೋದಕವನ್ನು ಗ್ರೀಷ್ಮ ಕಾಲದೊಳ್ ಪಾನವಂಗೈದ ಅತಿತೃಷಿತನಂತೆ ಸಂತುಷ್ಟನಾಗಿ ಪರಮಾಚಾರ್ಯರಾದ ವಿಷ್ಣುಚಿತ್ತರಂ ಕುರಿತು ಸ್ವಾಮಿಯಾದ ಮಹಾಗುರುವೆ ! ನಿಮ್ಮಿಂದ ಈಗ ಅನುಗ್ರಹಿಸಲ್ಪಟ್ಟ ಭಗವನ್ಮಾಹಾತ್ಮೆಯಂ ಕೇಳಿ ಧನ್ಯನಾದೆನು, ಗುವರ್ಣ ವಾಚಕವಾದ ಅಜ್ಞಾನಾಂಧಕಾರಕ್ಕೆ ನಿವರ್ತಕವಾದ ರುವರ್ಣದಿಂದೊಡಗೂಡಿಗುರುವೆನಿಸಿ ಸಕಲವಿಧದಿಂದಲೂ ಉದ್ಧರಿಸುವಗುರುವೆ ಬ್ರಹ್ಮನು, ಗುರುವೇ ಮಹಾವಿಷ್ಣು, ಗುರುವೇ ಮಹೇಶ್ವರನು, ಗುರುವೇ ಪರಬ್ರಹ್ಮ, ಗುರುವೇ ಪರಾಗತಿಯು, ಗುರುವೇ ಇಷ್ಟದೈವವು, ಗುರುವಿಲ್ಲದವರ್ಗೆ ಸದ್ಗತಿಯಿಲ್ಲ, ಕ್ಷುತ್, ಶಯನ, ಸಂಕಟ, ಸ್ನಾನ, ಜಪ, ತಪೋಹೋಮ, ಆರಾಧನಾದಿಗಳಲ್ಲಿಯು ಅವಶ್ಯವಾಗಿ ಗುರುನಾಮವೇ ಪೇಳತಕ್ಕದ್ದು, ಹರಿಹರಾದಿನಾಮಸ್ಮರಣೆಗಳಿಗಿಂತಲೂ ಅಧಿಕವಾಗಿ ಪಾಪಗಳಂ ಪರಿಹರಿಸಿ ತತ್ವಜ್ಞಾನವನ್ನುಂಟುಮಾಡುವ ಗುರುಶಬ್ದಕ್ಕೆ ನೀವೆ ವಿಷಯರೆಂದು ಬಹುಬಗೆಯಾಗಿ ಸ್ತೋತ್ರಮಂಮಾಡುತ ಮರ್ಯಾದೋಕ್ತಿಗಳಿಂದ ವಿಷ್ಣುಚಿತ್ತರಂ ಸಂತೋಷಗೊಳಿಸುತಲಿರುತಿರ್ದನೆಂಬಲ್ಲಿಗೆ.

ಗದ್ಯ—ಕುಂಡಲಿಶಯ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖ ನಿಖಿಲಸುರವರ ಪರಿಭವ ಪರಿಣತ ಪ್ರಚಂಡಬಲ ಚಂಡಮುಂಡ ವಿಖಂಡನ ನಿಪುಣ ಕೋದಂಡಕಾಂಡ ಮುಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತಗ್ರಂಥ ನವನವ ಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸ ಗೋತ್ರ ಆಶ್ವಲಾಯನಸೂತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ ನರಪತಿ ಬಿರುದಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾದ ಸೌಗಂಧಿಕಾಪರಿಣಯವೆಂಬ ನವೀನ ಕೃತಿಯೊಳ್ ವ್ಯೋಮಯಾನ ಸವಣವಲ್ಲಿ ವೈಕುಂಠವರ್ಣನಾ

ದಿ ಮಹಾವಿಷ್ಣುವಿನ ಸ್ವಯಂವ್ಯಕ್ತ ಮಾಹಾತ್ಮ್ಯಕಥನವೆಂಬ ಮುವ್ವತ್ತನೇ ಆಶ್ವಾಸಕ್ಕೆ ಮಂಗಳಂ ಮಹಾ * * * * * *

ಮುವತ್ತನೇ ಆಶ್ವಾಸ ಸಂಪೂರ್ಣವು.

ಶ್ರೀರಸ್ತು.

ಮುವ್ವತ್ತೊಂದನೇಯ ಆಶ್ವಾಸ ಪ್ರಾರಂಭಃ.

ಶ್ರೀಚಾಮುಂಡಿಕಾಂಬಾಯೈ ನಮಃ

---

ಅನಂತರದಲ್ಲಿ ಅತಿ ವೃದ್ಧಾಪ್ಯದಿಂದ ಅತಿಶ್ವೇತವಾದ ಶಿಖಿ ಇಂದಲುಂ ಗಳಿತವಾಗಿ ಜೋಲುತ್ತಿರುವಂತೆ ಕರ ಚರಣಾದಿಗಳಿಂದಲುಂ ನಿದ್ರೆಯಿಂದ ಕಡಮೆಯಾಗಿ ವರ್ಷಾಕಾಲದ ಕಮಲದಂತೆ ಸಡಿಲಿರುವ ನೇತ್ರಂಗಳಿಂದಲುಂ ಮೊದಲಾಗಿ ವಿರುದ್ಧ ಸಿಗೆ ಕೇಳುವ ಶ್ರೋತ್ರಂಗಳಿಂದಲುಂ ಕೂಡಿಯಕ್ಕಿದ ಅರಳಿಯಿಂದ ಮೃದು ಬಿಳುಪಾಗಿ ಕುಗ್ಗಿ ಹ್ರಸ್ವಾಕಾರದಿಂದಿರುವ ವಿಷ್ಣುಚಿತ್ತರನ್ನು ಒಂದೆರಡು ಮುಹೂರ್ತ ವಿಶ್ರಮಂಗೊಳಿಸಿದ ಬಳಿಕ ಸುಗಂಧರಾಯನು ಅಮೃತಸದೃಶವಾದ ಶ್ರೀಮಹಾವಿಷ್ಣುವಿನ ದಿವ್ಯಚಾರಿತ್ರಮಂ ಕೇಳಲಾಸಕ್ತಿಯುಕ್ತನಾಗಿ ವಿಷ್ಣುಚಿತ್ತರಂ ಕುರಿತು ಯತ್ಯುಮಹಾ ಪುರುಷನೆ! ಭಗವದಾರಾಧನದ್ರವ್ಯಂಗಳೊಳ್ ಮುಖ್ಯತರವಾದ ಶ್ರೀತುಲಸೀ ಮಾಹಾತ್ಮ್ಯವಂ ನನಗೆ ನಿರೂಪಿಸಬೇಕೆಂದು ವಿಜ್ಞಾಪಿಸಲು, ಆ ಮಾತಂ ಕೇಳಿ ವಿಷ್ಣುಚಿತ್ತರು ಸುಗಂಧರಾಜೇಂದ್ರನಂ ಕುರಿತು ನಿರೂಪಿಸಿದಪರಿ ಯಂತೆಂದರೆ-ಕೇಳೈ, ಮಂಗಳಕರನಾದ ಸುಗಂಧರಾಯನೆ ! ಪೂರ್ವದಲ್ಲಿ ಲಕ್ಷ್ಮೀದೇವಿಯರು ಪರವ್ಯೂಹಾದಿಸ್ಥಾನಂಗಳಲ್ಲಿ ಒಂದೊಂದು ರೂಪಗಳಿಂದ ಸೇವೆಯಂಮಾಡುತ ಸರ್ವದಾ ಸೇವಾರೂಪದಲ್ಲಿ ಇರಬೇಕೆಂದು ಇಚ್ಛೆಯಿಂ ತಾವೆಲೀಲಾರ್ಥವಾಗಿ ತುಲಸೀರೂಪವನ್ನಂಗೀಕರಿಸಲು, ಕ್ಷೀರಸಮುದ್ರಮಥನದೊಳ್ ತುಲಸೀರೂಪದಿಂದವತರಿಸಿ ಜಗದ್ರಕ್ಷಣಾರ್ಥವಾಗಿ ಸಕಲಲೋಕಂಗಳಲ್ಲಿಯೂ, ಸಕಲಾರಣ್ಯಂಗಳಲ್ಲಿಯೂ, ಸಕಲ ದೇಶಂಗಳಲ್ಲಿಯೂ, ಪೂಜಾರ್ಥವಾಗಿ ಸಾನ್ನಿಧ್ಯವಂ ಕೊಂಡು ಇರುವದು, ಈ ತುಲಸೀದಳಗಳ ಪೂಜೆಇಂದ ಮಹಾವಿಷ್ಣುವು ಪ್ರಸನ್ನನಾಗುವ

ಸು. ಸುವರ್ಣರಜತ ನವರತ್ನಮಯಂಗಳಾದ ಪುಷ್ಪಂಗಳಿಂದಲೂ,ಸುಗಂಧ
ಉಳ್ಳ ಕಮಲಮೊದಲಾದ ಸಮಸ್ತ ಪುಷ್ಪಂಗಳಿಂದಲುಂ, ಬಿಲ್ವಪತ್ರಮೊ
ದಲಾದ ಸಕಲ ಪತ್ರಂಗಳಿಂದಲುಂ, ದಿವ್ಯಫಲಂಗಳಿಂದಲುಂ,ಅನೇಕ ಉಪ
ಚಾರಗಳಿಂದಲುಂ, ನೈವೇದ್ಯಂಗಳಿಂದಲುಂ, ಪ್ರದಕ್ಷಿಣ ನಮಸ್ಕಾರಸ್ತೋ
ತ್ರ ಜಪ, ತಪಸ್ಸುಗಳಿಂದಲುಂ, ನೀರಾಜನಂಗಳಿಂದಲುಂ, ತುಲಸೀ ಇಲ್ಲ
ದೆ ಮಹಾವಿಷ್ಣುವು ಅತ್ಯಂತಪ್ರೀತನಾಗುವದು ಇಲ್ಲ, ಸಮಸ್ತ ಉಪಚಾ
ರಂಗಳನ್ನು ತುಲಸೀಯಿಂದಲೇ ಮಾಡಬೇಕು, ವಿಷ್ಣುವಿಗೆ ತುಲಸಿಯು
ಅತ್ಯಂತ ಪ್ರೀತಿಕರವಾಗಿ ಇರುವದು, ಯಾರು ಇಂಥಾ ತುಲಸಿಯನ್ನು
ಗೃಹಂಗಳಲ್ಲಿ ಆಗಲಿ, ಆರಾಮಂಗಳಲ್ಲಿ ಆಗಲೀ, ನದೀತೀರ ಮುಂತಾದವರಿ
ಶುದ್ಧಸ್ಥಲಂಗಳಲ್ಲಿ ತಂದುಹಾಕಿ ತೀರ್ಥಸೇಚನವಂ ಮಾಡಿ ವೃದ್ಧಿಪಡಿ
ತುಲಸೀ ಗಿಡವಂ ಪೂಜಿಸುವರೋ?ಅವರಿಗೆ ಪಾಪಲೇಶವಿಲ್ಲದೆ ಯಮದರ್ಶನ
ವು ಇಲ್ಲದೆ ಇರುವದು, ತುಲಸೀ ಗಿಡಕ್ಕೆ ನೀರನ್ನು ಯಾರು ತಂದು ಹಾ
ಕುವರೋ? ಅವರಿಗೆ ಒಂದೊಂದು ಜಲ ಬಿಂದುವಿಗೆ ಕೋಟಿಯಜ್ಞಫಲ
ಬರುವದು, ಉದಯ ಕಾಲದೊಳು ತುಲಸಿಯ ಮೂಲದಮೃತ್ತನ್ನು ಲಲಾ
ಟದಲ್ಲಿ ಧರಿಸಲು ಆಯುಸ್ಸು, ವರ್ಚಸ್ಸು, ತೇಜಸ್ಸು, ಮತ್ತು ಸಕಲ
ಪುಣ್ಯಂಗಳು ಉಂಟಾಗಿ ಭಗವತ್ಪ್ರೀತಿಯೂ ಉಂಟಾಗುವದು, ಮತ್ತಂ
ಸ್ನಾನಕಾಲದಲ್ಲಿ ತುಲಸೀ ಮೃತ್ತಿನ ಸಂಬಂಧದಿಂದ ದುಸ್ಪರ್ಶ ದುಸ್ಸಂಗತಿ
ಮೊದಲಾದ ಅಶುದ್ಧಿಗಳು ಪೋಗಿ ಸಕಲಸತ್ಕರ್ಮಾನುಷ್ಠಾನಂಗಳಿಗೆ
ಯೋಗ್ಯವಾಗುವಂತೆ ದೇಹವಂ ಪರಿಶುದ್ಧವಂ ಮಾಡುವದು. ಆಲಯಂಗ
ಳೊಳ್ ಮಹಾನದೀತೀರಂಗಳೊಳ್ ಬ್ರಾಹ್ಮಣರ ಮನೆಗಳೊಳ್ ಪು
ಣ್ಯಕ್ಷೇತ್ರಂಗಳೊಳ್ ಬೃಂದಾವನವಂ ನಿರ್ಮಿಸಿ ಅದರೊಳ್ ತುಲಸೀಪ್ರ
ತಿಷ್ಠಾಪನವಂ ಗೈದು ತೀರ್ಥಸೇಚನವಂ ಮಾಡಿ ಸಾಯಂಪ್ರಾತಃ ಪೂಜಿ
ಸುವರಿಗೆ ಸಕಲಪಾಪಂಗಳು ಪೋಗಿ ನಿತ್ಯಲಕ್ಷ್ಮೀಸಾನಿಧ್ಯ ಉಂಟಾಗುವ
ದು ಆಬೃಂದಾವನದಲ್ಲಿ ಇರುವ ತೀರ್ಥ ಪ್ರೋಕ್ಷಣೆಯಿಂದ ಗಂಗಾಸ್ನಾನ
ಫಲ ಉಂಟಾಗುವದು, ಪ್ರದಕ್ಷಿಣೆಯಿಂದ ಭೂಪ್ರದಕ್ಷಿಣಫಲ ಉಂಟಾಗು
ವದು, ತುಲಸೀ ಬೃಂದಾವನಗಳಂ ಎಷ್ಟು ಪ್ರತಿಷ್ಠೆ ಮಾಡುವರೋ?ಅಷ್ಟು
ದೇವಾಲಯಂಗಳ ಪ್ರತಿಷ್ಠಾಫಲ ಉಂಟಾಗುವದು, ತುಲಸಿಯೇ ಸಕಲ

ಇಷ್ಟಾರ್ಥ ಪ್ರದವು, ತುಲಸೀ ಸಂಬಂಧದಿಂದ ಸಕಲ ಪಾಪಂಗಳು ನಿಕ್ಷೇಪವಾಗಿ ಪೋಗುವವು, ತುಲಸೀ ಇದ್ದ ಬಳಿಯಲ್ಲಿ ಶ್ರೀಮಹಾ ವಿಷ್ಣುವು ನಿತ್ಯದಲ್ಲೂ ಆವಾಸವಾಗಿರುವನು, ಯಾವನ್ಗೃಹಗಳಲ್ಲಿ ತುಲಸೀ ಆರೋಪಿತವಾಗಿ ಇರುವದೊ? ಆ ಪ್ರದೇಶದೋಳ್ ಯಮಬಟರ ಸಂಚಾರವಿಲ್ಲ, ತುಲಸೀಗಿಡಂಗಳು ಇರುವ ಗೃಹದೋಳ್ ಯಷ್ಟು ತುಲಸೀ ಬೀಜಂಗಳು ಇರುವವೊ ಅಷ್ಟು ಸಹಸ್ರವರ್ಷ ಗಿಡಹಾಕಿದವರು ವಿಷ್ಣು ಲೋಕದಲ್ಲಿ ವಾಸವಂ ಗೈವರು, ತುಲಸೀಗಂಧ ಮಾತ್ರದಿಂದ ಪಿತೃಗಳು ಸಮಸ್ತರು ಮುಕ್ತಿ ಲೋಕವನ್ನೈದುವರು, ಕಾವೇರೀದರ್ಶನ, ಗಂಗಾಸ್ನಾನ, ತುಲಸೀಸ್ಪರ್ಶನ ಇವು ಮೂರೂ ಸಮಾನ ಪುಣ್ಯಂಗಳಂ ಕೊಡುವವು, ಇವುಗಳಿಗೆ ಸಮಾನವಾದ ಪುಣ್ಯಯಿಲ್ಲೂ ಇಲ್ಲ, ತುಲಸೀ ನೆಡುವದರಿಂದಲೂ ಸೇಚನದಿಂದಲೂ ಸಂರಕ್ಷಣೆಯಿಂದಲೂ ಅರ್ಚನೆಯಿಂದಲೂ ಪಂಚಭೂತಗಳಿಂದ ಉಂಟಾದ ದೋಷ ಪಂಚ ಮಹಾಪಾತಕಂಗಳೂ ಸಹ ಪರಿಹರವಾಗಿ ಮನೋವಾಕ್ಕಾಯಗಳೆಂಬ ಕರಣತ್ರಯಂಗಳು ಪರಿಶುದ್ಧವಾಗಿ ಸಕಲ ಪುರುಷಾರ್ಥಗಳನ್ನು ಅನುಭವಿಸಿ ವಿಷ್ಣುಸಾಯುಜ್ಯ ಉಂಟಾಗುವದು ಬ್ರಹ್ಮಾದಿಗಳೂ ತುಲಸೀ ಬೃಂದಾವನಾರ್ಚನೆಯಂ ಮಾಡಿ ಬ್ರಹ್ಮಾದಿ ಪದವಿಗಳಂ ಪಡೆದು ಇರುವದ್ದರಿಂದ ಈಗಲೂ ಪ್ರತಿದ್ವಾದಶಿಯಲ್ಲಿ ತುಲಸೀ ಬೃಂದಾವನಾರ್ಚನೆಯನ್ನು ಭಕ್ತಿಯಿಂದ ಯಥಾ ವಿಭವವಾಗಿ ಮಾಡಿ ಧೂಪ ದೀಪ ನೈವೇದ್ಯೋಪಚಾರಂಗಳಂಗೈದು ನಮಸ್ಕಾರವಂ ಮಾಡಲು ಆಮನೆಯಲ್ಲಿ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನೆ ವಾಸವಾಗಿರುತ್ತಾ ಅವರಿಗೆ ಸಕಲಾಭೀಷ್ಟವನ್ನು ಕೊಡುವನು, ಮತ್ತು ಮೂರುಸಾವಿರ ಮಾವಿನ ಮರ ಮುಂತಾದ ಮಹಾವೃಕ್ಷಗಳ ಆರೋಪಣೆಯಿಂದಲುಂ ಸಹಸ್ರ ಅಶ್ವತ್ಥಾದಿ ಪುಣ್ಯವೃಕ್ಷಾರೋಪಣೆಗಿಂತಲೂ ಒಂದು ತುಲಸೀಗಿಡದ ಆರೋಪಣೆಯೇ ಹೆಚ್ಚುಫಲ ಉಳ್ಳದ್ದಾಗಿರುವದು, ಯಾರು ವಿಷ್ಣುಪೂಜಾರ್ಥವಾಗಿ ಒಂದು ತುಲಸೀ ಗಿಡವನ್ನು ಹಾಕುವರೊ ಅಷ್ಟು ಮಾತ್ರದಿಂದಲೇ ಅವರು ಸಕಲ ಐಹಿಕಸೌಖ್ಯವನ್ನನುಭವಿಸಿ ವಿಷ್ಣುಲೋಕದಲ್ಲಿ ನಿತ್ಯವಾಸವಾಗಿರುವರು, ತುಲಸೀ ಹೊಡೆಗಳಿಂದ ವಿಷ್ಣುವನ್ನು ಯಾರು ಪೂಜಿಸುವರೋ ಅವರು ಪುನಃ ಮಾತೃಸ್ತನ್ಯ ಪಾನವನ್ನು ಮಾಡವಿಲ್ಲ,

ತುಲಸೀಗಿಡದಲ್ಲಿ ಪುಷ್ಕರಾದಿ ಸಕಲ ತೀರ್ಥಗಳು, ಗಂಗಾದಿ ಸಕಲ ನದಿಗಳು, ವಾಸುದೇವಾದಿ ಸಕಲ ದೇವತೆಗಳು, ವಸಿಷ್ಠಾದಿ ಸಕಲಋಷಿಗಳು ಅಗ್ನಿಷ್ವಾತ್ತಾದಿ ಸಕಲ ಪಿತೃಗಳು, ಪ್ರಣವಾದಿ ಸಕಲ ಮಂತ್ರಗಳು, ಸರ್ವದಾ ಸರ್ವತ್ರ ಪ್ರೊಂದೊಂದು ಅವಯವ ರೂಪಂಗಳಾಗಿ ವಾಸವಂ ಮಾಡುವವು; ಒಂದು ತುಲಸೀದಳಾರ್ಚನ ಮಾತ್ರದಿಂದ ಪೂಜಾದ್ರವ್ಯಾಂಗಳಲೋಪದಿಂದುಂಟಾದ ಪಾಪವು ಪರಿಹರವಾಗುವದು, ತುಲಸಿಗೆ ಸಮಾನವಾದ ವಸ್ತು ಯಾವದೂ ಇಲ್ಲ, ತುಲಸೀ ಸಂಬಂಧದಿಂದ ಗ್ರಹಣಾದಿ ದೋಷಂಗಳು ದುಸ್ಸಂಗ ದೋಷಂಗಳು ದುಸ್ಪರ್ಶ ದೋಷಂಗಳು ಪೋಗುವವು, ಕನ್ಯಾದಾನ ಮೊದಲಾದ ಸಕಲ ದಾನಂಗಳಲ್ಲಿ ಸಕಲವ್ರತಂಗಳಲ್ಲಿ ಶ್ರಾದ್ಧಂಗಳಲ್ಲಿಯೂ ತುಲಸಿಯೇ ಮುಖ್ಯವಾಗಿರುವದು, ತುಲಸಿ ಇಲ್ಲದೆ ಪೂಜೆ ವ್ರತಾದ್ಯನುಷ್ಠಾನಂಗಳು ನಿಷ್ಫಲಂಗಳು, ತುಲಸೀ ಮಾಲೆಯ ಸಮರ್ಪಣ ಮಾತ್ರದಿಂದ ಮಹಾವಿಷ್ಣುವು ಅತಿಸಂತುಷ್ಟನಾಗಿ ಮೋಕ್ಷ ಸಾಮ್ರಾಜ್ಯವನ್ನು ಈವನು, ಭಗವದರ್ಪಿತವಾಗಿ ಪ್ರಸಾದ ರೂಪವಾಗಿ ಬಂದ ತುಲಸೀ ಮಾಲಾಧಾರಣದಿಂದ ಪರಿಶುದ್ಧ ದೇಹವುಳ್ಳವನಾಗಿ ಮೋಕ್ಷವಂ ಪಡೆವನು, ಶ್ರೀಮಹಾವಿಷ್ಣುವಿನ ಪೂಜೆಗೆ ಮುಖ್ಯಸಾಧನವಾದ ಶ್ರೀ ತುಲಸಿಯು ಆರಣ್ಯಕವಾಗಿ ತಾನೇತಂದದ್ದು ಸರ್ವೋತ್ತಮವು, ತಾನು ಹಾಕಿದ ಗಿಡದಲ್ಲಿ ತಾನುತಂದದ್ದು ಉತ್ತಮವು, ಪರರಿಂದ ಆರೋಪಿತವಾದ ತಡದಲ್ಲಿ ತಂದದ್ದು, ಕ್ರಯ ಮುಖದಲ್ಲಿ ತರಿಸಿದ್ದು ಮಧ್ಯಮವು, ಭಗವಂತನ ಪೂಜೆಯಲ್ಲಿ ತುಲಸೀದಳವಾಗಲೀ ಉದುರಿದ ಎಲೆಯಾಗಲೀ ತದಭಾವದಲ್ಲಿ ಕಾಷ್ಠವಾಗಲೀ ಅಥವಾ ಮೂಲವಾಗಲೀಮೃತ್ತಾಗಲೀ ಸಮರ್ಪಣವಂ ಮಾಡದಲ್ಲದೆ ಪೂಜೆ ಸಾಂಗವಾಗದು, ತುಲಸೀದಳವಂ ಕರ್ಣದೊಳಿರಿಸಲು ದುಶ್ಶಬ್ದ ಶ್ರವಣ ದೋಷಂಗಳಂ ಪರಿಹರಿಸಿ ಭಗವನ್ನಾಮ ಶ್ರವಣ ಫಲವನ್ನುಂಟು ಮಾಡುವದು, ತುಲಸೀದಳವಂ ಭಕ್ಷಿಸಲು ಕಾಯಶುದ್ಧಿ ಮೊದಲಾಗಿ ಸರ್ವಧಾತುಗಳು ಪರಿಶುದ್ಧವಾಗಿ ಬಗವದುಪಾಸನಂಗಳಿಗೆ ಯೋಗ್ಯವಾಗುವವು, ಪ್ರಸಾದಶೇಷವಾದ ತುಲಸೀ ದಳವನ್ನು ಆಘ್ರಾಣಿಸಲು ದಿವ್ಯಜ್ಞಾನ ಉಂಟಾಗುವದು, ಕಣ್ಣುಗಳಿಗೆ ಒತ್ತಿಕೊಳ್ಳಲು ಭಗವದ್ಭಕ್ತಿಯುಂಟಾಗುವದು, ನೂತನ ತುಲಸೀ ದೊರೆಯದ ಬಳಿಯಲ್ಲಿ ಬಂದುವ

ರ್ಷದ ಪರ್ಯಂತವು ಒಣಗಿದ ತುಳಸಿ ಯಿಂದಲಾದರೂ ಇದರ ಚೂರ್ಣ ದಿಂದಲಾದರೂ ಇದರ ಕಾಷ್ಠ ಗಂಧದಿಂದಲಾದರೂ ತುಳಸೀನಾಮ ಸ್ಮರಣ ದಿಂದಲಾಗಲೀ ಯಾವದಾದರು ಒಂದು ತುಳಸೀ ಸಂಬಂಧ ವಿಲ್ಲದ ಪೂಜೆಯು ಭಗವತ್ಪ್ರೀತಿಕರವಾಗದು, ತುಳಸೀ ಸಂಗ್ರಹಣದೋಳ್ ಯಥಾಶಾಸ್ತ್ರ ಮರ್ಯಾದೆಯಾಗಿ ಪ್ರಾರ್ಥನೆಯಿಂದ ಸಂಗ್ರಹಿಸಬೇಕು, ಈ ತುಳಸೀ ಸಂಗ್ರಹಣಕ್ಕೆ ಚತುರ್ದಶೀ, ಅಷ್ಟಮೀ, ಸಂದತಿಥಿ, ದ್ವಾದಶೀ, ಸಂಕ್ರಮಣ, ವ್ಯತೀಪಾತ, ಮನ್ವಾದಿ ಯುಗಾದಿ, ಜನ್ಮನಕ್ಷತ್ರ, ಶ್ರವಣನಕ್ಷತ್ರ, ಮಧ್ಯಾಹ್ನಾನಂತರ, ಭೋಜನಾತ್ಪರದಲ್ಲಿಯು, ಸ್ನಾನಾತ್ಪೂರ್ವದಲ್ಲಿಯು, ಶುಕ್ರ, ಭಾನು, ಭೌಮವಾರಂಗಳಲ್ಲಿ ಕೂಡದು, ತುಳಸಿ ಇಲ್ಲದೆ ಪೂಜೆಯಂ ಮಾಡುವ ವಿಷಯದಲ್ಲಿ ತತ್ಕಾಲದಲ್ಲಾದರು ಗ್ರಹಿಸಿ ಪೂಜೆಯಂ ಮಾಡಬಹುದು, ಚಾತುರ್ಮಾಸ್ಯ ಮೊದಲಾದ ದಿನಗಳಲ್ಲಿಯು, ಧನುರ್ಮಾಸದಲ್ಲಿಯು, ಶ್ರವಣನಕ್ಷತ್ರದಲ್ಲಿ, ದ್ವಾದಶೀಯಲ್ಲಿ, ತುಳಸೀ ಸಮರ್ಪಣದಿಂದ ವಿಶೇಷ ಫಲವುಂಟು, ಇನ್ನು ದಶಮೀದಿವಸ ಏಕಭುಕ್ತಿಯನ್ನು ಮಾಡಿ ಈ ರಾತ್ರಿಯೋಳ್ ಭಗವದಾರಾಧನವಂ ಮಾಡಿ ಬ್ರಹ್ಮಚರ್ಯದಿಂ ದೊಡಗೂಡಿ ಶುದ್ಧವಾದ ಏಕಾದಶಿಯಲ್ಲಿ ಉಪವಾಸ ದಿಂದ ತ್ರಿಕಾಲದಲ್ಲೂ ವಿಶೇಷವಾಗಿ ತುಳಸಿಯಿಂದ ಭಗವಂತನಂ ಪೂಜಿಸಿ ಆ ರಾತ್ರಿಯೋಳ್ ಭಗವತ್ಪೂಜೆ ಪುಣ್ಯಕಥಾಶ್ರವಣಗಳಿಂದ ಜಾಗರಣವಂ ಮಾಡಿ ದ್ವಾದಶೀದಿವಸ ವಿಶೇಷವಾಗಿ ತುಳಸೀ ದಳಗಳಿಂದ ಭಗವತ್ಪೂಜೆಯಂ ಮಾಡಿದವರಿಗೆ ಚತುರ್ವಿಧ ಪುರುಷಾರ್ಥಂಗಳು ಸುಲಭವಾಗಿ ಲಭಿಸುವವು, ಎಂದು ನಿರೂಪಿಸಿದ ವಿಷ್ಣುಚಿತ್ತರ ಮಾತಂ ಕೇಳಿ ಇಂಥಾ ಮಹಾತ್ಮ್ಯವುಳ್ಳ ಏಕಾದಶೀ ಪ್ರಭಾವವನ್ನು ಸಾವಧಾನ ಚಿತ್ತನಾಗಿ ಕೇಳುವ ನನಗೆ ನಿರೂಪಿಸ ಬೇಕೆಂದು ನುಡಿದ ಮಾತಂ ಕೇಳಿ ವಿಷ್ಣುಚಿತ್ತರು ಆ ಮಹಾತ್ಮ್ಯವನ್ನು ಅನುಗ್ರಹಿಸಿದಪರಿ ಎತ್ತೆಂದರೆ— ಕೇಳೈ ಗುಣವಂತನಾದ ಸುಗಂಧರಾಯನೇ ! ದಿವಸಂಗಳೊಳಗಾಗಿ ಹರಿವಾಸರ ವೆನಿಸಿಕೊಂಡು ಬಹುಪುಣ್ಯಾಕರವಾದ ಏಕಾದಶಿಯ ಪ್ರಭಾವವಂ ಯಾರಿಂದಲೂ ನಿರೂಪಿಸಲಶಕ್ಯವು, ಏಕಾದಶಿಯು ಸರ್ವಶ್ರೇಷ್ಠವಾಗಿ ಸರ್ವ ಪಾಪವನ್ನು ಪರಿಹರಿಸುವಂಥಾದ್ದು, ಪೂರ್ವದಲ್ಲಿ ಲಕ್ಷ್ಮೀ ಸಂದರ್ಶನಾರ್ಥವಾಗಿ ಬ್ರಹ್ಮ ಮೊದಲಾದ ದೇವತೆ-

ಗಳಿಂದ ಉಪವಾಸಾರ್ಥವಾಗಿ ನೇಮಿಸಲ್ಪಟ್ಟಿದ್ದು, ತದಾದಿಯಾಗಿ ಏಕಾದಶೀ ಉಪವಾಸನಂಗೈದು ಭಗವಂತನಂ ಪೂಜಿಸಿ ದ್ವಾದಶೀದಿವಸ ಉದಯದೋಳ್ ವಿಶೇಷವಾಗಿ ಪೂಜೆಯಂಮಾಡಿ ಪಾರಣೆಯಂ ಮಾಡುವರು, ಆದ್ದರಿಂದ ದ್ವಾದಶಿಯು ಮಹಾಪುಣ್ಯಕರವಾಗಿ ಹರಿದಿನವೆನಿಸಿ ಕೊಂಬುವದು, ಯಾರಾದರೂ ಸರಿ ಈ ರೀತಿಯೊಳ್ ಏಕಾದಶೀ ಪ್ರಯುಕ್ತವಾದ ದಶಮಿಯಾ ಏಕಭುಕ್ತಿ, ಬ್ರಹ್ಮಚರ್ಯ, ಏಕಾದಶೀ ಶುದ್ಧೋಪವಾಸ, ಜಾಗರಣೆ, ದ್ವಾದಶೀ ದಿನದ ಪಾರಣೆಯಂ ಮಾಡುವರೋ? ಅವರು ಸರ್ವಪಾಪ ವಿನಿರ್ಮುಕ್ತರಾಗಿ ಇಹಲೋಕದೊಳ್ ಸಕಲಐಶ್ವರ್ಯವಂ ಪಡೆದು ಮೋಕ್ಷಸಾಮ್ರಾಜ್ಯವನ್ನು ಐದುವರು, ಯಾರು ಈ ಹರಿದಿನವೆಂಬ ಏಕಾದಶಿಯೋಳ್ ಅರ್ಚನೆ ಉಪವಾಸ ಜಾಗರಣೆ ಮಾಡದೆ ಭೋಜನ ನಿದ್ರಾದಿಗಳಂ ಮಾಡುವರೋ? ಅವರುವೊಂದೊಂದು ಅಗಳಿಗೆ ವೊಂದೊಂದು ಕೋಟಿ ಕ್ರಿಮಿಗಳಂ ಭಕ್ಷಿಸುವರಾಗಿಯು, ನಿದ್ರೆಯ ಮುಹೂರ್ತಕ್ಕೊಂದು ಬ್ರಹ್ಮಹತ್ಯಾದೋಷಗಳನ್ನನುಭವಿಸುವರಾಗುವರು ; ಸಹಸ್ರಗ್ರಹಣ, ಹತ್ತುಸಾವಿರ ವ್ಯತೀಪಾತ, ಲಕ್ಷ ಅಮಾವಾಸ್ಯವ್ರತವೂ ಕೂಡ ಏಕಾದಶೀವ್ರತೋತ್ತರ ದ್ವಾದಶೀಪಾರಣೆಯ ವ್ರತದ ಹದಿನಾರರಲ್ಲಿ ವೊಂದುಪಾಲನ್ನು ಐದಲಾರವು; ಒಂದು ಯೇಕಾದಶಿ ವ್ರತಾಚರಣೆಯಿಂದ ಸಪ್ತಜನ್ಮದಲ್ಲಿ ಜ್ಞಾನಾಜ್ಞಾನದಿಂಮಾಡಿದ ಬ್ರಹ್ಮಹತ್ಯಾದಿಪಾಪಂಗಳು ಹೋಗುವವು, ಯೇಕಾದಶಿಸ್ಮರಣಮಾತ್ರದಿಂದಲೇ ಶ್ರೀಮಹಾವಿಷ್ಣುವು ಸಂತುಷ್ಟನಾಗುವನು. ಅಶ್ವಮೇಧ ಸಹಸ್ರ, ವಾಜಪೇಯಹತ್ತು ಸಹಸ್ರ ಕೋಟಿಗೋದಾನ, ಕನ್ಯಾದಾನ, ಸಕಲಭೂಪ್ರದಕ್ಷಿಣಂಗಳು ಕೂಡಾ ಏಕಾದಶಿ ಉಪವಾಸದ ಫಲಾಂಶವನ್ನಾದರು ಪಡೆಯಲಾರವು ; ಏಕಾದಶಿಗೆ ಸಮಾನವಾದ ವ್ರತಯಾವದುಯಿಲ್ಲ, ಯಿದೆ ಧರ್ಮಾರ್ಥ ಕಾಮ ಮೋಕ್ಷಪ್ರದ, ಏಕಾದಶಿ ಉಪವಾಸದಿಂದ ಏಕಾದಶೇಂದ್ರಿಯ ಪಾಪಂಗಳು ಹೋಗಿ ಪರಿಶುದ್ಧವಾದಶರೀರಯುಕ್ತನಾಗುವನು. ಯೇಕಾದಶಿಯಲ್ಲಿ ಯಾವಪ್ರಕಾರದಿಂದಲೂ ಸಕಲಪ್ರಾಣಿಗಳು ಭೋಜನವಂ ಮಾಡಬಾರದೆಂದು ಸಕಲಶ್ರುತಿ ಇತಿಹಾಸ ಸ್ಮೃತಿ ಪುರಾಣ ನಿಬಂಧನೆಗಳು ಸಹಸ್ರಮುಖವಾಗಿ ಹೇಳುವದು, ಇಂಥಾವ್ರತವಂ ಬಿಟ್ಟು ಉಪೇಕ್ಷೆಯಿಂದ ಭೋಜನವಂಮಾಡಿದರೆ ಆದೋಷವಬ್ಬರಿಂ

ಪಲೂಪೇಳಲಶಕ್ಯವು ; ಈ ಹರಿದಿವಸವ ಏಕಾದಶಿಯಲ್ಲಿ ನಿರ್ವ್ಯಾಜದಿಂದ ಭೋಜನವಂ ಮಾಡಿದವನು,ಮಾಡೆಂದು ಹೇಳುವವನು,ಹೇಳಿ ಕೇಳಿದ್ದಕ್ಕೆ ಅನುಮತಿಪಟ್ಟವನು, ಕೂಡ ನರಕವ ನೈದುವನು ; ದಶಮೀಪೂರ್ಣವಿದ್ಧವಾದ ಏಕಾದಶಿಯಲ್ಲಿ ಮಾಡಿದ ಉಪವಾಸವು ನಿಷ್ಫಲವಾಗಿರುವದು ಹರಿವಾಸರವೆಂದು ಪ್ರಸಿದ್ಧವಾಗಿರುವ ದ್ವಾದಶಿಯ ಆದಿಭಾಗದಲ್ಲಿ ಮಾಡಿದ ಪಾರಣೆಯು ನಿಷ್ಫಲವೆಂಬುವರು, ಅಶಕ್ತಿವಿಷಯದಲ್ಲಿ ಬಾಲ ವೃದ್ಧಾತುರರಿಗೆ ವ್ರತಭಂಗವಿಲ್ಲದೆ ಇರುವ ಫಲ ಮೂಲಾದಿಗಳನ್ನು ಜೀವನಾರ್ಥವಾಗಿ ಸ್ವಲ್ಪ ಗ್ರಹಿಸಬಹುದೆಂದು ಪೇಳುವರು, ಈ ಪ್ರಕಾರ ಇಪ್ಪತ್ತನಾಲ್ಕು ಏಕಾದಶಿಯೂ ವಿಷ್ಣುವಿನ ಉಪದೇಶವುಳ್ಳ ಬ್ರಹ್ಮನಿಂದ ಪಕ್ಷಪ್ರಾಯಶ್ಚಿತ್ತ ರೂಪವಾಗಿಯು ಸಷ್ಕ್ಯಾದಿಗಳಿಗೆ ಕೈಂಕರ್ಯರೂಪವಾಗಿಯೂ ಸಕಲೇಂದ್ರಿಯದೋಷಂಗಳಂ ಪರಿಹರಿಸಿ ಶುದ್ಧ ಸತ್ವವನ್ನುಂಟು ಮಾಡಿ, ಭಗವತ್ಪ್ರೀತಿಕರವಾಗಿ ಸೇವಾರೂಪದಿಂದ ಸದ್ಗತಿಗೆ ಕಾರಣವಾಗಲೀ ಯೆಂದು ಸಕಲ ಚೇತನೋದ್ಧಾರಾರ್ಥವಾಗಿ ಕ್ಲಿಪ್ತವಾಗಿ ಮಾಡಲ್ಪಟ್ಟದ್ದು ; ಇವರೊಳ್ ಚಾತುರ್ಮಾಸ್ಯದೊಳಿಂಟು ಏಕಾದಶಿಗಳು ಮತ್ತೂ ಶ್ರೇಷ್ಠಂಗಳು ಅವರೊಳಗಾಗಿ ಆಷಾಢ ಕಾರ್ತಿಕಶುದ್ಧ ಏಕಾದಶಿಗಳು ಅತ್ಯಂತ ಶ್ರೇಷ್ಠತಮಂಗಳು, ಆಯಾಯ ದ್ವಾದಶಿಗಳೂ ಕೂಡ ಅದೇ ಮೇರಿಗೆ ಶ್ರೇಷ್ಠತರಂಗಳಾಗಿ ಇರುವವು,ಮತ್ತಂ ದ್ವಾದಶಿಯು ಶ್ರವಣೋಪೇತವಾದರೆ ಅದರ ಮಾಹಾತ್ಮೆಯು ಹೆಚ್ಚೆಂದು ಪೇಳಬಹುದು, ಈ ನೇಮಂಗಳು ಸರ್ವವರ್ಣಾಶ್ರಮಂಗಳಿಗೂ ಸಾಧಾರಣವಾಗಿರುವವು, ಪಶುಪಕ್ಷಿ ಮೊದಲಾದ ಪ್ರಾಣಿಮಾತ್ರಗಳಿಗೂ ಸದ್ಗತಿಯನ್ನುಂಟುಮಾಡುವವು, ಈ ಮೇರಿಗೆ ಏಕಾದಶೀವ್ರತವನ್ನು ಮಾಡಿದವರಿಗೂ ವ್ರತಕಥಾಶ್ರವಣವನ್ನು ಮಾಡಿದವರಿಗು ಸಂತೋಷಪಟ್ಟವರಿಗೂ ಸಹಿತವಾಗಿ ಅರ್ಚಿರಾದಿ ಮಾರ್ಗದಿಂದ ವೈಕುಂಠಲೋಕ ಪ್ರಾಪ್ತಿ ಆಗುವದು. ಎಂದು ನುಡಿದ ವಿಷ್ಣು ಚಿತ್ತರ ಮಾತು ಕೇಳಿದ ಸುಗಂಧನುಹಾರರಾಯನು ಅರ್ಚಿರಾದಿಯೆಂಬ ಮೋಕ್ಷಮಾರ್ಗವನ್ನು ನಿರೂಪಿಸಬೇಕೆನಲು ಆ ವಿಷ್ಣು ಚಿತ್ತರು ಪೇಳಿದ ಪರಿಯೆಂತೆಂದರೆ, ಕೇಳ್ಳೆ ಮಹಾರಾಜಕುಮಾರನೆ ! ಮೋಕ್ಷೇಚ್ಛೆಯುಳ್ಳ ಜ್ಞಾನಿಗಳಿಗೆ ಮೋಕ್ಷಮಾರ್ಗವಾದ ಅರ್ಚಿರಾದಿಗತಿಯಂ ಪೇಳುತ್ತಲಿದ್ದೇನೆ, ಭಕ್ತಿಯಿಂದ ಕೇಳಿದ

ನಗಾತ್ರಯದಿಂದಲೆ ವೈಕುಂಠದಲ್ಲಿ ನಿತ್ಯವಾಸ ಉಂಟಾಗುವದು, ಅದೆಂತೆಂದರೆ, ಸತ್ಯಜ್ಞಾನಾನಂದ ಸ್ವರೂಪನಾಗಿ ಪರಬ್ರಹ್ಮರೂಪದಿಂದ ಸಕಲ ಚರಾಚರಾತ್ಮಕವಾದ ಪ್ರಪಂಚವನ್ನು ವ್ಯಾಪಿಸಿ ಇರುವ ಶ್ರೀಮನ್ನಾರಾಯಣನು ಸಕಲ ಚೇತನಾಚೇತನ ಪ್ರಪಂಚವು ತನ್ನಿಂದಲೆ ಸೃಷ್ಟವಾಗಿ ತನ್ನಿಂದಲೆ ಪರಿಪಾಲಿತವಾಗಿ ತನ್ನಲ್ಲಿಯೇ ಲೀನವಾದ ತರುವಾಯ ತಾನು ಪ್ರಬುದ್ಧನಾಗಿ ಆನಂದದಿಂದ ಬಹುಕಾಲ ನಿರಂತರ ತಮೋರೂಪವಾದ ಮಾಯೆಯ ಪ್ರಾರ್ಥನೆಯಿಂದ ಇಚ್ಛೆ ಉಂಟಾಗಲು, ಆ ಭಗವಂತನೇ ಸಕಲ ಕಾರ್ಯಂಗಳಾಗಿಯೂ ಕಾರಣಂಗಳಾಗಿಯೂ ಸಂಕಲ್ಪಿಸಿ ಸೃಷ್ಟಿಕ್ರಮವಾದ ತಪಸ್ಸು, ಆ ತಪಸ್ಸಿನಿಂದ ಅಕ್ಷರ, ಅಕ್ಷರದಿಂದ ಅವ್ಯಕ್ತ, ಅವ್ಯಕ್ತದಿಂದ ಸಾತ್ವಿಕ ರಾಜಸ ತಾಮಸ ಅಹಂಕಾರಗಳು, ಅವರಿಂದ ಏಕಾದಶೇಂದ್ರಿಯಂಗಳು, ಅವರಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ತನ್ಮಾತ್ರಂಗಳು ಉಂಟಾಗುವವು, ಅದರಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿಯು, ಅಗ್ನಿಯಿಂದ ಅಪ್ಪು, ಅಪ್ಪಿನಿಂದ ಪೃಥಿವೀ, ಈ ಮೇರೆಗೆ ಆಗಿ ತಿರ್ಯಗ್ಜನ್ಮಮನುಷ್ಯಸ್ಥಾವರಾದಿಗಳಂ ಸೃಜಿಸಲು, ಈ ಪ್ರಕಾರದಿಂದ ಸೃಷ್ಟಿಸಿರುವ ಪ್ರಪಂಚದಲ್ಲಿ ತಮ್ಮ ತಮ್ಮ ಅನಾದಿಪ್ರವಾಹರೂಪನಾದ ಕರ್ಮ ಸಂಬಂಧದಿಂದ ಸಕಲ ಚೇತನಂಗಳು ಜನನ, ಮರಣ, ಆಧಿ, ವ್ಯಾಧಿ, ಸುಖ, ದುಃಖಮಯವಾಗಿ ಮರಳಿ ಮರಳಿ ಅನೇಕ ಜನ್ಮಂಗಳನ್ನೆತ್ತಿ ಬಂದು ಒಂದುಬಗೆಯಿಂದಲೂ ಕಡೆಗಾಣದೆ ಸಂಸಾರವೆಂಬ ಸಮುದ್ರದೋಳ್ ಶ್ಲೇಷ್ಮಕೂಪದೋಳ್ ಬಿದ್ದ, ಹೊರಳಿನರಳುವ ಮಕ್ಷಿಕಾದಿಗಳಂತೆ ಮುಳುಗಿಕೊಂಟಲೆ ಗೊಳುತ್ತಿರುವದಂ ಕಂಡು ಕೃಪಾಸಾಗರನಾದ ನಾರಾಯಣನು ಪರಮ ಕಟಾಕ್ಷವುಳ್ಳವನಾಗಿ ತಾನೆ ಶಿಷ್ಯಾಚಾರ್ಯ ರೂಪವಂ, ಮಂತ್ರ ಮಂತ್ರಾರ್ಥ ರೂಪವಂ, ಸಾಧ್ಯ ಸಾಧನರೂಪವಂ, ಧರಿಸಿ ಮೋಕ್ಷಕ್ಕೆ ಮುಖ್ಯ ಸಾಧನವಾದ ತತ್ವ ಜ್ಞಾನೋಪಯುಕ್ತಂಗಳಾದ ವರ್ಣಾಶ್ರಮ, ಸತ್ಕರ್ಮಾಚರಣೆ, ಯಜ್ಞ, ದಾನ, ತಪೋಹೋಮ, ಧ್ಯಾನ, ಸಂಧ್ಯಾವಂದನ, ಪಂಚಮಹಾಯಜ್ಞ, ಅಗ್ನಿಹೋತ್ರ, ತೀರ್ಥಯಾತ್ರೆ ಪುಣ್ಯಕ್ಷೇತ್ರವಾಸ, ಕೃಚ್ಛ್ರ, ಚಾಂದ್ರಾಯಣವ್ರತ, ಚಾತುರ್ಮಾಸ್ಯ, ಫಲಮೂಲಾಶನ, ಶಾಸ್ತ್ರಾಭ್ಯಾಸ, ಜಪ, ಸಂತರ್ಪಣ, ನಾಮಸಂಕೀ

ತ್ನಾನ, ಸುರಾರ್ಜನೆ, ಗುರುಕುಲವಾಸ, ವೇದ ವೇದಾಂತಾದಿಶ್ರವಣ, ಪಠಣ. ಪ್ರಪತ್ತಿ, ಶರಣಾಗತಿ, ಸ್ವಸ್ವರೂಪ, ಪರಸ್ವರೂಪ, ಪುರುಷಾರ್ಥಸ್ವರೂಪ, ಉಪಾಯಸ್ವರೂಪ, ವಿರೋಧಿ ಸ್ವರೂಪಗಳಂ ಶಾಸ್ತ್ರರೂಪದಿಂದ ಉಪದೇಶವಂಮಾಡಿ, ಕರ್ಮ ಜ್ಞಾನ ಭಕ್ತಿ ವೈರಾಗ್ಯಗಳಂ ತಿಳಿಸಲು, ಆ ಭಗವದನುಗ್ರಹ ಬಲದಿಂದ ಪರಬ್ರಹ್ಮರೂಪವಾಗಿ ಅಜ್ಞಾನಾಂಧಕಾರವಂ ಪರಿಹರಿಸುವಲ್ಲಿ ಸೂರ್ಯನಂತೆ ಇರುವಗುರುಗಳಿಂದ ತಿಳಿದು ಸಂಸಾರದಿಂದ ಬಿಡಲ್ಪಟ್ಟು ಮೋಕ್ಷವನ್ನೈದುವ ಅರ್ಚಿರಾದಿಮಾರ್ಗಕ್ಕೆ ಆದಿಯಲ್ಲಿ ಸತ್ಸಂಗತಿ ಉಂಟಾಗಿ ಸಂಸಾರ ಸಂಬಂಧ ಹೇಯವಾಗಿ ಅದರಲ್ಲಿ ಜಿಗುಪ್ಸೆಹುಟ್ಟಿ ಸತ್ಪುರುಗಳ ಉಪದೇಶಮುಖದಿಂದ ಶ್ರೀಮನ್ನಾರಾಯಣನೊಳ್ ಪ್ರಪತ್ತಿಯಂಮಾಡಿ ಸುಜ್ಞಾನಿಯಾಗಿ ಪ್ರಾರಬ್ಧ ರೂಪವಾದ ಕರ್ಮವಾಸನಾ ಸಂಬಂಧವು ವಿಶೇಷವಾಗಿ ಅನುಭವಿಸಿ ಸಂಚಿತ ಕರ್ಮಶೇಷವಿಲ್ಲದೆ ಆಗಾಮಿಯಾದ ಕರ್ಮಂಗಳಂ ತನ್ನಂಹತ್ತದಂತೆ ಮಾಡಿಕೊಂಡು ನ್ಯಾಸಮಾರ್ಗವಾಗಿಯೋಗಶಕ್ತಿಯಿಂದ ತದೇಕಾಯತ್ತಚಿತ್ತನಾಗಿಸರ್ವದಾ ಭಗವದ್ಗುಣಾನುಭವ ನಾಮಸ್ಮರಣಾದಿಗಳಿಂದ ಭಗವಂತನ ದಿವ್ಯಕಟಾಕ್ಷಬರಲು ಈ ಪ್ರಾಕೃತದೇಹದಿಂದ ಲಿಂಗಶರೀರವೆಂಬ ಸೂಕ್ಷ್ಮಶರೀರದಿಂದ ಮಧ್ಯಧಮನೀಯಮಾರ್ಗವಾಗಿ ಹೊರಟು ಬ್ರಹ್ಮರಂಧ್ರವಂ ಭೇದಿಸಿ ಅನ್ಯದೇಹವಂ ತಾಳ್ದು ಬಹಿರ್ಗತನಾಗಿ ಅವಾಂತರಲೋಕವ್ಯಾಪಕವಾದ ಧೂಮಾದಿಮಾರ್ಗವಂಬಿಟ್ಟು ಅಪ್ರಾಕೃತ ಲೋಕವ್ಯಾಪಕವಾದ ಅರ್ಚಿರಾದಿಮಾರ್ಗದೊಳ್ ಪೊಕ್ಕು, ಅಗ್ನಿಲೋಕವಂ ಪ್ರವೇಶಿಸಿ ದಿನಪೂರ್ವಪಕ್ಷ ಉತ್ತರಾಯಣ ಅಬ್ದಂಗಳಂಕಳೆದು ವಾಯುಲೋಕವು ಶೇರಿ ಅಲ್ಲಿಂದಸೂರ್ಯಲೋಕಕ್ಕೆ ಬಂದು ಸೂರ್ಯ ಕಿರಣಗಳಬೆಳಕಿನಿಂದ ಅಲ್ಲಿರುವ ದೇವತೆಗಳ ಸನ್ಮಾನದಿಂದ ಚಂದ್ರಲೋಕಕ್ಕೆ ಪೋಗಿ ಅಲ್ಲಿರುವವರಿಂದ ಎದುರುಗೊಂಡು ಮುರ್ಯಾದೆಗೊಳಿಸುತವಿದ್ಯುಲ್ಲೋಕ ವರುಣಲೋಕ ಇಂದ್ರಲೋಕಗಳಂ ದಾಂಟಿ ಅಲ್ಲಲ್ಲಿ ಉಪಚಾರವಂ ಪಡೆದು ಬಹ್ಮಲೋಕವಂ ಪೊಕ್ಕು, ಬಹುಮಾನಿತನಾಗಿ ಅಲ್ಲಿಂದಹೊರಟು ಸೀಮಾಂತಸಿಂಧುವೆಂಬವಿರಜಾನದಿಯೊಳ್ ಸ್ನಾನವಂ ಮಾಡಿ ಪ್ರಾಕೃತವಾದ ಪಂಚ ಭೂತ ಸಂಬಂಧವಾಗಿ ಇರುವ ಸರ್ವೇಂದ್ರಿಯಂಗಳಂ ಆತೀರದಲ್ಲಿ ಬಿಟ್ಟು ಭತ್ತದಹೊಳಗಣ ಆಕೃ

ಗೆ ಮೇಲೆ ಮುಚ್ಚಿ ಉತ್ಪತ್ತಿಕಾರಣವಾಗಿರುವ ಹೊಟ್ಟೆಸೋಪಾಧಿಯಲ್ಲಿ ಪುನರ್ಜನ್ಮಕ್ಕೆ ಕಾರಣವಾದ ಲಿಂಗದೇಹವು ಕೊಟ್ಟಿ ಹೋಗಲು, ಆವಿರ ಜಾನಸ್ನಾನಬಲದಿಂದ ಅಲ್ಲಿ ಅಮಾನವನೆಂದು ವಂದುರೂಪದಿಂದಇರುತ್ತಿರುವ ಪುರುಷೋತ್ತಮನ ದಿವ್ಯಕರಸ್ಪರ್ಶ ಮಾತ್ರ ಮಹಿಮೆಇಂದಲು,ಅಪ್ರಾಕೃತವಾದ ಜ್ಞಾನಾನಂದ ರೂಪವಾದ ದಿವ್ಯದೇಹದಿಂ ಸಹಿತನಾಗಿ ಅಲ್ಲಿರುವವರಿಂದ ಜಯಘೋಷಯೊಡನೆ ಕೂಡಿ ಸಕಲ ವೈಭವದಿಂದ ವೈಕುಂಠ ನಗರಮಂ ಪೊಕ್ಕು ಚತುರ್ಭುಜನಾಗಿ ಲಕ್ಷ್ಮೀಪತಿತ್ವಮೊದಲಾದ ನೂರುಗುಣ ಹೊರತು ಕಡಮೆಗುಣಂಗಳಲ್ಲಿ ಭಗವತ್ಸಮನಾಗಿ ಅಲ್ಲಿ ನಿತ್ಯವಾಗಿ ಬ್ರಹ್ಮಾನಂದ ಸ್ವರೂಪವಾದ ಸಾರೂಪ್ಯಸಾಯುಜ್ಯಮುಂ ಪಡೆಯುವನು, ಎಂದು ಶಾಸ್ತ್ರಸಿದ್ಧವಾದ ಅರ್ಚಿರಾದಿಮಾರ್ಗವಂ ಪೇಳಿ, ಮತ್ತಂ ವೈಕುಂಠಲೋಕ ಮೊದಲಾದ ಭಗವದಾಭಿಮುಖ್ಯ ದಿವ್ಯಸ್ಥಾನಂಗಳ ಮಾಹಾತ್ಮ್ಯಂಗಳಂ ಸಕಲ ಮೂರ್ತಿ ಲಕ್ಷಣಂಗಳಂ ಸಾಳಗ್ರಾಮ ಸ್ವರೂಪಂಗಳಂ ತುಲಸೀಪ್ರಭಾವವಂ ಏಕಾದಶೀ ಮಹಿಮೆಯುಂ ಅರ್ಚಿರಾದಿ ಮಾರ್ಗಪ್ರಶಂಸೆಗಳೆಂಬ ಇಂತೀಭಗವನ್ಮಾಹಾತ್ಮ್ಯ ಕಲ್ಯಾಣ ಗುಣಂಗಳಂಪಠಿಸುವವರಿಗೆ ಕೇಳುವವರಿಗೆ, ಹೇಳಿ ಕೇಳುವದಂಕಂಡು ಸಂತೋಷಪಡುವವರಿಗೆ,ಸಹಿತವಾಗಿ ಶ್ರೀಮನ್ನಾರಾಯಣನು ಅವರ ಸಕಲ ಪಾಪಂಗಳಂ ಪರಿಹರಿಸಿ, ಮಾರ್ಕಂಡೇಯಾದಿಗಳಂತೆ ದೀರ್ಘಾಯುಷ್ಯವಂಕೊಟ್ಟು, ಸೌಭರಿಯಂತೆ ಪುತ್ರಪೌತ್ರಾದಿ ಸಂತತಿ ಸಂಪತ್ತುಗಳಂ,ಸಕಲಾರೋಗ್ಯಭಾಗ್ಯಂಗಳಂ, ಸಕಲ ಸಿದ್ಧಿಗಳಂ,ಸರ್ವೈಶ್ವರ್ಯವಂ, ಸಕಲ ಜಯಂಗಳಂ,ದಿವ್ಯ ಜ್ಞಾನವಂ, ಇನ್ನೂ ಸಮಸ್ತಾಭೀಷ್ಟಗಳನ್ನು ಇಹಲೋಕದಲ್ಲಿ ಚತುರ್ವಿಧ ಪುರುಷಾರ್ಥಂಗಳಂ ಕೊಟ್ಟು, ಮೋಕ್ಷ ಸಾಮ್ರಾಜ್ಯವನ್ನು ಕೊಡುವನು; ಎಂದು ಫಲಶ್ರುತಿಯುಂ ಪೇಳಿದ ವಿಷ್ಣುಚಿತ್ತರ ಮಧುರವಾದ ಪುಣ್ಯಾಕರವಾದ ವಚನವಂ ಕೇಳಿ,ಸುಗಂಧಮಹಾರಾಜನು ಚಂದ್ರನಂ ಕಂಡ ಸಮುದ್ರನಂತೆ ಆನಂದದೊಳ್ ಮೈಯುಬ್ಬಿ ಸಂತುಷ್ಟನಾಗಿ ಎದ್ದು ಆ ಋಷಿಸಮೂಹಕ್ಕೆ ನಮಸ್ಕಾರವಂ ಮಾಡಿ ನಿಮ್ಮ ಸಂದರ್ಶನದಿಂದ ಕೃತಾರ್ಥನಾದೆನು, ನಿಮ್ಮ ಅನುಗ್ರಹದಿಂದ ಸಕಲವಂ ತಿಳಿದೆನು, ಯೆಂದು ನುಡಿದು ಮತ್ತಂ ವಿಷ್ಣುಚಿತ್ತರಂ ಕುರಿತು, ಮಹಾನುಭಾವರಾದ ತಮ್ಮ

ವಚನಗಳಿಂದ ಪ್ರತ್ಯಕ್ಷವಾಗಿ ಭಗವದ್ದರ್ಶನ ಆದಂತೆ ಆಯಿತು, ನಾನು ಧನ್ಯನಾದೆನೆಂದು ಹೇಳಿ, ಅವರಿಗೆ ಗುರು ದಕ್ಷಿಣೆಯಾಗಿ ರತ್ನಾದಿಗಳನಿತ್ತು ಪಾದಂಗಳಂ ಮುಟ್ಟಿ ಸಾಷ್ಟಾಂಗವಾಗಿ ನಮಸ್ಕರಿಸಿ, ಮಿಕ್ಕಾದ ಋಷಿ ಗಳನ್ನು ಭೂಷಣಾದಿಗಳಿಂದ ಸತ್ಕರಿಸಿ ಇನ್ನೂ ಅನೇಕ ವಿಚಿತ್ರ ಕಥಾಲಾಪಗಳಂ ಮಾಡುತ್ತಾ ಇರುವಲ್ಲಿ, ಸೂರ್ಯನು ಸುಗಂಧರಾಯನ ತೇಜೋಧಿಕ್ಯವನ್ನೋಡಿ ಲಜ್ಜಿತನಾದವನಂತೆ ಪಶ್ಚಿಮಾಂಬುಧಿಯೊಳ್ ಪ್ರವೇಶಿಸಲು, ರಾಜಶಿರೋಮಣಿಯಾದ ಸುಗಂಧರಾಯನು ಸಂಧ್ಯಾದಿ ಸತ್ಕರ್ಮಗಳನ್ನಾಚರಿಸಿ ಆಮಹರ್ಷಿಗಳ ಪ್ರಸಾದ ಫಲ ಪುಷ್ಪಂಗಳಂಪರಿಗ್ರಹಿಸಿ ಸುಮತಿಯೆಂಬ ಮಂತ್ರಿಯಿಂದಲೂ ಭಾಮಾಗುಪ್ತನಿಂದಲೂ ಒಡಗೂಡಿ ಆವಿಷ್ಣುಚಿತ್ತರ ಆಶ್ರಮದಲ್ಲಿ ಅವರಕಡೆಯಿಂದ ಉಪಚರಿಸಲ್ಪಟ್ಟವನಾಗಿ ವಿಷ್ಣುಚಿತ್ತರ ಆಶ್ರಮದಲ್ಲಿ ನಿದ್ರಾಸುಖದೊಳಿರುತ ಉಷಃಕಾಲದಲ್ಲಿ ವಿಷ್ಣುಚಿತ್ತರಿಂದಲೂ ಅವರಪರಿವಾರದಿಂದಲೂ ಮಾಡಲ್ಪಟ್ಟ ದೇವತಾಸ್ತುತಿಗಳಂ ಸುಪ್ರಭಾತಾದಿ ಭಗವದ್ವಿಚಾರಗಳಾದ ಗ್ರಂಥಾನುಸಂಧಾನಗಳಂ ಕರ್ಣಶ್ರಾವ್ಯವಾಗಿ ಕೇಳಿ ಯೆಚ್ಚತ್ತು ಶೌಚಾಚಮನಾದಿಗಳಿಂದ ಶುದ್ಧಮನಸ್ಕನಾಗಿ ತಾನು ಇಷ್ಟದೇವತಾ ಸ್ತೋತ್ರವಂ ಉಚ್ಚರಿಸುತ ವಿಹಿತಕಾಲದೊಳ್ ಆತಪಸ್ವಿಗಳಂ ಸಹಿತವಾಗಿ ಪ್ರಾತಸ್ನಾನವಂ ಮಾಡಿ ಸಂಧ್ಯಾದಿಸತ್ಕರ್ಮಗಳಂನೆರವೇರಿಸಿ,ಆಬಳಿಕ ವೇದಾಂತಶ್ರವಣಕಾಲದೊಳ್ ಆಋಷಿಗಳಿಂದ ಈದಿನ ಇಲ್ಲಿ ಭಗವದರ್ಪಿತವಾದ ಋಷಿಗಳಿಗೆ ವಿಹಿತವಾದ ಫಲಾದಿಗಳನ್ನು ಆತಿಥ್ಯವಾಗಿ ಪರಿಗ್ರಹಿಸಬೇಕೆಂದು ಪ್ರಾರ್ಥಿಸಲ್ಪಟ್ಟು, ಆ ಸುಗಂಧರಾಯನು ಅವರಂಕುರಿತು ಭಕ್ತರಿಗೆ ಭಗವತ್ಪ್ರಸಾದವೆ ಅವಶ್ಯ ಗ್ರಾಹ್ಯವಾಗಿ ಇರುವದು, ಅದರೊಳಗೂಆಭಗವತ್ಪ್ರಸಾದವೇ ಪರಮ ಭಾಗವತ ಮುಖದಿಂದ ಲಭಿಸುವದಕ್ಕಿಂತ ಪಾವನವಾದ ವಸ್ತುಉಂಟೆ? ತಮ್ಮಿಂದ ಸೂಚಿಸಲ್ಪಟ್ಟಿರುವದು ಅವಶ್ಯವಾಗಿ ಆಗತಕ್ಕದ್ದೆಂದು ಅಂಗೀಕಾರವಚನವಂ ಕೇಳಿದ ಋಷಿಗಳು ವಿಷ್ಣುಚಿತ್ತರಿಗೆ ವಿಜ್ಞಾಪನವಂ ಗೈಯಲು,ಅವರ ಅಪ್ಪಣೆಯಿಂದ ದಿವ್ಯವಾದ ಕಂದಮೂಲಂಗಳಂ ಆರಣ್ಯಕಧಾನ್ಯಗಳಿಂದಮಾಡಲ್ಪಟ್ಟ ಹವಿಸ್ಸುಗಳಂ,ಯಾಗಶೇಷವಾದಘೃತಕ್ಷೀರಂಗಳಂ, ಸಾತ್ವಿಕಶಾಕಾದಿಗಳಂ ತಂದು ಸಿದ್ಧವಾಗಿ ಮಾಡಿ

ಸುಗಂಧರಾಯನಂಕರೆದು ತೀರ್ಥಗಂಧಪುಷ್ಪಾದಿಗಳಂ ಕೊಟ್ಟು ಮಂತ್ರಿ ಸಮೇತವಾಗಿ ಆತಿಥ್ಯವಂ ಕೊಟ್ಟು ರಾಜೋಪಚಾರಗಳಿಂದ ಉಪಚರಿಸಿ ಮರ್ಯಾದೆಯಿಂದ ವಿಷ್ಣು ಚಿತ್ತರ ಬಳಿಗೆ ಕರೆತರಲು,ಆ ಸುಗಂಧರಾಯ ನು ವಿಷ್ಣುಚಿತ್ತರಿಗೆ ಸಾಷ್ಟಾಂಗ ಪ್ರಣಾಮವಂ ಗೈದು ಕಾರ್ಯಾರ್ಥ ವಾಗಿ ಹೊರಡಲಿಚ್ಛೆಯುಳ್ಳ ನನಗೆ ಅಪ್ಪಣೆಯಂ ಕೊಡಬೇಕೆಂದು ನುಡಿವಮಾತಂ ಕೇಳಿ ಪರಮ ಭಾಗವತ್ತೋತ್ತಮರಾದ ವಿಷ್ಣುಚಿತ್ತರು ಸುಗಂಧರಾಯನಂನೋಡಿ, ಎಲೈ ಜಯಶೀಲನಾದ ಮಹಾ ರಾಯನೆ ! ನಿನಗೆಶುಭವಾಗಲೀ, ಅವಶ್ಯವಾಗಿ ತೆರಳತಕ್ಕದ್ದು, ನಿನಗೆ ಸಕಲ ವಸ್ತುಗ ಳು ಲಭಿಸಲೀ, ಸಕಲಕ್ಷೇಮವೂ ಆಗಲೀ, ನೀನು ಕೃತಕೃತ್ಯನಾಗುವದರ ಲ್ಲಿ ಸಂಶಯವಿಲ್ಲ, ನೀನು ದೇವಾಂಶ ಪುರುಷನಾದ್ದರಿಂದ ಸಕಲದಲ್ಲೂ ದೇವ ತಾ ಸಹಾಯ ಉಂಟು ಎಂದುನುಡಿದುಪುಷ್ಪಾಕ್ಷತೆ ಫಲಗಳಂಕೊಟ್ಟು ಅ ನುಗ್ರಹಿಸಲು ; ಆ ಸುಗಂಧ ಮಹಾರಾಯನು ಬಾಲ ಸೂರ್ಯನಂತೆ ಕ್ಷಾತ್ರತೇಜಸ್ಸಿನಿಂದ ಅತಿಪ್ರಕಾಶ ಮಾನನಾಗಿ ವಿಷ್ಣುಚಿತ್ತರ ಅಪ್ಪಣೆ ಯಂ ತೆಗೆದುಕೊಂಡು ಅಲ್ಲಿಂದ ಹೊರಟು ಬರುತ ಮಾರ್ಗ ದೊಳಿರುವ ವನಂಗಳಲ್ಲಿರುವ ನಾನಾವಿಧ ಫಲಪುಷ್ಪಗಳಿಂದ ನಿಬಿಡವಾಗಿರುವ ಲವಂಗ ಜಾತಿ ಕೇಸರ ದಾಡಿಮ ಖರ್ಜೂರ ಚಂಪಕ ಮೊದಲಾದ ವೃಕ್ಷಪಙ್ಕ್ತಿ ಗಳಂ ಆವೃಕ್ಷಂಗಳೊಳಿರುವ ಯುಳೇತ್ರಳರು ಬಳಿಯಲ್ಲಿ ಕುಳಿತು ಧ್ವನಿ ಗೈವ ಕೋಕಿಲ ಮಯೂರ ಶುಕ ಶಾರಿಕಾದಿ ಪಕ್ಷಿಗಳಂ ನೋಡುತ, ಅವು ಗಳ ಕಲಮಧುರ ಧ್ವನಿಯಂ ಕೇಳುತ, ಮಲ್ಲಿಗೆ ಜಾಜಿ ಇರುವಂತಿಗೆ ಮೊ ಲ್ಲೆ ಮೊದಲಾದ ಲತೆಗಳಲ್ಲಿ ವಿಕಸಿತವಾಗಿರುವ ಪುಷ್ಪಗಳ ಗಂಧವನ್ನಾ ಘ್ರಾಣಿಸುತ, ಸುಮತಿಯೊಡನೆ ವೃಕ್ಷಂಗಳ ಇರಸರಿಕೆಗಳಂ ಬಗೆಬಗೆ ಯಿಂದ ಪರಸ್ಪರವಾಗಿ ಉತ್ಪ್ರೇಕ್ಷಿಸುತ, ದಾರದಲ್ಲಿ ಅತಿ ಪ್ರಕಾಶವಾಗಿ ಆ ಕಾಶವಂ ತುಡುಕುವ ಅನೇಕ ಶಿಖರೋಪೇತವಾದ ರತ್ನಾದಿಧಾತುಗಳಿಂದ ಥಳಥಳಿಪ ಪುಷ್ಕರಪರ್ವತವೆಂಬ ಗಿರಿಯಂಕಂಡು ಅದಂಬಳಸಿ ನೋಡುತ ಅವರತಪ್ಪಲೊಳ್ ಋಷಿವೇಷದಿಂದ ತಪಸ್ಸಂಮಾಡುವ ಸಪರಿವಾರನಾದ ಕರಾಳನೆಂಬ ದುಷ್ಟರಾಕ್ಷಸನಂ ಕಂಡು, ಸೀಚನ-ಸಮೀಪದೊಳಿರುವ ಸ ದ್ವೀಪವಂತೆ ತೋಱುವ ವಿಮಾನವೂ ರಾಕ್ಷಸನವಶದಲ್ಲಿರುವದಂ ಕಂಡು ಈ

ರಾಕ್ಷಸರಿಂದ ಆಕ್ರಮಿಶಿರುವ ವಿಮಾನವಂ ಗ್ರಹಿಸಲೋಸುಗ ಆಪ್ರದೇಶದೊಳೊಂದುಬಳಿಯಲ್ಲಿನಿಂತುಕೊಂಡುಮಂತ್ರಿಯೊಡನೆಮಾತಾಡುತ್ತ, ತನ್ನ ದೂತನಾದಛಾಯಾಗುಪ್ತನ ಮುಖಾಂತರವಾಗಿಕರಾಳನೆಂಬ ರಾಕ್ಷಸನಬಳಿಗೆ ವಿಮಾನವಂ ನಮಗೆ ಸ್ನೇಹಭಾವದಿಂದಲಾದರೂ ಭಕ್ತಿಭಾವದಿಂದಲಾದರೂ ಭಯದಿಂದಲಾದರೂ ಕೊಟ್ಟು ಕಳುಹಿಸುವದೆಂದು ಹೇಳಿಕಳುಹಿಸಲು, ಆ ಮಾತಂ ಕೇಳಿ ರಾಕ್ಷಸೇಂದ್ರನು ಕ್ರೂರರಾದ ತನ್ನ ಭಟರ ಮುಂದೆ ಅತಿತಪ್ತವಾದ ಆಜ್ಯದಲ್ಲಿಉದಕಬಿಂದು ಬಿದ್ದಂತೆ ಬಹುಕೋಪಾಕ್ರಾಂತನಾಗಿ ಆರ್ಭಟಿಸಿ ಘೂಗ್ಯಾಡುತ್ತ, ಹಲ್ಲುಗಳಂ ಕಡಿದು ಭುಜವನ್ನಪ್ಪಳಿಸುತ್ತ, ಎದುರಾಗಿರುವ ಛಾಯಾಗುಪ್ತನಂ ನೋಡಿ ಎಲೈ ದೂತನೆ ! ನೀನು ಯಾರು, ಎಲ್ಲಿಂದ ಬಂದಿರುವೆ, ನಿನ್ನ ಹೆಸರೇನು, ನಿನ್ನೊಡೆಯನ್ಯಾರು, ನಿನ್ನಂಕಳುಹಿದವನ್ಯಾವನು, ವೊಬ್ಬರಿಂದಲೂ ಬರುವದಕ್ಕೆ ಅಶಕ್ಯವಾದನಾವಿರುವ ಈ ದ್ವೀಪಕ್ಕೆ ನೀನುಬರುವದಕ್ಕೆ ಕಾರಣವೇನು, ನೀನುನುಡಿದಪೊದಲಕ್ಷರಕ್ಕೆ ನಿನ್ನಂಸಂಹರಿಸುವೆನು, ಆದರೂ ನಾವು ತಪೋನಿಷ್ಠರಾದ್ದರಿಂದಲೂ ದೂತವಧೆ ನಿಷಿದ್ಧವಾದ್ದರಿಂದಲೂ ನೀನುಪರಾಧೀನನಾಗಿ ಅವರಮಾತಂ ಹೇಳುವದಕ್ಕೆ ಬಂದದ್ದರಿಂದಲೂ ಈಸಾರಿಗೆ ಮನ್ನಿಶಿರುವದಾಗಿ ತಿಳಿದು ನೀಬಂಧಪರಿಯಂ ಚನ್ನಾಗಿ ಉಸುರುವದೆಂದುಬರಶಿಡಿಲುಹೊಡೆದಂತೆಘುಡುಘುಡಿಶಿನುಡಿಯುವನುಹಾರಾಕ್ಷಸಾಧಿಪತಿಯಮಾತಂಕೇಳಿ, ನಯವಿನಯನೀತಿಚಾತುರ್ಯಚಮತ್ಕಾರದಿಂಛಾಯಾಗುಪ್ತನುಬದಲಾಗಿಹೇಳಿದಪರಿಯೇನೆಂದರೆ,ಎಲೈರಾಕ್ಷಸೇಶ್ವರನೆ !ಭೂಲೋಕದೊಳ್ ಜಂಬೂದ್ವೀಪದಲ್ಲಿ ರತ್ನ ಪುರಿಯೆಂಬ ಪಟ್ಟಣವನ್ನು ಆಳುತ್ತಲಿರುವಸುಚರಿತ್ರರಾಯನಪಟ್ಟ ಮಹಿಷಿಯಾದ ಗುಣವತೀ ದೇವಿಯ ಗರ್ಭಾಬ್ಧಿಯೊಳ್ ರಾಕಾಚಂದ್ರನಂತೆ ಉದಿಶಿದ ಸುಗಂಧರಾಯನೆಂಬ ಹೆಸರುಳ್ಳ ಕರ್ಣಾಟಭೂಪಾಲ ರಾಜಶಿರೋಮಣಿಯಸನ್ನಿಧಾನದಿಂದ ವಿಮಾನಾರ್ಥವಾಗಿ ಕಳುಹಿಸಲ್ಪಟ್ಟ ಛಾಯಾಗುಪ್ತನೆಂಬದೂತನನ್ನಾಗಿ ತಿಳಿಯತಕ್ಕದ್ದು,ತಮ್ಮೊಡೆಯನಾದ ಸುಗಂಧರಾಯನು ಅಪ್ಪಣೆಯಕೊಟ್ಟ ಮಾತಂಹೇಳಿದೆ,ಇದಕ್ಕೆಬದಲಾಗಿ ನೀನು ಹೇಳಿದ ಮಾತಂ ರಾಯಂಗೆ ಹೇಳುವದು ಎನಗೆ ಧರ್ಮವಲ್ಲದೆ ಕಡಮೇಮಾತುಗಳಿಂದ ನನಗೆಕಾರ್ಯವಿಲ್ಲವೆಂದುಹೇಳಿದ ಛಾಯಾಗುಪ್ತನ

ಮಾತಂ ಕೇಳಿದ ಕರಾಳನೆಂಬ ರಾಕ್ಷಸಾಧಿಪನು, ಯಲೈ ದೂತನೆ ! ನಿನ್ನ ಒಡೆಯನಂ ನೋಡಲು ಬ್ರಾಹ್ಮಣನಂತೆ ತೋರುತಲಿಧೆ, ಕ್ಷತ್ರಿಯನಾಗಿ ತೋರುವದಿಲ್ಲ, ಅಥವಾ ಕ್ಷತ್ರಿಯನಾದರೆ ಯುದ್ಧವಂ ಮಾಡಿ ವಿನಾಸವಂ ತೆಗದುಕೊಳ್ಳಲೀ? ಅಲ್ಲದೆ ಯಾಚನಾರ್ಥವಾಗಿ ಬಂದರೆ ದಾನವಾಗಿ ಕೊಡುವೆನು,ಪ್ರಭುತ್ವಮಾಡುವವರಂ ಕುರಿತು ಯಾಚನವಂ ಮಾಡುವದು ವಿಹಿತವೇ ಸರಿ, ಯಾಚನವಂ ಮಾಡುವರು ಯೇನು ಕೇಳಿದರೂ ಕೊಡುವರು ಪ್ರಭುಗಳಲ್ಲದೆ ಮತ್ತೊಬ್ಬರಲ್ಲ, ಯಾಚನೆ ಮಾತ್ರವೆ ಯಾಚಕಾಧೀನ ವಾಗಿರುವದಲ್ಲದೆ ದಾಸದಾತ್ಯ ವಶವೇಸರಿಯೆಂದು ಶಾಸ್ತ್ರಸಿದ್ಧವು ಈ ಅರ್ಥವಂ ನಿನ್ನ ಒಡೆಯನಂ ಕುರಿತು ಪೇಳುವದೆಂದು ನುಡಿದ ರಾಕ್ಷಸಾಧಿಪನ ಮಾತಂ ಕೇಳಿ ಛಾಯಾಗುಪ್ತನು ಬಂದು ವಿಜ್ಞಾಪಿಸಿದ ಮಾತಂ ಕೇಳಿದ ಸುಗಂಧರಾಯನು ಒಳ್ಳೇದೆಂದು ಧನುಷ್ಟಂಕಾರವಂ ಮಾಡೆ, ಸಕಲ ದಿಕ್ಕು ಸಮುದ್ರ ಪರ್ವತಂಗಳು ಕೂಡ ಗಡಗಡಿಸುತಿರಲು, ಆ ಧ್ವನಿಯಂ ಕೇಳಿದ ಕರಾಳನು ತನ್ನ ಧನುಸ್ಸಂ ತೆಗದುಕೊಂಡು ಧ್ವನಿ ಯಾವ ಕಡೆಯಿಂದ ಬರುತಲಿಧಿಯೋ ಯೆಂದು ಊಹಿಸಿ, ಅದಕ್ಕೆ ಪುರೋಭಾಗದಲ್ಲಿ ಬಂದು ನಿಂತು ಆ ಧ್ವನಿಗಿಂತಲೂ ಅಧಿಕಧ್ವನಿಯಾಗುವಂತೆ ತನ್ನ ಹೆಬ್ಬಿಲ್ಲಂ ಮಿಡಿಯಲು,ಆಧ್ವನಿಯಂ ಕೇಳಿದ ಬಹು ಪರಾಕ್ರಮಿಯಾದ ಸುಂಗಧರಾಯನು ನಿಮಿಷ ಮಾತ್ರದೋಳ್ ಅವನ ಎದುರಾಗಿ ಬಂದು ನಿಂತು ಕರಾಳನಂಕುರಿತು, ಎಲೈ ಕರಾಳನೆ ! ಯುದ್ಧ ಯಾಚನವಂ ಮಾಡುವ ನನಗೆ ಸಮಯುದ್ಧವಂ ಕೊಡುವಶಕ್ತಿ ಉಂಟಾದರೆ ನಾನು ಪ್ರತಿಗ್ರಹವಂ ಮಾಡುವೆನೆಂದು ನುಡಿದು ವೊಂದು ಬಾಣವಂ ಪ್ರಯೋಗಿಸಲು, ಆ ಬಾಣವನ್ನು ರಾಕ್ಷಸೇಶ್ವರನು ಯರಡು ಬಾಣಗಳಿಂದ ಕತ್ತರಿಸಲು, ಸುಗಂಧರಾಯನು ಆರಾಕ್ಷಸೇಶ್ವರನಂ ಕುರಿತು ಮತ್ತೂ ನಾಲ್ಕು ಬಾಣಂಗಳಂ ಪ್ರಯೋಗಿಸಲು,ಆರಾಕ್ಷಸಪತಿಯು ಎಂಟು ಬಾಣಂಗಳಿಂದ ಕತ್ತರಿಸಿ ಮತ್ತೆಂಟು ಬಾಣಂಗಳಿಂದ ರಾಜೇಂದ್ರನಂ ಪ್ರಹರಿಸಲು,ಅದಂನೋಡಿ ಶೂರನಾದ ಸುಗಂಧರಾಯನು ನಗುತ ಅನೇಕ ಮಾತುಗಳಿಂದ ರಾಕ್ಷಸನ ಮೈಯ್ಯಂ ಮುಳ್ಳುಗಳಿಂದ ಕೂಡಿರುವ ಶಲಲೀ ಮೃಗದಂತೆ ಮಾಡಲು, ಆಗ ರಾಕ್ಷಸನು ಸುಗಂಧರಾಯನಂಕುರಿತು ಕೋಪವನ್ನ ಹಾಸ್ಯವಾಗಿ ತೋರ್ಪ

ಡಿಸುತ, ಎಲೈ ರಾಜಕುಮಾರನೆ ! ಶಾಬಾಸ್ ! ನಿನಗೆ ಬಿಲ್ಲುವಿದ್ಯೆ ಚೆನ್ನಾಗಿ ಬರುವದು ಅದರೊಳ್ ಸ್ವಲ್ಪ ಕೊರತೆಯಾಗಿದ್ದರೆ ಉಪದೇಶಿಸುವೆನುಯೆಂದು ಜರಿಯುತ ಅನೇಕ ಬಾಣಂಗಳಿಂದಲುಂ ಅನೇಕ ಶೂಲಂಗಳಿಂದಲುಂ ಪರ್ವತದ ಶಿಲೆಗಳಿಂದಲುಂ ಬೇರುಸಹಿತವಾದ ವೃಕ್ಷಂಗಳಿಂದಲುಂ ಸುಗಂಧರಾಯನಮೇಲೆ ಮಳೆಯಂ ಕರೆಯಲು, ಆಗ ರಾಜಕುಮಾರನು ಆಶೂಲಾದಿಗಳಂ ಕರದಿಂದ ಪಿಡಿದು ಮುರಿದು ಶಿಲೆಗಳಂ ಗದೆಯಿಂದ ಚೂರ್ಣೀಕರಿಸಿ ಬಾಣಂಗಳಂ ಅರ್ಧಚಂದ್ರದಿಂದ ಕತ್ತರಿಸಿ ಮತ್ತಂ ತನ್ನ ಬಳಿಯೊಳ್ ಇರುವ ಘೋರತರವಾದ ಶೂಲವು ಸರ್ಪಮುಖಂಗಳಾಗಿ ಕಡಿವ ಬಾಣಂಗಳಂ ಹುಲಿ ಮೊದಲಾದ ನಾನಾ ಕ್ಷುದ್ರಮೃಗಂಗಳಾಗಿ ಮಾಂಸಗಳಂ ಕಚ್ಚಿ ನರಗಳಂ ಕಿತ್ತಾಡುವ ಘೋರಾಸ್ತ್ರಂಗಳಂ ಇನ್ನೂ ಅನೇಕ ಆಯುಧಂಗಳಂ ಪ್ರಯೋಗಿಸುತ ರಾಕ್ಷಸನಂ ಕುರಿತು, ಎಲೈ ರಾಕ್ಷಸನೆ ! ನನಗೆ ಕಡೆಗೂ ಸಾಂಗವಾಗಿ ಬಾರದ ಅಸ್ತ್ರಶಸ್ತ್ರವಿದ್ಯೆಯಂ ಬಂದಷ್ಟು ನಿನಗೆ ತಿಳಿಸುವೆನೆಂದು ಹೇಳಿದ ಮಾತ್ರವೇ ಹೊರತು ತಿಳಿಸಲಿಲ್ಲ, ಬೇರಾವರೂ ನಿನಗೆ ಮರತು ಇದ್ದರೆ ಇದರಿಂದ ಜ್ಞಾಪಿಸಿಕೊಳ್ಳುವನಾಗು ಎಂದು ಸೂಚಿಸಿ ಇದೇನೆಯೆಂದು ಕುಹಕಮಾತನಾಡುವ ರಾಯನಂ ನೋಡಿ, ರಾಕ್ಷಸನು ಎಲೈ ನರಕೀಟನೆ ! ಎಷ್ಟು ಕೊಬ್ಬಿದ್ದರೂ ಹಸುವು ಹುಲಿಯಂ ಪಿಡಿಯುವದೆ? ಬೆಕ್ಕು ಆನೆಯಾಗುವದೆ? ಸಾಸುವೆ ಮೇರುಪರ್ವತವಾಗುವದೆ ? ಪರ್ವತ ಸದೃಶ ದೇಹವುಳ್ಳ ಎನ್ನಂ ಕೋಮಲಾಂಗನಾಗಿ ಚಿಕ್ಕವನಾಗಿರುವ ನೀನು ಜಯಿಸುವದು ಮಕ್ಕಳಾಟವಾಗಿ ತೋರುವದು, ಈಗಲೇ ನೀನು ತಾಯಿ ತಂದೆ ಬಂಧು ಬಳಗಂಗಳು ಯಾರಾದರೂ ಇದ್ದರೆ ಅವರ ಬಳಿಗೆ ಸುಮ್ಮನೆ ಪೋಗು, ಬಿಟ್ಟು ಕೊಡುವೆನು, ಎಂದು ನುಡಿದ ಅವಿವೇಕದ ಮಾತಂ ಕೇಳಿ ಸುಗಂಧರಾಯನು ರಾಕ್ಷಸನಂ ಕುರಿತು, ಎಲೈ ರಾಕ್ಷಸಾಧಮನೆ ! ಭಿನ್ನ ಜಾತಿಯಂಗಳಾದ ಬೀಜಕ್ಷೇತ್ರಗಳಂ ಜನಿಸಿದವನಂತೆ ತೋರುತಲಿದೆ, ಶೂರಧರ್ಮವಂ ಯುದ್ಧಮರ್ಯಾದೆಯಂ ಕಂಡವನೇ ಅಲ್ಲ, ಬೆಟ್ಟಂಗಳಂ ಸೀಳುವ ವಜ್ರವೆಷ್ಟು ಧಪ್ಪನಾಗಿರುವದು, ಮರಂಗಳಂ ಸೀಳುವ ಪರಶು ಹ್ಯಾಗೆ ಇರುವದು, ಗಜಸಿಂಹಗಳಿಗೆ ಎಷ್ಟು ತಾರತಮ್ಯ ಇರುವದು, ಇದು

ವ್ರೊಂದನ್ನೂ ತಿಳಿಯದೆ ಅಜ್ಞಾನದಿಂದ ಬೊಗಳುವ ನಿನಗೆ ನನ್ನ ಸಂಗಡ ಯುದ್ಧವಂ ಮಾಡುವ ಯೋಗ್ಯತೆಯಿಲ್ಲ, ಸುಮ್ಮನೆ ಈ ಪ್ರದೇಶವಂ ಬಿಟ್ಟು ಯೆಲ್ಲಾದರೂ ಹೋಗಿ ಘಟವನ್ನುಳಿಸಿಕೊ ಅಪ್ಪಣೆಯಂ ಕೊಡುವೆನೆಂದು ಪೇಳಿ ಪಾಶದಿಂದ ಆರಾಕ್ಷಸನಂ ನರಪಾಶಿಗಳಿಂದ ಆನೆಯಂ ಬಿಗಿದಂತೆ ಕಟ್ಟಿ ಕೆಡಹಲು ; ಅಲ್ಲಿರುವ ಶೂರರಾದ ಆತನ ಭಟರೆಲ್ಲರುಂ ತಮ್ಮ ತಮ್ಮ ಆಯುಧಂಗಳಂ ಪಿಡಿದು ವ್ರೊಟ್ಟಾಗಿ ಬಂದು ಸುಗಂಧರಾಯನ ಸಂಗಡ ಕಾದಗಿಚ್ಚಿನಲ್ಲಿ ಪತಂಗದಹಾಳು ವ್ರೊಟ್ಟಾಗಿ ಹೋಗಿಬಿದ್ದಂತೆ ಮೇಲೆಬಿದ್ದು ಯುದ್ಧವಂ ಮಾಡಲು ಅವರವರು ಯಾವ ಯಾವ ಯುದ್ಧವಂ ಕಲಿತು ಕೈ ದೋರುವರೋ? ಆಯಾಯ ಯುದ್ಧ ಆಯಾಯ ಅಸ್ತ್ರ ಶಸ್ತ್ರ ಮಾಯೆ ಸಾಮರ್ಥ್ಯಂಗಳಿಂದಅವರವರನೆಲ್ಲರಂ ಕಾರ್ಪಾಸ ಕೂಟವಂ ಅಗ್ನಿಯು ದಹಿಸುವಂತೆ ಸಂಹರಿಸಲು, ಅದಂಕಂಡು ಪಾಶದಿಂ ಕಟ್ಟಿ ಬಿದ್ದಿರುವ ಕರಾಳನೆಂಬ ಆಮಹಾ ರಾಕ್ಷಸರಾಜನು ಮೆಲ್ಲನೆ ಪಾಶದಿಂದ ಬಿಡಿಸಿಕೊಂಡು ಎದುರಾಗಿ ನಿಂತುಕೊಂಡು ತನ್ನಿಂದ ಅಭ್ಯಾಸವಂಮಾಡಲ್ಪಟ್ಟು ಇರುವ ಮಹಾಸ್ತ್ರಂಗಳಂ ವ್ರೊಂದೊಂದಾಗಿ ಬಹು ಕೋಪದಿಂದ ಪ್ರಯೋಗಿಸಲು, ಸುಗಂಧರಾಯನು ನಗುತ ಆ ಮಹಾಸ್ತ್ರಗಳಿಂದ ತನಗೆ ಉಪಹತಿ ಬರದಂತೆ ಪ್ರತ್ಯಸ್ತ್ರಂಗಳಂಪ್ರಯೋಗಿಸಿ, ಆರಾಕ್ಷಸನ ಅಸ್ತ್ರಂಗಳಂ ಶಾಂತಿಗೊಳಿಸಿಅವನ ಆರ್ಭಟಯಂ ನಿಲ್ಲಿಸಿ, ಆರಾಕ್ಷಸನಂ ಕುರಿತು, ಮತ್ತಂ ತಾನು ತನ್ನ ಬಳಿಯಲ್ಲಿರುವ ಗದಾ, ಮುಸಲ, ಭಿಂಡಿವಾಳ, ತೋಮರ, ವಜ್ರ, ಖಡ್ಗ ಮೊದಲಾದ ಆಯುಧಂಗಳಿಂದ ಅವನಂ ಶಿಥಿಲಾಂಗನಂ ಮಾಡಿ, ಈ ಮಹಾಯುದ್ಧಂಗಳಿಂದ ಜರ್ಜರೀಕರಿಸಿದಾಗ್ಯೂ ಮಣಿಯಬಲದಿಂದಲೂ ಮಾಯಾಶಕ್ತಿಯಿಂದಲೂ ಮರಳಿ ಮರಳಿ ದೃಢಕಾಯನಾಗಿ ಬಲ ಪುಷ್ಟ್ಯಾದಿಗಳು ಹೆಚ್ಚಿ ಹೆಚ್ಚಿ ಬರುತ ಮತ್ತು ಮತ್ತು ಯುದ್ಧವಂ ಮಾಡುವದಕ್ಕೆ ಬರುವ ರಾಕ್ಷಸನು ಕಂಡು ಆಶ್ಚರ್ಯಪಡುತ, ಇದನ್ನು ತನ್ನ ಮಂತ್ರಿಯೊಡನೆ ಹೇಳುತ ಈ ರಾಕ್ಷಸನಲ್ಲಿರುವ ಈ ವಿಚಿತ್ರಶಕ್ತಿಯು ತಪೋಜನ್ಯವೆನ್ನಕೂಡದು, ಇವನು ಬಹುಮಂದಿ ಸತ್ಪುರುಷರಂ ಬಾಧಿಸಿ ಪುಣ್ಯಾಕರವಾದ ಶ್ವೇತದ್ವೀಪಮಂ ಅಶುದ್ಧವಂಮಾಡಿ ಅಸತ್ಯದಿಂದೊಡಗೂಡಿ

ಇರುವನಲ್ಲದೆ ತಪಸ್ಸಂ ಸಾಂಗವಾಗಿಮಾಡಲಿಲ್ಲವಾವಕಾರಣ ಇಂಥಾ ಶಕ್ತಿ
ಯು ಇವನಲ್ಲಿ ಇರಲಾರದು, ಅಥವಾ ರಾಕ್ಷಸರಿಗೆ ಸ್ವಭಾವವಾದ ಮಾಯಾ
ವಿದ್ಯೆಂಗಳಿಂದ ಇಂಥಾ ಶಕ್ತಿ ಯೇನಾದರೂ ಉಂಟಾಗುವದೋಯೆಂದು ನಿಶ್ಚ
ಯಿಸ ಕೂಡದು, ಈರೀತಿ ಶಕ್ತಿಯು ನಾವುನೋಡಿದ ಮಾಯಾಶಾಸ್ತ್ರ ವಿ
ದ್ಯೆಂಗಳೋಳ್ ಯಲ್ಲಿಯುಂ ಹೇಳಿದ್ದಿಲ್ಲ, ಇಲ್ಲದಿದ್ದರೆ ಭಗವದನುಗ್ರಹ ಇ
ವನೋಳೇನಾದರೂ ಉಂಟೋಯೆನಲು ಭಗವದ್ಭಕ್ತರ ಬಾಧಿಶಿ ಭಗವಂತನಿ
ಗೆ ಮುಖ್ಯ ಸ್ಥಾನವಾದ ಈ ಪುಣ್ಯಕ್ಷೇತ್ರದೋಳ್ ಮದ್ಯ ಮಾಂಸಾದಿಗ
ಳಿಂದ ಯುಕ್ತನಾಗಿ ರಾಕ್ಷಸಜನ್ಮದಿಂದ ದಯಾ ಸತ್ಯ ಶೌಚಂಗಳಿಲ್ಲದೆ ಇ
ರುವನಿಗೆ ಭಗವದಪಚಾರದಿಂದ ನಿಗ್ರಹಬರುವದೆ ಹೊರತು ಅನುಗ್ರಹ
ವೆಂದಿಗೂ ಬರಲರಿಯದು, ಆದ್ದರಿಂದ ಊಹಿಸಿ ನೋಡಲು ಇವನದೇಹ
ದೋಳ್ ಯೊಂದುಮಣಿಯಾಗಲೀಔಷಧವಾಗಲೀ ಇರುವದೆಂದು ನಿಶ್ಚಯಿಶಿ
ಉದ್ಧತನಾಗಿ ಮೇಲೆಬಿದ್ದುಬರುವ ದುಷ್ಟಶತ್ರುವಂ ದೇಹದೋಳ್ ವ್ಯಾಪಿ
ಶಿ ಬಲಿತುಬರುವ ರೋಗಂಗಳಂ, ಸದ್ವ್ಯಾಪಾರವಂಬಿಟ್ಟು ದುರ್ವಿಷಯಂ
ಗಳಿಗೆ ಶೆಳೆಯುವ ದುಷ್ಟಸಂಗವಂ, ಶುದ್ಧ ತತ್ವವಾದ ಬ್ರಹ್ಮವಂ ಬಿಟ್ಟು
ಮಿಥ್ಯಾಭೂತವಾದ ಅವಿದ್ಯೆಯನ್ನೇ ಪಾರಮಾರ್ಥಿಕವಾಗಿ ತಿಳಿಯುವ ಅ
ಜ್ಞಾನವನ್ನು ಆ ಕ್ಷಣದಲ್ಲಿಯೇ ಶಮನವಂಗೊಳಿಸದೆ ನಿಲ್ಲಿಸಬಾರದೆಂಬಿರು
ವ ನೀತಿಯಂ ತಿಳಿದು, ಬ್ರಹ್ಮಾಸ್ತ್ರದಿಂದ ಆ ರಾಕ್ಷಸಾಧಿಪತಿಯಂ ಕಟ್ಟಿ
ಹೆಡಹಿ, ಪಾಶಗಳಿಂದ ಅವನಬಾಹುಗಳಂ ಪರ್ವತದಕೋಡುಗಲ್ಲಿಗೆ ಶೇರಿಶಿ
ಬಿಗಿದು ಚಕ್ರಾಸ್ತ್ರದಿಂದ ಅವನ ಶಿರಸ್ಸಂಛೇದಿಶಿ ಅವನ ಹೆಕ್ಕತ್ತಿನಮೂ
ಲದೋಳಿರುವ ಸರ್ವದೃಢೀಕರಣಿಯೆಂಬ ಸಂಣನೀಲಮಣಿಯಂ ತೆಗದು
ಕೊಂಡು ಅವನಂ ಸಂಹರಿಶಿ ಅಲ್ಲಿರುವ ಬ್ರಹ್ಮರ್ಷಿಗಳು, ದೇವರ್ಷಿಗಳು,
ರಾಜರ್ಷಿಗಳು, ಗರುಡ, ಗಂಧರ್ವಮೊದಲಾದ ಸಮಸ್ತರಿಗೂ ಸಂತೋಷ
ವಂಮಾಡಿ ದೇವತೆಗಳಿಂದ ವರ್ಷಿಸಲ್ಪಟ್ಟ ಪುಷ್ಪವೃಷ್ಟಿಗಳಿಂದಲೂ,ಜಯ
ಧ್ವನಿಗಳಿಂದಲೂ,ಸಹಿತನಾಗಿ ಸಂತೋಷದಿಂದ ಛಾಯಾಗುಪ್ತನಂ ಕರೆದು
ಎಲೈ ಛಾಯಾಗುಪ್ತನೆ!ನೀನು ಪೋಗಿ ಆರಾಕ್ಷಸನಿಂದ ಕಟ್ಟಲ್ಪಟ್ಟ ವಿಮಾ
ನನನ್ನು ಬಂಧಗಳಿಂದ ಬಿಡಿಶಿ ತೆಗೆದುಕೊಂಡುಬಾ ಯೆಂದು ಹೇಳಲು, ಆ
ಮಾತಂ ಕೇಳಿದ ಛಾಯಾಗುಪ್ತನು ವಜ್ರದ ಸರಪಣಿಗಳಿಂದಲೂ ಅನೇಕ

ಹೆಗ್ಗಗಳಿಂದಲೂ ಪರ್ವತದಕೋಡಗಲ್ಲಿಗೆ ಬಿಗಿದು ಕಟ್ಟಿರುವ ವಿಮಾನವನ್ನು ಜಾಗ್ರತೆಯಿಂದ ಬಿಡಿಸಿತರಲು, ವಿಮಾನವನ್ನೇರಿದ ಸುಗಂಧರಾಯನು ರಾಕ್ಷಸರಿಂದಾಕ್ರಾಂತವಾಗಿದ್ದದ್ದರಿಂದ ಮೇಘಂಗಳೂ ಸಹಿತವಾಗಿ ವಿಮಾನವನ್ನು ಕ್ಷೀರಸಮುದ್ರದೋಳ್ ನೆನಸಿ ಶುದ್ಧೋದಕ ಸಮುದ್ರದಲ್ಲಿ ತೊಳೆದು ಯರಡನೆ ದೇವಲೋಕವೆಂಬಂತೆ ಸಕಲವಾದ ವಸ್ತುಗಳು ಭೂಷಣ ಆಯುಧಂಗಳಿಂದ ಸಹಿತವಾದ ಮಧ್ಯದೋಳಿರುವ ಅನೇಕ ರತ್ನ ಸೌಧಗಳಿಂದಲೂ ಸರ್ವ ಫಲಪುಷ್ಪಗಳಿಂದಲೂ ಕೂಡಿರುವ ಕೈತ್ರೋಟದಿಂದಲು, ಅಮೃತ ಸರೋವರಗಳಿಂದಲೂ, ಹಂಸ ಕಾರಂಡವ, ಶುಕ, ಪಿಕ, ಮಯೂರಗಳವಿಚಿತ್ರವಾದ ಗತಿ, ಧ್ವನಿ, ಕ್ರೀಡೆ, ವಿಲಾಸ, ವಿನೋದಂಗಳಿಂಲೂ ಕನಕಮಯವಾದ ಹುಲ್ಲೆಮರಿಗಳಿಂದಲೂ ರಮಣೀಯವಾಗಿ ಮತ್ತಂ ವಲಯ. ಚತುರಶ್ರ, ಅಷ್ಟಕೋಣ, ಪದ್ಮಾಕೃತಿ ಮೊದಲಾದ ಜಗತೀಭೇದಗಳುಳ್ಳ ಮೇಲೆ ಮೇಲಕ್ಕೆ ಅಂತರಾಂತರಗಳಾಗಿಇರುವ ಸ್ಥಾನದ ಮಧ್ಯದೋಳ್ ಸರ್ವೋನ್ನತವಾದ ಉನ್ನತ ಸ್ಥಾನದ ಮಧ್ಯದಲ್ಲಿ ದಂತ ಸುವರ್ಣ ರತ್ನ ನಿರ್ಮಿತವಾದ ಒಹುವಿಚಿತ್ರವಾದ ನಾನಾವಿಧ ಲತೆಗಳಂ ಬಿಡಿಸಿ ಇರುವ ಮಧ್ಯನಾಯಕ ಪೀಠದೋಳ್ ಸುಗಂಧಮಹಾರಾಜನು ಉದಯಗಿರಿ ಶಿಖರದೋಳ್ ಪೊಳೆಯುತಲಿರುವ ಸೂರ್ಯನಂತೆ ಕುಳಿತು ಪ್ರಕಾಶಿಸುತ ತನ್ನ ಮಂತ್ರಿಯಿಂ ಸಹಿತನಾಗಿ ತನ್ನ ಭೃತ್ಯನಾದ ಛಾಯಾಗುಪ್ತನಂ ಕುಳಿತು ಕೊಳ್ಳುವಂತೆ ಅಪ್ಪಣೆಯಂ ಕೊಟ್ಟು ತನ್ನಮಂತ್ರಿಯೊಡನೆ ಆಮಹಾವಿಷ್ಣುವಿನ ಮಾಹಾತ್ಮ್ಯಶ್ರವಣಫಲವನ್ನೆ ನುಡಿನುಡಿದು ಕೊಂಡಾಡುತ ಅಂತರಿಕ್ಷಮಾರ್ಗದಲ್ಲಿ ಬರುವಾಗ ಭೂಮಂಡಲವೆಲ್ಲವಂ ಅಂಗೈಯಲ್ಲಿರುವ ಮುತ್ತಿನ ಮಣಿಯಂತೆ ಅತ್ಯಂತ ಚಿಕ್ಕದಾಗಿರುವದಂ ಸಾಕ್ಷಾತ್ಕರಿಸಿ ನೋಡುತ ಆಶ್ಚರ್ಯಪಟ್ಟು ಸನಮೇಘಗಳಿಂದ ಯಳೆಯಲ್ಪಟ್ಟು ಅತಿ ವೇಗದಿಂದ ನಿಮಿಷಮಾತ್ರದೋಳ್ ಬರುವ ವಿಮಾನದಲ್ಲಿ ಇರುತ ಪುಷ್ಪಕದಲ್ಲಿ ಕುಳಿತುಬರುವ ಕುಬೇರನಂತೆ ಪ್ರಕಾಶಮಾನವಾಗಿ ಪುರೋಭಾಗದಲ್ಲಿರುವ ಕಳಿಂಗದೇಶವಂ ಕಂಡು, ಅಲ್ಲಿನೇತ್ರಾನಂದಕರವಾದಅನೇಕ ಗೋಪುರ ಪ್ರಾಕಾರ ಸೌಧ ಶಿಖರಾದಿಗಳಿಂದಸಹಿತವಾದ ಬಹುಸೇನೆಗಳಿಂದ ತುಂಬಿರುವ ವಿಜಯನಗರವೆಂಬ ಹೆಸರುಳ್ಳ ಕಳಿಂಗರಾಜನನಗರವಂ ಕಂಡು, ನ

ಡುಪಟ್ಟಣದ ಸಮುಕ್ಕೆ ಬಂದು ಅಲ್ಲಿ ವಿಮಾನವನ್ನಿಳುಹಿ ಪ್ರತಿನಿಂತಿಳಿದು ಮಂತ್ರಿಸಹಿತನಾಗಿ ರಾಜಕುಮಾರತ್ತಿಯ ಸಮೀಪದೊಳ್ ವಿಮಾನಮಂ ನಿಲ್ಲಿಸಿ ಶುಕವಮುಂದಿಟ್ಟು ಆವಿಮಾನಮಂ ತೋರ್ಪಡಿಸಿ ತಿರಿಗಿ ಲೀಲಾಶುಕವಂ ಕುರಿತು, ಸುಗಂಧರಾಯ ನಿಂತೆಂದು ಪೇಳಿದನು. ಎಲೈಸರ್ವಜ್ಞನಾದ ಶುಕವರ್ಯನೆ ! ಕೇಳು ನಿನ್ನ ಮುಖವಾಗಿ ಸಖೀಜನಮುಖವಾಗಿಯೂ ಪತ್ರಿಕಾದಿ ಮುಖಾಂತರಗಳಿಂದಲೂ ಕಳಿಂಗರಾಜ ಕುಮಾರತ್ತಿಯಿಂದ ತಿಳಿಸಲ್ಪಟ್ಟಪ್ರತಿಜ್ಞಾರೂಪವಾದ ಮೂರು ಪಣಂಗಳನ್ನು ಗೆದ್ದು ಪ್ರೀತಿಯಾಗುವಂತೆ ನಡಸಿ ಕೊಟ್ಟದ್ದೀತಾಗಿ ಲೋಕದೊಳ್ ನನ್ನ ಮುದುರಾಗಿ ನಿಂತು ಮಾತಾಡಲು ಯಾವೊಬ್ಬರಿಂದಲೂ ಶಕ್ಯವಲ್ಲ, ಹೀಗಿರುವಲ್ಲಿ ಈಗ ಈಪಣಂಗಳಂ ನೆರವೇರಿಸಿದ್ದು ಈರಾಜಕುಮಾರತ್ತಿಯೊಳಿರುವ ಪ್ರೀತಿಯಿಂದಲೂ ಅವಳ ಪುಣ್ಯೋದಯದಿಂದಲೂ ಅಲ್ಲದೆ ಮತ್ತೊಂದರಿಂದಲ್ಲ, ಇದಂಚೆನ್ನಾಗಿ ತಿಳಿದು ಇರುವದೆಂದು ರಾಜಮೋಡಿಯಂ ದೊಡಗೂಡಿ ಆಜ್ಞಾಪಿಸುವ ಸುಗಂಧರಾಯನ ಗಂಭೀರಧ್ವನಿಯಿಂದೊಡಗೂಡಿದ ವಾಕ್ಯನಂ ಕೇಳಿ ಲೀಲಾಶುಕವು ಸಮೀಪದೊಳಂತರಿಸಿದವಲ್ಲಿ ಕೇಳುತಲಿರುವ ರಾಜಕುಮಾರತ್ತಿಯಂ ಕುರಿತು, ಸುಗಂಧರಾಯನಿಂದ ನಿರೂಪಿಸಲ್ಪಟ್ಟ ಅಮೃತ ಸದೃಶವಾದ ವಾಕ್ಯಂಗಳಂ ನುಡಿಯುತ್ತಿರ್ದಪರಿಯೆನೆಂದರೆ, ಎಲೈ ಸುಗುಣೆಯಾದ ರಾಜಪುತ್ರಿಯೇ ! ಸುಗಂಧಮಹಾರಾಯನಿಂದ ಸಕಲಪಣಂಗಳು ನಿನಗೋಸ್ಕರ ನೆರವೇರಿಸಲ್ಪಟ್ಟವು, ಇಂಥಾ ಮಹಾಪುರುಷನಿಗೆ ಸತಿಯಾಗುವ ನಿನ್ನ ಪುಣ್ಯಕ್ಕೆಣೆಯಿಲ್ಲ, ನೀನು ಜನ್ಮಾಂತರದೋಳ್ ಮಾಡಿದ ತಪಸ್ಸು ಇಷ್ಟೆಂದುಪೇಳಕೂಡದು, ಲೋಕದೊಳಗಾಗಿ ಇಂಥಾ ಮಹಾ ಪುರುಷನಿಲ್ಲ, ಈತನು ಅನೇಕ ಮಹಾನಾಯಕ ಗುಣವುಳ್ಳಂಥಾವನು,ಸಾಮುದ್ರಿಕಾ ರೂಪವಾದ ಸಕಲಶುಭಲಕ್ಷಣಂಗಳು ಸರ್ವಾವಯವಂಗಳೊಳ್ ಸಂಪೂರ್ಣವಾಗಿ ಉಳ್ಳಂಥಾವನು, ನೀನು ರೂಪಲಾವಣ್ಯ ನಡತೆ ಶುಭಲಕ್ಷಣಂಗಳೊಳ್ ಮಹಾರಾಯಂಗೆ ಅನುರೂಪಳಾಗಿರುವದೇವಿಯೇಸರಿ,ಆದರೂ ನಾನುವಾತ್ಸಲ್ಯದಿಂದ ತಿಳಿದಷ್ಟು ಪೇಳುತಲಿರ್ದೇನೆ,ಇದು ಯುಕ್ತಿ ಯುಕ್ತವಾಗಿರುವದ್ದರಿಂದ ಬಾಲರಿಂದಾಗಲಿ ಶುಕವಿಂದಾಗಲಿ ಹೇಳಲ್ಪಟ್ಟದ್ದಾಗಿ ಇದ್ದರೂ ಬುದ್ಧಿವಂತರಿಂದ ಗ್ರಹಿಸತಕ್ಕ

ದ್ದು ಯೆಂಬ ನೀತಿ ಇರುವವರಿಗ ನನ್ನ ಸ್ವಲ್ಪ ಮಾತ್ರ ಚೆನ್ನಾಗಿ ಪರಿಭಾಷಿಸಿ ಆ ರಾಜಕುಮಾರನ ಚಿತ್ತಾನುಸಾರವಾಗಿ ಸೂರ್ಯನಿಗೆ ಛಾಯೆಯಂತೆ, ಚಂದ್ರನಿಗೆ ಬೆಳದಿಂಗಳಂತೆ, ಆತನ ಛಾಯೆಯಂ ಹಿಡಿದು ನಡೆಯುವದೆ ಅವಶ್ಯಕ ಕಾರ್ಯವೆಂದು ಸಕಲ ಧರ್ಮ ಸಂಮತವಾಗಿ ನುಡಿದ ಸುಕನ್ಯೆಯ ಮಾತಂ ಕೇಳಿ ರಾಜಪುತ್ರಿಯು ಎಲೈ ಸರ್ವಜ್ಞನಾದಕ ಶ್ರೇಷ್ಠೆ! ಲೋಕದಲ್ಲಿ ಹಿರಿಯವರಾಗಿ ಅಧ್ವಂಧಾವರು, ಹಿತರಾದಂಥಾವರು, ಮಿತ್ರರಾದವರು, ಸ್ವಜನರಾದವರು, ಉಪಕಾರಿಗಳಾದವರು, ದೇಶ ಕಾಲೋಪಯುಕ್ತಂಗಳನ್ನು ವಿಶೇಷವಾಗಿ ತಿಳಿದು ಹಾಸುವರು ಯುಕ್ತವೇ ಸರಿ. ಈಗ ನಿನ್ನಿಂದ ಹೇಳಲ್ಪಟ್ಟ ಪರಮ ಹಿತವಾದ ಅಭಿಪ್ರಾಯವಂ ತಿಳಿದವಳಾದ ಕಾರಣ ಅದೇ ಮೇರೆಗೆ ನಡೆಯುವನೇ ಹೊರತು ಲೇಶವಿರಿಸಿದರೆ ಕಳಂಕ ರಾಜಪುತ್ರಿಯೇ ಅಲ್ಲವೆಂದು ಪ್ರತಿಜ್ಞಾಪುರಸ್ಸರವಾಗಿ ಹೇಳಿ, ಆಬಳಿಕ ಪ್ರತಿಜ್ಞೆಯೇ ಶಪಥ ರೂಪವಾಗಿರುವದು, ಮತ್ತು ಕ್ಷತ್ರಿಯರೊಳ್ ಪ್ರತಿಜ್ಞಾಪರಾಧವೆಂಬುವದು ಅತಿ ನಿಕೃಷ್ಟಂಗಳಾಗಿರುವದು ಯೆಂದು ಪ್ರತಿಜ್ಞೆಯಂ ಪ್ರೋತ್ಸಾಹಿಸುತ ಲೀಲಾಕನ್ಯಕೆಯಂ ಸಮ್ಮತಿಗೊಳಿಸುತ ಸಂತೋಷದಿಂದ ಇರುತಿರ್ದಳೆಂಬಲ್ಲಿಗೆ.

ಗದ್ಯ—ಕುಂಡಲಿಶಯನ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖ ನಿಖಿಲಸುರವರ ಪರಿಭವ ಪರಿಣತ ಪ್ರಚಂಡಬಲ ಚಂಡಮುಂಡ ವಿಖಂಡನ ನಿಪುಣ ಕೋದಂಡಕಾಂಡ ಮಂಡಲಾಗ್ರದರ ಜುಜಾವಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತಗ್ರಂಥ ದಿನದಿನ ಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸ ಗೋತ್ರ ಆಶ್ವಲಾಯನಸೂತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ ನರಪತಿ ಬಿರುದಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನೂತನ ಕೃತಿಯೊಳ್ ಸುಗಂಧಮಹಾರಾಯನು ತುಲಸೀ -ಮಾಹಾತ್ಮ್ಯವೊದಲಾದ ವಿಷ್ಣು ಚಾರಿತ್ರ್ಯಂ ಕೇಳಿ ಆನಂದ

ಭರಿತನಾಗಿ ಕರಾಳನೆಂಬ ರಾಕ್ಷಸನಂ ಸಂಹರಿಸಿಪ್ರ್ಯೋಮುಯೂನಪಣಿವಂ ಗೆದ್ದು ಸೌಗಂಧಿಕಾದೇವಿಗೆ ತಂದುಕೊಟ್ಟು ಸಭಾಮಂಟಪದೋಳ್ ದೇವತಾ ಸಮೂಹದೋಳ್ ಇಂದ್ರನು ಮೆರೆಯುವಂತೆ ರಾಜಮಂಡಲದಲ್ಲಿ ಸುಗಂಧ ರಾಜೇಂದ್ರನು ಶೋಭಿಸುತ ಸಿಂಹಾಸನದೋಳ್ ಕುಳಿತು ಲೀಲಾಶುಕನ ಚಾಟೂಕ್ತಿಗಳಂ ಕೇಳಿ ಸಂತೋಷ ಪಡುತ್ತಿದ್ದನೆಂಬ ಮೂವತ್ತೊಂದನೇಆಶ್ವಾಸಕ್ಕೆ ಮಂಗಳಂ ಮಹಾ ಶ್ರೀ ಶ್ರೀ * * * * *

ಮೂವತ್ತೊಂದನೇ ಆಶ್ವಾಸ ಸಂಪೂರ್ಣವು.

ಶ್ರೀರಸ್ತು.

ಮು ವ್ವ ತ್ತೆ ರ ಡ ನೇ ಯ ಆ ಶ್ವಾ ಸ ಪ್ರಾ ರಂ ಭ ೮.

ಶ್ರೀಚಾಮುಂಡಿಕಾಂಬಾ ಯೈನಮಃ

ಅನಂತರದಲ್ಲಿ ಪರಮ ಚಾತುರ್ಯವುಳ್ಳ ಸೌಗಂಧಿಕಾದೇವಿಯು ಲೋಕದಲ್ಲಿ ಕಾರ್ಯಸಾಧಕವಾದ ವಸ್ತುವು ಅಪೂರ್ವವಾಗಿರುವದು, ಕಾರ್ಯಕ್ಕೆ ವಿಘ್ನಕರವಾದ ವಸ್ತುವು ಅನೇಕವಾಗಿರುವವು, ಕಾರ್ಯಸ್ಥನಾಗಿರುವವನು ಕಾರ್ಯವಾಗುವವರಿಗೂ ತೃಣವನ್ನಾದರೂ ಕೂಡ ಪರ್ವತವಾಗಿ ತಿಳಿದು ಪ್ರೊಂದರಲ್ಲಿಯೂ ಉಪೇಕ್ಷೆಯಂ ಮಾಡದೆ ಇರಬೇಕು. ಶ್ರೇಯಸ್ಕರವಾದ ಕಾರ್ಯಕ್ಕೆ ಬಹುವಿಘ್ನ ಉಂಟೆಂದು ಶಾಸ್ತ್ರ ವಿರುವದ್ದರಿಂದಾ ಈಗಶುಕವು ಸಕಲವಂ ತಿಳಿದು ಇಷ್ಟು ಶುಭಕಾರ್ಯಕ್ಕೆ ಸಹಾಯವಾಗಿರುವದ್ದರಿಂದ ಈಮರ್ಮಜ್ಞನಾದ ಶುಕವನ್ನು ಉಪಸರ್ಪಣಂಗೈಯುತಾ ಇನ್ನು ಕೆಲವು ಲಕ್ಷಣಂಗಳಂ ಗ್ರಹಿಸುವೆನೆಂದು ಶುಕವಂ ಕುರಿತು ಎಲೈ ಶುಕವೇ! ಈವರಿಗೆ ಪೇಳಿದ್ದು ವಿಶದವಾಯ್ತು, ಈಗ ಪೇಳಿದ ಮಹಾ ನಾಯಕ ಗುಣಂಗಳ ಸ್ವರೂಪವನ್ನು ಸಾಮುದ್ರಿಕಾಲಕ್ಷಣಂಗಳನ್ನು ನನಿಗೆ ವಿವರಿಸಬೇಕೆಂದು ಪೇಳಿದ ಸೌಗಂಧಿಕಾ ದೇವಿಯಂಕುರಿತು ಆಲೀಲಾಶುಕವು ವಿವರಿಸಿದ ಪರಿಯೆಂತೆಂದರೆ:— ಎಲೈ ಸೌಭಾಗ್ಯವತಿಯಾದ ಸೌಗಂಧಿಕಾ ದೇವಿಯೇ ! ಕೇಳು, ಪೂರ್ವದಲ್ಲಿ ಮಾಂಧಾತೃ ಮೊದಲಾದ ಮಹಾ ಚಕ್ರವರ್ತಿಗಳಲ್ಲಿದ್ದ ಮಹಾ ಕುಲೀನತೆ, ಔಜ್ವಲ್ಯ, ಮಹಾಭಾಗ್ಯ,

ಉದಾರತ್ವ, ತೇಜಸ್ವಿತ್ವ, ಪ್ರೌಢಿಮ, ಪಾಂಡಿತ್ಯ,ಧಾರ್ಮಿಕತ್ವ, ಮೊದಲಾದ ಮಹಾನಾಯಕಗುಣಂಗಳು ಈತನಲ್ಲಿರುವವು. ಇನ್ನು ಸಾಮುದ್ರಿಕಾಲಕ್ಷಣಹ್ಯಾಗೆ ಎಂದರೆ-ಅದಂ ಸವಿಸ್ತಾರವಾಗಿ ಶಾಸ್ತ್ರ ಪ್ರಮಾಣ್ಯಾದಿಯಿಂದ ಹೇಳುವೆನು ಸಾವಧಾನದಿಂದ ಕೇಳತಕ್ಕದ್ದು, ಅ [illegible] ಶಾಸನಂಗಳೊಳ್ ಉಮಾಮಹೇಶ್ವರಸಂವಾದದಲ್ಲಿ ಸಮುದ್ರ [illegible] ಲಕ್ಷ್ಮೀದೇವಿಯವರ ಲಕ್ಷಣ ಪ್ರಕಾಶಾರ್ಥವಾಗಿ ನಿರೂಪಿಸಲ್ಪಟ್ಟದ್ದನ್ನು [illegible] ರಾಜಕುಮಾರನಂ ಕುರಿತು ನಾರದರು ಪುರುಷಲಕ್ಷಣ ಸ್ತ್ರೀಲಕ್ಷಣಗಳನ್ನು ವಿವರವಾಗಿ ಹೇಳಿದಪರಿಯೇನೆಂದರೆ, ಮೊದಲು ಪುರುಷನಿಗೆ ಲಕ್ಷಣವುಳ್ಳ ಸ್ಥಾನಂಗಳಂ ತಿಳಿಯಬೇಕು, ಅದು ಅಂಗಾಲು, ಹೆಬ್ಬೆರಳು, ಕಡೆಯಬೆರಳು, ಉಗುರು, ಮುಂಗಾಲು, ಹಿಮ್ಮಡಿ, ಪಾದಪಾರ್ಶ್ವ, ಕಣಕಾಲು, ಮೊಳಕಾಲು, ತೊಡೆ, ಸೊಂಟ, ನಿತಂಬ, ಸ್ಫಿಕ್, ವಸ್ತಿ, ಮರ್ಮ, ಶುಕ್ಲ, ಜಘನ, ಕುಕ್ಷಿ, ಪಾರ್ಶ್ವ, ಉದರ, ಹೃದಯ, ಸ್ತನ, ಚೂಚುಕ, ಜತ್ರು, ಹೆಕ್ಕತ್ತು, ಮಣಿಕಟ್ಟು, ಯರಡುಹಸ್ತ, ಯರಡುಮುಂಗೈ, ಯರಡುಅಂಗೈ, ಕೈಹೆಬ್ಬೆಟ್ಟು, ಬೆರಳುಗಳು, ಕೈಉಗುರು, ಕೈಕಾಟಿ, ಕಂಠ, ಗಡ್ಡ, ದವಡೆಗಳು, ಕೆನ್ನೆಗಳು, ಕೆಳಗಿನತುಟಿ, ಮೇಲಿನತುಟಿ, ನಾಲಿಗೆ, ಘಂಟಿಕಾ, ತಾಲು, ನಾಸಿಕಾ, ನೇತ್ರ, ಹುಬ್ಬು, ಕಿವಿ, ಶಿರಸ್ಸು, ಲಲಾಟ, ಕೇಶಂಗಳೆಂಬುವದು ಮೊದಲಾದ ಅರವತ್ತಾರುಸ್ಥಾನಂಗಳಲ್ಲಿಯೂ, ಸಮುದಾಯಸ್ಥಾನಂಗಳಲ್ಲಿಯೂ ಇರುವ ಲಕ್ಷಣ ವಿನ್ಯಾಸಳು, ರೇಖಾ, ಶಂಖ, ಚಕ್ರ, ಗದಾ, ಪದ್ಮ, ತ್ರಿಶೂಲ, ಡಮರುಗ, ಛತ್ರ, ಚಾಮರ, ವ್ಯಜನ, ಆಂದೋಳಿಕಾ, ಮೃದಂಗ, ಕದಳೀವೃಕ್ಷ, ಮತ್ಸ್ಯ, ಮಕರ, ಮುತ್ತು, ಸುಳಿ, ಸರ್ಪ, ಕುಂಡಲ, ಧನುಸ್ಸು, ಕಲಶ, ಬಾಣ, ಕಾಕ, ಕುಕ್ಕುಟ, ಕಾಕೋರ್ಣೀಟ, ಮರಚೆ, ಶ್ವಾನ, ಇವು ಮುಂತಾದ ರೇಖಾಲಕ್ಷಣಗಳಿಂದ ಉತ್ತಮಾಧಮ ಪುರುಷ ಭೇದಂಗಳಂ ತಿಳಿಯುವದು, ಪಾದವು ವಿಶೇಷ ಬೆವರದೆ ಮೃದುವಾಗಿ ಪದ್ಮೋದರದಂತೆ ಇರುತ್ತ ವತ್ತಾದಬೆರಳುಗಳು ಮನೋಹರವಾದ ಪಾರ್ಶ್ವನಖ ಒಳ್ಳೆತಾದ ಹಿಮ್ಮಡಿಯುಳ್ಳದ್ದಾಗಿ ಮೇಲೆ ನರಗಳು ಕಾಣದೆ ಆಮೆಯ ಬೆನ್ನಿನಂತೆ ಉಬ್ಬಾಗಿ ಇದ್ದರೆ ಆಮನುಷ್ಯನು ಅರಸನಾಗುವನು, ಮತ್ತಂ ಪಾದದೊಳ್ ವಿರಗು ಅಂಗಾ

ಲುಗಳಲ್ಲಿ ಊರ್ಧ್ವರೇಖೆಗಳು ಇದ್ದರೆ ಐಶ್ವರ್ಯವಂತನಾಗುವನು, ಪಾದದಲ್ಲಿ ಚಕ್ರ ಪದ್ಮಗಳಿದ್ದರೆ ಗಜಾರೂಢನಾಗುವನು, ಸಂಚರಿಸುತ್ತಿದ್ದರೂ ಕಾಲು ಮೃದುವಾಗಿರಬೇಕು, ಕಾಲಲ್ಲಿ ಧನುಸ್ಸಿನಂತೆ ರೇಖೆ ಮಂಡಲರೇಖೆ ಸಹ ಇದ್ದರೆಯಾನಾರೋಹಣ ಯೋಗ್ಯನಾಗುವನು, ಹಿಮ್ಮಡಿಬಳಿಯಲ್ಲಿ ಮತ್ತಿ ಇದ್ದರೆ ಸೌಭಾಗ್ಯವಂತ ನಾಗುವನು, ಅಂಗಾಲಲ್ಲಿ ಮತ್ತಿ ಯಿದ್ದರೆ ಕುಲ ವೃದ್ಧಿಯಾಗುವದು, ಪಾದಪ್ರದೇಶದಲ್ಲಿ ಮತ್ತಿ ಇದ್ದರೆ ಬಹುಸಂಚಾರವಂ ಮಾಡುವನು, ಇದು ಪಾದಗಳಲ್ಲಿ ನೋಡತಕ್ಕ ಶುಭಲಕ್ಷಣಗಳು, ಇನ್ನು ಪಾದಂಗಳಲ್ಲಿರುವ ಅಶುಭ ಲಕ್ಷಣನಂ ಪೇಳುವೆನು, ಕಾಲು ಶೂರ್ಪಾಕಾರವಾಗಿ ಅತಿ ಬಿಳುಪಾದ ಉಗುರುಗಳಿಂದ ಕೂಡಿ ಡೊಂಕಾಗಿ ಮೇಲೆ ನರಗಳು ಕಾಣುತ ಒಣಕಲಾಗಿದ್ದರೆ ದುಃಖಿಯಾಗುವನು, ಬೆರಳುಗಳು ಅತಿವಿರಳವಾಗಿ ಅಂಗಾಲುಮಧ್ಯವು ನೆಲಾಸೋಕದೇ ಇದ್ದರೆ ಅತಿ ಕೋಪಿಯಾಗುವನು, ಪಾದಮೂಲದಲ್ಲಿ ಮತ್ತಿ ಇದ್ದರೆ ಅತಿರೋಗಿಯಾಗುವನು, ಈ ಪರಿಯೊಳ್ ಪಾದದೊಳಿರುವ ಅಶುಭಲಕ್ಷಣವಂ ತಿಳಿಯಬೇಕು; ಇನ್ನು ಉತ್ತಮಾಂಗುಳಿ ಲಕ್ಷಣಹ್ಯಾಗೆಯೆನಲು, ಬೆರಳುಗಳು ದಪ್ಪನಾಗಿಯೂ, ನೀಟವಾಗಿಯೂ ಇದ್ದರೆ ಧನಿಕನಾಗುವನು, ಕಾಲಲ್ಲಿ ಐದುಬೆರಳು ಸಮನಾಗಿ ಇದ್ದರೆ ಮಹಾ ಸೌಖ್ಯವಂತನಾಗುವನು, ಹೀಗಲ್ಲದೆ ಬೆರಳುಗಳು ಅತಿಕೃಶವಾಗಿಯೂ, ವಿಕಾರವಾಗಿಯೂ ಬಗ್ಗಿಕೊಂಡು ವಕ್ರವಾಗಿಯೂ ಇದ್ದರೆ ಅತಿ ದರಿದ್ರನಾಗುವನು, ನಖಗಳು ಸೂಕ್ಷ್ಮವಾಗಿ, ವೃದ್ಧಿಯಾಗಿ ಕೆಂಪಾಗಿ ಇದ್ದರೆ ಭೂಪತಿಯಾಗುವನು, ಹೀಗಲ್ಲದೆ ಪಾದವು ವಿಕಾರವಾಗಿ ಡೊಂಕಾಗಿ ದಪ್ಪವಾಗಿ ಇದ್ದರೆ ಅತಿ ದುಃಖಿಯಾಗುವನು, ಪಾದದೊಳಿರುವ ನಖ ಹಸುರಾಗಿದ್ದರೆ ಬ್ರಹ್ಮಹತ್ಯಾದಿ ಮಹಾ ಪಾತಕವನ್ನು ಮಾಡುವವರಲ್ಲಿ ಲಕ್ಷ್ಯವಿಲ್ಲದೇ ಇರುವನು, ಇನ್ನು ಜಾನುಶುಭಲಕ್ಷಣ ಹ್ಯಾಗಂದರೆ-ಮೊಳಕಾಲು ಚಿಕ್ಕದಾಗಿಯೂ ರೋಮವುಳ್ಳದ್ದಾಗಿಯೂ ಬಟುವಾಗಿಯೂ ಆನೆಸೊಂಡಲಿನಂತೆ ಮನೋಹರವಾಗಿದ್ದರೆ ಸುಖಿಯಾಗುವನು, ಸ್ಥೂಲವಾಗಿದ್ದರೆ ಸಂಪತ್ತುಂಟು, ಹೀಗಲ್ಲದೆ ಮೊಳಕಾಲು ಅತಿ ದೀರ್ಘವಾಗಿಯೂ ಅತಿಸಣ್ಣನಾಗಿಯೂ ಇದ್ದರೆ ದರಿದ್ರನಾಗುವನು,ವಿಕಾರವಾಗಿದ್ದರೆ ಕೋಪಿಯಾಗುವನು,ಜಾನುಮೂಲದಲ್ಲಿ ಮತ್ತಿ ಇದ್ದ

ರೆ ಅಸಿಷ್ಟ ಪುರುಷನಾಗುವನು; ಇನ್ನು ಉತ್ತಮವಾದ ಊರುಲಕ್ಷಣವೇನೆಂದರೆ-ತೊಡೆಪುಷ್ಟನಾಗಿ ಬಾಳೆಕಂಬಗಳಿಗೆ ಸಮಾನವಾಗಿದ್ದರೆ ಆನೆಯನ್ನೇರುವನು. ಕೇಶಸಹಿತವಾಗಿದ್ದರೆ ಜಾತ್ಯಶ್ವಾರೂಢನಾಗುವನು, ತೊಡೆಯು ಮಧ್ಯದೊಳ್ ಮತ್ತೆ ಇದ್ದರೆ ಆಂದೋಳಿಕಾರೋಹಣಯೋಗ್ಯನಾಗುವನು, ಹೀಗಿರದೆ ಕೃಶವಾದ ತೊಡೆಯುಳ್ಳವನಾಗಿಯೂ ದೇಹಕ್ಕಿಂತ ತೊಡೆಮಾತ್ರ ಕಪ್ಪಾಗಿ ಇದ್ದರೆ ಧನದಿಂದಲೂ ವಾಹನದಿಂದಲೂ ಹೀನನಾಗುವನು. ಉತ್ತಮ ಕಟಿಲಕ್ಷಣವೇನೆಂದರೆ:— ಕಟಿಪ್ರದೇಶ ವಿಸ್ತಾರವಾಗಿದ್ದರೆ ಪುತ್ರವಂತ, ಧನವಂತ, ಅಶ್ವಾರೋಹಿಯಾದವರೂ ಆಗುವನು, ಲಿಂಗಹ್ರಸ್ವವಾಗಿದ್ದರೆ ಸೌಭಾಗ್ಯಉಳ್ಳವನು, ಕೃಶವಾಗಿರಲು ಭೂಪತಿಯಾಗುವನು, ಅಲ್ಪವಾಗಲು ಧನವಂತ, ಸ್ಥೂಲಗ್ರಂಥಿಯಾಗಲು ಸುಖಿಯಾಗುವನು, ಮೃದುವಾಗಿದ್ದರೆ ಚಾಮರಾದಿ ಚಿಹ್ನೆ ಉಳ್ಳವನಾಗುವನು, ಕುಕ್ಕುಟಾಸನದಲ್ಲಿ ಕುಳಿತಾಗ ಭೂಸ್ಪರ್ಶವಾದರೆ ಬಹುಭೋಗಿಯಾಗಿ ಅಶ್ವಾರೋಹಣವುಳ್ಳವನಾಗುವನು, ಅತಿದೀರ್ಘವಾಗಿ ಸ್ಥೂಲವಾಗಿದ್ದರೆ ದುಃಖಿ, ಮತ್ತು ಇರಲು ಅನಾಚಾರಿ ಊರ್ಧ್ವವಾಗಿದ್ದರೆ ಕೋಪಿ, ವಕ್ರವಾಗಲು ನಿರ್ಧನ, ವಾಮಭಾಗ ವಕ್ರದೊಳ್ ಸುತಾರ್ಥರಹಿತ, ನರಗಳು ಹೆಚ್ಚಾಗಿದ್ದರೆ ಅಲ್ಪಪ್ರಜೆ, ಇನ್ನು ಏಕಾಂಡವಾಗಿದ್ದರೆ ಮೃತ್ಯುಭಯವಿಲ್ಲ, ವಿಷಮವಾಗಿದ್ದರೆ ಸ್ತ್ರೀಪ್ರೀತಿ, ಸಮವಾಗಿದ್ದರೆ ಕ್ಷಿತಿಪಾಲ, ಲಂಬಿತವಾಗಿದ್ದರೆ ದೀರ್ಘಾಯುಸ್ಸು, ಹೀಗಲ್ಲದೆ ಏಕಾಂಡದಲ್ಲಿ ಎರಡು ಬೀಜವಿರಲು ಅಲ್ಪಾಯುಸ್ಸು, ಮತ್ತೆ ಇದ್ದರೆ ಒಳ್ಳೇದಲ್ಲ, ಬತ್ತಿ ಶುಷ್ಕವಾಗಿದ್ದರೆ ದರಿದ್ರ, ಇನ್ನು ಮಿಥುನ ಲಕ್ಷಣವೇನೆಂದರೆ-ದೀರ್ಘವಾದರೆ ಅಲ್ಪಾಯುಸ್ಸು, ಹ್ರಸ್ವವಾದರೆ ದೀರ್ಘಾಯುಸ್ಸು, ಸಮವಾದರೆ ಅಶೀತ್ಯಾಯುಸ್ಸು, ಬಹುಪ್ರೇಮ ಉಂಟು, ರೇತೋಲಕ್ಷಣವೇನೆಂದರೆ ಕೆಂಪುಧಾತು ಕೂಡಿ ನಿರ್ಮಲವಾಗಿ ಮಿಂಚುತ್ತಲಿದ್ದರೆ ಭೂಪತಿಯಾಗುವನು, ಮಧುಗಂಧವಾಗಿದ್ದರೆ ಧನಿಕನಾಗುವನು, ಮತ್ಸ್ಯಗಂಧವಾಗಿದ್ದರೆ ಪ್ರಜಾವಂತ, ನೀರಲ್ಲಿ ತೇಲಿದರೆ ಒಳ್ಳೇ ಪುತ್ರವಂತನಾಗುವನು, ಹೀಗಲ್ಲದೆ ದುರ್ಗಂಧವಾಗಿಯೂ ಕ್ಷಾರಗಂಧ ಆಮಗಂಧವಾಗಿಯೂ ಇದ್ದರೆ ದರಿದ್ರನಾಗುವನು, ಜಲ ಲಕ್ಷಣ ಏಕಧಾರೆಯಾಗಿ ಬಲಗೂಡಿ ಮತ್ಸ್ಯಗಂಧ ಉಳ್ಳದ್ದಾಗಿದ್ದರೆ ಒಳ್ಳೇದು. ಧನಿಕನಾಗುವನು, ಮತ್ತು ನೊರೆಯಾಗಿ ಧ್ವನಿ

ಯಿಂದ ಕೂಡಿದ್ದರೆ ಪೃಥಿವೀಪತಿಯಾಗುವನು, ಹೀಗಲ್ಲದೆ ಲೋಮವೃಷ್ಟಿಯಿಲ್ಲದೆ ವಿಕಾರವರ್ಣವಾಗಿ ಬುಡಗಡೆಗಳಾಗಿ ವೇಗವಿಲ್ಲದೆ ಇದ್ದರೆ ದರಿದ್ರನಾಗುವನು. ಗುಪ್ತ್ಯುಬ್ಬಾಗಿ ಸಣ್ಣವಾಗಿ ಹೊರಗೆ ಕಾಣದೆ ನೆಲತಗಲದೆ ಇದ್ದರೆ ಸಂಪನ್ನನಾಗುವನು, ವಕ್ರವಾಗಿದ್ದರೆ ರಾಜಯೋಗ, ಹೀಗಲ್ಲದೆ ಅತಿ ಸ್ಥೂಲವಾಗಿ ಹಳ್ಳವಾಗಿ ಮತ್ತಿ ಕೂಡಿ ನೆಲತಗಲುತಲಿದ್ದರೆ ಯೋಸಿದ್ದರೂ ದರಿದ್ರನಾಗುವನು, ಇನ್ನು ನಾಭಿಯೋಯೆಂದರೆ ಚಿಕ್ಕದಾಗಿ ಆಳವಾಗಿಯೂ ಇದ್ದರೆ ರಾಜಯೋಗ, ಶಂಖವಂತೆಇದ್ದರೆ ಪುತ್ರವಂತ, ಮತ್ತಿ ಇದ್ದರೆ ಕುಟುಂಬಿಯಾಗಿರುವನು, ಹೀಗಲ್ಲದೆ ಪೊಳ್ಳೆಯಾಗಿ ಧಪ್ಪನಾಗಿ ಕೀವು ರಕ್ತವುಳ್ಳದ್ದಾಗಿಯಿದ್ದರೆ ಅರಿಷ್ಟ, ಮತ್ತಿಇದ್ದರೆ ಪುತ್ರಹಾನಿ, ವಾರೆಯಾಗಿದ್ದರೆ ದರಿದ್ರನಾಗುವನು, ಉದರವು ಕಪ್ಪೆಯಹಾಗೆ ಸ್ಥೂಲವಾಗಿಯೂ ಮೃದುವಾಗಿಯೂ ಇದ್ದರೆ ಸಂಪನ್ನನಾಗುವನು, ಪೂರ್ಣವಾಗಿದ್ದರೆ ಮೃಷ್ಟಾನ್ನ ಭೋಜನೆ ಉಳ್ಳವನಾಗುವನು, ಮೂರುರೇಖೆಯಿದ್ದರೆ ಆಯುಸ್ಸು ಆರೋಗ್ಯ ಐಶ್ವರ್ಯಗಳುಂಟು, ಅಥವೋದರಲಕ್ಷಣ-ಉದರಹಳ್ಳವಾಗಿ ಬತ್ತಿದ್ದರೆ ಕ್ಷುತ್ಪೀಡಿತನಾಗಿರುವನು, ಅತಿವಿಶಾಲವಾಗಿಯು ವಾರೆಯಾಗಿದ್ದರೆ ಯಾಚಕನಾಗುವನು, ಉರೋಲಕ್ಷಣ ಹ್ಯಾಗಂದರೆ-ವಿಶಾಲವಾಗಿದ್ದರೆ ಧನಿಕನಾಗಿಯು ಸುಖಿಯಾಗಿಯು ಇರುವನು, ಮತ್ತಿ ಇದ್ದರೆ ಸಂಪತ್ತು, ಉಬ್ಬಾಗಿದ್ದರೆ ಪುತ್ರವಂತನಾಗುವನು, ಹೀಗಲ್ಲದೆ ಆವಕ್ಷಸ್ಸು ಚಿಕ್ಕದಾಗಿ ವಿಕಾರವಾಗಿದ್ದರೆ ನಿರ್ಧನನಾಗುವನು, ಸ್ತನವಬಳಿಯಲ್ಲಿ ಮಚ್ಚೆ ಇರಲು ಬಹುಸುಖಿಯಾಗುವನು, ಮಧ್ಯಸ್ತನಪ್ರದೇಶದಲ್ಲಿ ಮತ್ತಿ ಇರಲು ಶೋಕ ಉಂಟಾಗುವದು, ಉತ್ತಮಲಕ್ಷಣ ಹ್ಯಾಗೆಂದರೆ:— ಕಕ್ಷಗಳು ಆಳವಾಗಿದ್ದರೆ ಸಂಪನ್ನನಾಗಿರುವನು, ಹೀಗಲ್ಲದೆ ಉನ್ನತವಾಗಿದ್ದರೆ ದರಿದ್ರನಾಗುವನು, ಇನ್ನು ಬಾಹುಲಕ್ಷಣವೆಂತೆಂದರೆ- ತೋಳುಗಳು ಮೊಳಕಾಲು ಪರ್ಯಂತವಿದ್ದರೆ ಭೂಪತಿಯಾಗುವನು, ದಾತೃವಾಗುವನು, ಧರ್ಮಿಷ್ಠನಾಗುವನು, ಧನಿಕನಾಗುವನು ಬಹುಬರಟಾಗಿದ್ದರೆ ಕೀರ್ತಿಮಂತನಾಗುವನು, ಧಪ್ಪವಾಗಿಯೂ ಸಮವಾಗಿಯೂ ಆನೆಸೊಂಡಲಿನೋಪಾದಿಯಲ್ಲಿ ಯೆರಡು ತೋಳೂ ಸಮವಾಗಿದ್ದರೆ ರಾಜಸನ್ಮಾನಿಯಾಗವನು, ಬಾಹುಮಧ್ಯದಲ್ಲಿ ರೇಖೆಗಳಿದ್ದರೆ ಯಾತ್ರಾಫಲ ಬರುವದು, ಮಧ್ಯದಲ್ಲಿ ಮತ್ತಿ ಇದ್ದರೆ ಭೋಗಿ

ಇನ್ನು ಅಜಾನುಬಾಹು ಲಕ್ಷಣ ಹ್ಯಾಗಂದರೆ— ತೋಳು ಚಿಕ್ಕದಾಗಿ ಸಣ್ಣನಾಗಿಯು ಇದ್ದರೆ ಸೇವಕನಾಗುವನು, ವಿಕಾರವಾಗಿ ವಕ್ರವಾಗಿ ಇದ್ದರೆ ಕಷ್ಟ ಪಡುವನು, ಇನ್ನು ಉತ್ತಮಹಸ್ತ ಲಕ್ಷಣವೇನೆಂದರೆ-ಹಸ್ತಗಳು ಪದ್ಮಗಳಂತೆ ಮೃದುವಾಗಿ ಕೆಂಪಾಗಿ ಇದ್ದರೆ ಹೀನಕುಲದವನಾದರೂ ಪ್ರಭುವಾಗುವನು, ಇನ್ನು ಸೂತ್ರದಿಂದ ಐದುಬೆರಳನ್ನು ನೀಟ ನೀಟವಾಗಿ ಅಳೆದು ಅದೇ ಸೂತ್ರವನ್ನು ಮೊಳಕೈಕೀಲಿನಿಂದ ಕಿರುಬೆರಳಿನ ಮೂಲ ಪ್ರದೇಶಕ್ಕೆ ಅಳೆವರೆ ಕಿರುಬೆರಳಿನಮೂಲಪ್ರದೇಶಕ್ಕಿಂತ ಹೆಚ್ಚಾಗಿದ್ದರೆ ಶತಾಯುಸ್ಸು ಉಳ್ಳವನಾಗುವನು, ಸಮವಾಗಿ ಇದ್ದರೆ ಮುಂಪತ್ತು ವರುಷ, ಕಡಮೆಯಾಗಿದ್ದರೆ ಮಧ್ಯಮಾಯುಸ್ಸುಳ್ಳವನಾಗುವನು, ಅದೇಸೂತ್ರವನ್ನು ಯಿಮ್ಮಡಿಶಿದರೆ ಬಾಹುಮೂಲದಿಂದ ಅಂಗುಳ್ಯಗ್ರಪರ್ಯಂತವಾಗಬೇಕು ಅದೇಸೂತ್ರವು ಎದೆಗೆಸುತ್ತಲು ಸರಿಯಾಗಬೇಕು, ಅದೇ ಸೂತ್ರವು ಶಿರಸ್ಸಿಗೂ ಸರಿಯಾಗಬೇಕು, ಹೀಗಿದ್ದರೆ ಮಹಾಪುರುಷಲಕ್ಷಣ, ದೀರ್ಘಾಯುಸ್ಸು, ಆಂದೋಳಿಕಪ್ರಾಪ್ತಿ ಸಹ ಉಂಟಾಗುವದು, ಕಡಮೆಯಾದರೆ ಫಲವಿಲ್ಲ, ಕಿರುಬೆರಳು ಪವಿತ್ರದಬೆರಳ ಗಿಂಣನ್ನ ತಿಕ್ರಮಿಶಿದರೆ ದೀರ್ಘಾಯುಸ್ಸು, ಸಮವಾದರೆ ಯೆಂಭತ್ತು ವರುಷ, ಅದಕ್ಕೆ ಕಡಮೆಯಾದರೆ ಯಪ್ಪತ್ತು ವರುಷ ಬದುಕುವನು, ಸೂತ್ರದಿಂದ ಅಂಗುಷ್ಠವನ್ನು ಯೆರಡುಭಾರಿ ಅಳೆವರೆ ಅದು ಕಂಕಣ ಸ್ಥಾನಕ್ಕೆ ಸರಿಯಾಗಬೇಕು, ಕಂಕಣ ಸೂತ್ರವಂ ದ್ವಿಗುಣಿಶಿದರೆ ಕಂಠಸೂತ್ರಾ ಆಗಬೇಕು, ಹೀಗೆ ಇದ್ದರೆ ಮುಕ್ತಾದಿ ಸಕಲ ಹಾರಂಗಳು ದೀರ್ಘಾಯುಷ್ಯವು ಆರೋಗ್ಯವೂ ಉಳ್ಳ ಮಹಾಪುರುಷನಾಗುವನು, ಕಿರುಬೆರಳಿನ ಕೆಳಭಾಗದಿಂದ ತರ್ಜನೀಪರ್ಯಂತವು ಅವಿಚ್ಛಿನ್ನವಾಗಿ ಒಂದು ರೇಖೆ ನೇರವಾಗಿ ಇದ್ದರೆ ದೀರ್ಘಾಯುಸ್ಸು, ಮಧ್ಯಮಾಂಗುಳಿ ಪರ್ಯಂತವಿದ್ದರೆ ಯೆಂಭತ್ತುವರುಷ, ಅದಕ್ಕೆ ಕಡಮೆಯಾದರೆ ಮಧ್ಯಮಾಯುಸ್ಸು ಉಂಟಾಗುವದು, ಕಾರ್ಯಗಳಮಾಡಿದಾಗ್ಯೂ ಹಸ್ತ ಮೃದುವಾಗಿದ್ದರೆ ಸುಖಭೋಗಿಯಾಗುವನು, ಮಧ್ಯದಲ್ಲಿ ಮತ್ಸ್ಯರೇಖೆ ಇದ್ದರೆ ಲಕ್ಷಧನ ಉಂಟಾಗುವದು, ಮಕರವಿದ್ದರೆ ಸಹಸ್ರಪ್ರದನಾಗುವನು, ಪದ್ಮರೇಖೆ ಇರಲು ಕೋಟ್ಯಾಂತರಧನ ಉಳ್ಳವನಾಗುವನು, ಶಂಖ, ಅಂಕುಶ, ಕುಂಡಲ, ಚಕ್ರ ಇವುಗಳಿದ್ದರೆ ಕೋಟ್ಯಾಂತ ಉಳ್ಳ ಮಹಾರಾಜ

ಸಿಂಹಾಸನಸ್ಥನಾಗುವನು, ಅಂಗುಷ್ಠ ಮೂಲದಲ್ಲಿಯೂ ಮಧ್ಯದಲ್ಲಿಯೂ ಪ್ರಕಾಶವಾದ ಯವರೇಖೆ ಇದ್ದರೆ ಮೃಷ್ಟಾನ್ನ ಭೋಜನವುಳ್ಳವನಾಗಿ ಸುಖಿಯಾಗುವನು; ಪಶ್ವಾದಿಗಳುಂಟಾಗುವವು, ಇನ್ನು ಕಿರುಬೆರಳಿನ ಕೆಳಗೆ ಎರಡುರೇಖೆ ಇದ್ದರೆ ಎರಡುಕಳತ್ರ, ಒಂದುರೇಖೆ ಇದ್ದರೆ ಒಂದೇಕಳತ್ರವಾಗುವವು, ಅಧಿಕರೇಖೆ ಇದ್ದರೆ ಅಧಿಕಕಳತ್ರವಾಗುವವು, ಅಥವಾ ಪರಸ್ತ್ರೀಸಂಚಾರ ಪ್ರಧಮಸ್ತ್ರೀ ಪ್ರಜೆ ಆಗುವದು, ಮತ್ತು ಕುಂಡಲ ಪದ್ಮಹಸ್ತದಲ್ಲಿದ್ದರೆ ಶತಸ್ತ್ರೀಭೋಗಿಯಾಗುವನು, ಅಂಗುಷ್ಠಮೂಲದಲ್ಲಿ ಯವರೇಖೆ ಯೆರಡು ಮೂರು ಇದ್ದರೆ ಕೃಷ್ಯಾದಿ ಧನಧಾನ್ಯ ಉಳ್ಳವರಾಗುವನು, ಮಣಿಕಟ್ಟಿನಲ್ಲಿ ಯವರೇಖೆ ಇದ್ದರೆ ಯಜ್ಞಾದಿ ಕಂಕಣಪ್ರದ ವಾಗುವದು, ಮಣಿಕಟ್ಟಿನಿಂದ ಅಂಗೈವರಿಗೆ ಮೂರುರೇಖೆ ಇದ್ದರೆ ಮೂರು ರಾಜ್ಯಪ್ರಾಪ್ತಿ ಉಂಟಾಗುವದು, ಅಥವಾ ಮೂರು ಶಾಸ್ತ್ರವಾಗಲೀ ಬರುವವು, ಮೂರು ವಂದಿ ಮಕ್ಕಳಾಗಲೀ ಆಗುವರು, ಮೂರುವಂದಿಭ್ರಾತೃಗಳಾದರೂ ಉಳ್ಳವನಾಗುವನು, ಮಣಿಕಟ್ಟಿನಿಂದ ಒಂದುರೇಖೆ ತರ್ಜನೀವರಿಗೂ ಬಂದುತೆಲಸಿದರೆ ಕ್ಷೇತ್ರಂಬ್ರಾಹ್ಮಣನನ್ನು ಕೊಡುವನು ಬಹುಸಂಪಾದನೆ ಉಳ್ಳವನಾಗುವನು, ದ್ವಿಕಳತ್ರರೇಖೆಯೊಡನೆ ಋಜುವಕ್ರವಾದ ರೇಖಾಂತರ ಸಂಬಂಧವಿದ್ದರೆ ಅನೇಕ ಕಳತ್ರ ಅನೇಕ ಜಾರಸ್ತ್ರೀ ಅನೇಕಸ್ತ್ರೀ ಭೋಗವೂ ಉಂಟಾಗುವದು, ಎರಡು ಕೈವಳಗೂ ಊರ್ಧ್ವರೇಖೆ ಇದ್ದರೆ ಪತ್ತನಾಗಿಯೂ ಧನಿಕನಾಗಿಯೂ ಇರುವನು, ಬಹುಪುತ್ರರು ಛತ್ರ ಚಾಮರ ಮೊದಲಾದ ಯೋಗವುಳ್ಳವರಾಗುವನು, ಹೆಬ್ಬೆರಳ ಮೂಲದಲ್ಲಿ ಭ್ರಾತೃರೇಖೆಯು ಕನಿಷ್ಠಕಾಮೂಲದಲ್ಲಿ ಭಾರ್ಯಾರೇಖೆ ಭೋಗಿನೀರೇಖೆ ಅಲ್ಲೇ ಪುತ್ರರೇಖೆ ಕೂಡಾ ಇರುವವು, ಕಂಕಣ ಸ್ಥಾನದಲ್ಲಿ ವಿಶಾಲವಾದ ಮಚ್ಚೆ ಇದ್ದರೆ ವೀರಕಂಕಣ, ಸಹಸ್ರಾಧಿಕಾರಿಯಾಗಿರುವನು, ಕೈಯಲ್ಲಿ ಪದ್ಮ, ಮಕರ, ಪರ್ವತ, ತ್ರಿಶೂಲ, ವ್ಯಜನ, ಚಾಮರ, ಕಲಶ, ಆಂದೋಳಿಕಗಳ ರೇಖೆಗಳಿದ್ದರೆ ದ್ವೀಪಾಂತರಾಧಿಪತಿಯಾಗುವನು, ಮುಸಲರೇಖೆ ಗೋಪುಚ್ಛರೇಖೆ ಇದ್ದರೆ ಸೇನಾಧಿಪತಿ ಯಾಗುವನು, ಸರ್ವ ಸ್ವಸ್ತಿಕರೇಖೆ ಇರಲು ಪ್ರಧಾನಿಯಾಗುವನು, ಅಂಗುಷ್ಠಾದಿಯಲ್ಲೂ ಮಧ್ಯಪಾದಿಯಲ್ಲೂ ರೇಖೆ ಪ್ರಕಾಶವಾಗಿರಲು ಕ್ರತುವುಳ್ಳಸದಾಚಾರಿ ಸತ್ಯವಾದಿ ಜಿತೇಂದ್ರಿಯನು ದೇವ

ತಾಭಕ್ತಿ ಯುಳ್ಳವನಾಗುವನು, ವೀಣಾರೇಖೆ ತುಲಾರೇಖೆ ಅಮೃತಕಲಶಗಳು ಇರಲು ಅಮೃತಹಸ್ತವುಳ್ಳವನು, ಲೇಖನಾದಿ ಕುಶಲನು,ವ್ಯಾಪಾರ ಲೆಕ್ಕ ಗಣಿತವುಳ್ಳವನು ರಸಿಕನಾಗಿರುವನು, ಧನುರ್ಬಾಣರೇಖೆಗಳಿದ್ದರೆ ಯಲ್ಲಿ ಹೋರಾಟ ಜಯಿಸುವನು, ಮಣಿಬಂಧದಲ್ಲಿ ಹೇಮರೇಖೆಯಿದ್ದರೆ ಬಹು ಭೂಷಿತನಾಗುವನು, ಶಕಟರೇಖೆಯಿದ್ದರೆ ಮಹಾರಥಿಕನಾಗುವನು, ಹಲರೇಖೆ ಇದ್ದರೆ ಬಹುಗ್ರಾಮ ಭೂಮಿ ಮನೆ ಉಳ್ಳವನಾಗುವನು, ಯಿನ್ನು ದುಷ್ಟಹಸ್ತಲಕ್ಷಣ ವೇನೆಂದರೆ:- ಅಂಗುಷ್ಠದಲ್ಲಿ ಯವರೇಖೆ ಇಲ್ಲವಿದ್ದರೆ ಕವನ್ನ ಭೋಜನಿಯಾಗುವನು, ಮಣಿಬಂಧದಲ್ಲಿ ಊರ್ಧ್ವರೇಖೆ ಅರತೆಯಾಗಿದ್ದರೆ ರಾಜ್ಯರಹಿತನಾಗುವನು, ಬಹುರೇಖೆ ಇದ್ದರೆ ಬಹುಕ್ಲೇಶಿಯಾಗುವನು. ಅಲ್ಪರೇಖೆ ಇದ್ದರೆ ನಿರ್ಧನವಂ ಮಾಡುವನು. ಯವೆಗಳು ಕಪ್ಪಾಗಿದ್ದರೆ ಲೋಭಿಯಾಗುವನು, ಅನಾಚಾರಿ, ವಿರಕ್ತನಾಗುವನು, ಕಾರ್ಯವಿಲ್ಲದೆ ಇದ್ದರು ಕೈಕಠಿಣವಾಗಿದ್ದರೆ ಬಹು ಕಷ್ಟಪಡುವನು, ದುರಭ್ಯಾಸವನ್ನು ತಗೆದುಕೊಳ್ಳುವನು. ಆಯುಸ್ಸುರೇಖೆ ಛಿನ್ನ ಭಿನ್ನವಾಗಿದ್ದರೆ ಅಲ್ಪಾಯುಸ್ಸು, ಋಣವು, ಗ್ರಾಮೈಕರಾತ್ರವಾಸವು, ದೇಶಭ್ರಂಶವು ಉಂಟಾಗಿ ನೀಚಸೇವಕನಾಗುವನು. ಮಣಿಬಂಧಸ್ಥಾನದಲ್ಲಿ ಸಂಕಲಿತರೇಖೆ ಯಿದ್ದರೆ ಕೋಪಿಯಾಗಿ ದರಿದ್ರನಾಗುವನು, ಮತ್ತು ಕಾಗೆ, ಒಂಟೆ, ಹದ್ದು, ಹುಲಿ, ಬಕ, ಪ್ರೇತ, ಕಪಿ, ಶ್ವಾನಗಳ ರೇಖೆಗಳುಇದ್ದರೆ ಒಂದೊಂದಾಗಿ ರೇಖೆಹಚ್ಚಿದವರಿಗೆ ಕಷ್ಟವು ಹೆಚ್ಚಿ ಶ್ರಮಪಡುವನು. ಆಯುರೇಖೆಯಲ್ಲಿಕವಲು ಒಡೆದು ಕೋನೆ ಕೋನೆಯಾಗಿದ್ದರೆ ಜಲಗಂಡ, ರೋಗಗಂಡ, ಸರ್ಪಗಂಡ, ಅಗ್ನಿಗಂಡ, ವೃಕ್ಷಗಂಡ, ಮೃಗಗಂಡ, ಆಯುಧಗಂಡ, ಮುಂತಾದ್ದು ಉಂಟಾಗುವದು. ಈ ಶಾಖಾರೇಖೆಯು ಊರ್ಧ್ವಮುಖವಾಗಿಯಿದ್ದರೆ ಗಂಡಪರಿಹಾರ ಅಧೋಮುಖವಾಗಿ ಇದ್ದರೆ ಗಂಡತಪ್ಪದು. ಹಸ್ತಾಂಗುಳಿಗಳಲ್ಲಿ ಉತ್ತಮಾಂಗುಳಿ ಲಕ್ಷಣ ವೇನೆಂದರೆ:— ಅಂಗುಳಿ ಹ್ರಸ್ವವಾಗಿ ಸರಳವಾಗಿ ಯಿದ್ದರೆ ಧನಿಕನಾಗುವನು. ಸಮಾಂಗುಳಿ ಯಾದರೆ ಧನಿಕನು. ಬೆರಳು ಕೊನೆಗಳಲ್ಲಿ ಶಂಖ ಚಕ್ರ ಪದ್ಮಾಂಕುಶ ರೇಖೆಗಳು ಪ್ರದಕ್ಷಿಣವಾಗಿ ಇದ್ದರೆ ಭೂಪತಿಯಾಗುವನು. ಒಂದೆರಡು ಇದ್ದರೆ ರಾಜಸನ್ಮಾನಿಯಾಗುವನು. ಬೆರಳುಗಳು ದಪ್ಪವಾಗಿಯಿದ್ದರೆ ತಪ

ಸ್ವಿಯಾಗುವನು. ಯೆಲ್ಲಾ ಲಕ್ಷಣವು ಇದ್ದರೆ ಜಗತ್ಪೂಜ್ಯನಾಗುವನು. ಅಧಮಾಂಗುಳಿ ಲಕ್ಷಣವೇನೆಂದರೆ:—ಅತಿದೀರ್ಘವಾದರೂ ಅತಿಹ್ರಸ್ವವಾದರೂ ದರಿದ್ರನಾಗುವನು. ಬೆರಳುಗಳು ಮೊಟಾಗಿ ವಕ್ರವಾಗಿ ಇದ್ದರೆ ದುಃಖಿಯಾಗುವನು. ವಿಶಾಲವಾಗಿ ನ್ಯೂನಾಧಿಕವಾಗಿಇದ್ದರೆ ರೋಗಿಯಾಗುವನು, ಅಪಸವ್ಯವಾದ ಶಂಖಾದಿಗಳು ಇದ್ದರೆ ನಿಂದಿತನಾಗುವನು. ಇನ್ನು ಉತ್ತಮಲಕ್ಷಣವುಳ್ಳ ನಖ ಹ್ಯಾಗೆಂದರೆ:— ಉಗರು ಸೂಕ್ಷ್ಮವಾಗಿಕೆಂಪಾಗಿ ಇದ್ದರೆಪುಣ್ಯವಂತ ನಾಗುವನು.ನುಣುವಾಗಿ ಬಟುವಾಗಿಯಿದ್ದರೆ ಬಹು ಭೂಷಣಂಗಳಿಂದ ಅಲಂಕೃತನಾಗುವನು. ಬೆಳವಳಿಕೆಯಾಗಿ ಚಳ್ಳುಗುರಾಗಿ ಉನ್ನತವಾಗಿ ಇದ್ದರೆ ಭೂಪತಿಯಾಗುವನು. ಇನ್ನು ದುರ್ಗುಣವುಳ್ಳ ನಖ ಹ್ಯಾಗೆಂದರೆ:—ದಪ್ಪವಾಗಿ ವಿವರ್ಣವಾಗಿ ಇದ್ದರೆ ದುಃಖಿಯಾಗುವನು.ಬೆಳಯದೆ ಕೊರಟಬಿದ್ದು ಹ್ರಸ್ವವಾಗಿಯಿದ್ದರೆ ದರಿದ್ರನಾಗುವನು. ತರಿಯಾಗಿ, ಶಿಪ್ರರಾಗಿ, ಹಸರಾಗಿ, ಇದ್ದರೆ ಪಾಪಿಷ್ಠನಾಗುವನು. ಇನ್ನು ಕಂಠ ಲಕ್ಷಣವಲ್ಲಿ ಉತ್ತಮ ಹ್ಯಾಗೆಂದರೆ:—ಕಂಠವಲ್ಲಿ ಭೂಷಣರೇಖೆ ಪ್ರಕಾಶವಾಗಿ ಇದ್ದರೆ ಅನ್ನದಾತೃ ಆಗುವನು. ಸ್ಥೂಲಧ್ವನಿವುಳ್ಳದ್ದಾಗಿ ಬಲಭಾಗವಿತಭಾಗಗಳಲ್ಲಿ ಸಹಾ ಬಿಳುಪಾಗಿದ್ದರೆ ಶಾಸ್ತ್ರ ಪಾಂಡಿತ್ಯಉಂಟಾಗುವದು, ಆಭರಣಗಳು ಉಳ್ಳವನಾಗುವನು. ಕತ್ತು ಉರುಟಾಗಿ ನಯವಾಗಿ ಯಿದ್ದರೆ ವಿದ್ಯಾವಂತನಾಗುವನು. ತುಂಬುಕತ್ತಾಗಿ ಕುಸಕನಾಗಿ ಇದ್ದರೆ ಧನಿಕನಾಗುವನು. ಈ ಲಕ್ಷಣಗಳೆಲ್ಲಾವುಳ್ಳ ಕೊರಲು ನಾಲ್ಕು ಅಂಗುಲವುದ್ದವು ಮೂರುರೇಖೆವುಳ್ಳದ್ದಾಗಿ ಇದ್ದರೆ ಭೂಪತಿಯಾಗುವನು ಸ್ಥೂಲಕಂಠನಾಗಿಯಿದ್ದರೆ ಶೂರನಾಗುವನು. ಕೋಳಿ ಕತ್ತಿನಂತೆ ಕಂಠವುಳ್ಳವನಾಗಿ ಯಿದ್ದರೆ ಬಹು ಪುತ್ರವಂತನಾಗುವನು. ಅಧಮಲಕ್ಷಣ ಕಂಠ ಹ್ಯಾಗೆನಲು:— ಅತಿಸ್ಥೂಲವಾಗಿ ಬತ್ತಿ ಇದ್ದರೆ, ಕರಲಧ್ವನಿ ಯಿದ್ದರೂ ಅನಿಷ್ಟ, ವಕ್ರ ಕಂಠವಾಗಿದ್ದರು ವಂಟೆಯಂತೆ ಕತ್ತು ಇದ್ದರೂ ಕೋಪಿಯಾಗುವನು, ಕೊರಳಿನ ಮೂಲಭಾಗವಲ್ಲಿ ಮತ್ತಿಇದ್ದರೆ ನಿಷ್ಠೂರಿಯಾಗುವನು,ನಪುಂಸಕನಾಗುವನು,ಇನ್ನು ಉತ್ತಮ ಸ್ಕಂಧಲಕ್ಷಣ ಹ್ಯಾಗಂದರೆ:— ಸ್ಕಂಧವೆಂಬ ಹೆಗಲು ಧಪ್ಪವಾಗಿ ರಕ್ತಪುಷ್ಟಿಯಾಗಿದ್ದರೆ ಶ್ರೀಮಂತನಾಗುವನು,ಉಬ್ಬಿಕೊಂಡು ತುಂಬಾಗಿದ್ದರೆ ದೀರ್ಘಾಯುಸ್ಸುಳ್ಳವ

ಗಿ ಕಂಣುಗಳಿದ್ದರೆ ವಿದ್ವಾಂಸನಾಗುವನು, ನವಿಲಿನ ಕಂಣಿನಂತೆ ಕಂಣು ಉಳ್ಳವನಾದರೆ ಅತಿಶೂರನಾಗುವನು, ಕೊನೆಗಂಣು ಕೆಂಪಾಗಿಯೂ ಶುಭ್ರವಾಗಿಯೂ ಇದ್ದರೆ ಚತುಶ್ಶಾಸ್ತ್ರಪಂಡಿತನಾಗುವನು, ಕಂಣುಮತ್ಸ್ಯಾಕಾರವಾಗಿದ್ದರೆ ಪುತ್ರಪೌತ್ರಾದಿ ಸಂಪತ್ತುಳ್ಳವನಾಗುವನು, ಕಿವಿವರಿಗೂ ದೀರ್ಘವಾಗಿಯು ಹುಲ್ಲೇಕಂಣಿನೋಪಾದಿಯಲ್ಲಿಯು ಕಂಣುಇದ್ದರೆ ಅತಿಭೋಗಿಯಾವನು, ನೇತ್ರಗಳಲ್ಲಿ ಹೊಳವು ಇದ್ದರೆ ಸೌಭಾಗ್ಯವುಳ್ಳವನಾಗುವನು, ಅಧಮ ನೇತ್ರಲಕ್ಷಣ ಹ್ಯಾಗಂದರೆ-ಕೊಕ್ಕರೇ ಕಂಣಿನಂತೆಯೂ ನಾಯಿನಕಂಣಿನಂತೆಯೂಸಿಂಹದಕಂಣಿನಹಾಗೂಇದ್ದರೆ ಅತಿತಸ್ಕರನಾಗಿ ಬಂಧನಕ್ಕೆ ಬೀಳುವನು, ಚಿಕ್ಕನ ಕಂಣಿನಹಾಗಿದ್ದರೆ ಅತಿಪಾಪಿಯಾಗುವನು, ಜಾತಿಭ್ರಷ್ಟನಾಗಿ ನೀಚಜಾತಿಯ ಸೇರುವನು, ಕಂಣು ಹ್ಯಾಪಕಣ್ಣು ಆದರೆ ದರಿದ್ರನಾಗುವನು, ಕಂಣಿನಲ್ಲಿ ನೀರುಸುರಿಯುತ್ತಲೇ ಇದ್ದರೆ ಬಹು ದುಃಖಿಯಾಗುವನು, ಪಾಲಿನಾಕ್ಷನಾದರೆ ದರಿದ್ರನಾಗುವನು ಕೋಳಿಯಂತೆ ಕಂಣುಗಳಿದ್ದರೆದುಃಖಿಯಾಗುವನು, ಉರಿಗಂಣಾಗಿಯೂ ಕಲ್ಮಷದ ಕಂಣಾಗಿಯೂ ಆಡಿನಕಂಣಿನಹಾಗೂ ಕಂಣಿದ್ದರೆ ಜನ್ಮಾದಿಯಾಗಿ ಮರಣಾಂತವು ವ್ಯಾಧಿ ಉಂಟಾಗುವದು. ಇನ್ನು ಉತ್ತಮ ಕರ್ಣಲಕ್ಷಣ ಹ್ಯಾಗಂದರೆ:— ಶಂಖದಂತೆ ಕಿವಿಗಳು ಇದ್ದರೆ ಭೂಪತಿಯಾಗುವನು, ಕಿವಿಮೇಲೆಕೂದಲು ಇದ್ದರೆ ಶತಾಯುಸ್ಸುಂಟಾಗುವದು, ಕಿವಿದೊಡ್ಡದಾಗಿದ್ದರೆ ಧನಿಕನಾಗುವನು, ಕಿವಿಮೊರದಂತೆಯಿದ್ದರೆ ಮಹಾಬಳ್ಳೇದು ಧನಿಕನಾಗುವನು, ಭೋಗವಂತನಾಗುವನು, ಕಿವಿ ಚೊಟ್ಟಾಗಿ ಇದ್ದರೆ ಪುತ್ರಸಂತನಾಗುವನು, ಕಿವಿ ಮೃದುವಾಗಿ ಕೆಂಪಾಗಿ ಮಾಂಸವೃದ್ಧಿಯಾಗಿದ್ದರೆ ಕರ್ಣಾಭರಣವುಂಟಾಗುವದು, ಮೂಲದಲ್ಲಿ ಮತ್ತಿ ಇದ್ದರೆ ಯಜ್ಞಾದಿಗಳನಾಡಿ ಸತ್ಕರ್ಮಾನುಷ್ಠಾನಿಯಾಗುವನು. ಇನ್ನು ಅಧಮಲಕ್ಷಣ ಹ್ಯಾಗಂದರೆ:— ಶುಷ್ಕಕರ್ಣವಾದರೆ ದರಿದ್ರನಾಗುವನು, ಚಿಕ್ಕದಾಗಿಯೂ ಕಪ್ಪಾಗಿಯೂ ಇಲೀಕಿವಿಗಳಂತೆಯಿದ್ದರೂ ಬಹುದೂಷಿತನಾಗುವನು, ಕಪೀಕಿವಿಯಂತೆ ಕಿವಿಯಿದ್ದರೆ ಬಹು ಕಾಮಿಯಾಗುವನು, ಬಹುದುರ್ಜನನಾಗುವನು, ಆಡಿನ ಕರ್ಣದಂತೆಯೂ ಕಂಬದಂತೆಯೂ ಕಿವಿಯಿದ್ದರೆ ಕುಷ್ಠರೋಗಿಯಾಗುವನು. ಇನ್ನು ಉತ್ತಮವಾದ ಹುಬ್ಬುಗಳ ಲಕ್ಷಣ ವೇನೆಂದರೆ:-

ಮುಷ್ಟ್ರದಲ್ಲಿ ರೋಮವಿಲ್ಲದೆ ಧನುಸ್ಸಿನಂತೆ ದೀರ್ಘವಾಗಿ ಬಾಗಿ ಕಪ್ಪುಕೂವ
ಆತನ ಮುಂಡಗಡೆಗೆ ಉನ್ನತರೋಮವಾಗಿದ್ದರೆ ಭಾಗ್ಯವಂತನಾಗುವನು, ಹೀ
ಗಿಲ್ಲದೆ ಭ್ರೂಮಧ್ಯದಲ್ಲಿರೋಮವಿದ್ದರೆ ಒಳ್ಳೇದಲ್ಲ. ದಂತಲಕ್ಷಣ ಹ್ಯಾಗಂದರೆ
ದಂತಗಳು ಮಲ್ಲೇಮೊಗ್ಗೆಯಂತೆಯಿದ್ದರೆ ಸುಖಿಯಾಗುವನು. ಗೋಕ್ಷೀರ
ವರ್ಣವಾಗಿ ಮೂವತ್ತೆರಡು ದಂತಗಳಿದ್ದರೆ ಭೂಪತಿಯಾಗುವನು, ಮೂ
ವತ್ತೊಂದಿದ್ದರೆ ಮಂತ್ರಿಯಾಗುವನು, ಮೂವತ್ತಿದ್ದರೆ ಚತುಶ್ಶಾಸ್ತ್ರ
ಪಂಡಿತನಾಗುವನು, ದಂತಗಳು ಸಣ್ಣನಾಗಿ ಕೂಡಿದ್ದರೆ ಮಹಾ ಭೋಗಿ
ಯಾಗುವನು, ನಿರ್ಮಲವಾಗಿದ್ದರೆ ತೇಜಸ್ವಿಯಾಗುವನು, ಕೆಂಪಾಗಿ ಬಟ್ಟು
ವಾಗಿದ್ದರೆ ಲಕ್ಷ್ಮೀಕರವಾಗಿರುವವು, ಅತಿಶ್ವೇತವಾಗಿದ್ದರೆ ಯೋಗಿಯಾಗು
ವನು, ಕೊಂಚ ವಕ್ರವಾಗಿದ್ದರೆ ಮಹಾ ಯೋಗವುಳ್ಳವನಾಗುವನು, ಸ್ನೇ
ಹಯುಕ್ತಗಳಾಗಿ ದಾಳಿಂಬೇಬೀಜದಂತೆ ಕೆಂಪಾಗಿದ್ದರೆ ಲಕ್ಷಸಂಖ್ಯಾಕ
ದ್ರವ್ಯವುಳ್ಳವನಾಗುವನು, ಕೃಶದಂತನಾದರೆ ಭೋಗಿಯಾಗುವನು, ಸ್ನೇಹ
ಯುಕ್ತದಂತನಾದರೆ ಒಳ್ಳೇಭೋಜನವಂ ಮಾಡುವನು. ಅಧಮದಂತ ಲ
ಕ್ಷಣ ಹ್ಯಾಗಂದರೆ:—ಕರಡಿಯುದಂತದಂತೆ ಇದ್ದರೆ ಕ್ಷುತ್ಪೀಡಿತನಾಗುವ
ನು, ಮೂವತ್ತು ದಂತಗಳಿಗೆ ಕಡಮೆಯಾಗಿದ್ದರೆ ದರಿದ್ರನಾಗುವನು,ಹೊಂ
ಬಣ್ಣವಾಗಿಯೂ ಸ್ಥೂಲವಾಗಿಯೂದೀರ್ಘವಾಗಿಯೂ ಕಪ್ಪೇಚಿಪ್ಪಿನಹಾ
ಗೆಯೂ ದೂರವಾಗಿಯೂ ಇದ್ದರೆ ವ್ಯಾಧಿಪೀಡಿತನಾಗಿ ದಾರಿದ್ರ್ಯ ದುಃಖಗ
ಳನ್ನು ಅನುಭವಿಸುವನು, ಕೆಳಗಣಸಾಲು ಹೆಚ್ಚಾಗಿದ್ದರೆ ಮಾತೃ ಘಾ
ತುಕನಾಗುವನು, ಛಿದ್ರದಂತನಾದರೆ ದರಿದ್ರ, ಅಧಿಕದಂತವಾದರೂದರಿದ್ರ,
ವಳ್ಳೇಹಲ್ಲಾಗಿ ಅಪ್ರಕಾಶವಾದರೆ ನಿರ್ಧನ,ಮಾಂಸಬೆಳದರೆ ಅರಿಷ್ಟ, ದಂತ
ಹೊರಗೆ ಬಂದರೆ ಯೆರಡು ಸಾಲುಗಳಲ್ಲಿ ಕ್ಷುದ್ರದಂತಗಳು ಹುಟ್ಟಿದರೂ
ಜಾರ ಚೋರ ದರಿದ್ರ ಮಾತೃ ಘಾತಕನಾಗುವನು. ಇನ್ನು ಅಧರಲಕ್ಷಣ
ಹ್ಯಾಗಂದರೆ:— ತುಟಿಕೆಂಪಾಗಿದ್ದರೆ ಒಳ್ಳೇದು, ಕಪ್ಪುವರ್ಣವಾಗಿದ್ದರೆ ಕು
ಷ್ಠರೋಗಿ ಆಗುವನು,ಉನ್ನತವಾಗಿದ್ದರೆ ದರಿದ್ರನಾಗುವನು,ಗರ್ವಭೋಜಸ್ತ
ವಾಗಿದ್ದರೆಅರಿಷ್ಟ ಉಂಟಾಗುವದು,ಇನ್ನು ಜಿಹ್ವಾಲಕ್ಷಣಹ್ಯಾಗಂದರೆ_ ನಾಲಿ
ಗೆ ಚಿಕ್ಕದಾಗಿದ್ದರೆ ವಿದ್ವಾಂಸನಾಗುವನು,ಸುಪ್ಪತ್ತಿಗೆಯಂತೆ ಮೃದುವಾಗಿ
ಕೆಂಪಾಗಿದ್ದರೆ ಮೃದುಭಾಷೆಗಳುಳ್ಳವನಾಗಿ ಧನಿಕನಾಗುವನು, ತುದಿಯಲ್ಲಿ

ವಿಭಾಗವಾಗಿದ್ದರೆ ಶತಾಯುಸ್ಸುಳ್ಳವನಾಗುವನು. ಅಧಮಜಿಹ್ವೆ ಹ್ಯಾಗಂದರೆ ನಾಲಿಗೆ ಧಪ್ಪವಾಗಿದ್ದರೆ ಅಮಂಗಳಕರ ಮೂಢನಾಗುವನು, ಬಿಳುಪಾಗಿದ್ದರೆ ಅನಾಚಾರಯುಳ್ಳವನಾಗುವನು, ಸವಾಸ್ಟಿದ ನಾಲಿಗೆ ಉಂಟಾದರೆ ಕೃಪಣನಾಗುವನು, ಯೆಲ್ಲರನ್ನು ಬೈಯುವನು, ತುಚ್ಛವಾದ ಮಾತನಾಡುವನು, ಕರಿರೇಖೆಯಿದ್ದರೆ ದುಭಾಷೆಯನ್ನಾಡುವನು. ಇನ್ನು ಲಲಾಟ ಲಕ್ಷಣ ವೇನೆಂದರೆ.— ಹಣೆ ದೊಡ್ಡದಾಗಿದ್ದರೆ ಉತ್ತಮಪುರುಷನಾಗುವನು, ಕೆಂಪುವರ್ಣವಾಗಿದ್ದರೆ ಭೂಪತಿಯಾಗುವನು, ಮೃದುವಾಗಿದ್ದರೆ ಸುಖಿಯಾಗುವನು, ಲಲಾಟದಲ್ಲಿ ಐದುರೇಖೆಯಾಗಲೀ ನಾಲ್ಕುರೇಖೆ ಆಗಲೀ ಇದ್ದರೂ ಐಶ್ವರ್ಯವಂತನಾಗುವನು, ಮೂರುರೇಖೆಯಿದ್ದರೆ ಎಂಭತ್ತು ವರುಷ ಬದುಕುವನು, ಎರಡುರೇಖೆಯಿದ್ದರೆ ನಲವತ್ತು ವರುಷ ಜೀವಿಸುವನು, ವೊಂದೇ ರೇಖೆಯಿದ್ದರೆ ಮೂವತ್ತು ವರುಷ ಇರುವನು, ಚಕ್ರ, ಸ್ವಸ್ತಿಕ, ತ್ರಿಶೂಲ, ಶ್ರೀವತ್ಸ ಇವುಗಳಲ್ಲಿ ಯಾವದಾದರೂ ವೊಂದು ಇದ್ದರೆ ಭೋಗೈಶ್ವರ್ಯವಂತನಾಗುವನು. ಇನ್ನು ಅಧಮಲಲಾಟ ವೆಂತೆಂದರೆ:— ಹಣೆ ಕಪ್ಪಾಗಿದ್ದರೆ ಸೇವಕನಾಗುವನು, ಚಿಕ್ಕದಾಗಿದ್ದರೆ ಅಮಂಗಳಕರ, ಸಮಾನವಾದರೆ ಒಳ್ಳೇದಲ್ಲ, ರೇಖೆಇಲ್ಲದಿದ್ದರೆ ಸ್ವಲ್ಪಾಯುಸ್ಸ ಆಗುವದು, ಊರ್ಧ್ವ ರೋಮವಿದ್ದರೆ ಸೆರೆಯಲ್ಲಿ ನೋವಂ ಪಡುವನು. ಇನ್ನು ಶಿರೋಲಕ್ಷಣಹ್ಯಾಗೆಂದರೆ:— ತಲೆಯಲ್ಲಿ ಕದಳೀರೇಖೆ ಇದ್ದರೆ ಐಶ್ವರ್ಯ, ಧನಧಾನ್ಯಾದಿ ಸಕಲ ಸಂಪತ್ತುಂಟಾಗುವದು, ಶಿರಸ್ಸು ಧಪ್ಪವಾಗಿದ್ದರೆ ಕೋಟಿಸಂಖ್ಯಾಕಧನವುಳ್ಳವನಾಗುವನು, ನೂರುವರುಷಬದುಕುವನು, ಶಂಖದೋಪಾದಿಯಲ್ಲಿ ಶಿರಸ್ಸಿದ್ದರೆ ದೊರೆಯಾಗುವನು, ಛತ್ರಿ ಇದ್ದರೆ ರಾಜ್ಯಾಧಿಪತ್ಯವನ್ನುಮಾಡುವನು. ಇನ್ನು ಅಧಮ ಮಸ್ತಕವೇನೆಂದರೆ:— ಕುಸ್ತ ಶಿರಸ್ಸಾದರೆ ಕೋಪಿಯಾಗಿ ದುಃಖಿಯಾಗುವನು, ವಿಭಾಗವಾದರೆ ಮೂರ್ಖನಾಗುವನು, ಆನೆ ತಲೆಯಹಾಗೆ ತಲೆ ಇದ್ದರೆ ಒಳ್ಳೇದಲ್ಲ, ಬಹುಶಿರಕಂಪನವಾದರೆ ಮಹಾರೋಗ ಉಂಟಾಗುವದು ಇನ್ನು ಕೇಶಲಕ್ಷಣವಂ ಪೇಳುವೆನು ಕೇಳು, ಶ್ಯಾಮರೋಮ, ಕೋಕಿಲ ರೋಮವಾಗಿದ್ದರೆ ಸೌಭಾಗ್ಯಾರೋಗ್ಯವುಳ್ಳವನಾಗುವನು, ಮುರುವಂಗಡವಾಗಿದ್ದರೆ ಮೂರುರಾಜ್ಯದಲ್ಲಿಯೂ ಪೂಜ್ಯನಾಗುವನು, ಮೃದುವಾಗಿಸಣ್ಣದಾಗಿ

ಶೃಂಗಾಕಾರವಾಗಿದ್ದರೆ ದೀರ್ಘಾಯುಸ್ಸುಳ್ಳವನಾಗುವನು, ದೃಢಕೇಶವುಳ್ಳವನಾದರೆ ಭೂಪತಿಯಾಗುವನು, ಪಟ್ಟೆತಲೆಯಾದರೆ ಧನಿಕನಾಗುವನು ವೊಂದೆಬಗೆಯಾಗಿದ್ದರೆ ನರಪತಿಯಾಗುವನು, ಎರಡುಬಗೆಯಾಗಿದ್ದರೆ ಕೋಟಿಧನಪತಿಯಾಗುವನು. ಇನ್ನು ಅಧರ ರೋಮಲಕ್ಷಣವೇನೆಂದರೆ:— ಅತಿದೀರ್ಘವಾದರೆ ದುಃಖಿ, ಹಸನಾಗಿಯೂ ಬೂದುವರ್ಣವಾಗಿಯೂ ಇದ್ದರೆ ಅವನು ರಾಜ್ಯಾಧ್ಯಕ್ಷನಾಗುವನು, ಊರ್ಧ್ವರೋಮವಾದರೆ ಆಯುಧಗಂಡದಿಂದ ಪ್ರಾಣವಂ ಬಿಡುವನು. ಭಿನ್ನರೋಮವಾದರೆ ನೀಚಜನರಲ್ಲಿ ಚಾಕರಿಯಂ ಮಾಡುವನು. ರೋಮವು ಮೃದುವಾಗಿ ಆದರೆ ಸೌಭಾಗ್ಯನಾಗುವನು. ಕೆಂಪು ಕೂದಲು ಆದರೆ ದರಿದ್ರವಂತನಹನು. ಕೆಂಪು ಬಿಳುಪುಕೂಡಿ ರೋಮವಾದರೆ ಅತಿದುಃಖಿಯಾಗುವನು. ಕೆಂಪಾಗಿಯೂ, ನೀಳವಾಗಿಯೂ ಇದ್ದರೆ ಚಿಂತಾಕ್ರಾಂತನಾಗುವನು. ಇನ್ನು ಬೆನ್ನಿನಲಕ್ಷಣ ಹ್ಯಾಗೆಂದರೆ;— ಬೆನ್ನು ವಿಶಾಲವಾಗಿದ್ದರೆ ಭೋಗಿಯಾಗುವನು, ಬೆನ್ನಿನಲ್ಲಿ ಕೂದಲಿದ್ದರೆ ಧನಿಕನಾಗುವನು. ಮತ್ತೆಯಿದ್ದರೆ ಸಕಲ ಸಂಪತ್ತುಳ್ಳವನಾಗುವನು, ಬೆನ್ನು ಸಣ್ಣನಾಗಲು ದರಿದ್ರನಾಗುವನು. ಚಿಕ್ಕಬೆನ್ನಾದರೆ ದುಃಖಿಯಾಗುವನು. ಅಂಗ ಸಮುದಾಯ ಉತ್ತಮಲಕ್ಷಣ ಹ್ಯಾಗೆಂದರೆ:— ಎಲ್ಲಿ ಆದರೂ ಸರಿ ವೊಂದೇಚಕ್ರವಿದ್ದರೆ ಸೌಖ್ಯವುಳ್ಳವನಾಗುವನು, ಮೂರು ಚಕ್ರಗಳಿದ್ದರೆ ರಾಜಪೂಜ್ಯತೆ ಉಂಟಾಗುವದು, ನಾಲ್ಕುಚಕ್ರವಿದ್ದರೆ ವಿದ್ವಾಂಸನಾಗುವನು, ಐದು ಚಕ್ರವಿದ್ದರೆ ರಾಜ್ಯಾಧಿಕಾರಿಯಾಗುವನು, ಆರು ಚಕ್ರವಿದ್ದರೆ ವಿಷ್ಣು ಭಕ್ತಿಯುಳ್ಳ ಮಹಾ ಪ್ರಭುವಾಗುವನು, ಏಳುಚಕ್ರವಿದ್ದರೆ ಯತಿರಾಜನಾಗುವನು, ಯೆಂಟುಚಕ್ರವಿದ್ದರೆ ಅಷ್ಟೈಶ್ವರ್ಯವುಳ್ಳವನಾಗುವನು. ಅದರಿಂದಾಚೆಗೆ ಯೆಷ್ಟುಚಕ್ರವಿದ್ದರೂ ಅಷ್ಟೈಶ್ವರ್ಯ ಹೆಚ್ಚಾಗಿ ಉಳ್ಳವನಾಗುವನು. ಕೈಯಲ್ಲಿ, ಕಾಲುಗಳಲ್ಲಿ, ಪದ್ಮರೇಖೆ ಕಲ್ಪವೃಕ್ಷರೇಖೆ ಇದ್ದರೆ ರಾಜ್ಯಪ್ರಾಪ್ತಿಯಾಗುವದು. ಶಂಖ,ಚಕ್ರ,ತ್ರಿಶೂಲ,ಡಮರುಗ,ಪದ್ಮ,ಅಂಕುಶ,ಕುಂಡಲ,ಭೃಂಗಾರ,ಮತ್ಸ್ಯ,ಧ್ವಜ,ತೋರಣ, ಮಾಲಾ, ಚತುರಶ್ರ, ಸ್ವಸ್ತಿಕ, ಇಷ್ಟು ರೇಖೆಗಳು ಹಸ್ತಗಳಲ್ಲಿಯೂ, ಪಾದಗಳಲ್ಲಿಯೂ, ದವಡೆಗಳೊಳಗೂ, ಬೆರಳುಗಳೊಳಗೂ, ಇದ್ದರೆ ಸಪ್ತದ್ವೀಪಾಧಿಪತ್ಯವುಳ್ಳ ಸಾರ್ವಭೌಮನಾಗುವನು. ಶಿರಸ್ಸಿನಲ್ಲಿ, ಉದರ

ಲ್ಲಿ, ಮುಖದಲ್ಲಿ, ಸ್ತನಪ್ರದೇಶದಲ್ಲಿ, ನೇತ್ರಗಳಲ್ಲಿ, ಬೆನ್ನಿನಲ್ಲಿಯೂ, ಪ್ರದಕ್ಷಿಣವಾದ ಸುಳಿಗಳು ಇದ್ದರೆ ಸಂಪನ್ನನಾಗುವನು. ಪಾದಗಳಲ್ಲಿ ಪದ್ಮರೇಖೆಯೂ, ಮನಸಲ್ಲಿ ಶಂಖರೇಖೆಯೂ ಇದ್ದರೆ ಆಂದೋಳಿಕ ಪ್ರಾಪ್ತಿ. ಪುರುಷನಿಗೆ ಬಲಗಡೆ ಮಚ್ಚೆ ಇದ್ದರೆ ಒಳ್ಳೇದು. ಕಪಿಲ ವರ್ಣದ ಮಚ್ಚೆ ಐಶ್ವರ್ಯಪ್ರದ. ಕೆಂಪುವರ್ಣದ ಮಚ್ಚೆ ಇದ್ದರೆ ಶೌರ್ಯಾರ್ಜಿತ ಧನಿಕನಾಗುವನು. ಕರೀ ಮಚ್ಚೆ ಇದ್ದರೆ ಪುತ್ರಪ್ರಾಪ್ತಿ ಉಂಟಾಗುವದು. ಈಮೇರೆಗೆ ರೇಖಾದಿ ಲಕ್ಷಣಗಳಿಂದಾ ಪಾದ ಮೊದಲಾದ ಸ್ಥಾನಂಗಳೋಳ್ ಫಲಾ ಫಲಂಗಳಂ ಪುರುಷರಿಗೆ ಬಲಗೈ ಮೊದಲಾದ ಬಲಭಾಗಂಗಳಂ ನೋಡಿ ಪೇಳುವದು. ಇನ್ನು ಅಂಗ ಸಮುದಾಯದಲ್ಲಿ ಅಧಮ ಲಕ್ಷಣ ವೇನೆಂದರೆ:—ಯುಕ್ತಿಯೆಂದರೂ ಸರಿ ಯೆರಡು ಚಕ್ರವಿದ್ದರೆ ದರಿದ್ರನಾಗುವನು. ಶಿರಸ್ಸು, ಉದರ, ಲಲಾಟ, ನಸ, ನೇತ್ರ, ಬೆನ್ನು, ಈ ಸ್ಥಾನಗಳಲ್ಲಿ ಅಪಸವ್ಯಸುಳಿ ಇದ್ದರೆ ಅನಿಷ್ಟ ಸೂಚಕವಾಗುವದು. ಬಿಳೀ ಮಚ್ಚೆ ಇದ್ದರೆ ದರಿದ್ರ ಅತಿ ಕಪ್ಪಾದ ಮಚ್ಚೆ ಇದ್ದರೆ ಹಾನಿಕರವಾಗಿ ಇರುವದು. ಇಂತಪ್ಪ ಲಕ್ಷಣಂಗಳುಳ್ಳ ಸ್ಥಾನಂಗಳೋಳ್ ಪುರುಷರಿಗೆ ಬಲಭಾಗದೊಳಿರುವ ರೇಖಾದಿಗಳು ನೋಡಿ ಅದೇ ಮುಖ್ಯವಾಗಿ ಫಲಾ ಫಲಂಗಳಿಗೆ ಜನಕವಾದ ಯೋಗಾಪಯೋಗಗಳನ್ನು ಊಹಿಸಿ ನಿಶ್ಚೈಸಿ ಪೇಳುವದು. ಈ ಪ್ರಕಾರವಾಗಿ ಪುರುಷಲಕ್ಷಣವಂ ನಿರೂಪಿಸಿ ಇನ್ನು ಸ್ತ್ರೀಯರುಗಳ ಸಾಮುದ್ರಿಕ ಲಕ್ಷಣವು ಪೇಳುತಲಿದ್ದೀತು. ಕೇಳು ಮಹಾರಾಜ ಪುತ್ರಿಯರಾದ ಸೌಗಂಧಿಕಾ ದೇವಿಯೇ ! ಸ್ತ್ರೀಯರುಗಳೊಳಿರುವ ಸಾಮುದ್ರಿಕಾ ಲಕ್ಷಣವನ್ನು ಶಾಸ್ತ್ರೋಕ್ತವಾಗಿ ಪೇಳುತಲಿದ್ದೇನೇ, ಅದಂತಿಳಿದ ಮಾತ್ರದಿಂದಲೇ ಸ್ತ್ರೀಯರುಗಳ ಸಕಲ ಲಕ್ಷಣಂಗಳು, ಯೋಗಾಯೋಗಂಗಳು, ತಿಳಿಯುವದಾದ್ದರಿಂದ ನಾನು ಸಂಕ್ಷೇಪ ರೂಪವಾಗಿ ಪೇಳುವೆನೆಂದು ಉಪೇಕ್ಷಿಸದೇ ಸಾವಧಾನವಾಗಿ ಕೇಳು. ಸ್ತ್ರೀಯರುಗಳಿಗೂ ಪೂರ್ವೋಕ್ತಪ್ರಕಾರವಾಗಿ ಲಕ್ಷಣವುಳ್ಳ ಸ್ಥಾನಗಳೋಳ್ ಯಡಗಡೆಯಲ್ಲಿರುವ ಲಕ್ಷಣಂಗಳನ್ನೇ ಮುಖ್ಯವಾಗಿ ನೋಡಿ ಫಲಾ ಫಲಂಗಳನ್ನು ಪೇಳತಕ್ಕದ್ದು. ಸ್ತ್ರೀಯರುಗಳಿಗೆ ಲಕ್ಷಣಸ್ಥಾನಂಗಳು ಯಾವ ಯಾವದೆಂದರೆ:- ಪಾದ, ಅಂಗಾಲು, ಪಾದದ ಹೆಬ್ಬೆಟ್ಟು, ಬೆರಳುಗಳು, ಉಗರು, ಮೇಗಾಲು, ಹಿಮ್ಮಡಿ, ಕಣಕಾಲು, ಮೊಳಕಾ

ಲು, ಮಂಡಿಗಳು, ತೊಡೆಗಳು, ಕಟಿಪ್ರದೇಶ, ಕಟಿಪುರೋಭಾಗ, ಕಟಿಪಶ್ಚಾದ್ಭಾಗ, ನಿತಂಬಸ್ಥಾನ, ಜಘನ, ವಸ್ತಿಸ್ಥಾನ, ನಾಭಿ, ಕುಕ್ಷಿ, ಪಾರ್ಶ್ವದ್ವಯ, ತ್ರಿವಳೀಸ್ಥಾನ, ರೋಮಾವಳಿ, ಹೃದಯ, ಸ್ತನದ್ವಯ, ಚೂಚುಕ, ಕಂಠಮೂಲಸ್ಥಾನ, ಹೆಗಲು, ಕಕ್ಷ, ಮಣಿಕಟ್ಟು, ಕರದ್ವಯ, ಮುಂಗೈಯು, ಅಂಗೈಯು, ಕೈಬೆರಳು, ಉಗುರುಗಳು, ಕೃಕಾಟಿಕಾಸ್ಥಾನ, ಕಂಠ, ಚುಬುಕ, ಕೆನ್ನೆ, ಬಾಯಿ, ಒಳಪಡಿತುಟಿ, ಮೇಲಣತುಟಿ, ನಾಲಿಗೆ, ಘಂಟಿಕಾ, ನಾಸಿಕಾ, ನೇತ್ರ, ರೆಪ್ಪೆ, ಹುಬ್ಬುಗಳು, ಕಿವಿಗಳು, ಹಣೆ, ಶಿರಸ್ಸು, ಬೈತಲೆ, ಕೇಶಂಗಳೆಂಬುದಾಗಿ, ಇವು ಅರುವತ್ತಾರು ಪ್ರಕಾರವಾಗಿಯೇ ಇರುವವು, ಇವಲ್ಲದೆ ಅಂಗ ಸಮುದಾಯವೊಂದು ಸ್ಥಾನವಾಗಿರುವವು, ಈ ಸ್ಥಾನಂಗಳೊಳಿರುವ ಲಕ್ಷಣಂಗಳು ಯಾವ ಪ್ರಕಾರ ಇರುವವೆಂದರೆ; ರೇಖೆ, ಶಂಖ, ಚಕ್ರ, ಗದಾ, ಪದ್ಮ, ತ್ರಿಶೂಲ, ಡಮರುಗ, ಛತ್ರ, ಚಾಮರ, ಸ್ಯಂದನ, ಆಂದೋಳಿಕ, ಚತುರಶ್ರ, ಮೃದಂಗ, ಕದಳೀ, ವೀಣಾ, ಯವ, ವೃಕ್ಷ, ಮತ್ಸ್ಯ, ಮಕರ, ಸುಳಿ, ಸರ್ಪ, ಮತ್ತಿ ಕುಂಡಲ, ಧನಸ್ಸು, ಕಲಶ, ಬಾಣ, ಭೃಂಗಾರ, ಸುವರ್ಣ, ರತ್ನ, ಕಾಕ, ಕುಕ್ಕುಟ, ಕಾರ್ಕೋಟ, ಮರ್ಕಟ, ಮಂಡೂಕ, ಕೂರ್ಮ, ಕೃಕಲಾಸ, ಶ್ವಾನ, ಗೃಧ್ರ, ಇವು ಮೊದಲಾದ ಲಕ್ಷಣಂಗಳು ರೇಖಾ ರೂಪಂಗಳಾಗಿಯೂ, ತತ್ತದಾಕಾರವಾಗಿಯೂ, ಇರುವವು. ಈ ಲಕ್ಷಣಂಗಳಿಂದಾ ಉತ್ತಮ, ಅಧಮ ಸ್ತ್ರೀಭೇದಂಗಳಂ ತಿಳಿಯುವದು, ಇನ್ನು ಉತ್ತಮ ಪಾದ ಲಕ್ಷಣ ಹ್ಯಾಗಿರುವದೆಂದರೆ:— ಅಂಗಾಲು ಸಮವಾಗಿ ಭೂಮಿಯಲ್ಲಿ ಹತ್ತಿದರೇ ಮಹಾ ಭೋಗವುಳ್ಳವಳಾಗುವಳು ಮೃದುವಾಗಿ, ನಯವಾಗಿ, ಇದ್ದರೆ ಅನೇಕ ಜನರಿಂದಾ ಪೂಜಿಸಲ್ಪಡುವಳು ಪುಷ್ಟಿಯಾಗಿದ್ದರೆ ಪುತ್ರಾದಿ ಸಂಪತ್ತುವುಳ್ಳವಳಾಗುವಳು. ಬೆವರು ಅಲ್ಲದೇ ಸ್ವಲ್ಪ ಉಷ್ಣವಾಗಿ ಕೆಂಪಾಗಿಯೂ, ಇದ್ದರೆ ಪೂರ್ಣ ಸೌಭಾಗ್ಯವುಳ್ಳವಳಾಗುವಳು. ಧ್ವಜ, ಸ್ವಸ್ತಿಕ, ಚಕ್ರ, ಕಮಲ, ಶಂಖ, ಮತ್ಸ್ಯ, ಇವುಮುಂತಾದ ರೇಖೆಗಳು ಇದ್ದರೆ ಮಹಾರಾಜಸ್ತ್ರೀಯಾಗುವಳು, ಈ ರೇಖೆಗಳು ಅವ್ಯಕ್ತವಾಗಿ ಕಂಡರೂ ಧನಿಕನಿಗೆ ಪತ್ನಿ ಆಗುವಳು. ಹೆಜ್ಜೆಯು ಕೂರ್ಮದಂತೆ ಉಬ್ಬಾಗಿ ಇದ್ದರೆ ಸೌಭಾಗ್ಯವುಳ್ಳವಳಾಗುವಳು. ಪಾದದಲ್ಲಿ ನರಗಳು ಕಾಣದೆ ತಂ

ಯಾಗಿ ಇದ್ದರೆ ಪುಣ್ಯವಂತೆಯಾಗಿ ಇರುವಳು ಸಮವಾದ ಹಿಮ್ಮಡಿ ಇದ್ದರೆ ಸೌಖ್ಯಪಡುವಳು. ಮದಗಜಗಮನೆಯಾಗಿದ್ದರೆ ಪುತ್ರಾದಿ ಸಂತತ್ತುಗಳಿಂದಾ ಕೂಡಿ ಸಂತೋಷದಲ್ಲಿ ಇರುವಳು. ಪ್ರದಕ್ಷಿಣವಾದ ಸುಳಿ ಇದ್ದರೆ ಗುರು ಪತ್ನಿಯಾಗುವಳು ಈ ಪ್ರಕಾರವಾಗಿ ಪಾದಗಳಲ್ಲಿ ಉತ್ತಮ ಲಕ್ಷಣವಂ ತಿಳಿಯತಕ್ಕದ್ದು. ಇನ್ನು ಪಾದದೊಳಿರುವ ಅಧಮ ಲಕ್ಷಣವೆಂತಿರುವದೆಂದರೆ:— ಪಾದಗಳು ಅಂಟಾಗಿ, ವಿವರ್ಣವಾಗಿಯೂ, ವಿಕಾರವಾಗಿಯೂ, ಇದ್ದರೆ ದುರಾಚಾರಿಣಿಯಾಗಿರುವಳು. ಪಾದತಲವು ಕಠಿನವಾಗಿದ್ದರೂ, ಹಸ್ವವಾಗಿದ್ದರೂ, ದರಿದ್ರಯಾಗುವಳು, ಸಡಿಲವಾಗ ಧೂಳುಯಿದ್ದರೆ ವ್ಯಭಿಚಾರಿಣಿಯಾಗಿ ಕುಲತ್ರಯನಾಶಿನಿಯಾಗಿ ಇರುವಳು. ಛಿದ್ರಪಾದವಾಗಿ ಇದ್ದರೆ ಅಧಮಸ್ತ್ರೀಯಾಗುವಳು. ಕಾಲಲ್ಲಿ ರೋಮವಿದ್ದರೆ ಕಷ್ಟವಾಗುವದು. ಬೆರಳು ಹಳ್ಳವಾಗಿ ಇದ್ದರೆ ನೀಚಜಾತಿಗಳ ಆಡುವಳು. ಪಾದ ಶೀತಳವಾಗಿ ಇದ್ದರೆ ಸಂಚಾರಶೀಲೆಯಾಗುವಳು ನಿಮ್ನಾಂಗವಾಗಿ ಇದ್ದರೆ ಪರಸ್ಪರ ಕಲಹವನ್ನು ಬೆಳಸುವಳು, ಕಾಲು ಬೆರಳು ಅತಿಲೇಖಿಯಾಗಿ ಇದ್ದರೆ ಪತಿಯುಂಕೂಡ ಬೈವಳು ಹಿಮ್ಮಡಿ ವ್ಯಾಪೆ ಧಪ್ಪವಾಗಿ ಇದ್ದರೆ ಪುತ್ರಶೋಕವಂ ಅನುಭವಿಸುವಳು. ಹಿಮ್ಮಡಿಯುನ್ನತವಾಗಿ ಇದ್ದರೆ ಮನೆ ಮನೆ ತಿರುಗುವಳು. ಹಿಮ್ಮಡಿ ದೀರ್ಘವಾಗಿ, ರೋಮಯುಕ್ತವಾಗಿ ಇದ್ದರೆ ದರಿದ್ರಳಾಗಿ ಕಷ್ಟದಿಂದ ಜೀವನವಂ ಮಾಡುವಳು. ಈಪ್ರಕಾರವಾಗಿ ಅಧಮ ಪಾದಂಗಳಂ ತಿಳಿಯಬೇಕು. ಇನ್ನು ಉತ್ತಮವಾದ ಪಾದಾಂಗುಳೀಲಕ್ಷಣವೆಂತಿರುವದೆಂದರೆ:— ಬೆರಳುಗಳು ಉನ್ನತವಾಗಿಯೂ, ತುಂಬಾಗಿಯೂ, ಉರುಟಾಗಿಯೂ, ಇದ್ದರೆ ಭೋಗವುಳ್ಳವಳಾಗುವಳು. ಮಧ್ಯವಬೆಟ್ಟಿನಲ್ಲಿ ಚಕ್ರವಿರೇಖೆಗಳು ಇದ್ದರೆ ರಾಜಸ್ತ್ರೀಯಾಗುವಳು. ಬೆರಳುಗಳು ಮೃದುವಾಗಿ ಇದ್ದರೆ ಶುಭಗಳು ಉಳ್ಳವಳಾಗುವಳು. ಹೀಗಿಲ್ಲದೇ ಕಾಲುಬೆರಳು ಡೊಂಕಾಗಿ, ಮೊಟಕಾಗಿ, ಹಚ್ಚೆಯಾಗಿ, ಇದ್ದರೆ ನಿರ್ಭಾಗ್ಯಯಾಗುವಳು, ಕಾಲುಬೆರಳು ಅತಿ ದೀರ್ಘವಾಗಿ, ಬಹು ಧಪ್ಪವಾಗಿ ಇದ್ದರೆ ಸೌಭಾಗ್ಯವಿಲ್ಲದೆ ಕಷ್ಟಪಡುವಳು. ಅಂಗುಷ್ಠ ದೀರ್ಘವಾಗಿ ಇದ್ದರೆ ಅವಳ ದೆಸೆಯಿಂದ ಪತಿಯೂಕೂಡ ಬಂಧನವಂ ಅನುಭವಿಸುವನು. ಅಂಗುಷ್ಠ ಅತಿಸಣ್ಣವಾಗಿ ಇದ್ದರೆ ದರಿದ್ರತೆಯನನುಭವಿಸುವಳು.

ಅತಿಹ್ರಸ್ವವಾದರೆ ಅಲ್ಪಾಯುಸ್ಸುಳ್ಳವಳಾಗುವಳು, ಬೆರಳುಗಳು ನೆಲಕ್ಕೆ ಒಗ್ಗಿಯಿದ್ದರೆ ವಂಶನಾಶಿನಿಯಾಗುವಳು. ವಾಟವಾಗಿದ್ದರೇ ದಾಸಿಯಾಗುವಳು. .ಅತಿವಿರಳವಾಗಿ ನೆಲ ಸೋಕದೇ ಇದ್ದರೆ ಪತಿಘಾತಿನಿಯಾಗುವಳು. ಅನಾಮಿಕವೆಂಬ ಬೆರಳು ಮಧ್ಯಮಬೆರಳು ಯೆರಡೂ ನೆಲಸೋಕದೇ ಇದ್ದರೆ ಯೆರಡುಗಂಡನ ಕಳಕೊಂಡು ಮೂರನೇಗಂಡ ನುಂಟಾಗುವಳು. ಬೆರಳುಗಳೊಳ್ ಛಿದ್ರ. ಸುಳಿಇದ್ದರೆ ಪತಿಹೀನೆಯಾಗುವಳು. ಅತಿವಿರಳವಾಗಿ ಇದ್ದರೆ ಪುತ್ರಹೀನೆ ಆಗುವಳು. ಇನ್ನು ಸ್ತ್ರೀಪಾದಂಗಳೊಳಿರುವ ನಖಂಗಳ ಉತ್ತಮಲಕ್ಷಣ ಹ್ಯಾಗಿರುವದೆಂದರೆ:— ಉಗುರು ಮೃದುವಾಗಿಯೂ, ಕೆಂಪುವರ್ಣವಾಗಿಯೂ, ಇದ್ದರೆ ದೀರ್ಘಸುಮಂಗಲಿ ಆಗಿರುವಳು. ಚಂದ್ರಾಕೃತಿಯಾಗಿ ಇದ್ದರೆ ಬಂಧು ಸಂಪತ್ತು ಉಳ್ಳವಳಾಗುವಳು. ಕಾಂತಿ ವಿಶಿಷ್ಟವಾಗಿ ಇದ್ದರೆ ರಾಜಸ್ತ್ರೀಆಗುವಳು. ಬಟುವಾಗಿ ಇದ್ದರೆ ವಾಹನೈಶ್ವರ್ಯವುಳ್ಳವಳಾಗುವಳು. ಹೀಗಿಲ್ಲದೆ ಸ್ತ್ರೀಯರುಗಳಕಾಲು ಉಗುರುಗಳು ಒಕ್ಕರೇ ಹಾಗೆ ಇದ್ದರೆ ದುಃಖ, ದಾರಿದ್ರ್ಯವುಳ್ಳವಳಾಗುವಳು. ಹಸುರಾಗಿ ಶಿವರಾಗಿ ಇದ್ದರೆ ಕಷ್ಟಪಡುವಳು. ಇನ್ನು ಸ್ತ್ರೀಯರುಗಳ ಜಂಘಾಲಕ್ಷಣದಲ್ಲಿ ಉತ್ತಮ ಹ್ಯಾಗಂದರೆ-ಜಂಘಾಪ್ರದೇಶವು ರೋಮವಿಲ್ಲದೇ ಇದ್ದರೆ ಸೌಮಂಗಲ್ಯಉಂಟಾಗುವದು. ನರವಿಲ್ಲದೆ ಇದ್ದರೆ ಸಂಪತ್ತುಳ್ಳವಳಾಗುವಳು. ತುಂಬಾಗಿದ್ದರೆ ಇನ್ನು ಬಾಳೇಕಂಭಗಳಿಗೆ ಸಮಾನವಾಗಿದ್ದರೆ ಬಹುಧನವಂತೆಯಾಗುವಳು. ಉರುಟಾಗಿದ್ದರೆ ಭೂಷಣಪ್ರಾಪ್ತಿ. ಹೀಗಿಲ್ಲದೆ ಸ್ತ್ರೀಯರುಗಳ ಜಂಘೆಯುರೋಮಯುಕ್ತವಾಗಿ ಇದ್ದರೆ ದರಿದ್ರೆಆಗುವಳು. ನರಕಾಣುತ್ತಿದ್ದರೆಪತಿರಹಿತೆ ಆಗುವಳು. ಮಾಂಸಪೂರ್ಣವಿಲ್ಲದೆ ಡೊಂಕಾಗಿ ವಿಕಾರವಾಗಿಯಿದ್ದರೆ ಸ್ವೈರಿಣಿ ಆಗುವಳು. ಸ್ತ್ರೀಯರುಗಳ ಊರುಲಕ್ಷಣ ಹ್ಯಾಗೆಯಂದರೆ:—ಪ್ರಶಸ್ತವಾಗಿಯೂ ರೋಮವಿಲ್ಲದ್ದಾಗಿಯೂ ಇದ್ದರೆ ಸೌಮಂಗಲ್ಯವತಿಆಗುವಳು. ನರಗಳು ಕಾಣದೆ ಸ್ಥೂಲವಾಗಿ ಬಾಳೇ ಕಂಬದಹಾಗೆ ಇದ್ದರೆ ಧನವಂತೆಆಗುವಳು. ಕರಭಾಕಾರವಾಗಿ ಇದ್ದರೆ ಭೋಗವುಳ್ಳವಳಾಗುವಳು, ಕುಂಕುಮ ವರ್ಣಗಳಾಗಿ ಇದ್ದರೆ ಸಂಪತ್ತು ಶುಭ ಉಂಟಾಗುವದು, ಇನ್ನು ಅಧಮ ಊರುಲಕ್ಷಣವೇನೆಂದರೆ:— ಅಪ್ರಶಸ್ತವಾಗಿ ಕೂದಲುಳ್ಳದ್ದಾಗಿ ಇದ್ದರೆ ಸ

ರಗಳು ಕಂಡರೆ ಭ್ರಾತೃಹೀನೆ ಪುತ್ರಹೀನೆಯು ಆಗುವಳು. ಇನ್ನು ಉತ್ತಮ ಜಘನಲಕ್ಷಣವೇನೆನಲು:— ಕೂರ್ಮನಂತೆಯೂ ಮಳಲೊಟ್ಟನಂತೆಯೂ ಇದ್ದರೆ ಐಶ್ವರ್ಯವಂತೆ ಆಗುವಳು. ವಿಸ್ತೀರ್ಣವಾಗಿಯೂ ಉನ್ನತವಾಗಿಯೂ ತುಂಬಾಗಿಯೂ, ಮೃದುವಾಗಿಯೂ, ಇದ್ದರೆ ಧನವಂತೆ ಆಗುವಳು. ರೋಮಾಢ್ಯವಾಗಿಯೂ, ಬಲಗಡೆಗೆ ಉರುಟಾಗಿಯೂ, ಇದ್ದರೆ ಪುತ್ರವಂತೆಯಾಗುವಳು. ಇನ್ನು ಅಧಮ ಜಘನ ಹ್ಯಾಗೆ ಅಂದರೆ:— ಮಧ್ಯದಲ್ಲಿ ಹಳ್ಳಬಿದ್ದರೆ ಒಳ್ಳೇದಲ್ಲ. ಚಿಕ್ಕದಾಗಿಯೂ, ಮಾಂಸವಿಲ್ಲದೆ ಕಠಿಣವಾಗಿ ಟೊರೆ ಬೇರೆ ಕೂದಲು ಹುಟ್ಟಿಯಿದ್ದರೆ ದುಃಖದಾರಿದ್ರ್ಯ ಉಳ್ಳವಳಾಗುವಳು. ಯೆಡಗಡೆಗೆ ಬಟುವಾಗಿ ಭುಗ್ನ ಉಳ್ಳವಳಾದರೆ ಪತಿವಿಯೋಗ ಉಂಟಾಗುವದು. ಇನ್ನು ಗುಹ್ಯಲಕ್ಷಣ ಅನೇಕವಾಗಿರುವದು, ಅದಂತಿರಲಿ; ಉತ್ತಮ ನಿತಂಬಲಕ್ಷಣವೇನೆಂದರೆ:— ಉನ್ನತವಾಗಿ ಬಟುವಾಗಿ ಇದ್ದರೆ ಗುಣವಂತೆ ಆಗುವಳು. ತುಂಬಾಗಿಯೂ ದೊಡ್ಡದಾಗಿಯೂ ಇದ್ದರೆ ಪುತ್ರವಂತೆ ಆಗುವಳು. ಅಧಮ ನಿತಂಬ ಹ್ಯಾಗೆನಲು:— ಬಗ್ಗಿ ಚಿಬಿಟವಾಗಿ ದೀರ್ಘವಾಗಿ ನಿರ್ಮಾಂಸವಾಗಿ ಯಿದ್ದರೆ ಪತಿಹೀನೆಯಾಗಿ ಅಪುತ್ರಳಾಗಿ ಬಹುಪತಿಪುಳ್ಳವಳಾಗುವಳು. ಚಿಕ್ಕದಾಗಿಯಿದ್ದರೆ ಭೋಗವಿಲ್ಲದವಳಾಗುವಳು.— ಯಿನ್ನು ಪ್ರಶಸ್ತವಾದ ವಸ್ತಿಲಕ್ಷಣವೆಂತಿರುವದೆನಲು:— ಪ್ರಶಸ್ತವಾಗಿ ಉನ್ನತವಾಗಿ ವಿಪುಲವಾಗಿದ್ದರೆ ಸುಪುತ್ರನಂ ಪಡೆಯುವಳು, ಹ್ರಸ್ವವಾಗಿ ವಿಕಾರವಾಗಿ ಕಠಿನವಾಗಿ ಇದ್ದರೆ ದುಷ್ಟಸ್ತ್ರೀ ಆಗುವಳು. ಇನ್ನು ಸ್ತ್ರೀಯರಿಗೆ ಉತ್ತಮ ಕಟಿ ಹ್ಯಾಗೆಂದರೆ:— ಈ ಸೂತ್ರವನ್ನು ನಡುವಿಗೆ ಸುತ್ತಿದರೆ ಹದಿನಾರು ಅಂಗುಳ ಪ್ರಮಾಣವಾಗಿರಬೇಕು. ಅದಕ್ಕೆ ಕಡಮೆ ಆದರೆ ಅತಿ ಸೌಂದರ್ಯವುಳ್ಳ ಶ್ರೇಷ್ಠಜಾತಿ ಸ್ತ್ರೀಯು ಎನಿಸುವಳು. ಸಣ್ಣನಾದರೆ ಧಾನ್ಯವಂತೆ ಆಗುವಳು. ರತ್ನಮಯವಾದ ಒಡ್ಯಾಣವಂ ಧರಿಸಿ ಸರ್ವಾಭರಣ ಭೂಷಿತೆ ಆಗುವಳು. ಅಧಮ ಕಟಿಪ್ರದೇಶವೆಂತಿರುವದೆನಲು — ಸೂತ್ರವನ್ನು ನಡುವಿಗೆ ಸುತ್ತಲು ಇಪ್ಪತ್ತುನಾಲ್ಕು ಅಂಗುಳ ಪ್ರಮಾಣವಾದರೆ ಮಧ್ಯಮ ಸ್ತ್ರೀಯಾಗುವಳು. ಅದಕ್ಕೆ ಹೆಚ್ಚಾದರೆ ನೀಚಜಾತಿ ಸ್ತ್ರೀಯೆಂಬುವರು, ಮೂರುಸುಳಿ ಇದ್ದರೆ ರಾಜ್ಯಾನಿಷ್ಟ ಆಗುವಳು. ಒಂದು ಸುಳಿ ಇದ್ದರೆ ಅನಿಷ್ಟ. ಇನ್ನು ಸ್ತ್ರೀಯರುಗಳ ನಾಭಿ ಲಕ್ಷಣವಂ ಪೇಳು

ಪೆಸು, ಪ್ರದಕ್ಷಿಣಸುಳಿಯಾಗಿ ಆಳವಾಗಿಗಭೀರವಾದ ನಾಭಿಯಿರಲು ಧನಿಕಳಾಗುವಳು. ಅವಳಮಗ ಅರಸನಾಗುವನು. ಕಪ್ಪೆಯಂತೆ ನಾಭಿಇದ್ದರೆ ಒಹುಪುತ್ರವಂತೆಯಾಗುವಳು. ಅಪ್ರದಕ್ಷಿಣವಾದ ಸುಳಿವುಳ್ಳ ನಾಭಿಯುಂಟಾದರೆ ದರಿದ್ರೆ ಆಗುವಳು. ನಾಭಿ ಮೊಳ್ಳೆಯಾಗಿ ಉನ್ನತವಾಗಿ ಇದ್ದರೆ ಅನಿಷ್ಟೆಯಾವದಾಸಿಯಾಗುವಳು, ನಿರ್ಲೋಮ ಹೃದಯವಾಗಿ ನಿಮ್ನವರ್ಜಿತವಾಗಿ ಇದ್ದರೆ ನೀಚರಸೇವೆಯುಂಮಾಡುವಳು. ನಾಭಿಯು ಅತಿವಿಶಾಲವಾಗಿ ಇದ್ದರೆ ಜಾರೆಯಾಗಿ ನಿರ್ದಯವುಳ್ಳವಳಾಗುವಳು. ವಿಚ್ಛಿನ್ನರೋಮವಾದರೆ ಪತಿಯುಂಕೊಲ್ಲುವಳಾಗುವಳು. ಇನ್ನು ಸ್ತ್ರೀಯರುಗಳ ಉತ್ತಮ ಕುಕ್ಷಿ ಲಕ್ಷಣವೇನೆಂದರೆ:- ಸಮವಾಗಿ ಬಟುವಾಗಿ ಮೃದುವಾಗಿ ಇದ್ದರೆ ಪತಿಯಲ್ಲಿ ವಿಶ್ವಾಸವುಳ್ಳವಳಾಗುವಳು. ಕಪ್ಪೆಹೊಟ್ಟೆಯಂತೆಯೂ ಆಲದೆಲೆಯಂತೆಯೂ ಇದ್ದರೆ ಪ್ರೌಢ ಪುತ್ರನಾಗುವನು. ಕೂರ್ಮ ಕುಕ್ಷಿಯಾದರೆ ಸೌಭಾಗ್ಯವುಳ್ಳವಳಾಗುವಳು ಕುಕ್ಷಿಯುಸ್ವಲ್ಪ ಧಪ್ಪವಾಗಿ ಅಲ್ಪರೋಮವಾಗಿದ್ದು ಅಲ್ಪನಿದ್ರೆ ಅಲ್ಪಾಹಾರವಂ ಮಾಡುವಳಾದರೆ ಸುಮಂಗಲಿಆಗುವಳು. ಪಾರ್ಶ್ವದಲ್ಲಿ ಅಸ್ಥಿಗಳು ಕಾಣದಿದ್ದರೆ ಸಣ್ಣಹೊಟ್ಟೆಯಾಗಿ ನರವಿಲ್ಲದೆ ಮೃದುವಾಗಿದ್ದರೆ ಬಹುಭೋಗಿಯಾಗುವಳು. ನೇರವಾಗಿ ರೋಮಾವಳಿ ಇದ್ದರೆ ಬಹುಒಳ್ಳೇದು, ಇನ್ನು ಅಧಮ ಕುಕ್ಷಿಲಕ್ಷಣ ವೇನೆನಲು:— ವ್ರೋರೆಯಾಗಿ ಹಳ್ಳವಾಗಿ ಅತಿಕಠಿನವಾಗಿ ಇದ್ದರೆ ಪುತ್ರಹೀನೆ ಆಗುವಳು. ಸುಳಿಇದ್ದರೆ ಮೃತಪುತ್ರೆ ಆಗುವಳು, ಪಾರ್ಶ್ವದಲ್ಲಿ ಅಸ್ಥಿಗಳು ಕಂಡರೆ ದುಃಖಿಯಾಗುವಳು. ಕುಕ್ಷಿಕುಂಭಾಕಾರವಾಗಿದ್ದರೆ ದರಿದ್ರೆಆಗುವಳು, ಕುಂಬಳಕಾಯಂತೆ ಇದ್ದರೆ ದುಷ್ಪುತ್ರೆಯಾಗುವಳು, ವಿಶಾಲೋದರಿಯಾದರೆ ಅತ್ಯಾಹಾರವಂ ಭಕ್ಷಿಸುವಳು. ಜೋಲುಹೊಟ್ಟೆ ಆದರೆ ಮಾವನನ್ನು ಅತ್ತೆಯನ್ನು ಕೊಲ್ಲುವಳಾಗುವಳು. ಕುಟಿಲವಾಗಿ ವಿಚ್ಛಿನ್ನವಾಗಿ ಕಪಿಲವರ್ಣವಾಗಿ ಸ್ಥೂಲರೋಮಾವಳಿಯಾದರೆ ಅನಿಷ್ಟವುಳ್ಳವಳಾಗಿ ಚೋರೆಯಾಗಿ ತುಂಟಿಯಾಗುವಳು. ಇನ್ನು ಸ್ತ್ರೀಯರುಗಳವಕ್ಷಸ್ಥಳ ಸ್ತನಲಕ್ಷಣ ಉತ್ತಮ ಯಾವದೆನಲು ಹದಿನೆಂಟುಅಂಗುಲ ವಿಶಾಲವಾಗಿ ಉನ್ನತವಾಗಿಯೂ ರೋಮವಿಲ್ಲದೆ ಇದ್ದರೆ ಒಳ್ಳೇದು. ಘನವಾಗಿ ಬಟುವಾಗಿ ದೃಢವಾಗಿ ದೊಡ್ಡದಾಗಿ ಇದ್ದರೆ ಕೀರ್ತಿವಂತೆ ಆಗುವಳು. ಸಮವಾಗಿಕೊಟಿ ಇದ್ದರೆ ಬುದ್ಧಿವಂತೆ ಆಗುವಳು.

ದಕ್ಷಿಣಸ್ತನ ದೊಡ್ಡದಾಗಿ ಇದ್ದರೆ ಗಂಡುಮಗನ ಪಡೆಯುವಳು. ತೊಟ್ಟು ಶ್ಯಾಮವಾಗಿಯೂ ಬಟುವಾಗಿಯೂ ಇದ್ದರೆ ಯಶಸ್ಸುವುಳ್ಳವಳಾಗುವಳು. ಸ್ತನಮಧ್ಯದಲ್ಲಿ ಒಂದು ಬೆರಳು ಎಡೆಬಿಟ್ಟು ಇದ್ದರೆ ಪದ್ಮಿನೀಜಾತಿಸ್ತ್ರೀಯು ಐಶ್ವರ್ಯವಂತೆ ಆಗುವಳು. ಎರಡು ಅಂಗುಲಬಿಟ್ಟು ಇದ್ದರೆ ಸಂಪತ್ತುವುಳ್ಳವಳಾಗುವಳು. ಸ್ತನವಲ್ಲಿ ಶೃಂಗಾರ ಗಜರೇಖೆ ಇದ್ದರು ವಂಶಕ ಸ್ವಸ್ತಿಕ, ಅಂಕುಶ, ಮತ್ಸ್ಯ ಈರೇಖೆಗಳಿದ್ದರೆ ರಾಜಸ್ತ್ರೀ ಯಾಗುವಳು, ಇನ್ನು ಅಧಮಸ್ತನಲಕ್ಷಣವೆಂತೆನಲು— ರೋಮವುಳ್ಳದ್ದಾಗಿಯೂ ಸುಳಿವುಳ್ಳದ್ದಾಗಿಯೂ ಇದ್ದರೆ ದುಃಖಿಯಾಗುವಳು. ಸ್ತನಗಳು ಚಿಕ್ಕವಾಗಿ ಹಳ್ಳವಾಗಿರೋಮವುಳ್ಳದ್ದಾಗಿ ಇದ್ದರೆ ದರಿದ್ರ ಆಗುವಳು. ಸ್ತನ ಸಣ್ಣನಾಗಿ ವಿರಳವಾದರೆ ಹಸ್ತಿನಿಯನ್ನುವರು, ನೀಚೆಯಾಗಿ ಕುಲಗೇಡಿಯಾಗುವಳು ಹಳ್ಳವಾಗಿಯೂ ಸ್ಥೂಲವಾಗಿಯೂ ಮೊನೆಯಾಗಿಯೂ ಒಣಗಿಯೂ ಇದ್ದರೆ ಜಾರೆಯಾಗಿ ರೋಗಿಯಾಗುವಳು. ಎಡಗಡೆ ಸ್ತನ ದೊಡ್ಡದಾದರೆ ಹೆಣ್ಣುಮಕ್ಕಳನ್ನೇ ಹೆರುವಳು. ಮಡಕೆಹಾಗೆ ಅಂತರಾಳವಾಗಿದ್ದರೆ ಕುಲಟೆ ಆಗುವಳು. ಮೂಲದಲ್ಲಿ ದಪ್ಪವಾಗಿ ಕೃಶವಾಗಿ ಅತಿಚೂರುಕಾದ ಮೊನೆವುಳ್ಳದ್ದಾಗಿ ಇದ್ದರೆ ಆದಿಯಲ್ಲಿ ಸುಖಪಟ್ಟು ಕಡೆಯಲ್ಲಿ ಕಷ್ಟಪಡುವಳು. ದೀರ್ಘವಾಗಿಯೂ ಕೃಶವಾದ ಚೂಚುಕವಾದರೆ ಪುತ್ರಹೀನೆ ಆಗುವಳು. ಕ್ಲೇಶಪಡುವಳು. ಎರಡು ಸ್ತನಗಳ ಮಧ್ಯದಲ್ಲಿ ಮೂರಂಗುಲ ಬಿಟ್ಟದ್ದರೆ ಜಾರಿಣಿಯಾಗುವಳು. ನಾಲ್ಕು ಅಂಗುಲ ಬಿಟ್ಟಿದ್ದರೆ ಚೋರೆಯಾಗುವಳು ಇನ್ನು ಅನೇಕಮಂದಿ ಪತಿಗಳಂ ಹೊಂದಿ ಕುಲಟೆಆಗುವಳು. ಇನ್ನು ಸ್ತ್ರೀಯರಗಳ ಉತ್ತಮಬಾಹು ಲಕ್ಷಣ ಹ್ಯಾಗೆಂದರೆ:-ಬಾಹುಗಳು ಕೋಮಲವಾಗಿದ್ದರೆ ಸೌಭಾಗ್ಯವುಳ್ಳವಳಾಗುವಳು. ಸುಳಿಇದ್ದರೆ ಭೋಗಿನಿ ಆಗುವಳು ಪತಿವ್ರತೆ ಆಗುವಳು. ವರ್ತುಲವಾಗಿ ಬಾಳೇಕಂಬದಹಾಗೆ ನರಕಾಣದೆ ರೋಮವಿಲ್ಲದೆ ಇದ್ದರೆ ಪುತ್ರವಂತೆಯಾಗಿ ಬಂಧುಗಳಲ್ಲಿ ಪ್ರೀತಿವುಳ್ಳವಳಾಗುವಳು, ದೀರ್ಘವಾಗಿದ್ದರೆ ಧನಧಾನ್ಯಾಭರಣಭೋಗವುಂಟಾಗುವದು. ಮತ್ತು ಅಧಮಬಾಹುಲಕ್ಷಣ ಹ್ಯಾಗೆಂದರೆ:— ಸ್ತ್ರೀಯರ ಬಾಹುವು ಒಂದು ಸುಳಿಇದ್ದು ಅಲ್ಲಿಗೆ ರೇಖೆಬಂದರೆ ಅನಿಷ್ಟವಾಗುವದು. ಎರಡು ತೋಳುಗಳಲ್ಲಿಯೂ ಎರಡುಸುಳಿ ಇದ್ದರೆ ಕುಲಕ್ಷಯವಾಗುವದು. ಬಹು

ರೆ-ಖೆಇದ್ದರೆ ಧನಕ್ಷಯವಹುದು. ಬಾಹುಗಳು ಚಿಕ್ಕದಾಗಿ ಬಹುರೋಮವುಳ್ಳವಳಾದರೆ ಅವಳಂ ತ್ಯಜಿಸಬೇಕು. ಇನ್ನು ಬಾಹುಗಳು ಸರಿಯ ಬಾಲವಂತೆಯೂ ಹಸುವಿನ ಬಾಲದಂತೆಯೂ ಇದ್ದು ಗಂಟು ಇಲ್ಲದೆ ಇದ್ದರೆ ಐಶ್ವರ್ಯವುಂಟಾಗುವದು. ಶಿಶುಹತ್ಯವನ್ನು ಮಾಡುವಳು. ಇನ್ನು ಸ್ತ್ರೀಯರಗಳ ಪಾರ್ಶ್ವಲಕ್ಷಣ ಹ್ಯಾಗಂದರೆ:—ಉಭಯಪಾರ್ಶ್ವಗಳಲ್ಲಿಯೂ ಕಳಂಕವಿಲ್ಲದೆ ವಿಕಾರವಿಲ್ಲದಿದ್ದರೆ ಬುದ್ಧವಂತೆ ಆಗುವಳು. ರೋಮ ವಿಶಿಷ್ಟವಾಗಿಯೂ ಕಳಂಕವುಳ್ಳದ್ದಾಗಿಯೂ ವಿಕಾರವಾಗಿಯೂ ಇದ್ದರೆ ಚಂಡಾಲನಂಯತ್ತಿಕೊಂಡು ಪೋಗುವಳು. ಇನ್ನು ಕಕ್ಷಲಕ್ಷಣವಂ ಪೇಳುವೆನು:- ಕಕ್ಷವು ಸೂಕ್ಷ್ಮವಾದ ರೋಮವುಳ್ಳದ್ದಾಗಿ ನಯವಾಗಿ ಮಾಂಸಳವಾಗಿದ್ದರೆ ಸೌಮಂಗಲ್ಯವತಿಯಾಗಿ ಯಿರುವಳು. ಹೀಗಲ್ಲದೆ ಕಠಿನವಾಗಿ ಧನ್ವವಾದ ರೋಮವುಳ್ಳದ್ದಾಗಿ ಶುಷ್ಕವಾಗಿ ಇದ್ದರೆ ವ್ಯಭಿಚಾರಿಣಿಯಾಗಿ ಕಷ್ಟಪಟ್ಟು ಜೀವನವಂ ಮಾಡುವಳು. ಇನ್ನು ಸ್ತ್ರೀಯರಬೆನ್ನು ಲಕ್ಷಣವೇನೆನಲು:- ಸ್ತ್ರೀಯರುಗಳ ಬೆನ್ನು ಮೂಳೆಕಾಣದೇ ಮಾಂಸದಳವಾಗಿದ್ದರೆ ಭ್ರಾತೃ ಸಂಪತ್ತುಂಟು. ಹೀಗಲ್ಲದೆ ಸ್ತ್ರೀಯರಬೆನ್ನಿನಲ್ಲಿ ವೊಂದುಸುಳಿ ಇದ್ದರೆ ಪತಿಹಾನಿ, ಯರಡುಸುಳಿ ಇದ್ದರೆ ಗಂಡಸಿನಂತೆ ಆಗುವಳು. ಬೆನ್ನಿನಲ್ಲಿ ಯಡಗಡೆಯಾಗಲಿ, ಬಲಗಡೆಯಾಗಲಿ, ಸುಳಿ ಇದ್ದರೆ ವಡಹುಟ್ಟಿದವರಿಗೆ ಹಾನಿ ಆಹುದು, ಬೆನ್ನು ವಣಗಿಯಿದ್ದರೆ ಭ್ರಾತೃದ್ವೇಷ ಉಳ್ಳವಳಾಗುವಳು. ಬೆನ್ನು ಬಗ್ಗಿಮುರುಕಾಗಿಇದ್ದರೆ ಅತಿದರಿದ್ರೆ ಆಗುವಳು. ಇನ್ನು ಸ್ತ್ರೀಯರ ಹಸ್ತದಲ್ಲಿ ಉತ್ತಮಲಕ್ಷಣವೇನಂದರೆ.—ಹಸ್ತದಲ್ಲಿಪ್ರದಕ್ಷಿಣವಾದ ಸುಳಿಇದ್ದರೆ ಧನಧಾನ್ಯವಂತೆಯಾಗುವಳು. ಬೆರಳುಗಳುವಟ್ಟಾಗಿ ಜಿಡಿವರೆ ತಾವರೆ ಮೊಗ್ಗಿನಂತೆ ಇದ್ದು ಉಗರುಚಿಕ್ಕದಾಗಿಯೂ, ಮೃದುವಾಗಿಯೂ ಮಧ್ಯದಲ್ಲಿ ಉನ್ನತವಾಗಿಯೂ ಇದ್ದರೆ ಐಶ್ವರ್ಯವುಂಟಾಗಿ ಪುತ್ರವಂತೆ ಆಗುವಳು. ಅಂಗೈಕೆಂಪಾಗಿಸ್ವಲ್ಪ ರೇಖೆ ಇದ್ದರೆ ರಾಜಪೂಜ್ಯೆ ಆಗುವಳು. ಬೆರಳು ಸಣ್ಣವಾಗಿ ಸರಳವಾಗಿದ್ದರೆ ದೀರ್ಘಸುಮಂಗಲಿ ಆಗಿ ಪುತ್ರವಂತೆಯೂ ಆಗುವಳು. ನಯವಾಗಿಉನ್ನತ ನಖಂಗಳಾಗಿ ಕೆಂಪಾಗಿಇದ್ದರೆ ಪತಿವ್ರತೆ ಆಗುವಳು. ರತ್ನಾದಿ ಆಭರಣಗಳು ಉಂಟಾಗುವದು. ಇಂದ್ರಚಾಪದಂತೆ ತಾಂಬ್ರ ನಖವುಳ್ಳವಳಾದರೆ ಧಾನ್ಯ ಸಂಪತ್ತು ಉಳ್ಳವಳಾಗುವಳು.

ಸೂಕ್ಷ್ಮಬೆರಳಾಗಿ ಅಂಕುಶ ಕುಂಡಲ ಚಕ್ರರೇಖೆಗಳು ಕರದಲ್ಲಿ ಇದ್ದರೆ ಅವಳಮಗ ಅರಸಾಗುವನು. ಶಂಖ, ಚಕ್ರ, ಚಾಮರ, ಡಮರುಗ, ಕಲಶರೇಖೆ ಇದ್ದರೆ ಮಹಾರಾಜಸ್ತ್ರೀ ಆಗುವಳು. ಪದ್ಮ, ಪ್ರಾಸಾದ, ತೋರಣ ಶಂಖ, ಗೋಪುರ, ರೇಖೆಇದ್ದರೆ ಅನೇಕ ಲಕ್ಷಣಸಹುಳ್ಳವಳಾಗುವಳು. ಅಂಗುಷ್ಠಮೂಲದಿಂದ ಮಧ್ಯಮಾಂಗುಳಿವರಿಗೆ ರೇಖೆ ಊರ್ಧ್ವವಾಗಿ ಇದ್ದರೆ ರಾಜಪುತ್ರಿಆಗುವಳು. ಆಸ್ತ್ರೀಯು ರಾಜಪತ್ನಿ ಆಗುವಳು. ಬೆರಳುಗಳು ನೀಳವಾಗಿ ಕೇಶಗಳು ದೀರ್ಘವಾಗಿ ಇರಲು ದೀರ್ಘಾಯುಸ್ಸು ಉಳ್ಳವಳಾಗುವಳು, ಮಯೂರರೇಖೆಇದ್ದರೆ ಕುಶಲೆಆಗುವಳು ಮುಂಗೈಯಲ್ಲಿ ರೋಮವಿಲ್ಲದೆ ನರಕಾಣದೆ ಇದ್ದರೆ ಐಶ್ವರ್ಯವಂತೆ ಆಗುವಳು. ಕೆಂಪಾಗಿ ಪ್ರಕಾಶವಾಗಿ ಗಭೀರವಾದ ಒಟುವಾದ ರೇಖೆಯಿದ್ದರೆ ತೌರಮನೆ ಸುಖವುಂಟು. ಹಸ್ತದಲ್ಲಿ ಮತ್ಸ್ಯರೇಖೆ ಯಿದ್ದರೆ ಸೌಭಾಗ್ಯವತಿ ಆಗುವಳು. ಸ್ವಸ್ತಿಕರೇಖೆಯಿರಲು ಮಂತ್ರಿಪತ್ನಿ ಆಗುವಳು ಪದ್ಮರೇಖೆಇದ್ದರೆ ರಾಜಪತ್ನಿಆಗುವಳು, ಪ್ರದಕ್ಷಿಣವಾದ ಸಂದ್ಯಾವರ್ತ, ಶಂಖ, ಛತ್ರ ಕೂರ್ಮರೇಖೆಗಳು ಇದ್ದರೆ ರಾಜಮಾತೃ ಆಗುವಳು. ತುಲಾರೇಖೆಯಿದ್ದರೆ ವರ್ತಕನಿಗೆ ಪತ್ನಿಆಗುವಳು, ಆನೆ, ಕುದರೆ, ವೃಷಭ, ವಜ್ರಗಳರೇಖೆಯಿದ್ದರೆ ವೀರಪತ್ನಿ ಆಗುವಳು. ಚಾಮರ, ಅಂಕುಶ, ಕೋದಂಡರೇಖೆಯಿದ್ದರೆ ಮಹಾರಾಜಪತ್ನಿ ಆಗುವಳು. ತ್ರಿಶೂಲರೇಖೆಆಗಲಿ ಚಕ್ರರೇಖೆಆಗಲಿ ವೊಂದೊಂದುಯಿದ್ದರೆ ವಿದ್ವಾಂಸನಿಗೆ ಪತ್ನಿಆಗುವಳು. ಗದಾ ಶಕ್ತಿ ದುಂದುಭಿರೇಖೆಗಳುಯಿದ್ದರೆ ಗಾನವತಿಆಗುವಳು. ವಿರಳವಾದ ಅಂಗುಷ್ಠವು ಉರುಟಾದ ಬೆರಳುಗಳು ಗಿಣ್ಣುಗಳು ಕ್ರಮವಾಗಿ ಇದ್ದರೆ ಬಹುಪುತ್ರಳಾಗಿ ಅವೃತಹಸ್ತೆ ಆಗುವಳು. ಉಗುರುಗಳು ಕೆಂಪಾಗಿ ಸಣ್ಣವಾಗಿಯಿದ್ದರೆ ಪುಣ್ಯವಂತೆ ಆಗಿರುವಳು. ಹೀಗಲ್ಲದೆ ಸ್ತ್ರೀಯರ ಹಸ್ತದೊಳ್ ಬಹುರೇಖೆಯಿದ್ದರೆ ದಾರಿದ್ರ್ಯವನ್ನು ಅನುಭವಿಸುವಳು. ರೇಖೆವೊಂದೂಯಿಲ್ಲದೆಯಿದ್ದರೆ ದುಃಖಪಡುವಳು. ನರಗಳು ಬಹುವಾಗಿ ಕಾಣುತ್ತಲಿದ್ದರೆ ಯಾಚನವಂಮಾಡಿ ಜೀವಿಸುವಳು. ಹಸ್ತಗಳು ಬಹು ಕಠಿಣವಾಗಿಯಿದ್ದರೆ ದಾಸವಬಗೆಯಿಂದಲೂ ಕಷ್ಟಪಡುವಳು. ಮುಂಗೈ ರೋಮವುಳ್ಳವಳಾಗಿ ಯಿದ್ದರೆ ನಿಂದಿತೆ ಆಗುವಳು, ಶುಷ್ಕವಾಗಿಯಿದ್ದರೆ ತ್ಯಜಿಸಲ್ಪಡುವಳು. ಅಂಗುಷ್ಠಮೂಲದರೇಖೆ

ಕನಿಷ್ಠಿಕಾಪರ್ಯಂತ ಯಿದ್ದರೆ ಪತಿಘಾತಿನಿಯಾಗುವಳು. ಗೃಧ್ರಜಂಬೂಕರೇಖೆಗಳಿದ್ದರೆ ಯೆಷ್ಟು ಯಿದ್ದರೂ ದಗ್ಧಹಸ್ತೆಯಾಗಿ ದರಿದ್ರಪಡುವಳು. ಕಪ್ಪೆ ಶ್ವಾನ ಊರೇಖೆಗಳಿದ್ದರೆ ಅವಳು ಅಮೃತವನ್ನು ಮುಟ್ಟಿದಾಗ್ಯೂವಿಷವಾಗುವದು. ವೃಶ್ಚಿಕರೇಖೆ ಸರ್ಪರೇಖೆ ಇವು ಯೇನಾದರು ಯಿದ್ದರೂ ಶೂನ್ಯಗಾತ್ರಿಯಾಗುವಳು. ಮಾರ್ಜಾಲ ರಾಸಭ ಉಷ್ಟ್ರ ಊರೇಖೆಗಳು ಯೇನಾದರೂಯಿದ್ದರೆ ಜಾರಿಣಿಯಾಗಿ ಅನಾಚಾರೆಯಾಗಿ ದುಃಖಿಯಾಗುವಳು. ಬೆರಳುಗಳು ಮೋಟರಾಗಿ ತಿಂಯಾಗಿ ಅತಿಧಪ್ಪನಾಗಿ ಬೆರಳುಗಳಮೇಲೆ ಕೂದಲುಳ್ಳದ್ದಾದರೆ ದರಿದ್ರವು ದುಃಖವು ಉಂಟಾಗುವದು. ಬೆರಳು ಅತಿಸಣ್ಣ ಅತಿಧಪ್ಪ ಅತಿವಿರಳವಾಗಿಯಿದ್ದರೆ ಭಾಗ್ಯಹೀನೆಯಾಗುವಳು. ಗಿಣ್ಣು ಹೆಚ್ಚಾಗಿದ್ದರೆ ಯಾಚನವಂಮಾಡುವಳು. ಉಗುರುಗಳು ಹಳ್ಳವಾಗಿ ವಿವರ್ಣವಾಗಿ ಚಿಪ್ಪಿನಂತೆಯಿದ್ದರೆ ಅಸೌಖ್ಯವುಂಟಾಗುವದು. ಯಿನ್ನು ಸ್ತ್ರೀಯರ ಸ್ಕಂಧದಲ್ಲಿ ಶುಭಲಕ್ಷಣ ಹ್ಯಾಗಂದರೆ:— ಸ್ಕಂಧವು ಮಧ್ಯದಲ್ಲಿ ಬಗ್ಗದೆ ಧಪ್ಪವಾಗಿದ್ದರೆ ರತ್ನಾಭರಣವುಳ್ಳ ಐಶ್ವರ್ಯವತಿಯಾಗುವಳು, ಹಾಗೆಯಿರದೆ ಭುಜಶಿರಸ್ಸಾದ ಸ್ಕಂಧವು ವಕ್ರವಾಗಿ ರೋಮಾಢ್ಯವಾಗಿ ಇರಲು ದರಿದ್ರಿಯಾಗುವಳು, ಮಧ್ಯದಲ್ಲಿ ಹಳ್ಳಬಿದ್ದು ಕೂಸವಾಗಿದ್ದರೆ ಸರ್ವರಿಂದಲೂ ನಿಂದಿಸಲ್ಪಡುವಳು, ನಿರ್ಮಾಂಸವಾದರೆ ಕಷ್ಟಪಡುವಳು. ಇನ್ನು ಸ್ತ್ರೀಯರ ಕಂಠದ ಉತ್ತಮಲಕ್ಷಣ ಹ್ಯಾಗಂದರೆ:—ಕಂಠದ ಕೆಳಗಣ ಕಟ್ಟೆಯು ಉನ್ನತವಾಗಿಯಿದ್ದರೆ ಶುಭವಾಗಿಯಿರುವದು, ಶುಷ್ಕಕಂಠವಾಗಿ ನರಗಳು ಕಾಣುತ ರೋಮಯುಕ್ತವಾಗಿಯೂಯಿದ್ದರೆ ಕಠಿನೆ ಆಗುವಳು, ಕುಟಿಲಗಾತ್ರಿ ಆಗುವಳು. ಕಂಠದಲ್ಲಿ ಮೂರುರೇಖೆಯಿದ್ದರೆ ಆಭರಣ ಸಂಪತ್ತುವುಳ್ಳವಳಾಗುವಳು. ಕೋಕಿಲಧ್ವನಿ ಆಗಲು ಪುಣ್ಯವಂತೆ ಆಗುವಳು, ಶಂಖಧ್ವನಿ ಆದರೆ ಗರತಿ ಆಗುವಳು, ವೀಣಾಧ್ವನಿ ಆದರೆ ಕುಶಲೆ ಆಗುವಳು, ಯಿನ್ನು ಅಧಮ ಕಂಠಲಕ್ಷಣ ಹ್ಯಾಗೆಯಂದರೆ:— ಸ್ತ್ರೀಯರ ಕಂಠದಲ್ಲಿ ಬಲಗಡೆ ಸುಳಿಯಿದ್ದರೆ ದರಿದ್ರೆ ಆಗುವಳು, ಕಂಠದ ಕೆಳಗಣಕಟ್ಟೆ ಜೋಲುತ ಆಳವಾಗಿಯೂ ವಿಷಮವಾಗಿಯೂ ಯಿದ್ದರೆ ಪುತ್ರಹಾನಿಯೂ ಶತ್ರುಬಾಧೆಯೂ ಉಂಟಾಗುವದು. ಕಂಠವು ಅತಿಸ್ಥೂಲವಾದರೆ ಕಷ್ಟಪಡುವಳು, ಅತಿಸಣ್ಣನಾಗಿಯಿದ್ದರೆ ಪತಿಘ್ನೆ ಆಗುವಳು.

ಉಷ್ಟ್ರರೇಖೆ ಕಾಕರೇಖೆಯಿದ್ದರೆ ದೇಶಾಂತರವಂ ತಿರುಗುವಳು, ಶ್ವಾನ ಧ್ವನಿ ಕೃಕಲಾಸರೇಖೆಯಿದ್ದರೆ ಅನಿಷ್ಟವಂತೆ ಆಗುವಳು. ಇನ್ನು ಸ್ತ್ರೀಯರ ಕಪೋಲದ ಉತ್ತಮ ಲಕ್ಷಣವೇನೆಂದರೆ:— ಸ್ತ್ರೀಕಪೋಲವು ರೋಮವಿಲ್ಲದೆ ಧಪ್ಪವಾಗಿಯಿದ್ದರೆ ಸಂಪತ್ತುಂಟಾಗುವದು, ನುಣುವಾಗಿ ಮಿಂಚಾಗಿದ್ದರೆ ರಾಜಪೂಜ್ಯೆಯಾಗುವಳು. ದವಡೆಯೊಳಗೆ ಪದ್ಮಾದಿ ರೇಖೆಯಿದ್ದರೆ ರಾಜಸ್ತ್ರೀಯಾಗುವಳು. ಹಲ್ಲುಕಾಣದೆ ಅಗಲವಾದ ಕಪೋಲವಾಗಿ ಚಿನ್ನದಂತೆ ಹೊಳೆಯುತ್ತಿದ್ದರೆ ಪೂರ್ಣಸೌಭಾಗ್ಯವಂತೆ ಆಗುವಳು, ಹೀಗೆ ಯಿರದ ಅಧಮ ಕಪೋಲಲಕ್ಷಣ ಹ್ಯಾಗಿರುವದೆನಲು:— ಕಪೋಲವು ಸಣ್ಣದಾಗಿ ರೋಮವಿಶಿಷ್ಟವಾಗಿದ್ದರೆ ದುಃಖ ದಾರಿದ್ರ್ಯ ಉಂಟಾಗುವದು. ದವಡೆಯೊಳಗೆ ಬಿಳೀ ಪದ್ಮವರ್ಣವೂ ಹೊಂಬಣ್ಣವೂ ಉಂಟಾಗಿದ್ದರೆ ಯೋಗಿನಿ ಯಾಗುವಳು. ದವಡೆಗಳು ಕಪ್ಪಾಗಿದ್ದರೆ ಬಂಜೆಯಾಗುವಳು. ದವಡೆಯೊಳಗೆ ಕಪ್ಪಾಗಿದ್ದರೆ ಬಹುಸುಂದಿ ಪತಿಯುಳ್ಳವಳಾಗುವಳು. ಸ್ತ್ರೀ ಕರ್ಣ ಲಕ್ಷಣವೆಂತೆನೆ:— ಲಂಬಕರ್ಣವಾದರೂ ಬಟುವಾದ ಕಿವಿಯುಳ್ಳವಳಾದರೂ ಸಂಪತ್ತುಂಟಾಗುವದು. ತುಂಬಾದ ಕಿವಿಯಾದರೆ ಸುಖವುಳ್ಳವಳಾಗುವಳು. ಹೀಗಿರದೆ ಕಿವಿಯೊಳಗೆ ಶೀಳಿ ಇದ್ದರೆ ಅನಿಷ್ಟವಂತೆಯಾಗುವಳು. ಶುಷ್ಕಕರ್ಣವಾಗಿದ್ದರೆ ದರಿದ್ರೆಯಾಗುವಳು. ಕಿವಿಗಳಲ್ಲಿ ನರಗಳು ಕಂಡು ಶುಷ್ಕವಾಗಿ ಕಠಿನವಾಗಿಯೂ ಇದ್ದರೆ ದುಃಖವು ದಾರಿದ್ರ್ಯವು ಉಂಟಾಗುವದು. ಯಿನ್ನು ಸ್ತ್ರೀಯರಗಳ ಮುಖಲಕ್ಷಣ ವೆಂತೆನೆ:—ಬಾಯಿ ಚಿಕ್ಕದಾಗಿ ಕೋಕಿಲೆಯಂತೆ ಉಂಟಾಗಿದ್ದರೆ ಸಂಪನ್ನೆಯಾಗುವಳು. ದಂತಸಣ್ಣನಾಗಿ ಗೋಕ್ಷೀರ ವರ್ಣವಾಗಿದ್ದರೆ ಪತಿವ್ರತೆಯಾಗುವಳು. ಸಮದಂತಗಳಾಗಿ ಸುಗಂಧ ಸಹಿತವಾದರೆ ಪಾಲ್ಯೇದು. ಮೂವತ್ತೆರಡು ದಂತಗಳಿದ್ದರೆ ಶುಭವಾಗಿರುವದು, ಸಾಲು ಸಮವಾಗಿದ್ದರೆ ಶುಭವು. ಹೀಗಿರದೆ ದಂತ ವಿಶಾಲವಾಗಿಯೂ ಕಾಗೆಯಂತೆ ಧ್ವನಿಯೂ ಇದ್ದರೆ ಅನಿಷ್ಟ ಉಂಟಾಗುವದು. ಸ್ಥೂಲದಂತವಾದರೆ ದರಿದ್ರವಂತೆಯಾಗುವಳು. ಸಾಲು ವಿಷಮವಾದರೆ ಕಲಹವಂ ಮಾಡುವಳು. ದಂತ ಕಪ್ಪಾಗಿದ್ದರೆ ಅನಾಚಾರಿಯಾಗುವಳು. ವಕ್ರದಂತವಾದರೆ ಕುಟಿಲ ಬುದ್ಧಿಯಿಂದ ಚರಿಸುವಳು ವಿರೂಪದಂತೆ ಆಗಿ ದರಿದ್ರೆಯೂ ಆಗುವಳು. ಇನ್ನು ಉತ್ತಮವಾದ ಅಧರ

ಲಕ್ಷಣವೇನೆಂದರೆ:-ಸ್ತ್ರೀಯರ ಅಧರವು ತೊಂಡೇಹಣ್ಣಿನಂತೆ ಕೆಂಪಾಗಿ ದುಂಡಾಗಿ ಇದ್ದರೆ ಸಂಪತ್ತುಳ್ಳವಳಾಗುವಳು, ಸಮವಾಗಿ ರೇಖಾಭೂಷಿತವಾಗಿಯೂ ಇದ್ದರೆ ಅನೇಕ ಸಂಪತ್ತುಂಟಾಗುವದು ವಾರೆಯಿಲ್ಲದೆ ಕುಂಕುಮ ವರ್ಣವಾಗಿದ್ದರೆ ಭಾಗ್ಯವಂತೆಯಾಗುವಳು. ಈ ರೀತಿಗೆ ಇರದೆ ಅಧರವು ಕಪ್ಪಾಗಿಯೂ ಅತಿಬಿಳುಪಾಗಿಯೂ ಇದ್ದರೂ ಅತಿಸಣ್ಣದಾಗಿದ್ದರೂ ಅನಿಷ್ಟ ಉಂಟಾಗುವದು. ಗರ್ಭದ ತುಟಿಯಂತೆ ವಿವರ್ಣಂಸವಾಗಿದ್ದರೆ ಕಲಹ ಕಾರಿಣಿಯಾಗುವಳು. ಅಧರವು ಕೃಶವಾಗಿ ಜೋಲುತ ಘಡಕಾಗಿದ್ದರೆ ದಾರಿದ್ರ್ಯವನ್ನನುಭವಿಸುವಳು. ಅತಿ ಸ್ಥೂಲವಾಗಿ ಹೀನೋಷ್ಠವಾದರೆ ರೋಗಿಷ್ಟೆಯಾಗುವಳು. ಇನ್ನು ಸ್ತ್ರೀಯರ ಜಿಹ್ವಾಲಕ್ಷಣವಂ ಹೇಳುವೆನು ಕೇಳು, ಸೌಗಂಧಿಕಾದೇವಿಯೇ ! ಸ್ತ್ರೀಯರುಗಳ ನಾಲಿಗೆಯು ಕೆಂಪಾಗಿದ್ದರೆ ಮೃಷ್ಟಾನ್ನವನ್ನು ಭೋಜನವಂ ಗೈವಳು. ಮೃದುವಾಗಿದ್ದರೆ ಪುತ್ರವಂತೆ ಆಗುವಳು. ವಿಶಾಲವಾಗಿದ್ದರೆ ಸಂತೋಷ ಉಂಟಾಗುವದು. ನಾಲಿಗೆಯಮೇಲೆ ಚಕ್ರವಿದ್ದರೆ ರಾಜಭೋಗ ಉಂಟಾಗುವದು. ಹೀಗೆ ಇಲ್ಲದ ನಾಲಿಗೆ ಅತಿ ಬಿಳುಪಾದರೆ ದುಃಖಿಯಾಗುವಳು. ಕಠಿಣವಾದರೆ ಮುಖ್ಯಾಣ್ಣೆಯನ್ನಾಡುವಳು. ಕಪ್ಪಾಗಿದ್ದರೆ ಜಗಳಗಂಟಿ ಆಗುವಳು. ನಾಲಿಗೆ ದಪ್ಪವಾಗಿದ್ದರೆ ದರಿದ್ರೆ ಆಗುವಳು. ಅತಿ ಲಂಬವಾದರೆ ಉಚ್ಛಿಷ್ಟ ಭೋಜನವಂ ಗೈವಳು. ಇನ್ನು ಸ್ತ್ರೀಯರ ನಾಸಿಕಾಲಕ್ಷಣ ವೇನುವರೆ:— ಮೂಗು ಉದ್ದವಾಗಿದ್ದರೆ ಶುಭ, ಪರಿಮಳಶ್ವಾಸವುಳ್ಳ ನಾಸಿಕವಾದರೆ ರಾಜಸ್ತ್ರೀಯಾಗುವಳು. ಸಮವಾದ ಬಟುವಾದ ಪುಟಗಳಿದ್ದರೆ ಐಶ್ವರ್ಯವುಳ್ಳವಳಾಗುವಳು. ನಾಸಾಪುಟಗಳು ಸಣ್ಣದಾಗಿ ಮೊನೆಯಾಗಿ ಇದ್ದರೆ ಪುತ್ರವಂತೆ ಆಗುವಳು. ಕೆಂಪಾಗಿ ದಪ್ಪವಾಗಿ ಇದ್ದರೆ ಧನವಂತೆ ಆಗುವಳು. ನಾಸಿಕವು ಎಳ್ಳುಹೂವಿನಂತೆ ಇದ್ದರೆ ರಾಜಪತ್ನಿ ಆಗುವಳು. ಸಂಪಿಗೆ ಹೂವಿನಂತೆ ಇರಲು ಮಹಾರಾಜಪತ್ನಿ ಆಗುವಳು ಈ ರೀತಿಯೋ ಇರದೆ ಸೊಟ್ಟ ಮೂಗಾಗಿ ಇದ್ದರೆ ಅನಿಷ್ಟವಂತೆ ಆಗುವಳು. ಮೂಗಿನ ಕೊನೆ ಕೆಂಪಾಗಿ ಕೊಕ್ಕೆಯಾಗಿ ಇದ್ದರೆ ದಾರಿದ್ರ್ಯವಂತೆ ಆಗುವಳು. ಮೂಗು ಅತಿಹ್ರಸ್ವ ಅತಿದೀರ್ಘವಾಗಿ ಇದ್ದರೆ ಪತಿ ರಹಿತೆ ಆಗುವಳು. ಇನ್ನು ಸ್ತ್ರೀಯರುಗಳ ನೇತ್ರಲಕ್ಷಣ ಹ್ಯಾಗೆಂದರೆ:— ನೇತ್ರಗಳು ಮತ್ಸ್ಯಾಕಾ

ರವಾಗಿ ಥಳ ಥಳಿಸುತಲಿದ್ದರೆ ಸೌಭಾಗ್ಯ ಉಂಟಾಗುವದು. ಪದ್ಮದಳಾಕೃತಿಯಾಗಿರಲು ಸಂಪತ್ತು ಆಗುವದು. ಸ್ತ್ರೀಯರುಗಳ ನೇತ್ರಗಳು ಕಾಂತಿಯುಕ್ತಗಳಾಗಿ ತೆರದ ಕರಿಹಾಲೆ ಕಪ್ಪಾಗಿ ಕೊನೆಯಲ್ಲಿ ಕೆಂಪಾಗಿ ಇದ್ದರೆ ರಾಜಯೋಗ ಉಂಟಾಗುವದು. ಕಣ್ಣುಗಳು ಗೋಕ್ಷೀರದಂತೆ ಕಾಂತಿ ಇಂದ ಹೊಳೆಯುತಲಿದ್ದರೆ ಸಂಪತ್ತು ಉಂಟಾಗುವದು,ಸೌಮಂಗಲ್ಯವು ಉಂಟಾಗುವದು. ಕಣ್ಣುಗಳು ಜೇನುತುಪ್ಪದ ಬಣ್ಣವಾಗಿದ್ದರೆ ಪುತ್ರವಂತೆ ಆಗುವಳು. ಮತ್ತು ಸೂಕ್ಷ್ಮವಾಗಿ ನಿಬಿಡವಾದ ರಪ್ಪೆಗಳು ಇದ್ದರೆ ಭೋಗ ಉಂಟಾಗುವದು. ಇನ್ನು ಅಧಮನೇತ್ರಗಳು ಯಂತಿರುವವು ಎನಲು ಉಬ್ಬು ಕಣ್ಣುಆಗಿ ಕಿರಿಗಣ್ಣು ಆದರೆ ಮನೆ ಮನೆ ತಿರುಗುವಳು. ಆಡಿನ ಕಣ್ಣಿನಂತೆಯೂ ಕೋಣನ ಕಣ್ಣಿನಂತೆಯೂ ಕಣ್ಣುಗಳು ಇರಲು ಬಹು ಧೂರ್ತೆ ಆಗುವಳು. ಕೆಂಡದಂತೆ ಕಣ್ಣು ಕಪೋತವಂತೆ ಕಣ್ಣು ಇರಲು ಕಲಹಪ್ರಿಯೆ ಆಗುವಳು. ಆನೆ ಕಣ್ಣಿನಂತೆಯೂ ಒಂಟೆ ಕಣ್ಣಿನಂತೆಯೂ ಕಣ್ಣು ಇದ್ದರೆ ಅಶುಭ ವಾಗುವದು. ರೆಪ್ಪೆಗಳು ಕೆಂಪಾಗಿ ವಿರಳವಾಗಿಯೂ ಇರಲು ದಾರಿದ್ರ್ಯವನ್ನನುಭವಿಸುವಳು. ಇನ್ನು ಸ್ತ್ರೀಯರುಗಳಿಗೆ ಉತ್ತಮ ಭ್ರೂ ಲಕ್ಷಣ ಯೇನೆಂದರೆ:— ಹುಬ್ಬುಗಳು ಧನುರಾಕಾರವಾಗಿ ಚನ್ನಾಗಿ ಒಗ್ಗಿ ಇದ್ದರೆ ರಾಜಪತ್ನಿ ಆಗುವಳು. ನಯವಾಗಿ ಕಪ್ಪಾಗಿ ಇದ್ದರೆ ಧನವಂತೆ,ತುದಿಸಣ್ಣವಾಗಿ ನಯವಾಗಿ ಇರಲು ಪುತ್ರವತಿಆಗುವಳು, ಹಾಗಿರದೆ ಎರಡು ಹುಬ್ಬಿನಲ್ಲಿಯೂ ಸುಳಿ ಇದ್ದರೆ ಅಶುಭ ಉಂಟಾಗುವದು. ಕೂಡಿದಹುಬ್ಬುಗಳು ಆದರೆ ಕೃತ್ರಿಮವಂತೆ ಆಗಿ ದರಿದ್ರೆ ಆಗುವಳು. ಹುಬ್ಬುಗಳ ರೋಮ ಉದ್ದವಾಗಿ ಇದ್ದರೆ ದೀರ್ಘ ದ್ವೇಷಿಣಿ ಆಗುವಳು. ಹುಬ್ಬು ದಪ್ಪವಾಗಿ ಇರಲು ದುಷ್ಟೆ ಆಗುವಳು. ಹೊಂಬಣ್ಣವಾಗಿ ನೆಟ್ಟನೆ ಇದ್ದರೆ ದರಿದ್ರೆ ಆಗುವಳು. ಇನ್ನು ಸ್ತ್ರೀಯರುಗಳ ವದನ ಲಕ್ಷಣ ವೇನೆಂದರೆ;— ವದನವು ಸುಳಿ ಇಲ್ಲದೆ ರೋಮರಹಿತವಾಗಿ ಇದ್ದರೆ ಸಂಪತ್ತು ಉಂಟಾಗುವದು. ಸ್ತ್ರೀಯ ನಗಲುಮುಖವು ಸ್ವಸ್ತಿಕವಂತೆ ನೋಡುವವರಿಗೆ ತೋರಲು ಸಹಸ್ರವಾಹನ ಉಳ್ಳವಳಾಗುವಳು. ನರವಿಲ್ಲದೆ ಅರ್ಧ ಚಂದ್ರನಂತೆ ಮುಖವಿರಲು ಐಶ್ವರ್ಯವೂ ಭೋಗವೂ ಉಂಟಾಗುವದು.ವದನವು ಮಾತ್ರಾಂಗುಳದಲ್ಲಿಮೂರು ಅಂಗುಳವಾದರೆ ಸೌಭಾಗ್ಯ

ವುಂಟಾಗುವದು. ಸ್ವಸ್ತಿಕ ರೇಖೆ ಇದ್ದರೆ ಐಶ್ವರ್ಯ ಉಳ್ಳವಳಾಗುವಳು. ಹೀಗಲ್ಲದೆ ವದನದಲ್ಲಿ ಸುಳಿ ಇದ್ದರೂ ರೋಮವಿದ್ದರೂ ಅತ್ತೆ ಮಾವಂದರಿಗೆ ಅಶುಭ ವಾಗುವದು. ಮೂರು ಸುಳಿ ಇದ್ದರೆ ಮತ್ತೂ ಅರಿಷ್ಟವಾಗುವದು ನರಗೂಡಿ ಕಪ್ಪಾಗಿಇದ್ದರೆ ದುಃಖವೂ ದಾರಿದ್ರ್ಯವೂ ಉಂಟಾಗುವದು. ಇನ್ನು ಶಿರೋಲಕ್ಷಣ ಹೇಂತಿರುವದೆನಲು:— ಶಿರಸ್ಸಿನಲ್ಲಿ ಸುಳಿ ಇದ್ದರೆ ಶುಭ, ಸೀಮಂತರೇಖೆ ವುಳ್ಳದ್ದಾಗಿ ಆನೆಕುಂಭದಂತೆ ಬಟುವಾಗಿಯಿದ್ದರೆ ಐಶ್ವರ್ಯ ವು ಭೋಗವು ಉಂಟಾಗುವದು. ಹೀಗೆಯಿರದೆ ದಕ್ಷಿಣಾವರ್ತಸುಳಿಯಿದ್ದರೆ ಪಿತೃವಿಗೆಹಾನಿ ಆಗುವದು. ಮೃಣ್ಮಯ ಕಲಶದಂತೆಯಿದ್ದರೆ ದುಃಖಿ ಯಾಗಿ ರುವಳು. ಇನ್ನು ಉತ್ತಮಕೇಶಲಕ್ಷಣವಂ ಪೇಳ್ವೆ ಕೇಳು. ತಲೆಯಲ್ಲಾ ವೊಂದೆಬಗೆ ರೋಮವುಳ್ಳದ್ದಾಗಿಯಿದ್ದರೆ ರಾಜಸ್ತ್ರೀಆಗುವಳು. ಎರಡು ಬಗೆಯಾದ ರೋಮವುಳ್ಳದ್ದಾದರೆ ಸುಖಿಯಾಗುವಳು. ಶಿರೋರೋಮ ವು ಕಪ್ಪಾಗಿ ನೀಟವಾಗಿಯಿದ್ದರೆ ಆಸ್ತ್ರೀಯು ಭೋಗವಂತೆ ಆಗುವಳು. ತುಂಬೆಗುರುಳು ನೀಡಗುರುಳು ಆಗಿದ್ದರೆ ಆನಾರಿಯು ಪುತ್ರವತಿಆಗುವಳು. ಶಿರೋಜವುವಕ್ರವಾಗಿ ಪದ್ಮಗಂಧ ಕೇಸರಗಂಧಕ್ಕೆ ತಕ್ಕಗಂಧ ಉಂಟಾಗಿ ದ್ದರೆ ಆಸುದತಿಯು ರಾಜಪತ್ನಿ ಆಗುವಳು. ಹೀಗಿರದೆ ಮೂರು ಬಗೆ ರೋಮಗಳು ಶಿರಸ್ಸಿನಲ್ಲಿಯಿದ್ದರೆ ದುಃಖಿ ಆಗುವಳು. ಶಿರೋರುಹವು ವಿವರ್ಣವಾಗಿ ಪೋಟಾಗಿದ್ದರೆ ದಾರಿದ್ರ್ಯವನ್ನು ಅನುಭವಿಸುವಳು. ಕಠಿನವಾಗಿ ಶಿವ ರಾಗಿರಲು ಕ್ರೂರೆಆಗುವಳು. ವಿರಳವಾಗಿ ಹೊಂಬಣ್ಣವಾಗಿದ್ದರೆ ಕುಲಟೆ ಆಗುವಳು. ಅಂಟಾಗಿ ದುರ್ಗಂಧವಾಗಿರಲು ಅನಾಚಾರಿಣಿ ಆಗುವಳು. ಇನ್ನುಸ್ತ್ರೀಯರಗಳಿಗೆ ಸಮುದಾಯವಾಗಿ ಉತ್ತಮಲಕ್ಷಣವು ಯಾವದೆಂದರೆ:— ವಾಮಪಾದತಲದಲ್ಲಿ, ಸ್ತನದಲ್ಲಿ, ವಾಮನೇತ್ರದಲ್ಲಿ ಆಗಲಿ ಮಚ್ಚೆಯಿದ್ದರೆ ಪುತ್ರವತಿಆಗುವಳು.ಅಂಜಲಿ ಕೂರ್ಮದಂತೆಯೂ, ಕುಚಜಘನಸ್ಕಂಧಗಳು ಜಿಹ್ವಾಸ್ಥಾನವು ಮನೋಹರವಾಗಿರಲು ಧನಧಾನ್ಯ ಪುತ್ರಸಮೃದ್ಧಿವುಳ್ಳವಳಾಗುವಳು. ಹಸ್ತ ಪಾದ ಕೋಮಲವಾಗಿ ಕೋಕಿಲ ಸ್ವರವಾಗಿ ಚಕ್ರವಾಕದಂತೆ ಸ್ತನಗಳುಯಿದ್ದರೆ ಆಸ್ತ್ರೀಯು ಭಾಗ್ಯವಂತೆಯಾಗಿ ರಾಜಪತ್ನಿಯಾಗುವಳು. ಪೀತವರ್ಣವಾಗಲೀ ಗೌರವರ್ಣವಾಗಲಿ ಹರಿದ್ರಾವರ್ಣ ವಾಗಲಿ ಯಾವ ಅಂಗ ಯಾವ ವರ್ಣ ವಾಗಿದ್ದರೂ ಶುಭ

ವಾಗುವದು. ನೇತ್ರಗಳು ಪತ್ರಾನ್ಯಕೃತಿಯಾಗಿ ಬಾಹು ಕೋಮಲವಾಗಿರಲು ಇವುಯೆಲ್ಲ ಉತ್ತಮವು, ಸೌಭಾಗ್ಯವತಿ ಆಗುವಳು. ಇನ್ನು ಸ್ತ್ರೀಸಮುದಾಯ ಲಕ್ಷಣ ಅಧಮ ಹ್ಯಾಗಂದರೆ.— ಮೇಲೆ ಗಂಟು ಇದ್ದ ಮುಖ ವಿಕಾರವಾಗಿ ಮೇಲಣ ತುಟಿಯಲ್ಲಿ ರೋಮವಿಲು ಪತಿಗೆ ಪ್ರೊಳ್ಳೀದಲ್ಲ. ಪಾದಗಳಲ್ಲೂ ಸ್ತನಗಳಲ್ಲೂ ರಹಸ್ಯ ಸ್ಥಳದ ಪ್ರೊಳಗಡೆಯಲ್ಲು ಮೇಲಣತುಟಿಯಲ್ಲೂ ರೋಮವಿರಲು ಆಸ್ತ್ರೀಯು ಪತಿಘಾತ್ರಿಯಾಗಿ ಅನಿಷ್ಟೆಯಾಗಿ ದುಃಖಿಸಿತಾಗುವಳು. ಅಂಗಗಳಲ್ಲಿ ಅಪ್ರದಕ್ಷಿಣವಾಗಿ ಸುಳಿಯಿರಲು ಅನಿಷ್ಟ ಉಂಟಾಗುವದು. ಸ್ತ್ರೀಯರುಗಳು ಅತಿಸ್ಥೂಲವಾಗಿಯೂ, ಅತಿದೀರ್ಘಾಕಾರವಾಗಿಯೂ, ಅತಿಹ್ರಸ್ವವಾಗಿಯೂ, ಅತ್ಯಂತಕೃಶವಾಗಿಯೂ, ಅತಿಗೌರವರ್ಣವಾಗಿಯೂ, ಅತಿಬಿಳಿಯಾಗಿಯೂ, ವಕ್ರವಾಗಿಯೂ, ವಿಷಮವಾಗಿಯೂ, ಇದ್ದರೆ ಅವರಿಂದಾ ಅರಿಷ್ಟ ಉಂಟಾಗುವದು. ಬತ್ತಿದ ಕಪೋಲವೂ, ಕರಿನೆಧ್ವನಿಯೂ, ದಪ್ಪವಾದ ಕಣಕಾಲು, ಊರ್ಧ್ವಕೇಶವು, ಕೆಂಗೂದಲೂ, ಅಗಲವಾದಬಾಯಿಯೂ, ಕರಿನಾಲಿಗೆಯೂ ಕರೀತುಟಿಯೂ, ಶುಷ್ಕದೇಹವೂ, ಕೂಡುಹುಬ್ಬು, ವಿಷಮಕುಚವೂ, ವಕ್ರವಾಗಿ ದೀರ್ಘವಾದ ತುಟಿಗಳು ಸಹಾಯಾವಸ್ತ್ರೀಯರುಗಳಿಗೆ ಇರುವದೂ ಇಂಥಾ ಸ್ತ್ರೀಯರು ರಾಜಕುಲದಲ್ಲಿ ಹುಟ್ಟಿದರೂ ದಾಸಿಯರಾಗಿ ನೀಚರಲ್ಲಿ ಸೇವೆಯಂ ಮಾಡಿ ಚಂಡಾಲಸಂಪತ್ತಿಯಂ ಮಾಡಿಕೊಂಡು ದೇಶಭ್ರಷ್ಟರಾಗಿ ಹೋಗುವರು. ಇಂತಪ್ಪ ಸಾಮುದ್ರಿಕಾ ಲಕ್ಷಣದೊಳು ಉತ್ತಮೋತ್ತಮವಾದ ಮಹಾಪುರುಷಲಕ್ಷಣಂಗಳು ಈ ಸುಗಂಧ ಮಹಾರಾಜನಲ್ಲಿಯೇ ಇರುವದಾದ್ದರಿಂದಲೂ ದಿವ್ಯಸ್ತ್ರೀ ಲಕ್ಷಣಂಗಳು ನಿನ್ನಲ್ಲಿಯೇ ಇರುವದ್ದರಿಂದಲೂ ನಿಮ್ಮಿಬ್ಬರಿಗೂ ಪಾಣಿಗ್ರಹಣವು ಬಹಳ ಅತಿಶಯದಿಂದ ಅನುರೂಪವುಳ್ಳದ್ದಾಗಿರುವದ್ದರಿಂದ ಶುಭಸ್ಯಶೀಘ್ರಂ ಯೆಂಬುವ ಮರ್ಯಾದೆಯಲ್ಲಿ ಜಾಗ್ರತೆಯಿಂದ ಕಳ್ಯಾಣಮಹೋತ್ಸವವು ಬೆಳೆಯುವಂತೆ ನೀನೆಸಮೀಪದೊಳ್ ನಿಂತು ನಿನ್ನ ಅಭಿಪ್ರಾಯವಂ ವಿಜ್ಞಾಪನಂ ಗೈದು ನಿನ್ನ ಹಸ್ತದೊಳಿರುವ ಆಣಿಮುತ್ತಿನ ಕಲ್ಯಾಣವರಣ ಮಾಲಿಕೆಯನ್ನು ಮಹಾರಾಜನ ಕೊರಳಿಗೆ ಧರಿಸಿ ಸ್ತುತಿರೂಪವಾಗಿರುವ ಮಧುರ ವಚನದಿಂದ ಸಂತೋಷ ಪಡಿಸಿ ಕರ್ಪೂರ ವೀಳ್ಯಸಹಿತವಾದ ಸುತ್ತು ವೀಳ್ಯವನ್ನು

ಪ್ರೊಪ್ಪಿಸಿ ಕಳುಹಿಸುವದು ಅತ್ಯಂತ ಶುಭಕರವಾಗಿ ಇರುವದೆಂದು ಹೇಳಿದ ಶುಕವ್ಯಾಸ ಹಿತವಚನವಂ ಕೇಳಿ ಮನಸ್ಸಿನೊಳ್ ವಿಹಿತವೆಂದು ತಿಳಿದು ಆ ರಾಜಕುಮಾರಿಯಾದ ಸೌಗಂಧಿಕಾ ದೇವಿಯು ಜ್ಞಾನವಂ ಬಯಸುವ ವಿದ್ಯಾಮಾತೆ ಅಂತಃಪಟವಂ ವಾಸರಿಸಿಸುದ್ದು ಬಂದು ಸುಗಂಧರಾಯನ ಪಾರ್ಶ್ವದಲ್ಲಿ ನಿಂತು ರಾಯನಿಗೆ ಕೈಮುಗಿದು ಲಜ್ಜೆಯಿಂದ ಕಲೆವಾಗಿ ಪ್ರೇಮದಿಂದೊಡಗೂಡಿ ಆಸ್ತ್ಯಾಸ್ತ್ರನಾದ ಮಹಾನುಭಾವನಾದ ಪ್ರಾಣ ಕಾಂತನೆ! ಶೌರ್ಯೌದಾರ್ಯ ಪರಾಕ್ರಮ ಮೊದಲಾದ ಸಕಲ ಸದ್ಗುಣಂಗಳು ಸಾಮುದ್ರಿಕಾ ಶಾಸ್ತ್ರೋಕ್ತವಾದ ಸಕಲ ಮಹಾಪುರುಷ ಶುಭಲಕ್ಷಣಂಗಳು ಲೋಕಾತಿಶಯವಾದ ರೂಪಲಾವಣ್ಯ ಸೌಕುಮಾರ್ಯಂಗಳು ತೇಜಃಪ್ರತಾಪಂಗಳು ನಿನ್ನಲ್ಲಿಯೇ ಇರುವವು ಆದ್ದರಿಂದ ನಿನ್ನ ಪಾಣಿಗ್ರಹಣವಂ ಮಾಡಿಕೊಳ್ಳುವನನ್ನ ಭಾಗ್ಯಕ್ಕೆ ಸರಿ ಇಲ್ಲ, ಅಶ್ವಿನೀದೇವತೆಗಳ ರೂಪವನ್ನು ತಿರಸ್ಕರಿಸಿ ಮನ್ಮಥನ ಸೌಂದರ್ಯವಂ ಮೀರಿ ಇರುವ ನಿನ್ನ ಕಂಡ ಪ್ರಥಮಕ್ಷಣದಲ್ಲಿಯೇ ನನ್ನ ಮನಸ್ಸು ನಿನ್ನಲ್ಲಿ ಅನುರಕ್ತವಾಗಿ ನಿಂತಿರುವದು. ನಿನ್ನ ಸಕಲ ಸದ್ಗುಣಂಗಳಿಗೂ ಸಮಸ್ತ ಸಂಪತ್ತಿಗೂ ನಾನು ಮನಸೋತೆನು, ಆದರೂ ಜಗನ್ಮೋಹನನಾದ ರಾಜಶಿರೋಮಣಿಯೆ! ಕೇಳು ನನಗೆ ಪ್ರಿಯನಾದ ಸ್ವಾಮಿಯ ಶುಭಗುಣಂಗಳು ಸತ್ಕೀರ್ತಿ ಪ್ರತಾಪಾದಿಗಳು ಆ ಚಂದ್ರಾರ್ಕಪ್ರಕಾಶಿಸಲೀಯಂಬದಾಗಿಯೂ, ಮತ್ತು ನನ್ನ ಹಿತರಾದ ಮಾತಾ, ಪಿತೃ, ಬಂಧು ಸಖೀಜನರೊಡಗೂಡಿ ದೇಶಾಧಿಪತಿಗಳ ಮುಂದೆ ನಾನು ನಿನಗೆ ಸ್ವಾಧೀನವಾಗುವದಕ್ಕೋಸ್ಕರಲೂ, ಮತ್ತೊಬ್ಬರಿಗೆ ಅಸಾಧ್ಯವಾಗಿ ನಿನಗೆ ಲೀಲಾಮಾತ್ರವಾಗಿ ಇರುವದಂ ತಿಳಿದು ಈಎಂಟು ಪಣಂಗಳಂವೊಂದೊಂದಾಗಿ ಹೇಳಿದ್ದೇಹೊರತು ಮಹಾಶೂರಾಗ್ರೇಸರನಾದ ನಿನ್ನ ಪರೀಕ್ಷಾರ್ಥವಾಗಿ ಮಾಡಿದ್ದಲ್ಲ, ಇದನನುಗುಣವಾಗಿ ಚಿತ್ತದೊಳ್ ತಂದು ವೃಷ್ಟಿಯಂ ಕಾದಿರುವ ಸಸ್ಯಪಙ್ಕ್ತಿಯಂತೆ, ಶಿರಿಯಂ ಬಯಸುವ ಬಡವನಂತೆ, ಮೇಘವಂ ನಿರೀಕ್ಷಿಸುವ ಚಾತಕಪಕ್ಷಿಯಂತೆ, ಚಂದ್ರಕಿರಣವಂ ಬಯಸುವ ಚಕೋರಿಯಂತೆ, ಸೂರ್ಯನಂ ಕಾಮಿಸುವ ಪದ್ಮಿನಿಯಂತೆ, ಪರಬ್ರಹ್ಮವಂ ಚಿಂತಿಸುವ ಯೋಗಿನಿಯಂತೆ ಉದಯವನ್ನಪೇಕ್ಷಿಸುವ ಚಕ್ರವಾಕಿಯಂತೆ, ಚಂದ್ರಾಲೋಕವನ್ನಿರೀಕ್ಷಿಸುವ ಕುಮುದಿನಿಯಂತೆ,

ನಿನ್ನ ಮಂಗಳಾಂಗಸಂಗಮಂ ನೆನ ನೆನದು ಬಯಸುವ ಯನ್ನ ಕೈಪಿಡಿದು ನನ್ನ ಸಕಲ ಮನೋರಥವಂ ನೆರವೇರಿಸಿ ಪರಿಪಾಲನಂ ಗೈಯ್ಯಬೇಕೆಂದು ಸೌಗಂಧಿಕಾದೇವಿಯು ವಿನಯಭಯಭಕ್ತಿ ಪ್ರೇಮದಿಂದ ವಿಜ್ಞಾಪನಂ ಗೈದು ತನ್ನ ಕೈಯಲ್ಲಿಪಿಡಿದು ಇರುವ ಸ್ವಯಂವರ ಮಾಲೆಯಂಬ ಮುತ್ತಿನ ಸರವನ್ನು ಆ ಸುಗಂಧಮಹಾರಾಜೇಂದ್ರನ ಕಂಠದಲ್ಲಿ ಧರಿಸಿ ಕರ್ಪೂರ ವೀಳ್ಯದೊಡಗೂಡಿದ ಸುತ್ತು ವೀಳ್ಯವನ್ನು ಒಪ್ಪಿಸಿ ಚರಣ ಕಮಲಂಗಳಿಗೆ ಯರಗಲು, ಆಗ ಪ್ರಣಾಮವಂಗೈವ ಸರ್ವಾಂಗ ಸುಂದರಿಯಾದ ಕಾಂತಾಮಣಿಯಾದ ಸೌಗಂಧಿಕಾದೇವಿಯಂ ನೋಡಿ ಪ್ರೇಮಾತಿಶಯದಿಂದ ದಯಾಸಾಗರನಾದ ಸುಗಂಧಮಹಾರಾಯನು ತರುಣಿಯು ಕರುಣಿಯು ಕರವಂ ಪಿಡಿದು ಎತ್ತಿ ಎಲೈ ಸುಂದರಾಂಗಿಯೇ ! ನೀನು ಆನಂದದಲ್ಲಿ ಇರು, ನಿನ್ನನ್ನೆ ಪಟ್ಟಮಹಿಷಿಯಂ ಮಾಡಿಕೊಳ್ಳುವೇನೆ ಹೊರತು ಮತ್ತೊಬ್ಬರಿಗೂ ಈ ಪದವಿಯಂ ಕೊಡುವವನಲ್ಲ, ಈ ಅರ್ಥದಲ್ಲಿ ಸಂಶಯ ಲೇಶವೂ ಬೇಡವೆಂದು ಶುಕನ ಮುಂದಿಟ್ಟು ಪ್ರತಿಜ್ಞೆಯಂ ಮಾಡಿ ಉಲ್ಲಾಸ ಗೊಳಿಸಿ ತನ್ನ ಹಸ್ತದೊಳಿರುವ ಸರ್ವ ದೃಢೀಕರಮಣಿಯೆಂಬ ಅನರ್ಘ್ಯವಾದ ಇಂದ್ರನೀಲದ ಉಂಗರವಂ ಕುರುಹು ಆಗಿ ಶುಭಾರ್ಥವಾಗಿತ್ತು ಅಪ್ಪಣೆ ಯನ್ನಿತ್ತು ಸೌಗಂಧಿಕಾದೇವಿಯನ್ನು ಅಂತಃಪುರಕ್ಕೆ ಕಳುಹಲು, ಈಪ್ರಕಾರ ನಿಶ್ಚಯಮಾದ ಸ್ವಯಂವರ ಮಹೋತ್ಸವ ಕಾರ್ಯವಂ ಕಂಡು ಪರಸ್ಪರ ಮುಖ ವಚನಗಳಿಂದ ನಡೆದ ವೃತ್ತಾಂತವಂ ಸಮಗ್ರವಾಗಿ ಕೇಳಿ ತಿಳಿದು ಅಲ್ಲಿಗೆ ಸ್ವಯಂ ವರಾರ್ಥವಾಗಿ ಬಂದಿರುವ ದೇಶಾಧಿಪತಿಸಮೂಹಂಗಳೆಲ್ಲರೂ ಸೌಗಂಧಿಕಾದೇವಿಯಲ್ಲಿ ನೈರಾಶ್ಯವಂ ಮಾಡಿಕೊಂಡು ಕುಳಿತು ಇರಲು, ಆ ಸಮಯದೋಳ್ ಕಳಿಂಗ ದೇಶಾಧಿಪತಿಯಾದ ವಿಜಯವರ್ಮರಾಯನು ಸುಗಂಧಮಹಾರಾಯನಿಗೆ ಯೋಗ್ಯವಾದ ಅನರ್ಘ್ಯವಾದ ಚೀನಾಂಬರಾದಿಗಳಂ ಭೂಷಣ ವಿಶೇಷಣಂಗಳಂ ಫಲಪುಷ್ಪಂಗಳಂನ್ನಿತ್ತು ರಾಜೋಪಚಾರ ಮರ್ಯಾದೆಯಂ ಮಾಡಿ, ಅಬಳಿಕ ಸ್ವಯಂವರೋತ್ಸವಕ್ಕೆ ಬಂದಿರುವ ಸಕಲ ದೇಶಾಧಿಪತಿಗಳಿಗೂ ಅವರವರ ಯೋಗ್ಯತಾನುರೂಪವಾಗಿ ವಸ್ತ್ರಾಭರಣ ಪುಷ್ಪ ತಾಂಬೂಲಾದಿಗಳಂ ತರತರವಾಗಿ ಕೊಟ್ಟು ಕಳುಹಲು, ರಾಜಕುಮಾರರೆಲ್ಲಾ ಸಭಾಸ್ಥಾನದಿಂದ ಹೊರಟು

ಯಥಾವಿಭವದಿಂದ ತಮ್ಮ ತಮ್ಮ ಸ್ಥಾನಂಗಳಿಗೆ ಪೋದತರುವಾಯ ಸುಗಂಧ ಮಹಾರಾಯನು ನಕ್ಷತ್ರಗಳಿಂದ ಸುತ್ತಲ್ಪಟ್ಟ ಷೋಡಶಕಲಾಪರಿಪೂರ್ಣನಾದ ಶರತ್ಕಾಲ ಚಂದ್ರನಂತೆ ತನ್ನ ಸಮೀಪದೊಳಿರುವ ವಿಜಯವರ್ಮರಾಯ ಮುಂತಾದ ಅರಸುಗಳಿಂದ ಸಹಿತನಾಗಿ ಪವಳದ ಕೊಂಬುಗಳಿಂ ದೊಡಗೂಡಿದ ಆಣಿಮುತ್ತಿನ ಪಲ್ಲಕ್ಕಿಯನ್ನೇರಿ ಬಹುಸಂತೋಷದಿಂದ ಮಹಾರಾಜ ವೈಭವದಿಂ ದೊಡಗೂಡಿ ತನ್ನ ಮಂತ್ರಿಯಾದ ಸುಮತಿಯಿಂದಲೂ ಛಾಯಾಗುಪ್ತನಿಂದಲೂ ಸಮೇತನಾಗಿ ತನ್ನ ಬಿಡಾರವಂ ಪೊಕ್ಕು ಸಂಗಡಬಂದ ಜನರಿಗೆ ಅಪ್ಪಣೆಯನಿತ್ತು ಕಳುಹಿ, ಆ ಬಳಿಕ ಮಂತ್ರಿಯಿಂದಲೂ ವಿತವಾದ ಪ್ರಿಯ ಹಿತಜನರಿಂದಲೂ ವೊಡಗೂಡಿ ಚಿನ್ನದ ಚಿಕ್ಕಹಜಾರದೊಳ್ ಕುಳಿತು ತನ್ನ ಅಭಿಪ್ರಾಯಜ್ಞರಾಗಿ ಸಕಲ ವಕ್ಕಣೆಯಂತಿಳಿದು ಪರಮಾಪ್ತರಾಗಿ ದೃಢಭಕ್ತಿಯಿಂದ ಹಿತರಾಗಿ ಪ್ರಭುಕಾರ್ಯ ತತ್ಪರರಾದ ಬುದ್ಧಿಶಾಲಿಗಳಾದ ರಾಯಸದವರಂ ಕರಶಿ ತನ್ನ ತಂದೆಯಾದ ಸುಚರಿತ್ರ ಮಹಾರಾಯಂಗೆ ಬರಶಿದ ಬಿನ್ನಹ ಪತ್ರವೆಂಬ ಲೇಖನದ ವಕ್ಕಣೆಯಂತೆಂದರೆ:—

ಶ್ರೀಮದ್ರಾಜಾಧಿರಾಜ ಮಹಾರಾಜ ಚಕ್ರವರ್ತಿಗಳಾದ ಸಕಲಭೂಮಂಡಲಾಧೀಶ್ವರರಾಗಿ ಶ್ರೀಮದ್ಧನುರ್ವೇದ ಮೊದಲಾದ ಸಕಲ ಶಾಸ್ತ್ರಾರ್ಥ ತತ್ವಜ್ಞರೆನಿಶಿ, ಕ್ಷಾತ್ರ ತೇಜಸ್ಸಿನೊಳ್ ವಸಂತಕಾಲ ಸೂರ್ಯ ಸದೃಶರಾಗಿ, ರಾಜ್ಯ ಪರಿಪಾಲನ ಧರ್ಮದಲ್ಲಿ ಜನಕಚಕ್ರವರ್ತಿಗೆ ಸಮಾನರಾದ ನನಗೆ ಅಭೀಷ್ಟ ದೇವತಾರೂಪರಾದ ನನಗೆ ಅಸಾಧಾರಣ ಸ್ವಾಮಿಯಾಗಿ, ನನಗೆ ಸಕಲವಿಧ ಹಿತ ಬುದ್ಧಿ ಬೋಧಕರಾಗಿಯೂ ಸಕಲ ವಿಧದಲ್ಲಿಯೂ ಪರಮ ಗುರುವಾದ ಸಕಲ ವರ್ಣಾಶ್ರಮ ಧರ್ಮ ಪ್ರತಿಷ್ಠಾಪಕರಾಗಿ,ರಾಮಬಾಣದಂತೆ ದಶದಿಕ್ಕಿನಲ್ಲಿಯೂ ತಡೆಯಿಲ್ಲದೆ ಸ್ವಾಜ್ಞಾಶೀಲರಾದ ಸಕಲ ಭೂಪಾಲ ಮೌಳಿ ಮಾಣಿಕ್ಯ ತೇಜೋರಾಜಿ ನೀರಾಜಿತ ಪಾದಪೀಠರಾದ ಸಕಲಪ್ರಾಣಿಗಳಿಂದಲೂ ಶಿರೋಧಾರ್ಯಮಾಣವಾಗಿರುವ ಶಾಸನ ಪ್ರದಾತೃಗಳಾದ ಅಪ್ಪಾಜಿಯವರ ದಿವ್ಯ ಶ್ರೀಚರಣಾರವಿಂದಂಗಳಿಗೆ ಬಾಲಕನಾದ ಸುಗಂಧರಾಯನು ಸಾಷ್ಟಾಂಗವಾಗಿ ನಮಸ್ಕರಿಶಿ ಸುಗಂಧರಾಜವರ್ಮನೆಂದು ಅಭಿವಾದನವಂ ತಿಳಿಸಿ ಬದ್ಧಾಂಜಲಿ ಪು

ಟನಾಗಿ ವಿಜ್ಞಾಪನಂ ಗೈಯುವ ಪರಿಯಂ ಲಾಲಿಸಬೇಕು, ತಮ್ಮಚರಣ ಸನ್ನಿಧಾನದಿಂದ ಬಂದಾರಭ್ಯ ಈಪರ್ಯಂತ ಮಂತ್ರಿ ಸೇನಾಪತಿ ಚತುರಂಗ ಸೇನಾದಿ ಸಪ್ತಾಂಗಸ್ವಾಧೀನತೆಯಿಂ ಕೂಡಗೂಡಿ ತಮ್ಮ ಅನುಗ್ರಹದಿಂದಲೇ ನಾನು ಕ್ಷೇಮಾತಿಶಯ ವಂತನಾಗಿ ಇರುವುದಂ ಚಿತ್ತದೋಳ್ತಂದು ಅಮ್ಮಯ್ಯನವರು ಮೊದಲಾದವರತ್ನ ಪುರಿಯೋಳ್ ಬೆಳೆಯುವ ನಿಜ ಸಾಮ್ರಾಜ್ಯ ವೈಭವಗಳಿಂದ ತುಂಬಿ ತುಳುಕುವ ಸ್ವಾಮಿಯವರ ಸದಾ ಕಲ್ಯಾಣ ರೂಪವಾದ ಅನುಶಾಸನಂಗಳಿಗೆ ಬುದ್ಧಿಪತ್ರಿಕಾ ಪ್ರೇಷಣವಂ ಕರುಣಿಸಿ ಪೊರೆಯಬೇಕು, ದೇಶಂಗಳೋಳ್ ಸಂಚಾರ ಮುಖದಿಂದ ಉದ್ಧತರಂ ಬಗ್ಗಿಸಿ,ಸಮವಾಗಿರುವ ನೃಪಾಲರಂ ಮರ್ಯಾದೆಗೊಳಿಸಿ, ಜೀರ್ಣವಾಗಿರುವ ಸಂಸ್ಥಾನಪತಿಗಳಂ ಬೆಳಸಿ ದ್ವೀಪ ದ್ವೀಪಾಂತರಂಗಳೋಳಿರುತಿರ್ದ ದುಷ್ಟರಂ ನಿಶ್ಶೇಷರಾಗಿ ಮಾಡಿಶಿ,ಶಿಷ್ಟರಾಗಿರುವರಂ ನೋಡಿ ವೃದ್ಧಿಗೊಳಿಸಿ,ಸಂಚರಿಸಿ ಬರುತ್ತಬರುತ್ತ ಕಾಂಭೋಜ, ಭೋಜ, ಸೌವೀರ, ಸೌರಾಷ್ಟ್ರ, ಮಹಾರಾಷ್ಟ್ರ, ನೇಪಾಳ, ಕೇರಳ, ಬಂಗಾಳ, ಮೊದಲಾದ ಅನೇಕ ದೇಶಂಗಳ ನೀತಿರೀತಿ ಧರ್ಮಾಧರ್ಮ ವ್ಯವಹಾರಂಗಳಂ ವಿವೇಕದಿಂದ ನಡೆಯುವಂತೆ ತಮ್ಮ ಅಪ್ಪಣೆಯಂ ಕಟ್ಟುಮಾಡಿಸುತ್ತ ಬರುವಾಗ ಕಳಿಂಗದೇಶದೋಳ್ ಆದೇಶಕ್ಕೆ ಅಧಿಪತಿಯಾದ ವಿಜಯ ವರ್ಮರಾಯನು ವಿಜಯ ನಗರದೋಳ್ ತನ್ನ ಪುತ್ರಿಯಾದ ಸೌಗಂಧಿಕಾ ದೇವಿಯು ವಿವಾಹಾರ್ಥವಾಗಿ ನಾನಾದೇಶದ ಭೂಪಾಲರಂ ಕರಸಿ ಸ್ವಯಂವರವೆಂಬದಾಗಿ ಮಹಾ ಸಭೆಯಂಮಾಡಿ ಬಹು ದುರ್ಘಟವಾದ ಕೆಲವು ಪಣಂಗಳಂ ಪುತ್ರಿಯ ಮುಖದಿಂದ ಸಂಕಲ್ಪಿಸಿ ಇರುವದಂ ತಿಳಿದು ಅಲ್ಲಿಗೆ ಬಂದು ನಾನು ನೋಡುವ ಸಮಯದಲ್ಲಿ ಆಗ ಅತ್ಯಂತ ವಿಲಕ್ಷಣವಾದ ಪಣಂಗಳು ವೊಬ್ಬರಿಂದಲೂ ಸಾಧ್ಯವಾಗತಕ್ಕದ್ದಲ್ಲವಾಗಿ ತಿಳಿದು,ತರುವಾಯ ಕ್ಷತ್ರಿಯೋತ್ತಮರಾಗಿ ಸಮ್ಮಪರಾಗಿಯೂ ಇರುವದ್ದರಿಂದ ಕ್ಷತ್ರಿಯರ ಪ್ರತಿಜ್ಞೆಯು ಯಂದಿಗೂ ವ್ಯರ್ಥವಾಗಲಾರದೆಂದು ನನ್ನಿಂದಾ ಅಷ್ಟು ಪಣಂಗಳು ನೆರವೇರಿಸಲ್ಪಡಲಾಗಿ ನನ್ನಿಂದಲೆ ಸ್ವಯಂವರನಿಶ್ಚಯಮಾಲೆಯು ಪರಿಗ್ರಹಿಸಲ್ಪಟ್ಟಿತು, ಇಷ್ಟಲ್ಲದೆ ಇನ್ನು ಉತ್ತರೋತ್ತರ ನಡೆಯತಕ್ಕ ವಿಶೇಷ ಶುಭಕಾರ್ಯಂಗಳಂ ತಿಳಿದವನಲ್ಲಾ ನನಿಗೆ ತೋರಿದಷ್ಟನ್ನೇ ವಿಜ್ಞಾಪನಂಗೈದು ಇರುವೆನು

ಮುಂದೆ ಅಪ್ಪಣೆ ಯೆಂಬ ರಾಜ ಮಾರ್ಗವನ್ನೇ ಪ್ರವೇಶಿಸಿ ನೀತಿಮರ್ಯಾದೆ ಧರ್ಮಗಳೆಂಬ ವಸ್ತುಗಳನ್ನೇ ಗ್ರಹಿಸುತ್ತ, ದೇವೀಧ್ಯಾನವೆಂಬ ಅಮೃತಾನ್ನ ಭೋಜನವಂಮಾಡುತ, ಆ ಚಂದ್ರಾರ್ಕವಾಗಿಯಿರುವ ಕೀರ್ತಿ ಪ್ರತಿಷ್ಠೆಗಳೆಂಬ ಅಮೌಲ್ಯವಾದ ದ್ರವ್ಯಗಳಂ ಲೇಶವಾದರೂ ಬಿಡದಂತೆ ಅರ್ಜನಂಗೈದು ತಮ್ಮಿಂದ ಅನುಗ್ರಹಿಸಲ್ಪಟ್ಟ ಬುದ್ಧಿಯಂ ಮಾರದೆ ಇರುವವನಾಗಿಯೇ ಚಿತ್ತದಲ್ಲಿ ಮಡಗಿ ಬದಲು ವೇದರೂಪವಾದ ಪರಮಾನುಗ್ರಹ ಪತ್ರಿಕಾ ಪ್ರದಾನವಂ ಕರುಣಿಸಬೇಕೆಂದು ಮಕ್ಕಣಿಸಿ ಸುವರ್ಣದ ಪತ್ರದೋಳ್ ಬಹು ಕಾಂತಿಯುಳ್ಳ ಅನರ್ಘ್ಯವಾದ ಸೂಕ್ಷ್ಮರತ್ನಂಗಳಿಂದಾ ಲಿಪಿರೂಪವಾಗಿ ಬರಸಿ ತನ್ನ ಮುದ್ರಾಕ್ಷರಂಗಳಿಂದಾ ಸುಮುದ್ರಿತಂಗಳಾಗಿ ಮಾಡಿ ಬುದ್ಧಿಶಾಲಿಗಳಾಗಿಯೂ, ಹಳಬರಾಗಿಯೂ ಇರುವ ವೇಗಶಾಲಿಗಳಾದ ಭೃತ್ಯರಂ ಕರಸಿ ಅವರ ಕೈಯೋಳ್ ಲೇಖನವಂ ಕೊಟ್ಟು ಇನ್ನು ಕೆಲವುಪ್ರದೇಶ ದೇಶಾಂತರ ನಾನಾವಿಧದ್ವೀಪಾಂತರಂಗಳಿಂದ ಅತಿಶಯವಾಗಿತಂದುಇರುವ ಆಯಾಯ ದೇಶ ಜಾತೀಯಂಗಳಾಗಿಯೂ ಆಶ್ಚರ್ಯಕರಂಗಳಾಗಿಯೂ ಇರುವ ಅಪೂರ್ವಂಗಳಾದ ವಸ್ತ್ರಾಯುಧಾಭರಣ, ಮೃಗ, ಪಕ್ಷಿ, ಮನುಷ್ಯ, ಗಿಡ, ಫಲ ಮುಂತಾದ ಕೈಗಾಣಿಕೆ ತರಂಗಳಾಗಿ ನಾನಾವಿಧಂಗಳಾಗಿ ಇರುವ ವಸ್ತು ವಾಹನಾದಿಗಳಂ ಜೊತೆ ಮಾಡಿ ಕಳುಹಿ,ಸುಗಂಧರಾಯನು ತನ್ನ ಪ್ರಿಯರಾದ ಅಂತರಂಗ ಜನರಿಂದಲೂ ಭರತಶಾಸ್ತ್ರವಂ ಕೂಲಂಕಷವಾಗಿ ತಿಳಿದುಸುಗಂಧಮಹಾರಾಯನ ನ್ನೋಲೈಸದೆ ಇರುವರ ಜನ್ಮವಂ ಧಿಗೆಂದುನುಡಿವಂತೆ ಉಘ್ಘಳಿಸುತಿರುವ ನಟುವರಿಂದಲುಂ,ರತಿ ರಂಭೆ ಊರ್ವಶಿಮೊದಲಾದ ಅಪ್ಸರಸ್ತ್ರೀಯರುಗಳಿಸರ್ವಾಂಗ ಸೌಂದರ್ಯವ ನೊಂದೊಂದು ಬೆರಳೋಳ್ತಾಳಿ ನೋಟಮಾತ್ರದಿಂದಲೇ ವಾತಾಶನ ಪರ್ಣಾಶನರಾದ ವೃದ್ಧ ಯತಿಗಳೂಕೂಡ ಮೋಹ ಉಂಟಾಗಿ ತಲ್ಲಣದಿಂದ ಕಳವಳಂ ಗೊಳಿಸುವ ಶುಕ ಪಿಕ ತಂತ್ರೀಸ್ವರಂಗಳಂ ಜರದು ನಿರಾಕರಿಪ ಕಂಠಸ್ವರವುಳ್ಳ ಉದಯಿಸುವ ಯೌವ್ವನ ಉಳ್ಳವರಾಗಿ ಥಳಥಳಸುವ ಮಳೆ ಮಿಂಚಿನಂತೆ ಕಳಕಳಸುತ ಸಕಲಾ ಬರಣ ಭೂಷಿತರಾಗಿ ಜಗದೊಳಗೆ ಸಕಲೈಶ್ವರ್ಯವಲ್ಲಿಯೂ ಸುಗಂಧ ರಾಜ ಮಹಾರಾಜೇಂದ್ರನೊಬ್ಬ ಸರಿಯೆಂಬ ಪೋಲ್ ವರ್ಣಂಗಳಂ ಕ

ತ್ರಿಶಿ ಪಾಡುತ್ತ ನಾಟ್ಯಮಾಡುವಘನಾಸಾರ ಪಾದತಲನೂಪುರದಿಂದಲುಂ, ಮೃದಂಗದ ಧಿಮಿಧಿಮಿ ಧ್ವನಿತಾಕಾರದಿಂದಲುಂ, ಗಜ್ಜೆಗಳ ಘಲ್ಲು ಘಲ್ಲೆಂಬ ಧ್ವನಿಗಳಿಂದಲುಂ. ತಾಳ ಮದ್ದಳೆ ವೀಣಾ ತಂತ್ರಿ ವಲ್ಲಕೀಧ್ವನಿಗಳಿಂದಲುಂ, ಸುಗಂಧ ರಾಜೇಂದ್ರನಿಗಿಂಪಿನ ಘೋಷಮಾದಮ ಬಿನದಮಿತ್ರ ಪದಪಲ್ಲವಿಗಳ ನಿಲ್ಲುಕಟ್ಟಿನಿಂ ರೂಪ ರಂಜಿಸುತ್ತ ತಿರುಗುವಾಗ ರೂಪಲಾವಣ್ಯಗಳಿಂ ಕನ್ಯಕೆಗಳ ಪ್ರತ್ಯಕ್ಷಮಂ ತೋರಿ ಸಕಲೇಂದ್ರಿಯಂಗಳ ಹಾವಭಾವ ವಿಲಾಸ ಚಮತ್ಕಾರಗಳಿಂದ ಹುಡುಗೂಡಿಸುವ ನಾಟ್ಯಮಂ ನೋಡುತ್ತ ಅಡಿಗಡಿಗೆ ಬಾಲೆಯರಿಂದ ಬಿನ್ನವಿಸುವ ಪರಿಮಳವೀಳ್ಯವಂ ಸವಿಯುತ್ತ ಸೇವಕ ಜನರಿಂದ ಮಾಡಲ್ಪಡುವ ಸ್ತೋತ್ರಾದ್ಯುಪಚಾರಂಗಳಂ ಪರಿಗ್ರಹಿಸುತ್ತ ಅಪ್ಸರಸ್ತ್ರೀಯರುಗಳಿಂ ಸುತ್ತುವರಿಯಲ್ಪಟ್ಟ ಶೃಂಗಾರಭೋಗದೋಳಿರುವ ನರೇಂದ್ರನಂತೆ ನಾಟ್ಯದೊಳಾಸಕ್ತನಾಗಿ ಸುಗಂಧಮಹಾರಾಯನು ವಿಲಾಸದೊಳ್ ಸಂತೋಷದಿಂದ ಬರುತ್ತಿರ್ದನಂಬಲ್ಲಿಗೆ ||

ಗದ್ಯ—ಕುಂಡಲಿಶಯನ ಖಂಡಪರಶು ಪುಂಡರೀಕ ಜನಾಖಂಡಲ ಪ್ರಮುಖ ನಿಖಿಲಸುರನರ ಪರಿಭವ ಪರಿಣತ ಪ್ರಚಂಡಬಲ ಚಂಡಮುಂಡ ನಿಖಂಡನ ನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾ ಕಟಾಕ್ಷ ವೀಕ್ಷಣಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಾಂಕಷ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತಗ್ರಂಥ ವಿನೂತನ ಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯಸ ಗೋತ್ರ ಆಶ್ವಲಾಯನಸೂತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ ನರಪತಿ ಬಿರುದಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾಪರಿಣಯವೆಂಬ ನೂತನ ಕೃತಿಯೊಳ್ ಸೌಗಂಧಿಕಾದೇವಿಯು ನಕ್ಷತ್ರಗಳಂತೊಪ್ಪುವ ಅಣಿಮುತ್ತುಗಳಿಂದ ಶೋಭಿಸುತ್ತಿರುವ ಸ್ವಯಂವರಸಂಬಂಧವಾದ ಮಾಲೆಯಂ ದೇವೇಂದ್ರಗೆ ಶಚೀದೇವಿಯು ಧಾರಣೆಯಂಗೈಯುವಂತೆ ಸುಗಂಧಮಹಾರಾಜೇಂದ್ರನ ಕಂಠದೊಳ್ ಧರಿಸಲು ಆ ಸುಗಂಧ ರಾಜೇಂದ್ರನು ನಕ್ಷತ್ರಗಳಿಂ ಮೋಡಗೂಡಿದ ಪೂರ್ಣ ಚಂದ್ರ

ಸಂತೆ ಪ್ರಕಾಶಿಸುತ್ತ ತನ್ನ ಹಸ್ತದೊಳ್ ಯಿರುವ ಉಂಗರವಂ ಸತೀ ಶಿರೋಮಣಿಗೆ ಯಿತ್ತು ತನ್ನ ಬಿಡಾರವಂ ಸೇರಿ ಆನಂದ ಭರಿತನಾಗಿ ಸುಖದಿಂದ ಯಿರುತಿರ್ದನೆಂಬ ೩೨ ನೆ ಆಶ್ವಾಸಕ್ಕೆ ಮಂಗಳ ಮಹಾ ಶ್ರೀ ಶ್ರೀ

ಮೂವತ್ತೆರಡನೇ ಆಶ್ವಾಸ ಸಂಪೂರ್ಣವು.

———

ಶ್ರೀರಸ್ತು.

ಮೂ ವ್ವ ತ್ತ ಮೂ ರ ನೇ ಯ ಆ ಶ್ವಾ ಸ ಪ್ರಾ ರಂ ಭ ವು.

ಶ್ರೀಚಾಮುಂಡಿಕಾಂಬಾ ದೇವ್ಯೈ ನಮಃ

ಶ್ರೀರಾಮಾಯ ನಮಃ॥ ಅನಂತರದಲ್ಲಿ ಕಳಿಂಗದೇಶಾಧಿಪನಾದ ವಿಜಯವರ್ಮರಾಯನು ಪನೋದ್ಧಾರದಿಂದ ನಿಶ್ಚಯಿಸುವನಾಗಿ ಇರುವ ತನ್ನ ಕುಮಾರತಿಯಾದ ಸೌಗಂಧಿಕಾದೇವಿಯ ವಿವಾಹವಂ ಮಾಡಲು ಉದ್ಯುಕ್ತನಾಗಿ ಸಕಲ ಭೂಮಂಡಲಾಧಿಪತ್ಯದಿಂದಲೂ, ಈಗ ಮುಖ್ಯವಾಗಿ ಬೇಗರಾಗುವವರಿಂದಲೂ, ಮರ್ಯಾದೆಯಿಂದ ಮುಂಚಿತವಾಗಿ ಬರಶಿ ಕಳುಹಿಸುವ ವಿಜ್ಞಾಪನ ಪತ್ರಿಕಾ ರೀತಿಯಂತೆಂದರೆ:—

ಶ್ರೀಮತ್ಸಮಸ್ತ ಸದ್ಗುಣಾಭರಣ ಭೂಷಿತರೆಂದು ಚಂದ್ರವಂಶಕಲಶಾಂಬುಧಿ ಕೌಸ್ತುಭರೆಂದು, ಸಕಲದಿಗಂತ ಪ್ರಕಾಶಮಾನ ಕೀರ್ತಿ ಪ್ರತಿಷ್ಠಾಪಕರೆಂದು, ವೈರಿರಾಜ ಮದಗಜ ಕಂಠೀರವರೆಂದು, ಬೇಡುವರಿಗೆ ಇಷ್ಟಾರ್ಥವಂ ಅಧಿಕವಾಗಿ ಕೊಡುವದರಲ್ಲಿ ಕಲ್ಪವೃಕ್ಷ ಕಾಮಧೇನು ಚಿಂತಾಮಣಿಗಳಂ ಮೀರಿದವರಾಗಿ ವರ್ಣಾಶ್ರಮಧರ್ಮಾನುಷ್ಠಾನ, ತಪೋದಾನ, ಜಪ, ಯಜ್ಞ, ವ್ರತ, ನಿಯಮ, ಉಪವಾಸ ಪಾರಣಾದಿ ಸತ್ಕರ್ಮಾಚರಣೆಯಲ್ಲಿ ಅಂಬರೀಷ ಮಹಾರಾಯನಿಗಿಂತ ಅಧಿಕರಾಗಿ ತೋರುತ ಗೋಬ್ರಾಹ್ಮಣ ವೇದಶಾಸ್ತ್ರ ಪರಿಪಾಲನ ಧುರಂಧರರೆಂದು, ರಾಜಕುಲ ಸಕ್ಷತ್ರರಾಜರೆಂದು, ಜಗತ್ಪ್ರಸಿದ್ಧರಾದ ರಾಜಾಧಿರಾಜ ಮಹಾರಾಜ ಸುಚರಿತ್ರ ರಾಯಮಹಾರಾಯ ಭೂಮಂಡಿರ ಚರಣಾಂಬುಜಭೃಂಗಾಯಮಾನನಾದ ವಿಜಯವರ್ಮರಾಯನ ಪ್ರಣಾಮಪೂರ್ವಕ ವಿಜ್ಞಾಪನವೇನೆನಲು, ಈಪರಿಯಂತರವು ತಮ್ಮ ಅಭಿಮಾನದಿಂದ ಸಮಸ್ತ ಪ್ರಜಾಸಮೇತನಾಗಿ ಪತ್ನೀ ಪುತ್ರಿಕಾಮಾತ್ಯ ಬಂಧುವರ್ಗದಿಂ ಚತುರಂಗಬಲ ಕೋಶ ಮುಂತಾದ ಸಕಲಸಂಪತ್ತಿನಿಂದಲೂ, ಕಳಿಂಗನ

ಗರದ ಪುರೋಭಾಗದೊಳನೇಕದೇಶ ಸಂಚಾರವಂ ಮಾಡಿಕೊಂಡು ಸುಖದಿಂದ ಬಂದು ಕಟಕಮಧ್ಯದೊಳ್ ಸ್ವಯಂವರಾರ್ಥವಾದ ಪಣಂಗಗಳಂ ಬೆಳಶಿ ವಿವಾಹ ವರಣಮಾಲೆಯುಂ ಸೌಗಂಧಿಕಾದೇವಿಯಿಂ ಒಪ್ಪಿಶಿ ಕೊಂಡು ಷೋಡಶ ಕಲಾಪರಿಪೂರ್ಣನಾದ ಶರತ್ಕಾಲದ ಚಂದ್ರನಂತೆ ಅಭಿವೃದ್ಧನಾಗಿ ಧೀರ್ಘಾಯುಷ್ಮಂತನಾದ ತಮ್ಮ ಸುಪುತ್ರನಾದ ಸುಗಂಧರಾಜ ಮಹಾರಾಯನ ಸಪರಿವಾರ ಕ್ಷೇಮಾಭ್ಯುದಯದಿಂದಲುಂ, ನಾನು ಶತಗುಣಿತವಾದ ಕ್ಷೇಮವುಳ್ಳವನಾಗಿ ಇರುವವಂ ಚಿತ್ತೈಕ್ಯತಂದು ತಮ್ಮ ಸಕಲವಿಧ ಸಾಮ್ರಾಜ್ಯ ವೈಭವಾತಿಶಯಂಗಳಂ ದೊಡಗೂಡಿದ ಪುತ್ರ ಮಿತ್ರ ಕಳತ್ರ ಕೋಶ ಚತುರಂಗಾಭ್ಯಭಿವೃದ್ಧಿ ಪರಂಪರೆಗು ಕಟಾಕ್ಷದಿಂ ದನುಗ್ರಹ ಲೇಖನವಂ ಕಳುಹಿಸತಕ್ಕದ್ದು, ಸೌಭಾಗ್ಯಶಾಲಿನಿಯಾದ ಸೌಗಂಧಿಕಾದೇವಿಗು ಆಯುಷ್ಮಂತನಾದ ತಮ್ಮ ಪುತ್ರ ಸುಗಂಧರಾಯನಿಗೂ ಶುಭವಾದ ವಿವಾಹ ಮಹೋತ್ಸವವು ಸಕಲ ದೇವತಾ ಕಟಾಕ್ಷದಿಂದ ಈವಿಜಯ ನಗರದಲ್ಲಿ ಆಗಮಾಡಿಸೂವದಾಗಿ ವಿಜ್ಞಾಪನಂ ಗೈಯುವ ನನ್ನ ಪ್ರಾರ್ಥನೆಯುಂ ನೆರವೇರಿಶಿ ಕೊಡುವದಕ್ಕೋಸ್ಕರ ಸಮಸ್ತ ಪ್ರಕೃತಿ ಸಹಿತರಾಗಿ ತಮ್ಮ ಪ್ರಿಯಮಿತ್ರರಾದ ರಾಜ್ಯಾಧಿಪತಿಗಳಂ ದೊಡಗೂಡಿ ವಿಜಯನಗರವಂ ಕುರಿತು ಬಿಜಯಂಗೈಯಬೇಕಾಗಿ ಇರುವದೆಂದು ವಕ್ಕಣಿಶಿ ವಿಚಿತ್ರವಾದ ಲೇಖ್ಯದೊಳ್ ಬರಶಿ ತನ್ನ ಹಸ್ತಾಕ್ಷರಾವಿಗಳಿಂದ ಚಿಹ್ನಿತಂಗಳಾಗಿಮಾಡಿ ಧನಂಜಯನೆಂಬ ತನ್ನ ಮಂತ್ರಿಯಂ ಕರದು ರತ್ನಪುರಿಯೊಳಿರುವ ಸಕಲರ ಕುಶಲವಂ ಕೇಳುವಂತೆಪೇಳಿ, ಅವನ ಕೈಯೊಳ್ ಹರಿದ್ರಾಲಂಕೃತವಾದ ಲೇಖನವಂಕೊಟ್ಟು ಅವನ ಸಂಗಡ ಆನೆ ಕುದುರೆ ಮೊದಲಾದ ಕೆಲವು ಬಲಂಗಳಂ ಜೊತೆಮಾಡಿ ಮಹಾರಾಜ ಮರ್ಯಾದೆಯಿಂದ ಕಳುಹಿ ತಾನು ವಿವಾಹಸಂಭಾರ ಸನ್ನಾಹದೊಳಭಿವ್ಯಕ್ತನಾಗಿರುತ್ತಿರಲು.—

ಅತ್ತಲಾ ರತ್ನಪುರದೊಳ್ ಸಕಲರಾಜ್ಯಭಾರವಂ ವೈಭವದಿಂದಿರುತ್ತಿರುವ ಸುಚರಿತ್ರ ಮಹಾರಾಯನು ಒಡ್ಡೋಲಗದಲ್ಲಿ ಕುಳಿತು ಇರುವ ಸಮಯದೊಳ್ ಸುಗಂಧರಾಯನಿಂದ ಕಳುಹಲ್ಪಟ್ಟ ದೂತರು ಅತಿ ತ್ವರೆಯಿಂದ ಬಂದವರಾಗಿಮಹಾರಾಯನ ಆಸ್ಥಾನವಂ ಪ್ರೊಕ್ಷ್ಯ

ಈ ಸಂತೋಷಾತಿಶಯವಂ ಪೇಳಿ ರಾಣಿಯಂ ಕುರಿತು ನಿನ್ನ ಪುಣ್ಯಂಗಳಿಗೆ ಎಣೆಯಿಲ್ಲ ಸುಪುತ್ರನಂ ಪಡೆದೆ ನಿನ್ನ ಸಂತೋಷವೆಣದೆಂದು ಸತಿಯಂ ತಕ್ಕೈಸಿ ಸಂತೋಷದಿಂದ ಕಳಿಂಗದೇಶದಿಂದ ಬಂದಿರುವ ಅಮಾತ್ಯಾದಿಗಳಿಗೂ ಸುಗಂಧರಾಯನಿಂದ ಕಳುಹಿಸಲ್ಪಟ್ಟ ನಿಜಭೃತ್ಯಾದಿಗಳಿಗೂ ಧನ ಕನಕ ವಸ್ತ್ರ ವಾಹನ ಭೂಷಣಾದಿಗಳಂ ನಿರವಧಿಕವಾಗಿ ಯಥಾ ಯೋಗ್ಯವಾಗಿ ಕೊಟ್ಟು ಅವರಿಗೆ ಅನುರೂಪವಾದ ಬಿಡಾರಂಗಳಂ ಬಿಡಿಸಿ ಸಕಲ ಮರ್ಯಾದೆಯಿಂದ ಉಪಚಾರಂಗಳಂ ಮಾಡಿಸಿ ಕಳಿಂಗ ನಗರವಂ ಕುರಿತು ಪುತ್ರನ ವಿವಾಹಾರ್ಥವಾಗಿ ಗಜತುರಗರಥ ಪದಾತಿಗಳೆಂಬ ಚತುರಂಗಸೈನ್ಯಂಗಳು ಅನೇಕ ಕೋಟಿ ಬಂಡಿಗಳಲ್ಲಿ ತುಂಬಿದ ಪದಾರ್ಥಂಗಳು ಹತ್ತು ಸಾವಿರ ಒಂಟೆಗಳ ಮೇಲೆ ಸಾಗಿಸುವ ಜವಳಿಗಳು ಇಪ್ಪತ್ತು ಸಾವಿರ ಎತ್ತುಗಳ ಮೇಲೆ ಸಾಗುವ ಧನಂಗಳು, ಅನೇಕ ಆನೆಗಳ ಮೇಲೆ ಸಾಗಿಸುವ ನಾನಾ ವರ್ಣವಾದ ಗುಡಾರ ಹಾಸಿಗೆ ಮೊದಲಾದ ವಸ್ತುಗಳು, ಇನ್ನು ಅಂತಃಪುರದಿಂದ ತೆರಳುವ ಸ್ತ್ರೀಯರುಗಳ ಪ್ರಯಾಣಕ್ಕೆ ಬೇಕಾದ ಅಂದಳಂಗಳು, ವಿಚಿತ್ರವಾದ ಮುಸುಕಿನ ಗಾಡಿಗಳು, ಅರಸು ಮಕ್ಕಳಿಗೆ ವಾಹನಾರ್ಥವಾಗಿರುವ ಪಲ್ಲಕ್ಕಿ ದಂಡಿಗೆಗಳು, ಸಹವಾಗಿ ಮೂರು ದಿನದೊಳಗಾಗಿ ಸಜ್ಜುಮಾಡಿಸಿ ಸನ್ನದ್ಧವಾಗಿ ಇರಲೀಯೆಂದು ಸುಚರಿತ್ರರಾಯನು ಮಂತ್ರಿಯಾದ ಸುಬುದ್ಧಿಗೆ ಆಜ್ಞಾಪಿಸಿ, ಇನ್ನು ನಾನಾ ದೇಶಂಗಳಿಂದ ಬರತಕ್ಕ ಬಂಧು ನೃಪಾಲರಂ ಕರೆತರುವಂತೆ ಅವರವರಿಗೆ ಅನುರೂಪವಾದ ವಕ್ಕಣಿಕೆಗಳಂಪ ಲೇಖನಗಳಂ ವಿಸ್ತಾರದಿಂದ ಚೆನ್ನಾಗಿ ಬರಸಿ ಶುಭಮಿಶ್ರವಾಗಿ ಅಲ್ಲಲ್ಲಿಗೆ ಪೋಗತಕ್ಕ ಬುದ್ಧಿವಂತರಾದ ಸೇವಕರಂ ಕಟ್ಟು ಮಾಡಿಸಿ, ಅವರವರಂ ಕರದುಕೊಂಡು ವಿಜಯನಗರಕ್ಕೆ ಅತಿ ಜಾಗ್ರತೆಯಿಂದ ಬಂದು ಸೇರುವಂತೆ ನೇಮಿಸಿ, ಮುಂಚಿತವಾಗಿ ತನ್ನ ಪುತ್ರನಾದ ಸುಗಂಧರಾಯನಿಗೆ ತಾನು ಬರುವದಂ ತಿಳುಹಿಸೂವದು ಆವಶ್ಯಕಾರ್ಯವೆಂದು ಲೇಖನವ ನಿರೂಪದಿಂ ಬರೆಸುತ್ತಿದ್ದನು.

ಸ್ವಸ್ತ್ಯಸ್ತು ದೀರ್ಘಾಯುಷ್ಮಂತನಾಗಿ ವಜ್ರಶರೀರಿಯಾಗಿ ಕುಲದೇವತೆಯಾದ ದೇವಿಯರ ಅನುಗ್ರಹದಿಂದ ಸಕಲೈಶ್ವರ್ಯ ಸಂಪನ್ನನಾಗಿ ಹಿರಿಯವರ ಆಶೀರ್ವಚನದಿಂದ ನಿತ್ಯ ಕಲ್ಯಾಣ ಶಾಲಿಯಾಗಿರುವ ಸ್ಥಿರಂ

ಜೀವಿಯಾದ ಸುಗಂಧರಾಜಕುಮಾರ ಕಂಠೀರವಂಗೆ ಆಶೀರ್ವಚನಪೂರ್ವಕ ವಾಗಿ ಬರಶಿಹರಿಶಿ ಕಳುಹಿದ ಆಶೀರ್ವಾದಲೇಖನವಂ ನೋಡಿಕೊಳ್ಳುವದು, ರತ್ನಪುರದೊಳಿರುವ ಸಕಲವೈಭವಸಮೃದ್ಧಿಯಿಂದ ರಾಣಿಯಾದ ಗುಣವತಿ ಮೊದಲಾದ ಕಾಂತಾಜನರಿಂದ ಸಹಿತನಾಗಿ ನಾವುಕ್ಷೇಮದಿಂದ ಇರುವೆವು, ನೀನುಸುಮತಿಮೊದಲಾದ ಪ್ರಕೃತಿಗಳಿಂದಲುಂಸೇನಾಪತಿ ಸಹಿತವಾದಚತುರಂಗಾದಿ ಸೇನಾ ಸಮೂಹಂಗಳಿಂದಲುಂ ಭೃತ್ಯರಿಂದೊಡಗೂಡಿದ ದೇಶಸಂಚಾರಶತ್ರುಜಯಾದಿಗಳಿಂದ ಸಹಿತವಾದ ನಿನ್ನ ಆರೋಗ್ಯಭಾಗ್ಯ ಮೊದಲಾದ ಶುಭ ಶ್ರೇಯಸ್ಸನ್ನೆ ಪ್ರಾರ್ಥಿಸುತ್ತಾ ಇರುವವರಿಗೆ ಆದಿಶಕ್ತಿಯಾದಜಗನ್ಮಾತೆಯು ಸರ್ವದಾ ಅದನ್ನೆ ಕರುಣಿಸಲಿ, ಈಗ ಪ್ರಕೃತದೊಳ್ ಯಲ್ಲಿಯುಸಂಚಾರವಂಮಾಡಲಾಗದು, ಮತ್ತು ನೀನು ಕಾಲಕಾಲದೊಳ್ ಭೋಜನನಿದ್ರಾದಿಗಳಂ ತಪ್ಪದೆ ಮಾಡುತ ಹಿರಿಯವರ ಸಹವಾಸ ಬುದ್ಧಿವಂತರ ಸಮಾಗಮದಿಂದಲೆ ಯಿರುವದು, ನಮಗೆ ಪರಮಾಪೇಕ್ಷೆಯಾಗಿ ತೋರುವದೆಂದುತಿಳಿಯುವದು, ಕಳುಹಿರುವಲೇಖನದಅಭಿಪ್ರಾಯಗಳಂ ತಿಳಿದು ಸಮಸ್ತರಾದ ಬಂಧುಸ್ನೇಹಿತರಿಗೆಲ್ಲಾ ಲೇಖನವಂಬರೆಶಿಕಳುಹಿ ಸಕಲಸನ್ನಾಹಂಗಳಂ ತೆಗಶಿಕೊಂಡು ಯಲ್ಲರೂ ತ್ವರೆಯಿಂದ ಬರುವೆವು, ಇದಲ್ಲದೆ ವಿಜಯವರ್ಮರಾಜನ ವಾಲೆಯಂನೋಡಿದ ಮಾತ್ರದಿಂದಲೆ ನಿನ್ನ ಸಾಮರ್ಥ್ಯ ಸಾಹಸಂಗಳು ಚನ್ನಾಗಿ ವಿದಿತವಾಯಿತು, ಆ ಮಹಾಗುರುವಾದ ವಾಸುದೇವರ ಅನುಗ್ರಹವೇ ನಿನಗೆ ಸಹಾಯವಾಗಿ ಇರುವದು, ಯೇಕಪುತ್ರನಾದ ನಿನ್ನಂ ಬಿಟ್ಟು ವೃದ್ಧರಾದ ನಾವೀರ್ವರೂ ಹ್ಯಾಗೆಸಹಿಸುವೆವು, ಈರೀತಿ ನಾಳೆ ನಿನ್ನ ಉದರದೊಳ್ ಪುಟ್ಟಿದ ಕುಮಾರನು ಜಯಾರ್ಥವಾಗಿ ತೆರಳುವಾಗಲ್ಲದೆ ತಿಳಿಯಬಾರದು, ಯಾಗನಪ್ರಕೃತದೊಳ್ ನಾವೆಲ್ಲರೂ ರತ್ನಪುರಿಯಿಂದ ತೆರಳಿ ಬಂದರೂಯೆಂದು ತಿಳಿಯುವದು, ನಿನಗೆ ಸ್ವಸ್ತಿ ಆಗಲಿಯೆಂದು ನಿರತಿಶಯ ಪುತ್ರವಾತ್ಸಲ್ಯದಿಂದ ಬರಶಿಕಳುಹಿದ ಆಶೀರ್ವಾದದ ಲೇಖನವುಂದಾಗಿ ಜಾಗ್ರತೆಯಿಂದ ಕಳುಹಿ, ಆ ಕ್ಷಣದಲ್ಲಿಯೇ ರತ್ನಪುರಿಯು ಹೊರಟು ಬಂದಂತೆ ಅನೇಕವಾದ ಆನೆ ಕುದುರೆ ರಥಪದಾತಿ ಮೊದಲಾದ ಅನೇಕ ಸೈನ್ಯದಿಂದೊಡಗೂಡಿ ಪುರದೊಳಿರುವ ಆರ್ಷಪೌರುಷಿಕರಾದ ದ್ವಿಜಶ್ರೇಷ್ಠರಂದಂಪತಿಸಮೇತರಾಗಿ ಸಕುಟುಂಬರಾಗಿ ಅಗ್ನಿ ಹೋತ್ರಾದಿಗಳಿಂದೊ

ಡನೆ ಕೂಡಕರದುಕೊಂಡು ತನ್ನ ಪುರದಿಂದ ಕಳಿಂಗನಗರ ಪರ್ಯಂತವು ಸಾಲು ಚಪ್ಪರಂಗಳಂ ಬಿಡದಿ ಬಿಡಾರಂಗಳಂ ಭಕ್ಷ್ಯಭೋಜ್ಯಂಗಳಂ ಫಲೋಪಹಾರ ಪಾನೀಯಂಗಳಂ ಗಂಧ ಪುಷ್ಪ ತಾಂಬೂಲಾದಿಗಳಂ ತರ ತರಂಗಳಾಗಿ ಮಾರ್ಗಗಳಲ್ಲಿ ಸಜ್ಜು ಮಾಡಿಸಿ ಮಾರ್ಗಗಳಲ್ಲಿ ಬಂದು ಕಾದಿರುವಂತೆ ಅಲ್ಲಿ ಇರುವ ದೇಶಾಧಿಪತಿಗಳಿಗೆ ಮುಂದೆ ಕಟ್ಟು ಮಾಡಿಸಿ ಸುಚರಿತ್ರರಾಯನು ಬಹುಸಂಭ್ರಮದಿಂದ ಹೊರಟು ಅಲ್ಲಲ್ಲಿ ಬಿಡಾರಂಗಳೊಳ್ ಇಳಿದಿಳಿದು ಜಾಗ್ರತೆಯಿಂದ ಬರುತ್ತಿರಲು:—

ಅಲ್ಲಿ ಸುಗಂಧರಾಯನು ತನ್ನ ತಂದೆಯಾದ ಸುಚರಿತ್ರರಾಯನ ಬಳಿಯಿಂದ ಬಂದು ಇರುವ ಆಶೀರ್ವಚನ ಲೇಖನವಂ ಕಂಡು ಕಟಕದ ಸುತ್ತಲು ಮೆರವಣಿಗೆ ಮಾಡಿಸಿ ಭರಂಗೀ ಶಬ್ದ ಮೊದಲಾದ ರಾಜಮರ್ಯಾದೆಯಿಂ ಪೂಜಿಸಿ ಲೇಖನವಂ ಶಿರಸಾವಹಿಸಿ ಕಣ್ಣುಗಳಿಗೆ ಒತ್ತಿಕೊಂಡು ಭಕ್ತಿಯಿಂದ ಓದಿ ನೋಡುತ್ತ ಸಂತೋಷದಿಂದ ಇರುವ ಸಮಯದಲ್ಲಿ ಸುಚರಿತ್ರರಾಯನು ಸಮೀಪಪ್ರಾಂತ್ಯಕ್ಕೆ ಬಂದುದಂ ಚಾರರಮುಖದಿಂದ ತಿಳಿದು ಸುಗಂಧರಾಯನು ತನ್ನ ಸಕಲ ವೈಭವದಿಂ ಎದುರ್ಗೊಂಡು ಹೋಗಲು, ಆಗ ವಿಜಯವರ್ಮರಾಯನು ಕೂಡ ಸಕಲ ಸೇನಾ ಮಂತ್ರಿ ಪುರಜನ ಪರಿಜನ ವಾದ್ಯ ಮೊದಲಾದ ಸಕಲವೈಭವದಿಂದೊಡಗೂಡಿ ಅಲಂಕೃತನಾಗಿ ಸುಚರಿತ್ರರಾಯನಂ ಕುರಿತು ಎದುರಾಗಿ ಹೋಗಲು, ಅಲ್ಲಿ ಈ ಮೂರು ಸೇನಾ ಧೂಳಿಯಿಂದ ಸಮುದ್ರವು ಕೂಡ ನೆಲಸವು ಆಗುವಂತೆ ತೋರಿ ವಾದ್ಯಂಗಳ ರಭಸಕ್ಕೆ ಬ್ರಹ್ಮಾಂಡಗಳು ಬಿರಿಯುವಂತೆ ಆಗಿ ಮೂರು ಸಮುದ್ರಗಳು ಕೂಡಿದಂತೆಯಾಗಿ ಸೇನಾ ಸಮುದ್ರಕ್ಕೆ ತೆರೆಗಳಂತೆ ತೋರುವ ಜನರಿಂದಲೂ ಖಡ್ಗ ಮೊದಲಾದ ಆಯುಧಂಗಳ ಹೊಳಪುಗಳೆ ಮೀನುಗಳಾಗಿಯೂ, ಆನೆ ಮೊದಲಾದ ಸತ್ವಂಗಳೆ ಮಕರಾದಿಗಳಾಗಿಯೂ ಛತ್ರಂಗಳೆ ಆವರ್ತಂಗಳಾಗಿಯೂ, ರತ್ನಾಭರಣಂಗಳೆ ರತ್ನರಾಶಿಗಳಾಗಿಯೂ, ಈ ಮೇರೆಗೆ ಎಸೆಯುವ ಸೇನಾ ಸಮುದ್ರದಿಂದ ಭೂಮಿಯೆಲ್ಲಾ ನಿಬಿಡವಾಗಲು ಆಶ್ಚರ್ಯದಿಂದ ನೋಡುವ ಜನರಿಗೆ ಸಂತೋಷವನ್ನುಂಟು ಮಾಡುತ್ತ ಆಗ ಸುಚರಿತ್ರರಾಯನು ಬಲಗಡೆಯಲ್ಲಿ ಬರುವ ಮಗನ ಬಲಪಿನಿಂದಲುಂ ಎಡಭಾಗದಲ್ಲಿ ಬರುವ ವಿಜಯವರ್ಮರಾಯನ ಗಮನದಿಂದಲುಂ ಶುಭವ

ಮಂತ್ರಿಗಳಿಂದ ಸಹಿತನಾದ ಮಾಂಧಾತೃರಾಯನಂತೆ, ಶತಘ್ನೀ ಶಬ್ದ ಮೊದಲಾದ ಸಕಲ ಮರ್ಯಾದೆಗಳಿಂದ ಕಟಕಕ್ಕೆ ಬಂದು ಸಂತೋಷದಿಂದ ಸೇರಲು, ಆಗ ಸುಗಂಧರಾಯನು ತಂದೆ ತಾಯಿಗಳಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ ಪಾದಸ್ಪರ್ಶವಂಮಾಡಿ ಗೋತ್ರಾಭಿವಾದನಂಗೈದು,ಅವರಿಂದ ಮಾಡಲ್ಪಟ್ಟ ನಿರತಿಶಯವಾದ ಆಶೀರ್ವಚನವಂ ಶಿರಸಾವಹಿಸಿ,ಸಕಲ ಬಂಧುಗಳಂ ಕುಶಲ ಪ್ರಶ್ನೆಗಳಿಂದ ಯಥಾಯೋಗ್ಯವಾಗಿ ಕೇಳಿ,ಸುಬುದ್ಧಿ ಮೊದಲಾದ ಮಂತ್ರಿಶ್ರೇಷ್ಠರಂ ಸಾಕ್ಷಾತ್ಕರಿಸಿ,ಇನ್ನು ಸಂಪ್ರದಾಯಜ್ಞರಾದ ಪುರೋಹಿತಾದಿ ಬ್ರಾಹ್ಮರಿಗೆಲ್ಲಾ ಅಂಜಲಿಯಂಮಾಡಿ, ಸಕಲ ಜನರಂಯಥಾವಿಭವಾನುಸಾರವಾಗಿ ವಿಚಾರಿಸಿ ತಂದೆಯಾದ ಸುಚರಿತ್ರ ಮಹಾರಾಯನ ಅಪ್ಪಣೆಯಿಂದ ಪಾರ್ಶ್ವದಲ್ಲಿ ಕುಳಿತು ಕೈಗಳಂಕಟ್ಟಿಕೊಂಡು ಭಯಭಕ್ತಿ ಮರ್ಯಾದೆ ವಿಶ್ವಾಸ ಗೌರವಗಳಿಂದ ತಂದೆಯೊಡನೆ ಮಾತಿನ ಸಂಗತಿಯಿಂದ ಆರ್ಯಸ್ವಾಮಿಯೆಂದು ಪರಿಭಾಷಿಕವಾಗಿ ಪ್ರಕೃತೋಪಯುಕ್ತವಾಗಿ ಮಾತುಗಳಂಮಿತಾಕ್ಷರಗಳಿಂದ ಮೃದುವಾಗಿ ಮೆಲ್ಲನೆ ತನ್ನ ಜನನಿಯಾದ ಗುಣವತೀ ದೇವಿಯು ಕೇಳುವಂತೆ ನುಡಿಯುತ್ತಹಿತರಾದ ಸ್ವಕೀಯ ಬಂಧುಜನರಿಂ ದೊಡಗೂಡಿ ತಂದೆತಾಯಿಗಳ ಸನ್ನಿಧಾನದಲ್ಲಿಶ್ರುತಿ ಸ್ಮೃತಿಯ ಅವಲಂಬಿಸಿಕೊಂಡು ಸಮವಾಗಿರುವ ಪರಮ ಧರ್ಮವ್ರೋಯಂದುತೋರುವಂತೆ ಯಿರುತ ಸುಗಂಧರಾಯನುತೇಜೋ ವಿಶೇಷದಿಂದ ಪ್ರಕಾಶಿಸುತ ಸುಖದಿಂದಿರುತಿರಲು;ಆಗ ವಿಜಯವರ್ಮರಾಯನು ಸುಚರಿತ್ರ ಮಹಾರಾಯನಿಂದ ಬಂಧು ಮರ್ಯಾದೆಯಾಗಿ ಕೂಡಲ್ಪಟ್ಟು ಕ್ಷೇಮಾಲಿಂಗನ ಮೊದಲಾದ ಯೋಗಕ್ಷೇಮ ವಿಚಾರಂಗಳಿಂದಲುಂ,ವಿವಾಹಾರ್ಥವಾಗಿ ಅವಶ್ಯದಿಂದ ಮಾಡಲ್ಪಡುವ ವಿಹಿತವಾದ ಸುಭಕಾರ್ಯ ಕಲಾಪಂಗಳಿಂದಲುಂ ಕೃತಕೃತ್ಯನಾಗಿ ಸುಚರಿತ್ರರಾಯನ ಅಪ್ಪಣೆಯಿಂದ ಹೊರಟು ನಿಜಭವನಕ್ಕೆ ಬಂದು ಪ್ರೊಳ್ಳಿತಾದ ಸಮಯದೋಳ್ ಕಳಿಂಗದೇಶಾಧಿಪತಿಯಾದ ವಿಜಯವರ್ಮರಾಯನು ಕುಲೀನರಾದ ವೃದ್ಧರಿಂದ ಸಮೇತನಾಗಿ ತನ್ನ ಆರ್ಷ ಪೌರುಷಿಕರಾದ ವೇದ ಶಾಸ್ತ್ರಜ್ಞರಾಗಿ ಪರಮಾಪ್ತರೆನಿಸಿಕೊಂಡು ಹಿತೈಷಿಗಳಾಗಿರುವ ಪ್ರಯೋಗ ಮಾಧವರೆಂಬ ಪುರೋಹಿತರು ಸಿದ್ಧಾಂತ ಶೇಖರರೆಂದು ಹೆಸರುಳ್ಳ ಮೌಹೂರ್ತಿಕರಂ ಶೀಘ್ರ

ವಾಗಿಮುಹೂರ್ತವಿಂದಕರಶಿಕೊಳು ಯುಧಿಷ್ಠಿರರ ಸಮ್ಮತಿಯಿಂದಲೂ ಜನ್ಯಪ್ಪರ ಅನುಮತಿಯಿಂದಲೂ ರಾಣಿಯ ಪ್ರೋತ್ಸಾಹದಿಂದಲೂ ನಿರ್ದೋಷವಾಗಿ ಬಹು ಗುಣಯುಕ್ತವಾಗಿ ಏಕಪಂಚಶನ್ಮಹಾದೋಷರಹಿತವಾಗಿ ಲಗ್ನ ಸಪ್ತಮಾಷ್ಟಮ ಸ್ಥಾನಂಗಳು ಪರಿಶುದ್ಧವಾಗಿ ಶುಭಗ್ರಹ ಸಂಬಂಧ ವೀಕ್ಷಣಗಳಿಂದೊಡಗೂಡಿದ ಬಹು ಶುಭತರವಾದ ಮುಹೂರ್ತವಂ ಪುಷ್ಕಲಾಂಶವಾಗಿ ನಿಶ್ಚಯಿಸಿ ಮಾಡಿಸಿ, ಶುಭ ಲಗ್ನಕ್ಕೆ ಸರಿಯಾಗಿ ಸಕಲರಿಂದೊಡಗೂಡಿ ಬರುವಂತೆ ಸಮಸ್ತ ದೇಶಂಗಳೊಳಿರುವ ನೃಪಾಲರಂ ಕುರಿತು ಆಯಾಯ ದೇಶೀಯವಾದ ಬಿರುದು ಸಂಪ್ರದಾಯ ರೀತಿ ಸಹಿತೆಗಳಿಗನುಸಾರವಾದ ಪತ್ರಿಕೆಗಳಂ ಯಥಾ ಯೋಗ್ಯವಾಗಿ ವೃದ್ಧರಾಗಿ ಶಿಷ್ಟರಾಗಿಯೂ ಇರುವ ರಾಯಸದವರಿಂದ ಸಲಕ್ಷಣಂಗಳಾಗಿ ಬರೆಸಿ ಲೇಖನಂಗಳಂ ಮಂಗಳಕರವಾದ ಕುಂಕುಮಾದಿಗಳಿಂದ ಶುಭ ಸೂಚಕಂಗಳಾಗಿ ಮಾಡಿಸಿ ಕಾರ್ಯದಲ್ಲಿ ಕುಶಲರಾದ ವೇಗಶಾಲಿಗಳಾದ ಭೃತ್ಯಶ್ರೇಷ್ಠರ ಮುಖವಾಗಿ ನೂರಾರು ಸಾವಿರಗಳೆಂಬ ಲೆಕ್ಕಗಳಿಂದ ಸಮಸ್ತರಾಜವೈಭವ ಸಮೇತವಾಗಿ ಕಳುಹಿ, ಇನ್ನೂ ಸಕಲ ದೇಶಂಗಳೊಳಿರುವ ಬ್ರಾಹ್ಮರಂ ಸಕುಟುಂಬರಾಗಿ ಬರುವಂತೆ ಸಮಾಚಾರವಂ ಕಳುಹಿ, ತನ್ನ ಮಂತ್ರಿಗಳಂ ಕುರಿತು ಯಲೈ ಬುದ್ಧಿವಂತರಾದ ಕಾರ್ಯಜ್ಞರುಗಳಿರಾ! ನೀವು ಕೆಲವರು ಶಿಲ್ಪಿಶಾಸ್ತ್ರಜ್ಞರಂ ಕರೆಸಿ ಚಿತ್ರಕಾರರಿಂ ದೊಡಗೂಡಿ ವಿಚಿತ್ರವಾದ ಚಪ್ಪರಂಗಳಂ ಉಪ್ಪರಿಕೆಗಳಿಂದಲೂ ಉನ್ನತವಾಗಿ ಹಾಕಿಸಿ, ನಾನಾ ವಿಧಂಗಳಾದ ಮೇಲ್ಕಟ್ಟುಗಳಂ ಕಟ್ಟಿಸುವದೆಂದು ಕಟ್ಟು ಮಾಡಿಸಿ, ಮತ್ತೆ ಕೆಲವರಂ ಕುರಿತು ನೀವೀಗ ತ್ವರಿತವಾಗಿ ಸಕಲ ದೇಶಗಳಿಂದ ಬರುವ ನೃಪಾಲರಿಗೆಲ್ಲ ಅನುರೂಪವಾಗಿ ಇರುವ ವಿಸ್ತಾರವಾದ ಮನೆಗಳಂ ಬಿಡಿಸಿ ಅಲಂಕರಿಸಿ ಸಕಲ ಮರ್ಯಾದೆಯಿಂದ ಬೇಕಾದ ವಸ್ತುವಂ ಕೊಡುವದೆಂದು ನುಡಿದು, ಮತ್ತಂ ಕೆಲಂಬರಂ ಕುರಿತು ನೀವೀಗ ಆಗತಕ್ಕ ವಿವಾಹದ ಸಕಲ ಶುಭ ಕಾರ್ಯಂಗಳಂ ಸನ್ನದ್ಧವಾಗಿ ಮಾಡಿಕೊಂಡುಕೇಳಿದವಸ್ತು ಮುನ್ನಿದ್ದುಗಳಂ ಅತಿ ಜಾಗ್ರತೆಯಿಂದ ತಕ್ಕ ತತ್ಕ್ಷಣದಲ್ಲಿಯೇ ಕೊಡುವಂತೆ ಎಚ್ಚರದಿಂ ಇರುವದೆಂದು ನಿರೂಪಿಸಿ, ಸಮಾಚಾರವೃತ್ತಾಂತವೆಲ್ಲವಂ ತನ್ನ ಪುತ್ರಿಸಮೇತವಾಗಿರುವ ಪಟ್ಟದ ರಾಣಿಮೊದಲಾದವರಿಗೆ ಪೇಳುತ ಅಂತಃ

ಪುರವಲ್ಲಿ ಸುಗಂಧರಾಯಮಹಾರಾಜನ ಪ್ರಭಾವ ರೂಪ ಲಾವಣ್ಯ ಶೌರ್ಯ ಪರಾಕ್ರಮ ಸೌಲಭ್ಯ ಸೌಕುಮಾರ್ಯ ಮೊದಲಾದ ಶುಭಗುಣಂಗಳಂ ಸುಚರಿತ್ರರಾದ ಗುಣವತೀದೇವಿಯುರಪ್ರಶಸ್ತ್ಯೋದಯಮೆಂಬಿವರ ಸಂಬಂಧಮಂ ಪಡೆದ ಸ್ವಭಾಗ್ಯೋದಯಮಂ ಶ್ಲಾಘಿಸುತ್ತ, ಮುಂದೆ ಆಗತಕ್ಕ ಕಲ್ಯಾಣ ಮಹೋತ್ಸವದ ವ್ಯಾಪಾರಂಗಳಂ ಪರಸ್ಪರ ಸಲ್ಲಾಪಾದಿಗಳಿಂದ ನಿಶ್ಚಯಿಸುತ್ತ ಇರಲು, ಈತನ ಮಂತ್ರಿ, ನಗರಂಗಳು ತಮ್ಮತಮ್ಮಂಕುರಿತು ಪೇಳಿದ ನೃಪನ ಆಜ್ಞಾನುಸಾರವಾಗಿ ಪುರವೆಲ್ಲವೂ ನೆಳಲಾಗುವಂತೆ ಉನ್ನತದಲ್ಲಿ ಆಕಾಶವಂ ತಗಲುವ ಚಪ್ಪರದನೀರಾಜಿಯಮೇಲ್ಕಟ್ಟುಗಳಿಂದಲುಂ, ಮುತ್ತು ಹವಳಂಗಳು ಮೊದಲಾದ ಕುಚ್ಚು ಸರಗಳಿಂದಲುಂ, ನವರತ್ನಂಗಳ ಜೊಂಪಿನ ಅಲಂಕಾರಗಳಿಂದಲುಂ, ಕನ್ನಡಿಗಳಂ ಬಿಗಿದು ಜಂತೆವಬೋದಿಗೆಗಳಿಂದ ಕೂಡಿರುವ ಅನೇಕ ಸಹಸ್ರಸ್ತಂಭಂಗಳಿಂದಲುಂ, ಚಂದ್ರನ ಹೆರೆಯಂತೆ ಬಗ್ಗಿರುವ ಚಿನ್ನದ ಬೋವಿಗಳ ಮಧ್ಯಭಾಗದೊಳ್ವಿಚಿತ್ರವಾದ ವರ್ತುಲ ಚತುರಶ್ರ ಸ್ವಸ್ತಿಕಾಕಾರಂಗಳಾಗಿ ಸೂರ್ಯಮಂಡಲದಂತೆ ಪ್ರಕಾಶದಿಂ ತಿರುಗುತ ಮಧ್ಯದ ಕಾಲದ ಮೊಗ್ಗುಗಳಲ್ಲಿ ಸುರಿದು ಚೆಲ್ಲುವ ಪುಷ್ಪಪರಿಮಳ ದ್ರವ್ಯಂಗಳುಳ್ಳ ಕುರುಜು ಚಕ್ರಂಗಳಿಂದಲುಂ, ನವರತ್ನದಿಂದ ಕೆತ್ತಿ ಇರುವ ಹಲಗೆಗಳಂತೆ ಥಳ ಥಳಿಸಿ ಪೊಳೆಯುವ ಹಾಸಿಗೆಗಳಿಂದಲುಂ, ಗಿಳಿಗಳಂ ತೊಡಗೂಡಿದ ಸಾಲುಪದ್ಮಂಗಳಿಗಂತರಾಳವಾಗಿ ಇರುವ ಹಂಸ ಮಯೂರಂಗಳ ಸಾಲು ಸಾಲುಗಳಿಂದಲುಂ, ವಸ್ತ್ರಾಗಾರಗಳಿಂದ ಶೋಭಿತವಾದ ಪಾರ್ಶ್ವದ್ವಯದಲ್ಲಿ ಸಾಲು ಸಾಲಾಗಿ ಥಳಥಳಿಸಿ ಬೆಳಗುತಿರುವ ಚಿನ್ನದ ದೀಪಸ್ತಂಭ ಸಹಸ್ರಗಳಿಂದಲುಂ, ಸಕಲ ದೇಶಾಧಿಪತಿಗಳಿಗೆ ಯೋಗ್ಯವಾದ ಸಾಲು ಪೀಠಂಗಳಿಂದಲುಂ, ಪಚ್ಚೆಯಿಂದ ರಚಿಸಿ ಇರುವ ಜೋವೆಗಳುಳ್ಳ ಕಲ್ಯಾಣ ಜಗಲಿಯೆಂಬ ಹಸೆಯ ಮೇಲುಭಾಗದಲ್ಲಿ ದೇದೀಪ್ಯಮಾನವಾಗಿ ನಾಲ್ಕು ರತ್ನಕಂಭಗಳಿಂದ ವೊಡಗೂಡಿದ ದಿವ್ಯಮಣಿಮಂಟಪದ ರತ್ನಕಲಶಂಗಳಿಂದಲುಂ, ಶೋಭಿತವಾಗಿ ಪೃಥಿವೀಜಲಮಯವಾಗಿತನ್ನಿಂದ ನಿರ್ಮಿಸಲ್ಪಟ್ಟ ಪ್ರಪಂಚವಂನೋಡಿ ಜುಗುಪ್ಸಿತನಾಗಿ ದಿವ್ಯಜೀವರತ್ನಂಗಳಿಂತೆಗೆದು ಮತ್ತೊಂದು ಪ್ರಪಂಚವನಾಗಿ ಚತುರ್ಮುಖನು ಸೃಷ್ಟಿಸಿದನೋಯೆಂಬಂತೆ ತೋರುವ ಚಪ್ಪರಂಗಳಂ ಕಳಿಂಗರಾಜ ಭವನದಲ್ಲಿಯೂ ನರ

ಗೃಹವಾಗಿ ಬಿಡಶಿಇರುವ ಮಣಿಮಂದಿರವೆಂಬ ಹೆಸರುಳ್ಳ ಯುವರಾಜ ಭವನದಲ್ಲಿಯೂ ಬಹುವಿಸ್ತಾರವಾಗಿ ಅಲಂಕರಿಶಿ, ಮತ್ತಂ ಥರಥರವಾಗಿ ಬರುವ ಭೂಪಾಲರಿಗೆಲ್ಲಾ ಅವರಿವರಿಗೆಸರಿಯಾದ ಮನೆಗಳಂ ಬಿಡಶಿ ಅಲಂಕರಿಶಿ ಅಲ್ಲಲ್ಲಿ ಯಿಳಿವವರಿಗೆ ಬೇಕಾದ ಸಮಸ್ತ ವಸ್ತು ಮುಸ್ತೈದೆಗಳಂ ಯಥೇಷ್ಟವಾಗಿ ತಂದು ಇರಿಶಿ, ಇನ್ನು ನಾನಾ ದೇಶಂಗಳಿಂದ ಹೊರಟು ಶುಚಿಯಾದ ಮಡಿಸಂಚಿಗಳಂ ಬಟುವಾದ ಪುಟ್ಟಿಗೆಗಳಂ ಕೃಷ್ಣಾಜಿನದ ಪಾಳಂಗಳಂ, ಹಸ್ತಂಗಳೊಳಿರುವ ಪುಸ್ತಕಂಗಳು ಸಹಿತವಾಗಿ ಧರಿಶಿನಾಲ್ಕಾರು ಧೋತ್ರಗಳಿಂದಲುಂ, ಪಟ್ಟೆಮಡಿಗಳಿಂದಲು, ನರಿದಾಗಿ ಸುತ್ತಲ್ಪಟ್ಟ ಶಿರೋವೇಷ್ಟನಗಳಿಂದಲುಂ, ಕಣ್ಣುಗುಳ್ಳಿಗಳು ನೀರುಕೂಡಿಜೋಲುತ ಕಾಲ್ಗಳು ಸುಲಿದು ಉಜ್ಜಿಯಳಿಯುತ ಅಸ್ಥಿಮಾತ್ರಶೇಷವಾಗಿ ಚಿನ್ನನಘಾಯಕ್ಕೆ ಮೊತ್ತಿ ಮೊರೆಯುವ ಮೌಕ್ತಿಕಗಳಿಂದ ಕೂಡಿ ಕುಳಿತು ಇರುವರ ಕಾಲುಗಳು ನೆಲದೊಳಗೆ ಯಿಳಿಯುವಂತೆ ನಡಮ ಬರುವ ವಾಹನಾಶ್ವಗಳಿಂದಲೂ ಸಮೇತರಾಗಿ ಬಗೆಬಗೆಯಾದ ಗಂಟುಗಳಂ ಪೊತ್ತು ಉಡಿಯೊಳಗೆ ತ್ತಿಕ್ಕೊಂಡಿರುವ ಮಕ್ಕಳಗಳ ಕಾಟದಿಂದ ಆನಂ ಬೈಯುತ ಮತ್ತೆ ಸಮಾಧಾನಂಗೊಳಿಸುತ ಬರುವ ನಿಜಪತ್ನಿಗಳೊಡನೆ ತಾವು ಬಂದದ್ದು ವೊಳ್ಳೇದಾಯಿತು, ಧೊರೆಗಳಿಬ್ಬರು ಬೇರಬೇರೆಪ್ರಸ್ತವಂ ಸಂಭ್ರಮದಿಂದ ಮಾಡುತ ಬ್ರಾಹ್ಮರಿಗೆ ಬೇಡಿದ ಪದಾರ್ಥವಂ, ಪಕ್ವವಾದ ಮೃಷ್ಟಾನ್ನ ಭೋಜನಂಗಳಂ, ಧೋತ್ರ, ಶೀರೆ, ಭೂರಿದಕ್ಷಿಣಂಗಳಂ, ಮತ್ತು ಹುಡುಗನ ಮುಂಜಿಮದಿವಿಗೆ ಬೇಕಾದ ಅನುಕೂಲಮಾಡಿಕ್ಕೊಡುವರೆಂದು ಸಂತೋಷದಿಂದ ಸರಸಾಲಾಪವಂ ಮಾಡಿಕೊಂಡು ಬರುವ ವೈದಿಕಬ್ರಾಹ್ಮರಂ ಕಂಡು ಅವರು ದೇವಾಲಯಂಗಳಲ್ಲಿ ಬ್ರಾಹ್ಮರ ನಿವೇಶನಂಗಳಲ್ಲಿ ಸತ್ರಮಠಂಗಳಲ್ಲಿ ಇಳಿಯುವಂತೆ ಮಾಡಿಶಿ, ಅವರವರಿಗೆಲ್ಲಾ ಭೋಜನಂಗಳಿಗೆ ಇಷ್ಟವಾದಂತೆ ನೇಮಿಶಿ ಕೊಟ್ಟು, ಉಗ್ರಾಣಗಳಲ್ಲಿ ಶ್ವೇತಾದ್ರಿಯಂಬಂತೆ ಅಕ್ಕಿಯರಾಶಿಗಳಂ, ಕೊಳಂಗಳೊಳ್ ತುಂಬಿಇರುವ ಘೃತತೈಲಂಗಳಂ, ಕೆರೆಯಾಗಿ ಮಾಡಿರುವ ಹಾಲು ಮೊಸರುಗಳಂ, ಲೆಕ್ಕವಿಲ್ಲದೆ ಸುರದಿರುವ ಸಮಸ್ತ ಪದಾರ್ಥಂಗಳಂ ರಾಶಿ ರಾಶಿಯಾಗಿ ಸುರಿಶಿ, ಅರಮನೆಯ ಮುಂಭಾಗದೊಳ್ ನೂರಾರು ನವಬತ್ತು ವಾದ್ಯ ವಿಶೇಷಂಗಳಿಂದ ಕೂಡಿ ಇರುವ ಹಜಾರಂಗಳ ಉಭ

ಯ ಪಾರ್ಶ್ವಗಳಲ್ಲಿಯೂ ರೂಪಲಾವಣ್ಯ, ಯೌವ್ವನ, ಗಾನ, ವಸ್ತ್ರಾಲಂಕಾರಗಳಿಂದ ಭೂಷಿತರಾಗಿ ನೋಡುವರ ಮನಸ್ಸನ್ನು ಪ್ರಜ್ಞೆ ಸಹಿತವಾಗಿ ಹಾವಭಾವ ವಿಲಾಸಂಗಳ ಬಲವು ವೈಯ್ಯಾರದಿಂದ ಶಳೆಯುತ ನೂರಾರು ಒಳಿಯೊಳ್ ಕುಳಿತು ಕೆಲವರು ನಿಂತು ಕೆಲವರು ಸಂಚರಿಸುತ ಮಾತಾಡುತ ಪಾಡುತಲಿರುವ ವಾರಸ್ತ್ರೀಯರ ತಂಡತಂಡಗಳಂ ಹಗಲಿರಳು ಕಾದಿರುವಂತೆಪೇಳಿ ತಮ್ಮವಡೆಯನಾದ ವಿಜಯವರ್ಮರಾಯಂಗೆ ಸಕಲವು ಆಜ್ಞಾನುಸಾರವಾಗಿ ಸಂನದ್ಧವಾಗಿ ಇರುವದೆಂದು ವಿಜ್ಞಾಪಿಸುವ ಭೃತ್ಯಾಮಾತ್ಯರಂಕುರಿತು ವಿಜಯವರ್ಮರಾಯನು ತನ್ನ ಪುತ್ರನಾದ ಕೀರ್ತಿವರ್ಮನೊಡಗೂಡಿ ಸಮಸ್ತವಾದ್ಯಂಗಳಂ ಮುಂದಿಟ್ಟು ಸಕಲ ರಾಜಾಧಿರಾಜ ವೈಭವದಿಂದ ಸಾಮಾಜಿಕರು ಮೊದಲಾದ ಪುರಜನರು ಸಹಿತವಾಗಿ ನಡಿಯುವದೆಂದು ಕಟ್ಟುಮಾಡಿಸಿ,ಆಂದೋಳಿಕವ ಆರೋಹಣಂಗೈದು,ಪೊರಟು ಕಟಕದೊಳಿರುವ ಸುಗಂಧರಾಯ ಮೊದಲಾದ ಸಕಲರಾದ ಸ್ವಜನರಿಂದ ಕೂಡಿ ಇರುವ ಸುಚರಿತ್ರರಾಯನಂ ಅತಿಶಯವಾದ ವೈಭವದಿಂದ ಗಜತುರಗ ಆಂದೋಳಿಕರಥಗಳೆಂಬ ಯಥಾಯೋಗ್ಯವಾದ ವಾಹನಂಗಳಿಂದ ಕರೆತರುತ ತನ್ನ ಪಟ್ಟಣದ ಬಾಗಿಲಸಮೀಪದೊಳ್ ಬರುವಾಗ ಅನೇಕ ಸಹಸ್ರ ಫಿರಂಗೀ ಧ್ವನಿಗಳಿಂದಲುಂ,ತೋರಣಂಗಳ ವಲವಿನ ಗುಲಗುಲೆಂಬ ಮರ್ಮರ ಧ್ವನಿಗಳಿಂದಲುಂ, ಅಖಂಡ ಮಂಡಲಾಧಿಪ ಚಂಡವೈರಿ ವೇತಂಡ ಕಂಠೀರವ! ಕಾಮಿನೀಜನ ಮನಸಿಜಾಕಾರ! ಸೂರಹೆಮ್ಮೀರ ಬಿಯ್ಯಾರ! ಪರಾಕೆನುತ ಮುಂಭಾಗದೊಳ್ ಕೈಯೆತ್ತಿ ಪೊಗಳುವ ವೈತಾಳಿಕ ಸಮೂಹಂಗಳ ಗಂಭೀರವಾದ ಬಿರದಾವಳಿಯನಾದಂಗಳಿಂದಲುಂ,ಪ್ರಪಂಚವೆಲ್ಲವು ಶಬ್ದಮಯಂಗಳಾಗಿತೋರಲು,ಆಗವಿಜಯವರ್ಮರಾಯನು ಸುಚರಿತ್ರರಾಯನಂಕುರಿತು ಇದುರಾಜಬೀದಿಯು,ಇದುದೇವಾಲಯವು, ಇವು ಅಗ್ನಿ ಹೋತ್ರಾದಿಗಳಂ ದೊಡಗೂಡಿ ಸಕಲಶಾಸ್ತ್ರಂಗಳಿಂಪಾ ಪ್ರಸಿದ್ಧರಾದ ಸರ್ವಶ್ರೇಷ್ಠರಾಗಿರುವ ದ್ವಿಜವರ್ಯರಗೃಹಪಙ್ತಿಗಳು, ಇದು ಧನ ಮಂದಿರವು, ಇದುಧಾನ್ಯಶಾಲೆಯು, ಇದುಸೇವಕಜನ ಗ್ರಹವಾಟಿಗಳೆಂದು ವಿಜ್ಞಾಪಿಸುತ, ಪುರದೊಳಿರುವ ಸುವಾಸಿನಿಯರ ಕರಕಮಲಕಾಂತಿಗಳಿಂದ ಅತಿಕೆಂಪಾದ ಆರತಿಗಳ ಬೆಳಕಿನ ಸಂಭ್ರಮದಿ ಸರ್ವೋಪ

ಚಾರ ಚಮತ್ಕಾರ ಮರ್‍ಯಾದೆಯಿಂದ ಮಣಿಮಂದಿರವೆಂಬ ನೂತನ ರಾಜ ಭವನದೊಳ್ ಅವರನೆಲ್ಲರಂ ಇಳುಹಿ, ಸಕಲವಾದ ಮಹಾರಾಜ ಭೋಗ್ಯ ವಸ್ತುಗಳಂ ವಿಸ್ತಾರವಾಗಿ ತುಂಬಿಸಿ, ತಾನು ಎದುರಾಗಿ ಬಂದು ಪುರೋಹಿತರ ಮುಖದಿಂದ ನಾಳೆ ಮೊದಲಾಗಿ ಶುಭದಿಂದಾಗುವ ಆಭರಣಧಾರಣ, ಸ್ತಂಭ ಮುಹೂರ್ತ, ಇಷ್ಟದೇವತಾ ಸಮಾರಾಧನ, ಸುಮಂಗಲೀ ಪ್ರಾರ್ಥನ, ಸುವಾಸಿನೀಪೂಜೆ, ಅರಶಿನಶಾಸ್ತ್ರ ಮೊದಲಾದ ಉತ್ಸವಂಗಳು ನಡೆಯಬೇಕಾದ್ದರಿಂದ ತಾವು ದಂಪತಿಗಳು ಕುಮಾರಸಹಿತರಾಗಿ ಮಂಗಳಸ್ನಾನಮಂ ಮಾಡಿ ಸರ್ವವಸ್ತ್ರಾಭರಣ ಭೂಷಿತರಾಗಿ ಶಾಸ್ತ್ರದಿಂದೊಡಗೂಡಿದ ಸಂಪ್ರದಾಯಮಂ ಕರುಣಿಸಬೇಕೆಂದು ವಿಜ್ಞಾಪನಂ ಗೈಶಿದ, ತರುವಾಯ ವಿಜಯವರ್ಮರಾಯನು ಸುಚರಿತ್ರರಾಯನಂ ಕುರಿತು ಸಕಲಶುಭಕಾರ್ಯವು ವರನ ಗೃಹದಲ್ಲಿಯೇ ಮೊದಲುಮಾಡಿ ಅನಂತರ ಕನ್ಯಾಗೃಹದಲ್ಲಿ ಮಾಡತಕ್ಕದ್ದಾಗಿ ಕ್ಷತ್ರಿಯರೊಳ್ ಕರ್ನಾಟ ದೇಶಪದ್ಧತಿ ಇರುವದು ಚಿತ್ತದಲ್ಲಿ ವಿಶದವಾಗಿ ಇರುವದರಿಂದ ಅದೇಮೇರೆಗೆ ನಡೆಯುವೆನೆಂದು ಅಪ್ಪಣೆಯಂ ತೆಗೆದುಕೊಂಡು ತನ್ನ ಅರಮನೆಯಂ ಕುರಿತು ಪೋಗಲು, ಆಗ ಸುಚರಿತ್ರ ಮಹಾರಾಯನು ಲೋಕದಲ್ಲಿ ಗರ್ಭದಲ್ಲಿಯೇ ಇರುವಾಗ ನಿಶ್ಚಯವಾದ ವಧೂವರರಿಗೂ,ಜನ್ಮಕಾಲದಲ್ಲಿ ಮಧುಪ್ರಾಶನಸಮಯದೊಳ್ವಸ್ತ್ರವಂ ಹಾಸಿಗೆಯಾಗಿ ಕೊಟ್ಟು ಶಿಶುವಂ ತನ್ನದಾಗಿ ಮಾಡಿದವರಿಗೂ, ಪಣಾದಿಗಳಂ ಗೆದ್ದು ಸ್ವಯಂವರದವರಿಗೂ,ಗಾಂಧರ್ವ ವಿವಾಹದವರಿಗೂ,ಯುದ್ಧದಲ್ಲಿಜಿತರಾಗಿ ಬಂದ ಸ್ತ್ರೀಯರುಗಳಿಗೂ,ಮಾತೃವಾಕ್ಯ ಮೊದಲಾದ ಗುರು ವಚನಬದ್ಧರಾದವರಿಗೂ,ಭಗಿನೀ ಭಾವಗೋತ್ರೈಕ್ಯಮಾತ್ರ ಹೊರತಾಗಿ ಘಟನಾನುಕೂಲ ಶಕುನ ಮನೋದಯಾದಿಗಳ ವಿಶೇಷವಾಗಿ ನೋಡಕೇಳಿಸುವಿಲ್ಲ,ಎಂಬವೃದ್ಧಾಚಾರ ಲೋಕ ಮರ್ಯಾದೆಯಂ ತಿಳಿದು ಪ್ರಥಮದಲ್ಲಿ ಕಡಗ ಬಳೀ ಪ್ರಸ್ಥವನ್ನಾಗುಮಾಡಿಸಲು, ಅನೇಕವಾದ ಚಿನ್ನದ ತಟ್ಟೆಗಳಲ್ಲಿ ಇಂದ್ರಾಣೀ ಪಟ್ಟೆಶೀರೆಗಳಂ,ನವರತ್ನದ ಭೂಷಣಂಗಳಂ,ಫಲಪುಷ್ಪ,ಸೌಭಾಗ್ಯದ್ರವ್ಯ, ಮೊದಲಾದ ಸಮಸ್ತ ವಸ್ತುಗಳಂ ಅಲಂಕಾರವಾಗಿ ತೆಗಸಿಕೊಂಡು ವಿವಾಹ ಭೇರೀ, ಪಟಹ, ಪಣವ, ಕಾಹಳೆ, ಮೃದಂಗ, ಮಂಗಳ, ತೂರ್ಯ ವಾದ್ಯಮೊದಲಾದಧ್ವನಿಗಳಿಂದಲುಂ, ಸಂಪ್ರದಾಯಜ್ಞರಾದ ವಿಪ್ರ

ವಿಪ ಜ್ಞನ ಸಮೂಹದಿಂದಲುಂ, ಕುಲೀನ ಬಂಧುಗಳಾದ ಸಕಲ ನೃಪಾಲ ಸಂದೋಹದಿಂದಲುಂ, ಸಕಲ ಸಾಮಾಜಿಕರಿಂದಲುಂ, ಮಹಾ ರಾಜ ಸಂಪತ್ತಿನಿಂದಲುಂ, ಸ್ವಜನಸಹಿತವಾಗಿ ಪ್ರದಕ್ಷಿಣವಿಂದ ಹೊರಟು ಕಳಿಂಗರಾಜ ಭವನವಂ ಪ್ರೋಕ್ಷ್ಯ ಗಣೇಶನಂ ಧ್ಯಾನಿಸಿ,ಶುಭಕರವಾದ ಆಭರಣಪೂಜೆಗಳಂ ಬೆಳಸಿ,ಸೌಗಂಧಿಕಾದೇವಿಯು ಕಂಠದಲ್ಲಿ ಆರಟ್ಟದೇಶಾಧಿಪತಿಯಾದ ಕುಶಧ್ವಜ ಕುಮಾರತಿಯಾದ ಕುಸುಮಲತಾದೇವಿಯು ಕಂಠದಲ್ಲಿಯೂ ಕೂಡಾದ ಆಣಿಮುತ್ತಿನ ಮಣಿಕಟ್ಟಾಣಿ ಸರವಂ ಧರಿಸಿ,ಶತಘ್ನಿನಾದಸಹಿತವಾಗಿ ಸಮಸ್ತರಿಗೂ ಬೇಕಾದ ಉಡಿಗೆರೆಯೊಡನೆ ಫಲತಾಂಬೂಲಂಗಳಂ ಕೊಡಿಸಿ,ಉಭಯ್ರಗೃಹಗಳಲ್ಲಿಯೂ ಶುಭಮುಹೂರ್ತವಂ ನಿಬ್ಬರೂಮಾಡಿಸಿ, ತಮ್ಮ ತಮ್ಮ ಗೃಹದೋಳ್ ಸಕಲರಿಗೂ ಮೃಷ್ಟಾನ್ನ ಭೋಜನವಂಗೈಸಿ, ಸ್ವಜನದಿಂದೊಡಗೂಡಿ ಅನೇಕಭಕ್ಷ್ಯ ಭೋಜ್ಯಸಹಿತವಾದ ಬೀಗಣೆಯಂ ಮಾಡಿ,ನಿತ್ಯೋತ್ಸವಂಗಳಲ್ಲಿ ಇರುತ ಬಂದುದಿನ ದೇವರಸಮಾರಾಧನೆಯಂ ಮಾಡಿಸಿ,ಮರುದಿನಸುವಾಸಿನೀ ಭೋಜನಮೊದಲಾದಬಂಧುತ್ವದತಾರತಮ್ಯ ಮರ್ಯಾದೆಗಳ ರೀತಿಯಿಂದ ಥರಥರವಾದ ಅರಶಿನ ಶಾಸ್ತ್ರಂಗಳಂ ಯರಡು ಕಡೆಯಲ್ಲಿಯೂ ಮಾಡಿಸುತ, ಲಗ್ನಕ್ಕೆ ಮೊದಲು ದಿನದೋಳ್ ಶಾಸ್ತ್ರೋಪಕ ಮಂಗಳಸ್ನಾನ, ಕಂಕಣ ಧಾರಣಾಲಂಕಾರ, ಸಭಾಪೂಜೆ ಮೊದಲಾಗಿ ಮಾತೃಕಾಪೂಜೆ, ನಾಂದೀ,ಗೃಹಯಜ್ಞ ಕಲಶಾರ್ಚನಾದಿಗಳಂ ನೆರವೇರಿಸಿ,ದ್ವಿಜರು ಮೊದಲಾದಸಭಾಸ್ತಾರರಂ ತಾಂಬೂಲ ದಕ್ಷಿಣಾದಿಗಳಿಂದ ಸಂತೋಷಿಸಿದ ತರುವಾಯ ಉಭಯನೃಪರು ಉಪವಾಸಾದಿಸಿಯವಿಂದ ರಾತ್ರಿಯೊಳ್ ಕುಲಕ್ರಮಾಗತವಾದ ದೇವರ ಐರಣೆಯಂ ತಂದು ನೋಸಿ ವಾರಿಕಲಶ ಕನ್ನಡಿಗಳಿಂದೊಡಗೂಡಿ ಕೂಜಿಸಿದ ಮರಿದಿನದಲ್ಲಿ ಸುಗಂಧ ಧಾಮನು ಕನ್ಯಾಗೃಹವಂ ಕುರಿತು ಧಾರೆಗೆ ಹೊರಟಪರಿಯೆಂತೆಂದರೆ.— ದಿವ್ಯವಾದ ವಜ್ರದೊಳ್ ಕೊರದುಬಿರಿಸಿದ ಭಾಸಿಂಗದಿಂ ದೊಡಗೂಡಿ ತೇಜಸ್ಸುಗಳೆ ಪ್ರೊಂದಾಕಾರವಾಗಿ ಬಂದಂತೆ ಇರುವ ನವರತ್ನ ಕಿರೀಟವಂ ಮುಖಕಮಲವಂ ಕಂಡು ಪರಿಮಳವಂ ಕಂಡುಬಯಸಿ ಬಂದಿರುವ ವಜ್ರದ ದುಂಬಿಗಳಂಬಂತೆ ನಲಿಯುವ ಮುತ್ತಿನಪಚ್ಚೆಬಾವಲಿಯಂ ಧರಿಸಿ, ತಿರಗಿದ ಮಾತ್ರದಿಂದಲೆ ದಿಕ್ಕುಗಳನ್ನೆಲ್ಲಾ ಕೆಂಪಾಗಿ ಮಾಡುವ ಮಾಣಿಕ್ಯದ ತಿಲ

ಕವಂ ಮುಖದೊಳಲಂಕರಿಸಿ, ಸೂರ್ಯಮಂಡಲಕ್ಕಿಂತಲೂ ಬಹುವಾಗಿ ಹೊಳೆಯುತಲಿರುವ ಕುಂದಣದ ಕುಂಡಲಂಗಳಂ ಅನರ್ಘ್ಯವಾದ ಹಾರ ಪದಕಂಗಳಂ ಭುಜಕೀರ್ತಿ ಕರ ಚರಣಾದಿ ದಿವ್ಯಾಭರಣಂಗಳನ್ನಿಟ್ಟು ಸರ್ವಾತಿಶಯವಾದ ಪೀತಾಂಬರಾದಿ ದಿವ್ಯವಸ್ತ್ರಂಗಳಂ ಧರಿಸಿ, ಆಗತಾನೆ ತಂದಿರುವ ಕಲ್ಪ ವೃಕ್ಷಗಳ ದಿವ್ಯಮಾಲ್ಯಾಲಂಕೃತನಾಗಿ ಉದಯಿಸುವ ಬಾಲ ಸೂರ್ಯನಂತೆ ಮಣಿಮಂದಿರದಿಂದ ಹೊರಟು ಚತುರ್ದಂತವುಳ್ಳ ಮಹಾಗಜದಮೇಲೆ ಬಿಗಿದಿರುವ ರತ್ನ ಖಚಿತವಾದ ಅಂಬಾರಿಯಲ್ಲಿ ನಕ್ಷತ್ರದಿಂದೊಡಗೂಡಿದ ಪೂರ್ಣ ಚಂದ್ರನಂ ಮೀರಿಇರುವ ಮುತ್ತಿನ ಛತ್ರದ ನರಿಸದಲ್ಲಿ ಕುಬೇರನಂತೆ ಕುಳಿತು ಸುತ್ತಮುತ್ತಲುಂ ಕೆಲವು ದೇಶಾಧಿಪತಿಗಳಿಂದ ಪಿಡಿಯಲ್ಪಟ್ಟ ಚಾಮರವ್ಯಜನ ಉನಾಗರಿಗಳಂಪ್ರಕಾಶಿಸುತ ಮುಂಭಾಗದೊಳ್ ಸಾಲು ಸಾಲಾಗಿ ನಡೆಯುವ ರಾಜವರ್ಗಂಗಳಿಂದಲುಂ, ಚಿನ್ನದ ನಗಾರಿ ಮೊದಲಾದ ಸಕಲಬಿರದು ವಾದ್ಯಂಗಳ ನಾನಾವಿಧ ಧ್ವನಿಗಳಿಂದಲುಂ, ಗಗನವಂತುಡುಕಿ ಕಾಂತಿಗಳಿಂದ ಧಳಧಳಿಸುವ ಚಿನ್ನದ ಸಾಲು ಕೋಟಗೆಗಳ ಗುಂಪಿನಿಂದಲುಂ, ಜನರುಗಳು ಸಂದಣಿಸದಂತೆ ಸಾಲುಮೇಲೆ ಸರಿಯಾಗಿ ನಡೆಯಿಸಲು ಹೋಯೆಂದು ಕಟ್ಟ ಕೊಳಸುತ ರತ್ನದ ಬೆತ್ತಗಳಂ ರತ್ನದ ಕೋಲ್ಗಳಂ ಬಗೆಬಗೆಯಾಗಿ ಪಿಡಿದು ನಡೆಯುವ ಗುರಿಕಾರರುಗಳಿಂದಲುಂ, ಚಿನ್ನದ ಬೊಂಬೆಗಳಂತೆ ಧಳ ಧಳಸುತ ಕುಚಭಾರದಿಂದ ಬಳಕುವ ತಳನಡುವಿನೊಳ್ ಮಿಂಚಿನಂತೆ ಪೊಳೆಯುವ ಪ್ರೌಢ್ಯಾಣದಿಂ ಮಿರುಮಿಂಚಿನಂ ಸೊಗಸಾದ ನಗೆಮುಖದಸರದಿಂ ದೊಡಗೂಡಿದ ಕಣ್ಣುಗಳ ಕಡೆನೋಟಕ್ಕೆ ಬಲುಸೊಕ್ಕಿ ಸುರಗುವ ಯುವಜನರ ಸನ್ನೆ ಸರಸಂಗಳಂ ತಿಳಿಯುವ ಚಮತ್ಕಾರಂಗಳಂ ಪ್ರೌಢೆಯರೆಂದೆನಿಸಿ ಕಾಲ್ಗೆಜ್ಜೆಗಳ ಧ್ವನಿಗೆ ಸರಿಯಾದ ತಾಳ ಮೃದಂಗ ಧ್ವನಿಯು ಜೊತೆವೆರಸಿ ಧಿಂ ಧಿಂ ಯೆನುತ ಉಗ್ಘಡಿಸುವ ಹಿಮ್ಮೇಳಗಳ ಗತಿಗನುರೂಪವಾಗಿ ಸಂಚಿನಿಂದ ನಯದೋರಿ ಕಾಲಂಗಳನನುಸರಿಸಿ ಲಯವಂ ಬಿಡದೆ ಶ್ರುತಿಗೂಡಿ ಹಾಯಿಗೊಳಸುತ ಕಿವಿಗಿಂಪಾಗಿ ಸೊಗಸಿನ ಸುಮ್ಮಾನದಿಂದ ಪಾಡುತ ನಾಟ್ಯಂಗಳ ನಾಡುವ ಯುಳಸೂಳೆಯರ ಸಾಲುಗಳಿಂದಲುಂ, ಕೆಲಬಲದೊಳ್ ನಿಬಿಡವಾಗಿಬರುವ ಅಪ್ರೂಪವಾದ ವಿವಿಧ ವಿಚಿತ್ರ ಮಂಗಳ ವಸ್ತುಕಾರಂಗಳಿಂದಲುಂ

ಹಿಂಭಾಗದೊಳ್ ನಡೆದುಬರುವ ವನದಂತೆ ತೋರುವ ಕನಕ ರಜತಮ ಯಂಗಳಾದ ಛತ್ರಸೂರಿಪಾನಮೊತ್ತಂಗಳಿಂದಲೂನೋಡುವರಸಹಸ್ರಾಕ್ಷ ನಂಸ್ತುತಿಗೈಯುವಂತೆ ಮಾಡುತ್ತ ನಾಲ್ಕುಬೀದಿಯೊಳ್ ಮುತ್ತೈದೆಯ ರೆಲ್ಲ ಮುತ್ತಿನಾರತಿಯಂ ಪತ್ತಾಗಿಪಿಡಿದಿರುವ ದನ್ನೋಡಿ ಹಿಡಿಹೊನ್ನುಗಳಂ ಕೊಡಿಸಿ,ವಧೂಗೃಹದ ಬಳಿಯೊಳ್ ಮುತ್ತುಮಾಣಿಕ್ಯಗಳಬೆರಸಿದಧಾನ್ಯ ಗಳನ್ನೆರಚಿಸುತ ಆನೆಯಿಂದ ಇಳಿದು ಆರತಿಯನೀಕ್ಷಿಸಿ ನಿರಾಜಿಯ ನಡೆಮ ಡಿಯಮೇಲ್ ಸಕಲಮಂಗಳಕರವಸ್ತುಗಳನಿಂದಿಟ್ಟು ಕಾರುಜೋಬಿನಿಂ ದಳವಡಿಸಿದ ನಿರಾಜಿಯ ಸಿಲುವಂಗಿಯು ಸೆರಗಳಂ ಕೆಲಬಲದೊಳ್ಪಿಡಿದು ಇರಲು,ಸುಮತಿಯು ಹಸ್ತಲಾಘದಿಂ ಪರಾಕು, ಜತನ,ಬಲುಮೆ,ಪಾದಾವ ಧಾನ,ಹೆಚ್ಚರಿಕೆ,ಯೆನುತ ವಿಜ್ಞಾಪಿಸುವ ಮಂಗಳ ಹೆಚ್ಚಿನಿಂದ ದೀರ್ಘ ಮಾದ ಗಂಭೀರ ಧ್ವನಿಗಳಿಂದ ರಂಜಿತವಾಗಿ ರಾಜಬೀದಿಯ ಒಲಪಿನ ವೈ ಯ್ಯಾರದಿಂ ನಲಿನಲಿದುಜಗ್ಗುತ ಜನ್ಮಸದ ಮೋಡಿಯಿಂ ಜಯಶಿರಿಯು ಮರಿ ಯಂತೆ ತೋರುತ,ಚಿತ್ತಿನಿಯರೊತ್ತಿ ಶೋಭಾನೆಯಂಪಾಡಲು, ಉತ್ಸವದ ಸಂತೋಷದಲ್ಲಿ ಮುತ್ತಿನಿಂದಬಿತ್ತರವಾಗಿ ಬರೆದಿರುವ ರತ್ನದಹಸೆಯೊಳ್ ಕುಳಿತಿರುವಸುಗಂಧರಾಯಂಗೆ ವಿಜಯವರ್ಮರಾಯನು ಕುಸುಮಧ್ವಜ ಸಹಿತನಾಗಿ ಸುವರ್ಣಪಾತ್ರೆಗಳಲ್ಲಿ ಅರ್ಘ್ಯಪಾದ್ಯ ಮಧುಪರ್ಕಾದಿ ಭೂಷ ಣೋಪಚಾರಂಗಳಂಮಾಡಿ ಸುಚರಿತ್ರರಾಯನಂ ಕೇಳಿ, ದೇಹವಂ ತಾಳಿದ ಸೌಂದರ್ಯವೊ? ಮೂರ್ತೀಕರಿಸಿ ನಿಂದಿರುವ ಶೃಂಗಾರವೊ? ರತಿ ಮನ್ಮಥರ ವಿಲಾಸದ ಮುಂಗೈಯ್ಯರಗಿಣಿಯುಮರಿಯೋ? ಸ್ತ್ರೀರೂಪವಂ ಧರಿಸಿದ ಕ ಣ್ಣುಗಳ ಪುಣ್ಯವೊ? ಸುಗಂಧರಾಜೇಂದ್ರ ಚಂದ್ರನ ಸೌಭಾಗ್ಯದ ಕಳೆ ಯೋ? ತರುಣಿಯೆಂಬ ಸಂಜೀವನಸುಧೆಯೊ? ಇವಳು ರಾಜಕುಮಾರತಿ ಯಾದ ಸೌಗಂಧಿಕಾದೇವಿಯೋ? ಯೆಂದು ಉತ್ಪ್ರೇಕ್ಷೆಗಳಿಂದ ಬಗೆಬಗೆ ಯಾಗಿ ವರ್ಣಿಸುವಜಾಣರನು ಶೀಘ್ರ ಅತಿಪ್ರೀತಿಯಿಂ ಪೇಳುವದುಚಿತಮೆಂ ದು ಮನ್ನಿಸುತ ಬಂದು ತನು ಕಾಂತಿಯಿಂದಾ ಭರಣಂಗಳಂ ಬೆಳಗಿಸುತ ಸರ್ವಾಭರಣಂಗಳಂ ಧರಿಸಿ,ಲೋಕಾತಿಶಯವಾದ ದಿವ್ಯಾಂಬರದುಕೂಲ ಕಂ ಚುಕಾದಿಗಳಂ ತೊಟ್ಟು ಸಮಸ್ತಪರಿಮಳ ಪುಷ್ಪ ಗಂಧ ಮಾಲ್ಯಾಲಂಕೃ ತಳಾಗಿ ಹೆಜ್ಜೆಹೆಜ್ಜೆಗೆ ಮೆಟ್ಟಿದ ಬಳಿಯೊಳ್ ಮುತ್ತು ರತ್ನಂಗಳಂ ಸು

ರಿಸುತ ಬೆಳದಿಂಗಳಿಗೆ ಬೆಳಕಿನಂದ ತಿಂಗಳಂಗಗಳ ಬಂದಗಳಿಗೆ ಕುಸುಂಗಧ ರಾಜನೊಬ್ಬನೇ ಸಮನೆಂದು ತಿಳಿದು, ತನ್ನ ಕುಮಾರತಿಯಾದ ಸೌಗಂಧಿಕಾ ದೇವಿಯುಂ ಕುಸುಮ ಲತಾದೇವಿ ಸಹಿತವಾಗಿ ನಿಜಸಖೀ ಜನರಿಂದೊಡಗೂಡಿ ಪಾಡಿಸುತ ಪೀತಾಂಬರದ ಸಡಿಮುಡಿಯಿಂದ ಕರತಂದು ಮುಲಕಿನಂತೆ ಸಣ್ಣ ಅಣಿಮುತ್ತುಗಳಿಂದಬಿಗಿದಿರುವ ಗೌಸಂಪ್ರೊದ್ವಿಕಿ ಹಸೆಯೊಳ್ ತೆರೆ ಪುರಿಸ್ತ್ಲಿ ಮುತ್ತುಗಳೆಂಬಂತೆ ತೋರುವ ಧಾನ್ಯಂಗಳಂ ತುಂಬಿರುವ ಪಾತ್ರೆಯ ಮೇಲೆ ಸ್ಥಾಪಿಸಿದ ಸಮಯದಲ್ಲಿ ಬಹು ಬಗೆಯಾದ ಕಲ್ಯಾಣ ವಾದ್ಯ ಧ್ವನಿಗಳಿಂದಲುಂ, ಪಾಡುತಿರುವ ಮುತ್ತೈದೆಯರ ಕಲ್ಯಾಣ ರಾಗ ಧನಿರಾರಂಗಳಿಂದಲುಂ, ಗುಂಪಾಗಿ ಬೀಳುವ ವಿಪ್ರರ ಶುಭಮಂಗಳಾಷ್ಟಕ ಪೂರಿತದ ಮಂತ್ರ ಸ್ವರಗಳಿಂದಲುಂ ವಿವಾಹಸತ್ರಾಸನ ಜೀರಿಗೆ ಬೆಲ್ಲಂಗಳಂ ಸಂಬಂಧ ಮಾಲೆಗಳಂ ಪರಸ್ಪರವಾಗಿ ವಧೂವರರಿಂದ ಸಮರ್ಪಣಂಗೈಸುತ ತ್ರಿಪುರುಷವಾಗಿ ಗೋತ್ರಪ್ರವರಂಗಳಂ ವರ ಪೂರ್ವಕವಾಗಿ ಪುರದ ಕಡೆಯಿಂದ ಹೇಳಿಸುತ್ತ, ಸುಚರಿತ್ರರಾಯಂಗೆ ಕೈಯಂಗಿದು ವ್ಯಾಜನಕ್ಕೆರಂ ಪ್ರಾರ್ಥಿಸಿ, ಸಕಲ ನೃಪಾಲರಂ ಪ್ರಕೃತಿ ಮೊದಲಾದ ಸಕಲ ಸಭಾಜನರಂ ಸ್ವಜನ ಸುವಾಸಿನಿಯರನ್ನನುಮತಿಸುತ ಆನಂದ ಬಾಷ್ಪದಿಂ ಕೈಮುಗಿದು ಕೇಳುತ್ತ, ಸತಿಯೊಡನೆ ಕೂಡಿ ವಧೂವರ ಪೂಜೆಯಂ ಮಾಡಿ ಮಂತ್ರದಿಂದ ಸುಮುಹೂರ್ತದೊಳ್ ಸೌಗಂಧಿಕಾ ದೇವಿಯುಂ ಕುಸುಮ ಲತಾದೇವಿಯುಂ ಸಹಿತವಾಗಿ ಧಾರೆಯನೆರದು ಸುಗಂಧರಾಯನಂ ಕುರಿತು ಯಿಂತು ಮಹಾರಾಜಕುಮಾರನೆ! ನಾನು ಪುತ್ರಮಿತ್ರ ಕಳತ್ರಾದಿ ಸಹಿತವಾಗಿ ನಿನ್ನ ಸೇರಿದೆನು, ಸಕಲ ವಿಧ ಸಂರಕ್ಷಣೆಯು ನಿನ್ನಂ ಸೇರಿ ಇರುವದೆಂದು ಸುಚರಿತ್ರರಾಯನ ಮುಖವನ್ನೋಡಿ ವಿಜ್ಞಾಪಿಸಲಾಗ ಸುಗಂಧರಾಯನಿಂ ದೊಡಗೂಡಿದ ಸುಚರಿತ್ರ ಮಹಾರಾಜನು ಜಗದೊಳ್ ಸ್ತ್ರೀಸಂಬಂಧನೇ ಪ್ರಬಲವಾಗಿ ಇರುವದರಿಂದ ನಾವೆಲ್ಲರೂ ನಿನ್ನವರಾಗಿ ಯಿರುವಾಗ ಎಲ್ಲರಂ ಸಲಹುವ ಭಾರನಿನ್ನ ವಶವಾಗಿರುವದೆಂದು ನಮಸ್ಕರಿಸಿ, ಪುರೋಹಿತರಂ ಕರದು ಅಕ್ಷತಾರೋಪಣೆಯಂ ಕಂಕಣ ಮಾಂಗಲ್ಯ ಧಾರಣೆಯಂ ಕ್ರಮವಾಗಿ ಬೆಳಸಿ, ಗೌರೀ ಪೂಜೆಮೊದಲಾದ ಶಾಸ್ತ್ರ ಮರ್ಯಾದೆಯಂ ಯಥಾಸಂಪ್ರದಾಯವಾಗಿನೆರವೇರಿಸಿ, ಸಕಲ ನೃಪಾಲರಿಂದ

ಪ್ರೋದಿತೆ ಪತ್ತಿಸುವ ಮುರಾತ್ರಿಗಳಂ ನೀಕ್ಷಿಸುತ ಬಹು ಸಂಭ್ರಮದಲ್ಲಿ ಉತ್ಸವಂಗಳಂ ಬೆಳಸಿ ಸಮಸ್ತರಿಗೂ ದಿವ್ಯಮೃಷ್ಟಾನ್ನ ಭೋಜನವಂ ಮಾಡಿಸಿ. ಮತ್ತೊಂದು ಶುಭದಿನದೊಳ್ ಸಕಲವೈಭವಗಳಿಂದಾ ವರಗೃಹದೊಳಾಗುವ ಸಕಲಶಾಸ್ತ್ರ ಕಲಾಪಗಳಂ ಮಂತ್ರ ಪುರೋಹಿತರಂ ಕರಿತು ಮಾಡಿಸುವಂತೆ ಆಜ್ಞಾಪಿಸಿ, ಒಂದೊಂದು ದಿನ ಒಂದೊಂದು ಬಗೆಯಾದ ಉದ್ಯಾಲೆ, ಪ್ರದರ್ಶನ, ಸಂಗೀತ, ಸಲ್ಲಾಪ, ಹಾಸ್ಯ, ವಿನೋದ, ನರ್ತನಗಳಿಂದ ಸಕಲರಿಗೂ ಸರ್ವಾತಿಶಯವಾದ ವಸ್ತ್ರಾಭರಣಗಳಂ ಧನಕನಕ ವಾಹನಗಳಂ ಸಮರ್ಪಿಸುತ ಪ್ರಸ್ತವಂ ವಿಸ್ತಾರವಾಗಿ ಸಂಭ್ರಮದಿಂದ ದೇಶದೇಶದೊಳ್ ಹಬ್ಬುಗಳುವಂತೆ ಬೆಳಸಿ, ಮತ್ತೊಂದು ದಿನ ಕಸ್ತೂರಿ ಕೇಸರಿಗಳಿಂದಾ ರಂಗಾಗಿ ಮಾಡಿದ ವಸಂತ ಕೊಳಗಳೊಳ್ ಸಮ ಸಮವಾಗಿ ಆಡಿಸುತ ನೂರು ದಿವಸ ರಾತ್ರಿಯೊಳ್ ಕೋಟಿ ಕೋಟಿಗಳೆಂಬ ದೀವಟಿಗೆಗಳಿಂದ ಭೂಮಿಯಂ ಪ್ರಕಾಶಮುಟ್ಟು ಆಕಾಶ ಮಂಡಲವಂ ವ್ಯಾಪಿಸುವ ಬಿರುಸುಬಾಣಗಳಿಂ ವಿಚಿತ್ರವಾದ ನಾರಿಮೇಳಂಗಳಂ, ವಾದ್ಯಘೋಷಗಳಿಂ, ಭೂಮಿಯೆಲ್ಲಾ ಜನಮಯಂಗಳಾಗಿ ಗಗನವೆಲ್ಲಾ ಬಾಣಮಯವಾಗಿ ದಿಕ್ಕು ವಿದಿಕ್ಕುಗಳೆಲ್ಲಾ ವಾದ್ಯಮಯಂಗಳಾಗಿ ಸರ್ವಕಾಲದಲ್ಲೂ ಉತ್ಸವಮಯವಾಗಿ ರಾತ್ರಿ ಹಗಲೆಂಬ ಭೇದಂಗಳು ತಿಳಿಯದ ವಂದೆರಡು ದಿನ ಪ್ರಯತ್ನಗಿ ಮೆರವಣಿಗೆ ಆಗಲು, ಆಗಮಿಸುವ ಮನ್ಮಥರಾಯನು ಸುಚಿತ್ರರಾಯನು ಕುರಿತು ನಾಳೆ ಭೃಗುದೇವತ್ತಿಯಿಂ ಶೋಧಿಸಿದ ಶುಭದಿನವಾಗಿ ಇರುವದರಿಂದ ನಾಳೆರಾತ್ರಿಯೊಳ್ ಯುವರಾಜದಂಪತಿಗಳಿಗೆ ಪ್ರಾಶಗೆಪ್ರಸ್ತವಂ ಮಾಡಿ ಸಂತೋಷವಂ ಕಣ್ಣಿಂದ ನೋಡಿದ ಬಳಿಕ ಸಕಲರಂ ಸ್ವಸ್ಥಳಗಳಿಗೆ ಪ್ರೇಷಿಸುವೆನೆಂದು ಅಪ್ಪಣೆಯಂ ಕೇಳಿ, ರಾಯನಿಂದ ಬಹುಮಾನಿಸುತ ಅರಮನೆಗೆ ಬಂದು ಚಿತ್ರಕಾರ್ಯಕುಶಲರಂ ಕರೆದು ಸುವರ್ಣ ರಜತಗಳಿಂದ ಕೀಲಾಗಿ ಮಾಡಿ ತೂಗಾಡುತಲಿರುವ ಲೀಲಾಸ್ಪದವಾದ ಕಾಲುಗಳಿಂದ ಕೂಡಿ ನೀಲಾದಿ ರತ್ನಗಳ ಜಾಲಂಗಳಿಂದ ಕೆತ್ತಿರುವ ಉಪ್ಪರವಾದ ಚಪ್ಪರಗಾಲ ಮಂಚವನ್ನು ಮಂಚಿತವಾಗಿ ಮಾಡಿಸಿ, ದಿವ್ಯ ಹಂಸತೂಲಿಕಾ ತಲ್ಪೋಪಧಾನಂಗಳಿಂದಲುಂ, ಮೃದುವಾಗಿ ಥಳಥಳಿಸುವ ಪೊರಗು ಘಟು ದಿಂಬುಗಳಿಂದಲುಂ, ವಿರಾಜಿಸು ಮೇಲ್ಕಟ್ಟಿನಿಂದ ಕೂಡಿ ಸುತ್ತಲು

ಮರೆಯಾಗಿರುವ ಸೂಕ್ಷ್ಮಪಟಗಳಿಂದಲುಂ, ಘಮಘಮಿಸುವನಾನಾವಿಧ
ವಾದ ಪುಷ್ಪಗಳ ಸರಕುಚ್ಚುಗಳಿಂದಲುಂ, ವಜ್ರದಂತೆ ಪ್ರೊಳೆಯುವರಾಣಾ
ದೀಪಂಗಳಿಂದಲುಂ, ನಾನಾತರಂಗಳಾಗಿರುವ ಪರಿಮಳ ವಸ್ತುಗಳಿಂದಲುಂ,
ಗೃಹವನಲಂಕರಿಸಿ, ಸಕಲ ಸನ್ನಾಹದಿಂ ರಾತ್ರಿಯೊಳ್ ಸುಗಂಧರಾಜನಂ
ಕರತಂದು ಅಪೂರ್ವವಾದ ಮಹಾರಾಜಭೋಗ್ಯವಾಗಿರುವ ದಿವ್ಯ ಪದಾ
ರ್ಥಂಗಳಂ ಮೃಷ್ಟಾನ್ನದಿಂ ದೊಡಗೂಡಿ ಸೌಗಂಧಿಕಾ ದೇವಿಯುಂ ಕೂಡ
ಕುಳ್ಳಿರಿಸಿ ಸಹ ಭೋಜನವಂ ಗೈದತರುವಾಯ ಯುವರಾಜ ದಂಪತಿಗಳು
ನೂತನವಾದ ದಿವ್ಯಾಭರಣಂಗಳಂ ಧರಿಸಿ, ನಿಜನವಾಗಿ ಏಕಾಂತದಿಂದ ಶಯ
ನ ಗೃಹವಂ ಪ್ರವೇಶಿಸಿ ದಿವ್ಯಪರ್ಯಂಕದೊಳ್ ರತಿ ಮನ್ಮಥರಂತೆ ಕುಳಿ
ತು ಗಂಧ ಪುಷ್ಪ ಕರ್ಪೂರ ವೀಳ್ಯಗಳಂ ಪರಸ್ಪರ ಮುಖದಿಂದ ಸಾರಂ
ಗ ವೀಣೆ ಸಂಗೀತಗಳ ಸಾಮರ್ಥ್ಯವಂ ತೋರಿಸುತ ಸರಸ ಸಲ್ಲಾಪ ಚಾ
ಟೂಕ್ತಿಗಳಿಂದ ಸುಗಂಧ ಮಹಾರಾಯನು ತನ್ನ ರಾಣಿಯಂ ಕುರಿತು ಅ
ರಳಿದ ಪುಷ್ಪದ ವಾಸನೆಯು ಮೊಗ್ಗಿನೊಳಿರುವದೆ? ಎಳದಾದ ಗಿಣಿಯೇನು
ಹಾರುವದೆ? ಎಳೆಕರುವು ಹೊರೆಯಂತಾಳುವದೆ ಹೇಳೆನಲಾಗಕಾಂತೆಯು
ಸಸುನಕ್ಕು ರಾಯನಂ ಕುರಿತು ಮೊಗ್ಗಿನಲ್ಲಿ ಕೇವಲ ಪರಿಮಳ ಮಾತ್ರವಲ್ಲ
ಮತ್ತು ದಿವ್ಯಮಕರಂದತುಂಬಿ ಇರುವದು, ಸನಿದಲ್ಲದೆ ತಿಳಿಯದು ಗಿಣಿಮರಿ
ಯಾಗಿಪುಟ್ಟಿ ಹಾರುವವರಲ್ಲಿಯೋಚನೆ ಯಾಕೆ, ಕರುಗಳಿಗೆ ಮೇಲೆ ಲಂಘಿ
ಸುವಂತೆ ಲಂಘನೆಯುಂಟು ಪಿಡಿಯಲವು ಕಾಣುವದು ಯೆಂದುಸೂಚಿಸೆಯಾ
ಗಿನುಡಿದು ಮತ್ತೆ ಕಾಂತನಂ ಕುರಿತು ಮತ್ಸ್ಯದಮರಿಗೆ ಈಜುವವಂ ಕಲಿಸು
ವರ್ಯಾರು? ಸಮುದ್ರದ ಆಳವಂ ಕಂಡವರಿಲ್ಲ, ಭೂಮಿಯಂ ನೆಲಗೊಳಿಸು
ವ ಕರ್ಷಕನುಂಟು; ತಿಳಿದು ಹೇಳಲು ನಿಮ್ಮ ಪಾದಂಗಳಿಗೆ ಗೌಡಿಯಾಗಿರು
ವೆನೆಂದು ಕೋಕಿಲೆಯಂತೆ ಸಣ್ಣನಾಗಿ ಚಮತ್ಕೃತಿಯಿಂದ ನುಡಿಯುವ
ನಿಜಕಾಂತೆಯ ಕೊಬ್ಬಿದ ಜವ್ವನದ ಉಬ್ಬರದಿಂದ ತಬ್ಬಿ ಮುದ್ದಾಡುತ
ದಶವಿಧ ಚುಂಬನವಂಗೈದು ಕಳದುಂಬಿರುವ ಯಳೆನಗೆ ಮುಖದನೊಗಸು
ತ್ತ ಕೆಂದುಟಿಯು ಸುಖದನೊಂದಿಸಿಂಬಲು ಕೆಂಪಾಗಿ ಪರಿಮಳಗಳೊಡಗೂ
ಡಿದ ಯಳೆ ವೀಳ್ಯದ ರಸದೊಳ್ಬೆರದಿರುವ ಹೃದಯಾನುರಾಗದಿಂದ ಅತಿಕೆಂ
ಪಾಗಿ ಅಮೃತವಂ ಸುರಿಯುವ ಸಮಯದೊಳ್ ಅಧರ ಪಾನಂಗೈದು

ಸೀತ್ಕಾರದಿಂ ದೊಡಗೂಡಿ ಪ್ರೇಯುಬ್ಬಿ ಮದವೇರಿ ತನುವರಿತು ರತಿಸುಖ
ವೆಂಬ ಸಾಗರದೊಳ್ ಮುಳುಗ್ಯಾಡಿ ಮದನಮಹಾಶಾಸ್ತ್ರವಂ ಕಡೆ
ಗಂಡು ದ್ವೈತವಂ ಮರೆತು ದಂಪತಿಗಳೀರ್ವರು ವಿಶಿಷ್ಟವೇಷದಿಂ ಅದ್ವೈ
ತವಂತಾಳ್ದು ಆನಂದಾನುಭವವಂ ಮಾಡುತ ಚಂದ್ರನಂ ನೋಲಿಸುವ ನಖ
ಕ್ಷತದಿಂದಲುಂ, ನಕ್ಷತ್ರಗಳಂತೆ ಇರುವ ಸ್ವೇದಬಿಂದುಗಳಿಂದಲುಂ, ಯು
ಚ್ಚರಗೊಂಡು ಆ ಬಳಿಕ ನಿದ್ರಾಸುಖದೊಳಿರಲು, ಅರುಣೋದಯಸಮ
ಯದಲ್ಲಿ ಮರ್ಯಾದೆಯಿಂ ನಡೆಯುವ ವಾದ್ಯಗಳುದಯರಾಗಂಗಳಿಂ ಗಿಳಿ
ಕೋಕಿಲೆ ಮೊದಲಾದ ಪಕ್ಷಿಗಳ ಕಲಕಲರವಗಳಿಂ ನವಸಂಗಮದ ಲಜ್ಜೆ
ಯಿಂದೆಚ್ಚೆತ್ತು ನಿಜಕಾಂತೆಯು ಮುಖಬಾಹು ವಸ್ತ್ರಾದಿಗಳ ಚಲನದಿಂ
ಯುಚ್ಚರಗೊಂಡು ಸುಗಂಧರಾಜನು ಬಾಲೆಯಂ ತಕ್ಕೈಸಿ ಮುದ್ದಿಟ್ಟು
ಮುಂದೆ ಕಳುಹಿ,ತಾನೆದ್ದು ಶತಪಥ ಮೊದಲಾದ ಮಹಾರಾಜರ ಸ್ವಭಾವ
ದಿಂದ ಸ್ನಾನ ಸಂಧ್ಯಾದಿಗಳಂ ಮಾಡಿ, ಆಗ ದಂಪತಿ ಸಹಿತನಾಗಿ ಅಲ್ಲಿಗೆ
ಮಧುರವಾದ ಆರೋಗಣೆಯಂ ಮಾಡಿ ಸತಿ ಸಹಿತ ನಿಜ ಭವನಕ್ಕೆ ಬಂ
ದು ದಂಪತಿಗಳೀರ್ವರು ಸುಚರಿತ್ರರಾಯ ಗುಣವತೀ ದೇವಿಯರಡಿಗಳಿಗೆ
ರಗಿ ದಿನ ಮಣಿಮಂದಿರವೆಂಬ ಅರಮನೆಯಲ್ಲಿ ಸುಖದಿಂದ ಇರಲು, ಮ
ರುದಿನದಲ್ಲಿ ಸುಚರಿತ್ರರಾಯನು ಗುಣವತೀದೇವಿಯೊಡನೆ ಮಾತನಾಡಿ ಚಿ
ರಂಜೀವಿಗಳಾದ ಮಡದಳಿಗರಂ ಕರದುಕೊಂಡು ನಿಜಪುರವಂ ಪ್ರವೇಶಿಸ
ಬೇಕೆಂದು ನಿಶ್ಚಯಿಸಿ ವಿಜಯವರ್ಮ ಕುಸುಮಧ್ವಜ ಮೊದಲಾದ ನೃಪಾಲ
ರಂ ಕರಸಿ, ಸಕಲ ಸಮ್ಮತಿಯಿಂದ ಸುಬುದ್ಧಿಯಂ ಕರದು, ರತ್ನಪುರಿಯಂ
ಕುರಿತು ಯಲ್ಲರಿಂ ದೊಡಗೂಡಿ ತೆರಳುವೆವಾಗಿ ಸಕಲ ಮಾರ್ಗೋಪಕರ
ಣಾದಿಗಳಿಂದ ಜೊತೆಯಾಗಿ ಸಮಸ್ತ ಸೈನ್ಯಂಗಳು ಈಗಲೇ ಹೊರಡುವಂತೆ
ಪ್ರಯಾಣ ಭೇರೀ ವಾದ್ಯಗಳಂ ಸನ್ನೆಗೊಳಿಸಿ, ಸೇನಾಪತಿಯಿಂ ದೊಡಗೂ
ಡಿ ಕಳಿಂಗಪುರದ ಮುಂಭಾಗದಿಂನಾಲಾಗಿ ನಡೆಯುವಂತೆ ಕಟ್ಟು ಮಾಡಿಸಿ,
ನೀನು ಸೌಗಂಧಿಕಾದೇವಿ ಕುಸುಮಲತೆ ಮೊದಲಾದ ಅಂತಃಪುರದ ಅರಸಿ
ಯರ ಗೌಸು ಪಲ್ಲಕ್ಕಿಗಳ ಸಮೀಪದೊಳ್ ಮಿತಜನದಿಂದ ಜಾಗ್ರತೆಯಾ
ಗಿ ಬರುವದೆಂದು ಆಜ್ಞಾಪಿಸಿ, ಸುಚರಿತ್ರರಾಯನು ನಾಲ್ಕುದಂತವುಳ್ಳ ಮ
ಹಾಗಜದಲ್ಲಿ ಸುಗಂಧರಾಯನಂ ಮಹಾರಾಜ ವೈಭವದಿಂದ ಕುಳ್ಳಿರಿಸಿ

ವಿಜಯಪರ್ಮಂಗೆಪಣಾಶ್ವಮಂ ಕುಸುಮಧ್ವಜಗೆ ಉಲೋಳಕವಂಕೊಡಿಸಿ, ತಾಪ ಪ್ರೋಯಮಯಾನವೆಂಬ ಪುಷ್ಪಕದಲ್ಲಿ ಕುಳಿತು ಕಲ್ಪವೃಕ್ಷ ಕಾಮಧೇನು ಚಿಂತಾಮಣಿ ವಜ್ರಾಯುಧಂಗಳಂ ಬಳುವಳಿಕೆಯಾಗಿ ವಿಜಯವರ್ಮ ಕುಸುಮಧ್ವಜರಾಯರಿಂದಲುಂ ತಮ್ಮ ತಮ್ಮ ಕುಮಾರತಿಯರಿಗೆ ಬಲು ಪ್ರೀತಿಯಾಗಿ ಕೊಡಲ್ಪಟ್ಟ ನಾನಾಬಗೆಯಾದ ನವರತ್ನಾಭರಣಂಗಳಂ ವಿಚಿತ್ರವಾದ ಪೀತಾಂಬರಾದಿ ವಸ್ತ್ರಂಗಳಂ ನವರತ್ನಮಯವಾದ ಬಗೆಬಗೆಯಾದ ಬಳುವಳಿಕೆಪಾತ್ರಗಳಂ ಹತ್ತು ಸಾವಿರ ಕರೆಯುವಹಸು, ಮಹಿಷಿಗಳಂ, ಲಕ್ಷ ಕುದುರೆಗಳಂ, ಹತ್ತುಸಾವಿರ ಗಜಗಳಂ, ಸರ್ವಾಭರಣಾಲಂಕೃತರಾದ ಐವತ್ತು ಸಾವಿರ ಚೇಟೀ ಜನಂಗಳಂ ಅಸ್ನೂ ಲೆಕ್ಕವಿಲ್ಲದ ಧನಕನಕ ವಸ್ತು ವಾಹನಂಗಳು ಮುಂತಾದ ಯೌತಕವೆಂಬ ಮಹಾವಸ್ತುಗಳಂ ಜಾಗ್ರತೆಯಿಂದ ತರುವಂತೆ ಕೆಲವು ಮಂತ್ರಿಗಳಿಗೆ ನಿರೂಪಿಸಿ, ಉಭಯಸೇನೆಗಳ ವಾದ್ಯಧ್ವನಿಯು ತಾಳಗತಿಗ ಸರಿಯಾಗಿ ತೋರುವ ಫಿರಂಗೀ ಧ್ವನಿಯು ನಭ್ರದಿಂದ ಸಮಸ್ತದಿಕ್ಕುಗಳು ಪ್ರತಿಧ್ವನಿಯಾಗಿರುವ ಸಮಯದಲ್ಲಿ ಸುಚರಿತ್ರರಾಯನು ಸೇನಾ ಹಿಂಭಾಗದಿಂದ ಮುಂದಣ ಸೈನ್ಯದ ಪುರೋಭಾಗದವರಿಗೆ ಹದಿನಾರು ಯೋಜನವಾಗಿ ಕಟ್ಟಿನಡೆದು ಬರುವನಿಜ ಸೈನ್ಯವಂ ನೋಡಿ, ಚೋದ್ಯಗೊಂಡು ಮನದೊಳಗೆ ಲೋಕಮಾತೆಯಂ ನೆನದು ಅಡಿಗಡಿಗೆ ಸುಗಂಧರಾಯಂಗೆ ಸ್ವಸ್ತಿ ಆಗಲೆಂದು ಪೇಳುತ, ಮಹಾರಾಜಾಧಿರಾಜ ವೈಭವದೊಳ್ ಸಕಲವಿಧ ಸಂಪತ್ತಿನಿಂ ಕೂಡಿಗೂಡಿ ಬಿಸಲುಬೀಳದಂತೆ ತಂಪಾಗಿ ಅಲ್ಲಲ್ಲಿರುವ ಅರವಟ್ಟಿಗೆ ಸತ್ರ ಬಿಡದಿ ಬಿಡಾರಂಗಳೊಳ್ ನಿರವಧಿಕವಾಗಿ ಮಾಡಿರುವ ಸಕಲ ಪದಾರ್ಥಂಗಳಂ ಗ್ರಹಿಸಿ, ಮಹಾ ಸೇನೆಗಳು ಸಂತುಷ್ಟವಾಗಿರುವಂತೆ ಬರುತ ಬರುತ ಅಲ್ಲಲ್ಲಿ ಗೊತ್ತಾಗಿರುವ ಬಳಿಗಳಲ್ಲಿ ಇಳಿಯುತರಾತ್ರಿಯೊಳ್ ಸಕಲರಂ ವಿಶ್ರಮಂ ಗೊಳಿಸಿ ಮರುದಿನದೊಳಿಳಿದ ಬಳಿಯಂ ಬಿಟ್ಟು ತೆರಳುತ ಈಪರಿಯಿಂದ ಸಂಖ್ಯೆಗಳಮೀರಿರುವ ನಿಜಸೈನ್ಯಗಳ ಸಂಭ್ರಮದಿಂದ ದುಷ್ಯಂತರಾಯನಂತೆ ಮೆರೆಯುತ ಮುದಗೊಂಡು ಮಣಿಪುರದಿಂದ ಬಂದಿರುವ ಅಮಾತ್ಯಮೊದಲಾದ ಸಾಮಾಜಿಕರಸಲ್ಲಾಪದಿಂದ ಮಣಿಪುರದ ಸಮೀಪಕ್ಕೆ ಬರುತಿರಲು, ಆಗ ಘುಡಿಘುಡಿಸಿ ಮೊರೆಯುವ ಶತಘ್ನಿ

ಶಬ್ದಂಗಳು ಅನೇಕವಾದ್ಯಘೋಷಗಳುಸಮಸ್ತದೇಶಂಗಳಗೆಲ್ಲಾ ಪುರಪ್ರವೇಶ ಸಮಯಮಂ ತಿಳಿಯಿಸಲು, ರಾಜಾಜ್ಞೆಯಿಂದ ಜೋಡಿಸಿಂತೆ ಪೊಳೆಗಳು ಮುತ್ತು ಪಟ್ಟೆಗಳಿಂದ ಮಾಡಿರುವ ತೋರಣ ಪತಾಕ ಚಪ್ಪರದ ಅಲಂಕಾರಗಳಿಂದ ಅಲಕಾ ಪುರಿಯಂತಿರ್ಪುದಂ ವಿರಾಜಿಸುವ ನಿಜನಗರವಂ ಪ್ರದಕ್ಷಿಣವಾಗಿ ಸಂಗೀತವಾದ್ಯಮಂ ಮುಂದಿಟ್ಟು ಸುಮಂಗಲಿಯರ ಮಂಗಳದ್ರವ್ಯಗಳಿಂ ಕೂಡಗೂಡಿ ಶುಭಕರವಾದ ಆರತಿಯಂ ಯುವರಾಜದಂಪತಿಗಳಿಗೆ ಬೆಳಗಿಸುತ್ತ ಕಾಲಜ್ಞರಿಂದ ಸೂಚಿತವಾದ ಶುಭಮುಹೂರ್ತದೊಳ್ ವಧೂಪ್ರವೇಶವಾಗಿ ಪೇಳುವ ಶಾಸ್ತ್ರದಿಂದ ಸೌಗಂಧಿಕಾದೇವಿಗೆ ಕುಸುಮಲತೆಗೆ ಸಹಾ ನೀರೆಯುಂ ತುಂಬಿಸಿದ ಪ್ರಸ್ಥವಂ ಬೆಳಸಿ, ಗರ್ಭದೊಳಿರುವ ಶಿಶುಗಳಿಗೂ ಮರಿಸುವಂತೆ ಯಥಾಯೋಗ್ಯವಾಗಿ ಉಡುಗೆರೆ ಉಚಿತಂಗಳಂ ಫಲತಾಂಬೂಲಂಗಳಂ ಭರಭರವಾಗಿಕೊಡಿಸಿ, ಭೂಮಂಡಲದೊಳಿರುವ ಸಮಸ್ತರಿಗುಂ ಉತ್ಸವದ ಊಟೋಪಚಾರಂಗಳಂ ನಿರತಿಶಯವಾಗಿ ಮಾಡಿಸಿ, ತಾನು ಪುತ್ರಮಿತ್ರ ಕಳತ್ರ ಬಂಧು ಮೊದಲಾದ ಸ್ವಜನರಿಂ ದೊಡಗೂಡಿ ದಿವ್ಯ ಮೃಷ್ಟಾನ್ನ ಭೋಜನಂ ಗೈದು, ಸುಖದಿಂದಿರುತ್ತಿರುವದಂ ನೋಡಿ ಸಂತೋಷಪಡುತ್ತಾ ಯಿರುತ್ತಿರಲು;—

ಒಂದಾನೊಂದು ದಿವಸದೊಳ್ ಸುಚರಿತ್ರರಾಜನು ದೀಪದಿಂ ಪುಟ್ಟಿಯಿರುವ ದೀಪಟಿಗೆಯಂತೆ, ತ್ಯಾಗದಿಂ ಜನಿಸಿರ್ಪ ಸತ್ಕೀರ್ತಿಯಂತೆ, ಧರ್ಮದಿಂ ಬೆಳದಿರುವ ವೈಭವದಂತೆ, ಮನಸ್ಸಿನಿಂ ಪುಟ್ಟಿಯಿರುವ ಆಶೆಯಂತೆ, ಒಂದುದೇಶಾಧಿಪನಾದ ತನ್ನಿಂದಪುಟ್ಟಿ ತಾನೇ ಸಕಲರಿಗಿಂತ ವಿಶ್ರಾಂತಮಾದ ಅನಂತಾನಂತ ಕೀರ್ತಿಪ್ರತಿಷ್ಠಾಪಕನಾಗಿರುವ ಸುಗಂಧರಾಜ ಕುಮಾರನಂ ತಿಳಿದು ತನಗೆ ತಾನೇ ಯೋಚಿಸುತ್ತ ಬ್ರಹ್ಮಾಧೀನವಾದ ಚಿದಚಿದ್ವಸ್ತುಗಳಲ್ಲಿ ಚಿದ್ರೂಪವಸ್ತುವೇ ಶ್ರೇಷ್ಠವು. ಅವಳೊಳಗೆ ತರುಲತಾ ಗುಲ್ಮ ಕ್ರಿಮಿ ಕೀಟಗಳಿಗಿಂತಾ ಪಕ್ಷಿಮೃಗ ಜನ್ಮಗಳೇ ಶ್ರೇಷ್ಠವು, ಅದಕ್ಕಿಂತ ಮಾನುಷ್ಯ ಜನ್ಮವು ಅತಿಶ್ರೇಷ್ಠವು. ಅದರೊ ಪುರುಷ ಜನ್ಮಉತ್ತಮವು; ಅಂಥಾ ಪುರುಷಜನ್ಮವೂ ಕೂಡ ಬ್ರಹ್ಮಕ್ಷತ್ರ ವರ್ಣಂಗಳೊಳು ದುರ್ಲಭವು, ಕೇವಲ ಸ್ತ್ರೀ ಕ್ಷತ್ರ ವಂಶೋತ್ಪತ್ತಿ ಇದ್ದರೂ ಬಾಲ್ಯ, ಕೌಮಾರ, ಯೌವನ, ವಾರ್ಧಕ್ಯ ಮೊದಲಾದ ಅವಸ್ಥೆಗಳಿಂದ ಪಾಪವೇ ಲಭಿಸುವದೆಂದು ಭಾ

ವಂತೆಸು ಬ್ರಹ್ಮಚರ್ಯ ಗಾರ್ಹಸ್ಥ್ಯ ವಾನಪ್ರಸ್ಥ ಸನ್ಯಾಸಿಗಳೆಂಬನಾಲ್ಕು ಆಶ್ರಮಂಗಳನ್ನುಂಟುಮಾಡಿ ಈಕ್ರಮದಿಂದ ಚೇತನರು ಪೂರ್ವ ಪೂರ್ವಾಶ್ರಮಂಗಳಿಂತಾಳ್ದು ಜುಗುಪ್ಸಿತರಾಗಿ ಉತ್ತರೋತ್ತರಾ ಶ್ರಮಂಗಳಂಗ್ರಹಿಸಿ, ಇಹಭೋಗವನ್ನೆ ಸುಖವಿಶ್ವಿತನ್ನಂ ಶೇರಲೀ ಎಂದುಕೃಪೆಯಿಂದಾಜ್ಞಾಪಿಸಿದ ಮಾರ್ಗಕ್ರಮದಿಂ ಪರಿಭಾವಿಸುವ ಸುಬುದ್ಧಿಮೊದಲಾದ ಅಷ್ಟಪ್ರಧಾನಿಗಳೊಡನೆ ಯೋಚಿಸಿ, ಮನೋಜ್ಞಾನವೃದ್ಧರಾದ ಪುರೋಹಿತಾದಿ ದ್ವಿಜಶ್ರೇಷ್ಠರಂ ಸಮ್ಮತಿಸಿ, ಇಸ್ನುಪ್ರಿಯರಾದ ಸಮಸ್ತ ಹಿತಜನರಂ ಕರಶಿ, ಅವರಂ ಕುರಿತು ಒಂಧದಿಂ ಸಲಹುವ ರಥದಂತೆ, ಮಳೆಗಾಲದ ಅರವಟ್ಟಿಗೆ ಯಂತೆ ಚಂದ್ರಕಿರಣದೊಳರುವ ಕಮಲ ಸಮೂಹದಂತೆ, ಜರೆಯಿಂದ ಗಳಿತವಾದ ಶರೀರವುಳ್ಳನಾದ ನಾನು ದೀರ್ಘಾಯುಷ್ಮಂತನಾಗಿ ಶುಕ್ಲಪಕ್ಷದ ಬಿದಿಗೆ ಚಂದ್ರನಂತೆ ವರ್ಧಿಷ್ಣುವಾಗಿಯಿರುವ ಸುಗಂಧರಾಜ ಕುಮಾರಂಗೆ ಮಹಾ ಪಟ್ಟಾಭಿಷೇಕವಂಮಾಡಿ ನಿಜ ಸಿಂಹಾಸನದೊಳ್ ಸ್ಥಿರ ಸಾಮ್ರಾಜ್ಯ ವೈಭವದಿಂದ ಪ್ರತಿಷ್ಠಿತನಾಗಿ ಮಾಡಿ ಸಕಲರಾಜ್ಯವೈಭವವಂ ಸುಗಂಧರಾಯನೋಳ್ ಸ್ಥಿರೀಕರಿಶಿ ಕಣ್ಗಳಿಂದ ಸಂತೋಷವಾಗಿ ನೋಡಿ ವಿಶ್ರಾಂತಿ ಸುಖದಿಂದ ಸಕಲವಾದ ಕ್ರತುಗಳಂ ಮಾಡಿ ಪುಣ್ಯಲೋಕವಾಸವೆಂಬ ನಿತ್ಯ ಸುಖಕ್ಕೆ ಸಾಧನವಂ ಮಾಡಿಕೊಳ್ಳುವೆನೆಂದು ನೀತಿಯಿಂದ ವಿಹಿತವಾಗಿ ಪೇಳಲು, ಆಗ ಸಕಲರೂ ಅದು ಸರ್ವ ಶಾಸ್ತ್ರಸಮ್ಮತವಾಗಿ, ಸರ್ವರಿಂದಲೂ ನಿಶ್ಚಿತವೆಂದು ವಿಜ್ಞಾಪಿಸಿದ ತರುವಾಯ ಸುಚರಿತ್ರರಾಯನ ಅಪ್ಪಣೆಯಿಂದ ವೃದ್ಧರಾದ ಸುಬುದ್ಧಿ ಮೊದಲಾದಮಂತ್ರಿಗಳು, ಸುಮತಿ ಮೊದಲಾದ ಪ್ರಕೃತಿಗಳು ಪಟ್ಟಾಭಿಷೇಕಕ್ಕೆ ಬೇಕಾದ ಸಹಸ್ರಸ್ತಂಭ ಮಂಟಪವಂ ಸಹಸ್ರಕಲಶ ವಸ್ತ್ರಾದಿಪ್ರತಿಮೆಗಳಂ ಸಜ್ಜುಮಾಡಿಸಿ, ಐನೂರು ಸುವರ್ಣ ಕಲಶಗಳಿಂದ ಚತುಸ್ಸಾಗರ ಮಹಾನದೀ ತೀರ್ಥಂಗಳಂ ತರುವಂತೆ ನೇಮಿಸಿ, ದೇಶಗಳಿಂದಬರುವ ನೃಪಾಲರಂ ಶಾಸ್ತ್ರಜ್ಞರಾದ ವಿಪ್ರವರ್ಯರಂ ಕರಿಶಿ, ವೇದಶ್ರುತರೆಂಬ ಪುರೋಹಿತರಂ ಮುಂದಿಟ್ಟು ಕಪಿಲಾದಿಧೇನುಗಳಂ ವ್ಯಾಘ್ರ ಮೃಗಾಜಿನಂಗಳಂ ದಧಿಪಿಷ್ಟ ಪಲ್ಲವ ಅಕ್ಷತೆ ಪುಷ್ಪ ಫಲ ದೂರ್ವಾದಿಗಳಂ ಕನ್ಯಕಾಷ್ಟಕ ತಿಲಸರ್ಷಪ ದರ್ಪಣ ಕ್ಷೀರಾದಿಗಳಂ ಗಜಾಶ್ವ ರಥಂಗಳಂ ಶ್ವೇತಛತ್ರ ಶಂಖ

ಧನ ರತ್ನ, ಶತೌಷಧಿಗಳು ಮುಂತಾದ ಸಮಸ್ತವಸ್ತು ಮುಸ್ತೈದಿಗಳಂ ಸಜ್ಜುಮಾಡಿಸಿ, ಮುತ್ತುಮಾಣಿಕ್ಯ ಪವಳಂಗಳಿಂದ ಅಲಂಕೃತವಾದ ಸಹಸ್ರಸ್ತಂಭಮಂಟಪದ ಮಧ್ಯದಲ್ಲಿ ಸಹಸ್ರದಳಕಮಲ ಪೀಠವಂ ಐದು ಲೋವೆಗಳು ಸಹಿತವಾಗಿ ಕಲ್ಪಿಸಿ, ಕದಳೀಸ್ತಂಭಾದಿ ನಾನಾವಿಧ ಚಿಗುರುಗಳಿಂದಲೂಂ, ಪಂಚವರ್ಣದ ರಂಗವಲ್ಯಾದಿಸ್ವಸ್ತಿಕಾದಿಗಳಿಂದಲೂಂ, ಅಲಂಕರಿಸಿ, ಸುತ್ತಲುಂ ಯಥಾಸಂಪ್ರದಾಯ ಶಾಸ್ತ್ರರೀತಿಯಿಂದ ಕಲಶವಸ್ತ್ರಾದಿಗಳಂ ಲಾಜಾದಿಗಳಂ ದೊಡಗೂಡಿ ಪ್ರತಿಷ್ಠಿತಂಗಳಾಗಿಮಾಡಿಸಿ, ಸಕಲಸಾಮಾಜಿಕರಿಂದ ತುಂಬಿ ಇರುವ ಮಂಟಪಕ್ಕೆ ಸುಗಂಧರಾಯನಂ ಮುಖ್ಯ ಮಹಿಷಿಯಾದ ಸೌಗಂಧಿಕಾದೇವಿ ಸಹಿತವಾಗಿ ಬರುವಂತೆ ವಿಜ್ಞಾಪನಂ ಗೈಯಲು, ಆಗ ಸುಚರಿತ್ರರಾಯನು ತನ್ನ ಕುಮಾರನಾದ ಸುಗಂಧರಾಯಂಗೆ ಸೌಗಂಧಿಕಾ ದೇವಿಸಹಿತವಾಗಿ ಸಕಲ ಸಂಭ್ರಮದಿಂದ ಮಂಗಳಸ್ನಾನವಂ ಮಾಡಿಸಿ, ಕೌತುಕಸೂತ್ರ, ರಕ್ಷಾಬಂಧನ, ದೀಕ್ಷಾ ವಸ್ತ್ರಾದಿಗಳಂ ಪಟ್ಟಾಭಿಷೇಕ ವಿಧಾನಜ್ಞರಾದ ಬ್ರಾಹ್ಮರ ಮುಖವಚನಾನುಸಾರವಾಗಿ ಮಂತ್ರಾದಿಗಳಿಂದ ನಿಜದೇವತಾ ಮಂದಿರೋತ್ತಮದಲ್ಲಿ ಧಾರಣಂಗೈಸಿ, ಸಮಸ್ತವಾದ ಬಿರುದುವಾದ್ಯಂಗಳ ಧ್ವನಿಗಳಿಂದಲುಂ, ಬ್ರಾಹ್ಮರಿಂದ ಪೇಳಲ್ಪಡುವ ವೇದ ಘೋಷಗಳಿಂದಲೂಂ, ಸುವಾಸಿನೀಯರು ಪಾಡುವ ಪದಪದ್ಯಂಗಳಿಂದಲೂಂ, ಅಷ್ಟಮಂಗಳದ್ರವ್ಯ, ಕಲಶ, ಕನ್ನಡಿ, ಓಷಧಿದ್ರವ್ಯ, ಕನ್ಯಾಷ್ಟಕ ಮೊದಲಾದ ಶುಭವಸ್ತುಗಳ ಸಂದೋಹವಂ ನಡೆಮಡಿಯು ಮೇಲ್ಕುಲಕ್ರಮಾಗತವಾದ ಪಟ್ಟಖಡ್ಗಮಂ ಪಿಡಿದುಕೊಂಡು ಬರುವ ಸುಗಂಧರಾಯಂಗೆ ಪಟ್ಟಾಭಿಷೇಕ ಮಂಟಪದ ಪುರೋಭಾಗದಲ್ಲಿ ಪಂಚವರ್ಣಗಳುಳ್ಳ ರಕ್ಷಾಕರವಾದ ಆರತಿಗಳಂ ಮಾಡಿಸಿ, ಕ್ಷೀರನೀರಗಳಿಂದ ಮುಖ್ಯಸೇನಾಧಿಪತಿ ಮುಖಪಾದಪ್ರಕ್ಷಾಳನಂಗೈಸಿ ಮಂಟಪದಲ್ಲಿ ಸುಗಂಧರಾಯ ಸಹಿತವಾಗಿ ಸುಚರಿತ್ರರಾಯನು ಕುಲೇಷ್ಟದೇವತೆಯಾದ ಚಾಮುಂಡಾದೇವಿಯಂ ಧ್ಯಾನಿಸುತ, ಸಭಾಸ್ತಾರರಂ ಕುರಿತು ಅನುಜ್ಞೆಗೊಂಡು ಸಾಷ್ಟಾಂಗವಾಗಿ ನಮಸ್ಕರಿಸಿ, ಶುಭವೆಂಬ ಪ್ರತಿವಚನವಂಪಡೆದು ಸ್ವಸ್ತಿಪುಣ್ಯಾಹ ನಾಂದೀ ಶುಭದೇವತೆಗಳನಾಹ್ವಾನಂಗೈದು ಸರ್ವೋಪಚಾರಂಗಳಿಂದ ಪೂಜಿಸಿ, ಆಚಾರ್ಯ ಋತ್ವಿಕ್

ಬ್ರಹ್ಮ ಸದಸ್ಯರಂ ವರಿಶಿ ಯಥಾಯೋಗ್ಯವಾಗಿ ಸವ್ಮಾನಿಶಿ, ಕುಲೇಷ್ಟ ದೇವತೆಗಳಂ, ಗ್ರಾಮಪುರ ನಗರಾಧಿ ದೇವತೆಗಳಂ, ದಿಕ್ಪಾಲರಂ, ವಸಿಷ್ಠಾ ದಿಮಹಾಋಷಿಗಳಂ, ಸೂರ್ಯಾದಿ ನವಗ್ರಹಗಳಂ, ಸಾದ್ಗುಣ್ಯ ಸಕಲ ದೇವತೆಗಳಂ ಪೂಜಿಶಿ, ಆಚಾರ್ಯ ಋತ್ವಿಗ್ಬ್ರಾಹ್ಮಣ ಮುಖವಾಗಿ ಸಹಸ್ರ ಕಲಶಂಗಳಂ ತತ್ತನ್ಮಂತ್ರ ಋಕ್ಕುಗಳಿಂದ ಪೂಜಾ, ಜಪ, ಹೋಮ, ಪ್ರತಿಷ್ಟಿತಂಗಳಾಗಿ ಮಾಡುವ ಪರಿಯಂತರವು ಸುಚರಿತ್ರರಾಯನು ಕುಮಾರ ಮುಖದಿಂದ ಉದ್ದೇಶ ತ್ಯಾಗಮೊದಲಾದ ಕಲ್ಪಮಂತ್ರಂಗಳಂ ಪೇಳಿಸುತ, ವಿಧಾನವಂ ನೆರವೇರಿಶಿ, ತನ್ನ ಪುರೋಹಿತ ಮೊದಲಾದ ಋತ್ವಿಕ್ಕರಂ ಕುರಿತು ನೀವೆಲ್ಲರೂ ಸೂಕ್ಷ್ಮವಾದ ಮುಹೂರ್ತವಂ ಪ್ರತೀಕ್ಷಿಸುತ ಉಪಕ್ರಮಿಸಲ್ಪಟ್ಟ ಪೂರ್ವಾಂಗವಾದ ಪುರಸಾತ್ತತ್ರಂಗಳಂ ಬೆಳಿಶಿ, ಮುಖ್ಯವಾದ ಪಟ್ಟಾಭಿಷೇಕ ಮಹೋತ್ಸವವಂ ಮಾಡಿಸಬೇಕೆಂದು ನುಡಿಯಲು, ಆಗ ದೀಕ್ಷಾಬದ್ಧರಾದ ಆಚಾರ್ಯ ಋತ್ವಿಗ್ಬ್ರಾಹ್ಮಾದಿಗಳು ಸುಗಂಧರಾಯನನ್ನು ಪತ್ನೀಸಹಿತವಾಗಿ ಪೊಂದು ಮುಹೂರ್ತ ರತ್ನಪೀಠದೋಳ್ ಮೌನವಾಗಿ ಇರುವಂತೆ ವಿಜ್ಞಾಪಿಶಿ, ಸಮಸ್ತವಾದ ಉಪಕರಣಗಳಂ ದೊಡಗೂಡಿ ಸುಮುಹೂರ್ತದೋಳ್ ಘಂಟಾದಿಸಕಲ ವಾದ್ಯಧ್ವನಿಗಳಿಂದ ವೇದಮಂತ್ರೋಚ್ಚಾರಣಗಳಿಂದಲುಂ, ಸಕಲ ನೃಪಾಲ ಸಮೂಹದ ಜಯಜಯ ಧ್ವನಿಗಳಿಂದಲುಂ, ಶತಘ್ನಿಶಬ್ದ ಮೊದಲಾದ ಮಹಾರಾಜಾಭಿಷೇಕ ಚಿಹ್ನೆಗಳಿಂದಲುಂ, ಸುವಾಸಿನಿಯರು ಕೋಸರಿ ಪಾಡುವ ಸೌಭಾಗ್ಯಮಂಗಳ ಪದಗಳಿಂದಲುಂ, ನರ್ತಕಿಯರ ಗಾನಮೊದಲಾದ ಸ್ತ್ರೀರಾಗಸ್ವರಗಳಿಂದಲುಂ, ಶುಭವಾಗಿ ಸುವರ್ಣ ಕುಲಶೋದಕಂಗಳಿಂದ ಪೂಜಾ ಕ್ರಮಾನುಸಾರವಾಗಿ ಕುಶೌಷಧಿಗಳಿಂದ ಪಟ್ಟಾಭಿಷೇಕವಂ ಗೈದು ಸುಚರಿತ್ರ ರಾಯನ ಹಸ್ತದಿಂದ ಪೂರ್ಣ ಕುಂಭೋದಕದಿಂ ಸಹಸ್ರಧಾರಾಭಿಷೇಕವಂ ಮಾಡಿಶಿ, ವಿಜಯವರ್ಮರಾಯ ಮೊದಲಾದ ಬಂಧುನೃಪಾಲರಿಂದಲುಂ, ಮಂತ್ರಿಮುಖ್ಯರಿಂದಲುಂ, ಥರಥರವಾಗಿ ಅಭಿಷೇಕವಂ ಮಾಡಿಶಿ, ವೃದ್ಧರಾದ ಪಂಚಸುವಾಸಿನಿಯರ ಕರಕಮಲದೋಳ್ ಪೊಳೆಯುವ ರತ್ನ ಭೃಂಗಾರಗಳಿಂದ ಹರಿದೋದಕವಂ ಆಶೀರ್ವಚನ ಮಂಗಳ ಪದಂಗಳಿಂದ ಅಭಿಷೇಚನಂಗೈಶಿ, ಕನ್ಯಾಷ್ಟಕಗಳನ್ನು ಯೆಂಟುದಿಕ್ಕಿನೋಳ್

ನಿಲ್ಲಿಸಿ, ಶಂಖ, ರತ್ನ, ಸುವರ್ಣ, ಪುಷ್ಪ, ಪತ್ರಾದಿಗಳಿಂದ ಕ್ಷೀರಾಭಿಷೇಕ ವು ಮಾಡಿಸಿ, ಉತ್ತಮರಾದ ಭೃತ್ಯಯೋಧಾದಿಗಳಿಂದ ಯಥಾಸಂಪ್ರದಾಯವಾಗಿ ಅಭಿಷೇಕ ಮರ್ಯಾದೆಯಂ ಮಾಡಿಸಿದ ತರುವಾಯ, ಅಲಂಕೃತವಾದ ಆನೆಗಳ ಕರಾಗ್ರದೊಳಿರುವ ವಜ್ರದ ಕುಂಭಾಳಿಗಳಿಂದ ದಿವ್ಯ ಸುಗಂಧವಾದ ಶುದ್ಧೋದಕವಂ ಪೂರ್ಣಾಭಿಷೇಚನಂ ಗೈಸಿ, ವಸ್ತುಗಳಿಂದ ಅಭಿಷಿಕ್ತನಾದ ಇಂದ್ರನಂತೆ ಪ್ರಕಾಶಿಸುವ ಸುಗಂಧರಾಯಂಗೆ ದಿವ್ಯದುಕೂಲ ವಸ್ತ್ರಾಭರಣ ಗಂಧ ಪುಷ್ಪಾದಿಗಳಿಂದ ಅಲಂಕರಿಸಿ, ಮುಂದಾಭಿಷಿಕ್ತ ಯೋಗ್ಯವಾದ ಕುಲ ಕ್ರಮಾಗತವಾಗಿ ಬಂದಿರುವ ನವರತ್ನಮಯವಾದ ಸಾರ್ವಭೌಮ ಕಿರೀಟ ಶಿಖಾಸರಂಗಳಂ ಧರಿಸಿ, ನವರತ್ನ ಖಚಿತವಾದ ಅನಾದಿ ಸಿಂಹಾಸನಕ್ಕೆ ರಾಣಿ ಸಹಿತವಾದ ಸುಗಂಧರಾಯನ ಹಸ್ತದಿಂದ ಪೂಜೆಯಂ ಮಾಡಿಸಿ, ತರುವಾಯ ಪಟ್ಟದ ಖಡ್ಗವಂ ಧರಿಸಿ ಇರುವ ಸುಗಂಧರಾಯನು ಪ್ರದಕ್ಷಿಣವಾಗಿ ಬಂದು ನಮಸ್ಕರಿಸಿ, ಅನೇಕ ದ್ರವ್ಯ ರತ್ನಾದಿಗಳಂ ಸಿಂಹಾಸನದ ಸುತ್ತಮುತ್ತಲುಂ ರತ್ನದ ಮಳೆಯೋ? ಪುಷ್ಪ ವೃಷ್ಟಿಯೋ ? ಎಂಬಂತೆ ಎರಚಿ, ಭಕ್ತಿ ಪುರಸ್ಸರವಾಗಿ ಸಿಂಹಾಸನವನ್ನೇರಿ ಕುಳಿತಿರಲು, ಆಗ ಸಕಲ ನೃಪಾಲ ಮಂಡಲವೆಲ್ಲಾ ಖಡ್ಗ ಹಸ್ತಂಗಳಾಗಿ ಸಾಷ್ಟಾಂಗವಾಗಿ ನಮಸ್ಕರಿಸಿ, ನಾನಾವಿಧಂಗಳಾದ ಕೈಗಾಣಿಕೆಗಳಂ ಒಪ್ಪಿಸಿ, ತಮ್ಮತಮ್ಮ ಶಿಖಾಯುಧಗಳಂ ಸುಗಂಧರಾಯನ ಹಸ್ತವಂ ಮುಟ್ಟಿಸಿ, ಪಾದಸ್ಪರ್ಶವಂ ಮಾಡಿ ಕ್ರಮದಿಂದ ವಂದಿಸಲು, ಆಗ ಶ್ವೇತ ಛತ್ರ, ಹಂಸ ಬರ್ಹ, ಚಾಮರ ದ್ವಂದ್ವಗಳಿಂದ ಪ್ರತಿಷ್ಠಿತನಾಗಿರುವ ಸುಗಂಧಮಹಾರಾಜ ಚಕ್ರವರ್ತಿಯು ಅವರವರ ಯಥಾಯೋಗ್ಯವಾಗಿ ಕಟಾಕ್ಷಿಸುತ ಬ್ರಾಹ್ಮರಿಂದ ಒಪ್ಪಿಸಲ್ಪಡುವ ಆಶೀರ್ವಚನ ಪೂರ್ವಕವಾದ ಫಲೋಪಹಾರಂಗಳಂ,ಪುಷ್ಪ ಅಕ್ಷತೆಗಳಂ ಭಕ್ತಿಯಿಂದ ಗ್ರಹಿಸುತ ಕುಲದೇವತೆ ಮೊದಲಾದ ಸಕಲದೇವತಾ ಪ್ರಸಾದಂಗಳಂ ಪೂಜಕಾದಿ ಮುಖದಿಂದ ಶಿರಸಾವಹಿಸುತ ಅಲ್ಲಿರುವ ಸಮಸ್ತ ಮಂತ್ರಿಗಳು ಮುಂತಾದ ಪ್ರಕೃತಿಸಭಾಸ್ತಾರ ಸೇವಕಾದಿಗಳಿಂದ ವಂದಿತನಾಗಿ ಬಹು ಸಂತೋಷದಿಂದ ಪಣಲಬ್ಧವಾಗಿ ಬಂದಿರುವ ಮಹಾಗಜ, ದಿವ್ಯಾಶ್ವ ವ್ಯೋಮಯಾನ, ಕಲ್ಪವೃಕ್ಷ, ಸ್ವರ್ಧೇನು, ಮೊದಲಾದ ಅಪೂರ್ವ ವ

ಸ್ತುಗಳಂ ಮುಂದೆ ಉಭಯಪಾರ್ಶ್ವದೋಳ್ ಸಾಲಾಗಿನಿಲ್ಲಿಸಿಕೊಂಡು ಪಟ್ಟಾಭಿಷೇಕ ಮಹೋತ್ಸವಕ್ಕೆ ಬಂದಿರುವ ಬ್ರಾಹ್ಮಣಶ್ರೇಷ್ಠರಾದ ವಿದ್ವಾಂಸರಿಗೆ ಗಜರಥಂಗಳಂ,ಅಂದೋಳಿಕಾಶ್ವಂಗಳಂ, ಛತ್ರಚಾಮರಂಗಳಂ, ಅನೇಕವಸ್ತ್ರಾಭರಣ ಸುವರ್ಣಂಗಳಂ, ಥರಥರವಾಗಿ ಮರ್ಯಾದೆಗೊಳಿಸಿ, ಕ್ಷಾತ್ರಿಯೋತ್ತಮರಾದ ಭೂಪತಿಗಳಿಗೆಲ್ಲಾ ವೀರಾಭರಣವೆಂಬ ಭುಜಕೀರ್ತಿ ತುರಾಯಿ ಹಾರಗಳಂ ಮತ್ತು ಅಮೂಲ್ಯವಾದ ವಸ್ತ್ರಾಭರಣಂಗಳಂ ವಾಹನಾಯುಧಂಗಳಂ ತಾಂಬೂಲ ಸಹಿತವಾಗಿ ಕೊಡಿಸಿ, ಸುಬುದ್ಧಿ ಮೊದಲಾದ ನಿಜಮಂತ್ರಿಗಳಿಗೆಲ್ಲಾ ಅನೇಕ ಗ್ರಾಮಂಗಳಂ ವಿಚಿತ್ರವಾದ ಉಡುಗೆರೆಗಳಂ ಸುಮತಿ ಮೊದಲಾದ ಅಮಾತ್ಯರಿಗೆ ಬೇಕಾದ ಬಿರುದುಗಳಂ ಅತ್ಯದ್ಭುತವಾದ ರತ್ನ ಭೂಷಣಂಗಳಂ ಸೇನಾಪತಿ ಮೊದಲಾದ ವೀರಸೇವಕರಿಗೆಲ್ಲಾ ಅಸಾಧಾರಣವಾದ ರತ್ನ ಸೂರಿಪಾನ ವಂಟಿ ಚಾಮರ ಪಗಲ್ದೀವಟಿಗೆಗಳಂ ಸಕಲ ಸೈನ್ಯಂಗಳಿಗೂ ಮತ್ತು ಇತರರಾದ ಸಮಸ್ತ ಜನಂಗಳಿಗೂ ಯಥಾಯೋಗ್ಯವಾಗಿ ಉಡಿಗೆಥ ಉಚಿತಧನಂಗಳಂ ಕೊಡುವಂತೆ ಆಜ್ಞಾಪಿಸಿ, ಅಲ್ಲಿಂದ ತೆರಳಿ ದೇವರಿಗೂ ಬ್ರಾಹ್ಮರಿಗೂ ಮಾತೃಪಿತೃಗಳಿಗೂ ವಂದಿಸುತ ಅಂತಃಪುರವಂ ಪ್ರವೇಶಿಸುವನಾಗಿ ಛಾಯಾಗುಪ್ತನ ಹಸ್ತಲಾಗದಿಂ ತನ್ನ ವಿಲಾಸಗೃಹದೋಳ್ ಕುಳಿತು ಛಾಯಾಗುಪ್ತನಂ ಕುರಿತು, ಪ್ರಾಣಾಪ್ತನೆಂಬುವದು ಪರಮಮುಖ್ಯ ಛಟನೆಂಬುವದು ನಿನಿಗಲ್ಲದೆ ಮತ್ತೊಬ್ಬರಿಗೆ ಸಲ್ಲದೆಂದು ಸನ್ಮಾನಿಸಿ, ಕ್ಷೇಮಾಲಿಂಗನವಂ ಕೊಟ್ಟು ಸಮೀಪದೋಳ್ ಕುಳ್ಳಿರಿಸಿಕೊಂಡು ಭೂಮಂಡಲದೊಳಗೆಲ್ಲಾ ಮೂರುದಿನ ಪರ್ಯಂತರವು ಸಕಲದೇಶಂಗಳೊಳ್ ಮಹೋತ್ಸವವಾಗಿ ಸಕಲರಿಗೂ ಮೃಷ್ಟಾನ್ನ ಭೋಜನಂಗಳಂ ಮಾಡಿಸಿ, ಬೇಕಾದ ಉಡುಗೆರೆಗಳಂ ಕೊಡಿಸುವಹಾಗೆ ಕಟ್ಟು ಮಾಡಿ ಕಳುಹಿ, ಸಕಲ ಬಂಧುಗಳಂ ದೊಡಗೂಡಿ ದಿವ್ಯಅಪೂರ್ವವಾದ ಭೋಜನಂ ಗೈದು, ನಿಜಾಂತಃಪುರವಂ ಪ್ರವೇಶಿಸಿ ತನ್ನ ಪಟ್ಟದರಸಿಯಾದ ಸೌಗಂಧಿಕಾ ದೇವಿಯೊಡನೆ ಹೆಚ್ಚಿ ಬೆಳವುಬರುವ ಪ್ರೇಮ ಸಂತೋಷಗಳಿಂದ ಸಹಿತವಾಗಿ ಕ್ರೀಡಾವಿಲಾಸದಿಂದಿರುತಪ್ಪೊಂದುದಿವಸ ಮೇಲಂತಸ್ತಿನ ಉಪ್ಪರಿಗೆಯಲ್ಲಿ ಮಲ್ಲಿಕಾ ಪುಷ್ಪಗಳಿಂದಯುಳಿಪವನಗಳಿಂದಲುಂ ಕ್ರೀಡಾಗೃಹನಿರ್ಮಾಣವಂ ಮಾಡಿಸಿ ಅದ

ಕ್ಕೈಪುಷ್ಪಗಳಿಂದಲೆ ದ್ವಾರಕವಾಟಲೋವೆಗಳಂಮೂಡಿಸಿ,ಜಾಜಿಪುಷ್ಪಪರ್ಯಂ
ಕದಮೇಲೆ ಕುಂಕುಮ ಜಾಜೀದಳಗಳಿಂದ ಒಟುದಿಂಬುಮೊದಲಾದ ಉಪ
ಧಾನಂಗಳಂರಚಿಸುಮಂತ್ರೆಸೇಮಿಶಿ,ವಸಂತಕಾಲ ಯೋಗ್ಯವಾದಚಂದ್ರಿಕಾವಿ
ಹಾರಾರ್ಥವಾಗಿಧರಿಶಿದರು ಇಲ್ಲದಂತೆತೋರುವದಿವ್ಯಕ್ಷೇತ್ರವಾದನಕ್ಷತ್ರಧೂ
ಸರವೆಂಬ ವಸ್ತ್ರವಂ ಘುಮಿಘುಮಿತವಾಗಿರುವ ಪರಿಮಳಗಳಿಂದಕೂಡಿಧ
ರಿಶಿಕೊಂಡು ಅನರ್ಘ್ಯವಾದ ವಜ್ರಾಭರಣಂಗಳಂ, ಆಣಿಮುತ್ತಿನಸರಂಗ
ಳಂಧರಿಶಿದಿವ್ಯಕರ್ಪೂರ ಗಂಧವಂಧರಿಶಿಕೊಂಡು ಅರಳಿಬರುವಸಂಧ್ಯಾಕಾಲ
ದಮಲ್ಲಿಗೆಮೊಗ್ಗು ಜಾಜೀಪುಷ್ಪಂಗಳಂ ಸಮೃದ್ಧಿಯಾಗಿ ಮುಡಿದುಸೌಗಂ
ಧಿಕಾದೇವಿ ಸುಗಂಧರಾಯರು ಚೇಟೀಜನದ ಕೈಯಿಂದ ಚೀಕಾದಮದಕರ
ದ್ರವ್ಯಂಗಳಂ ದಿವ್ಯಪಾನೀಯಂಗಳಂ ಪುಷ್ಪದಿಂದ ರಚಿಶಿಇರುವ ವ್ಯಜನಗಳಂ,
ಪನ್ನೀರುಗಳಂ ತುಂಬಿರುವವಜ್ರದ ಕುಚಾಯಿಗಳಂ ಕರ್ಪೂರದ ವೀಳ್ಯಂಗ
ಳಂ ತೆಗಿಶಿಕೊಂಡು ಸರ್ವೋನ್ನತವಾದ ಸೌಧಾಗ್ರಕ್ಕೆ ಪತಿಸತಿಗಳೀರ್ವರೂ
ಪರಸ್ಪರವಾಗಿ ಹಸ್ತಗಳಂಪಿಡಿದುಕೊಂಡು ಚಾಟೂಕ್ತಿಚಮತ್ಕಾರಗಳಿಂದ
ಸರಸವಾದ ಹಾಸ್ಯವಿಲಾಸಂಗಳಂಮಾಡುತ ಒಗೆಬಗೆಯಾಗಿ ಆಲಿಂಗನಗೈ
ಯುತ ಕಾಮಶಾಸ್ತ್ರದ ಮರ್ಮಂ ತಿಳಿದು ಅದರತತ್ವಂಸಿಶ್ಚೈಸುವರಂತೆ
ಬರುತ್ತಿರಲು,ಆಗ ಮನ್ಮಥನು ರತಿಸಮೇತನಾಗಿ ತಮ್ಮರೂಪಸೌಂದರ್ಯಂ
ಗಳಂತೆಗದುಕೊಂಡು ತನ್ನಬಾಣಂಗಳಾದನವಮಲ್ಲಿಕಾದಿ ಪುಷ್ಪಗಳಂಹಾ
ಸಿಗೆಯಾಗಿ ಮಾಡಿಕೊಂಡು ಇರುವ ರಾಜದಂಪತಿಗಳಂ ತಿಳಿದುತನ್ನ ಸರ್ವ
ಶಕ್ತಿಯಂತೋರಿಸಲಾಗ ಈರಾಜದಂಪತಿಗಳುಸ್ತಂಭಪ್ರಳಯ ರೋಮಾಂ
ಚಶ್ವೇತ ವೈವರ್ಣ್ಯ ವೇಪಥು ಮೊದಲಾದ ಶೃಂಗಾರಾವಸ್ಥೆಗಳಂ ಪಡುತ
ಸಾರಂಗಿವೀಣೆಗಳಂ ನುಡಿಸಲು ತಾಳಲಾರದೆ ಕಾಮಬಾಧೆಗೆ ಕಂಗೆಟ್ಟು
ಕಳವಳಂಗೊಳ್ಳುವ ಸಮಯದೋಳ್ ಚೇಟೀಜನವುದೂರದೋಳ್ ಮರೆ
ಯಾಗಿಪೋಗಲು,ಸುಗಂಧರಾಯನು ತನ್ನ ಪಟ್ಟದರಾಣಿಯಂ ತಬ್ಬಿಕೊಂಡು
ದಶವಿಧವೆಂಬ ಸ್ಥಾನದೊಳು ಚುಂಬನವಂಮಾಡಿ ನಾನಾವಿಧ ಕಲೆಗಳಂ
ತೋರಿಸುತ ಕ್ರೀಡಿಸುವ ಸಮಯದೋಳ್ ಬಹು ಕಲಾವತಿಯಾಗಿ ಪ್ರೌಢ
ನಾರೀಶಿರೋಮಣಿಯಾದ ಸೌಗಂಧಿಕಾದೇವಿಯು ಸುಗಂಧರಾಯನು ತಿಳಿ
ಯದಂತೆ ಚಿಮ್ಮಿ ಚಿಗಿಯುವ ಚಮತ್ಕಾರ ಚತುರತೆ ಯಿಂದ ತನ್ನಂತಬ್ಬಿ

ಕೊಂಡು ಮೇಲ್ಮೊಲಗಿರುವ ಸುಗಂಧರಾಯಂಗೆ ಚುಂಬನಾರ್ಥವಾಗಿ ತನ್ನ ಅಧರವಂ ಬಿಡಿಸಿಕೊಂಡು ದಿವ್ಯ ಫಲವಂ ಒದುಲಾಗಿ ಕೊಟ್ಟು ತನ್ನ ಸ್ತನಗಳಂ ಕಳದುಕೊಂಡುಲೀಲಾ ಕಂತುಕವಂ ಕೊಟ್ಟು ತನ್ನ ಸರ್ವಾಂಗವಂ ತಪ್ಪಿಸಿ ದಿವ್ಯೋಪಧಾನವಂ ಕೊಡಲು, ಆಗ ವಿಜಾತೀಯಮಾದ ರಸ ಸ್ಪರ್ಶ ಸೌಖ್ಯಂಗಳಿಂದ ಜಲವಂ ಬಿಟ್ಟು ಬಿಸಲೊಳಿರುವ ಮತ್ಸ್ಯದಂತೆಯು,ದಿವ್ಯ ಪರಿಮಳ ಉಳ್ಳ ಸ್ವಾದೂದಕಮಂ ಕಂಡು ಹಾರೈಬಡುವ ತೃಷಿತನಂತೆಯೂ ಸುಗಂಧ ರಾಯನುಕಂಗೆಟ್ಟುಕಳವಳಿಸಿ ಸಲಹೆಂದು ತೊಳಲಿಬಳಲಿ ಕಾಮ ಬಾಣಾರ್ಭಟಿಗೆ ಗಡಗಡುಗಿ ವಿರಹ ತಾಪಕ್ಕೆ ನಡುನಡುಗಿ ರಾಣಿಯಂಕುರಿತು ಮೆಚ್ಚಿದೆನು ಸ್ತ್ರೀಯರುಗಳೊಳಿರುವ ಚಮತ್ಕಾರವಾದ ಚಾತುರ್ಯಗಳು ಪುರುಷರೊಳ್ ಇರುವದತಿಶಯಮೆಂದು ನುಡಿಯುವ ತನ್ನ ಪ್ರಾಣಕಾಂತನಂ ತಬ್ಬಿತನ್ನ ಕಲೆಗಳ ಅಧಿಕವಾದ ಚಮತ್ಕಾರ ಚತುರತೆಗಳಂ ತೋರಿಸಿ, ಸ್ತ್ರೀ ಪುರುಷ ಶರೀರ ಅಂಗಮನಸ್ಸೌಖ್ಯಂಗಳೊಳ್ ಪರಸ್ಪರ ಭೇದ ತಿಳಿಯದಂತೆ ಸಮರತಿಯ ಸಮ್ಮರ್ದ ಸಂರಂಭ ಸಂಜಾತವಾದ ನಿರತಿಶಯ ಸೌಖ್ಯ ಸಂದೋಹಮಂ ಬೆಳಸಿದ ಸೌಗಂಧಿಕಾದೇವಿಯಿಂದೊಡಗೂಡಿಯಿರಲು, ಆಗ ದಂಪತಿಗಳೀರ್ವರು ಸಮರತಿಯ ಸಾರಂಭ ಮಹಾಸೌಖ್ಯ ಸಾಗರದಲ್ಲಿಮುಳುಗಿ ತೇಳಾಡಿ ಈಜಿಬರುತ ಶ್ರಾಂತರಾಗಿ ಮಲ್ಲಿಗೆಯ ಪುಷ್ಪದ ಹಾಸಿಗೆಯಲ್ಲಿ ಮಂದಮಾರುತದಿಂದ ಸೇವಿತರಾಗಿ ಯುದ್ಧ ಪರಿಜನರಿಂದ ಪಾನೀಯಪನ್ನೀರು ವ್ಯಜನೋಪಚಾರಂಗಳಂಗ್ರಹಿಸುತ ಕೆಲವುಹೊತ್ತು ಪಗಡೆಯನ್ನಾಡುತ ಈರ್ವರುಸವಾಟವನಾಡಿದರೆ ಸಮರತಿಯಕೊಡುವದು ಗೆದ್ದವರಿಗೆ ಪುರುಷಾಯಿತವೆಂದುನಿಶ್ಚಯಂಗೈದು ಆಡಿ ಆದೇಮೇರಿಗೆ ನಡಸುತ್ತ ಸುಖದಿಂದ ಪರವಶವಾಗಿ ಪವಡಿಸಿಇರಲು, ಆಗ ಉದಯಕಾಲದೊಳಾಗುವ ರಾಜಮರ್‍ಯಾದೆಗಳಿಂದ ಕೂಡಿದ ವಾದ್ಯ ವಿಶೇಷಂಗಳಿಂದಲುಂ ಗಾಯಕರು ಪಾಡುವ ಉದಯ ರಾಗಾದಿಗಳಿಂದಲುಂ ದೇವಾಲಯಂಗಳೊಳ್ ವಿಪ್ರವರ್‍ಯರು ಪೇಳುವ ಸುಪ್ರಭಾತ ಮೊದಲಾದ ದೇವತಾಸ್ತುತಿಗಳಿಂದಲುಂ ಯಚ್ಚರ ಗೊಂಡು, ದಂಪತಿಗಳೀರ್ವರು ಇಳಿದು ಬಂದು ಮುಖಮಜ್ಜನ ಮೊದಲಾದ ಸ್ನಾನವಂಗೈದು ಆರೋಗಣೆಯಂ ಮಾಡಿ ತಮ್ಮ ಗೃಹದೊಳ್ ಗುರುಜನಭಕ್ತಿಯಿಂ ದಿರುತಿರಲು.

ಹೀಗೆವೊಂದೊಂದು ದಿವಸದೋಳ್ ವೊಂದೊಂದು ಕ್ರೀಡಾವಿಲಾಸದೊಳಿರುತ್ತಮತ್ತೊಂದುದಿವಸದೋಳ್ ಸುಗಂಧರಾಯನುಗೃಹೋಪವನದೋಳಿರುವ ಮಂದಿರದಲ್ಲಿ ಕ್ಲಿಪ್ತಿಯಾಗಿವಾಸವಂ ಮಾಡಿಕೊಂಡು ಸರ್ವಾಭರಣ ಭೂಷಿತೆಯಾಗಿ ವೀಣೆಯಂವಾದಿಸುತ ಸುವರ್ಣನವಿಂದಿರುವ ಕುಸುಮಲತೆಯಂ ನೆನದು ಪೋಗಿ ಆ ಮಂದಿರದೋಳಾಕಾಂತೆಯೊಡನೆ ಚತುರಂಗವನ್ನಾಡುತ ಕಾಂತೆಯ ಸೌಂದರ್ಯವನ್ನೀಡಿ ಸುದತಿಯಂ ಕುರಿತು ನೀನೇಕೆ ಮಾಡಿದ ಘನ ರಾಗವಂ ಬಿಟ್ಟು ಅನುರಾಗವಂ ತೋರಿಸೆಂದು ಹಾಸ್ಯವಂ ಮಾಡುತ ಕಾಮಾಸಕ್ತನಾಗಿ ನುಡಿಯುವ ಪ್ರಿಯನಂ ಕುರಿತು ಕುಸುಮಲತಾ ದೇವಿಯು ಅನುರಾಗಕ್ಕೆ ತಾಳವನೀವೇ ಜೊತೆವಾಡಿ ಹಾಯಿಗೊಳಿಸಿ ಕಪೋತ ಕೂಜಿತದಿಂದ ಹಂಸ ಮಯೂರಾಭಿನಯಮಂ ತಾಳ್ದು ಕಾಲತ್ರಯವಂ ತಿಳಿದು ಮೂರ್ಛನಾದಿಗಳಂ ಕಳದು ವಿಶ್ರಮಸ್ಥಾನದೋಳ್ ಸಂಚಿಸಿಂದಾನಯುಗೂಡಿ ಮೃದುವಾಗಿಚಿತ್ತಾನಂದವಂ ಬೆಳಸೂವದು ನಿನ್ನ ಅಧೀನವೇ ಸರಿಯೆಂದು ಶ್ಲೇಷೆಯ ಧ್ವನಿಯಿಂದ ಮೆಲ್ನಗೆಯ ಕುಡಿನೋಟದಿಂದ ಶುಕದಂತೆ ನುಡಿಯುವ ಕಾಮಿನಿಯ ಕೈಪಿಡಿದು,ಆಲಿಂಗಿಸುತ ವಿಚಿತ್ರವಾದ ರತಿ ಚಮತ್ಕಾರದಿಂದ ಆನಂದಗೊಳಿಸಿ, ಮದನನಹಾರಾಯಂಗೆ ಪಟ್ಟಾಭಿಷೇಕವಂ ಗೈಸಿ, ಆಕಾಂತೆಯಂ ತಕ್ಕೈಸಿ, ತಂಗಾಳಿಯಾಗಿ ಬೀಸುವ ವನಮಧ್ಯದ ಪುಷ್ಪಲತೆಗಳ ಪಂಙ್ತಿಗಳಲ್ಲಿ ಕಟಾಕ್ಷವಂ ಮಡಗಿ ಮರಿಜಾನೆಯಂತೆ ಜವ್ವನದ ಸೊಂಪಿನಿಂದೊಡಗೂಡಿ ಸ್ವೇದದಿಂ ತನುತಂಪಾಗಿ ರತಿಶ್ರಮದಿಂದ ಮುಖಚಿವರಿ ಸ್ತ್ರೀಸಂಗಮದ ಚಿಹ್ನೆಗಳಂ ಪುಷ್ಪಾಪಚಯ ನೆವದಿಂದ ಮರಿಸುತಬರುವ ಸುಗಂಧರಾಜೇಂದ್ರನಂಪುಷ್ಪಾರ್ಥವಾಗಿ ಉಪವನಕ್ಕೆಬಂದಿರುವ ಸೌಗಂಧಿಕಾದೇವಿಯುಕಂಡು ಕಾಣದಂತೆ ಪುಷ್ಪವಂ ಕೊಯುತತನ್ನೊಳಗೆತಾನೆ ಈಪುಷ್ಪಗಳಂಕೊಯುವದು ಬಹುಪ್ರಯಾಸವು, ಇದರಿಂದಬಹುಶ್ರಮ ಕಾಣುವದೆಂದು ನುಡಿಯುತಹಾಗೆಸಮೀಪದೊಳಿರುವ ನಿಜಕಾಂತನಂಕಂಡು ಆತನಡಿಗಳಿಗೆಯೆರಗಿ ಕೈಮುಗಿದುನಿಲ್ಲಲು,ಆಗಸುಗಂಧರಾಯನು ಸೌಗಂಧಿಕಾದೇವಿಯಂಕುರಿತು ನಗುತತನ್ನ ಕೈಯೊಳಗಿರುವ ಪುಷ್ಪಗಳಂಕೊಡುವದಕ್ಕೆ ಕೈನೀಡಲು ಆಗ ಸೌಗಂಧಿಕಾದೇವಿಯು ಪತಿಯಂಕುರಿತು ತಮ್ಮಮೃದುವಾದ ಹಸ್ತಂಗಳಂ

ದಯುತ್ತಿದಹೂವುಗಳು ಬಹುವಾಗಿರುವದ್ದರಿಂದಾಹಸ್ತಗಳು ಯೆಷ್ಟು ಘಾ ಯವುಗೊಂಡದುದೋ? ಶರೀರವೆಷ್ಟು ಬೆವರಿರುವದೋ? ಮುಖವೆಷ್ಟು ಕುಂದಿಯಿರುವದೋ ಯೆಂದು ಪುಷ್ಪವಂ ತೆಗದುಕೊಳ್ಳುತ ಆತನಮೈಯ್ಯಂ ನೋಡಿ ಈ ಪಲ್ಲವ ಕುಸುಮದಿಂದೊಡಗೂಡಿದ ಲತಾಸಂಬಂಧದಿಂದ ಆಗಿರುವದು ನಿಶ್ಚಯವೆಂದು ಪೇಳೆ ಈ ಅರ್ಥದಲ್ಲಿ ಸಂಶಯವಿಲ್ಲಾ ಆಣೆಯಂ ಪೇಳುವೆನೆಂದು ನುಡಿದ ಸೌಗಂಧಿಕಾದೇವಿಯೊಡನೆ ನಗುತ ನಿನ್ನ ಹಾಸ್ಯವೀಗ ಯಥಾರ್ಥವೆಂದು ಸರಸವಾಡುತ್ತಾ ಕರವಂ ಪಿಡಿದು ಉಪವನದಕಡೆಯೊಳ್ ಕೆಂಪು ಮಾಣಿಕದಿಂದ ನಿರ್ಮಿತವಾಗಿ ನಿರ್ಮಲೋದಕಗಳಿಂದಾ ತುಂಬಿ ದೂರಕ್ಕೆ ಅತಿಕೆಂಪಾದ ವಸಂತದಂತೆ ಕಾಣುತ್ತಾ ಮನೋಹರವಾಗಿಯಿರುವ ಸರಸ್ಸಿನ ಸಮೀಪವಂ ಕುರಿತು ಕರತಂದು ವಸ್ತ್ರಂಗಳಂ ತೆಗದು ಜಲವಂ ಪ್ರವೇಶಿಶಿ ಬಹುವಿಧಂಗಳಾಗಿ ಜಲಕ್ರೀಡೆಯಂ ನಾಡುತ್ತಿರುವ ಸಮಯದೊಳ್ ನೀರೊಳಗೆ ಯಿರುತ್ತ ಮುಖದ ಮುಂಭಾಗದೊಳ್ ಕಂಠಿನ ಸರವಲ್ಲಿ ಚಲ್ಲಿಸುವಕಾಂತೆಯಂ ಕಂಡು ಮತ್ಸ್ಯವಂ ಪಿಡಿಯಬಂದ ಸರ್ಪವೆಂದು ತಿಳಿದು ಬೆದರುವಕಾಂತನಂ ಕಂಡು ದೇವಿಯು ಯಿದ್ದುಸಿಲ್ಲಲು, ಸರ್ಪನೆಲ್ಲೋ ಪೋದುದೆಂದು ನಿರ್ಭಯದಿಂದ ಜಲವಂ ಪ್ರವೇಶಿಶಿ, ವಿಲಾಸವಂ ಗೈಯುತಲಿರುತ ಮತ್ತೊಂದು ಕಡೆಯೊಳ್ ಬಗ್ಗಿಯಿರುವ ಸೌಗಂಧಿಕಾದೇವಿಯು ಜಡೆಯಂ ಕಂಡು ಭೀಪತಿಳಿಯದೆ ಬೆದರುವ ರಾಯನಂ ಕಂಡು ನಗುತ ಕಾಂತನ ಕೈಯಂ ಪಿಡಿಯಲು ಆಗ ನಿನ್ನ ಜಡೆಯಂ ಕಂಡು ಭೀತಿತೋರುವದೆಂದು ರಾಣಿಯಂ ತಕ್ಕೈಶಿ ಮುದ್ದಾಡುತ್ತಾ ಈರ್ವರು ವಸ್ತ್ರಂಗಳಂ ಧರಿಶಿ ಪುಷ್ಪಿತವಾದ ಚಂಪಕವೃಕ್ಷದ ಉಪರಿಭಾಗದಿಂದ ಜೋಲಾಡುತಲಿರುವ ಮಲ್ಲಿಕಾಲತೆಗಳಂ ಶಳೆದುಕಟ್ಟಿ ಉಯ್ಯಾಲೆಯಂ ಮಾಡಿ ಈರ್ವರೂ ವಿಲಾಸದಿಂ ದವರೋಳ್ಕ್ಕುಳಿತು ಆಡುತಲೆ ಪುಷ್ಪಂಗಳಂ ಕೊಯಿದು ಮುಡಿಯುತ್ತ ಮುಂಭಾಗದೊಳ್ ಮುಖಕ್ಕೆ ಸರಿಯಾಗಿ ಅಮೃತವಂ ಮೀರಿಯಿರುವ ಕಿರುಮಾವಿನ ಹಣ್ಣುಗಳಂ ಜೊತೆಯಾಗಿ ಸವಿದು ಪರಸ್ಪರವಾಗಿ ಅಧರರಸಂಗಳಂ ಸವಿದುನೋಡಿ ಅಧರರಸವೆ ಅಧಿಕವೆಂದು ಸೀತ್ಕಾರಂಗಳಿಂದಾ ಶಲ್ಲಾಪವಂಗೈಯುವ ಬಳ್ಳಿಗಳ ಉಯ್ಯಾಲೆಗಳಿಂದಿಳಿದು ಅಲ್ಲಲ್ಲಿ ವೃಕ್ಷಲತಾವಾಟಿಗಳಲ್ಲಿ ಸ್ತ್ರೀ ಪುರುಷ ಸಹಿತವಾಗಿ ವಾಸವಂಮಾಡಿಕೊಂಡು ಲತೆಗಳ

ಮೇಲೆ ಬಗಬಗೆಯಾಗಿ ವಿಹರಿಸುವ ಹಂಸ ಮಯೂರ ಗಿಳಿ ಚಕ್ರವಾಕಗಳಂ ಕಂಡು ಚೆನ್ನಾಗಿ ನೋಡಿ ಅದೇ ರೀತಿಯಿಂದ ತಾವಿಬ್ಬರೂ ನವಮಲ್ಲಿಕಾ ಕುಂಜಗಳೊಳ್ ವಿಚಿತ್ರ ಕ್ರೀಡೆಗಳಂ ಮಾಡುತ್ತ ಮದಕರಂಗಳಾದ ಫಲಂಗಳಂ ಆಸ್ವಾದಿಸುತ್ತ ತಳಿರುಗಳ ಹಾಸಿಗೆಯೊಳ್ ಮಲಗುತ್ತ, ಚಿಗುರುವೀಳ್ಯಗಳಂ ಸವಿಯುತ್ತ, ತರುಣಿಯರ ಮುಖಗಂಧಕ್ಕೆ ಬಂದು ಕೂಗುವ ಮಳೆತುಂಬಿಗಳ ಧ್ವನಿಯೆಂಬ ಶ್ರುತಿನಾದದಿಂದೊಡಗೂಡಿ ಸಂಚಾರಿ ನುಡಿಯುವ ಗಿಳಿಗಳ ಸೊಲ್ಲುಕಟ್ಟಿನಗೆ ಸರಿಯಾಗಿ ಲಯಸ್ಥಾನವಂ ಪಿಡಿದು. ಕುಣಿಯುವ ನವಿಲುಗಳಂದಲುಂ, ನೇತ್ರಾನಂದಕರವಾಗಿ ಕಿವಿಗಿಂಪಾಗಿಯೂಯಿರುವ ಸ್ವರದಸೊಂಪಿನಿಂದ ಪರಮೋಲ್ಲಾಸ ಹರ್ಷಿತರಾಗಿ ಪುಷ್ಪಂಗಳಂ ತಂದಂತೆ ತೋರ್ಪಡಿಸುತ್ತ ಅರಮನೆಯಂ ಪ್ರೋಕ್ಷ್ಯ ದಿವ್ಯವೃಷ್ಟಾನ್ನಭೋಜನಸಂಗ್ರಮ ದಿನದಿನದೊಳೊಂದೊಂದು ಬಗೆಯಾಗಿ ಆನಂದದಿಂದ ನಿತ್ಯಸಾಮ್ರಾಜ್ಯವನ್ನನುಭವಿಸುತ್ತ ನಿತ್ಯೋತ್ಸವದಿಂದಕೂಡಿ ಸಕಲ ಭೂಮಂಡಲಾಧಿಪತ್ಯ ವೈಭವದಿಂದ ಸುಖದಿಂದ ಇರುತ್ತಿರ್ದನೆಂಬಲ್ಲಿಗೆ॥

ಗದ್ಯ * ಕುಂಡಲಿಶಯನ ಖಂಡಪರಶು ಪುಂಡರೀಕ ಜವಾಖಂಡಲ ಪ್ರಮುಖ ನಿಖಿಲ ಸುರವರ ಪರಿಭವ ಪರಿಣತ ಪ್ರಚಂಡ ಬಲಚಂಡ ಮುಂಡ ವಿಖಂಡನ ನಿಪುಣ ಕೋದಂಡಕಾಂಡಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತ ಗ್ರಂಥ ದಿನದಿನಪ್ರಬಂಧ ನಿಬಂಧನ ಧುರಂಧರ ತ್ರಿಭುವನ ಪವಿತ್ರಾತ್ರೇಯ ಸಗೋತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ ನರಪತಿಬಿರುದ ಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜ ಒಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾ ಪರಿಣಯವೆಂಬ ಈ ನವೀನ ಕೃತಿಯೊಳ್ ಸುಗಂಧರಾಜೇಂದ್ರನಿಗೆ ಸೌಗಂಧಿಕಾವಿವಾಹ ರತ್ನಪುರಪ್ರವೇಶ ಪಟ್ಟಾಭಿಷೇಕ ಮಹೋತ್ಸವ ವರ್ಣನವೆಂಬ ೯೩ನೇ ಆಶ್ವಾಸಕ್ಕೆ ಮಂಗಳ ಮಹಾ. ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

ತೊಂಬತ್ತ ಮೂರನೇ ಆಶ್ವಾಸ ಸಂಪೂರ್ಣವು.

೧೯೨

ಸಾಯಂಕಾಲದಲ್ಲಿ ತನ್ನ ಕಿರಣಗಳಂ ಯಜ್ಞೇಶ್ವರನಲ್ಲಿ ಇರಿಸಿ, ಮುಖವಂ ತೋರದೆ ಅಸ್ತಾಚಲವಂ ಮರೆಮಾಡಿಕೊಂಡು ಪೋಗುವ ಸೂರ್ಯನಂತೆ ಕಾಂಡಪಟವಂ ಮರೆಮಾಡಿಕೊಂಡು ಸರಸ್ವತೀ ವಿಲಾಸವೆಂಬ ಹಜಾರಕ್ಕೆ ಚಿತ್ತೈಸಿ, ತನ್ನ ಸಮೀಪದಲ್ಲಿರ್ದ ಸರಸ್ವತೀಸಹಾಯ ಶಾರದಾಶರೀರರೆಂಬ ವಿದ್ವಾಂಸರಿಂದ ಪೇಳಲ್ಪಡುವ ಪುರಾತನ ಪುಣ್ಯಶ್ಲೋಕರಾದ ರಾಜರುಗಳಚರಿತ್ರಗಳಂ ಮತ್ತು ಆರಾಯರುಮಾಡಿದ ಇಷ್ಟಾಪೂರ್ತಂಗಳಾದ ಕರ್ಮಗಳಂ ಕೇಳುತ್ತ ಮತ್ತು ಆರಾಯರು ಮಾಡಿದ ಆಶ್ಚರ್ಯಕರವಾದ ಕಾರ್ಯಂಗಳಂ ಪರಾಮರಿಸುತ್ತ ವಿಸ್ಮಯಮನ್ನೈದಿ ಅಷ್ಟಾದಶಪುರಾಣ ಶ್ರವಣಂಗಳಂ ಮಾಡುತ್ತಾ ಧರ್ಮಾರ್ಥಕಾಮಂಗಳಿಂದ ಆಗತಕ್ಕ ಫಲಂಗಳಂ ತುಚ್ಛವಾಗಿ ಕಾಣುತ್ತ ಮೋಕ್ಷಮಾರ್ಗಕ್ಕೆ ಸಾಧನಂಗಳಾದ ಜ್ಞಾನಭಕ್ತಿ ವೈರಾಗ್ಯಂಗಳನ್ನೆ ಬಯಸುತ್ತಾ ನಿಜಕುಲದೇವತೆಯಾದ ಚಾಮುಂಡಿಕಾದೇವಿಯ ಚರಣಕಟಾಕ್ಷದಿಂದಲೇ ನಾನು ಧನ್ಯನಾಗಬೇಕಲ್ಲದೆ ಮತ್ತೊಂದು ಸಾಧನಗಳಿಂದ ಆಗತಕ್ಕದಲ್ಲ ಎಂದು ವಿದ್ವಾಂಸರಂ ಕುರಿತು ಪೇಳುತ್ತಾ ಪುತ್ರೇಷಣ, ದಾರೇಷಣ ಧನೇಷಣಂಗಳಂ ಬಿಟ್ಟು ನಿಸ್ಪೃಹನಾಗಿಯಿರುತ್ತಿರುವ ರಾಯನಂ ನೋಡಿ ಧರ್ಮಪತ್ನಿಯಾದ ಗುಣವತೀದೇವಿಯು ಪತಿಗೆ ಅನುಕೂಲವಾಗಿ ನಡೆಯುವದೇ ಪತಿವ್ರತಾಸ್ತ್ರೀಗೆ ಪರಮಧರ್ಮವೆಂದು ಕೇಳಿ ದಿವ್ಯಾಂಬರಾಭರಣಂಗಳಂ ಬಯಸದೆ ಸಂಸಾರದಲ್ಲಿ ವ್ಯಾಸಂಗಗೊಂಡು ಮಣಿಮಂಜರೀ ಕನಕಲತಾ ಕಮಲಿನೀ ಚಂದ್ರಕಳೆಯೆಂಬ ಸವತಿಯರಂ ನೋಡಿ ಎಲೈ ತಂಗಿಯರೇ! ನೀವು ನಾಲ್ವರುಂ ಅಂತಃಪುರದೊಳ್ ಕಾಲಕಾಲದಲ್ಲಿ ಆಗುವ ಉತ್ಸವಂಗಳಂ ಬೆಳಸುತ್ತಾ ಸುಕುಮಾರನಾದ ಸುಗಂಧ ಕುಮಾರನಿಗೆ ಉಪಚಾರಂಗಳಂ ಮಾಡುವಂತೆ ನೇಮಿಸುತ್ತಾ ಇರುವದು ಎಂದು ಪೇಳಿ ನೊಸೆಯರಾದ ಸೌಗಂಧಿಕಾಕುಸುಮಲತೆಯ ಠೀವರಂ ಅಪರವಶವಂ ಮಾಡಿ ರಾಯನ ಸಮೀಪದಲ್ಲಿಯೇ ಉಪಚಾರಂಗಳಂ ಮಾಡುತ್ತಾ ನಾನಿರುವೆನೆಂದು ಪೇಳಿ, ಗುಣವತಿದೇವಿಯು ರಾಯನ ಸಮೀಪಕ್ಕೆ ಹೋಗುತ್ತಿರಲು; ಆ ಬಳಿಕ ಸುಮತಿ ಮೊದಲಾದ ಮಂತ್ರಿಗಳಿಂದಲುಂ, ವೀರಸೇನ ಚಿತ್ರಸೇನ ಮೊದಲಾದ ಸೇನಾಪತಿಗಳಿಂದಲುಂ, ಪರಿವೃತನಾಗಿ ಬಲಗಶಾಲೆಯೊಳ್ ದಿವ್ಯರತ್ನ ಸಿಂಹಾಸನದಲ್ಲಿ

ಸುಗಂಧಮುಕಾರಾಜೇಂದ್ರನು ಕುಳಿತಿರುವ ಕಾಲದಲ್ಲಿ ನಿಜ ಭುಜಪರಾಕ್ರಮಂಗಳಂ ವರ್ಣಿಸುವ ವಂದಿಮಾಗಧ ವೈತಾಳಿಕಜನಂಗಳಂ ಜಯಜಯ ಶಬ್ದಂಗಳಿಂದಲುಂ ಕೈಲಾಗಗಳಂಬಿಟ್ಟು ಕೈಗಳಂ ಕಟ್ಟಿಕೊಂಡು ಸಾಲಾಗಿನಿಂತು ಸಾಷ್ಟಾಂಗವಂಮಾಡುವ ಸಾಮಂತರಾಯರ ಕಿರೀಟ ಕುಂಡಲಾಭರಣಂಗಳ ಝಣತ್ಕಾರ ಶಬ್ದಂಗಳಿಂದಲುಂ, ಇವರು ಸೇನಾಪತಿಗಳು, ಅವರು ವೀರರಾಹುತರು, ಅವರು ದೇಶಾಧಿಕಾರಿಗಳು, ಯಿವರೆಲ್ಲರೂ ಲಾಟ ವರಾಟ ಮರಾಟಮುಂತಾದ ದೇಶಾಧಿಪತಿಗಳು ಈತನೆ ಕಪ್ಪವಂನೊಪ್ಪಿಶಿ, ಕಟಾಕ್ಷವಂಸಪೇಕ್ಷಿಶಿ ಕಾದಿರುವ ಕಾಶ್ಮೀರಪತಿಯು, ಪರಾಕುಸ್ವಾಮಿ! ಮರಾಮರಿಸಬೇಕೆಂದು ನುಡಿಯುವ ಅವಸರದಗುರಿಕಾರರ ದೀರ್ಘವಾದ ಉಚ್ಚರಿಕೆಗಳಿಂದಲುಂ, ಭೇರೀ ಪಟಹ ನಿಸ್ಸಾಣಮುಂತಾದ ವಾದ್ಯಂಗಳ ಝಾಂಕಾರಧ್ವನಿಗಳಿಂದಲುಂ, ಚಾಮರಂಗಳಂ ಬೀಸುವ ಚಂಚಲಾಕ್ಷಿಯರ ಕರಕಂಕಣಾರವಗಳಿಂದಲುಂ, ಚಂದ್ರಕಿರಣಂಗಳು ನೋಂಕೆ ಉಕ್ಕಿಬರುವ ತೆರೆಗಳಿಂದಕೂಡಿ ಮೊರೆಯುವ ಕ್ಷೀರಸಮುದ್ರದಂತೆ ವಿಸ್ತಾರವಾದ ಆಸ್ಥಾನಮಂಟಪವು ಸಾಮಾಜಿಕರಿಂದ ನಿಬಿಡವಾಗಿ ಶೋಭಿಸುತ್ತಿರಲು, ಆಗ ಸುಗಂಧರಾಜೇಂದ್ರನು ಕಟಕಾಧಿಪತಿ ಕಪ್ಪವಾಗಿ ಕಳುಹಿಸಿದ ಖರ್ವಸಂಖ್ಯವುಳ್ಳ ಕನಕಮುದ್ರಿಕೆಗಳಂ ಮುತ್ತಿನಹಾರಾಯನು ಕಳುಹಿಸಿದ ಕರಿಕಲಭಸಹಸ್ರಂಗಳಂ ಪರಾಮರಿಸುತ್ತಾ ಸುಮತಿಯಂ ನೋಡಿ ಕಾಶ್ಮೀರಪತಿ ಮೊದಲಾದ ದೇಶಾಧಿಪತಿಗಳ ಮುಖವಂನೋಡಲು, ಆಗಸುಮತಿಯು ರಾಜೇಂದ್ರನ ಅಭಿಪ್ರಾಯವಂನರಿತು ದಿವ್ಯಾಭರಣಂಗಳಂ ಮುತ್ತಿನಕುಚ್ಚುಗಳಿಂದ ಕೂಡಿರುವರನ್ನದ ತುರಾಯಿಗಳಂ ಹತ್ತಾರು ಚಿನ್ನದತಟ್ಟೆಗಳಲ್ಲಿ ಮಡಗಿಶಿ, ಸಿರಾಜಿಯುಮುಸುಕುಗಳಂ ಪೊದ್ದಿಶಿ, ರಾಜೇಂದ್ರನಸಮೀಪಕ್ಕೆ ಬಂದುನಿಂತಿರಲು, ಆಗ ರಾಜೇಂದ್ರನು ವೀರಸೇನನಂ ವಾರೆನೋಟದಿಂ ದೀಕ್ಷಿಸಿದಮಾತ್ರದಿಂದಲೇ ಜಾಗ್ರತೆಯಿಂದೆದ್ದು ಕೈಗಳಂ ಕಟ್ಟಿಕೊಂಡು ಸಮೀಪಕ್ಕೆ ಬಂದು ನಿಂತಿರಲು; ಆಗರಾಜೇಂದ್ರನು ಅಯ್ಯಾವೀರಸೇನ; ಕೆಲವುದೇಶಾಧಿಪತಿಗಳಿಗೆ ಸನ್ಮಾನವಂ ಮಾಡಿ ಕಳುಹಿಸಬೇಕು ಆದ್ದರಿಂದ ಆಯಾಯದೇಶಾಧಿಪತಿಗಳಿಗೆ ಪೂರ್ವದಿಂದಲೂ ಕರ್ನಾಟಕನರಪತಿಗಳುಮಾಡುವ ಮಾನಮರ್ಯಾದೆಗಳು ಹ್ಯಾಗೆ

ನಡೆದು ಬಂದನ್ನೋ ತಿಳಿಯಲಿಲ್ಲ, ವೃದ್ಧಮಂತ್ರಿಯಾದ ಸುಬುದ್ಧಿಯಂ ಕರೆಕಳುಹಿಸಿ ಅವರು ಹೇಳಿದ ರೀತಿಗೆ ನಡೆಸುವದು ಉಚಿತವಾಗಿ ತೋರುತಲಿದೆಯೆಂದು ಅಪ್ಪಣೆಯಂ ಕೊಡಲು, ಆವೀರಸೇನನು ಸರಸ್ವತೀ ವಿಲಾಸ ಹಜಾರಕ್ಕೆ ಪೋಗಿ ಬಾಗಿಲೊಳ್ ನಿಂತು ನಿಂತಿರ್ದಂತ ಗಾರಿಕಾರನಿಗೆ ತಿಳುಹಿಸಲಾ ಗಾರಿಕಾರನು ವೃದ್ಧರಾಯರ ಸಮೀಪಮಂ ಪ್ರವಿಶಿ ಬಗ್ಗಿ ಬಾಯಿಗೆ ಹಸ್ತವಂ ಮರೆಮಾಡಿ ಎಲೈ ರಾಜಾಧಿ ರಾಜನೆ! ಮುಖ್ಯಸೇನಾಪತಿಯಾದ ವೀರಸೇನನು ಏನೊ ಒಂದು ಕಾರ್ಯವಂ ವಿಜ್ಞಾಪನೆಯಂಗೈಯ್ಯಬೇಕೆಂದು ಬಂದು ಇರ್ಧಾನೆ, ಯೆಂದು ಆ ಮಾತಂ ಕೇಳಿ ಸುಬುದ್ಧಿಯ ಮುಖವಂ ನೋಡಲಾ ಮಂತ್ರಿಯು ಬಾಗಿಲಿಗೆ ಪೋಗಿ ವೀರಸೇನನಂ ಕಂಡು ಮತ್ತೇನು ವಿಶೇಷವೆಂದು ಕೇಳಲು ಆವೀರಸೇನನು ಎಲೈ ಮಂತ್ರಿಶ್ರೇಷ್ಠನೆ! ಈಗ ಕೆಲವು ದೇಶಾಧಿಪತಿಗಳಿಗೆ ಅಪ್ಪಣೆಯನ್ನಿತ್ತು ಕಳುಹಿಸಬೇಕಾಗಿಧೆ, ಅದು ಕಾರಣ ನಿಮ್ಮಂ ಕರೆದುಕೊಂಡು ಬಾಯೆಂದು ಸುಗಂಧರಾಜೇಂದ್ರನ ಅಪ್ಪಣೆಯಾಗಿಧೆ, ಯೆಂದು ಪೇಳ್ದ ಮಾತುಗಳಂ ಕೇಳಿ, ವೃದ್ಧರಾಯನ ಪಾದದಬಳಿಯಲ್ಲಿ ಇಂತು ಕೇಳಿದ ವರ್ತಮಾನವಂ ವಿಜ್ಞಾಪನೆಯಂ ಗೈಯ್ಯಲಾ ವೃದ್ಧರಾಯನು ಅಯ್ಯಾ ಮಂತ್ರಿಯೆ! ಆಯಾಯ ರಾಯರಿಗೆ ನಾವು ಮಾಡತಕ್ಕ ಮಾನಮರ್ಯಾದೆಗಳಲ್ಲಿ ಲೇಶಮಾತ್ರವೂ ಹೆಚ್ಚುಕಡಮೆ ಬಾರದಂತೆಯೂ, ಆ ರಾಯರಿಂದ ನಮ್ಮ ಸಂಸ್ಥಾನಕ್ಕೆ ಮಾಡತಕ್ಕ ನಡತೆಗಳಂ ಚನ್ನಾಗಿ ವಿಚಾರಿಸತಕ್ಕದ್ದು, ನೀನು ಉಪೇಕ್ಷೆ ಮಾಡದೆ ಅಲ್ಲಿಗೆ ಪೋಗಿ ಪ್ರಮಾದಂಗಳು ಬಾರದಂತೆ ನೋಡಿ ಬಾಯೆಂದು ಆಜ್ಞಾಪಿಸಲು; ಆಗ ಮಂತ್ರಿಶ್ರೇಷ್ಠನಾದ ಸುಬುದ್ಧಿಯು ಆಜ್ಞೆಯಂ ಶಿರಸಾ ವಹಿಸಿ ವೀರಸೇನನಿಂದೊಡಗೂಡಿ ಆಸ್ಥಾನಮಂಟಪಕ್ಕೆ ಬಂದು ಪ್ರಣಾಮವಂ ಮಾಡುತ್ತಿರಲು, ಆವೃದ್ಧಮಂತ್ರಿಯಂ ನೋಡಿ ಸುಗಂಧರಾಜೇಂದ್ರನು ಅಯ್ಯಾ ಮುಖ್ಯಾಮಾತ್ಯರೆ! ದಯಮಾಡಬೇಕೆಂದು ಸಮೀಪಕ್ಕೆ ಕರೆದು ಈಗ ದೇಶಾಧಿಪತಿಗಳಿಗೆ ಅಪ್ಪಣೆಯಂ ಕೊಡತಕ್ಕ ಕಾರ್ಯವುಂಟಾದದ್ದರಿಂದ ನಿಮ್ಮನಂ ಕರೆಕಳುಹಿಸಿದೆವೆಂದು ಆಜ್ಞಾಪಿಸಲು, ಆಗ ವೃದ್ಧಮಂತ್ರಿಯು ಸ್ವಾಮಿ ಮಹಾನುಭಾವನೆ! ನಿಮ್ಮ ಚರಣಂಗಳನ್ನೆ ಕಾದಿರುವೆನೆಂದು ಪೇಳಿ ವೀರಸೇನ ಸುಮತಿಗಳಿರ್ವರಿಗೆ ಕಾಶ್ಮೀರಪತಿ ಮರಾಟಪತಿಗಳಂ ಕ

ರವುಕೊಂಡು ಬರುವಂತೆ ಕಟ್ಟುಮಾಡಿ, ಎಲೈ ಮಹಾರಾಜೇಂದ್ರನೆ ! ಈ ಯಿನಾರ್ವ ದೇಶಾಧಿಪತಿಗಳಿಗೆ ಸಿಂಹಾಸನದ ಉಭಯಪಾರ್ಶ್ವಗಳಲ್ಲಿರುವ ರತ್ನ ಪೀಠಂಗಳಲ್ಲಿ ಕೂತುಕೊಳ್ಳುವಂತೆ ಮರ್ಯಾದೆಯು ಪೂರ್ವದಿಂದಲೂ ನಡದು ಬಂದು ಇದೆಎಂದು ಹೇಳುತ್ತಿರುವ ಕಾಲದೊಳ್ ಸುಮತಿ ವೀರಸೇನರ ಕರಲಾಘವದಿಂ ಬರುವ ರಾಯರಿಗೆ ಮುಖ್ಯಾಮಾತ್ಯನಾದ ಸುಬುದ್ಧಿಯುಯದುರಾಗಿಪೋಗಿ ವಿನಯೋಕ್ತಿಗಳಿಂದ ವಿಜ್ಞಾಪನೆಯಂ ಮಾಡುತ್ತಾ ಸುಗಂಧ ರಾಜೇಂದ್ರನಸವಿಾಪಕ್ಕೆ ಕರತರಲಾ ಕಾಲದಲ್ಲಿ ರನ್ನದಬೆತ್ತಗಳಂ ಪಿಡಿದು ನಿಂತಿರುವ ಕಂಚುಕಿಗಳಿಂದ ಸ್ವಾಮಿಪರಾಕು! ಕಾಶ್ಮೀರ ಪತಿ ಕೈಗಳಂ ಕಟ್ಟಿ ಕೊಂಡು ಕಾದಿರುವನು ಕಟಾಕ್ಷಿಸಬೇಕೆಂದು ಪೇಳಿದ ಎಚ್ಚರಿಕೆಗಳಿಂದ ಮುಂದುಗಡೆಯಲ್ಲಿನಿಂತಿರ್ದ ದೇಶಾಧಿಪತಿಗಳಂ ನೋಡಲಾಗ ಕಾಶ್ಮೀರಪತಿಯು ಹಸ್ತದಲ್ಲಿಪಿಡಿದಿರುವ ಸಿರಾಜಿ ವಸ್ತ್ರದೊಳ್ ಮಡಗಿರುವ ರತ್ನಂಗಳಂ ಕೈಕಾಣಿಕೆ ಯಾಗಿ ಒಪ್ಪಿಸಿ ನೂರಾರು ಹೆಜ್ಜೆಗಳ ಹಿಂದಕ್ಕೆ ಬಂದು ಕೈಗಳಂ ಮುಗಿಯಲಾಗ ಮರಾಟಪತಿಯು ಮರಕತಮಣಿಗಳಂ ಕೈಕಾಣಿಕೆಗಳಾಗಿ ಒಪ್ಪಿಸುತ್ತಿರಲು, ಆಕಾಲದೊಳ್ ಅಸಹಾಯ ಶೂರ ವೀರಸರಪತಿ ಬಿರುದೆಂತೆಂಬರ ಗಂಡ ರಾಜಾಧಿ ರಾಜ ಸುಗಂಧ ಮಹಾರಾಜೇಂದ್ರ ಪರಾಕೆಂದು ಒಟ್ಟಾಗಿ ವಂದಿಗಳು ಬಿರುದು ಪದ್ಯಂಗಳಂ ವಖ್ಖಾಣಿಸಿ ಕೈವಾರಂಗಳಂಮಾಡುತ್ತಿರಲು, ಸುಗಂಧ ರಾಜೇಂದ್ರನು ಕಾಶ್ಮೀರಮರಾಟಪತಿಗಳ ಹಸ್ತಂಗಳಂಪಿಡಿದು ಎಲೈ ರಾಯರುಗಳಿರಾ! ದಯಮಾಡಬೇಕೆಂದು ಮಣಿಪೀಠಗಳಲ್ಲಿ ಕುಳ್ಳಿರುವಂತೆನೇಮಿಸಿ,ಲಾಟ ವರಾಟ ಮುಂತಾದ ದೇಶಾಧಿಪತಿಗಳನ್ನು ಉಚಿತಮಾದ ಉಲಾರಗಳಲ್ಲಿ ಕೂಡಿಸುವಂತೆ ಅವಸರದವರಿಗೆ ಆಜ್ಞೆಯಂನಿತ್ತು ಮುಖ್ಯಾ ಮಾತ್ಯನ ಮುಖಮಂನೋಡಲು,ಅಮಾತ್ಯಶ್ರೇಷ್ಠನು ವೀರಸೇನನಿಗೆ ಸಂಜ್ಞೆಯಂಮಾಡಲಾಗ ವೀರಸೇನನು ಅವಸರದ ಗುರಿಕಾರನ ಹಸ್ತದಲ್ಲಿರ್ದರನ್ನದ ತಟ್ಟೆಗಳಂಕಾಶ್ಮೀರಪತಿಯು ಮುಂದುಗಡೆಯಲ್ಲಿ ಮಡಗಿ ರನ್ನದಹಾರಗಳಂಕಂಠದಲ್ಲಿಕಟ್ಟಿ ಮುತ್ತಿನ ತುರಾಯಿಕುಚ್ಚು ಮಣಿಕಿರೀಟಕ್ಕೆ ಮಡಗಿ ಮಂದಾರ ಪುಷ್ಪಮಾಲಿಕೆಗಳಂಒಪ್ಪಿಸಿ,ಮರಾಟಪತಿಗೆ ಮಾಣಿಕ್ಯ ಕುಂಡಲ ಕಿರೀಟಗಳಂಒಪ್ಪಿಸಿ ಮರಕತಮಣಿಹಾರಂಗಳಂ ಕಂಠಕ್ಕೆ ಕಟ್ಟಿ

ಸುತ್ತು ವೀಳ್ಯದ ತಟ್ಟೆಗಳಂ ಗಂಧಕಸ್ತೂರಿಪರಿಮಳ ದ್ರವ್ಯಂಗಳಂ ಒಪ್ಪಿಸಿ, ವೀರಸೇನನು ರಾಜೇಂದ್ರನ ಹಿಂದುಗಡೆಯಲ್ಲಿ ಕುಳಿತಿರಲು, ಮಿಕ್ಕಾದ ದೇಶಾಧಿಪತಿಗಳಿಗೆ ಸುಮತಿಯು ವಿವ್ಯಾಂಬರಾಭರಣಂಗಳಂ ಇತ್ತು ಸನ್ಮಾನವಂ ಮಾಡಲು, ಆಗ ಸುಬುದ್ಧಿಯು ಕಾಶ್ಮೀರಪತಿಯಂ ಕುರಿತು ಎಲೈ ಕಾಶ್ಮೀರಪತಿಯೆ! ನೀವು ನೀತಿಮಾರ್ಗವಂ ಬಿಟ್ಟು ನಡೆಯುವರಲ್ಲ, ಸ್ವಬಲಪರಬಲಂಗಳಂ ಪರಾಮರಿಸದೆ ಕಾರ್ಯಂಗಳಂ ಬಯಸುವವರಲ್ಲ, ಆದರೂ ನಿಮಗೂ ಕಾಮರೂಪದವರಿಗೂ ಬಂದಿರುವ ಕಲಹಂಗಳಂ ನೋಡಿದರೆ ನ್ಯಾಯ ನೀತಿಯಿಂದ ನಡೆಯುವಂತೆ ತೋರಲಿಲ್ಲ, ಕಟ್ಟು ಮೀರಿ ಮನಸ್ಸು ಬಂದಂತೆ ನಡೆಯುವರೀತಿ ಕಾಣಿಸುತಲಿದೆ ಅದೇನಾರೂ ಇರಲಾದರೆ ಇಲ್ಲಿರುವ ನಮ್ಮ ಸೇನಾ ಕಟಕವೂ ನಿಮ್ಮ ಕಾಶ್ಮೀರ ಪಟ್ಟಣಕ್ಕೆ ಸುತ್ತಿರುವ ಸರಸ್ವತೀ ನದೀತೀರದಲ್ಲಿಯ ಸೇನಾಕಟಕವಾದೀತು, ಇಂತು ಸುಗಂಧ ರಾಜೇಂದ್ರನ ಅಪ್ಪಣೆಯಾಗಿದೆಯೆಂದು ಸುಬುದ್ಧಿಯು ಹೇಳುತಲಿರಲು, ಆಗ ಕಾಶ್ಮೀರಪತಿಯು ಮಂತ್ರಿಯ ಮುಖವಂ ನೋಡುತ ಅಯ್ಯಾ ಮಂತ್ರಿಗಳಿರಾ ಕೇಳಿ, ರಾಜೇಂದ್ರನ ಕಟಾಕ್ಷಕ್ಕೆ ಪಾತ್ರ ನಾಗಬೇಕೆಂದು ಕಾದಿರುವ ನಮ್ಮಿಂದ ಎಂದಿಗೂ ಆಗತಕ್ಕದಲ್ಲ, ತಾವು ಅಪ್ಪಣೆ ಕೊಟ್ಟ ಮಾತುಗಳು ಕಾಮರೂಪದ ಅರಸಿಗೆ ಹೇಳತಕ್ಕದ್ದೆಂದು ನುಡಿಯುವ ಕಾಲದಲ್ಲಿ ಸುಗಂಧರಾಜೇಂದ್ರನು ಓಡ್ಡೋಲಗದಿಂದೆದ್ದು ಅಡ್ಡಬೀಳುವ ಜನರಂ ಕಾಣುತ್ತಾ ಕಾಂಡಪಟವಂ ಪ್ರೊಕ್ಕು ಸೇವಕಜನರಿಂದೊಡಗೂಡಿ ಶಕುಂತಶಾಲೆಯೊಳ್ ಶಯ್ಯಾಗೃಹವಂ ಶೇರಿ ಶಯನವಂಗೈಯುತ್ತಿರಲು ;

ಅತ್ತಲಾ ಅಂತಃಪುರದೊಳ್ ಸೌಗಂಧಿಕಾದೇವಿ ಕುಸುಮಲತೆ ಇವರೀರ್ವರೂ ಕುಮಾರ ಭವನದ ಕುರುವಿಂದ ಹಜಾರದೊಳ್ ಕುಳಿತು ಯದುವಂಶತಿಲಕನಾದ ಶ್ರೀಕೃಷ್ಣನ ಪಟ್ಟದರಸಿಯರಾದ ರುಕ್ಮಿಣಿ ಸತ್ಯಭಾಮೆ ಮೊದಲಾದವರ ಬಾಲ್ಯಕೌಮಾರ ಯವ್ವನಗಳಲ್ಲಿ ಬರೆದಿರುವ ಭಾವಚಿತ್ರದ ಪಟಗಳಂ ಪರಾಮರಿಸುತ್ತಾ, ಮತ್ತೂ ದಂಪತಿಯ ಪತ್ನಿಯರ ಕ್ರೀಡಾವಿಹಾರದ ಪಟಂಗಳಂ ನೋಡುವ ಸಮಯದೊಳ್ ಪ್ರಣಯಕೋಪದಿಂ ಕೋಪಾಗಾರದಲ್ಲಿ ಮಲಗಿರುವ ಸತ್ಯಭಾಮೆಯ ಪಾದಂಗಳಲ್ಲಿ ಬಿದ್ದು ಬೇಡಿಕೊಳ್ಳುವ ಶ್ರೀಕೃಷ್ಣನ ಚಿತ್ರಪಟವಂ ನೋಡಿ ಮಾಲತಿಯು ಇದು ಯಾವ

ಪತಿಪ್ರೋಕ್ತಾಜ್ಞ, ಪ್ರೇಮಸಕಾಲ್ಗಳಲ್ಲಿ ಬಿದ್ದು ಒದ್ದಾಡುವಂಬರವ್ರುದಾವದೋ? ಈ
ದೇವರುಗಳು ಪಟ್ಟಪಾಡು ಯಾರಿಗೂಬ್ಯಾಡವೆಂದು ಕಾಕುಹಾಕಿನಗುತ
ಮರಳಿಮರಳಿ ಹಾಸ್ಯವಾತುಗಳಂನಾಡುತ್ತಿರಲು; ಆಗ ಸೌಗಂಧಿಕಾದೇ
ವಿಯು ಕೋಪದಿಂದೊಳುವಂಗಂಟಿಕ್ಕಿ ಅದುಯಾವವಳೀವಸಗುವಳು ಅವಳಂ
ಆಚಿಗೆಕಳುಹಿಸಿ ಬಾರೆಂದು ಭರ್ತೃವತಿಗೆ ಅಪ್ಪಣೆಯಂ ಕೊಡಲಾಗ ಮಾ
ಲತಿಯು ಅಡಿಗಳಿಗೆ ಅಡ್ಡಬಿದ್ದು ತಾಯಿವಡತಿಯೇ! ಇನ್ನೊಮ್ಮೆ ಈ ಪರೀ
ಮಾತುಗಳಂ ಆಡಿದ್ದೆ ಉಂಟಾದರೆ ಆಚೆಗೆ ಕಳುಹಿಸತಕ್ಕದೆಂದು ಬೇಡಿ
ಕೊಳ್ಳುವ ಮಾಲತಿಯಂ ನೋಡಿ ಮಂದಹಾಸದಿಂ ಎಲೀ ಹೊಂತಕಾರ
ಹುಡಿಗಿಯೇ! ದೊಡ್ಡಬ್ಯಾಗಿಸುಮ್ಮನೆ ಇರುವದಿಲ್ಲವಲ್ಲೀ ನೀನೆಂದು ಹೇಳುವ
ಕಾಲದೊಳ್ ಚಿತ್ರಲೇಖೆಯುಬಂದು ಅಡಿಗಳಿಗೆ ಅಡ್ಡಬಿದ್ದು ಸೌಗಂಧಿ
ಕಾದೇವಿ ಕುಸುಮಲತೆ ಇವರೀರ್ವರಂ ನೋಡಿ ತಾಯಿದೇವಿಯರೆ! ಉಚಿತ
ವಾದ ಊಟವಂ ನಾಟಿ ಆಟಗಳಂನಾಡುತ್ತಾ ಪಾತಗಳಂಪದಾಮರಿಸಬಹು
ದೆಂದು ವಿಜ್ಞಾಪನೆಯಂಮಾಡಲಾಗ ಸೌಗಂಧಿಕಾದೇವಿ ಕುಸುಮಲತೆ
ಯಂದೊಡಗೂಡಿ ಚಿತ್ರಲೇಖೆಯಭುಜವಂ ಪಿಡಿದುಬರುತ ಎಲೈಸಖಿಯೇ! ಕ
ಳಿಂಗಪಟ್ಟಣದಿಂದ ಬಂದಬಳಿಕ ಈಭೂವಿಶೇಷ ಏನೊಕಾಣೆ, ಹಸಿವು
ಬಾಯಾರಿಕೆಗಳು ಆಗುವದಿಲ್ಲವಲ್ಲಾ, ಯೇನುಮಾಡಬೇಕೆಂದು ಹೇಳುತ್ತಾ
ಭೋಜನಶಾಲೆಗೆ ಬರುತ್ತಿರಲು, ಆಗಚಿತ್ರಲೇಖೆಯು ಪನ್ನೀರಿನಿಂದ ಪಾದಂ
ಗಳಂತೊಳದು ಮಣಿಪೀಠಂಗಳಲ್ಲಿ ಕುಳ್ಳಿರಿಸಿ, ರತ್ನಪಾತ್ರೆಗಳೋಳ್ ಸಣ್ಣಾ
ಮುತ್ತುಗಳಂತೆ ಮಡಗಿರುವ ಮಧುರಾನ್ನವು ಮನಸ್ಸಿಗೆ ಇಂಪಾಗದೆ ಆಗಲಿ
ಮಾಡಿದ ಮೇಲಾಗರಗಳಂ ನವಿದೂಸವಿಯದೆ ಸರಿಯಾಗಿ ಕೂತಿರುವ ಕು
ಸುಮಲತೆಯಕೈಗೆ ಕಲಸು ಮೇಲಾಗರಗಳಂ ಕೊಡಲು, ಎಲೈ! ಸೌಗಂಧಿ
ಕಾದೇವಿಯುತಂಗಳೂಟವು ನಮಗೆ ಥರವಲ್ಲವೆಂದು ತಾಳದಗಳಂಮೆಲ್ಲುತ್ತ
ಊಟದಲ್ಲಿ ಉಲ್ಲಾಸವಿಲ್ಲದೆ ಪಲ್ಲವಾಧರಿಯರುತಲ್ಲಣಪಡುತ ಪದ್ಮರಾಗದಬ
ಟ್ಟಲುಗಳಲ್ಲಿ ದಿಟ್ಟವಾಗಿ ಮಡಗಿದ ಮಧುರವಾದ ಮಕರಂದರಸವಂಸವಿ
ಯುತ ಎಲೈಸೌಗಂಧಿಕಾದೇವಿಯೇ! ಸುಗಂಧದಿಂ ಘಮಘುಮಿಸುವ ಸುರ
ಭಿಯಹಾಲಿನೋಳ್ ಹದವಾಗಿಹಬ್ಬಿರುವಹಾಲುಕೆನೆಯುಬೆಟ್ಟಸಿಂದಾದರೂ
ಮುಟ್ಟದೆಬಟ್ಟಾಗಿ ಬಿಟ್ಟಿರುವ ಕಾರಣವೇನೆಂದು ಕೇಳುತ್ತಾ ಕುಸುಮಲತೆ

ಮುಕುರುವಿಂದದತಟ್ಟೆಯೋಳ್ ದಟ್ಟವಾಗಿಮಡಗಿರುವವೊಸರುಬತ್ತಿಯಂ ತುತ್ತಾಪರೂ ಮೆತ್ತಗೆ ಮೆಲ್ಲಬಹುದು ಮುಂದುನುಡಿಯಲ್ಲು ಆಗಉಪ್ಪಿನಿಂದೂರಿದಉಪ್ಪಿನಕಾಯಿಗಳಂ ನವಿಮನೋಡುತ್ತ ದಧ್ಯನ್ನವಂ ಕರ್ಪೂರವೂ ಸ್ವಲ್ಪವಾಗಿ ಭುಂಜಿಸುತ ರುಚಿತೋರದೆ ತೊರವಾಗಿಬಾಯಿನೀರೂರಿ ವಾಕರಿಸುತ್ತ ಊಟವೂಬ್ಯಾಡವುಉಪಚಾರವೂಬ್ಯಾಡವೆಂದು ಕೈಗಳಂತೊಳದು ಕರ್ಪೂರದಸೊಗಡು ಸೂಂಕಿದವೀಳ್ಯವಂ ಮೆಲ್ಲುತ್ತ ಚಿತ್ರಲೇಖೆಯಭುಜದೋಳ್ ಹಸ್ತವಂನಿಟ್ಟು ತಡತಡದು ನಿಟ್ಟುಸುರಂಬಿಡುತ ಕಚಭಾರದಿಂ ಕಂಠವಂ ನಿಲ್ಲಿಸುವದಕ್ಕೆ ಬಲವಿಲ್ಲದೆ ಬಲಗಡೆಯಲ್ಲಿ ತಲೆಬಾಗಿ ಕಣ್ಣುಗಳಂತೇಲಿಸುತ್ತ ಪುರ್ಬುಗಳಂಚಲಿಸಿ ಆಯಾಸದಿಂ ಬೇಸರಂಗೊಳುತ,ಮಾಲತಿಯು ಕೊಡುವ ವೀಳ್ಯದಮಡುಪುಗಳಲ್ಲಿ ಮನವುಬಾರದೆ ಮಾರುದೂರವಾದರೂ ದೂರವಾಗಿತೋರಿ ಸುರಗೀಹುವ್ವಿನ ಸುರಟಿನೆಳಳೋಳ್ ಸೌಗಂಧಿಕಾದೇವಿಯು ಕುಮಾರ ಭವನವಂಪೊಕ್ಕು ಗಿಣಿಕಾಳಂಗವೊದಲಾದ ಪಕ್ಷಿಗಳುಪೇಳುವ ಪಾದದಯುಚ್ಚರಿಕೆಗಳಂ ಕೇಳಿ ಕೇಳದಂತೆ ಕೈಗಳಂಕಟ್ಟಿ ಕಾದಿರುವ ಕೆಳದಿಯರಂ ಕಂಡು ಕಾಣದಂತೆ ಮೆಲ್ಲನೆಬರುತ ಪವಳದಪರ್ಯಂಕದಲ್ಲಿ ಹಸನಾದ ಹಂಸತೂಲಿಕಾ ತಲ್ಪದೋಳ್ ಕುಳಿತಿರಲು, ಮಂದಯಾನೆಯು ವೆಗಳೋಳ್ ಬುಜವಂನಿತ್ತು ಕುಸುಮಲತೆಯು ಯುಡಬಿಡದಿರುವ ತೊಡೆಗಳಭಾರದಿಂ ತಡಬಡುತ ಅಲ್ಲಲ್ಲಿ ನಿಂತು ನಿಟ್ಟುಸುರಂ ಬಿಡುತ ಕಮಲದಎಸಳುಗಳಂತೆನವ ಕಣ್ಣಗಳರೆಪ್ಪೆಗಳಂ ಮುಚ್ಚಿ ಮುಚ್ಚದೆ ಇರುವರಪ್ಪರೋಳ್ ಪೇಳಲಶಕ್ಯವಾದ ದೌಹೃದಾಯಾಸವಂ ಅನುಭವಿಸುತ್ತ ಮೆಲ್ಲನೆಬಂದಾ ತೂಗುಮಂಚದೋಳ್ ಕುಳಿತು ಒರುಗುದಿಂಬು ಮೇಲೆ ವಾದೆಯಾಗಿ ಮಲಗಿ ಕುಸುಮಲತೆಯು ಕಡೆಗಣ್ಣಿನಿಂದ ಅಂಕದಲ್ಲಿ ವೀಣೆಯಂ ಮಡಗಿ ಮಲಗಿರುವ ಸೌಗಂಧಿಕಾದೇವಿಯಂ ನಿರೀಕ್ಷಿಸಲು, ಆಗ ಆದೇವಿಯು ಎನಗಿಂತಲೂ ಸುಕುಮಾರಿಯಾದ ಕುಸುಮಲತೆಯು ಅಧಿಕವಾಗಿ ಆಯಾಸಪಡುವಂತೆ ಕಾಣಿಸುತಲಿಧ್ದೇಯೆಂದು ಯೋಚಿಸುತ್ತ ಸೌಗಂಧಿಕಾದೇವಿಯು ಪಲ್ಲವಗಳಂತಿರುವ ಬೆರಳುಗಳಿಂದ ವಲ್ಲಕೀತಂತ್ರಿಗಳಲ್ಲಿ ಷಡ್ಜಾದಿಸ್ವರಗಳಂ ಸರಿನೋಡಿ ಪಂಚಮಸ್ವರದಲ್ಲಿ ಕೊಂಚವಾಗಿ ಸಂಚಾರಿನುಡಿಸುತ ಕಳಾಭಿಜ್ಞಳಾದ ಪ್ರಾಣಕಾಂತನನ್ನೆ ಮನವು ಬಯಸುತ್ತಿರುವಷ್ಟರೋಳ್ ಪೇ

ಳಲಶಕ್ಯವಾದ ಪ್ರೇಮವುಂಟಾಗಲು, ಅಲ್ಲಿಯೇ ನಿಶೆಯುಂಬಿಟ್ಟು ಎಲ್ಲಿ
ಯುಂ ನೋಡದೆ ಪೊಗ್ಗಲಾಗಿ ಮಲಗಿರುವ ದೇವಿಯರಿರ್ವರಂ ನೋಡಿ ಚಿತ್ರ
ಲೇಖೆ ಮೊದಲಾದ ಕೆಳದಿಯರಿರ್ವರಂ ನೋಡಿ ಒಡತಿಯರಿಗೆ ಒಡಲೊಳ್
ಏನೋ ಒಂದು ಬಗೆಯಾದ ಬಳಲಿಕೆ ತೋರಿಯಿರುವುದು, ಊಟವಂ ಮಾ
ಡುವಾಗ ಯಾರಾದರೂ ನೋಟವಂ ನೋಡಿದರೊ? ತಾಟಕಿಯಂತಿರುವ
ತಂಟಲ ಮಾರಿಗೌಡಿಯರು ಮಾಡಿದ ಮಾಟದ ಮಹಿಮೆಯೋ ಎಂದು ಸ
ಖೀಜನಂಗಳ ಗುಸುಗುಂಪು ಮಾತುಗಳಂ ಕೇಳ್ದು, ಚಿತ್ರಲೇಖೆಯು ಚಿಂತೆ
ಯುಂ ಪಡುತ್ತ ಮಂದಯಾನೆಯುಂ ಮಾಲತಿಯುಮಿರ್ವರಂ ಕುರಿತು ಎಲೈ ಸ
ಖಿಯರಿ! ಸಾವಕಾಶವಂ ಮಾಡದೆ ಮನೆದೇವರಿಗೆ ಮುಡುಪಾಗಿ ಮೀಸಲಂ ಕ
ಟ್ಟಿ ದೃಷ್ಟಿ ದೀಪಗಳಂ ತೆಗದು ಮಂದಾಕಿನೀ ಸಮೀಪವನ್ನೈದಿ ಮಂತ್ರ
ಭೂಮಿಯನ್ನಾದರೂ ಬೇಗಪೋಗಿ ತೆಗದುಕೊಂಡುಬಾಯೆಂದು ಮಾಲತಿ
ಯುಂ ಕಳುಹಿಸಿ, ತಾವು ಕಟ್ಟುಗಳಂ ಕಟ್ಟಿ ಕೈಕರ್ಣಿಕೆಗಳಂ ಮಾಡುವ ಕ
ಲವಿಂಕನಂ ಕರೆಯುವಂತೆ ಬಾಗಿಲಗುರಿಕಾರನಿಗೆ ಕಟ್ಟು ಮಾಡಿ, ಮಣಿಪಂ
ಜರದಲ್ಲಿ ಮಲಗಿರುವ ಲೀಲಾಶುಕವಂ ನೋಡಿ ಅಯ್ಯಾ ಲೀಲಾಶುಕವೆ! ಸೌ
ಗಂಧಿಕಾದೇವಿ ಕುಸುಮಲತೆ ಯಿರ್ವರೂ ಮೈಬಳಲಿ ಮಾತಾಡದೆ ಮಲಗಿ
ರುವ ಪರಿಯಂ ನೋಡಿ ಎನ್ನ ಬುದ್ಧಿಗೆ ಹಿಂದೆ ಮುಂದೇನೂ ತೋರದ
ಬಂದೆನು, ಸ್ವಾಮಿ ಲೀಲಾ ಶುಕವೇ! ನೀನೆ ಅಲ್ಲಿಗೆ ದಯಮಾಡಿದಲ್ಲದೆ ಈ ಪರಿ
ಹೀಗೆಂದು ತಿಳಿಯಲಶಕ್ಯ ವೆಂದು ಪೇಳ್ದ ಚಿತ್ರಲೇಖೆಯ ಮಾತುಗಳಂ ಲಾ
ಲಿಸಿ, ಎಲೈ ಸಖಿಯೆ ಕೇಳು, ಅದು ಬಳಲಿಕವು ಅಲ್ಲ, ಬಾಧೆಯು ಅಲ್ಲ, ಆ ಸುಗಂ
ಧ ರಾಜೇಂದ್ರನು ಮಾಡಿದ ಸುಮಾನ ಗಾರಿಕೆ ಮಹಿಮೆ, ನಿನಗೇಕೆ ಹೊ
ತ್ತು ಹೋಗದು ಪೋಗೆಂದು ಸಂತೋಷದಿಂ ನಗುತ ಲೀಲಾ ಶುಕವು ಎಲೈ
ಬಾಲೆಯೆ ಕೇಳು, ಸೌಗಂಧಿಕಾದೇವಿಗೂ ಕುಸುಮಲತೆಯು ರಿರ್ವರಿಗೂ ಮ
ಕರಂದ ಪುಷ್ಪದಂತ ರೆಂಬ ಹೆಸರಿನಿಂದ ನಾನೆ ಉದಯಿಸುವೆನೆಂದು ಮ
ನ್ಮಥನು ವನದೊಳ್ ನಿಶ್ಚಲಶಿ ಯೆನಗೆ ಪೇಳಲು ಆಗ ನಾನು ಮದನ ಮ
ಹಾರಾಯನೆ ಸೌಗಂಧಿಕಾ ದೇವಿಯ ಉದರದಲ್ಲಿ ಹುಟ್ಟಿ ನಡಕ್ಕೆ ನಿಮಿ
ತ್ತ ವೇನು ಯೆಂದು ವಿಜ್ಞಾಪನೆಯಂಗೈಯಲು, ಆಗ ಮದನನು ಅಯ್ಯಾ
ಲೀಲಾ ಶುಕವೇ! ಸುಗಂಧ ರಾಜೇಂದ್ರನಿಗೂ ನನಗೂ ಜನ್ಮಾಂತರ್ಯದ ಸಂ

ಬಂಧನೆ ಬರುತ್ತಾನೆಂದು ಅಪ್ಪಣೆಯಂ ಕೊಟ್ಟು ಅದೃಶ್ಯನಾಗಿಪೋದ ನೆಂದು ವಿಜ್ಞಾಪಿಸಿ, ಚಿತ್ರಲೇಖೆಯಂ ಕಳುಹಿಸಲು, ಆಗ ಚಿತ್ರಲೇಖೆ ಕುಮಾರಘನಸನಂ ಪ್ರೋಕ್ಷ್ಯ ಕುರುವಿಂದಮಣಿಪೀಠಗಳಲ್ಲಿ ಕುಳಿತು ನವರಸ ಮಂಜರಿಯೆಂಬ ನಾಟಕವಂ ಅವಲೋಕಿಸುತ್ತಿರುವ ದೇವಿಯರಂ ಕಂಡು ಅಡಿಗಳಿಗೆ ಅಡ್ಡಬಿದ್ದು ಒಡತಿಯೆ! ನಮ್ಮ ಲೀಲಾ ಶುಕವು ಗುಣವತಿ ದೇವಿ ಮೊದಲಾದ ವೃದ್ಧರಾಯರ ಪಟ್ಟದರಸಿಯರಿಗೆ ನಿಮ್ಮ ಈರ್ವರ ಶರೀರಾಯಾಸವಂ ತಿಳುಹಿಬಾ ವೆಂದು ಕಟ್ಟುಮಾಡಿದ್ದಕ್ಕೆ ನಾನುಪೋಗಿ ಬರುವೆನೆಂದು ವಿಜ್ಞಾಪನೆಯಂ ಮಾಡಿ, ಸರಸ್ವತಿವಿಲಾಸವೆಂಬ ಹಜಾರಕ್ಕೆ ಪೋಗಿ ಗುಣವತಿ ದೇವಿಯರ ಪಾದಂಗಳಿಗೆ ಅಭಿವಂದಿಸಲು, ಆದೇವಿಯು ಎಲೈ ಚಿತ್ರಲೇಖೆ! ನಮ್ಮ ಸೊಸೆಯರಾದ ಸೌಗಂಧಿಕಾ ಕುಸುಮಲತೆಯರೀರ್ವ್ವರೂ ಕುಶಲವೆಯೆಂದು ಕೇಳುತ್ತ, ಸುಗಂಧ ಕುಮಾರಸುಕುಮಾರ ಭವನಕ್ಕೆ ರಾತ್ರಿಯೊಳ್ ಬರುವುದುಂಟೆ ಯೆಂದು ಅಪ್ಪಣೆಯಂ ನೀಯ್ಯಲು, ಆಗ ಚಿತ್ರಲೇಖೆಯು ತಾಯಿ ಗುಣವತಿ ದೇವಿಯೆ! ಈಗ ಹತ್ತಾರು ದಿವಸಗಳಿಂದಲೂ ಸುಗಂಧ ಮಹಾರಾಜೇಂದ್ರನ ಪಟ್ಟದ ರಾಣಿಯರು ಹೊಸ್ತಾದ ಗುಣಂಗಳಂ ತಾಳಿ ಮನಸ್ಸು ಯೆಲ್ಲಿಯು ನಿಲ್ಲದೆ ಸಖೀಜನರೊಡನೆ ಸವಿಯಾಗಿ ಮಾತುಗಳನ್ನಾಡದೆ ಮೌನದಿಂದಿರುವರು, ಮತ್ತೂ ಮಣಿಪಂಜರಂಗಳಲ್ಲಿ ಇರುವ ಗೃಹಶಾರಿಕೆ ಶುಕಂಗಳಿಗೆ ಹತ್ತಾರು ಮಾತುಗಳಂ ಪೇಳುವಷ್ಟರೊಳ್ ಎಷ್ಟೋ ಆಯಾಸವಂ ಪಟ್ಟು ಪುರ್ಬ್ಬುಗಳಂ ಗಂಟಿಕ್ಕಿ ನಿಟ್ಟುಸಿರಂ ಬಿಡುವರು, ಇಂತು ಮಲ್ಲದೆ ಊಟದಲ್ಲಿಯೂ ಉಪೇಕ್ಷೆಯುಂ, ಆಟವಂ ಆಡುವಲ್ಲಿ ಆಯಾಸವುಂ, ನಡೆಗಳಲ್ಲಿ ಬಳಲಿಕೆಗಳುಂಟಾಗಿ ಯಾವಪದಾರ್ಥವೂ ಮನಸ್ಸಿಗೆ ಬೇಕಾಗದೆ ಶರತ್ಕಾಲಚಂದ್ರಿಕೆಗಳಂತೆ ಶರೀರವು ಬಿಳುಪೇರಿ ಬಳ್ಳಿಯಂತೆ ಬಳಕುತ್ತಾ ಬಲವು ತಪ್ಪಿ ಅಬಲೆಯರಿಗೆ ಕಂಡು ಕೇಳದ್ದೆಲ್ಲ ಬಳಲಿಕೆ ಉಂಟಾದದ್ದರಿಂದ ಪಾದಕ್ಕೆ ಬಿನ್ನವಿಸಬೇಕೆಂದು ಬಂದನೆಂದು ಪೇಳ್ದ ಚಿತ್ರಲೇಖೆಯ ಮಾತುಗಳಂ ಲಾಲಿಸಿ, ಕ್ಷಣ ಮಾತ್ರಸುಮ್ಮನೆ ಇದ್ದು ಆಬಳಿಕ ಗುಣವತಿದೇವಿಯು ಈಗ ಪೇಳ್ದ ರೀತಿಇಂದ ಎನ್ನ ಬುದ್ಧಿಗೆ ಗರ್ಭ ಚಿಹ್ನೆಗಳಂತೆತೋರುತಲಿವೆ ಇಂತು ಮನದೊಳ್ ಯೋಚಿಸುತ್ತ ಮಂಜುವಾಣಿಯು ಹಸ್ತಲಾಗದಿಂ ಬರುತ್ತ

ಎಲೇ ಚಿತ್ರಲೇಖೆಯೇ! ಸೌಗಂಧಿಕಾ ದೇವಿಗೆ ಕಲಗುವೂಕಿ ಯೆಷ್ಟು ದಿವಸವಾಯಿತು, ನಿನಗೆ ಗೊತ್ತುಂಟೋ ಯೆಂದು ಅಪ್ಪಣೆಯಂ ನೀಯಲು, ಆ ಸಖಿಯು ತಾಯಿ ಒಡತಿಯೆ! ಎರಡೂವರೆ ತಿಂಗಳಿಂದ ಈಚೆಗೆ ಕುಳ್ಳಿರಲಿಲ್ಲಾ ಎಂದು ವಿಜ್ಞಾಪಿಸಿದ ಮಾತಂ ಕೇಳಿ ನಗುತ್ತಾ ಮಂಜುವಾಣಿಯು ಮುಖವಂ ನೋಡಿ ಎಲೈ ಸಖಿಯೆ! ಗರ್ಭವೇ ನಿಂತಿರಬೇಕೆಂದು ತೋರುತಲಿಧೆ ಎಂದು ಅಪ್ಪಣೆಯಂ ಕೊಡುತ್ತ ಚಿತ್ರಶಾಲೆಗೆ ಬಂದು ಗುಣವತಿ ದೇವಿಯು ಮಣಿಮಂಜರಿ, ಕನಕಲತೆ, ಕಮಲಿನಿ, ಚಂದ್ರಕಳೆಯರಿಂದೊಡಗೂಡಿ ಕುಮಾರ ಭವನವಂ ಕುರಿತು ಬರುತ್ತಿರುವ ಸಮಯದೋಳ್ ಮಾಲತಿಯು ಸೌಗಂಧಿಕಾದೇವಿಯು ಸಮೀಪವನೈದಿ ತಾಯಿ ಒಡತಿಯೆ! ಚಿತ್ರಶಾಲೆಯಿಂದ ಗುಣವತಿ ದೇವಿಯು ಸಖೀಜನ ಸಮೇತಳಾಗಿ ಕುರುವಿಂದ ಕಂಬದ ಕೈಸಾಲಿನಲ್ಲಿ ಬರುತ್ತಲಿರ್ಧಾರೆಂದು ಪೇಳಲಾಗ ಮಂದಯಾನೆಗೆ ಮಣಿ ಪೀಠಂಗಳು ಸಜ್ಜು ಮಾಡುವಂತೆ ಕಟ್ಟು ಮಾಡುತ್ತಿರುವ ಕಾಲದೋಳ್ ಪಾದದ ಯೆಚ್ಚರಿಕೆಗಳಂ ಕೇಳುತ್ತಾ ಪವಳದ ಹಾವಿಗೆಗಳಂ ಮೆಟ್ಟಿಕೊಂಡು ಮಂಜುವಾಣಿಯು ಭುಜದೋಳ್ ಹಸ್ತವನ್ನಿಟ್ಟು ಮಣಿಮಂದಿರವಂ ಪ್ರವೇಶಿಸಲು, ಆಗ ಸೌಗಂಧಿಕಾ ಕುಸುಮಲತೆಯರೀರ್ವರೂ ಮಂಚದಿಂದೆದ್ದು ತಡಬಡುತ ತಪ್ಪು ಹೆಜ್ಜೆಗಳನ್ನಿಡುತ ಸಮೀಪವನೈದಿ ಪ್ರಣಾಮವಂ ಗೈಯಲಾಗ ಗುಣವತಿ ದೇವಿಯು ತನ್ನ ಹಸ್ತದಿಂದ ಸೊಸೆಯರ ಕೈಗಳಂ ಪಿಡಿದೆತ್ತಿ ಮೊಗವಂ ಮುದ್ದುಗೊಳುತ ಗದ್ದಿಗೆಯೋಳ್ ಕುಳಿತು ಮಣಿಮಂಜರಿ ಮೊದಲಾದ ರಾಜಕಾಂತೆಯರ ಕೈಗಳಂ ಪಿಡಿದು ಸಮೀಪದಲ್ಲಿರ್ದ ಮಣಿಪೀಠಂಗಳಲ್ಲಿ ಕುಳ್ಳಿರಿಸಿ, ಗುಣವತಿದೇವಿಯು ಸೌಗಂಧಿಕಾ ಕುಸುಮಲತೆಯರೀರ್ವರಿಗೂ ಕೂಡುವಂತೆ ಕಟ್ಟು ಮಾಡಲಾ ದೇವಿಯರೀರ್ವರೂ ಮಣಿ ಮಂಜರಿ ಮೊದಲಾದ ರಾಜಕಾಂತೆಯರ ಪಾದಂಗಳಿಗೆ ಪ್ರಣಾಮವಂ ಮಾಡಲಾ ರಾಜಕಾಂತೆಯರು ಕಂತುವಿಗೆ ಜಯಂತನಿಗೆ ಸಮಾನರಾದ ಪುತ್ರರಂ ಪಡೆದು ಪತಿವ್ರತಾಶಿರೋಮಣಿಗಳಾಗಿ ಸೌಮಂಗಲ್ಯದಿಂ ಸುಖವಾಗಿರಿ ಯೆಂದು ಹರಸಿ ಸಮೀಪದಲ್ಲಿ ಸಜ್ಜುಮಾಡಿರುವ ಸರಿಗೆ ಉಲಾರಂಗಳಲ್ಲಿ ಕುಳಿತಿರಲು, ಆಗ ಗುಣವತಿ ದೇವಿಯು ಸೊಸೆಯರ ಅಂಗವಂ ಹಸ್ತದಿಂದ ಸವರುತ್ತ ಎಲೈ ಮಣಿಮಂಜರಿಯೇ! ಈ ಹುಡಗೀ

ದುರು ಊಟವಂ ಬಿಟ್ಟು ಮಲ್ಲಿಗೆ ಬಳ್ಳಿಯಂತೆ ಪುಷ್ಪಗಳು ಕೃಶವಾಗಿ ಉಸಿರು ಬಿಟ್ಟರೆ ಬೇಸರಬರುವದೋ ಏನೋಯೆಂಬ ಭಯದಿಂದ ಮಾತುಗಳನ್ನಾಡದೆ ತಲೆಯಂ ಬಾಗಿಸಿಕೊಂಡು ಕುಳಿತಿರುವ ಭಾವನಂ ನೋಡಿದಡೆ ಎನ್ನ ಬುದ್ಧಿಗೆ ಏನೊ? ಬಂದು ಆಶ್ಚರ್ಯ ಉಂಟಾಯಿತೆಂದು ಹೇಳುತ್ತಿರುವ ಕಾಲದೋಳ್ ಮಣಿಮಂಜರಿಯು ನಸುನಗುತ ಗುಣವತಿಯ ಮುಖವಂ ನೋಡಿಯಲೆ ಅಕ್ಕಯ್ಯಾ! ನೀವು ಮರತರೋ ಏನೋಕಾಣೆ, ಇಪ್ಪತ್ತು ವರುಷದ ಆಚೆಗೆ ಬಂದಾವರ್ತಿ ನಿಮಗೆ ಈಬಗೆಯಾದ ಚಿಹ್ನೆಗಳುಕಂಡಿರುವಾಗ ಯುವತಿಯಾದ ಮಂದಾಕಿನಿಯು ಬಂದು ನೋಡಿದ ಬಳಿಕ ಆ ಲಕ್ಷಣಂಗಳು ಮಂಜುವಾಣಿಗೆ ಎನಗೆ ತಿಳಿಯುಬಂತು ಅಂತಿರ್ವ ಲಕ್ಷಣ ಚಿಹ್ನೆಗಳು ಇವೆಂದು ಹೇಳುತ್ತಿರುವ ಮಣಿಮಂಜರಿಯಂ ಕುರಿತು ಎಲ್ಯೆ ಚದುರಕಾಂತೆಯೆ ! ನೀನುಬಲ್ಲೇ ಹಾಸ್ಯಗಾತಿ ಎಂದು ಹೇಳಲಾಗ ರಾಜಕಾಂತೆಯರೆಲ್ಲರೂ ಮಂಜುವಾಣಿಯಂ ನೋಡಿ ಮುಖಗಳಂ ಮಾರಾಗಿ ತಿರಿಗಿಸಿ ನಗುಗೊಳುತ್ತಿರಲು, ಬಳಿಕ ಗುಣವತೀದೇವಿಯು ಮಣಿಮಂಜರಿಯಂ ಕುರಿತು ಎಲ್ಯೆ ತಂಗಿಯೇ! ನೊಸೆಯರಿಗೆ ಗುಜರಾತಿಯ ಶಿಸ್ತುಗಳಂ ಮಾಡಿ ಕರದುಕೊಂಡುಬಾ ಯೆಂದು ಅಪ್ಪಣೆಯಂ ಕೊಡಲಾಗ ಮಣಿಮಂಜರಿಯು ಪವಳವಕಂಭ ಕೈಸಾಲಿನಲ್ಲಿಕಟ್ಟಿರುವ ಕಾಂಡಪಟಕ್ಕೆ ಮರೆಯಾಗಿ ಸೌಗಂಧಿಕಾಕುಸುಮಲತೆಯರೀರ್ವರಂ ಕರದುಕೊಂಡು ಪೋಗಲು, ಆ ಬಳಿಕ ಗುಣವತಿದೇವಿಯು ಮಂಜುವಾಣಿಯಂ ಸಮೀಪಕ್ಕೆ ಕರೆದು ಕೆಲವು ಕೆಳದಿಯರನ್ನಾಚೆಗೆ ಕಳುಹಿಸುವಂತೆ ಚಿತ್ರಲೇಖೆಗೆ ನೇಮಿಸಿ, ಮಾಲತಿಯು ಮಲ್ಲಿಗೆಹೂವ್ವುಗಳಿಂದ ಕಟ್ಟಿರುವ ಬೀಸಣಿಗೆಯಂ ಬೀಸುತ್ತಿರಲು, ಎಲ್ಯೆ ಮಂಜುವಾಣಿಯೇ! ಈಗ ಸೌಗಂಧಿಕಾ ಕುಸುಮಲತೆಯರಂ ನೋಡಿದ್ದೇವಲ್ಲಾ ಇವರ ಅವಯವಲಕ್ಷಣಂಗಳು ನಿನ್ನ ಬುದ್ಧಿಗೆ ಏನು ತೋರುತಲಿವೆ ಎಂದು ಅಪ್ಪಣೆಯಂಕೊಡುವ ಗುಣವತಿದೇವಿಯ ಮುಖಕಮಲವನ್ನೋಡಿ ಮಂಜುವಾಣಿಯು ನಸುನಗುತ ತಾಯಿ ಒಡತಿಯೆ, ಆರಟ್ಟರಾಜಪುತ್ರಿಯಾದ ಕುಸುಮಲತೆಗೆ ಕಳಿಂಗರಾಜ ಪುತ್ರಿಯಾದ ಸೌಗಂಧಿಕಾದೇವಿಯರಿಗೆ ಪ್ರತಿಕ್ಷಣದಲ್ಲಿಯೂ ದೌಹೃದಚಿಹ್ನೆಗಳು ಥರಥರವಾಗಿ ಕಾಣಿಸಿಕೊಳ್ಳಲಾಗ ಚಿನ್ನದ ಬಳ್ಳಿಗಳಂತೆ ತೋರುವ ಶರೀರಂಗಳು ದೋಹದ ವಿಶೇಷಂಗಳಿಲ್ಲದೆ

ಮಲ್ಲಿಗೆ ಬಳ್ಳಿಗಳಂತೆ ಕಾರ್ಶ್ಯಭಾವದಿಂ ಅಂಗಂಗಳಿಗೆ ಅಳತೆಯಾಗಿರ್ದ ಆಭರಣಂಗಳು ಅಲ್ಲಲ್ಲಿಯೇ ಸಡ್ಡಿಲವಾಗಿ ಜಗಳುತ್ತಾ ಚಂದ್ರಕಿರಣಂಗಳ ಚೈತನ್ಯರೂಪವಂ ತಾಳಿದವೋಯೆಂಬಂತೆ ಶರೀರಂಗಳು ಬಿಳಿಪೇರಿ ಕೊನೆ ಇಲ್ಲದೆ ಇರುವ ಕೋರಿಕೆಗಳೂರಿ ಮೇರೆ ಮೀರಿ ಭಾರಿಭಾರಿಗೂ ಪರಿ ಪರಿಯಾಗಿ ಪರಿಭಾವಿಸದೋಳ್ ಮುಳುಗಿರುವ ಮನಸ್ಸುಳುಂಟಾದುದರಿಂದ ಆವುಸಸುಗರ್ಭಚಿಸ್ಥೆಗಳೆಂದು ಚನ್ನಾಗಿ ಮನವಿಟ್ಟು ಮನ್ನಿಸಬೇಕು, ಇಂತುಮಲ್ಲದೆ ಗರ್ಭಿಣಿಯರಿಗೆ ವಳಿತ್ರಯವು ರೇಖಾರೂಪವಾದ ವಿಕಾರವಂಬಿಟ್ಟು ನಿರ್ವಿಕಾರರೂಪವಾದ ಸತ್ಯವಂಸೈದಿದವೋ ಯೆಂಬಂತೆ ಉದರವು ವೃದ್ಧಿಯಂಸೈದುತ್ತಿರುವಷ್ಟರೋಳ್ ಆಕಾಶವಂತೆ ತೋರುತ್ತಿರ್ದ ಕಟಿಪ್ರದೇಶವು ಸಾವಕಾಶವಾಗಿ ಕಾಣಿಸುತ್ತಾ ಕಮಲಮಧ್ಯದಲ್ಲಿ ಕಾಣಲ್ಪಡುವ ಕರ್ಣಿಕವಂತೆ ಮೇಲ್ಗಡೆಗೆ ಉಬ್ಬಿಬರುವ ಹೊಕ್ಕಳಿಂದ ಪೊರಟಿರುವ ಕರಿಯಿರವೆ ಸಾಲುಸಂತೆ ಕಪ್ಪೇರಿ ಬರುವ ಬಾಸಿಗೆ ಇಂದಲು ಶೃಂಗಾರ ರಸವು ತುಂಬಿದ ಸುವರ್ಣ ಕಲಶಂಗಳಂತಿರುವ ಕುಚಗಳಂ ಮೇರೆಮೀರಿಕೈಗಳಂ ಸೋಕಿಸವಂತೆ ಮದನಮಹಾರಾಯನುಮಾಡಿದ ಮೋಲ್ಮುದ್ರೆಯೋಯೆಂಬಂತೆ ಸ್ತನಾಗ್ರಂಗಳು ಸೈಲ್ಯವನ್ನೈದುವವರಿಂದ ಮಾಕಂದ ಮೊದಲಾದ ವೃಕ್ಷಂಗಳಿಗೆ ದೋಹದಂಗಳು ಮಾಡುವರೀತಿಯಿಂದ ಗರ್ಭಿಣಿಯರಿಗೂ ಗರ್ಭದೋಹದ ರೂಪವಾದ ಮೃತ್ತಿನಲ್ಲಿ ಆಸಕ್ತಿಉಂಟಾಗಿ ಮತ್ತು ಗೊಂಡಂತೆಮನವು ಉದಾಸೀನಭಾವವೆ ಉಂಟಾದುದರಿಂದ ಯೆಳೆಗರ್ಭಲಕ್ಷಣಂಗಳೇ ಸರಿಯೆಂಮುಮುಂಜುವಾಣಿಯು ಪೇಳುತಿರುವಷ್ಟರೋಳ್ ದೌಹೃದಾಯಾಸದಿಂದಳವಟ್ಟಬಳ್ಳಿಗಳಂತೆ ಸೋಲುತ ಕಾಂಡಪಟದಿಂ ಪೊರಟುಬಂದು ಸೌಗಂಧಿಕಾ ಕುಸುಮಲತೆಯರೀರ್ವರು ಗುಣವತೀದೇವಿ ಮೊದಲಾದ ರಾಜಕಾಂತೆಯರ ಅಡಿಗಳಿಗೆ ಅಡ್ಡಬಿದ್ದು ಉಚಿತಮಾದ ಸರಿಗೆ ಉಲಾರದೋಳ್ ಕುಳಿತಿರ್ದಸೊಸೆಯರಂ ನಿರೀಕ್ಷಿಸಿ, ಆನಂದಭರಿತಳಾಗಿ ಮುಹೂರ್ತಮಾತ್ರ ಮೌನದಿಂದಿದ್ದು ಆಬಳಿಕ ಮಂಜುವಾಣಿಯಂ ಅವಲೋಕಿಸಿ, ಎಲೈ ಸಖಿಯೇ! ನಮ್ಮರಮನೆಸಂಪ್ರದಾಯಾನುಸಾರವಾಗಿ ಗರ್ಭಿಣಿಯರಿಗೆ ಮಾಡತಕ್ಕ ಉತ್ಸವಂಗಳಂ ಬೆಳೆಯಿಸಬೇಕಾದುದರಿಂದ ನೀನು ಈಕುಮಾರಭವನದಲ್ಲಿ ಕಾದಿರೆಯೆಂದು ಕಟ್ಟುಮಾಡಲಾಗ ಮಂಜುವಾಣಿಯು

ಮಹಾಪ್ರಸಾದವೆಂದು ಕೈಗಳಂ ಮುಗಿದು ನಿಂತಿರಲು, ಆಗ ಗುಣವತೀದೇವಿ ಮೊದಲಾದ ರಾಜಕಾಂತೆಯರು ಗಂಧಕಸ್ತೂರಿ ಮೊದಲಾದ ಪರಿಮಳ ದ್ರವ್ಯಂಗಳಂ, ಪಾರಿಜಾತಪುಷ್ಪಗಳಿಂದ ಬೆರಸಿ ಕಟ್ಟಿರುವ ಮಂದಾರಪುಷ್ಪ ಮಾಲಿಕೆಗಳಂ, ದ್ರಾಕ್ಷೇಕ್ಷು ಮಕರಂದ ಮೊದಲಾದ ಫಲಂಗಳಂ ತೆಗೆದುಕೊಂಡು ಸರಸ್ವತೀ ವಿಲಾಸದ ಹಜಾರವಂ ಕುರಿತು ಹೋಗುತ್ತಿರುವಕಾಲದೋಳ್ ಸಖೀಜನಂಗಳು ಸಾಲಾಗಿ ಕೈಗಳಂ ಕಟ್ಟಿಕೊಂಡು ಯೆಚ್ಚರಿಕೆ ಸ್ವಾಮಿ ಪರಾಕೆಂಬ ಶಬ್ದಂಗಳಂ ಘಲ್ಲುಘಲ್ಲೆಂದು ಮೊರೆಯುವ ಕಾಲ್ಗೆಜ್ಜೆಗಳ ಮಧುರ ಧ್ವನಿಗಳಂ ಕೇಳಿ, ಕಂಚುಕಿಗಳು ಸುಚರಿತ್ರಮಹಾರಾಯನಿಗೆ ವಿಜ್ಞಾಪನೆಯಂ ಮಾಡಲಾಗ ರಾಜೇಂದ್ರನು ಸಮೀಪದಲ್ಲಿ ಕುಳಿತಿರುವ ಸರಸ್ವತೀಸಹಾಯಶಾರದ ಶರೀರರೆಂಬ ವಿದ್ವಾಂಸರ ಮುಖಂಗಳಂ ನೋಡಲಾ ವಿದ್ವಾಂಸರು ರಾಯನಭಾವವನ್ನರಿತು ಆಚೆಗೆ ಮರೆಯಾಗಿ ಪೋಗುತ್ತಿರುವಷ್ಟರೋಳ್ ಆ ಹಂಸ ಗಮನೆಯರತ್ಯಂತ ಸಂತೋಷದಿಂ ಬಂದು ರಾಯನ ಚರಣಂಗಳಿಗೆ ಶರಣವಂ ಮಾಡಿ ಫಲಪುಷ್ಪ ಮೊದಲಾದ ಮಂಗಳ ದ್ರವ್ಯಂಗಳಂ ಒಪ್ಪಿಸಿ ನಿಂತಿರಲು, ಆಬಳಿಕ ಸುಚರಿತ್ರಮಹಾರಾಯನು ಗುಣವತೀದೇವಿಮೊದಲಾದ ನಿಜಕಾಂತೆಯರೆಲ್ಲರಂ ನೋಡಿ ಏನೋ ಬಂದ ಪೂರ್ವವಾದ ಶುಭಕಾರ್ಯಮಂ ಸೂಚನೆಯಂಗೈಬೇಕೆಂದು ಬಂದಿರುವರೆಂತಾ ಮನದೋಳ್ ನಿಶ್ಚೈಸಿ ನೀವೆಲ್ಲರೂ ಒಟ್ಟುಗೂಡಿ ಬಂದಿರುವ ಪರಿಯೇನೆಂದು ಕೇಳಲಾಗ ಮಣಿಮಂಜರಿಯು ಎಲೈ ಸ್ವಾಮಿಯೇ! ನಿಮ್ಮ ಸುಗಂಧಕುಮಾರನ ಪಟ್ಟದರಸಿಯರಾದ ಸೌಗಂಧಿಕಾದೇವಿ ಕುಸುಮಲತೆಯು ಈರ್ವರೂ ದೌಹೃದಲಕ್ಷಣಂಗಳಂ ತಾಳಿರುವ ಶುಭವಾರ್ತೆಯಂ ಪಾದಕ್ಕೆ ತಿಳುಹಿಸಬೇಕೆಂದು ಬಂದೆವೆಂದು ವಿಜ್ಞಾಪನೆಯಂ ಮಾಡಲಾಗ ಸುಚರಿತ್ರರಾಯನು ಅತ್ಯಂತಸಂತೋಷದಿಂದ ಮೈಯುಬ್ಬಿ ಮುಹೂರ್ತಮಾತ್ರ ಸುಮ್ಮನೆ ಇದ್ದು ಆಬಳಿಕ ನಸುನಗುತ ಮನದೋಳ್ ಮಹಾದೇವಿಯು ಪೇಳಿದ ದೇವರಹಸ್ಯವಂ ನೆನೆದು ನಿಜಕಾಂತೆಯರ ಮುಖ ಕಮಲಂಗಳಂ ನೀಕ್ಷಿಸಿ ಎಲೈ ಕಾಂತೆಯರೇ ! ನಮ್ಮ ಕುಲದೇವತೆಯಾದ ಚಾಮುಂಡಿಕಾದೇವಿಯ ಚರಣ ಕಟಾಕ್ಷದಿಂದೇನೇನು ಶುಭಕಾರ್ಯಂಗಳು ವಡಗೂಡಿಬರುವವು, ಮನುಷ್ಯಮಾತ್ರರಾದ ನಾ

ವೇನು ಬಲ್ಲೆವು, ಆ ಪರಮೇಶ್ವರಿಯೇ ಬಲ್ಲಳೆಂದು ಅಪ್ಪಣೆಯುಮಂ ಕೊಡುತ್ತೆ ಗ
ದ್ದಿಗೆ ಯಿಂದೆದ್ದು ನಿಜಕಾಂತೆಯರ ಕರಲಾಗದಿಂ ಕನಕಮಂದಿರಮಂ ಕು
ರಿತು ತೆರಳುತ್ತಿರಲು;

ಅತ್ತಲಾ ಕುಮಾರವನದೊಳ್ ಮಂಜುವಾಣಿಯು ಚಿತ್ರಲೇಖೆ
ಯಂ ಕರೆದು ಎಲೈ ಸಖಿಯೆ! ಶತಾಂತಶಾಲೆಯೊಳ್ ವಿಜಯಂಗೈದಿರು
ವ ಸುಗಂಧರಾಜೇಂದ್ರನ ಸಮೀಪವನ್ನೈದಿ ಈ ಶುಭ ಸಮಾಚಾರವಂ ವಿ
ಜ್ಞಾಪನೆಯಂ ಮಾಡಿ ಬಾಯೆಂದು ಪೇಳಲಾಗ ಚಿತ್ರಲೇಖೆಯು ಹಂಸತೂ
ಲಿಕಾತಲ್ಪದೊಳ್ ಮಲಗಿರುವ ದೇವಿಯರ ಸಮೀಪವನ್ನೈದಿ ತಾಯಿವಡ
ತಿಯೆ! ಸುಗಂಧಮಹಾರಾಜೇಂದ್ರನಚರಣಕ್ಕೆ ಈಗ ನಡದ ಸಂತೋಷದ ಸ
ಮಾಚಾರವಂ ಬಿನ್ನೈಸಿಬರುವೆನೆಂದು ಪೇಳಿದ ಚಿತ್ರಲೇಖೆಯಂ ವೀಕ್ಷಿಸಿ
ಸೌಗಂಧಿಕಾದೇವಿಯು ತನ್ನ ಹಸ್ತದಲ್ಲಿರ್ದ ವೀಳ್ಯದ ಮಡಪುಗಳಂ ಪರಿ
ಮಳಭರಿತವಾದ ಪಾರಿಜಾತ ಪುಷ್ಪಮಾಲಿಕೆಗಳಂ ಕೊಟ್ಟು ಎಲೆ ಸಖಿ
ಯೇ! ಎನ್ನ ಪ್ರಾಣಕಾಂತನಾದ ರಾಜೇಂದ್ರನು ಸೆನ್ನೆ ದಿವಸ ರಾತ್ರಿಯೊಳಿ
ಲ್ಲಿಗೆ ಆರೋಗಣೆಗೆ ಬರಬೇಕೆಂದು ವಿಜ್ಞಾಪನೆಯಂ ಮಾಡೆಂದು ಅಪ್ಪಣೆ
ಯಂ ನಿತ್ತು ಕಳುಹಲು, ಚಿತ್ರಲೇಖೆಯು ವೀಳ್ಯದಮಡುಪುಗಳಂ ರನ್ನದ
ತಟ್ಟೆಯೊಳ್ ಮಡಗಿ ಮಾಲತಿಯ ಕೈಪಿಡಿದು ನವರಂಗಹಜಾರವಂ ದಾಂ
ಟಿ ನಾಟಕಶಾಲೆಯು ಮೆಲ್ಲಮೆಲ್ಲನಿಂಬಿಳಿದು ಮೇಲಾದ ಸರಿಗೆಯಂ ಚರಣ
ಸೇರಿರುವ ಕಲಹಂಸ ಪಂಕ್ತಿಗಳಿಂದೊಡಗೂಡಿದ ಕಳಿಂಗದೇಶದ ಬಿಳಿಸೀರೆ
ಯ ಸೆರಿಗಳು ಸಾಲಾಗಿ ಚಲಿಸುವಂತೆ ನಡೆಯುತ್ತಾ ವಡ್ಯಾಣದ ಕಿರುಘುಂ
ಟೆಗಳ ಕಿಣಕಿಣಶಬ್ದಂಗಳಂ, ರನ್ನದ ಕಾಲುಂಗುರಗಳ ಝಣಿಝಣಿರೆನ್ನುವ ಶ
ಶಬ್ದಂಗಳಂ, ಘಲ್ಲುಘಲ್ಲೆಂದು ಮೊರೆಯುವ ಕಾಲಂದಿಗೆಗಳು ಮಧುರಾರವಂ
ಗಳಂ ಕೇಳಿ ಕಲವಿಂಕನು ಎಲೈ ಮಹಾನುಭಾವನಾದ ರಾಜೇಂದ್ರನೇ! ಅಂ
ತಃಪುರದ ವಳ ಮಾರ್ಗದಿಂದ್ಯಾರೊ ಸ್ತ್ರೀಯರು ಬರುವಭಾವವಾಗಿ ತೋ
ರುತಲಿದೆಯೆಂದು ವಿಜ್ಞಾಪಿಸಲಾಗ ರಾಜೇಂದ್ರನು ಸಮೀಪದಲ್ಲಿರ್ದ ಮಂತ್ರಿ
ಯಂ ನವರಂಗಹಜಾರದ ಮೇಲ್ಗಡೆಯಲ್ಲಿ ಸಂಚರಿಸುವ ಸಖಿಯರ್ಯಾರೋ
ನೋಡಿ ಬಾಯೆಂದು ಕಳುಹಿಸಿ ಚಿತ್ರಾಣಿಯ ಮುಖವಂ ನೋಡಿ ಎಲೆ ಕಳಾವ
ತಿಯೆ, ಎನ್ನ ದಕ್ಷಿಣಭುಜವು ಚಲಿಸುವ ನಿಮಿತ್ತವೇನೋ ಕಾಣೆ, ನಿನ್ನ ಕರ

ದಿಂದ ಬಿಗಿಯಾಗಪಿಡಿಯಂದು ಅಪ್ಪಣೆಯಂ ಕೊಡುವಷ್ಟರೋಳ್ ಕಲಾಭಿಜ್ಞನಾದ ಕಲವಿಂಕನು ಕರಗಳಂಮುಗಿದು, ಸ್ವಾಮಿ ಮಹಾನುಭಾವನೆ! ಇವರಫಲವು ನಾನೆಂತು ಹೇಳಲಿ, ಹೇಳಿದರೂ ಕಲವಿಂಕನ ಕಪಟಗಾಢೆಗಳೆಂದುಹಾಸ್ಯಂಮಾಡದೆ ಚನ್ನಾಗಿ ಪರಾಮರಿಶಿ ಮಾಡಬೇಕು, ಶಾಪಕ್ಕೆ ಬಿನ್ನೈಸುವನೆಂದು ಹೇಳುವ ವಿದೂಷಕನ ಮಾತುಗಳಂ ಕೇಳಿ, ನಗುತ ಚಿತ್ರಲೇಖೆಯ ತೊಡೆಯಲ್ಲಿ ತಲೆಯಂಸಿಟ್ಟು ಮಲಗಿ ಎಲೈ ವಿದೂಷಕನೆ! ಅದೇನ ವಿಶೇಷವೂ ಹೇಳೆಂದು ಆಜ್ಞಾಪಿಸಲು, ಆಗಕಲವಿಂಕನು ಸ್ವಾಮಿಯೇ ನನಗೆ ಇದೇರೀತಿಯಿಂದ ಭುಜವು ಒಂದುದಿನಪರ್ಯಂತವು ಏಕಪ್ರಕಾರವಾಗಿ ಚಲಿಸಲಾಗ ನಾನು ಅದರುವಾಯುವಿನ ವಿಕಾರವೋ? ತಿಮಿರವಾಯುವೋ? ಎಂದು ಯೋಚಿಸುತ್ತಿರುವ ಕಾಲದಲ್ಲಿ ಶಕುನ ಶಾಸ್ತ್ರಾಭಿಜ್ಞನಾದ ಶಾಲಕಭಟ್ಟನುಬಂದು ಎಲೈ ವಿದೂಷಕನೆ ! ನಿನಗೆ ಭುಜವು ಚಲಿಶಿದರಿಂದ ಒಂದುವರ್ಷದೋಳ್ ಪುತ್ರಜನನವಾಗುವದು ಯಥಾರ್ಥವೆಂದು ಹೇಳ್ದಒಂದು ಸಂವತ್ಸರದೊಳಗಾಗಿ ನನಗೆವಂದು ವೊಗುವಾಯಿತು, ಈಲಕ್ಷಣವುಸಟಿಯಲ್ಲಾಯೆಂದು ಹೇಳುವಷ್ಟರೋಳ್ ಕಾಲಂದಿಗೆಗಳ ಶಬ್ದಂಗಳಂ ಕೇಳಿ ಕಲವಿಂಕನು ಕರಗಳಂ ಮುಗಿದು ವಾರೆಯಾಗಿಪೋಗುತ್ತಿರಲು, ಆಗ ಪದ್ಮಿನೀಯಿಂದೊಡಗೂಡಿ ಚಿತ್ರಲೇಖೆಯು ಮಾಲತಿಯು ಕರವಂಪಿಡಿದು ಶಕುಂತಶಾಲೆಯಂಶೇರಿ ಕಲಹಂಸಮರಿಗಳಿಗೆ ನಡೆಯಕಲಿಸುವಂತೆ ಮಂದಗತಿ ಯಿಂದಂದಗಾತಿಯು ಕುಚಕುಂಭಂಗಳ ಕುಣಿದಾಟಕ್ಕೆ ನಿಲ್ಲಲಾರದೆ ಅಲ್ಲಾಡುವ ಕಟಿಪ್ರದೇಶದೋಳ್ ಕರವಂನಿಟ್ಟು ಕಂದರ್ಪನದರ್ಪವಂ ನಣಗಿಸುವ ಸೊಗಸುಗಾರನಾದ ಸುಗಂಧರಾಜೇಂದ್ರನಂ ವಾರೆನೋಟದಿಂದೀಕ್ಷಿಶಿ ಒಯ್ಯಾರದಿಂ ವಾರಾಗಿಬರುತ ಮುಗುಳುನಗೆಯಂಬ ತೆರೆಯಮರೆಯಾಗಿ ಮೊಗವಂತೋರಿಸುತ್ತಾ ಸಮೀಪವನ್ನೈದಿ ಪವಳದ ಪರ್ಯಂಕದಲ್ಲಿ ಕುಳಿತಿರುವ ರಾಜೇಂದ್ರನ ಪಾದಂಗಳಂಪಿಡಿದು ಪಣೆಯೋಳ್ಒತ್ತಿ ಚಿತ್ರದಬೊಂಬೆಯಂತೆ ಚಿತ್ರಲೇಖೆಯು ಪಾರ್ಶ್ವದಲ್ಲಿನಿಂತಿರಲು, ಆಗರಾಯನು ದಿನುಕಾರ್ಯದಿಂದಿವಳು ಇಲ್ಲಿಗೆಬಂದಳೊ ತಿಳಿಯಬೇಕೆಂದು ಯೋಚಿಸುತ್ತಾ ಎಲೈ ಸಖಿಯೆ ! ಎನ್ನರಾಣಿಯರೆಲ್ಲ ಆರೋಗ್ಯಭಾಗ್ಯದಿಂದ ಇಧಾರೆಯೋ? ಪಟ್ಟದರಾಣಿಯರಾದ ಸೌಗಂಧಿಕಾದೇವಿಯು ಸುಖವಾಗಿ ಇದ್ದಾಳೆಯೆ?

ಕುಸುಮಲತೆಯು ಕುಶಲವಾಗಿ ಇರುವಳೆ ; ಎಂದು ಕೇಳುತ್ತಾ, ಮತ್ತೇನಾದರೂ ವಿಶೇಷಕಾರ್ಯವುಂಟೋ ಎಂದಪ್ಪಣೆಯಂ ಕೊಡಲು, ಆಗ ಚಿತ್ರಲೇಖೆಯು ರನ್ನದಡಬ್ಬಿಯೊಳ್ ಮಡಗಿದ ಕರ್ಪೂರವೀಳ್ಯದಮಡುಪುಗಳಂ ಒಪ್ಪಿಸಿ, ಪಾರಿಜಾತ ಪುಷ್ಪಮಾಲಿಕೆಗಳಂ ಸಮರ್ಪಿಸಿ ಎಲೈ ಮಹಾನುಭಾವನೆ ! ನಿಮ್ಮ ಚರಣಕಟಾಕ್ಷದಿಂ ಎಲ್ಲರೂ ಕ್ಷೇಮವಾಗಿ ಇರುವರು, ಇದಲ್ಲದೆ ಗುಣವತೀದೇವಿ ಮೊದಲಾದ ಮಹಾರಾಜಕಾಂತೆಯರೆಲ್ಲರೂ ಕುಮಾರಭವನಕ್ಕೆ ಬಂದು ಸೌಗಂಧಿಕಾ, ಕುಸುಮಲತೆರೀರ್ವರ ಮನೋಭಾವಂಗಳಂ ಶರೀರದಲ್ಲಿರುವ ಲಕ್ಷಣಂಗಳಂ ಚನ್ನಾಗಿಪರಾಮರಿಶಿಸಿನಮ್ಮ ಸೊಸೆಯರು ದೌಹೃದಲಕ್ಷಣಂಗಳಂ ತಾಳ್ದರೆಂದು ಸಂತೋಷವಂನ್ಯೆದಿ ಸರಸ್ವತೀವಿಲಾಸದ ಹಜಾರದಲ್ಲಿರುವನೃದ್ಧರಾಯರಸಮೀಪಕ್ಕೆ ತೆರಳಲು, ಆಬಳಿಕ ನಮ್ಮೊಡತಿಯಾದ ಸೌಗಂಧಿಕಾದೇವಿಯು ಸ್ವಾಮಿಯನ್ನು ಈ ದಿನರಾತ್ರಿಯೋಳ್ ಕುಮಾರಭವನಕ್ಕೆ ಬಿಜಯಂಗೈಯುವಂತೆ ಆಣೆಯಂಸಿಟ್ಟು ಬಿನ್ನವಿಶಿಬಾಯೆಂದು ಅಪ್ಪಣೆಯಂ ಕೊಟ್ಟು ಕಳುಹಲು ಪಾದದಬಳಗೆಬಂದೆನೆಂದು ವಿಜ್ಞಾಪಿಶಿದ ಚಿತ್ರಲೇಖೆಯ ಮೃದುಮಧುರವಾದ ಮಾತುಗಳಂ ಪರಾಮರಿಶಿ ಪರಮೇಶ್ವರಿಯ ಪಾದಾರವಿಂದವಂ ನೆನೆದು ಪರವಶನಾಗಿ, ಆನಂದ ಭಾಷ್ಪಂಗಳಂನಲ್ಲಿಯೆ ರಪ್ಪೆಗಳಂ ಪತಡಿಯುತ್ತಾ ಪೈಯುಬ್ಬಿ ನಿಬ್ಬರವಾದ ಸಂತೋಷಸಮುದ್ರದೊಳ್ ಸ್ನಾನವಂ ಮಾಡುತ್ತಿರುವ ಸಮಯದೋಳ್ ಸರ್ವಮಂಗಳೆಯಾದ ಸರ್ವೇಶ್ವರಿಯಾದ ಚಾಮುಂಡಿಕಾದೇವಿಯು ಅಂತಃಪ್ರೇರಣೆಯಂ ಮಾಡಲಾಗ ರಾಜೇಂದ್ರನಿಗೆ ಜನ್ಮಾಂತರಾನುಸ್ಮರಣೆಯಂ ಮಾಡಲಾಗರಾಜೇಂದ್ರನಿಗೆ ಜನ್ಮಾಂತರಾಸ್ಮರಣ ಉಂಟಾಗಿ ತನ್ನಂತಾನಿಂದ್ರನಂತೆ ಭಾವಿಸುತ್ತಾ ನಾನಲ್ಲವೇ, ಈ ಸೌಗಂಧಿಕಾದೇವಿಯಾದ ಶಚಿಯೊಡನೆ ಐರಾವತವಂನ್ನೇರಿ ನಂದನವನವಿಹಾರಕ್ಕೆ ಪೋಗುತವಾರ್ಗದೋಳ್ ಕರ್ಮಭೂಮಿಯಲ್ಲಿ ಪುತ್ರಸಂತಾನದಿಂಉಂಟಾದಸಂತೋಷಾತಿಶಯವು ಹ್ಯಾಗೆ ಇರುವುದೋಯೆಂದಾಗ ಸತಿಪತಿಯರೀರ್ವರೂ ಸಲ್ಲಾಪಗಳಂಮಾಡಿದ ಸಂತೋಷ ವೃತ್ತಾಂತವೆಲ್ಲವು ಬುದ್ಧಿಯಲ್ಲಿಯೆ ಪ್ರತಿಫಲಿತವಾಗಲಾಗರಾಜೇಂದ್ರನುಮನುಷ್ಯಶರೀರ ಧರ್ಮಂಗಳಂಮರತು ಶಚೀಯೆ ಸೌಗಂಧಿಕಾದೇವಿಯೆಂದು ಮನದೋಳ್ಮಹೇಂದ್ರಪದವಿಯನನುಭವಿಸು

ತ್ತಾ ಮುಹೂರ್ತಮಾತ್ರ ಮೌನಮುದ್ರೆಯಿಂದ ಸುಮ್ಮನೆಯಿರುವ ಕಾಲದಲ್ಲಿ ವಿಷ್ಣುಶಕ್ತಿಯಿಂ ಜನಿಸಿದ ಮಹಾಮಾಯೆಯು ತನ್ನ ಮಾಯೆಯೆಂಬ ತೆರೆಯಂ ಮರೆಮಾಡಲಾಗ ರಾಜೇಂದ್ರನು ನಿದ್ರೆಯಿಂದೆಚ್ಚೆತ್ತನೋಯೆಂಬಂತೆ ನಾಲ್ದೆಸೆಗಳಂ ಅವಲೋಕಿಸುತ್ತಾ ಇದೇನಾದರೂ ಸ್ವಪ್ನವೆಂದು ಹೇಳುವದಕ್ಕೆ ಜಾಗ್ರತೆಯಲ್ಲಿ ಸ್ವಪ್ನವಾಗುವದು ಸರ್ವಥಾ ಅಯುಕ್ತ, ಅದುಕಾರಣ ಮಹದೈಶ್ವರ್ಯವಂ ನನುಭವಿಸಿದ ಮನಸ್ಸಿನಸಂಕಲ್ಪ ವಿಕಲ್ಪಂಗಳ ಸರಿಎಂದು ನಿಶ್ಚೈಸಿ, ಆಬಳಿಕ ಚಿತ್ರಲೇಖೆಯ ಮೊಗವಂ ನೋಡಿ ಮುಗುಳ್ನಗೆಯಿಂದ ಮೊಗವಂ ಬೆಳಗಿಸುತ ಮಂಚದಿಂದೆದ್ದು ತನ್ನ ಕಂಠದೊಳ್ ಧರಿಸಿದ ನವರತ್ನಮಾಲೆಯಂ ಚಿತ್ರಲೇಖೆಯ ಕಂಠದಲ್ಲಿ ಕಟ್ಟುವನೆವದಿಂದ ಕಚಗ್ರಹಣವಂ ಮಾಡಿ ಕಳಾಸ್ಥಾನವಂ ಸರಿತು ಕರಗಳಂ ಸೋಂಕಿಸಲಾಗ ಕಳಾವತನವಾಗಿ ಜುಮ್ಮೆನೆ ಪುಳಕಂಗಳುದಯಿಸಿ ಕಿರುಚಿವರುಗಳಿಂದ ಕುಚಕೊನೆಗಳಂ ನೆನೆಸುತಾತಲೆಬಾಗಿ ಕರದಿಂ ಸೆರಿಗಳಂ ಪಿಡಿದು ಕಾಂಡಪಟವಂ ಮರೆಮಾಡಿನಿಂತಿರ್ದ ಭಾವವನ್ನರಿತು ರಾಜೇಂದ್ರನು ಎಲೈ ಪದ್ಮಿನಿಯೇ! ನೀನು ಮಂದಾರಮಾಲೆಯಂ ಕರದುಕೊಂಡು ಬಾಯೆಂದು ಆಜ್ಞಾಪಿಸಿ, ಮಾಲತಿಯಂ ಮನಸ್ಸಿಗೆ ತಾರದೆ ಚಿತ್ರಲೇಖೆಯಂ ನಾಲಿಂಗಿಸಿ, ಕುಚಗಳಂ ಪಿಡಿದು ಅಧರಾಮೃತವಂ ನಾಸ್ವಾದನೆಯಂ ಮಾಡುತ ಥರಥರವಾಗಿ ಮದನ ಮಹೋತ್ಸವಂಗಳಂ ಉತ್ಸಾಹದಿಂದ ಬೆಳಸಿ, ವಸ್ತ್ರಾಭರಣಂಗಳಂ ಸರಿಮಾಡುತ ಕಾಂಡಪಟದಿಂದೀರ್ವರೂ ಪೊರಟು ಬಂದು ಒರ್ವಳಾಗಿ ನಿಂತಿರ್ದ ಮಾಲತಿಯಂ ನೋಡಿ, ನಾಚಿಗೆಯಿಂದಾಚೆಗೆ ಪೋಗಿ, ಚಿತ್ರಲೇಖೆಯು ಮಣಿಮಂಚದಮರೆಯಲ್ಲಿ ನಿಂತಿರಲು, ರಾಜೇಂದ್ರನು ಮಾಲತಿಯಂ ನೋಡಿ ಎಲೈ ಹುಡುಗಿಯೆ! ಕಂಗಳಂ ಮುಚ್ಚಿ ಬೆರಗಾಗಿ ಯಾರನ್ನು ಕಾಣುವದಿಲ್ಲವೆಂದು ನಿಶ್ಚೈಸಿದಭಾವವೊ? ಇದೇನು ಹೇಳೆಂದು ನುಡಿಯಲಾಗ ಸ್ವಾಮಿ! ನಾನು ಭಾವವೂ ಅರಿತವಳಲ್ಲ, ಭಾಗ್ಯವೂ ಅರಿತವಳಲ್ಲ, ಅರಿತವಳಲ್ಲಿಯೇ ನಿಂತಿರುವಳು, ಇನ್ನೊಮ್ಮೆ ದೇವರು ದಯೆಮಾಡಬೇಕೆಂದು ಮನೆದೇವರಿಗೆ ಕಾಣಿಕೆಗಳಂ ಕಟ್ಟುವಳು, ಇಂತು ಹೇಳ್ದ ಕಳಿಂಗದೇಶದ ಕನ್ನೆಯರಕಪಟ ಚಮತ್ಕಾರಮಾತುಗಳಂ ವಾರೆನೋಟದ ವಯ್ಯಾರವಂ ಕುಚಗಳ ಕೋಮಲತ್ವವಂ ನೋಡಿ ಕರವಂ ಪಿಡಿದು ಕನ್ನೆಗೆ ಕಂದರ್ಪಕೇಳಿಯೊಳ್ ಕಾಳೆ

ಗಳಂಹಚ್ಚಿಸಿ, ಪಚ್ಚೆಯ ಪ್ರುಂಗರವಂನಂಗುಳಿಗೆ ಇಟ್ಟುಮಣಿಪೀಠದಲ್ಲಿ ಕು
ಳ್ಳಿತಿರುವ ಸಮಯದಲ್ಲಿ ಪದ್ಮಿನಿಯು ಮಂದಾರಮಾಲೆಯುಂ ಕರದುಕೊಂ
ಡು ರಾಜೇಂದ್ರನಸಮೀಪವಂ ಶೇರಿ, ಚರಣಂಗಳಿಗೆ ಶರಣುಮಾಡಿ ನಿಂತಿ
ರ್ದ ಮಂದಾರಮಾಲೆಯುಂನೋಡಿ ಎಲೈ ಕಾಂತೆಯೆ! ಮಾಲತಿಗೆ ಊಟ
ವಂ ಮಾಡಿಸಿ ಆಟಗಳಿಂದ ಅವಕಾಶವೆಂಮಾಡದೆ ಕರದುಕೊಂಡು ಬ್ಯಾ
ಗಬಾಯೆಂದು ಆಜ್ಞಾಪಿಸಲಾಗ ಮಂದಾರಮಾಲೆಯು ಚಿತ್ರಲೇಖೆಯು
ಮಾಲತಿಯ ಕರಗಳಂ ಪಿಡಿದು ಭೋಜನಶಾಲೆಯುಂ ಕುರಿತು ಪೋಗಿ ಷಡ್ರ
ಸೋಪೇತವಾದ ಭೋಜನವಂಗೈಸಿ, ಕರ್ಪೂರದ ವೀಳ್ಯವಂನಿತ್ತು ಅತ್ತಲಿಂ
ದ ಅತಿಶೀಘ್ರವಾಗಿ ಶಕುಂತಶಾಲೆಗೆ ಕರತರಲು, ರಾಜೇಂದ್ರನಾಗ ಸಖಿ
ಯಾದ ಮಾಲಿನಿಯ ಮುಖವಂನೋಡಲಾ ಮಾಲಿನಿಯು ದಿವ್ಯಾಂಬರವಂ
ನುಡಿಸಿ, ರತ್ನಾಭರಣಂಗಳಂ ಅಲಂಕರಿಸಲು, ಬಳಿಕ ಈರ್ವರೂರಾಜೇಂದ್ರ
ನ ಪಾದಂಗಳಿಗೆ ಪ್ರಣಾಮವಂಮಾಡಲಾಗ ರಾಜೇಂದ್ರನು ಎಲೈ ಸಖಿ
ಯೆ! ಎನ್ನಪಟ್ಟದರಾಣಿಯಾದ ಸೌಗಂಧಿಕೆಗೆ ನಾವುಬರುವ ವರ್ತಮಾ
ನವಂ ತಿಳುಹಹೋಗೆಂದು ಅಪ್ಪಣೆಯುಂನಿತ್ತು ಕಳುಹಿಲಾ ಚಿತ್ರಲೇಖೆಯು
ಮಾಲತಿಯು ಕರವಂಪಿಡಿದು ಕುಮಾರಭವನವಂ ಶೇರಿವಡತಿಯಾದ ಸೌ
ಗಂಧಿಕಾದೇವಿಯ ಅಡಿಗಳಿಗೆ ಅಭಿವಂದಿಸಿ ರಾಜೇಂದ್ರನ ಕ್ಷೇಮವಂತಿಳುಹಿ
ಆಬಳಿಕ ಮಂದಾರಮಾಲೆಯುಮಾಲಿನಿಯರ ಕ್ರೀಡಾವಿಹಾರಂಗಳಂ ಪೇಳು
ತ್ತಾ ಇರುತಿರುವಷ್ಟರೋಳ್ ಪದ್ಮಿನೀವಲ್ಲಭನಾದಸೂರ್ಯನುಅಸ್ತಾಚಲ ಶಿ
ಖರವಂಶೇರುತ್ತಿರಲು, ಕುಮಾರಭವನದೊಳ್ ಕರ್ಪೂರಬತ್ತಿಗಳಿಗೆ ದೀ
ಪಂಗಳಂಹಚ್ಚಿ ಕಾಂಡಪಟಗಳಂ ಸರಿಮಾಡುತ್ತಾ ಸಖೀಜನಂಗಳು ಎಲೈ
ಮಂಜುವಾಣಿಯೆ! ಮಣಿಪಂಜರಂಗಳಲ್ಲಿರುವ ಶುಕಶಾರಿಕಾ ಮೊದಲಾದ
ಪಕ್ಷಿಗಳಿಗೆ ಮಧುರವಾದ ಮಾತುಗಳಂ ಪೇಳು, ಎಲೈ ಮಾಲತಿಯೆ!
ವಾತಾಯನಂಗಳಲ್ಲಿ ಸಂಚರಿಸುವ ಮಂದಮಾರುತ ಝರಿಗಳಿಗೆ ಪುಷ್ಪಗಳ
ತೆರೆಯುಂಮರೆಮಾಡು, ಎಲೈ ಕುಂದರದನೆಯೆ! ಕುಂದಮಂದಾರ ವೃಕ್ಷಂ
ಗಳಿಗೆ ಕುರುವಿಂದ ಕುಛಾಯಿಗಳಲ್ಲಿರುವ ಕುಂಕುಮ ರಸದಿಂದಸಂಧ್ಯಾ
ದೋಹದವಂಮಾಡುಲು, ಎಲೈ ವಾಸಂತಿಯೆ! ವಸಂತ ಮಾಸರಂಗಳ ಹೆಸರಿ
ತ್ತಿದೆ ಇರುವ ಮಲ್ಲಿಯ ಬಳ್ಳಿಗಳಂ ಸುರಹೊನ್ನೆಗೆಸುತ್ತಿ ಪಚ್ಚಕರ್ಪೂರ

ರವ ಪಾತ್ರೆಯಂ ಕಳ್ಳಿಸು, ಎತ್ತ ಮಂದಯಾನೆಯೆ! ಹಂಸೆಯಂಗಿಗೆ ಬ
ಯಾಸವಿಲ್ಲದಂತೆ ನಡೆಗಳಂ ತೋರಿಸು, ಎತ್ತ ಕಮಲಪಾಲಿಕೆ! ಕಳಿಂಗ
ಕಾಶ್ಮೀರ ಕಾಂಭೋಜ ಕಾಮರೂಪದೇಶಾಧಿಪತಿಗಳು ಒಪ್ಪಿಸಿದ ಕನ್ನಿಕೆಯ
ರಿಗೆ ಕಳಾಶಾಸ್ತ್ರಂಗಳಂ ಪೇಳ್ದು ಕೋವಿದರಾಗುವ ಸಖೀಜನರ ಸಾ
ಯಂಕಾಲದ ಸರಸ ಸಲ್ಲಾಪಂಗಳಂ ಕೇಳುತ್ತಾ ನವರಂಗ ಹಜಾರದಲ್ಲಿ
ನಾಟ್ಯವಂ ಆಡುವ ನಾರಿಯರನ್ನವಲೋಕಿಸುತ್ತಾ ಸುಗಂಧರಾಜೇಂದ್ರನು
ಮಾಲಿನಿಯು ಒಪ್ಪಿಸುವ ವಿಳ್ಯವಂ ಮೆಲ್ಲುತ ಮಂದಾರಮಾಲಿಕೆಯು ಭುಜದ
ಲ್ಲಿ ಹಸ್ತವಂ ಬಿಟ್ಟು ಪವಿತ್ರೆ ಮೊದಲಾದ ಜಾತಿಸ್ತ್ರೀಯರು ಜೋಡಣೆಯಾದ ಪ
ಚ್ಚರಿಕೆಗಳಿಂದ ಜಲ್ಲರಿಯೋ ಅಡ್ಡಬೀಳುವ ಅಬಲಾ ಜನಂಗಳನ್ನವಲೋಕಿ
ಸುತ್ತಾ ಕುಮಾರಘನನದಪುರೋಭಾಗದಲ್ಲಿರುವ ಪುಷ್ಯರಾಗಹಜಾರಕ್ಕೆ
ಸುಗಂಧರಾಜೇಂದ್ರನು ಬಿಜಯಂಗೈದನೆಂದು ಅಂತಃಪುರದ ಗುರಿಕಾರರು
ಬಾಗಿಲೊಳ್ ಕಾದಿರುವ ಜರಠೆಯರಂ ಕಂಡು ತಾಯೆ ಭದ್ರಾವತೀ! ಸು
ಗಂಧಮಹಾರಾಜೇಂದ್ರನು ಅಂತಃಪುರಕ್ಕೆ ಬಿಜಯಂ ಗೈಯ್ಯುವಂತೆ
ತೋರುತಲಿಹೆ, ದೇವಿಯರಿಗೆ ವಿಜ್ಞಾಪನೆ ಮಾಡಬೇಕೆಂದು ನುಡಿದ ಗುರಿ
ಕಾರನ ಮಾತಂ ಕೇಳಿ,ವಜ್ರದಬಳೆ ಹಜಾರಕ್ಕೆ ಪೋಗಿ ಭದ್ರಾವತಿಯು ಚಿತ್ರ
ಲೇಖೆಯ ಮುಖವಚನದಿಂದ ದೇವಿಯರಿಗೆ ತಿಳುಹಲಾಗ,ಮಣಿಮಂಚದಿಂದ
ಮೆಲ್ಲನೆಯೆದ್ದು ಸೌಗಂಧಿಕಾ ಕುಸುಮಲತೆಯರೀರ್ವರೂ ಚಿತ್ರಲೇಖೆಯು
ಮಂಜುವಾಣಿಯರ ಹಸ್ತಲಾಘವಿಂ ಮುತ್ತಿನ ಹಜಾರದ ಮುಂಬಾಗಿಲಸ
ಮೀಪಕ್ಕೆ ಬರುತಿರುವ ರಾಜೇಂದ್ರನಂ ಎದುರ್ಗೊಂಡು ಪಟ್ಟದರಸಿಯಾ
ದ ಸೌಗಂಧಿಕಾದೇವಿಯು ಪನ್ನೀರಿನಿಂದ ಪಾದಂಗಳಂ ತೊಳೆದು ಮುತ್ತಿ
ನಶರಗಿಸಿಂದವನರಸಿ, ರತ್ನದಾರತಿಯಂ ಸೆತ್ತಿ ಮುತ್ತಿನ ಶಾಸೆಗಳಕ್ಷತೆಗಳು
ಸೌಗಂಧಿಕೆ ಕುಸುಮಲತೆಯರ ಹಸ್ತಲಾಘವಿಂ ವಜ್ರದಬಳೆ ಹಜಾರಕ್ಕೆ
ಚಿತ್ತೈಸಿ ಮಣಿಮಂಚದ ಮೇಲ್ಗಡೆಯಲ್ಲಿ ಕುಳಿತು ಮಾಲತಿಗೆ ಬಾಗಿಲೊಳ್
ಕಾದಿರುವಂತೆ ಕಟ್ಟುಮಾಡಿ ರಾಜೇಂದ್ರನು ಕಾಂತೆಯರೀರ್ವರ ಕರಗಳಂ
ಪಿಡಿದು ಅಂಕದೊಳ್ ಕುಳ್ಳಿರಿಸಿ ಮುಖವಂ ಮುದ್ದುಗೊಳುತ ಶರೀರಂಗ
ಳಂ ಸವರಿ ನಿಮ್ಮೀರ್ವರ ಶರೀರಂಗಳು ಕೃಶಭಾವವಂ ಪೊಂದಿರುವ ಪರಿಯೇ
ನು? ಬೆರಳಿಗೆ ಧರಿಸಿರುವ ರನ್ನದ ಉಂಗುರಂಗಳು ಕಂಕಣಂಗಳಂತಾಗಿ

ರುವ ಕಾರಣವೇನು? ಕಂಕಣಂಗಳು ಬಾಪುರಿಗಳಾಗಿ ತೋರುವಬಗೆಯೇನು? ಬಾಪುರಿಗಳು ಅಂಗದಗಳಂತೆ ಕಾಣಿಸುವ ನಿಮಿತ್ತವೇನು ? ಅಂಗದಗಳು ಅಂಗಕ್ಕೆ ಅಳತೆಯಾಗಿರುವ ಬಗೆಯೇನು? ಕಾಲುಂಗುರಂಗಳೇ ಅಂದಿಗೆಗಳಂತಾಗಿ ಅಂದಿಗೆಗಳು ಅಲ್ಲಲ್ಲಿಯೇ ಸಡಲಿ ಬಿದ್ದುಹೋದುದಂ ನರಿಯದೆ ಮನೋವಿಕಾರದಿಂ ಏಪರಿ ನಾರೀ ಶಿರೋರತ್ನಂಗಳು ಸಳಗಿರುವ ರೀತಿಯಂ ನಿವರ ಮನೋಧರ್ಮಂಗಳಂ ಅಂಗಂಗಳಿಗೆ ವಿಚಿತ್ರವಾಗಿ ಧರಿಸಿರುವ ಆಭರಣಂಗಳ ಅಂದವಂ ನೋಡಿ ಯುಗಂಧರರಾಜೇಂದ್ರನು ಇವು ಎಲ್ಲವು ಗರ್ಭಲಕ್ಷಣದಿಂದ ಉಂಟಾಯಿತೆಂದು ಹೇಳುತ್ತಿರುವಷ್ಟರೊಳ್ ಪಟ್ಟದರಸಿಯಾದ ಸೌಗಂಧಿಕಾ ಕುಸುಮಲತಾ ದೇವಿಯು ಶೀಘ್ರದಿ ನಾಚಿಗೆಯಿಂ ತಲೆಯಂ ಬಾಗಿ ತಳಿರ್ಗಳಂತೆಸೆವ ತುಟಿಯುತುದಿಗಳಲ್ಲಿ ಕಿರುನಗೆಗಳ ಮರಿಗಳು ನಾಟ್ಯವಂ ನಾಡುತ್ತಿರುವ ಕಾಲದೊಳ್ ಸಂತೋಷ ಪರಂಪರೆಗಳೆಂಬ ತೆರೆಗಳಿಂದ ಮನಸ್ಸೆಂಬ ಸರೋವರವು ಉಕ್ಕಿ ಕಂಠವಂ ಸೋಕಲಾಗ, ರಾಜೇಂದ್ರನು ಗದ್ಗದಸ್ವರದಿಂದ ತನ್ನ ರಾಣಿಯರ ಮುಖಕಮಲಂಗಳಂ ಮುದ್ದುಗೊಳುತ ಎಲೈ ಪ್ರಾಣಕಾಂತೆಯರೆ ! ನಿಮ್ಮ ಮುಖಕಾಂತಿಯಂ ಅಂಗಾಂಗಸೌಷ್ಠವ್ಯವು ಆಭರಣಂಗಳ ಅಲಂಕಾರವಿಶೇಷಂಗಳಂ ನೋಡಿದರೆ ಯುಗನ ಕಳಿಂಗದೇಶದ ರಾಜಕಾಂತೆಯರು ಮಾಡುವಚಿತ್ರವಿಚಿತ್ರ ಆಲಂಕಾರಗಳಂತೆ ತೋರುತಲಿವೆ ಯೆಂದೀಪರಿವಿನೋದ ಮಾತುಗಳಂನಾಡುತ್ತ ಎಲೈರಾಣಿಯರೆ! ನೀವು ಮಾಡಿದ ಜನ್ಮಾಂತರ ಪುಣ್ಯಂಗಳಗಣ್ಯಂಗಳು ಊನಷೋಡಶ ವರ್ಷಂಗಳಲ್ಲಿಯು ಭರತವರ್ಷವಂನಾಳುವ ಪುತ್ರಸಂಪತೆಯುವ ನಿಮ್ಮಿರ್ವ್ವರ ಪುಣ್ಯಫಲವು ನಾನೆಂತುಬಣ್ಣಿಸಲಿ,ಲೋಕದಲ್ಲಿ ವೀರಪತ್ನಿಯರು ಮಹಾಪತಿವ್ರತೆಯರೆಂದು ಹೇಳ್ವಮಾತುಗಳು ನಿಮ್ಮಿರ್ವ್ವರಲ್ಲಿಯು ಸರಿಯುಂ ನುಡಿಯುತ್ತಾ ಪರಮೇಶ್ವರಿಯೇ ನಿಮ್ಮಿರ್ವ್ವರಂ ಸಲಹಲೆಂದು ಆಶೀರ್ವಚನವಂ ಮಾಡುತ್ತಿರುವವೇಳೆಯೊಳ್, ಮಂಜುವಾಣಿಯು ವಜ್ರದವಳಪ್ರಾಕಾರವಂ ಪೊಕ್ಕು ರಾಜೇಂದ್ರನ ಸಮೀಪವನ್ನೈದಿ ಕೈಗಳಂಮುಗಿದು ಎಲೈ ಸ್ವಾಮಿ ! ನಮ್ಮೊಡೆಯನೆ ನಿನ್ನಡಿದಾವರೆಗಳಂ ಕಂಡು ಆರು ತಿಂಗಳಾಯಿತು,ಗುಣವತೀದೇವಿಯರ ಪುಣ್ಯದಫಲವೆ ಪುರುಷಾಕಾರವಂ ತಾಳಿ ಮುದ್ದುಕುಮಾರನಾಗಿ ಜನಿಸಿದನನ್ನಂ ಬಾಲ್ಯದಿಂದಲೂ ಸಂರಕ್ಷಣೆ

ಯೌವನಾವಸ್ಥೆ ಮುದಿಯಳಾಗಿ ಹೋಗಿರುವ ನನ್ನಂ ಉಪೇಕ್ಷೆಯಂ ಮಾಡದೆ ಸಲಹಬೇಕೆಂದು ಪ್ರಾರ್ಥಿಸುವ ಮಂಜುವಾಣಿಯಂ ನೋಡಿ ತಾಯಿ ಮಂಜುವಾಣಿಯೆ! ನೀನು ಕ್ಷೇಮವಾಗಿಯಿದ್ದೀಯಾಯೆಂದು ಕುಶಲವಂ ಕೇಳ್ದು ಸುಗಂಧಕುಮಾರನಂ ಕುರಿತು ಒಡೆಯನೆ ನನ್ನ ಕುಶಲವೇನು ಸ್ವಾಮಿ? ನೀನೊಬ್ಬನು ಕುಶಲವಾಗಿದ್ದರೆ? ನಾವೆಲ್ಲರೂ ಕುಶಲವೆಂದು ಹೇಳುತ್ತಾ ಗಲ್ಲವಂ ಪಿಡಿದು ಮುದ್ದುಗೊಳುತ ಶಿರವನ್ನಾಘ್ರಾಣಿಸಿ ಶರೀರವಂ ಸವರುತ್ತಾ ಸಮೀಪದಲ್ಲಿ ಕೂತಿರುವ ಹೆಣ್ಣುಗಳಾರ್ಯಾರೆಂದು ನುಡಿಯುತ್ತಿರಲಾಗ, ರಾಜೇಂದ್ರನು ಎಲ್ಯೆ ತಾಯಿಯೆ! ಅವರು ದ್ವೀಪಾಂತರದಿಂದ ಬಂದಿರುವ ಪದ್ಮಿನೀಚಿತ್ರಿಣೀ ಜಾತಿಹೆಣ್ಣುಗಳು ಅವರ ಹೆಸರೆತ್ತಬಾರದು, ಅವರು ಬಲುಸುಮಾನಗಾತಿಯರೆಂದು ಅಪ್ಪಣೆಯಂ ನೀಡ್ವೊಲು, ಮಂಜುವಾಣಿಯು ದೇಶಂಗಳಂ ಕೆಡಿಸಿ ದೇಶಾಂತರಕ್ಕೆ ಬಂದಿರುವ ವೇಶ್ಯಾಜಾತಿಯ ಹೆಣ್ಣುಗಳಂ ಸಮೀಪದಲ್ಲಿ ಕುಳ್ಳಿರಿಸಬಹುದೆ, ಸ್ವಾಮಿಯವರು ಸಿಂಹಾಸನಾಧಿಪತಿಗಳು ಈಪರಿಮಾತೋಡಿ? ನಿಮಗೆ ಉಚಿತವಲ್ಲ, ರನ್ನದಬೊಂಬೆಗಳಂತೆ ಬೆಳಗುವ ರಾಣಿಯರಂ ಮುಟ್ಟದೆ ರಾಜಸ್ವಭಾವನಂ ಬಿಟ್ಟವರಂತೆಯೆಂದು ಮುಖವಂ ಗಂಟಿಕ್ಕಿ ಚಿತ್ರದ ಕೋಲಂ ಹುಡುಕುತ್ತ ನಡೆಯುತ ಪದಲಸೊಂಕುವಂತೆ ಕೂತಿರುವ ಬಡ್ಡರ ಹುಡುಗಿಯರು ನೀವೆಲ್ಲಿಯವರೆ? ಯೆಂದು ಬಂದಿರಿ ಎಂದು ಘಟ್ಟಿಯಾಗಿ ಹೇಳ್ವ ಮಂಜುವಾಣಿಯ ಮಾತುಗಳಂ ಕೇಳಿ, ತಾಯಿ ಕೂಗಬ್ಯಾಡೆಂದು ಬೇಡುತ್ತ, ರಾಣಿಯರ ಮುಖಕಮಲಂಗಳಂ ನೋಡಿ, ರಾಜೇಂದ್ರನು ನಸುನಗುಗೊಳುತ ನೀನ್ಯಾಕೆ ಅವರಂ ವಿಚಾರಿಸುತ್ತೀಯೆ? ಅವರ್ಯಾರಾದರೂ ಆಗಲಿ ನೀನ್ಯಾಕೆ ಬಾಯೆಂದು ನುಡಿಯುತ್ತ ಆಮುದಿಕಿ ಹಿಡಿದಿರುವ ಚಿತ್ರದ ಕೋಲಂ ಹಿಡಿದು ಶಳೆಯಲು ಆಗ ಮಂಜುವಾಣಿಯು ಎಲ್ಯೆ ಸ್ವಾಮಿಯೆ! ನಾನಲ್ಲದೆ ಇನ್ಯಾರು ವಿಚಾರಣೆಯಂಗೈಯ್ಯುವರೆಂದು ವಿಜ್ಞಾಪಿಸುತ್ತಾ ತಲೆಬಾಗಿ ಕಂಗಳಂ ಕುರುಜುಮಾಡಿ ಕರವಂ ಹಣೆಯಲ್ಲಿಟ್ಟು ಎಡಬಲಗಳಲ್ಲಿ ನೋಡುತ್ತ ಗುರುತು ಕಾಣದೆ ಒಡೆಯನೆ ಕಂಗಳು ಕಾಣುವದಿಲ್ಲ, ಕಿವಿಗಳು ಕೇಳುವದಿಲ್ಲ. ಇನ್ನು ಮುದಿಯಾದ ನಾನು ಬದುಕಿ ಫಲವೇನೆಂದು ಬೇಸರಂಗೊಳುತ ಅವಳ್ಯಾರೆ ಬಾಗಿಲಲ್ಲಿ ಕಾದಿರುವಳೆಂದು ನುಡಿಯುತ್ತಿರುವ ಕ್ಷಣದೊಳ್ ತಾಯಿ ನಾನು ಮಾಲತಿಯೆಂದು ನುಡಿಯಲು ಎಲ್ಯೆ ಹುಡುಗಿಯೆ ! ಮರೆಯಾಗಿರುವ

ತ್ರೆಲಿಂಬಂ ಆಟಿಗೆ ಕಳಿಸುತ್ತಿರಲು, ತೆಗೆಯುವಕಾಲದಲ್ಲಿ ಮಂಜುವಾಣಿಯು ರಾಣಿಯರಮುಖಚಂದ್ರಚಂದ್ರಿಕೆಗಳ ಹೊಳಪಿನಿಂದ ಕಂಗಳುತ್ತಂ ಪಾಗಿ ತರುಣೀರತ್ನಂಗಳಂ ಅಪವಾಗಿನೋಡಿ ತಾಯಿಮಿಪಡುತ್ತಿಯಿರೆ! ನಾನೆಂತು ಅಪರಾಧವತಿಯಾದೆ ಹರಹರಾ ಎಂದು ಪೇಳುತ ಪಟ್ಟದರಸಿಯಾದ ಸೌಗಂಧಿಕಾ ದೇವಿಯು ಪಾದಂಗಳಂ ಪಿಡಿದು ಪ್ರಣಾಮಂಗಳಂ ಮಾಡುತಬಡೆಯೆನು ಪೇಳ್ದವಂಚನಾರೂಪವಾದ ಮಾತುಗಳಂ ಕೇಳಿ, ಮನಸ್ಸುಬಂದಂತೆ ಪೇಳ್ದ ದುರುಕ್ತಿಗಳು ಮನಸ್ಸಿಗೆ ತರಪೆ ದುಷ್ಟರಾದ ಪುತ್ರರಂ ತಾಯಿಸು ರಕ್ಷಿಸುವಂತೆ ಸನ್ನಂ ಸಲಹುಬೇಕೆಂದು ಪ್ರಾರ್ಥಿಸುವ ಮಂಜುವಾಣಿಯು ವಿನೋದವಚನಂಗಳಂ ಕೇಳಿ, ರಾಜದಂಪತಿಗಳು ಮುಖಚಂದ್ರಮಂಡಲಂಗಳಲ್ಲಿ ಮಂದಹಾಸವೆಂಬರಿಗಳೆಂಬ ಚಂದ್ರಕಿರಣಂಗಳಂ ಸಖೀಜನದ ಚಕ್ಷುಶ್ಚಕೋರಂಗಳಿಂದ ಪಾನವಂಗೈಯುತ್ತುವಂತೆ ಮಾಡುತ್ತಿರುವ ವೇಳೆಯೊಳ್, ಚಿತ್ರಲೇಖೆಯು ರಾಜೇಂದ್ರನ ಸಮೀಪವಂಸೈದಿ, ಸ್ವಾಮಿ ಮಹಾನುಭಾವನೆ ಊಟಕ್ಕೆ ಚಿತ್ತೈಸಬೇಕೆಂದು ವಿಜ್ಞಾಪಿಸಲಾಗ ರಾಜೇಂದ್ರನು ಮಜ್ಜನವಂಗೈದು, ಸಂಧ್ಯಾವಂದನೆಯಂ ಮಾಡಿ ಸಾಯಂಕಾಲದಲ್ಲಿ ಆಚರಿಸುವ ಸತ್ಕರ್ಮಂಗಳಂ ನಿಯಮಪೂರ್ವಕವಾಗಿ ನೆರವೇರಿಸಿ, ಆಬಳಿಕ ಪಟ್ಟದರಸಿಯಾದ ಸೌಗಂಧಿಕಾದೇವಿಯು ಕರವಂಪಿಡಿದು ನಿಜಕಾಂತಾಜನಂಗಳಿಂ ಗೊಡಗೂಡಿ ಭೋಜನಶಾಲೆಯೊಳ್ ಷಡ್ರಸೋಪೇತವಾದ ಮಧುರಾನ್ನವಂ ಭುಂಜಿಸಿ, ಪುಷ್ಪಫಲಾಸವಂಗಳಂ ಆಸ್ವಾದನಂಗೈದು, ಕರ್ಪೂರದ ವೀಳ್ಯವಂ ಮೆಲ್ಲುತ ಸೌಗಂಧಿಕಾದೇವಿಯು ಹಸ್ತವಂ ಪಿಡಿಯುತು ಆಸನಾಯದೊಳ್ ರಾಜಕಾಂತೆಯರು ಪರಸ್ಪರವೀಕ್ಷಣೆಗಳಿಂದಲೇ ರಾಜೇಂದ್ರನ ಅಭಿಪ್ರಾಯವಂತಿಳಿದು ತಮ್ಮತಮ್ಮ ಶಯ್ಯಾಗೃಹಂಗಳಲ್ಲಿ ಶಯನವಂ ಮಾಡುತ್ತಿರಲು, ಆಬಳಿಕ ರಾಜದಂಪತಿಗಳು ಚಂದ್ರಶಾಲೆಗೆ ಪೋಗಿ ಚಂದ್ರಕಿರಣಗಳಂತೆ ಅತ್ಯಂತ ನಿರ್ಮಲವಾದ ಹಂಸತೂಲಿಕಾತಲ್ಪದೊಳ್ ಕುಳಿತು ರಾಜೇಂದ್ರನು ರಾಣಿಯನಾಲಿಂಗಿಸಿ, ಎಲೈ ಪ್ರಾಣಕಾಂತೆಯೆ! ನಿನ್ನ ಮನಸ್ಸು ಯಾವಪದಾರ್ಥಂಗಳಂ ಬಯಸುತಲಿದೆ, ಎನ್ನಾಣೆ ನೀನು ಪೇಳೆಂದು ಪ್ರಾರ್ಥಿಸುವ ಪ್ರಾಣಕಾಂತನಂ ಕುರಿತು ಸೌಗಂಧಿಕಾದೇವಿಯು, ಸ್ವಾಮಿ ಮಹಾನುಭಾವನೆ! ನಿನ್ನ ಚರಣ

ಸೇವಕಳಾದೆನಗೆ ಯಾವಪದಾರ್ಥವುಕಡಮೆಯಿಲ್ಲ, ದೇವತಾಯೋಗ್ಯಂಗ ಳಾದಪದಾರ್ಥಗಂಳೂಕೂಡಾ ದಯಪಾಲಿಶಿಯಿರುವವರಿಂದ ಎನಗೆಯಾವಪ ದಾರ್ಥದಲ್ಲಿಯೂ ಅಪೇಕ್ಷೆಯಿಲ್ಲ, ಆದರೂನಿಮ್ಮೊಡನೆಕೂಡಿ ದ್ವೀಪಾಂತ ರಗಳಲ್ಲಿರುವವಿಶೇಷಂಗಳಂ ಪರಾಮರಿಸಬೇಕೆಂಬ ಅಪೇಕ್ಷೆವಿನಹ ಇನ್ನೊಂ ದು ಪದಾರ್ಥವಂ ಯೆನ್ನಮನಸ್ಸು ಬಯಸೋದಿಲ್ಲವೆಂದು ವಿಜ್ಞಾಪಿಸಲು, ಆಗ ರಾಜೇಂದ್ರನು ರಾಣಿಯಂತಕ್ಕೈಶಿ, ಎಲೈ ಪ್ರಾಣಕಾಂತೆಯೆ ! ನಿ ನ್ನಮನಸ್ಸಿಗೆ ಬಂದಂತೆ ಆಗಲೀ ಎಂದಪ್ಪಣೆಯಂನಿತ್ತು ಆಯಾಸತೋರ ದಂತೆ ಅನಂಗಕ್ರೀಡೆಯಿಂ ಪರವಶರಾಗಿ ಸುಖದಿಂದ ನಿದ್ರೆಯಂ ಗೈ ಯುತ್ತಿರಲು, ಆಬಳಿಕ ಕಂಠದಲ್ಲಿ ಧರಿಶಿರುವ ಮುತ್ತಿನಹಾರಂಗಳು ತನು ವಿಗೆ ತಂಪುತೋರಿದಕ್ಷಣದಲ್ಲಿಯೆ, ಸುಗಂಧರಾಜೇಂದ್ರನು ಎಚ್ಚರಂಗೊಂ ಡು ಬೆಳಗುವದೀಪಂಗಳಂ ಬಿಳ್ಪೇರಿದದಿಕ್ತಟಗಳಂ ನೀಕ್ಷಿಶಿ, ಬೆಳಗಾಯಿ ತೆಂದು ಬೇಗನೆಮಂಚದಿಂದೆದ್ದು ಸುಂದರಾಂಗಿಯಾದ ಸೌಗಂಧಿಕಾದೇ ವಿಯ ಪಕ್ಕದೊಳ್ ಶಿಕ್ಕಿರುವ ಚೀಣಾಂಬರವಂ ಮೆಲ್ಲನೆ ಮೈಸೋಂಕ ದಂತೆ ಶಳೆದು ಮುದ್ದುಗಾತಿಯು ಪ್ರೊದ್ದಿರ್ದಮುತ್ತಿನ ಮುಸಕಂತೆಗದು ಮುಖಮಂನವಲೋಕಿಶಿ ಮುದ್ದಿಟ್ಟು ಶಂಖಚಕ್ರ ರೇಖಾಂಕಿತ ಮಾದತನ್ನ ಕರಕಮಲವಂ ನವಲೋಕಿಶಿ, ಚಂದ್ರಶಾಲೆಯಿಂದ ಪೊರಟು ಚಿನ್ನದ ಚಿಕ್ಕ ಹಜಾರದಲ್ಲಿ ನಿಂತು ಕೈಗಳಂಮುಗಿಯುವ ಸುಮತಿಯು ಕರಲಾಘದಿಂದ ಚಿತ್ತರದಹಜಾರಕ್ಕೆ ಚಿತ್ತೈಶಿ ಮುಖಮಜ್ಜನಮಂಮಾಡಿ ಸ್ನಾನಸಂಧ್ಯಾ ನಂದನೆ ಮೊದಲಾದ ನಿತ್ಯಕರ್ಮಂಗಳಂ ನೆರವೇರಿಶಿ, ಮಿತಜನ ಸಮೇತನಾ ಗಿ ಭೋಜನಶಾಲೆಯಂನೈದಿ, ಷಡ್ರಸೋಪೇತಮಾದ ಶಾಲ್ಯಾನ್ನವಂ ಭುಂಜ ಶಿ, ಕರ್ಪೂರದವೀಳ್ಯವಂ ಸವಿಯುತ್ತ ಛಾಯಾಗುಪ್ತನ ಭುಜವಂಪಿಡಿದು ಬ ರುವ ರಾಜೇಂದ್ರನಿಗೆ ಸುಮತಿಯು ದೇಶಾಧಿಕಾರಿಗಳಿಗೆ ಕಳುಹುವ ಆ ಜ್ಞಾಪತ್ರಿಕೆಗಳಂನೊಪ್ಪಿಸಲಾಗ, ರಾಜೇಂದ್ರನು ಸ್ವಹಸ್ತಾಕ್ಷರಲಕ್ಷಿತಗ ಳಾಗಿ ಮಾಡಿಕೊಟ್ಟು ಮಣಿಮಂದಿರವಂದಾಟಿ ಅಂತಃಪುರವಂಪ್ರವೇಶಿಶಿ, ಸೌಗಂಧಿಕಾಕುಸುಮಲತಾದೇವಿ ಮುಂತಾದ ಸಮೂಹಂಗಳಿಂದೊಡಗೂ ಡಿ ಪದ್ಮನೀಮೊದಲಾದ ಸಖೀಸಹಸ್ರಂಗಳಿಂದಸೇವಿತನಾಗಿ ವ್ಯೋಮಯಾನ ವೆಂಬ ಪುಷ್ಪಕವನ್ನೇರಿ ದಿಗ್ದೇಶಂಗಳಂ ಪರಾಮರಿಸುತ್ತಾ ಸಪ್ತದ್ವೀಪಂ

ಗಳಂ ಸಪ್ತಸಾಗರಂಗಳಂ ತನ್ನಪಟ್ಟದರಸಿಯಾದ ಸೌಗಂಧಿಕಾದೇವಿಗೆ ಸಂತೋಷದಿಂದ ತೋರಿಸುತ್ತ, ಎಲೈ ರಾಣಿಯೆ! ಅನೇಕನವರತ್ನ ಸೋಪಾನಂಗಳ ಥಳಥಳಿಸುವ ಕಾಂತಿಗಳಿಂದ ಕಂಗಳು ಮುಚ್ಚುತಮುಂದುಗಡೆಯಲ್ಲಿ ಕಾಣಲ್ಪಡುವದೇ ಕನಕಾಚಲವು, ಇದು ಕುಬೇರಭವನವು, ಅದು ಕೈಲಾಸವು, ಇದು ತೇಜೋನಗರಪಟ್ಟಣವು, ಕುಸುಮಲತೆಯಂ ಶರೆಯಂಗೈದ ಜಂಬೂನಾಮರಾಕ್ಷಸನು ವಾಸವಾಗಿರ್ದವಜ್ರಪುರವಿದು, ಎಂದುನುಡಿಯುತ್ತ ಅಲ್ಲಲ್ಲಿರುವ ಅರಣ್ಯಂಗಳು ತದುಪಸ್ಥಳಗಳಲ್ಲಿರುವ ಜನರ ಚೇಷ್ಟೆಗಳಂ ತೋರಿಸುತ್ತಾ ಹಿಂತಿರುಗಿಪಟ್ಟಣಕ್ಕೆ ಪೋಗುವೆವೆಂದು ಮನಸ್ಸಿಗೆ ತೋರಿದಕ್ಷಣದಲ್ಲಿ ಆ ವಿಮಾನವು ಗಗನದಲ್ಲಿ ರನ್ನದ ಬುಗುರಿಯಂತೆ ಗರ್ರನೆತಿರುಗಿ ದಕ್ಷಿಣಾಭಿಮುಖವಾಗಿ ನಡೆಯುತ್ತಿರಲು, ಆಗರಾಜೇಂದ್ರನು ರಾಣಿಯಂ ಕುರಿತು ಎಲೈ ಪ್ರಾಣಕಾಂತೆಯೆ! ಪೂರ್ವ ಪಶ್ಚಿಮ ಸಮುದ್ರಂಗಳನುಲ್ಲಂಘಿಸಿ ಸೂರ್ಯನರಥವೇಗವಂ ತಡೆಯುವಂತೆ ಬೆಳದು ಮಹಾಮಾಯಾಶಕ್ತಿಗೆ ಮನೆಯಾಗಿ ವಿಂಧ್ಯವಾಸಿನಿಯೆಂಬಹೆಸರನ್ನುಂಟುಮಾಡಿ ಪ್ರಸಿದ್ಧಿಯಂಪಡೆದ ವಿಂಧ್ಯಾಚಲವಿದು, ಇದು ಮಹೇಂದ್ರಪರ್ವತವು, ಅದು ಕಾಂಚೀಪಟ್ಟಣವು, ಇದು ಇಂದ್ರಪ್ರಸ್ಥವು, ಎದುರಾಗಿಕಾಣುವದೆ ನಮ್ಮರತ್ನಪುರ ರಾಜಧಾನಿಯೆಂದು ಹೇಳುತ್ತಿರುವಷ್ಟರೊಳ್ ಆವ್ಯೋಮಯಾನವು ಸೂರ್ಯಮಂಡಲದಿಂ ಇಳಿದು ಬರುವದೋಯೆಂಬಂತೆ ಅಂತಃಪುರದ ಉದ್ಯಾನವಂ ಸೇರಲು, ಆಗರಾಜೇಂದ್ರನು ಸೌಗಂಧಿಕಾ ಕುಸುಮಲತೆಯರ ಕರವಂಪಿಡಿದು ಪುಷ್ಪಕದಿಂದಿಳುಹಿಸಿ ಪ್ರದಕ್ಷಿಣಪೂರ್ವಕವಾಗಿ ನಮಸ್ಕಾರವಂಮಾಡಿ ಕುಮಾರಭವನವಂಪೊಕ್ಕು ಎಂದಿನಂತೆ ಅಂತಃಪುರದಲ್ಲಿಯೆ ಸಾಯಂಕಾಲದ ಸಂಧ್ಯಾವಂದನೆಮೊದಲಾದ ಕರ್ಮಂಗಳಂ ಸಾಂಗವಾಗಿ ಮಾಡಿ ತನ್ನಕಾಂತೆಯರೊಡನೆ ಆರೋಗಣೆಯಂಗೈದು, ಕುಸುಮಲತಾದೇವಿಯ ಕರವಂಪಿಡಿದು, ಮಣಿಮಂದಿರವಂ ಸೇರಿ ಹಂಸತೂಲಿಕಾತಲ್ಪದೊಳ್ ಪವಡಿಸಿ, ರಾತ್ರಿಯಲ್ಲಿ ರತಿಪತಿಯಾಜ್ಞೆಯಂಮೀರದೆರಾಜದಂಪತಿಗಳು ರತಿಕ್ರೀಡಾಪರವಶರಾಗಿ ಸುಖದಿಂದೀಪರಿ ಕಾಲವಂಕಳೆಯುತ್ತಿರಲು;

ಆಬಳಿಕಅಂತಃಪುರದೊಳ್ ಒಂದಾನೊಂದುದಿನ ಮಣಿಮಂಚದಲ್ಲಿ ಕುಳಿತು ಆಯಾಸದಿಂದುಚ್ಛ್ವಾಸವಂ ಬಿಡುತಲಿರುವ ಸೌಗಂಧಿಕಾಕುಸು

ಮಲತಾಪೇಕ್ಷಿಸುತ್ತಂ ನೋಡಿ ಚಿತ್ರಲೇಖೆಯು ವೃದ್ಧಳಾದ ಮಂಜುವಾಣಿಯಂ ಕುರಿತು ತಾಯಿ ಮಂಜುವಾಣಿಯೆ! ದೇವಿಯು ದಿನದಿನಕ್ಕೆ ರೋಗಣೆಯಂ ಬಿಟ್ಟು ಯಾರಸಂಗಡಲೂ ವಿನೋದಗಳಂ ಮಾಡದೆ ನಾಚಿಗೆಯಿಂದಾಚೆಗೆ ಹೆಜ್ಜೆಯಂ ಇಡದೆ ಆಯಾಸದಿಂದಿರುವ ಪರಿಯು ನಾನರಿತವಳಲ್ಲ, ನೀವಲ್ಲಿಗೆಯೆಂದಿನಂತೆ ಬಂದು ಆ ಲಕ್ಷಣಂಗಳಂ ಪರೀಕ್ಷಿಸಬೇಕೆಂದು ನುಡಿದ ಚಿತ್ರಲೇಖೆಯ ಮಾತುಗಳಂ ಆಲಿಸಿ, ಮಂಜುವಾಣಿಯೆ ನಗುತ್ತಾ ಕ್ಷಣಮಾತ್ರ ಸುಮ್ಮನಿದ್ದಂತೆ ಎಲೆ ಸಖಿಯೆ! ದೇವಿಯು ಗರ್ಭವಂ ಧರಿಸಿ ಎಷ್ಟು ತಿಂಗಳಾಯಿತು, ನೀನು ಬಲ್ಲೆಯಾ ಎಂದು ಕೇಳ್ವ ಮಧುರಸಮಾದ ಮಂಜುವಾಣಿಯ ಮಾತಂ ಕೇಳಿ ತಾಯಿ ಕೌತುಕಪೂರ್ಣೆಯು ಹಿಂದಣ ದಿನದಲ್ಲಿ ಪಡೆಯನಾದ ಸುಗಂಧರಾಜೇಂದ್ರನು ಪ್ರೋಕ್ಷಣಮಂ ಮಾಡುತ್ತಿರೆ ಬಾಗಿಲ ವಜ್ರದಹಜಾರಕ್ಕೆ ಬಿಜಯಂಗೈಯಲಾಗ ನಾನುಗಳೆಗೆ ಅಡ್ಡಬಿದ್ದು ಸ್ವಾಮಿಗೆ ಯೆನ್ನವಡತಿಯರು ನಡಲುವರಾಶಿ ನಾನಾಗಿರುವದಿನ ವಾಯಿತೆಂದು ವಿಜ್ಞಾಪಿಸಿದದಿನವೆ ಎನಗಾರುತೆಂದು ನುಡಿದ ಚಿತ್ರಲೇಖೆಯ ಮಾತಂ ಕೇಳಿ ನಗಿಂದಾಗಿ ಕೇಳ ಮಂಜುವಾಣಿಯು ಎಲೆ ಸಖಿಯೆ! ಅಂದಿನಿಂದಿಂದಿಗೆ ಆರೂವರೆ ತಿಂಗಳಾಯಿತು, ಗರ್ಭವು ಬೆಳೆಯುತ್ತಲಿರುವುದರಿಂದಾ ಆಯಾಸವಾಗುವುದು ಉಚಿತವೇ ಸರಿ, ಎಲೆ ಸಖಿಯೆ! ಇದಲ್ಲದೆ ಆರು ತಿಂಗಳಾದ ಬಳಿಕ ಮೈಯಲ್ಲಿ ನೀರೂರಿ ಅವಯವಂಗಳಲ್ಲಿ ತುಂಬಿತ ಮುಖಗಳಲ್ಲಿ ಕೆಂಪುಗೂಡಿದ ನಸುಬಿಳುಪೇರಿ ಕೆನ್ನೆಗಳು ಕೆಂಪುಮೀರಿ ಕಾಣುತ್ತಾ, ಕಮಲದ ಎಸಳುಗಳಂತೆ ರೆಪ್ಪೆಗಳುಬ್ಬಿ ಹುಬ್ಬುಗಳಂ ಮೇಲ್ಗಡೆಗೆ ಕಳೆಯುತ್ತಾ ಬಟುವಾಗಿ ನಿಗ್ಗಿದೇರಿ ಮೊಗ್ಗೆಗಳಂತೆ ಮೊಲೆಗಳು ಸುಣಾಪೇರಿ ತೋರುತ್ತ ಮುಟ್ಟುವಿರಾರಿ ಹುಟ್ಟಿದಕರಚವರುಗಳು ಮಂಜುನಂತೆ ಮೈಯೊಳ್ ಸುರಿಯುತ್ತಲಿರುವ ಈಪರಿ ಲಕ್ಷಣಂಗಳೆಲ್ಲವೂ ಪುಟ್ಟರಬೇಕೆಂದು ಹೇಳುತ್ತಾ ಮಂಜುವಾಣಿ ಚಿತ್ರಲೇಖೆಯರೀರ್ವರೂ ದೇವಿಯರಸಮೀಪವಂ ಸ್ಯೆದಿ, ಪೂರ್ವದಲ್ಲಿ ಹೇಳ್ದ ಲಕ್ಷಣಂಗಳೆಲ್ಲವಂ ಪ್ರತ್ಯಕ್ಷವಾಗಿ ಕಂಡು ಅತ್ಯಂತಸಂತೋಷದಿಂದ ಚಿತ್ರಲೇಖೆಯು ಸುಗಂಧರಾಜೇಂದ್ರನಸಮೀಪವಂ ಸ್ಯೆದಿ, ಈಗ ದೇವಿಯರಿಗೆ ಸೀಮಂತೋತ್ಸವವಂ ಮಾಡುವ ಕಾಲವಾಗಿ ಬಂತೆಂದು ವಿಜ್ಞಾಪಿಸಿ ಅಂತಃಪುರವಂ ಸೇರಲಾಗ ರಾಜೇಂದ್ರನು ಸುಮತಿಯೆಂ ಕರದು ಅಯ್ಯಾಮಂತ್ರಿಯೆ! ನೀನಂತ

ಮಹೋತ್ಸವಕ್ಕೆ ಬೇಕಾದ ವಸ್ತುಸಾಮಗ್ರಿಗಳಂಸಂಗ್ರಹಿಸ ಪೇಳ್ದುಚೊ
ಕ್ಕಸದಗುರಿಕಾರರ್ಗೆ ನೇಮಿಸಿ ವೀರಸೇನನಮೊದಲಾದ ಸೇನಾಪತಿಗಳಿಂದೊಡ
ಗೂಡಿ ಸೀಮಂತಸಾಮಂತರಾಯರ ಮಂದಿರಂಗಳಿಗೆಪೋಗಿ ಅರಮನೆಯಲ್ಲಿ
ಸೀಮಂತಮಹೋತ್ಸವವುದಯವೊಡಬೇಕೆಂದು ಬಿನ್ನವಿಸಿ ನಮ್ಮ ಸಂಸ್ಥಾ
ನದಲ್ಲಿರುವ ಸಾಮಾಜಿಕರೆಲ್ಲರಿಗೂ ಒಟ್ಟಾಗಿ ಅಪ್ರುತನನಂಪೇಳಿ ಬಾಯಿಯಿಂದ
ಪ್ಪಣೆಯಂಸಿತ್ತು ವೇದವಿಶ್ರುತನಂನೋಡಿ ಅಯ್ಯ ಪುರೋಹಿತರೆ' ಅಷ್ಟಮಂ
ಗಳದ್ರವ್ಯಂಗಳಂ ತೆಗೆದುಕೊಂಡು ವಿಜಯಲಕ್ಷ್ಮೀ ವಿಲಾಸವೆಂಬ ಹ
ಜಾರದಲ್ಲಿವಿದ್ವಾಂಸರ ಸಮೂಹದಿಂ ದೊಡಗೂಡಿ ನೀವು ಕಾದಿರುವದೆಂದು
ಕಟ್ಟುಮಾಡಿ ಅಂತಃಪುರಕ್ಕೆ ಪೋಗಿ, ರಾಜೇಂದ್ರನು ರಾಣಿಯರಿಂ
ದೊಡಗೂಡಿ ಮಂಗಳಸ್ನಾನನಂಮಾಡಿ ದಿವ್ಯಾಂಬರಾಭರಣಮಾಲ್ಯಾನು
ಲೇಪನಂಗಳಿಂದಲಂಕೃತನಾಗಿ ತಂದೆಯಾದ ಸುಚರಿತ್ರ ಮಹಾರಾಜೇಂ
ದ್ರನ ಪಾದಾರವಿಂದಂಗಳಿಗೆ ನಮಸ್ಕಾರವಂಮಾಡಿ ಗುಣವತಿದೇವಿಯರ ಚ
ರಣಗಳಿಗೆ ಶರಣವಂಗೈದು, ಪಾದಪೂಜೆಯಂಮಾಡಿ ಅಪ್ಪಣೆಯಂ ತೆಗದು
ಕೊಂಡು ಸೌಗಂಧಿಕಾ ಕುಸುಮಲತೆಯರ ಕರಗಳಂಪಿಡಿದು ವಿಜಯಲ
ಕ್ಷ್ಮೀವಿಲಾಸಕ್ಕೆ ಬಿಜಯಂಗೈದು, ಮಣಿಪೀಠಂಗಳಲ್ಲಿ ಕುಳಿತಿರುವ ಸಮ
ಯದೊಳ್ ವೀಣಾವೇಣು ಮೃದಂಗಾದಿ ಮಂಗಳವಾದ್ಯಂಗಳು ಭೋರೆಂದು
ಮೊರೆಯುತ್ತಿರಲು, ನರ್ತಕಿಯರು ನಾಟ್ಯವಂನಾಡುತ್ತಿರಲು, ವಂದಿಮಾಗಧ
ವೈತಾಳಿಕಜನಗಳು ಬಿರುದುಪದ್ಯಂಗಳಂ ಪೇಳುತ್ತಿರಲು, ಸಾಲಾಗಿನಿಂತುಸಾ
ಷ್ಟಾಂಗಪ್ರಣಾಮಂಗಳಂಮಾಡುವಸಾಮಂತರಾಯರಿವರು ಪರಾಕುಸ್ವಾ
ಮಿ, ಪರಾಮರಿಸಬೇಕೆಂದು ವೇತ್ರಹಸ್ತರು ಪೇಳುತ್ತಿರುವಕಾಲದೊಳ್
ವೇದವಿಶ್ರುತನು ಸಂಕಲ್ಪ ಪೂರ್ವಕದಿಂ ಯಥಾಶಾಸ್ತ್ರೀಯವಾಗಿ ಸೀಮಂ
ತಶುಭಕರ್ಮವಂ ಸಾಂಗವಾಗಿಮಾಡಿಭೂಸುರಾಶೀರ್ವಚನಗಳಂ ಶಿರಸಾವ
ಹಿಸಿ, ಅಪರಿಮಿತವಾದ ದಿವ್ಯಾಂಬರಾ ಭರಣಾಗ್ರಹಾರಂಗಳಂ ವಿಶ್ವಾಸಪೂ
ರ್ವಕವಾಗಿ ವಿದ್ವಜ್ಜನರಿಗ ದಯಪಾಲಿಸಿ ಸಾಮಂತರಾಯರು ಸಮೇತ
ನಾಗಿ ರಾಜೇಂದ್ರನು ಭೋಜನಶಾಲೆಗೆಪೋಗಿಥರಥರವಾದಭಕ್ಷ್ಯ ಭೋ
ಜ್ಯಂಗಳಂ ಮೆಲ್ಲುತ ಮಧುರಾನ್ನವಂಭುಂಜಿಸಿ, ಕರ್ಪೂರವೀಳ್ಯವಂಧರಿಸಿ, ಶ
ಕುಂತಲಶಾಲೆಗೆ ಬಿಜಯಂಗೈದು, ಸುಮತಿಯಂನೋಡಿಅಮಾತ್ಯಮಂತ್ರಿಯೇ

ನೀನು ಕುಮಾರಜನನದಬಾಗಿಲಲ್ಲಿ ಕಾವ್ರುಕಟ್ಟುಗಳಂ ಕಲಿತಿರು ಸಕಲ ಕಿಂಕರರಂ ಹಗಲಿರುಳುಕಾಯುವಂತೆ ಕಟ್ಟು ಮಾಡಿ ಕಾಲಮಾಪನೀಯ ಗಣಿತಜ್ಞರಿಂದಲು ಸಂಪ್ರದಾಯಜ್ಞರಾಗಿ ಸಮ್ಯಕ್ಷ್ಮೀಪುವನ್ನು ಪರೀಕ್ಷಿಸಿ ಹಳಬರಾದ ವೈದ್ಯರಿಂದೊಡಗೂಡಿ ನಡೆವಸುವಾಚಾರಂಗಳಂ ಎನಗೆ ತಿಳಿಹಿಸುತ್ತಿರುಯೆಂದು ಸುಮತಿಗೆ ಅಪ್ಪಣೆಯಂ ಸಿತ್ತು ವಿಚಿತ್ರವಾದಚಿತ್ರ ಪತ್ರಗಳನ್ನಾಡುತ್ತ ಮಂದಾರಮಾಲಿಯು ಮೊದಲಾದಕಾಂತೆಯರ ಕರಲಾಘವದಿಂದ ಉದ್ಯಾನವನದಲ್ಲಿ ವಿನೋದವಾದ ವಿಹಾರಂಗಳಿಂದ ಸುಖವಂ ನನುಭವಿಸುತ್ತ ಕಾಲವಂ ಕಳೆಯುತ್ತಿರಲು,

ಆಬಳಿಕ ಒಂದುದಿನ ಸಾಯಂಕಾಲದ ಸಮಯದೋಳ್ ಪ್ರಸವವೇದನೆ ಉಂಟಾಗಲಾಗ ಚಿತ್ರರೇಖೆಯು ಬಾಗಿಲಲ್ಲಿಕಾದಿರ್ದ ಸುಮತಿಯಂನೋಡಿ ಅಯ್ಯಾಮಂತ್ರಿಸು ! ಈಗ ಪ್ರಸವಸಮಯವೆಂದು ರಾಜೇಂದ್ರನಿಗೆ ತಿಳುಹಿಸಬಾರದೆಂದು ಸೇಳಿಸಲಾಗ, ಮಂತ್ರಿಯು ಶಕುಂತಶಾಲೆಯಂ ಪೊಕ್ಕು ರಾಜೇಂದ್ರನಿಗೆ ಕೈಗಳಂ ಮುಗಿದು ಸ್ವಾಮಿ, ಈಗ ಪ್ರಸವಸಮಯವೆಂದು ವಿಜ್ಞಾಪಿಸುವವೇಳೆಯೋಳ್ ಕಲವಿಂಕನು ಓಡಿಬಂದು ಅಡಿಗಳಿಗೆ ಅಡ್ಡಬಿದ್ದು ಎಲೈ ರಾಜೇಂದ್ರಚಂದ್ರನೆ ! ಸೌಗಂಧಿಕಾದೇವಿ ಕುಸುಮಲತಾದೇವಿಯರು ಪುತ್ರರಂ ಪಡೆದರೆಂದು ಪೇಳ್ದ ಶುಭವಾರ್ತೆಯಂ ಕೇಳಿ ಮನವು ಸಂತೋಷ ಸಮುದ್ರದೋಳ್ ಮುಳುಗಿತಾಲಾಡಲು, ಆಗರಾಜೇಂದ್ರನು ಸುಮತಿಕಲವಿಂಕರೀರ್ವರಿಗೂ ನಿಜಾಲಂಕಾರಗಳಿಂದ ಸನ್ಮಾನಿಸಿ, ಅಂತಃಪುರದ ಉಪವನದಲ್ಲಿರುವ ಅಮೃತಸರೋವರದಲ್ಲಿ ಧುಮುಕಿದುಂದಾಗಿ ಸ್ನಾನವಂಮಾಡಿ ದಿವ್ಯಾಭರಗಳಂ ಧರಿಸಿ,ದಿವ್ಯರತ್ನಮಯಂಗಳಾದ ಕಿರೀಟ ಕುಂಡಲಾಂಗದಾಭರಣಗಳಿಂದಲಂಕೃತನಾಗಿ ವಿಜಯಲಕ್ಷ್ಮೀವಿಲಾಸಕ್ಕೆ ಬರುತ್ತಿರುವ ರಾಜೇಂದ್ರನಿಗೆ ಸ್ವಾಮಿ ಮಹಾನುಭಾವನೆ ! ಶುಭದಿನ ಶುಭಮುಹೂರ್ತ ಶುಭಲಗ್ನದಲ್ಲಿ ಪುತ್ರರತ್ನಂಗಳು ಉದಯಿಸಿದರೆಂದು ಪೇಳೆ, ಜನನಪತ್ರಗಳಂ ಹಸ್ತಕ್ಕೆ ಒಪ್ಪಿಸಿದ ಪುರೋಹಿತರಿಗೆ ಮುಕ್ತಾ ಹಾರಂಗಳಂ ಸಿತ್ತು ಜಾತಕರ್ಮವಂ ನೆರವೇರಿಸಿ, ನವರತ್ನಂಗಳಿಂದ ಬೆರಸಿದ ಧಾನ್ಯರಾಶಿಗಳಂ ದಾನವಂಕೊಟ್ಟು ಸುಚರಿತ್ರ ಮಹಾರಾಜೇಂದ್ರನಖಾವಂಗಳಿಗೆ ಪ್ರಣಾಮವಂಮಾಡಿ ಗುಣ

ವತೀದೇವಿ ಮೊದಲಾದ ತಾಯಿಗಳಿಗೆ ಸಾಷ್ಟಾಂಗವೆರಗಿ ಲಕ್ಷಾವಧಿ ಕಟಂಗಳಲ್ಲಿ ಶರ್ಕರವಂ ತುಂಬಿಸಿ, ರತ್ನಪುರದ ಬೀದಿಬೀದಿಯೊಳ್ ಹಂಚುವಂತೆ ಸೇವಕರಿಗೆ ನೇಮಿಸಿ, ಚಂದ್ರಕಾಂತಹಜಾರವಂ ಸ್ವ್ರಸುಖದಿಂದಿರರಿ ಹತ್ತು ದಿನಂಗಳು ತುಂಬಿಬರಲಾಗ ಸುಗಂಧಮಹಾರಾಜೇಂದ್ರನು ಶುಭಮುಹೂರ್ತದಲ್ಲಿ ಸೌಗಂಧಿಕಾದೇವಿಯ ಪುತ್ರನಿಗೆ ಮಕರಂದನೆಂದು ಕುಸುಮಲತಾದೇವಿಯ ಪುತ್ರನಿಗೆ ಪುಷ್ಪದಂತನೆಂದು ನಾಮಕರಣವಂ ಮಾಡಿ ಕೋಟಿಕೊತ್ತಳಂಗಳಲ್ಲಿ ಫಿರಂಗಿಗಳಂ ಹಾರಿಸುವಂತೆ ಅಪ್ಪಣೆಯಂ ಇತ್ತು ಕಳಿಂಗನಗರಕ್ಕೆ ಸ್ವಹಸ್ತಾಕ್ಷರಗಳಿಂದ ಚಿತ್ರಿತಗಳಾದ ಪತ್ರಿಕೆಗಳಂ ಕಳುಹಿಸಿ ಸುಗಂಧರಾಜೇಂದ್ರನು ಕಾಲಕಾಲಂಗಳಲ್ಲಿ ಆಗತಕ್ಕ ಅನ್ನಪ್ರಾಶನ ಚೌಡಾಕರ್ಮಮೊದಲಾದ ಶುಭಕರ್ಮಂಗಳಂ ನೆರವೇರಿಸಿ ಶರತ್ಕಾಲಶುಕ್ಲಪಕ್ಷದ ಬಿದಿಗೆಚಂದ್ರನಂತೆ ಪ್ರತಿದಿನ ಪ್ರವೃದ್ಧಮಾನರಾಗಿ ಬೆಳೆಯುತ್ತಾ ಐದು ಸಂವತ್ಸರಂಗಳು ಆಗುತ್ತಿರಲು; ಒಂದುದಿನ ರಾಜೇಂದ್ರನು ಶಾಂಬಾಶರೀರರೆಂಬ ವಿದ್ವಾಂಸನಂ ಕರೆದು ಅಯ್ಯಾ ವಿದ್ವಾಂಸನೆ ಮಕರಂದ ಪುಷ್ಪದಂತರೆಂಬ ಕುಮಾರಕರಿಗೆ ಚತುಷ್ಷಷ್ಟಿವಿದ್ಯೆಗಳಂ ಜನ್ನಾಗಿ ನೀವೇ ಕಲಿಸಬೇಕಲ್ಲದೆ ಮತ್ತೊಬ್ಬರಿಂದಾಗಲಾರದೆಂದು ನೇಮಿಸಿ, ಕೆಲವುಕಾಲವಾದಬಳಿಕ ವಿದ್ಯಾಪರೀಕ್ಷೆಯಂ ಮಾಡಿ ಮೇಧಾಶಾಲಿಗಳಾದ ಪುತ್ರರನ್ನಾನಂದದಿಂ ವೀಕ್ಷಿಸುತ್ತಾ ಶಂಬರಾಶರೀರನಿಗೆ ಸರ್ವಾಂಗವಂ ಕೊಟ್ಟು ಸನ್ಮಾನದಿಂ ಕಳುಹಿ, ಆಬಳಿಕ ಒಂದುದಿನ ಶುಭಲಗ್ನದೊಳ್ ಉಪನಯನವಂ ಮಾಡಿ ಸುಗಂಧಮಹಾರಾಜೇಂದ್ರನು ಕುಮಾರಕರೀರ್ವರಂ ತನ್ನಂಕದೊಳ್ ಕುಳ್ಳಿರಿಸಿಕೊಂಡು ವಿಧಿಪೂರ್ವಕವಾಗಿ ಷಡಾಕ್ಷರೀಮಂತ್ರವಂ ಉಪದೇಶವಂ ಮಾಡಿ ಪುನಶ್ಚರಣೆ ವಿಧಾನವಂ ಪೇಳಿ, ಆಬಳಿಕ ಏಕಕಾಲದಲ್ಲಿಯು ಸಮಸ್ತಶಾಸ್ತ್ರಾಸ್ತ್ರಂಗಳನ್ನುಪದೇಶವಂ ಮಾಡಿ ಧನುರ್ವೇದಾಭ್ಯಾಸವಂ ಮಾಡುತ್ತಿರುವ ಕುಮಾರಕರಂ ನೋಡಿ ರಾಜದಂಪತಿಗಳು ಆನಂದದಿಂದ ಕಾಲವಂ ಕಳೆಯುತ್ತ, ಒಂದಾನೊಂದುದಿನ ಸೌಗಂಧಿಕಾ ಕುಸುಮಲತಾ ದೇವಿಯರೊಡನೆ ಯೋಚನೆಯಂ ಗೈದು, ಸುಗಂಧರಾಜೇಂದ್ರನು ಕುಮಾರರಿಗೆ ವಿವಾಹಮಹೋತ್ಸವಮಂ ಬೆಳಸಬೇಕೆಂದು ನಿಶ್ಚೈಸಿ ಕಳಿಂಗಪುರವಂ ನಾಳುವ ಕೀರ್ತಿವರ್ಮರಾಯನಿಗೆ ಬಂಧುವರ್ಗಂಗಳಿಂದೊ

ತೆಗೆದು ಚತುರಂಗಸೇನಾ ಸಮೇತನಾಗಿ ವಾರ್ಧಿನೀಕುಮಾರಿಯರಿಂ
ಕುಶೋಪಾಯದಿಂ ಕರದುಕೊಂಡು ಬರುವಂತೆ ಶುಭಪತ್ರಿಕಾ ಪ್ರೇಷಣ
ಮಂ ಮಾಡಿ ಆಬಳಿಕ ಐವತ್ತಾರು ದೇಶಂಗಳಂ ಆಳುವ ರಾಜರಿಗೆ ಪಟ್ಟಾಗಿ
ಬರುವಂತೆ ಕಟ್ಟುಮಾಡಿಸಿ. ಪ್ರಜ್ಞಾನಪಾತ್ರನೆಂಬ ಶಿಲ್ಪಕಾರನಿಗೆ ಚಿತ್ರವಿ
ಚಿತ್ರವಾದ ಹೇಮಮಂಟಪವಂ ನಿರ್ಮಿಸುವಂತೆ ನೇಮಿಸಿ, ವಿವಾಹಕ್ಕೆ ಅ
ಗತ್ಯವಾದ ವಸ್ತು ಮುಂತಾದವುಗಳಂ ಸಜ್ಜುಮಾಡುವಂತೆ ಸುಮತಿಗೆ ಅ
ಪ್ಪಣೆಯಂ ಕೊಡುತ್ತ ಸುಖದಿಂದಿರುತ್ತಿರುವ ಕಾಲದೊಳ್ ಕಳಿಂಗನಗರಕ್ಕೆ
ಕಳುಹಿಸಿದ ದೂತರು ಬಂದು ಪ್ರಣಾಮಂಗೈದು ಮಹಾರಾಜಾಧಿರಾಜನೆ!
ಕೀರ್ತಿವರ್ಮರಾಯನು ಸೇನಾಸಮೇತನಾಗಿ ರತ್ನಪುರದ ಸಮೀಪಕ್ಕೆ ಬಂ
ದನೆಂದು ವಿಜ್ಞಾಪಿಸಿದ ಮಾತುಗಳಂ ಲಾಲಿಸಿ, ಸುಗಂಧರಾಜೇಂದ್ರನು ವಿ
ಜಯೋತ್ಸಾಹಯುಕ್ತನಾಗಿ ಕೀರ್ತಿವರ್ಮನಂ ಎದುರ್ಗೊಂಡು ಕುಶಲಪ್ರಶ್ನ
ಪೂರ್ವಕವಾಗಿ ಆಲಿಂಗನವಂ ಮಾಡಿ ಇಬ್ಬರು ಚತುರ್ದಂತಗಜವನ್ನೇರಿ
ಬಹುಸೇನೆಯಿಂ ಒಡಗೂಡಿ ತೆರಳಿ ಬಂದು ಅರಮನೆಯ ಸಮೀಪದಲ್ಲಿ
ರ್ದು ಆನೆಯಿಂದಿಳಿದು ಅಂತಃಪುರವಂ ಪ್ರವೇಶವಂಗೈಯುವಾಗ, ಕೀರ್ತಿವ
ರ್ಮನು ಸೌಗಂಧಿಕಾ ಕುಸುಮಲತೆಯರ ಅಡಿಗಳಿಗೆ ಅಡ್ಡಬಿದ್ದು ಮರಳಿ
ಬಿತವಿನಯನಾಗಿ ಮಾಡುವ ನಮನಕ್ಕೆ ಪ್ರೀತಿಗೊಳ್ಳುತ್ತಿರುತ್ತಿರಲು,
ಅನುರೂಪವಾದ ಶುಭಮುಹೂರ್ತದಲ್ಲಿ ಸುಗಂಧರಾಜೇಂದ್ರನು ಪುರೋಹಿತನ
ಮುಖವಚನದಿಂದಾ ನಾಳೆ ಮೊದಲಾಗಿ ಶುಭದಿಂದಾಗುವ ಆಭರಣ ಧಾರಣ
ಸ್ತಂಭ ಮುಹೂರ್ತ ಇಷ್ಟದೇವತಾ ಸಮಾರಾಧನ ಸುಮಂಗಲಿ ಪ್ರಾರ್ಥ
ನೆ ಸುವಾಸಿನಿ ಪೂಜೆ ಮೊದಲಾದ ಶುಭಕಾರ್ಯಂಗಳು ವರನಗೃಹದಲ್ಲಿಯೇ
ಮೊದಲುಮಾಡಿ ಅನಂತರ ಕನ್ಯಾಗೃಹದಲ್ಲಿ ಮಾಡತಕ್ಕದ್ದಾಗಿ ಕ್ಷತ್ರಿಯ
ರೊಳ್ ಕರ್ಣಾಟಕದೇಶದ ಪದ್ಧತಿಯಿರುವದರಿಂದ ಅದೇ ರೀತಿಗೆ ನಡೆಯು
ವಂತೆ ಕೀರ್ತಿವರ್ಮರಾಯನಿಗೆ ತಿಳುಹಿಸಿ, ವಿವಾಹಮಹೋತ್ಸವಕ್ಕೆ ಬಂ
ದಿರುವ ದೇಶಾಧಿಪತಿಗಳಿಗೆ ಬಿಡದಿಗಳಂ ಮಾಡಿ ನಾನಾ ಉಪಚಾರಂಗಳಂ ಮಾ
ಡುವಂತೆ ಸುಮತಿಗೆ ಅಪ್ಪಣೆಯನ್ನಿತ್ತು ಅನುರೂಪವಾದ ಪಟಹ ನಿಸ್ಸಾಣ ವೀ
ಣಾ ವೇಣು ಮೊದಲಾದ ಶುಭವಾದ್ಯಂಗಳು ಮೊರೆಯುತ್ತಿರಲು, ಸಂಪ್ರದಾ
ಯಜ್ಞರಾದ ವಿದ್ವಜ್ಜನರು ವೇದಘೋಷವಂ ಮಾಡುತ್ತಿರಲು, ಶುಭಲಗ್ನದ

ಲ್ಲಿ ಕನ್ಯಾವರಣ ಪೂರ್ವಕವಾಗಿ ಮಾಂಗಲ್ಯಧಾರಣೆಯಂ ಮಾಡಿಸಿ, ಸಪ್ತಪದಿ ಯಿಂದಸಂಚಾರವಂಗೈಸಿ,ಲಾಜಾಹೋಮಮಂ ಸಾಂಗವಾಗಿಮಾಡಿ, ವೇದವಿಶ್ರುತನೆಂಬ ಪುರೋಹಿತನು ವಧೂವರ್ಗೆ ಯುಕ್ತ್ಯಾ ಅರುಂಧತೀದರ್ಶನವಂಮಾಡಿಸಿ, ಆಬಳಿಕ ಸುಗಂಧರಾಜೇಂದ್ರನಸಮೀಪಕ್ಕೆ ಒಂದು ಎಲೈಮಹಾನುಭಾವನೆ! ಮಹಾವೈಭವದಿಂದ ವಿವಾಹಮಹೋತ್ಸವವಾಯಿತೆಂದು ಪೇಳ್ದ ಪುರೋಹಿತನ ಮಾತಂ ಕೇಳಿ ಸಂತೋಷಪಡುತ ವಧೂವರರಿಂದ ಕೂಡಿ,ಷಡ್ರಸೋಪೇತಮಾದ ಭಕ್ಷ್ಯಭೋಜ್ಯಂಗಳಂ ಬುಂಜಿಸಿ, ಸುಖದಿಂದೀಪರಿ ವಸಂತೋತ್ಸವ ಮೆರವಣಿಗೆ ಮೊದಲಾದ ಮಹೋತ್ಸವಂಗಳಂ ಮಹಾವೈಭವದಿಂದ ನೆರವೇರಿಸಿ, ಕೀರ್ತಿವರ್ಮರಾಯನಿಗೆ ಅಪೂರ್ವಂಗಳಾದ ದಿವ್ಯಾಂಬರಾಭರಣಗಳಿಂದಸನ್ಮಾನವಂಮಾಡಿ, ಕಳಿಂಗನಗರಕ್ಕೆ ಕಳುಹಿಸಿ, ಆಬಳಿಕ ದೇಶಾಧಿಪತಿಗಳಿಗೆ ಉಚಿತಮಾದ ವಸ್ತ್ರಾಭರಣಂಗಳಿಂದ ಸತ್ಕರಿಸಿ ಅವರೆಲ್ಲರಿಗೂ ಅಪ್ಪಣೆಯನ್ನಿತ್ತು ಸೌಗಂಧಿಕಾದೇವಿ ಮೊದಲಾದ ತನ್ನ ನಿಜಕಾಂತೆಯರಿಂದೊಡಗೂಡಿ ವಿನೋದವಿಹಾರಂಗಳಿಂದ ಕ್ರೀಡಿಸುತ್ತಾ ಮಕರಂದ ಪುಷ್ಪದಂತ ಕುಮಾರರಂ ನೋಡಿ ಆನಂದ ಪಡೆಯುತ್ತ ಅಖಂಡಭೂಮಂಡಲವೆಲ್ಲವಂ ಆನಂದದಿಂ ಪರಿಪಾಲನೆಯಂಗೈಯುತ ಮಹಾಸಾಮ್ರಾಜ್ಯಮಂ ನನುಭವಿಸುತ್ತ ಸುಖದಿಂದಿರುತ್ತಿರ್ದನೆಂಬಲ್ಲಿಗೆ

ಗದ್ಯ * ಕುಂಡಲಿಶಯ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖ ನಿಖಿಲ ಸುರವರ ಪರಿಭವ ಪರಿಣತ ಪ್ರಚಂಡ ಬಲಚಂಡ ಮುಂಡ ವಿಖಂಡನ ನಿಪುಣ ಕೋದಂಡಕಾಂಡಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾಕಟಾಕ್ಷ ವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರಸಕವಿತಾ ನಿಸ್ಸಹಾಯ ನಿರ್ಮಾಣಧೌರೇಯ ಘಟಿಕಾಶತ ಗ್ರಂಥ ದಿನದಿನಪ್ರಬಂಧ ನಿಬಂಧನ ಧುರಂಧರತ್ರಿಭುವನ ಪವಿತ್ರಾತ್ರೇಯ ಸಗೋತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ, ನರಪತಿಬಿರುದ ಮಹೀಶೂರ ಪುರವರಾಧೀಶ ಶ್ರೀಕೃಷ್ಣರಾಜ ಒಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತಮಾದ ಸೌಗಂಧಿಕಾ ಪರಿಣಯಮೆಂಬ ಈ ಸ

ನೀಸ ಕೃತಿಯೊಳ್ ಮಕರಂದ ಪುಷ್ಪವಂತೋತ್ಪತ್ತಿ ಇವರೀರ್ವರವಿವಾಹ
ನಿರೂಪಣವೆಂಬ ಚರಿತೆ ಆಶ್ವಾಸ ನಿರೂಪಣಕ್ಕೆ ಮಂಗಳಮಹಾ * * *

ಮೂವತ್ತನಾಲ್ಕನೆ ಆಶ್ವಾಸ ಸಂಪೂರ್ಣವು.

ಶ್ರೀರಸ್ತು

ಮೂವತ್ತೈದನೆಯ ಆಶ್ವಾಸ ಪ್ರಾರಂಭಃ

ಶ್ರೀಚಾಮುಂಡಿಕಾಂಬಾಯೈನಮಃ.

ಈರೀತಿಯಲ್ಲಿ ಸುಚರಿತ, ಮಹಾರಾಯನು ತನಗೆಕುಮಾರಕನಾದ
ಸುಗಂಧರಾಜೇಂದ್ರಗೆ ರಾಜ್ಯಾಭಿಷೇಕವಂ ಮಾಡಿ ಕೃತಕೃತ್ಯನಾದೆ
ನೆಂದು ಭಾವಿಸಿ, ರಾಜ್ಯಭಾರವಂ ಕುಮಾರಕನಲ್ಲಿ ಇಳುಹಿ ಸುಖದಿಂದಿರು
ತ್ತಾ ಒಂದಾನೊಂದು ಸಮಯದೊಳ್ ಸಮೀಪದಲ್ಲಿ ಇರುವ ಸುಬುದ್ಧಿ
ಯೆಂಬ ಮಂತ್ರಿಯಂನೋಡಿ ಎಲೈ ಸಚಿವೋತ್ತಮನೆ ! ನಮ್ಮಕುಲಪರಂ
ಪರೆಯಾಗಿ ಈದೇಶಾಧಿಪತ್ಯವಂಮಾಡುತ್ತಾ ಪ್ರಜೆಗಳಂ ರಕ್ಷಿಸುತ ಯಶೋ
ವಂತರಾಗಿ ಇದ್ದಧೊರೆಗಳಲ್ಲಿ ನಿಮ್ಮ ಕುಲಕ್ರಮವಾಗಿ ಮಂತ್ರಪದವಿಯಂ
ಪಡೆದು ಆಪ್ತರಾದನಿಮ್ಮ ಪೂರ್ವಪುರುಷರುಗಳು ತಮ್ಮತಮ್ಮ ರಾಯ
ರುಗಳ ಚರಿತ್ರೆಯಂ ಹೇಳುತ ಶಾಸನದಲ್ಲಿ ಬರದುಯಿರುವದಂತಿಳಿದು ಇ
ರುವೆಯಷ್ಟೆ, ಮತ್ತು ನಾವುಸಮಾಡಿದ ರಾಜ್ಯಭಾರವಂತಿಳಿದು ಇರುವೆಯ
ಲ್ಲ, ಮತ್ತು ನಮ್ಮ ಕುಮಾರಕನಾದ ಸುಗಂಧರಾಜನು ಸಂಪಾದಿಸಿದಕೀ
ರ್ತಿಯಂ ಕೇಳಿಇರುವೆಯಷ್ಟೆ ?ಇದೆಲ್ಲವಂ ಕಂಡುಕೇಳಿ ಇರುವ ಲೋಕದ
ವರು ಏನೆಂದು ಪರೋಕ್ಷದಲ್ಲಿ ಹೇಳಿಕೊಳ್ಳುವರು ನಿನಗೆತಿಳಿದು ಇರುವ ಅ
ರ್ಥವಂ ಪೇಳುವನಾಗು ಎಂದು ರಾಯನುಕೇಳುತ್ತಿರಲು, ಆಮಾತಿಗೆ ಸು
ಬುದ್ಧಿಎಂಬ ಮಂತ್ರಿಯುಕ್ಷಣಹೊತ್ತು ಯೋಚಿಸಿ ರಾಯನವಾಕ್ಯದ ಭಾ
ವವಂತಿಳಿದು ರಾಜಾಧಿರಾಜನೆ! ಮಹರ್ಷಿಗಳ ಮುಖದಿಂದ ಬಹು ಅರ್ಥ
ಗರ್ಭಿತಂಗಳಾಗಿ ಉದ್ಭವಿಸಿದ ಸೂತ್ರವಾಕ್ಯಗಳಂತೆ ಅಪ್ಪಣೆಯಂಪಾಲಿಸಿದ
ಅರ್ಥವು ಸತ್ಯವೇಸರಿ, ಲೋಕವೆಚ್ಚುವಂತೆ ನಡೆದುಕೊಳ್ಳುವದೇಶ್ರೇಯ
ಸ್ಕರವು, ಅದನ್ನು ಲಕ್ಷ್ಯದಲ್ಲಿತರದೆ ನಡದು ಕೊಂಡರೆಹಾನಿಕರವು, ಲೋ

ಕವನರುಯಾರೆಂದರೆ.-ಹಿತವಿಂದನಡೆದುಕೊಳ್ಳುವರೆ ಲೋಕದವರು, ವಿಹಿತ ವ್ಯಾವುದೆಂದರೆ:-ವರ್ಣಾಶ್ರಮ ಧರ್ಮಂಗಳುಂ ಯಥೋನಾನುಸುಗ್ರಹೋಸ್ಮ್ಯಾ ಯ್ಯ.ವೆಂಬ ಶಾಸ್ತ್ರವಿರುವಂತೆ ಲೋಕದಲ್ಲಿ ಸಜ್ಜನರು ಸಮ್ಮತವಾದಲ್ಲದೆ ಶ್ಲಾಘನೆಯುಂಟಾಗದು, ಅದಿಲ್ಲದೆ ಇದ್ದರೆ ಅಪವಾದತಪ್ಪದು, ಈ ಅಪವಾದವೆಂಬುದೆ ಅಯಶಸ್ಕರವು, ಪ್ರಜೆಗಳಲ್ಲಿ ಸಟೆ ವಿಟ ಪರಿಹಾಸ ವಂಚಕವೆಂದು ಮಾಗ ಧರಸ್ತೋತ್ರನಿಂದೆಗಳು ಯಶಸ್ಸಿಗೆ ಹೆಚ್ಚು ಕಡಿಮೆ ಯನ್ನುಂಟುಮಾಡಲಾರವು, ಅದರಿಂ ಈ ಜನರು ಉಪೇಕ್ಷೆಗೆ ಯೋಗ್ಯರಾದುದರಿಂದ ಲೋಕಸಮ್ಮತವಾಗಿ ಸಮಯೋಚಿತ ಸ್ವಧರ್ಮವೆಂಬಿದರ ಧರ್ಮಾನುಸಾರವಾಗಿ ಅರ್ಥವನ್ನು ಗಳಿಸಿ, ಧರ್ಮಾರ್ಥಗಳಿಗೆ ಅನುಗುಣವಾದ ಕಾಮಭೋಗಗಳಂ ಅನುಭವಿಸುತ ಪ್ರಜಾರಕ್ಷಣೆಯಂ ಮಾಡುವ ಅರಸಿಗೆ ಇಹಪರದಲ್ಲಿ ಶ್ರೇಯೋಲಾಭ ಉಂಟಾಗುವದು, ಅದರಿಂ ಲೋಕನಾಯಕನಾದ ಶ್ರೀರಾಮನು ಕೂಡ ಲೋಕಾಪವಾದಕ್ಕೆ ಭೀತನು, ಪತಿವ್ರತಾಶಿರೋಮಣಿಯಾದ ಸೀತಾದೇವಿಯನ್ನು ಕೂಡ ವಾಲ್ಮೀಕಾಶ್ರಮಾಭಿಮುಖವಾಗಿ ಪರಿತ್ಯಜಿಸಿದನು, ಹೀಗಿರುವಲ್ಲಿ ಸಗರರಾಯನು ಅಸಮಂಜನೆಂಬ ಸುತನಂ ಪರಿತ್ಯಜಿಸಿದವರಲ್ಲಿ ಸಂಶಯವೇನು? ಇಂಥಾ ಮಹಾನುಭಾವರುಗಳಿಗೆ ಲೋಕಾಪವಾದ ಭೀತಿಯುಂಟಾಗಿ ಇರುವಲ್ಲಿ ಉಳಿದವರಪಾಡೇನು, ಇದಂ ತಿಳಿದು ರಾಜ್ಯಭಾರವಂ ಮಾಡುವ ಭೂಪತಿಯು ಧರ್ಮೈಕಶರಣನಡೆಯುತ ಅಪವಾದಕ್ಕೆ ಭೀತನಾಗಿ ನಡೆಯುತ ಪ್ರಜೆಗಳಂ ವಿಹಿತದಿಂದ ನಡೆದುಕೊಳ್ಳುವಂತೆ ಆಜ್ಞಾಪಿಸುತ ಇದ್ದರೆ ಪ್ರಜಾಪಾಲನೆಗಿಂತಲು ಅರಸುಗಳಿಗೆ ಪರಮಧರ್ಮವೆಂಬದು ಬೇರೆಯಿಲ್ಲಾ, ಆತನು ಸಂಪಾದಿಸಿದ ಧರ್ಮವೇ ಇಹಪರದಲ್ಲಿ ಸಂರಕ್ಷಿಸುವದು, ಮತ್ತು ಈ ಧರ್ಮವು ಸಾಂಗವಾಗುವದಕ್ಕೆ ಪ್ರಜಾಪಾಲನೆಯಲ್ಲಿ ನ್ಯೂನಾತಿರಿಕ್ತ ದೋಷಪರಿಹಾರಕ್ಕೋಸ್ಕರ ಷೋಡಶ ಮಹಾದಾನಂಗಳನ್ನಾಚರಿಸಬೇಕು, ಮತ್ತು ಶಕ್ತನಾಗಿ ಅಧಿಕಾರಿಯಾದವರೆ ಇಷ್ಟಪ್ರಾಪ್ತಿಗೂ ಅನಿಷ್ಟನಿವೃತ್ತಿಗೋಸುಗವು ಅಶ್ವಮೇಧಯಾಗವಂ ಮಾಡಿ ಕೃತಕೃತ್ಯನಾಗಬೇಕು, ಹಾಗಲ್ಲದಿದ್ದರೆ ರಣಾಂಗಣದಲ್ಲಿ ಹಿಮ್ಮೆಟ್ಟದೆ ಯುದ್ಧಮುಖದಿಂದ ಸದ್ಗತಿಯಂ ಸಂಪಾದಿಸಬೇಕು, ಪ್ರಜೆಗಳಂ ಸ್ವಧರ್ಮಾನುಗುಣವಾಗಿ ನಡೆದುಕೊಳ್ಳುವಂತೆ ಆಜ್ಞಾಪಿಸಿದ ಅರಸಿಗೆ ಬರುವ ಶ್ರೇಯಸ್ಸು ಏನೆಂದರೆ:—ಪ್ರಧು

ನಿನಿಂದಾ ಸಂರಕ್ಷಿತರಾದ ಪ್ರಜೆಗಳದೆಸೆಯಿಂದ ಧನಾದಿಗಳು ಬೊಕ್ಕಸಕ್ಕೆ ಬಂದುಬೀಳುವಂತೆ, ಆ ಪ್ರಜೆಗಳು ಮಾಡಿದ ಪುಣ್ಯಂಗಳಲ್ಲಿ ಆರುಭಾಗದಲ್ಲಿ ಒಂದು ಅಂಶವು ಅರಸಿಗೆ ಉಂಟಾಗಿ ದ್ರವ್ಯರಾಶಿಯಾಗುವಂತೆ, ಪುಣ್ಯರಾಶಿಯುಂಟಾಗಿ ಶಾಶ್ವತಸದ್ಗತಿಯಂ ಉಂಟುಮಾಡುವದು, ಈ ಅರ್ಥವಂ ಶಾಸ್ತ್ರಜ್ಞನ ಮುಖದಿಂ ತಿಳಿಯದೆ ಉಪೇಕ್ಷಾವಂತನಾಗಿ ಮನಬಂದಂತೆ ನಡೆದುಕೊಂಡರೆ ರಾಜ್ಯಮರ್ಯಾದೆ ಕೆಟ್ಟು ಕೈತಪ್ಪಿ ಪ್ರಜೆಗಳು ದುಷ್ಟಕಾರ್ಯದಲ್ಲಿ ನಿರತರಾಗಿ ಪಾಪವಂ ನಾರ್ಜಿಸುವದರಿಂದಾ ಅಪಾಯವೆಲ್ಲಾ ಒಟ್ಟಾಗಿ ನಿಯಾಮಕನಾದ ಅರಸುವೊಂದಿ ರಾಜ್ಯಾಂತದಲ್ಲಿ ಬಹುಕೋಟಲೆಗೊಳಿಸುವದು. ಇವಂ ತಿಳಿದು ಶಸ್ತ್ರಗಳಿಗೆ ಸಾಣೆಯಂ ಕೊಡುವನನೋಟ್ಟುವಂತೆ ಪ್ರಭುವಿಗೆ ಪ್ರಜಾರಕ್ಷಣೆಯಲ್ಲಿ ಚಿತ್ತವೇಕಾಗ್ರದಿಂದಿರಬೇಕು, ಹೀಗೆ ಇದ್ದರೆ ಅಪವಾದ ಸಂಭವಿಸದೆ ಲೋಕಪೂಜ್ಯತೆ ಉಂಟಾಗುವದೆಂದು ಹೇಳಿದಂತಾಯಿತು, ಮಹಾಪ್ರಭುವೆ ! ಹೇಳಿದಂತೆ ನಡೆದು ಕೊಳ್ಳುವಲ್ಲಿ ನೀವಲ್ಲದೆ ಮತ್ತ್ಯಾರು ಸಮರ್ಥರಾಗುವರು, ಈ ಅರ್ಥವೆ ಮಹರ್ಷಿಗಳ ಮತವಾದುದರಿಂದ ಶ್ರೇಯಸ್ಕಾಮಿಗಳಾದ ಅರಸುಗಳು ತಿಳಿದು ಆಚರಿಸತಕ್ಕದ್ದು, ರಘುಕುಲದಲ್ಲಿ ಅವತರಿಸಿದ ಮಹಾರಾಯರುಗಳು ಭೂಲೋಕಾಧಿಪತ್ಯವಂ ಪಡೆದು ನ್ಯಾಯದಿಂದ ಪ್ರಜಾಪಾಲನವಂಗೈದು ಯಶೋವಂತರೆಂದು ಹೊಗಳಿಸಿಕೊಂಡಂತೆ ನಿಮ್ಮ ಯದುವಂಶಸ್ಥರಾದ ಮಹಾರಾಯರುಗಳು ಪೃಥ್ವೀಸಾಮ್ರಾಜ್ಯವಂಗೈಯುತಾ ಲೋಕಾತಿಶಯವಾದ ಕೀರ್ತಿಯಂ ಪಡೆದು ಪುಣ್ಯಶ್ಲೋಕರೆಂದೆನಿಸಿಕೊಂಡರು, ಮತ್ತೂ ಲೋಕದಲ್ಲಿ ಶಿಷ್ಟರಾದವರು ಶ್ರೀವತಾವತಾರದ ಕಥೆಗಳಂ ಪೊಗಳುವಂತೆ ನಿಮ್ಮ ಚರಿತ್ರಕಥನದಿಂ ಕಾಲವಂ ಕಳೆಯುತ ಸಂತುಷ್ಟರಾಗಿ ಇರುವದರಿಂದಾ ಸಾಧಾರಣರು ಶ್ಲಾಘಿಸುವದರಲ್ಲಿ ಸಂಶಯವೇನು ಇರುವದು, ಕ್ಷೀರಸಾಗರಜಲವಂ ಪೊಂದಿದ ಕುಮುದನಿಕರಂಗಳು ಚಂದ್ರಕಿರಣಾವಲೋಕನದಿಂ ವಿಶೇಷವಾಗಿ ನಲಿಯುವಂತೆ ನಿಮ್ಮಿಂದ ಸಂರಕ್ಷಿತರಾದ ಪ್ರಜೆಗಳು ನಿಮ್ಮ ಕುಮಾರಕನಾದ ಸುಗಂಧರಾಜೇಂದ್ರನ ಆದರಣೆಯಿಂದ ವಿಶೇಷವಾಗಿ ಸಂತೋಷಪಡುವರು, ಮತ್ತೂ ಚಂದ್ರಬಿಂಬದೊಳ್ಪ್ರವೇಶವಂಗೈದ ಸೂರ್ಯಾತಪವೆ ಚಂದ್ರಿಕಾರೂಪದಿಂ ಪರಿಣಮಿಸಿ ಲೋಕದ ಜಾಡ್ಯಸಂತಾಪಾತಪಗಳಂ ಪರಿಹರಿಸುವಂತೆ

ನಿಮ್ಮಿಬ್ಬರ ಪ್ರತಾಪ ಯಶಸ್ಸುಗಳು ಶತ್ರುಗಳಿಗೆ ಸಂತಾಪವಂ ಪ್ರಜೆಗಳಿಗೆ ಹರ್ಷವನ್ನುಂಟುಮಾಡುವವು, ಎಂದು ಸುಬುದ್ಧಿಯು ಹೇಳುತ್ತಿರಲು,ಐಯ್ಯಾ ಮಂತ್ರಿಯೆ ! ನೀನು ಹೇಳಿದವಾಕ್ಯದಲ್ಲಿರುವ ಭಾವವನ್ನು ನೋಡಿದಲ್ಲಿ ನಮ್ಮಲ್ಲಿ ಪ್ರತಾಪಾತಿಶಯವಂ ಕುಮಾರಕನಲ್ಲಿ ಪ್ರಜಾನುರಾಗವಂ ವಿಶೇಷವಾಗಿ ಹೇಳಿದಂತಾಯಿತು ಇದೆಂದು ನುಡಿಯಲು, ಜೀಯ್ಯಾ! ಪೌರುಷ ಬಲದಿಂದಲೆ ಈ ಮಹಾರಾಜ್ಯವಂ ಪಾಲಿಸುತ ಸಕಲ ಶತ್ರುಗಳಂ ಜಯಿಸಿ, ಅಸದೃಶಕೀರ್ತಿಯಿಂದ ಲೋಕವಂ ಶ್ವೇತದ್ವೀಪವಂತೆ ನೀವು ಮಾಡಿದುದರಿಂದ ತಮ್ಮಲ್ಲಿರುವ ಪ್ರತಾಪವು ಅಸದೃಶವೆಂದು ಹೇಳಬೇಕು, ತಮ್ಮ ಪುತ್ರನಾದ ಸುಗಂಧಮಹಾರಾಜೇಂದ್ರನಾದರೊ? ಸಾಕ್ಷಾದ್ದೇವಾಂಶಪುರುಷನಾದ್ದರಿಂದ ಈತನಲ್ಲಿ ಯಾವಗುಣಂಗಳಂ ಎಷ್ಟೆಂದು ಹೇಳಿದರೂ ಆಶ್ಚರ್ಯಕರವಲ್ಲಾ,ಅದೇನೆಂದರೆ-ಲೋಕಕಂಟಕರಾದರಾಕ್ಷಸರುಲೋಕವನ್ನಾಕ್ರಮಿಸಿದುದರಿಂದ ಧರ್ಮನಷ್ಟವಾಗಿ ಬರುವದಂ ತಿಳಿದು ಅವರಂ ನಿಗ್ರಹಿಸಲೋಸುಗ ಅಂಶಸಂಭೂತನಾದ ಸುಗಂಧರಾಜೇಂದ್ರನಿಗೆ ಜಗದೀಶ್ವರಿಯು ಬಹುಸಾಧನಂಗಳಂ ಪಾಲಿಸಿ ದುಷ್ಟರಂ ನಿಗ್ರಹಗೊಳಿಸಿ ದಲ್ಲದೆ ಸಾಧಾರಣ ಕ್ಷತ್ರಿಯರಿಗೆ ಸಾಧನವಂ ಪಾಲಿಸಿ, ದೇವಕಾರ್ಯವಂ ನಿರ್ವಾಹ ಗೊಳಿಸಿದವಳಲ್ಲಾ, ಇದರಿಂದೇನಾಯಿತೆಂದರೆ- ದೊಡ್ಡಪರಶುವಂ ಕೊಟ್ಟು ಮಾರ್ಗದಮುಳ್ಳು ಗಿಡಗಳಂ ಛೇದನೆಗೊಳಿಸಿ ದಂತಾಯಿತಲ್ಲದೆ ಬಾಹುಬಲದಿಂದಲೆ ಮಾರ್ಗದಮುಳ್ಳುಗಿಡಗಳಂ ಬೇರುಸಹಿತವಾಗಿ ಕಿತ್ತು ಬಿಸುಟಂತಾಗಲಿಲ್ಲಾ, ಹೀಗಾದರೂ ಸುಗಂಧರಾಯನಿಂದ ಸಂಪಾದಿತವಾದ ಯಶಸ್ಸು ಸಹ ತಮ್ಮ ಕೀರ್ತಿಯಲ್ಲಿ ಕ್ಷೀರಸಾಗರ ಜಲದಲ್ಲಿ ಚಂದ್ರಕಿರಣವು ಸಂಬಂಧಿಸಿದಂತೆ ಲೋಕಾನಂದಕರವಾಯಿತು,ಎಂದುಹೇಳುವ ಮಂತ್ರಿಯವಾಕ್ಯವಂ ಕೇಳಿ ಸುಚರಿತ್ರರಾಯನು ಅಯ್ಯಾ ಸಚಿವೋತ್ತಮನೆ! ಸುಗಂಧರಾಯನು ದೇವಾಂಶಸಂಭೂತನಾದುದರಿಂದ ದೇವಿಯರು ದೇವಕಾರ್ಯಾರ್ಥವಾಗಿ ಮಹಾಸಾಧನಂಗಳಂ ಕೊಟ್ಟು ಲೋಕಕಂಟಕರಂ ಈತನ ಮುಖಾಂತ್ರದಿಂ ಪರಿಹಾರವಂಗೊಳಿಸಿದರೆಂದು ಹೇಳಿದಮಾತಿಗೆ ದೇವಕಾರ್ಯವಾದಬಳಿಕಾ ಕುಮಾರಕನಲ್ಲಿ ಆ ಮಹಾಸಾಧನಂಗಳು ಎಂದಿನಂತೆ ಇರುವವ್ರೊ? ವಿವಾಹಾನಂತರದಲ್ಲಿ ಬಂಧುಗಳು ಯಥಾಸ್ಥಾನವಂ ಹೊಂದು

ವಂತೆ ಕಾಷ್ಠನಂ ದಹಿಸಿ ಉಳಿದ ಅಗ್ನಿಜ್ವಾಲೆಯಂತೆ ಶಾಂತವಾದವೋ? ಎನಲು. ಮಹಾಪ್ರಭುವೇ! ವಿಹಿತವಾಗಿ ಅನ್ನ ದಾನವಂ ಕೊಟ್ಟಂತಾಯಿತ್ತು, ಜನಕ್ಕೆ ಜೀವನಾಧಾರವಾಗಿ ಉದಕಧಾರೆಗಳಿಂದ ಭೂಮಿಯ ಸಂತಾಪ ಶಮನವಂ ಮಾಡಿ ಜೀವನ ಸಂಕಲ್ಪಿಸಿದ ಮೇಘವು ವರ್ಷಾಕಾಲ ಕಳೆದಬಳಿಕ ಆಡಂಬರಾದಿ ವಿಸ್ತೃತ್ವಭಯಂ ರಹಿತನಾಗಿ, ನಿರ್ಮಲನಾಗಿ, ಶಾಂತನಾಗಿ, ಕಾಣಿಸಿಕೊಳ್ಳುವಂತೆ ಮಹಾಕಾರ್ಯಾರ್ಥನಾಗಿ ಒದಗಿದ ಸಾಧನಂಗಳ ತೇಜಸ್ಸನ್ನುಳ್ಳ ಕಾರ್ಯನಿರ್ವಾಹಾನಂತರದಲ್ಲಿ ವಿವಾದಿಸ ಸನ್ನದ್ಧನಾಗುವನುಂಟು ಎಂದು ಮಂತ್ರಿಯು ಹೇಳುತ್ತಿರಲು, ಆ ಮಾತಿಗೆ ಸುಚರಿತ್ರರಾಯನು ಮನಮೋಹಕಾತಂಕ ಪಡುವವನಾಗಿ ಐಯ್ಯಾ ಸುಬುದ್ಧಿಯೇ! ನೀನು ಹೇಳಿದ ಅರ್ಥವು ಯುಕ್ತವಾಗಿಯೂ, ಪ್ರಕಾರಾಂತರವಾಗಿಯೂ ತೋರುತಲಿದೆ, ಕುಮಾರಕನು ವಿದ್ಯಾಭ್ಯಾಸವಂ ಮಾಡಿಕೊಂಡು ಬಂದ ಸಮಯದಲ್ಲಿ ಆತನಮುಖದ ತೇಜಸ್ಸು ಮಧ್ಯಾಹ್ನ ಮಾರ್ತಾಂಡಮಂಡಲವ ನೋಡಿದಂತೆ ನಮ್ಮಂಥಾವರಿಗೂ ಅಶಕ್ಯವಾಗಿ ಕಾಣಿಸುತಲಿತ್ತು. ಈಗ ಮಂಜು ಮುಚ್ಚಿದ ಸೂರ್ಯನಂತೆ ಪ್ರಭಾರಹಿತನಾಗಿ ಕಾಣಿಸುವದರಿಂದ ನನಗೆ ಮಾತ್ರ ಹೀಗೆ ತೋರುವದೋ? ಎಲ್ಲರಿಗೂ ಇದೇರೀತಿಯಾಗಿ ತೋರುವದೋ? ಎಂದು ನುಡಿಯಲು, ಜಿಯ್ಯಾ! ಸೂರ್ಯಬಿಂಬವು ಒಬ್ಬರಿಗೆ ಒಂದೊಂದು ವಿಧವಾಗಿ ತೋರುವದುಂಟೆ? ಎಂದು ಮಂತ್ರಿ ಹೇಳಲು, ಮಂತ್ರಿಸತ್ತಮನೆ! ಈ ಮಾತಿನಿಂದ ಮನಸ್ಸು ವ್ಯಾಕುಲವಾಗಿ ಇರುವದು, ನನಗೆ ಸಕಲ ಭೋಗಂಗಳು ಇಹಲೋಕದಲ್ಲಿ ಅನುಭೂತವಾಗಿ ಇರುವವು, ಕುಮಾರನಾದ ಸುಗಂಧರಾಯನು ಜಗದ್ವಿಖ್ಯಾತನಾಗಿ ಶ್ರೇಯೋವಂತನಾಗಿ ಇರುವದನ್ನು ನೋಡಿದ ಬಳಿಕ ಇದಕ್ಕಿಂತಲೂ ಇನ್ನು ಮನೋರಥವೆಂಬುವದು ಬ್ಯಾರೆ ಉಂಟೆ? ಇನ್ನು ನಾವು ಬಹು ದಿವಸ ಲೋಕವ್ಯವಹಾರದಲ್ಲಿ ಇರುವದಂ ಬಿಟ್ಟು ಜಾಗ್ರತೆಯಾಗಿ ಸದ್ಗತಿಯನ್ನಾರ್ಜಿಸುವದಕ್ಕೋಸ್ಕರ ವಾನಪ್ರಸ್ಥನಾಗಿ ಪರಮಪಾವನಂಗಳಾದ ಮಹಾಮುನಿಗಳ ಆಶ್ರಮವಂ ಹೊಂದುವದು ಯುಕ್ತವಾಗಿ ತೋರುತಲಿದೆ, ಎಂದು ಸುಚರಿತ್ರರಾಯನು ಹೇಳುತ್ತಿರಲು, ರಾಜಾಧಿರಾಜನೆ! ಸಾಂಗವಾಗಿ ಮಾಡಿದ ಪ್ರಜಾಪಾಲನ ವ್ರತಕಿಂತಲೂ ಆಶ್ರಮವಾಸವೆಂಬುದು ಅಧಿಕಪುಣ್ಯ ಫಲಪ್ರದವೆಂದು ತಮ್ಮ ಚಿತ್ತಕ್ಕೆ ತೋರಿದಬಳಿಕ ನಮ್ಮಂಥಾ

ನೀನು ವಿಜ್ಞಾಪಿಸುವುದು ಏನುಯಿರುವುದು, ಎಂದು ವಿಜ್ಞಾಪಿಸಲು, ಐಯ್ಯಾ ಮಂತ್ರಿಯೇ! ನಮ್ಮ ವಂಶದವರು ಬಹುಜನ ಗರ್ಭೇಶ್ವರರಾಗಿ ನ್ಯಾಯಸ್ಥಿತಿಯಿಂದ ರಾಜ್ಯವಂ ಪರಿಪಾಲಿಸುತ್ತ ಬಹು ಸುಕೃತಕ್ಕೆ ಪಾತ್ರರಾದರು, ರಾಜ್ಯಭಾರಾನಂತರದಲ್ಲಿ ವಾನಪ್ರಸ್ಥರಾದೆಂಬುವುದು ಪರಂಪರಾ ಪ್ರಾಪ್ತವು ಎಂದು ರಾಯನು ಹೇಳುತ್ತಿರಲು, ಜೀಯಾ! ಯುಕ್ತವೆ ಸರಿ, ಈಗಲೇ ಅದು ಪರ್ಯಂತವೂ ಆಲೋಚಿಸುವದಕ್ಕೆ ನಿಮಿತ್ತ ತೋರುವುದಿಲ್ಲ, ಕುಮಾರಕನಾದ ಸುಗಂಧರಾಯನು ಇನ್ನೂ ಬಹುಕಾಲ ತಮ್ಮ ಚರಣ ಸೇವೆಯಂ ಮಾಡುತ್ತ ಕೃತಾರ್ಥನಾಗಬೇಕೆಂದು ಎಣಿಸಿರುವಲ್ಲಿ ಈ ವರ್ತಮಾನವಂ ಕೇಳಿದರೆ ವ್ಯಾಕುಲವಂತನಾಗುವನು, ಮಾನವಕಾರ್ಯವನ್ನಾದರೂ ವಿಮರ್ಶೆಯಿಂದ ಪರಿಷ್ಕೃತಿ ಯುಕ್ತವಿದ್ದಂತೆ ಮಾಡಬೇಕು ಎನಲು, ಐಯ್ಯಾ ಮಂತ್ರಿಯೆ! ಬಹುಕಾಲಾದಷ್ಟು ನಾವೀರ್ವರು ನಿಶ್ಚೈಸಿದ ಕಾರ್ಯಗಳಲ್ಲಿ ಪ್ರಮಾದವುಂಟಾದದಲ್ಲವೆ? ಈಗಲ ಆಲೋಚನೆಯಲ್ಲಿ ಪರೀಕ್ಷಿಸಬೇಕೆಂದು ಅರ್ಥವುಂ ಎಂದರಾಯನು ನುಡಿಯುತ್ತಿರಲು, ಜೀಯಾ! ಈಗಿನವರಿವಿಗೆ ನಮ್ಮೀರ್ವರ ಆಲೋಚನೆಯಲ್ಲಿ ಪ್ರಮಾದವಿಲ್ಲದಿದ್ದರೂ ಕುಮಾರಕನ ವಿಚಾರವಾಗಿ ಆಲೋಚಿಸಿದ ಅರ್ಥವು ದೇವತಾಪ್ರಸಾದದಿಂ ಯುಕ್ತವಾದುದರಿಂದಾ ಪರೀಕ್ಷಿಸಿ ನಿಶ್ಚೈಸಬೇಕಲ್ಲದೆ ಒಮ್ಮಿಂದ ಒಮ್ಮೆ ಮರಾಲೋಚನೆಯಂ ಮಾಡಕೂಡದು ಎಂದು ಸುಬುದ್ಧಿಯು ವಿಜ್ಞಾಪಿಸುತ್ತಿರಲು, ಐಯ್ಯಾ ಮಂತ್ರಿಯೇ! ಹಾಗೆ ಇದ್ದ ಬಳಿಕ ನಾಳೆ ಕುಮಾರಕನಂ ಏಕಾಂತದಲ್ಲಿ ಕರೆಕಳುಹಿಸುವೆನು, ನೀನು ಸಿದ್ಧನಾಗಿರುವೆಂದು ಹೇಳಿ ಮಂತ್ರಿಯಂ ಆತನ ಗೃಹಕ್ಕೆ ಕಳುಹಿಸಿ ತಾನು ಅಂತಃಪುರವನ್ನು ಪ್ರವೇಶಿಸಿ ಮಾರನೆ ದಿವಸ ಸುಚರಿತ್ರರಾಯನು ಸ್ನಾನಜಪಗಳಂ ನೆರವೇರಿಸಿ ಸಮೀಪಗತನಾದ ಅವಸರದವನ ಮುಖವಂ ನೋಡಿ ಚಿರಂಜೀವಿಯಂ ಕರೆತರುವುದೆಂದು ಆಜ್ಞಾಪಿಸಲು, ಆತನು ಮಹಾಪ್ರಸಾದವೆಂದು ಕೈಮುಗಿದು ಪೋಗಿ ಸುಗಂಧರಾಜನಂ ಕಂಡು ಪ್ರಣಾಮವಂಗೈದು, ವೃದ್ಧರಾಯರು ಹೇಳಿದ ವಾಕ್ಯವಂ ಬಿನ್ನೈಸಲು, ಆಗ ನೋಡುತ್ತಿದ್ದ ಕಾರ್ಯವಂ ಬಿಟ್ಟು ಸುಗಂಧರಾಯನು ಶುಚಿರ್ಭೂತನಾಗಿ ಸುಮಂತ್ರಿಯೊಡಗೂಡಿ ಬರುತ್ತಿರಲು, ಅಷ್ಟರಲ್ಲಿಯೆ ಮಂತ್ರಿಯಾದ ಸುಬುದ್ಧಿಯು ಸುಚರಿತ್ರರಾಯಂಗೆ ಅಭಿನಂದಿಸಿಕೊಳ್ಳುತಿರಲು, ಆ ಸುಗಂಧರಾಯನು ತಂದೆಯ ಅಡಿ

ಗಳಿಗೆ ದಂಡವತ್ಪ್ರಣಾಮಂಗೈದು ಆಶೀರ್ವಾದಪೂರ್ವಕವಾಗಿ ಅವರ ಪೀಠದೆಡೆಗೆ ಕುಳ್ಳಿರಲು, ಸುಮತಿಯು ದೂರದಿಂದಲೆ ಪ್ರಣಾಮಂಗೈದು ತನ್ನರಾಯನ ಸಮೀಪದಲ್ಲಿ ಕೈಗಳಂ ಜೋಡಿಸಿ ನಿಂತುಯಿರಲು, ಸುಚರಿತ್ರರಾಯನು ಕುಮಾರಕನಶಿರವಂ ತನ್ನ ಹಸ್ತದಿಂ ಸ್ಪರ್ಶಿಸುತ ಸುಮತಿಯಂ ನೋಡಿ ಕುಳ್ಳಿರೆಂದು ತನ್ನಮಂತ್ರಿಯಾದ ಸುಬುದ್ಧಿಯ ಮುಖವಂ ನೋಡಲು, ಆತನು ತನ್ನ ಪುತ್ರನಾದ ಸುಮತಿಯಮುಖವಂ ನೋಡಿ ಎಲೈ ಬಾಲಕನೆ ! ನೀನು ಮಹಾರಾಜಕುಮಾರರಾದ ಸುಗಂಧರಾಜಕಿಶೋರರ್ಗಳ ಸಮೀಪದಲ್ಲಿ ಇಷ್ಟು ದಿವಸವರಿಗೂಯಡೆಬಿಡದೆ ಭೃತ್ಯಭಾವದಲ್ಲಿ ಇರುವೆಯಷ್ಟೆ? ನಿಮ್ಮರಾಯರು ಮಾಡಿದದಿಗ್ವಿಜಯವರ್ತಮಾನವಂ ಇನ್ನೊಮ್ಮೆ ಕೇಳುವ ಕುತೂಹಲದಿಂದ ರಾಯರು ನಿನ್ನಂ ಕರೆಯುಕಳುಹಿದರು, ನಮ್ಮೆಲ್ಲರಿಗೂ ಶ್ರೋತ್ರಾನಂದ ಉಂಟಾಗುವದಕ್ಕೆ ಲೇಶವು ಉಳಿಯದಂತೆ ವಿಜ್ಞಾಪಿಸುವನಾಗೆನಲು, ಮಹಾಪ್ರಸಾದವೆಂದು ಸುಮತಿಯು ಕೈಗಳಂ ಜೋಡಿಸಿಕೊಂಡು ತನ್ನರಾಯನು ರತ್ನಪುರವಂ ಬಿಟ್ಟು ಹೊರಟದ್ದು ಮೊದಲುಗೊಂಡು ಪುನಃ ಬಂದು ಪುರವಂ ತಲುಪಿದವರಿಗ್ಯೂ ನಡದಯುದ್ಧ ಸಾಹಸಕಾರ್ಯಂಗಳೆಲ್ಲವಂ ವಿಜ್ಞಾಪಿಸಲು, ಅದೆಲ್ಲವಂ ಕೇಳಿದ ಸುಚರಿತ್ರರಾಯ ಸುಬುದ್ಧಿಗಳಿಬ್ಬರಿಗೂ ಆತನ ವಾಕ್ಯದಲ್ಲಿ ಮೋಹತೋರದೆ ಅಮಾನುಷಕಾರ್ಯಕ್ಕೆ ಆಶ್ಚರ್ಯಪಡುತ ಸುಚರಿತ್ರರಾಯನು ಸುಗಂಧರಾಜನಂ ಕುರಿತು ಎಲೈ ಕುಮಾರಕನೆ! ದೇವತಾಪ್ರಸಾದದಿಂದಲು ಪೌರುಷಬಲದಿಂದಲು ಶತ್ರುಗಳಂ ಜೈಸಿ ಲೋಕಕ್ಕೆ ಕ್ಷೇಮವಂ ಉಂಟುಮಾಡಿದುದರಿಂದಾ ಕೀನಿನ್ನ ಯಶಸ್ಸು ಆಚಂದ್ರತಾರಕವಾಗಿ ಇರುವದಾಯಿತು, ನಮ್ಮ ಪೂರ್ವಾರ್ಜಿತ ತಪಃಫಲದಿಂದ ಈ ನಮ್ಮ ಕುಲದಲ್ಲಿ ನೀನು ಜನಿಸಿದವನಾದೆ, ನಿನ್ನ ಪುತ್ರರು ಸಹಸ್ರಬುದ್ಧರಾಗಿ ಬರುವದಂ ನೋಡಿದ ಬಳಿಕ ನನಗೆ ಇನ್ನಾವ ಮನೋರಥ ಯಿರುವದು, ಅದಂತಿರಲಿ, ನನ್ನಿಂದ ನಿನಗುಪದಿಷ್ಟವಾದ ಮಂತ್ರರಹಸ್ಯಂಗಳಂ ತಿಳಿದುಯಿರುವೆಯಷ್ಟೆ? ನಿತ್ಯದಲ್ಲಿಯು ಜಪಿಸುತಲಿರುವೆಯೊ? ಅಸ್ತ್ರಮಂತ್ರಗಳು ಮತ್ತೆ ಕೆಲವು ರಹಸ್ಯಂಗಳು ಅನುಷ್ಠಿತವಾಗಿ ಇರುವವೊ? ಲೌಕಿಕವ್ಯವಹಾರ ನಿಮಿತ್ತದಿಂ ವಿಸ್ಮೃತವಾಗಿರುವವೊ? ಎಂತಿರುವವೊ? ಹೇಳುವನಾಗೆನಲು, ಹೀಗೆ ಕುಮಾರನಿಗೆ ಹೇಳುತ್ತಿರುವ ಸುಚರಿ

ತ್ರರಾಯನ ವಾಕ್ಯಮಂ ಕೇಳಿ ಮಂತ್ರಿಯು ರಹಸ್ಯಾಲೋಚನಸಮಯಮಂ ಕಂಡು ಸುಬುದ್ಧಿಯು ತನ್ನ ಪುತ್ರಸಮೇತನಾಗಿ ದೂರವಾಗಿ ಹೋಗಿ ಮರೆಯಲ್ಲಿ ನಿಂತಿರಲು, ಆಗ ಸುಗಂಧರಾಯನು ತಂದೆ ಕೇಳುವ ಮಾತಿಗೆ ಮಂತ್ರಸಂಪ್ರದಾಯವಂ ಹೇಳುವದಕ್ಕೆ ತೋರದೆ ಯೋಚಿಸುತ ಸುಮ್ಮನೆ ಇರುವದಂ ನೋಡಿ ಸುಚರಿತ್ರರಾಯನು ಸುಗಂಧರಾಯನಂ ಕುರಿತು ಎಲೈ ಕುಮಾರನೆ! ಬಹುಯಶಸ್ಕರವಾದ ಮಂತ್ರರಹಸ್ಯವಂ ಹೇಳುವದಕ್ಕೆ ತೋರದೆ ಇರುವನಾಗಿ ಅಭಿಚಾರಪ್ರಯೋಗದಿಂ ಸಭೆಯಲ್ಲಿ ಸ್ತಬ್ಧನಾಗಿ ಪ್ರಶ್ನೆವಾದಿಗೆ ಉತ್ತರವಂ ಹೇಳದಿರುವ ವಿದ್ವಾಂಸನಂತೆ ಮೂಕೀಭಾವದಿಂದ ಇರುವೆಯಾಕೆ? ಮಂತ್ರವಿಸ್ಮೃತಿಯು ಯಾರಿಗೆ ಉಂಟಾಗುವದೆಂದರೆ--ಪರಸ್ತ್ರೀಯರಲ್ಲಿ ಅನುರಕ್ತರಾದವರ್ಗೆ, ಬ್ರಾಹ್ಮಣಸ್ತ್ರೀಯರನ್ನು ಅನುರಾಗದಿಂದ ನೋಡಿದವರ್ಗೆ, ಬ್ರಹ್ಮಸ್ವವನ್ನು ಅಪಹರಿಸಿದವರಿಗೆ, ಕೃತಘ್ನರಿಗೆ, ಅನಾಚಾರದಿಂ ನಡೆಯುವರಿಗೆ, ಸ್ವಧರ್ಮವಂ ಬಿಟ್ಟವರ್ಗೆ, ಅನೃತವನ್ನಾಡುವರ್ಗೆ, ನಿರಪರಾಧಿಗಳಂ ದಂಡಿಸಿದವರ್ಗೆ, ಅನ್ಯಾಯದಲ್ಲಿ ಪಕ್ಷಪಾತವುಳ್ಳವರಿಗೆ, ವಿಚಿತ್ರದಿಂ ಬದುಕುವರಂ ಕಂಡು ಮತ್ಸರಪಡುರಿಗೆ, ದೇವತಾನಿಂದಕರಿಗೆ, ವೇದದೂಷಕರಿಗೆ. ಮಹಾತ್ಮರಂ ಧಿಕ್ಕರಿಸಿದವರಿಗೆ, ಅಪೂಜ್ಯರಂ ಪೂಜಿಸಿದವರಿಗೆ, ಹೀಗೆ ಮಹಾಮಂತ್ರವಿಸ್ಮೃತಿಯುಂಟಾಗಬೇಕಲ್ಲದೆ ನಿನ್ನಂಥಾ ಪ್ರಾಜ್ಞರಿಗೆ ಉಂಟಾಗುವುದಕ್ಕೆ ನಿಮಿತ್ತವೇನು ಎಂದೆನಲು, ಆ ಮಾತಿಗೆ ಖಿನ್ನನಾದ ಸುಗಂಧರಾಯನು ಯಾವ ಪಾತಕದಿಂದಲೋ ಮಹಾಮಂತ್ರವು ವಿಸ್ಮೃತವಾದದೆಂದು ಮನದೊಳು ವ್ಯಸನಪಡುತ ಪುನಃ ತಂದೆಯ ಅಡಿಗಳಿಗೆ ನಮಸ್ಕರಿಸಿ ನಿಂತು ಸ್ವಾಮಿ ಅಪ್ಪಾಜಿಗಳಿರಾ! ಹೀಗೆ ತಾವು ಹೇಳಿದ ದೋಷಂಗಳು ತ್ರಿಕರಣದಿಂದಲಾದರೂ ನನ್ನಲ್ಲಿ ಸಂಭವಿಸುವದಕ್ಕೆ ನಿಮಿತ್ತವಿಲ್ಲ. ನಾನು ಲೋಕವಿರುದ್ಧವಾಗಿ ನಡಕೊಂಡವನಲ್ಲ, ತಮ್ಮ ಆಜ್ಞಾನುಸಾರವಾಗಿ ಪ್ರಯಾಣವಂ ಮಾಡಿ ಲೋಕಕಂಟಕರಾದ ದುಷ್ಟರಂ ನಿಗ್ರಹಿಸಿ ತಮ್ಮ ಪಾದಂಗಳಿಗೆ ಯಶಸ್ಸೆಂಬ ಪುಷ್ಪಸಮರ್ಪಣೆಯಂ ಗೈದು ಇರುವೆನು, ನನಗೆ ತಿಳಿಯದೆ ಉಂಟಾಗಿಯಿರುವ ಅಪರಾಧವೇನುಯಿದ್ದರೂ ಕ್ಷಮಿಸಬೇಕು ಎಂದು ಪುನಃ ನಮಸ್ಕರಿಸುತಲಿರುವ ಕುಮಾರನಂ ನೋಡಿ ಎಲೈ ಆಯುಷ್ಮಂತನೆ! ಮಂತ್ರಂಗಳು ವಿಸ್ಮೃತವಾದವೆಂದು ಚಿಂ

ಸಂಧ್ಯೋಪಾಸನೆಯಂ ಮಾಡಿ ಮುಹೂರ್ತಾನಂತರದೊಳ್ ಹೊರಟು ರತ್ನಪುರವಂ ಕುರಿತು ಬರುತ್ತಿರಲು, ಆತನ ದೇಹದ ಪ್ರಭೆಯು ರಾತ್ರಿವೇಳೆ ಕಾಣಿಸುವ ಕಾಡುಗಿಚ್ಚಿನಂತೆ ಮಾರ್ಗದ ವನವಂ ಬೆಳಗುತ ಪ್ರಾಸಾದ ಉಪ್ಪರಿಗೆಯಲ್ಲಿ ನಿಂತು ನೋಡುವ ಜನಗಳಿಗೆ ಇದೇನು ಉತ್ತರದಿಕ್ಕಿನಲ್ಲಿ ಚಂದ್ರನು ಉದಯಿಸುವದು ಉಂಟೆ ಎಂದು ಅತ್ಯಾಶ್ಚರ್ಯಕರವಾಗಿ ತೋರುತ್ತಿರಲು, ಅದಂ ನೋಡಿದ ಕಂಚುಕಿಯು ಪೋಗಿ ಸುಚರಿತ್ರರಾಯಂಗೆ ಕೈಮುಗಿದು ಜೀಯ! ಇದೇನು ಕಾರಣವೋ? ಉತ್ತರದಿಕ್ಕಿನಲ್ಲಿ ಚಂದ್ರನು ಉದಯಿಸುವಂತೆ ತೋರುತಲಿದೆ, ದವಾಗ್ನಿ ಎಂದು ಹೇಳುವ ಬಗ್ಗೆ ಧೂಮಲೇಶವೂ ಇಲ್ಲಾ ಪ್ರಭಾಮಂಡಲವೆ ತೋರುತಲಿದೆ, ಬಿಂಬವೆಂಬದು ಕಾಣಿಸುವದಿಲ್ಲಾ ಎಂದು ವಿಜ್ಞಾಪಿಶಿದ ವಾಕ್ಯವಂ ಕೇಳಿ ಆಲೋಚಿಸುತಲಿರುವ ರಾಯನು ಯಳಿಗಂದಿಯು ಕರುವಂ ಸ್ಮರಿಶಿ ಬರುವಂತೆ ಕರುಣಾನಿಧಿಗಳಾದ ವಾಸುದೇವಋಷಿಗಳು ದಯಮಾಡುವಂತೆ ತೋರುತ್ತೆ ಎಂದು ನಿಶ್ಚೈಶಿ, ಸಮೀಪಗತನಾಗಿ ಇರುವ ಸುಬುದ್ಧಿಯ ಮುಖವಂ ನೋಡಿ ಎಲೈ ಮಂತ್ರಿಯೆ! ನಾನು ಹೇಳಿದಂತೆ ಮಹರ್ಷಿಗಳು ಬರುವರಾಗಿ ಇದ್ಧಾರೆ, ಎದುರುಗೊಂಡು ಕರತರುವದಕ್ಕೆ ಸಕಲವೈಭವದಿಂದ ಆಯುಷ್ಮಂತನಾದ ಸುಗಂಧರಾಜನು ಪುರೋಹಿತ ಸಮೇತನಾಗಿ ಮುಂದೆ ನಡೆಯಲಿ, ಪೂಜಾಸಾಹಿತ್ಯಂಗಳು ಸಿದ್ಧವಾಗಲಿ, ನಾವು ರಾಜದ್ವಾರದ ಬಳಿಯಲ್ಲಿ ಕಾದಿರುವೆವು ಎಂದು ಹೇಳಲು, ಆತನು ರಾಯನು ಆಜ್ಞಾಪಿಶಿದ್ದನ್ನು ಸುಗಂಧಮಹಾರಾಜಂಗೆ ತಿಳುಹಿಸಲು, ಸಕಲಪರಿವಾರಸಮೇತನಾಗಿ ಮಹಾವೈಭವದಿಂದ ಸುಗಂಧರಾಜೇಂದ್ರನು ಸಕಲದೇವತಾ ಸಂಘವೊಡಗೂಡಿ ಕಶ್ಯಪಮಹಾಮುನೀಂದ್ರನಂ ಯದುರುಗೊಂಡು ಕರತರುವದೇವೇಂದ್ರನಂತೆ ತೆರಳುತಿರಲು, ಆಗ ದೂರದಲ್ಲಿಯೇ ಕಾಣಿಸುತ್ತಿರುವ ಪ್ರಭಾವಿಶೇಷವಂ ನೋಡಿ ಸುಗಂಧಮಹಾರಾಜೇಂದ್ರನು ಮಂತ್ರಿಯಾದ ಸುಮತಿಯಂ ಕುರಿತು ನೋಡಿದ್ಯೆ ಮಂತ್ರಿಯೆ ! ಸೂರ್ಯುಉದಯಿಸುವದಕ್ಕೆ ಮುಂಚಿತವಾಗಿಯೆ ಪ್ರಭಾನಿಕರವು ಲೋಕದ ಅಂಧಕಾರವಂ ಪರಿಹರಿಸುವಂತೆ ಮಹರ್ಷಿಗಳ ತೇಜೋವಿಶೇಷವು ನಮ್ಮ ಮನೋನೇತ್ರಾಂಧಕಾರಂಗಳಂ ಪರಿಹರಿಸುತಲಿಧೆ, ಮತ್ತು ಕಾಂಡವವನವಂ ಬಯಶಿ ಬ್ರಾಹ್ಮಣರೂಪವಂ ಧರಿಶಿ ಪಾರ್ಥನಂ ಕುರಿತು ಬರುವ ಪಾವಕನೋ

ಯೆಂಬಂತೆ ಆಹವನೀಯದಕ್ಷಿಣಾಗ್ನಿಗಳಂ ಕೂಡಿಗ್ರಹಪತಿಗೆಪ್ರಸನ್ನನಾಗು ವಗಾರ್ಹಪತ್ಯಾಗ್ನಿಯೋಯೆಂಬಂತೆಋಕ್ಸಾಮಗಳಂಕೂಡಿ ಸೂರ್ಯಮಂಡಲದಿಂದುದ್ಭವಿಸಿದ ಯಜುರ್ವೇದಪುರುಷನೊ ಎಂಬಂತೆ ಮಿಂಚುಗಳಂ ರಚಿಸಿಯಿರುವ ಅವಘನದಿಂ ಕೂಡಿಯಿರುವಂತೆ ಶಿಷ್ಯಯುಗ್ಮಸಮೇತರಾಗಿ ಸಕಲತೀರ್ಥಾಭಿಷೇಕದಿಂ ಅತಿಪವಿತ್ರನಾಗಿ ಚಂದ್ರಮಂಡಲದಿಂದುದ್ಭವಿಸಿದ ಕಿರಣಸಮೂಹದಂತೆ ಬ್ರಹ್ಮವರ್ಚಸ್ಸೆಂಬ ಶಿರಸ್ಸಿನಿಂ ಹೊರಹೊಮ್ಮಿ ಇರುವವೊ? ಎಂಬಂತೆ ಬಿಳಲುಗಳಂಕೂಡಿಯಿರುವ ಕಲ್ಪವೃಕ್ಷದಂತೆ, ಜಟಾಭಾರದಿಂ ಶೋಭಿಸುತ ಪಾವನತ್ವವೆ ಮೂರ್ತಿರೂಪಿನಿಂಬರುವಂತೆ, ಸೌಜನ್ಯವೆಋಷಿರೂಪವಂ ಧರಿಸಿಯಿರುವಂತೆ, ವಾಮದೇವ ಮಹಾಮುನಿಗಳು ಬರುವರುಯೆಂದು ಹೇಳುತ್ತಿರಲು, ಆಮಾತಿಗೆ ಸುಮತಿಯು ಐಯ್ಯಾ ರಾಜಶಿರೋಮಣಿಯೆ! ಬಹುಪುಣ್ಯವಶದಿಂದಲ್ಲದೆ ಈಮಹಾಮುನಿಗಳ ದರ್ಶನ ಲಭಿಸಲಾರದು ಇವರತಪಃಪ್ರಭಾವದಿಂದಲೆ ಈಜಗವು ಸ್ಥಿರವಾಗಿಯಿರುವದು, ಈಭೂಮಿಯುಚಲಿಸದೆ ಇರುವದು, ಸೂರ್ಯಕಿರಣವು ಇವರಭೀತಿಯಿಂದ ಪ್ರಾಣಿಗಳಿಗೆ ಹೆಚ್ಚುಉಷ್ಣವಂಮಾಡದೆ ಅನುಕೂಲವಾಗಿ ಇರುವದು, ವಾಯುಗಳು ಸಹಿಸುವಂತೆ ಬೀಸುವದು,ಸಮುದ್ರವು ಮ್ಯಾರೆತಪ್ಪದೆಯಿರುವದು,ಕಲಿಕಲ್ಮಷವು ಕರಗಿಪ್ರೋಗುವದು, ಈಮಹಾತ್ಮರು ಕರುಣಾರಸದ ಸಮುದ್ರರೂ, ಆಶಾಲತಾಗಹನಕ್ಕೆ ಪರಶುಗಳು, ಲೋಭಾರ್ಣವಕ್ಕೆ ಬಡಬಾನಲರು,ರಾಗಪಲ್ಲವಗಳಿಗೆ ದವಾಗ್ನಿಗಳು,ಕ್ರೋಧವೆಂಬ ಸರ್ಪಂಗಳಿಗೆ ಮಹಾಮಂತ್ರಗಳು, ಮೋಹಾಂಧಕಾರಂಗಳಿಗೆ ದಿನಮಣಿಗಳು, ನರಕದ್ವಾರಕ್ಕೆ ಪರಿಘಂಗಳು ಸದಾಚಾರಕ್ಕೆ ಮಹಾನಿಧಿಗಳು,ತಪೋರತ್ನಂಗಳಿಗೆ ಕೋಶಗೃಹಂಗಳು ಈಮಹಾತ್ಮರು ಸಕಲಜಗಜ್ಜಾಲವಂ ಕರತಳಾಮಲಕದಂತೆ ದಿವ್ಯದೃಷ್ಟಿಯಿಂ ನೋಡುತ್ತ ಚರಾಚರಗಳ ಸೃಷ್ಟಿಸ್ಥಿತಿಲಯಂಗಳಂ ಪ್ರತ್ಯಕ್ಷವಾಗಿ ಕಾಣುತ ಕಳೆದುಹೋದ ಕಾಲವಂ ತಿಳಿಯುತ ಈಗ ಆಗುವ ಪ್ರಾಣಿಗಳಪರೋಕ್ಷವ್ಯಾಪಾರವಂ ಪ್ರತ್ಯಕ್ಷವಾಗಿ ನೋಡುತ ಮುಂದೆ ಆಗುವಲೋಕವಂ ಹಾನಿವೃದ್ಧಿಗಳಂ ಈಗಲೇ ನೋಡಿ ತಿಳಿಯುವರಾದುದರಿಂದ ಇವರಿಗಿಂತಲೂಈಶ್ವರರೆಂಬವರು ಬ್ಯಾರೆಇಲ್ಲಾ ಅದರಿಂದಲೆ ಈವಾಮದೇವರಂ ಮಹಾದೇವನೆಂದು ಭಾವಿಸಬೇಕು, ಮತ್ತು

ಇವರು ಶಂತನುವಿನಂತೆ ದೇವವ್ರತಪ್ರಿಯರಾಗಿ ಶಿಶಿರಸಮುದ್ರನಂತೆ ಉತ್ತರಂಗಯುಕ್ತರಾಗಿ ಬಡಬಾಗ್ನಿಯಂತೆ ಸದಾಪಯಃಪಾನಪರಾಡುತ ಅಂಬಿಕಾ ಕರತಲದಂತೆ ರುದ್ರಾಕ್ಷಗ್ರಹಣ ನಿಪುಣರಾಗಿ ಪಾಂಥಶಾಲೆಯಂತೆ ದೀನಾನಾಥ ವಿಪನ್ನಶರಣರಾಗಿ ದ್ರೋಣಾಚಾರ್ಯರಂತೆ ಕೃಪಾಸಮೇತರಾಗಿ, ಜಲಧರಸಮುದಾಯದಂತೆ ರಜಸ್ಸ್ತೋಮವಂ ಪ್ರಶಮನಗೈಯುತ್ತ, ಮುಕುಂದನಂತೆ ನರಕಭಯವಂ ಪರಿಹರಿಸುತ್ತ, ಸಾಮಪ್ರಯೋಗನಿಪುಣರಾದರೂ ಸದಾದಂಡವಂ ಧರಿಸಿ, ಹರಿಶ್ಚಂದ್ರನಂತೆ ಕೌಪೀನವಲ್ಕಲದಿಂದಾವೃತರಾಗಿ, ಬಿಸಸೂತ್ರದಂತೆ ಶುಭ್ರನಾಗಿ ಇರುವ ಯಜ್ಞೋಪವೀತವಂ ನಿತ್ಯತಪೋನಿಯಮಗಳಂ ತ್ರಿವರ್ಗಜನ್ಮತ್ರಿಪುಂಡ್ರದಿಂ ತಪಃ ಸಾಮ್ರಾಜ್ಯಲಕ್ಷ್ಮಿಯ ಮಂಗಳಸೂತ್ರದಂತಿರ್ಪ ಅಕ್ಷಮಾಲೆಯಿಂ ಬ್ರಹ್ಮವರ್ಚಸವನ್ನು ಪ್ರದಿಸಲೋಕಿಸಿ ಪ್ರಾರ್ಥಿಸುತ್ತ, ನಡೆದುಬರುವ ರಾಜಹಂಸೆಯೋ ! ಎಂಬಂತೆ ಸ್ಫಟಿಕ ಕಮಂಡಲುವಿಂ ಯುಕ್ತನಾಗಿ ಶುದ್ಧಸತ್ವಗುಣವೇ ಪ್ರಸನ್ನವಾದಂತೆ ಬರುವರು ಎಂದು ಹೇಳುತ್ತಿರಲು, ಸಕಲಸ್ವೈಭವದಿಂದಯೊಡಗೊಂಡು ಬರುವ ಆರಾಯಸಂತೋಷಿ ವಾಮದೇವ ಮಹಾಮುನಿಯು ಶಿಷ್ಯರಂ ಕುರಿತು ಎಲೈ ಸತ್ಯವಾದಿಯೆ ! ಸಕಲದಾನವಪತ್ನೀಯರುಗಳ ಕುಚಕುಂಭ ಮಕರಪತ್ರಭಂಗವಂ ಮಾಡುವ ಶೌರ್ಯದಿಂದೊಪ್ಪುವ ಭುಜಗಳಿಂ ನೋಡುವರ ನೇತ್ರಗಳಂ ಸಫಲಗೊಳಿಸುತ ಬರುವ ಈರಾಯನ ಕಶ್ಯಪಾಂಶಸಂಭೂತನಾದ ಸುಚರಿತ್ರರಾಯನಿಗೆ ಪುತ್ರನಾದ ಸುಗಂಧರಾಯನು, ಈತನು ಸಾಕ್ಷಾದ್ದೇವೇಂದ್ರನಾದರೂ ನೃಪತಿಸಾಧಾರಣನಾಗಿ ಬೂದಿಮುಚ್ಚಿದ ಕೆಂಡದಂತೆಮುಂಜನಮರೆಯಾದ ಕಿರಣರಾಶಿಯುಳ್ಳ ಸೂರ್ಯನಂತೆ ಶೋಭಿಸುವನು. ಮೃಗರಾಜನು ಎಲ್ಲಿಹೊಕ್ಕರು ಗಜಸಮೂಹವಂ ಸಂಹರಿಸುವಂತೆ ಈಭೂಲೋಕವಂ ಹೊಂದಿದವನಾದರೂ ಧರ್ಮಕಂಟಕರಾದ ರಾಕ್ಷಸರಂಸಂಹರಿಸಿ, ಭೂಮಿಗೆದೇವೇಂದ್ರನೆಂದು ಹೊಗಳಿಸಿಕೊಳ್ಳುವನು, ತ್ರಿಲೋಕಾಧಿಪತಿಯಾದ ಈದೇವೇಂದ್ರನಿಗೆಭೂಲೋಕವಾಸವು ದೇವಕಾರ್ಯಾರ್ಥವಾಗಿಯೆ ದುರ್ವಾಸನ ಕೋಪದಿಂದುಂಟಾಯಿತಲ್ಲದೆ ಅವರಸತ್ಸರಧಿಂದ ಉಂಟಾದುದಲ್ಲ ಎಂದುಹೇಳುತ್ತಿರುವ ಸಮಯದಲ್ಲಿ ಸುಗಂಧರಾಜೇಂದ್ರನು ಬಂದು ಮುನಿಪಾದಕ್ಕೆ ಅಭಿವಂದಿಸಲು, ಐಯ್ಯಾ ಕುಮಾರಕನೆ !

ನೀನು ಶ್ರೀಮಂತನಾಗೆಂದು ಹರಸಿ ಕರಸಂಪುಟವಂ ತಸ್ಮೈ ಶ್ರೀಸುಂದರ ಸ
ಮರುತ ಪ್ರಜಾ ಪರಿವಾರಸಮೇತನಾದ ನಿನಗೆ ಕ್ಷೇಮವೆ ಎನಲ್ಕನುಕಾನು
ಭೂಪತೀ! ಅಂತರ್ಬಹಿಃಶತ್ರುಗಳಂ ಪರಿಹರಿಸುತ್ತ ಇಹಪರದಲ್ಲಿ ದುಷ್ಟಸಂಘ
ಗಳ ದೂರಗೊಳಿಸುವವೇದವಾಕ್ಯಂಗಳಂತೆ ಅಮೋಘವಾದ ತಮ್ಮ ಆಶೀರ್ವಾ
ದದಿಂದಲೆ ನಾವೆಲ್ಲರೂ ಕ್ಷೇಮಿಗಳಾಗಿ ಇರುವೆವು. ಸುರನದೀತರಂಗಸೀಕರದಿಂ
ಶೀತಳವಾದ ಮೂಲಪ್ರದೇಶದಿಂ ಶೋಭಿಸುತ್ತ ಪುಷ್ಪಫಲಂಗಳಂ ಬಗ್ಗಿ
ಭೂಮಿದೇವಿಯಂ ಪೂಜಿಸುವಂತೆ ತಂಗೊಳಿಸುವ ತಮ್ಮ ಆಶ್ರಮವೃಕ್ಷಂ
ಗಳು ಅಭ್ಯಾಗತಾತಿಥಿಸತ್ಕಾರಕ್ಕೆ ಅನುಕೂಲವಾಗಿ ಇರುವು. ಉಪಶಾಂತ
ರಾದ ಶಿಷ್ಯಸನ್ನಿಧಾನ ಮಹಿಮೆಯಿಂ ಜಾತಿ ವೈರವಂ ಬಿಟ್ಟು ಸಿಂಹಶಿಶುಗ
ಳಂ ಕೂಡಗೂಡಿ ಸ್ತನ್ಯಪಾನವಂಗೈಯುವ ಹರಿಣಶಿಶುಗಳು ಕ್ಷೇಮದ
ವಾಗಿ ಮೊಳೆಯುತಲಿರುವ ಕೊಂಬುಗಳಂ ಶೋಭಿಸುತ್ತ ಬರ್ಹಿಸ್ಸಿನದರ್ಭಾ
ಗ್ರವಂ ಭಕ್ಷಿಸುತ್ತ ಸುಖವಾಗಿ ಇರುವವೆ, ಭೂತಪಿತೃ ಮನುಷ್ಯಯಜ್ಞಂಗ
ಳಿಗೆ ಉಪಯೋಗಿಸುತ್ತ ಪಕ್ವಕ್ಕೆ ಬಂದ ನೀವಾರದ ಪೈರುಗಳಂ ಕ್ಷುದ್ರ
ಮೃಗಂಗಳು ಭಕ್ಷಿಸದೆ ನಿತ್ಯದಲ್ಲು ಲಭ್ಯವಾಗುತ್ತಲಿವೆಯೆ, ಮತ್ತು ನಿರಂತರ
ವು ಆಗುತ್ತಲಿರುವ ಕ್ರತುಪುರೋಡಾಶ ಪರಿಮಳವಂ ದೂರದಿಂದಲೆ ಆ
ಘ್ರಾಣಿಸುತ್ತ ಬರುವ ಅತಿಥಿಗಳಿಗೆ ಪ್ರೀತಿಯಲ್ಲಿ ಸ್ವಾಗತವಚನದಿಂ ಶಿಕ್ಷಿತ
ವಾದ ಶುಕಶಾರಿಕೆಗಳು ಉಪಚಾರಂಗಳಂ ಪೇಳುತಲಿರುವವೆ ಯೆಂದು
ರಾಯನು ಕುಶಲವಂಕೇಳುತ್ತಿರಲು, ಐಯ್ಯಾ ರಾಜಶಿರೋಮಣಿಯೆ ! ಸ
ಕಲಮುಷ್ಟವರ್ಗವಂ ಜಯಿಸಿ, ಪ್ರಜಾನಾಥನಾದ ನೀನು ಜಾಗರೂಕನಾಗಿ ಇ
ರುವಲ್ಲಿ ನಮಗೆ ಸರ್ವತ್ರ ಕ್ಷೇಮವೇ ಉಂಟಾಗಿ ಇರುವದು ಎಂದು ಹೇಳುತ್ತಿರ
ಲು, ರಾಯನು ತನ್ನ ಮಂತ್ರಿಯನ್ನು ನೋಡಿ ಎಲೈ ಸುಮಂತ್ರಿಯೆ! ಈ ಮಹಾನುಭಾ
ವರ ಸಾನ್ನಿಧ್ಯ ಮಹಿಮೆಯಿಂದ ದುಷ್ಟಮೃಗಂಗಳು ವೈರವಂ ಬಿಟ್ಟು ಸಾ
ಧಾರಣಮೃಗಂಗಳಂತೆ ಇರುವದರಿಂದ ಮೃಗಬಾಧಾಪರಿಹಾರಕ್ಕೋಸು
ಗ ಅರಸುಗಳಂ ಕಾಣುವದಕ್ಕೆ ಬಂದವರಲ್ಲ, ರಕ್ಷೋಘ್ನಮಂತ್ರ ಕುಶ
ಲರಾದ ಇವರ ಆಶ್ರಮಂಗಳಂ ರಾಕ್ಷಸರು ಕಣ್ಣಿಂದಲಾದರೂ ನೋಡಲಂ
ಜಿ ಪಲಾಯನಂಗೈಯುವದರಿಂದಾ ಯಜ್ಞವಿಘ್ನವೆಂಬುದು ಎಳ್ಳನಿತಿಲ್ಲ
ಸಕಲಭುವನವನ್ನಾದರೂ ಋತ್ವಿಜರಿಗೆ ದಕ್ಷಿಣೆಯಾಗಿ ಕೊಡುವದಕ್ಕೆ ಶಕ್ತ

ರಾದುದರಿಂದ ದ್ರವ್ಯವನ್ನಪೇಕ್ಷಿಸಿ ನಗರಾಭಿಮುಖರಾದರೆಂದು ಹೇಳಕೂಡದು,ಮತ್ತೇನೆಂದರೆ:—ನಮ್ಮ ಪೂರ್ವೀಕರ ತಪಃಫಲವು ಈ ಮಹಾತ್ಮರ ರೂಪದಿಂದ ದರ್ಶನವಂ ಕೊಡುವದಕ್ಕೆ ಬಂದಂತಾಯಿತೆಂದು ಹೇಳಬೇಕು ಎಂದು ರಾಯನು ನುಡಿಯುತ್ತಿರಲು, ಆಮಾತಿಗೆ ವಾಮದೇವಋಷಿಗಳು ಅಯ್ಯಾ ರಾಜಶಿರೋಮಣಿಯೆ! ಲೋಕಕಂಟಕರಾದ ರಾಕ್ಷಸರು ನಿನ್ನಿಂದ ಸಂಹೃತರಾಗಿ ಧರ್ಮವು ಚಲಿಸದೇಇರುವದಂತಿಳದು ದಾನವಾಂತಕನಾದ ಶ್ರೀಮನ್ನಾರಾಯಣನು ಮರ್ಯಾದಾಭಾವವಂ ನಿನ್ನಲ್ಲಿಳುಹಿ ಶೇಷಪರ್ಯಂಕದೊಳ್ ಸುಖನಿದ್ರೆಯಂ ಗೈಯುವನು, ಹಾಗೆ ಧರಣೀಭಾರವಂ ವಹಿಸಿ ಇರುವನಿನ್ನನೋಡಿ ಮಹಾಶೇಷನು ಭೂಧರಣಶ್ರಮವಂ ಬಿಟ್ಟು ರತಿಭರದಿಂ ಕೆವರಿದ ಪ್ರಿಯಳಮುಂಗುರುಳಂ ಸರಸವಮಾಡಿಕೊಳ್ಳುವದಕ್ಕೆ ಅವಸರವಂ ಕೊಡನು,ಐರಾವತಾದಿದಿಗ್ಗಜಗಳೆಲ್ಲವು ಕರಿಣೀಬೃಂದದ ತೆಕ್ಕೆಗೆವಳಗಾಗಿ ಭೂಭಾರಸ್ಮರಣೆಯಂ ಬಿಟ್ಟು ಕಾಡಾನೆಗಳಂತೆ ಸ್ವೇಚ್ಛೆಯಿಂ ವಿಹರಿಸುತಲಿರುವವು, ಅದರಿಂದ ಸಕಲಭೂಭಾರ ಶ್ರಮವು ನಿನಗೆಯೆಂತಿರುವದೋ ಎಂದು ನೋಡುವ ಕುತೂಹಲದಿಂದಬಂದೆವುಎಂದು ವಾಮದೇವರು ಹೇಳುತ್ತಿರಲು, ಮಹಾನುಭಾವರಾದ ವಾಮದೇವಪಾದರುಗಳೆ ತಮ್ಮ ಮುಖಾರವಿಂದದಿಂದುದ್ಭವಿಸಿದ ಇಧ್ಮಾಧಾನ ಸೂಕ್ತಿಯಿಂ ಯಜಮಾನಂಗೆ ಶ್ರೇಯಸ್ಸನ್ನುಂಟುಮಾಡುತ ವೇದಪ್ರತಿಪಾದ್ಯಮಾನರಾದ ನಿಮ್ಮ ಅನುಗ್ರಹಕ್ಕೆ ನಾನುಪಾತ್ರನಾದ ಬಳಿಕ ನನ್ನ ಬಲವೆಲ್ಲವು ಇಂದಿಗೆ ಪಾವನವು, ನಮ್ಮ ಪೂರ್ವೀಕರು ಮಹಾಸುಕೃತಶಾಲಿಗಳೆಂದು ಹೇಳಬೇಕುಎಂದು ಸುಗಂಧಮಹಾರಾಯನು ಹಸ್ತಲಾಘವದಿಂದ ಮುನಿಪತಿಯಂ ಕರತರುತಲಿರಲು, ಮಾರ್ಗದ ಉಭಯಪಾರ್ಶ್ವಗಳಲ್ಲಿ ನಂದನವನದಂತೆ ಶೋಭಿಸುತಿರುವ ಸಾಲುತೋಪುಗಳ ಯಡೆಯಡೆಯಲ್ಲಿ ಮಾಡಿರುವ ಅರವಟ್ಟಗೆಗಳಂ ತೋರಣ ಕುರುಜುಮೇಲುಕಟ್ಟು ಪುಷ್ಪಗಳ ಆಸ್ತರಣಗಳಲ್ಲಿ ಝೋಂರೆಂದು ಧ್ವನಿಗೈವ ಭ್ರಮರನಿಕರ ಝೇಂಕಾರದಿಂ ಕೂಡಿದ ಬ್ರಾಹ್ಮಣ ಸ್ವಸ್ತಿವಾಚನ ಘೋಷವಂ ಕೇಳುತ ಎದುರ್ಗೊಂಡುಬರುವ ಸೋಮಯಾಜಿಗಳ ಸ್ವಾಗತವಚನಕ್ಕೆ ಕುಶಲವಂ ಕೇಳುತ ಅಭಿವಂದಿಸಿದವರಿಗೆ ಆಶೀರ್ವಚನವಂ ಪೇಳುತ ಅಲ್ಲಿಅಲ್ಲಿರಚಿಸಿರುವ ಪುರಶೃಂಗಾರವಂ ನೋಡುತ ರಾಜದ್ವಾರದಬಳಿಗೆ

ಬರುತ್ತಿರಲು, ಸುಚರಿತ್ರರಾಯನು ಮಂತ್ರಿಯೊಡಗೂಡಿ ಬಂದು ವೀನಿಪ
ತ್ರಿಯ ಪಾದಕ್ಕಭಿವಂದಿಸಿ ಹಸ್ತಲಾಗದಿಂದ ಮಣಿಮಂಟಪದ ರತ್ನಪೀಠದಲ್ಲಿ
ಕುಳ್ಳಿರಿಸಿ ತೀರ್ಥೋದಕದಿಂ ಪಾದಂಗಳಂ ತೊಳೆದು ಅರ್ಘ್ಯಪಾದ್ಯಮಧು
ಪರ್ಕಾದಿಗಳಿಂ ಪೂಜಿಸಿಬಬ್ಬರೊಬ್ಬರು ಕುಶಲವಂ ಪೇಳುತ ಎಲ್ಲರೂ ಉಚಿ
ತಪ್ರಕಾರದಿಂ ಕುಳ್ಳಿರಲು, ವಾಸುದೇವರು ಸುಚರಿತ್ರರಾಯನಂ ನೋಡಿ ಐ
ಶ್ವರ್ಯ ಭೂಪತಿಯೆ ! ನಿನ್ನ ಕೀರ್ತಿಕಾಂತೆಯು ತನ್ನ ಎಳನಗೆಯಿಂದ ನಾ
ರಾಯಣನಂ ಕೂಡಾ ಶಂಕರನಂತೆ ಸ್ಫಟಿಕವರ್ಣಮಾಡಲೆಣಿಸಿ ಉಮಾದೇ
ವಿಯಂ ಸರಸ್ವತಿಯಂತೆ ಮಾಡುವೆನೆಂದು ಸಂಕಲ್ಪಿಸಿ, ಅಂಜನಾಚಲವ
ನ್ನು ಮೊದಲು ಕೈಲಾಸದಂತೆ ಮಾಡಿ, ಕಾಳಿಂದಿನದಿಯಂ ಗಂಗಾಪ್ರವಾಹ
ದಂತೆ, ಕಾರ್ಮುಗಿಲು ಪಂಕ್ತಿಗಳಂ ಮಂದಾಕಿನಿ ತರಂಗಮಾಲೆಯಂತೆ, ನ
ನಾವಳಿಯಂ ಹಿಮನೀಕರದಂತೆ, ಮಯೂರಸಿರಕವಂ ರಾಜಹಂಸೆಗಳಂತೆ ಕೃ
ಷ್ಣಪಕ್ಷವಂ ಶುಕ್ಲಪಕ್ಷದಂತೆ, ಭ್ರಮರಸಮೂಹವಂ ಮುಕ್ತಾಫಲದಂತೆ, ಧೂ
ಮಸ್ತೋಮವಂ ಶರನ್ಮೇಘದಂತೆ ಮಾಡುವದರಿಂದಾ ರಾಹುಮಂಡಲವುಸನಾ
ಗಿಇರುವದೊ? ಇದೇರೀತಿಯಲ್ಲಿ ನಿನ್ನ ಕುಮಾರಕನ ಪ್ರತಾಪವೆಂಬ ಸೂ
ರ್ಯಾತಪವು ಶತ್ರುಗಳ ದೇಶಗಳಂ ವ್ಯಾಪಿಸಿ ಬೆಳದಿಂಗಳಂ ಬಾಲಾತಪದಂತೆ
ಮಾಡುತ ರಿಪುಸ್ತ್ರೀಯರುಗಳು ಓಡುವರಭಸದಿಂ ಬಿಚ್ಚಿಹೋಗುವಕಚ
ಭಾರದಲ್ಲಿ ಕೆಂಧೂಳುಮುಸುಕಿದಂತೆ ತೋರುತ ಕುಚ ಕುಟ್ಮಲಗಳಲ್ಲಿ
ಕುಂಕುಮಾಂಗರಾಗದಂತೆ ಎಸೆಯುತ ಶೂನ್ಯಫಾಲದೋಳ್ ಗೋರೋಚ
ನಾತಿಲಕದಂತೆ ಕಾಣಿಸುತಧೂಳೀಧೂಸರಿತಮಾದಸೀಮಂತದೋಳ್ ಸಿಂಧೂ
ರರೇಖೆಯಂತೆ ಒಪ್ಪುತ ಬಾಡುವ ಕಪೋಲದೋಳ್ ಬಿಳಿಆರಿಸಿನದ ಛಂದ
ಮಾಗುತ ಕಂದುತಿರುವ ಪಾದದೋಳ್ ಅಲತಿಗೆಯ ಬಣ್ಣದಂತೆ ತೋರಿ
ಸುತ ಉಟ್ಟಿರುವ ಶುಭ್ರವಸ್ತ್ರಗಳಂ ಕೆಂದರಳಿರಂತೆ ಮಾಡುತಲಿರುವದ
ರಿಂದಾ ನಿಮ್ಮೀರ್ವರ ಯಶಃಪ್ರತಾಪಗಳು ಸಜ್ಜನರಿಗೆ ಆಹ್ಲಾದವಂ ಶತ್ರು
ಗಳಿಗೆ ಮಹಾಭೀತಿಯನ್ನುಂಟುಮಾಡಿ ಧರ್ಮಸ್ಥಾಪನವಂ ಮಾಡಿದುದರಿಂ
ದ ಇವಂತಿಳಿದ ದೇವೇಂದ್ರನು ದೇವಲೋಕಾಧಿಪತ್ಯದಲ್ಲಿ ಉಪೇಕ್ಷಾವಂತ
ನಾಗಿವಜ್ರವಂ ಹಿಡಿಯುವದಂ ಬಿಟ್ಟು ನಿನ್ನ ಕುಮಾರಕನಂ ತನ್ನ ಪ್ರತಿಬಿಂ
ಬವೆಂದು ಭಾವಿಸುತ, ನಿನ್ನನ್ನು ತಂದೆಯೆ ಮನುಷ್ಯನನ್ನಾಗಿ ತಿಳದಿರುವನು

ಎಂದು ಭಾವಗರ್ಭಿತವಾಗಿ ರಾಯನಂ ಸ್ತುತಿಸುತ್ತಿರಲು, ಆವೇಳೆಗೆ ಸುಚರಿತ್ರರಾಯನು ಮಂದಸ್ಮಿತನಾಗಿ ಮಹಾಋಷಿಯು ವಾಕ್ಯಪ್ರತಿಪಾದಿತಸತ್ಪ್ರಶಂಸೆ ಯ ಹೇಳುತ್ತಿರಲು, ಅದಂ ಕೇಳಿದ ಸುಗಂಧರಾಜೇಂದ್ರನು ತನ್ನ ಮನಸ್ಸಿನೊಳು ಈ ಮಹಾಋಷಿಗಳು ನಮ್ಮಲ್ಲಿ ಪ್ರೇಮವಿಟ್ಟು ಸಮಯೋಚಿತವಾಗಿ ಸ್ತುತಿಸುವ ವಾಕ್ಯವಂ ಕೇಳೆ ಅವಂ ಸತ್ಯವೆಂದು ನಮ್ಮತಂದೆಗಳು ತಿಳಿವ, ಇರುವವಕ್ಕೆಷ್ಟೆಂದು ಆಶ್ಚರ್ಯಪಡಬೇಕು ಎಂದು ಆಲೋಚಿಸುತ ಮುನಿಪತಿಯಂ ಕುರಿತು ಮಹಾನುಭಾವನೆ! ಸಕಲವೇದಗಳಿಂ ಪ್ರತಿಪಾದ್ಯಮಾನನಾಗಿ ಶಿಷ್ಟರುಮಾಡುವ ಕ್ರತುಮಂ ಭುಂಜಿಸುತ ಕರ್ಮಫಲದಾಯಕನಾಗಿ ಧರ್ಮಕಂಟಕರಾದ ವೃತ್ರನಮುಚಿ ವಿರೋಚನ ಬಲ ಶಂಬರ ಜಂಭಾರಿಗಳ ಗರ್ವಮಂ ದಂಭೋಳಿಯು ಪ್ರಹರದಿಂ ಸ್ತಂಭನಗೈಯುತ ಉಚ್ಚೈಃಶ್ರವಾರೋಹಣದಿ ರಕ್ತಬುದ್ಬುದಗಳಂತೆ ತೋರುವ ನೇತ್ರಸಹಸ್ರಗಳಿಂ ಆಗ್ನೇಯಾಸ್ತ್ರಗಳಂ ಪ್ರಯೋಗಿಸುವನಯಂಬಂತೆ ಭ್ರುಕುಟೀ ಭೀಷಣನಾಗಿ ರಕ್ಕಸರ ವರ್ಗವಂ ನಿಕ್ಕಲಿಕ್ಕಿದ ವೃತ್ರಾಂತಕನಾದ ದೇವೇಂದ್ರನಿಗೆ ಸಮಸ್ಯಾನಪಾತ್ರದವರು ಎಂತುಸರಿಬಹರು ಯೆಂದು ಸುಗಂಧರಾಜೇಂದ್ರನು ನುಡಿಯುತ್ತಿರಲು. ಆವೇಳೆಗೆ ವಾಮದೇವ ಶಿಷ್ಯನಾದ ಸತ್ಯನಿಧಿಯು ವಿಯವಾಗ್ಯ ರಾಜಶಿರೋಮಣಿಯೆ! ದೇವೇಂದ್ರನು ಹವಿರ್ಭಾಗವಂ ಸ್ವೀಕರಿಸುವಂತೆ ಈ ಲೋಕ ರಕ್ಷಕನಾದ ನಿನಗೆ ಶಿಷ್ಟರುಮಾಡುವ ಸತ್ಕರ್ಮದ ಆರುಭಾಗದಲ್ಲಿ ಒಂದುಅಂಶ ಉಂಟಾದುದರಿಂದಲೂ ವೃತ್ರಜಂಭಾದಿ ಅಸುರರಂ ದೇವೇಂದ್ರನು ನಿಗ್ರಹಿಸಿ ಲೋಕಾಧಿಪತ್ಯವಂ ಮಾಡುವಂತೆ ಭೂಲೋಕವನ್ನಾಕ್ರಮಿಸಿ ಬಂದ ಉಗ್ರಬಾಹು, ಜಂಘಾನಸಾರಥ, ದುರ್ಧರ್ಷ ಮುಖ್ಯರಾದ ದುಷ್ಟರಕ್ಕಸರಂ ನಿಗ್ರಹಿಸಿ, ಈ ಲೋಕಾಧಿಪತ್ಯವಂ ಮಾಡುವದರಿಂದಲೂ ದೇವೇಂದ್ರನಿಗೆ ಬ್ರಹ್ಮದೇವನ ಪ್ರಸಾದದಿಂದ ಐರಾವತ ಉಚ್ಚೈಶ್ರವಸ್ಸು ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ರಂಭಾದಿಗಳು ಆತನ ಸಂಪತ್ತಿಗೋಸುಗ ಲಬ್ಧವಾಗಿ ಇರುವದು ಆಶ್ಚರ್ಯವಲ್ಲ, ಅವಕ್ಕೆ ಪ್ರತಿನಿಧಿಯಾಗಿ ಭೂಲೋಕವಂ ಹೊಂದಿದ ವಸ್ತುಗಳೆಲ್ಲವು ನಿನ್ನ ಭುಜಬಲಾರ್ಜಿತವಾಗಿ ಸುಖವಂ ಉಂಟುಮಾಡುವದರಿಂದಾ ಇದಕ್ಕಿಂತಲೂ ದೇವೇಂದ್ರಪದವೆಂಬದು ಹ್ಯಾಗೆ ಇರುವದು, ಮಯೂರಗಳು ಪಿಂಛದೇಶದಲ್ಲಿ ನೇತ್ರ

ಪಂಕ್ತಿಗಳಿಂ ಶೋಭಿಸುವಂತೆ ದೇವೇಂದ್ರನು ಸಹಸ್ರನೇತ್ರಗಳಿಂದಲಂ ಅಲಂ
ಕೃತನಾಗಿ ಇರುವನೆಂಬುದು ಹೊರತುವಿಕಸ್ವರದ ವೃಕ್ಷವಳಿಗಳಲ್ಲಿ ನಿಸರ್ಗಿಂತಅ
ಧಿಕಸ್ವಾರಸ್ಯವನ್ನು ಈ ಭೂಲೋಕವಂ ಪೊಂದಿರುವ ದೇವತಾವಸ್ತು ಸ
ಮೃಶವಾದ ವಸ್ತುಗಳಂ ಪೂರ್ಣವಾಗಿ ಬೇಡಿ ಎನಗೆ ಅಧಿಕಮೂಲ್ಯವನ್ನುಂಟು
ಮಾಡಿ ಪಾಣಿಗ್ರಹಣವಂ ಮಾಡಿದ ಪತ್ನಿಯಾದ ಸೌಗಂಧಿಕಾದೇವಿಯಿಂದಲೂ
ವಿಶೇಷಗುಣಸೌಂದರ್ಯಾದಿಗಳು ಇನ್ಯಾವಸ್ತ್ರೀಯಲ್ಲಾದರೂ ಉಂಟಾದ
ರೆ ಅವಳಂ ಕರೆದು ಬಂದು ಹೇಳಬಹುದು ಎನಲು, ಅದಕ್ಕೆ ಆ ಸುಗಂಧ
ರಾಜೇಂದ್ರನು ಸತ್ಯವೀಧಿಯಂ ಕುರಿತು ಮಹಾಋಷಿಗಳೇ! ಲೋಕದಲ್ಲಿ ಚಂ
ದ್ರನಿಗೆ ಮುಖಸಾಮ್ಯವಂ ಹೇಳಿದ್ದರೆ ಮುಖದಲ್ಲಿ ಆಹ್ಲಾದಾದಿ ಗುಣಗಳು
ಎಂತು ತೋರದೆಯಿರುವದೋ? ಅದೇರೀತಿಯಲ್ಲಿ ಇಂದ್ರನೈಶ್ವರ್ಯಕ್ಕೆ ನಮ್ಮ
ಐಶ್ವರ್ಯದ ಸಾದೃಶ್ಯವನ್ನು ಹೇಳಿದ್ದರೆ ಲೋಕದವರಿಗೆ ನಮ್ಮ ಸಂಪತ್ತಿನ
ಲ್ಲಿ ಶ್ರೇಷ್ಠತೆಯಾಗಿ ತೋರುವದು, ಜನಗಳಿಗೆ ಬೇಕಾದ ಇಷ್ಟವಸ್ತು ಸ್ವ
ಲ್ಪಗುಣವುಳ್ಳದ್ದಾದರೂ ಅಭಿಮಾನದಿಂದ ಸರ್ವೋತ್ತಮವಾಗಿ ತೋರು
ವಂತೆ ನನ್ನಲ್ಲಿ ನಿಮಗೆ ಕೃಪಾದೃಷ್ಟಿಯಿಂದ ಹಾಗೆ ತೋರಿದುದೇ ಶ್ರೇಯಸ್ಕ
ರವೆಂದು ಹೇಳಬೇಕೆಂದು ಸುಗಂಧರಾಜೇಂದ್ರನು ನುಡಿಯುತ್ತಿರಲು, ಆ
ಮಾತಿಗೆ ಸುಚರಿತ್ರರಾಯನು ಎಲೈ ಕುಮಾರನೆ! ಋಷಿಗಳವಚನಕ್ಕೆ
ಬದಲು ಹೇಳಬಾರದು, ಸಕಲ ಚರಾಚರಂಗಳಿಗೆ ದೇಶಕಾಲವಿಭಾಗವಂಗೈ
ಯುತ ಕರ್ಮಸಾಕ್ಷಿಯಾದಸೂರ್ಯನ ನಿಜಸ್ವರೂಪವನ್ನು ಹೇಳಿದ ಈ ಮ
ಹಾತ್ಮರವಚನವು ಅಗ್ನಿಯಲ್ಲಿ ಉಷ್ಣತಪ್ಪಿದರೂ ಮೇರುಪರ್ವತಚಲಿಸಿದರೂ
ತಪ್ಪುವದು ಅಲ್ಲ, ಇದಂ ಅರ್ಥವಾದವೆಂದು ಭಾವಿಸಲಾಗದು ಎನಲು, ಆ
ಮಾತಿಗೆ ಸುಗಂಧರಾಯನು ಮಹಾಪ್ರಸಾದವೆಂದು ಅಂಜಲಿಬದ್ಧನಾಗ
ಲು, ಸತ್ಯವೀಧಿಯು ವಾಮದೇವಮಹರ್ಷಿಯಂ ಕುರಿತು ಆಚಾರ್ಯರೆ! ಈ
ರಾಯನು ಶಾಸ್ತ್ರರಹಸ್ಯವಂ ಪೇಳುವದರಿಂದ ಸಾಧಾರಣನೃಪನೆಂದು ಹೇ
ಳಕೂಡದು ಎಂದು ನುಡಿಯುತ್ತಿರಲು, ಐಯ್ಯಾ ಸತ್ಯವೀಧಿಯೆ! ಈತನು
ರಾಜಋಷಿಯು ಹೊರ್ತು ಸಾಧಾರಣ ನೃಪತಿ ಅಲ್ಲ, ಇಂದಿನದಿವಸ ಲೋ
ಕಪಾವನಿಯಾದ ಕಾವೇರೀತೀರದಲ್ಲಿ ಸಾಲಾಗಿ ನಿಲ್ಲಿಸಿಇರುವ ಶಿಲಾಸ್ತಂಭಗ
ಳಂ ನೋಡಿಬಂದುದು ಸರಿಯಷ್ಟೆ? ಅವೆಲ್ಲವು ಈ ರಾಯನು ಮಾಡಿದ ಅಕ್ಷ

ಮೇಧಯಾಗಂಗಳಯೂಪಸ್ತಂಭಗಳು ಇದುಹೊರದು ಅನೇಕಕ್ರತುಗಳಂ ಬ್ರಾಹ್ಮಣಮುಖದಲ್ಲಿ ಮಾಡಿಸಿ ಇರುವನು, ಷೋಡಶ ಮಹಾದಾನಾಚರಣೆಯಿಂ ವಿಖ್ಯಾತಿಯಂ ಪಡೆದವನು, ಈತನು ಬ್ರಾಹ್ಮಣಸಮ್ಮತನು, ಲೋಕಾಪವಾದವನ್ನು ಸರ್ಪದಂಶದಂತೆ ಭಾವಿಸುವದರಿಂದ ಇಹಪರದಲ್ಲಿ ಬಹುಶ್ರೇಯಸ್ಸಿಗೆ ಪಾತ್ರನಾಗಿ ಇರುವನು, ಅಪೂಜ್ಯರಂ ಪೂಜಿಸದೆ ಪೂಜ್ಯರಿಗೆ ಅವಮಾನವಂ ಮಾಡದೆ ಇರುವವನಾದ್ದರಿಂದ ಈತನ ರಾಜ್ಯದಲ್ಲಿ ಅಕಾಲಮರಣವು ದುರ್ಭಿಕ್ಷವು ವರ್ಣಾಶ್ರಮ ಸಾಂಕರ್ಯ ಭಯಗಳೆಂಬುದು ಇಲ್ಲದೆ ಪ್ರಜೆಗಳು ಸುಖದಿಂದ ಇರುವರು, ಮತ್ತು ಪಾಪಭೀತರುಗಳಾಗಿ ಪ್ರಭುವಿಗೆ ಶ್ರೇಯಸ್ಸನ್ನೇ ಹಾರೈಸುತ ಶಾಸ್ತ್ರನಿಶ್ಚಯಮಂ ತಿಳಿದಿರುವ ವಿದ್ವತ್ಸಮಾಜವನ್ನಾದರಿಸುವನೇ ಹೊರತು ಸ್ವಕಾರ್ಯತತ್ಪರರಾಗಿ ಪರಲೋಕದೃಷ್ಟಿ ಇಲ್ಲದ ಡಾಂಭಿಕರ ವಾಕ್ಯವನ್ನಾದರಿಸುವನಲ್ಲ, ಆದುದರಿಂದ ವ್ಯಯವೆಂಬುದು ಸತ್ಪಾತ್ರದಲ್ಲೇ ಉಂಟಾಗಿ ಸುಕೃತರಾಶಿಯನ್ನುಂಟುಮಾಡುವದು, ಮತ್ತು ಪ್ರಜೆಗಳಿಂ ಬಂದ ಧನಗಳಂ ಪ್ರಜಾರಕ್ಷಣೆಗೆ ಉಪಯೋಗಿಸುತ ಭುಜಾರ್ಜಿತದ್ರವ್ಯದಿಂ ಸ್ವೇಷ್ಟ ಭೋಗವಂ ಸಫಲಗೊಳಿಸುವದರಿಂದ ಅದು ಈತನಿಗೆ ಧರ್ಮಾರ್ಜಿತವಾಗಿ ಸದ್ಗತಿಗೆ ಸಾಧನವಾಗುವದು, ಮೇಘಪಾನದಿಂದೆಷ್ಟು ಉದಕವ್ಯಯವಾದರೂ ನದಿಗಳ ಮುಖದಿಂದೆಷ್ಟು ಒದಗುತ್ತಿದ್ದರೂ ಹೆಚ್ಚುತಗ್ಗಿಯಿಲ್ಲದೆ ಸಮುದ್ರದಂತೆ ನ್ಯಾಯಮಾರ್ಜಿತವಾದ ಧನದಿಂದ ಪ್ರಜಾಸಂರಕ್ಷಣವಂ ಗೈಯುತ ಸಂಚಿತ ಧನವನ್ನಪೇಕ್ಷಿಸದೆ ಕುಬೇರನ ಕೋಶಗೃಹದಂತೆ ಬೊಕ್ಕಸವು ಸಮೃದ್ಧವಾಗಿ ಇರುವದರಿಂದ ಶತ್ರುಗಳಿಗೆ ಭಯವು, ಭೃತ್ಯರಿಗೆ ಭರವಸವು, ಪ್ರಜೆಗಳಿಗೆ ಧೈರ್ಯವು ಉಂಟಾಗಿ ಪುಷ್ಟರಾದ ಪ್ರಜೆಗಳು ಕೇಳಿದುದೆಲ್ಲವ ಕೊಡುವದರಲ್ಲಿ ಉತ್ಸಾಹವಂತರಾಗಿ ಇರುವರಾದರೂ ನ್ಯಾಯವನ್ನು ಮೀರಿ ಅಧಿಕವನ್ನಪೇಕ್ಷಿಸುವನಲ್ಲ, ಈತನದಯ ದಾಕ್ಷಿಣ್ಯಗಳು ಸಜ್ಜನರಲ್ಲಿಯೇ ನೆಲಸಿಯಿರುವದರಿಂದ ಬಂಧುಗಳು ಸಲಿಗೆಯಿಂ ತುಂಟರಾದುದ್ಧತನವಂ ಚೋರತನಕಳ್ಳತನವಂ ಬಿಟ್ಟು ಭಯಭಕ್ತಿಗಳಿಂದಾ ನಡೆದುಕೊಳ್ಳುವರು, ಈರಾಯನು ರಾಜ್ಯಭಾರವೆಂಬ ತ್ರಾಸಿನ ಕೋಲಿನಂ ಹಿಡಿದು ಅದಕ್ಕೆ ಪರಲೋಕ ಇಹಲೋಕಗಳೆಂಬ ಎರಡುಬಟ್ಟಲುಗಳಂ ಮಾಡಿ ಸಾಮದಾನಭೇದದಂಡಗಳೆಂಬ ಸೂತ್ರನಾಲ್ಕನ್ನು ಬಂಧಕ್ಕೆ

ಅಳವಡಿಸಿ ಧರ್ಮಾರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಸೂತ್ರಗಳಂ ಬಂಧಕ್ಕೆ ಅಳವಡಿಸಿ ಅದರಿಂ ಸಂಬಂಧಿಸಿದ ನೀತಿಯೆಂಬ ತುಲಾದಂಡದ ಮಧ್ಯಭಾಗದೊಳುಂಟಾಗಿ ಇರುವ ಮರ್ಯಾದೆಯೆಂಬ ಮುಳ್ಳಿನ ಅಗ್ರವಂ ಏಕಾಗ್ರಚಿತ್ತವೆಂಬ ದೃಷ್ಟಿಯಿಂದಾ ಸರಬಾರದಂತೆ ನೋಡುತ್ತ ನ್ಯಾಯ ಧರ್ಮಗಳೆಂಬ ರತ್ನಗಳೆಂಬ ರತ್ನಗಳಂ ತೂಗಿಕೊಡುತ ಖ್ಯಾತಿಯೆಂಬ ಬೀಜವಾಪಿಯಂ ರಾಷ್ಟ್ರವೆಂಬ ಕ್ಷೇತ್ರದೊಳ್ ಬಿತ್ತುತ ಶ್ರೇಯಸ್ಸೆಂಬ ಅಧಿಕಫಲಲಾಭವಂ ಸಂಪಾದಿಸುವದರಿಂದಾ ಈತನ ರಾಜ್ಯದಲ್ಲಿ ಪ್ರಜೆಗಳು ನ್ಯಾಯತತ್ಪರರಾಗಿ ಶಿಷ್ಯರು ಗುರುಗಳಂ ಪತ್ನಿಯರು ಪತಿಯಂ, ಭೃತ್ಯರು ಸ್ವಾಮಿಯುಂ, ನದಿಗಳು ಸಮುದ್ರವಂ, ಸಮುದ್ರವು ಮರ್ಯಾದೆಯುಂ, ಮರ್ಯಾದೆಯು ಧರ್ಮವಂ ಧರ್ಮವು ಪ್ರಭುವಂ ಆಶ್ರಯಿಸುತ್ತ ಪರ್ಜನ್ಯನು ಕಾಲಕಾಲದಲ್ಲಿ ವರ್ಷಿಸುತ್ತ ಋತುಧರ್ಮಗಳು ವ್ಯತ್ಯಾಸವಾಗದೆ ಭೂಮಿಯಲ್ಲಿ ಹುಲುಸುತಪ್ಪದೆ ಓಷಧಿಗಳಲ್ಲಿ ರಸವು ತಪ್ಪದೆ ಜಲದಿಂ ವ್ಯಾಧಿಯುಂಟಾಗದೆ ಅಗ್ನಿಯು ಅಕಾರಣವಾಗಿ ಬಾಧಿಸದೆ ವಾಯುವು ಮಿತಿಮೀರಿ ಬೀಸದೆ ಚಂದ್ರಸೂರ್ಯಕಿರಣಗಳು ಅತ್ಯಂತ ಶೀತೋಷ್ಣಂಗಳಾಗದೆ ಕ್ಷುದ್ರಭೂತಗಳು ಲೋಕವಂ ಬಾಧಿಸದೆ ಲೋಕವ್ಯವಹಾರಂಗಳು ಸತ್ಯಸ್ವರೂಪವಾದ ನ್ಯಾಯಮೂಲದಿಂ ನಡೆಯುವದರಿಂದಾ ನ್ಯಾಯವಂತನಾದ ಪ್ರಭುವಿಗಿಂತಲೂ ಈಶ್ವರನೆಂಬುವನು ಲೋಕಕ್ಕೆ ಬ್ಯಾರೆ ಮತ್ತೊಬ್ಬ ಇಲ್ಲ, ನ್ಯಾಯಯುಳ್ಳವರೆ ಪ್ರಪಂಚಮರ್ಯಾದೆಯು, ಅದು ತಪ್ಪಿದರೆ ಪ್ರಳಯವುಂಟಾಗುವದು, ನ್ಯಾಯದಿಂದ ನಡೆದುಕೊಂಡ ಶ್ರೀರಾಮನಿಗೆ ಕಪಿಗಳು ತಿರ್ಯಗ್ಜಂತುಗಳು ಆದರೂ ಸಹಾಯವಂ ಮಾಡಿದವು, ನ್ಯಾಯಮಾರ್ಗವಂ ಬಿಟ್ಟು ನಡೆಯುತಲಿದ್ದ ರಾವಣನಂ ಸಹೋದರನಾದ ವಿಭೀಷಣನು ಕೂಡೆ ತ್ಯಜಿಸಿಹೋದನು, ಅದರಿಂದ ಲೋಕಗಳು ನ್ಯಾಯದಿಂದ ಪ್ರತಿಷ್ಠಿತವಾಗಿ ಇರುವವು, ಮತ್ತು ದಂಡನೀತಿಯಲ್ಲಿ ನಿಪುಣರಾಗಿ, ಸ್ವಾಮಿಯಲ್ಲಿ ಭಕ್ತಿಯುಳ್ಳವರಾಗಿ, ಕಾರ್ಯದಲ್ಲಿ ಕುಶಲರಾಗಿ, ಅಪ್ರಮತ್ತರಾಗಿ, ಪಾಪಭೀರುಗಳಾಗಿ ಪ್ರಜಾಸಮ್ಮತರಾಗಿ, ಪಾರಂಪರ್ಯದಿಂ ಬಂದವರಂ ಮಂತ್ರಿಪದದಲ್ಲಿ ನೇಮಿಸಿ ಇ[illegible]ನನಾದ್ದರಿಂದಾ ಪ್ರಜೆಗಳು ಪುಷ್ಟರಾಗಿ, ಶತ್ರುಗಳು ಭಯಗ್ರಸ್ತರಾ[illegible] ತ್ರಿವರ್ಗಕ್ಕೆ ಹರ್ಷವುಂಟಾಗಿ, ಧರ್ಮವು ಚಲಿಸದೆ ಅ

ಬ್ಬಂದವನುಂಟಾಗಿರುವದು, ಈರಾಯನು ತಾನುಮಾಡುವ ಕಾರ್ಯವಂ ಅನ್ಯರಿಗೆ ಸೂಚಿಸದೆ, ಅನ್ಯರಿಂದ ಆಗುವದಕ್ಕೆ ತಾನುಯತ್ನೀಕರಿಸದೆ, ಈಗ ಮಾಡುವದಂ ನಾಳೆಯುಂಡಿಸದೆ ಮುಂದೆಆಗುವದಕ್ಕೀಗಲೆ ತವಕಪಡದೆ, ಹೇಡಿಗಳಮುಂದ ಶೂರರಿಗೆ ಅಪಮಾನವಂಮಾಡದ, ಪುರುಷಸ್ವಭಾವವಂಪ್ರತ್ಯಕ್ಷ ಪರೀಕ್ಷೆದಲ್ಲಿ ಚೆನ್ನಾಗಿ ವಿಚಾರಿಸುತ್ತ, ಪ್ರಮಾದಉಂಟಾಗದಂತೆ ಆಲೋಚಿಸಿನಿರ್ವಾಹವಂ ತಿಳಿದು ಕಾರ್ಯವಂನೇಮಿಸುತ್ತ, ಕಾರ್ಯಾನುಗುಣವಾಗಿ ಭೃತ್ಯರಿಗೆಸಂಬಳ ಸನ್ಮಾನವಂಮಾಡುತ್ತ, ಅಪರಾಧಾನುಗುಣವಾಗಿ ದಂಡನೆಯಂಗೈಯುತ್ತ,ಪ್ರಜಾಪೋಷಣೆಯಂವನ್ನರಿತು ನಡೆಸುತ್ತ, ಸ್ವಧರ್ಮಾನುಸಾರವಾಗಿ ನಡೆಯುತ್ತ ಪ್ರಜೆಗಳನ್ನು ನಿಹಿತದಿಂ ನಡೆಯುವಂತೆನೇಮಿಸಿ ಇದಂತಿಳಿದು ವೃತ್ತಿಯನ್ನುಂಟುಮಾಡುತ್ತ, ಆಪ್ತರಾದ ಚಾರರಮುಖದಿಂ ಪರೋಕ್ಷವಾಗಿ ನಡೆಯುವದೆಲ್ಲವಂತಿಳಿದು ಸಜ್ಜನರಂ ಸನ್ಮಾನಗೊಳಿಸಿ ವಂಚಕರಂದಂಡಿಸುತ್ತ, ಸ್ತ್ರೀಪಾನದ್ಯೂತಾದಿಗಳಿಗೆ ವಿಹ್ವಲನಾಗದೆ, ಯಾವತ್ತು ಜನರಸ್ವಭಾವವಂನರಿತು ತನ್ನಇಂಗಿತವು ಅನ್ಯರಿಗೆ ತಿಳಿಯದಂತೆ ಅಗಾಧಹೃದಯನಾಗಿ, ಸಜ್ಜನರಿಗೆ ಸುಲಭನಾಗ, ದುರ್ಜನರಿಗೆ ದುರ್ಲಭನಾಗಿ,ಪರಲೋಕದಲ್ಲಿ ದೃಷ್ಟಿಯುಳ್ಳವನಾಗಿ, ಧರ್ಮೈಕಶರಣನಾಗಿ,ಖ್ಯಾತಿಯು ಶ್ರೇಯಸ್ಕರವೆಂದು ತಿಳಿಯುತ್ತ, ಚಂದ್ರನಂತೆ ಜಗದಾಹ್ಲಾದಕರನಾಗಿ. ಸೂರ್ಯನಂತೆ ಬಾಹ್ಯಾಭ್ಯಂತರ ಜಾಡ್ಯವಂಪರಿಹರಿಸುತ್ತ, ದೇವೇಂದ್ರನಂತೆ ಪೂರ್ವದಿಕ್ಕಂರಕ್ಷಿಸುತ್ತ,ದಕ್ಷಿಣದಿಕ್ಪತಿಯಂತೆ ದಂಡಧರನಾಗಿ,ವರುಣನಂತೆ ಜೀವನದಾಯಕನಾಗಿ,ಕುಬೇರನಂತೆಧನಪನಾಗಿ,ಈಶಾನನಂತೆಮಹಾಸೇನಾನುಗತನಾಗಿ,ಅಗ್ನಿಯಂತೆತೇಜಸ್ವಿಯಾಗಿ,ನಿಋತಿಯಂತೆಶತ್ರುಭಯಂಕರನಾಗಿ,ವಾಯುವಿನಂತೆಕ್ರಿಯಾಶಕ್ತಿಯುಕ್ತನಾಗಿ,ಮಹಾಶೇಷನಂತೆಭೂಭಾರಧಾರಣಕುಶಲನಾಗಿ, ವನಮಧ್ಯದೋಳ್ಪ್ರಕಾಶಿಸುವ ಸಿಂಹನಂತೆಸಮುದ್ರದೋಳ್ ಮಹಾಮತ್ಸ್ಯದಂತೆ,ಮಹಾನಾಗಕುಲದೋಳ್ ವಾಸುಕಿಯಂತೆ,ದೇವಸಮೂಹದೋಳ್ಪಾಕಶಾಸನನಂತೆ,ಸಕಲರಾಜ್ಯಾಧಿಪತ್ಯವಂ ಮಾಡುವದರಿಂದಾ ಶತ್ರುಗಳೆಲ್ಲರೂಪಾದಾಕ್ರಾಂತರಾಗಿಭೃತ್ಯರುಈತನಸಂಪದವಂಹಾರೈಸುತ್ತ, ಶಿಷ್ಟರುಈತನಅಭ್ಯುದಯವಂಪ್ರಾರ್ಥಿಸುತ್ತ,ಪ್ರಜೆಗಳು ತಂದೆಯಂಕೊಂಡಿರುವಂತೆ, ಸ್ತ್ರೀರುಗಳುತೌರುಮನೆಯಂ ಹಾರೈ

ಸುವಂತೆ ಧೀನಾನಾಥರಿಗೆದಿಕ್ಕಾಗಿ, ವಿಪನ್ನರಿಗೆರಕ್ಷಕನಾಗಿ,ವರ್ಣಾಶ್ರಮ ಧರ್ಮಂಗಳಂ ಪರಿಪಾಲಿಸುತ್ತಲಿರುವ ಈಅರಸಿನರಾಜ್ಯದಲ್ಲಿ ನಾಣ್ಯಗಳಿಗೆ ಎಡನಟ್ಟುಬಾರದೆ, ಅಳತೆಯಲ್ಲಿ ತಟವಟವುಂಟಾಗದೆ, ಧಾರಣೆಯಲ್ಲಿ ಹೆಚ್ಚುಕುಂದಿಲ್ಲದೆ,ಗೋವುಗಳು ಅಧಿಕಕ್ಷೀರವಂ ಕರೆಯುತ್ತ, ಜನರೆಲ್ಲರೂಉತ್ಸಾಹವಂತರಾಗಿ ನಾಸ್ತಿಕರಪ್ರಚಾರವಿಲ್ಲದೆ, ವೇದವಂ ಶೂದ್ರಾದಿಗಳು ಬಯಸದೆ, ಮಂತ್ರವಂಮತ್ತೊಬ್ಬರುತಿಳಿಯದೆ, ಉತ್ತಮರು ನೀಚವೃತ್ತಿಯಂ ಜೀವಿಸದೆ, ನೀಚರು ಉತ್ತಮಪದಕ್ಕೇರದೆ,ವ್ಯವಹಾರಗಳಲ್ಲಿ ಕೂಟಸಾಕ್ಷಿಗಳಿಲ್ಲದೆ,ಸಂವಾದದಲ್ಲಿ ಅನೃತವುಂಟಾಗದೆ, ಹೃದಯದಲ್ಲಿ ಕೌಟಿಲ್ಯಕಾಣಿಸದೆ, ಮಾತುಗಳಲ್ಲಿ ಪಾರುಷ್ಯಸಂಭವಿಸದೆ,ಗುಣದಲ್ಲಿ ಮತ್ಸರತೋರದೆ,ನೀತಿಯಲ್ಲಿ ಪ್ರಮಾದವುಂಟಾಗದೆ, ಗಣಕರಲ್ಲಿ ವಂಚನೆತಲೆದೋರದೆ, ಲಂಚಗಳಿಂರಾಜಕಾರ್ಯಕೆಡದೆ, ಭೃತ್ಯರು ಸ್ವಾಮಿಪದವನ್ನಪೇಕ್ಷಿಸದೆ, ಸ್ವಾಮಿಯು ಭೃತ್ಯರಶ್ರಮವಂಮರಿಯದೆ, ವರ್ಣಾಶ್ರಮಗಳು ಧರ್ಮವಂಮೀರದೆ, ಒಬ್ಬರಸ್ವತ್ತಂ ಅನ್ಯರು ಅಪೇಕ್ಷಿಸದೆ, ಮಿತ್ರರು ಶತ್ರುಸಮರಾಗದೆ, ಕ್ರೂರಮೃಗಂಗಳು ಪ್ರಜಾಪಶುಗಳಂ ಬಾಧಿಸದೆ, ಸರ್ಪಾದಿಗಳು ಗ್ರಾಮಾಭಿಮುಖವಾಗದೆ, ಪಿಶಾಚಾದಿಗಳು ಸ್ವಪ್ನದಲ್ಲಿಆದರೂ ಸುಳಿಯದೆ, ವೈರಿಗಳಿಗೆ. ಈತಿಬಾಧೆ ತಟ್ಟದೆ, ಸ್ತ್ರೀಯರುಗಳುಪತಿಗೆ ಪ್ರತ್ಯುತ್ತರವಂ ಹೇಳದೆ, ಪುರುಷರು ಅನ್ಯಸ್ತ್ರೀರಲ್ಲಿ ಅನುರಕ್ತರಾಗದೆ, ಜನರುಹಿತವಂಮೀರಿ ಹೆಚ್ಚುಬಯಸದೆ, ದಾತೃಗಳು ಉಚಿತವಂಮೀರಿ ಹೆಚ್ಚಾಗಿ ಕೊಡದೆ,ದ್ಯೂತಮುಖದಿಂದ ದ್ರವ್ಯವ್ಯಯವಾಗದೆ, ಪ್ರಬಲರಿಂ ದುರ್ಬಲರಿಗೆ ಬಾಧೆಯುಂಟಾಗದೆ, ತೆರಿಗೆಗಳು ಹೆಚ್ಚುಬಾರದೆ, ಆಯಕಟ್ಟುಗಳು ತಗ್ಗಿಹೋಗದೆ, ಮರ್ಯಾದೆಗಳು ಮಸಣಿಸಿಹೋಗದೆ, ವಿಹಿತವಂಮೀರಿ ಕಾರ್ಯೋಪಕ್ರಮ ಉಂಟಾಗದೆ, ಕಾರ್ಯಾರಂಭವು ನಿಷ್ಫಲವಾಗದೆ, ದಸ್ಯುಗಳೆಂಬಶಬ್ದವಂಕೇಳಿಸದೆ,ಮಾರ್ಗದೊಳ್ ಕ್ಷುದ್ರೋಪದ್ರವವಿಲ್ಲದೆ,ರಾಜಾಜ್ಞೆಯು ಅಪ್ರತಿಹತವಾಗಿ ಇರುವದರಿಂದ ನಿತ್ಯದಲ್ಲಿಯು ದೇವರಾಜ್ಯದಂತೆ ಮಂಗಳಮಯವಾಗಿ ರಾಜಗೃಹವು ಲಕ್ಷ್ಮೀಭವನವಾಗಿ ತೋಟಗಳು ಸರಸ್ವತೀವಿಲಾಸರೂಪವಾಗಿ ಅಂತಃಪುರವು ಅಂಬಿಕಾವಿಲಾಸವಾಗಿ, ಆಸ್ಥಾನವು ಧರ್ಮಮಯವಾಗಿ ಬಿಡಿಜಾವಡಿಗಳು ನ್ಯಾಯಮಯವಾಗಿ, ಸಭೆಯಲ್ಲವು ಸಜ್ಜನಮನ

ದುವಾಗಿ, ಬ್ರಾಹ್ಮಣಾಯತನಗಳು ಸತ್ಕರ್ಮನಿಷ್ಠವಾಗಿ, ಕ್ಷತ್ರಿಯಾವಾಸಂಗಳು ಅಭ್ಯುದಯಸಮೃದ್ಧವಾಗಿ, ವೈಶ್ಯಗೃಹಂಗಳು ಸಸ್ಯಸ್ವಾಪೇಯವಾಗಿ, ಶೂದ್ರಾವಾಸಂಗಳು ಶುಭಸುಖವಾಗಿ, ನರ್ತಕೀನಾಟ್ಯರಂಗಗಳು ಸಕಲವಿನೋದಯುತವಾಗಿ, ಸೇನಾನಿವೇಶವು ಶೌರ್ಯಯುತವಾಗಿ, ರಾಯನ ಚಿತ್ತವೃತ್ತಿಯಂತೆ ಲಕ್ಷ್ಮಿಯು ಸುಸ್ಥಿರಳಾಗಿ, ಇರುವದರಿಂದ [ರಾಜಾನಸ್ತ್ಯಂಚ ಧರ್ಮಿಷ್ಠೇ ರಾಷ್ಟ್ರಾಕುಲವತ್ತಾಂ ಕುಲಂ । ರಾಜಾನಮಾತಾಪಿತರೌ ಸ್ವರಾಜಾನುತ್ತಕ ದೇವ ಸ್ವರ್ಗಾಂ] ಎಂಬ ಶಾಸ್ತ್ರಾನುಗುಣವಾಗಿ ರಾಜನ ಮೂಲದಿಂದ ರಾಷ್ಟ್ರವು ಕ್ಷೇಮವಿಂದಿರುವದು, ಹೀಗೆ ಪ್ರಜಾಸ್ವಧರ್ಮಪರತನಾಗಿ ಇರುವದರಿಂದಲಾತನ ಅನುವರ್ತನಶೀಲರಾದ ಪ್ರಜೆಗಳು ಸ್ವಧರ್ಮನಿರತರಾಗಿ ಇರುವದರಿಂದ ಈತನ ರಾಜ್ಯದಲ್ಲಿ ಉದಕವು ನಿಮ್ನಪ್ರದೇಶದಲ್ಲಿ, ಕಾಠಿಣ್ಯವೆಂಬುದು ಕುಚಕುಂಭಂಗಳಲ್ಲಿ, ವಕ್ರತೆಯೆಂಬುದು ಕುಡಿಹುಬ್ಬುಗಳಲ್ಲಿ, ಚಾಂಚಲ್ಯವು ನೇತ್ರಾಂಚಲಗಳಲ್ಲಿ, ಉಪಸರ್ಜನವೆಂಬುದು ವ್ಯಾಕರಣದಲ್ಲಿ, ಕುಟಿಲತೆಯು ಅಲಕಾಗ್ರಗಳಲ್ಲಿ, ಬಂಧನವು ಧಮ್ಮಿಲ್ಲಕುಸುಮಮಾಲಿಯಲ್ಲಿ, ಪಾಟಾಳಿಕತ್ವವು ಕಾಂಚೀದಾಮದಲ್ಲಿ, ಮಲಿನತೆಯು ಕಾದಾಹರಣಗಳಲ್ಲಿ, ಭಂಗವು ಸುಕರಕಾಂತ್ರದಲ್ಲಿ, ಮಿಥ್ಯಾವಾದವು ಚಾಟುವಚನಗಳಲ್ಲಿ, ಪಕ್ಷಪಾತವು ಮುಕ್ತಾರಿಕೆಗಳಲ್ಲಿ, ಮುಸಲಂಗಳು ಪ್ರಣಯ ಕಲಹಗಳಲ್ಲಿ, ವರ್ಣಸಾಂಕರ್ಯವು ಚಿತ್ರಗಳು ಸುವರ್ಣದಲ್ಲಿ, ಮಿತ್ರದ್ರೋಹವು ಕುಮುದ ಪಙ್ಕ್ತಿಗಳಲ್ಲಿ ಪ್ರತ್ಯಾಸ್ಕಂದನವೆಂಬುದು ಚಂದ್ರಸೂರ್ಯಾದಿಗಳಲ್ಲಿ, ನಿಗ್ರಹವೆಂಬುದು ಮನಸ್ಸಿನಲ್ಲಿಯೇ ಇರುವದೇಹೊರತು ಪ್ರಜೆಗಳಲ್ಲಿ ಸಂಭವಿಸುವದಿಲ್ಲ, ಎಂದು ವಾಮದೇವ ಋಷಿಗಳು ಹೇಳುತ್ತಿರಲು, ಆ ವಾರ್ತೆಗೆ ಸತ್ಯಾಷಾಢಿಯು ವಾಮದೇವರಂ ಕುರಿತು ಗುರುವರ್ಯರೇ! ಈ ರಾಯನು ಆಚರಿಸುವ ನ್ಯಾಯ ನೀತಿಗಳು ಬಹು ಶಾಸ್ತ್ರಾನುಸಾರವಾದುದರಿಂದ ಲೋಕವು ಕ್ಷೇಮದಿಂದಿರುವದು, ಈ ಅರ್ಥವಂ ತಿಳಿದು ನಡೆದುಕೊಂಡವರು ಯಶೋವಂತರಾಗುವರು, ಸಜ್ಜನರು ಈ ರಾಯನ ಚರಿತ್ರೆಯಂ ಶ್ಲಾಘನೆಗೈಯುವದರಿಂದ ಈತನಿಗೆ ಸುಚರಿತ್ರರಾಯನೆಂಬುವದು ಅನ್ವರ್ಥನಾಮವಾಯಿತು, ಎಂದು ಹೇಳುತ್ತಿರಲು, ಆ ವಾರ್ತೆಗೆ ಸುಚರಿತ್ರರಾಯನು ಸತ್ಯಾಷಾಢಿಯಂ ಕುರಿತು ಮಹರ್ಷಿಗಳೆ! ಮಹಾತ್ಮರಾದ ವಾಮದೇವರು ನನ್ನಲ್ಲಿ ಕೃಪೆಯಿಂ ಹೇಳಿದ

ಅರ್ಥವೆ ಉಪನಿಷತ್ತುವಾದ್ದರಿಂದ ಲೋಕೋಪಕಾರಾರ್ಥವಾಗಿ ಸಕಲ ನೀತಿಧರ್ಮವಂ ಹೇಳಿದಂತಾಯಿತು, ಈ ನೀತಿವಾಕ್ಯಂಗಳನ್ನು ಶ್ರೀಯುತಸ್ವಾಮಿಗಳಾದ ಧೊರೆಗಳು ಕೇಳಿ ತಿಳಿದು ಆಚರಿಸುವರಾಗುವರು, ಎಂದು ಹೇಳುತ್ತಿರುವ ಸಮಯದೊಳ್ ರಾತ್ರಿಪ್ರಥಮಯಾಮ ಸೂಚಕನಾದ ಗಂಟೆ, ಭೇರೀ ಕಾಹಳಾದಿವಾದ್ಯಧ್ವನಿಗಳು ಘೋರುತ್ತಿರಲು, ಆದಂ ಕೇಳಿದ ರಾಜನು ಮುನಿಪತಿಗೆ ಅಭಿವಂದಿಸಿ ಹಸ್ತಲಾಘವದಿಂದ ತನ್ನ ಅಗ್ನಿಹೋತ್ರಗೃಹಕ್ಕೆ ಕರತಂದು ಉಪಚಾರವಂಗೈದು ವಿಶ್ರಮಿಸಿಕೊಳ್ಳುವುದೆಂದು ಪ್ರಾರ್ಥಿಸಿ, ಉದ್ಯಾನವನದಲ್ಲಿ ಮಣಿಸೋಪಾನದಿಂ ರಚಿಸಿದ ಮಹಾಸ್ವಚ್ಛಸರೋವರಗಳಂ ಸತ್ಯಾಗಾಧಿಗೆ ತೋರಿಸಿ, ಅನಂತರ ಅನುಮತಿಯಂ ಪಡೆದು ರಾಜನು ಅಂತಃಪುರವಂ ಸೈದುತ್ತಿರಲು, ಹಾಗೆಯೆಲ್ಲರೂ ಯಥಾಸ್ಥಾನವನೈದಲು.

ಆಮಾರನ ದಿವಸ ಶುಚಿರ್ಭೂತನಾದ ಸುಚರಿತ್ರರಾಜನು ದರ್ಬಾರಿನಲ್ಲಿ ಕುಳಿತು ಜಪವಂ ಮಾಡುತ್ತಿರುವ ಮಹರ್ಷಿಗಳ ಸಮಯವನ್ನರಿತು ಬಂದು ಸಾಷ್ಟಾಂಗಪ್ರಣಾಮವಂಗೈದು ನಿಂತಿರುವ ರಾಜನಂ ನೋಡಿ ಎದ್ದು ಆತನ ಹಸ್ತಲಾಘವದಿಂ ಉದ್ಯಾನವನವನ್ನು ನೋಡುವ ಕುತೂಹಲದಿಂ ತೆರಳುತ್ತ ಅತಿರಮಣೀಯಗಳಾದ ಸರೋವರಗಳನ್ನು ನೋಡುತ್ತ, ನಂದನವನಕ್ಕಿಂತ ಮಿಗಲಾದವೈಭವದಿಂ ಪ್ರಕಾಶಿಸುವ ಉದ್ಯಾನವನವಂ ನೋಡುತ್ತ, ಅಲ್ಲಿ ಮಣಿಮಯವಾದ ಜಗತಿಯಿಂ ಶೋಭಿಸುವ ಕಲ್ಪವೃಕ್ಷವಂ ನೋಡಿ, ಇದು ಎಲ್ಲಿಂದ ಲಬ್ಧವಾಯಿತೆನಲು, ಮಹಾನುಭಾವನೆ! ಈ ವೃಕ್ಷವು ಸೌಗಂಧಿಕಾದೇವಿಯ ಸ್ವಯಂವರ ಪಣನಿಮಿತ್ತವಾಗಿ ಕುಮಾರಕನಿಂದ ಲಬ್ಧವಾಗಿ ಈ ಉದ್ಯಾನವಂ ಸೈದಿತು, ಹೀಗೆ ಮತ್ತು ಮದಗಜವು, ಅಶ್ವರತ್ನವು, ಧೇನುಶ್ರೇಷ್ಠವು, ಬಿಡುಸುವರ್ಣವಂ ಪ್ರಸವಿಸುವ ಮಹಾರತ್ನವು ಮತ್ತೆ ಕೆಲವು ಸ್ತ್ರೀರತ್ನಂಗಳು ಸಹ ಲಬ್ಧವಾದವು ಎಂದು ಹೇಳುತ್ತಿರಲು, ವರ್ಣಿಸ ಅಶಕ್ಯವಾದ ಕಲ್ಪವೃಕ್ಷವಂ ಪ್ರದಕ್ಷಿಣೆಗೈದು ನಡೆಯುತ್ತ ಕಾಮಧೇನುವಂ ಕಂಡು ಪ್ರಣಾಮವಂಗೈದು, ಐರಾವತ ಉಚ್ಚೈಶ್ರವಗಳಂ ನೋಡಿ, ಸ್ತುತಿಸುತ ಅಯ್ಯಾ ರಾಜನೆ ! ಇದೇಲೋಕದ ವಸ್ತುಗಳು ದೇವೇಂದ್ರನಿಗಲ್ಲದೆ ಮತ್ತೊಬ್ಬರಿಗೆ ಲಭ್ಯವಾಗುವದುಂಟೆ, ಇದಂ ರಕ್ಷಿಸುವದಕ್ಕೆ ಮತ್ತೊಬ್ಬರು ಸಮರ್ಥರೆಂತಹರು, ಈ ವಸ್ತುಗಳು ಭೂಲೋಕವಂ ಹೊಂದುವದಕ್ಕೆ

ಮಹರ್ಷಿಗಳಾದ ದೂರ್ವಾಸ ಮುನಿಶಾಪವು ನಿವೃತ್ತವಾಯಿತು,ಅದುತಾನೆ ದೇವಕಾರ್ಯಾರ್ಥವಾಗಿ ಉಂಟಾಯಿತಲ್ಲದೆ ಈರ್ಷ್ಯಾವೇಶದಿಂದುಂಟಾದುದಲ್ಲ ಎಂದು ಹೇಳುತ್ತಿರಲು, ಮಹಾನುಭಾವರೆ! ಪೂರ್ವದಲ್ಲಿ ಹಿರಣ್ಯಾಕ್ಷಾದಿಗಳು ದೇವತೆಗಳಂ ಬಾಧಿಸುವದಂ ತಿಳಿದು ಶ್ರೀಮನ್ನಾರಾಯಣನು ಅವತಾರರೂಪಗಳಂತಾಳಿ ದುಷ್ಟದೈತ್ಯರಂ ಸಂಹರಿಸಿ,ದೇವತೆಗಳಂ ಸಂರಕ್ಷಿಸಿದನೆಂದು ಪುರಾಣಮುಖದಿಂ ಕೇಳಿದುದುಂಟು,ಮುಂದೆಯಾರು ಉಂಟಾಗುವರೋ? ಈಉತ್ತರಕ್ಷಣದಲ್ಲಿ ನಡೆಯುವ ಜಗದ್ವ್ಯಾಪಾರವಂ ತಿಳಿಯಲು ಅಶಕ್ತರಾದ ನಮ್ಮಂಥಾವರಿಗೆ ಮುಂದೆ ಆಗುವ ಈಶ್ವರಸಂಕಲ್ಪಿತಕಾರ್ಯಂಗಳು ಎಂತುತಿಳಿಯಬೇಕು, ಅದು ಮಹಾತ್ಮರಿಗೆ ಗೋಚರವು, ಎಂದುನುಡಿಯುತ್ತಿರಲು,ಅಯ್ಯಾ ಭೂಪತಿಯೆ ! ಕೇಳು ಕುತೂಹಲವಿದ್ದರೆ ದೇವರಹಸ್ಯವನ್ನಾದರೂ ಯೋಗ್ಯನಾದ ನಿನಗೆ ಹೇಳುವೆನು,ಈಗ ದೂರ್ವಾಸಶಾಪದಿಂ ಸ್ವರ್ಗಲೋಕವು ದಾನವಾಕ್ರಾಂತವಾಗಿ ದೇವತೆಗಳುಬಲಹೀನರಾದುದರಿಂ ಪರಮೇಶ್ವರನು ಸಮುದ್ರದಿಂದಅಮೃತವನ್ನುಂಟುಮಾಡಿ ಅದರಿಂದ ದೇವತೆಗಳಿಗೆ ಬಲವಂ ನಿತ್ಯತ್ವವಂ ಕಲ್ಪಿಸಿ ಅವರ ಮುಖದಿಂದ ದೈತ್ಯರಂ ನಿಗ್ರಹಗೊಳಿಸಿ ಧರ್ಮಸ್ಥಾಪನಂಗೈಯಲು ಸಂಕಲ್ಪಿಸಿ ಇರುವನು,ಅದು ಸ್ವಲ್ಪಕಾಲದಲ್ಲಿಯೇ ಉಂಟಾಗುವದು, ಮೊದಲು ಬ್ರಹ್ಮನಿಂ ನಿರ್ಮಿತವಾಗಿ ದೇವತೆಗಳಿಗೆ ಉಪಯುಕ್ತವಾದ ಈ ಕಲ್ಪವೃಕ್ಷಾದಿವಸ್ತುಗಳು ಈಗಭೂಮಿಯಂ ಪೊಂದಿ ತೇಜೋರಹಿತವಾಗಿ ಸಮುದ್ರಮಥನಸಮಯದೊಳ್ ಕ್ಷೀರ ಸಾಗರಜಲದಲ್ಲಿ ಮಜ್ಜನಂಗೈದು,ಭೂಸ್ಪರ್ಶದೋಷದಿಂವಿಮುಕ್ತಗಳಾಗಿ ಪೂರ್ವದಂತೆ ಮಹಾ ಮಹಿಮೆಯಿಂದ ಸಮೇತವಾಗಿ ದೇವಲೋಕವಂ ಸೈದುವವು,ಮತ್ತು ನಿನಗೆ ಕುಮಾರಕಭಾವದಲ್ಲಿರುವ ಸುಗಂಧರಾಜನ ಬಳಿಗೆ ಇನ್ನುಕೆಲವು ಕಾಲದಮೇಲೆ ನಮ್ಮ ಪೂರ್ವೀಕರಾದ ಮಹರ್ಷಿಗಳು ಬಂದು ದೇವಕಾರ್ಯವಂ ತಿಳುಹಿಸಿ ಪತ್ನೀಸಮೇತನಾದ ಸುಗಂಧರಾಜನಂ ಕರದುಕೊಂಡು ತೆರಳುವರು, ಇದು ದೇವ ರಹಸ್ಯವು,ಎಂದುನುಡಿಯಲು, ಅದಂಕೇಳಿದ ರಾಯನು ಸ್ವಾಮಿಯೆ ! ಅಮೃತಾವಿರ್ಭಾವಕಥೆಯು ಪುರಾಣಪ್ರಸಿದ್ಧವಾದುದರಿಂದ ಮುಂದೆ ಅಮೃತಪ್ರಾಪ್ತಿಯುಂ ದವೆ.ಆಶ್ಚರ್ಯತೋರುವದೆನಲು, ಐಯ್ಯಾರಾಜನೆ ! ಜಗತ್ಸೃಷ್ಟಿ

ಯು ಅನಾದಿಸಿದ್ಧವು, ಪ್ರಳಯಗಳು ಹಾಗೆ ಆಗುವವು, ಈಗವಿದ್ಯಮಾನ ಕಾಲದ ಸೃಷ್ಟಿಕರ್ತನಾದ ಬ್ರಹ್ಮದೇವನಿಗಿಂತಲೂ ಪೂರ್ವಕಲ್ಪದ ಬ್ರಹ್ಮದೇವರ ಸೃಷ್ಟಿಯಲ್ಲಿ ನಡೆದಿರುವ ಅಮೃತಾವಿರ್ಭಾವವಂ ಪುರಾಣಗಳು ಹೇಳುವದರಿಂದ ಮುಂದೆ ಆಗುವ ಅಮೃತಾವಿರ್ಭಾವವಂ ಸಹ ಹೇಳಿದಂತಾಯಿತು, ಹಾಗೆ ಪುರಾಣಂಗಳು ಅನಾದಿಸಿದ್ಧಗಳು, ಇದರಿಂದ ಕಲ್ಪಾಂತರಗಳಿಗೆ ವಿರೋಧವಿಲ್ಲ, ಎಂದು ಹೇಳುತ್ತಿರಲು, ಆಮಾತಿಗೆ ಮಹಾಪ್ರಸಾದವೆಂದು ನುಡಿದು ಮಹಾನುಭಾವರೇ! ದೇವತೆಗಳು ಬಲಹೀನರಾಗಿ ದೈತ್ಯರು ಸ್ವರ್ಗವನ್ನಾಕ್ರಮಿಸಿದರೆಂದು ಹೇಳಿದಮಾತಿಗೆ ದೇವಾಂಶ ಪುರುಷನಾದ ಈ ಸುಗಂಧರಾಜನು ದೇವಾಂಶಪುರುಷನಾದ್ದರಿಂದ ಹಾಗೆ ತೇಜೋಬಲಹೀನನಾಗಿ ಇರುವನೋ? ಮತ್ತೇನಾದರೂ ಈಗಕಾರಣಾಂತರಗಳುಂಟೋ? ಇದು ತಿಳಿಯಲೋಸುಗ ತಮ್ಮಚರಣಗಳಂ ಸ್ಮರಿಸಿ ಪ್ರಾರ್ಥಿಸಿದೆನು, ಎಂದು ಸುಚರಿತ್ರರಾಜನು ನುಡಿಯುತ್ತಿರಲು, ಅಯ್ಯಾ ರಾಯನೆ! ನೀನುಸ್ಮರಿಸಿದುದಕ್ಕೆ ನಿಮಿತ್ತ ತಿಳಿಯಲಾಯಿತು, ದೇವತೆಗಳು ಬಲಹೀನರಾದುದರಿಂದಲೆ ಭೂಲೋಕವನ್ನು ಹೊಂದಿರುವರು, ಹಾಗೆ ನಿನ್ನಕುಮಾರಕನಾದ ಸುಗಂಧರಾಜೇಂದ್ರನು ಅವತರಿಸಿರುವನು, ಈಗವಿಶೇಷವಾಗಿ ಲಬ್ಧನಾದಮಂತ್ರರಹಸ್ಯಂಗಳು ವಿಸ್ಮೃತವಾಗಿ ತೇಜಸ್ಸಿಗೆ ನ್ಯೂನತೆ ಉಂಟಾಗುವದಕ್ಕೆ ನಿಮಿತ್ತವೇನೆಂದರೆ:— ಲೋಕದಲ್ಲಿ ವ್ಯಾಘ್ರನಾಶಕ್ಕೋಸುಗ ಮಹಾಅರಣ್ಯವಂ ದಹಿಸುವಂತೆ ಅಗ್ನಿಯಂ ಹತ್ತಿಸಿದರೆ ಅದರಮೂಲಕದಿಂದ ಆ ರಣ್ಯದಲ್ಲಿ ವಾಸವಂ ಗೈಯುವ ಬಹುಪ್ರಾಣಿಗಳು ನಷ್ಟವಾಗುವಂತೆ ಭೂಲೋಕವನ್ನಾಕ್ರಮಿಸಿಬಂದ ರಾಕ್ಷಸಾಧಿಪತಿಗಳಂ ಸಂಹರಿಸಲೋಸುಗ ಸುಗಂಧರಾಜೇಂದ್ರನು ಪ್ರಯೋಗಿಸಿದ ಮಹಾಸ್ತ್ರಜ್ವಾಲೆಗಳಿಂದ ಅನೇಕ ಪ್ರಾಣಿಗಳು ದಗ್ಧವಾದುದರಿಂದ ಆದೋಷವು ಸುಗಂಧರಾಜೇಂದ್ರನಂ ಬಳಸಿದುದರಿಂದ ಮಂತ್ರಗಳು ವಿಸ್ಮೃತಂಗಳಾಗಿ ತೇಜಸ್ಸಿಗೆ ನ್ಯೂನತೆಯು ಉಂಟಾಯಿತೆನಲು, ಆಮಾತಿಗೆ ರಾಯನು ದುಷ್ಟರಂ ನಿಗ್ರಹಿಸಿದರೆ ತೇಜಸ್ಸಿಗೆ ನ್ಯೂನತೆಬರುವದುಂಟೆ? ಎಂದುಕೇಳಲು ಅಯ್ಯಾ ರಾಯನೆ! ಲೋಕದಲ್ಲಿ ಪ್ರಭುವಾದವರಿಗೆ ಕಾರ್ಯಸಾಧಕರಾದ ಮಿತ್ರರೂ ಉಂಟು, ಅವರಂ ಹೊಂದಿ ಉಪಜೀವಿಸಿಕೊಂಡಿರುವರೂ ಉಂಟು, ಇದರಲ್ಲಿ ಸೇವಕರೂ

ಉಂಟು, ತಟಸ್ಥರಾಗಿ ಜೀವಿಸುವರೂ ಉಂಟು, ನಿರಪರಾಧಿಗಳಾದ ಪ್ರಜೆಗ
ಳಿರುವರು ಶತ್ರುಸಂಹಾರಕ್ಕೆ ಪ್ರಯೋಗಿಸಿದ ಅಸ್ತ್ರಜ್ವಾಲೆಯು ಪ್ರ
ಜಾ ಪಶುಸಮೇತವಾದ ಶತ್ರುಪುರಗಳಂ ದಹಿಸಿದುದರಿಂದ ನಿರಪರಾಧಿಗಳೂ ಸ
ಹ ನಷ್ಟರಾದರು, ಅದೇ ದೋಷವೆಂದೆನಲು, ಮುನಿವರ್ಯರೆ! ಈ ದೋಷತೊಲ
ಗಿ ತೇಜೋವೃದ್ಧಿ ಉಂಟಾಗುವದಕ್ಕೆ ಮತ್ತೇನಾದರೂ ಉಪಾಯ ಉಂ
ಟೋ? ಎನಲು ಅಯ್ಯಾ ರಾಜನೆ! ಸುಗಂಧರಾಜನು ಮಹಾ ಕಾರ್ಯೋ
ದ್ಯೋಗವಂ ಮಾಡಿ ಬಹು ಸುಕೃತಕ್ಕೆ ಪಾತ್ರನಾದರೂ ತನಗೆ ಜ್ಞಾತವಾ
ಗದೆ ಸಂಭವಿಸಿದ ದೋಷವಂ ಪರಿಹರಿಸಿಕೊಳ್ಳುವದಕ್ಕೋಸುಗ ಷೋಡಶ
ಮಹಾದಾನ ಮಾತ್ರದಿಂದ ದೋಷಪರಿಹರವಾಗುವದು, ಈ ದಾನಂಗಳು ಈ
ತನ ಔದಾರ್ಯ ಸಂಪತ್ತುಗಳಿಗೆ ವಿಷಯವಲ್ಲವಾದುದರಿಂದಲೂ ಶಕ್ತನಾಗಿ
ಅಧಿಕಾರಿ ಆದುದರಿಂದಲೂ ಅಶ್ವಮೇಧಯಾಗವನ್ನಾಚರಿಸಿ ಇಷ್ಟಪ್ರಾಪ್ತಿ
ಯಂ ಪಡೆಯಬೇಕಾಯಿತು, ಇದರಿಂ ಮೊದಲಿಗಿಂತಾ ಅಧಿಕವಾದ ತೇಜೋ
ಬಲಗಳುಂಟಾಗುವವು, ಎಂದು ವಾಮದೇವರು ನುಡಿಯುತ್ತಿರಲು, ಆ ಮಾ
ತಿಗೆ ಸುಚರಿತ್ರರಾಯನು ಮಹಾತ್ಮರೆ! ಈಗ ಅಪ್ಪಣೆ ಪಾಲಿಸಿದ ಅರ್ಥವು
ನಮಗೆ ಶ್ರೇಯಸ್ಕರವೇ ಸರಿ, ಈ ಅರ್ಥಕ್ಕೆ ನಿಮ್ಮ ವಚನದಿಂದಲೇ ಸುಗಂ
ಧರಾಯಗೆ ಅಪ್ಪಣೆ ಪಾಲಿಸಬೇಕೆನಲು, ಒಳ್ಳೇದೆಂದು ಸುಗಂಧರಾಜೇಂ
ದ್ರನಂ ಕರೆಯಕಳುಹಿ ಆತನಂ ಕುರಿತು ಅಯ್ಯಾ ಯದುವಂಶ ಕುಲತಿಲಕ
ನೇ! ದೇವಾಂಶ ಸಂಭೂತನಾದ ನಿನ್ನಿಂದ ಲೋಕಕಂಟಕರಾದ ರಾಕ್ಷಸರು
ನಷ್ಟರಾಗಿ ಮಹಾಯಶಸ್ಸು ನಿನಗೆ ಉಂಟಾಯಿತು, ಮತ್ತು ನಿನ್ನ ಉ
ದಾರತ್ವದಿಂದ ಅಧಿಕ ಯಶಸ್ಸುಂಟಾಗುವ ಬಗ್ಯೆ ಸಮರ್ಥನಾದುದರಿಂದ
ನೀನು ಅಶ್ವಮೇಧ ಕ್ರತುವಂ ಮಾಡುವದು ಯುಕ್ತವಾಗಿ ತೋರುತಲಿದೆ,
ರಾಕ್ಷಸ ಸಂಹಾರದಿಂದ ದೇವತೆಗಳು ಸಂತುಷ್ಟರಾದರೂ ಮತ್ತೂ ಕ್ರತು
ಮುಖದಿಂದ ಸಂತೋಷವಂ ಮಾಡುವನಾಗು, ನಿಮ್ಮ ತಂದೆಯು ನಿನ್ನಿಂದ
ಅಶ್ವಮೇಧ ಕ್ರತು ಆಗುವದಂ ನೋಡಲಪೇಕ್ಷಿಸಿ ಇರುವನು ಎಂದು ಹೇಳು
ತ್ತಿರಲು, ಆ ಮಾತಿಗೆ ಸುಗಂಧಮಹಾರಾಯನು ಮಹಾತ್ಮರೆ! ಶ್ರೇಯಸ್ಕ
ರವಾದ ಕ್ರತುನಿಮಿತ್ತ ತಮ್ಮ ಅನುಜ್ಞೆಯಾದ ಬಳಿಕ ಇದಕ್ಕಿಂತಲೂ ಅ
ವಶ್ಯಕವಿನ್ನಾವದಿರುವದು, ನಮ್ಮ ಅಪ್ಪಾಜಿಯವರ ಚಿತ್ತದಲ್ಲಿ ಈ ಅಭಿ

ಲಾಷೆ ಇದ್ದ ಬಳಿಕ ತನ್ನ ಸನ್ನಿಧಾನದಲ್ಲಿಯೇ ಆಗುವಂತೆ ಮಾಡಿಸಬೇಕು ಎಂದು ನುಡಿಯುತ್ತಿರಲು, ಅಯ್ಯಾ ಕುಮಾರಕನೆ ! ನಮಗಿಂತಲೂ ಅಧಿಕನಾಗಿ ಯಜುಶ್ಶಾಖಾಸೂತ್ರ ಕರ್ತನಾದ ನಮ್ಮ ಸತ್ಯಾಷಾಢಋಷಿಯು ನಿನ್ನ ಬಳಿಯಲ್ಲಿರುತ ಕ್ರತುವಂ ಮಾಡಿಸುವನು, ಈತನು ಹೇಳಿದಂತೆ ನಡೆದುಕೊಳ್ಳುವದು ಎಂದು ಹೇಳಿ ಅಯ್ಯಾ ಸತ್ಯಾಷಾಢಋಷಿಯೇ! ಸುಗಂಧರಾಜೇಂದ್ರನ ಇಷ್ಟಾರ್ಥ ಸಿದ್ಧಿಗೋಸುಗ ಇಲ್ಲಿರುವನಾಗಿ ಮಹಾಕ್ರತುವಂ ನೆರವೇರಿಸಿದ ಬಳಿಕ ಆಶ್ರಮಕ್ಕೆ ಬರುವನಾಗು ಎಂದು ಹೇಳಲು, ಆತನು ಮಹಾಪ್ರಸಾದವೆನಲು, ಸುಚರಿತ್ರರಾಯನಂ ನೋಡಿ ಅಯ್ಯಾ ರಾಯನೆ! ಸುಗಂಧರಾಜೇಂದ್ರನು ಮಾಡುವ ಮಹಾಕ್ರತುವು ನಿರ್ವಿಘ್ನದಿಂ ನಾಗುವದರಿಂದ ಮೊದಲಿಗಿಂತ ಅಧಿಕವಾದ ತೇಜೋವಿಶೇಷವುಂಟಾಗಿ ತ್ರಿಲೋಕ ವಿಖ್ಯಾತನಾಗುವನು, ಈತನಕುಮಾರಕನು ಸಹ ಯಶೋವಂತನಾಗುವನು, ನಿಮ್ಮ ಮನೋರಥವೆಲ್ಲವು ಸಫಲವಾಗುವದು, ನಾವು ಆಶ್ರಮಮಂ ಕುರಿತು ತೆರಳುವದಕ್ಕೆ ಅನುಮತನಾಗು ಎಂದು ಹೇಳುತ್ತಿರಲು, ಮಹಾತ್ಮರೆ! ಕುಮಾರಕನು ಯಶೋವಂತನಾಗಿ ಸಕಲಶತ್ರುಗಳಂ ಜಯಿಸಿ ರಾಜ್ಯಭಾರವನ್ನೆಲ್ಲವಂ ನಿರ್ವಹಿಸುವದನ್ನೋಡಿದಬಳಿಕ ನನಗೆ ಮತ್ತಾವ ಮನೋರಥವಿರುವದು, ಸಕಲಭೋಗಂಗಳು ಅನುಭೂತವಾಗಿ ಎಲ್ಲದರಲ್ಲಿಯು ವಿರಸವುಂಟಾಗಿ ಮಹಾತ್ಮರಪಾದಗಳಂ ಸೇವಿಸುತ ವಾನಪ್ರಸ್ಥನಾಗಿ ಕೃತಾರ್ಥನಾಗಬೇಕೆಂದು ಅಪೇಕ್ಷಿಸಿ ಇರುವೆನು, ಇನ್ನು ಮೇಲೆಯು ಈ ಸಂಸಾರದಲ್ಲಿ ಮಗ್ನನಾಗಿ ಇದ್ದರೆ ಎಂದಿಗೆ ಕಡೆಹಾಯಬೇಕು, ತಮ್ಮ ಪಾದಸೇವೆಯಂ ಮಾಡುತ ಸಂಗಡಲೆ ಆಶ್ರಮಕ್ಕೆ ಬರುವೆನು ಸಮ್ಮತಿಸಬೇಕು ಎಂದು ಪ್ರಾರ್ಥಿಸಲು ಅಯ್ಯಾರಾಯನೆ! ನೀನು ಸದ್ಗತಿಪ್ರದವಾದ ಸಕಲ ಪುಣ್ಯಕರ್ಮಗಳನ್ನಾಚರಿಸಿಯೇ ಇರುವೆ, ಮನೋನೈರ್ಮಲ್ಯ ಉಂಟಾದವನಿಗೆ ಎಲ್ಲಿ ಇದ್ದರೂ ಮುಕ್ತಿಯು ಕರಸ್ಥವಾಗಿರುವದು, ಅರಣ್ಯದಲ್ಲಿ ನಾಗರಿಕರಿಗೆ ಶೀತೋಷ್ಣಾದಿ ದುಃಖಂಗಳು ಅಸಹ್ಯಂಗಳಾಗಿರುವವು, ವಾನಪ್ರಸ್ಥಾಶ್ರಮಾಚರಣೆಯು ಬಹು ಶ್ರಮಸಾಧ್ಯವಾಗಿರುವದು, ಸ್ತ್ರೀಜನರಂ ಕ್ಲೇಶಪಡಿಸದೆ ಕುಮಾರಕನಿಗೆ ವ್ಯಸನವಂ ಕಲ್ಪಿಸದೆ ಆತನ ಅಭ್ಯುದಯವನ್ನೋಡುತ ಸತ್ಕಾಲಕ್ಷೇಪದಿಂದ ಕಾಲವಂ ಕಳೆಯುವನಾಗು ಎನಲು

ಮಹಾತ್ಮರೆ ! ತಮ್ಮ ಸನ್ನಿಧಾನ ವಿಶೇಷದಿಂ ಲಬ್ಧವಾಗುವ ಶ್ರೇಯಸ್ಸಿಗಿಂತಲೂ ಯಾವಸತ್ಕಾಲಕ್ಷೇಪವು ಮುಕ್ತಿಪ್ರದವಾಗುವದು, ನಮ್ಮಪೂರ್ವಿಕರು ಆಚರಿಸಿ ಕೃತಾರ್ಥರಾದಂತೆ ನನಗೂ ವಾನಪ್ರಸ್ಥಾಶ್ರಮಕ್ಕೆ ಅನುಜ್ಞೆಯಂ ಪಾಲಿಸಿ ಕೃತಾರ್ಥನಂ ಮಾಡಬೇಕು, ಈ ಮಾತಿಗೆ ಸಮ್ಮತಿಸದಿದ್ದರೆ ಸುಗಂಧರಾಜನು ಪುತ್ರನೆಂತಹನೊ? ಎಂದು ಪಾದಗಳಂ ಹಿಡಿದು ಇರುವರಾಯನಂ ನೋಡಿ ಹಾಗಾದರೆ ನಿನ್ನ ಪುತ್ರನು ಮಾಡುವ ಮಹಾಕ್ರತುವಂ ನೋಡಿ ಸಂತುಷ್ಟನಾದನಬಳಿಕ ನಿನ್ನ ಮನಬಂದಂತೆ ಮಾಡಬಹುದೆಂದು ಹೇಳಿ ಅಯ್ಯಾ ಸತ್ಯಾಷಾಢಿಮಹರ್ಷಿಯೇ ! ಈ ರಾಯನು ವಾನಪ್ರಸ್ಥನಾಗಬೇಕೆಂದು ಎಣಿಸಿರುವನಷ್ಟೆ, ಅಶ್ವಮೇಧಾನಂತರದಲ್ಲಿ ಈ ರಾಯನು ಸ್ತ್ರೀಜನ ಸಮೇತನಾಗಿ ಹೊರಟರೂಸರಿ, ಪೂರ್ವನೇ ಬಂದರೂ ಬರಬಹುದು, ಮಾರ್ಗಾಯಾಸವಿಲ್ಲದಂತೆ ಬಯಸಿದ ತೀರ್ಥಕ್ಷೇತ್ರಂಗಳಂ ತೋರಿಸುತ ಸಾವಧಾನದಿಂದ ಹೊರಟು ಹಿಮಾಚಲದ ಸಿದ್ಧಾಶ್ರಮದ ಪ್ರಾಂತ್ಯಕ್ಕೆ ಬರತಕ್ಕದ್ದು ಎಂದು ಹೇಳಿ ಸುಗಂಧರಾಜೇಂದ್ರನಂ ನೋಡಿ ಅಯ್ಯಾ ಕುಮಾರಕನೇ! ನಿಮ್ಮ ತಂದೆಯು ತಮ್ಮ ಪೂರ್ವಿಕರಂತೆ ವಾನಪ್ರಸ್ಥನಾಗಲೆಣಿಸಿ ನಮ್ಮ ನಿರ್ಬಂಧದಿಂದ ಅಶ್ವಮೇಧಾವಭೃತದವರಿಗೂ ಇಲ್ಲಿ ಇರುವನು, ಆಬಳಿಕ ಈತನು ನಮ್ಮ ಆಶ್ರಮಾಭಿಮುಖನಾದರೆ ನಿಲ್ಲಿಸಿಕೊಳ್ಳುವದಕ್ಕೆ ವಿಶೇಷ ನಿರ್ಬಂಧಪಡಿಸಲಾಗದು, ಆದರೂ ನಿಲ್ಲತಕ್ಕವನಲ್ಲ, ನೀನು ಶ್ರೇಯೋವಂತನಾಗಿ ಇರುವನಾಗು, ನಾವು ಆಶ್ರಮವಂ ಕುರಿತು ತೆರಳುವೆವು ಎಂದು ಹೇಳುತ್ತಿರುವಸಮಯದಲ್ಲಿ ರಾಜಾನುಮತಿಯಿಂದ ಗುಣವತಿ ಸೌಗಂಧಿಕಾದೇವಿ ಮುಖ್ಯರಾದ ರಾಜಸ್ತ್ರೀಯರುಗಳು ಬಂದು ಮಹಾಋಷಿಗಳಿಗೆ ಅಭಿವಂದಿಸಿ ಪಾದಪೂಜೆಯಂ ಮಾಡಿ ಪಾದತೀರ್ಥವಂ ಸೇವಿಸುತ್ತಿರಲು, ಗುಣವತೀದೇವಿಯು ರತ್ನತಾಟಂಕಗಳಂ ಮುತ್ತಿನಹಾರವಂ ಪ್ರಸ್ಕಣ್ವಮುನಿಯ ವಶವಂ ಮಾಡಿ ಋಷಿಪತ್ನೀಯರಿಗೆ ಇದಂ ನಾನು ಸಮರ್ಪಿಸಿದೆನೆಂದು ಹೇಳಲು, ಅದೇರೀತಿಯಲ್ಲಿ ಸೌಗಂಧಿಕಾದೇವಿಯು ಅನರ್ಘ್ಯರತ್ನಾಭರಣಗಳನೆಲ್ಲವಂ ವಾಮದೇವಶಿಷ್ಯರಾದ ಪ್ರಸ್ಕಣ್ವಮುನಿಯಾ ವಶವಂ ಮಾಡಿ ಋಷಿಪತ್ನೀಯರಿಗೆ ತಲುಪಿಸುವದೆಂದು ಹೇಳಲು, ಎಲ್ಲರೂ ಮಹಾಋಷಿಗಳಿಗೆ ಅಭಿನಮಿಸುತ್ತಿರಲು ಎಲ್ಲರಂ ನೋಡಿ ಶ್ರೇಯೋಭಿವೃದ್ಧಿ

ಆಗಲೆಂದು ಆಶೀರ್ವಚನವಂಮಾಡಿ ಪ್ರಸ್ಥಾನಸಮೇತರಾಗಿ ವಾಸುದೇವರು ನಾಲ್ಕೆಂಟು ಹೆಜ್ಜೆ[illegible] ಮುಂದೆನಡೆದು ಅಂತರ್ಧಾನವನ್ನೈದಲು, ಎಲ್ಲರೂ ಇದಕ್ಕೆ ಆಶ್ಚರ್ಯಪಡುತ ಯಥಾಸ್ಥಾನವನ್ನೈದುತ್ತಿರಲು,

ಆ ಮಾರನೆದಿವಸ ಸುಗಂಧರಾಜೇಂದ್ರನು ಅಧಿಕಾರಿಗಳಂಕರೆದು ಅಶ್ವಮೇಧಯಾಗಕ್ಕೆ ಬೇಕಾದಷ್ಟು ಸರ್ವಸಾಮಗ್ರಿಗಳಂ ಒದಗಿಸಿ, ಕಾವೇರೀತೀರದಲ್ಲಿ ಶಾಲಾನಿರ್ಮಾಣವಾಗಲಿ,ಬಂದವರಿಗೆಲ್ಲಾ ಬಿಡಾರಸಿದ್ಧವಾಗಲಿ ಎಂದುನೇಮಿಸಲು, ಅವರು ಮಹಾಪ್ರಸಾದವೆಂದು ಪುರದಲ್ಲಿಯು ದೇಶಗಳಲ್ಲಿಯು ವಾದ್ಯಘೋಷಸಮೇತವಾಗಿ ಸಾರಿಸಿ ಕಾವೇರೀತೀರದಲ್ಲಿ ಒಂದು ಯೋಜನಾಯತಮಾದಶಾಲೆಯಂ, ಅದರಮಧ್ಯಭಾಗದಲ್ಲಿ ಪ್ರಾಗ್ವಂಶಶಾಲೆಯಂ, ಪತ್ನೀಶಾಲೆಯಂ ಸದಸ್ಯಸ್ಥಾನಗಳಂ ನಾಲ್ಕುದಿಕ್ಕಿನಲ್ಲಿ ನಾಲ್ಕುವರ್ಣದವರು ಕುಳ್ಳಿರುವದಕ್ಕೆ ನಾಲ್ಕುಸಭೆಗಳನ್ನುಂಟುಮಾಡಿ, ಋಷಿಗಳು ಇಳಿಯುವದಕ್ಕೆ ಶಾಲೆಗಳಂನಿರ್ಮಿಸಿ, ಅದರಹೊರವಲಯದಲ್ಲಿ ಬ್ರಾಹ್ಮಣಭೋಜನಶಾಲೆಯಂ ಕಲ್ಪಿಸಿ, ಸಹಸ್ರೋಪಸಹಸ್ರ ರಾಜಯೋಗ್ಯಂಗಳಾದ ಬಿಡಾರಂಗಳನ್ನುಂಟುಮಾಡಿ, ಎಲ್ಲಾಕಡೆಯಲ್ಲಿಯೂ ನಿರಾಜಿಯ ಕಾರುಜುಮೇಲ್ಕಟ್ಟು,ಮುತ್ತಿನತೋರಣ, ಕದಳೀಸ್ತಂಭ,ಪುಷ್ಪಮಾಲಿಕಾನಿಕರಗಳಿಂದಲಂಕರಿಸಿ, ಪರಿಮಳ ಧೂಪ ದೀಪದಿಂ ಸುವಾಸನೆಯನ್ನುಂಟುಮಾಡಿ, ಕಾಲ್ವೆಕಾರಂಜೆಗಳನ್ನು ಅಲ್ಲಲ್ಲಿ ಉಂಟುಮಾಡಿ ಎಲ್ಲಾಕಡೆಯಲ್ಲಿಯೂ ನ್ಯೂನತೆಯಿಲ್ಲದಂತೆ ಸಕಲವಸ್ತುಗಳಂ ಸಮೃದ್ಧಿಗೊಳಿಸಿ, ಮತ್ತೆ ಎರಡನೆ ಅಮರಾವತಿಯೊ?ಎಂಬಂತೆ ಪುರವನೆಲ್ಲವಂ ಶೃಂಗರಿಸಿ, ರಾಜಮಾರ್ಗಗಳಂ ಸಮಗೊಳಿಸಿ, ಸಾಲುತೋಪು, ಅರವಟ್ಟಿಗೆಕಟ್ಟೆ, ಕಾಲ್ವೆ, ಕೆರೆ, ಭಾವಿ, ಕೂಪಾರಾಮ, ಅನ್ನಸತ್ರಗಳಿಂ ಶೋಭಿಸುವಂತೆಮಾಡಿ,ಅಲ್ಲಲ್ಲಿ ಪಾಚಕ ಪರಿಚಾರಕ ಸೇವಕರಂನೇಮಿಸಿ,ಈ ಅರ್ಥವಂ ಅಧಿಕಾರಿಗಳು ಸುಗಂಧರಾಜೇಂದ್ರಂಗೆ ತಿಳುಹಿಸಲು, ಆಗ ರಾಯನು ಬ್ರಾಹ್ಮಣಸಂತರ್ಪಣೆಯಂಮಾಡಿಸುವಂತೆ ಸುಬುದ್ಧಿಗೆನೇಮಿಸಿ,ಅರಸುಗಳಂಯೆದುರ್ಗೊಂಡು ಸತ್ಕಾರಗೊಳಿಸುವಂತೆ ಸುಮತಿಗೆ ಆಜ್ಞಾಪಿಸಿ, ಮಾನಶಾಲಿಗಳಾದವರಂಬಹುಮಾನಗೊಳಿಸುವಂತೆ ಸುಷೇಣನೆಂಬಅಧಿಕಾರಿಗೆ ನೇಮಿಸಿ, ರಾಜಪತ್ನೀಯರುಗಳಂ ಸನ್ಮಾನಿಸುವಂತೆ ಕುಸುಮಲತೆಗೆ ಕಟ್ಟುಮಾಡಿಸಿ,ಬ್ರಾಹ್ಮ

ಣಸ್ತ್ರೀಯರುಗಳಂ ಪೂಜಿಸಿ, ವಿಚಾರಿಸುವಂತೆ ಸೌಗಂಧಿಕಾದೇವಿಗೆ ಒಪ್ಪಿಸಿ ಯನ್ನಿತ್ತು ಯಾವದರಲ್ಲಿಯೂ ನ್ಯೂನತೆ ಬಾರದಂತೆ ನಡಮುಕೊಳ್ಳುವದೆಂದು ಆಯಾಯ ಅಧಿಕಾರಿಗಳಿಗೆ ಆಜ್ಞಾಪಿಸಿ, ಋಷಿಗಳಂ ಪೂಜಿಸುವಂತೆ ಪುರೋಹಿತಂಗೆ ಹೇಳಿ ತನ್ನ ಹತ್ತು ಲಕ್ಷ ಉತ್ತಮಾಶ್ವಂಗಳಂ ತರಿಸಿನೋಡಿ, ಅವರಲ್ಲಿ ಹತ್ತು ಅತ್ಯುತ್ತಮಾಶ್ವಂಗಳಂ ತೆಗದು ಸತ್ಯಾಷಾಢಋಷಿಗಳ ಮುಂದೆ ತಂದು ನಿಲ್ಲಿಸಲು, ಅವರು ಅದೆಲ್ಲವಂ ನೋಡಿ ಅದರಲ್ಲಿ ಶುದ್ಧಸ್ಫಟಿಕ ಸಮೃಶವಾಗಿ ಶ್ಯಾಮೈಕಕರ್ಣದಿಂದಲೂ, ಸುಲಕ್ಷಣಗಳಿಂದಲೂ ಒಪ್ಪುತ ಗುಣರೂಪದಿಂದ ಸಮೃಶವಾದ ಒಂದು ಅಶ್ವರತ್ನಮಂ ತೆಗದು ಇದು ಯಾಗ ಯೋಗ್ಯವೆಂದು ಹೇಳಲು, ಅದಂ ಪಂಚಾಮೃತಾದಿಗಳಿಂದ ಅಭಿಷೇಕವಂ ಮಾಡಿ ರತ್ನಮಯವಾದ ಆಭರಣಗಳಿಂದಲಂಕರಿಸಿ, ಪೂಜಿಸಿ, ಸುಮುಹೂರ್ತದಲ್ಲಿ ಸುಗಂಧರಾಜೇಂದ್ರನು ಸಕಲವೈಭವದಿಂದ ಹೊರಟು ಪತ್ನೀಸಮೇತನಾಗಿ ಶಾಲಾಪ್ರವೇಶವಂ ಮಾಡಿ, ಶುಚಿರ್ಭೂತನಾಗಿ ಸ್ವಸ್ತಿವಾಚನ ನಾಂದೀಪೂಜೆಯಂ ನೆರವೇರಿಸಿ, ಮಾತಾ, ಪಿತೃ, ಗುರು, ಆಚಾರ್ಯಾದಿಗಳಂ ಪೂಜಿಸಿ, ಎಲ್ಲರ ಅನುಮತಿಯಿಂದ ಯಾಗಸಂಕಲ್ಪವಂ ಮಾಡಿ, ವಿದ್ಯುಕ್ತಪ್ರಕಾರದಿಂದ ಕ್ರತುದೀಕ್ಷೆಯನ್ನಂಗೀಕರಿಸಿ ಪೂರ್ವಾಂಗ ಹೋಮವಂ ಮಾಡಿ ಸುವರ್ಣ ನಿರ್ಮಿತವಾದ ಪಟ್ಟಿಯೊಳು ಸ್ವಸ್ತಿಶ್ರೀಮಹಾರಾಜಾಧಿರಾಜ ಬಿರುದೆಂತೆಂಬರ ಗಂಡಲೋಕೈಕವೀರ ಯದುಕುಲ ಪಯಃಪಾರಾವಾರ ಕಲಾನಿಧಿ ಮುಲತರಾಜ ಗಜಕಂಠೀರವ ಶರಣಾಗತ ಚಿಂತಾಮಣಿ ಕರ್ನಾಟಕ ಮಹಾಶಾಧೀಶ್ವರ ರತ್ನಪುರವರಾಧಿಪತಿ ಸುಚರಿತ್ರರಾಜ ತನೂಭವ ರಾಕ್ಷಸವನದಾವಾನಲ ಧರಣೀದೇವೇಂದ್ರ ಸುಗಂಧರಾಜೇಂದ್ರ ಮಹಾರಾಜರುಮಾಡುವ ಮಹಾಕ್ರತುವಿಗೆ ಮುಖ್ಯಾಂಗವಾದ ಅಶ್ವರತ್ನವು ಭೂಪ್ರದಕ್ಷಿಣಾರ್ಥವಾಗಿ ಬಂದಿರುವದರಿಂದ ಸಕಲ ದೇಶಾಧಿಪತಿಗಳು ಯದುಗೊಂಡು ಬಂದು ಇದಂ ಪೂಜಿಸಿ, ಕಪ್ಪಕಾಣಿಕೆಗಳಂ ಒಪ್ಪಿಸಿ, ಸೇನಾಸಮೇತನಾಗಿ ಅಶ್ವದ ಹಿಂಭಾಗದಲ್ಲಿ ಬರುತ್ತಿರುವ ಚಿರಂಜೀವಿಯಾದ ಮಕರಂದರಾಯ ಪುಷ್ಪದಂತರ ನಶವರ್ತಿಗಳಾಗಿ ನಿಮ್ಮ ಪರಿವಾರ ಸಮೇತರಾಗಿ ತೆರಳುತ ಬರತಕ್ಕದ್ದೆಂದು ವಕ್ಕಣೆಯಂ ಬರದು ಪೂಜಿಸಿ ಆ ಸ್ವರ್ಣಪಟ್ಟಿಯಂ ಅಶ್ವದ ಫಾಲದೇಶದೊಳ್ ಕಟ್ಟಿ, ಅಶ್ವವು ಇಚ್ಛೆಯಿಟ್ಟ ಬಳಿಯಲ್ಲಿ ಹೋ

ಮುವಂ ಮಾಡುವದಕ್ಕೆ ಋತ್ವಿಜರಂ ನೇಮಿಸಿ, ಮಕರಂದ ಪ್ರದ್ಯುಮ್ನದಂತರಿಂ
ಬ ಕಾರ್ಷ್ಣಿಕುಮಾರಕರಂ ಕರದು ಎಲೈ ಆಯುಷ್ಮಂತರಿರ! ಯಾಗಕ್ಕೆ ಮು
ಖ್ಯಾಂಗವಾದ ಈ ಅಶ್ವದಹಿಂಭಾಗದಲ್ಲಿ ಬಹು ಸೇನಾಸಮೇತನಾದ ವೀರ
ಸೇನನೊಡಗೂಡಿ ತೆರಳುತ ಅಹೋರಾತ್ರಿಗಳಲ್ಲಿ ಅತಿಜಾಗ್ರತೆಯಿಂದ ನೀ
ವಿರ್ವರು ಐಕಮತ್ಯದಿಂದ ಅಶ್ವರತ್ನವಂ ರಕ್ಷಿಸುತ, ಅಶ್ವಮಾರ್ಗದೊಳ್
ನಿರೋಧವಂ ಮಾಡುವರಂ ದಂಡಿಸುತ, ದೇಶಾಧಿಪತಿಗಳಿಂ ಬಹುಧನರತ್ನಂಗ
ಳಂ ತೆಗದು ಯಾಗಕ್ಕೆ ಕಳುಹಿಸುತ, ಅಶ್ವದಮಾರ್ಗಗಳಲ್ಲಿ ಕೆರೆ ಕಟ್ಟೆ
ಅಗ್ರಹಾರಗಳಂ ಮಾಡಿಸುತ, ಒಂದು ಸಂವತ್ಸರ ಪರ್ಯಂತವು ಪರರಾ
ಜ್ಯದೇಶವಂಬಳಸಿ ಬಂದು ಯಜ್ಞಕಾಲಕೆಯುಂ ಕುರಿತುಬರತಕ್ಕದ್ದು ಎಂದು
ನೇಮಿಸಲು, ಅವರು ಮಹಾಪ್ರಸಾದವೆಂದು ತಂದೆಯ ಅಡಿಗಳಿಗೆ ಪ್ರಣಾ
ಮವಂಗೈದು ಸಕಲ ಸೇನಾಸಮೇತರಾಗಿ ಅಶ್ವರತ್ನದ ಹಿಂಭಾಗದಲ್ಲಿ ಹೊ
ರಡುತ್ತಿರಲು, ಆಗ ಪ್ರಯಾಣಸೂಚಕನಾದ ಭೇರೀ ನಿಸ್ಸಾಣಾದಿವಾದ್ಯ
ಧ್ವನಿಗಳು ಕುಲಾಚಲ ಬಿದರುವಂತೆ, ಭೂಮಿಯು ಚಲಿಸುವಂತೆ, ಪರರಾ
ಯರ ಎದೆ ಇಬ್ಬಗಿಸುವಂತೆ, ಭೈರವನ ಅಟ್ಟಹಾಸವಂ ತಿರಸ್ಕರಿಸುವಂತೆ,
ಭೂಮ್ಯಂತರಿಕ್ಷಂಗಳಂ ವ್ಯಾಪಿಸುತ್ತಿರಲು, ಭೂತಸಂಘವು ಬೆದರಿ ಮುಹೂ
ರ್ತಮಾತ್ರ ಶಬ್ಧನಾಗಲು ಸಮುದ್ರತರಂಗ ಮಾಲೆಗಳಂತೆ ತುರಗ ಪಂ
ಕ್ತಿಗಳು,ಅವರಪಾರ್ಶ್ವಗಳಲ್ಲಿ ಮದಗಜಗಳ ತಂಡೋಪತಂಡಗಳು, ಅವರ
ಹಿಂಭಾಗದಲ್ಲಿ ಲಕ್ಷೋಪಲಕ್ಷರಥಗಳ ಸಾಲುಗಳು,ಎಲ್ಲಾ ಕಡೆಯಲ್ಲೂ ಅಸಂ
ಖ್ಯಾತನಾದ ಪದಾತಿವರ್ಗಂಗಳು ತೆರಳುತ್ತಿರಲು, ಸೇನಾಚಲನ ಘಾತ
ದಿಂದೆದ್ದಧೂಳಿಯನಿಕರಂಗಳು ನಭೋಂತರಾಳವಂ ಮುಚ್ಚಿ ಕತ್ತಲೆಗೈಯು
ವಂತೆ,ಅಕಾಲದ ಮಂಜುಕವಿಯುವಂತೆ,ಪ್ರಳಯಾನಲ ಧೂಮರಾಜಿಯೋ
ಎಂಬಂತೆ,ಮುಹೂರ್ತದೊಳ್ ದಿಕ್ಕುಗಳುಕಾಣಿಸದಂತೆ ಮಾಡುತ್ತಿರಲು,
ಪ್ರಯಾಣಾಯಾಸದಿಂ ಶ್ರಮಗೊಂಡ ತುರಗಾವಳಿಗಳ ಕಟವಾಯಿ ನೊರೆ
ಗಳಿಂದಲು, ಮದಗಜಗಂಡಸ್ಥಳಗಳಿಂ ಜಾರುತಿರುವ ಮದೋದಕವೃಷ್ಟಿ
ಯಿಂದಲು ಸೊಂಡಿಲಫೂತ್ಕಾರದಿಂ ಹೊಸಹೊಮ್ಮ ಉದಕಬಿಂದು ಸಮೂ
ಹವೆರ್ದವಲು ಧೂಳುಗಳಡಗಿ ದಿಕ್ಕುಗಳು ನಿರ್ಮಲವಾಗಲು, ಭೂಮಿಯೇ
ಈಗತಾನೆ ತುರಗಾವಳಿಯುಂ ಪ್ರಸವಿಸಿತೋ ಎಂಬಂತೆ ದಿಕ್ಕುಗಳು ಗಜಸ

ಮೂಹವಂ ಉಗುಳುವನ್ತೋ? ಯೆಂಬಂತೆ, ಅಂತರಿಕ್ಷವು ರಥಸಮೂಹವಂ ವರ್ಷಿಸಿತೊ ಯೆಂಬಂತೆ, ಕಾಲವೆ ಪದಾತಿವರ್ಗವಂ ಯೆರಚಿತೋ ಯೆಂಬಂತೆ, ಸೂರ್ಯಾತಪವು ಆಭರಣ ಪ್ರಭಾಮಯವಾಗಿ, ಅಂತರಿಕ್ಷವು ಛತ್ರಮಯವಾಗಿ, ನಭೋಮಂಡಲವು ಪತಾಕಾಮಯವಾಗಿ, ವಾಯುಗಳು ಮದೋದಕಪರಿಮಳಮಯವಾಗಿ, ದಿಕ್ಕುಗಳುಜಯಶಬ್ದಮಯವಾಗಿ ಸೃಷ್ಟಿಯು ರಾಜಪುತ್ರ ನಿಕರಮಯವಾದಂತೆ, ಭೂಮಂಡಲವು ಸೇನಾಕೋಲಾಹಲ ಧ್ವನಿಮಯವಾದಂತೆ ತೋರುತ್ತಿರಲು, ಸೇನಾಸಂಚರಣೆಯಿಂದ ಮಾರ್ಗದ ಹಳ್ಳಗಳು ತಿಟ್ಟುಗಳಾಗಿ ಉನ್ನತಭೂಮಿಗಳು ಸಮವಾಗಿ ವನಗಹನಂಗಳು ವಿರಳವಾಗಿ, ಮಹಾನದಿಗಳು ಕಾಲುಗಡವಾಗಿ ಸಮುದ್ರ ಮೇರೆ ತಪ್ಪಿ ಕೌಚಿದಂತೆ ಪರದೇಶಂಗಳು ಸ್ವಸೇನಾಮಯವಾಗಿ ಶತ್ರುಪ್ರಾಕಾರಂಗಳು ನೆಲಸಮವಾಗಿ, ಏಕಾರ್ಣವವಾದಂತೆ ಜಗಂಗಳು ತೋರುತ್ತಿರಲು, ಈವರ್ತಮಾನಮಂ ಕೇಳಿದೇಶಾಧಿಪತಿಗಳು ಮಹಾಭೀತರಾಗಿ ತಮ್ಮ ಬಳಿಯಲ್ಲಿ ಬಹುಕಾಲದಿಂದಾರ್ಜಿಸಿದ ರತ್ನ ಧನ ವಾಹನಾದಿಗಳಂ ಒದಗಿಸಿಕೊಂಡು, ಎದುರುಗೊಂಡು ಬಂದು ಮಕರಂದರಾಯ, ಪುಷ್ಪದಂತರಂ ಕಾಣಿಸಿಕೊಂಡು ಪ್ರಣಾಮಮಂಗೈದು, ಕಪ್ಪ ಕಾಣಿಕೆಗಳನ್ನೊಪ್ಪಿಸಿ, ನಾವು ನಿಮ್ಮ ಸೇವಕರು ಹೇಳಿದಂತೆ ನಡೆದುಕೊಳ್ಳತಕ್ಕವರೆಂದು ಪ್ರಾರ್ಥಿಸಿ, ಸೇನಾಸಮೇತರಾಗಿ ಆ ಪುಷ್ಪದಸಂಗಡ ಬರುತ್ತಿರಲು, ಆರಾಯರು ತಂದುಒಪ್ಪಿಸುವ ಧನಾದಿಗಳಂ ಉಷ್ಟ್ರ ಶಕಟ ಗಜಸಹಸ್ರಗಳಮೇಲೆ ಹೇರಿ ಹೇರಿ ತಂದೆಯಬಳಿಗೆ ಕಳುಹಿಸುತ ಮುಂದೆ ತೆರಳುತಮುಳಿತವರಂ ಹಿಡಿದು ಶಿಕ್ಷಿಸಿ, ಧನಗಳನ್ನಾರ್ಜಿಸಿ ಕಳುಹುತ, ಮುಂಭಾಗದಲ್ಲಿ ನಡೆಯುತ್ತಿರುವ ಅಶ್ವದಹೆಜ್ಜೆಗಳು ಊರಿದಬಳಿಯಲ್ಲಿ ಹೋಮವಂ ಮಾಡುವ ಋತ್ವಿಜರ ಸಡಗರವಂ ನೋಡುತ ಅಶ್ವವು ನಿಂತಕಡೆಯಲ್ಲಿ ಕೆರೆ ಕಟ್ಟೆಗಳಂ ಮಾಡಿಸುತ, ಮಲಗಿದಕಡೆಯಲ್ಲಿ ಅಗ್ರಹಾರವಾಗುವಂತೆ ನೇಮಿಸಿ, ಶಾಸನಗಳಂ ಬರೆದುಕೊಡುತ ಮುಂದೆ ತೆರಳುತ್ತಿರಲು, ಆತನಸೇನಾಚಲನ ಕ್ಷೋಭೆಯಿಂದಲೇ ಶತ್ರುಗಳ ಪುರವೆಲ್ಲವೂ ನಷ್ಟವಾಗಿ ಅಲ್ಲಿಯ ಧನಾದಿಗಳು ಲಬ್ಧವಾಗಿ ಪುರಕ್ಕೆ ಕಳುಹಿಸುವ ವಸ್ತುವಾಹನಾದಿಗಳಂ ಮಾರ್ಗವು ಯಡಬಿಡದೆ ಇಲ್ಲದೆ ಇರಲು, ಶತ್ರುವೆಂಬ ಒಬ್ಬ ರಾಯನಾದರೂ ಎದುರಿಗೆನಿಂತು ಘಾತಕನಾತ್ರ

ವಾಪರೂ ಯುದ್ಧವಂ ಮಾಡಿದುದಿಲ್ಲ, ಆಗಬಂದು ಒದಗುವ ಪರದೇಶದ
ವಸ್ತುಗಳು ರಾಜಕೋಶದಲ್ಲಿ ತುಂಬಿ ಪುರವೀಧಿಗಳಲ್ಲಿ ರಾಶಿಗೊಳಿಸಿ ಹೆಚ್ಚು
ತ ಬರುತ್ತಿರಲು, ಬೊಕ್ಕಸದ ಅಧಿಕಾರಿಗಳಿಗೆ ಲೆಖ್ಖವಂ ಬರೆಯುವದಕ್ಕೆ
ಅವಕಾಶವುಂಟಾಗದೆ ಮೇಲೆಮೇಲೆ ಒದಗಿಬರುವ ಧನಗಳು ಇಷ್ಟೆಂದು ತಿ
ಳಿಯಲಶಕ್ಯವಾಗಿ ಧಾನ್ಯಗಳನ್ನಳೆಯುವಂತೆ ಧನಗಳಂ ಕೊಳಗಖಂಡುಗ
ಸಂಖ್ಯೆಯಿಂದ ರಾಶಿಗೊಳಿಸುತ್ತಿದ್ದರು,ಉಳಿದ ಅಧಿಕಾರಿಗಳು ಬಂದು ಒದ
ಗುವ ಅನರ್ಘ್ಯವಸ್ತುಗಳಂ ರಾಶಿಗೊಳಿಸಿ ಇಷ್ಟು ಪುರುಷಪ್ರಮಾಣರಾಶಿಗ
ಳು ಇಷ್ಟೆಂದು ತಿಳಿದರಲ್ಲದೆ ಅಳತೆಲೆಖ್ಖವಂ ಕಂಡುದಿಲ್ಲ,ರತ್ನಪರೀಕ್ಷಕರು
ಎಣಿಸಲಶಕ್ತರಾಗಿ ತಕ್ಕಡಿಗಳಿಂದ ಮಣ ಇಷ್ಟೆಂದು ತಿಳಿದರಲ್ಲದೆರತ್ನಗಳು
ಇಷ್ಟೆಂದು ತಿಳಿದವರಲ್ಲ,ಬಂದುಒದಗುವ ವಾಹನಾದಿಗಳಂ ಒಟ್ಟುಕೂಡಿಸಿ ಇ
ಷ್ಟು ಯೋಜನವಿಸ್ತಾರ ಭೂಮಿತುಂಬಿತೆಂದು ತಿಳಿದವರಲ್ಲದೆ ವಾಹನವಿಷ್ಟೆಂ
ದು ಅರಿತವರಲ್ಲ,ಈರೀತಿಯಲ್ಲಿವಸ್ತುವಾಹನಗಳಂ ಒದಗಿಸುತ ಮಕರಂದಪುಷ್ಪ
ದಂತರೀರ್ವರು ಸಂವತ್ಸರಪರ್ಯಂತರವು ಅಶ್ವರತ್ನದಹಿಂಭಾಗದಲ್ಲಿ ಬರುತ್ತ
ತಂದೆಯು ನೇಮಿಸಿದ ಮೇರೆಗೆ ಭೂಮಿಯಂ ಪ್ರದಕ್ಷಿಣಗೈದು ಬಂದು ಅಶ್ವರತ್ನ
ವಂ ತಂದೆಗೆ ಒಪ್ಪಿಸಿ ಆತನ ಅಡಿಗಳಿಗೆ ಪ್ರಣಾಮವಂಗೈದು ನಿಲ್ಲಲು,ಸುಗಂಧ
ರಾಜೇಂದ್ರನು ಪುತ್ರರನ್ನಾಲಿಂಗಿಸಿ ಶಿರವನ್ನಾಘ್ರಾಣಿಸಿ ಎಲೈ ಕುಮಾರ
ಕರೆ! ನನಗೆ ಅನುರೂಪರಾದ ಪುತ್ರರೆಂದು ನಿಮ್ಮಂ ಇಂದು ಭಾವಿಸಿದೆನು,
ಮುಂದೆ ನಡೆಯುವದೆಲ್ಲವಂ ವಿಚಾರಿಸುವದೆಂದು ನೇಮಿಸಿ ಕಳುಹಿಸಿ ಆಗ ಬ
ರುವ ಋಷಿಸಂಘವಂ ಶಾಸ್ತ್ರೋಕ್ತವಾಗಿ ಉಪಚರಿಸಿ ಪೂಜಿಸಿ ಅವರ
ಅನುಮತಿಯಿಂದ ಮುಂದಣಯಾಗಕರ್ಮವಂ ಮಾಡುತ್ತಿರಲು, ಆಪುರ
ದೇಶವು ಬ್ರಾಹ್ಮಣ್ಯಮಯವಾಗಿ, ಅರಸುಗಳ ಬಿಡಾರಗಳೆಲ್ಲವು ದೇಶಾ
ಧಿಪತಿಗಳಂ ನಿಬಿಡವಾಗಿ ಯಾಗಶಾಲೆಯೊಳ್ ಬ್ರಹ್ಮಸದನದಂತೆ ವೇದ
ಘೋಷ ಮುಖರಿತವಾಗಿ ಕೆಲವೆಡೆಯೊಳ್ ಅಧ್ವರ್ಯುಗಳ ಸ್ವಾಹಾಕಾರ
ವಷಟ್ಕಾರಗಳಂ ಶೋಭಿತವಾಗಿ ಮತ್ತೊಂದೆಡೆಯೊಳುದ್ಗಾತೃಗಳ ಸಾ
ಮಸ್ತೋಮಗಳಂ ಕಿವಿಗೆ ಆನಂದಕರವಾಗಿ ಮತ್ತೊಂದು ಕಡೆಯೊಳ್
ಹೋತೃಗಣಗಳ ದೇವತಾಹ್ವಾನಸ್ತೋತ್ರಸೂಕ್ತಗಳಂ ರಮಣೀಯವಾಗಿ
ಅಲ್ಲಲ್ಲಿ ಸವಸ್ವರ ವಿಧಿಮಂತ್ರದಿಂ ನಿಬಿಡವಾಗಿ ಮತ್ತೊಂದೆಡೆಯೊಳ್

ಮೀಮಾಂಸಾಪ್ರಸಂಗದಿಂ ಮನೋಹರವಾಗಿ ಒಂದುಕಡೆಯೊಳ್ ತರ್ಕ ವ್ಯಾಕರಣವಾದಂಗಳಿಂ ಹರ್ಷಕರವಾಗಿ ಇನ್ನೊಂದೆಡೆಯೊಳ್ ಸರ್ವಶಾಸ್ತ್ರಾರ್ಥ ಸಮನ್ವಯಾರ್ಥವಂ ಪೇಳುವ ವಿದ್ವಜ್ಜನರ ವೇದಾಂತವಾಕ್ಯಂಗಳಿಂದಾನಂದಸ್ಫೂರ್ತಿಯುಂಟಾಗುತ ವೇದವೇದಾಂಗ ಕೋವಿದರಾದ ಋತ್ವಿಜರುಗಳು ಪ್ರವರ್ಗ್ಯ ಉಪಸತ್ತುಗಳೆಂಬ ಕರ್ಮವನ್ನಾಚರಿಸಿ ಪ್ರಾತಸ್ಸವನಮಾಧ್ಯಂದಿನ ಸವನ ತೃತೀಯಸವನಗಳನ್ನಾಚರಿಸಿ ಇದರಲ್ಲಿ ಐಂದ್ರವಾಗ ಸೋಮಾಭಿಷವಗಳಂ ಮಾಡಿ ಬೈಲ್ವಖಾದಿರ ಪಾಲಾಶಗಳಿಂದ ಇಪ್ಪತ್ತೊಂದು ಯೂಪಸ್ತಂಭಗಳಂ ಪ್ರತಿಷ್ಠೆಯಂಮಾಡಿ ಈಯೂಪಗಳನ್ನು ಗಂಧಪುಷ್ಪ ವಸ್ತ್ರಾಭರಣಗಳಿಂದಲಂಕರಿಸಿ ಪೂಜಿಸಿ ಸುವರ್ಣಮಯಂಗಳಾದ ಇಟ್ಟಿಕೆಗಳಿಂದ ಗರುಡಾಕೃತಿಯಾಗಿ ಚಯನವಂ ರಚಿಸಿ ಅಲ್ಲಿ ಅಗ್ನಿಪ್ರತಿಷ್ಠಾಪನಂಗೈದು ತತ್ತದ್ದೇವತೆಗಳನ್ನುದ್ದೇಶಿಸಿಉರಗಪಕ್ಷಿ ಜಲಚರಗಳಂ ಉಪಧಾನವಂಮಾಡಿ ಮುನ್ನೂರುಪಶುಗಳಿಂದ ಸಮೇತವಾಗಿ ಅಶ್ವರತ್ನವಂ ಯೂಪಸ್ತಂಭದಲ್ಲಿ ಕಟ್ಟಿ ಸೌಗಂಧಿಕಾದೇವಿಯು ಖಡ್ಗಪಾಣಿಯಾಗಿ ಅಶ್ವರತ್ನವಂ ಪೂಜಿಸಿ ಪ್ರದಕ್ಷಿಣವಂಗೈದು ಶಾಮಿತ್ರಗೃಹದಲ್ಲಿ ಅಶ್ವರತ್ನವಂ ಖಡ್ಗದಿಂದ ವಿಶಸನಂಗೈದು ವೇದೋಕ್ತರೀತಿಯಿಂದಗ್ರಾಮಾರಣ್ಯಾಪಶುಗಳಲ್ಲಿ ಯಜ್ಞಹೋಮೋಪಯುಕ್ತವಾದುದಂಗ್ರಹಿಸಿ ಉಳಿದಪಶುಗಳಂಬಿಟ್ಟು ಸುಜ್ಞಾಪಿತವಾದ ಅಶ್ವದಬಳಿಯಲ್ಲಿ ಆದೇವಿಯು ಆರಾತ್ರಿ ಜಾಗರೂಕಳಾಗಿ ಇರುತ್ತಿರಲು, ಅಧ್ವರ್ಯುಗಳಂ ಶ್ರಪಿತವಾದ ವಪೆಯಂ ಅಗ್ನಿಯಲ್ಲಿ ಹೋಮವಂಮಾಡಿ, ಹಾಗೆ ಅಂಗಹೋಮವಂಮಾಡಿ ಆ ಹೋಮಗಂಧಾಘ್ರಾಣದಿಂಯಜಮಾನ ಮುಖ್ಯರಾದವರೆಲ್ಲರೂ ಪಾಪದಿಂ ಮುಕ್ತರಾಗಿ ಆ ಸದಸ್ಸೆಲ್ಲವು ಸಕಲದೇವತಾಮಯವಾದಂತೆ ತೋರುತ ಯಜ್ಞವೆಲ್ಲವು ಬ್ರಹ್ಮಮಯವಾಗಿ ಶೋಭಿಸುತ್ತಿರಲು, ಆದಿವಸಂಗಳು ಅಮೃತಾವಿರ್ಭಾವಸಮಯದಂತೆ ಸಕಲಜನಾನಂದಕರವಾಗಿರಲು ಕೆಲವು ರಾಜಮಂಡಲಗಳು ಸಕಿರೀಟ ಮಣಿಪ್ರಭಾನಿಕರದಿಂ ಆ ಸದಸ್ಸಂ ನೀರಾಜನಂಗೈಯುತ್ತಿರಲು, ಮತ್ತೊಂದು ಕಡೆಯೊಳ್ ಚಿತ್ರರಥ ನಗರಿಯಂತೆ ಗಾನಸಂಪತ್ತಿನಿಂದೊಪ್ಪುತ ಒಂದೆಡೆಯೊಳ್ ನರ್ತಕಿಯರುಗಳುಮಂಜು ಮಂಜೀರರವದಿಂ ಮಂಜುಗಳ ಸಂಗೀತಗಳು ಉಂಟಾಗಿ ರಂಜ

ಸೆಷ್ಮು ಮಾಡುತ ಕೆಲವು ಬಳಿಯಲ್ಲಿ ಕೈಲಾಸದಂತೆ ಮಹರ್ಷಿಗಣದಿಂದ ಲಂಕೃತವಾಗಿ,ತೇಜೋಲೋಕದಂತೆ ಜಗಜ್ಯೋತಿ ಸಹಸ್ರಗಳಿಂಪ್ರಕಾಶ ಮಾನವಾಗಿ,ಅಮರಾವತಿಯಂತೆ ದೇವತಾವಸ್ತು ಸಮೃದ್ಧವಾಗಿ, ವಸಂತಸ ಮಯದಂತೆ ಫಲಪುಷ್ಪಾವಳಿಗಳಿಂದಲಂಕೃತವಾಗಿ ವರ್ಷಾಕಾಲದಂತೆ ಧಾರಾಸ್ರೃಹೋಪಶೋಭಿತವಾಗಿ, ಶರತ್ಸಮಯದಂತೆವಿಕಸಿತವಾಪರೀತ ಪ ರಿಮಳಯುತವಾಗಿ, ಸಮುದ್ರಮಥನ ಸಮಯದಂತೆ ವಿವಿಧವಾದ್ಯಘೋಷ ದಿಂ ಭರಿತವಾಗಿ, ಎಲ್ಲಾ ಕಡೆಯಲ್ಲಿಯೂ ಕಲ್ಯಾಣಮಯವಾಗಿರುತ್ತಿರಲು, ನಿತ್ಯವಲ್ಲಿಯೂ ಅನೇಕಲಕ್ಷಬ್ರಾಹ್ಮರು ಮೃಷ್ಟಾನ್ನವಂ ಭುಂಜಿಸಿ ಭಕ್ಷ್ಯ ರಾಶಿಗಳು ಪ್ರಾಕಾರಸಮವಾಗಿ ಕಾಣಿಸುತ್ತಿರಲು, ಉಪೇಕ್ಷೆಯಿಂಬಿಟ್ಟ ಘೃತಗಳು ಕಾಲ್ವೆಗಳಾಗಿ, ಮಧುಕ್ಷೀರಗಳು ಮಡಹುಗಳಾಗಿ, ಶರ್ಕರೆ ಗಳು ಸೈಕತದ ತಿಟ್ಟುಗಳ ಚೆಂದವಾಗಿ,ಉಳಿದುಇರುವ ಚಂದನ ಕರ್ದಮ ಗಳು ಕಲಕಿಪಾಟಲಶಕ್ಯವಾಗಿ, ಕಸ್ತೂರಿಪಂಕಗಳು ಕಲಕಿಚೆಲ್ಲಾಡುತ, ಕರ್ಪೂರರಾಶಿಗಳು ಕವರಿಕೋಡಿಹರಿಯುತ, ಪುಷ್ಪದಚಪ್ಪರಗಳು ಪುನಃ ಪುನಃ ನಿರ್ಮಾಣವಾಗುತ, ಆಶೀರ್ವಾದ ಮಂತ್ರಾಕ್ಷತೆಗಳು ಆಶ್ಚರ್ಯ ವೃಷ್ಟಿಯ ಹೋಲುತ ಭೂರಿದಕ್ಷಿಣೆಗಳಿಂ ಭೂಸುರರುಹೊರಲಾರದೆ ಶಿಷ್ಯ ಬಾಲಕರ ಕೈಯಲ್ಲಿಸಹ ಹೊರಿಸುತ್ತಿರಲು, ಸುವರ್ಣದಬಾಗಿನಗಳಿಂ ಪಡೆ ದ ದಂಪತಿಗಳು ಸಕಲಾಭೀಷ್ಟವಂ ಕೈಕೊಳ್ಳುತ ಮಾಂಧಾತಮರುತ ರಾ ಜರಯಾಗಗಳಿಗೆ ಇಮ್ಮಿಗಿ ಲಾಯಿತೆಂದು ಸುಗಂಧರಾಯನಂ ಲೋಕದ ವರು ಸ್ತೋತ್ರಮಂಗೈಯುತ್ತಿರಲು,ರಾಯನುಆಮಹಾಕ್ರತುವಂ ನೆರವೇ ರಿಸಿ ಭೂಸುರಸ್ತೋಮಕ್ಕೆ ಷೋಡಶಮಹಾದಾನವಂಮಾಡಿ ಸಕಲವೈ ಭವದಿಂದಹೊರಟು, ಎಲ್ಲರೂ ಈರಾಯನೊಡನೆ ಅವಭೃತಸ್ನಾನವಂ ಮಾ ಡುತ್ತಿರಲು, ರಾಯನು ಕೃತಕೃತ್ಯನಾಗಿ ಋಷಿವರ್ಯನಾದ ಸತ್ಯಾಷಾಢ ಋಷಿಯಂ ಪೂಜಿಸಿ, ಸತ್ರಯಾಗಕ್ಕೆ ಬೇಕಾದುದಂ ಕೊಡಿಸಿ, ಋಷಿಸಂಘ ವನೆಲ್ಲವಂಪೂಜಿಸಿ, ಸ್ಫಟಿಕಕಮಂಡಲುಗಳಂಮುತ್ತಿನ ಜಪಸರಂಗಳಂ ಯ ಜ್ಞಾರ್ಥವಾಗಿ ಬೇಕಾದುದೆಲ್ಲವಂಕೊಟ್ಟು ಭೂಸುರಸ್ತೋಮಗಳಿಗೆಧನರಾ ಶಿಗಳಂ ಅಳೆದುಕೊಡುತ್ತಿರಲು, ಸುಚರಿತ್ರರಾಯನು ರತ್ನಗಳಂ ಬೊಗಸೆ ಗಳಿಂ ಕೊಡುತ್ತಿರಲು, ಸುಬುದ್ಧಿಯು ದಿವ್ಯವಸ್ತ್ರಗಳಂ ಕೊಡಲು ಸುಮ

ತಿಯುಂ ಸಾಲಂಕೃತವಾದ ಗೋಲಕ್ಷಗಳಂ ವಿಪ್ರರಿಗೆಕೊಡುತ್ತಿರಲು,ಋತ್ವಿ
ಜರಿಗೆ ರಾಯನು ಸಕಲ ವಸ್ತುಗಳಂಸಮೃದ್ಧಿಯಾಗಿ ಕೊಟ್ಟು ಲಕ್ಷೋಪ
ಲಕ್ಷಹೇಮಮಯಂ ಧಾರೆಯನೆರೆಯುತ್ತಿರಲು,ಮಕರಂದರಾಯ ನೂತನವಾಗಿ
ಅಗ್ರಹಾರಂಗಳಂಮಾಡಿಸಿ, ಶಾಸನಗಳಂಬರೆದು ಕೊಡುತ್ತಿರಲು, ಪುಷ್ಪ
ವಂತರಾಯನು ಬ್ರಾಹ್ಮಣರಿಗೆ ರಥಗಜಾಶ್ವಾದಿವಾಹನಗಳಂ ಕೊಡುತ್ತಿರ
ಲು, ಗುಣವತಿದೇವಿಯು ಸುವಾಸಿನಿಯರಿಗೆಸುವರ್ಣದಭಾಗಿನಗಳಂ ಕೊಡು
ತ್ತಿರಲು, ಸೌಗಂಧಿಕಾದೇವಿಯು ಮುತ್ತೈದೆಯರಿಗೆ ವಿವಿಧಾಭರಣಗಳಂದಿ
ವ್ಯವಸ್ತ್ರರಾಶಿಗಳಂ ಕೊಡುತ್ತಿರಲು, ಆಗಲಬ್ಧವಾದ ವಸ್ತುಗಳಂ ಶಕಟ
ಅಶ್ವಗಜಗಳಮೇಲೆ ಹೇರಿಸಿ ಸಾವಧಾನದಿಂದ ತೆರಳುತ್ತಿರಲು, ಇಲ್ಲವೆಂಬ
ಸೊಲ್ಲುಗಳು ಇಲ್ಲದೆಹೋಗಿ ನಾಳೆಬಾಯೆಂಬಶಬ್ದವು ನಷ್ಟವಾಗಿ ದಾರಿ
ದ್ರ್ಯವೆಂಬುವದು ದಾರಿತಪ್ಪಿಓಡುತ ಕೃಪಣತ್ವಕ್ಕೆ ಕಾರ್ಪಣ್ಯವುಂ
ಟಾಗಿ, ಆದೇಶವೆಲ್ಲವು ಮಂಗಳಕರವಾಗಿ,ದೇವರಾಜ್ಯದಂತೆ ಶೋಭಿಸುತ್ತಿ
ರಲು, ಸುಗಂಧರಾಜೇಂದ್ರನುಯಾಗದರ್ಶನಕ್ಕೆ ಬಂದದೇಶಾಧಿಪತಿಗಳ ಪ್ರ
ಣಾಮವನ್ನಂಗೀಕರಿಸಿ,ಯಥೋಚಿತವಾಗಿ ಸನ್ಮಾನವಂ ಮಾಡುತ,ಅವರೆಲ್ಲರಿ
ಗೂ ದಿವ್ಯರಥಮೊದಲಾದ ಗಜಉತ್ತಮಾಶ್ವಛತ್ರಚಾಮರ ರತ್ನಾಭರಣಗ
ಳಂಕೊಡುತ,ಅವರು ಕೊಡುವ ಕಪ್ಪಗಳಲ್ಲಿಉಚಿತವರಿತುಬಿಟ್ಟು ಕೊಡುತ,ಅ
ವರವರ ದೇಶಕ್ಕೆ ಅಪ್ಪಣೆಯಂಕೊಟ್ಟು ಕಳಿಂಗದೇಶಾಧಿಪತಿಯಾದ ವಿಜ
ಯವರ್ಮರಾಯಂಗೆ ತನಗೆತೋರಿದ ವಸ್ತುವೆಲ್ಲವಂ ಕೊಟ್ಟು ಕಳುಹಿಸಿ,
ಅದೇರೀತಿಯಲ್ಲಿ ಪಾಂಡ್ಯದೇಶಾಧಿಪತಿಯುಂ ಬಹುವಿಧದಿಂ ಸನ್ಮಾನಗೊಳಿ
ಸಿ,ಅವರದೇಶಕ್ಕೆ ಕಳುಹಿಸಿ ಮತ್ತು ಪ್ರಮುಖರಾದಅಧಿಕಾರಿಗಳಿಗೆಲ್ಲರಿಗೂ
ರತ್ನದಹಾರವಂ ಭೂಷಣವಸ್ತ್ರಗಳಂ ಉಂಬಳಿಗಳಂ ಸಹಾಕೊಟ್ಟು
ಉಳಿದಅಧಿಕಾರಿಗಳಿಗೆ ಯೋಗ್ಯತೆಯಂವಿಚಾರಿ ಸನ್ಮಾನವಂಮಾಡಿ ಭೃತ್ಯರಿ
ಗೆ ಉಚಿತವಾದ ಉಡುಗೆರೆ ಆಭರಣಗಳಂಕೊಟ್ಟು,ಮತ್ತು ಪುರದೇಶಗಳ
ಲ್ಲಿ ಪ್ರಮುಖರಾದ ನರ್ತಕರು ಮೊದಲಾದವರಿಗೆ ವಸ್ತ್ರಭೂಷಣಂಗಳಂ
ಕೊಟ್ಟು,ದೇಶಪ್ರಜೆಗಳೆಲ್ಲರಿಗೂ ಮೂರುಸಂವತ್ಸರದ ಕಂದಾಯವಂ ಉ
ಚಿತವಾಗಿಬಿಟ್ಟು ಕೊಟ್ಟು,ಬಂದವರೆಲ್ಲರೂ ಸನ್ಮಾನಿತರಾಗಿ ಯಥಾಸ್ಥಾನ
ವನೈದುತ್ತಿರಲು, ರಾಯನು ಪತ್ನೀಸಮೇತನಾಗಿ ಸಕಲ ವೈಭವದಿಂದ ಪು

ರವಸ್ಥೆಯಿ ರತ್ನಸಿಂಹಾಸನಾರೂಢನಾಗಿ ಧರ್ಮದಿಂ ಪೃಥ್ವೀಸಾಮ್ರಾಜ್ಯವಂ
ಗೈಯ್ಯುತ್ತಿರಲು, ಆರಾಯನುಮಾಡಿದ ಅಶ್ವಮೇಧಯಾಗ ಮಹಿಮೆಯಿಂದ
ಮೊದಲಿಗಿಂತ ಅತಿಶಯವಾದ ತೇಜೋಬಲಂಗಳು ಆತನಿಗೆಉಂಟಾಗಿ ವಿ
ಸ್ಮೃತವಾದ ಮಂತ್ರರಹಸ್ಯಂಗಳು ಜ್ಞಾಪ್ತಿಗೆಬಂದು ಸಾಣೆಯಿಂದ ತೊ
ಳೆದ ವಜ್ರದಂತೆ ಮೇಘನಿವಾರಣದಿಂ ಹೊರಡುವ ಮಾರ್ತಾಂಡಮಂಡ
ಲದಂತೆ ಪ್ರಕಾಶಿಸುತಇರಲು, ಅದನ್ನೋಡಿದ ಸುಚರಿತ್ರರಾಯನು ಮಹಾ
ತ್ಮರ ವಚನವು ಮೋಸಬರುವದುಂಟೆ ಎಂದು ಮನಸ್ಸಿನಲ್ಲಿ ಸಂತೋಷ
ಗೊಳುತ ಸುಗಂಧರಾಜೇಂದ್ರನಂ ಕುರಿತು ಎಲೈ ಅಯ್ಯಕಂದನೆ! ನ
ಮ್ಮ ವಂಶಸ್ಥರಾದ ಪೂರ್ವಿಕರಿಗಿಂತಲು ದಶಗುಣಾಧಿಕವಾಗಿ ಮಹಾ ಕ್ರ
ತುವಂಮಾಡಿ ನೀನುಬಹುವಿಖ್ಯಾತನಾದೆ, ಇದಂನೋಡಿದಬಳಿಕ ನನಗಿನ್ಯಾವ
ಮನೋರಥವಿರುವದು, ನಾನು ಸದ್ಗತಿಯಂ ಸಂಪಾದಿಸಲುದ್ಯುಕ್ತನಾಗಿ ಆಶ್ರ
ಮವಂನೈದುವದಕ್ಕೆ ಸಂಕಲ್ಪಿಶಿಇರುವೆನು. ನೀನು ವ್ಯಸನವಂಬಿಟ್ಟು ಸಮ್ಮ
ತನಾಗುವದು ಯುಕ್ತವೆಂದು ವೃದ್ಧರಾಯನು ಹೇಳುತ್ತಿರಲು, ಆಮಾತಿಗೆ
ಸುಗಂಧರಾಜೇಂದ್ರನು ತಂದೆಗೆ ಪ್ರತ್ಯುತ್ತರವಂ ಕೊಡುವದಕ್ಕೆ ಭೀತ
ನಾಗಿ ಕಂಬನಿಗಳಂ ತುಂಬುತಶಿರವಂಬಾಗಿ ಮಹಾಚಿಂತಾಕ್ರಾಂತನಾಗಿರು
ವವಂ ನೋಡಿ ವೃದ್ಧರಾಯನು ಕುಮಾರಕನಂ ಕುಳ್ಳಿರಿಸಿಕೊಂಡು ಶಿರವಂ
ತನ್ನಹಸ್ತದಿಂ ನೇವರಿಸುತ್ತಿರಲು, ತಂದೆಯಮುಖವನ್ನೋಡಿ ಅಂಜಲಿಬ
ದ್ಧನಾಗಿ ಆಶ್ರಮಕ್ಕೆ ತೆರಳುವದಂನಿಲ್ಲಿಸುವ ಅಭಿಪ್ರಾಯದಿಂಪ್ರಾರ್ಥನೆಗೈ
ಯ್ಯಲು ಯತ್ನವಂಮಾಡಿದ ಕುಮಾರನ ಇಂಗಿತವಂತಿಳಿದು ಅಯ್ಯಾ ಪುತ್ರ
ನೆ! ನಿನ್ನ ಪ್ರಯಾಣಕ್ಕೆವಿರೋಧವಿಲ್ಲದಂತೆ ಏನುಅಭಿಲಾಷೆಇದ್ದರೂ ಹೇಳು
ವನಾಗು ಎನಲು, ಆಮಾತಿಗೆ ಪ್ರಾರ್ಥಿಸಲಂಜಿ ಹೀಗೆ ಅಪ್ಪಣೆಯಾದಬಳಿಕ
ಚಿತ್ತವಿದ್ದಂತೆ ಮಾಡಬಹುದೆಂದು ಹೇಳಲು, ಅಷ್ಟರಲ್ಲಿಯೇ ಈವರ್ತಮಾ
ನವಂಕೇಳಿ ಗುಣವತೀದೇವಿಯು ಎಲ್ಲವಂಬಿಟ್ಟು ಪೂಜಿಸುವ ಗೌರಿದೇವಿ
ಯಂ ತೆಗೆದುಕೊಂಡುಬಂದು ಪತಿಯಡಿಗಳಿಗೆ ಅಭಿನಂದಿಸಿ ಸಂಗಡಬರು
ವ ಸಡಗರದಿಂದಿರುವ ಗುಣವತೀದೇವಿಗೆ ನಾನಾವಿಧದಿಂ ಒಡಂಬಡಿಸಿದರೂ
ಸ್ವಾಮಿ ಚಂದ್ರನಂಚಂದ್ರಿಕೆಹೊಂದಿರುವಂತೆ ತಮ್ಮನ್ನಗಲಿಕ್ಷಣಮಾತ್ರವು
ಇರತಕ್ಕವಳಲ್ಲ ಎಂದು ಖಂಡಿತವಾಗಿ ವಿಜ್ಞಾಪಿಸುತ್ತಿರಲು, ಹಾಗೆ ಆ ದೇ

ಪಿರಿಯ ಸವತ್ತಿಯರುಗಳು ಪತಿಯಡಿಗಳಿಗೆ ಅಭಿವಂದಿಸಿ ಪ್ರಯಾಣವಂತರಳುವವಕ್ಕೆ ಸನ್ನದ್ಧರಾಗಲು, ಇದೆಲ್ಲವಂ ನೋಡಿದ ಸುಗಂಧರಾಯನು ಸೌಗಂಧಿಕಾದೇವಿ ಮುಖ್ಯರಾದವರು ಮನಸೊಳು ಪರಿತಾಪ ಗೊಳ್ಳುತ್ತಲಿರಲು, ಅವರೆಲ್ಲರಂ ಸಂತವಿಟ್ಟು ಸುಚರಿತ್ರರಾಯನು ನಿತ್ಯದಲ್ಲೂ ಪೂಜೆಗೈವ ಶಿವಲಿಂಗ ಸಂಪುಟವಂ ತೆಗೆದುಕೊಂಡು ಆಭರಣಗಳಂ ಪುರೋಹಿತಗೆ ಕೊಟ್ಟು ಸಕಲವಿದ್ವಜ್ಜನಾನುಮತಿಯಿಂದ ಸಾಮಾಜಿಕರ ಸಮ್ಮತಿಯಿಂದ ಎಲ್ಲವಂ ಬಿಟ್ಟು ಪೊರಮಡುಂಬಟ್ಟ ಕಾಲದಿಂದತ್ತ ಪತ್ನೀಯರ ಜಡಗೂಡಿ ಹೊರಡುತ್ತಿರಲು ಆಗ ಸುಗಂಧರಾಜೇಂದ್ರನು ಕೋಟಿಧನ ರತ್ನಗಳಂ ವಿಪ್ರರಿಗೆ ಯಾತ್ರಾಪ್ರದಾನವಂ ಕೊಡಿಸುತ್ತಿರಲು, ಅತನ ಪತ್ನೀಯರುಗಳು ಅತ್ತೆಮಾವಂದಿರ ಅಡಿಗಳಿಗೆ ಅಭಿವಂದಿಸಿ ನಮಗೆ ಏನುಬುದ್ಧಿಯಂ ಹೇಳುವಿರಿ ಎನಲು, ಅವರೆಲ್ಲರಿಗೂ ಗುಣವತೀದೇವಿಯು ಪತಿಯ ಛಾಯಾನುವರ್ತಿಗಳಾಗಿರುವದೆಂದು ಹೇಳುತ್ತಿರಲು, ಆಗ ಸುಚರಿತ್ರರಾಯನ ಸಾರಥಿಯು ರಥವಂ ಸಜ್ಜುಮಾಡಿ ರಾಜದ್ವಾರದ ಪುರೋಭಾಗದಲ್ಲಿ ನಿಲ್ಲಿಸಲು ಸುಚರಿತ್ರರಾಯನು ಇಷ್ಟದೇವತಾವಂದನವಂ ಮಾಡಿ ತನ್ನನ್ನೇ ನಂಬಿದ್ದ ಭೃತ್ಯರಿಗೆ ಬೇಕಾದುದಂ ಕೊಟ್ಟು ಇವರಂ ಕೈಬಿಡದೆ ಸಂರಕ್ಷಿಸುವಂತೆ ಸುಗಂಧರಾಯನಿಗೆ ಆಜ್ಞಾಪಿಸಿ ಬ್ರಾಹ್ಮಣರಿಗೆ ಅಭಿವಂದಿಸಿ ಹೊರಟು ರಥಕ್ಕೆ ಪ್ರದಕ್ಷಿಣೆಮಾಡಿ ರಥಾರೂಢನಾಗಲು, ಅದಂ ನೋಡಿ ಎಲ್ಲವಂ ಬಿಟ್ಟು ಸುಬುದ್ಧಿಯಂಬ ಮಂತ್ರಿಯು ಪುತ್ರನಿಗೆ ಹೇಳುವ ಬುದ್ಧಿಮತಿಯಂ ಹೇಳಬಂದು ವೃದ್ಧರಾಯಂಗೆ ದೂರದಿಂದಭಿವಂದಿಸಿ ಮಹಾಪ್ರಭುವೆ! ಬಾಲ್ಯಾರಭ್ಯವಾಗಿಯೂ ತಮ್ಮ ಪಾದವಂ ಬಿಟ್ಟು ಇದ್ದವನಲ್ಲ. ತಾವು ತೆರಳಿದಬಳಿಕ ನನಗಿಲ್ಲಿ ಏನು ಇರುವದು, ಸೇವೆಯಂ ಮಾಡುತ ಸಂಗಡಲೆ ಬರುವೆನು, ಅಪ್ಪಣೆಯಾಗಬೇಕೆಂದು ಪ್ರಾರ್ಥಿಸಲು, ಆ ಮಾತಿಗೆ ಹಾಗೆ ಆಗಲೆಂದು ರಾಯನು ಹೇಳುತ್ತಿರಲು, ಆಗ ಸುಗಂಧರಾಯ ಸುಬುದ್ಧಿಗಳು ಕಾಲುನಡೆಯಿಂದಲೇ ರಥಪಾರ್ಶ್ವಗತರಾಗಿ ಬರುತ್ತಿರಲು, ಅವನ್ನು ನೋಡಿ ಸಕಲಸೇನೆಯು ಪುರದ ಜನರೆಲ್ಲರೂ ಸಂಗಡೆ ತೆರಳುತ ಮಹಾಕಲಕಲ ಉಂಟಾಗುತ್ತಿರಲು, ಹಾಗೆ ತೆರಳಿ ಕಾವೇರೀನದೀತೀರದಲ್ಲಿ ಆದಿನ ರಾತ್ರಿ ಇಳಿದು ಪುತ್ರನಿಗೆ ಹೇಳುವ ಬುದ್ಧಿನೀತಿಯೆಲ್ಲವಂ ಹೇಳಿ ಎಲ್ಲರು ನಿದ್ರಾಸುಖದಿಂದಿರುತಿರಲು, ಆರಾತ್ರಿ ನಾಲ್ಕನೆಯಜಾಮದಲ್ಲಿ ಸುಚ

ರಿತ್ರರಾಯನು ಸತ್ಯಾಷಾಢಿಯುಷಿಯಂ ಕುರಿತು ಅಯ್ಯಾ ಮುನಿಶ್ರೇಷ್ಠ
ರೇ! ಈಗ ಸಂಗಡಬಂದು ಇರುವ ಜನಸಮೂಹವಂ ನೋಡಿ ಇರುವಿರಷ್ಟೆ, ಇ
ನ್ನು ವಿಳಂಬವಂ ಮಾಡಿದರೆ, ಎಷ್ಟು ಜನ ಸಂಗಡ ಬರುವರೆಂದು ಯತ್ನವಂ
ಮಾಡುವರೊ? ಅದರಿಂದ ಒಬ್ಬರಿಗೂ ತಿಳಿಯದಂತೆ ಈಗಲೇ ಹೊರಟು
ಹೋಗುವೆ ಎಂದುತ್ಸ್ವಸ್ಯಪಡಿಸಲು, ಅಯ್ಯಾ ರಾಯನೆ! ಪತ್ನೀಸಮೇತನಾಗಿ
ಒಬ್ಬರೂ ಅರಿಯದಂತೆ ಹೋಗುವಪರಿ ಹ್ಯಾಗೆ ಎಂದೆನಲು, ಅಯ್ಯಾ ಮುನಿ
ವರೆ! ಕಾದಿನನನವಲ್ಲಿ ಜನಕ್ಕೆ ಕಾಣಿಸಿಕೊಳ್ಳದಂತೆ ಇರುತ್ತ ಮೆಲ್ಲಮೆಲ್ಲನೆ ತೆರ
ಳಬಹುದೆನಲು, ಹಾಗಾದರೆ ಯಾವಮಾರ್ಗದಿಂ ಹೋಗಬೇಕೆಂದು ಸತ್ಯಾ
ಷಾಢಿ ನುಡಿಯಲು, ಕಾಶೀಕ್ಷೇತ್ರ ದರ್ಶನವಂಗೈದು, ಆಬಳಿಕ ಪ್ರಯಾಗವಂ
ಪೊಕ್ಕು ಕುರುಕ್ಷೇತ್ರಮಾರ್ಗದಿಂ ಗಂಗೋತ್ತರಕ್ಕೆ ಹೋಗಿ, ಆಬಳಿಕ
ನೀವು ತೋರುವ ಮಾರ್ಗಾನುಗುಣವಾಗಿ ಬರುವೆನೆನಲು, ಅಯ್ಯಾ ರಾ
ಯನೆ! ಈಕ್ಷೇತ್ರಗಳೆಲ್ಲವಂ ಬಳಸಿದ ಬಳಿಕ ಸಿದ್ಧಾಶ್ರಮವಂ ಎಷ್ಟು ದಿವಸ
ಕ್ಕೆ ಸೇರಬೇಕು ಎಂದು ನುಡಿಯಲು, ಮಹಾತ್ಮರೆ! ಈಕ್ಷೇತ್ರಮಹಾ
ತ್ಮ್ಯಂಗಳಂ ಬಹುಪುರಾಣ ಶ್ರುತಿಗಳು ಹೇಳುವದರಿಂದ ಅವದರ್ಶನವಂ
ಮಾಡಲು ಬಯಸಿ ಇರುವೆನೆನಲು, ಅಯ್ಯಾ ರಾಯನೆ! ಪಾಳಿಸಲುಗಳಂ
ಚೆನ್ನಾಗಿ ತಿಳಿಯದೆ ಇರುವ ನಿನ್ನ ಪತ್ನಿಯರು ಈ ಮಾರ್ಗದ ಕ್ಲೇಶವಂ
ಒಂಬೆರಡು ಸಂವತ್ಸರದ ಪರಿಯಂತರವೂ ಎಂತು ಸಹಿಸುವರು, ವೃದ್ಧನಾ
ದುದರಿಂದ ನೀನು ತಾನೆ ಎಂತು ಸಹಿಸುವೆ ಎನಲು, ಅಯ್ಯಾ ಮುನಿವರ್ಯರೆ!
ಅದೆಲ್ಲವಂ ನೋಡಿದರೆ ಎಂತು ಕೃತಕೃತ್ಯನಾಗುವೆನು, ಸಂಕಲ್ಪಿಸಿದಬಳಿಕ ಏ
ನುಶ್ರಮಬಂದರೂ ಅನುಭವಿಸಬೇಕೆಂದು ರಾಯನು ನುಡಿಯುತ್ತಿರಲು, ಆ
ಗ ಸುಬುದ್ಧಿಯು ಇದೆಲ್ಲವಂ ಕೇಳಿದವನಾಗಿ ಬೇಗ ಎದ್ದು ರಾಯನ ಸಂರ
ಕ್ಷಣೆಗೋಸುಗ ಧನುರ್ಬಾಣ, ಖಡ್ಗ, ಪರಶು, ಪಲ್ಕಲ, ಗುದ್ದಲಿ, ಮುಕ್ಕರಿ
ಗಳಂ ತೆಗೆದುಕೊಂಡು ಪ್ರಯಾಣಸಿದ್ಧನಾಗಲು, ಅದನ್ನು ನೋಡಿದ ಸ
ತ್ಯಾಷಾಢಿಯು ಈತನು ರಾಯನಲ್ಲಿ ಸಂತತಭಕ್ತಿಯುಳ್ಳವನಾದುದರಿಂ
ದ ಸಂಗಡಲೆ ಹೊರಟು ಇರುವನೆಂದು ತಿಳಿದು ರಾಯನಂ ಕುರಿತು ಅಯ್ಯಾ
ಭೂಪತಿಯೆ! ಸಾಧಾರಣ ಜನರು ತೀರ್ಥಯಾತ್ರೆಯಂ ಮಾಡುತ ಕ್ಲೇಶ
ವಂ ಸಹಿಸುತ್ತಿರುತ್ತೆ ನಿಮ್ಮಿಂದ ಶಕ್ಯವಾಗುವದುಂಟೆ? ಅದಂತಿರಲಿ ಈಗಲಿಕಾಶೀ

ಕ್ಷೇತ್ರದರ್ಶನವಂ ಮಾಡಿಸುವೆನು, ಪತ್ನೀಭೃತ್ಯಸಮೇತನಾಗಿ ಕುಳಿತು
ಒಂದುಮುಹೂರ್ತ ಕಣ್ಣುಗಳಂ ಮುಚ್ಚಿ ಬಾಹ್ಯವಿಷಯವಂ ನೋಡದೆ ಇ
ರುವನಾಗುವೆನಲು, ಆನಾತಿಗೆ ಸಂತೋಷಯುಕ್ತನಾದ ರಾಜನು ಋಷಿ
ಗಳಲ್ಲಿ ಏನುವಿಶೇಷವಿರುವದೊ ಎಂದು ತಿಳಿದು ಪತ್ನೀಯರುಗಳಂ ಕರೆದು
ಸುಬುದ್ಧಿಯಂ ನೋಡಿ ಎಲ್ಲರು ಋಷಿಗಳು ಹೇಳಿದಂತೆ ಕಣ್ಣುಗಳಂ ಮುಚ್ಚಿ
ಮುಹೂರ್ತಮಾತ್ರ ಬಾಹ್ಯ ವಿಷಯವಂ ನೋಡದೆ ಇರತಕ್ಕದ್ದೆಂದು ನೇ
ಮಿಸಿ ತಾನು ದೇವತಾಧ್ಯಾನವಂ ಮಾಡುತ ಕಣ್ಣುಗಳಂ ಮುಚ್ಚಲು ಸತ್ಯಾ
ಷಾಢಿಯು ತನ್ನ ಯೋಗಶಕ್ತಿಯಿಂದ ಅವರೆಲ್ಲರಂ ಮುಹೂರ್ತಮಾತ್ರ
ದೋಳ್ ಅನಾಯಾಸದಿಂದ ದೇಹವಲುಗದಂತೆ ಕಾಶೀಕ್ಷೇತ್ರದ ಮಣಿಕರ್ಣಿ
ಕಾ ಘಟ್ಟದಲ್ಲಿ ಇಳುಹಿಸಿ ಅಯ್ಯಾ ರಾಯನೆ! ಈಗ ಕಣ್ಣುಗಳಂ ತೆರೆದು
ನೋಡು ಏನು ಕಾಣಿಸುವದೆನಲು, ಹಾಗ ರಾಯನು ಕಣ್ಣುಗಳಂ ತೆರೆದು
ಸ್ವಪ್ನದಿಂ ಎಚ್ಚರವಾದಂತೆ ಮುಂಭಾಗದಲ್ಲಿ ಪ್ರವಹಿಸುತ್ತಿರುವ ಗಂಗಾನದಿ
ಯಂ ನೋಡಿ ಮಹಾಶ್ಚರ್ಯಭರಿತನಾಗಿ ಮಹಾತ್ಮರೇ! ನಾವು ಎಲ್ಲಿಗೆ ಬಂದೆವು,
ಈ ಮಹಾಪ್ರವಾಹವ್ಯಾವುದೆನಲು, ಅಯ್ಯಾ ರಾಯನೆ! ಇದು ಕಾಶೀಕ್ಷೇತ್ರ
ವು, ಮುಂದೆ ಕಾಣುವದೆ ಗಂಗಾನದಿಯು, ನಿನ್ನ ಸುಕೃತವು ಇಲ್ಲಿಗೆ ತಂದು
ಬಿಟ್ಟಿತು ಎನಲು, ಆಗ ಅವರಪಾದಕ್ಕೆ ಅಭಿವಂದಿಸಿ ಮಹಾತ್ಮರೆ! ನನ್ನ ಸು
ಕೃತವೆ ನಿಮ್ಮ ರೂಪಿನಿಂ ಇಲ್ಲಿಗೆ ಕರೆತಂದುದು ಬಳಿಕ ನನಗೆ ಯಾವ ಪ್ರತ್ಯು
ಪಕಾರವನ್ನುಂಟು ಮಾಡಲಾಗದು, ಎಂದು ಹೇಳಿ ಅವರ ಆಜ್ಞೆಯಿಂದ ಎಲ್ಲರೂ
ಗಂಗಾಸ್ನಾನವಂ ಮಾಡಿ ಕಾಶೀಕ್ಷೇತ್ರದಲ್ಲಿ ಒಂದು ಮಾಸವಿದ್ದು ಪಂಚಕ್ರೋ
ಶಯಾತ್ರೆಯಂ ಮಾಡಿ ಅಲ್ಲಲ್ಲಿ ತೀರ್ಥಸ್ನಾನಾದಿಗಳಂ ನೆರವೇರಿಸಿ, ಪ್ರತಿ
ದಿವಸಗಳಲ್ಲಿಯೂ ಶಿವಾರಾಧನೆಗಳಂ ಮಾಡಿ, ಪಿತೃಕ್ರಿಯೆಗಳನ್ನಾಚರಿಸಿ, ಅ
ದೇರೀತಿಯಲ್ಲಿ ಗಯಾಕ್ಷೇತ್ರವನ್ನೈದಿ, ಪಿತೃದೇವತೆಗಳನ್ನಾರಾಧಿಸಿ, ಪ್ರಯಾ
ಗಕ್ಕೆ ಬಂದು ತ್ರಿವೇಣಿಯಲ್ಲಿ ಸ್ನಾನವಂ ಮಾಡುತ, ಒಂದು ತಿಂಗಳು ಅಲ್ಲಿ
ಇದ್ದು, ಅಲ್ಲಿಂದ ಕುರುಕ್ಷೇತ್ರವನ್ನೈದಿ, ಅದಂ ಬಿಟ್ಟು ಗಂಗೋತ್ತರೀಗೆ
ಹೋಗಿ ಆ ಕ್ಷೇತ್ರಾಧಿಪತಿಯಾದ ಈಶ್ವರನಂ ಸೇವಿಸುತ, ಎಂಟು ದಿವಸ ಅಲ್ಲಿ
ಇದ್ದು ಅಲ್ಲಿಂದ ಮುಂದೆ ಮನುಷ್ಯರಿಂದ ಹೋಗುವದಕ್ಕೆ ಅಶಕ್ಯವಾದ ಹಿ
ಮಾಚಲವಂ ಹೊಂದಿ ಅಲ್ಲಿಂದ ಮುಂದೆ ಮುನಿಪನ ಯೋಗಬಲದಿಂದ ಸುಕೃತ

ಗಳು ಸ್ವರ್ಗವನ್ನು ಪಡೆದಂತೆ ಬ್ರಹ್ಮಲೋಕ ಸದೃಶವಾದ ಸಿದ್ಧಾಶ್ರಮವಂ ಪೊಂದಿ ಮಹಾಮಹಿಮರಾದ ವಾಮದೇವರಂ ಕಂಡು ಎಲ್ಲರೂ ಅವರಿಗೆ ಸಾಷ್ಟಾಂಗವಾಗಿ ನಮಸ್ಕರಿಸುತ್ತಿರಲು, ಅವರು ರಾಯನ ಕುಶಲಗಳಂ ಕೇಳಿ ವಾನಪ್ರಸ್ಥಾಶ್ರಮ ಧರ್ಮಂಗಳೆಲ್ಲವಂ ಪೇಳಿ ಈರೀತಿಯಲ್ಲಿ ಇರುವದೆಂದು ನೇಮಿಸಲು, ಆವಾಗಿಗೆ ರಾಯನು ಮಹಾಪ್ರಸಾದವೆಂದು ವಲ್ಕಲವನ್ನುಟ್ಟು ಜಟೆಗಳಂ ಧರಿಸಿ ಘೋರತಪಃಪರನಾಗಿ ತ್ರಿಷವಣ ಸ್ನಾನಮಂ ಮಾಡುತ್ತ ಅಗ್ನಿ ಶುಶ್ರೂಷೆಯಂ ಮಾಡುತ್ತ ಸುಬುದ್ಧಿಯಿಂ ರಚಿತವಾದ ಪರ್ಣಶಾಲೆಯಲ್ಲಿ ವಾಸವಂ ಮಾಡುತ್ತ ಗುರುಸಂಪ್ರದಾಯಾನುಸಾರವಾಗಿ ಯೋಗಾಸಕ್ತನಾಗಿರುತ್ತಿರಲು, ಗುಣವತೀದೇವಿಯು ಮೊದಲಾದ ಅರಾಯನ ಪತ್ನೀಯರುಗಳು ನಾರುಶೀರೆಯನ್ನುಟ್ಟು ಋಷಿಪತ್ನೀಯರುಗಳಂತೆ ಸರ್ವದಾ ಶುಚಿರ್ಭೂತರಾಗಿ ಪತಿಸೇವೆಯಂ ಮಾಡುತ್ತ, ಅಗ್ನಿಯಂ ರಕ್ಷಿಸುತ್ತ ಋಷಿಪತ್ನೀಯರ ಸತ್ಕಥಾಲಾಪದಿಂ ಕಾಲವಂ ಕಳೆಯುತ್ತ, ಕಂದಮೂಲಗಳಂ ಜೀವಿಸಿಕೊಂಡು ಇರಲು, ಸುಬುದ್ಧಿಯು ಸತ್ಯಾಷಾಢಿಗಳ ಅನುಗ್ರಹವಂ ಪಡೆದು ನಿಯತವ್ರತನಾಗಿ ರಾಯನಂ ರಕ್ಷಿಸುತ್ತ, ಕಂದಮೂಲಗಳಂ ತಂದು ಒದಗಿಸುತ್ತ ಸತ್ಪುರುಷ ಸಹವಾಸದಿಂ ಕಾಲವಂ ಕಳೆಯುತ್ತಿರಲು,

ಇತ್ತಲಾ ಕಾವೇರೀತೀರವಂ ಬಿಟ್ಟು ಜನಗಳಿಗೆ ಕಾಣದಂತೆ ವೃದ್ಧರಾಯನು ತೆರಳಿದ ಬಳಿಕ ಸುಗಂಧರಾಜೇಂದ್ರನು ತಂದೆಯಂ ಕಾಣದೆ ತಾನೆ ಮಂತ್ರಿಸಮೇತನಾಗಿ ಬಹುಕಾಲ ಹುಡುಕಿ ಎಲ್ಲಿಯೂ ಆತನ ಕುರುಹುವಂ ತಿಳಿಯದೆ ಇದ್ದುದರಿಂದ ಮುನಿಪತಿಯ ತಪೋಮಹಾತ್ಮ್ಯದಿಂದ ಎಲ್ಲರೂ ಅದೃಶ್ಯರಾಗಿ ಜನರ ಕೋಟಲೆಯಂ ತಪ್ಪಿಸಿಕೊಂಡು ಋಷ್ಯಾಶ್ರಮವಂ ಹೊಂದಿದರೆಂದು ನಿಶ್ಚೈಸಿ ಪರಿಜನ ಸಮೇತನಾಗಿ ಪುರವಂ ಸೈದಿ ಪ್ರಜಾಪಾಲನೆಯಂ ಮಾಡುತ್ತ ಸುಖದಿಂದಿರುತ್ತಿದ್ದನೂ ಎಂಬಲ್ಲಿಗೆ,

ಕುಂಡಲಿಶಯನ ಖಂಡಪರಶು ಪುಂಡರೀಕ ಭವಾಖಂಡಲ ಪ್ರಮುಖ ನಿಖಿಲ ಸುರನರ ಪರಿಭವ ಪರಿಣತ ಪ್ರಚಂಡ ಬಲಚಂಡಮುಂಡ ವಿಖಂಡನ ನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾಕಟಾಕ್ಷವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭಾಷಾ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಸರ

ಸಕವಿತಾ ನಿಸ್ಸಹಾಯ ನಿರ್ಮಾಣ ಧೌರೇಯ ಘಟಿಕಾ ಶತಗ್ರಂಥ ವಿನವಿನಪ್ರಬಂಧ ನಿಬಂಧನಧುರಂಧರತ್ರಿಭುವನಪವಿತ್ರಾತ್ರೇಯಸಗೋತ್ರ ಸುಚರಿತ್ರ ಚಾಮರಾಜ ಮಹಾರಾಜಪುತ್ರ ಸರಪತಿಬಿರುದ ಮಹಿಶೂರ ಪುರವರಾಧೀಶ ಶ್ರೀಕೃಷ್ಣರಾಜ ವಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾ ಪರಿಣಯವೆಂಬ ಈನವೀನ ಕೃತಿಯೊಳ್ ವಾಮದೇವಋಷಿಗಳಿಂದ ರಾಜನೀತಿ ಪೂರ್ವಕವಾಗಿ ಕೌಶಲಪ್ರಶ್ನೆಯಿಂದ ಶ್ಲಾಘಿಸಲ್ಪಟ್ಟ ಸುಚರಿತ್ರರಾಯನು ಸುಗಂಧಮಹಾರಾಜೇಂದ್ರನಿಂದ ಮಾಡಲ್ಪಟ್ಟ ಮಹಾಶ್ವಮೇಧಯಾಗವಂ ನೋಡಿವಬಳಿಕ ತಪೋವನವಂ ಕುರಿತು ತೆರಳಿದ್ದಂ ನಿರೂಪಿಸಿ ಇರುವದೆಂಬಲ್ಲಿಗೆ ೩೭ನೇ ಆಶ್ವಾಸಕ್ಕೆ ಮಂಗಳಂ ಮಹಾ * ಶ್ರೀ * ಶ್ರೀ * ಶ್ರೀ

ಮೂವತ್ತೇಳನೆ ಆಶ್ವಾಸ ಸಂಪೂರ್ಣವು.

---

ಶ್ರೀರಸ್ತು

## ಮೂವತ್ತಾರನೇಯ ಆಶ್ವಾಸ ಪ್ರಾರಂಭಃ.

ಶ್ರೀಚಾಮುಂಡಿಕಾಂಬಾಯೈನಮಃ.

ಶ್ರೀರಸ್ತು ॥ ಈಪರಿಯಿಂದ ತ್ರಿಲೋಕಾಧಿಪನಾದ ದೇವೇಂದ್ರನು ಭೂಭಾರವನ್ನಿಳುಹ ಬೇಕಾಗಿ ದೂರ್ವಾಸನೆಂಬ ಮಹರ್ಷಿಯಶಾಪವನೆವದಿಂದ ಭೂಲೋಕವಲ್ಲಿ ಚಂದ್ರವಂಶದೋಳವತರಿಸಿ ದೇವೀಕಟಾಕ್ಷದಿಂದ ಅಮಾನುಷ ಸಾಮರ್ಥ್ಯವಂ ಪಡದು ಯುವರಾಜವೇಶದಲ್ಲಿಯೆ ಚೈತ್ರಯಾತ್ರೆಯಂ ತೆರಳಿ ದುಷ್ಟರಾಜರುಗಳಂ ನಿಗ್ರಹಿಸಿ ಶಿಷ್ಟರಂ ಪರಿಪಾಲಿಸುವದೆ ಕೆಲಸವಾಗಿ ಬರುತ ಕಳಿಂಗ ರಾಜಪುತ್ರಿಯಾದ ಸೌಗಂಧಿಕಾದೇವಿಯು ಪ್ರತಿಜ್ಞೆಯಂಮಾಡಿರುವ ಪಣನಿರ್ವಾಹಾರ್ಥವಾಗಿ ಲೋಕಕಂಟಕರಾದ ರಾಕ್ಷಸರಂ ಸಂಹರಿಸಿ ಸಕಲ ಪಣಂಗಳಂ ನೆರವೇರಿಸಿ ಸೌಗಂಧಿಕಾ ಕುಸುಮಲತಾ ದೇವಿಯರೀರ್ವರ ಪಾಣಿಗ್ರಹಣವಂಮಾಡಿ ತನ್ನ ರಾಜಧಾನಿಯಾದ ಕರ್ನಾಟಕ ದೇಶದೊಳಿರುವ ರತ್ನಪುರಕ್ಕೆ ಬಂದು ತಂದೆಯಾದ ಸುಚರಿತ್ರರಾಯನಿಂದ ಪಟ್ಟಾಭಿಷಿಕ್ತನಾಗಿ ಸಾರ್ವಭೌಮಪದವಲ್ಲಿರಾಜ್ಯ

ಭಾರವಂ ವಿಚಾರಿಸುತ ಸಾರ್ವಭೌಮವ್ರತ ಮೊದಲಾದ ಸಕಲ ವ್ರತಂ
ಗಳಂ ಬೆಳಯಿಸಿ, ಈರ್ವರಪತ್ನಿಯರಂ ದೊಡಗೂಡಿ ಪರಿಪರಿಯಭೋಗ ಭಾ
ಗ್ಯಂಗಳನ್ನನುಭವಿಸಿ ಜಯಂತ ನಳಕೂಬರಂತಿರುವ ಮಕರಂದಪುಷ್ಪ
ದಂತರೆಂಬ ಪುತ್ರರಂಪಡೆದುಅವರಿಗೆ ಉಪನಯನ ವಿವಾಹಾದಿಶುಭೋತ್ಸ
ವಗಳಂ ಬೆಳಯಿಸಿ ಆನಂದಭರಿತನಾಗಿ ಆಬಳಿಕಅಶ್ವಮೇಧ ಮೊದಲಾದಸ
ಕಲಕ್ರತುಗಳಂಮಾಡಿ ತ್ರಿಲೋಕಂಗಳೊಳ್ ಪ್ರಖ್ಯಾತಿಯಂ ಪಡದು ಸ
ಕಲಧರ್ಮಂಗಳಂ ವೃದ್ಧಿಗೊಳಿಸಿ ಅಖಂಡ ಸಾಮ್ರಾಜ್ಯದೊಳಿರುತ ಒಂ
ದೊಂದುದಿನ ರಾಜ್ಯಭಾರವಂ ವಿಚಾರಿಸುತ ನಾನಾದೇಶದ ರಾಜರುಗಳೊ
ಪ್ಪಿಸುವ ಕಪ್ಪಗಳಂ ಕೈಕೊಳ್ಳುತ ಅಮರೇಶ್ವರಾಲಯ ಮೊದಲಾದ ಸಂ
ಖ್ಯೆಇಲ್ಲದೆ ದೇವಾಲಯಗಳಂ ನಿರ್ಮಾಣವಂ ಮಾಡಿಸುತ ಒಂದೊಂದು ಸ
ಮಯದೊಳ್ ಅನೇಕವಾದ ಅಗ್ರಹಾರಂಗಳಂ ನೂತನವಾಗಿ ಸಂಸ್ಥಾ
ಪನಂ ಗೈಯುತ್ತ ಮತ್ತೊಂದು ಸಮಯದೊಳ್ ತನ್ನ ಆಶ್ರಿತರಿಂದಲುಂ
ಸಕಲ ಧರ್ಮಂಗಳಂ ಮಾಡಿಸಿನೋಡಿ ಸಂತೋಷಪಡುತ ಒಂದುವೇಳೆ
ಯೊಳ್ ಐರಾವತವನ್ನಾರೋಹಣಂಗೈದು, ಛಾಯಾಗುಪ್ತನಿಂದೊಡಗೂ
ಡಿ ಚಕ್ರವಾಳ ಗಿರಿಯಂಚಿನಲ್ಲಿರುವ ಚಿತ್ರವಿಚಿತ್ರವಾಗಿರುವ ಮಣಿಭೂಮಿ
ಗಳನ್ನೀಕ್ಷಿಸಿ ನೋಡಿ ಮೃಗಯಾವಿಹಾರವಂಮಾಡಿ ಬರುತ ಮತ್ತೊಂದು
ವೇಳೆಯೊಳ್ ಉಚ್ಚೈಶ್ರವಸ್ಸೆಂಬ ಅಶ್ವರತ್ನವನ್ನೇರಿ ಸಪ್ತದ್ವೀಪಂಗಳ
ಲ್ಲಿರುವ ಅರಸುಗಳು ನಡೆಯಿಸುವ ಧರ್ಮದ ತಾರತಮ್ಯವಂ ನೋಡುತ, ಆ
ಯಾದ್ವೀಪಗಳಲ್ಲಿರುವಐಶ್ವರ್ಯಕರಂಗಳಾದ ವಸ್ತುಗಳಂ ಸಾವಕಾಶವಾ
ಗಿ ನೋಡಿಸಂತೋಷಪಡುತ್ತ,ಒಂದೊಂದು ಕಾಲವಿಶೇಷದೊಳ್ ಲೀಲೆಯಿಂ
ದಸೌಗಂಧಿಕಾಕುಸುಮಲತೆಮಂದಾರಮಾಲೆ ಮೊದಲಾದರಾಣಿಯರಿಂದೊ
ಡಗೂಡಿಚಿತ್ರಲೇಖೆ ವಾಸಂತಿ ಮಾಲತಿ ಮೊದಲಾದ ಸಖೀಸಹಸ್ರಂಗಳಿಂದ
ಕೂಡಿ ಕುಬೇರ ಪುಷ್ಪಕದಂತೊಪ್ಪುವ ವ್ಯೋಮಯಾನವನ್ನೇರಿ ಗಗನ
ದೊಳ್ ಸ್ವಾರಿಯಂತೆರಳುವಾಗ ಭಯದಿಂದ ಕಂಪಿಸುವರಾಣಿಯರಗಾಢಾ
ಲಿಂಗನದ ಸುಖವನ್ನಾಯಾಸವಿಲ್ಲದೆ ಅನುಭವಿಸುತ ಬುಗುರಿಗಳಂತೆ ಕಾಣಿ
ಸುವ ಪರ್ವತದ ಸಾಲುಗಳಂ ರೇಖೆಗಳಂತೆ ಕಾಣಿಸುವ ನದಿಗಳಂ ಕನ್ನಡಿ
ಯ ಗುಂಡು ಬಿಲ್ಲೆಗಳಂತೆ ಕಾಣ್ಬರುವ ಸಮುದ್ರಂಗಳಂ ಗದ್ದೆಯ ಮಡಿ

ಗಳಂತೆ ಕಾಣಿಸುವ ದೇವದೇಶದ ಭೂಮಿಗಳಂ ಕಾಂತೆಯರಿಗೆ ತೋರಿಸಿ,ಆ
ಶ್ಚರ್ಯಗೊಳಿಸುತ ನಿಷಿದ್ಧದೊಳ್ ಗಂಧಮಾದನ, ಪವನ, ಪಾರಿಯಾತ್ರ,
ಸೇನಕೂಟ, ಕುರಂಗ, ಕುರರ, ಕರವೀರಪರ್ವತಂಗಳಂ ನೋಡಿ ಅಲ್ಲಲ್ಲಿರ್ಪ್ಪ
ಸುಮಾನಸವಂ ನಿಲ್ಲಿಸಿ ಉಪನಂದನವನ, ಚೈತ್ರರಥ, ವೈಭ್ರಾಜವನ, ಭದ್ರಾ
ಶ ಮೊದಲಾದ ದಿವ್ಯವನಂಗಳೊಳ್ ಪುಷ್ಪಾಪಚಯಮಂ ವನವಿಹಾರಮಂ
ಮಾಡುತ ಪದ್ಮಹ್ರದ, ಅಮೃತಸರೋವರ, ಸೌಗಂಧಿಕಾಸರೋವರ ಮೊ
ದಲಾದ ಜಲಾಶಯಗಳಲ್ಲಿ ನಾಗಕನ್ಯೆಯರಿಂದೊಡಗೂಡಿದ ವರುಣನಂತೆ ಜ
ಲಕ್ರೀಡೆಯಂಗೈಯುತ ಸಡಸಡಿಸುವ ಇಕ್ಷುಸರೋವರದ ಮಧುರಜಲಮಂ
ಪಾನಮಂಗೈದು ತೃಷ್ಣೆಯನುಮಂ ಪರಿಹರಿಸಿಕೊಳ್ಳುತ ದೂರದೊಳ್ ಕಾಣಿಸು
ವುದೆ ಮೇರುಪರ್ವತಮೆಂದು ತೋರಿಸುತ, ಮಾನವಾವತಾರದಲ್ಲಿಯೂ ದೇ
ವೇಂದ್ರ ಭೋಗವನ್ನನುಭವಿಸುತ್ತ, ಕರ್ಮಭೂಮಿಯಲ್ಲಿ ಉದಯಿಸಿದವನಾ
ದಕಾರಣ ಮಾನಸಬಲದಿಂದ ಭರತಖಂಡದಲ್ಲಿರುವ ತನ್ನ ನಗರಿಗೆ ಆದೇದಿನ
ದೊಳ ಮರಳಿ ತಿರುಗಿಬರುತಲೀಪರಿಯಿಂದ ಲೋಕಾತಿಶಯಮಾದ ವಿಭವ
ಮುಂ, ಮಹಿಮೆಯುಂ, ಭೋಗಮುಂ ಪಡೆದು, ಸುಚರಿತ್ರರಾಯನಂ ಕಶ್ಯ
ಪನವತಾರನೋ ಎಂದು ಜನರು ಊಹಿಸಿ ಪೊಗಳುವ ನುಡಿಗಳಂ ಕೇಳುವ
ದರಿಂದಲೂ, ಇಂದ್ರನಿಗೆ ಪ್ರಾಣಪ್ರಿಯಂಗಳಾದ ವಸ್ತುಗಳೆಲ್ಲಾ ವಶಂಗಳಾ
ಗಿ ಇರುವದರಿಂದಲೂ, ಸಪ್ತದ್ವೀಪಗಳಲ್ಲಿಯೂ ತನ್ನ ಆಜ್ಞೆಯು ನಿರಂಕು
ಶವಾಗಿ ನಡೆಯುವದರಿಂದಲೂ, ತನ್ನ ಮನದೊಳಗೆ ತಾನು ದೇವೇಂದ್ರನೊ
ನೆನೋಯೆಂದು ಸಂಶಯಂಬಡುತ ಅಷ್ಟರಲ್ಲಿಯೇ ಇದೇನಜ್ಞಾನದಿಂದ ಅಹಂ
ಕಾರವಂ ಪೊಂದಿ ಅಮರಾವತೀಪತಿಯೋ ನಾನೆಂದು ಸಂಶಯಮಂ ತಾಳ್ವೆನು,
ಪೂರ್ವದೊಳೋರ್ವ ಭೂಪಾಲನು ಸಪ್ತದ್ವೀಪಂಗಳಲ್ಲಿಯೂ ಯೂಪ
ಸ್ತಂಭಗಳಂ ನಿಲ್ಲಿಸಿ ಯಾಗಗಳಂ ಸಾಂಗವಾಗಿ ರಚಿಸಿ ಕೀರ್ತಿಯಂಪಡೆದ
ಕಾರ್ತವೀರ್ಯನಿರಲಿಲ್ಲವೆ? ಇದಲ್ಲದೆ ತಾನೇರಿರುವ ರಥದಬಂಡಿಗಳ ಅಂಚಿನಘಾ
ತದಿಂದ ಆಳವಾದ ಹಳ್ಳಗಳನ್ನೆ ಸಮುದ್ರಗಳಂಮಾಡಿ ತನ್ನ ಹೆಸರಿನಿಂದ ಧ
ರಣಿಯಂ ಪ್ರಿಯವ್ರತ ಪೃಥಿವಿಯೆನಿಸಿದ ಪೃಥುರಾಯರಿಗಿಂತಲೂ ನಾನು
ಅಧಿಕನಾಗುವೆನೆ? ಉಗ್ರತಪವಂಮಾಡಿ ಮಹೇಶ್ವರನಂ ಬೇಡಿ ಸಾಕ್ಷಾತ್ಕಾರ
ನಂಗೊಂಡು ದೇವಗಂಗೆಯಂ ಭೂಮಂಡಲಕ್ಕಿಳುಹಿ ತನ್ನ ಹೆಸರಿನಿಂದ

ಗಂಗೆಯಂ ಭಾಗೀರಥಿಯೆಂದೆನಿಸಿ ಜಗದ್ವಂದ್ಯನಾದ ಭಗೀರಥರಾಯನು ಮೊದಲಾದ ಮಹಾರಾಜರುಗಳ ಮಹಿಮೆಯಂ ಪುರಾಣಂಗಳುಕೂಡ ಬಣ್ಣಿಸುವವು, ಅಂತಿರುವಾಗ ನನ್ನ ಮಹಿಮೆ ಎಷ್ಟು? ನಾನು ಇಂದ್ರನೂ ಅಲ್ಲ, ಈಶ್ವರನೂ ಅಲ್ಲ, ಈ ವಿಭವವೆಲ್ಲ ಜಗದೀಶ್ವರಿಯಾದ ಚಾಮುಂಡಿಕಾದೇವಿಯ ಕಟಾಕ್ಷದಮಹಿಮೆಯಲ್ಲದೆ ಮತ್ತೊಂದಲ್ಲವೆಂದು ತನ್ನ ಮನದೊಳ್ ಸುಚರಿತ್ರ ವಾಮದೇವ ಮೊದಲಾದ ಗುರುಪರಂಪರೆಯ ಪ್ರಭಾವಮಂ ನೆನದು ಆಶ್ಚರ್ಯಪಡುತ, ಒಂದೊಂದು ಸಮಯದೊಳ್ ತನ್ನ ಕುಲದೇವತೆಗೆ ವಸಂತಪುಷ್ಪ ರಥೋತ್ಸವಮಂ ಕಲ್ಪವೃಕ್ಷದ ದಿವ್ಯಪುಷ್ಪಂಗಳಿಂದಲಿ ಮಾಡಿಸುತ ಮತ್ತೊಂದು ಸಮಯದೊಳ್ ಕಾಮಧೇನುವಂ ಪೂಜಿಸಿ, ಭಕ್ಷ್ಯಭೋಜ್ಯಚೋಷ್ಯಲೇಹ್ಯಪಾನೀಯರೂಪವಾದ ಪಂಚವಿಧ ಮಧುರಾಹಾರಂಗಳಿಂದ ನಾಲ್ಕಾರು ಲಕ್ಷಬ್ರಾಹ್ಮಣೋತ್ತಮರಿಗೆ ಏಕಕಾಲದೊಳ್ ಆಪೋಶನವಂ ಕೊಡುತ್ತ, ಒಂದುವೇಳೆಯೊಳ್ ಚಿಂತಾಮಣಿಯನ್ನಾರಾಧನಂಗೈದು ಒಂದೊಂದುದಿನ ನಾಲ್ಕಾರುಸಾವಿರ ವಿಪ್ರದಂಪತಿಗಳಂ ಮಣಿಸುವರ್ಣಾಲಂಕಾರಂಗಳಿಂದ ಪೂಜಿಸುತ್ತ, ಮತ್ತೊಂದು ವೇಳೆಯೊಳ್ ಶಾಸ್ತ್ರಪಾರಂಗತರಾದ ವಿದ್ವಾಂಸರುಗಳ ಪ್ರಸಂಗದೊಳ್ ಮಧ್ಯಸ್ಥಭಾವದಿಂದ ಅನುವಾದವಂಮಾಡಿ ವಿನೋದವಂಗೊಳ್ಳುತ, ಒಂದು ಕಾಲದೊಳ್ ಅಲಂಕಾರರಸಧ್ವನಿಗಳಿಂದೊಪ್ಪಿದಕಾವ್ಯ ನಾಟಕಗಳಂ ರಚನೆಯಂಗೈಯುತ, ಮತ್ತೊಂದುಕಾಲದೊಳ್ ಸಂಸ್ಕೃತ ಮೊದಲಾದ ಸಕಲಭಾಷೆಗಳಿಂದಲು ಚಮತ್ಕಾರದಿಂದೊಪ್ಪುವಂತೆ ಸರಸಕವಿಗಳಿಂದ ವಿರಚಿತಗಳಾದ ಶೃಂಗಾರಕಾವ್ಯಗಳಂ ತನ್ನ ಹೆಸರಿನಿಂದ ಕೈಕೊಂಡು ರತ್ನಾಭಿಷೇಕವಂ ಮಾಡಿಸುತ, ಒಂದೊಂದು ಹೊತ್ತಿನೊಳ್ ವೀಣೆ, ಸಾರಂಗಿ, ರಾಗಮಾಲೆ ಮೊದಲಾದ ಮಧುರವಾದ್ಯಗಳ ಸರಸ ಸಂಗೀತಮಂ ಕೇಳಿ ಹಾಯಿಗೊಳುತ, ಒಂದುಸಮಯದೊಳ್ ಕಂತುಕಕ್ರೀಡೆ, ಪಗಡೆ, ಚತುರಂಗ, ಚಿತ್ರಪತ್ರದ ಆಟಗಳಂ ನಾಡುತ್ತ, ಮತ್ತೊಂದು ಸಮಯದೊಳ್ ಛಾಯಾಗುಪ್ತನು ಬಂದು ಬಿನ್ನವಿಸುವ ಸಪ್ತದ್ವೀಪದ ಅರಸುಗಳ ಸೌಖ್ಯಸಮಾಚಾರವಂ ಕೇಳಿ ಸಂತೋಷಪಡುತ ಲೋಕವಿಚಿತ್ರವಾದ ತನ್ನ ಚರಿತ್ರವಂ ಚಿತ್ರದಿಂ ಬರೆಯಿಸುವ ವಿಲಾಸದಿಂದಿರುತ್ತ, ಒಂದೊಂದುದಿನದೊಳ್ ಶೃಂಗಾರನಾಟಕಂಗಳ ನೋಟದಿಂದ

ವಿನೋದವಂಗೊಳುತ್ತಂತ ಅಮರಾವತಿಯ ಭೋಗಕ್ಕೆ ಅಧಿಕವಾದ ಭೋ
ಗ ಭಾಗ್ಯವಂ ರತ್ನಪುರದಲ್ಲಿಯೇ ಅನುಭವಿಸುತ್ತ, ಒಂದಾನೊಂದುದಿನ
ಚಂದ್ರಶಾಲೆಯುಪ್ಪರಿಗೆ ಸೌಗಂಧಿಕಾದೇವಿಯೊಡಗೂಡಿ ಪಾಲ್ಗಡಲೀ ಬೆ
ಳದು ತುಂಬಿಬಂದಂತೆ ಇರುವ ಬೆಳದಿಂಗಳೊಳ್ ವಾತ್ಸ್ಯಾಯನತಂತ್ರ
ವೆಂಬ ಸಾಗರದ ಪಾರನಂ ಕಾಣಬೇಕೆಂಬ ಸಂಕಲ್ಪ ವಿದ್ದುದೆಂಬಂತೆ
ಒಂದೊಂದುಘಳಿಗೆ ಒಂದೊಂದು ಪರಿಯಾದ ರತಿಗಳಿಂದ ವಿಲಾಸವಂ ಗೂ
ಳುತ್ತ, ಏಕೀಭಾವವನೈದಿರುವ ರತಿಮನ್ಮಥರೆಂಬಂತೆ ಗಾಢಾಲಿಂಗನ
ಚುಂಬನ ವಿವಿಧ ಬಂಧಜಾತಿವಿಶೇಷಂಗಳೊಳ್ ತರತರವಾದ ಸುಖಂಗ
ಳಂ ಅನುಭವಿಸುತ್ತ, ಸುರತ ಸಾಮ್ರಾಜ್ಯದ ಆನಂದದೊಳ್ ತೃಪ್ತಿಯಂ
ಪಡೆಯುತ್ತಿರುವ ಸುಗಂಧರಾಜೇಂದ್ರ ಸೌಗಂಧಿಕಾದೇವಿಯರ ಕಾ
ಮಾಭಿ[illegible]ಯಂ ಪೋಷಿಸುವ ಮಹಿಮೆಯಂ, ಭೋಗೋತ್ಸಾಹವಂ
ನೋಡಿ [illegible]ಕಟ್ಟಿದ್ದ ಮಣಿಪಂಜರದ ಹಂಸತೂಲಿಕಾ ತಲ್ಪದಲ್ಲಿ ಕು
ಳಿತಿರುವ ಸುವರ್ಣಸ್ನಾ [illegible]ಮಣಿಯಾದ ಲೀಲಾಶುಕವು ಕಾ[illegible]
ವಿಸ್ಮಯದ ರಂಭಾದಿ ವಾರಸುಂದರಿಯರು ಬೃಂದಾರಿಕಾ ಸಮೀಪದಿಂದ
ತಂದು ಸೌಗಂಧಿಕಾದೇವಿಗೆ ಒಪ್ಪಿಸಿದ ಕ್ರೀಡಾಶುಕಿಯುಂ ಬ[illegible]ಸಗೆ ಕೊಡಾ
ದ ಕಾಂತೆಯೊಡನೆ ಸವಿನುಡಿಯಿಂದ ಎಲ್ಯೆ ಶುಕಿಯೆ ! ಕೇಳು ಸ್ತ್ರೀಯರಂಗ
ಳು ಮೋಹಪಡುವ ಸಮುದ್ರದೊಳ್ ಬಿದ್ದಬಳಿಕ ಎಬ್ಬತ್ತು ವಿಳುವ
ದಕ್ಕೆ ಯಾರಿಂದಲಾಗುವದು, ಪೂರ್ವದೊಳ್ ವಿರಕ್ತರಾಗಿ ತಪವಂ ಮಾ
ಡಲೆಂದು ಯೋಗಾಭ್ಯಾಸದೊಳ್ ಸಮಾಧಿಸ್ಥರಾಗಿರ್ದ ಮಹರ್ಷಿಗಳೂ
ಕೂಡಾ ಕಾಂತೆಯರ ಕುಚಕಲಶಂಗಳಿಗೆ ಹಚ್ಚಿ ಇರುವ ಕರ್ಪೂರ ಗಂಧ
ಸೌರಭದ ಸೋಂಕಿನಿಂದ ಪುಳಕಂಗೊಂಡು ಕಣ್ಣಿಗೆಂತ್ರದು ಕಾಮಬಾಣಂ
ಗಳಿಗೆ ಗುರಿಯಾಗಿ ಕಳವಳಿಸಿ ಕಡೆಗೆ ಸಂಭೋಗ ದೂಳಾತುರರಾಗಿಯುಗ
ಸಹಸ್ರಂಗಳಿಂದ ಮಾಡಿದ ತಪಸ್ಸು ಬಿಟ್ಟು ಮೈಮರತರೆಂದು ಇತಿಹಾಸಪು
ರಾಣಂಗಳು ಪೇಳುವವು, ಇದಲ್ಲದೆ ನಿರ್ಲೇಪನಾದ ಪರಬ್ರಹ್ಮನಾದ ಪುರ
ಷೋತ್ತಮನು ಸಹ ಪ್ರಕೃತಿ ಎಂಬ ಕಾಂತೆಯಿಂ ದೊಡಗೂಡಿದ್ದರಿಂದ
ಸಕಲ ಭುವನಂಗಳ ಸೃಷ್ಟಿ ಸ್ಥಿತಿ ಸಂಹಾರಂಗಳೆಂಬ ಮಹಾಸಂಸಾರದ
ಸಂಕಷ್ಟ[illegible] ಒದ್ದಾಡುವನು, ಅನಿರವಾಡು

ಇಂತಿರುವಾಗ ಚತುರ್ಮುಖ ಪುರಂದರರು ಮೊದಲಾದವರಂ ಪೇಳುವದೇನು? ಅಂಗನೆಯರ ಅಂಗಸಂಗ ಸುಖದಿಂದ ಜ್ಞಾನವು ವೈರಾಗ್ಯವು ಪೂರ್ವ ಜನ್ಮಸ್ಮರಣಾ ವಿವೇಕ ಮೊದಲಾದ ಗುಣಂಗಳೆಲ್ಲಾ ಮಲಿನಂಗಳಾಗಿ ಪುರುಷನು ಪರವಶನಾಗುವನಲ್ಲದೆ ಮನಮಂ ತಡೆದು ನಿಜಸ್ವರೂಪವಂ ತಿಳಿಯುವದಶಕ್ಯವು, ಅದರಿಂದ ಕಾಮದಲ್ಲಿಯೂ, ಅರ್ಥದಲ್ಲಿಯೂ, ಅಧಿಕಾಸಕ್ತನಾಗದೆ ಉಚಿತಭೋಗವನ್ನನುಭವಿಸುತ ಎಚ್ಚರವಾಂತಿರುವ ಮಹಾಪುರುಷನಲ್ಲಿರುವನೊ? ಯೌವನಸ್ತ್ರೀರೂಪದ ಉಪರ್ಕೆ ಬಲದಿಂದಲಾಗುವದೊ ಎಂದು ನುಡಿಯುವ ತನ್ನ ಸತಿಯಾದ ಲೀಲಾಶುಕವಂ ಕುರಿತು ಕ್ರೀಡಾಶುಕಿಯು ಎಲೈ ಸರ್ವಜ್ಞನಾದ ಶುಕಸ್ವಾಮಿಯೇ! ನೀವಿಂತು ಪೇಳುವದೇನು, ಇದಾಕ್ಷೇಪವಲ್ಲ ಲೋಕದೊಳ್ ಪುರುಷನು ಕಳಾವತಿಯಾದ ಕಾಂತೆಯಿಂದೊಡಗೂಡಿ ಕಳಾನುಭವಂಗಳಂ ತಿಳಿದು ಶೃಂಗಾರರಸದ ನೆಲೆಯಂ ಕಂಡು ರಸಜ್ಞನೆನಿಸಿಕೊಂಡು ಇದಲ್ಲದೆ ಗೃಹಸ್ಥ ಧರ್ಮವನ್ನವಲಂಬಿಸಿ ಸ್ವರ್ಗಾಪವರ್ಗಂಗಳಂ ಸಾಧಿಸುವ ಪರಮ ಪುಣ್ಯಕರ್ಮಂಗಳಂ ಮಾಡುವದಕ್ಕೆ ಅಧಿಕಾರವಂ ಪಡೆದು ಪ್ರಜಾವಂತನಾಗಿ ದೇವಋಷಿ ಪಿತೃಗಳಂ ಪ್ರೀತಿಗೊಳಿಸಿ ನಿಜಧರ್ಮದಲ್ಲಿಯೇ ಇರ್ದು ಪರಬ್ರಹ್ಮನಂ ತಿಳಿಯುವನು, ಈ ಅರ್ಥಕ್ಕೆ ಜರತ್ಕಾರುವೆಂಬ ಋಷಿಯೆ ನಿದರ್ಶನವು, ಆದುದರಿಂದ ಸ್ತ್ರೀಯರುಗಳೇ ಪುಣ್ಯವತಿಯರೆಂದು ಪೇಳಬಹುದು, ಅದಲ್ಲದೆ ಪರಮಾತ್ಮನು ಒಬ್ಬನಾಗಿರುವಾಗ ಕ್ರೀಡಿಸುವುದಕ್ಕೆ ಮತ್ತೊಂದು ವಸ್ತುವಿಲ್ಲದೆ ಬೇಸರಗೊಂಡು ತನ್ನಿಚ್ಛೆಯಿಂದಲೇ ಮೂಲಪ್ರಕೃತಿಯೆಂಬ ಸತಿಯಿಂದೊಡಗೂಡಿದರಿಂದಲೇ ಸಕಲ ಭುವನ ನಿರ್ಮಾಣದಲ್ಲಿಯೂ, ಶಕ್ತಿಯಂತಾಳಿ ಅವಧಿಯಿಲ್ಲದೆ ಭೋಗವನ್ನನುಭವಿಸುವನು, ಇಂತಿರುವಾಗ ಸ್ತ್ರೀಯರುಗಳಿಂದ ಪುರುಷರು ಸ್ವಸ್ವರೂಪವಂ ಮರೆತು ಮೋಹದೊಳ್ ಬೀಳುವರೆಂದು ತ್ರಿಕಾಲಜ್ಞರಾದ ನೀವು ಭಾವಗರ್ಭವಾಗಿ ನುಡಿಯುವುದಂ ಕೇಳಿ ಪರಿಭಾವಿಸಿದಡೆ ಯಾವದೋ ಒಂದದ್ಭುತಕಾರ್ಯವಂ ಸೂಚಿಸಬೇಕಾಗಿ ನುಡಿದಂತೆ ತೋರುವದೆಂದು ಪೇಳ್ದಳಾ ಮಾತಿಗೆ ಲೀಲಾಶುಕವು ಎಲೈ ಕಾಂತೆಯೆ! ನೀನು ಪಕ್ಷಿಜಾತಿಯಾದರೂ ಬೃಂದಾರಿಕಾ ಯೋಗಿನಿಯ ಸಾನ್ನಿಧ್ಯದ ಮಹಿಮೆಯಿಂದ ವಿವೇಕವಂ ಪಡೆದಿರುವ ನಿನ್ನ ಮಾತುಗಳಿಗೆ ಪರ್ಯಾಲೋಚನವಂಗೈವ ಬುದ್ಧಿ

ಜಾತಿಗೂ ನಾನು ಪುಟ್ಟದನು, ನಿನಗಿರುವಬುದ್ಧಿಯು ನನ್ನ ಸುಗಂಧರಾಜೇಂದ್ರಂಗ ಇಲ್ಲವಾಯಿತು, ಸೌಗಂಧಿಕಾದೇವಿ ಯೊಡಗೂಡಿಭೋಗಾಸಕ್ತನಾಗಿ ಪೂರ್ವಸ್ಮರಣವಿಲ್ಲದೆ ಅಮರಾವತಿಯ ಭೋಗವನ್ನು ಮರೆತು ಭೂಲೋಕವಸುಖ ಲೇಶದೊಳಾಸಕ್ತನಾಗಿರುವದರಿಂದ ಸ್ತ್ರೀಯರುಗಳೊಳ್ ವ್ಯಾಮೋಹವವಿಕ ವಾಗಬಾರದೆಂದು ಹೇಳಿದೆನು ಎಂದು ನುಡಿಯುವ ಪತಿಯೊಡನೆ ಕ್ರೀಡಾಶುಕಿಯು ಆಶ್ಚರ್ಯದಿಂದ ಎಲೈ ಮಹಾಮಹಿಮನೆ! ಈಸುಗಂಧರಾಜೇಂದ್ರನು ಅಮರಾವತಿಯ ಭೋಗವಂ ಮರೆತು ಇರುವನೆಂದು ಹೇಳಿದೈ, ತ್ರೈಲೋಕ್ಯಾಧಿಪತ್ಯವಂ ಬಿಟ್ಟು ದೇವೇಂದ್ರನು ಈಲೋಕದೊಳವತಾರವಂಗೈಯುವದಕ್ಕೆ ಕಾರಣವೇನು, ಇದರಪರಿಯಂ ಎನ್ನಲ್ಲಿಕರುಣೆಯಿಂದ ನಿರೂಪಿಸ ಬೇಕೆಂದು ಬೇಡಿಕೊಳ್ಳುವ ಕ್ರೀಡಾಶುಕಿಸೊಡನೆ ಲೀಲಾಶುಕವು ಎಲೈ ಸಖಿಯೆ ! ಈರಾಜೇಂದ್ರನವತಾರ ನಿಮಿತ್ತವಂ ವಿಸ್ತರಿಸಿ ಹೇಳುವೆನು ಕೇಳು. ಪೂರ್ವದೊಳ್ ಅಮರಾವತಿಯಲ್ಲಿ ದೇವೇಂದ್ರನು ಒಂದು ದಿನ ಶಚೀಸಮೇತನಾಗಿ ಐರಾವತವನ್ನೇರಿ ವಿಹಾರಾರ್ಥವಾಗಿ ನಂದನವನಕ್ಕೆ ಹೋಗಿ ಬರುವಾಗ ತನ್ನಮನಸಿನೊಳ್ ಭೂಲೋಕದ ಸೌಖ್ಯವನ್ನನುಭವಿಸುವದು ಎಂತಿರುವದೋ ಎಂದು ನೆನೆಯುತ್ತ ಬರಲು, ಆ ಯೋಚನೆಗೆ ಸರಿಯಾಗಿ ಭೂಲೋಕದೊಳ್ ರಾಕ್ಷಸರ ಬಾಧೆಯಿಂದಲು, ದುಷ್ಟರಾದ ಕ್ಷತ್ರಿಯರ ಧರ್ಮವಿರುದ್ಧಂಗಳಾದ ನಡತೆಗಳಿಂದಲು ಭಾರವೇರಿ ಭೂಮಿದೇವಿಯು ಸೈರಿಸಲಾರದೆ ಬ್ರಹ್ಮನನ್ನು ಕುರಿತು ಮೊರೆಯಿಡಲು, ಆಗ ಚತುರ್ಮುಖನು ತನ್ನ ಮನದಲ್ಲಿ ಆಲೋಚಿಸಿ ಈಗ ಪುರಂದರನ ಅಭಿಲಾಷೆಯು ಸಫಲವಾಗುವಂತೆಯೂ ಅವನ ದೆಸೆಯಿಂದಲೇ ಭೂಭಾರ ತೊಲಗಿ ಧರ್ಮ ಸಂಸ್ಥಾಪನ ವಾಗುವಂತೆಯು ಮಾಡಿಸಬೇಕೆಂದು ನಿಶ್ಚಯಿಸಿ ದೂರ್ವಾಸನೆಂಬ ಋಷಿಗೆ ಆಜ್ಞಾಪಿಸಲು, ಆಮುನಿಯು ಅಮರಾವತಿಗೆ ಬಂದು ಎದುರಾಗಿ ಗಜಾರೂಢನಾಗಿ ಬರುವ ದೇವೇಂದ್ರನಂ ನೋಡಿ ದೇವತಾಪ್ರಸಾದವಾದ ಒಂದು ಸುವರ್ಣಕಮಲಮಾಲೆಯಂ ಕೊಡಲು ದೈವಗತಿಯಿಂದ ದೇವೇಂದ್ರನು ಆತನಿಗೆನಮಸ್ಕರಿಸದೆ ಆಪುಷ್ಪಮಾಲೆಯಂ ಉಪೇಕ್ಷಿಸಿ ಐರಾವತದ ಕುಂಭಸ್ಥಳದ ಮೇಲಿಡಲು, ಆಗಜವುತನ್ನಸ್ವಭಾವ ಬುದ್ಧಿಯಿಂದ ಆಮಾಲೆಯಂ ಪಾದದಿಂ ತುಳಿಯಲು ಆಮಹಾಪುರುಷನಾದ

ದೂರ್ವಾಸನು ಕೋಪಾಕ್ರಾಂತನಾಗಿ ಭೂಲೋಕದೊಳ್ ಜನಿಸುವುದೆಂದು ಶಾಪವಂಕೊಟ್ಟು, ಆಮಹೇಂದ್ರನ ಹಿಂಭಾಗದೊಳ್ ಚಾಮರವಂ ಬೀಸುತ್ತಿರುವ ಮಾತಲಿಯಂ ಕುರಿತು ಮುನಿವರ್ಯನು ಎಲೈ ದುರಾತ್ಮನೆ ! ಈ ಮಂದ ಬುದ್ಧಿಯಾದ ಇಂದ್ರನಿಗೆ ವಿವೇಕ ತಿಳಿಸದೆ ಇದ್ದುದ್ದರಿಂದ ಈತನೊಡನೆ ನೀನು ಭೂಲೋಕವಂ ಪಡೆಯೆಂದು ಶಪಿಸಿ ಅದೃಶ್ಯನಾದನು, ಆಶಾಪದ ಮಹಿಮೆಯಿಂದ ಆ ದೇವೇಂದ್ರನೆ ಈಸುಗಂಧರಾಜೇಂದ್ರನಾಗಿ, ಆಶಚಿಯೆ ಈ ಸೌಗಂಧಿಕಾದೇವಿಯಾಗಿ ಮಾತಲಿಯೇ ಮಂತ್ರಿಯಾದ ಸುಮತಿಯಾಗಿ, ಈಭೂಲೋಕದೊಳ್ ಅವತರಿಸಲು, ನಾನು ಅಮರಾವತಿಗೆ ಸಂದರ್ಶನದಿಂದ ಬಂದು ಶಚೀಪುರಂದರರಂ ಕಾಣದೆ ವ್ಯಸನವಂಗೊಂಡು ಮರಳಿ ನಾರದರ ಪಾದವಂ ಕಂಡು ಆಸರ್ವಜ್ಞನಿಂದ ದೇವಕಾರ್ಯದ ರೀತಿಯು ಸೆಲ್ಲವಂ ತಿಳಿದು ಈಸೌಗಂಧಿಕಾದೇವಿಯು ಸಮೀಪಕ್ಕೆ ಎಂದಿನಂತೆ ಶೇರಿ ಋಷಿಶಾಪದಿಂದ ಅಲ್ಲಲ್ಲಿ ಭೂಲೋಕದೊಳ್ ರಾಕ್ಷಸರ ವಶಂಗಳಾಗಿರುವ ಐರಾವತ ಮೊದಲಾದ ವಸ್ತುಗಳಂ ಪಣವಾಗಿ ಕೇಳಿಸಿದನು, ಆಗ ಸುಗಂಧರಾಜೇಂದ್ರನು ಪ್ರತಿಜ್ಞೆಯಂಗೈದು, ಉಪವಿಂಧ್ಯಗಿರಿಯಲ್ಲಿ ಬಿದ್ದಿದ್ದ ವಜ್ರಾಯುಧವನ್ನೆತ್ತಿ ರಾಜರಂ ಗೆಲ್ದು, ಆಬಳಿಕ ಪ್ಲಕ್ಷದ್ವೀಪಕ್ಕೆ ಪೋಗಿ ಉಗ್ರಬಾಹುವೆಂಬ ದೈತ್ಯನಂ ಸಂಹರಿಸಿ ಐರಾವತವಂ ತಂದು, ಆಬಳಿಕ ಇಳಾವೃತಖಂಡಕ್ಕೆ ತೆರಳಿ ಜಂಝಾಮಾರುತನಂ ಸಂಹರಿಸಿ, ಅಲ್ಲಿ ಶಚಿಯಲ್ಲಿರುವ ಭಾರದ್ವಾಜ ಪುತ್ರಿಯಾಗಿ ಬದರಿಕಾಜನಕ್ಷೇತ್ರದಲ್ಲಿ ದೇವೇಂದ್ರನೇ ಪತಿಯಾಗಬೇಕೆಂದು ಪೂರ್ವದಲ್ಲಿ ತಪವಂ ಮಾಡಿದ ಪ್ರಜಾಪತಿಯು ಅವತಾರವಾದ ಕುಸುಮಲತಾ ದೇವಿಯಂ ಅಲ್ಲಿಯೇ ಗಂಧರ್ವವಿವಾಹವಂ ಮಾಡಿಕೊಂಡು ಉಚ್ಚೈಶ್ರವಸ್ಸೆಂಬ ಅಶ್ವರತ್ನವಂ ತಂದು ಅಲ್ಲಿಂದ ಪುರುಷಾಮೃಗನಂ ಕಂಡು ಶೈವಮಾಹಾತ್ಮೆಯಂ ಭಕ್ತಿಯಿಂದ ತಿಳಿದು, ಬಳಿಕಪಾತಾಳಲೋಕವಂ ಸಾರಿ ಮಹಾನಾಗನಮಗಳಾದ ಮಾಲಿನಿಯೆಂಬ ಕಾಂತಾಶಿರೋಮಣಿಯಂ ಚಿಂತಾಮಣಿಯಂಕೂಡ ಪಡೆದು ಶಾಲ್ಮಲಿ ದ್ವೀಪದೊಳ್ ದುರ್ಧರ್ಷನಂ ಮಕ್ಕಲಿಕ್ಕಿ, ಆಬಳಿಕ ಶಾಕದ್ವೀಪಕ್ಕೆ ಪಯಣವಂಮಾಡಿ ಲೋಹಿತಾಕ್ಷನೆಂಬ ರಾಕ್ಷಸನಂ ವಧಿಸಿ ಕಲ್ಪವೃಕ್ಷಮಂ ಗೈಕೊಂಡು ಮಂದಾರಮಾಲೆಯಂ ಲೀಲೆಯಿಂದ ಕೂಡಿಬಂದು ಅನಂತರ

ಸುವವಕ್ಕೆ ಯಾರಿಂದಲಾಗುವದು ಎಂದು ನುಡಿಯುವ ಶುಕದಂಪತಿಗಳ ಸ
ವಿಲಾಪವಾತುಗಳಂ ಸುಗಂಧರಾಜ ಸೌಗಂಧಿಕಾದೇವಿ ಸರ್ವರೂ ಕನಸಿನ
ಲ್ಲಿ ಕೇಳಿದಂತೆ ಕೇಳಿಬೆಚ್ಚಿಬಿದ್ದಂತೆಎದ್ದು ಇದೇನೆಂದು ನಾಲ್ಕು ಕಡೆಯೊಳುಂ
ನೋಡುತ್ತ ವಿಭಾವಿಸುವ ಸಮಯಕ್ಕೆ ಸರಿಯಾಗಿ ಶಾಪವು ಚಂದ್ರಮಂ
ಡಲಕ್ಕೆ ಮುಚ್ಚಿರುವ ಮೇಘವು ಪರಿಹರಿಸಲ್ಪಟ್ಟಂತೆ ವಿಪಕ್ಷಿಮುಕ್ತೆಯಾಗಿ
ಕಟ್ಟಿದ್ದ ತೆರೆಯುಂ ತೆಗೆದಂತೆ ಸದ್ಗುರೂಪದೇಶದಿಂದಅವಿದ್ಯಾಸಂಬಂಧವಂ
ತೊಲಗಿಸಿ ಆತ್ಮಸ್ವರೂಪವಂ ತಿಳಿಯುವ ಮಹಾ ಯೋಗಿಯಂತೆ ಪೂರ್ವರೂ
ಪದ ಸ್ವರೂಪಂಗಳಂ ತಿಳಿಯುವ ದಿವ್ಯ ಜ್ಞಾನವುಂಟಾಗಿ ಆಕ್ಷಣದೋಳ್
ಅಮರಾವತಿಯಲ್ಲಿ ರಾಕ್ಷಸರೊಡನೆ ಯುದ್ಧವಂ ಮಾಡುವಂತೆ ತೋರಿ ಮಾ
ತಲಿಯೋ ಮಹಾಯುಧ ವಲ್ಲಿಯಲ್ಲಿ ಬ್ಯಾಗತಾರೆಂದು ಉಸುರುತ ಅಸುರರ
ಉಸುರುಗಳ ಹೆಸರಿಲ್ಲದಂತೆ ಮಾಡುವೆನೆಂದು ಕೋಪವಂತಾಳಿ ಅಟ್ಟಹಾ
ಸದಿಂದಿರುವ ರಾಜೇಂದ್ರನಂ ಕಂಡು ಲೀಲಾಶುಕವು ಎಲೈ ಭೂಪಾಲಶಿರೋ
ಮಣಿಯೆ! ನೀನು ಮನುಷ್ಯನು ದಾನವನೆಂದರೇನು? ಮಾತಲಿಯಂ ಕರೆ
ಯುವ ಬಗೆಯೇನು? ಇದೇನು ಕಂಡ ಕನಸೋ? ಅಲ್ಲದಿರೆ ಪುಷ್ಪಾಸನಂ
ಗಳಂ ಸೇವಿಸಿದ ಮಹಿಮೆಯೊ? ಇದೂಅಲ್ಲದಿರೆನನ್ನನ್ನು ತಿರ್ಯಗ್ಜಾತಿಯೆಂದು
ತಿಳಿದು ಈಗ ನಿಮ್ಮಿರ್ವರಲ್ಲಿಯು ನಡೆದ ಸಂಭೋಗದ ಪರಿಗಳಂ ಮರೆಮಾ
ಚುವ ನುಡಿಗಳೊ? ಏನಾಶ್ಚರ್ಯಮೆಂದು ಕೇಳುವ ಲೀಲಾಶುಕದ ನುಡಿಗ
ಳಂ ಕೇಳಿ ಸೌಗಂಧಿಕಾದೇವಿಯು ತನ್ನ ಪತಿಯಂ ಕುರಿತು ಎಲೈ ಸ್ವಾಮಿ
ಯೆ! ಈ ಶುಕವು ನಾರದನ ಅನುಗ್ರಹದಿಂದಬಂದ ನಮ್ಮ ಲೀಲಾಶುಕವಲ್ಲ
ವೇ ಎಂದುನುಡಿದು ಥಿಗ್ಗನೆದ್ದು ಪಂಜರದಿಂದ ಶುಕವನೆತ್ತಿ ಹಿಡಿದು ಮು
ದ್ದಾಡಿ ಎಲೈ ಶುಕವೆ! ನಾನು ನಿನಗೆ ಅಪರಾಧವಂ ಮಾಡಿಬಂದೆನು ಅದ
ನ್ನೆಲ್ಲ ಮನದಲ್ಲಿ ಮಡಗದಿರೆಂದು ಬೇಡಿಕೊಳ್ಳುತಲಿರುವಸಮಯದಲ್ಲಿ ದೇವೇಂ
ದ್ರನಾದ ಸುಗಂಧರಾಜೇಂದ್ರನು ಎಲೈ ಶುಕವೇ! ಪೂರ್ವದೋಳ್ ನೀನು
ಹೇಳಿದ ಸಪ್ತತಿಕಥೆಗಳಂ ಕೇಳಿದರೂ ನಿಜಸ್ವರೂಪವಂ ತಿಳಿಯದವನ್ನಿರಾ
ಯುವಂತೆ ನನ್ನಂಮರೆಮಾಚಿ ನುಡಿಯುವ ನಾರದನ ಮಹಾ ಅನುಗ್ರಹವು
ನನ್ನಲ್ಲಿಯೂ ಇರುವದು, ಆತನ ದೆಸೆಯಿಂದ ನನ್ನರಸಿಯಾದ ಈ ಶಚೀದೇವಿ
ಗೆ ವಿನೋದಾರ್ಥವಾಗಿ ಬಂದಿರುವ ಲೀಲಾಶುಕವಲ್ಲವೆ? ನೀನು ಸರ್ವಜ್ಞಾ

ನಾಗಿರ್ದ ಕೌಪರಿಯಿಂದ ಅಪಲಾಪದ ನುಡಿಗಳಂ ಪೇಳುವದು ವಿಹಿತವಹು ದೇ ಎಂದು ಕೇಳುವ ರಾಜೇಂದ್ರನಂ ಕುರಿತು ಎಲೈ ಸ್ವಾಮಿಯೇ! ಇಷ್ಟು ದಿನ ಪರ್ಯಂತವು ಈ ನಿಜ ಸ್ವರೂಪ ನಿರ್ಣಯವು ತಿಳಿಯದೆ ಅರಸಿಯಂ ದೊಡಗೂಡಿ ಲೀಲೆಯಿಂದ ಕಾಲನಂ ಕಳಿಯುತ ಅನುರಾಗವತಿಯಂ ಮರತು ದೇವತೆಗಳಂ ನೆನಯದೆ ಸಾಧಾರಣ ಮಾನವನಂತೆಯಿರ್ದ ಈಗಲಾದುದೂ ನನ್ನಂ ಲೀಲಾಶುಕವೆಂದು ತಿಳಿಯಬೇಕೆಂದೇ ಯೆನುತ್ತ ನುಡಿಯುವ ಶುಕದ ಬುದ್ಧಿ ವಾಕ್ಯವಂ ಕೇಳಿ ಲಜ್ಜೆಯಿಂ ತಲೆವಾಗಿ ತಮ್ಮ ತಮ್ಮ ನಿಜಸ್ವರೂ ಪಗಳ ನೆಲೆಯಂ ಭೂಲೋಕದೊಳ್ ಅವತರಿಸಿದ ಕಾರ್ಯವಂ ಈಶ್ವರ ಸಂ ಕಲ್ಪ ವಿಲಾಸವನಿದುಂ ವಿಶದವಾಗಿ ತಿಳಿಯುತ್ತ ಬರಲು, ತನ್ನ ಮಗನಾದ ಜಯಂತನಂ ಕಾಣದೆ ವಿವಿಧ ತಪಿಯುತಾಕೆ ನಿಂದು ಕಂಬನಿಯಂ ದುಂಬ ಹಂಬಲಿಸುವ ರಾಣಿಯಂ ಕಂಡು ರಾಜೇಂದ್ರನು ಯಕ್ಷನಂ ಧ್ಯಾನಿಸಲು ತ ಕ್ಷಣವಲ್ಲಿಯೇ ಪಕ್ಷಿರಾಜನಂತೆ ವೇಗದಿಂ ಬಂದು ಎದುರಾಗಿ ಕೈಮುಗಿದು ನಿಂತಿರುವ ಧಾಮನಾಗುಷ್ಟನಂ ಕುರಿತು ಎಲೈ ಮಹೀಶನಾಜ್ಞಾಪಾತ್ರನಾದ ಯಕ್ಷನೇ! ನೀನು ಶೀಘ್ರದಿಂದ ಅಲಕಾಪುರಿಯ ಮಾರ್ಗದಿಂದ ಕ್ರೌಂಚ ದ್ವೀಪಕ್ಕೆ ಪೋಗಿ ದೂರ್ವಾಸರ ಶಾಪವು ಕಳದ ವೃತ್ತಾಂತವಂ ನಮ್ಮ ಗುರುವಾದ ಸುರಾಚಾರ್ಯಂಗೆ ಬಿನ್ನವಿಸಿ ಅಯೋನಿಸ್ಮ್ರಂತನಾದ ಜಯಂತ ನಂ ಬ್ಯಾಗ ಕರತರುವಂತೆ ಅಪ್ಪಣೆ ನೀಡಲಾಗ ಯಕ್ಷನು ಸಹಸ್ರಾಕ್ಷಂ ಗಳಿಂದೊಪ್ಪಿರುವ ಸುಗಂಧರಾಜೇಂದ್ರ ಶರೀರವಂ ಕಂಡು ಪರಮಹರ್ಷವಂ ಗೊಂಡು ದೇವತೆಗಳ ಕಷ್ಟವೆಲ್ಲವು ತೀರಿತೆಂದು ತಿಳಿದು ಸುಗಂಧರಾಜೇಂ ದ್ರಂಗೆ ಸಾಷ್ಟಾಂಗವೆರಗಿ ಮನೋವೇಗದಿಂದ ಕ್ರೌಂಚದ್ವೀಪವಂ ಸೇರಿ ಜಯಂತನಂ ಕಂಡು ನಮಿಸಿ, ಎಲೈ ಸ್ವಾಮಿಯೆ! ನಮ್ಮೊಡೆಯನಾದ ಸುಗಂ ಧರಾಜೇಂದ್ರರವರು ನಿಮ್ಮನ್ನೋಡಬೇಕಾಗಿ ಬ್ಯಾಗ ಬರುವಂತೆ ನೇಮಿಸಿ ರುವರು, ಇದು ಮಲ್ಲದೆ ಸುರಾಚಾರ್ಯ ನಳಕೂಬರರಂ ಬರುವಂತೆ ಆಜ್ಞೆ ಯಾಗಿರುವದೆಂದು ಪೇಳಲಾ ಮಾತಿಗೆ ಜಯಂತನು ಇದೇನು ನಮ್ಮೆಲ್ಲರಂ ಭರತಖಂಡಕ್ಕೆ ಬರುವಂತೆ ನೇಮಿಸಿದನು, ಆಶ್ಚರ್ಯವೊಂದು ಎಲ್ಲರೂ ಕೂ ಡಿ ಬೃಂದಾರಿಕಾ ಯೋಗಿನೀ ಸಮೀಪವಂ ಕುರಿತು ಬಂದು ಇವರ ಪರಿಯೇ ನೆಂದು ಕೇಳಲಾ ಯೋಗಿನಿಯು ದಿವ್ಯದೃಷ್ಟಿಯಿಂದ ಪರಿಭಾವಿಸಿ ನೋಡಿ

ಈಗಿನ ಕಾರ್ಯವಂ ಸುರಾಚಾರ್ಯನರಿಯನೆ ಎಂದು ನುಡಿಯುತ ದೇವೇಂದ್ರನಿಗೆ ದೂರ್ವಾಸನ ಜನದನುಗ್ರಹರೂಪವಾದ ಶಾಪವು ತೀರಿಬಂದಂತೆಕಾಣುವದು, ಆದರಿಂದ ಸೌಗಂಧಿಕಾದೇವಿಯಾದ ಶಚಿಯು ನಿನ್ನನ್ನು ನೋಡಲೆಣಿಸಿರುವಳೇನೊ? ಈಗಲೆ ಮನುಷ್ಯರೂಪದಿಂದಿರುವ ಶಚೀಪುರಂದರರ ವೈಭವವನ್ನೋಡಿ ಬರುವಾಯೆಂದು ಯಕ್ಷನಿಂದೊಡಗೂಡಿ ಅಂತರಿಕ್ಷಮಾರ್ಗದಿಂ ತೆರಳಿ ಒಂದೇಕ್ಷಣದಲ್ಲಿ ರತ್ನಪುರದ ಅರಮನೆಯ ಉಪರಿಭಾಗದಲ್ಲಿರುವ ಚಂದ್ರಕಾಂತ ವಿಲಾಸವೆಂಬ ಮಂದಿರಕ್ಕೆ ಬರಲು, ಆಗ ಸುಗಂಧರಾಜೇಂದ್ರನು ಮಹಾಯೋಗಿನಿಗೆ ಪ್ರಣಾಮವಂಮಾಡಿ, ಆಬಳಿಕ ಸುರಾಚಾರ್ಯಂಗಭಿವಂದಿಸಿ, ನಳಕೂಬರನಿಗೆ ಪ್ರೇಮಾಲಿಂಗನವಂಕೊಟ್ಟು, ಜಯಂತನಂ ಪ್ರೇಮದಿಂ ಶಿರಸ್ಸನಾಘ್ರಾಣಿಸಲು, ಆಗನಮಸ್ಕಾರವಂ ಮಾಡುವ ಜಯಂತನಂ ನೋಡಿ, ವಾತ್ಸಲ್ಯನಿಮಿತ್ತವಿಹಾರಿ ಸೌಗಂಧಿಕಾದೇವಿಯು ಕುಚಗಳೊಳ್ ಸ್ತನ್ಯವುಕ್ಕಿಬರಲು ಪ್ರೇಮವುಬ್ಬಿ ಮಗನಾದ ಜಯಂತನಂ ಪ್ರೇಮದಿಂ ಮುದ್ದಿಟ್ಟು ಎಲೈ ಆಯುಷ್ಮಂತನೆ! ಈದಿನಪರಿಗೂ ಎಷ್ಟು ಶ್ರಮೆಯಿಂದ ಕಾಲವಂ ಕಳೆದೆಯೊ? ಎಂದು ಮುತ್ತಿನ ಚಿಪ್ಪುಗಳಿಂದ ಸುರಿವ ಆಣಿಮುತ್ತುಗಳಂತೆ ಬಗಸೆ ಕಣ್ಣುರೆಪ್ಪೆಗಳಿಂದ ಗಳಗಳನೆ ಕಂಬನಿಗಳಂ ಸುರಿವ ಸೌಗಂಧಿಕಾದೇವಿಯಂ ನೋಡಿ ಬೃಂದಾರಿಕಾಯೋಗಿನಿಯು ಎಲೈ ಸೌಮಂಗಲ್ಯವತಿಯಾದ ದೇವೇಂದ್ರನ ಅರ್ಧಾಂಗಿಯೆ! ಕೇಳು ಎಡೆಬಿಡದೆ ಇರುವ ನಿಮ್ಮ ದಂಪತಿಗಳಿಗೆ ಕೆಲವುಕಾಲ ವಿಯೋಗವು, ಭೂಲೋಕದೊಳ್ ಅವತಾರವು, ನಿನ್ನ ಪತಿಗೆ ಅನೇಕದಾನವರೊಡನೆ ಯುದ್ಧವು ಇವುಮೊದಲಾದ ಶ್ರಮವು ನಿಮಗೆ ಬಂದಿರುವಾಗ ಜಯಂತಮೊದಲಾದ ನಮಗೆಲ್ಲ ಸುಖವೆಂತು ದೊರಕುವದೆಂದು ನುಡಿಯುವ ಯೋಗಿನಿಯ ಮಾತಂಕೇಳಿ, ಸೌಗಂಧಿಕಾದೇವಿಯು ಎಲೈ ಮಹಾಮಹಿಮಳೆ! ನಮ್ಮ ಸಾಮ್ರಾಜ್ಯಕ್ಕೆ ಅಭಿಮಾನ ದೇವತೆಯು ನೀನಲ್ಲವೆ? ನಿನ್ನ ಸಮೀಪದಲ್ಲಿರುವ ಜಯಂತನಿಗೆ ಶ್ರಮವೆಂಬುದಿಲ್ಲ ಎಂದು ನಾನು ವಾತ್ಸಲ್ಯದಿಂದ ಇಂತು ನುಡಿದೆನು, ನಿನ್ನ ಚಿತ್ತದಲ್ಲಿ ಬ್ಯಾಸರಂಗೊಳಲಾಗದು ಎಂದು ನುಡಿಯುವ ಸೌಗಂಧಿಕಾದೇವಿಯು ಸುಗಂಧರಾಜೇಂದ್ರ ಇರ್ವರೂ ಕೇಳುವಂತೆ ಬೃಂದಾರಿಕಾಯೋಗಿನಿಯು ಎಲೈ ಕೇಳಿ, ನಿಮ್ಮ ಬಂದುಘಳಿಗೆಯು ಶ್ರ

ಗಿರಿಯು ಅಡರಿಬಿದ್ದು ಪೋದನೆಂಬಂತೆಯುಂ, ಇಂದ್ರನು ಅಮರಾವತಿಗೆ ಬರುವ ಸಮಾಚಾರವಂ ವರುಣನಿಗೆ ತಿಳುಹಬೇಕೆಂದು ತೆರಳಿದನೆಂಬಂತೆ ಚಂದ್ರನು ಅಸ್ತಂಗತನಾಗಲು, ಆಬಳಿಕ ಕೂಡಿಬರುವ ಕಾರ್ಯಕ್ಕೆ ತೆಡವಾಗದೆಂದು ದೇವತೆಗಳು ಬ್ಯಾಗಹೋಗೆಂದು ಕಳುಹಿಸಿದರೆಂಬಂತೆ, ಮಕರಂದನ ಪಟ್ಟಾಭಿಷೇಕವಂ ನೋಡಬಂದನೆಂಬಂತೆ, ಆರಪಿಂದ ಭಾಂಧವನು ಉದಯಾದ್ರಿಶಿಖರವಂ ಸೇರುವ ಸಮಯದಲ್ಲಿ ಸುಗಂಧರಾಜೇಂದ್ರನು ಯಥಾಮರ್ಯಾದೆಯಿಂದೆದ್ದು ಮುಖಮಜ್ಜನಂಗೈದು ಸುಮತಿಯುಂ ಕರತರಿಸಿ ವೇದವಿಶಾರದ ಮೊದಲಾದ ಹಿರಿಯ ಪುರೋಹಿತರಂ ವಿದ್ವಜ್ಜನರಂ ಸಾಮಾಜಿಕರಂ ಅಧಿಕಾರಿಗಳಂ ದೇಶದೇಶದ ಭೂಪಾಲರಂ ಕರೆಯಿಸಿ, ಮಕರಂದ ಪುಷ್ಪದಂತರಿಗೆ ಮಂಗಳಸ್ನಾನವಂ ಮಾಡಿಸಿ, ರಂಗಮಂಟಪಕ್ಕೆ ಕರತಂದು ವಿಚಿತ್ರವಸ್ತ್ರಾಭರಣಂಗಳಿಂದಲಂಕರಿಸಿ ಸಭಾಮಂಟಪದೊಳ್ ಪೂಜೆಯುಂಗೊಳುತ್ತಿರುವ ಸಿಂಹಾಸನ ಭದ್ರಾಸನಗಳಲ್ಲಿ ಕ್ರಮದಿಂದ ಈರ್ವರಂ ಕುಳ್ಳಿರಿಸಿ, ಪಟಹಪಣವಶಂಖಕಾಹಳ-ಡಿಂಡಿಮಡಮರುಝಲ್ಲರ್ಯಾದಿ ವಾದ್ಯಗಳ ಧಣಂಧಣಶಬ್ದಂಗಳಿಂದ ಕೂಡಿದಭೇರೀಝಾಂಕಾರವು ಘೋರೆಂದು ಮೊಳಗಲು, ವಂದಿಮಾಗಧರು ಬಿರುದುಪದ್ಯಗಳಂ ಉಗ್ಘಡಿಸುತ್ತಿರಲು, ವಾರನಾರಿಯರು ಪ್ರಿಯವ್ಯಾಪದಿಂದ ಅಭಿನಯದ ಹಾವಭಾವಗಳಿಂಕೂಡಿ ನಾಟ್ಯವಂಗೈಯುತ್ತಿರಲು, ಹಿರಿಯ ಸುವಾಸಿನಿಯರುಗಳಿಂದ ದಧಿಪಿಷ್ಟಪಲ್ಲವಾಕ್ಷತ ಕ್ಷೀರ ಪುಷ್ಪಫಲ ದೂರ್ವಾದರ್ಪಣಾದಿ ಸಕಲ ಶುಭವಸ್ತುಗಳಂ ತರಿಸಿ ಮುಂದಿಟ್ಟು ಸಭಾನುಜ್ಞೆಯಿಂ ಪಡೆದು ಸುಚರಿತ್ರಾದಿಯಿಂದ ಬಂದ ಸಂಪ್ರದಾಯಕ್ಕೆ ಸರಿಯಾಗಿ ಕುಲದೇವತೆಯಾದ ಚಾಮುಂಡಿಯುಂ ನೆನದು ಹಿರಿಯ ಸುವಾಸಿನಿಯರ ಕರಕಮಲಗಳಿಂದ ಹರಿದ್ರೋದಕದಿಂ ಅಭಿಷೇಕವಂಗೈಸಿ, ಆಬಳಿಕ ಸುಗಂಧರಾಜೇಂದ್ರನು ಸಕಲ ದೇಶಾಧಿಪತಿಗಳಿಂದ ಬಂಧುವರ್ಗಗಳಿಂದ ಗುರುಗಳಿಂದಲೂ ಸಮುದ್ರ ಗಂಗಾಜಲ ನವರತ್ನ ಸುವರ್ಣಪುಷ್ಪಕ್ಷೀರಲಾಜಗಳಿಂ ಬೆರಸಿ ಅಭಿಷೇಕವಂ ಮಾಡಿಸಿ ಭೂಲೋಕದ ಸಾಮ್ರಾಜ್ಯಕ್ಕೆ ಮಕರಂದನಿಗೆ ಪಟ್ಟಂಕಟ್ಟಿ ದೇವೀಪ್ರಸಾದ ಲಬ್ಧಮಾದ ಚಂದ್ರಹಾಸವಂ ಕೊಟ್ಟು ಚಂದ್ರಸೂರ್ಯರಿರುವತನಕ ಈ ಸಾಮ್ರಾಜ್ಯವಂ ಈ ಚಂದ್ರವಂಶದ ಪರಂಪರಾಭಿವೃದ್ಧಿಯಾಗಿ ಅನುಭವಿಸಲೆಂದು

ಹರಸಿ,ಆಬಳಿಕ ಪುಷ್ಪದಂತನಂ ಯುವರಾಜಪಟ್ಟದೊಳ್ ನಿಲ್ಲಿಸಿ,ಆದಿಶಕ್ತಿ ಯಿಂದಬಂದ ಶಕ್ತಿಎಂಬಆಯುಧವಿಶೇಷವಂ ಇತ್ತು ಹರಸಿ,ಸುಮತಿಯಮಗನಾದ ಸುನೀತಿಯಂ ಮಂತ್ರಿಪದದಲ್ಲಿ ನಿಯಮಿಸಿ,ಮಕರಂದರಾಜನ ಯೋಗವುಂ ನೋಡಿ,ಮಹೀಪಾಲರನೆಲ್ಲರಂ ಕೈತ್ತೋರಿ ಮಾನದಿಂದ ಮರ್ಯಾದೆಯಂ ತಿಳಿದು ತಾರತಮ್ಯವನರಿತು ಇವರಿವರ ಮನೋಭೀಷ್ಟಂಗಳಂ ನಡೆಯಿಸುತ ಧರ್ಮಮಾರ್ಗವಂ ಬಿಡದೆ ನೀತಿಶಾಸ್ತ್ರದೊಳ್ ನಿಪುಣರಾದ ಮಂತ್ರಿವಿದ್ವಜ್ಜನಂಗಳಿಂಕೂಡಿ ರಾಜ್ಯಭಾರವಂ ವಿಚಾರಿಸಿ ಪ್ರಜಾರಕ್ಷಣಂಗೈದಡೆ ಯಶೋವಂತನಾಗುವೆಯೆಂದು ಬುದ್ಧಿಗಲಿಸಿ, ಸಕಲಸಭಾಜನಂಗಳಂ ಆಭರಣವಸ್ತ್ರ ವಾಹನಂಗಳಿಂದ ಸನ್ಮಾನಿಸಿ,ಆಸ್ಥಾನಮಂಟಪದಿಂದ ಎದ್ದು ರಾಜನಸಮಾಜದಿಂದೊಡಗೂಡಿ ಭೋಜನವಂಗೈದು, ಆದಿನದರಾತ್ರಿಯಲ್ಲಿ ಸೌಗಂಧಿಕಾದಿ ಸತಿಯರಿಂದೊಡಗೂಡಿ ಸುಖದಿಂದ ಇದ್ದು ಮರುದಿನ ಉದಯದೊಳ್ ಮಕರಂದನಂ ಕರದು ಎಲೈ ಕಂದನೆ! ಬಹುಕಾಲದಿಂದ ರಾಜ್ಯಭಾರವಂ ವಿಚಾರಣಂಗೈದು ಬ್ಯಾಸರಂಗೊಂಡು ಇರುವೆನು, ಈಗ ಪರಿವಾರದಿಂದೊಡಗೂಡಿ ವಿಹಾರಾರ್ಥವಾಗಿ ವಸಂತವನಸಂಚರಿತು ತೆರಳುವೆನು, ನೀನು ಧೀರಚಿತ್ತನಾಗಿ ರಾಜ್ಯಭಾರದಲ್ಲಿ ಜಾಗರೂಕನಾಗಿರುವದೆಂದುಆಜ್ಞಾಪಿಸಿ,ವೈದಡವಿ ನಾತಲಿಯಹಸ್ತಲಾಘವದಿಂದ ಮದ್ದಾಯನ್ನೇರಿ ಸೌಗಂಧಿಕಾ ಕುಸುಮಲತಾದೇವಿ ಮೊದಲಾದ ರಾಣಿಯರಿಂದೊಡಗೂಡಿ,ರತ್ನಪುರಿಯ ರಾಜಬೀದಿಯೊಳ್ ಸಕಲ ವಿಭವದಿಂದ ತೆರಳಿ,ವಸಂತವನಕ್ಕೆ ಬಂದು ತನಗೆ ಬೇಕಾದಜನಂಗಳಂ ಬರುವಂತೆ ನೇಮಿಸಿ,ಚತುರಂಗ ಬಲಪರಿವಾರಂಗಳಂ ಕಳುಹಿ, ಅಮೃತಸರೋವರದೊಳ್ ಸ್ನಾನವಂಗೈಯುತ್ತ ಮರಕತಾಂಗಿಯಾದ ತ್ರಿಪುರಸುಂದರಿಯಂ ಪೂಜಿಸುತ್ತ,ತಾನುಮೊದಲು ತಪವಂ ಮಾಡುವಾಗ ನೆರಳಿತ್ತ ಕದಂಬವೃಕ್ಷವಂ ತನ್ನ ಕಾಂತೆಯರಿಗೆ ತೋರಿಸುತ ನಾಲ್ಕಾರುದಿನ ಇಲ್ಲಿಯೇ ಇರುವಂತೆ ನಡಿಸಬೇಕೆಂದು ಯೋಚನೆಯಿಂದಿರುವ ಸಮಯಕ್ಕೆಸರಿಯಾಗಿ ಸರ್ವಜ್ಞನಾದ ವಾಮದೇವನೆಂಬ ಋಷಿಯು ತನಗೆ ಪ್ರಶಿಷ್ಯನಾಗಿ ತ್ರಿಲೋಕ ಪತಿಯಾದ ದೇವೇಂದ್ರನಂ ಇನ್ನೊಮ್ಮೆನೋಡಬೇಕೆಂದುಬರಲು, ಆಋಷೀಶ್ವರನು ಪರಮಗುರುವಾದಕಾರಣ ಪರಮ ಭಕ್ತಿಯಿಂದ ಪ್ರಣಾಮಂಗೈದು, ತಾನುಅವತರಿಸಿದ

ಕೋಪದಿಂ ಮಾಲಿನ್ಯಕವೇನಾಗುವದೋ? ಈಗ ನಾವಿದ್ದುದ ಸುಪ್ರಸಿದ ಬಾರದೆಂದು ಯೋಚಿಸಿ, ಎಲೈ ಸರ್ವಜ್ಞನಾದ ಮಹೇಂದ್ರನೆ! ತ್ವರೆಯಿಂದ ನೀವಿಂತಾಕೆ ಬಿಜಯಂ ಮಾಡುವರೇ? ಮನುಷ್ಯಲೋಕಗಳೂ ಒಮ್ಮೆ ಅಧೀನಂಗಳಾಗಿರುವಾಗ ನಿಮ್ಮ ವಸ್ತುಗಳು ಎಲ್ಲಿ ಹೋಗುವವು, ಇನ್ನುಮೇಲೆ ರಾಕ್ಷಸರ ಭಯವೆಂಬುದಿಲ್ಲಿಯದು, ಇದಂ ವಿಭಾವಿಸುವಂತೆ ಚಿತ್ತಕ್ಕೆ ತರಬೇಕೆಂದು ಬಿನ್ನೈಸಿದ ಪರಮಾಚಾರ್ಯನ ಹಿತವಾಕ್ಯವಂ ಕೇಳಿ ತಕ್ಷಣದಲ್ಲಿಯೇ ಶಾಂತನಾಗಿ ಅದುತರಲಿ, ಕಲ್ಪವೃಕ್ಷವಂ ನೋಡೆಂದು ಸುಗ್ಗನಿವಪ್ಪ ಮಾತಲಿಯಂದೊಡಗೂಡಿ ಕಲ್ಪವೃಕ್ಷ ವಿರುವೆಡೆಗೆ ಬಂದು ಅದಂ ಕಾಣದೆ ಅತಿ ದುಃಖಿತನಾಗಿ ಇದು ರಾಕ್ಷಸರ ಕೃತ್ಯವಲ್ಲ, ಇದು ದೂರ್ವಾಸನ ಶಾಪವಶಾದ ಬಂದ ದುರದೃಷ್ಟದ ಸೊಗಡು, ಇನ್ನು ಏನುವೆನೆಂದು ನುಡಿಯುತ್ತಿರುವದಲ್ಲಾ ಆಗಲೀ ಈಗ ಸೌಗಂಧಿಕಾದೇವಿಯು ಸಮೀಪದಲ್ಲಿರುವ ಚಿಂತಾಮಣಿಯಂ ನೋಡಬೇಕೆಂದು ಚಿಂತಾಕ್ರಾಂತನಾಗಿ ಬಂದು ತನ್ನ ಚಿಂತಾಮಣಿಯಂ ಕುರಿತು ರಮಣೀಯವಾದ ಮಣಿಯು ಇರುವುದೇ ನೋಡೆಂದು ಹೇಳಲು, ಆಗ ಶಚೀದೇವಿಯಾದ ಸೌಗಂಧಿಕಾದೇವಿಯು ಕುಂದಣದ ಭರಣಿಯಂ ತೆರೆದು ಮಣಿಯಂ ಕಾಣದೆ ಮನನೊಂದು ಮೈಗುಂದಿ ಹಾ ಎಂದು ಹಲುಬುತ್ತ ಕಂಬನಿದುಂಬಿ ಇದೇನಿದೇನೆಂದು ಅಲ್ಲಿರುವರೆಲ್ಲರೂ ವ್ಯಸನವಂ ಭಯವಂ, ಭ್ರಾಂತಿಯುಂ, ಶೋಕಮಂಗೊಂಡು ಕಂಡಕಡೆಗಳಲ್ಲೆಲ್ಲ ಹುಡುಕುತ್ತ ಎಲ್ಲಿಯೂ ಕಾಣದೇ ನಮ್ಮ ವಸ್ತುಗಳೆಲ್ಲ ಮಾಯವಾದವು, ಇದ್ವರಹದ್ದಿಲ್ಲವೇನೆಂದು ಸಾಷ್ಟಾಂಗವಾಗಿ ವಾಸುದೇವನ ಪಾದಂಗಳಿಗೆರಗಿ ಸ್ವಾಮಿಯೇ! ನಾನು ಭೂಲೋಕದಲ್ಲಿ ನಿಲ್ಲುವದಕ್ಕೆ ನಿಮಿತ್ತವಿಲ್ಲವೇ ಅಮರಾವತಿಗೆ ಪೋಗುವದಕ್ಕೆ ಸಕಲವಸ್ತುಗಳೂ ಕಳಕೊಂಡು ಮಧ್ಯದೊಳ್ ತ್ರಿಶಂಕುವಿನಂತೆ ಅಂತರಾಳದಲ್ಲಿ ನಿಂತೆನು, ಇನ್ನೇನುಗತಿಯಿಂದು ಚಿಂತಿಸುವ ಶಚೀಕಾಂತನಂ ಕುರಿತು ವಾಸುದೇವರು ಎಲೈ ದೇವೇಂದ್ರನೇ ಕೇಳು, ಲೋಕಾಂತರದಿಂದ ಬಂದ ಲೀಲಾಶುಕವು ಎದುರಾಗಿ ಕುಳಿತಿರುವಾಗ ಇವರಪರಿಯಂ ಹೇಳುವದಕ್ಕೆ ನಾನು ಶಕ್ತನೆ? ಎಂದು ನುಡಿವ ಮಾತಿಗೆ ಲೀಲಾಶುಕವು ಇದರಪರಿ ಯಾರೇನು ಬಲ್ಲರು, ಜಗದೀಶ್ವರಿಯು ಬಲ್ಲಳು ಆ ಮಹಾದೇವಿಯಂ ಧ್ಯಾನಿಸಿದಡೆ ನಿನ್ನ ಮನೋರಥವು ಪೂರ್ಣ

ನಳೆಗುವಂತೆ ವಿಘ್ನಂಗಳೆಲ್ಲಪೋಗಿ ಅಮರಾವತಿಯ ಸಾಮ್ರಾಜ್ಯ ಪೊಂದಲಿಸಂತೆ ಕೈಗೂಡಿ ಬರುವದೂ ಎಂದು ಇಂದ್ರನಿಗೆ ಜ್ಞಾಪಕವಂಗೈಯಲು, ಆಗ ಮಹೇಂದ್ರನು ಶುದ್ಧಾಚಮನವಂಗೈದು ಶುಚಿರ್ಭೂತನಾಗಿ ನವಾಕ್ಷರಿಯಂ ಜಪಿಸಿ, ಗುರುಪರಂಪರೆಯಂ ಧ್ಯಾನಿಸಿ, ಶ್ರೀಚಾಮುಂಡಿಕಾದೇವಿಯ ಚರಣಾರವಿಂದಂಗಳಂ ಮನದೊಳಿಟ್ಟು ಸಾಕ್ಷಾತ್ಕಾರ ವಾಗಬೇಕೆಂದು ಬೇಡುವ ಭಾವನೆಯಂಗೈವ ಶುಭಾವಸರದೊಳ್ ಜಗಜ್ಜನನಿಯಾದ ಶ್ರೀದೇವಿಯು ತ್ರಿಮೂರ್ತಿಗಳಿಂದಲೂ, ದೇವಋಷಿಗಳಿಂದಲೂ, ದಿಕ್ಪಾಲಕರಿಂದಲೂ, ಆದಿತ್ಯ ರುದ್ರವಸುಗಳು ಮೊದಲಾದ ದೇವತಾಗಣಂಗಳಿಂದಲೂ, ಬ್ರಹ್ಮಋಷಿಗಳಿಂದಲೂ, ಕೂಡಿಮೊದಲಿಸಂತೆ ಸಾಕ್ಷಾತ್ಕಾರ ವಾಗಲು, ಆಗ ದೇವೇಂದ್ರನು ಭಕ್ತಿಭಾವದಿಂದ ಪುಳಕಾಂಕಿತ ಶರೀರನಾಗಿ ಸಹಸ್ರನಯನಂಗಳಿಂದಲುಂ, ಮಹಾದೇವಿಯ ರೂಪವಂನೋಡಿ ಕೃತಾರ್ಥನಾದೆನೆಂದು ಮರಳಿಮರಳಿ ಪ್ರಣಾಮವಂ ಮಾಡುತ್ತ, ವಿನಯದಿಂದ, ಭಯದಿಂದ, ಭಕ್ತಿಯಿಂದ, ವ್ಯಸನದಿಂದ ಕೂಡಿರುವ ದೇವೇಂದ್ರನಂ ಕುರಿತು ಪತ್ರೈ ಪುತ್ರನೇ! ನೀನು ಮನುಷ್ಯ ಲೋಕದೊಳವತಾರವಂ ಮಾಡಿ ಭೂಭಾರವಂ ನಿಳುಹ ಲೋಸುಗಮೆ ಪುಷ್ಪಮಾಲೆಯಂನಿತ್ತು ಈ ದೂರ್ವಾಸನನಾನಾಗಿ ಕಳುಹಿದೆನು, ಈ ಋಷೀಶ್ವರನು ಕೋಪವಂ ಮಾಡಿದುದು ಲೋಕೋಪಕಾರವೆ ಎಂದು ತಿಳೀ, ಈಗ ನಿನ್ನ ಕೆಲವು ವಸ್ತುಗಳು ಪಾತಾಳತಲಿನೊಳ್ ಅಂತರ್ಧಾನವಂ ಗೈದಿರುವವು, ದೇವದಾನವರಿಂದೊಡಗೂಡಿ ಸಮುದ್ರವಂ ಮಥಿಸಿಪಡೆ ಎಂದಿನಂತೆ ನಿನ್ನ ವಸ್ತುಗಳೆಲ್ಲ ನಿನ್ನ ಆಧೀನಂಗಳಾಗಿ ಅಮರಾವತಿಯಂ ಸೇರಿ ಸುಖದಿಂದಲಿರುವೆ, ಈದೇವಗಣಂಗಳಂ ದೊಡಗೂಡಿ ನಡೆಯುವನಾಗು, ಈಪರಿಯಿಂದಲೆ ನನ್ನ ಸಂಕಲ್ಪವು ಪ್ರತಿಕಲ್ಪದಲ್ಲಿಯೂ ಒಂದೇಪರಿಯಾಗಿ ನಡೆಯುವದೂ ಎಂದು ಅಪ್ಪಣೆಯನ್ನಿತ್ತು ಇಂದ್ರನು ವಾಮದೇವ ಲೀಲಾಶುಕ ಮೊದಲಾದವರು ಸ್ತುತಿಯಂಗೈವ ನುಡಿಗಳಂ ಕೇಳಿ ಸಂತೋಷಗೊಂಡು ಅಂತರ್ಧಾನವಾಗಲು, ಆಗಮಹೇಂದ್ರನು ವಾಮದೇವನಿಗೆ ಅಭಿವಂದಿಸಿ ಆಜ್ಞೆಯಂ ಕೈಕೊಂಡು ಸೌಗಂಧಿಕಾ ಕುಸುಮಲತೆ ಮೊದಲಾದ ರಾಣಿಯರಿಂದಲೂ, ಮಾತಳಿಯಿಂದಲೂ ಕೂಡಿ ಎಲ್ಲರೂ ದೇವಿಯರ ಅಮೃತಕಮಂಡಲೋದಕದ ಸೇಚನದಮಹಿಮೆಯಿಂದ

ಮಾನುಷದೇಹಂಗಳೇ ದೇವಶರೀರಂಗಳಾಗಿ ಅಗಣಿತವಿಜಾತೀಯ ಕಾಂತಿ ವಿಶೇಷದಿಂದೊಪ್ಪಿ ಸ್ಮರಣಮಾತ್ರದಿಂದ ವ್ಯೋಮಯಾನವಂ ಕರೆವ ಲೀಲಾಶಕಟದೊಡಗೂಡಿ ಎಲ್ಲರೂ ಏರಿ ಶ್ರೀದೇವಿಗೆ ಪರಿವಾರವಾಗಿ ಬಂದಿರ್ದ್ದ ದೇವತಾ ಗಣಂಗಳಿಂದ ಒಡಗೂಡಿ ತೆರಳುವ ಸಮಯದೊಳ್ ಸಿದ್ಧವಿದ್ಯಾಧರ,ಗರುಡಗಂಧರ್ವ, ಕಿನ್ನರಕಿಂಪುರುಷ,ಯಕ್ಷ,ಅಪ್ಸರೋಗಣಂಗಳುಂ ಮೊದಲಾದಪರಿಚಾರಕಜನಂಗಳುಂ ಕಾವಿಮರ್ಗಂ ಕಂಡು ದೇವದುಂದುಭಿಧ್ವನಿಗಳು ಭೋರ್ಗರೆವ ಚತುರ್ದಶಲೋಕಂಗಳಿಗೂ ಇಂದ್ರನು ಅಮರಾವತಿಗೆ ಬರುವ ಸಮಾಚಾರವಂ ಸಾರುವಂತೆ ಮೊಳಗೆ. ದಿವ್ಯ ಪುಷ್ಪಂಗಳ ಮಳೆಗರೆಯೆ, ನಾಟ್ಯವಂಗೈವ ಅಪ್ಸರಸ್ತ್ರೀಯರುಗಳ ಧಿಂ ಧಿಮಿ ಧ್ವಾನಂಗಳು ಜನಿತಭೋಂತರಂಗಳಂತುಂಬೆ, ಕಿನ್ನರಿಬೃಂದ, ನವರಸಸಂಗೀತ, ರೀತಿಗಳು ಮುನಿಮರ್ಷಿಗಳಿಗೆಲ್ಲ ಬ್ರಹ್ಮಾನಂದವಂಮಾಡೆ, ಶೈತ್ಯಸೌರಭ್ಯಮಾಂದ್ಯದಿಂದೊಪ್ಪಿ ತ್ರಿಕಾಲನಾದ ವಾಯು ಮೆಲ್ಲನೆಬಂದು ಸವಾರಿಯೊಳ್ ಶೀತೋಪಚಾರವಂಮಾಡೆ, ದಿಕ್ಕುಗಳೆಲ್ಲ ವಿಕಾಸಮಂ ಪಡೆಯೆ,ಕಪರಿಯಿಂದ ಸಹಸ್ರಮುಖಂಗಳ ನುತಿಸಿಂದಲೂ ಪೊಗಳುವದಕ್ಕೆ ಶಕ್ಯವಿಲ್ಲದ ಮಹಾವೈಭವದಿಂದ ಗಗನಮಾರ್ಗದಿಂ ತೆರಳಿ ಮಹಾವಿಷ್ಣುವಿನ ವಾಲಗುವಮನೆಯಾದ ಕ್ಷೀರಸಮುದ್ರವಂ ಸೇರಿ ಶೇಷನು ಆನಂದಸಮುದ್ರದೊಳ್ ಮುಳುಗಿ, ಚತುರ್ಮುಖನ ಚರಣಂಗಳಿಗೆರಗಿ, ನಾರಾಯಣನ ಅಡಿದಾವರೆಗಳಿಗೆ ನಮಿಸಿ, ಈಶ್ವರನಪಾದಾರವಿಂದಗಳಿಗೆ ಅಭಿನಂದಿಸಿ,ಈಮೂವರ ಅನುಗ್ರಹವಂ ಪಡೆದು ಅವರ ಆಜ್ಞೆಯಿಂ ಕಡೆಸಿದ ಸಮುದ್ರಮಥನದಿಂದಮುಗುಳ್ಪುಟ್ಟಿ ಬಂದ ಐರಾವತಾದಿ ನಿಜವಸ್ತುಬೃಂದವಂ ಎಂದಿನಂತೆ ಪಡೆದು ಮೃತ್ಯುಸಮೂಹಂಗಳಂ ದಂಡಿಸಿಯುಂಗೈದು, ಜರಾಮರಣಂಗಳಂ ಪೋಗಲಾಡಿಸುವ ದಿವ್ಯಾಮೃತವಂ ಕೈಗೊಂಡು ಧನ್ವಂತರಿಗೆ ಪುರಂದರನು ಸಕಲಪರಿವಾರದಿಂದೊಡಗೂಡಿ ತೆರಳುವಷ್ಟರೊಳಗಾಗಿಯೇ ಕುಬೇರ ವಿಶ್ವಕರ್ಮರಿಂದ ಎಂದಿನಂತೆ ಅಲಂಕೃತವಾದ ಅಮರಾವತೀಪುರವಂ ಕುರಿತುಬಂದು ಮೊದ

ನೆ ಮಣಿಗೋಪುರ ಪ್ರಾಕಾರ ವಿಪಣಿ
ಂದ್ರಶಾಲಾ ಸಹಸ್ರಗಳಿಂದ ಪೊಪ್ಪಿದ
ನಿಮಿತ್ತಸಂತೋಷವಂ ಪಡೆದ ಅಲ್ಲಿ

ಭೃಗು ಮಂಗಳವಾರಗಳಲ್ಲಿ ಸಪ್ತಮಾಶ್ವಾಸಮಂ ದೇವೀಸನ್ನಿಧಾನದೊಳ್ ಓದಿದರೂ ಓದಿದ್ದಂ ಕೇಳಿದರೂ ದೇವೀಪ್ರಸಾದ ಉಂಟಾಗಿ ಅಶ್ವಮೇಧಾದಿ ಸಕಲ ಕ್ರತುಫಲಂಗಳಂ ಪಡೆದು ಪಿಡಿದಕಾರ್ಯವು ಕೈಗೂಡಿ ಸಕಲೈಶ್ವರ್ಯವಂ ಅನುಭವಿಸುವರು. ಸ್ಥಿರವಾರದೊಳ್ ಮೂವತ್ತನೇ ಆಶ್ವಾಸವಂ ವಿಷ್ಣುಸಾನ್ನಿಧ್ಯದಲ್ಲಿ ಶುಚಿರ್ಭೂತರಾಗಿ ಭಕ್ತಿಯಿಂದ ಓದಲು ಓದಿದ್ದಂ ಕೇಳಿದರೂ ಶ್ರೀರಂಗಾದಿ ಯಾತ್ರಾಫಲಂಗಳಂ ಗಂಗಾದಿ ಸಕಲತೀರ್ಥಸ್ನಾನ ಫಲಂಗಳಂ ವ್ರತೋಪವಾಸ ಜಾಗರಣಾದಿ ಫಲಂಗಳಂ ಪಡೆವರು. ಸೋಮವಾರದೊಳ್ ಇಪ್ಪತ್ತು ಇಪ್ಪತ್ತೈದನೇ ಆಶ್ವಾಸಗಳಂ ಭಕ್ತಿಪುರಸ್ಸರವಾಗಿ ಓದಿಕೇಳಲು ಈಶ್ವರಕಟಾಕ್ಷದಿಂದ ಅಷ್ಟೈಶ್ವರ್ಯಮಂ ಪಡೆದು ಇಂದ್ರಭೋಗವಂ ಇಹಲೋಕದಲ್ಲಿಯೇ ಅನುಭವಿಸಿ ಬಹುಯಶಸ್ಸಂ ಪಡೆವರು.

ಈ ಪರಿಯ ಗುಣಂಗಳಿಂದೊಪ್ಪುವ ಈ ನವೀನಕೃತಿಯಲ್ಲಿ ಶಬ್ದಾರ್ಥಂಗಳೊಳ್ ಬುದ್ಧಿ ಪ್ರಮಾದದಿಂದಬಂದ ನ್ಯೂನಾಧಿಕಭಾವ ಇದ್ದಲ್ಲಿ

ಜ್ಞರಾದ ಸರಸಕವಿಗಳು ತಿದ್ದಿ ಓದುತ್ತ ದೇಶದೇಶಂಗಳೊಳ್

ಆಚಂದ್ರತಾರಕವಿರುವಂತೆ ಆಶೀರ್ವಾದವಂ ಗೈಯ್ಯಬಹುದು. ಕೇಳುವವರು ದೋಷವನ್ನೆಣಿಸದೆ ಗುಣವಂ ಕಂಡು ಆನಂದವಂ ಪಡುವುದೂ ಎಂಬಲ್ಲಿಗೆ ॥ ಶ್ರೀ ॥ ಶ್ರೀ ॥ ಶ್ರೀ ॥ ಶ್ರೀ ॥ ಶ್ರೀ

ಗದ್ಯ ॥ ಶ್ರೀಮನ್ಮಹೀಶೂರ ರಾಜಾಧಿರಾಜ ಮಹಾರಾಜ ಚಾಮರಾಜ ಒಡೆಯರವರ ಧರ್ಮಪತ್ನೀ ಕೆಂಪನಂಜಮಾಂಬಾ ಗರ್ಭಸುಧಾಂಬುಧಿ ರಾಕಾಸುಧಾಕರಾಯಮಾನರಾದ ಶ್ರೀಚಾಮುಂಡಿಕಾ ವರಪ್ರಸಾದೋದ್ಭವರಾದ ಶ್ರೀಮತ್ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲದೇಶಾವತಂಸ ಕರ್ನಾಟ ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನ ಮಧ್ಯ ದೇದೀಪ್ಯಮಾನಾ ವಿಕಲಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ನಿಜರಾಜಾಧಿರಾಜ ಮಹಾರಾಜಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜರಾಜಪರಮೇಶ್ವರಪ್ರೌಢಪ್ರತಾಪಾಪ್ರತಿಮವೀರನರಪತಿಬಿರುದೆಂತೆಂಬರ ಗಂಡ ಲೋಕೈಕವೀರ ಯದುಕುಲ ಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವಗಂಡ

ಷೀರುಂಡಪಕ್ಷಿರಾಜ ನಗಾಜ ಪಸುಪದ್ಧರುಡಕಂಠೀರವಾದ್ಯನೇಕ ಬಿರುದಾಂಕಿತರಾದ ಕುಂಡಲೀಗುರು ಖಂಡಪರಶು ಪುಂಡರೀಕ ಜಯಾಖಂಡಲಪ್ರಮುಖನಿಖಿಲ ಸುರನರ ಪರಿಜನಪರಿಣತ ಪ್ರಚಂಡ ಬಲಚಂಡಮುಂಡನಿಖಂಡನ ನಿಪುಣ ಕೋದಂಡಕಾಂಡ ಮಂಡಲಾಗ್ರಧರ ಭುಜಾದಂಡ ಪರಿಮಂಡಿತ ಚಾಮುಂಡಿಕಾಕಟಾಕ್ಷವೀಕ್ಷಣ ಪ್ರವರ್ಧಮಾನ ಭೂಮಂಡಲಾಧಿಪತ್ಯ ಸತ್ಯಪ್ರತಾಪ ಸಕಲಭೂಮಿಷ್ಠ ಸಾಮ್ರಾಜ್ಯ ಸರ್ವಂಕಷ ಚತುರ್ವಿಧ ಪದಸಕವಿತಾ ನಿಸ್ಸಹಾಯ ನಿರ್ಮಾಣ ಧೌರೇಯ ಘಟಿಕಾ ಶತಗ್ರಂಥ ವಿವಿಧಸಪ್ರಬಂಧ ನಿಬಂಧನಸ್ಫುರಂಧರ ತ್ರಿಯಾಮವಮಿತ್ರಾತ್ರೇಯಸಗೋತ್ರ ಸಚ್ಚರಿತ್ರ ಚಾಮರಾಜ ಮಹಾರಾಜಪುತ್ರ ನರಪತಿಬಿರುದ ಮಹಿಶೂರ ಪುರವರಾಧೀಶ ಶ್ರೀಕೃಷ್ಣರಾಜ ಒಡೆಯರವರಿಂದ ರಸಿಕಜನಾನಂದಕರವಾಗಿ ವಿರಚಿತವಾದ ಸೌಗಂಧಿಕಾ ಪರಿಣಯವೆಂಬ ಕಾವ್ಯದ ಕೃತಿಯೊಳ್ ಮದಿಂದ್ರ ಪ್ರಯಾಣ ವರ್ಣನವಂ ಬಣ್ಣಿಸಿರುವ ೩೬ ನೇ ಅಧ್ಯಾಯಕ್ಕೆ ಮಂಗಳಂ ಮಹಾ ಶ್ರೀ * ಶ್ರೀ

ಮುವ್ವತ್ತಾರು ಆಶ್ವಾಸಗಳುಳ್ಳ ಸೌಗಂಧಿಕಾಪರಿಣಯ.

ಮುಕ್ತಾಯವಾಗಿರುವುದು.

ಮಂಗಳಾನಿ ಭವಂತು.

